ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತಮ್

# ಶ್ರೀಮದನುವ್ಯಾಖ್ಯಾನಮ್

ಸಂಪುಟ-೧ 2,3,4

## ಮೊದಲನೆಯ ಅಧ್ಯಾಯ (ಸಮನ್ವಯಾಧ್ಯಾಯ)



ಪ್ರೊ|| ಎಸ್. ವೆಂಕಟೇಶಮೂರ್ತಿ

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತಮ್

# ಶ್ರೀಮದನುವ್ಯಾಖ್ಯಾನಮ್

## ಭಾಗ - 1

### ಮೊದಲನೆಯ ಅಧ್ಯಾಯ (ಸಮನ್ವಯಾಧ್ಯಾಯ)

ಶ್ರೀಮಜ್ಜಯತೀರ್ಥರ ಶ್ರೀಮನ್ನ್ಯಾಯಸುಧಾನುಸಾರಿ

ಕನ್ನಡದಲ್ಲಿ ಅರ್ಥ ಮತ್ತು ವಿವರಣೆ ಸಹಿತ

ಲೇಖಕರು

ಪ್ರೊ ಎಸ್. ವೆಂಕಟೇಶ ಮೂರ್ತಿ, ಎಂ. ಎಸ್‌ಸಿ

ಪ್ರಕಾಶಕರು

ಪವನಜ ಪ್ರಕಾಶನ

ನಂ. 1625, 5 ನೇ ಬಿ ಕ್ರಾಸ್, ಎರಡನೆಯ ಬ್ಲಾಕ್,

ಬನಶಂಕರಿ ಮೊದಲನೆಯ ಸ್ಟೇಜ್, ಬೆಂಗಳೂರು 560050

Sri Madhvacharya's

***Śrīmadanuvyākhyānam***

Part - 1

**Rendered in Kannada by:**

**Prof. S. Venkat**esha Murthy, M. Sc.

**Published by:**

**Pavanaja Prakashana,**

#1625, 5th B Cross, II Block, Banashankari First Stage,

Bangalore 560050; **Phone: 6600932**

**First Edition: 2002**

**Pages:248**

**Price: Rs. 60/-**

**ಶ್ರೀಮನ್ಮಧ್ವಾಚಾರ್ಯ ವಿರಚಿತ**

**ಶ್ರೀಮದನುವ್ಯಾಖ್ಯಾನಮ್ ಭಾಗ 1**

**ಮೊದಲನೆಯ ಮುದ್ರಣ : 2002**

**ಪುಟಗಳು : 248**

**ಬೆಲೆ : ರೂ. 60/-**

**ಮುದ್ರಕರು :**

**ಪರಿಮಳ ಮುದ್ರಣಾಲಯ,**

**ಹನುಮಂತನಗರ,**

**ಬೆಂಗಳೂರು 560019**

# ಮುನ್ನುಡಿ

ಭಗವಾನ್ ವೇದವ್ಯಾಸರಿಂದ ವಿರಚಿತವಾದ ಬ್ರಹ್ಮಮೀಮಾಂಸಾ ಶಾಸ್ತ್ರಕ್ಕೆ ವ್ಯಾಖ್ಯಾನರೂಪವಾಗಿ ಶ್ರೀಮಧ್ವಾಚಾರ್ಯರು ಬ್ರಹ್ಮಸೂತ್ರಭಾಷ್ಯ, ಅಣುಭಾಷ್ಯ, ಅನುವ್ಯಾಖ್ಯಾನ ಮತ್ತು ನ್ಯಾಯವಿವರಣ ಎಂಬುದಾಗಿ ನಾಲ್ಕು ಸೂತ್ರಾರ್ಥ ನಿರ್ಣಾಯಕ ಗ್ರಂಥಗಳನ್ನು ರಚಿಸಿದ್ದಾರೆ. (ಬ್ರಹ್ಮಮೀಮಾಂಸಾ ಶಾಸ್ತ್ರದ ಬಗ್ಗೆ ವಿವರವಾದ ಪ್ರಸ್ತಾವನೆಗೆ ನಮ್ಮಿಂದ ಈಗಾಗಲೇ ಪ್ರಕಟವಾಗಿರುವ ಬ್ರಹ್ಮಸೂತ್ರದೀಪಿಕಾ ಗ್ರಂಥವನ್ನು ನೋಡಿರಿ). ಸೂತ್ರಭಾಷ್ಯದಲ್ಲಿ ಶೃತಿ ಸ್ಮೃತಿ ಪುರಾಣ ವಾಕ್ಯಗಳ ಆಧಾರದಿಂದ ಬ್ರಹ್ಮಸೂತ್ರಗಳ ಅರ್ಥವನ್ನು ಯಾವುದೇ ಸಂದಿಗ್ಧವಿಲ್ಲದಂತೆ ನಿರ್ಣಯಿಸುವುದರ ಜೊತೆಯಲ್ಲಿಯೇ ಇತರ ಭಾಷ್ಯಕಾರರು ಎಲ್ಲಿ ಎಡವಿದ್ದಾರೆ ಹಾಗೂ ಅವರ ವ್ಯಾಖ್ಯಾನಗಳು ಯಾವ ರೀತಿಯಲ್ಲಿ ಸೂತ್ರಕಾರರಿಗೆ ಸಮ್ಮತವಾಗಿಲ್ಲ ಎನ್ನುವುದನ್ನು ಬಹಳ ಚೆನ್ನಾಗಿ ವಿವರಿಸಿದ್ದಾರೆ. ಅಣುಭಾಷ್ಯವು ಸೂತ್ರಭಾಷ್ಯದ ಸಾರಸಂಗ್ರಹವಾಗಿದೆ. ಕೇವಲ ೩೨ ಶ್ಲೋಕಗಳಲ್ಲಿ ಇಡೀ ಸೂತ್ರಭಾಷ್ಯದ ಸಾರವನ್ನು ಬಹಳ ಸುಂದರವಾಗಿ ಸಂಗ್ರಹಿಸಿರುವ ಇಂಥಹ ಮತ್ತೊಂದು ಕೃತಿಯು ಬೇರೆ ಯಾವುದೇ ಭಾಷ್ಯಕಾರರಿಂದ ರಚಿಸಲ್ಪಟ್ಟಿಲ್ಲ. ಸೂತ್ರಬಾಷ್ಯದಲ್ಲಿ ಸಂಕ್ಷೇಪವಾಗಿ ಸೂಚಿಸಿದ ಕೇಲವು ತತ್ವಶಾಸ್ತ್ರದ ಸಮಸ್ಯೆಗಳನ್ನು ಅನುವ್ಯಾಖ್ಯಾನದಲ್ಲಿ ವಿಸ್ತಾರವಾಗಿ ಚರ್ಚಿಸಲಾಗಿದೆ. ಸೂತ್ರಬಾಷ್ಯದಲ್ಲಿ ಸೂತ್ರಾರ್ಥನಿರ್ಣಯ ಮುಖ್ಯವಾಗಿದ್ದರೆ ಅನುವ್ಯಾಖ್ಯಾನದಲ್ಲಿ ಪರಕೀಯರ ಸಿದ್ಧಾಂತಗಳ ವಿಮರ್ಶೆಯ ಮೂಲಕ ಅಪವ್ಯಾಖ್ಯಾನಗಳ ಖಂಡನೆ ಮತ್ತು ಸತ್ಸಿದ್ಧಾಂತದ ಮಂಡನೆಯು ಮುಖ್ಯ ಉದ್ದೇಶವಾಗಿದೆ. ನ್ಯಾಯವಿವರಣದಲ್ಲಿ ಪ್ರತಿಯೊಂದು ಅಧಿಕರಣದಲ್ಲಿ ಪ್ರತಿಪಾದಿತವಾಗಿರುವ ಪೂರ್ವಪಕ್ಷ ಮತ್ತು ಸಿದ್ಧಾಂತ ನ್ಯಾಯಗಳನ್ನು ಸಂಗ್ರಹಿಸಿ ಬ್ರಹ್ಮಮೀಮಾಂಸಾ ಶಾಸ್ತ್ರದ ಸಾರಸಂಗ್ರಹವನ್ನು ನೀಡಲಾಗಿದೆ.

ಅನುವ್ಯಾಖ್ಯಾನವು ಶ್ರೀಮದಾಚಾರ್ಯರಿಂದ ರಚಿತವಾದ ಅತ್ಯಂತ ಪ್ರೌಢಶೈಲಿಯಲ್ಲಿರುವ ಶ್ಲೋಕರೂಪದ ಪ್ರಬಂಧ ಗ್ರಂಥ. ಇದು ಸರ್ವಮೂಲ ಗ್ರಂಥಗಳಲ್ಲಿ ಬಹಳ ಮಹತ್ವವನ್ನು ಪಡೆದಿದೆ. ಗಹನವಾದ ಬ್ರಹ್ಮಮೀಮಾಂಸಾ ಶಾಸ್ತ್ರದ ವಿಮರ್ಶೆಗಾಗಿ ಪದ್ಯರೂಪದಲ್ಲಿ ರಚಿತವಾದ ಗ್ರಂಥ ಬೇರೊಂದಿಲ್ಲ. ಸೂತ್ರಭಾಷ್ಯದ ಭಾವವನ್ನು ವಿಶದೀಕರಿಸುವ ಅನುವ್ಯಾಖ್ಯಾನವು ೧೯೮೫ ಗ್ರಂಥ

ಪರಿಮಾಣವುಳ್ಳದ್ದಾಗಿದೆ. ಅಲ್ಲಿ ಸಂಕ್ಷಿಪ್ತವಾಗಿ ಹೇಳಿದ್ದನ್ನು ಇಲ್ಲಿ ವಿಸ್ತರಿಸಲಾಗಿದೆ. ಅಲ್ಲಿ ಹೇಳದೇ ಬಿಟ್ಟದ್ದನ್ನು ಇಲ್ಲಿ ಹೇಳಲಾಗಿದೆ. ಮಧ್ವಾಚಾರ್ಯರ ಸಮಗ್ರ ವ್ಯಾಖ್ಯಾನ ಕೌಶಲ ಹಾಗೂ ಪರಮತ ವಿಮರ್ಶೆಯ ಹರಿತಮತಿಗೆ ಇದೊಂದು ಶ್ರೇಷ್ಠ ನಿದರ್ಶನ. ಇದರ ಒಂದೊಂದು ವರ್ಣ, ಪದ, ಪದಪುಂಜಗಳೂ ಅನೇಕಾರ್ಥ ಗರ್ಭಿತವಾದದ್ದು. "ಗ್ರಂಥೋಽಯಮಪಿ ಬಹ್ವರ್ಥೋ ಭಾಷ್ಯಂ ಚಾತ್ಯರ್ಥ ವಿಸ್ತರಮ್ । ಬಹುಜ್ಞಾ ಏವ ಜಾನಂತಿ ವಿಶೇಷೇಣಾರ್ಥಮೇತಯೋಃ ॥" ಎಂದು ಶ್ರೀಮದಾಚಾರ್ಯರೇ ಅಪ್ಪಣೆ ಕೊಡಿಸಿದ್ದಾರೆ. ಶ್ರೀಮದಾಚಾರ್ಯರ ಪರಮಾಪ್ತ ಶಿಷ್ಯರಾದ ಶ್ರೀ ತ್ರಿವಿಕ್ರಮಪಂಡಿತಾಚಾರ್ಯರು ಈ ಗ್ರಂಥವನ್ನು ಕುರಿತು 'ತತ್ವ ಪ್ರದೀಪ' ಎಂಬ ಟೀಕಾ ಗ್ರಂಥದಲ್ಲಿ "ಮಿತಪದಗಳಾದರೂ ಅಮಿತಾರ್ಥಗಳ ಅಸಂದಿಗ್ಧ ನಿರೂಪಣಾ ಸಾಮರ್ಥ್ಯದಲ್ಲಿ ತೋರಿಬರುವ ಅದ್ಭುತ ಚಿಂತನಾ ಸಾಮರ್ಥ್ಯಕ್ಕೆ ಸರಿಸಾಟಿಯಾದ ಗ್ರಂಥ ಮತ್ತೊಂದಿಲ್ಲ" ಎಂದು ಹೇಳಿದ್ದಾರೆ.

ಶ್ರೀಮದಾಚಾರ್ಯರ ಸಿದ್ಧಾಂತಕ್ಕೆ ಸಂಪೂರ್ಣವಾಗಿ ಮನಸೋತು, ಅದುವರೆಗೆ ತಾವು ನಂಬಿದ್ದ ಅದ್ವೈತ ಮತವನ್ನು ಕೈಬಿಟ್ಟು, ಶ್ರೀಮಧ್ವಾಚಾರ್ಯರ ನೆಚ್ಚಿನ ಶಿಷ್ಯರೆಂಬ ಕೀರ್ತಿಗೆ ಪಾತ್ರರಾಗಿ ಮಧ್ವಮತದ ಪರಮದೀಕ್ಷೆಯನ್ನು ಹೊಂದಿದ ಶ್ರೀ ತ್ರಿವಿಕ್ರಮಪಂಡಿತಾಚಾರ್ಯರ ಪ್ರಾರ್ಥನೆ ಮೇರೆಗೆ ಶ್ರೀಮದಾಚಾರ್ಯರು ಈ ಅನುವ್ಯಾಖ್ಯಾನ ಗ್ರಂಥವನ್ನು ರಚಿಸಿದರೆಂದು ಪ್ರತೀತಿ. ಸುಮಧ್ವವಿಜಯದಲ್ಲಿ ಇದರ ಉಲ್ಲೇಖ ಬಂದಿದೆ (೧೫ನೇ ಸರ್ಗ, ಶ್ಲೋಕ ೮೬-೮೯) -

"ಅಪರೋಕ್ಷೀಕೃತೇಽಸ್ಮಾಭಿರ್ಗ್ರಂಥೇಷ್ವೇತೇಷು ಸತ್ಸ್ವಪಿ ।
ಸತ್ಸ್ವಪೀಂದ್ರಾದಿಷು ಪುರಾ ತಾರಕಾರಿರಿವಾಮರೈಃ ॥೮೬॥
ಗ್ರಂಥೇಭ್ಯ ಏಭ್ಯೋಽಗಾಧೇಭ್ಯೋ ಯುಕ್ತಯೋ ನೋ ದುರುದ್ಧರಾಃ ।
ಮನೋಮಾಂದ್ಯಾತ್ತತೋ ಗ್ರಂಥಂ ವ್ಯಕ್ತತರ್ಕತತಿಂ ಕುರು ॥೮೭॥
ಇತ್ಯರ್ಥಿತೋ ವ್ಯದಾನ್ಮಧ್ವಃ ಸೋಽನುವ್ಯಾಖ್ಯಾಂ ಸತಾಂ ಸುಧಾಮ್ ।
ದುರ್ವಾದಿಗರ್ವಾದ್ರಿಪವಿಂ ಮಾಯಿಧ್ವಾಂತರವಿದ್ಯುತಿಮ್ ॥೮೮॥
ಯುಗಪದ್ರಚಯನ್ನೇವಾಂ ಕದಾಚಿತ್ಸ ನಿರಂತರಮ್ ।
ಚತುರಶ್ಚತುರಃ ಶಿಷ್ಯಾಂಲ್ಲೀಲಯಾಽಲೇಖಯತ್ ಖಲು ॥೮೯॥"

ಮೇಲಿನ ಶ್ಲೋಕಗಳಲ್ಲಿ ಉಕ್ತವಾಗಿರುವ ಪ್ರಕಾರ, ಅನುವ್ಯಾಖ್ಯಾನವು ಸಜ್ಜನರ ಪಾಲಿಗೆ ಅಮೃತದಂತೆ ಸುಖಕರವೂ, ದುರ್ವಾದಿಗಳ ಗರ್ವವೆಂಬ ಪರ್ವತಕ್ಕೆ ವಜ್ರಾಯುಧ ಸದೃಶವೂ, ಮಾಯಾವಾದವೆಂಬ ಕತ್ತಲೆಯನ್ನು ನಾಶಮಾಡುವ

ಸೂರ್ಯಪ್ರಕಾಶದಂತೆಯೂ ಇರುವ ಅಪೂರ್ವ ಗ್ರಂಥ. ಚತುರಧ್ಯಾಯಗಳಿಂದ ಕೂಡಿರುವ ಈ ಗ್ರಂಥವನ್ನು ಚತುರರಾದ ಶ್ರೀಮಧ್ವಾಚಾರ್ಯರು ಒಂದೇ ಸಲಕ್ಕೆ ಚತುರರಾದ ಚತುಃಸಂಖ್ಯಾತ ಶಿಷ್ಯರಿಂದ ನಿರಂತರವಾಗಿ ಅನಾಯಾಸವಾಗಿ ಬರೆಯಿಸಿದರು. ಏಕಕಾಲದಲ್ಲಿ ಒಬ್ಬೊಬ್ಬರಿಗೆ ಒಂದು ಅಧ್ಯಾಯದಂತೆ ಹೇಳುತ್ತ ರಚಿಸಿದ ಅದ್ಭುತ ಗ್ರಂಥವಿದು. ಇಂಥಹ ಅಲೌಕಿಕವಾದ ಕೌಶಲ ಭಾವಿಚತುರ್ಮುಖರಾದ ಆಚಾರ್ಯ ಮಧ್ವರಿಗಲ್ಲದೆ ಬೇರೆ ಯಾರಿಗೆ ತಾನೇ ಸಾಧ್ಯವಾದೀತು?

ಅನುವ್ಯಾಖ್ಯಾನದಲ್ಲಿ ಶ್ರೀಮದಾಚಾರ್ಯರು ಎಲ್ಲ ದರ್ಶನಗಳ ವಿಮರ್ಶೆ ಮಾಡಿದ್ದಾರಾದರೂ, ವಿಶೇಷವಾಗಿ ಮಾಯಾವಾದವನ್ನು ಕೂಲಂಕುಷ ವಿಮರ್ಶೆಗೆ ಒಳಪಡಿಸಿದ್ದಾರೆ. ಅದ್ವೈತಸಿದ್ಧಾಂತದ ವಿವಿಧ ಪ್ರಕ್ರಿಯೆಗಳನ್ನು ವಿಶದವಾಗಿ ವಿವೇಚಿಸಿ ಅದರ ದೋಷಗಳನ್ನು ಎತ್ತಿ ತೋರಿಸಿದ್ದಾರೆ. ಜೀವಬ್ರಹ್ಮೈಕ್ಯ, ಬ್ರಹ್ಮನ ನಿರ್ವಿಶೇಷತ್ವ, ಅನಿರ್ವಚನೀಯತ್ವ, ಅದ್ವೈತಮತದ ಪ್ರಕಾರ ಖ್ಯಾತಿವಾದ, ಅಜ್ಞಾನವಾದ, ಜಗನ್ಮಿಥ್ಯಾತ್ವ, ಭೇದಕ್ಕೆ ಅಪ್ರಾಮಾಣ್ಯ - ಇವೇ ಮುಂತಾದ ಅದ್ವೈತಿಗಳ ವಿಚಾರಗಳನ್ನು ಸಪ್ರಮಾಣ ಸಯುಕ್ತಿಕವಾಗಿ ಖಂಡಿಸಿದ್ದಾರೆ.

ಮೊದಲನೆಯ ಅಧ್ಯಾಯದಲ್ಲಿ ಎಲ್ಲ ರೀತಿಯ ನಾಮಾತ್ಮಕ ಹಾಗೂ ಲಿಂಗಾತ್ಮಕ ಶಬ್ದಗಳನ್ನು ಬ್ರಹ್ಮನಲ್ಲಿ ಸಮನ್ವಯ ಮಾಡುವ ಮೂಲಕ ಬ್ರಹ್ಮನು ಸಕಲಗುಣಪೂರ್ಣ ಎನ್ನುವ ಪ್ರಮೇಯವನ್ನು ದೃಢಪಡಿಸಲಾಗಿದೆ. ಆದಕಾರಣ ಈ ಅಧ್ಯಾಯಕ್ಕೆ ಸಮನ್ವಯಾಧ್ಯಾಯವೆಂದು ಹೆಸರು. ಇದು ನಾಲ್ಕು ಪಾದಗಳಿಂದ ಕೂಡಿದೆ. ಮೊದಲನೆಯ ಪಾದದ ಮೊದಲ ಐದು ಅಧಿಕರಣಗಳು ಪೀಠಿಕಾ ಭಾಗವಾಗಿವೆ, ಆನಂದಮಯಾಧಿಕರಣದಿಂದ ಸಮನ್ವಯವು ಪ್ರಾರಂಭ. ಪೀಠಿಕಾ ಭಾಗದಲ್ಲಿ ಬ್ರಹ್ಮವಿಚಾರದ ಅವಶ್ಯಕತೆ, ಬ್ರಹ್ಮನ ಲಕ್ಷಣ, ಬ್ರಹ್ಮನನ್ನು ತಿಳಿಸುವ ಪ್ರಮಾಣ ಇತ್ಯಾದಿ ವಿಷಯಗಳನ್ನು ಚರ್ಚಿಸಿ, ಆನಂದಮಯಾಧಿಕರಣದಿಂದ ಮೊದಲನೆಯ ಅಧ್ಯಾಯದ ಕೊನೆಯವರೆಗೆ ಅನಂತಕಲ್ಯಾಣಗುಣಪೂರ್ಣನಾದ ಬ್ರಹ್ಮನು ಸೃಷ್ಟ್ಯಾದಿಕರ್ತನು ಎಂಬ ವಿಷಯದಲ್ಲಿ ಶ್ರುತಿ ಸಮನ್ವಯವನ್ನು ತೋರಿಸಿರುವರು. ಶ್ರೀಮದಾಚಾರ್ಯರ ವ್ಯಾಖ್ಯಾನ ಶೈಲಿಯನ್ನು ಗ್ರಂಥ ನೋಡಿಯೇ ಸವಿಯಬೇಕು.

ಅತ್ಯಂತ ಪ್ರೌಢವಾದ ಈ ಗ್ರಂಥಕ್ಕೆ ಅಷ್ಟೇ ಪ್ರೌಢವಾದ ಶೈಲಿಯಲ್ಲಿ ರಚಿತವಾದ ಟೀಕಾ ಗ್ರಂಥವೇ ಶ್ರೀಮಜ್ಜಯತೀರ್ಥರ ಶ್ರೀಮನ್ನ್ಯಾಯಸುಧಾ. ಇದಕ್ಕೆ

ಟಿಪ್ಪಣಿಯಾಗಿ ರಚಿತವಾಗಿರುವುದೇ ಶ್ರೀ ರಾಘವೇಂದ್ರ ತೀರ್ಥರ ನ್ಯಾಯಸುಧಾ ಪರಿಮಳ. ಇವುಗಳನ್ನು ಆಧಾರವಾಗಿಟ್ಟುಕೊಂಡು, ಹಿರಿಯ ವಿದ್ವಾಂಸರ ಮಾರ್ಗದರ್ಶನವನ್ನು ಪಡೆದು, ಪಾಠ ಹೇಳಿದ ಗುರುಗಳ ಆಶೀರ್ವಾದದ ಬಲದಿಂದ ಪ್ರಸ್ತುತ ಅನುವಾದ ಗ್ರಂಥವನ್ನು ಪ್ರಕಾಶಪಡಿಸುವ ಸಾಹಸಕ್ಕೆ ಕೈಹಾಕಿದ್ದೇನೆ. ನಾನೇನು ದೊಡ್ಡ ಪಂಡಿತನಲ್ಲ. ಹೆಚ್ಚಿನ ವ್ಯಾಕರಣ ತಿಳಿದಿಲ್ಲ. ಆದರೂ ಶ್ರೀಮದಾಚಾರ್ಯರ ಸೇವೆಯ ಮಾಡುವ ಪರಮೋದ್ದೇಶದಿಂದ ಸರ್ವಮೂಲಗ್ರಂಥಗಳ ಅಧ್ಯಯನವನ್ನು ಮಾಡುತ್ತ ಜ್ಞಾನಪಿಪಾಸುಗಳಾದ ಸಜ್ಜನರಿಗೆ ಅವುಗಳ ಭಾವಸಂಗ್ರಹವನ್ನು ನೀಡುವ ಕಾರ್ಯವನ್ನು ಕೈಗೊಂಡಿದ್ದೇನೆ. ಶ್ರೀಹರಿವಾಯುಗಳೇ ನನ್ನೊಳಗೆ ನಿಂತು ನುಡಿಸುತ್ತಿದ್ದಾರೆ. ಅವರು ಪ್ರೇರಣೆ ಮಾಡಿದಂತೆ ನಾನು ಲೇಖಿಸುತ್ತಿದ್ದೇನೆ.

ಶ್ರೀಮದನುವ್ಯಾಖ್ಯಾನದ ಮೊದಲನೆಯ ಭಾಗವಾಗಿ ಮೊದಲನೆಯ ಅಧ್ಯಾಯದ ಕನ್ನಡಾನುವಾದವನ್ನು ಶ್ರೀಮನ್ನ್ಯಾಯಸುಧಾ ಹಾಗೂ ಪರಿಮಳ ಗ್ರಂಥಗಳ ಸಂಕ್ಷಿಪ್ತ ಸಾರ ಸಹಿತ ಈಗ ಜಿಜ್ಞಾಸುಗಳ ಮುಂದೆ ಇಡುತ್ತಿದ್ದೇನೆ. ಪ್ರಸ್ತುತ ಮೊದಲನೆಯ ಭಾಗದಲ್ಲಿ ಶ್ರೀಮದನುವ್ಯಾಖ್ಯಾನದ ಎಲ್ಲ ಶ್ಲೋಕಗಳಿಗೂ ಶ್ರೀಮನ್ನ್ಯಾಯಸುಧಾದಲ್ಲಿ ಹೇಳಿರುವ ಪ್ರಕಾರ ಅವತರಣಿಕೆ, ಭಾವಾನುವಾದ, ಸಂಕ್ಷಿಪ್ತವಾಗಿ ವಿಶೇಷ ವಿವರಣೆಗಳನ್ನು ಆದಷ್ಟು ಸರಳವಾದ ಭಾಷೆಯಲ್ಲಿ ನೀಡಿದ್ದೇನೆ. ಎಷ್ಟಾದರೂ ಇದು ಶಾಸ್ತ್ರ ಗ್ರಂಥವಾದ್ದರಿಂದ ಕ್ಲಿಷ್ಟತೆ ಇರುವುದು ಸಹಜವೇ. ಒಮ್ಮೆ ಪಾಠ ಕೇಳಿದವರಿಗೆ ಇದು ಸುಲಭ ಗ್ರಾಹ್ಯವಾಗಿದ್ದರೂ, ಉಳಿದವರೂ ಈ ಗ್ರಂಥದ ಸಾಮಾನ್ಯ ಪರಿಚಯವನ್ನು ಈ ಅನುವಾದದಿಂದ ಪಡೆಯಬಹುದಾಗಿದೆ. ಮುಂದಿನ ಮೂರು ಭಾಗಗಳಲ್ಲಿ ಉಳಿದ ಮೂರು ಅಧ್ಯಾಯಗಳ ಅನುವಾದವನ್ನು ಆದಷ್ಟು ಬೇಗ ಪ್ರಕಟಿಸುವ ಉದ್ದೇಶವಿದೆ. ಈ ಪ್ರಕಟಣೆಯ ಕಾರ್ಯ ಕ್ಲುಪ್ತ ಸಮಯದಲ್ಲಿ ಪೂರ್ಣಗೊಳ್ಳುವಂತೆ ಶ್ರೀಹರಿವಾಯುಗಳು ಅನುಗ್ರಹಿಸಬೇಕು.

ಪ್ರಸ್ತುತ ಅನುವಾದಕ್ಕೆ ವಿದ್ವಾಂಸರಾದ ಹೆ ಕೃ ರಂಗನಾಥಾಚಾರ್ಯರಿಂದ ಸಂಪಾದಿತವಾದ ಹಾಗೂ ಮುಳಬಾಗಿಲಿನ ಶ್ರೀಪ್ರಸನ್ನರಾಘವೇಂದ್ರ ಮಠದಿಂದ ಪ್ರಕಟಗೊಂಡಿರುವ ಪರಿಮಳ ಟಿಪ್ಪಣಿ ಸಹಿತ ಶ್ರೀಮನ್ನ್ಯಾಯಸುಧಾ ಗ್ರಂಥವನ್ನೇ ಮುಖ್ಯವಾಗಿ ಆಧರಿಸಿದ್ದೇನೆ. ವಿದ್ವಾಂಸ ಪ್ರೊ|| ಕೆ ಟಿ ಪಾಂಡುರಂಗಿಯವರಿಂದ ಸಂಪಾದಿತವಾದ ಶ್ರೀಮದನುವ್ಯಾಖ್ಯಾನ ಮೂಲ, ವಿದ್ವಾಂಸ ಡಾ|| ವ್ಯಾಸನಕೆರೆ ಪ್ರಭಂಜನಾಚಾರ್ಯರಿಂದ ಸಂಪಾದಿತವಾಗಿ ಪ್ರಕಟಿಸಲ್ಪಟ್ಟಿರುವ ಮೂಲ ಗ್ರಂಥ,

ಉಡುಪಿ ಶ್ರೀಮಧ್ವಮುನಿ ಸೇವಾಸಂಘದಿಂದ ಪ್ರಕಟವಾಗಿರುವ ವಿದ್ವಾಂಸ ಅಗ್ರಹಾರ ನಾರಾಯಣ ತಂತ್ರಿಯವರಿಂದ ರಚಿತವಾದ ಶ್ರೀಮದನುವ್ಯಾಖ್ಯಾನದ ಕನ್ನಡ ಅನುವಾದ - ಈ ಗ್ರಂಥಗಳನ್ನೂ ಪರಾಮರ್ಶಿಸಿದ್ದೇನೆ. ಇವೆಲ್ಲ ಗ್ರಂಥಗಳ ಲೇಖಕರನ್ನೂ ಪ್ರಕಾಶಕರನ್ನೂ ಕೃತಜ್ಞತೆಯಿಂದ ಸ್ಮರಿಸುತ್ತೇನೆ. ನನ್ನ ಎಲ್ಲ ಗ್ರಂಥಗಳ ಪ್ರಕಟಣೆಗಳಲ್ಲಿ ಬಹಳ ಉತ್ಸಾಹದಿಂದ ಸಹಕರಿಸಿ ಉತ್ತೇಜನ ನೀಡುತ್ತಿರುವ ಎಲ್ಲ ಹಿತೈಷಿಗಳನ್ನೂ, ನಮ್ಮ ಕುಟುಂಬದವರನ್ನೂ ಈ ಸಂದರ್ಭದಲ್ಲಿ ಬಹಳ ಆದರದಿಂದ ಸ್ಮರಿಸುತ್ತೇನೆ. ಈ ಗ್ರಂಥವನ್ನು ಸಕಾಲದಲ್ಲಿ ಸುಂದರವಾಗಿ ಮುದ್ರಿಸಿಕೊಟ್ಟಿರುವ ಪರಿಮಳ ಮುದ್ರಣಾಲಯದ ಶ್ರೀಯುತ ಪ್ರಭಾಕರ್ ಅವರಿಗೆ ಹೃತ್ಪೂರ್ವಕ ಕೃತಜ್ಞತೆಗಳು. ಸಹೃದಯ ಜಿಜ್ಞಾಸುಗಳ ಹಾಗೂ ಪಂಡಿತರ ಅಭಿಪ್ರಾಯಗಳನ್ನು ತುಂಬು ಹೃದಯದಿಂದ ಸ್ವಾಗತಿಸುತ್ತೇನೆ.

ಇಂತಿ ಸಜ್ಜನವಿಧೇಯ

ಎಸ್. ವೆಂಕಟೇಶಮೂರ್ತಿ

||ಶ್ರೀಗುರುಭ್ಯೋ ನಮಃ|| ಹರಿಃ ಓಂ||

# ಮಂಗಲ ಶ್ಲೋಕಗಳು

## ಶ್ರೀಮನ್ನ್ಯಾಯಸುಧಾ

ಶ್ರಿಯಃಪತ್ಯೇ ನಿತ್ಯಾಗಣಿತಗುಣಮಾಣಿಕ್ಯವಿಶದ-
ಪ್ರಭಾಜಾಲೋಲ್ಲಾಸೋಪಹತ ಸಕಲಾವದ್ಯತಮಸೇ ।
ಜಗಜ್ಜನ್ಮಸ್ಥೇಮಪ್ರಲಯರಚನಾಶೀಲವಪುಷೇ
ನಮೋಽಶೇಷಾಮ್ನಾಯ ಸ್ಮೃತಿಹೃದಯದೀಪ್ತಾಯ ಹರಯೇ ||೧||

ಯೇನ ಪ್ರಾದುರಭಾವಿ ಭೂಮಿವಲಯೇ ವ್ಯಸ್ತಾರಿ ಗೋಸಂತತಿಃ
ಪ್ರಾಬೋಧಿ ಶ್ರುತಿಪಂಕಜಂ ಕರುಣಯಾ ಪ್ರಾಕಾಶಿ ತತ್ತ್ವಂ ಪರಂ ।
ಧ್ವಾಂತಂ ಧ್ವಂಸಮನಾಯಿಸಾಧು ನಿಕರಃ ಚಾಕಾರಿ ಸನ್ಮಾರ್ಗಗಃ
ತೇನ ವ್ಯಾಸದಿವಾಕರೇಣ ಸತತಂ ಮಾತ್ಯಾಜಿ ಮೇ ಮಾನಸಂ ||೨||

ವ್ಯಾಪ್ತಿರ್ಯಸ್ಯ ನಿಜೇ ನಿಜೇನ ಮಹಸಾ ಪಕ್ಷೇ ಸಪಕ್ಷೇ ಸ್ಥಿತಿಃ
ವ್ಯಾವೃತ್ತಿಶ್ಚ ವಿಪಕ್ಷತೋಽಥವಿಷಯೇ ಸಕ್ತಿರ್ನವೈ ಬಾಧತೇ ।
ನೈವಾಸ್ತಿ ಪ್ರತಿಪಕ್ಷಯುಕ್ತಿರತುಲಂ ಶಬ್ದಪ್ರಮಾಣಂ ಸ ಮೇ
ಭೂಯಾತ್ತತ್ತ್ವವಿನಿರ್ಣಯಾಯ ಭಗವಾನ್ ಆನಂದತೀರ್ಥೋ ಮುನಿಃ ||೩||

ಭವತಿ ಯದನುಭಾವಾದೇಡಮೂಕೋಽಪಿ ವಾಗ್ಮೀ
ಜಡಮತಿರಪಿ ಜಂತುಃ ಜಾಯತೇ ಪ್ರಾಜ್ಞಮೌಲಿಃ ।
ಸಕಲವಚನಚೇತೋ ದೇವತಾ ಭಾರತೀ ಸಾ
ಮಮ ವಚಸಿ ನಿಧತ್ತಾಂ ಸನ್ನಿಧಿಂ ಮಾನಸೇ ಚ ||೪||

ರಮಾನಿವಾಸೋಚಿತವಾಸಭೂಮಿಃ ಸನ್ನ್ಯಾಯರತ್ನಾವಳಿ ಜನ್ಮಭೂಮಿಃ ।
ವೈರಾಗ್ಯಭಾಗ್ಯೋ ಮಮ ಪದ್ಮನಾಭತೀರ್ಥಾಮೃತಾಬ್ಧಿಭವತಾದ್ವಿಭೂತ್ಯೈ ||೫||

ಪದವಾಕ್ಯಪ್ರಮಾಣಜ್ಞಾನ್ ಪ್ರತಿವಾದಿಮದಚ್ಛಿದಃ ।
ಶ್ರೀಮದಕ್ಷೋಭ್ಯತೀರ್ಥಾಖ್ಯಾನುಪತಿಷ್ಠೇ ಗುರೂನ್ಮಮ ||೬||

ಶ್ರೀಮದಾನಂದತೀರ್ಥಾರ್ಯಸನ್ಮನಃ ಸರಸೀಭುವಿ ।
ಅನುವ್ಯಾಖ್ಯಾನನಳಿನೇ ಚಂಚರಿಕತಿ ಮೇ ಮನಃ ||೭||

ನ ಶಬ್ದಾಬ್ಧೌ ಗಾಢಾ ನ ಚ ನಿಗಮಚರ್ಚಾಸು ಚತುರಾ
ನ ಚ ನ್ಯಾಯೇ ಪ್ರೌಢಾ ನ ಚ ವಿದಿತವೇದ್ಯಾ ಅಪಿ ವಯಂ ।
ಪರಂ ಶ್ರೀಮತ್ಪೂರ್ಣಪ್ರಮತಿಗುರುಕಾರುಣ್ಯಸರಣಿಂ
ಪ್ರಪನ್ನಾ ಮಾನ್ಯಾಃ ಸ್ಮಃ ಕಿಮಪಿ ಚ ವದಂತೋಽಪಿ ಮಹತಾಂ ॥೮॥

*

## ಶ್ರೀಮನ್ನ್ಯಾಯಸುಧಾ ಪರಿಮಳ

ಪೂರ್ಣಾಗಣ್ಯಗುಣೋದಾರಮೂರ್ತಯೇ ಪುಣ್ಯಕೀರ್ತಯೇ ।
ನಮಃ ಶ್ರೀಪತಯೇ ಭಕ್ತದತ್ತಸ್ವಾನಂದಮೂರ್ತಯೇ ॥೧॥
ಪೂರ್ಣಾಗಣ್ಯಗುಣೋದಾರನಿತ್ಯಸುಂದರಮೂರ್ತಿನೇ ।
ಶ್ರೀಬ್ರಹ್ಮವೀಂದ್ರಪೂರ್ವೇಡ್ಯಕೀರ್ತಿನೇ ಬ್ರಹ್ಮಣೇ ನಮಃ ॥೨॥
ವಿಶ್ವಂ ಯಸ್ಯ ವಶೇ ಸರ್ವಮನಿಶಂ ಶಂಕರಾದಿಕಮ್ ।
ತಸ್ಯ ವಾಯೋಸ್ತೃತೀಯಾಂಶಮಾಶ್ರಯೇ ಶಮವಾಪ್ತಯೇ ॥೩॥
ಸತ್ಪದ್ಮಬಂಧವೋ ಯಸ್ಯ ಗಾವೋ ವಿಶ್ವತಮೋನುದಃ ।
ಸ ಸ್ಯಾತ್ ತತ್ವಪ್ರಕಾಶಾಯ ಜಯತೀರ್ಥರವಿರ್ಮಮ ॥೪॥
ಪದವಾಕ್ಯಪ್ರಮಾಣಜ್ಞೋ ದುರ್ಮತಧ್ವಾಂತಭಾಸ್ಕರಃ ।
ವ್ಯಾಸತೀರ್ಥಮುನೀಂದ್ರೋ ಮೇ ಭೂಯಾತ್ ಜ್ಞಾನಸಮೃದ್ಧಯೇ ॥೫॥
ಅಸ್ಮದ್ದೇಶಿಕಪಾದಾನಾಂ ಪ್ರಣಮ್ಯ ಚರಣಾಂಬುಜಮ್ ।
ಶ್ರೀಮನ್ನ್ಯಾಯಸುಧಾವಾಕ್ಯವ್ಯಾಖ್ಯಾಂ ಕುರ್ಮೋ ಯಥಾಮತಿ ॥೬॥

*

## ಶ್ರೀಮದನುವ್ಯಾಖ್ಯಾನಮ್

ನಾರಾಯಣಂ ನಿಖಿಲಪೂರ್ಣಗುಣೈಕದೇಹಂ
ನಿರ್ದೋಷಮಾಪ್ಯತಮಮಪ್ಯಖಿಲೈಃ ಸುವಾಕ್ಯೈಃ ।
ಅಸ್ಯೋದ್ಭವಾದಿದಮಶೇಷವಿಶೇಷತೋಪಿ
ವಂದ್ಯಂ ಸದಾ ಪ್ರಿಯತಮಂ ಮಮ ಸನ್ನಮಾಮಿ ॥

* * *

# ವಿಷಯಾನುಕ್ರಮಣಿಕೆ


| | |
|---|---|
| **ಮೊದಲನೆಯ ಪಾದ** | ೧-೧೩೪ |
| **ಮಂಗಲಾಚರಣೆ** | ೧ |
| ಬ್ರಹ್ಮಸೂತ್ರಗಳು ಪರವಿದ್ಯೆ ಹಾಗೂ ಪರಮಪ್ರಮಾಣ | ೬ |
| ಓಂಕಾರವು ಸೂತ್ರಾವಯವ ಹಾಗೂ ಮಂಗಲಸೂಚಕ . | ೯ |
| **ಜಿಜ್ಞಾಸಾಧಿಕರಣ** | ೧೧ |
| ಗುಣಪೂರ್ಣತ್ವವೇ ಓಂಕಾರದ ಅರ್ಥ | ೧೧ |
| ಗುಣಪೂರ್ಣವೇ ಜಿಜ್ಞಾಸ್ಯನು | ೧೧ |
| ಅತಃ ಶಬ್ದಕ್ಕೆ ವ್ಯಾಖ್ಯಾನ | ೧೪ |
| ವಿಷ್ಣುವಿನ ಪ್ರಸಾದದಿಂದಲೇ ಮೋಕ್ಷ | ೧೫ |
| ಬಂಧಮಿಥ್ಯಾತ್ವ ಖಂಡನೆ | ೧೬ |
| ಸದಸದ್ವಿಲಕ್ಷಣತ್ವದ ನಿರಾಸೆ | ೧೮ |
| ಭ್ರಾಂತಿಯ ಸ್ವರೂಪ | ೧೯ |
| ಪಂಚಾಖ್ಯಾತಿ ವಾದ | ೨೦ |
| ಅಸತ್ತಿಗೂ ಪ್ರತೀತಿಯುಂಟು | ೨೬ |
| ಅಜ್ಞಾನ ವಾದ | ೨೭ |
| ಜೀವಬ್ರಹ್ಮೈಕ್ಯ ಶಾಸ್ತ್ರಕ್ಕೆ ವಿಷಯವಲ್ಲ | ೩೦ |
| ವಿಷ್ಣುಪ್ರಸಾದದಿಂದಲೇ ಬಂಧನಿವೃತ್ತಿ | ೩೩ |
| ಕಾರ್ಯತಾ ವಾದ | ೩೪ |
| ವೇದಪ್ರಾಮಾಣ್ಯ ಸಮರ್ಥನೆ | ೪೨ |
| ವೇದಾಪೌರುಷೇಯತ್ವ ಸಮರ್ಥನೆ | ೪೫ |
| ವಾಕ್ಯಾರ್ಥಬೋಧಕತ್ವ | ೪೯ |
| ಬ್ರಹ್ಮತರ್ಕ ವಿಷಯ ಸಂಗ್ರಹ | ೫೧ |

ಬ್ರಹ್ಮ ಶಬ್ದ ವಿಷ್ಣುವನ್ನೇ ಹೇಳುತ್ತದೆ ೫೩
ಜನ್ಮಾಧಿಕರಣ ೫೬
ವಿಷ್ಣುವೇ ಜಗಜ್ಜನ್ಮಾದಿಕಾರಣ ೫೬
ವಿಷ್ಣುವಿಗೆ ಜನ್ಮಾದಿ ದೋಷವಿಲ್ಲ ೫೭
ಅನ್ಯ ದೇವತೆಗಳು ದೋಷಯುಕ್ತರು ೫೯
ಜನ್ಮಾದಿಕಾರಣತ್ವ ಬ್ರಹ್ಮನ ಸ್ವಲಕ್ಷಣ ೬೦
ಜೀವಬ್ರಹ್ಮೈಕ್ಯ ವಾದ ನಿರಾಕರಣೆ ೬೧
ಬ್ರಹ್ಮನು ನಿರ್ವಿಶೇಷನಲ್ಲ ೬೭
ವಿಶೇಷದ ನಿರೂಪಣೆ ೬೮
ಶಾಸ್ತ್ರಯೋನಿತ್ವಾಧಿಕರಣ ೬೯
ಜನ್ಮಾದಿಕಾರಣತ್ವಕ್ಕೆ ಶಾಸ್ತ್ರವೇ ಪ್ರಮಾಣ ೬೯
ಕೇವಲಾನುಮಾನವು ಪ್ರಮಾಣವಲ್ಲ ೭೦
ಸಮನ್ವಯಾಧಿಕರಣ ೭೨
ಸಮನ್ವಯ ಶಬ್ದಾರ್ಥ ೭೩
ಈಕ್ಷತ್ಯಧಿಕರಣ ೭೪
ಬ್ರಹ್ಮನು ಅವಾಚ್ಯನಲ್ಲ ೭೪
ಶ್ರುತ್ಯರ್ಥ ಪರಿತ್ಯಾಗದಿಂದ ಮಹಾ ಅನರ್ಥ ೭೯
ಗೌಣಾತ್ಮನು ಆತ್ಮಶಬ್ದ ವಾಚ್ಯನಲ್ಲ ೮೦
ಪ್ರಾಕೃತ ಗುಣರಹಿತ ಶುದ್ಧಬ್ರಹ್ಮನೇ ವಾಚ್ಯನು ೮೨
ಗುಣಪೂರ್ಣನೇ ಜಿಜ್ಞಾಸ್ಯನು ೮೫
ನಿರ್ಗುಣನು ಶಾಸ್ತ್ರಕ್ಕೆ ವಿಷಯನಲ್ಲ ೮೭
ಆನಂದಮಯಾಧಿಕರಣ ೮೮
ಅನ್ಯತ್ರ ಪ್ರಸಿದ್ಧ ನಾಮಾತ್ಮಕ ಶಬ್ದಗಳ ಸಮನ್ವಯ ೯೦
ಆನಂದಮಯಾದಿ ಶಬ್ದಗಳು ವಿಷ್ಣುವನ್ನೇ ಹೇಳುತ್ತವೆ ೯೧
ಪರಬ್ರಹ್ಮ ವಾಚ್ಯತ್ವ ರುದ್ರಾದಿಗಳಲ್ಲಿ ಕೂಡುವುದಿಲ್ಲ ೯೪
ಬ್ರಹ್ಮನೇ ಆನಂದಮಯಾದಿ ಶಬ್ದವಾಚ್ಯ ೯೮

ಪ್ರಾಚುರ್ಯಾರ್ಥದಲ್ಲಿ ಮಯಟ್ ಶಬ್ದ ೯೮
ಹೇತ್ವಂತರದಿಂದ ಆನಂದಮಯತ್ವ ಪ್ರತಿಪಾದನೆ ೧೦೨
ಅನ್ನಮಯಾದಿ ಶಬ್ದವಾಚ್ಯನೇ ಮಂತ್ರವರ್ಣೋಕ್ತನು ೧೦೪
ಅನ್ನಮಯಾದಿ ಪ್ರತಿಪಾದ್ಯರು ಜೀವಾದಿಗಳಲ್ಲ ೧೦೭
ವಿಷ್ಣುವೇ ಪುರುಷ ಶಬ್ದವಾಚ್ಯನು ೧೦೮
ವಿಷ್ಣುವೇ ಚತುರ್ವಿಧ ಆಕಾಶಾದಿ ಶಬ್ದವಾಚ್ಯನು ೧೦೯
ಜವಿಸ್ವರೂಪ ನಿರೂಪಣೆ ೧೧೧
'ತಸ್ಯೇದಮೇವ ಶಿರ' ಇತ್ಯಾದಿ ಶ್ರುತ್ಯರ್ಥ ೧೧೨
'ಸ ವಾ ಏಷ' ಶ್ರುತ್ಯರ್ಥ ೧೧೩
ಜೀವಬ್ರಹ್ಮರ ಅಭೇದ ಇಲ್ಲಿ ವಿವಕ್ಷಿತವಲ್ಲ ೧೧೩
ಕಾಮಾಚಾರಿಯಾದ ಅನುಮಾನ ಅಭೇದಸಾಧಕವಲ್ಲ ೧೧೪
ಅನ್ನಮಯಾದಿಗಳ ಕೋಶಪರತ್ವ ನಿರಾಕರಣೆ ೧೧೬
ಭೃಗು-ವರುಣ ಸಂವಾದ ೧೧೮
ಅಧಿಕರಣಾರ್ಥ ಉಪಸಂಹಾರ ೧೨೩
ಸಕಲ ಶಬ್ದಗಳಿಗೆ ಭಗವಂತನಲ್ಲಿಯೇ ಸಮನ್ವಯ ೧೨೩
ಅಂತಸ್ಥತ್ವಾಧಿಕರಣ ೧೨೫
ಅಧಿದೈವಗತ ಶಬ್ದಗಳ ಸಮನ್ವಯ ೧೨೬
ಆಕಾಶಾಧಿಕರಣ ೧೨೭
ಅಧಿಭೂತ ಶಬ್ದಗಳ ಸಮನ್ವಯ ೧೨೭
ಪ್ರಾಣಾಧಿಕರಣ ೧೨೯
ಪ್ರಾಣಾದಿ ಆಧ್ಯಾತ್ಮಿಕ ಶಬ್ದಗಳ ಸಮನ್ವಯ ೧೨೯
ಜ್ಯೋತಿರಧಿಕರಣ ೧೩೦
ಗಾಯತ್ರ್ಯಧಿಕರಣ ೧೩೦
ಅಧಿವೇದಗತ ಶಬ್ದಗಳ ಸಮನ್ವಯ ೧೩೦
ಪಾದಾಂತ್ಯ ಪ್ರಾಣಾಧಿಕರಣ ೧೩೨
ಪಾದಾರ್ಥ ಉಪಸಂಹಾರ ೧೩೩

ಎರಡನೆಯ ಪಾದ ೧೩೫-೧೫೨

ಸರ್ವಗತತ್ವಾಧಿಕರಣ ೧೩೫

ಸತ್ತಾಲಿಂಗ ಸಮನ್ವಯ ೧೩೫

ಈ ಪಾದದಲ್ಲಿನ ಅಧಿಕರಣಗಳ ಉಪಾಧಿಗಳು ೧೩೮

ಅತ್ತೃತ್ವಾಧಿಕರಣ ೧೩೮

ಕ್ರಿಯಾಲಿಂಗ ಸಮನ್ವಯ ೧೩೮

ಗುಹಾಧಿಕರಣ ೧೪೦

ಫಲಭೋಗರೂಪ ಕ್ರಿಯಾಲಿಂಗ ಸಮನ್ವಯ ೧೪೦

ಅಂತರಾಧಿಕರಣ ೧೪೨

ಕ್ರಿಯಾಭಾವರೂಪ ಲಿಂಗ ಸಮನ್ವಯ ೧೪೨

ಚಕ್ಷುರಂತಸ್ಥನು ವಿಷ್ಣುವೇ ೧೪೩

ಅಂತರ್ಯಾಮ್ಯಧಿಕರಣ ೧೪೪

ರಮಣರೂಪ ಕ್ರಿಯಾಲಿಂಗ ಸಮನ್ವಯ ೧೪೪

ಅದೃಶ್ಯತ್ವಾಧಿಕರಣ ೧೪೬

ಅದೃಶ್ಯತ್ವಾದಿ ಗುಣಗಳ ಸಮನ್ವಯ ೧೪೬

ಅನ್ಯೋನ್ಯಾಭಾವದ ವಿವರಣೆ ೧೪೭

ವೈಶ್ವಾನರಾಧಿಕರಣ ೧೫೧

ವೈಶ್ವಾನರಾಧಿಕರಣದ ತಾತ್ಪರ್ಯ ೧೫೨

ಮೂರನೆಯ ಪಾದ ೧೫೩-೧೬೪

ದ್ಯುಭ್ವಾದ್ಯಧಿಕರಣ ೧೫೩

ಆತ್ಮ ಶಬ್ದ ವಾಚ್ಯನು ವಿಷ್ಣುವೇ ೧೫೪

ಭೂಮಾಧಿಕರಣ ೧೫೪

ಭೂಮ ಶಬ್ದ ವಾಚ್ಯನು ವಿಷ್ಣುವೇ ೧೫೫

ಅಕ್ಷರಾಧಿಕರಣ ೧೫೫

ಅಣುತ್ವ ಮಹತ್ವಾದಿ ಧರ್ಮಗಳಿಗೆ ಬ್ರಹ್ಮನಲ್ಲಿ ವಿರೋಧವಿಲ್ಲ ೧೫೬

ಬ್ರಹ್ಮನಿಗೆ ಅಸ್ವಭಾವತ್ವವಿಲ್ಲ ೧೫೬

ಅಧಿಕರಣಗಳಲ್ಲಿನ ಪೂರ್ವಪಕ್ಷನ್ಯಾಯಗಳು ೧೫೮
ಸೂತ್ರಗಳಲ್ಲಿ ಸೂಚಿತವಾಗಿರುವ ಸಿದ್ಧಾಂತನ್ಯಾಯಗಳು ೧೫೯
ದೇವತಾಧಿಕರಣ ೧೬೧
ದೇವತೆಗಳಿಗೂ ವೇದವಿದ್ಯಾಧಿಕಾರವುಂಟು ೧೬೨
ಜೈಮಿನಿ ಮತ್ತು ಬಾದರಾಯಣರ ಮತಗಳಿಗೆ ವಿರೋಧವಿಲ್ಲ ೧೬೨
ಪರಮೇಶ್ವರನಿಂದ ಇತರರು ಸರ್ವಜ್ಞರಲ್ಲ ೧೬೩
ನಾಲ್ಕನೆಯ ಪಾದ ೧೬೫-೨೨೮
ಆನುಮಾನಿಕಾಧಿಕರಣ ೧೬೫
ದ್ಯುಭ್ವಾದ್ಯ ಇತ್ಯಾದಿ ಶಬ್ದಗಳ ಸಮನ್ವಯ ೧೬೫
ಜ್ಯೋತಿರುಪಕ್ರಮಾಧಿಕರಣ ೧೬೯
ಕ್ರಿಯಾವಾಚಕ ಶಬ್ದಗಳ ಸಮನ್ವಯ ೧೭೦
ಪ್ರಕೃತ್ಯಧಿಕರಣ ೧೭೪
ಅಧಿಕರಣಗಳ ಉಪಾಧಿಗಳು ೧೭೫
ಪೂರ್ವಪಕ್ಷಯುಕ್ತಿಗಳು ೧೭೫
ಸಿದ್ಧಾಂತಯುಕ್ತಿಗಳು ೧೭೬
ಶಬ್ದಪ್ರವೃತ್ತಿಯ ಪ್ರಭೇದಗಳು ೧೭೭
ವಿಷ್ಣುವಿಗೆ ಸರ್ವಶಬ್ದ ವಾಚ್ಯತ್ವ ೧೮೨
ಶ್ರುತಿಯಿಂದ ಸರ್ವಶಬ್ದ ವಾಚ್ಯತ್ವ ಸಮರ್ಥನೆ ೧೮೪
ಪ್ರಧಾನಕ್ಕೆ ಶಬ್ದವಾಚ್ಯತ್ವ ನಿಷೇಧಿಸಲ್ಪಟ್ಟಿಲ್ಲ ೧೮೫
ಅಜಾದಿ ಶಬ್ದಗಳು ಪರಮಮುಖ್ಯವೃತ್ತಿಯಿಂದ ಬ್ರಹ್ಮಪರ ೧೮೭
ನ ಸಂಖ್ಯಾಧಿಕರಣದ ಅಪವ್ಯಾಖ್ಯಾನ ನಿರಾಸೆ ೧೮೯
ಬ್ರಹ್ಮವು ಉಪಾದಾನಕಾರಣವಲ್ಲ ೧೯೧
ವಿಕಾರದ ಪ್ರಭೇದಗಳು ೧೯೨
ಬ್ರಹ್ಮನಿಗೆ ಅಪಾದಾನಕಾರಣತ್ವ ಸಮರ್ಥನೆ ೧೯೫
'ಸಚ್ಚ ತ್ಯಚ್ಚ' ಇತ್ಯಾದಿ ಶ್ರುತ್ಯರ್ಥ ೨೦೨
ಪರಿಣಾಮವಾದದ ನಿರಾಸೆಯ ಉಪಸಂಹಾರ ೨೦೪

| | |
|---|---|
| ವಿವರ್ತವಾದದ ನಿರಾಸೆ | ೨೦೫ |
| ಜೀವಬ್ರಹ್ಮ ಭೇದ ಭ್ರಾಂತಿಕಲ್ಪಿತವಲ್ಲ | ೨೦೭ |
| ಸ್ವಪ್ನ ಮಿಥ್ಯೆಯಲ್ಲ | ೨೦೮ |
| ವಿಶ್ವಸತ್ಯತ್ವ ಪ್ರತಿಪಾದಕ ಶ್ರುತಿಗಳು | ೨೧೨ |
| ಸಾಕ್ಷಿಪ್ರತ್ಯಕ್ಷವು ಅಬಾಧಿತ | ೨೧೩ |
| ಏಕಜೀವವಾದ ನಿರಾಸೆ | ೨೧೭ |
| 'ಪ್ರಪಂಚೋ ಯದಿ ವಿದ್ಯೇತ' ಇತ್ಯಾದಿ ಶ್ರುತ್ಯರ್ಥ | ೨೧೮ |
| ಪಂಚಭೇದ ನಿರೂಪಣೆ | ೨೧೯ |
| ವಾಚಾರಂಭಣಂ ಶ್ರುತ್ಯರ್ಥ | ೨೨೨ |

* * *

ಶ್ರೀಮದ್ಧನುಮದ್ಭೀಮಮಧ್ವಾಂತರ್ಗತ ಶ್ರೀರಾಮಕೃಷ್ಣವೇದವ್ಯಾಸಾತ್ಮಕ ಶ್ರೀಲಕ್ಷ್ಮೀಹಯಗ್ರೀವಾಯ ನಮಃ

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತಮ್

# ಶ್ರೀಮದನುವ್ಯಾಖ್ಯಾನಮ್

## ಮೊದಲನೆಯ ಅಧ್ಯಾಯ (ಸಮನ್ವಯಾಧ್ಯಾಯ)

### ಮಂಗಲಾಚರಣೆ

ನಿತ್ಯಾಪರೋಕ್ಷಿಗಳಾದ ಶ್ರೀಮದಾಚಾರ್ಯರಿಗೆ ಯಾವುದೇ ವಿಘ್ನಗಳು ಇಲ್ಲವಾದರೂ, ಯಾವುದೇ ಗ್ರಂಥಾರಂಭದಲ್ಲಿ ನಿರ್ವಿಘ್ನ ಪರಿಸಮಾಪ್ತಿಗಾಗಿ ಮಂಗಳವನ್ನು ಆಚರಿಸಬೇಕೆಂದು ಶಿಷ್ಯರಿಗೆ ತಿಳಿಸುವುದಕ್ಕಾಗಿ ಅನುವ್ಯಾಖ್ಯಾನದ ಪ್ರಾರಂಭದಲ್ಲಿ 'ನಾರಾಯಣಂ ನಿಖಿಲಪೂರ್ಣಗುಣೈಕದೇಹಂ' ಇತ್ಯಾದಿ ಶ್ರೀಮನ್ನಾರಾಯಣನ ಸ್ತೋತ್ರರೂಪವಾದ ಮಂಗಲಾಚರಣೆಯನ್ನು ಮಾಡಿದ್ದಾರೆ.

**ನಾರಾಯಣಂ ನಿಖಿಲಪೂರ್ಣಗುಣೈಕದೇಹಂ**
**ನಿರ್ದೋಷಮಾಪ್ಯತಮಮಪ್ಯಖಿಲೈಃ ಸುವಾಕ್ಯೈಃ ।**
**ಅಸ್ಯೋದ್ಭವಾದಿದಮಶೇಷವಿಶೇಷತೋಽಪಿ**
**ವಂದ್ಯಂ ಸದಾ ಪ್ರಿಯತಮಂ ಮಮ ಸನ್ನಮಾಮಿ ॥೧॥**

ನಾರಾಯಣನು ಸಮಸ್ತವೂ ಪೂರ್ಣವೂ ಆದ ಗುಣಗಳೇ ದೇಹವನ್ನಾಗಿ ಹೊಂದಿರುವವನು. (ನಮ್ಮಂತೆ ಪ್ರಾಕೃತವಾದ ಜಡದೇಹ ಅವನಿಗಿಲ್ಲ.) ಆವನು ಪಾರತಂತ್ರ್ಯಾದಿ ದೋಷರಹಿತನು. ಶೋಭನವಾದ ಸಮಸ್ತ ವೇದವಾಕ್ಯಗಳಿಂದ ಮುಖ್ಯವಾಗಿ ಪ್ರತಿಪಾದ್ಯನು. ಎಲ್ಲರಿಂದಲೂ ಹೊಂದಲ್ಪಡತಕ್ಕವನು. ಪ್ರತ್ಯಕ್ಷಾದಿ ಪ್ರಮಾಣಗಳಿಂದ ಸಿದ್ಧವಾಗಿರುವ ಸತ್ಯವಾದ ಈ ಜಡಾಜಡಾತ್ಮಕವಾದ ಸಮಸ್ತ ಪ್ರಪಂಚಕ್ಕೆ ಪ್ರಾಮಾಣಿಕವಾದ ಎಲ್ಲ ರೀತಿಯ ಭೇದ ಮತ್ತು ತಾರತಮ್ಯಗಳಿಗೆ ಅನುಸಾರವಾಗಿ ಯೋಗ್ಯತಾನುಸಾರ ಸೃಷ್ಟಿ, ಸ್ಥಿತಿ, ಸಂಹಾರ, ನಿಯಮನ, ಜ್ಞಾನ, ಅಜ್ಞಾನ, ಬಂಧ ಮತ್ತು ಮೋಕ್ಷಗಳನ್ನು ಹೊಂದಿಸುವವನು. ರಮಾ ಬ್ರಹ್ಮಾದಿ ಎಲ್ಲರಿಂದಲೂ ವಿಶೇಷವಾಗಿ

ವಂದ್ಯನು. ನನಗೆ ಯಾವಾಗಲೂ ಅತ್ಯಂತ ಪ್ರೀತಿಪಾತ್ರನು. ಇಂತಹ ನಾರಾಯಣನಿಗೆ ಅತಿಶಯವಾದ ಭಕ್ತ್ಯಾದಿ ವಿಶೇಷಗಳಿಂದ ನಮಸ್ಕರಿಸುತ್ತೇನೆ.

**ವಿವರಣೆ:** ಸರ್ವೋತ್ತಮನಾದ ನಾರಾಯಣನಿಗೆ ಅತಿಶಯವಾದ ಭಕ್ತ್ಯಾದಿಗಳಿಂದ ನಮಸ್ಕಾರ ಮಾಡುವುದರಿಂದ ಎಲ್ಲ ಅಭೀಷ್ಟಗಳು ಸಿದ್ಧಿಸುವುದರಲ್ಲಿ ಸ್ವಲ್ಪವೂ ಸಂಶಯವಿಲ್ಲ. ಸರ್ವೋತ್ತಮನಾಗಿರುವುದರಿಂದ, ಸಕಲಶಾಸ್ತ್ರಗಳಿಂದ ಪ್ರತಿಪಾದ್ಯನಾಗಿರುವುದರಿಂದ, ಮೋಕ್ಷಾದಿ ಸಕಲ ಪುರುಷಾರ್ಥಗಳನ್ನು ನೀಡುವುದರಿಂದ ಹಾಗೂ ಅತ್ಯಂತ ಪ್ರೀತಿಗೆ ಪಾತ್ರನಾದ್ದರಿಂದ ನಾರಾಯಣನು ಎಲ್ಲರಿಂದಲೂ ನಮಸ್ಕರಿಸಿಕೊಳ್ಳುವುದಕ್ಕೆ ಅತ್ಯಂತ ಯೋಗ್ಯನಾಗಿರುವನು.

ಅನುಬಂಧ ಚತುಷ್ಟಯವನ್ನು ಹೊಂದಿರುವ ಗ್ರಂಥವು ಅಧ್ಯಯನಕ್ಕೆ ಯೋಗ್ಯ. ಆದುದರಿಂದ ಶ್ರೀಮದಾಚಾರ್ಯರು ಈ ಮಂಗಲಶ್ಲೋಕದಲ್ಲಿ ತಮ್ಮ ಇಷ್ಟದೇವತೆಯಾದ ನಾರಾಯಣನನ್ನು ನಮಸ್ಕರಿಸುವುದರೊಂದಿಗೆ ಅಧಿಕಾರ, ವಿಷಯ, ಪ್ರಯೋಜನ ಮತ್ತು ಇವುಗಳ ಸಂಬಂಧ ಎಂಬ ಅನುಬಂಧ ಚತುಷ್ಟಯವನ್ನೂ ಸೂಚಿಸಿದ್ದಾರೆ. 'ಸನ್ನಮಾಮಿ' ಎನ್ನುವುದರಿಂದ ಅಧಿಕಾರಿಯನ್ನೂ, 'ನಾರಾಯಣಂ' ಎನ್ನುವುದರಿಂದ ವಿಷಯವನ್ನೂ, 'ಆಪ್ಯತಮಂ' ಎನ್ನುವುದರಿಂದ ಪ್ರಯೋಜನವನ್ನೂ, 'ಉದ್ಭವಾದಿದಂ' ಎನ್ನುವುದರಿಂದ ವಿಷಯ ಪ್ರಯೋಜನಗಳಿಗೆ ಕೊಡುವ ಮತ್ತು ಪಡೆದುಕೊಳ್ಳುವ ದಾತೃ-ದೇಯರೂಪವಾದ ಸಂಬಂಧವನ್ನೂ ಸೂಚಿಸಿದ್ದಾರೆ.

ಬ್ರಹ್ಮಸೂತ್ರಗಳಿಗೆ ವ್ಯಾಖ್ಯಾನರೂಪವಾದ ಈ ಗ್ರಂಥದಲ್ಲಿ ನಾಲ್ಕು ಅಧ್ಯಾಯಗಳಲ್ಲಿ ಪ್ರತಿಪಾದ್ಯವಾಗಿರುವ ವಿಷಯವನ್ನು ಮಂಗಲಶ್ಲೋಕದಲ್ಲಿಯೇ ಸಂಗ್ರಹವಾಗಿ ನಿರೂಪಿಸಿದ್ದಾರೆ. 'ನಿಖಿಲಪೂರ್ಣಗುಣೈಕದೇಹಂ' ಎನ್ನುವುದರಿಂದ ಮೊದಲನೆಯ ಸಮನ್ವಯಾಧ್ಯಾಯದ ಅರ್ಥವನ್ನೂ, 'ನಿರ್ದೋಷಂ' ಎನ್ನುವುದರಿಂದ ಎರಡನೆಯ ಅವಿರೋಧಾಧ್ಯಾಯದ ಅರ್ಥವನ್ನೂ, 'ಆಪ್ಯತಮಂ ಅಪಖಿಲೈಃ ಸುವಾಕ್ಯೈಃ' ಎನ್ನುವುದರಿಂದ ಮೂರನೆಯ ಸಾಧನಾಧ್ಯಾಯದ ಅರ್ಥವನ್ನೂ, 'ಅಸ್ಯೋದ್ಭವಾದಿದಂ' ಎನ್ನುವುದರಿಂದ ನಾಲ್ಕನೆಯ ಫಲಾಧ್ಯಾಯದ ಅರ್ಥವನ್ನೂ ಸಂಗ್ರಹವಾಗಿ ತಿಳಿಸಿದ್ದಾರೆ.

ನಾರಾಯಣ ಎಂಬ ಒಂದು ಶಬ್ದದಿಂದಲೇ ಈ ಮಂಗಲ ಶ್ಲೋಕದಲ್ಲಿ ಹೇಳಿರುವ ನಾರಾಯಣನ ಎಲ್ಲ ಮಹಿಮೆಗಳೂ ಪ್ರತಿಪಾದಿತವಾಗಿವೆ. 'ಅರ' ಎಂದರೆ ದೋಷವೆಂದು ಅರ್ಥವಿರುವುದರಿಂದ 'ನಾರ' ಎಂದರೆ ನಿರ್ದೋಷನೆಂದೂ, ನಾರ ಎಂದರೆ ಗುಣವೆಂದು ಅರ್ಥವಿರುವುದರಿಂದ ನಾರಾಯಣ ಎಂದರೆ ಸಕಲ ಗುಣಗಳಿಗೆ ಆಶ್ರಯನು ಅಥವಾ ಗುಣಪರಿಪೂರ್ಣನೆಂದೂ ವ್ಯಾಖ್ಯಾನ ಮಾಡಿದಂತಾಯಿತು. ನಾರ ಶಬ್ದಕ್ಕೆ ನಿರ್ದೋಷವಾದ ವಾಕ್ಯಗಳಿಂದ ಕೂಡಿದ ವೇದಗಳು ಎಂದು ಅರ್ಥಮಾಡಬಹುದು. ಆದ್ದರಿಂದ ನಾರಾಯಣನು ಸಕಲ ವೇದಪ್ರತಿಪಾದ್ಯನು ಎಂಬುದೂ ನಾರಾಯಣ ಶಬ್ದದಿಂದ ವೇದ್ಯವಾಗುತ್ತದೆ. 'ನಾರ' ಎಂದರೆ ನರರಿಗೆ ಸಂಬಂಧಿಸಿದ ಸೃಷ್ಟ್ಯಾದಿಗಳು. ಇವುಗಳಿಗೆ ಕಾರಣನಾದ್ದರಿಂದ ನಾರಾಯಣ. 'ನರ' ಎಂದರೆ ಮನುಷ್ಯಸಮುದಾಯ ಅಂದರೆ ಜೀವರು. ಎಲ್ಲ ಜೀವರುಗಳಿಂದ ವಂದ್ಯನಾದ್ದರಿಂದಲೂ ನಾರಾಯಣ. ನಾರ ಶಬ್ದವಾಚ್ಯರಾದ ಜೀವೋತ್ತಮರಾದ ವಾಯುದೇವರಿಗೆ ಪ್ರಿಯತಮನಾದ್ದರಿಂದಲೂ ನಾರಾಯಣ. ಹೀಗೆ ಮಂಗಲಶ್ಲೋಕದಲ್ಲಿ ಉಕ್ತವಾಗಿರುವ ನಾರಾಯಣನಿಗೆ ಸಂಬಂಧಿಸಿದ ಎಲ್ಲ ವಿಶೇಷಣಗಳೂ ನಾರಾಯಣ ಶಬ್ದವೊಂದರಲ್ಲೇ ಸೇರಿಕೊಂಡಿವೆ.

ದೈಹಿಕವಾಗಿ ಮತ್ತು ಮಾನಸಿಕವಾಗಿ ಪರಮಾತ್ಮನಲ್ಲಿ ಭಕ್ತಿಪೂರ್ವಕವಾಗಿ ಬಾಗುವಿಕೆಯೇ ವಂದನೆ. ಮನನ ಅಥವಾ ಜಿಜ್ಞಾಸೆಯೂ ವಂದನೆಯೇ ಎನಿಸುವುದು. ಈ ಅರ್ಥದಲ್ಲಿ 'ಸದಾ ವಂದ್ಯಂ' ಎನ್ನುವುದರಿಂದ ಬ್ರಹ್ಮಜಿಜ್ಞಾಸೆಯನ್ನು ಸದಾ ಮಾಡಬೇಕು ಎಂಬ ಮೊದಲನೆಯ ಸೂತ್ರದ ಅರ್ಥವು ಸೂಚಿತವಾಗಿದೆ. 'ನಿಖಿಲಪೂರ್ಣಗುಣೈಕದೇಹಂ' ಮತ್ತು 'ನಿರ್ದೋಷಂ' ಎನ್ನುವುದರಿಂದ ಬ್ರಹ್ಮ ಶಬ್ದವು ವ್ಯಾಖ್ಯಾತವಾಯಿತು. 'ಅಸ್ಯೋದ್ಭವಾದಿದಂ' ಎನ್ನುವುದರಿಂದ ಎರಡನೆಯ ಜನ್ಮಾದ್ಯಧಿಕರಣವು ವ್ಯಾಖ್ಯಾತವಾಯಿತು. ಹಾಗೆಯೇ 'ಆಪ್ತತಮಮಪ್ಯಖಿಲೈಃ ಸುವಾಕ್ಯೈಃ' ಎನ್ನುವುದು ಮೂರನೇ ಶಾಸ್ತ್ರಯೋನಿತ್ವಾಧಿಕರಣದ ವ್ಯಾಖ್ಯಾನ. ಇದರ ವಿಸ್ತಾರ ಮತ್ತು ವ್ಯಾಖ್ಯಾನವೇ ಉಳಿದ ಎಲ್ಲ ಸೂತ್ರಗಳು. ಹೀಗೆ ಮೊದಲನೆಯ ಮಂಗಲಶ್ಲೋಕದಿಂದಲೇ ಶ್ರೀಮದಾಚಾರ್ಯರು ಇಡೀ

ಬ್ರಹ್ಮಸೂತ್ರಗಳ ಸಂಕ್ಷಿಪ್ತವಾದ ಸಾರವನ್ನು ನೀಡಿದ್ದಾರೆ.

ಇಷ್ಟದೇವತೆಗೆ ನಮಸ್ಕರಿಸುವುದರೊಂದಿಗೆ ಶಾಸ್ತ್ರೋಪದೇಶಕ ಗುರುವಿಗೆ ನಮಸ್ಕರಿಸಬೇಕಾದ್ದು ಅತ್ಯವಶ್ಯಕ ಎಂಬುದನ್ನು ಶಿಷ್ಯರಿಗೆ ಬೋಧಿಸುವುದಕ್ಕಾಗಿ ಶ್ರೀಮದಾಚಾರ್ಯರು ಎರಡನೆಯ ಶ್ಲೋಕದಲ್ಲಿ ತಮಗೆ ದೇವತೆಯೂ ಗುರುವೂ ಆಗಿರುವ ನಾರಾಯಣನ ಅವತಾರವೇ ಆದ ಹಾಗೂ ಪ್ರಕೃತ ವ್ಯಾಖ್ಯೇಯ ಗ್ರಂಥವಾದ ಬ್ರಹ್ಮಮೀಮಾಂಸಾ ಶಾಸ್ತ್ರವನ್ನು ರಚಿಸಿರುವ ಭಗವಾನ್ ಶ್ರೀವೇದವ್ಯಾಸರನ್ನು ನಮಸ್ಕರಿಸುತ್ತ ತಾವು ಬ್ರಹ್ಮಮೀಮಾಂಸಾ ಗ್ರಂಥಕ್ಕೆ ವ್ಯಾಖ್ಯಾನ ಮಾಡುವುದಾಗಿ ಪ್ರತಿಜ್ಞೆ ಮಾಡುತ್ತಾರೆ.

**ತಮೇವ ಶಾಸ್ತ್ರಪ್ರಭವಂ ಪ್ರಣಮ್ಯ**
**ಜಗದ್ಗುರೂಣಾಂ ಗುರುಮಂಜಸೈವ ।**
**ವಿಶೇಷತೋ ಮೇ ಪರಮಾಖ್ಯವಿದ್ಯಾ-**
**ವ್ಯಾಖ್ಯಾಂ ಕರೋಮ್ಯಸ್ಯಪಿ ಚಾಹಮೇವ ॥೨॥**

ಬ್ರಹ್ಮಮೀಮಾಂಸಾ ಶಾಸ್ತ್ರವನ್ನು ನಿರ್ಮಿಸಿದ ಹಾಗೂ ವೇದಾದಿ ಶಾಸ್ತ್ರಗಳನ್ನು ಜಗತ್ತಿಗೆ ಮೊಟ್ಟಮೊದಲಿಗೆ ಪ್ರಕಾಶಗೊಳಿಸಿದ ಭಗವಾನ್ ವೇದವ್ಯಾಸರು ಜಗದ್ಗುರುಗಳಾದ ಬ್ರಹ್ಮಾದಿಗಳಿಗೆ ಮುಖ್ಯವಾಗಿ ಶಾಸ್ತ್ರೋಪದೇಶಕ ಗುರುಗಳು. ವಿಶೇಷವಾಗಿ ನನಗೂ ಸಾಕ್ಷಾತ್ತಾಗಿ ಗುರುಗಳಾದ ಹಾಗೂ ಈ ಪೂರ್ವದಲ್ಲಿ ನಮಸ್ಕರಿಸಲ್ಪಟ್ಟ ಶ್ರೀನಾರಾಯಣನ ಅವತಾರರಾದ ವೇದವ್ಯಾಸರನ್ನು ಪುನಃ ಭಕ್ತ್ಯಾದಿಪೂರ್ವಕವಾಗಿ ನಮಸ್ಕರಿಸಿ, ನಾನು ಪರವಿದ್ಯೆಯಾದ ಬ್ರಹ್ಮಮೀಮಾಂಸಾ ಶಾಸ್ತ್ರಕ್ಕೆ ವ್ಯಾಖ್ಯಾನವನ್ನು ಮಾಡುತ್ತೇನೆ.

**ವಿವರಣೆ:**

ಮೊದಲನೆಯ ಶ್ಲೋಕದಲ್ಲಿ ಶಾಸ್ತ್ರಪ್ರತಿಪಾದ್ಯನೆಂಬ ಅಭಿಪ್ರಾಯದಿಂದ ನಾರಾಯಣನಿಗೆ ನಮಸ್ಕಾರ. ಎರಡನೆಯ ಶ್ಲೋಕದಲ್ಲಿ ಅದೇ ನಾರಾಯಣನಿಗೆ ಶಾಸ್ತ್ರಪ್ರವಕ್ತೃತ್ವ ರೂಪದಿಂದ ನಮಸ್ಕಾರ ಮಾಡಿದ್ದು ಆತನ ಅತಿಶಯ ಪ್ರೀತಿಗಾಗಿ. ಆದ್ದರಿಂದ ಒಬ್ಬನೇ ವ್ಯಕ್ತಿಗೆ ಎರಡುಸಲ ನಮಸ್ಕಾರ ಮಾಡಿರುವುದು ಉಚಿತವೇ ಆಗುತ್ತದೆ. 'ಶಾಸ್ತ್ರಪ್ರಭವಂ' ಎನ್ನುವುದರಿಂದ

ಶ್ರೀನಾರಾಯಣನಿಗೆ ಗುರುತ್ವವನ್ನು ಸಮರ್ಥಿಸಿದ್ದಾರೆ. ಸಮಸ್ತ ಪ್ರಪಂಚವನ್ನು ಸೃಷ್ಟಿಸಿ ಪೋಷಿಸುವುದರಿಂದಲೂ, ವಿಘ್ನಗಳನ್ನು ನಿವಾರಿಸುವುದರಿಂದಲೂ, ಮನಸ್ಸನ್ನು ಪ್ರೇರೇಪಿಸುವುದರಿಂದಲೂ, ಯೋಗ್ಯ ಗುರುಗಳನ್ನು ಹೊಂದಿಸಿಕೊಟ್ಟು ಮೋಕ್ಷಕಾರಕ ಜ್ಞಾನವನ್ನು ಅನುಗ್ರಹಿಸುವುದರಿಂದಲೂ ಶ್ರೀನಾರಾಯಣನೇ ಎಲ್ಲರಿಗೂ ಮುಖ್ಯಗುರು ಎಂಬುದನ್ನು 'ಅಂಜಸ್ಯೈವ ಜಗದ್ಗುರೂಣಾಂ ಗುರುಂ' ಎಂದು ಸೂಚಿಸಿದ್ದಾರೆ. ತನಗೆ ವೇದವ್ಯಾಸರೂಪಿಯಾದ ನಾರಾಯಣನೇ ಸಾಕ್ಷಾತ್ತಾಗಿ ಗುರುವು ಎಂಬುದನ್ನು 'ವಿಶೇಷತೋ ಮೇ' ಎಂಬುದರಿಂದ ಸೂಚಿಸಿದ್ದಾರೆ. ಪರಮ ಶ್ರೇಷ್ಠವಾದ ವಿದ್ಯೆಯಾದ ಬ್ರಹ್ಮಮೀಮಾಂಸಾ ಶಾಸ್ತ್ರಕ್ಕೆ ವ್ಯಾಖ್ಯಾನ ಮಾಡಲು ಇತರರಿಗೆ ಶಕ್ಯವಿಲ್ಲವೆಂಬುದನ್ನು 'ಅಹಮೇವ' ಎಂಬುದರಿಂದ ಸೂಚಿಸಿದ್ದಾರೆ. ಪರವಿದ್ಯೆ ಮತ್ತು ಅಪರವಿದ್ಯೆ ಎಂಬುದಾಗಿ ಎರಡು ರೀತಿಯ ವಿದ್ಯೆವುಂಟು. ಯಾವ ವಿದ್ಯೆಯಿಂದ ಪರಬ್ರಹ್ಮನು ತಿಳಿಯಲ್ಪಡುತ್ತಾನೋ ಅದು ಪರವಿದ್ಯೆ. ಈ ದೃಷ್ಟಿಯಿಂದ ಬ್ರಹ್ಮಮೀಮಾಂಸಾ ಶಾಸ್ತ್ರವು ಪರವಿದ್ಯೆಯೆನಿಸುತ್ತದೆ. ಋಗ್ವೇದಾದಿಗಳು ಅಪರವಿದ್ಯೆ ಎನಿಸುತ್ತವೆ. ಯಥಾರ್ಥಜ್ಞಾನ ಮತ್ತು ಅದಕ್ಕೆ ಸಾಧನವಾದದ್ದು ವಿದ್ಯೆ. ಪರಮ ಪ್ರಮಾಣವಾದ ವಿದ್ಯೆ ಪರಮವಿದ್ಯೆ. ಬ್ರಹ್ಮಮೀಮಾಂಸಾ ಶಾಸ್ತ್ರವು ಪರಮ ಪ್ರಾಮಾಣ್ಯವನ್ನು ಹೊಂದಿದೆ ಎಂಬುದನ್ನು ಶ್ರೀಮದಾಚಾರ್ಯರು ಇಲ್ಲಿ 'ಪರಮಾಖ್ಯವಿದ್ಯಾಂ' ಎಂಬುದರಿಂದ ಸಮರ್ಥಿಸಿದ್ದಾರೆ. ಈಗಾಗಲೇ ಈ ಗ್ರಂಥಕ್ಕೆ ಭಾಷ್ಯರೂಪವಾದ ವ್ಯಾಖ್ಯಾನವನ್ನು ರಚಿಸಿದ್ದರೂ, ವಿಶೇಷ ಪ್ರಯೋಜನವಿರುವುದರಿಂದ ಮತ್ತೆ ಈ ವ್ಯಾಖ್ಯಾನವನ್ನು ಮಾಡಲು ಹೊರಟಿದ್ದೇವೆ ಎಂಬುದನ್ನು 'ಅನ್ವಪಿ ಚ' ಎಂದು ಸೂಚಿಸಿದ್ದಾರೆ.

ಯಾವುದೇ ಗ್ರಂಥದ ವ್ಯಾಖ್ಯಾನವನ್ನು ಆರಂಭಿಸುವುದರ ಮೊದಲು ಅದರ ಪ್ರಾಮಾಣ್ಯನ್ನು ಶ್ರುತಪಡಿಸಬೇಕು. ಆಗ ಮಾತ್ರ ವ್ಯಾಖ್ಯಾನಕ್ಕೆ ಮಹತ್ವ ಬರುತ್ತದೆ. ಆದುದರಿಂದ ಶ್ರೀಮದಾಚಾರ್ಯರು ಮಂಗಲಾಚರಣೆಯ ನಂತರ ಮುಂದಿನ ಶ್ಲೋಕಗಳಲ್ಲಿ ಬ್ರಹ್ಮಸೂತ್ರಗಳಿಗೆ ಪ್ರಾಮಾಣ್ಯವನ್ನು ಸಮರ್ಥಿಸಿ ಗ್ರಂಥದ ಮಹತ್ವವನ್ನು ವಿವರಿಸುತ್ತಾರೆ.

## ಬ್ರಹ್ಮಸೂತ್ರಗಳು ಪರವಿದ್ಯೆ ಹಾಗೂ ಪರಮಪ್ರಮಾಣ

**ಪ್ರಾದುರ್ಭೂತೋ ಹರಿರ್ವ್ಯಾಸೋ ವಿರಿಂಚಭವಪೂರ್ವಕೈಃ ।**
**ಅರ್ಥಿತಃ ಪರವಿದ್ಯಾಖ್ಯಂ ಚಕ್ರೇ ಶಾಸ್ತ್ರಮನುತ್ತಮಮ್ ॥೩॥**
**ಗುರುರ್ಗುರೂಣಾಂ ಪ್ರಭವಃ ಶಾಸ್ತ್ರಾಣಾಂ ಬಾದರಾಯಣಃ ।**
**ಯತಸ್ತದುದಿತಂ ಮಾನಮಜಾದಿಭ್ಯಸ್ತದರ್ಥತಃ ॥೪॥**
**ವಕ್ತೃಶ್ರೋತೃಪ್ರಸಕ್ತೀನಾಂ ಯದಾಪ್ತಿರನುಕೂಲತಾ ।**
**ಆಪ್ತವಾಕ್ಯತಯಾ ತೇನ ಶ್ರುತಿಮೂಲತಯಾ ತಥಾ ॥೫॥**
**ಯುಕ್ತಿಮೂಲತಯಾ ಚೈವ ಪ್ರಾಮಾಣ್ಯಂ ತ್ರಿವಿಧಂ ಮಹತ್।**
**ದೃಶ್ಯತೇ ಬ್ರಹ್ಮಸೂತ್ರಾಣಾಮೇಕಧಾಽನ್ಯತ್ರ ಸರ್ವಶಃ ॥೬॥**
**ಅತೋ ನೈತಾದೃಶಂ ಕಿಂಚಿತ್ಪ್ರಮಾಣತಮಮಿಷ್ಯತೇ ।**

ಬ್ರಹ್ಮ ರುದ್ರ ಮೊದಲಾದ ದೇವತೆಗಳಿಂದ ಪ್ರಾರ್ಥಿಸಲ್ಪಟ್ಟವನಾಗಿ ಶ್ರೀಹರಿಯು ವೇದವ್ಯಾಸರೂಪದಿಂದ ಅವತರಿಸಿ, ಪರವಿದ್ಯೆ ಎಂಬುದಾಗಿ ಕರೆಯಲ್ಪಡುವ ಸರ್ವೋತ್ತಮವಾದ ಬ್ರಹ್ಮಮೀಮಾಂಸಾಶಾಸ್ತ್ರವನ್ನು ರಚಿಸಿದನು.

ಶ್ರೀ ವೇದವ್ಯಾಸರು ಜಗತ್ತಿಗೆ ಶಾಸ್ತ್ರೋಪದೇಶಕರಾದ ಬ್ರಹ್ಮಾದಿಗಳಿಗೂ ಗುರುಗಳು. ಮಹಾಭಾರತಾದಿ ಶಾಸ್ತ್ರಗಳ ನಿರ್ಮಾತರು. ವೇದಾದಿ ಶಾಸ್ತ್ರಗಳಿಗೆ ಮುಖ್ಯವಾಗಿ ಪ್ರವರ್ತಕರು. ಉತ್ಕೃಷ್ಟ ಶ್ರೋತೃಗಳಾದ ಬ್ರಹ್ಮಾದಿಗಳಿಗೆ ಮೋಕ್ಷಾಖ್ಯ ಪ್ರಯೋಜನಕ್ಕಾಗಿ ಶ್ರೀವೇದವ್ಯಾಸರಿಂದ ಈ ಬ್ರಹ್ಮಮೀಮಾಂಸಾ ಶಾಸ್ತ್ರವು ಉಪದಿಷ್ಟವಾಗಿದೆ. ಈ ಕಾರಣಗಳಿಂದಾಗಿ ಬ್ರಹ್ಮಮೀಮಾಂಸಾ ಶಾಸ್ತ್ರಕ್ಕೆ ಪ್ರಾಮಾಣ್ಯವು ಸಿದ್ಧಿಸುತ್ತದೆ.

ಯಾವ ವಾಕ್ಯದಲ್ಲಿ ಉಪದೇಶ ಮಾಡುವವರು, ಅದನ್ನು ಕೇಳುವವರು, ಉಪದೇಶದ ಪ್ರಸಂಗ ಮತ್ತು ಉಪದೇಶಕರಿಗೆ ತಾವು ಹೇಳುವ ವಿಷಯದಲ್ಲಿ ಪರಿಣತಿ ಹಾಗೂ ಶಿಷ್ಯರ ವಿಷಯದಲ್ಲಿ ಆಪ್ತತ್ವ ( ಪ್ರಿಯತ್ವ ಮತ್ತು ತತ್ತ್ವ ತಿಳಿಸಬೇಕೆಂಬ ಕಳಕಳಿ) ಇವುಗಳು ಅನುಕೂಲವಾಗಿರುವುವೋ, ಅಂಥಹ ವಾಕ್ಯವು ಆಪ್ತವಾಕ್ಯ ಎನಿಸುತ್ತದೆ. ಆಪ್ತವಾಕ್ಯತ್ವ ಎನ್ನುವುದು ಪ್ರಾಮಾಣ್ಯಕ್ಕೆ ಒಂದು ಮುಖ್ಯ ಹೇತು (ಕಾರಣ). ಶ್ರುತಿ ಹಾಗೂ ಯುಕ್ತಿಮೂಲತ್ವಗಳು ಉಳಿದೆರಡು ಪ್ರಮುಖ ಹೇತುಗಳು. ಆಪ್ತವಾಕ್ಯತ್ವ, ಶ್ರುತಿಮೂಲತ್ವ ಮತ್ತು

ಯುಕ್ತಿಮೂಲತ್ವ ಎಂಬ ಮೂರು ಬಗೆಯ ಪ್ರಾಮಾಣ್ಯಹೇತುಗಳೂ ಈ ಬ್ರಹ್ಮಸೂತ್ರಗಳಿಗೆ ಮಾತ್ರ ಕಂಡುಬರುತ್ತವೆ. ಬೇರೆ ಎಲ್ಲ ಕಡೆಗಳಲ್ಲಿ ಕೇವಲ ಒಂದು ಬಗೆಯ ಪ್ರಾಮಾಣ್ಯ ಕಂಡು ಬರುತ್ತದೆ. ಈ ರೀತಿಯ ಪರಮಪ್ರಾಮಾಣ್ಯವನ್ನು ಹೊಂದಿರುವ ಇಂಥಹ ಒಂದು ಶಾಸ್ತ್ರಗ್ರಂಥವು ಬೇರೆ ಯಾವುದೂ ಇಲ್ಲದಿರುವುದರಿಂದ ಬ್ರಹ್ಮಸೂತ್ರಗಳು ಸರ್ವೋತ್ತಮವಾದ ಶಾಸ್ತ್ರವೆನಿಸುತ್ತವೆ.

**ವಿವರಣೆ:**

ಯಾವುದೇ ಗ್ರಂಥವು ಪ್ರಮಾಣ ಎನಿಸಬೇಕಾದರೆ ಉಪದೇಶಕನಾದ ಗ್ರಂಥಕರ್ತನಿಗೆ ತಾನು ಹೇಳುವ ವಿಷಯಗಳ ಬಗ್ಗೆ ಯಥಾರ್ಥವಾದ ತಿಳಿವಳಿಕೆ ಇರಬೇಕು. ಜೊತೆಗೆ ಯೋಗ್ಯರಿಗೆ ತತ್ವವನ್ನು ತಿಳಿಸಬೇಕೆಂಬ ಕಳಕಳಿ ಇರಬೇಕು. ಇಂದ್ರಿಯಪಾಟವವನ್ನೂ ಹೊಂದಿರಬೇಕು. ಕೇವಲ ಗುರುವು ತತ್ವಜ್ಞಾನಿಯಾಗಿದ್ದರೆ ಸಾಲದು, ಶಿಷ್ಯರಿಗೆ ಅದನ್ನು ತಿಳಿಯುವ ಅರ್ಹತೆಯೂ ಇರಬೇಕು. ಶಿಷ್ಯರು ಯೋಗ್ಯರಾಗಿದ್ದರೂ ಗುರುವಿಗೆ ಅವರಲ್ಲಿ ಪ್ರೀತಿಯಿಲ್ಲದಿದ್ದರೆ ಸರಿಯಾದ ತತ್ವವನ್ನು ಗುರುವು ಉಪದೇಶಿಸದೇ ಹೋಗಬಹುದು. ಹೇಳುವವರಲ್ಲೂ ಕೇಳುವವರಲ್ಲೂ ಮೇಲೆ ತಿಳಿಸಿದ ಆನುಕೂಲ್ಯಗಳ ಅವಶ್ಯಕತೆಯ ಜೊತೆಗೆ ಪ್ರಸಂಗವೂ ತಾತ್ವಿಕ ಚಿಂತನೆಗೆ ಪ್ರಶಸ್ತವಾಗಿರಬೇಕು. ಸರ್ವಜ್ಞನಾದ ಗುರು, ಯೋಗ್ಯನೂ ಪರಮ ಪ್ರಿಯನೂ ಆದ ಶಿಷ್ಯ, ತತ್ವಜ್ಞಾನ ಉಪದೇಶಕ್ಕೆ ಸೂಕ್ತವಾದ ಸಂದರ್ಭ ಇವುಗಳ ಸಮಾಗಮವನ್ನೇ ಶಾಸ್ತ್ರದಲ್ಲಿ ವಕ್ತೃ, ಶ್ರೋತೃ, ಪ್ರಸಕ್ತಿಗಳ ಅನುಕೂಲತೆಯೆಂದು ಕರೆಯಲಾಗಿದೆ. ಅಂಥಹ ಸಂದರ್ಭದಲ್ಲಿ ಯಾವುದೇ ಅಜ್ಞಾನ, ಭ್ರಾಂತಿ, ವಂಚನೆಗಳು ಕಂಡುಬರುವುದಿಲ್ಲ. ಇಂಥಹ ಸಂದರ್ಭದಲಿ ಉಪದಿಷ್ಟವಾದ ಗ್ರಂಥವನ್ನೇ ಆಪ್ತವಾಕ್ಯ ಎಂದು ಕರೆಯುತ್ತಾರೆ.

ಬ್ರಹ್ಮಮೀಮಾಂಸಾ ಶಾಸ್ತ್ರವನ್ನು ರಚಿಸಿದ ವೇದವ್ಯಾಸರು ಸರ್ವಜ್ಞನಾದ ಶ್ರೀಹರಿಯ ಅವತಾರವೇ ಆಗಿದ್ದಾರೆ. ವೇದಗಳನ್ನು ಬ್ರಹ್ಮಾದಿಗಳಿಗೆ ಉಪದೇಶಿಸಿದ ಹಾಗೂ ಮಹಾಭಾರತಾದಿ ಉದ್ಗ್ರಂಥಗಳನ್ನು ರಚಿಸಿದ ಶ್ರೀವೇದವ್ಯಾಸರಿಗೆ ಅಜ್ಞಾನ ಭ್ರಾಂತಿಗಳು ಇರಲು ಸಾಧ್ಯವೇ ಇಲ್ಲ.

ಬಹುಸಂಖ್ಯಾಕ ಶಾಸ್ತ್ರಗ್ರಂಥಗಳನ್ನು ರಚಿಸಿರುವ ಶ್ರೀವೇದವ್ಯಾಸರಿಗೆ ತತ್ವಜ್ಞಾನೋಪದೇಶದ ಕಳಕಳಿ ಅತ್ಯಂತ ಹೆಚ್ಚಿನದಾಗಿರುತ್ತದೆ ಎಂದು ಊಹಿಸಬಹುದು. ಇವರಲ್ಲಿ ಇಂದ್ರಿಯ ದೋಷಗಳನ್ನು ಎಣಿಸುವುದೂ ಮಹಾಪರಾಧವಾಗುತ್ತದೆ. ಬ್ರಹ್ಮಮೀಮಾಂಸಾ ಶಾಸ್ತ್ರದ ಉಪದೇಶವನ್ನು ಪಡೆದ ಬ್ರಹ್ಮಾದಿಗಳು ಜಗತ್ತಿಗೆ ಗುರುಗಳು ಎನಿಸುವುದರಿಂದ ಅವರ ಯೋಗ್ಯತೆಯ ಬಗ್ಗೆ ಸಂದೇಹ ಪಡಲು ಸಾಧ್ಯವೇ ಇಲ್ಲ. ಅವರು ಭಗವಂತನ ಪರಮ ಪ್ರೀತಿಗೆ ಪಾತ್ರರೂ ಆಗಿದ್ದಾರೆ. ಲೋಕದಲ್ಲಿ ತತ್ವಜ್ಞಾನದ ಲೋಪವುಂಟಾಗಿ ಸಜ್ಜನರೆಲ್ಲ ಪರಿತಪಿಸುತ್ತಿರುವುದನ್ನು ಕಂಡು ಪರಮಕಾರುಣ್ಯದಿಂದ ಲೋಕೋದ್ಧಾರಕ್ಕಾಗಿ ಬ್ರಹ್ಮಾದಿ ದೇವತೆಗಳು ಪ್ರಾರ್ಥಿಸಿದಾಗ, ಭಗವಂತನು ವೇದವ್ಯಾಸರೂಪದಿಂದ ಈ ಗ್ರಂಥವನ್ನು ಉಪದೇಶಿಸಿರುವುದರಿಂದ ಈ ಗ್ರಂಥಕ್ಕೆ ಪ್ರಸಂಗಾನುಕೂಲ್ಯವೂ ಸಿದ್ಧವಾಗುತ್ತದೆ. ವೇದಗಳಲ್ಲಿ ಹೇಳಿದ ವಿಷಯಗಳನ್ನು ಯುಕ್ತಿಗಳಿಂದ ಸಮರ್ಥಿಸುವ ಈ ಗ್ರಂಥಕ್ಕೆ ಆಗಮ ಮತ್ತು ಯುಕ್ತಿಗಳ ಸಮರ್ಥನೆಯೂ ಇದೆ. ಶ್ರೇಷ್ಠ ವಕ್ತಾರ, ಶ್ರೇಷ್ಠ ಶ್ರೋತಾರ, ಉತ್ತಮ ಸಂದರ್ಭಗಳಿಂದಾಗಿ ಆಪ್ತತ್ವ, ವೇದ ಮತ್ತು ಯುಕ್ತಿಗಳ ಸಂವಾದತ್ವ ಎಂಬ ಮೂರು ರೀತಿಯ ಪ್ರಾಮಾಣ್ಯಗಳನ್ನೂ ಹೊಂದಿರುವುದರಿಂದ ಬ್ರಹ್ಮಮೀಮಾಂಸಾ ಶಾಸ್ತ್ರವು ಪರಮಪ್ರಮಾಣವೆನಿಸಿದ್ದು ಸರ್ವೋತ್ಕೃಷ್ಟ ಶಾಸ್ತ್ರವಾಗಿದೆ.

ಈಗಾಗಲೇ ಸೂತ್ರಗಳಿಗೆ ಭಾಷ್ಯ ರೂಪದ ವ್ಯಾಖ್ಯಾನವನ್ನು ಮಾಡಿರುವುದರಿಂದ ಈಗ ಪುನಃ ಈ ವ್ಯಾಖ್ಯಾನದ ಅವಶ್ಯಕತೆಯಿದೆಯೇ, ಹೀಗೆ ಮಾಡುವುದು ಪುನರುಕ್ತಿಯೆನಿಸುವುದಿಲ್ಲವೇ ಎಂದರೆ-

**ಸ್ವಯಂಕೃತಾಪಿ ತದ್ವ್ಯಾಖ್ಯಾ ಕ್ರಿಯತೇ ಸ್ಪಷ್ಟತಾರ್ಥತಃ ॥೭॥**

ಈ ವ್ಯಾಖ್ಯಾನವನ್ನು ರಚಿಸುವ ಮುನ್ನವೇ ಬ್ರಹ್ಮಸೂತ್ರಗಳ ವ್ಯಾಖ್ಯಾನವು ಭಾಷ್ಯರೂಪದಲ್ಲಿ ನನ್ನಿಂದ ಮಾಡಲ್ಪಟ್ಟಿದ್ದರೂ, ಇನ್ನೂ ಹೆಚ್ಚು ಸ್ಪಷ್ಟಗೊಳಿಸುವ ಉದ್ದೇಶದಿಂದ ಈಗ ಪುನಃ ಈ ವ್ಯಾಖ್ಯಾನವು ರಚಿಸಲ್ಪಡುತ್ತದೆ.

**ವಿವರಣೆ:** ಭಾಷ್ಯದಲ್ಲಿ ಸ್ಪಷ್ಟವಾಗದಿರುವ ಅರ್ಥವನ್ನು ಸ್ಪಷ್ಟೀಕರಿಸಲು ಅನುವ್ಯಾಖ್ಯಾನವನ್ನು ಮಾಡಿದ್ದೇವೆ ಎಂಬುದಾಗಿ ಶ್ರೀಮದಾಚಾರ್ಯರು

ಹೇಳಿದ್ದಾರೆ. ಕೆಲವು ಕಡೆ ಹೇಳದೇ ಬಿಟ್ಟ ಅಂಶವನ್ನು ಹೇಳುವುದು, ಅತಿಸಂಕ್ಷೇಪವಾಗಿ ಹೇಳಿದ್ದನ್ನು ವಿಸ್ತಾರ ಮಾಡುವುದು, ವಿಸ್ತಾರವಾಗಿ ಹೇಳಿದ್ದನ್ನು ಮತ್ತೆ ಬುದ್ಧಿಯಲ್ಲಿ ಉಳಿಯುವಂತೆ ಸಂಕ್ಷಿಪ್ತವಾಗಿ ಹೇಳುವುದು, ವಿಕ್ಷಿಪ್ತವಾಗಿ ಅಂದರೆ ಅಲ್ಲಲ್ಲಿ ಹೇಳಿದ್ದನ್ನು ಸಂಕಲಿಸಿ ಒಂದೇ ಕಡೆಯಲ್ಲಿ ಹೇಳುವುದು, ಅಲ್ಲಿ ಹೇಳಿದ್ದನ್ನೇ ಮತ್ತೆ ಸಮರ್ಥಿಸುವುದು ಮತ್ತು ಅಪವ್ಯಾಖ್ಯಾನಗಳನ್ನು ನಿರಾಕರಿಸಿ ದೃಢೀಕರಿಸುವುದು, ಹೀಗೆ ಸ್ಪಷ್ಟೀಕರಣದಲ್ಲಿ ಅನೇಕ ರೀತಿಗಳಿವೆ.

ಮಂಗಲಾಚರಣೆ ಮಾಡಿ ಪ್ರಾರಂಭಿಸಲ್ಪಟ್ಟ ಕಾರ್ಯಗಳು ನಿರ್ವಿಘ್ನವಾಗಿ ಪೂರ್ತಿಗೊಳ್ಳುತ್ತವೆ. ಮಂಗಲಾಚರಣೆಗೂ ಗ್ರಂಥದ ನಿರ್ವಿಘ್ನ ಸಮಾಪ್ತಿಗೂ ಕಾರ್ಯಕಾರಣ ಸಂಬಂಧವಿರುವುದಾಗಿ ಶ್ರುತಿಗಳಿಂದ ಸಿದ್ಧವಾಗಿದೆ. ಆದ್ದರಿಂದ ಮಂಗಾಚರಣೆಯಿಲ್ಲದ ಗ್ರಂಥಗಳಿಗೆ ವ್ಯಾಖ್ಯಾನವು ಆರ್ಯಸಮ್ಮತವಲ್ಲ. ಬ್ರಹ್ಮಸೂತ್ರಗಳಿಗೆ ಮಂಗಲಾಚರಣೆಯು ಮಾಡಿಲ್ಲವಾದ್ದರಿಂದ ಅದಕ್ಕೆ ವ್ಯಾಖ್ಯಾನವು ಮಾಡತಕ್ಕದ್ದಲ್ಲ ಎಂದು ಆಶಂಕಿಸಿದರೆ ಬ್ರಹ್ಮಸೂತ್ರಗಳ ಆದಿಯಲ್ಲಿರುವ ಓಂಕಾರವು ಸೂತ್ರಾವಯವವಾಗಿದ್ದು ಮಂಗಲವಾಚಕವಾಗಿದೆ ಎಂದು ಹೇಳುತ್ತಾರೆ.

### ಓಂಕಾರವು ಸೂತ್ರಾವಯವ ಹಾಗೂ ಮಂಗಲಸೂಚಕ

**ತತ್ರ ತಾರಾಥಮೂಲತ್ವಂ ಸರ್ವಶಾಸ್ತ್ರಸ್ಯ ಚೇಷ್ಯತೇ ।**
**ಸರ್ವತ್ರಾನುಗತತ್ವೇನ ಪೃಥಗೋಂಕ್ರಿಯತೇಖಿಲೈಃ ॥೮॥**

ಪ್ರಥಮ ಸೂತ್ರದ ಆದಿಯಲ್ಲಿ ಉಚ್ಚರಿತವಾಗಿರುವ ಓಂಕಾರ ಮತ್ತು ಅಥ ಶಬ್ದಗಳು ಎಲ್ಲ ಶಾಸ್ತ್ರಗಳಿಗೆ ಆದಿಯಾಗಿಯೂ (ಮಂಗಲಾಚರಣೆಯ ರೂಪದಲ್ಲಿ), ಅಂಗವಾಗಿಯೂ ಸೂತ್ರಕಾರರಿಂದ ಅಂಗೀಕೃತವಾಗಿದೆ. ಓಂಕಾರವನ್ನು ಎಲ್ಲ ಸೂತ್ರಗಳ ಆದಿಯಲ್ಲೂ ಉಚ್ಚರಿಸಬೇಕು ಎಂಬುದನ್ನು ತಿಳಿಸಲು ಎಲ್ಲ ಸೂತ್ರಪಠಣಕಾರರಿಂದಲೂ ಓಂಕಾರವು ಪ್ರಥಮ ಸೂತ್ರದೊಂದಿಗೆ ಸಂಧಿಮಾಡದೆ ಪ್ರತ್ಯೇಕವಾಗಿ ಉಚ್ಚರಿಸಲ್ಪಡುತ್ತದೆ.

**ವಿವರಣೆ:** ಸೂತ್ರಕಾರರು ಮಂಗಲಾಚರಣೆ ಮಾಡಿಲ್ಲ ಎಂದು ಹೇಳುವುದು ಸರಿಯಲ್ಲ. ಮೊದಲನೆಯ ಸೂತ್ರದ ಆದಿಯಲ್ಲೇ ಮಾಂಗಲಿಕ ಸ್ವರೂಪವಾದ

ಓಂ ಮತ್ತು ಅಥ ಶಬ್ದಗಳ ಮೂಲಕ ಮಂಗಲಾಚರಣೆಯನ್ನು ಮಾಡಿದ್ದಾರೆ. ಎಲ್ಲಕ್ಕೂ ಪೂರ್ವದಲ್ಲಿ ಓಂಕಾರ ಮತ್ತು ಅಥ ಶಬ್ದಗಳು ಪರಬ್ರಹ್ಮನ ಕಂಠವನ್ನು ನಿರ್ಭೇದಿಸಿ ಹೊರಟವು. ಆದ್ದರಿಂದ ಇವುಗಳು ಮಂಗಲ ಸೂಚಕಗಳು(ಓಂಕಾರಶ್ಚಾಥಶಬ್ದಶ್ಚ ದ್ವಾವೇತೌ ಬ್ರಹ್ಮಣಃ ಪುರಾ ಕಂಠಂ ಭಿತ್ವಾ ವಿನಿರ್ಯಾತೌ ತಸ್ಮಾನ್ಮಾಂಗಲಿಕಾವುಭೌ). ಸೂತ್ರದ ಆದಿಯಲ್ಲಿ ಓಂಕಾರ ಮತ್ತು ಅಥ ಶಬ್ದಗಳನ್ನು ಸೂತ್ರಕಾರರು ಪ್ರಯೋಗಿಸಿರುವುದರಿಂದ ಈ ಗ್ರಂಥಕ್ಕೆ ಮಂಗಲಾಚರಣೆ ಮಾಡಿದಂತೆಯೇ ಆಗಿದೆ.

ಓಂಕಾರ ಮತ್ತು ಅಥ ಶಬ್ದಗಳು ಕೇವಲ ಮಾಂಗಲಿಕ ಅರ್ಥದಲ್ಲಿರುವುದಾದರೆ ಅವುಗಳಿಗೆ ಪ್ರಥಮ ಸೂತ್ರದ ಅವಯವತ್ವ ಬರುವುದಿಲ್ಲ. ಇದರಿಂದಾಗಿ ಶಾಸ್ತ್ರಜಿಜ್ಞಾಸೆಗೆ ಅತ್ಯವಶ್ಯ ಅಂಗವಾದ ಅಧಿಕಾರ್ಯಾದಿಗಳು ಪ್ರತಿಪಾದಿತವಾಗದೇ ಇರುವುದರಿಂದ ಪ್ರಥಮಸೂತ್ರಕ್ಕೆ ನ್ಯೂನತೆ ಬರುತ್ತದೆ. ಅಧಿಕಾರ, ವಿಷಯಾದಿಗಳು ಪ್ರಸ್ತಾಪಿತವಾಗದಿದ್ದರೆ ಶಾಸ್ತ್ರಕ್ಕೆ ಆರಂಭಣೀಯತ್ವ ಕೂಡುವುದಿಲ್ಲ ಎಂದರೆ -

ಓಂಕಾರ ಮತ್ತು ಅಥ ಶಬ್ದಗಳು ಕೇವಲ ಮಾಂಗಲಿಕಾರ್ಥದಲ್ಲಿ ಮಾತ್ರ ಇಲ್ಲಿ ಪ್ರಯೋಗವಾಗಿಲ್ಲ, ಪರಂತು ಮೊದಲನೆಯ ಸೂತ್ರದ ಅವಯವಗಳೇ ಆಗಿವೆ. ಈ ಶಬ್ದಗಳಿಂದ ಸೂತ್ರಕ್ಕೆ ವಿಷಯ, ಅಧಿಕಾರ್ಯಾದಿಗಳು ಹೇಳಲ್ಪಟ್ಟವೆ. ಆದ್ದರಿಂದ ಈ ಗ್ರಂಥಕ್ಕೆ ಆರಂಭಣೀಯತ್ವ ಕೂಡುತ್ತದೆ. ಓಂಕಾರವನ್ನು ಉಚ್ಚರಿಸುವಾಗ ಸೂತ್ರದ ಮುಂದಿನ ಶಬ್ದದೊಂದಿಗೆ ಸಂಧಿಯನ್ನು ಮಾಡದೆ ಪ್ರತ್ಯೇಕವಾಗಿ ಹೇಳುವುದರಿಂದ ಇದು ಸೂತ್ರದ ಅವಯವವಾಗುವುದು ಹೇಗೆ ಎಂದು ಸಂದೇಹ ಉಂಟಾಗಬಹುದು. ಆದರೆ ಸೂತ್ರದ ಆರಂಭದಲ್ಲಿ ಓಂಕಾರವನ್ನು ಉಚ್ಚರಿಸುವ ಪರಂಪರೆ ಬಹಳ ಹಿಂದಿನಿಂದಲೂ ಬಂದಿರುವುದರಿಂದ ಅದನ್ನು ಸೂತ್ರದ ಅಂಗವೆಂದೇ ಸ್ವೀಕರಿಸಬೇಕು. 'ಸ್ರವತ್ಯನೋಂಕೃತಂ ಬ್ರಹ್ಮ ಪರಸ್ತಾಚ್ಚ ವಿಶೀರ್ಯತೇ'. ಆದಿಯಲ್ಲಿ ಓಂಕಾರವಿಲ್ಲದೆ ಉಚ್ಚರಿತವಾದ ಬ್ರಹ್ಮವಿದ್ಯೆಯು ಪುಣ್ಯಫಲಕ್ಕೆ ಕಾರಣವಾಗುವುದಿಲ್ಲ ಮತ್ತು ಅಂತ್ಯದಲ್ಲಿ ಓಂಕಾರವನ್ನು ಉಚ್ಚರಿಸದಿದ್ದರೆ ಬಂದಿದ್ದ ಫಲ ಸೋರಿಹೋಗುತ್ತದೆ. ಆದುದರಿಂದ ಸೂತ್ರದ ಆದ್ಯಂತಗಳಲ್ಲಿ

ಓಂಕಾರವನ್ನು ಉಚ್ಚರಿಸಬೇಕು(ಆದ್ಯಂತಯೋರೋಂಕುರ್ಯಾತ್) ಎಂಬುದಾಗಿ ವಿಧಿವಾಕ್ಯವಿದೆ. ಎಲ್ಲ ಸೂತ್ರಗಳ ಪಠಣದಲ್ಲಿಯೂ ಆದಿ ಮತ್ತು ಅಂತ್ಯಗಳಲ್ಲಿ ಸಂಪುಟಾಕಾರವಾಗಿ ಓಂಕಾರವನ್ನು ಉಚ್ಚರಿಸಬೇಕು. ಈ ನಿಯಮ ಎಲ್ಲ ಸೂತ್ರಗಳಿಗೂ ಅನ್ವಯವಾಗುತ್ತದೆ ಎಂಬುದನ್ನು ಸೂಚಿಸಲು ಪ್ರಥಮ ಸೂತ್ರದ ಆದಿಯಲ್ಲಿ ಓಂಕಾರವನ್ನು ಸಂಧಿಮಾಡದೆ ಪ್ರತ್ಯೇಕವಾಗಿ ಹೇಳಲಾಗಿದೆ.

## ಜಿಜ್ಞಾಸಾಧಿಕರಣ

**ಸೂತ್ರ: ಓಂ ಅಥಾತೋ ಬ್ರಹ್ಮಜಿಜ್ಞಾಸಾ ಓಂ (೧-೧-೧)**

ಅಧ್ಯಯನ ಶಮದಮಾದಿ ರೂಪವಾದ ಅಧಿಕಾರವು ಸಿದ್ಧಿಸಿದ ಮೇಲೆ (ಅಥ), ಪ್ರಸನ್ನನಾದ ಶ್ರೀಹರಿಯಿಂದ ಅಪರೋಕ್ಷಜ್ಞಾನ ಮತ್ತು ಮೋಕ್ಷಾಖ್ಯ ಫಲವು ಲಭಿಸುವುದೆಂಬ ಪ್ರಯೋಜನವಿರುವುದರಿಂದ (ಅತಃ), ಗುಣಪರಿಪೂರ್ಣನಾದ ವಿಷ್ಣುವಿನ (ಓಂ ಬ್ರಹ್ಮ) ವಿಚಾರವು ಮಾಡತಕ್ಕದ್ದು (ಜಿಜ್ಞಾಸಾ ಕರ್ತವ್ಯಾ).

### ಗುಣಪೂರ್ಣತ್ವವೇ ಓಂಕಾರದ ಅರ್ಥ

**ಓತತ್ವವಾಚೀ ಹ್ಯೋಂಕಾರೋ ವಕ್ತ್ಯಸೌ ತದ್ಗುಣೋತತಾಮ್ ।**

ಸರ್ವಗತತ್ವ ಅಥವಾ ಪ್ರವಿಷ್ಟತ್ವವನ್ನು ಪ್ರತಿಪಾದಿಸುವ ಕಾರಣದಿಂದ ಓಂಕಾರವು ಆನಂದಾದಿ ಅನಂತಕಲ್ಯಾಣಗುಣಗಳಿಂದ ಪ್ರವಿಷ್ಟತ್ವವನ್ನು ಹೇಳುತ್ತದೆ. ಆದ್ದರಿಂದ ಅನಂತಕಲ್ಯಾಣಗುಣಪೂರ್ಣತ್ವವೇ ಓಂಕಾರದ ಅರ್ಥ.

### ಗುಣಪೂರ್ಣನೇ ಜಿಜ್ಞಾಸ್ಯನು

**ಸ ಏವ ಬ್ರಹ್ಮಶಬ್ದಾರ್ಥೋ ನಾರಾಯಣಪದೋದಿತಃ ॥೯॥**
**ಸ ಏವ ಭರ್ಗಶಬ್ದಾರ್ಥೋ ವ್ಯಾಹೃತೀನಾಂ ಚ ಭೂಮತಃ ।**
**ಭಾವನಾಚ್ಚೈವ ಸುತ್ವಾಚ್ಚ ಸೋಽಯಂ ಪುರುಷ ಇತ್ಯಪಿ ॥೧೦॥**
**ಸ ಏವ ಸರ್ವವೇದಾರ್ಥೋ ಜಿಜ್ಞಾಸ್ಯೋಽಯಂ ವಿಧೀಯತೇ ।**

ಗುಣಪೂರ್ಣತ್ವವೇ ಬ್ರಹ್ಮ ಶಬ್ದದ ಅರ್ಥವು. ನಾರಾಯಣ ಶಬ್ದದಿಂದಲೂ ಅದೇ ಉಕ್ತವಾಗಿದೆ. ಭರಣ ಮತ್ತು ಗಮನ ಶಬ್ದಗಳ ಯೋಗದಿಂದ ಭರ್ಗಶಬ್ದಾರ್ಥನೂ ಗುಣಪೂರ್ಣನಾದ ಬ್ರಹ್ಮನೇ.

ಪೂರ್ಣತ್ವದ ನಿಮಿತ್ತವಾಗಿಯೂ(ಭೂಮತಃ), ಜಗತ್ತನ್ನು ಸೃಷ್ಟಿಸುವುದರಿಂಥಲೂ (ಭಾವನಾಚ್ಚೈವ), ಸುಖರೂಪತ್ವದ ಕಾರಣದಿಂದಲೂ (ಸುತ್ವಾಚ್ಚ), ಆ ವಿಷ್ಣುವೇ ವ್ಯಾಹೃತಿಗಳ ಅರ್ಥವು. ಪೂರ್ಣತ್ವದ ಕಾರಣದಿಂದಲೇ ಪುರುಷ ಶಬ್ದವಾಚ್ಯನು ನಾರಾಯಣನೇ ಆಗಿರುವನು. ಸರ್ವವೇದಗಳ ಮುಖ್ಯ ತಾತ್ಪರ್ಯನೂ ಅವನೇ. ಹೀಗೆ ಅನಂತಕಲ್ಯಾಣಗುಣ ಪರಿಪೂರ್ಣನೂ ಸಮಸ್ತ ವೇದಪ್ರತಿಪಾದ್ಯನೂ ಹಾಗೂ ಸಮಸ್ತ ವೇದಾರ್ಥನೂ ಆದ ಶ್ರೀಹರಿಯೇ ಮುಖ್ಯವಾಗಿ ವಿಚಾರ್ಯನು (ಜಜ್ಞಾಸ್ಯಃ) ಎಂಬುದಾಗಿ ಶಾಸ್ತ್ರಗಳಲ್ಲಿ ವಿಧಿಸಲ್ಪಟ್ಟದೆ.

**ವಿವರಣೆ:**

ಓಂಕಾರ ಮತ್ತು ಬ್ರಹ್ಮ ಇವೆರಡು ಶಬ್ದಗಳೂ ಗುಣಪರಿಪೂರ್ಣತ್ವವನ್ನೇ ಪ್ರತಿಪಾದಿಸುತ್ತವೆ. 'ಅಥ ಕಸ್ಮಾದುಚ್ಯತೇ ಬ್ರಹ್ಮೇತಿ ಬೃಹಂತೋ ಹ್ಯಸ್ಮಿನ್ ಗುಣಾಃ'[1] ಇತ್ಯಾದಿ ಶ್ರುತಿಗಳು ಇದಕ್ಕೆ ಪ್ರಮಾಣವಾಗಿವೆ. ಜೀವ ಮತ್ತು ಜಡಗಳಿಗೆ ಗುಣಪರಿಪೂರ್ಣತ್ವವು ಕೂಡುವುದಿಲ್ಲವಾದ್ದರಿಂದ ಬ್ರಹ್ಮನು ಇವುಗಳಿಗಂತ ವಿಲಕ್ಷಣನಾದ ಪರಪುರುಷನೆಂಬುದು ಸಿದ್ಧವಾಗುತ್ತದೆ. ಜೀವಜಡಾತ್ಮಕ ಪ್ರಪಂಚಕ್ಕಿಂತ ಅತ್ಯಂತ ಭಿನ್ನನಾದ ಬ್ರಹ್ಮನನ್ನು ಪ್ರತ್ಯಕ್ಷ ಮತ್ತು ಅನುಮಾನಗಳಿಂದ ತಿಳಿಯಲು ಸಾಧ್ಯವಿಲ್ಲವಾದ್ದರಿಂದ ಶಾಸ್ತ್ರಗಳ ಅಧ್ಯಯನದ ಮೂಲಕ ಬ್ರಹ್ಮನ ಜಜ್ಞಾಸೆ ಮಾಡಬೇಕು. 'ನಾರಾಯಣಂ ಮಹಾಜ್ಞೇಯಂ' ಇತ್ಯಾದಿ ಶ್ರುತಿಗಳಲ್ಲಿ ನಾರಾಯಣನು ಜಜ್ಞಾಸ್ಯನೆಂದು ಹೇಳಲ್ಪಟ್ಟದ್ದಾನೆ. ನಾರಾಯಣ ಶಬ್ದವೂ ಗುಣಪರಿಪೂರ್ಣತ್ವವನ್ನೇ ಹೇಳುತ್ತದೆ. ಆದ್ದರಿಂದ ಮೊದಲನೆಯ ಸೂತ್ರದಲ್ಲಿ ಜಜ್ಞಾಸ್ಯನೆಂದು ಹೇಳಲ್ಪಟ್ಟಿರುವ ಬ್ರಹ್ಮನೇ ನಾರಾಯಣನು. 'ಆತ್ಮಾನಮೇವ ಲೋಕಮುಪಾಸೀತ' ಇತ್ಯಾದಿ ಶ್ರುತಿಗಳಲ್ಲಿ ಆತ್ಮಾದಿ ಶಬ್ದಗಳೂ ಜಜ್ಞಾಸ್ಯವೆಂದು ಶ್ರುತವಾಗಿವೆ. ಸರ್ವಗತತ್ವಾದಿ ಧರ್ಮಗಳನ್ನು ಪ್ರತಿಪಾದಿಸುವ ವಿಷ್ಣು ಮೊದಲಾದ ಶಬ್ದಗಳೂ ಜಜ್ಞಾಸ್ಯನಾದ ಬ್ರಹ್ಮನನ್ನೇ ಹೇಳುತ್ತವೆ. ಈ ಕಾರಣಗಳಿಂದ ಈ ಸೂತ್ರದಲ್ಲಿರುವ ಬ್ರಹ್ಮ ಶಬ್ದಕ್ಕೆ ವಿಷ್ಣುವೆಂದೇ ಅರ್ಥಮಾಡಬೇಕು, ಜೀವ ಅಥವಾ ಚತುರ್ಮುಖಬ್ರಹ್ಮನೆಂದಲ್ಲ.

'ಓಮಿತಿ ಬ್ರಹ್ಮ' ಇತ್ಯಾದಿ ಶ್ರುತಿಗಳಿಂದ ಓಂಕಾರವು ಗುಣಪರಿಪೂರ್ಣನಾದ ಪರಮೇಶ್ವರನನ್ನೇ ಪ್ರತಿಪಾದಿಸುತ್ತದೆ. 'ಪ್ರಣವಾರ್ಥಾ ವ್ಯಾಹೃತಯಃ ವ್ಯಾಹೃತ್ಯರ್ಥಾ ಋಗಾದಯಃ' ಎನ್ನುವ ಆಗಮದಿಂದ ಓಂಕಾರವು ಸಮಸ್ತ ವೇದಾರ್ಥವನ್ನು ಪ್ರತಿಪಾದಿಸುತ್ತದೆ ಎಂದು ತಿಳಿಯುತ್ತದೆ. ಅದು ಹೇಗೆಂದರೆ, **ಭೂಃ, ಭುವಃ,** ಮತ್ತು **ಸುವಃ** ಎನ್ನುವ ಮೂರು ವ್ಯಾಹೃತಿಗಳು **ಅ, ಉ** ಮತ್ತು **ಮ** ಎನ್ನುವ ಮೂರು ವರ್ಣಗಳ ಸ್ವರೂಪವಾದ ಪ್ರಣವ ಅಥವಾ ಓಂಕಾರದ ವ್ಯಾಖ್ಯಾನವಾಗಿವೆ. ಮೂರು ವ್ಯಾಹೃತಿಗಳಿಗೆ ಮೂರು ಪಾದಗಳ ಗಾಯತ್ರಿಯು ವ್ಯಾಖ್ಯಾನ. 'ತದ್ಭೇದಃ ಪೌರುಷಂ ಸೂಕ್ತಂ ವೇದಾಃ ಪುರುಷಸೂಕ್ತಗಾಃ' ಎಂಬ ಆಗಮದಿಂದ ಮೂರು ವರ್ಗಗಳುಳ್ಳ ಪುರಷಸೂಕ್ತವು ಮೂರು ಪಾದಗಳುಳ್ಳ ಗಾಯತ್ರಿಯ ವ್ಯಾಖ್ಯಾನವೆಂದು ಸಿದ್ಧವಾಗುತ್ತದೆ. ಅದರ ಅರ್ಥವನ್ನೇ ಸಮಸ್ತ ವೇದಗಳೂ ಪ್ರತಿಪಾದಿಸುತ್ತವೆ. ಓಂಕಾರಾರ್ಥವೇ ಬ್ರಹ್ಮನು. ಇದರಿಂದ ಓಂಕಾರವಾಚ್ಯನಾದ ಬ್ರಹ್ಮನೇ ಸಮಸ್ತ ವೇದಾರ್ಥನು ಎಂದು ನಿರ್ಣೀತವಾಗುತ್ತದೆ.

ಪರಮೇಶ್ವರನ ವಿಷಯದಲ್ಲಿ ವೇದಗಳೇ ಪ್ರಮಾಣವಾಗಿದ್ದರೆ ಅವುಗಳಿಂದಲೇ ನಿಶ್ಚಯವಾಗಿ ತಿಳಿಯಲು ಸಾಧ್ಯವಿದ್ದಮೇಲೆ ಮತ್ತೆ ಮೀಮಾಂಸಾ ಏತಕ್ಕೆ ಎಂದು ಕೇಳುವುದು ಸರಿಯಲ್ಲ. ವೇದಾರ್ಥವು ಸರಿಯಾಗಿ ನಿರ್ಣಯವಾಗದೇ ಬ್ರಹ್ಮನ ವಿಷಯ ನಿರ್ಧಾರವಾಗದು. ವೇದಾರ್ಥನಿರ್ಣಯಕ್ಕಾಗಿ ಮೀಮಾಂಸೆಯು ಅವಶ್ಯಕ. ವೇದಾಧ್ಯಯನದಿಂದ ಪರಮೇಶ್ವರನ ಸ್ವರೂಪವನ್ನು ನಿರ್ಣಯಿಸುವಾಗ ಅಡ್ಡಿಯಾಗುವ ಕೆಲವು ನಿರ್ಬಂಧಗಳುಂಟು. ಕೆಲವರು ವೇದಗಳು ಪ್ರಮಾಣವೆಂದೇ ಒಪ್ಪುವುದಿಲ್ಲ. ಇನ್ನೂ ಕೆಲವರು ವೇದಪ್ರಾಮಾಣ್ಯವನ್ನು ಒಪ್ಪಿದರೂ ವೇದಗಳು ಜೀವ ಮತ್ತು ಕರ್ಮಗಳಿಗೆ ಸಂಬಂಧಿಸಿದ ವಿಷಯಗಳನ್ನಷ್ಟೇ ಹೇಳುತ್ತವೆ ಎಂದು ಪ್ರತಿಪಾದಿಸುವ ಮೂಲಕ ಪರಮೇಶ್ವರನನ್ನೇ ಅಲ್ಲಗೆಳೆಯುವರು. ಮತ್ತೆ ಕೆಲವರು ವೇದಪ್ರಾಮಾಣ್ಯ ಮತ್ತು ಪರಮಾತ್ಮನ ಅಸ್ತಿತ್ವವನ್ನು ಒಪ್ಪಿದರೂ ಅವನು ನಿರ್ಗುಣ ಎನ್ನುವರು. ಪರಮಾತ್ಮನನ್ನು ಸಗುಣನೆಂದು ಒಪ್ಪಿದವರಲ್ಲೂ ಕೆಲವರು, ಅವನು ಜಗತ್ತಿಗೆ ಕಾರಣನಲ್ಲ ಎನ್ನುವರು. ಇನ್ನೂ

ಕೆಲವರು ಅವನು ನಿಮಿತ್ತಕಾರಣನೆಂದು ಒಪ್ಪಿ, ಅವನಿಗೂ ಅವನ ಗುಣಗಳಿಗೂ ಭೇದವನ್ನು ಹೇಳುವರು. ಹೀಗೆ ವಿರುದ್ಧಜ್ಞಾನ ಹುಟ್ಟಿಸುವಂತಹ ಅನೇಕ ವಿಧದ ತತ್ವಸಮ್ಮತವಲ್ಲದ ವ್ಯಾಖ್ಯಾನಗಳಿರುವುದರಿಂದ ವೇದಗಳಿಂದ ಸರಿಯಾದ ತತ್ವಜ್ಞಾನವನ್ನು ಪಡೆಯಲು ಜಿಜ್ಞಾಸೆಯು ಅತ್ಯವಶ್ಯವಾಗಿದೆ.

**ಮಂಗಲಾಸ್ರವಣೇ ಯುಕ್ತಿವಿಶೇಷದ್ಯೋತನಂ ತಥಾ । ಮೀಮಾಂಸಾನುಗ್ರಾಹ್ಯಮಾನ ಕೀರ್ತನಂ ಪೂರ್ವತಂತ್ರತಃ । ಅಗತಾರ್ಥಾ ಸೂಚನಂ ಚೇತ್ಯೇವಂ ಪಂಚಪ್ರಯೋಜನಃ । ಸೌತ್ರಪ್ರಾಥಮಿಕೋಂಕಾರಃ ಶ್ರುತಿಸಿದ್ಧೋಽವಧಾರಿತಃ ॥**

ಸೂತ್ರದಲ್ಲಿನ ಪ್ರಥಮ ಓಂಕಾರವು - ಮಂಗಲ, ಅಸ್ರವಣ (ಅಂದರೆ ಸೋರಿಹೋಗದಿರುವುದು), ಯುಕ್ತಿವಿಶೇಷವನ್ನು ತೋರಿಸುವುದು, ಈ ಶಾಸ್ತ್ರಕ್ಕೆ ಅನುಗ್ರಾಹ್ಯ ಪ್ರಮಾಣವನ್ನು ಸೂಚಿಸುವುದು ಮತ್ತು ಈ ಶಾಸ್ತ್ರವು ಬೇರೆ ಶಾಸ್ತ್ರಗಳಿಂದ ಗತಾರ್ಥವಾಗಲಿಲ್ಲ, ಅಂದರೆ ಬೇರೆಕಡೆ ಹೇಳಿರುವ ವಿಷಯಗಳೇ ಪುನರುಕ್ತಿಯಾಗಿಲ್ಲ ಎಂದು ಸೂಚಿಸುವುದು - ಹೀಗೆ ಐದುರೀತಿಯ ಪ್ರಯೋಜನಗಳನ್ನು ಹೊಂದಿದೆಯೆಂದು ಸಿದ್ಧವಾಗಿದೆ.

### ಅತಃ ಶಬ್ದಕ್ಕೆ ವ್ಯಾಖ್ಯಾನ

ಈ ಶಾಸ್ತ್ರಕ್ಕೆ ವಿಶೇಷ ಪ್ರಯೋಜನಗಳಿವೆ ಎಂಬುದನ್ನು ಮೇಲೆ ಹೇಳಿರುವ ಪ್ರಕಾರ ಉಪಪಾದಿಸಿ, ಸೂತ್ರದಲ್ಲಿನ ಅಥ ಶಬ್ದಕ್ಕೆ ಭಾಷ್ಯದಲ್ಲಿಯೇ ಅರ್ಥ ವಿವರಣೆಗಳನ್ನು ನೀಡಿರುವುದರಿಂದ ಹಾಗೂ ಇಲ್ಲಿ ಹೇಳಬೇಕಾದ ವಿಶೇಷಾಂಶಗಳು ಬೇರೆ ಇಲ್ಲವಾದ್ದರಿಂದ, ಸೂತ್ರದ **ಅತಃ** ಎಂಬ ಶಬ್ದಕ್ಕೆ ಇಲ್ಲಿ ವಿಶೇಷವಾಗಿ ವ್ಯಾಖ್ಯಾನ ಮಾಡುವರು. 'ಜ್ಞಾನೀ ಪ್ರಿಯತಮೋತೋ ಮೇ' ಎನ್ನುವುದರಿಂದ ಆರಂಭಿಸಿ 'ಸ್ವಯಂ ಭಗವತಾ ವಿಷ್ಣುಃ' ಎನ್ನುವವರೆಗೆ ಅತಃ ಶಬ್ದದ ವ್ಯಾಖ್ಯಾನ.

೧. ಜ್ಞಾನ ಮತ್ತು ಹರಿಯ ಪ್ರಸಾದಗಳ ಮೂಲಕ ಮುಕ್ತಿರೂಪ ಫಲವು ಇರುವುದರಿಂದ,

೨. ಬಂಧವು ಸತ್ಯವಾಗಿರುವುದರಿಂದ,

೩. ವೇದವು ಸಿದ್ಧಾರ್ಥಬೋಧಕವಾಗಿರುವುದರಿಂದ,

೪. ವೇದಕ್ಕೆ ಪರಮಪ್ರಾಮಾಣ್ಯವಿರುವುದರಿಂದ ಹಾಗೂ

೫. ಶಬ್ದಗಳಿಗೆ ವಾಕ್ಯಾರ್ಥಬೋಧಕತ್ವ ಸ್ವಯಂಸಿದ್ಧವಾಗಿರುವುದರಿಂದ, ಹೀಗೆ ಅತಃ ಶಬ್ದಕ್ಕೆ ಐದುರೀತಿಯ ಸಾರ್ಥಕ್ಯವನ್ನು ಶ್ರೀಮದಾಚಾರ್ಯರು ಇಲ್ಲಿ ಸೂಚಿಸಿದ್ದಾರೆ.

## ವಿಷ್ಣುವಿನ ಪ್ರಸಾದದಿಂದಲೇ ಮೋಕ್ಷ

**ಜ್ಞಾನೀ ಪ್ರಿಯತಮೋಽತೋ ಮೇ ತಂ ವಿದ್ವಾನೇವ ಚಾಮೃತಃ ||೧೧||**

**ವೃಣುತೇ ಯಂ ತೇನ ಲಭ್ಯಃ ಇತ್ಯಾದ್ಯುಕ್ತಿಬಲೇನ ಹಿ |**

**ಜಿಜ್ಞಾಸೋತ್ಥಜ್ಞಾನಜಾತ್ತತ್ಪ್ರಸಾದಾದೇವ ಮುಚ್ಯತೇ ||೧೨||**

'ಜ್ಞಾನಿಯು ನನಗೆ ಪರಮಪ್ರಿಯನು ಆದುದರಿಂದ' 'ವಿಷ್ಣುವನ್ನು ತಿಳಿದವನೇ ಮುಕ್ತನಾಗುವನು' 'ಯಾರನ್ನು ಶ್ರೀಹರಿಯು ಭಕ್ತನನ್ನಾಗಿ ಸ್ವೀಕರಿಸುವನೋ ಅಂಥವನು ಮಾತ್ರ ಅವನನ್ನು ಹೊಂದಲರ್ಹನು' ಇತ್ಯಾದಿ ಆಗಮೋಕ್ತಿಗಳ ಸಾಮರ್ಥ್ಯದಿದಂಲೇ 'ಬ್ರಹ್ಮಜಿಜ್ಞಾಸೆಯಿಂದ ಹುಟ್ಟುವ ಜ್ಞಾನದಿಂದ ಮತ್ತು ಆ ಜ್ಞಾನದಿಂದ ಲಭಿಸುವ ಶ್ರೀಹರಿಯ ಪರಮಾನುಗ್ರಹರೂಪವಾದ ಪ್ರಸಾದದಿಂದಲೇ ಜ್ಞಾನಿಯು ಸಂಸಾರದಿಂದ ಮುಕ್ತನಾಗುತ್ತಾನೆ' ಎಂಬುದು ಸಿದ್ಧವಾಗುತ್ತದೆ.

**ದ್ರವ್ಯಂ ಕರ್ಮ ಚ ಕಾಲಶ್ಚ ಸ್ವಭಾವೋ ಜೀವ ಏವ ಚ |**

**ಯದನುಗ್ರಹತಃ ಸಂತಿ ನ ಸಂತಿ ಯದುಪೇಕ್ಷಯಾ ||೧೩||**

ದ್ರವ್ಯ (ಪ್ರಕೃತಿ ಮೊದಲಾದ ತತ್ವಗಳು), ಕರ್ಮ (ಧರ್ಮಾಧರ್ಮಗಳು), ಕಾಲ, ಸ್ವಬಾವ (ಪ್ರಕೃತ್ಯಾದಿಗಳ ಪರಿಣಾಮಗಳು) ಮತ್ತು ಪ್ರಕೃತ್ಯಾದಿ ತತ್ವಗಳ ಮತ್ತು ಅದರ ಪರಿಣಾಮಗಳ ಅಭಿಮಾನಿಯಾದ ಸರ್ವಚೇತನ ಸಮೂಹವೂ ಶ್ರೀಹರಿಯ ಅನುಗ್ರಹದಿಂದಲೇ ಇರುತ್ತವೆ ಮತ್ತು ಅವನ ಉಪೇಕ್ಷೆಗೊಳಗಾದರೆ ಅಸ್ತಿತ್ವ ಕಳೆದುಕೊಳ್ಳುತ್ತವೆ.

**ನರ್ತೇ ತ್ವತ್ಕ್ರಿಯತೇ ಕಿಂಚನೇತ್ಯಾದೇರ್ನ ಹರಿಂ ವಿನಾ |**

**ಜ್ಞಾನಸ್ವಭಾವತೋಽಪಿ ಸ್ಯಾನ್ಮುಕ್ತಿಃ ಕಸ್ಯಾಪಿ ಹಿ ಕ್ವಚಿತ್ ||೧೪||**

ಆ ಹರಿಯನ್ನು ಬಿಟ್ಟು ಯಾವೊಂದೂ ಕಾರ್ಯನಿರ್ವಹಿಸದು ಎಂದು 'ನ ಋತೇ ತ್ವತ್ಕ್ರಿಯತೇ ಕಿಂಚನಾರೇ' ಎನ್ನುವ ಶ್ರುತಿಯಿಂದ ತಿಳಿಯಲ್ಪಡುತ್ತದೆ. ಆದುದರಿಂದ ಶ್ರೀಹರಿಯ ಪ್ರಸಾದದ ಹೊರತು ಕೇವಲ ಜ್ಞಾನಸ್ವಭಾವದಿಂದ

ಮೋಕ್ಷವು ಯಾರಿಗೂ ಎಲ್ಲಿಯೂ ಯಾವ ಕಾರಣಕ್ಕೂ ಆಗಲಾರದು.

**ಅಜ್ಞಾನಾಂ ಜ್ಞಾನದೋ ವಿಷ್ಣುರ್ಜ್ಞಾನಿನಾಂ ಮೋಕ್ಷದಶ್ಚ ಸಃ ।**

**ಆನಂದದಶ್ಚ ಮುಕ್ತಾನಾಂ ಸ ಏವೈಕೋ ಜನಾರ್ದನಃ ॥೧೫॥**

ವಿಷ್ಣುವು ಅಜ್ಞಾನಿಗಳಿಗೆ ಜ್ಞಾನವನ್ನು ಕೊಡುವನು. ಜ್ಞಾನಿಗಳಿಗೆ ಮೋಕ್ಷವನ್ನು ಕೊಡುವನು. ಆ ಜನಾರ್ಧನನೊಬ್ಬನೇ ಮುಕ್ತಿಯನ್ನು ಹೊಂದಿದವರಿಗೆ ಆನಂದವನ್ನೂ ಕೊಡುವನು. ಹೀಗೆ ಸಾಧನೆಯ ಪ್ರತಿಹಂತದಲ್ಲಿಯೂ ಪ್ರಸನ್ನನಾದ ಶ್ರೀಹರಿಯ ಅನುಗ್ರಹದಿಂದಲೇ ಸಾಧಕರುಗಳಿಗೆ ಯೋಗ್ಯವಾದ ಫಲಪ್ರಾಪ್ತಿಯಾಗುವುದು ಎಂಬುದಾಗಿ ಆಗಮಗಳು ಹೇಳುತ್ತವೆ.

## ಬಂಧಮಿಥ್ಯಾತ್ವ ಖಂಡನೆ

**ಇತ್ಯುಕ್ತೇರ್ಬಂಧಮಿಥ್ಯಾತ್ವಂ ನೈವ ಮುಕ್ತಿರಪೇಕ್ಷತೇ ।**

**ಮಿಥ್ಯಾತ್ವಮಪಿ ಬಂಧಸ್ಯ ನ ಪ್ರತ್ಯಕ್ಷವಿರೋಧತಃ ॥೧೬॥**

**ಮಿಥ್ಯಾತ್ವಂ ಯದಿ ದುಃಖಾದೇಸ್ತದ್ವಾಕ್ಯಸ್ಯಾಗ್ರತೋ ಭವೇತ್ ।**

ಹೀಗೆ ಸಂಸಾರಬಂಧದಿಂದ ಮುಕ್ತಿಯು ಭಗವತ್ಪ್ರಸಾದಿಂದ ಮಾತ್ರ ಸಾಧ್ಯ ಎಂದು ಹೇಳಿರುವುದರಿಂದ, ಸಂಸಾರಬಂಧವು ಮಿಥ್ಯಾ ಅಥವಾ ಸುಳ್ಳು ಎಂಬ ವಾದವನ್ನು ಮುಕ್ತಿಯು ಅಪೇಕ್ಷಿಸುವುದಿಲ್ಲ. ಪ್ರತ್ಯಕ್ಷಕ್ಕೆ ವಿರೋಧ ಬರುವುದರಿಂದಲೂ ಸಂಸಾರಬಂಧವು ಸುಳ್ಳು ಎಂಬುದು ಕೂಡುವುದಿಲ್ಲ. ದುಃಖ ಮೊದಲಾದವುಗಳಿಗೆ ಮಿಥ್ಯಾತ್ವವಿದೆ ಎಂದು ಹೇಳುವುದಾದರೆ ಬ್ರಹ್ಮಾತಿರಿಕ್ತವಾದ ಎಲ್ಲವೂ ಮಿಥ್ಯಾ ಎಂದು ಪ್ರತಿಪಾದಿಸಲು ಪ್ರಮಾಣವಾಗಿ ನೀವು ಹೇಳುವ 'ನೇಹ ನಾನಾಸ್ತಿ ಕಿಂಚನ' ಎಂಬಿತ್ಯಾದಿ ವಾಕ್ಯಗಳಿಗೆ ಎಲ್ಲಕ್ಕೂ ಮೊದಲಿಗೆ ಮಿಥ್ಯಾತ್ವವು ಬರಬೇಕಾಗುವುದು.

**ಮಿಥ್ಯಾಯಾಃ ಸಾಧಕತ್ವಂ ಚ ನ ಸಿದ್ಧಂ ಪ್ರತಿವಾದಿನಃ ॥೧೭॥**

**ತಚ್ಚ ಮಿಥ್ಯಾಪ್ರಮಾಣೇನ ಸತಾ ವಾ ಸಾಧ್ಯತೇ ತ್ವಯಾ ।**

**ಸತಾ ಚೇದ್ ದ್ವೈತಸಿದ್ಧಿಃ ಸ್ಯಾನ್ನ ಸಿದ್ಧಂ ಚಾನ್ಯಸಾಧನಮ್ ॥೧೮॥**

**ಸಾಧಕತ್ವಂ ಸತಸ್ತೇನ ಸಾಕ್ಷಿಣಾ ಸಿದ್ಧಿಮಿಚ್ಛತಾ ।**

**ಸ್ವೀಕೃತಂ ಹಿ ..................................॥**

(3) ಶ್ರುತಿವಾಕ್ಯಗಳು ಸುಳ್ಳು ಎಂದು ಹೇಳುವ ಪ್ರತಿವಾದಿಗಳಿಗೆ ಅಂಥಹ ಶ್ರುತಿಗಳಿಗೆ ಸಾಧಕತ್ವವು ಸಿದ್ಧವಾಗುವುದಿಲ್ಲ. ಮಿಥ್ಯೆಯಾದುದಕ್ಕೆ ಸಾಧಕತ್ವವು ನಿನ್ನಿಂದ ಮಿಥ್ಯೆಯಾದ ಪ್ರಮಾಣದಿಂದಲೇ ಸಾಧಿಸಲ್ಪಡುವುದೋ ಅಥವಾ ಸತ್ಯವಾದ ಪ್ರಮಾಣದಿಂದ ಸಾಧಿಸಲ್ಪಡುವುದೋ? ಬ್ರಹ್ಮಾತಿರಿಕ್ತವಾದ ಸತ್ಯವಾದ ಪ್ರಮಾಣದಿಂದ ಸಾಧಿಸುವುದಾದರೆ ದ್ವೈತವು (ಆತ್ಮಾರಿಕ್ತವಾದ ಎರಡನೆಯ ಪದಾರ್ಥವು) ಸಿದ್ಧಿಸುವುದು. ಮಿಥ್ಯಾಭೂತವಾದ ಸಾಧನದಿಂದ ಎಂದು ಹೇಳುವುದಾದರೆ ಮಿಥ್ಯೆಯಾದುದಕ್ಕೆ ನಾವು ಸಾಧಕತ್ವವನ್ನು ಒಪ್ಪುವುದಿಲ್ಲ. ಸಾಕ್ಷಿಯಿಂದ ಭಾವರೂಪ ಅಜ್ಞಾನದ ಸಿದ್ಧಿಯನ್ನು ಇಚ್ಛಿಸುವ ಮಾಯಾವಾದಿಯಿಂದ ಸತ್ಪದಾರ್ಥಕ್ಕೆ ಸಾಧಕತ್ವವು ಅಂಗೀಕೃತವಾಗಿದೆಯಷ್ಟೆ.

**.................ಅವಿಶೇಷಸ್ಯ ಸಾಧ್ಯಾ ಸಾಧಕತಾ ಪುನಃ ॥೧೯॥**

**ತಚ್ಚಾವಿಶೇಷಮಾನೇನ ಸಾಧ್ಯಮಿತ್ಯನವಸ್ಥಿತಿಃ ।**

**ಅನಂಗೀಕುರ್ವತಾಂ ವಿಶ್ವಸತ್ಯತಾಂ ತನ್ನ ವಾದಿತಾ ॥೨೦॥**

(4) ನಿರ್ವಿಶೇಷಕ್ಕೆ ಸಾಧಕತ್ವವು ಪುನಃ ನಿನ್ನಿಂದ ಸಾಧಿಸಲ್ಪಡತಕ್ಕದ್ದು. ಅದಾದರೋ ನಿರ್ವಿಶೇಷ ಪ್ರಮಾಣದಿಂದ ಸಾಧಿತವಾಗಬೇಕು. ಅದನ್ನು ಸಾಧಿಸಲು ಮತ್ತೊಂದು ಪ್ರಮಾಣ. ಹೀಗೆ ಅನವಸ್ಥಿತಿಗೆ ಅಂದರೆ ಕೊನೆಯಿಲ್ಲದ ಪರಂಪರೆಗೆ ಕಾರಣವಾಗುವುದು. ಮಿಥ್ಯೆಯಾದುದಕ್ಕೆ ಸಾಧಕತ್ವವು ಕೂಡದಿರುವ ಕಾರಣ, ಪ್ರಪಂಚಕ್ಕೆ ಸತ್ಯತ್ವವನ್ನು ಅಂಗೀಕರಿಸದಿರುವ ನಿನ್ನ ಮತದ ಪ್ರಕಾರ 'ನೇಹ ನಾನಾಸ್ತಿ ಕಿಂಚನ' ಇತ್ಯಾದಿ ವಾಕ್ಯಗಳಿಗೂ ಮಿಥ್ಯಾತ್ವವು ಬರುವುದರಿಂದ ಅವು ಸಾಧಕತ್ವವು ಆಗಲಾರವು.

**ತಸ್ಮಾದ್ ವ್ಯವಹೃತಿಃ ಸರ್ವಾ ಸತ್ಯೇತ್ಯೇವ ವ್ಯವಸ್ಥಿತಾ ।**

**ವ್ಯಾವಹಾರಿಕಮೇತಸ್ಮಾತ್ಸತ್ಯಮಿತ್ಯೇವ ಚಾಗತಮ್ ॥೨೧॥**

**ವ್ಯವಹಾರಸತಶ್ಚಾಪಿ ಸಾಧಕತ್ವಂ ತು ಪೂರ್ವವತ್ ।**

ಆದುದರಿಂದ ನಿನಗೆ ವಾದಿತ್ವವು ಕೂಡಬೇಕಾದರೆ ವಾದಕಥೆಯ ವ್ಯವಹಾರಕ್ಕೆ ಪೂರಕವಾದ ಪ್ರಮಾಣಾದಿಗಳೆಲ್ಲವೂ ಸತ್ಯ ಎಂಬುದಾಗಿಯೇ ನಿಶ್ಚಿತವಾಗಬೇಕು. ವ್ಯವಹಾರಕ್ಕೆ ಸತ್ಯತ್ವವಿರಲಿ, ದುಃಖಾದಿ ಬಂಧವು ಮಿಥ್ಯೆಯಾಗಲಿ ಎಂದರೆ ಹಾಗೆ ಹೇಳುವುದು ಸರಿಯಲ್ಲ. ಪ್ರಮಾಣಾದಿ

ವ್ಯವಹಾರವು ಸತ್ಯವೆಂದು ಒಪ್ಪಿದಮೇಲೆ ವ್ಯವಹಾರಕ್ಕೆ ವಿಷಯವಾದ ದುಃಖಾದಿಗಳಿಗೂ ಸತ್ಯತ್ವವೇ ಬರುವುದು.

ಮಿಥ್ಯೆಯಾದುದಕ್ಕೆ ಸಾಧಕತ್ವವು ಕೂಡುವುದಿಲ್ಲ ಎಂಬುದಾಗಿ ಹಿಂದೆ ಹೇಳಿದ ರೀತಿಯಲ್ಲಿಯೇ ವ್ಯಾವಹಾರಿಕಸತ್ಯಕ್ಕೂ ಸಾಧಕತ್ವವು ಕೂಡುವುದಿಲ್ಲ. ಆದಪ್ರಯುಕ್ತ ವ್ಯಾವಹಾರಿಕಸತ್ಯ ಎನ್ನುವುದೂ ಮಿಥ್ಯೆಯೇ ಆಗುವುದು.

**ಸತ್ತ್ರೈವಿಧ್ಯಂ ಚ ಮಾನೇನ ಸಿದ್ಧ್ಯೇತ್ಕೇನೇತಿ ಪೃಚ್ಛ್ಯತೇ ॥೨೨॥**

**ತಸ್ಮಾತ್ಪೃಕ್ತಪ್ರಕಾರೇಣ ನೈವ ಸಿದ್ಧಿಃ ಕಥಂಚನ ।**

ಪಾರಮಾರ್ಥಿಕ, ವ್ಯಾವಹಾರಿಕ ಮತ್ತು ಪ್ರಾತಿಭಾಸಿಕ ಎಂಬುದಾಗಿ ಸತ್ ಪದಾರ್ಥಗಳಲ್ಲಿ ಮೂರು ವಿಧ ಎಂದು ನೀನು ಹೇಳುವುದು ಯಾವ ಪ್ರಮಾಣದಿಂದ ಸಿದ್ಧಿಸುತ್ತದೆ ಎಂದು ನಾವು ಕೇಳುತ್ತೇವೆ. ಸತ್ ತ್ರೈವಿಧ್ಯವು ಯಾವ ರೀತಿಯಿಂದಲೂ ಸಿದ್ಧಿಯಾಗದು. (ಹಿಂದೆ ಅಸತ್ತನ್ನು ಸಾಧಿಸಲು ನೀನು ಮಾಡಿದ ವ್ಯರ್ಥ ಪ್ರಯತ್ನದಂತೆಯೇ ಆಗುವುದು).

## ಸದಸದ್ವಿಲಕ್ಷಣತ್ವದ ನಿರಾಸೆ

**ವೈಲಕ್ಷಣ್ಯಂ ಸದಸತೋರಪ್ಯೇತೇನ ನಿಷಿದ್ಧ್ಯತೇ ॥೨೩॥**

ಈ ಜಗತ್ತು ಸದಸದ್ವಿಲಕ್ಷಣ ಎಂಬ ನಿನ್ನ ವಾದವೂ ಪ್ರಮಾಣಗಳಿಗೆ ವಿರೋಧವಾಗಿರುವುದರಿಂದ ನಿಷೇಧಿಸಲ್ಪಡುತ್ತದೆ.

**ವೈಲಕ್ಷಣ್ಯಂ ಸತಶ್ಚಾಪಿ ಸ್ವಯಂ ಸದ್ಭೇದವಾದಿನಃ ।**

**ಅಸತಶ್ಚಾಪಿ ವಿಶ್ವಸ್ಯ ತೇನಾನಿಷ್ಟಂ ಕಥಂ ಭವೇತ್ ॥೨೪॥**

**ಯದ್ಯುಚ್ಯತೇಽಪಿ ಸರ್ವಸ್ಮಾದಿತಿ ಸದ್ಭೇದಸಂಸ್ಥಿತಿಃ ।**

**ಸನ್ಮಾತ್ರತ್ವಂ ಬ್ರಹ್ಮಣೋಽಪಿ ತಸ್ಮಾತ್ತದಪಿ ನೋ ಭವೇತ್ ॥೨೫॥**

ಭಾವಸ್ವರೂಪವಾದ ಜಗತ್ತಿಗೆ (ಸತಃ) ಅಭಾವದ ದೆಶೆಯಿಂದ ಭೇದವೂ ಕೂಡ (ವೈಲಕ್ಷಣ್ಯಂ ಚಾಪಿ) ಭೇದಸತ್ಯತ್ವವನ್ನು ಹೇಳುವ ನಮಗೆ ಸ್ವಾಭಾವಿಕವಾದುದೇ ಆಗಿದೆ. ಅಭಾವರೂಪವಾದ ಜಗತ್ತಿಗೆ ಭಾವದ ದೆಶೆಯಿಂದ ವೈಲಕ್ಷಣ್ಯವೂ ಕೂಡ ನಮ್ಮ ಮತದಲ್ಲಿ ಸ್ವಾಭಾವಿಕವಾದುದೇ. ಅದರಿಂದ ನಮಗೆ ಅನಿಷ್ಟವೇನೂ ಆಗದು. ಎಲ್ಲ ಪದಾರ್ಥಗಳಿಂದಲೂ ವೈಲಕ್ಷಣ್ಯವು ಹೇಳಲ್ಪಟ್ಟರೆ, ಅನೇಕ ಸತ್ ಪದಾರ್ಥಗಳು ಹಾಗೂ ಅವುಗಳಿಗೆ

ಪರಸ್ಪರ ಭೇದವೂ ಪ್ರಾಪ್ತವಾಗುವುದರಿಂದ ನೀವೂ ಕೂಡ ಅನೇಕತ್ವವನ್ನು ಒಪ್ಪಲೇಬೇಕಾಗುವುದು. ಆಗ ಭೇದಸಿದ್ಧಾಂತವು ಚೆನ್ನಾಗಿಯೇ ಸಿದ್ಧಿಸುವುದು. ಸ್ವರೂಪಸತ್ವವು ಬ್ರಹ್ಮನಿಗೂ ಇರುವ ಕಾರಣ, ಜಗತ್ತಿಗೆ ಆ ಬ್ರಹ್ಮನಿಂದ ವೈಲಕ್ಷಣ್ಯವಿದೆ ಎನ್ನುವುದು ನಮಗೆ ಸಮ್ಮತವಾಗುವುದು. ಹೀಗೆ ಯಾವ ಪ್ರಕಾರದಿಂದ ನೋಡಿದರೂ ನಿಮಗೆ ಅಪಸಿದ್ಧಾಂತವು.

**ವಿವರಣೆ:**

ಪ್ರಾತಿಭಾಸಿಕ, ವ್ಯಾವಹಾರಿಕ ಮತ್ತು ಪಾರಮಾರ್ಥಿಕ ಎಂಬುದಾಗಿ ಸತ್ತುಗಳಲ್ಲಿ ಮೂರು ವಿಧವಿದೆ ಎನ್ನುವುದಕ್ಕೆ ಪ್ರಮಾಣವೇನೆಂದು ಪ್ರಶ್ನಿಸಬೇಕು. ಯಾವುದು ಎಂದಿಗೂ ಯಾವಪ್ರಕಾರದಿಂದಲೂ ಬಾಧಿತವಾಗುವುದಿಲ್ಲವೋ ಅದು ಸತ್ಯವು ಎಂಬುದಾಗಿ ಅದ್ವೈತಿಗಳೇ ಹೇಳುತ್ತಾರೆ. ಈ ಅರ್ಥದಲ್ಲಿ ವ್ಯಾವಹಾರಿಕ ಮತ್ತು ಪ್ರಾತಿಭಾಸಿಕ ಸತ್ಯಗಳಿಗೆ ಸತ್ಯತ್ವವೇ ಕೂಡುವುದಿಲ್ಲ. ಪಾರಮಾರ್ಥಿಕ ಸತ್ಯ ಎಂದರೆ, ಆತ್ಮ ಹೊರತಾದ ಪಾರಮಾರ್ಥಿಕ ಸತ್ಯವೋ ಅಥವಾ ಆತ್ಮರೂಪವಾದ ಪಾರಮಾರ್ಥಿಕ ಸತ್ಯವೋ ಎಂದು ಕೇಳಬೇಕು. ಮೊದಲನೆಯ ವಿಕಲ್ಪದಲ್ಲಿ ದ್ವೈತವು ಪ್ರಾಪ್ತವಾಗುವುದರಿಂದ ಅದನ್ನು ಒಪ್ಪುವ ಹಾಗಿಲ್ಲ. ಆತ್ಮರೂಪವಾದ ಪಾರಮಾರ್ಥಿಕ ಸತ್ಯವನ್ನು ಒಪ್ಪಿದರೆ ಬ್ರಹ್ಮನಿಗೆ ನಿರ್ವಿಶೇಷತ್ವವನ್ನು ಹೇಳುವ ಅದ್ವೈತಸಿದ್ಧಾಂತಕ್ಕೇ ವಿರೋಧ ಬರುತ್ತದೆ. ಆದ್ದರಿಂದ ಮೂರು ವಿಧದ ಸತ್ಯತ್ವವನ್ನು ಒಪ್ಪಿಕೊಳ್ಳುವ ಹಾಗಿಲ್ಲ. ಬ್ರಹ್ಮನ ಹೊರತಾದ ಸಮಸ್ತವೂ ಸತ್ಯವೂ ಅಲ್ಲ, ಅಸತ್ಯವೂ ಅಲ್ಲ, ಅನಿರ್ವಚನೀಯ ಅಥವಾ ಸದಸದ್ವಿಲಕ್ಷಣ ಎನ್ನುವದು ಯಾವ ರೀತಿಯಿಂದಲೂ ಕೂಡುವುದಿಲ್ಲ. 'ನೇಹ ನಾನಾಸ್ತಿ ಕಿಂಚನ' ಇತ್ಯಾದಿ ಶ್ರುತಿಗಳು ಜಗತ್ತು ಸದಸದ್ವಿಲಕ್ಷಣವಾದ ಅನಿರ್ವಚನೀಯವೆಂದು ಹೇಳುವುದಿಲ್ಲ. ಆದ್ದರಿಂದ ಸದಸದ್ವಿಲಕ್ಷಣತ್ವವನ್ನು ಯಾವ ಪ್ರಮಾಣದಿಂದಲೂ ಸಾಧಿಸಲು ಸಾಧ್ಯವಿಲ್ಲ.

### ಭ್ರಾಂತಿಯ ಸ್ವರೂಪ

**ಜ್ಞಾನಬಾಧ್ಯತ್ವಮಪಿ ತು ನ ಸಿದ್ಧಂ ಪ್ರತಿವಾದಿನಃ ।**
**ವಿಜ್ಞಾತಸ್ಯಾನ್ಯಥಾ ಸಮ್ಯಗ್ ವಿಜ್ಞಾನಂ ಹ್ಯೇವ ತನ್ಮತಮ್ ॥೨೬॥**

ಬೇರೆ ರೀತಿಯಾಗಿ ತಿಳಿಯಲ್ಪಟ್ಟದ್ದನ್ನು ಸರಿಯಾಗಿ ಅಂದರೆ ಯಥಾರೀತಿ

ತಿಳಿದುಕೊಳ್ಳುವುದೇ ನಮ್ಮ ರೀತಿಯಲ್ಲಿ ಜ್ಞಾನಬಾಧ್ಯತ್ವವು. ಅಂಥಹ ಬಾಧ್ಯತ್ವವು ನಮಗೆ ಸಮ್ಮತವು. ಅನ್ಯಥಾ ವಿಜ್ಞಾನವೇ ಭ್ರಾಂತಿ. ಅದಕ್ಕೆ ಸಮ್ಯಕ್ ವಿಜ್ಞಾನವೇ ಬಾಧವು. ಇಂಥಹ ಬಾಧ್ಯತ್ವವು ಶುಕ್ತಿರಜತಾದಿಗಳಲ್ಲಿ ನಮಗೆ ಒಪ್ಪಿಗೆಯೇ ಆಗಿದೆ. ಅದ್ವೈತಿಗಳು ಹೇಳುವ ಅನಿರ್ವಚನೀಯ ಅಥವಾ ಸದಸದ್ವಿಲಕ್ಷಣತ್ವ ರೂಪವಾದ ಜ್ಞಾನಬಾಧ್ಯತ್ವವು ನಮಗೆ ಸಿದ್ಧವಾಗಲಿಲ್ಲ.

## ××× ಪಂಚಾಖ್ಯಾತಿ ವಾದ

ಒಂದು ವಸ್ತುವು ಅದು ಹೇಗಿದೆಯೋ ಹಾಗೆಯೇ ತೋರಿದರೆ ಅಂತಹ ಜ್ಞಾನವು ಯಥಾರ್ಥವೆಂದೂ, ಪ್ರಮಾಣವೆಂದೂ ಕರೆಯುತ್ತೇವೆ. ಒಂದು ಅಧಿಷ್ಠಾನದಲ್ಲಿ ಇಲ್ಲದಿರುವ ವಸ್ತುವು ಇದ್ದಂತೆ ತೋರಿದಾಗ ಅದು ಭ್ರಾಂತಿ ಅಥವಾ ಭ್ರಮಾತ್ಮಕಜ್ಞಾನ. ಈ ಭ್ರಾಂತಿಯ ಸ್ವರೂಪದ ಬಗ್ಗೆ ದಾರ್ಶನಿಕರಲ್ಲಿ ಭಿನ್ನಾಭಿಪ್ರಾಯಗಳಿವೆ. ಸಿದ್ಧಾಂತಿಗಳು ಅಂಗೀಕರಿಸಿರುವ ಭ್ರಮಾತ್ಮಕಜ್ಞಾನವನ್ನು ಅಖ್ಯಾತಿವಾದಿಗಳೆಂದು ಪ್ರಸಿದ್ಧರಾದ ಪ್ರಾಭಾಕರ ಮೊದಲಾದ ಐದು ವಾದಿಗಳು ಒಪ್ಪುವುದಿಲ್ಲ. ಇವರು ಪ್ರತಿಪಾದಿಸಿರುವ ಪಂಚಾಖ್ಯಾತಿವಾದವನ್ನು ಶ್ರೀಮನ್ನ್ಯಾಯಸುಧಾದಲ್ಲಿ ಶ್ರೀಮಜ್ಜಯತೀರ್ಥರು ವಿಸ್ತಾರವಾಗಿ ವಿವೇಚನೆ ಮಾಡಿದ್ದಾರೆ. ಪಂಚಾಖ್ಯಾತಿವಾದ ಎಂದು ಪ್ರಸಿದ್ಧವಾಗಿರುವ ಭ್ರಾಂತಿಸ್ವರೂಪದ ವಿಮರ್ಶೆಯ ಸಾರಾಂಶವನ್ನು ಮಾತ್ರ ಇಲ್ಲಿ ನೀಡಲಾಗುವುದು.

೧. **ಪ್ರಾಭಾಕರರ** ಪ್ರಕಾರ ಎಲ್ಲ ಜ್ಞಾನವೂ ಯಥಾರ್ಥವಾದುದೇ ಆಗಿರುವುದು. ಇಲ್ಲದ ವಸ್ತುವು ಭ್ರಮೆಯಲ್ಲಿ ತೋರುತ್ತದೆಯೆಂಬುದನ್ನು ಅವರು ಒಪ್ಪುವುದಿಲ್ಲ. ಭ್ರಮಾತ್ಮಕವಾದ ಖ್ಯಾತಿ ಎಂಬುದಿಲ್ಲ ಎನ್ನುವ ಅವರು ಅಖ್ಯಾತಿವಾದಿಗಳು. ಅವರ ಮತದ ಪ್ರಕಾರ ಅಸತ್ತಿಗೆ ಪ್ರತೀತಿಯು ಕೂಡುವುದಿಲ್ಲ. ಇಂದ್ರಿಯ ಮೊದಲಾದ ಜ್ಞಾನಸಾಧನಗಳು ಯಥಾರ್ಥವಾದ ಜ್ಞಾನವನ್ನೇ ಉಂಟುಮಾಡುವ ಸ್ವಭಾವವುಳ್ಳದ್ದಾಗಿರುತ್ತವೆ. ಅವು ಭ್ರಮಾತ್ಮಕ ಜ್ಞಾನವನ್ನು ಉಂಟುಮಾಡಲಾರವು. ಹಾಗಾದರೆ ಕಪ್ಪೆಚಿಪ್ಪನ್ನು (ಶುಕ್ತಿಯನ್ನು) ದೂರದಿಂದ ಕಂಡಾಗ ಅಲ್ಲಿ ಅಸತ್ಯವಾದ ಬೆಳ್ಳಿಯು(ರಜತವು) ತೋರುವುದು ಭ್ರಮಾತ್ಮಕ ಜ್ಞಾನವಲ್ಲವೇ ಎಂದು ಪ್ರಶ್ನಿಸಿದರೆ ಅವರು ತಮ್ಮ ವಾದವನ್ನು

ಉಳಿಸಿಕೊಳ್ಳಲು ಬಹಳ ವಿಚಿತ್ರವಾದ ಉತ್ತರವನ್ನು ಕೊಡುತ್ತಾರೆ. ದೂರದಿಂದ ಶುಕ್ತಿಯನ್ನು ನೋಡಿದಾಗ ಮೊದಲಿಗೆ ಅದು ಒಂದು ಬೆಳ್ಳಗಿನ ಹೊಳೆಯುವ ವಸ್ತು ಎಂಬ ಸಾಮಾನ್ಯ ಜ್ಞಾನವುಂಟಾಗುತ್ತದೆ. ಕೂಡಲೇ ಅವನಿಗೆ ಬೆಳ್ಳಗೆ ಹೊಳೆಯುವ ಗುಣವುಳ್ಳ ರಜತದ ಸ್ಮರಣೆ ಉಂಟಾಗುತ್ತದೆ. ಶುಕ್ತಿಗೆ ಸಂಬಂಧಿಸಿದಂತೆ 'ಇದು' ಎಂಬ ಜ್ಞಾನ, 'ರಜತ' ಎಂಬ ಮತ್ತೊಂದು ಜ್ಞಾನ ಹೀಗೆ ಎರಡು ಪ್ರತ್ಯೇಕ ಜ್ಞಾನಗಳು ಉಂಟಾಗುತ್ತವೆ. ಆದರೆ ಅವನಿಗೆ ಎರಡು ರೀತಿಯ ಜ್ಞಾನಗಳಿಗೆ ಇರುವ ಪ್ರತ್ಯೇಕತೆಯು ತಿಳಿಯುವುದಿಲ್ಲ. ಇದು ಎಂಬ ಜ್ಞಾನವೂ ಅಸತ್ಯವಲ್ಲ, ಬೆಳ್ಳಿ ಎಂಬ ಜ್ಞಾನವೂ ಅಸತ್ಯವಲ್ಲ. ಎರಡು ಜ್ಞಾನಗಳೂ ಯಥಾರ್ಥವೇ. ಹತ್ತಿರ ಹೋಗಿ ನೋಡಿದಾಗ ಅಲ್ಲಿರುವ ಶುಕ್ತಿಯೂ ತನ್ನ ಸ್ಮರಣೆಗೆ ಬಂದ ರಜತವೂ ಬೇರೆ ಬೇರೆ ಎಂಬ ವಾಸ್ತವತೆ ಅರಿವಾಗುತ್ತದೆ. ಆದ್ದರಿಂದ ಶುಕ್ತಿಯನ್ನು ನೋಡಿ ರಜತ ಎಂದು ತಿಳಿಯುವುದು ಭ್ರಮಾತ್ಮಕಜ್ಞಾನ ಎನಿಸುವುದಿಲ್ಲ.

ಪ್ರಾಭಾಕರರ ವಿವರಣೆಯು ನಮ್ಮ ಅನುಭವಕ್ಕೆ ವಿರುದ್ಧವಾಗಿರುವ ತರ್ಕದ ಆಧಾರದ ಮೇಲೆ ಮಂಡಿತವಾಗಿದೆ. ಯಾವುದೇ ವಸ್ತುವನ್ನು ನೋಡಿದಾಗ ಎರಡು ಯಥಾರ್ಥವಾದ ವಿಭಿನ್ನ ಜ್ಞಾನಗಳು ಉಂಟಾಗುವುದು ನಮಗೆ ಎಲ್ಲೂ ಕಂಡಿಲ್ಲ. ಶುಕ್ತಿ-ರಜತದಲ್ಲಿಯೂ ಒಂದೇ ಕಾಲಕ್ಕೆ ಒಂದೇ ಜ್ಞಾನವುಂಟಾಗುವುದು. ಮೊದಲಿಗೆ ಇದು ಬೆಳ್ಳಿ ಎಂದೂ ಅನಂತರ ಸಮೀಪದಿಂದ ನೋಡಿದಾಗ ಇದು ಕಪ್ಪೆಚಿಪ್ಪೆಂದೂ ಜ್ಞಾನವುಂಟಾಗಿ, ಮೊದಲು ನಾನು ಬೆಳ್ಳಿಯೆಂದು ತಿಳಿದದ್ದು ಕೇವಲ ಭ್ರಮೆ ಎಂಬ ಜ್ಞಾನ ಉಂಟಾಗುತ್ತದೆ. ಬಹಳ ಹೋಲಿಕೆಯಿರುವುದರಿಂದ ಕಪ್ಪೆಚಿಪ್ಪು ದೂರದಿಂದ ನಿಜವಾದ ಬೆಳ್ಳಿ ಎಂದೇ ಭ್ರಮೆಯುಂಟಾಗುವುದು. ವಾಸ್ತವ ಬೆಳ್ಳಿಯಂತೆ ತೋರದೆ ಕೇವಲ ಬೆಳ್ಳಿಯ ಸ್ಮರಣೆಯಷ್ಟೇ ಬಂದರೆ, ಕೇವಲ ಸ್ಮರಣೆಯಲ್ಲಿದ್ದು ಎದುರಿಗೆ ಇಲ್ಲದಿರುವ ವಸ್ತುವಿನ ಬಗ್ಗೆ ಯಾವ ಮೂರ್ಖನಿಗೂ ಪ್ರವೃತ್ತಿ ಹುಟ್ಟುವುದಿಲ್ಲ. ಮೊದಲು ಕಂಡ ಬೆಳ್ಳಿ ಎಂಬ ಜ್ಞಾನಕ್ಕೆ ಅನಂತರ ಅದು ಬೆಳ್ಳಿಯಲ್ಲ ಎಂಬ ಬಾಧಬರುವುದರಿಂದ ಆ ಜ್ಞಾನವು ಯಥಾರ್ಥವಾಗಿರಲು ಸಾಧ್ಯವಿಲ್ಲ. ಆದ್ದರಿಂದ ಕಪ್ಪೆಚಿಪ್ಪಿನಲ್ಲಿ

ತೋರಿದ ಬೆಳ್ಳಿಯು ಕೇವಲ ಭ್ರಮೆ ಎಂಬುದನ್ನು ಒಪ್ಪಿಕೊಳ್ಳದೇ ವಿಧಿಯಿಲ್ಲ.

೨. **ರಾಮಾನುಜೀಯರು** ಅಯಥಾರ್ಥಜ್ಞಾನವನ್ನು ಒಪ್ಪುವುದಿಲ್ಲ. ಅವರ ಪ್ರಕಾರವು ಎಲ್ಲ ಜ್ಞಾನವೂ ಯಥಾರ್ಥವೇ. ಭ್ರಮೆಯಲ್ಲಿ 'ಇದಂ ರಜತಂ' ಎಂಬುದಾಗಿ ಶುಕ್ತಿಯಲ್ಲಿ ಕಾಣುವ ರಜತವು ಅಸತ್ಯವಲ್ಲ. ಏಕೆಂದರೆ 'ತ್ರಿವೃತ್ಕರಣ' ಪ್ರಕ್ರಿಯೆಯನ್ನು ಹೇಳುವ ಶ್ರುತಿಗಳ ಪ್ರಕಾರ ಸೃಷ್ಟಿಯ ಆದಿಯಲ್ಲಿ ಪೃಥಿವೀ, ನೀರು ಮತ್ತು ತೇಜಸ್ಸು ಈ ಮೂರು ಮೂಲಭೂತ ವಸ್ತುಗಳು, ಉಪಲಕ್ಷಣದಿಂದ ಗಾಳಿ ಮತ್ತು ಆಕಾಶವನ್ನೂ ಸೇರಿಸಿದರೆ ಪಂಚಮಹಾಭೂತಗಳು ಮಿಶ್ರಣಗೊಂಡು ನಾನಾ ರೀತಿಯ ವಿಭಿನ್ನ ಪದಾರ್ಥಗಳು ನಿರ್ಮಾಣಗೊಳ್ಳುವುವು. ಎಲ್ಲ ವಸ್ತುಗಳಲ್ಲಿರುವ ಮೂಲಭೂತ ವಸ್ತುಗಳು ಒಂದೇ ಆಗಿವೆ. ಆದರೆ ಅವುಗಳ ಮಿಶ್ರಣವಾಗಿರುವ ಅಂಶಗಳಲ್ಲಿ ಮಾತ್ರ ಭೇದವಿದೆ. ಆದ್ದರಿಂದ ಯಾವುದೇ ವಸ್ತುವನ್ನು ತೆಗೆದುಕೊಂಡರೂ ಅದರಲ್ಲಿ ಮಿಕ್ಕ ಎಲ್ಲ ವಸ್ತುಗಳ ಅಂಶವೂ ಇರುವುದು. ಯಾವುದರಲ್ಲಿ ಆ ವಸ್ತುವಿನ ಅತಿ ಹೆಚ್ಚು ಅಂಶವಿರುತ್ತದೋ ಅದು ಆ ವಸ್ತುವಾಗಿ ಗುರುತಿಸಲ್ಪಡುತ್ತದೆ. ಕೆಲವು ಸಂದರ್ಭಗಳಲ್ಲಿ ವಸ್ತುವಿನಲ್ಲಿರುವ ಅದರ ಹೆಚ್ಚಿನ ಭಾಗ ಕಾಣದೆ ಸೂಕ್ಷ್ಮಭಾಗ ಮಾತ್ರ ಕಂಡಾಗ ಅದನ್ನು ಬೇರೆ ವಸ್ತುವೆಂದು ಭ್ರಮಿಸುತ್ತೇವೆ. ಇದೇ ಪ್ರಕಾರವಾಗಿ ಶುಕ್ತಿಯಲ್ಲಿಯೂ ರಜತದ ಅಂಶವಿರುವುದರಿಂದಲೇ ನಾವು ದೂರದಿಂದ ಶುಕ್ತಿಯನ್ನು ನೋಡಿದಾಗ ಅದು ರಜತವೆಂದು ಭಾವಿಸುತ್ತೇವೆ. ಕಪ್ಪೆಚಿಪ್ಪಿನಲ್ಲಿ ಅದರ ಅಂಶ ಅತ್ಯಂತ ಹೆಚ್ಚಾಗಿದ್ದು, ಬೆಳ್ಳಿ ಮುಂತಾದ ಇತರ ವಸ್ತುಗಳ ಅಂಶ ಬಹಳ ಕಡಿಮೆ ಇರುತ್ತದೆ. ಇಂದ್ರಿಯ ಮತ್ತಿತರ ದೋಷಗಳಿಂದಾಗಿ ಹೆಚ್ಚಿನ ಭಾಗದ ವಸ್ತು ತೋರದೆ ಅದರಲ್ಲಿರುವ ಕಡಿಮೆ ಅಂಶದ ವಸ್ತು ಮಾತ್ರ ನಮಗೆ ತೋರುವುದರಿಂದ ಅದು ಭ್ರಮೆಯೆನಿಸುವುದು. ಆ ಭ್ರಮೆಯಲ್ಲಿಯೂ ವಾಸ್ತವವಾಗಿ ಶುಕ್ತಿಯಲ್ಲಿರುವ ರಜತಾಂಶವೇ ನಮಗೆ ತೋರುವುದಲ್ಲದೆ ಅಲ್ಲಿಲ್ಲದ ವಸ್ತುವು ತೋರುವುದಿಲ್ಲ. ರಜತವೆಂದು ತಿಳಿದು ಅದನ್ನು ಹೊಂದಲು ಪ್ರವೃತ್ತರಾಗಿ, ಸಮೀಪ ಹೋಗಿ ನೋಡಿದಾಗ ವಸ್ತುವಿನ ಹೆಚ್ಚಿನ ಭಾಗವಾದ ಶುಕ್ತಿಯೇ ತೋರುವುದರಿಂದ, ನಾವು ಹಿಂದೆ ನೋಡಿದ್ದು ಅತ್ಯಲ್ಪ

ಭಾಗವಾದ ನಮಗೆ ಪ್ರಯೋಜನಕ್ಕೆ ಬಾರದ ರಜತ ಎಂಬುದು ಮನವರಿಕೆಯಾಗಿ ನಮ್ಮ ಜ್ಞಾನದ ದೋಷವನ್ನು ಅರಿತುಕೊಂಡು ಹಿಂತಿರುಗುತ್ತೇವೆ. ಆದ್ದರಿಂದ ಶುಕ್ತಿಯಲ್ಲಿ 'ಇದಂ ರಜತಂ' ಎಂಬ ಜ್ಞಾನ ಯಥಾರ್ಥವೇ ಹೊರತು ಅದು ಭ್ರಮಾತ್ಮಕಜ್ಞಾನವಲ್ಲ.

ಎಲ್ಲ ವಸ್ತುಗಳೂ ಪಂಚಮಹಾಭೂತಗಳಿಂದಲೇ ಆಗಿವೆಯೆಂದು ಉಪನಿಷತ್ತುಗಳು ಹೇಳುವುದನ್ನು ನಾವು ಒಪ್ಪುತ್ತೇವೆ. ಹಾಗೆಂದ ಮಾತ್ರಕ್ಕೆ ಎಲ್ಲ ವಸ್ತುಗಳಲ್ಲೂ ಮಿಕ್ಕ ಎಲ್ಲ ವಸ್ತುಗಳ ಅಂಶವೂ ಇರುವುದೆಂಬುದಾಗಿ ನಮ್ಮ ಅನುಭವಕ್ಕೆ ವಿರುದ್ಧವಾಗಿ ಸಾಧಿಸುವುದು ಒಪ್ಪತಕ್ಕದ್ದಲ್ಲ. ಕಪ್ಪೆಚಿಪ್ಪಿನಲ್ಲಿ ಬೇರೆ ಎಲ್ಲ ವಸ್ತುಗಳೂ ಇರುವುದಾದರೆ, ಅಲ್ಲಿ ಬೆಳ್ಳಿಯೇ ಏಕೆ ಕಾಣಬೇಕು, ಕಬ್ಬಿಣ ಮತ್ತಿತರ ವಸ್ತುಗಳು ಏಕೆ ಭಾಸವಾಗಬಾರದು? ಬೆಳ್ಳಿಗೂ ಕಪ್ಪೆಚಿಪ್ಪಿಗೂ ಹೊಲಿಕೆ ಇರುವುದರಿಂದ ಅಲ್ಲಿ ಬೆಳ್ಳಿ ಕಾಣುತ್ತದೆ ಎನ್ನುವುದಾದರೆ, ಇದೇ ರೀತಿ ಹೋಲಿಕೆಯಿಂದಾಗಿ ನಾವು ಹಗ್ಗವನ್ನು ನೋಡಿದಾಗ ಅದು ಹಾವು ಎಂಬ ಭ್ರಮೆಗೊಳಗಾಗುತ್ತೇವೆ. ಈ ಭ್ರಮೆಗೆ ಹಗ್ಗದಲ್ಲಿರುವ ಹಾವಿನ ಅಂಶವೇ ಕಾರಣ ಎಂದು ಹೇಳುವುದು ಮೂರ್ಖತನದ ಪರಮಾವಧಿಯಾಗುವುದು. ಭ್ರಮೆಯಲ್ಲಿ ಹಗ್ಗದಲ್ಲಿ ಇಲ್ಲದ ಹಾವು ನಮಗೆ ಕಂಡಿತು ಎಂದು ಒಪ್ಪಿಕೊಳ್ಳಬೇಕೇ ಹೊರತು, ಸತ್ಯವಾದ ಆದರೆ ಅತ್ಯಲ್ಪ ಪ್ರಮಾಣದಲ್ಲಿರುವ ಹಾವಿನ ಅಂಶವು ಅಲ್ಲಿ ಕಂಡಿತು ಎಂದು ವಾದಿಸುವುದನ್ನು ಯಾವ ಪ್ರಜ್ಞಾವಂತನೂ ಒಪ್ಪಲಾರ. ಆದುದರಿಂದ ಭ್ರಮೆಯಲ್ಲಿ ಅಸತ್ಯವಾದ ವಸ್ತುವು ತೋರುವುದು ಎಂಬ ವಿಚಾರವನ್ನು ಒಪ್ಪದೇ ವಿಧಿಯಿಲ್ಲ.

೩. **ತಾರ್ಕಿಕರು** (ನೈಯಾಯಿಕರು ಮತ್ತು ವೈಶೇಷಿಕರು) ಅಸತ್ತಿಗೆ ಪ್ರತೀತಿಯನ್ನು ಒಪ್ಪುವುದಿಲ್ಲ. ಶುಕ್ತಿಯನ್ನು ನೋಡಿದಾಗ ನಮಗೆ ಉಂಟಾಗುವ ಇದಂ ರಜತಂ ಎಂಬ ಭ್ರಮೆಯಲ್ಲಿ ಕಪ್ಪೆಚಿಪ್ಪಿನಲ್ಲಿ ಬೆಳ್ಳಿ ಇಲ್ಲದಿದ್ದರೂ ನಾವು ಬೇರೆ ಕಡೆ ನೋಡಿದ್ದ ಬೆಳ್ಳಿಯೇ ಅಲ್ಲಿ ಕಾಣುತ್ತದೆ. ಅಸತ್ಯವಾದ ವಸ್ತುವು ಕಾಣುವುದಿಲ್ಲ. ಭ್ರಮೆಯೆಂದರೆ ಅಸತ್ಯದ ದರ್ಶನವಲ್ಲ, ವಸ್ತುವಿನ ಅನ್ಯಥಾದರ್ಶನ. ಬೇರೆ ಕಡೆಯಲ್ಲಿ ಇರುವ ಬೆಳ್ಳಿಗೂ

ಎದುರಿಗಿರುವ ಕಪ್ಪೆಚಿಪ್ಪಿಗೂ ಇರುವ ಭೇದವು ತಿಳಿಯದಿರುವುದರಿಂದ ನಾವು ಅದನ್ನು ಬೆಳ್ಳಿಯೆಂದು ಭಾವಿಸುತ್ತೇವೆ. ಅಲ್ಲಿರುವ ಕಪ್ಪೆಚಿಪ್ಪು ಹಾಗೂ ಅಲ್ಲಿ ಕಂಡ ಬೇರೆ ಕಡೆಯಿರುವ ಬೆಳ್ಳಿ ಇವೆರಡೂ ಸತ್ಪದಾರ್ಥಗಳೇ. ಅಂತೂ ಭ್ರಮೆಯಲ್ಲಿ ಅಸತ್ಯವಾದ ವಸ್ತುವಿನ ಜ್ಞಾನ ಉಂಟಾಗುವುದಿಲ್ಲ. ಅಸತ್ತಿಗೆ ಪ್ರತೀತಿಯನ್ನು ಒಪ್ಪದ ಇವರ ವಾದವು ಪ್ರಾಭಾಕರರ ವಾದಕ್ಕಿಂತ ಬೇರೆಯೇನಲ್ಲ, ಆದರ ಇನ್ನೊಂದು ರೀತಿಯ ನಿರೂಪಣೆಯಷ್ಟೆ.

ಎದುರಿಗಿರುವ ಕಪ್ಪೆಚಿಪ್ಪಿಗೂ, ಅಲ್ಲಿ ಕಾಣುವ ಬೆಳ್ಳಿಗೂ ತಾದಾತ್ಮ್ಯ ಅಥವಾ ಅಭೇದ ತೋರಿದಾಗ ಮಾತ್ರ 'ಇದಂ ರಜತಂ' ಎಂಬ ಭ್ರಮಾತ್ಮಕಜ್ಞಾನ ಉಂಟಾಗುವುದು. ಅಲ್ಲಿ ಕಂಡ ಅಭೇದವು ಅಸತ್ಯವೆನ್ನುವುದರಲ್ಲಿ ಯಾರಿಗೂ ವಿವಾದವಲ್ಲ. ಅಭೇದವು ಅಸತ್ಯ ಎಂದು ಒಪ್ಪಿದರೆ ಅದಕ್ಕೆ ಕಾರಣವಾದ ಬೆಳ್ಳಿಯೂ ಅಸತ್ಯವೇ ಆಗಬೇಕಾಗುತ್ತದೆ. ಅಂದಮೇಲೆ ಅಯಥಾರ್ಥಜ್ಞಾನವೇ ಭ್ರಮೆಗೆ ಕಾರಣ ಎಂದು ಒಪ್ಪಿಕೊಳ್ಳಬೇಕಾದ್ದು ಅನಿವಾರ್ಯ. ಈ ಹಿಂದೆ ಬೆಳ್ಳಿಯನ್ನು ನೋಡಿ ಪರಿಚಯವಿದ್ದವನಿಗೆ ಶುಕ್ತಿಯಲ್ಲಿ ಅಲ್ಲಿಲ್ಲದ ಬೆಳ್ಳಿಯ ಭ್ರಮೆ ಬರವುದಲ್ಲದೆ, ಬೆಳ್ಳಿಯ ಪರಿಚಯವಿಲ್ಲದವನಿಗೆ ಬರಲಾರದು. ಶುಕ್ತಿಯಲ್ಲಿ ಕಂಡ ಬೆಳ್ಳಿಯು ಬೇರೆ ಕಡೆ ಇರಲೇ ಬೇಕೆಂದೇನಿಲ್ಲ, ಆದರ ಸಂಸ್ಕಾರವಿದ್ದರೆ ಸಾಕು. ಅಸತ್ಯವಾದ ವಸ್ತುವೇ ಇಂದ್ರಿಯ ಮತ್ತಿತರ ದೋಷ ಹಾಗೂ ವಸ್ತುವಿನ ಸಂಸ್ಕಾರಗಳಿಂದಾಗಿ ನಿಜವಾದ ವಸ್ತುವಿನಂತೆ ತೋರುತ್ತದೆ. ಅಸತ್ಯಕ್ಕೂ ಪ್ರತೀತಿಯುಂಟು ಎಂಬುದೇ ಸರಿಯಾದ ಸಿದ್ಧಾಂತ.

೪. ಬೌದ್ಧಮತದ ಒಂದು ಪ್ರಭೇದಕ್ಕೆ ಸೇರಿದ ವಿಜ್ಞಾನವಾದಿಗಳು ಭ್ರಮೆಗೆ ಇನ್ನೊಂದು ರೀತಿಯ ವ್ಯಾಖ್ಯಾನವನ್ನು ಕೊಡುತ್ತಾರೆ. ಅವರು ಹೇಳುವಂತೆ, ಶುಕ್ತಿಯಲ್ಲಿ ಕಂಡ ಬೆಳ್ಳಿಯು ನಮ್ಮ ಎದುರಿಗೂ ಇಲ್ಲ, ದೂರದಲ್ಲಿಯೂ ಇಲ್ಲ. ಶುಕ್ತಿಯನ್ನು ನೋಡಿದಾಗ ನಮ್ಮ ಮನಸ್ಸಿನಲ್ಲಿ ಬೆಳ್ಳಿಯ ಜ್ಞಾನ ಮೂಡುವುದರಿಂದ ಅದೇ ಬಾಹ್ಯದಲ್ಲಿ ಬೆಳ್ಳಿಯಾಗಿ ತೋರುತ್ತದೆ. ಇಲ್ಲದ ಯಾವ ವಸ್ತುವಿನ ಜ್ಞಾನವೂ ಆಗುವುದಿಲ್ಲ. ಅಂತರಂಗದಲ್ಲಿರುವ ಬೆಳ್ಳಿಯನ್ನು ಬಾಹ್ಯದಲ್ಲಿರುವ ಶುಕ್ತಿಯಲ್ಲಿ ಭಾವಿಸುವುದೇ ಭ್ರಮೆ.

ಇಲ್ಲದ ವಸ್ತುವು ಪ್ರತೀತಿಗೆ ವಿಷಯವಾಗದು ಎಂಬ ಪೂರ್ವಾಗ್ರಹದಿಂದ ಅವರು ಮಂಡಿಸುವ ಈ ರೀತಿಯ ವಾದ ಅಂಗೀಕಾರ್ಹವಲ್ಲ. ಆಂತರಿಕ ವಸ್ತುವಾದ ಬೆಳ್ಳಿಗೆ ಎಂದೂ ಇಲ್ಲದ ಬಾಹ್ಯತೆ ಹೇಗೆ ಉಂಟಾಗಲು ಸಾಧ್ಯ? ಈ ರೀತಿಯ ಅಸತ್ಯವನ್ನು ಒಪ್ಪುವ ಬದಲಿಗೆ ಅಸತ್ಯವಾದ ಬೆಳ್ಳಿಯೇ ಭ್ರಮೆಯಲ್ಲಿ ಕಾಣುತ್ತದೆ ಎಂಬ ಸತ್ಯವಾದ ಸಂಗತಿಯನ್ನು ಒಪ್ಪುವುದೇ ಸೂಕ್ತ.

ಬೌದ್ಧರ ಇನ್ನೊಂದು ಪ್ರಭೇದವಾದ **ಶೂನ್ಯವಾದಿಗಳು** ಭ್ರಮೆಯಲ್ಲಿ ಅಸತ್ಯವಾದ ಬೆಳ್ಳಿಯೇ ತೋರುತ್ತದೆ ಎಂಬ ವಾಸ್ತವ ಸಂಗತಿಯನ್ನು ಒಪ್ಪುತ್ತಾರೆ. ಆದರೆ ಭ್ರಮೆಯಲ್ಲಿ ತೋರುವುದೆಲ್ಲವೂ ಅಸತ್ಯವೇ ಎಂಬುದಾಗಿ ಹೇಳುವ ಅತಿರೇಕವನ್ನು ತಲುಪಿದ್ದಾರೆ.

ಅಲ್ಲಿ ಕಾಣುವ ಬೆಳ್ಳಿ ಮಾತ್ರ ಅಸತ್ಯ ಹೊರತು, ಕಪ್ಪೆಚಿಪ್ಪು ಅದಕ್ಕೆ ಆಧಾರವಾದ ನೆಲ ಮುಂತಾದವು ಅಸತ್ಯವಾಗಿರಲು ಹೇಗೆ ಸಾಧ್ಯ? ವಸ್ತುವೇ ಇಲ್ಲದಿದ್ದರೆ ಇಂದ್ರಿಯಗಳೊಂದಿಗೆ ಸಂಪರ್ಕ ಹೇಗೆ ಸಾಧ್ಯ? ವಸ್ತುವಿಗೂ ಇಂದ್ರಿಯಕ್ಕೂ ಸಂಬಂಧವಾಗದೇ ಜ್ಞಾನ ಬರುವುದು ಸಾಧ್ಯವಿಲ್ಲ. ಈ ದೃಷ್ಟಿಯಿಂದ ಶೂನ್ಯವಾದಿಗಳ ಸಿದ್ಧಾಂತವನ್ನು ಒಪ್ಪಲು ಸಾಧ್ಯವಿಲ್ಲ.

೫. **ಮಾಯಾವಾದಿಗಳು** ಹೇಳುವ ಪ್ರಕಾರ, ಭ್ರಮೆಯಲ್ಲಿ ತೋರುವ ಬೆಳ್ಳಿಯು ಸತ್ಯವೂ ಅಲ್ಲ, ಅಸತ್ಯವೂ ಅಲ್ಲ. ಅದೊಂದು ಅಜ್ಞಾನದ ಕೂಸು ಎನಿಸಿರುವ ಅನಿರ್ವಚನೀಯ ವಸ್ತು.

ಸದಸದ್ವಿಲಕ್ಷಣರೂಪವಾದ ಅನಿರ್ವಚನೀಯ ವಸ್ತುವಿದೆ ಎಂಬುದಕ್ಕೆ ಯಾವ ಪ್ರಮಾಣವೂ ಇಲ್ಲ. ಶುಕ್ತಿಯನ್ನು ನೋಡಿದಾಗ ಅದು ಅನಿರ್ವಚನೀಯ ರಜತ ಎಂಬ ಭ್ರಮೆಯು ಮೊದಲಿಗೆ ಬಂದು, ಅನಂತರ ಅದು ಅನಿರ್ವಚನೀಯ ವಸ್ತುವಲ್ಲ ಎಂಬ ಬಾಧಜ್ಞಾನವೂ ಬರಬೇಕಾದೀತು. 'ಇದಂ ರಜತಂ' ಎಂಬ ಭ್ರಮೆಯೂ 'ನೇದಂ ರಜತಂ' ಎಂಬ ಬಾಧಜ್ಞಾನವೂ ಬಾರದೆ ಹೋಗಬೇಕಾದೀತು. ಆದರೆ ಭ್ರಮೆಯಲ್ಲಿ ನಮಗೆ ಅದು ರಜತವೆಂಬ ಸತ್ಯವಸ್ತುವಾಗಿಯೇ ತೋರುವುದು. ಅದು ರಜತವಲ್ಲ ಎಂಬ ಬಾಧಜ್ಞಾನ ಬಂದಮೇಲೆ ಭ್ರಮೆಯಲ್ಲಿ ಕಂಡ ಬೆಳ್ಳಿಯು ಅಸತ್ಯ ಎಂಬ ಜ್ಞಾನವಾಗುವುದು. ಏಕಕಾಲದಲ್ಲಿ ಒಂದು ವಸ್ತುವು ಸತ್ಯವೂ ಅಲ್ಲ, ಅಸತ್ಯವೂ

ಅಲ್ಲ ಅನಿರ್ವಚನೀಯ ಎಂಬ ಜ್ಞಾನ ಬರಲು ಸಾಧ್ಯವೇ ಇಲ್ಲ. ಒಂದೋ ಅದು ಸತ್ಯವಾಗಿರಬೇಕು, ಇಲ್ಲ ಅಸತ್ಯವಾಗಿರಬೇಕು. ಆದ್ದರಿಂದ ಭ್ರಮೆಯಲ್ಲಿ ಅಸತ್ಯವಾದ ವಸ್ತುವಿನ ಜ್ಞಾನವಾಗುವುದು ಎಂಬುದನ್ನು ಒಪ್ಪಲೇಬೇಕು.

## ಅಸತ್ತಿಗೂ ಪ್ರತೀತಿ ಉಂಟು

ಅಸತ್ತಿಗೆ ಪ್ರತೀತಿಯಿಲ್ಲ, ಸದಸದ್ವಿಲಕ್ಷಣತ್ವಕ್ಕಾದರೋ ಪ್ರತೀತಿಯುಂಟು ಎಂಬ ವಾದವನ್ನು ಮುಂದಿನ ಶ್ಲೋಕಗಳಲ್ಲಿ ನಿರಾಕರಿಸುತ್ತಾರೆ.

**ಅಸದ್ವಿಲಕ್ಷಣಜ್ಞಪ್ತ್ಯೈ ಜ್ಞಾತವ್ಯಮಸದೇವ ಹಿ ।**
**ತಸ್ಮಾದಸತ್ಪ್ರತೀತಿಶ್ಚ ಕಥಂ ತೇನ ನಿವಾರ್ಯತೇ ॥೨೭॥**
**ಅನ್ಯಥಾತ್ವಮಸತ್ತಸ್ಮಾದ್ಭ್ರಾಂತಾವೇವ ಪ್ರತೀಯತೇ ।**
**ಸತ್ತ್ವಸ್ಯಾಸತ ಏವಂ ಹಿ ಸ್ವೀಕಾರ್ಯೈವ ಪ್ರತೀತತಾ ॥೨೮॥**
**ತಸ್ಯಾನಿರ್ವಾಚನೀಯತ್ವೇ ಸ್ಯಾದೇವ ಹ್ಯನವಸ್ಥಿತಿಃ ।**

ಈ ವಸ್ತುವು ಅಸತ್ತಿಗಿಂತ ಭಿನ್ನವಾಗಿದೆ ಎಂದು ಜ್ಞಾತವಾಗಬೇಕಾದರೆ ಅದಕ್ಕೆ ಮುಂಚೆ ಅಸತ್ತಿನ ಜ್ಞಾನವಾಗಿರಬೇಕು. ಆದಕಾರಣ ಶುಕ್ತಿರಜತಾದಿಗಳು ಅಸತ್ತಿಗಿಂತ ವಿಲಕ್ಷಣ ಎಂದು ತಿಳಿಯುವುದರಿಂದ ಅಸತ್ತಿನ ಜ್ಞಾನವು ಹೇಗೆ ತಾನೇ ನಿವಾರಿಸಲ್ಪಡುತ್ತದೆ?

ಶುಕ್ತಿಯಲ್ಲಿ ರಜತವನ್ನು ತಿಳಿಯುವ ಅನ್ಯಥಾಜ್ಞಾನವು ಅಸತ್ತಾದ್ದರಿಂದಲೇ ಭ್ರಾಂತಿಯಲ್ಲಿ ಮಾತ್ರ ಅದು ತೋರುತ್ತದೆ. ಅಪರೋಕ್ಷವಾಗಿ ಸತ್ತೆಂದು ತೋರುತ್ತದೆ. ಹಾಗೆ ಸತ್ತೆಂದು ತೋರದಿದ್ದಲ್ಲಿ ವ್ಯವಹಾರವೇ ಕೂಡುವುದಿಲ್ಲ. ಹೇಗೆ ಅನ್ಯಥಾಜ್ಞಾನಕ್ಕೆ ಅಪರೋಕ್ಷವಾಗಿ ಸತ್ತೆಂದು ಪ್ರತೀತಿಯು ಸ್ವೀಕರಿಸತಕ್ಕುದೋ ಹಾಗೆಯೇ ಅಸತ್ತಾದ ತತ್ವಕ್ಕೂ ಪ್ರತೀತಿಯು ಸ್ವೀಕರಿಸತಕ್ಕುದೇ.

ಶುಕ್ತಿರಜತಜ್ಞಾನಕ್ಕೆ ಅನಿರ್ವಚನೀಯತ್ವವನ್ನು ಒಪ್ಪಿಕೊಂಡರೆ ಅನವಸ್ಥಿತಿ ಉಂಟಾಗುತ್ತದೆ. ಅಂದರೆ, ಒಂದು ಅನಿರ್ವಚನೀಯ ವಸ್ತುವನ್ನು ದೃಢೀಕರಿಸಲು ಇನ್ನೊಂದು ಅನಿರ್ವಚನೀಯವಸ್ತು ಅದಕ್ಕೆ ಮತ್ತೊಂದು ಹೀಗೆ ಮುಗಿಯದ ಪರಂಪರೆ ಉಂಟಾಗುತ್ತದೆ. ಅಸತ್ತಿಗೆ ಪ್ರತೀತಿಯನ್ನು ಒಪ್ಪಿಕೊಳ್ಳುವುದರಿಂದ ಈ ಅನವಸ್ಥಾವನ್ನು ತಪ್ಪಿಸಬಹುದು.

## ಅಜ್ಞಾನವಾದ

ಹೀಗೆ ಬಂಧವು ಮಿಥ್ಯಾ ಎಂಬ ಪರರ ವಾದವನ್ನು ನಿರಾಕರಿಸಿದರು. ಈಗ ಪರರ ಮತದಲ್ಲಿ ಅಜ್ಞಾನವೇ ಕೂಡುವುದಿಲ್ಲವಾದ್ದರಿಂದ ಅವರ ಮತದ ಪ್ರಕಾರ ಶಾಸ್ತ್ರಗಳಿಗೆ ವಿಷಯ ಪ್ರಯೋಜನಾದಿಗಳೂ ಕೂಡುವುದಿಲ್ಲ ಎಂದು ಹೇಳುತ್ತಾರೆ.

**ನಿರ್ವಿಶೇಷೇ ಸ್ವಯಂ ಭಾತೇ ಕಿಮಜ್ಞಾನಾವೃತಂ ಭವೇತ್ ॥೨೯॥**
**ಮಿಥ್ಯಾವಿಶೇಷೋಽಪ್ಯಜ್ಞಾನಸಿದ್ಧಿಮೇವ ಹ್ಯಪೇಕ್ಷತೇ ।**
**ನ ಚಾವರಣಮಜ್ಞಾನಮಸತ್ಯೇ ತೇನ ಚೇಷ್ಯತೇ ॥೩೦॥**
**ಅಪ್ರಕಾಶಸ್ವರೂಪತ್ವಾಜ್ಜಡೇಽಜ್ಞಾನಂ ನ ಮನ್ಯತೇ ।**
**ಅಜ್ಞಾನಾಭಾವತಃ ಶಾಸ್ತ್ರಂ ಸರ್ವಂ ವ್ಯರ್ಥೀಭವಿಷ್ಯತಿ ॥೩೧॥**
**ಅಜ್ಞಾನಸ್ಯ ಚ ಮಿಥ್ಯಾತ್ವಮಜ್ಞಾನಾದಿತಿ ಕಲ್ಪನೇ ।**
**ಅನವಸ್ಥಿತಿಸ್ತಥಾ ಚ ಸ್ಯಾದನ್ಯೋನ್ಯಾಶ್ರಯತಾಽಥವಾ ॥೩೨॥**
**ಸ್ವಭಾವಾಜ್ಞಾನವಾದಸ್ಯ ನಿರ್ದೋಷತ್ವಾನ್ನ ತದ್ಭವೇತ್ ।**

ಬ್ರಹ್ಮನು ಸ್ವಯಂಪ್ರಕಾಶನಾಗಿರುವುದರಿಂದ ಅವನಿಗೆ ಯಾವುದೇ ಆವರಣವು ಇರಲು ಸಾಧ್ಯವಿಲ್ಲ. ಆದಕಾರಣ ಅಜ್ಞಾನವು ಆವರಕವಾಗಲಾರದು. ಆರೋಪಿತವಾದ ವಿಶೇಷವೂ ಕೂಡ ಅಜ್ಞಾನದ ಸಿದ್ಧಿಯನ್ನೇ ಅಪೇಕ್ಷಿಸುತ್ತದೆ.

ಅದ್ವೈತಿಗಳ ಪ್ರಕಾರ ಜಡವು ಅಸತ್ಯವಾದುದರಿಂದ ಅಜ್ಞಾನವು ಜಡಕ್ಕೆ ಆವರಕವಾಗುವುದನ್ನು ಅವರು ಇಚ್ಛಿಸುವುದಿಲ್ಲ. ಅಪ್ರಕಾಶಸ್ವರೂಪತ್ವದ ನಿಮಿತ್ತ ಜಡದಲ್ಲಿ ಅಜ್ಞಾನವನ್ನು ಅವರು ಒಪ್ಪಲಾರರು. ಹೀಗೆ ಅಜ್ಞಾನವೇ ಇಲ್ಲದಿರುವುದರಿಂದ ವೇದಾದಿ ಎಲ್ಲ ಶಾಸ್ತ್ರವೂ ವಿಷಯಪ್ರಯೋಜನಾದಿಗಳ ಅಭಾವದಿಂದಾಗಿ ಅಪ್ರಯೋಜಕಗಳಾಗುತ್ತವೆ.

ಅಜ್ಞಾನಕ್ಕೆ ಮಿಥ್ಯಾತ್ವವು ಅಥವಾ ಆರೋಪಿತತ್ವವು ಅಜ್ಞಾನದಿಂದಲೇ ಎಂದು ಕಲ್ಪನೆ ಮಾಡಿದರೆ, ಅಂದರೆ ಉಪಾದಾನಕಾರಣವಾದ ಅಜ್ಞಾನಕ್ಕೆ ಪುನಃ ಅಜ್ಞಾನವೇ ಉಪಾದಾನಕಾರಣ, ಹೀಗೆ ಅನವಸ್ಥಿತಿ ಉಂಟಾಗುತ್ತದೆ. ಅಥವಾ ಮೊದಲನೆಯ ಅಜ್ಞಾನ ಎರಡನೆಯದಕ್ಕೆ ಉಪಾದಾನಕಾರಣ ಎಂದು

ಎರಡೇ ಅಜ್ಞಾನಗಳಿಗೆ ಪರಸ್ಪರ ಕಾರ್ಯಕಾರಣಭಾವವನ್ನು ಒಪ್ಪಿದರೆ **ಅನ್ಯೋನ್ಯಾಶ್ರಯತ್ವವು** ಬರುತ್ತದೆ. ಅಥವಾ ಒಂದೇ ಅಜ್ಞಾನವು ತನಗೆ ತಾನೇ ಉಪಾದಾನಕಾರಣ ಎಂದರೆ ಆತ್ಮಾಶ್ರಯ ಎಂಬ ದೋಷವು ಬರುವುದು.

ಅಜ್ಞಾನವು ಜ್ಞಾನಸ್ವರೂಪನಾದ ಜೀವನನ್ನು ಆಶ್ರಯಿಸಿದ್ದು ಅವನಿಗೆ ಆವರಕವೂ ಆಗಿದೆ ಎನ್ನುವ ನಮ್ಮ ವಾದಕ್ಕೆ ಮೇಲೆ ಹೇಳಿದ ಯಾವ ದೋಷವೂ ಬರುವುದಿಲ್ಲವಾದ್ದರಿಂದ ನಮ್ಮ ಮತದಲ್ಲಿ ಶಾಸ್ತ್ರಕ್ಕೆ ವೈಯರ್ಥ ಬರುವುದಿಲ್ಲ.

**ವಿವರಣೆ:**

ಪರರ ಮತದ ಪ್ರಕಾರ ಬ್ರಹ್ಮನಲ್ಲಿ ವಿಶೇಷಗಳೇ ಇಲ್ಲವೆಂದಮೇಲೆ ಅಜ್ಞಾನವು ಯಾವುದನ್ನು ಆವರಿಸಬಲ್ಲುದು? ಮಿಥ್ಯಾಭೂತವಾದ ವಿಶೇಷವನ್ನು ಅಜ್ಞಾನವು ಆವರಿಸುತ್ತದೆ ಎಂದು ಒಪ್ಪಿದರೆ ಅನ್ಯೋನ್ಯಾಶ್ರಯ ದೋಷ ಬರುತ್ತದೆ. ಮಿಥ್ಯಾಭೂತವಾದ ಧರ್ಮವು ಅಜ್ಞಾನಸಿದ್ಧಿಯನ್ನು ಆಶ್ರಯಿಸಿದೆ. ಅಜ್ಞಾನವಾದರೋ ಮಿಥ್ಯಾಭೂತವಾದ ಧರ್ಮವನ್ನು ಆಶ್ರಯಿಸಿದೆ. ಹೀಗೆ ಅನ್ಯೋನ್ಯಾಶ್ರಯ. ಬ್ರಹ್ಮವ್ಯತಿರಿಕ್ತವಾದುದು ಮಿಥ್ಯೆಯಾದ್ದರಿಂದ, ಅದು ಅಜ್ಞಾನದಿಂದ ಆವರಕವಾಗುವುದು ಎಂಬುದೂ ಮಿಥ್ಯೆಯೇ ಆಗುವುದು. ಜೀವನೂ ಅಜ್ಞಾನಕಲ್ಪಿತನಾದ ಕಾರಣ ಅನ್ಯೋನ್ಯಾಶ್ರಯ ಬರುವ ಪ್ರಯುಕ್ತ ಜೀವನಿಗೆ ಅಜ್ಞಾನವು ಆವರಕವಾಗುವುದು ಎಂಬುದು ಕೂಡುವುದಿಲ್ಲ. ಮಿಥ್ಯೆಯಾದ್ದರಿಂದ ಜಡಕ್ಕೂ ಸಹ ಆವರಣರೂಪವಾದ ಅಜ್ಞಾನವು ಕೂಡುವುದಿಲ್ಲ. ಅದಕ್ಕೂ ಅನ್ಯೋನ್ಯಾಶ್ರಯ ದೋಷವು ಬರುವುದು. ಅದ್ವೈತಿಗಳೂ ಕೂಡ ಜಡವನ್ನು ಅಸತ್ಯ ಮತ್ತು ಅಪ್ರಕಾಶತ್ವಸ್ವರೂಪ ಎಂದು ತಿಳಿದಿರುವುದರಿಂದ ಜಡಕ್ಕೆ ಅಜ್ಞಾನದ ಆವರಕವನ್ನು ಒಪ್ಪುವುದಿಲ್ಲ. ಈಶ್ವರನಲ್ಲಿ ಅಜ್ಞಾನವನ್ನು ಒಪ್ಪಲು ಸಾಧ್ಯವಿಲ್ಲ. ಅಸತ್ಪದಾರ್ಥಗಳಾದ ಜೀವ, ಜಡಗಳಿಗೂ ಅಜ್ಞಾನ ಕೂಡುವುದಿಲ್ಲ. ಅಜ್ಞಾನವೇ ಇಲ್ಲವೆಂದಾದಮೇಲೆ, ಅಜ್ಞಾನವನ್ನು ತೆಗೆದುಹಾಕುವುದು ಎಂಬುದು ಅರ್ಥಶೂನ್ಯ. ಅಜ್ಞಾನವನ್ನು ನಿವಾರಿಸಿ ಯಥಾರ್ಥಜ್ಞಾನವನ್ನು ಉಂಟುಮಾಡುವುದೇ ಶಾಸ್ತ್ರಗಳ ಉದ್ದೇಶ. ಅಜ್ಞಾನವನ್ನು ಒಪ್ಪದಿದ್ದರೆ ಶಾಸ್ತ್ರಗಳಿಗೆ ಅಪ್ರಯೋಜಕತ್ವವು ಬರುತ್ತದೆ.

ನಮ್ಮ ಮತದ ಪ್ರಕಾರ ಅಜ್ಞಾನವು ಸಾಕ್ಷಿವೇದ್ಯವಾದುದು. ಆದ್ದರಿಂದ ಅದು ಸತ್ಯವೇ ಆಗಿದೆ. ಜೀವನು ಸ್ವಾಭಾವಿಕವಾಗಿಯೇ ಈಶ್ವರನಿಂದ ಭಿನ್ನನೂ ಹಾಗೂ ಜ್ಞಾನಸ್ವರೂಪನೂ ಆಗಿರುತ್ತಾನೆ. ಜೀವನು ಪರತಂತ್ರನಾಗಿರುವುದರಿಂದ, ಸ್ವಪ್ರಕಾಶನಾಗಿದ್ದರೂ, ಸ್ವತಂತ್ರನಾದ ಈಶ್ವರನ ಇಚ್ಛೆಯಿಂದ ಈಶ್ವರನ ವಿಷಯದಲ್ಲಿಯೂ ಹಾಗೂ ತನ್ನ ಪಾರತಂತ್ರ್ಯಾದಿ ಧರ್ಮಗಳಲ್ಲಿಯೂ ಅವನಿಗೆ ಅಜ್ಞಾನವು ಆವರಕವಾಗಿ ಇರುತ್ತದೆ. ಅಜ್ಞಾನವು ಸತ್ಯವೇ ಆಗಿದ್ದರೂ ಪರಮೇಶ್ವರನ ಪ್ರಸಾದದಿಂದ ಉಂಟಾಗುವ ಜ್ಞಾನದಿಂದ ಅದಕ್ಕೆ ನಿವೃತ್ತಿ ಕೂಡುತ್ತದೆ. ಅಜ್ಞಾನದ ನಿವೃತ್ತಿಗೆ ಶಾಸ್ತ್ರಾಭ್ಯಾಸರೂಪವಾದ ಜಿಜ್ಞಾಸೆ ಅವಶ್ಯ. ಆದ್ದರಿಂದ ನಮ್ಮ ಮತದಲ್ಲಿ ಶಾಸ್ತ್ರಗಳಿಗೆ ವೈಯರ್ಥ್ಯ ಬರುವುದಿಲ್ಲ.

'ದುರ್ಘಟತ್ವಮವಿದ್ಯಾಯಾ ಭೂಷಣಂ ನ ತು ದೂಷಣಂ। ಅವಿದ್ಯಾಯಾ ಅವಿದ್ಯಾತ್ವಮಿದಮೇವ ಹಿ ಲಕ್ಷಣಂ ಯದ್ವಿಚಾರಾಸಹಿಷ್ಣುತ್ವಂ॥' ನಮ್ಮ ಮತದಲ್ಲಿ ಅನಿದ್ಯೆಯು ಅಸಹಿಷ್ಣುತೆ ಸ್ವಭಾವವುಳ್ಳದ್ದು (ದುರ್ಘಟತ್ವವುಳ್ಳದ್ದು). ಈ ಅಸಹಿಷ್ಣುತೆಯು ಅವಿದ್ಯೆಗೆ ಭೂಷಣವೇ ಹೊರತು ದೂಷಣವಲ್ಲ. ಅವಿದ್ಯೆಗೆ ಅವಿದ್ಯಾತ್ವ ಅಥವಾ ವಿಚಾರ ಅಸಹಿಷ್ಣುತೆ ಎಂಬುದೇ ಲಕ್ಷಣ. ಆದುದರಿಂದ ಅವಿದ್ಯೆಗೆ ಆಶ್ರಯ ವಿಷಯಾದಿಗಳು ಇಲ್ಲವೆಂಬ ಅನುಪಪತ್ತಿಯು ಅವಿದ್ಯೆಯ ಸಿದ್ಧಿಗೆ ಬಾಧಕವಾಗುವುದಿಲ್ಲ ಎಂಬುದಾಗಿ ಮಾಯಾವಾದಿಗಳು ಹೇಳಿದರೆ, ಅವರ ಮತದ ಪ್ರಕಾರ ವಿಷಯಾದಿಗಳೇ ಕೂಡುವುದಿಲ್ಲ ಎಂದು ಹೇಳುತ್ತಾರೆ.

**ಅವಿದ್ಯಾದುರ್ಘಟತ್ವಂ ಚೇತ್ಸ್ಯಾದಾತ್ಮಾಪಿ ಹಿ ತಾದೃಶಃ ॥೩೩॥**
**ಅತೋಽಧಿಕಾರಿವಿಷಯಫಲಯೋಗಾದಿವರ್ಜಿತಮ್ ।**
**ಅನಂತದೋಷದುಷ್ಟಂ ಚ ಹೇಯಂ ಮಾಯಾಮತಂ ಶುಭೈಃ ॥೩೪॥**

ಅವಿದ್ಯೆಗೆ ದುರ್ಘಟತ್ವವು ಸ್ವಭಾವವೆಂದು ಒಪ್ಪಿದರೆ ಆತ್ಮನೂ ಕೂಡ ಅವಿದ್ಯೆಯಂತೆ ಮಿಥ್ಯಾಭೂತನು ಆಗುವನು. ಪರರ ಮತದಲ್ಲಿ ಅವಿದ್ಯೆಯು ಕೂಡದಿರುವುದರಿಂದ, ಅಧಿಕಾರಿ, ವಿಷಯ, ಫಲ ಮತ್ತು ಪರಸ್ಪರ ಸಂಬಂಧ ಮೊದಲಾದವುಗಳು ಇಲ್ಲವಾಗುವುದರಿಂದ, ಅನಂತವಾದ ದೋಷಗಳಿಂದ

ದುಷ್ಟವಾದ ಮಾಯಾವಾದಿಗಳ ಮತವು ಸಜ್ಜನರಿಂದ ತ್ಯಾಜ್ಯವು.

**ವಿವರಣೆ:**

ಮಾಯಾವಾದಿಗಳು ಹೇಳುವ ಪ್ರಕಾರ ಅವಿದ್ಯೆಯು ದುರ್ಘಟ ಸ್ವಭಾವವುಳ್ಳದ್ದು ಎಂದು ಒಪ್ಪಿಕೊಂಡ ಪಕ್ಷದಲ್ಲಿ, ಅದಕ್ಕೆ ಸಾಕ್ಷಿಯೂ ಬೇಡ, ಅಧಿಷ್ಠಾನವೂ ಬೇಡ ಎಂದಾಗುತ್ತದೆ. ಅವಿದ್ಯೆಗೆ ಅಧಿಷ್ಠಾನ ಮತ್ತು ಸಾಕ್ಷಿಯ ಅಪೇಕ್ಷೆಯಿಲ್ಲವೆಂದರೆ ಆತ್ಮನ ಅಸ್ತಿತ್ವವನ್ನೇ ಒಪ್ಪಬೇಕಾಗಿಲ್ಲ. ಅದು ಶೂನ್ಯವಾದವೇ ಅಲ್ಲದೆ ಮತ್ತೇನು? ಅಜ್ಞಾನವಿದ್ದರೆ, ಸಂಶಯ ವಿಪರ್ಯಗಳಿಂದ ಗ್ರಸ್ತನಾದ ಅಜ್ಞಾನಿಯು ಶಾಸ್ತ್ರದಲ್ಲಿ ಅಧಿಕಾರಿಯಾಗುವನು. ಅಜ್ಞಾತವಾದುದು ವಿಷಯವಾಗುವುದು. ಶಾಸ್ತ್ರಕ್ಕೆ ಅಜ್ಞಾನನಿವೃತ್ತಿಯು ಪ್ರಯೋಜನವಾಗುವುದು. ಅಧಿಕಾರಿ ವಿಷಯಾದಿಗಳು ಇಲ್ಲವಾದರೆ ಸಂಬಂಧವು ಕೂಡುವುದಿಲ್ಲ. ಅನುಬಂಧಚತುಷ್ಟಯರಹಿತವಾದ ಮಾಯಾವಾದಿಗಳ ಮತವು ಸರ್ವಥಾ ಅನಾದರಣೀಯವೂ ಅತ್ಯಂತ ಹೇಯವೂ ಆಗಿರುವುದು. (ಅಜ್ಞಾನಕ್ಕೇನೇ ಮಾಯಾ, ಅವಿದ್ಯಾ ಎಂಬುದಾಗಿ ಅವಸ್ಥಾ ಭೇದದಿಂದ ಎರಡು ಹೆಸರು.)

ಜೀವಬ್ರಹ್ಮೈಕ್ಯವು ಶಾಸ್ತ್ರಕ್ಕೆ ವಿಷಯವಲ್ಲ

**ಸತ್ಯತ್ವಾತ್ತೇನ ದುಃಖಾದೇಃ ಪ್ರತ್ಯಕ್ಷೇಣ ವಿರೋಧತಃ ।**

**ನ ಬ್ರಹ್ಮತಾಂ ವದೇದ್ವೇದೋ ಜೀವಸ್ಯ ಹಿ ಕಥಂಚನ ॥೩೫॥**

'ತತ್ತ್ವಮಸಿ' ಇತ್ಯಾದಿ ವೇದವು ಯಾವರೀತಿಯಿಂದಲೂ (ಮುಖ್ಯವೃತ್ತಿ ಅಥವಾ ಲಕ್ಷಣಾವೃತ್ತಿಯಿಂದಲೂ) ಜೀವನಿಗೆ ಬ್ರಹ್ಮತ್ವವನ್ನು ಹೇಳುವುದಿಲ್ಲ. ಹಾಗೆ ಹೇಳುವುದು ಪ್ರತ್ಯಕ್ಷಕ್ಕೆ ವಿರೋಧ. ಏಕೆಂದರೆ, ದುಃಖ ಮೊದಲಾದವುಗಳಿಗೆ ಸತ್ಯತ್ವವು ಪ್ರತ್ಯಕ್ಷದಿಂದ ನಿಶ್ಚಿತವಾಗಿದೆ.

**ಯಜಮಾನಪ್ರಸ್ತರತ್ವಂ ಯಥಾ ನಾರ್ಥಃ ಶ್ರುತೇರ್ಭವೇತ್ ।**

**ಬ್ರಹ್ಮತ್ವಮಪಿ ಜೀವಸ್ಯ ಪ್ರತ್ಯಕ್ಷಸ್ಯಾವಿಶೇಷತಃ ॥೩೬॥**

'ಯಜಮಾನಪ್ರಸ್ತರಃ' ಎನ್ನುವ ಶ್ರುತಿಯಲ್ಲಿ ಯಜಮಾನನಿಗೆ ದರ್ಭೆಮುಷ್ಟಿ ಎಂಬ ವಿಶೇಷಣವನ್ನು ಹೇಳಿರುವಂತೆ ತೋರುವುದು. ಈ ಪ್ರತಿಪಾದನೆಯು ಪ್ರತ್ಯಕ್ಷಕ್ಕೆ ವಿರುದ್ಧವಾಗಿರುವುದರಿಂದ ಶ್ರುತಿಗೆ ಪ್ರತೀತವಾದ ಅರ್ಥವನ್ನು

ಪರಿತ್ಯಾಗ ಮಾಡಬೇಕು. ಜೊತೆಗೆ ಯಜಮಾನನ ಸ್ವರೂಪವನ್ನು ತಿಳಿಸುವುದರಿಂದ ದರ್ಭಮುಷ್ಟಿಯ ವಿಶೇಷಣಕ್ಕೆ ಉಪಜೀವ್ಯ ವಿರೋಧವೂ ಬರುವುದು. ಉಪಜೀವ್ಯ-ಉಪಜೀವಕಗಳಲ್ಲಿ ಉಪಜೀವ್ಯವೇ ಪ್ರಬಲ. ತತ್ತ್ವಮಸಿ ಎನ್ನುವಲ್ಲಿ ತತ್ ಶಬ್ದವಾಚ್ಯನಾದ ಬ್ರಹ್ಮನು ಉಪಜೀವ್ಯ, ತ್ವಂ ಶಬ್ದವಾಚ್ಯನಾದ ಜೀವನು ಉಪಜೀವಕ. ಜೀವನಿಗೆ ದುಃಖಾದಿಗಳು ಸತ್ಯ ಎನ್ನುವುದು ಪ್ರತ್ಯಕ್ಷಕ್ಕೆ ಸಿದ್ಧವಾಗುವ ಪ್ರಮೇಯ. ಬ್ರಹ್ಮನು ದುಃಖಾದಿ ದೋಷರಹಿತನು. ಪ್ರಬಲವಾದ ಉಪಜೀವ್ಯಕ್ಕೆ ವಿರೋಧವಿರುವುದರಿಂದಲೇ ತತ್ತ್ವಮಸಿ ಇತ್ಯಾದಿ ಮೇಲ್ನೋಟಕ್ಕೆ ಐಕ್ಯ ಹೇಳುವಂತೆ ಕಾಣುವ ವಾಕ್ಯಗಳು ಜೀವಬ್ರಹ್ಮರಿಗೆ ಐಕ್ಯವನ್ನು ಪ್ರತಿಪಾದಿಸುವುದಕ್ಕೆ ಪ್ರಮಾಣವಾಗಲಾರವು.

ಬ್ರಹ್ಮನನ್ನು ಅನುವಾದಮಾಡಿಕೊಂಡು ಬ್ರಹ್ಮನಿಗೆ ಜೀವೈಕ್ಯವನ್ನು ಪ್ರತಿಪಾದಿಸುವಂತೆ ಕಾಣುವ 'ತದ್ಯೋಽಹಂ ಸೋಽಸೌ ಯೋಽಸೌ ಸೋಽಹಂ' ಇತ್ಯಾದಿ ಶ್ರುತಿಗಳೂ ಐಕ್ಯಪರವಲ್ಲ ಎಂಬುದಾಗಿ ಮುಂದಿನ ವಾಕ್ಯಗಳಲ್ಲಿ ಸಮರ್ಥಿಸಲಾಗಿದೆ.

**ಸಾರ್ವಜ್ಞಾದಿಗುಣಂ ಜೀವಾದ್ಭಿನ್ನಂ ಜ್ಞಾಪಯತಿ ಶ್ರುತಿಃ ।**
**ಈಶಂ ತಾಮುಪಜೀವ್ಯೈವ ವರ್ತತೇ ಹ್ಯೈಕ್ಯವಾದಿನೀ ॥೩೭॥**
**ಉಪಜೀವ್ಯವಿರೋಧೇನ ನಾಸ್ಯಾಸ್ತನ್ಮಾತಾ ಭವೇತ್ ।**

ಯಾವ ಶ್ರುತಿಯು ಪರಮೇಶ್ವರನನ್ನು ಸರ್ವಜ್ಞತ್ವಾದಿ ಗುಣ ವಿಶಿಷ್ಟನನ್ನಾಗಿಯೂ ಜೀವನಿಂದ ಭಿನ್ನನನ್ನಾಗಿಯೂ ತಿಳಿಸಿಕೊಡುತ್ತದೋ ಆ ಶ್ರುತಿಯನ್ನು ಉಪಜೀವಿಸಿಕೊಂಡೇ ಐಕ್ಯಪ್ರತಿಪಾದಕಶ್ರುತಿಯು ಇರುವುದು. ಆದಕಾರಣ 'ತದ್ಯೋಹಂ' ಇತ್ಯಾದಿ ಶ್ರುತಿಗಳು ಉಪಜೀವ್ಯಪ್ರಮಾಣಕ್ಕೆ ವಿರೋಧವಾದುದರಿಂದ ಜೀವಬ್ರಹ್ಮೈಕ್ಯ ಸಾಧನೆಗೆ ಪ್ರಮಾಣವಾಗಲಾರವು.

**ವಿವರಣೆ:**

ಈಶ್ವರನೊಂದಿಗೆ ಜೀವೈಕ್ಯವನ್ನು ಪ್ರತಿಪಾದಿಸುವ ಶ್ರುತಿಯು ಮೊದಲಿಗೆ ಈಶ್ವರನ ಸಿದ್ಧಿಯನ್ನು ಅಪೇಕ್ಷಿಸುತ್ತದೆ. 'ಯಃ ಸರ್ವಜ್ಞಃ' ಮೊದಲಾದ ಶ್ರುತಿಗಳೇ ಇದಕ್ಕೆ ಉಪಜೀವ್ಯ ಪ್ರಮಾಣಗಳು. ಆ ಶ್ರುತಿಗಳು ಅಲ್ಪಜ್ಞನಾದ ಜೀವನಿಗೂ ಸರ್ವಜ್ಞನಾದ ಬ್ರಹ್ಮನಿಗೂ ಭೇದವನ್ನೇ ಹೇಳುತ್ತವೆಯಾದ್ದರಿಂದ,

ಐಕ್ಯವನ್ನು ಪ್ರತಿಪಾದಿಸುವ ಶ್ರುತಿಗಳಿಗೆ ಉಪಜೀವ್ಯವಿರೋಧ ಬರುವುದರಿಂದ ಅವುಗಳಿಗೆ ಭೇದಪರ ಅರ್ಥವನ್ನೇ ಮಾಡಬೇಕು. ಅಲ್ಲದೆ ಎಲ್ಲ ಅದ್ವೈತಪರ ಶ್ರುತಿಗಳಿಗೂ 'ದ್ವಾ ಸುಪರ್ಣಾ' ಮೊದಲಾದ ದ್ವೈತ ಪ್ರತಿಪಾದಕ ಶ್ರುತಿಗಳಿಂದ ವಿರೋಧ ಬರುವುದರಿಂದ ಅವುಗಳಿಗೆ ಪ್ರತೀತಾರ್ಥವನ್ನು ಬಿಟ್ಟು ಭೇದಪರ ಅರ್ಥವನ್ನೇ ಮಾಡಬೇಕು.

**ಸ್ವಾತಂತ್ರ್ಯೇ ಚ ವಿಶಿಷ್ಟತ್ವೇ ಸ್ಥಾನಮತ್ಯೈಕ್ಯಯೋರಪಿ ।।೩೮।।**
**ಸಾದೃಶ್ಯೇ ಚೈಕ್ಯವಾಕ್ ಸಮ್ಯಕ್ ಸಾವಕಾಶಾ ಯಥೇಷ್ಟತಃ ।**
**ಅವಕಾಶೋಜ್ಝಿತಾ ಭೇದಶ್ರುತಿರ್ನಾತಿಬಲಾ ಕಥಮ್ ।।೩೯।।**
**ಅಜ್ಞಾನಾಸಂಭವಾದೇವ ಮಿಥ್ಯಾಭೇದೋ ನಿರಾಕೃತಃ ।**

ಐಕ್ಯವನ್ನು ಹೇಳುವ ವಾಕ್ಯವು ಸ್ವಾತಂತ್ರ್ಯ, ವೈಶಿಷ್ಟ್ಯ, ಸ್ಥಾನೈಕ್ಯ, ಮತ್ಯೈಕ್ಯ, ಸಾದೃಶ್ಯ ಇತ್ಯಾದಿಗಳನ್ನು ನಿಮಿತ್ತಮಾಡಿಕೊಂಡು ಸಂಭವಾನುಸಾರವಾಗಿ ಚೆನ್ನಾಗಿಯೇ ಐಕ್ಯವನ್ನು ಹೇಳುವುದರಿಂದ, ಅದು ಸಾವಕಾಶ ಶ್ರುತಿ. ಅಂದರೆ ಅನೇಕ ಅರ್ಥಗಳಲ್ಲಿ ತೆರೆದುಕೊಳ್ಳುವ ಅವಕಾಶವನ್ನು ಹೊಂದಿದೆ. ಆದರೆ ಭೇದ ಹೇಳುವ ಶ್ರುತಿಯು ನಿರವಕಾಶವಾಗಿದೆ. ಅಂದರೆ ವಿವಿಧ ಅರ್ಥಗಳಲ್ಲಿ ತೆರೆದುಕೊಳ್ಳುವ ಅವಕಾಶವನ್ನು ಹೊಂದಿರುವುದಿಲ್ಲ. ಆದ್ದರಿಂದ ಸಾವಕಾಶವಾದ ಅಭೇದಶ್ರುತಿಗಿಂತ ನಿರವಕಾಶವಾದ ಭೇದಶ್ರುತಿಯು ಅತ್ಯಂತ ಪ್ರಬಲವಾದುದು. ಅಜ್ಞಾನವು ಸರ್ವಥಾ ಅಸಂಭವವಾದ್ದರಿಂದ ಭೇದವು ಮಿಥ್ಯಾ ಎಂಬ ವಾದವು ನಿರಾಕೃತವಾಗುವುದು.

**ವಿವರಣೆ:** ಸಾವಕಾಶ ಮತ್ತು ನಿರವಕಾಶಗಳಲ್ಲಿ ನಿರವಕಾಶವು ಅತ್ಯಂತ ಪ್ರಬಲ. ಸಾವಕಾಶವಾದ ಐಕ್ಯ ಪ್ರತಿಪಾದಕ ಶ್ರುತಿಗೆ ಭೇದಪರವಾದ ಅರ್ಥವನ್ನು ಮಾಡಲು ಬರುತ್ತದೆ. ಆದರೆ ನಿರವಕಾಶವಾದ ಭೇದಪರವಾದ ಶ್ರುತಿಗೆ ಭೇದವನ್ನು ಬಿಟ್ಟು ಬೇರೆ ಅರ್ಥಮಾಡಲು ಬರುವುದಿಲ್ಲ. ಅದ್ವೈತಶ್ರುತಿಯು ದುರ್ಬಲ. ದ್ವೈತಶ್ರುತಿಯು ಪ್ರಬಲ. ಪ್ರಬಲವಾದ ದ್ವೈತಶ್ರುತಿಯಿಂದ ದುರ್ಬಲವಾದ ಅದ್ವೈತಶ್ರುತಿಗೆ ಬಾಧಬರುವುದರಿಂದ, ಶ್ರುತಿಗಳು ಈಶ್ವರ ಮತ್ತು ಜೀವರಿಗೆ ಭೇದವನ್ನೇ ಹೇಳುತ್ತವೆ ಎಂಬುದು ಸಿದ್ಧವಾಗುವುದು. ಭೇದಕ್ಕೆ ಅಜ್ಞಾನವೇ ಕಾರಣವಾದ್ದರಿಂದ ಭೇದವು ಮಿಥ್ಯಾ

ಎನ್ನಕೂಡದು. ಪರರ ಮತದಲ್ಲಿ ಅಜ್ಞಾನವು ಸರ್ವಥಾ ಕೂಡುವುದಿಲ್ಲ ಎಂದು ಈಗಾಗಲೇ ನಿರಾಕರಿಸಿದ್ದೇವೆ. ಅಜ್ಞಾನವೇ ಅಸಂಭವವಾದ್ದರಿಂದ ಭೇದಶ್ರುತಿಯು ಮಿಥ್ಯಾಭೇದವನ್ನು ಪ್ರತಿಪಾದಿಸುತ್ತದೆ ಎಂದು ಹೇಳಕೂಡದು.

## ವಿಷ್ಣುಪ್ರಸಾದದಿಂದಲೇ ಬಂಧನಿವೃತ್ತಿ

**ಅತೋ ಯಥಾರ್ಥಬಂಧಸ್ಯ ವಿನಾ ವಿಷ್ಣುಪ್ರಸಾದತಃ ||೪೦||**
**ಅನಿವೃತ್ತೇಸ್ತದರ್ಥಂ ಹಿ ಜಿಜ್ಞಾಸಾಽತ್ರ ವಿಧೀಯತೇ ।**
**ಯಥಾ ದೃಷ್ಟ್ಯಾ ಪ್ರಸನ್ನಸ್ಸನ್ ರಾಜಾ ಬಂಧಾಪನೋದಕೃತ್ ||೪೧||**
**ಏವಂ ದೃಷ್ಟಃ ಸ ಭಗವಾನ್ ಕುರ್ಯಾದ್ಬಂಧವಿಭೇದನಮ್ ।**

ಆದಕಾರಣ ಯಥಾರ್ಥವಾದ ಬಂಧಕ್ಕೆ ವಿಷ್ಣುವಿನ ಪ್ರಸಾದವಿಲ್ಲದೆ ನಿವೃತ್ತಿಯಾಗದು. ವಿಷ್ಣುವಿನ ಪರಮಾನುಗ್ರಹಕ್ಕಾಗಿ ಈ ಸೂತ್ರದಲ್ಲಿ ಬ್ರಹ್ಮನ ವಿಚಾರವನ್ನು ಮಾಡಬೇಕೆಂದು ವಿಧಿಸಲ್ಪಟ್ಟಿದೆ. ಕರುಣಾಳುವಾದ ಉತ್ತಮಗುಣವುಳ್ಳ ರಾಜನು ಪ್ರೇಮಾತಿಶಯ ದೃಷ್ಟಿಯಿಂದ ಸಂತುಷ್ಟನಾಗಿ ಬಂಧನಕ್ಕೊಳಗಾಗಿದ್ದ ವ್ಯಕ್ತಿಯನ್ನು ಬಿಡುಗಡೆ ಮಾಡುವುದು ಲೋಕದಲ್ಲಿ ಪ್ರಸಿದ್ಧವೇ ಆಗಿದೆ. ಹೀಗೆಯೇ ಅನಂತಾನಂತ ಸದ್ಗುಣಗಳಿಂದ ಕೂಡಿದ ಭಗವಂತನನ್ನು ಅತಿಶಯವಾದ ಭಕ್ತಿಯಿಂದ ಆರಾಧಿಸಿದಾಗ ಭಗವಂತನು ಸಂಸಾರಬಂಧನವನ್ನು ಸಂಪೂರ್ಣವಾಗಿ ನಾಶಮಾಡುವನು.

ಈ ರೀತಿಯಾಗಿ ಶ್ರೀಮದಾಚಾರ್ಯರು ಬಂಧಮಿಥ್ಯಾತ್ವವನ್ನು ಹೇಳುವ ಪರರ ಅಪವ್ಯಾಖ್ಯಾನವನ್ನು ನಿರಾಕರಿಸಿ, ಬಂಧವು ಸತ್ಯವಾದುದರಿಂದ ಹಾಗೂ ಜಿಜ್ಞಾಸೆಯಿಂದ ಹುಟ್ಟುವ ಯಥಾರ್ಥಜ್ಞಾನಪೂರ್ವಕ ಉಪಾಸನೆಯಿಂದ ವಿಷ್ಣುಪ್ರಸಾದ ಮತ್ತು ಮೋಕ್ಷಾಖ್ಯ ಫಲವಿರುವುದರಿಂದ, ಹೀಗೆ ಸೂತ್ರದ ಅತಃ ಶಬ್ದಕ್ಕೆ ಎರಡು ರೀತಿಯ ಸಾರ್ಥಕ್ಯವನ್ನು ಪ್ರತಿಪಾದಿಸಿರುವರು. ಈಗ ವಿಷಯಸಮರ್ಥನೆಗೆ ಕಾರಣವಾದ ಸಿದ್ಧಾರ್ಥಬೋಧಕತ್ವ ಪ್ರತಿಪಾದಕವಾದ ಯುಕ್ತಿಯನ್ನು 'ಕಾರ್ಯತಾ ಚ' ಇತ್ಯಾದಿಗಳಿಂದ ವ್ಯಾಖ್ಯಾನ ಮಾಡುತ್ತಾರೆ.

## ಕಾರ್ಯತಾ ವಾದ

**ಕಾರ್ಯತಾ ಚ ನ ಕಾಚಿತ್ ಸ್ಯಾದಿಷ್ಟಸಾಧನತಾಂ ವಿನಾ ||೪೨||**
**ಕಾರ್ಯಂ ನ ಹಿ ಕ್ರಿಯಾವ್ಯಾಪ್ಯಂ ನಿಷಿದ್ಧಸ್ಯ ಸಮತ್ವತಃ ।**

**ನ ಭವಿಷ್ಯತ್ಕ್ರಿಯಾ ಕಾರ್ಯಂ ಸ್ರಕ್ಷ್ಯತೀಶ ಇತಿ ಹ್ಯಪಿ ।।೪೩।।**

**ಕಾರ್ಯಂ ಸ್ಯಾನ್ನೈವ ಚಾಕರ್ತುಮಶಕ್ಯಂ ಕಾರ್ಯಮಿಷ್ಯತೇ ।**

**ಸಾಮ್ಯಾದೇವ ನಿಷಿದ್ಧಸ್ಯ ತದಿಷ್ಟಂ ಸಾಧನಂ ತಥಾ ।।೪೪।।**

**ಕಾರ್ಯಂ ಸಾಧನಮಿಷ್ಟಸ್ಯ ಭಗವಾನಿಷ್ಟದೇವತಾ ।**

**ಮುಖ್ಯೇಷ್ಟಂ ವಾ ಸುಮನಸಾಂ 'ಪ್ರೇಯಸ್ತದಿ'ತಿ ಚ ಶ್ರುತಿಃ ।।೪೫।।**

ಇಷ್ಟಸಾಧನತ್ವವನ್ನು ಹೊರತುಪಡಿಸಿ ಯಾವುದೊಂದು ಕಾರ್ಯತೆಯೂ ಆಗಲಾರದು. ಕ್ರಿಯೆಯಿಂದ ಹೊಂದಲು ಸಾಧ್ಯವಾಗುವದೆಲ್ಲವೂ ಕಾರ್ಯ ಎನಿಸುವುದಿಲ್ಲ. ಇಲ್ಲವಾದರೆ ಶಾಸ್ತ್ರನಿಷಿದ್ಧವಾದ ಬ್ರಾಹ್ಮಣಹನನಾದಿಗಳಿಗೂ ಕಾರ್ಯವಾಗಬೇಕಾದೀತು. ಮುಂದೆ ಆಗಲಿರುವ ಕ್ರಿಯೆಯೂ ಕಾರ್ಯ ಎನಿಸದು. ಹಾಗಿಲ್ಲದಿದ್ದರೆ ಪರಮೇಶ್ವರನು ಮುಂದೆ ಒಂದು ಕಾಲದಲ್ಲಿ ಸರ್ವಜಗತ್ತನ್ನು ಸೃಷ್ಟಿಸುವನು ಎಂಬತ್ಯಾದಿ ವಾಕ್ಯಗಳಿಂದ ತಿಳಿಯಲ್ಪಡುವ ಭವಿಷ್ಯತ್ ಕ್ರಿಯೆಗಳೂ ಕಾರ್ಯ ಎನಿಸಬೇಕಾಗುತ್ತವೆ. ಆದ್ದರಿಂದ ಅವು ಕಾರ್ಯಗಳಾಗುವುದಿಲ್ಲ.

ಮಾಡದೇ ಇರುವುದಕ್ಕೆ ಅಶಕ್ಯವಾದುದು ಕಾರ್ಯ ಎಂಬುದಾಗಿ ಪ್ರಾಮಾಣಿಕರಿಂದ ಅಂಗೀಕರಿಸಲ್ಪಡುವುದಿಲ್ಲ. ಶಾಸ್ತ್ರನಿಷಿದ್ಧವಾದ ಕೆಲಸಗಳೂ ಮಾಡಲು ಅಶಕ್ಯವೇನಲ್ಲವಾದುದರಿಂದ ಅವುಗಳನ್ನೂ ಕಾರ್ಯ ಎಂದು ಅಂಗೀಕರಿಸಬೇಕಾಗುವುದು.

ಇಷ್ಟ ಹಾಗೂ ಇಷ್ಟಸಾಧನವಾದುದು ಮಾತ್ರ ಕಾರ್ಯವೆನಿಸುತ್ತದೆ. ಇಷ್ಟದೇವತೆಯಾದ ಭಗವಂತನೇ ಇಷ್ಟವಾದುದಕ್ಕೆ ಸಾಧನನು. ಉತ್ತಮಾಧಿಕಾರಿಗಳಾದ ದೇವತೆಗಳಿಗೆ ಪರಬ್ರಹ್ಮನೇ ಮುಖ್ಯವಾಗಿ ಪ್ರಿಯನು. 'ತದೇತತ್ಪ್ರೇಯಃ ಪುತ್ರಾತ್ಪ್ರೇಯೋ ವಿತ್ತಾತ್ಪ್ರೇಯೋನ್ಯಸ್ಮಾಚ್ಚ ಸರ್ವಸ್ಮಾದಂತರತರಂ ಯದಯಮಾತ್ಮಾ' ಎನ್ನುವ ಶ್ರುತಿಯು ಭಗವಂತನು ಮಕ್ಕಳಿಗಿಂತಲೂ, ದ್ರವ್ಯಕ್ಕಿಂತಲೂ, ಇತರ ಎಲ್ಲ ವಸ್ತುಗಳಿಗಿಂತಲೂ ಅತ್ಯಂತ ಪ್ರಿಯನು ಎಂದು ಹೇಳುತ್ತದೆ.

**'ಪ್ರಾಣಬುದ್ಧಿಮನಃ ಸ್ವಾತ್ಮದೇಹಾಪತ್ಯಧನಾದಯಃ ।**

**ಯತ್ಸಂಪರ್ಕಾತ್ ಪ್ರಿಯಾ ಆಸಂಸ್ತತಃ ಕೋನ್ವಪರಃ ಪ್ರಿಯಃ' ।।೪೬।।**

**ಇತ್ಯಾದಿವಾಕ್ಯೈರಾಕಾಂಕ್ಷಾ ಸನ್ನಿಧಿರ್ಯೋಗ್ಯತಾ ಯತಃ ।**
**ತಸ್ಮಿನ್ನೇವ ಸಮಸ್ತಸ್ಯೇತಿ ಇಷ್ಟೇ ವ್ಯುತ್ಪತ್ತಿರಿಷ್ಯತೇ ॥೪೭॥**

ಪ್ರಾಣವಾಯು, ಜ್ಞಾನ, ಅಂತಃಕರಣ, ಇತರ ಇಂದ್ರಿಯಗಳು, ಶರೀರ, ಮಕ್ಕಳು, ಸಂಪತ್ತು ಇವೇ ಮೊದಲಾದವುಗಳು ಯಾವ ಶ್ರೀಹರಿಯ ಸಂಪರ್ಕದಿಂದ ಪ್ರೀತಿಯ ವಿಷಯಗಳಾಗುವುವೋ ಅಂಥಹ ಶ್ರೀಹರಿಗಿಂತ ಪ್ರಿಯನಾದವನು ಬೇರೆ ಯಾರು ಇರಲು ಸಾಧ್ಯ? ಇತ್ಯಾದಿ ವಾಕ್ಯಗಳಿಂದ ಶ್ರೀಹರಿಗೆ ಪರಮೇಷ್ಟತ್ವವು ಸಿದ್ಧವಾಗುವುದು. ಆ ಶ್ರೀಹರಿಯಲ್ಲಿಯೇ ವೇದಾಧಿಕಾರಿಗಳೆಲ್ಲರಿಗೂ ಜಿಜ್ಞಾಸಾ (ಆಕಾಂಕ್ಷಾ), ಸಾಮೀಪ್ಯ (ಸನ್ನಿಧಿ), ಯೋಗ್ಯತೆಗಳು ಇರುವ ಪ್ರಯುಕ್ತ ಅವನಲ್ಲಿಯೇ ಇಷ್ಟತ್ವವು ಉಂಟಾಗುವುದು.

**ಅತ್ತ್ಯಪೂಪಾಂಸ್ತವ ಭ್ರಾತೇತ್ಯಾದಾವಾವಾಪತೋಽಪಿ ಚ ।**
**ಉದ್ವಾಪದ್ವರ್ತಮಾನತ್ವಾದಾಕಾಂಕ್ಷಾದಿಬಲಾದಪಿ ॥೪೮॥**
**ಬಾಲೋ ವ್ಯುತ್ಪತ್ತಿಮಭ್ಯೇತಿ ನಾನಯೇತ್ಯಾದಿವಾಕ್ಯತಃ ।**
**ಆನೀಯಮಾನದೃಷ್ಟ್ಯೈವ ವ್ಯುತ್ಪತ್ತೇಃ ಸಂಭವೇ ಸತಿ ॥೪೯॥**
**ಏಷ್ಯದಾನಯನಾಯಾಯಂ ಕುತ ಏವ ಪ್ರತೀಕ್ಷತೇ ।**

'ನಿನ್ನ ಅಣ್ಣ ಅಪೂಪವನ್ನು ತಿನ್ನುತ್ತಿದ್ದಾನೆ' ಇತ್ಯಾದಿ ವಾಕ್ಯಗಳನ್ನು ಒಬ್ಬ ಬಾಲಕನಿಗೆ ಅವನ ಅಣ್ಣನನ್ನು ತೋರಿಸಿ ಹೇಳಿದಾಗ ಅಪೂಪ ಮತ್ತು ಅದನ್ನು ತಿನ್ನುತ್ತಿರುವ ಅಣ್ಣನನ್ನು ಪ್ರತ್ಯಕ್ಷ ಕಾಣುವುದರಿಂದ ಆ ಬಾಲಕನಿಗೆ ಅಪೂಪದಲ್ಲಿ ಇಷ್ಟತ್ವವೂ ಅದರ ಬಗ್ಗೆ ಜಿಜ್ಞಾಸೆಯೂ ಉಂಟಾಗುವುದು. 'ದೇವದತ್ತ ಗಾಮಾನಯ' ಮೊದಲಾದ ವಾಕ್ಯಗಳಿಂದ ಬಾಲಕನು ವ್ಯುತ್ಪತ್ತಿಯನ್ನು ಅಂದರೆ ವಾಚ್ಯವಾಚಕ ಸಂಬಂಧವನ್ನು ಹೊಂದುತ್ತಾನೆಂದು ಹೇಳಿದ್ದು ಯುಕ್ತವೇ ಆಗುವುದಿಲ್ಲ. ತರುವುದನ್ನು ನೋಡಿಯೇ ವ್ಯುತ್ಪತ್ತಿಯು ಕೂಡುತ್ತಿರಲು ಮುಂದೆ ಅವನು ತರುವುದನ್ನು ನಿರೀಕ್ಷಿಸುತ್ತಾನೆ ಏಕೆ?

**ವ್ಯುತ್ಪನ್ನೋ ವರ್ತಮಾನೇ ತು ಕ್ರಿಯಾಶಬ್ದೇ ಭವಿಷ್ಯತಿ ॥೫೦॥**
**ಪುನರ್ದೃಷ್ಟ್ಯೈವ ಶಬ್ದಶ್ರುತ್ ಪಶ್ಚಾದ್ವ್ಯುತ್ಪತ್ತಿಮೇಷ್ಯತಿ ।**

ವರ್ತಮಾನಾರ್ಥಕವಾದ ತರುತ್ತಾನೆ ಮೊದಲಾದ ಕ್ರಿಯಾಶಬ್ದಗಳಲ್ಲಿ ವ್ಯುತ್ಪನ್ನವುಳ್ಳವನು ಭವಿಷ್ಯದರ್ಥಕವಾದ ಕ್ರಿಯಾಶಬ್ದದಲ್ಲಿ 'ದೇವದತ್ತನೇ

ಗೊವನ್ನು ತಾ' ಎಂಬಿತ್ಯಾದಿ ಶಬ್ದಗಳನ್ನು ಕೇಳಿದವನು ಅನಂತರ ಆನಯನ ಕ್ರಿಯೆಯನ್ನು ನೋಡುವುದರಿಂದಲೇ ವ್ಯುತ್ಪತ್ತಿಯನ್ನು ಹೊಂದುತ್ತಾನೆ.

**ವರ್ತಮಾನಮತೀತಂ ಚ ಭವಿಷ್ಯದಿತಿ ಚ ಕ್ರಮಾತ್ ॥೫೧॥**

**ಆಕಾಂಕ್ಷಾದಿಯುತಂ ಯಸ್ಮಾದ್ವಿಧೇರ್ವ್ಯುತ್ಪಾದನಂ ಕುತಃ ।**

ಯಾವ ಕಾರಣದಿಂದ ವರ್ತಮಾನಾದಿಗಳ ಕ್ರಮದಿಂದ ಕಾಲತ್ರಯ ಸಂಬಂಧಿಯಾದ ವಸ್ತುವು ಆಕಾಂಕ್ಷಾ, ಸನ್ನಿಧಿ, ಯೋಗ್ಯತೆಗಳಿಂದೊಡಗೂಡಿ ಆಗುತ್ತದೋ, ಆದಕಾರಣ ಆಕಾಂಕ್ಷಾದಿಗಳು ಇಲ್ಲದಿರುವ ಕಾರ್ಯಕ್ಕೆ ವ್ಯುತ್ಪತ್ತಿಯು ಯಾವುದರಿಂದ ಆಗುತ್ತದೆ?

**ದೃಷ್ಟ್ವಾ ಜ್ಞಾತಪದಾರ್ಥಸ್ಯ ಸ್ಯಾದಾಕಾಂಕ್ಷಾ ಭವಿಷ್ಯತಿ ॥೫೨॥**

**ವ್ಯುತ್ಪತ್ತಿಃ ಪ್ರಥಮಾ ತಸ್ಮಾದ್ವರ್ತಮಾನೇಗತೇ ತತಃ ।**

ವರ್ತಮಾನಕಾರ್ಯದಲ್ಲಿ ಪ್ರತ್ಯಕ್ಷವು ಕೂಡುವುದರಿಂದ ಆಕಾಂಕ್ಷಾವು ಕೂಡುವುದು. ವರ್ತಮಾನಾರ್ಥವಾದ ಕ್ರಿಯಾಶಬ್ದಗಳಲ್ಲಿ ಪ್ರಥಮದಲ್ಲಿ ವ್ಯುತ್ಪತ್ತಿಯು. ಶಬ್ದಾರ್ಥವನ್ನು ತಿಳಿದವನಿಗೆ, ಆಮೇಲೆ ಭವಿಷ್ಯದರ್ಥದಲ್ಲಿಯೂ ಅತೀತಾರ್ಥದಲ್ಲಿಯೂ ಆಕಾಂಕ್ಷೆಯು ಸಂಭವಿಸುವುದು.

**ಇಷ್ಟಮಾಕಾಂಕ್ಷತೇ ಸರ್ವೋ ನ ಪ್ರವೃತ್ತಿಮಪೇಕ್ಷತೇ ॥೫೩॥**

**ಅಪರೋಕ್ಷಂ ಪರೋಕ್ಷಂ ವಾ ಜ್ಞಾನಮಿಷ್ಟಸ್ಯ ಸಾಧನಮ್ ।**

**ಕ್ವಾಪಿ ಚೇಷ್ಟಾ ತದರ್ಥಾ ಸ್ಯಾದತ್ತಿರ್ಹಿ ರಸವಿತ್ತಯೇ ॥೫೪॥**

**ವಾಕ್ಯಾರ್ಥಜ್ಞಾನಮಾತ್ರೇಣ ಕ್ವಚಿದಿಷ್ಟಂ ಭವೇದಪಿ ।**

ಎಲ್ಲರೂ ಇಷ್ಟವಾದುದನ್ನೇ ಅಪೇಕ್ಷಿಸುತ್ತಾರೆ. ಪ್ರವೃತ್ತಿಯನ್ನು ಅಪೇಕ್ಷಿಸುವುದಿಲ್ಲ. ಅಪರೋಕ್ಷವಾಗಲೀ ಪರೋಕ್ಷವಾಗಲೀ ಜ್ಞಾನವೇ ಇಷ್ಟಕ್ಕೆ ಸಾಧನ. ಕೆಲವುಕಡೆ ಕ್ರಿಯೆಯು ಇಷ್ಟಾರ್ಥಜ್ಞಾನಕ್ಕಾಗಿಯೇ ಆಗುವುದು. ಭಕ್ಷಣಾದಿ ಕ್ರಿಯೆಯು ರಸಾನುಭವಕ್ಕಾಗಿ ಆಗುವುದು. ಕೆಲವು ಸಂದರ್ಭಗಳಲ್ಲಿ ವಾಕ್ಯಾರ್ಥ ಜ್ಞಾನದಿಂದಲೇ ಇಷ್ಟವೂ ಆಗುವುದು.

**ನ ಚ ಸ್ರುಕ್ ಸ್ರುವವಕ್ಯಾದಾವತಾತ್ಪರ್ಯಂ ಶ್ರುತೇರ್ಭವೇತ್ ॥೫೫॥**

**ಯತ್ಕಿಂಚಿತ್ಕರಣಸ್ಯಾಪಿ ಯಜ್ಞತ್ವೇನಾನ್ಯಥಾ ಭವೇತ್ ।**

**ತಸ್ಮಾದುಪಾಸನಾರ್ಥಂ ಚ ಸ್ವಾರ್ಥೇ ತಾತ್ಪರ್ಯವದ್ಭವೇತ್ ॥೫೬॥**

ಸ್ರುಕ್ ಸ್ರುವ ಅಗ್ನ್ಯಾದಿಗಳಲ್ಲಿ ಶ್ರುತಿಗೆ ಅತಾತ್ಪರ್ಯವು ಆಗಲಾರದು. ಯೂಪ ಆಹವನೀಯಾದಿಗಳಿಗೆ ಯೂಪಾದಿಗಳ ಸ್ವರೂಪದಲ್ಲಿ ತಾತ್ಪರ್ಯವಿಲ್ಲದಿದ್ದರೆ ಅವುಗಳಿಲ್ಲದ ಯತ್ಕಿಂಚಿತ್ಕರ್ಮಕ್ಕೂ ಯಾಗ ಸ್ವರೂಪತ್ವವು ಬರಬೇಕಾಗುವುದು. ಅದೇ ನ್ಯಾಯದಿಂದ 'ಸತ್ಯಂ ಜ್ಞಾನಂ' ಇತ್ಯಾದಿ ವೇದವಾಕ್ಯವು ಉಪಾಸನಾರ್ಥವಾಗಿ ಬ್ರಹ್ಮನಲ್ಲಿ ತಾತ್ಪರ್ಯವನ್ನು ಹೊಂದುವುದು.

**ಇತಿಶಬ್ದೋಽನ್ವಯೇಽಗ್ನಾವಿತ್ಯಪ್ಯುನ್ನೀತೇ ಸ್ಮೃತಿರ್ಭವೇತ್ ।**
**ಇತಿಶಬ್ದವ್ಯಪೇತಾನಿ ಹ್ಯಪಿ ಸಂತಿ ವಚಾಂಸ್ಯಲಮ್ ।।೫೭।।**
**ಆತ್ಮಾನಮೇವೇತ್ಯಾದೀನಿ ಯೋಗೇಽಗ್ನಾವಪಿ ತತ್ಸಮಮ್ ।**

'ಆತ್ಮೇತ್ಯೇವೋಪಾಸೀತ' ಇತ್ಯಾದಿಗಳಲ್ಲಿ ವೈಪರೀತ್ಯವಾಚಕವಾದ ಇತಿ ಶಬ್ದಕ್ಕೆ ಆತ್ಮಾದಿ ಶಬ್ದಗಳೊಂದಿಗೆ ಸಂಬಂಧವನ್ನು ಹೊಂದಿಸಿ ವ್ಯಾಖ್ಯಾನ ಮಾಡಲು ಬರುವಾಗ, 'ಅಗ್ನೌ ಜುಹೋತಿ' ಇತ್ಯಾದಿಗಳಲ್ಲಿಯೂ ಇತಿ ಶಬ್ದವನ್ನು ತಂದು ಕೂಡಿಸಲು ಸ್ಮೃತಿಮಾತ್ರದಿಂದ ಸಂಬಂಧವು ಆಗುವುದು. 'ಆತ್ಮಾನಮೇವೋಪಾಸೀತ' ಆತ್ಮನನ್ನೇ ಉಪಾಸನೆ ಮಾಡತಕ್ಕದ್ದು ಇತ್ಯಾದಿ ಇತಿಶಬ್ದರಹಿತವಾದ ಅನೇಕ ವಾಕ್ಯಗಳು ಇವೆಯಷ್ಟೆ. ಅಂಥಹ ಕಡೆಗಳಲ್ಲಿ ಇತಿ ಶಬ್ದವನ್ನು ಅಧ್ಯಾಹಾರ ಮಾಡಿ ಅರ್ಥಮಾಡುವುದಾದರೆ, 'ಅಗ್ನೌ ಜುಹೋತಿ' ಎನ್ನುವಲ್ಲಿಯೂ ಇತಿ ಶಬ್ದಯೋಗವು ಸಮಾನವೇ ಆಗುವುದು.

**ಏಕವಾಕ್ಯತ್ವಯೋಗೇ ತು ವೇದಸ್ಯಾಪಿ ಹ್ಯಶೇಷತಃ ।।೫೮।।**
**ವಾಕ್ಯಭೇದೋ ನ ಯುಕ್ತಸ್ಸ್ಯಾದ್ಯೋಗಶ್ಚ ಸ್ಯಾನ್ಮಹಾಫಲೇ ।**

ಎಲ್ಲ ವೇದಗಳಿಗೂ ಏಕವಾಕ್ಯತ್ವವು ಕೂಡಿದರೆ ವಾಕ್ಯಭೇದವು ಯುಕ್ತವಾಗಲಾರದು. ಶ್ರೇಷ್ಠ ಫಲವಾದ ಮುಕ್ತಿಗೆ ಸಾಧನನಾದ ವಿಷ್ಣುವಿನಲ್ಲಿಯೇ ಎಲ್ಲ ವೇದಗಳಿಗೂ ಏಕವಾಕ್ಯತ್ವದ ಸಂಬಂಧವು ಕೂಡಿದರೆ, ಅಲ್ಪ ಫಲವಾದ ಕರ್ಮದಲ್ಲಿ ಸಂಬಂಧವು ಕೂಡುವುದಿಲ್ಲ.

**ಇತಿ ಬ್ರೂಯಾದಿತಿ ವಚೋ ಗತಮಗ್ನೌ ಸಮೀಪಗಮ್ ।।೫೯।।**
**ಕಲ್ಪನಾಗೌರವಂ ಚೇತ್ ಸ್ಯಾತ್ ಪೃಥಕ್ತಾತ್ಪರ್ಯಕಲ್ಪನೇ ।**
**ಕಲ್ಪನಾಗೌರವಾದೇವ ಪದಾರ್ಥಾ ನ ಸ್ಯುರೇವ ಹಿ ।।೬೦।।**

'ನ ಗಿರಾ ಗಿರೇತಿ ಬ್ರೂಯಾತ್' ಎನ್ನುವ ವಾಕ್ಯವು ಅಗ್ನೌ ಎನ್ನುವುದರ ಸಮೀಪದಲ್ಲಿರುವುದಾಗಿ ತಿಳಿಯುವುದು. ಯೂಪಾಹವನೀಯಾದಿ ವಾಕ್ಯಗಳಿಗೆ ಪಶುಬಂಧಾದಿ ಕಾರ್ಯದಲ್ಲಿ ತಾತ್ಪರ್ಯವನ್ನು ಒಪ್ಪಬೇಕು. ಯೂಪಾದಿ ಸ್ವರೂಪದಲ್ಲಿಯೂ ಪ್ರತ್ಯೇಕವಾಗಿ ತಾತ್ಪರ್ಯವನ್ನು ಕಲ್ಪಿಸಿದರೆ ಕಲ್ಪನಾಗೌರವ ಬರುವುದು. ಕಲ್ಪನಾಗೌರವದಿಂದಾಗಿಯೇ ಪದಾರ್ಥಗಳ ಸಿದ್ಧಿಯೇ ಆಗದು.

**ಪ್ರಮಾಣಾವಗತತ್ವಂ ಚೇತ್ತಾತ್ಪರ್ಯಾಣಾಂ ತಥೈವ ಹಿ ।**

**ತಸ್ಮಾತ್ ಪದಾರ್ಥೇ ವಾಕ್ಯಾರ್ಥೇ ತಾತ್ಪರ್ಯಮುಭಯತ್ರ ಚ ॥೬೧॥**

ತಾತ್ಪರ್ಯಗಳಿಗೆ ಪ್ರಮಾಣಗಳಿಂದ ತಿಳಿಯಲ್ಪಡುವಿಕೆಯು ಇದ್ದರೆ, ಅದರಂತೆಯೇ ಶ್ರುತಿವಾಕ್ಯಗಳಿಗೆ ಬ್ರಹ್ಮನಲ್ಲಿ ತಾತ್ಪರ್ಯ ಮತ್ತು ಪ್ರಮಾಣಗಳಿಂದ ತಿಳಿಯಲ್ಪಡುವಿಕೆ ಇರುವುದರಿಂದ ಕಲ್ಪನಾಗೌರವ ಬರುವುದು. ಆದಕಾರಣ ಸತ್ಯಜ್ಞಾನಾದಿ ವಾಕ್ಯಗಳಿಗೆ ಪದಾರ್ಥನಾದ ಬ್ರಹ್ಮನಲ್ಲಿಯೂ, ವಾಕ್ಯಾರ್ಥವಾದ ಉಪಾಸನಾದಿ ಕಾರ್ಯದಲ್ಲಿಯೂ, ಹೀಗೆ ಎರಡು ಕಡೆಗಳಲ್ಲಿಯೂ ತಾತ್ಪರ್ಯವನ್ನು ಒಪ್ಪಬೇಕು.

**ಪೃಥಗೇವ ಚ ವಾಕ್ಯತ್ವಂ ಪೃಥಗನ್ವಯತೋ ಭವೇತ್ ।**

**ಅವಾಂತರತ್ವಾದ್ವಾಕ್ಯಾನಾಂ ವಾಕ್ಯಭೇದೋ ನ ದೂಷಣಮ್ ॥೬೨॥**

**ಅಂಗೀಕೃತತ್ವಾದಪಿ ತೈಃ ಪದಾನಾಂ ತು ಪೃಥಕ್ ಪೃಥಕ್ ।**

**ಕ್ರಿಯಾಪದೇನಾನ್ವಯಸ್ಯ ವಾಕ್ಯಭೇದೋ ಹಿ ದೂಷಣಮ್ ॥೬೩॥**

ಸತ್ಯಸ್ವರೂಪನು ಬ್ರಹ್ಮನು, ಜ್ಞಾನಸ್ವರೂಪನು ಬ್ರಹ್ಮನು, ಹೀಗೆ ಪ್ರತ್ಯೇಕ ಅನ್ವಯವಿದ್ದುದರಿಂದ ಪ್ರತ್ಯೇಕ ವಾಕ್ಯತ್ವವೇ ಆಗುವುದು. ವಾಕ್ಯಗಳಿಗೆ ಅವಾಂತರತ್ವವು ಇರುವುದರಿಂದ ವಾಕ್ಯಭೇದವು ದೂಷಣವಲ್ಲ. 'ಅರುಣಯಾ ಪಿಂಗಾಕ್ಷ್ಯಾ ಏಕಹಾಯನ್ಯಾ ಗವಾ ಸೋಮಂ ಕ್ರೀಣಾತಿ ಚ' ಇತ್ಯಾದಿ ಕಡೆಗಳಲ್ಲಿ, ಅರುಣಯಾ ಇತ್ಯಾದಿ ಪದಗಳಿಗಾದರೂ ಬೇರೆಬೇರೆಯಾಗಿ ಕ್ರೀಣಾತಿ ಇತ್ಯಾದಿ ಕ್ರಿಯಾಪದಗಳೊಂದಿಗೆ ಅನ್ವಯವು ಮೀಮಾಂಸಕರಿಂದಲೂ ಅಂಗೀಕೃತವಾದ್ದರಿಂದ ವಾಕ್ಯಭೇದವು ಅವರಿಗೂ ದೂಷಣವಾಗಬೇಕಾಗುವುದು.

**ಪ್ರತ್ಯಕ್ಷಾದಿವಿರೋಧೇ ತು ಗೌಣಾರ್ಥಸ್ಯಾಪಿ ಸಂಭವಾತ್ ।**

**ಅತಾತ್ಪರ್ಯಂ ಪದಾರ್ಥೇಽಪಿ ನ ಕಲ್ಪ್ಯಮವಿರೋಧತಃ ॥೬೪॥**

ಪ್ರತ್ಯಕ್ಷಾದಿಗಳಿಂದ ವಿರೋಧವಿರುವುದಾದರೆ ಗೌಣಾರ್ಥವೂ ಕೂಡುವುದು. ವಿರೋಧವಿಲ್ಲದಿರುವುದರಿಂದ ಪದಾರ್ಥವಾದ ವಿಷ್ಣುವಿನಲ್ಲಿಯೂ ತಾತ್ಪರ್ಯದ ಅಭಾವವನ್ನು ಕಲ್ಪಿಸಕೂಡದು.

**ಅತೋ ಜ್ಞಾನಫಲಾನ್ಯೇವ ಕರ್ಮಾಣಿ ಜ್ಞಾನಮೇವ ಹಿ ।**

**ಮುಖ್ಯಪ್ರಸಾದದಂ ವಿಷ್ಣೋರ್ಜಿಜ್ಞಾಸಾಯಾಶ್ಚ ತದ್ಭವೇತ್ ॥೬೫॥**

**ಕರ್ತವ್ಯಾ ತೇನ ಜಿಜ್ಞಾಸಾ ಶ್ರುತಿಪ್ರಾಮಾಣ್ಯಯೋಗತಃ ।**

ಆದಕಾರಣ ಯಾಗಾದಿ ಕರ್ಮಗಳು ಭಗವಂತನ ಜ್ಞಾನಕ್ಕಾಗಿಯೇ ಇರುವುವು. ಜ್ಞಾನವೇ ವಿಷ್ಣುವಿನ ಮುಖ್ಯಪ್ರಸಾದಕ್ಕೆ ಕಾರಣವಾಗುವುದು. ಆ ಜ್ಞಾನವಾದರೋ ವಿಷ್ಣುವಿನ ಜಿಜ್ಞಾಸೆಯಿಂದಲೇ ಆಗುವುದು. ಶ್ರುತಿಪ್ರಾಮಾಣ್ಯವು ಕೂಡುವುದರಿಂದ ಜಿಜ್ಞಾಸೆಯು ಮಾಡತಕ್ಕದ್ದು.

**ವಿವರಣೆ:**

**ಮೀಮಾಂಸಕರ ಕಾರ್ಯತಾ ವಾದ:**

ಮೀಮಾಂಸಕರಲ್ಲಿ ಕೆಲವರು ಹೀಗೆ ಹೇಳುತ್ತಾರೆ. ವಿಧಿ ಹಾಗೂ ಮಂತ್ರರೂಪವಾದ ಎಲ್ಲ ವೇದವಾಕ್ಯಗಳೂ ಕಾರ್ಯವನ್ನು ಬೋಧಿಸುತ್ತವೆಯೇ ಹೊರತು ಸಿದ್ಧಾರ್ಥವನ್ನಲ್ಲ. ಕಾರ್ಯವಲ್ಲದ ಸಿದ್ಧವಸ್ತುವನ್ನು ಬೋಧಿಸುವುದರಿಂದ ಯಾವ ಪ್ರವೃತ್ತಿಯೂ ಉಂಟಾಗುವುದಿಲ್ಲ. ಲೋಕದ ವ್ಯವಹಾರದಲ್ಲಿ ಕಾರ್ಯದ ಉದ್ದೇಶವಿಟ್ಟುಕೊಂಡೇ ವಾಕ್ಯವನ್ನು ಪ್ರಯೋಗಿಸುವುದನ್ನು ಕಂಡಿದ್ದೇವೆ. ವಾಚ್ಯ-ವಾಚಕ ಭಾವರೂಪವಾದ ಸಂಬಂಧ ಜ್ಞಾನಪೂರ್ವಕವಾದ ವ್ಯುತ್ಪತ್ತಿಯನ್ನು ಅಪೇಕ್ಷಿಸಿಕೊಂಡೇ ಶಬ್ದವು ಅರ್ಥಜ್ಞಾನವನ್ನು ಹುಟ್ಟಿಸುತ್ತದೆ. ಬೇರೆ ರೀತಿಯಾಗಿ ಅಲ್ಲ. ವ್ಯುತ್ಪತ್ತಿಯಾದರೋ ಹಿರಿಯರ ವ್ಯವಹಾರವನ್ನು ನೋಡಿಯೇ ಹುಟ್ಟುತ್ತದೆ. ಹಿರಿಯರ ಆದೇಶದಂತೆ ಒಬ್ಬ ಕಿರಿಯನು ಕಾರ್ಯವನ್ನು ಮಾಡುವಾಗ ಕಿರಿಯನ ಕಾರ್ಯವನ್ನು ನೋಡಿದ ಬಾಲಕನು ಹಿರಿಯರು ಪ್ರಯೋಗಿಸಿದ ವಾಕ್ಯದ ಅರ್ಥವನ್ನು ತಿಳಿಯುತ್ತಾನೆ. ಉದಾಹರಣೆಗೆ, 'ಚೈತ್ರನೇ ನೀರು ತೆಗೆದುಕೊಂಡು ಬಾ', 'ಹಸುವನ್ನು ಈ ಕಂಭಕ್ಕೆ ಕಟ್ಟು' ಮೊದಲಾಗಿ ಹಿರಿಯನು ಕಿರಿಯನಿಗೆ ಹೇಳಿದಾಗ ಅದರಂತೆ ಅವನು ಕಾರ್ಯವನ್ನು

ಮಾಡಿದಾಗ, ಅದನ್ನು ನೋಡಿದ ಮತ್ತೊಬ್ಬ ಬಾಲಕನು, ನೀರು ಮತ್ತು ಹಸು ಶಬ್ದಗಳ ಅರ್ಥ, ತರುವುದು ಮತ್ತು ಕಟ್ಟುವುದು ಮೊದಲಾದ ಕಾರ್ಯಗಳ ಅರ್ಥವನ್ನು ತಿಳಿಯುತ್ತಾನೆ. ಕಾರ್ಯದಲ್ಲಿ ಪ್ರವೃತ್ತಿ ಹುಟ್ಟಿಸದ ವಾಕ್ಯದ ಪ್ರಯೋಗದಿಂದ ವಾಕ್ಯಾರ್ಥವು ಆಗುವುದಿಲ್ಲ.

ಪ್ರಯತ್ನದಿಂದ ಸಾಧಿಸಲಿಕ್ಕೆ ಯೋಗ್ಯವಾದುದೇ ಕಾರ್ಯ. ಕಾರ್ಯವೇ ಪ್ರವೃತ್ತಿ ನಿವೃತ್ತಿಗಳಿಗೆ ಉಪಯುಕ್ತವಾದ ಅರ್ಥ. ಪ್ರವೃತ್ತಿ-ನಿವೃತ್ತಿಗಳಿಗೆ ಉಪಯುಕ್ತವಾದ ಅರ್ಥಜ್ಞಾನವನ್ನು ಹುಟ್ಟಿಸುವುದರಿಂದಲೇ ಪ್ರಮಾಣವಾಕ್ಯಗಳಿಗೆ ಪ್ರಾಮಾಣ್ಯವು. ಕೇವಲ ಸಿದ್ಧಾರ್ಥವನ್ನು ಬೋಧಿಸುವ ಶಬ್ದ ಪ್ರಯೋಗದಿಂದ ಪ್ರವೃತ್ತಿ ನಿವೃತ್ತಿಗಳು ಸಾಧ್ಯವಿಲ್ಲ. ಅಂಥಹ ಪ್ರಯೋಗವು ಉಪಯುಕ್ತವಾಗದ ಪ್ರಯುಕ್ತ ಪ್ರಮಾಣವೂ ಆಗುವುದಿಲ್ಲ. ಕಾರ್ಯವನ್ನು ಬೋಧಿಸುವಲ್ಲಿಯೇ ಸರ್ವ ವೇದಗಳಿಗೂ ತಾತ್ಪರ್ಯವಿರುವ ಪ್ರಯುಕ್ತ ಸಿದ್ಧರೂಪನಾದ ಬ್ರಹ್ಮನಲ್ಲಿ ವೇದಗಳಿಗೆ ಪ್ರಾಮಾಣ್ಯವೇ ಕೂಡುವುದಿಲ್ಲ. ಆದ್ದರಿಂದ ಬ್ರಹ್ಮನ ಜಿಜ್ಞಾಸೆಯೂ ಕೂಡುವುದಿಲ್ಲ.

**ಮೀಮಾಂಸಕರ ವಾದದ ನಿರಾಕರಣೆ:**

ವೇದಗಳು ಕಾರ್ಯವನ್ನಷ್ಟೇ ಬೋಧಿಸುತ್ತವೆ, ಸಿದ್ಧ ವಸ್ತುವನ್ನು ಬೋಧಿಸುವುದಿಲ್ಲ ಎಂಬ ಮೀಮಾಂಸಕರ ವಾದವನ್ನು ಖಂಡಿಸುತ್ತ ಶ್ರೀಮದಾಚಾರ್ಯರು 'ಕಾರ್ಯತಾ ಚ' ಎಂಬುದಾಗಿ ಪ್ರಾರಂಭಿಸಿ 'ಶ್ರುತಿಪ್ರಾಮಾಣ್ಯಯೋಗತಃ' ಎಂಬುವವರೆಗೆ ಕಾರ್ಯದ ಬಗ್ಗೆ ಸರಿಯಾದ ತಿಳುವಳಿಕೆ ಮಾಡಿಕೊಟ್ಟು, ಬ್ರಹ್ಮನಲ್ಲಿ ವೇದಗಳಿಗೆ ಪ್ರಾಮಾಣ್ಯವಿರುವುದರಿಂದ ಬ್ರಹ್ಮಜಿಜ್ಞಾಸೆ ಮಾಡತಕ್ಕದ್ದು ಎಂಬುದನ್ನು ಸಮರ್ಥಿಸುತ್ತಾರೆ. ಮಾಡಲಿಕ್ಕೆ ಶಕ್ಯವಾದುದೆಲ್ಲವೂ ಕಾರ್ಯ ಎಂಬ ವ್ಯಾಖ್ಯೆಯೇ ಸರಿಯಲ್ಲ. ನಮ್ಮ ಕ್ರಿಯೆಗೆ ಸಾಧ್ಯವಾದುದೆಲ್ಲ ಕಾರ್ಯ ಎನಿಸುವುದಿಲ್ಲ. ಉದಾಹರಣೆಗೆ ಮದ್ಯಪಾನವನ್ನು ಅನೇಕರು ಮಾಡುತ್ತಾರೆ. ಆದರೆ ಅದನ್ನು ಕಾರ್ಯ ಎಂದು ಯಾರೂ ಹೇಳಲಾರರು. ಮದ್ಯಪಾನವು ಅಕಾರ್ಯವೆಂದೇ ಹೇಳಲಾಗುತ್ತದೆ. ಇಷ್ಟಸಾಧನವಾದುದೇ ಕಾರ್ಯ. ಮದ್ಯಪಾನವು ಅನಿಷ್ಟಸಾಧನವಾದ್ದರಿಂದ ಅದು ಅಕಾರ್ಯ. ಈ ದೃಷ್ಟಿಯಲ್ಲಿ ಪರಮೇಷ್ಟನೂ, ಮೋಕ್ಷಾದಿ ಇಷ್ಟಗಳನ್ನು

ನೀಡುವುದರಿಂದ ಇಷ್ಟಸಾಧಕನೂ ಆಗಿರುವ ಭಗವಂತನು ಕ್ರಿಯೆಗೆ ಆಗೋಚರನಾಗಿದ್ದರೂ ಕಾರ್ಯವೇ ಆಗಿರುವನು. ಎಲ್ಲ ವಿಧಿವಾಕ್ಯಗಳೂ ಇಷ್ಟಸಾಧನವಾದ ಕಾರ್ಯಗಳನ್ನೇ ಬೋಧಿಸುತ್ತವೆ. ಅದರಂತೆ ವೇದವು ಇಷ್ಟಸಾಧನವಾದ ಭಗವಂತನನ್ನು ಪ್ರತಿಪಾದಿಸತ್ತದೆ ಎಂದು ಒಪ್ಪಲು ಯಾವ ಅಡ್ಡಿಯೂ ಇರುವುದಿಲ್ಲ. ಇಷ್ಟಸಾಧನವಾಗಿದ್ದರೂ ಕೃತಿಸಾಧ್ಯವಾಗದಿದ್ದರೆ ಕಾರ್ಯವೆನಿಸುವುದಿಲ್ಲ. ಆದ್ದರಿಂದ ಕಾರ್ಯವನ್ನು ಬೋಧಿಸುವ ಎಲ್ಲ ವಿಧಿವಾಕ್ಯಗಳೂ ಇಷ್ಟಸಾಧನವನ್ನು ಮಾತ್ರ ಬೋಧಿಸುತ್ತವೆ. ಆದರೆ ಇದನ್ನು ಕೃತಿಗಿಳಿಸಲು ಸಾಧ್ಯವೇ ಎಂದು ವಿಚಾರ ಮಾಡಿಯೇ ಜನರು ಪ್ರವೃತ್ತಿ ಮಾಡುತ್ತಾರೆ. ಇಷ್ಟಸಾಧನತ್ವದ ಜೊತೆಗೆ ಕಾರ್ಯಸಾಧ್ಯತ್ವ ಮತ್ತು ಪ್ರಯೋಜನಗಳನ್ನು ಹೊಂದಿದ್ದರೆ ಮಾತ್ರ ಅಂಥಹ ವಾಕ್ಯವು ಪ್ರವೃತ್ತಿಯನ್ನು ಹುಟ್ಟಿಸುವುದರಿಂದ ಅದು ಕಾರ್ಯವನ್ನು ಬೋಧಿಸುತ್ತದೆ ಎಂದು ತಿಳಿಯಬೇಕು. ಭಗವಂತನು ಪರಮೇಷ್ಟನೂ, ಪರಮೇಷ್ಟಸಾಧನನೂ ಆಗಿದ್ದಾನೆ. ಅವನ ಪ್ರಸಾದದಿಂದ ಪರಮೇಷ್ಟವಾದ ಮೋಕ್ಷವು ಲಭಿಸುತ್ತದೆ. ವೇದವು ಪ್ರಧಾನವಾಗಿ ಪರಮಾತ್ಮನನ್ನೇ ಬೋಧಿಸಿದರೂ ಅವನ ಸಾಕ್ಷಾತ್ಕಾರಕ್ಕಾಗಿ ಅಪ್ರಧಾನವಾಗಿ ಉಪಾಸನೆಯ ವಿಧಿಗಳನ್ನೂ ತಿಳಿಸುತ್ತವೆ.

ಕೇವಲ ಸಿದ್ಧವಸ್ತುವನ್ನು ಬೋಧಿಸುವುದರಿಂದ ಯಾವ ಪ್ರವತ್ತಿಯೂ ನಿವೃತ್ತಿಯೂ ಉಂಟಾಗದಿರುವುದರಿಂದ ಅದನ್ನು ತಿಳಿಸಬೇಕಿಲ್ಲ ಎಂದು ಹೇಳುವುದು ಸರಿಯಲ್ಲ. ವಾಕ್ಯದ ಪ್ರಯೋಜನವು ಪ್ರವೃತ್ತಿ ನಿವೃತ್ತಿಗಳೇ ಅಲ್ಲ. ನಮಗೆ ಇಷ್ಟವಾದ ವಸ್ತುವನ್ನು ಬೋಧಿಸುವುದರಿಂದಲೂ ವಾಕ್ಯವು ಸಫಲವಾಗುವುದು. ವಾಕ್ಯವು ಕಾರ್ಯವನ್ನು ಬೋಧಿಸುವುದರ ಜೊತೆಗೆ ಅದಕ್ಕೆ ಸಂಬಂಧಿಸಿದ ಸಿದ್ಧವಸ್ತುಗಳನ್ನೂ ಬೋಧಿಸುತ್ತದೆ. ಅಂತೆಯೇ ವೇದವು ಯಜ್ಞಾದಿ ಕ್ರಿಯೆಗಳ ಮೂಲಕ ಬ್ರಹ್ಮನ ಉಪಾಸನೆ, ಶಾಸ್ತ್ರಾಧ್ಯಯನ, ವಿಮರ್ಶೆ ಇತ್ಯಾದಿ ಕ್ರಿಯೆಯನ್ನು ವಿಧಿಸುವಾಗ ಅದಕ್ಕೆ ಸಂಬಂಧಿಸಿದ ಬ್ರಹ್ಮನನ್ನೂ ತಿಳಿಸಲೇಬೇಕಾಗುತ್ತದೆ. ಹೀಗೆ ಪ್ರಧಾನವಾಗಿ ಅಥವಾ ಕ್ರಿಯೆಗೆ ಸಂಬಂಧಿಸಿದಂತಾಗಲೀ ವೇದವು ಪರಮಾತ್ಮನನ್ನು ಬೋಧಿಸುವುದು ಎಂದು ಒಪ್ಪಲೇಬೇಕಾದ್ದರಿಂದ, ವೇದಗಳ ಮೂಲಕವೇ ಬ್ರಹ್ಮಜಿಜ್ಞಾಸೆ ಮಾಡಬೇಕು.

## ವೇದಪ್ರಾಮಾಣ್ಯ ಸಮರ್ಥನೆ

**ಪ್ರತ್ಯಕ್ಷವಚ್ಚ ಪ್ರಾಮಾಣ್ಯಂ ಸ್ವತ ಏವಾಗಮಸ್ಯ ಹಿ ॥೬೬॥**
**ಅನವಸ್ಥಾಽನ್ಯತಾ ಹಿ ಸ್ಯಾದಪ್ರಾಮಾಣ್ಯಂ ತಥಾಽನ್ಯತಃ ।**
**ಮಿಥ್ಯಾಜ್ಞಪ್ತಿಪ್ರಲಂಭಾದೇಸ್ತೇನ ವೇದವಿರೋಧಿ ಯತ್ ॥೬೭॥**
**ನ ಮಾನಮಪಿ ವೇದಾನಾಮಂಗೀಕಾರ್ಯಾ ಹಿ ನಿತ್ಯತಾ ।**

ಆಗಮಕ್ಕೆ ಪ್ರಾಮಾಣ್ಯವು ಪ್ರತ್ಯಕ್ಷದಂತೆಯೇ ಬೇರೆ ಯಾವ ಬೆಂಬಲವನ್ನು ಅಪೇಕ್ಷಿಸದೇ (ಸ್ವತ ಏವ) ಸಿದ್ಧಿಸುವುದು. ಪ್ರಾಮಾಣ್ಯವು ಸ್ವಾಭಾವಿಕ ಸಂಬಂಧದಿಂದಲೇ ಆಗುವುದು. ಪ್ರಾಮಾಣ್ಯಕ್ಕೆ ಸ್ವತಸ್ತ್ವವನ್ನು ಅಂಗೀಕರಿಸದಿದ್ದರೆ ಅನವಸ್ಥೆಯು ಸಂಭವಿಸುವುದು. ಆದರೆ ಅಪ್ರಾಮಾಣ್ಯವನ್ನು ಸಾಧಿಸಲು ಬೇರೆ ಸಾಧನಗಳ ಸಹಾಯ ಬೇಕಾಗುವುದು. ಅಂದರೆ ದೋಷಾದಿರೂಪವಾದ ಅಪವಾದದಿಂದ ಅಪ್ರಾಮಾಣ್ಯವು ಸಂಭವಿಸುವುದು. ಮಿಥ್ಯಾಜ್ಞಾನ, ದೋಷಪೂರ್ಣವಾದ ಇಂದ್ರಿಯ ಇವೇ ಮೊದಲಾದ ಕಾರಣದಿಂದ ವೇದಕ್ಕೆ ವಿರೋಧಿಯಾದ ಜ್ಞಾನವು ಪ್ರಮಾಣವೆನಿಸುವುದಿಲ್ಲ. ವೇದಗಳಿಗೆ ನಿತ್ಯತ್ವ (ಅಪೌರುಷೇಯತ್ವ) ಹಾಗೂ ಪ್ರಾಮಾಣ್ಯವನ್ನು ಅಂಗೀಕರಿಸಲೇಬೇಕು. ವೇದಕ್ಕೆ ನಿತ್ಯತ್ವವು 'ವಾಚಾ ವಿರೂಪ ನಿತ್ಯಯಾ' ಇತ್ಯಾದಿ ಶ್ರುತಿ ಪ್ರಸಿದ್ಧವಾಗಿದೆ.

**ವಿವರಣೆ:**

ಶಬ್ದಗಳಿಗೆ ಅಪ್ರಾಮಾಣ್ಯವನ್ನು ಸಮರ್ಥಿಸಲು ಬೌದ್ಧರು ಕೆಳಕಂಡ ಪ್ರಕಾರದಲ್ಲಿ ತಮ್ಮ ವಾದವನ್ನು ಮಂಡಿಸುತ್ತಾರೆ.

ವ್ಯುತ್ಪತ್ತಿಯಿಲ್ಲದವನಿಗೆ ಶಬ್ದವಿದ್ದರೂ ಯಥಾರ್ಥಜ್ಞಾನವು ಹುಟ್ಟದೇ ಇರುವುದರಿಂದ, ಯುಕ್ತವಾದ ವಿಷಯವೇ ಇಲ್ಲದಿರುವುದರಿಂದ, ಶಬ್ದವು ವಿಜ್ಞಾನಾತ್ಮಕವಲ್ಲ ಹಾಗೂ ಬಹಿರಿಂದ್ರಿಯಕ್ಕೆ ಅಗೋಚರವಾದ್ದರಿಂದ ಪ್ರಮಾಣವಲ್ಲ. ಶಬ್ದವು ಆಕಾಶವನ್ನು ಆಶ್ರಯಿಸಿಕೊಂಡಿದೆಯೇ ಹೊರತು ಆತ್ಮನನ್ನಲ್ಲ. ಆದಕಾರಣ ಶಬ್ದವೂ ಆತ್ಮನನ್ನು ಆಶ್ರಯಿಸಿಲ್ಲದಿರುವ ಘಟದಂತೆಯೇ ಅಪ್ರಮಾಣವು. ಶಬ್ದ ಮತ್ತು ಅರ್ಥಗಳಿಗೆ ಸಂಬಂಧವೇ ಇರುವುದಿಲ್ಲ. ಶಬ್ದವು ಆಕಾಶದಲ್ಲಿರುವುದಾದರೆ ವಸ್ತುಗಳು ಬೇರೆಡೆ ಇರುತ್ತವೆ. ಅವುಗಳಿಗೆ ಸಂಪರ್ಕವೇ ಇಲ್ಲದಿದ್ದಾಗ ಶಬ್ದದಿಂದ ವಸ್ತುವಿನ ಜ್ಞಾನ

ಬರುವುದು ಸಾಧ್ಯವಿಲ್ಲವಾದುದರಿಂದ ಶಬ್ದವು ಪ್ರಮಾಣವಲ್ಲ. ಹೀಗೆ ಯಾವ ವಿಧದಿಂದ ನೋಡಿದರೂ ಶಬ್ದಕ್ಕೆ ಪ್ರಾಮಾಣ್ಯವೇ ಕೂಡದಿರುವುದರಿಂದ ಶಬ್ದವಿಶೇಷವಾದ ವೇದಕ್ಕೆ ಪ್ರಾಮಾಣ್ಯವು ಹೇಗೆ ಕೂಡುವುದು? ಅಂತೆಯೇ ವೇದಕ್ಕೆ ವಿಷಯನಾದ ಬ್ರಹ್ಮನಲ್ಲಿಯೂ ಅದು ಕೂಡುವುದಿಲ್ಲ. ಆದ್ದರಿಂದ ಬ್ರಹ್ಮವಿಚಾರವನ್ನು ಮಾಡಬೇಕಿಲ್ಲ ಎಂದು ಬೌದ್ಧರ ವಾದ.

ಶಬ್ದಕ್ಕೆ ಅಪ್ರಾಮಾಣ್ಯವನ್ನು ಹೇಳುವ ಬೌದ್ಧರ ಈರೀತಿಯ ವಾದವನ್ನು ಖಂಡಿಸುತ್ತ ಶ್ರೀಮದಾಚಾರ್ಯರು ಸೂತ್ರದ 'ಅತಃ' ಎಂಬ ಪದಕ್ಕೆ 'ಪ್ರತ್ಯಕ್ಷವಚ್ಚ' ಇತ್ಯಾದಿಯಾಗಿ ವ್ಯಾಖ್ಯಾನ ಮಾಡುವುದರ ಮೂಲಕ ಶಬ್ದಗಳಿಗೆ ಪ್ರಾಮಾಣ್ಯವನ್ನು ಸಮರ್ಥಿಸುತ್ತಾರೆ. ಪ್ರತ್ಯಕ್ಷ ಮತ್ತು ಯುಕ್ತಿಗಳಂತೆ ವಾಕ್ಯವೂ ಪ್ರಮಾಣವೇ. ವಾಕ್ಯದಿಂದ ಜ್ಞಾನವುಂಟಾಗುತ್ತದೆ ಎಂಬುದು ನಮ್ಮ ಅನುಭವಕ್ಕೆ ಸಿದ್ಧವಾದ ವಿಷಯ. ಯಾವುದೇ ಶಬ್ದ ಅಥವಾ ವಾಕ್ಯವನ್ನು ಕೇಳುವುದರಿಂದ ಬರುವ ವಸ್ತುವಿನ ಅಥವಾ ವಿಷಯದ ಜ್ಞಾನವು ಸತ್ಯವಾಗಿರುವುದನ್ನು ಅನೇಕ ಸಂದಂರ್ಭಗಳಲ್ಲಿ ಕಂಡಿರುತ್ತೇವೆ. ಕೆಲವು ಸಂದರ್ಭಗಳಲ್ಲಿ ದೋಷದ ಪ್ರಯುಕ್ತ ಭ್ರಮೆ ಅಥವಾ ಸಂಶಯ ಬರಬಹುದು. ಪ್ರತ್ಯಕ್ಷ ಮತ್ತು ಯುಕ್ತಿಗಳಲ್ಲೂ ಕೆಲವು ಸಂದರ್ಭಗಳಲ್ಲಿ ಭ್ರಮೆಯುಂಟಾಗುವುದು. ಹಾಗಾದರೂ ಪ್ರತ್ಯಕ್ಷ ಮತ್ತು ಯುಕ್ತಿಗಳಿಗೆ ಪ್ರಾಮಾಣ್ಯವನ್ನು ಒಪ್ಪಬಹುದಾದರೆ ವಾಕ್ಯಕ್ಕೂ ಪ್ರಾಮಾಣ್ಯವನ್ನು ಒಪ್ಪಬಹುದಲ್ಲ? ಪದಗಳಿಗೂ ಅರ್ಥಕ್ಕೂ ಸಂಬಂಧವಿಲ್ಲವೆನ್ನುವುದೂ ಸರಿಯಲ್ಲ. ಮೇಲೆ ಕಾಣುವ ಹೊಗೆಯಿಂದ ಕೆಳಗೆ ಬೆಂಕಿಯನ್ನು ಊಹಿಸುತ್ತೇವೆ. ಮೇಲಿರುವ ಹೊಗೆಗೂ ಕೆಳಗಿರುವ ಬೆಂಕಿಗೂ ಸಂಯೋಗವಿರಲಿಕ್ಕಿಲ್ಲವಾದರೂ ಬೆಂಕಿಯ ಇರುವಿಕೆಯನ್ನು ಯುಕ್ತಿಯಿಂದ ನಿರ್ಧರಿಸುತ್ತೇವೆ. ಅಂತೆಯೇ ತಗ್ಗಿನಲ್ಲಿ ನೆರೆಬಂದಾಗ ಮೇಲೆ ಘಟ್ಟದಲ್ಲಿ ಮಳೆ ಬಂದಿದೆಯೆಂಬುದನ್ನೂ ಯುಕ್ತಿಯಿಂದ ತಿಳಿದುಕೊಳ್ಳುತ್ತೇವೆ. ಬೆಂಕಿಗೂ ಹೊಗೆಗೂ ಅವಿನಾಭಾವ ಸಂಬಂಧವಿರುವಂತೆಯೇ (ಅಂದರೆ ಬೆಂಕಿಯಿಲ್ಲದೇ ಹೊಗೆಯಿಲ್ಲ ಎಂಬ ಯುಕ್ತಿ), ಪದಕ್ಕೂ ಅದರ ಅರ್ಥಕ್ಕೂ ಬಿಟ್ಟಿರಲಾರದ ಸಂಬಂಧವಿದೆ. ಈ ಪ್ರಕಾರವಾಗಿ ಪದಗಳಲ್ಲಿರುವ ವಾಚ್ಯ-ವಾಚಕರೂಪವಾದ

ಸಂಬಂಧವನ್ನೇ 'ಶಕ್ತಿ' ಎಂದು ಕರೆಯುತ್ತಾರೆ.

ಬೆಂಕಿಗೆ ಸುಡುವ ಶಕ್ತಿ ಸಹಜವಾಗಿರುವುದರಿಂದ ಅದನ್ನು ಮುಟ್ಟಿದವರಿಗೆಲ್ಲ (ಬೆಂಕಿಯ ಸುಡುವ ಶಕ್ತಿಯನ್ನು ತಿಳಿದವನಿಗೂ ಮತ್ತು ತಿಳಿಯದವನಿಗೂ) ಸುಡುವಂತೆ, ಪದಗಳಿಗೆ ಅರ್ಥಗಳನ್ನು ತಿಳಿಸಿಕೊಡುವ ಸಹಜಶಕ್ತಿಯಿದ್ದರೆ ಆ ಪದಗಳಮ್ನ ಕೇಳಿದ ಎಲ್ಲರಿಗೂ ಅದರ ಅರ್ಥದ ಜ್ಞಾನ ಯಾಕೆ ಆಗುವುದಿಲ್ಲ ? ಪದಗಳ ವ್ಯುತ್ಪತ್ತಿ ತಿಳಿದವರಿಗೆ ಮಾತ್ರ ಅರ್ಥಜ್ಞಾನ ಏಕೆ ಉಂಟಾಗಬೇಕು? ಎಂದು ಕೆಲವರ ಆಕ್ಷೇಪ. ಇದಕ್ಕೆ ಉತ್ತರ ಹೀಗಿದೆ. ಕಣ್ಣು, ಕಿವಿ ಮೊದಲಾದ ಇಂದ್ರಿಯಗಳಿದ್ದ ಮಾತ್ರಕ್ಕೆ ರೂಪ, ಶಬ್ದ ಮೊದಲಾದ ಐಂದ್ರಿಕ ವಿಷಯಗಳ ಜ್ಞಾನವುಂಟಾಗುವುದಿಲ್ಲ. ಇಂದ್ರಿಯಗಳಿಗೂ ವಿಷಯಗಳಿಗೂ ಸಂಪರ್ಕವಾದಾಗ ಮಾತ್ರ ಜ್ಞಾನವುಂಟಾಗುತ್ತದೆ. ಹೊಗೆಯಿಂದ ಬೆಂಕಿಯ ಜ್ಞಾನವಾಗಬೇಕಾದರೆ ನಾವು ಹೊಗೆಯನ್ನು ನೋಡಬೇಕು ಮತ್ತು ಹೊಗೆಗೂ ಬೆಂಕಿಗೂ ಇರುವ ಅವಿನಾಭಾವ (ಎಂದಿಗೂ ಬಿಡಲಾರದ)ಸಂಬಂಧವನ್ನು ತಿಳಿದಿರಬೇಕು. ಕೇವಲ ಹೊಗೆಯನ್ನು ನೋಡುವುದರಿಂದ ಬೆಂಕಿಯ ಜ್ಞಾನವಾಗುವುದಿಲ್ಲ. ಅಂತೆಯೇ ಪದಗಳಲ್ಲಿರುವ ಸಹಜವಾದ ಅರ್ಥಶಕ್ತಿಯನ್ನು ತಿಳಿದಾಗ ಮಾತ್ರ ಅವುಗಳಿಂದ ನಾವು ಅರ್ಥಜ್ಞಾನವನ್ನು ಪಡೆಯಬಹುದು. ಕಾರಣಗಳಿಗೆ ಕಾರ್ಯವನ್ನು ಉಂಟುಮಾಡುವ ಸಹಜ ಶಕ್ತಿಗಳಿವೆ. ವೇದಗಳಲ್ಲಿರುವ ಎಲ್ಲ ಪದಗಳಿಗೂ ಇಂಥಹ ಸಹಜ ಶಕ್ತಿಯಿದೆ. ಅದನ್ನು ಅರಿತವನಿಗೆ ಮಾತ್ರ ವೇದವು ತನ್ನ ಅರ್ಥವನ್ನು ತಿಳಿಸುತ್ತದೆ. ಆದಕಾರಣ ವೇದಗಳಿಗೆ ಪ್ರಾಮಾಣ್ಯವು ಪ್ರತ್ಯಕ್ಷದಂತೆ ಸಹಜವೇ ಆಗಿದೆ.

ಹಾಗಾದರೆ ವಾಕ್ಯವು ಪ್ರಮಾಣವೆಂದು ಒಪ್ಪುತ್ತೇವೆ. ಇದರಿಂದ ವೇದವನ್ನು ಪ್ರಮಾಣವೆಂದು ನಿರ್ಧರಿಸುವುದು ಹೇಗೆ ಎಂದು ಕೇಳಿದರೆ, ಯಾವುದೇ ಜ್ಞಾನವನ್ನು ಅದು ಪ್ರಮಾಣ ಎಂದು ನಿರ್ಧರಿಸಲು ಬೇರೆ ಕಾರಣ ಬೇಕಿಲ್ಲ. ಯಾವುದೇ ಬಾಧಕವು ಇಲ್ಲದಿದ್ದಾಗ ಜ್ಞಾನವನ್ನು ಗ್ರಹಿಸುವಾಗಲೇ ಸಾಕ್ಷಿಯು ಅದರ ಪ್ರಾಮಾಣ್ಯವನ್ನೂ ಗ್ರಹಿಸುತ್ತದೆ. ಬಾಧಕವಿದ್ದಾಗ ಮಾತ್ರ ಜ್ಞಾನದ ಪ್ರಾಮಾಣ್ಯ ಗೊತ್ತಾಗುವುದಿಲ್ಲ. ಜ್ಞಾನದಿಂದ ಪ್ರಾಮಾಣ್ಯವನ್ನು

ತಿಳಿಯಲು ಇನ್ನೊಂದು ಯುಕ್ತಿ, ಅದಕ್ಕೆ ಪ್ರಾಮಾಣ್ಯ ಸಾಧಿಸಲು ಮತ್ತೊಂದು ಯುಕ್ತಿ ಹೀಗೆ ಕೊನೆಯಿಲ್ಲದ ಯುಕ್ತಿಗಳ ಪರಂಪರೆ ಅಥವಾ ಅನವಸ್ಥೆಯು ಉಂಟಾಗುವುದರಿಂದ ಪ್ರಾಮಾಣ್ಯದ ನಿಶ್ಚಯವೇ ಆಗುವುದಿಲ್ಲ. ಆದಕಾರಣ ಪ್ರಾಮಾಣ್ಯಕ್ಕೆ ಸ್ವತಸ್ಥವನ್ನು ಒಪ್ಪಬೇಕು. ದೋಷಯುಕ್ತ ಇಂದ್ರಿಯ, ಯುಕ್ತಿಗಳಿಂದುಂಟಾಗುವ ಭ್ರಮಾತ್ಮಕ ಜ್ಞಾನದಲ್ಲಿ ಪ್ರಾಮಾಣ್ಯವು ಉಂಟಾಗುವುದಿಲ್ಲ. ಸಂಶಯಯುಕ್ತ ಜ್ಞಾನವನ್ನು ಸಾಕ್ಷಿಯು ಪ್ರಮಾಣವೆಂದು ಗ್ರಹಿಸುವುದಿಲ್ಲ. ಆದರೆ ವೇದಗಳು ಅಪೌರುಷೇಯ. ಪುರುಷರು ರಚಿಸಿದ ವಾಕ್ಯಗಳಲ್ಲಿ ಬುದ್ಧಿದೋಷದಿಂದ ಪ್ರಮಾದ, ವ್ಯತ್ಯಾಸಗಳು ಸಂಭವಿಸಲು ಸಾಧ್ಯ. ವೇದಗಳು ಯಾವುದೇ ಪುರುಷನಿಂದಲೂ ರಚಿತವಾಗಿಲ್ಲದ ಪ್ರಯುಕ್ತ ಅಂಥಹ ದೋಷಗಳು ಸರ್ವಥಾ ಅಸಂಭವವಾದ್ದರಿಂದ ವೇದವಾಕ್ಯಗಳಿಗೆ ಅಪ್ರಾಮಾಣ್ಯದ ಶಂಕೆಗೆ ಅವಕಾಶವೇ ಇರುವುದಿಲ್ಲ.

### ವೇದಾಪೌರುಷೇಯತ್ವ ಸಮರ್ಥನೆ

**ನ ಹಿ ಧರ್ಮಾದಿಸಿದ್ಧಿಃ ಸ್ಯಾನ್ನಿತ್ಯವಾಕ್ಯಂ ವಿನಾ ಕ್ವಚಿತ್ ॥೬೮॥**

ನಿತ್ಯವಾದ ಅಂದರೆ ಅಪೌರುಷೇಯವಾದ ವಾಕ್ಯದಿಂದಲೇ ಹೊರತು ಬೇರೆ ಯಾವ ಪ್ರಮಾಣದಿಂದಲೂ ಧರ್ಮಾದಿ ಸಿದ್ಧಿಯು ಸಾಧ್ಯವಾಗದು.

**ಅವಿಪ್ರಲಂಭಸ್ತಜ್ಜ್ಞಾನಂ ತತ್ಕೃತತ್ವಾದಯೋಽಪಿ ಚ ।**
**ಕಲ್ಪ್ಯಾ ಗೌರವದೋಷೇಣ ಪುಂವಾಕ್ಯಂ ಜ್ಞಾಪಕಂ ನ ತತ್ ॥೬೯॥**

ಬುದ್ಧ ಮೊದಲಾದವರಿಂದ ರಚಿತವಾದ ಪುರುಷರಿಂದ ರಚಿತವಾದ ವಾಕ್ಯವನ್ನು ಪ್ರಮಾಣವೆಂದು ಅಂಗೀಕರಿಸುವ ಮುಂಚೆ, ಅಂಥಹ ಪುರುಷನಿಗೆ ಇಂದ್ರಿಯಪಾಟವ, ಮೋಸರಾಹಿತ್ಯ, ಸರ್ವಜ್ಞತ್ವ, ಕೃಪಾಲುತ್ವ, ಐಶ್ವರ್ಯ, ಧಾರ್ಮಿಕ ನಡತೆ, ವೈರಾಗ್ಯ ಮೊದಲಾದವುಗಳನ್ನು ಕಲ್ಪಿಸಬೇಕಾಗುವುದು. ಹೀಗೆ ಪೌರುಷೇಯವಾಕ್ಯಕ್ಕೆ ಕಲ್ಪನಾಗೌರವ ಎಂಬ ದೋಷ ಬರುವುದರಿಂದ ಅದು ಪ್ರಮಾಣವಾಗಲಾರದು. ಆದಕಾರಣ ಪೌರುಷೇಯ ಆಗಮದಿಂದ ಧರ್ಮಾದಿ ಸಿದ್ಧಿಯು ಸಾಧ್ಯವಾಗದು.

**ಪ್ರತ್ಯಕ್ಷಃ ಕಸ್ಯಚಿತದ್ಧರ್ಮೋ ವಸ್ತುತ್ವಾದಿತಿ ಚೋದಿತೇ ।**
**ನ ಬುದ್ಧೋ ಧರ್ಮದರ್ಶೀ ಸ್ಯಾತ್ ಪುಂಸ್ತ್ವಾದಿತ್ಯನುಮಾಹತಿಃ ॥೭೦॥**

ಧರ್ಮವೂ ಒಂದು ಪದಾರ್ಥವಾಗಿರುವುದರಿಂದ ಯಾವನೋ ಒಬ್ಬ ಪುರುಷನಿಗೆ ಪ್ರತ್ಯಕ್ಷವಾಗಿದೆ ಆದ್ದರಿಂದ ಅವನ ವಾಕ್ಯಕ್ಕೆ ಪ್ರಾಮಾಣ್ಯವಿದೆ ಎಂದು ಹೇಳುವುದು ಒಪ್ಪತಕ್ಕದ್ದಲ್ಲ. ಬುದ್ಧನು ದೇವದತ್ತನಂತೆಯೇ ಒಬ್ಬ ಪುರುಷನಾದ್ದರಿಂದ, ಪುರಷರಿಗೆ ಸಂಬಂಧಿಸಿದ ಅಜ್ಞಾನ ವಂಚಕತ್ವ ಇತ್ಯಾದಿ ದೋಷಗಳು ಅವನಲ್ಲೂ ಸಂಭವಿಸುವ ಸಾಧ್ಯತೆ ಇರುವುದರಿಂದ, ಪೌರುಷೇಯ ವಾಕ್ಯದಿಂದ ಧರ್ಮಾದಿಗಳು ಸಿದ್ಧಿಸುತ್ತವೆ ಎಂದು ಒಪ್ಪಲು ಹೇಗೆ ಸಾಧ್ಯ? ಧರ್ಮಾದಿ ದ್ರಷ್ಟೃತ್ವವು ಬುದ್ಧನಲ್ಲಿರತಕ್ಕದ್ದು. ಬೇರೆ ಕಡೆ ಇರಲು ಬಾಧಕವಿರುವುದು ಬೇರೆಲ್ಲಿಯಾದರೂ ಒಂದುಕಡೆ ಇರಬೇಕಾಗಿರುವುದರಿಂದ ಎಂಬ ಪರಿಶೇಷಾನುಮಾನಕ್ಕೆ ಈ ಪುಂಸ್ತ್ವಾನುಮಾನದಿಂದ ಬಾಧವು.

**ಅಧರ್ಮವಾದಿನೋ ವಾಕ್ಯಮಪ್ರಯೋಜನಮೇವ ಹಿ ।**
**ಧರ್ಮಾಭಾವೋಽಪಿ ನೋ ತೇನ ಪ್ರತ್ಯಕ್ಷಾವಗತೋ ಭವೇತ್ ॥೭೧॥**
**ಅತಃ ಸಂಶಯಸಂಪತ್ತೌ ವಾಕ್ಯಂ ಪ್ರತ್ಯಕ್ಷವತ್ಪ್ರಮಾ ।**

ಧರ್ಮ ಮೊದಲಾದ ಅತೀಂದ್ರಿಯ ಪದಾರ್ಥಗಳನ್ನು ಅಂಗೀಕರಿಸದ ಚಾರ್ವಾಕನ ಶಾಸ್ತ್ರವು ವಿಷಯ ಪ್ರಯೋಜನಗಳನ್ನು ಹೊಂದಿರುವುದಿಲ್ಲ. ಆದಕಾರಣ ಅವನೂ ತನ್ನ ಶಾಸ್ತ್ರಕ್ಕೆ ವಿಷಯ ಪ್ರಯೋಜನಗಳ ಸಿದ್ಧಿಗಾಗಿ ಧರ್ಮಾದಿಗಳನ್ನು ಒಪ್ಪಲೇಬೇಕು. ಧರ್ಮಾದಿಗಳ ಅಭಾವವನ್ನು ಇಂದ್ರಿಯಗಳಿಂದ ತಿಳಿಯಲು ಸಾಧ್ಯವಿಲ್ಲ. ಆದಕಾರಣ ಧರ್ಮಾದಿಗಳು ಇವೆಯೋ ಇಲ್ಲವೋ ಎಂಬ ಸಂಶಯ ಬರುವಾಗ, ಧರ್ಮಾದಿಗಳು ಇಲ್ಲವೆಂದು ತಿಳಿದುಕೊಳ್ಳುವುದಕ್ಕಾದರೂ, ಪ್ರತ್ಯಕ್ಷವೊಂದೇ ಪ್ರಮಾಣ ಎನ್ನುವ ಚಾರ್ವಾಕನೂ ಸಹ ಅಪೌರುಷೇಯ ವಾಕ್ಯವನ್ನು ಪ್ರತ್ಯಕ್ಷದಂತೆಯೇ ಪ್ರಮಾಣವೆಂದು ಅಂಗೀಕರಿಸಬೇಕಾಗುತ್ತದೆ.

**ವಿವರಣೆ:**

ವೇದವು ಅಪೌರುಷೇಯವಾದ್ದರಿಂದ ಅದು ಪ್ರಮಾಣವೆಂದು ಹೇಳಿದ್ದು ಸರಿಯೇ. ಆದರೆ ನಾವು ವೇದವನ್ನು ಅಪೌರುಷೇಯವೆಂದು ಒಪ್ಪುವುದಿಲ್ಲ, ಆದ್ದರಿಂದ ಅದರ ಪ್ರಾಮಾಣ್ಯವನ್ನೂ ನಾವು ಅಂಗೀಕರಿಸುವುದಿಲ್ಲ ಎಂದು

ಕೆಲವರು ಹೇಳುತ್ತಾರೆ. ಅದಕ್ಕೆ ಉತ್ತರವಾಗಿ ಶ್ರೀಮದಾಚಾರ್ಯರು ಇಲ್ಲಿ ವೇದಾಪೌರುಷೇಯತ್ವವನ್ನು ಸಪ್ರಮಾಣವಾಗಿ ಸಮರ್ಥಿಸುತ್ತಾರೆ. ವೇದವನ್ನು ಒಪ್ಪುವವರೂ ಹಾಗೂ ಒಪ್ಪದವರೂ ಸಾಮಾನ್ಯವಾಗಿ ಧರ್ಮ, ಅಧರ್ಮ, ಸ್ವರ್ಗ, ನರಕ ಮೊದಲಾದ ಅತೀಂದ್ರಿಯ ಪದಾರ್ಥಗಳನ್ನು ಒಪ್ಪುತ್ತಾರೆ. ಈ ಅತೀಂದ್ರಿಯ ವಸ್ತುಗಳನ್ನು ಯಾವ ಪ್ರಮಾಣದ ಆಧಾರದ ಮೇಲೆ ಒಪ್ಪುತ್ತೀರಾ ಎಂದು ಮೊದಲಿಗೆ ಕೇಳಬೇಕಾಗುತ್ತದೆ. ಕೇವಲ ಯುಕ್ತಿಯಿಂದ ಧರ್ಮಾಧರ್ಮಗಳನ್ನು ನಿರ್ಧರಿಸಲು ಸಾಧ್ಯವಿಲ್ಲ. ಕೇವಲ ಯುಕ್ತಿಯಿಂದ ಯಾವುದೇ ವಿಷಯವನ್ನು ಹೇಗೆ ಸಿದ್ಧಪಡಿಸುವುದು ಸಾಧ್ಯವೋ ಹಾಗೆಯೇ ನಿರಾಕರಿಸುವುದೂ ಸಾಧ್ಯ. ಎಲ್ಲ ಯುಕ್ತಿಗೂ ಒಂದು ಪ್ರತಿಯುಕ್ತಿಯನ್ನು ನೀಡಬಹುದು. ಯುಕ್ತಿ ಪ್ರತಿಯುಕ್ತಿಗಳ ಗೊಂದಲದಲ್ಲಿ 'ಇದಮಿತ್ಥಂ' ಎಂಬುದಾಗಿ ಯಾವುದೇ ನಿರ್ಣಯವು ಸಾಧ್ಯವಿಲ್ಲ. ನಮ್ಮ ನಿತ್ಯದ ಅನುಭವದಿಂದ ಧರ್ಮಾಧರ್ಮಗಳಿವೆಯೆಂದು ಯುಕ್ತಿಯಿಂದ ಕೇವಲ ಊಹನೆ ಮಾಡಬಹುದಷ್ಟೆ. ಜ್ಞಾನಿಗಳ ಉಪದೇಶ ಮತ್ತು ಅವರ ಗ್ರಂಥಗಳಿಂದ ಮಾತ್ರ ಸರಿಯಾದ ತಿಳಿವಳಿಕೆ ಸಾಧ್ಯ. ಆದರೆ ಮೊದಲಿಗೆ ಯಾರು ಜ್ಞಾನಿಗಳು ಯಾರು ಜ್ಞಾನಿಗಳಲ್ಲ ಎಂಬುದು ನಿರ್ಧಾರವಾಗಬೇಕು. ಅನೇಕ ಮತ ಹಾಗೂ ಸಂಪ್ರದಾಯಗಳಿವೆ. ಎಲ್ಲ ಮತಾನುಯಾಯಿಗಳೂ ತಮ್ಮ ಮತಾಚಾರ್ಯರೇ ಸರ್ವಜ್ಞರು ಎಂದು ವಾದಿಸುತ್ತಾರೆ. ಆದರೆ ಎಲ್ಲ ಮತಾಚಾರ್ಯರ ಅಭಿಪ್ರಾಯಗಳೂ ಒಂದೇ ರೀತಿಯಾಗಿರುವುದಿಲ್ಲ. ಎಲ್ಲರೂ ಸರ್ವಜ್ಞರಾಗಿರಲು ಅಸಾಧ್ಯ. ವಿಚಾರಗಳಲ್ಲಿ ಏಕರೂಪತೆಯ ಅಭಾವದಿಂದ ಅವರಲ್ಲಿ ಯಾರು ಸರ್ವಜ್ಞರು ಎಂದು ನಿರ್ಧರಿಸುವುದು ಅಸಾಧ್ಯ. ನಿಜವಾದ ತತ್ವವನ್ನು ತಿಳಿಸುವ ಕಳಕಳಿ ಯಾರಿಗಿದೆ ಎಂಬುದನ್ನು ತಿಳಿಯುವ ಬಗೆ ಹೇಗೆ? ಮತಾಚಾರ್ಯನೂ ಒಬ್ಬ ಪುರುಷನಾದ್ದರಿಂದ ಪುರುಷರಲ್ಲಿ ಸಹಜವಾಗಿ ಇರಬಹುದಾದ ದೋಷಗಳು ಅವನಲ್ಲಿ ಇಲ್ಲವೆಂದು ನಿರ್ಧರಿಸುವುದು ಹೇಗೆ? ತತ್ತ್ವೋಪದೇಶಕನಿಗೆ ಇರಲೇಬೇಕಾದ ಎಲ್ಲ ಅರ್ಹತೆಗಳನ್ನೂ ನಾವು ಏನೂ ಆಧಾರವಿಲ್ಲದೆ ಒಬ್ಬನಲ್ಲಿ ಕಲ್ಪಿಸಬೇಕಾಗುತ್ತದೆ. ವೇದವು ಪುರುಷ ನಿರ್ಮಿತವೆಂದು ಒಪ್ಪಬೇಕಾದರೆ ಇಷ್ಟೆಲ್ಲಾ

ಗೊಂದಲಗಳಿರಲು ಇದರ ಬದಲು ವೇದವು ಅಪೌರುಷೇಯವೆಂದು ಒಪ್ಪುವುದೇ ಸುಲಭವಾದ ಮಾರ್ಗವಲ್ಲವೇ?

ವೇದವನ್ನು ಯಾರು ಮಾಡಿದರು, ಯಾವ ಕಾಲದಲ್ಲಿ ಮಾಡಿದರು, ಎಂಬುದು ಇಷ್ಟರವರೆಗೂ ಯಾರಿಗೂ ತಿಳಿದಿಲ್ಲ. ವೇದವು ಅನಾದಿಯೆಂದು ವೇದದಲ್ಲಿಯೇ ಹೇಳಲಾಗಿದೆ. ಸಂಪ್ರದಾಯ ಪರಂಪರೆಯಿಂದಲೂ ಎಲ್ಲರಿಗೂ ತಾನು ಹಿಂದಿನ ವೇದವನ್ನೇ ಉಚ್ಛರಿಸುತ್ತಿದ್ದೇನೆ ಎಂಬ ತಿಳಿವಳಿಕೆಯಿದೆ. ಇಂಥಹ ಮಹತ್ವವಾದ ಸ್ವರ, ವರ್ಣ, ಕ್ರಮಗಳನ್ನು ಸ್ವಲ್ಪವೂ ತಪ್ಪದೇ ಕಾಪಾಡಿಕೊಂಡು ಬಂದಿರುವ ವೇದದ ಅನುಯಾಯಿಗಳು ಮತ್ತು ಅಭ್ಯಾಸಿಗಳು ಅದರ ರಚನೆಕಾರನ ಹೆಸರನ್ನೇ ಮರೆಯಲು ಹೇಗೆ ಸಾಧ್ಯ?

ಯಾರೂ ನಿರ್ಮಿಸದ ವಾಕ್ಯವೆಂಬುದು ಇರಲು ಸಾಧ್ಯವಿಲ್ಲವಾದ್ದರಿಂದ ಸರ್ವಜ್ಞನಾದ ಭಗವಂತನು ವೇದವನ್ನು ರಚಿಸಿದ್ದಾನೆಂದು ಒಪ್ಪಬಹುದಲ್ಲವೇ ಎಂದು ಕೆಲವರು ಕೇಳುತ್ತಾರೆ. ನಿರಾಕಾರನೂ ನಿರ್ವಿಶೇಷನೂ ಆದ ದೇವರು ಸರ್ವಜ್ಞನಾಗಿದ್ದು ವೇದವನ್ನು ರಚಿಸಿದ್ದಾನೆ ಎಂಬುದು ಅಸಂಭವವೇ ಸರಿ. ಹೀಗೆ ಅಸಂಬದ್ಧ ಕಲ್ಪನೆ ಮಾಡುವ ಬದಲು ಅಪೌರುಷೇಯ ವಾಕ್ಯವನ್ನು ಒಪ್ಪುವುದೇ ಜಾಣತನವಲ್ಲವೇ? ವೇಧವು ಭಗವಂತನಿಂದ ರಚಿತ ಎಂದು ಒಪ್ಪುವ ಮುಂಚೆ ಭಗವಂತನ ಅಸ್ತಿತ್ವ ಸಿದ್ಧವಾಗಬೇಕು. ಅತೀಂದ್ರಿಯ ಪದಾರ್ಥನಾದ ಭಗವಂತನು ನಮ್ಮ ಇಂದ್ರಿಯಗಳಿಗೆ ಗೋಚರನಲ್ಲ. ಅವನನ್ನು ಯುಕ್ತಿಯಿಂದ ತಿಳಿಯಲು ಸಾಧ್ಯವಿಲ್ಲ. ಅವನನ್ನು ತಿಳಿಯಲು ವೇದವನ್ನೇ ಆಶ್ರಯಿಸಬೇಕು. ಆದಕ್ಕೆ ಮೊದಲು ವೇದವು ಪ್ರಮಾಣವೆಂದು ಸಿದ್ಧವಾಗಬೇಕು. ವೇದವು ಅಪೌರುಷೇಯ ಎಂದು ಒಪ್ಪಿಕೊಂಡಾಗ ಮಾತ್ರ ಇವೆಲ್ಲ ಗೊಂದಲಗಳು ನಿವಾರಣೆಯಾಗುತ್ತವೆ ಮತ್ತು ಧರ್ಮಾಧರ್ಮಗಳ ನಿರ್ಣಯ ಸಾಧ್ಯವಾಗುತ್ತದೆ.

ವೇದವು ಅಪೌರುಷೇಯವೆಂದು ಒಪ್ಪಿಕೊಂಡರೂ ಅದನ್ನು ಪ್ರಮಾಣವೆಂದು ಅಂಗೀಕರಿಸಲು ಸಾಧ್ಯವಿಲ್ಲ. ಏಕೆಂದರೆ ವಾಕ್ಯಾರ್ಥ ವಿಷಯವಾದ ಯಥಾರ್ಥಜ್ಞಾನವನ್ನು ಹುಟ್ಟಿಸುವ ಶಕ್ತಿಯು ವೇದಕ್ಕೆ ಕೂಡುವುದಿಲ್ಲ ಎಂದು ಕೆಲವರು ಆಶಂಕಿಸಿದರೆ -

ವಾಕ್ಯಾರ್ಥಬೋಧಕತ್ವ

**ಶಕ್ತಿಶ್ಚೈವಾನ್ವಿತೇ ಸ್ವಾರ್ಥೇ ಶಬ್ದಾನಾಮನುಭೂಯತೇ ॥೭೨॥**

**ಅತೋಽನ್ವಿತಾಭಿಧಾಯಿತ್ವಂ ಗೌರವಂ ಕಲ್ಪನೇಽನ್ಯಥಾ ।**

**ನಚಾಶಕ್ತ್ಯಾಭಿಧಾಯಿತ್ವಂ ಪ್ರವೃತ್ತಿಶ್ಚ ದ್ವಿಧಾನ್ಯಥಾ ॥೭೩॥**

ಒಂದು ವಾಕ್ಯದಲ್ಲಿರುವ ಪದಗಳಿಗೆ ಬೇರೆ ಬೇರೆ ಅರ್ಥವಿದ್ದರೂ ಪರಸ್ಪರ ಅನ್ವಯದಿಂದ ವಾಕ್ಯಾರ್ಥವನ್ನು ತಿಳಿಸುವ ವಿಶೇಷವಾದ ಶಕ್ತಿಯು ಪದಗಳಿಗೆ ಇರುತ್ತದೆ. 'ಯೋಗ್ಯೇತರಾನ್ವಿತಾಭಿಧಾಯಿತ್ವ' ಎಂದು ಕರೆಯಲ್ಪಡುವ ಈ ಶಕ್ತಿಯನ್ನು ಅಂಗೀಕರಿಸಬೇಕು. ಅದನ್ನು ಬಿಟ್ಟು, ನಿರವಯವಾದ ವಾಕ್ಯವು ವಾಕ್ಯಾರ್ಥವನ್ನು ತಿಳಿಸಿಕೊಡುತ್ತದೆ ಎಂದು ಕಲ್ಪಿಸಿದರೆ ಕಲ್ಪನಾಗೌರವ ಎಂಬ ದೋಷವು ಬರುವುದು. ಶಕ್ತಿಗೆ ಅವಿಷಯವಾದ ವಸ್ತುವನ್ನು ಹೇಳುತ್ತದೆಯೆನ್ನುವುದು ಕೂಡಲಾರದು. ಮೊದಲು ಪದಾರ್ಥವನ್ನು ಅನಂತರ ಅನ್ವಯವನ್ನು ಪ್ರತಿಪಾದಿಸುತ್ತದೆ ಎಂದು ಹೇಳಿದರೆ ಅದು ದ್ವಿಧಾ ಪ್ರವೃತ್ತಿ ಅಂದರೆ ವಿರಮ್ಯ ವ್ಯಾಪಾರ ಎನಿಸುವುದು.

**ವಿವರಣೆ :**

ವಾಕ್ಯದ ಅರ್ಥಬೋಧಕತ್ವದ ಕುರಿತು ವಿವಾದಗಳಿವೆ. ಪದಗಳು ತಮ್ಮ ಅರ್ಥವನ್ನು ಮಾತ್ರ ಬಿಡಿ ಬಿಡಿಯಾಗಿ ತಿಳಿಸಿಕೊಡುತ್ತವೆ. ಆ ಎಲ್ಲ ಅರ್ಥಗಳಿಗೂ ಪರಸ್ಪರ ಸಂಬಂಧ ಕಲ್ಪಿಸಿಕೊಂಡು ಅವುಗಳಿಂದ ಕೂಡಿದ ವಾಕ್ಯದಿಂದ ಜ್ಞಾನವನ್ನು ಪಡೆಯುವುದು ಹೇಗೆ? ಏಕೆಂದರೆ ಪದಗಳಿಗಿರುವ ಅನ್ಯೋನ್ಯ ಸಂಬಂಧವನ್ನು ತಿಳಿಸಿಕೊಡುವ ಶಬ್ದವು ಆ ವಾಕ್ಯದಲ್ಲಿರುವುದಿಲ್ಲ. ಎಂಬುದು ಕೆಲವು ದಾರ್ಶನಿಕರಿಗೆ ದೊಡ್ಡ ಸಮಸ್ಯೆಯಾಗಿದೆ. ಪದವು ಅರ್ಥವನ್ನು ತಿಳಿಸುವಾಗ ಅದರಲ್ಲಿರುವ ವಿಶೇಷ ಸಂಬಂಧವನ್ನೂ ತಿಳಿಸಿಕೊಡುತ್ತದೆ ಎಂಬುದು ಕೆಲವರ ವಾದ. ಆದರೆ ವಾಕ್ಯದಲ್ಲಿರುವ ಒಂದು ಪದದಿಂದಲೇ ಇದು ಗೊತ್ತಾದಲ್ಲಿ ಉಳಿದ ಪದಗಳ ಅವಶ್ಯಕತೆಯೇನು? ವಾಕ್ಯದಲ್ಲಿನ ವಿವಿಧ ಪದಗಳಿಗೆ ಪರಸ್ಪರ ಸಂಬಂಧವನ್ನು ಇಂತಹುದೇ ಪದವು ತಿಳಿಸಿಕೊಡುತ್ತದೆ ಎಂಬುದನ್ನು ನಿರ್ಧರಿಸುವುದು ಹೇಗೆ? ಎಂಬುದು ಈ ವಾದಕ್ಕೆ ಬರುವ ಆಕ್ಷೇಪ.

ಯಾವುದೇ ಒಂದು ಪದವು ಕೇವಲ ವಸ್ತುವನ್ನಲ್ಲದೆ ಅದರ ವಿಶಿಷ್ಟವಾದ ಧರ್ಮವನ್ನೂ ತಿಳಿಸಿಕೊಡುತ್ತದೆ. ಅದರ ಜೊತೆಗೆ ಅದಕ್ಕೆ ಇತರ ಪದಾರ್ಥಗಳೊಂದಿಗಿರುವ ಸಂಬಂಧವನ್ನೂ ತಿಳಿಸಿಕೊಡುತ್ತದೆ. ಆ ಪದವು ಇತರ ಪದಗಳಿಂದ ಕೂಡಿಕೊಂಡು ಒಂದು ವಾಕ್ಯವಾಗಿ ಪ್ರಯೋಗವಾದಾಗ ಪದಾರ್ಥಗಳಿಗೆ ಪರಸ್ಪರವಾಗಿರುವ ವಿಶೇಷವಾದ ಸಂಬಂಧವು ತಿಳಿಯುವುದರಿಂದ ವಾಕ್ಯಾರ್ಥ ಜ್ಞಾನವಾಗುವುದು. ಪದಗಳು ಅರ್ಥವನ್ನು ಮಾತ್ರ ತಿಳಿಸಿಕೊಡುತ್ತವೆ. ಈ ಪದಗಳಿಂದ ಸ್ಫುರಣೆಗೊಳ್ಳುವ ವಿಶೇಷ ಅರ್ಥದಿಂದ ಪದಗಳ ಪರಸ್ಪರ ಸಂಬಂಧ ತಿಳಿದುಬರುತ್ತದೆ ಎಂದ ಕೆಲವರು ಹೇಳುತ್ತಾರೆ (ಸ್ಫೋಟವಾದ). ಇದೂ ಸರಿಯಲ್ಲ. ಪ್ರತ್ಯಕ್ಷ, ಯುಕ್ತಿ ಮತ್ತು ವಾಕ್ಯಗಳಿಂದ ನಮಗೆ ಸರಿಯಾದ ಜ್ಞಾನವುಂಟಾಗುವುದರಿಂದ ಅವುಗಳು ಪ್ರಮಾಣವೆನಿಸಿವೆ. ಪದಾರ್ಥಗಳ ಸಂಬಂಧವನ್ನು ಶಬ್ದಗಳ ಬದಲು ಅರ್ಥವೇ ತಿಳಿಸಿಕೊಡುವುದಾದರೆ ಅದೂ ಪ್ರಮಾಣವಾಗಬೇಕಾಗುವುದು. ಶಬ್ದಗಳಿಂದ ನಮಗೆ ಹೊಳೆಯುವ ಅರ್ಥಗಳೆಲ್ಲ ಪ್ರಮಾಣವಾದರೆ ಒಬ್ಬೊಬ್ಬರಿಗೆ ಒಂದೊಂದು ರೀತಿಯ ಅರ್ಥದ ಸ್ಫುರಣೆಯಾಗುವುದು ಸಾಧ್ಯವಿರುವುದರಿಂದ ಯಾವುದೇ ವಾಕ್ಯದಿಂದ ಇದಮಿತ್ಥಂ ಎಂಬ ನಿರ್ಣಯ ಸಾಧ್ಯವಿಲ್ಲ. ಆದಕಾರಣ ಶಬ್ದಗಳನ್ನು ಕೇಳಿದಾಗ ನಮಗೆ ಹೊಳೆಯುವ ಯಾವುದೋ ಅರ್ಥವು ಪ್ರಮಾಣವೆನಿಸುವುದಿಲ್ಲ. ಒಂದು ವಾಕ್ಯವನ್ನು ಕೇಳಿದಕೂಡಲೇ ಆ ಪದಗಳಿಂದಲೇ ಪದಾರ್ಥಗಳು ಹಾಗೂ ಅವುಗಳ ಸಂಬಂಧವೂ ತೋರುವುದು ಎಂಬುದೇ ಎಲ್ಲರ ಅನುಭವವಾಗಿದೆ. ಇತರ ಪದಗಳೊಂದಿಗಿರುವ ಪರಸ್ಪರ ಸಂಬಂಧದ ಜೊತೆಗೆ ಅರ್ಥವನ್ನೂ ತಿಳಿಸಿಕೊಡುವ ವಿಶಿಷ್ಟವಾಧ ಶಕ್ತಿಯು ಶಬ್ದಕ್ಕೆ ಇರುವುದರಿಂದ ವಾಕ್ಯವನ್ನು ಕೇಳಿದೊಡನೆಯೇ ಅದರ ಅರ್ಥವನ್ನು ಗ್ರಹಿಸುವುದು ಸಾಧ್ಯವಾಗುವುದು. ಈ ಪ್ರಕಾರವಾಗಿ ವಾಕ್ಯದಿಂದ ಯಥಾರ್ಥಜ್ಞಾನವನ್ನು ಗಳಿಸಲು ಯಾವುದೇ ಆತಂಕವಿಲ್ಲದಿರುವುದರಿಂದ ವಾಕ್ಯರೂಪವಾದ ವೇದವನ್ನೂ ಪ್ರಮಾಣವೆಂದು ಅಂಗೀಕರಿಸಬಹುದು.

ಮೋಕ್ಷಕ್ಕೆ ಕಾರಣವಾದ ಭಗವತ್ಪ್ರಸಾದಜನಕವಾದ ಜ್ಞಾನೋತ್ಪಾದಕತ್ವ,

ಬಂಧಸತ್ಯತ್ವ, ವೇದಕ್ಕೆ ಸಿದ್ಧಾರ್ಥಪರತ್ವ, ವೇದಕ್ಕೆ ಪ್ರಾಮಾಣ್ಯ ಹಾಗೂ ಶಬ್ದಗಳಿಗೆ ಅನ್ವಿತಾಭಿಧಾಯಿತ್ವ - ಹೀಗೆ ಐದು ರೀತಿಯಲ್ಲಿ ಅತಃ ಶಬ್ದದ ಸಾರ್ಥಕ್ಯವನ್ನು ತಿಳಿಸಿಕೊಟ್ಟು, ಆದಪ್ರಯುಕ್ತ ಬ್ರಹ್ಮಜಿಜ್ಞಾಸೆಯನ್ನು ಅವಶ್ಯ ಮಾಡತಕ್ಕದ್ದು ಎಂದು ಪ್ರತಿಪಾದಿಸಲಾಯಿತು. ವೇದವ್ಯಾಸ ರೂಪದಿಂದ ಬ್ರಹ್ಮಸೂತ್ರವನ್ನು ರಚಿಸಿದ ಸ್ವಯಂ ಭಗವಂತನೇ ನಾರಾಯಣ ರೂಪದಿಂದ ರಚಿಸಿದ ಬ್ರಹ್ಮತರ್ಕ ಎಂಬ ಗ್ರಂಥದಲ್ಲಿ ಇಲ್ಲಿ ಹೇಳಿರುವ ಅತಃ ಶಬ್ದದ ಎಲ್ಲ ಅರ್ಥಗಳೂ ವಿಸ್ತಾರವಾಗಿ ನಿರೂಪಿತವಾಗಿವೆ ಎಂದು ಶ್ರೀಮದಾಚಾರ್ಯರ ಮುಂದಿನ ಮಾತುಗಳಿಂದ ತಿಳಿದುಬರುತ್ತದೆ.

### ಬ್ರಹ್ಮತರ್ಕ ವಿಷಯ ಸಂಗ್ರಹ

**ಏತತ್ಸರ್ವಂ ತರ್ಕಶಾಸ್ತ್ರೇ ಬ್ರಹ್ಮತರ್ಕೇ ಹಿ ವಿಸ್ತರಾತ್ ।**
**ಉಕ್ತಂ ವಿದ್ಯಾಪೃಥಕ್ತ್ವಾತ್ತು ಸಂಕ್ಷೇಪೇಣಾತ್ರ ಸೂಚಿತಮ್ ॥೭೪॥**

ಅತಃ ಶಬ್ದದ ವ್ಯಾಖ್ಯಾನಪರವಾಗಿ ಮೇಲೆ ಹೇಳಿದ ಎಲ್ಲ ವಿಷಯಗಳೂ ಬ್ರಹ್ಮತರ್ಕ ಎಂಬ ಹೆಸರಿನ ತರ್ಕಶಾಸ್ತ್ರದಲ್ಲಿ ವಿಸ್ತಾರವಾಗಿ ಉಕ್ತವಾಗಿವೆ. ಈ ಬ್ರಹ್ಮಮೀಮಾಂಸಾ ಶಾಸ್ತ್ರಕ್ಕೆ ತರ್ಕಶಾಸ್ತ್ರದೊಂದಿಗೆ ಭೇದವಿರುವುದರಿಂದ ಅತಃ ಶಬ್ದದಿಂದ ಅಲ್ಲಿ ಹೇಳಿರುವ ವಿಷಯಗಳು ಇಲ್ಲಿ ಸಂಗ್ರಹವಾಗಿ ಉಕ್ತವಾಗಿವೆ.

**ಪ್ರಮಾಣನ್ಯಾಯಸಚ್ಛಿಕ್ಷಾ ಕ್ರಿಯತೇ ತರ್ಕಶಾಸ್ತ್ರತಃ ।**
**ಮಾನನ್ಯಾಯೈಸ್ತು ತತ್ಸಿದ್ಧೈರ್ಮೀಮಾಂಸಾ ಮೇಯಶೋಧನಮ್ ॥೭೫॥**

ಉದ್ದೇಶ, ವಿಭಾಗ, ಲಕ್ಷಣ, ಪರೀಕ್ಷೆಗಳಿಂದ ಪ್ರತ್ಯಕ್ಷಾದಿ ಪ್ರಮಾಣಗಳು ಮತ್ತು ಅನ್ವಯವ್ಯತಿರೇಕರೂಪವಾದ ನ್ಯಾಯವೂ ಬ್ರಹ್ಮತರ್ಕದಿಂದ ಚೆನ್ನಾಗಿ ನಿರೂಪಿಸಲ್ಪಟ್ಟಿದೆ. ಬ್ರಹ್ಮತರ್ಕದಲ್ಲಿ ಪ್ರತಿಪಾದಿತವಾದ ಆಗಮ ಮೊದಲಾದ ಪ್ರಮಾಣನ್ಯಾಯಗಳಿಂದ ಬ್ರಹ್ಮ, ಧರ್ಮ ಮೊದಲಾದ ಪ್ರಮೇಯ ವಿಚಾರವೇ ಮೀಮಾಂಸಾಶಾಸ್ತ್ರದಲ್ಲಿ ನಿರೂಪಿಸಲ್ಪಟ್ಟಿದೆ.

**ಬ್ರಹ್ಮತರ್ಕಂ ಚ ಭಗವಾನ್ ಸ ಏವ ಕೃತವಾನ್ ಪ್ರಭುಃ ।**
**ಪಂಚಾಶತ್ಕೋಟಿವಿಸ್ತಾರಾನ್ನಾರಾಯಣತನೌ ಕೃತಾತ್ ॥೭೬॥**
**ಉದ್ಧೃತ್ಯ ಪಂಚಸಾಹಸ್ರಂ ಕೃತವಾನ್ ಬಾದರಾಯಣಃ ।**
**ಅತಸ್ತದರ್ಥಂ ಸಂಕ್ಷೇಪಾದತ ಇತ್ಯಭ್ಯಸೂಚಯತ್ ॥೭೭॥**

**ಯತೋಽನುಭವತಃ ಸರ್ವಂ ಸಿದ್ಧಮೇತದತೋಽಪಿ ಚ ।**

**ದೇವೈಶ್ಚ ದುರ್ಗಮಾರ್ಥೇಷು ವ್ಯಾಪೃತೋ ನಾತಿವಿಸ್ತೃತಿಮ್ ॥೭೮॥**

**ಚಕಾರೈತಾ ಹ್ಯವಜ್ಞೇಯಾ ಯುಕ್ತಯಃ ಪ್ರತಿಪಕ್ಷಗಾಃ ।**

ಬ್ರಹ್ಮಮೀಮಾಂಸಾ ಶಾಸ್ತ್ರವನ್ನು ರಚಿಸಿರುವ ಸರ್ವಸಮರ್ಥರಾದ ಷಡ್ಗುಣೈಶ್ವರ್ಯ ಸಂಪನ್ನರಾದ ಆ ವೇದವ್ಯಾಸದೇವರೇ ಬ್ರಹ್ಮತರ್ಕವನ್ನೂ ಮಾಡಿರುವರು. ನಾರಾಯಣಾವತಾರದಲ್ಲಿ ಅವರಿಂದಲೇ ರಚಿಸಲ್ಪಟ್ಟ ಐವತ್ತು ಕೋಟಿ ಶ್ಲೋಕಗಳಷ್ಟು ವಿಸ್ತಾರವುಳ್ಳ ಬ್ರಹ್ಮತರ್ಕ ಗ್ರಂಥದಿಂದ ಕೆಲವು ಅರ್ಥಗಳನ್ನು ಪ್ರತ್ಯೇಕಿಸಿ, ಐದು ಸಾವಿರ ಶ್ಲೋಕ ಪರಿಮಾಣವುಳ್ಳ ಬ್ರಹ್ಮತರ್ಕಾಖ್ಯ ಗ್ರಂಥವನ್ನು ಭಗವಾನ್ ವೇದವ್ಯಾಸರು ಮಾಡಿರುವರು. ಬ್ರಹ್ಮತರ್ಕವನ್ನು ತಾವೇ ರಚಿಸಿರುವ ಕಾರಣದಿಂದ, ಆ ಬ್ರಹ್ಮತರ್ಕದ ಅರ್ಥವನ್ನು ಅತಃ ಎನ್ನುವ ಶಬ್ದದಿಂದ ಇಲ್ಲಿ ಸಂಕ್ಷೇಪವಾಗಿ ಸೂಚಿಸಿರುವರು. ಜಗತ್ ಸತ್ಯತ್ವ, ಬಂಧಸತ್ಯತ್ವ ಮೊದಲಾದ ಎಲ್ಲ ಪ್ರಮೇಯಗಳೂ ಎಲ್ಲರಿಗೂ ಅನುಭವದಿಂದಲೇ ಸಿದ್ಧವಾಗಿರುವುದರಿಂದಲೂ ಮತ್ತು ಪ್ರತ್ಯಕ್ಷಾದಿಗಳಿಂದ ಅತಿ ಸ್ಫುಟವಾಗಿ ತಿಳಿಯುವುದರಿಂದಲೂ ಅತಃ ಎನ್ನುವುದರಿಂದ ಸಂಕ್ಷೇಪವಾಗಿಯೇ ಸೂಚಿಸಿದರು. ಸುಲಭವಾಗಿ ತಿಳಿಯಲಶಕ್ಯವಾದ ಅರ್ಥವುಳ್ಳ ವೇದ ಉಪನಿಷತ್ತುಗಳಲ್ಲಿ ಪ್ರವೃತ್ತರಾದ ವೇದವ್ಯಾಸರು ದೇವತೆಗಳ ಪ್ರಾರ್ಥನೆಯ ನಿಮಿತ್ತವಾಗಿ ಇಲ್ಲಿ ಅತಿ ವಿಸ್ತಾರವನ್ನು ಮಾಡಲಿಲ್ಲ. ಸಂಕ್ಷೇಪ ಮಾಡಲು ಇನ್ನೊಂದು ಕಾರಣವನ್ನೂ ಹೇಳುತ್ತಾರೆ. ಪ್ರತಿಪಕ್ಷಗಳ ಯುಕ್ತಿಗಳು ದುಷ್ಟವಾದುದರಿಂದ ತಿರಸ್ಕಾರಕ್ಕೆ ಯೋಗ್ಯಗಳಾಗಿರುವದರಿಂದ ಅವುಗಳನ್ನು ನಿರಾಕರಿಸುವ ವಿಷಯದಲ್ಲಿ ಸೂತ್ರಕಾರರು ಅತಿ ವಿಸ್ತಾರವನ್ನು ಮಾಡದೆ ಸಂಕ್ಷೇಪವಾಗಿಯೇ ಹೇಳಿದ್ದಾರೆ.

**ಪ್ರತ್ಯಕ್ಷೇಕ್ಷಾಕ್ಷಮಃ ಪಕ್ಷಂ ಕಮೇವಾತ್ರಾಭಿವೀಕ್ಷತೇ ॥೭೯॥**

**ತಸ್ಮಾದಕ್ಷಮಪಕ್ಷತ್ವಾನ್ಮೋಕ್ಷಶಾಸ್ತ್ರೇಭ್ಯುಪೇಕ್ಷಿತಃ ।**

ಪ್ರತ್ಯಕ್ಷಕಗೋಚರವಾದುದನ್ನು ತಿಳಿಯುವುದಕ್ಕೇ ಅಸಮರ್ಥನಾದವನು ದುರ್ಗಮವಾದ ವೇದ ವಿಚಾರದಲ್ಲಿ ಯಾವ ಪಕ್ಷವನ್ನು ತಾನೇ ಚೆನ್ನಾಗಿ ತಿಳಿಯಲು ಸಾಧ್ಯ? ಹೀಗೆ ಅಸಮರ್ಥವಾದ ಪಕ್ಷ ಉಳ್ಳವನಾದ್ದರಿಂದ,

ಮೋಕ್ಷಶಾಸ್ತ್ರವಾದ ವೇದದಲ್ಲಿ ಪ್ರವೃತ್ತನಾದರೂ, ಅವನು ಸೂತ್ರಕಾರರಿಂದ ಉಪೇಕ್ಷಿತನೇ ಆಗಿರುವುದರಿಂದ ಅವನ ಪಕ್ಷವು ವಿಸ್ತಾರವಾಗಿ ನಿರಾಕೃತವಾಗಿರುವುದಿಲ್ಲ.

ಹೀಗೆ ಅತಃ ಶಬ್ದಕ್ಕೆ ತಾವು ಹೇಳಿದ ಅರ್ಥಗಳು ತರ್ಕಶಾಸ್ತ್ರದಲ್ಲಿ ಸ್ವಯಂ ನಾರಾಯಣನಿಂದಲೇ ಪ್ರತಿಪಾದಿತವಾಗಿವೆ ಎಂದು ಸಮರ್ಥಿಸಿದ ಶ್ರೀಮದಾಚಾರ್ಯರು ಸೂತ್ರದಲ್ಲಿ ಬಂದಿರುವ ಬ್ರಹ್ಮಶಬ್ದವು ವಿಷ್ಣುವನ್ನೇ ಹೇಳುತ್ತದೆ ಎಂಬುದನ್ನು ಇಲ್ಲಿ 'ಸ್ವಯಂ ಭಗವತಾ' ಇತ್ಯಾದಿಯಾಗಿ ಶ್ರುತಿ ಸ್ಮೃತಿಗಳನ್ನು ಉದಾಹರಿಸುವುದರ ಮೂಲಕ ಸ್ಪಷ್ಟಪಡಿಸುತ್ತಾರೆ.

ಬ್ರಹ್ಮಶಬ್ದವು ವಿಷ್ಣುವನ್ನೇ ಹೇಳುತ್ತದೆ

**ಸ್ವಯಂ ಭಗವತಾ ವಿಷ್ಣುರ್ಬ್ರಹ್ಮೇತ್ಯೇತತ್ಪುರೋದಿತಮ್ ॥೮೦॥**
**'ಸ ವಿಷ್ಣುರಾಹ ಹೀ'ತ್ಯಂತೇ ದೇವಶಾಸ್ತ್ರಸ್ಯ ತೇನ ಹಿ ।**
**ಆದ್ಯಂತಂ ದೇವಶಾಸ್ತ್ರಸ್ಯ ಸ್ವಯಂ ಭಗವತಾ ಕೃತಮ್ ॥೮೧॥**
**ಮಧ್ಯಂ ತದಾಜ್ಞಯಾ ಶೇಷಪೈಲಾಭ್ಯಾಂ ಕೃತಮಂಜಸಾ ।**
**ಅತಸ್ತತ್ರೈವ ವಿಷ್ಣುತ್ವಸಿದ್ಧೇರ್ಬ್ರಹ್ಮೇತ್ಯಸೂಚಯತ್ ॥೮೨॥**

ದೇವಮೀಮಾಂಸಾ ಶಾಸ್ತ್ರದ ಕೊನೆಯಲ್ಲಿ 'ಸ ವಿಷ್ಣುರಾಹ ಹಿ', 'ತಂ ಬ್ರಹ್ಮೇತ್ಯಾಚಕ್ಷತೇ' ಎಂದು ವಿಷ್ಣುವು ಬ್ರಹ್ಮಶಬ್ದ ವಾಚ್ಯನು ಎನ್ನುವುದು ಸ್ವಯಂ ಭಗವಂತನಿಂದ (ಯಾರಿಂದ ಈ ಸೂತ್ರವು ರಚಿಸಲ್ಪಟ್ಟಿತೋ ಅವರಿಂದಲೇ), ಈ ಸೂತ್ರಕ್ಕಿಂತ ಮೊದಲು ಹೇಳಲ್ಪಟ್ಟಿದೆ. ದೇವಮೀಮಾಂಸಾ ಶಾಸ್ತ್ರದ ಮೊದಲನೆಯ 'ಅಥಾತೋ ದೈವೀ ಮೀಮಾಂಸಾ' ಎಂಬ ಸೂತ್ರವೂ ಮತ್ತು 'ಸ ವಿಷ್ಣುರಾಹ ಹಿ', 'ತಂ ಬ್ರಹ್ಮೇತ್ಯಾಚಕ್ಷತೇ' ಎಂಬ ಕೊನೆಯ ಎರಡು ಸೂತ್ರಗಳೂ ಸಾಕ್ಷಾತ್ ಭಗವಂತನಾದ ವೇದವ್ಯಾಸರಿಂದ ಮಾಡಲ್ಪಟ್ಟಿವೆ. ಮಧ್ಯಭಾಗವು ಶ್ರೀ ವೇದವ್ಯಾಸರ ಅಪ್ಪಣೆಯಂತೆ ಶೇಷಪೈಲರಿಂದ ಚೆನ್ನಾಗಿ ಮಾಡಲ್ಪಟ್ಟಿವೆ. ಹೀಗೆ ದೇವಮೀಮಾಂಸಾ ಶಾಸ್ತ್ರದಲ್ಲಿಯೇ ಬ್ರಹ್ಮಶಬ್ದದಿಂದ ಹೇಳಲ್ಪಟ್ಟವನು ವಿಷ್ಣುವೇ ಎಂಬುದು ಸಿದ್ಧವಾಗುವುದರಿಂದ, 'ಅಥಾತೋ ಬ್ರಹ್ಮಜಿಜ್ಞಾಸಾ' ಎಂಬಲ್ಲಿಯೂ ಸೂತ್ರಕಾರರು ನಾರಾಯಣನನ್ನೇ ಬ್ರಹ್ಮಶಬ್ದದಿಂದ ಸೂಚಿಸಿದ್ದಾರೆ.

**ದೋಷಾರಚ್ಛಿದ್ರಶಬ್ದಾನಾಂ ಪರ್ಯಾಯತ್ವಂ ಯತಸ್ತತಃ ।**
**ಗುಣಾ ನಾರಾ ಇತಿ ಜ್ಞೇಯಾಸ್ತದ್ವಾನ್ನಾರಾಯಣಃ ಸ್ಮೃತಃ ॥೮೩॥**
**ಬ್ರಹ್ಮಶಬ್ದೋಽಪಿ ಹಿ ಗುಣಪೂರ್ತಿಮೇವ ವದತ್ಯಯಮ್ ।**
**ಅತೋ ನಾರಾಯಣಸ್ಯೈವ ಜಿಜ್ಞಾಸಾತ್ರ ವಿಧೀಯತೇ ॥೮೪॥**

ಯಾವ ಕಾರಣದಿಂದ ದೋಷ, ಅರ, ಛಿದ್ರ ಶಬ್ದಗಳಿಗೆ ಏಕಾರ್ಥತ್ವವಿರುವುದೋ ಆದಕಾರಣ ನಾರಾ ಎಂಬ ಶಬ್ದದಿಂದ ದೋಷವಿರುದ್ಧಗಳಾದ ಗುಣಗಳು ಹೇಳಲ್ಪಡುತ್ತವೆ. ದೋಷವಿರುದ್ಧವಾದ ಅನಂತ ಕಲ್ಯಾಣಗುಣಗಳಿಂದ ಕೂಡಿರುವನು ನಾರಾಯಣ ಎಂಬುದಾಗಿ ತಿಳಿಯತಕ್ಕದ್ದು ಎಂದು ಸ್ಮೃತಿಗಳಿಂದ ಪ್ರಸಿದ್ಧವಾಗಿದೆ. ಈ ಸೂತ್ರದಲ್ಲಿ ಬ್ರಹ್ಮಶಬ್ದವೂ ಗುಣಪೂರ್ಣತ್ವವನ್ನೇ ಹೇಳುತ್ತದೆ. 'ಹಿ' ಎಂಬುದರಿಂದ 'ಅಥ ಕಸ್ಮಾದುಚ್ಯತೇ ಬ್ರಹ್ಮೇತಿ ಬೃಹಂತೋ ಹ್ಯಸ್ಮಿನ್ ಗುಣಾಃ' ಇತ್ಯಾದಿ ಶ್ರುತಿ ಪ್ರಸಿದ್ಧಿಯನ್ನು ಸೂಚಿಸುತ್ತಾರೆ. ಆದಕಾರಣ ಈ ಸೂತ್ರದಲ್ಲಿ ಸಕಲದೋಷದೂರನೂ, ಅನಂತಕಲ್ಯಾಣ ಗುಣಪರಿಪೂರ್ಣನೂ ಆದ ನಾರಾಯಣನ ಜಿಜ್ಞಾಸೆಯೇ ವಿಧಿಸಲ್ಪಡುತ್ತದೆ.

**ಸಿದ್ಧತ್ವಾದ್ ಬ್ರಹ್ಮಶಬ್ದಸ್ಯ ವಿಷ್ಣೌ ಸ್ಪಷ್ಟತಯಾ ಶ್ರುತೌ ।**
**'ಅಂಭಸ್ಯಪಾರ' ಇತ್ಯುಕ್ತೋ ನಾರಾಯಣಪದೋದಿತಃ ॥೮೫॥**
**'ಆಪೋ ನಾರಾ' ಇತಿ ಹ್ಯಾಹ ಸ ಏವಾಪ್ಸ್ವಂತರೀರಿತಃ ।**

/ 'ತದೇವ ಬ್ರಹ್ಮ ಪರಮಂ ಕವೀನಾಂ' ಎನ್ನುವ ಶ್ರುತಿಯಲ್ಲಿ ಬ್ರಹ್ಮಶಬ್ದಕ್ಕೆ ವಿಷ್ಣುವಿನಲ್ಲಿ ಅನ್ವಯವು ಸ್ಪಷ್ಟವಾಗಿ ಸಿದ್ಧವಾಗುವುದರಿಂದ ಸೂತ್ರದಲ್ಲಿರುವ ಬ್ರಹ್ಮಶಬ್ದವು ವಿಷ್ಣುಪರ ಎಂದು ತಿಳಿಯಬೇಕು. 'ತದೇವ ಬ್ರಹ್ಮ' ಎನ್ನುವುದಕ್ಕೆ ಉಪಕ್ರಮಭೂತವಾದ 'ಅಂಭಸ್ಯ ಪಾರೇ ಭುವನಸ್ಯ ಮಧ್ಯೇ ನಾಕಸ್ಯ ಪೃಷ್ಠೇ ಮಹತೋ ಮಹೀಯಾನ್' ಎನ್ನುವ ವಾಕ್ಯದಲ್ಲಿ ನಾರಾಯಣ ಪದದಿಂದ ಹೇಳಲ್ಪಟ್ಟವನೇ ಉಕ್ತನಾಗಿದ್ದಾನೆ. ಏಕೆಂದರೆ, 'ಆಪೋ ನಾರಾ ಇತಿ ಪ್ರೋಕ್ತಾ ಆಪೋ ವೈ ನರಸೂನವಃ। ಅಯನಂ ತಸ್ಯ ತಾಃ ಪೂರ್ವಂ ತೇನ ನಾರಾಯಣಃ ಸ್ಮೃತಃ॥' ಎನ್ನುವ ಸ್ಮೃತಿಯು ನೀರಿನಲ್ಲಿರುವವನು ನಾರಾಯಣ ಶಬ್ದದಿಂದ ಉಕ್ತನಾಗಿದ್ದಾನೆ ಎಂದು ಸ್ಪಷ್ಟಪಡಿಸುವುದು.

**ಕಾಮತೋ ವಿಧಿರುದ್ರಾದಿಪದದಾತ್ರ್ಯಾ ಸ್ವಯಂ ಶ್ರಿಯಾ ॥೮೬॥**

**ಯೋನಿತ್ವೇನಾತ್ಮನೋ ವಿಷ್ಣೋಸ್ತಿಷ್ಠಂತೀತ್ಯುದಿತಸ್ಯ ಚ ।**

**ಯಸ್ಮಿನ್ ದೇವಾ ಅಧೀತ್ಯುಕ್ತ್ವಾ ಸಮುದ್ರಂ ಸ್ಥಾನಮೇವ ಚ ॥೮೭॥**

**ನಾಮ ಚಾಕ್ಷರಮಿತ್ಯೇವ ಋಚ ಇತ್ಯುದಿತಂ ತು ಯತ್ ।**

**ಯತಃ ಪ್ರಸೂತೇತ್ಯುಕ್ತ್ವಾ ಚ ತದೇವ ಬ್ರಹ್ಮ ಚಾಬ್ರವೀತ್ ॥೮೮॥**

'ಯಂ ಕಾಮಯೇ ತಂ ತಮುಗ್ರ ಕೃಣೋಮಿ ತಂ ಬ್ರಹ್ಮಾಣಂ ತಮೃಷಿಂ ತಂ ಸುಮೇಧಾಂ' ಎಂಬುದಾಗಿ ಸ್ವೇಚ್ಛಾಮಾತ್ರದಿಂದಲೇ ಬ್ರಹ್ಮರುದ್ರಾದಿಗಳಿಗೆ ಆಯಾಯ ಪದವಿಯನ್ನು ಕೊಡತಕ್ಕ ಮಹಾಲಕ್ಷ್ಮಿಯು 'ಮಮ ಯೋನಿರಪ್ಸ್ವಂತಸ್ಸಮುದ್ರೇ' ಎಂದು ತನಗೂ ಕಾರಣನಾದವನು ಸಮುದ್ರದ ನೀರಿನಲ್ಲಿರುವನೆಂದು ಸ್ವಯಂ ಹೇಳಿರುವುದರಿಂದ ಅಂತಃಸಮುದ್ರತ್ವ ಎಂಬ ಧರ್ಮವುಳ್ಳವನು ವಿಷ್ಣುವೇ ಎಂದು ತಿಳಿಯುತ್ತದೆ. 'ಸಪ್ತಾರ್ಧಗರ್ಭಾ ಭುವನಸ್ಯ ರೇತೋ ವಿಷ್ಣೋಸ್ತಿಷ್ಠಂತಿ ಪ್ರದಿಶಾ ವಿಧರ್ಮಣಿ' ಎನ್ನುವ ಐತರೇಯಶ್ರುತಿಯಲ್ಲಿ, ಮಹದಾದಿ ತತ್ವಾಭಿಮಾನಿದೇವತೆಗಳ ಸಮುದಾಯವು ತನ್ನ ಆಜ್ಞಾಮಾತ್ರದಿಂದಲೇ ಆಯಾಯ ಕಾರ್ಯಗಳನ್ನು ಮಾಡುತ್ತಾರೆ ಎಂದು ಹೇಳಲ್ಪಟ್ಟ ವಿಷ್ಣುವಿಗೇ 'ಯಸ್ಮಿನ್ ದೇವಾ ಅಧಿವಿಶ್ವೇ ನಿಷೇದುಃ' ಎನ್ನುವ ತೈತ್ತಿರೀಯಶ್ರುತಿಯಲ್ಲೂ ಸರ್ವದೇವಾಶ್ರಯತ್ವವನ್ನು ಹೇಳಿ, ತದೇವ ಬ್ರಹ್ಮ ಎಂದು ಹೇಳಿರುವರು. ಆದ್ದರಿಂದ ಸರ್ವದೇವಾಶ್ರಯನು ವಿಷ್ಣುವೇ. 'ಸಮುದ್ರೇ ಅಂತಃ ಕವಯೋ ವಿಚಕ್ಷತೇ' ಎಂಬ ಶ್ರುತಿಯು ಮುಂದೆ ತದೇವ ಬ್ರಹ್ಮ ಎಂದು ಹೇಳಿ ಸಮುದ್ರಸ್ಥಾನವನ್ನು ವಿಷ್ಣುವಿಗೇ ಎಂದು ಸಮರ್ಥಿಸುತ್ತದೆ. 'ಯದಕ್ಷರೇ ಪರಮೇ ಪ್ರಜಾಃ' ಎನ್ನುವಲ್ಲಿ ಅಕ್ಷರ ನಾಮಕನು 'ತದೇವ ಬ್ರಹ್ಮ' ಎಂದು ಹೇಳಿರುವರು. 'ಋಚೋಕ್ಷರೇ ಪರಮೇ ವ್ಯೋಮನ್' ಎಂಬುದಾಗಿ ವಾಮನ ಸೂಕ್ತದಲ್ಲಿ ಅಕ್ಷರ ಎಂಬ ನಾಮವು ವಿಷ್ಣುವಿನಲ್ಲಿಯೇ ಪ್ರಯುಕ್ತವಾಗಿದೆ. ಆದ್ದರಿಂದ ಅಕ್ಷರ ನಾಮವು ವಿಷ್ಣುವಿಗಲ್ಲದೇ ಬೇರೆ ಯಾರಿಗೂ ಇಲ್ಲ. 'ಯತಃ ಪ್ರಸೂತಾ ಜಗತಃ ಪ್ರಸೂತಿಃ' ಎಂದು ಜಗದುತ್ಪಾದಕಳಾದ ಲಕ್ಷ್ಮೀದೇವಿಗೂ ಕಾರಣತ್ವವನ್ನು ಹೇಳಿ ತದೇವ ಬ್ರಹ್ಮ ಎಂದು ಹೇಳಿರುವರು. ಹೀಗೆ ನಾನಾರೀತಿಯಿಂದ

ಬ್ರಹ್ಮಶಬ್ದವಾಚ್ಯನು ವಿಷ್ಣುವೇ ಎಂದು ಇಲ್ಲಿ ಸಮರ್ಥಿಸಲಾಗಿದೆ.

## ಜನ್ಮಾಧಿಕರಣ

**ಸೂತ್ರ: ಓಂ ಜನ್ಮಾದ್ಯಸ್ಯ ಯತಃ ಓಂ (೧-೧-೨)**

### ವಿಷ್ಣುವೇ ಜಗಜ್ಜನ್ಮಾದಿಕಾರಣ

ಮೊದಲನೆಯ ಸೂತ್ರದಲ್ಲಿ ಪರಬ್ರಹ್ಮನಾದ ವಿಷ್ಣುವಿನ ಜಿಜ್ಞಾಸೆಯನ್ನು ಮಾಡಬೇಕಾದ್ದು ಕರ್ತವ್ಯ ಎಂಬುದಾಗಿ ಸಮರ್ಥಿಸಲಾಯಿತು. ಎರಡನೆಯ ಸೂತ್ರದಿಂದ ಪ್ರಾರಂಭಿಸಿ ಆ ಜಿಜ್ಞಾಸೆಯೇ ಮಾಡಲ್ಪಡುತ್ತದೆ. ಸ್ವರೂಪ, ಸಾಧನ, ಫಲ ಇವುಗಳ ವಿಚಾರವೇ **ಬ್ರಹ್ಮಜಿಜ್ಞಾಸಾ** ಎನಿಸುತ್ತದೆ. ಬ್ರಹ್ಮನ ಸ್ವರೂಪ ಅಥವಾ ಲಕ್ಷಣವನ್ನು ತಿಳಿದ ಮೇಲೆಯೇ ಸಾಧನ ಮತ್ತು ಫಲಗಳ ಭಗ್ಗೆ ಆಕಾಂಕ್ಷೆ ಬರುವುದರಿಂದ ಮೊದಲಿಗೆ ಅವನ ಲಕ್ಷಣವನ್ನೇ ನಿರೂಪಿಸಬೇಕು. ಆದಕ್ಕಾಗಿಯೇ ಹೊರಟದೆ ಎರಡನೆಯ ಸೂತ್ರ.

ಪ್ರತ್ಯಕ್ಷಕ್ಕೆ ಗೋಚರವಾದ ಚೇತನಾಚೇತನಾತ್ಮಕವಾದ ಈ ಜಗತ್ತಿಗೆ ಯಾರಿಂದ ಯಥಾಯೋಗ್ಯವಾಗಿ ಸೃಷ್ಟಿ, ಸ್ಥಿತಿ, ಸಂಹಾರ, ನಿಯಮನ, ಜ್ಞಾನ, ಅಜ್ಞಾನ, ಬಂಧ, ಮೋಕ್ಷಗಳು ಆಗುತ್ತವೋ ಅವನೇ ಬ್ರಹ್ಮನು.

**ಅಂತಃ ಸಮುದ್ರಗಂ ವಿಶ್ವಪ್ರಸೂತೇಃ ಕಾರಣಂ ತು ಯತ್ ।**
**ಸೂಕ್ತೋಪನಿಷದಾದ್ಯುಕ್ತಂ ಜನ್ಮಾದ್ಯಸ್ಯೇತಿ ಲಕ್ಷ್ಯತೇ ॥೮॥**

ಸಮುದ್ರದ ಮಧ್ಯದಲ್ಲಿರುವವನು, ಮೂಲಪ್ರಕೃತಿಗೆ ಕಾರಣನೂ ಆದ ಯಾವ ಬ್ರಹ್ಮನು 'ಅಂಭೃಣೆ ಸೂಕ್ತ' ಮೊದಲಾದ ಸೂಕ್ತಗಳು, 'ಅಂಭಸ್ಯ ಪಾರೇ' ಮೊದಲಾದ ಉಪನಿಷತ್ತುಗಳು, 'ಆಪೋ ನಾರಾಃ' ಇತ್ಯಾದಿ ಸ್ಮೃತಿಗಳಿಂದ ಹೇಳಲ್ಪಟ್ಟದ್ದಾನೋ ಆ ಬ್ರಹ್ಮನೇ ತನ್ನಿಂದ ಇತರವಾದ ಎಲ್ಲ ವಸ್ತುಗಳಿಂದಲೂ ಭಿನ್ನವಾದ ಧರ್ಮವುಳ್ಳವನೆಂದು ಜನ್ಮಾದ್ಯಸ್ಯ ಎಂಬ ಸೂತ್ರದಿಂದ ಪ್ರತಿಪಾದಿಸಲ್ಪಟ್ಟದ್ದಾನೆ.

ಬ್ರಹ್ಮನಿಗೆ ಲಕ್ಷಣವು ಯಾವುದು, ಜನ್ಮಾದಿಗಳೋ ಅಥವಾ ಜನ್ಮಾದಿಕಾರಣತ್ವವೋ? ಜನ್ಮಾದಿಗಳು ಜಗತ್ತಿನ ಲಕ್ಷಣವಾದ್ದರಿಂದ ಬ್ರಹ್ಮನಲ್ಲಿ ಕೂಡುವುದಿಲ್ಲ. ಬ್ರಹ್ಮನು ಅಪ್ರಸಿದ್ಧನಾದ್ದರಿಂದ ಜನ್ಮಾದಿಕಾರಣತ್ವ ರೂಪವಾದ

ಧರ್ಮವೂ ಅಪ್ರಸಿದ್ಧವೇ ಆಗುವುದರಿಂದ ಅದೂ ಕೂಡುವುದಿಲ್ಲ, ಎಂದರೆ -

**ಸೃಷ್ಟಿಃ ಸ್ಥಿತಿಶ್ಚ ಸಂಹಾರೋ ನಿಯತಿರ್ಜ್ಞಾನಮಾವೃತಿಃ ।**

**ಬಂಧಮೋಕ್ಷಾವಪಿ ಹ್ಯಾಸು ಶ್ರುತಿಷೂಕ್ತಾ ಹರೇಸ್ಸದಾ ॥೯೦॥**

ಈ ಜಗತ್ತಿಗೆ ಸೃಷ್ಟಿ, ಸ್ಥಿತಿ, ಸಂಹಾರ, ನಿಯಮನ, ಜ್ಞಾನ, ಅಜ್ಞಾನ, ಬಂಧ, ಮೋಕ್ಷಗಳೂ ಕೂಡ ಸದಾಕಾಲವೂ ಪರಬ್ರಹ್ಮನಿಂದಲೇ ಆಗುತ್ತವೆ ಎಂಬುದು ಪ್ರಸಿದ್ಧವಾದ ಶ್ರುತಿಗಳಲ್ಲಿ ಪ್ರತಿಪಾದಿತವಾಗಿದೆ. ಆದಪ್ರಯುಕ್ತ ಜನ್ಮಾದಿಕಾರಣತ್ವವು ಪ್ರಸಿದ್ದವೇ ಆಗಿರುವುದು.

'ಹಿರಣ್ಯಗರ್ಭಃ ಸಮವರ್ತತಾಗ್ರೇ' 'ಏಕೋ ರುದ್ರೋ ನ ದ್ವಿತೀಯಾಯ ತಸ್ಥೇ' 'ಇಮಾನ್ ಲೋಕಾನನೀಶತ ಈಶನೀಭಿಃ' 'ಜ್ಞಾತ್ವಾ ಶಿವಂ ಶಾಂತಿಮತ್ಯಂತಮೇತಿ' ಇವೇ ಮೊದಲಾದ ಶ್ರುತಿಗಳಲ್ಲಿ ಚತುರ್ಮುಖ ಬ್ರಹ್ಮ, ರುದ್ರಾದಿಗಳಿಗೂ ಸೃಷ್ಟ್ಯಾದಿ ಕಾರಣತ್ವವು ಹೇಳಲ್ಪಟ್ಟಿರುವಾಗ, ಅದು ಶ್ರೀಹರಿಗೇ ಸೇರಿದ್ದು ಎಂಬ ಹೇಳಿಕೆ ಕೂಡುವುದಿಲ್ಲ ಎಂದು ಆಕ್ಷೇಪಿಸಿದರೆ -

**ಯನ್ನಾಮಾನಿ ವಿಶಂತ್ಯದ್ಧಾ ಯೋ ದೇವಾನಾಮಿತಿ ಹ್ಯಪಿ ।**

**ಶ್ರುತೇರ್ನಾಮಾನಿ ಸರ್ವಾಣಿ ವಿಷ್ಣೋರೇವ ಯತಸ್ತತಃ ॥೯೧॥**

**ಅತೋ ನ ಮುಖ್ಯತೋ ನಾಮ ತದನ್ಯಸ್ಯ ಹಿ ತಸ್ಯಚಿತ್ ।**

ಎಲ್ಲ ನಾಮಗಳೂ ಯಾರನ್ನು ಚೆನ್ನಾಗಿ ಪ್ರವೇಶಿಸುತ್ತವೋ, ಯಾರು ಎಲ್ಲ ದೇವತೆಗಳ ನಾಮಗಳನ್ನೂ ಹೊಂದಿರುವನೋ, ಇತ್ಯಾದಿ ಪ್ರಸಿದ್ಧವಾದ ಶ್ರುತಿಗಳಿಂದ ತಿಳಿದುಬರುವ ಪ್ರಕಾರ ಹಿರಣ್ಯಗರ್ಭ, ರುದ್ರ ಮೊದಲಾದ ನಾಮಗಳೆಲ್ಲವೂ ಪರಮಮುಖ್ಯವೃತ್ತಿಯಿಂದ ಶ್ರೀವಿಷ್ಣುವಿನಲ್ಲಿಯೇ ಕೂಡುತ್ತವೆ. ವಿಷ್ಣುವಿನಿಂದ ಇತರರಾದ ಹಿರಣ್ಯಗರ್ಭಾದಿ ದೇವತೆಗಳಿಗೆ ಅವರ ನಾಮಗಳು ಮುಖ್ಯವೃತ್ತಿಯಿಂದ ಇರುವುದಿಲ್ಲ. ಆದಕಾರಣ ಹಿರಣ್ಯಗರ್ಭಃ ಇತ್ಯಾದಿ ಶ್ರುತಿಗಳೂ ವಿಷ್ಣುವಿಗೇ ಸೃಷ್ಟ್ಯಾದಿ ಕಾರಣತ್ವವನ್ನು ಹೇಳುತ್ತವೆ ಎಂದು ತಿಳಿಯಬೇಕು.

## ವಿಷ್ಣುವಿಗೆ ಜನ್ಮಾದಿದೋಷವಿಲ್ಲ

'ಸೋಮಃ ಪವತೇ ಜನಿತಾ ಮತೀನಾಂ ಜನಿತಾ ದಿವೋ ಜನಿತಾ ಜನಿತಾ ಪೃಥಿವ್ಯಾಃ। ಜನಿತಾಽಗ್ನೇರ್ಜನಿತಾ ಸೂರ್ಯಸ್ಯ ಜನಿತೇಂದ್ರಸ್ಯ

ಜನಿತೋತ ವಿಷ್ಣೋಃ' ಇತ್ಯಾದಿ ಶ್ರುತಿಗಳಲ್ಲಿ ವಿಷ್ಣುವಿಗೆ ಜನ್ಮಾದಿದೋಷಗಳು ಉಕ್ತವಾಗಿರುವುದರಿಂದ ಜಗಜ್ಜನ್ಮಾದಿಕಾರಣತ್ವವು ಹೇಗೆ ಕೂಡುತ್ತದೆ ಎಂದರೆ-

**ಗುಣಾಃ ಶ್ರುತಾ ಇತಿ ಹ್ಯಸ್ಮಾತ್ ನ ದೋಷೋಽರ್ಥಃ ಶ್ರುತೇರ್ಭವೇತ್ ॥೯೨॥**

'ಗುಣಾಃ ಶ್ರುತಾಃ ಸುವಿರುದ್ಧಾಶ್ಚ ದೇವೇ ಸಂತ್ಯಶ್ರುತಾ ಅಪಿ ನೈವಾತ್ರ ಶಂಕಾ। ಚಿಂತ್ಯಾ ಅಚಿಂತ್ಯಾಶ್ಚ ತಥೈವ ದೋಷಾಃ ಶ್ರುತಾಶ್ಚ ನಾಜ್ಞೈರ್ಹಿ ತಥಾ ಪ್ರತೀತಾಃ॥' ಎಂಬ ಶ್ರುತಿವಾಕ್ಯದ ಬಲದಿಂದ ವಿಷ್ಣುವಿಗೆ ಜನ್ಮಾದಿ ದೋಷವು ಸರ್ವಥಾ ಅಸಂಭವ. ಶ್ರೀಹರಿಯಲ್ಲಿ ದೋಷಗಳನ್ನು ಪ್ರತಿಪಾದಿಸುವುದರಲ್ಲಿ ಯಾವ ಶ್ರುತಿಗೂ ತಾತ್ಪರ್ಯವಿರುವುದಿಲ್ಲ.

**ವಿವರಣೆ:**

'ಜನಿತೋತ ವಿಷ್ಣೋಃ' ಎಂಬ ಶ್ರುತಿಯೂ ವಿಷ್ಣುವಿಗೆ ದೋಷವನ್ನು ಹೇಳುವುದಿಲ್ಲ. ಈ ಶ್ರುತಿಯಲ್ಲಿ ವಿಷ್ಣು ಎನ್ನುವುದು ಯಜಮಾನನಿಗೆ ಅಥವಾ ಯಜ್ಞಕ್ಕೆ ಹೆಸರು. ಸೋಮವು ಯಜಮಾನನನ್ನು ಅಥವಾ ಯಜ್ಞವನ್ನು ಹುಟ್ಟಿಸುತ್ತದೆ ಎಂದೂ ಅಥವಾ ಸೋಮಾದಿ ಶಬ್ದವಾಚ್ಯನಾದ ಕ್ಷೀರಾಬ್ಧಿಶಾಯಿಯಾದ ಮೂಲರೂಪ ನಾರಾಯಣನಿಂದ ವಿಷ್ಣುಶಬ್ದವಾಚ್ಯವಾದ ಪ್ರಾದುರ್ಭಾವರೂಪಕ್ಕೆ ಅಭಿವ್ಯಕ್ತಿಯು ಎಂದೂ ಈ ಶ್ರುತಿಗೆ ಅರ್ಥ ಮಾಡಬೇಕು.

**ಪ್ರೀತ್ಯಾ ಮೋಕ್ಷಪರತ್ವಾಚ್ಚ ತಾತ್ಪರ್ಯಂ ನೈವ ದೂಷಣೇ ।**
**ಸರ್ವೇಷಾಮಪಿ ವಾಕ್ಯಾನಾಂ ಮಹಾತಾತ್ಪರ್ಯಮತ್ರ ಹಿ ॥೯೩॥**
**ತದ್ವಿರೋಧೇ ನ ಮಾನತ್ವಂ ಫಲಂ ಮುಕ್ತಿರ್ಹಿ ವಾಕ್ಯತಃ ।**

ಶ್ರೀಹರಿಯಲ್ಲಿ ಪ್ರೀತಿಯನ್ನು ಹುಟ್ಟಿಸಿ ಅಧಿಕಾರಿಗಳಿಗೆ ಮೋಕ್ಷವನ್ನು ಪ್ರತಿಪಾದಿಸುವುದರಲ್ಲಿಯೇ ಎಲ್ಲ ಶ್ರುತಿವಾಕ್ಯಗಳಿಗೂ ತಾತ್ಪರ್ಯವಿರುವುದು. ಪರಮೇಶ್ವರನಲ್ಲಿ ದೋಷಗಳನ್ನು ಪ್ರತಿಪಾದಿಸುವುದರಲ್ಲಿ ತಾತ್ಪರ್ಯವು ಎಂದಿಗೂ ಇರುವುದಿಲ್ಲ. ಎಲ್ಲ ಶ್ರುತಿಗಳ ಮಹಾತಾತ್ಪರ್ಯವು ಭಗವಂತನ ಗುಣೋತ್ಕರ್ಷವನ್ನು ಪ್ರತಿಪಾದಿಸುವುದೇ ಆಗಿರುವುದು. ಪರಮಾತ್ಮನ ಗುಣೋತ್ಕರ್ಷಜ್ಞಾನವೇ ಮುಕ್ತಿಗೆ ಕಾರಣವಾದ್ದರಿಂದ, ಅದಕ್ಕೆ ವಿರುದ್ಧವಾದ ದೋಷಗಳನ್ನು ಪ್ರತಿಪಾದಿಸುವ ವಾಕ್ಯಗಳಿಗೆ ಪ್ರಾಮಾಣ್ಯವು ಕೂಡುವುದಿಲ್ಲ.

ಶೈವಾದಿ ಪುರಾಣಗಳೂ, ಪಾಶುಪತಾದಿ ಶಾಸ್ತ್ರಗಳೂ ರುದ್ರಾದಿಗಳಿಗೆ ಜಗತ್ಕಾರಣತ್ವವನ್ನೂ, ವಿಷ್ಣುವಿಗೆ ಪಾರತಂತ್ರ್ಯಾದಿ ದೋಷಗಳನ್ನೂ ಹೇಳುತ್ತವೆ. ಆದಕಾರಣ ವಿಷ್ಣುವಿಗೆ ಜಗಜ್ಜನ್ಮಾದಿಕಾರಣತ್ವ ಕೂಡುವುದಿಲ್ಲ ಎಂದರೆ -

**ನ ಪುರಾಣಾದಿ ಮಾನತ್ವಂ ವಿರುದ್ಧಾರ್ಥೇ ಶ್ರುತೇರ್ಭವೇತ್ ॥೯೪॥**

**ದರ್ಶನಾಂತರಮೂಲತ್ವಾನ್ಮೋಹಾರ್ಥಂ ಚಾಜ್ಞಯಾ ಹರೇಃ ।**

ಶ್ರುತಿಗೆ ವಿರುದ್ಧವಾದ ಅರ್ಥದಲ್ಲಿ ರುದ್ರಾದಿಗಳಿಗೆ ಜಗತ್ಕಾರಣತ್ವವನ್ನು ಹೇಳುವ ಶೇವಾದಿ ಪುರಾಣಗಳಿಗೆ ಪ್ರಾಮಾಣ್ಯವೇ ಕೂಡುವುದಿಲ್ಲ. ಶೈವಾದಿ ಪುರಾಣಗಳಿಗೆ ಶ್ರುತಿಮೂಲತ್ವವಿರುವುದಿಲ್ಲ. ಅವು ಶಾಸ್ತ್ರಾಂತರ ಮೂಲತ್ವವನ್ನು ಹೊಂದಿರುವುದಲ್ಲದೆ, ಶ್ರೀಹರಿಯ ಆಜ್ಞಾನುಸಾರವಾಗಿ ದುರ್ಜನರ ಮೋಹನಾರ್ಥವಾಗಿ ರಚಿತವಾಗಿವೆ. ಆದಕಾರಣ ಅವುಗಳು ಪ್ರಮಾಣವಲ್ಲ.

ಯಕ್ತ್ಯಂತರದಿಂದಲೂ ರುದ್ರಾದಿಗಳಿಗೆ ಜಗತ್ಕಾರಣವನ್ನು ನಿರಾಕರಿಸುತ್ತಾರೆ-

**ನ ಸರ್ವನಾಮತಾಽನ್ಯೇಷಾಂ ಶ್ರುತಾವುಕ್ತಾ ಹಿ ಕುತ್ರಚಿತ್ ॥೯೫॥**

**ಅದೋಷ ವಚನಾಚ್ಚೈವ ನಿಯಮೇನ ಹರೇಃ ಶ್ರುತೌ ।**

ರುದ್ರಾದಿಗಳಿಗೆ ಸರ್ವಶಬ್ದವಾಚ್ಯತ್ವವನ್ನು ಯಾವ ಶ್ರುತಿಯೂ ಹೇಳಿಲ್ಲ. ಇದು ಪ್ರಮಾಣಪ್ರಸಿದ್ಧ. ಶ್ರೀಹರಿಗೆ ಯಾವುದೇ ದೋಷಗಳಿಲ್ಲವೆಂದು ಹೇಳುವ ವಾಕ್ಯಗಳು ನಿಯಮವಾಗಿ ಎಲ್ಲ ಶ್ರುತಿಗಳಲ್ಲಿ ಉಕ್ತವಾಗಿವೆ.

## ಅನ್ಯ ದೇವತೆಗಳು ದೋಷಯುಕ್ತರು

ಪಾರತಂತ್ರ್ಯಾದಿ ದೋಷಗಳಿಂದ ಕೂಡಿದವರು ಜಗತ್ಕಾರಣರಾಗುವುದು ಅಸಂಭವ. ಶ್ರೀಹರಿಯು ಸಕಲದೋಷದೂರನಾದ್ದರಿಂದ ಅವನೇ ಜಗತ್ಕಾರಣನು ಎಂದು ತಿಳಿಸುತ್ತಾರೆ -

**ಅಜ್ಞಾನಂ ಪಾರತಂತ್ರ್ಯಂ ಚ ಪ್ರಲಯೇಽಭಾವ ಏವ ಚ ॥೯೬॥**

**ಅಶಕ್ತಿಶ್ಚೋದಿತಾಽನ್ಯೇಷಾಂ ಸರ್ವೇಷಾಮಪಿ ಚ ಶ್ರುತೌ ।**

ಶ್ರೀಹರಿಯನ್ನು ಬಿಟ್ಟು ಇತರೆಲ್ಲರಿಗೂ ಕೂಡ ಅಜ್ಞಾನ, ಪರಾಧೀನತೆ, ಪ್ರಲಯಕಾಲದಲ್ಲಿ ಇಲ್ಲದಿರುವಿಕೆ ಹಾಗೂ ಅಸಾಮರ್ಥ್ಯ ಮೊದಲಾದ ದೋಷಗಳು ಶ್ರುತಿಗಳಲ್ಲಿ ಹೇಳಲ್ಪಟ್ಟಿವೆ. ಆದ್ದರಿಂದ ದೋಷದೂರನಾದ ಶ್ರೀಹರಿಯೇ ಜಗತ್ಕಾರಣನು, ದೋಷಗಳಿಂದ ಕೂಡಿರುವ ಅನ್ಯರಲ್ಲ.

## ಜನ್ಮಾದಿಕಾರಣತ್ವ ಬ್ರಹ್ಮನ ಸ್ವಲಕ್ಷಣ

ಈ ರೀತಿಯಾಗಿ ಶ್ರೀಹರಿಯೇ ಜಗಜ್ಜನ್ಮಾದಿಕಾರಣನು ಎಂದು ಸಮರ್ಥಿಸಿ, ಜಗಜ್ಜನ್ಮಾದಿರೂಪವಾದ ಲಕ್ಷಣವು ಶ್ರೀಹರಿಯ ಸ್ವರೂಪಭೂತ ಲಕ್ಷಣವೇ ಹೊರತು ತಟಸ್ಥ ಲಕ್ಷಣವಲ್ಲ ಎಂದು ಈಗ ನಿರೂಪಿಸುತ್ತಾರೆ.

**ಜನ್ಮಾದ್ಯಸ್ಯೇತಿ ತೇನೈತದ್ವಿಷ್ಣೋರೇವ ಸ್ವಲಕ್ಷಣಂ ॥೯೭॥**
**ಅಸ್ಯೋದ್ಭವಾದಿ ಹೇತುತ್ವಂ ಸಾಕ್ಷಾದೇವ ಸ್ವಲಕ್ಷಣಂ ।**
**ಕೃಷ್ಣಧ್ಯಾನಚ್ಛಲೇನೈವ ಸ್ವಯಂ ಭಾಗವತೇಽಬ್ರವೀತ್ ॥೯೮॥**

'ಜನ್ಮಾದ್ಯಸ್ಯ ಯತಃ' ಎಂಬ ಸೂತ್ರದಲ್ಲಿ ಹೇಳಲ್ಪಟ್ಟ ಜಗಜ್ಜನ್ಮಾದಿ-ಕಾರಣತ್ವವು ವಿಷ್ಣುವಿಗೇ ಕೂಡುತ್ತದೆ, ಇತರರಿಗೆ ಕೂಡುವುದಿಲ್ಲ. ಅಸಂಭವಾದಿಗಳು ಇಲ್ಲವಾದ್ದರಿಂದ ಈ ಲಕ್ಷಣವು ಸ್ವರೂಪಭೂತವಾದ ಲಕ್ಷಣವೇ ಆಗಿದೆ. ಏಕೆಂದರೆ, ಈ ಸಮಸ್ತ ಜಗತ್ತಿನ ಉತ್ಪತ್ತಿಯೇ ಮೊದಲಾದವುಗಳ ಕಾರಣತ್ವವನ್ನು ಬ್ರಹ್ಮನಿಗೆ ಸ್ವಲಕ್ಷಣವೆಂದೇ ಭಾಗವತದಲ್ಲಿ ಸ್ಪಷ್ಟವಾಗಿ ಹೇಳಲಾಗಿದೆ. ಕೃಷ್ಣನು ಧ್ಯಾನಿಸಿದ್ದನ್ನು ದೃಢಪಡಿಸಲು ಹಾಗೂ ಇತರರಿಗೆ ಧ್ಯಾನದ ವಿಧಿಯನ್ನು ತಿಳಿಸಲು ಸ್ವಯಂ ವೇದವ್ಯಾಸರೇ ಅನುವಾದಮಾಡುವ ನೆಪದಿಂದ ಭಾಗವತದಲ್ಲಿ ಹೇಳಿದರು.

**ವಿವರಣೆ:** ಮಾಯಾವಾದಿಗಳು ಜಗಜ್ಜನ್ಮಾದಿಕಾರಣತ್ವವು ಬ್ರಹ್ಮನಿಗೆ ಸ್ವರೂಪಭೂತ ಲಕ್ಷಣವಲ್ಲ. ಅದು ಬ್ರಹ್ಮನಲ್ಲಿ ಇಲ್ಲ. ಬ್ರಹ್ಮನಲ್ಲಿರುವ ಮಾಯೆಯಲ್ಲಿ ಇರುವುದು. ಆದ್ದರಿಂದ ಅದು ಬಾಹ್ಯಲಕ್ಷಣ ಅಥವಾ ತಟಸ್ಥಲಕ್ಷಣ ಎಂಬುದಾಗಿ ಹೇಳುತ್ತಾರೆ. ಇದನ್ನು ನಿರಾಕರಿಸಲು ಶ್ರೀಮದಾಚಾರ್ಯರು ಭಾಗವತದ ವಾಕ್ಯವನ್ನು ಇದಕ್ಕೆ ಸಂವಾದಿಯಾಗಿ ನೀಡುವುದರ ಮೂಲಕ ಜಗಜ್ಜನ್ಮಾದಿಕಾರಣತ್ವವು ಬ್ರಹ್ಮನಿಗೆ ಸ್ವಲಕ್ಷಣ ಎಂದು ಪ್ರತಿಪಾದಿಸಿದ್ದಾರೆ. 'ಏಕಂ ಪರಂಜ್ಯೋತಿರನನ್ಯಮದ್ವಯಂ ಸ್ವಸಂಸ್ಥಯಾ ನಿತ್ಯ ನಿರಸ್ತಕಲ್ಮಷಂ। ಬ್ರಹ್ಮಾಖ್ಯಮಸ್ಯೋದ್ಭವನಾದಿ ಹೇತುಭಿಃ ಸ್ವಲಕ್ಷಣೈರ್ಲಕ್ಷಿತ-ಭಾವನಿರ್ವೃತಿಮ್॥' (ಸ್ಕಂಧ. ೧೦, ಅ. ೭೮ ಶ್ಲೋ. ೫). ಇಂಥಹ ಬ್ರಹ್ಮಾಖ್ಯವಾದ ತನ್ನ ಸ್ವರೂಪವನ್ನೇ ಶ್ರೀಕೃಷ್ಣನು ಧ್ಯಾನಿಸಿದನೆಂದು ಸೂತ್ರಕಾರರಾದ ವೇದವ್ಯಾಸರೇ ಭಾಗವತದಲ್ಲಿ ಹೇಳಿರುವರು.

## ಜೀವಬ್ರಹ್ಮೈಕ್ಯ ನಿರಾಕರಣೆ

ಜಗಜ್ಜನ್ಮಾದಿಕಾರಣತ್ವವು ಬ್ರಹ್ಮನ ಸ್ವಲಕ್ಷಣವಾದ್ದರಿಂದ ಅದು ಇತರರಿಗೆ ಕೂಡುವುದಿಲ್ಲ. ಆದ್ದರಿಂದ ಈ ಸೂತ್ರವು ಜೀವೈಕ್ಯವನ್ನು ನಿರಾಕರಿಸುತ್ತದೆ ಎಂದು ಮುಂದಿನ ವಾಕ್ಯದಲ್ಲಿ ಹೇಳುತ್ತಾರೆ.

**ಅತೋ ಜೀವೈಕ್ಯಮಪಿ ಸ ನಿರಾಚಕ್ರೇ ಜಗದ್ಗುರುಃ ।**
**ನ ಹಿ ಜನ್ಮಾದಿಹೇತುತ್ವಂ ಜೀವಸ್ಯ ಜಗತೋ ಭವೇತ್ ॥೯೯॥**

ಜಗಜ್ಜನ್ಮಾದಿಕಾರಣತ್ವವು ಬ್ರಹ್ಮನ ಸ್ವಲಕ್ಷಣವೆಂದು ಹೇಳುವುದರ ಮೂಲಕ ಜಗದ್ಗುರುಗಳಾದ ಶ್ರೀವೇದವ್ಯಾಸರು ಈ ಸೂತ್ರದ ಮೂಲಕ ಜೀವಬ್ರಹ್ಮರ ಐಕ್ಯವನ್ನೂ ನಿರಾಕರಿಸಿದ್ದಾರೆ. ಜೀವನಿಗೆ ಸರ್ವಜ್ಞತ್ವ, ಸರ್ವಕರ್ತೃತ್ವಾದಿಗಳು ಇಲ್ಲದಿರುವ ಪ್ರಯುಕ್ತ ಜಗಜ್ಜನ್ಮಾದಿಕಾರಣತ್ವವು ಸರ್ವಥಾ ಕೂಡಲಾರದು.

**ಹಿತಾಕ್ರಿಯಾದಿದೋಷಂ ಚ ವಕ್ಷ್ಯತ್ಯೇವ ಸ್ವಯಂ ಪ್ರಭುಃ ।**

ತನಗೆ ಹಿತವನ್ನು ಮಾಡದಿರುವುದು, ಅಹಿತವನ್ನು ಮಾಡಿಕೊಳ್ಳುವುದು ಇತ್ಯಾದಿ ಅಸ್ವಾತಂತ್ರ್ಯ ನಿಮಿತ್ತವಾದ ದೋಷಗಳು ಜೀವನಿಗೆ ಇರುವ ಪ್ರಯುಕ್ತವೂ ಜಗಜ್ಜನ್ಮಾದಿಕಾರಣತ್ವವು ಜೀವನಿಗೆ ಕೂಡಲಾರದು. ಸರ್ವಸಮರ್ಥರಾದ ಶ್ರೀವೇದವ್ಯಾಸರು ಈ ವಿಷಯವನ್ನು 'ಇತರ ವ್ಯಪದೇಶಾತ್' ಎನ್ನುವ ಸೂತ್ರದಲ್ಲಿ ಹೇಳಿರುವರು.

**ವಿವರಣೆ:** ಲಕ್ಷ್ಯವಸ್ತುವಿಗೆ ಸಜಾತೀಯ, ವಿಜಾತೀಯ ಪದಾರ್ಥಗಳಿಂದ ಭೇದವನ್ನು ತಿಳಿಸುವುದಕ್ಕಾಗಿಯೇ ಲಕ್ಷಣವನ್ನು ಹೇಳುವುದು. ಸೂತ್ರಕಾರರು ಈ ಲಕ್ಷಣದಿಂದ ಬ್ರಹ್ಮನನ್ನು ಸಜಾತೀಯವಾದ ಜೀವರಿಂದಲೂ, ವಿಜಾತೀಯವಾದ ಜಡದಿಂದಲೂ ಭಿನ್ನನೆಂದೇ ತಿಳಿಸಿದರು. ಹೀಗೆ ಜೀವೈಕ್ಯವನ್ನು ನಿರಾಕರಿಸುವ ಈ ಸೂತ್ರದ ಆರಂಭವು ಜೀವೈಕ್ಯವಾದಿಗಳ ಮತದಲ್ಲಿ ಸರ್ವಥಾ ಕೂಡಲಾರದು.

ಮಾಯಾವಾದಿಗಳು ಬ್ರಹ್ಮನು ನಿರ್ವಿಶೇಷನೆಂದು ಅಂಗೀಕರಿಸುವುದರಿಂದ ಬ್ರಹ್ಮನಿಗೆ ಲಕ್ಷಣವನ್ನು ಹೇಳುವ ಈ ಸೂತ್ರವು ಅವರ ಮತದಲ್ಲಿ ಕೂಡಲಾರದು ಎಂದು ಮುಂದಿನ ವಾಕ್ಯದಲ್ಲಿ ಹೇಳುತ್ತಾರೆ.

**ನಿರ್ಗುಣತ್ವಂ ಚ ತೇನೈವ ನಿಷಿದ್ಧಂ ಪ್ರಭುಣಾ ಸ್ವಯಂ ॥೧೦೦॥**

ಜಗಜ್ಜನ್ಮಾದಿಕಾರಣತ್ವವನ್ನು ಹೇಳುವ ಸೂತ್ರದ ಮೂಲಕ ಸ್ವಯಂ ವೇದವ್ಯಾಸರಿಂದಲೇ ಬ್ರಹ್ಮನಿಗೆ ಗುಣರಾಹಿತ್ಯವೂ ನಿಷೇಧಿಸಲ್ಪಡುತ್ತದೆ.

ವಸ್ತುತಃ ಬ್ರಹ್ಮನಲ್ಲಿ ಜಗಜ್ಜನ್ಮಾದಿಕರ್ತೃತ್ವವು ಇಲ್ಲದಿದ್ದರೂ, ಮಾಯೆಯಲ್ಲಿರುವ ಕರ್ತೃತ್ವವು ಲಕ್ಷಣಯಾ (ಅಮುಖ್ಯವಾಗಿ) ಮಾಯೆಗೆ ಆಶ್ರಯನಾದ ಬ್ರಹ್ಮನಲ್ಲಿ ಹೇಳಲ್ಪಡುತ್ತದೆ. ಕರ್ತೃತ್ವವು ಬ್ರಹ್ಮನ ಸ್ವಲಕ್ಷಣವಲ್ಲ, ಕೇವಲ ಆರೋಪಿತವಾದ್ದರಿಂದ ಜೀವಬ್ರಹ್ಮರ ಐಕ್ಯವು ಕೂಡುತ್ತದೆ ಎಂದು ಆಶಂಕಿಸಿದರೆ –

**ಭೇದೇನೈವ ಮುಖ್ಯಾರ್ಥಸಂಭವೇ ಲಕ್ಷಣಾ ಕುತಃ ।**

ಜೀವಬ್ರಹ್ಮರಿಗೆ ಸ್ವಾಭಾವಿಕವಾಗಿರುವ ಭೇದವನ್ನು ಸ್ವೀಕರಿಸುವುದರಿಂದಲೇ 'ಜಗದಾದಿಕರ್ತೃತ್ವವು ಬ್ರಹ್ಮನಲ್ಲಿ ಸ್ವರೂಪಲಕ್ಷಣವೇ ಹೌದು, ತಟಸ್ಥವಲ್ಲ' ಎನ್ನುವ ಮುಖ್ಯವಾದ ಅರ್ಥವು ಕೂಡುತ್ತಿರಲು, ಅಮುಖ್ಯವಾದ ಲಕ್ಷಣಾವೃತ್ತಿಯನ್ನು ಆಶ್ರಯಿಸಬೇಕೇಕೆ?

**ವಿವರಣೆ:**

ಸರ್ವಕರ್ತೃತ್ವ, ಸರ್ವಜ್ಞತ್ವಾದಿ ಧರ್ಮಗಳು ಬ್ರಹ್ಮನಿಗೂ, ಅಲ್ಪಜ್ಞತ್ವ, ಅಲ್ಪಶಕ್ತಿತ್ವಾದಿ ಧರ್ಮಗಳು ಜೀವರಿಗೂ ಸ್ವಾಭಾವಿಕವಾದಂಥವು. ಈ ರೀತಿಯ ವಿರುದ್ಧ ಧರ್ಮಗಳ ಕಾರಣ ಜೀವಬ್ರಹ್ಮರಿಗೆ ಅಭೇದವು ಕೂಡುವುದಿಲ್ಲ. ಅಭೇದವನ್ನು ಕೂಡಿಸಲಿಕ್ಕಾಗಿಯೇ ಜಗತ್ಕರ್ತೃತ್ವವು ಬ್ರಹ್ಮನಿಗೆ ಸಹಜವಾದ ಮುಖ್ಯಲಕ್ಷಣವಲ್ಲ, ಕೇವಲ ಔಪಚಾರಿಕ (ಆರೋಪಿತ) ಎಂದು ಮಾಯಾವಾದಿಗಳು ಹೇಳುತ್ತಾರೆ. ಇದು ಸರ್ವಥಾ ಸರಿಯಲ್ಲ. ಮುಖ್ಯಾರ್ಥವು ಕೂಡದಿದ್ದಾಗ ಲಕ್ಷಣಾವನ್ನು ಆಶ್ರಯಿಸಬೇಕು. ಜೀವಬ್ರಹ್ಮರಿಗೆ ಭೇದವನ್ನು ಅಂಗೀಕರಿಸುವುದರಿಂದ ಮುಖ್ಯಾರ್ಥವು ಕೂಡುತ್ತದೆ. ಅಭೇದವನ್ನು ಅಂಗೀಕರಿಸಿದರೆ ಮಾತ್ರ ಲಕ್ಷಣಾವನ್ನು ಆಶ್ರಯಿಸಬೇಕು. 'ತತ್ತ್ವಮಸಿ' ಇತ್ಯಾದಿ ಶ್ರುತಿಗಳಿಂದ ಜೀವಬ್ರಹ್ಮ ಭೇದವು ಸಿದ್ಧವಾಗುವುದರಿಂದ ಅಭೇದವು ಅಪ್ರಾಮಾಣಿಕವಾಗುವುದು. ತತ್ತ್ವಮಸಿ ಎನ್ನುವಲ್ಲಿ 'ತತ್' ಪದಕ್ಕೆ ಸರ್ವಜಗತ್ಕರ್ತನೂ, ಸರ್ವಜ್ಞನೂ, ಸ್ವತಂತ್ರನೂ, ಸರ್ವಗುಣಪೂರ್ಣನೂ,

ಸರ್ವಾಧಾರನೂ ಆದ ಪರಬ್ರಹ್ಮ ಎಂದು ಮುಖ್ಯಾರ್ಥ. 'ತ್ವಂ' ಪದಕ್ಕೆ ಅಲ್ಪಶಕ್ತಿ ಮತ್ತು ಅಲ್ಪಬುದ್ಧಿಯುಳ್ಳವನೂ, ಅಸ್ವತಂತ್ರನೂ, ಅಪೂರ್ಣನೂ, ಈಶಾಶ್ರಯನೂ ಆದ ಜೀವ ಎಂಬುದೇ ಮುಖ್ಯಾರ್ಥವಾಗವುದು. 'ಅಲ್ಪಶಕ್ತಿರಸಾರ್ವಜ್ಞ್ಯಂ ಪಾರತಂತ್ರ್ಯಮಪೂರ್ಣತಾ। ಉಪಜೀವಕತ್ವಂ ಜೀವತ್ವಮೀಶತ್ವಂ ತದ್ವಿಪರ್ಯಯಃ। ಸ್ವಾಭಾವಿಕಂ ತಯೋರೇತನ್ನಾನ್ಯಥಾ ತು ಕಥಂಚನ॥' (ಮಹಾವಿಷ್ಣುಪುರಾಣ). ಹೀಗೆ ಪ್ರಾಮಾಣಿಕವಾದ ಭೇದವೇ ಮುಖ್ಯಾರ್ಥವಾಗಿರಲು, ಅದನ್ನು ಬಿಟ್ಟು ಅಪ್ರಾಮಾಣಿಕವಾದ ಲಾಕ್ಷಣಿಕ ಅರ್ಥವನ್ನು ಏಕೆ ಆಶ್ರಯಿಸಬೇಕು?

'ತತ್ತ್ವಮಸಿ' ಎನ್ನುವ ವಾಕ್ಯವು ಬ್ರಹ್ಮ ಮತ್ತು ಜೀವರಲ್ಲಿರುವ ಪರಸ್ಪರ ವಿರುದ್ಧವಾದ ಧರ್ಮಗಳನ್ನು ಬಿಟ್ಟು ಚೈತನ್ಯತ್ವವನ್ನು ಮಾತ್ರ ಪರಿಗಣಿಸಿ ಜೀವಬ್ರಹ್ಮರಿಗೆ ಐಕ್ಯವನ್ನು ಪ್ರತಿಪಾದಿಸುತ್ತದೆಯಾದ್ದರಿಂದ ಭೇದಪರ ಅರ್ಥವಾದರೂ ಹೇಗೆ ಕೂಡುತ್ತದೆ ಎಂದು ಕೇಳಿದರೆ -

**ಕಥಂ ನಿತ್ಯಗುಣಸ್ಯಾಸ್ಯ ಸ್ಯಾದೈಕ್ಯಂ ಗುಣಹಾನತಃ ॥೧೦೧॥**

ನಿತ್ಯವಾದ ಗುಣಗಳುಳ್ಳ ಈಶ್ವರನಿಗೆ, ಗುಣಗಳಿಲ್ಲದಿರುವ ಅಂದರೆ ದೋಷಗಳಿಂದ ಕೂಡಿರುವ ಜೀವನೊಂದಿಗೆ ಐಕ್ಯವಾದರೂ ಹೇಗೆ ಆಗುವುದು? ಅಥವಾ ನಿತ್ಯವಾದ ಗುಣಗಳುಳ್ಳ ಈಶ್ವರನಿಗೆ ಗುಣಗಳನ್ನು ತ್ಯಜಿಸಿ, ನಿತ್ಯವಾದ ಪಾರತಂತ್ರ್ಯಾದಿ ದೋಷವುಳ್ಳ ಜೀವನೊಂದಿಗೆ ಐಕ್ಯವು ಹೇಗೆ ಕೂಡುವುದು?

ಅಭೇದವನ್ನು ಕೂಡಿಸಲಿಕ್ಕಾಗಿ ನಿರ್ಗುಣಬ್ರಹ್ಮನನ್ನು ಕಲ್ಪಿಸಿಕೊಂಡು ಆತನಿಗೆ ಜೀವನೊಂದಿಗೆ ಅಭೇದವನ್ನು ಹೇಳುವುದಾದರೆ -

**ಸದೈವ ಗುಣವತ್ತ್ವೇಽಸ್ಯ ಭಿನ್ನಂ ಸ್ಯಾನ್ನಿರ್ಗುಣಂ ಸದಾ ।**

ನಿರ್ಗುಣನನ್ನೇ ನಿರೂಪಿಸಲು ಆಗುವುದಿಲ್ಲ. ಏಕೆಂದರೆ, ಆ ನಿರ್ಗುಣನು ಸಗುಣನಾದ ಈಶ್ವರನಿಂದ ಅಭಿನ್ನನೆಂದರೆ ನಿರ್ಗುಣನಿಗೂ ಸಗುಣತ್ವವು ಬರುವುದು. ನಿರ್ಗುಣನು ಸಗುಣನಿಂದ ಅತ್ಯಂತಭಿನ್ನನೆಂದಾದರೆ, ಈ ಸಗುಣಬ್ರಹ್ಮನಿಗೆ ನಿತ್ಯಗುಣಗಳಿರುವುದರಿಂದ ಯಾವಾಗಲೂ ನಿರ್ಗುಣನು ಸಗುಣನಿಂದ ಭಿನ್ನನಾಗಿಯೇ ಇರಬೇಕಾಗುವುದು. ಇದರಿಂದ ಅದ್ವೈತಕ್ಕೆ

ಭಂಗ ಬರುವುದು. ಅಂದರೆ ಯಾವಕಾಲಕ್ಕೂ ಸಗುಣಬ್ರಹ್ಮನಿಗೆ ನಿರ್ಗುಣತ್ವವು ಬರಲಾರದು ಎಂದು ತಾತ್ಪರ್ಯ.

ಹಾಗಾದರೆ ಸ್ವಭಾವತಃ ನಿರ್ಗುಣನೇ ಆದ ಬ್ರಹ್ಮನು ಮಿಥ್ಯಾಗುಣಗಳಿಂದ ಆರೋಪಿತನಾಗಿ ಸಗುಣನೆಂದು ಅಜ್ಞರಿಂದ ಗ್ರಹಿಸಲ್ಪಡುತ್ತಾನೆ ಎಂದರೆ -

**ನ ಚ ಮಿಥ್ಯಾಗುಣತ್ವಂ ಸ್ಯಾದನಿರ್ವಾಚ್ಯಸ್ಯ ದೂಷಣಾತ್ ॥೧೦೨॥**

**ನಿರ್ಗುಣತ್ವಂ ತದಾ ಚ ಸ್ಯಾದಾಸುರತ್ವಂ ನ ಚಾನ್ಯಥಾ ।**

ಮಿಥ್ಯಾ ಶಬ್ದಕ್ಕೆ ಅಸತ್ತೆಂದು ಹೇಳುವ ಹಾಗಿಲ್ಲ. ಅನಿರ್ವಾಚ್ಯವೆಂದು ಹೇಳಿದರೆ ಅದನ್ನು ಈಗಾಗಲೇ(ಮೊದಲನೆಯ ಸೂತ್ರದ ವ್ಯಾಖ್ಯಾನದಲ್ಲಿಯೇ) ನಿರಾಕರಿಸಲಾಗಿದೆ. ಆದ್ದರಿಂದ ಮಿಥ್ಯಾಭೂತವಾದ ಗುಣಗಳಿವೆ ಎಂಬುದು ಕೂಡುವುದಿಲ್ಲ. ಗುಣರಾಹಿತ್ಯ ರೂಪವಾದ ನಿರ್ಗುಣತ್ವವನ್ನು ನಿರೂಪಿಸಲು ಸಾಧ್ಯವಿಲ್ಲ. ಹೀಗಿದ್ದರೂ ನಿರ್ಗುಣತ್ವವು ಪರರಿಗೆ ಇಷ್ಟವೇ ಎಂದರೆ, ಅಂಥಹ ನಿರ್ಗುಣತ್ವವು ಸಕಲಸದ್ಗುಣಗಳ ಮೂರ್ತಿಯಾದ ಬ್ರಹ್ಮನಲ್ಲಿ ಇಲ್ಲದಿರುವ ಎಲ್ಲ ದೋಷಗಳ ಮುದ್ದೆಯಾದ ಆಸುರತ್ವವೆಂದೇ ಹೇಳಬೇಕಾಗುವುದು. ಅನ್ಯಥಾ ಮಾರ್ಗವಿರುವುದಿಲ್ಲ. ಇಂಥಹ ಆಸುರತ್ವ ಪ್ರತಿನಿಧಿಯಾದ ನಿರ್ಗುಣಬ್ರಹ್ಮನೊಂದಿಗೆ ಐಕ್ಯವನ್ನು ಹೇಳುವ ಮಾಯಾವಾದಿಗಳಿಗೂ ಆಸುರತ್ವವೇ ಬರಬೇಕಾಗುವುದು.

ಲಕ್ಷಣಕ್ಕೆ ತಟಸ್ಥತ್ವಾದಿಗಳನ್ನು ಸಿದ್ಧಿಸುವುದಕ್ಕಾಗಿ 'ಗುಣ ಮತ್ತು ಗುಣಿಗಳಿಗೆ ಭೇದವನ್ನು ಅಥವಾ ಅಭೇದವನ್ನು ನಿರೂಪಣೆ ಮಾಡಲಿಲ್ಲ' ಎನ್ನುವ ಪರರ ಹೇಳಿಕೆಯನ್ನು ಈಗ ದೂಷಿಸುತ್ತಾರೆ -

**ಲಕ್ಷ್ಯಲಕ್ಷಣಯೋರ್ಭೇದೋಽಭೇದೋ ವಾ ಯದಿ ವೋಭಯಂ ॥೧೦೩॥**

**ಇತಿ ಪೃಷ್ಟೇ ತದೈಕ್ಯಸ್ಯ ಗತಿರೇವ ನ ವಿದ್ಯತೇ ।**

ಲಕ್ಷ್ಯನಾದ ಬ್ರಹ್ಮನಿಗೂ, ಜಗಜ್ಜನ್ಮಾದಿಕಾರಣತ್ವರೂಪವಾದ ಲಕ್ಷಣಕ್ಕೂ ಭೇದವೋ, ಅಭೇದವೋ ಅಥವಾ ಭೇದಾಭೇದವೋ ಎಂದು ಕೇಳಿದರೆ, ಆಗ ಐಕ್ಯಕ್ಕೆ ನಿರೂಪಣಾ ಪ್ರಕಾರವೇ ಇರುವುದಿಲ್ಲ.

**ವಿವರಣೆ:** ಬ್ರಹ್ಮನಿಗೆ ಹೇಳಲ್ಪಟ್ಟಿರುವ ಜಗಜ್ಜನ್ಮಾದಿ ಕರ್ತೃತ್ವರೂಪವಾದ ಲಕ್ಷಣವು ಬ್ರಹ್ಮನಿಂದ ಭಿನ್ನವೆಂದರೆ, ಸಿದ್ಧಾಂತಿಗಳು ಬ್ರಹ್ಮನ ಧರ್ಮಗಳಿಗೆ

ಬ್ರಹ್ಮನಿಂದ ಭೇದವನ್ನು ಹೇಳಿರುವುದರಿಂದ ಅಪಸಿದ್ಧಾಂತವು. ಅಭಿನ್ನವೆಂದರೆ ಲಕ್ಷ್ಯ-ಲಕ್ಷಣಭಾವವೇ ಕೂಡದು. ಲಕ್ಷಣಗಳು ಅನೇಕವಿರುವುದರಿಂದ ಅವುಗಳಿಂದ ಅಭಿನ್ನನಾದ ಬ್ರಹ್ಮನಿಗೂ ಅನೇಕತ್ವವು ಬರಬೇಕಾಗುವುದು. ಒಬ್ಬನೇ ಬ್ರಹ್ಮನೊಂದಿಗೆ ಬಹುಲಕ್ಷಣಗಳೊಂದಿಗೆ ಅಭೇದವನ್ನು ಹೇಳಿದರೆ ಲಕ್ಷಣಗಳಿಗೆ ಏಕತ್ವ ಬರುವುದು. ಭಿನ್ನಾಭಿನ್ನವೆಂದರೆ ಭೇದವೂ ಅಭೇದವೂ ಒಂದೇಕಡೆ ಕೂಡದಿರುವುದರಿಂದ ವಿರೋಧವು ಬರುವುದು. ಹೀಗೆ ಯಾವ ಪ್ರಕಾರದಿಂದಲೂ ಬ್ರಹ್ಮನ ಧರ್ಮಗಳನ್ನು ನಿರ್ವಚನ ಮಾಡಲಿಕ್ಕೆ ಬರುವುದಿಲ್ಲ. ಆದಕಾರಣ ಜೀವಬ್ರಹ್ಮರಿಗೆ ಐಕ್ಯವೇ ಯುಕ್ತವೆಂದು ಮಾಯಾವಾದಿಗಳು ಹೇಳಿದರೆ ಇದೂ ಸರಿಯಲ್ಲ. ಏಕೆಂದರೆ, ಬ್ರಹ್ಮನಿಗೂ ಮತ್ತು ಅವನ ಧರ್ಮಗಳಿಗೂ ನಾವು ಭೇದವನ್ನು ಒಪ್ಪುವುದಿಲ್ಲ. ನಿರ್ವಿಶೇಷಾಭೇದವನ್ನೂ ಒಪ್ಪುವುದಿಲ್ಲ. ಭೇದಾಭೇದವನ್ನೂ ಒಪ್ಪುವುದಿಲ್ಲ. ಪರಂತು ಸವಿಶೇಷಾಭೇದವನ್ನೇ ಹೇಳುತ್ತೇವೆ. ಅಭಿನ್ನವಾದ ವಸ್ತುವಿನಲ್ಲಿಯೂ ಭೇದಕಾರ್ಯನಿರ್ವಾಹಕವಾದ 'ವಿಶೇಷ' ಎಂಬ ಶಕ್ತಿಯನ್ನು ಎಲ್ಲ ವಾದಿಗಳೂ ಅವಶ್ಯವಾಗಿ ಒಪ್ಪಲೇಬೇಕು. ಎಲ್ಲ ಪದಾರ್ಥಗಳಲ್ಲಿಯೂ ಇರುವ ಪದಾರ್ಥಶಕ್ತಿವಿಶೇಷರೂಪವಾದ ವಿಶೇಷಬಲದಿಂದಲೇ ಲಕ್ಷ್ಯಲಕ್ಷಣಭಾವವು ಕೂಡುತ್ತದೆ. ಹೀಗೆ ಒಪ್ಪದೆ ಹಿಂದೆ ಹೇಳಿದ ರೀತಿಯಿಂದ ನಮ್ಮ ಲಕ್ಷಣವನ್ನು ದೂಷಿಸುವುದಾದರೆ, ನಿಮಗೆ ಅತ್ಯಂತ ಆಪ್ತವಾದ ಐಕ್ಯದ ವಿಷಯದಲ್ಲಿಯೂ ದೂಷಣಗಳು ಬರುವುದರಿಂದ, ನೀವು ಹೇಳುವ ಐಕ್ಯವನ್ನೂ ಕೂಡ ನಿರ್ವಚನ ಮಾಡಲಿಕ್ಕೆ ಸಾಧ್ಯವಾಗುವುದಿಲ್ಲ.

ತತ್ತ್ವಮಸಿ ಇತ್ಯಾದಿ ತತ್ತ್ವಾವೇದಕ ವಾಕ್ಯಗಳಿಗೆ ಅದ್ವೈತಿಗಳ ಪ್ರಕಾರ ಐಕ್ಯವನ್ನು ಪ್ರತಿಪಾದಿಸಲು ಆಗುವುದಿಲ್ಲ. ಏಕೆಂದರೆ, ಆ ಐಕ್ಯವು ತತ್ ತ್ವಂ ಪದಗಳಿಂದ ಲಕ್ಷಿತವಾದ ಚೈತನ್ಯದಿಂದ ಅಭಿನ್ನವೋ, ಭಿನ್ನವೋ ಅಥವಾ ಭಿನ್ನಾಭಿನ್ನವೋ ಎಂದು ಕೇಳಿದರೆ ಅವರ ಮತದ ಪ್ರಕಾರ ಯಾವುದೂ ಕೂಡುವುದಿಲ್ಲವೆಂದು ಈಗ ಹೇಳುತ್ತಾರೆ.

**ಐಕ್ಯಾಭೇದೇ ನ ಶಾಸ್ತ್ರೇಣ ಜ್ಞೇಯಂ ತತ್ ಸ್ವಪ್ರಕಾಶತಃ ||೧೦೪||**

**ಭೇದೇ ಮಿಥ್ಯಾತ್ವತೋ ಭೇದಸತ್ಯತ್ವಂ ಸ್ಯಾದ್ಬಲಾದಪಿ |**

**ಭೇದಾಭೇದೌ ಯದಿ ತದಾ ಸ್ಯಾದೇವ ಹ್ಯನವಸ್ಥಿತಿಃ ॥೧೦೫॥**

ಚೈತನ್ಯಸ್ವರೂಪಕ್ಕೆ ಸ್ವಪ್ರಕಾಶತ್ವವು ನಿತ್ಯಸಿದ್ಧವಾಗಿದೆ. ಐಕ್ಯಕ್ಕೆ ಚೈತನ್ಯಸ್ವರೂಪದಿಂದ ಅಭೇದವನ್ನು ಅಂಗೀಕರಿಸಿದರೆ, ಆ ಐಕ್ಯವೂ ಸ್ವಪ್ರಕಾಶತ್ವವೆನಿಸುವುದು. ಆದಕಾರಣ ಅದು 'ತತ್ತ್ವಮಸಿ' ಇತ್ಯಾದಿ ಶಾಸ್ತ್ರದಿಂದ ಪ್ರತಿಪಾದಿತವಾಗಲಾರದು. ಹಾಗಾದರೆ, ಐಕ್ಯಕ್ಕೆ ಬ್ರಹ್ಮಸ್ವರೂಪದಿಂದ ಭೇದವನ್ನು ಅಂಗೀಕರಿಸುತ್ತೇವೆ ಎಂದು ಹೇಳಿದರೆ, ಬ್ರಹ್ಮನನ್ನು ಬಿಟ್ಟು ಉಳಿದೆಲ್ಲವೂ ಮಿಥ್ಯೆಯೆಂದು ಅಂಗೀಕರಿಸಿರುವದರಿಂದ, ಮಿಥ್ಯೆಯಾದ ಐಕ್ಯವು ಶಾಸ್ತ್ರದಿಂದ ತಿಳಿಯಲ್ಪಡಲು ಸಾಧ್ಯವಿಲ್ಲ. ಏಕೆಂದರೆ ಮಿಥ್ಯಾಭೂತವಾದುದನ್ನು ಪ್ರತಿಪಾದಿಸುವ ಶಾಸ್ತ್ರವು ಅತತ್ತ್ವಾವೇದಕವೆನಿಸುವುದು. ಐಕ್ಯವು ಮಿಥ್ಯೆ ಎಂದಾದರೆ, ಅದಕ್ಕೆ ವಿರುದ್ಧವಾದ ಭೇದಕ್ಕೆ ಸತ್ಯತ್ವವು ಬರಬೇಕಾಗುವುದು. ಜೀವಬ್ರಹ್ಮರ ಐಕ್ಯಕ್ಕೆ ಚೈತನ್ಯಸ್ವರೂಪದಿಂದ ಭೇದಾಭೇದಗಳನ್ನು ಅಂಗೀಕರಿಸಿದರೆ, ಆ ಭೇದಾಭೇದಗಳು ಚೈತನ್ಯಸ್ವರೂಪದಿಂದ ಅಭಿನ್ನವೋ, ಭಿನ್ನವೋ ಅಥವಾ ಭಿನ್ನಾಭಿನ್ನವೋ ಎಂದು ಕೇಳುತ್ತೇವೆ. ಅಭಿನ್ನವೆಂದರೆ ಭೇದಾಭೇದಗಳಿಗೆ ಏಕತ್ವ ಪ್ರಾಪ್ತವಾಗುವುದು. ಭಿನ್ನ ಅಥವಾ ಭಿನ್ನಾಭಿನ್ನವೆಂದು ಹೇಳಿದರೆ ಉಭಯ ಪಕ್ಷಗಳಲ್ಲಿಯೂ ಅನವಸ್ಥೆಯು ಬಂದೇ ಬರುವುದು. ಇದು ಸ್ಪಷ್ಟವೇ ಆಗಿದೆ.

ಹಾಗಾದರೆ, ಐಕ್ಯವು ತಾನೇ ನಿರ್ವಾಹ್ಯ-ನಿರ್ವಾಹಕರೂಪವಾದುದರಿಂದ ಭೇದಾದಿಗಳನ್ನು ಕಲ್ಪಿಸುವಂತಿಲ್ಲ ಎಂದರೆ –

**ಸ್ವನಿರ್ವಾಹತಾ ಚೇತ್ಸ್ಯಾದ್ವಾಹ್ಯಂ ವಾಹಕಮಿತ್ಯಪಿ ।**
**ಪರ್ಯಾಯೋ ಭೇದವಾನ್ನಾ ಸ್ಯಾದನವಸ್ಥೋಭಯತ್ರ ಚ ॥೧೦೬॥**

ಐಕ್ಯಕ್ಕೂ ಭೇದಾಭೇದಗಳಿಗೂ ಸ್ವನಿರ್ವಾಹಕತ್ವವವು ಅಂಗೀಕರಿಸಲ್ಪಟ್ಟರೆ, ಆಗ ನಿರ್ವಾಹ್ಯ, ನಿರ್ವಾಹಕ ಮೊದಲಾದವು ಪರ್ಯಾಯ ಶಬ್ದಗಳೆನಿಸುತ್ತವೆ. ಅಂದರೆ ಒಂದೇ ಅರ್ಥವನ್ನು ಪ್ರತಿಪಾದಿಸುವ ಶಬ್ದಗಳಾಗುತ್ತವೆ. ಪರ್ಯಾಯಾರ್ಥಕ ಶಬ್ದಗಳಿಗೆ ಸಹಪ್ರಯೋಗವು ಕೂಡಲಾರದು. ಅವು ಬೇರೆ ಬೇರೆ ಅರ್ಥಗಳನ್ನು ಪ್ರತಿಪಾದಿಸುತ್ತವೆ ಎಂದು ಹೇಳುವುದೂ ಸರಿಯಲ್ಲ. ಏಕೆಂದರೆ ನಿರ್ವಾಹ್ಯ ನಿರ್ವಾಹಕತ್ವ ಮೊದಲಾದವು ಪರಸ್ಪರವಾಗಿಯೂ,

ಧರ್ಮಿಯಿಂದಲೂ ಭೇದವನ್ನು ಹೊಂದಿವೆ ಎಂದರೆ, ಎರಡು ಪಕ್ಷಗಳಲ್ಲಿಯೂ ಅನವಸ್ಥಾ ದೋಷವು ಬರುವುದು.

ಹೀಗೆ ಬ್ರಹ್ಮನಿಗೆ ಜನ್ಮಾದಿಕಾರಣತ್ವವು ತಟಸ್ಥಲಕ್ಷಣ ಎಂಬುದನ್ನು ನಿರಾಕರಿಸಿ, ಈಗ ಸತ್ಯಜ್ಞಾನಾದಿ ಪದಗಳಿಗೆ ಅಖಂಡಾರ್ಥತ್ವ (ಚಿನ್ಮಾತ್ರಪರತ್ವ) ವನ್ನು ನಿರಾಕರಿಸುತ್ತಾರೆ. ಹಾಗೂ ವಿಶೇಷವನ್ನು ಒಪ್ಪದಿದ್ದರೆ 'ತತ್ತ್ವಮಸಿ' ಇತ್ಯಾದಿ ಮಹಾವಾಕ್ಯಗಳ ವಾಕ್ಯಾರ್ಥ ಕೂಡುವುದಿಲ್ಲ ಎಂದು ಅನುಪಪತ್ತಿಯನ್ನು ಹೇಳಿ, ಈಗ ಬ್ರಹ್ಮನಲ್ಲಿ ಸತ್ಯಜ್ಞಾನಾದಿಧರ್ಮಗಳನ್ನು ಪ್ರತಿಪಾದಿಸುವ ಅವಾಂತರವಾಕ್ಯಗಳಲ್ಲಿಯೂ ಅನುಪಪತ್ತಿಯನ್ನು ತೋರಿಸುತ್ತಾರೆ.

## ಬ್ರಹ್ಮ ನಿರ್ವಿಶೇಷನಲ್ಲ

**ಸತ್ಯಜ್ಞಾನಾದಿಕೇಽಪ್ಯೇವಂ ನ ವ್ಯಾವೃತ್ತ್ಯಾ ಪ್ರಯೋಜನಂ ।**
**ವ್ಯಾವೃತ್ತಸ್ಯಾವಿಶೇಷತ್ವೇ ತದಖಂಡಂ ಚ ಖಂಡಿತಂ ॥೧೦೭॥**
**ನಿರ್ವಿಶೇಷತ್ವಮೇತೇನ ಮೂಕೋಽಹಮಿತಿವದ್ಭವೇತ್ ।**
**ಅಭಿನ್ನೇಽಪಿ ವಿಶೇಷೋಽಯಂ ಬಲಾದಾಪತತಿ ಹ್ಯತಃ ॥೧೦೮॥**

'ಸತ್ಯಂ ಜ್ಞಾನಮನಂತಂ ಬ್ರಹ್ಮ' ಇತ್ಯಾದಿ ಅವಾಂತರ ವಾಕ್ಯಗಳಲ್ಲಿಯೂ ಹೀಗೆಯೇ ದೂಷಣವನ್ನು ಹೇಳಬೇಕು. ಅಂದರೆ, ಸತ್ಯಜ್ಞಾನಾದಿಗಳು ಪರಸ್ಪರವಾಗಿಯೂ ಬ್ರಹ್ಮನಿಂದಲೂ ಅತ್ಯಂತಾಭಿನ್ನವೋ, ಭಿನ್ನವೋ, ಭಿನ್ನಾ-ಭಿನ್ನವೋ ಎಂದು ವಿಕಲ್ಪಮಾಡಿ ಮೇಲೆ ಹೇಳಿರುವ ಪ್ರಕಾರ ನಿರಾಕರಣೆ ಮಾಡಬೇಕು. ನಿರ್ವಿಶೇಷನಾದ ಬ್ರಹ್ಮನಲ್ಲಿ ಅಸತ್ಯತ್ವ, ಅಜ್ಞಾನಾದಿಗಳು ಇಲ್ಲ ಎಂದು ಹೇಳುವುದರಲ್ಲಿ ಸತ್ಯಜ್ಞಾನಾದಿ ಪದಗಳಿಗೆ ಪ್ರಯೋಜನವಿದೆ ಎಂದು ಹೇಳುವುದು ಸರಿಯಲ್ಲ. ಮಾಯಾವಾದಿಗಳು ಬ್ರಹ್ಮನಲ್ಲಿ ಯಾವುದೇ ವಿಶೇಷವನ್ನು ಅಂಗೀಕರಿಸಿಲ್ಲ. ಅಂದಮೇಲೆ ವಿಶೇಷ ಧರ್ಮಗಳನ್ನು ನಿರಾಕರಿಸುವುದರಲ್ಲಿ ಏನೂ ಪ್ರಯೋಜನವಿಲ್ಲ. ವಿಶೇಷದ ನಿರಾಕರಣೆಯೂ ಸಾಧ್ಯವಿಲ್ಲ. ಏಕೆಂದರೆ 'ಬ್ರಹ್ಮನು ನಿರ್ವಿಶೇಷನು' ಎನ್ನುವುದು ವಿಶೇಷಾಭಾವ ರೂಪವಾದ ಮತ್ತೊಂದು ವಿಶೇಷವೇ ಆಗುವುದರಿಂದ 'ನಾನು ಮೂಕನು' ಎಂಬ ಹೇಳಿಕೆಯಂತೆ ಸ್ವವಚನವಿರೋಧಕ್ಕೆ ಕಾರಣವಾಗುವುದು.

## ವಿಶೇಷದ ನಿರೂಪಣೆ

ಹಿಂದೆ ಹೇಳಿದ ಪ್ರಕಾರ ಮಹಾವಾಕ್ಯ ಮತ್ತು ಅವಾಂತರವಾಕ್ಯಗಳಲ್ಲಿ ಅನುಪಪತ್ತಿ ಬರುವುದರಿಂದ, ಅದನ್ನು ನಿವಾರಿಸಲು ಅಭಿನ್ನನಾದ ಬ್ರಹ್ಮನಲ್ಲಿಯೂ ವಿಶೇಷವನ್ನು ಒಪ್ಪಲೇಬೇಕಾಗಿ ಬರುವುದು.

ವಿಶೇಷವನ್ನು ಒಪ್ಪಿದರೂ ಅನುಪಪತ್ತಿಯು ಬಂದೇ ಬರುವುದು. ಆ ವಿಶೇಷವು ವಸ್ತುವಿನಿಂದ ಅಭಿನ್ನವಾದರೆ ವಿಶೇಷ-ವಿಶೇಷಿ ಎಂಬ ವ್ಯವಹಾರವೇ ಕೂಡುವುದಿಲ್ಲ. ವಿಶೇಷವು ವಸ್ತುವಿನಿಂದ ಭಿನ್ನವಾದರೆ, ಅದನ್ನು ಕೂಡಿಸಲು ಮತ್ತೊಂದು ವಿಶೇಷ, ಅದಕ್ಕೆ ಇನ್ನೊಂದು ವಿಶೇಷ ಹೀಗೆ ಮುಗಿಯದ ಭೇದಪರಂಪರೆ ಉಂಟಾಗುವುದು. ಹೀಗೆ ಆಶಂಕಿಸಿದರೆ -

**ವಿಶೇಷತದ್ವತೋಶ್ಚೈವ ಸ್ವನಿರ್ವಾಹಕತಾ ಭವೇತ್ ।**

**ಭೇದಹೀನೇ ತ್ವಪರ್ಯಾಯ ಶಬ್ದಾಂತರನಿಯಾಮಕಃ ॥೧೦೯॥**

**ವಿಶೇಷೋ ನಾಮ ಕಥಿತಃ ಸೋಽಸ್ತಿ ವಸ್ತುಷ್ವಶೇಷತಃ ।**

ವಿಶೇಷ-ವಿಶೇಷಿಗಳಿಗೆ ಅಭೇದವನ್ನೇ ಅಂಗೀಕರಿಸಬೇಕು. ವಿಶೇಷ-ವಿಶೇಷಿ ಎಂಬ ವ್ಯವಹಾರವೂ ವಿಶೇಷದ ಬಲದಿಂದಲೇ ಕೂಡುವುದು. ವಿಶೇಷವು ಸ್ವನಿರ್ವಾಹಕವಾದುದರಿಂದ ಮತ್ತೊಂದು ವಿಶೇಷದ ಅಪೇಕ್ಷೆ ಇರುವುದಿಲ್ಲ. ಆದ್ದರಿಂದ ಅನವಸ್ಥಾ ದೋಷ ಬರುವುದಿಲ್ಲ. ಧರ್ಮ-ಧರ್ಮಿಗಳಲ್ಲಿ ಅಭೇದವಿದ್ದಾಗ್ಯೂ ಅವುಗಳಲ್ಲಿ ಭೇದನಿರ್ವಾಹಕವಾದ ವಿಶೇಷವು ಇರುವುದೆಂದು ಹೇಳಲ್ಪಟ್ಟಿದೆ. ಆ ವಿಶೇಷವು ಸಮಸ್ತ ವಸ್ತುಗಳಲ್ಲಿಯೂ ಇರುವುದು ಎಂದು ಎಲ್ಲರೂ ಒಪ್ಪಲೇಬೇಕು.

ಎಲ್ಲ ವಸ್ತುಗಳಲ್ಲಿಯೂ ಅಭಿನ್ನವಾದ ಒಂದೇ ವಿಶೇಷವಿರುವುದಾದರೆ ಎಲ್ಲ ವಸ್ತುಗಳಿಗೂ ಐಕ್ಯವೇ ಬರಬೇಕಾಗುವುದು ಎಂದು ಹೇಳಿದರೆ -

**ವಿಶೇಷಾಸ್ತೇಽಪ್ಯನಂತಾಶ್ಚ ಪರಸ್ಪರವಿಶೇಷಿಣಃ ॥೧೧೦॥**

**ಸ್ವನಿರ್ವಾಹಕತಾ ಯುಕ್ತಾಃ ಸಂತಿ ವಸ್ತುಷ್ವಶೇಷತಃ ।**

ಪ್ರತಿಯೊಂದು ವಸ್ತುವಿನಲ್ಲಿರುವ ವಿಶೇಷವೂ ಆ ವಸ್ತುವಿನೊಂದಿಗೆ ಅಭಿನ್ನವೂ ಇತರ ವಸ್ತುಗಳಲ್ಲಿರುವ ವಿಶೇಷಗಳಿಂದ ಭಿನ್ನವಾಗಿಯೂ ಇರುತ್ತವೆ. ಹೇಗೆ ವಸ್ತುಗಳು ಅನಂತವೋ ಹಾಗೆಯೇ ವಿಶೇಷಗಳೂ ಅನಂತವೇ.

ಪ್ರತಿವಸ್ತುವಿನಲ್ಲಿಯೂ ಅನಂತ ವಿಶೇಷಗಳು ಇರುತ್ತವೆ. ಇವು ಸ್ವನಿರ್ವಾಹಕ-ವಾದ್ದರಿಂದ ಪರಸ್ಪರವಾಗಿ ವಿಶೇಷಣ-ವಿಶೇಷ್ಯ ಭಾವದಿಂದ ತೋರುತ್ತವೆ.

**ಅತೋಽನಂತಗುಣಂ ಬ್ರಹ್ಮ ನಿರ್ಭೇದಮಪಿ ಭಣ್ಯತೇ ॥೧೧೧॥**

**ಏವಂ ಧರ್ಮಾನಿತಿ ಶ್ರುತ್ಯಾ ತದಭೇದೋಽಪ್ಯುದೀರ್ಯತೇ ।**

ಆದುದರಿಂದ, ಬ್ರಹ್ಮನು ಸ್ವಗತಭೇದರಹಿತನಾಗಿದ್ದರೂ, ವಿಶೇಷದ ಬಲದಿಂದಲೇ ಅನಂತಗುಣಗಳುಳ್ಳವನೆಂದು ಹೇಳಲ್ಪಡುತ್ತಾನೆ. 'ಏವಂ ಧರ್ಮಾನ್ ಪೃಥಕ್ ಪಶ್ಯನ್ ತಾನೇವಾನು ವಿಧಾವತಿ' ಇತ್ಯಾದಿ ಶ್ರುತಿಗಳಿಂದ ಬ್ರಹ್ಮನಿಗೆ ಅವನ ಗುಣಗಳಿಂದ ಅಭೇದವೂ ಹೇಳಲ್ಪಡುತ್ತದೆ.

ಹೀಗೆ ಸ್ವನಿರ್ವಾಹಕವಾದ ವಿಶೇಷದ ಬಲದಿಂದ ಸ್ವಗತಭೇದರಹಿತನಾದ ಬ್ರಹ್ಮನಿಗೆ ಲಕ್ಷ್ಯ-ಲಕ್ಷಣಭಾವವು ಸಿದ್ಧವಾಗುವುದು.

## ಶಾಸ್ತ್ರಯೋನಿತ್ವಾಧಿಕರಣ

**ಸೂತ್ರ: ಓಂ ಶಾಸ್ತ್ರಯೋನಿತ್ವಾತ್ ಓಂ (೧-೧-೩)**

ಪಾಶುಪತಾದಿ ಆಗಮಗಳಿಂದ ಹಾಗೂ ಅನುಮಾನದಿಂದ ಹಿರಣ್ಯಗರ್ಭ, ರುದ್ರಾದಿಗಳಿಗೂ ಜಗಜ್ಜನ್ಮಾದಿಕಾರಣತ್ವವು ಏಕಾಗಬಾರದು ಎಂದು ಆಶಂಕಿಸಿದರೆ, ಅದಕ್ಕೆ ಸೂತ್ರಕಾರರು ಶಾಸ್ತ್ರಯೋನಿತ್ವಾತ್ ಎಂಬ ಸೂತ್ರದಿಂದ ವಿಷ್ಣುವೇ ಜಗಜ್ಜನ್ಮಾದಿಕಾರಣನೆಂಬುದಕ್ಕೆ ಋಗಾದಿಶಾಸ್ತ್ರಗಳೇ ಪ್ರಮಾಣ ಎಂದು ಶಾಸ್ತ್ರರೂಪಪ್ರಮಾಣವನ್ನು ಹೇಳಿ ಜಗಜ್ಜನ್ಮಾದಿಕಾರಣನಾದ ಪರಬ್ರಹ್ಮನೇ ಜಿಜ್ಞಾಸ್ಯನು ಎಂದು ಪ್ರತಿಪಾದಿಸುತ್ತಾರೆ.

### ಜನ್ಮಾದಿಕಾರಣತ್ವಕ್ಕೆ ಶಾಸ್ತ್ರವೇ ಪ್ರಮಾಣ

**ಶೈವಾದ್ಯಾಗಮಸಂಪ್ರಾಪ್ತ ದೃಷ್ಟಗೇನ ಫಲೇನ ತು ॥೧೧೨॥**

**ತದ್ವಾಕ್ಯೋಪಮಯಾನ್ಯಚ್ಚ ಪ್ರಮಾಣತ್ವೇನುಮೀಯತೇ ।**

**ಈಶವಾಕ್ಯತ್ವತಃ ಇತಿ ಚೇತ್ತದ್ಗವ್ಯಭಿಚಾರಿಣಾ ॥೧೧೩॥**

ರುದ್ರ, ಹಿರಣ್ಯಗರ್ಭ ಮೊದಲಾದವರಿಂದ ಮಾಡಲ್ಪಟ್ಟ ಪೌರುಷೇಯ ಆಗಮಗಳಲ್ಲಿ ಹೇಳಿರುವಂತೆ ಅನುಷ್ಠಾನ ಮಾಡಿದಾಗ ಪ್ರತ್ಯಕ್ಷಸಿದ್ಧವಾದ ಫಲಗಳು ಕಂಡುಬರುತ್ತವೆ. ಆದ್ದರಿಂದ ಅವು ಪ್ರಮಾಣ. ಹೀಗೆ

ಅನುಮೇಯಿಸಿ, ಈಶವಾಕ್ಯವಾಗಿರುವ ಕಾರಣದಿಂದಲೇ ರುದ್ರಾದಿಗಳಿಗೆ ಜಗತ್ಕಾರಣತ್ವವನ್ನು ಹೇಳುವ ಬೇರೆ ವಾಕ್ಯಗಳನ್ನೂ ಪ್ರಮಾಣವೆಂದು ತಿಳಿಯತಕ್ಕದ್ದು. ಹೀಗೆ ಹೇಳುವುದು ಸರಿಯಲ್ಲ. ಏಕೆಂದರೆ ಪ್ರತ್ಯಕ್ಷದಿಂದ ಫಲವು ಕಂಡಿರದ ವಾಕ್ಯಗಳ ದೃಷ್ಟಾಂತದಿಂದ ಅವು ಅಪ್ರಮಾಣ ಎಂಬ ಅನುಮಿತಿಯೂ ಬರಬೇಕಾದೀತು.

**ಅಪ್ರಾಮಾಣ್ಯಾನುಮಾ ಚ ಸ್ಯಾನ್ನ ಪೃಥಕ್ಚಾನುಮೇಶ್ವರೇ ।**

ಆದಪ್ರಯುಕ್ತ ರುದ್ರಾದಿಗಳು ಜಗತ್ಕಾರಣ ಎಂದು ಹೇಳುವ ರುದ್ರಾದಿ ಆಗಮಗಳ ಇತರ ವಾಕ್ಯಗಳೂ ಪ್ರಮಾಣವಾಗಲಾರವು. ಏಕೆಂದರೆ ಸ್ವತಂತ್ರವಾದ ಅನುಮಾನವು ಪ್ರಮಾಣವಲ್ಲ.

ಶೈವಾದಿ ಆಗಮಗಳು ರುದ್ರಾದಿಗಳಿಗೆ ಜಗತ್ಕಾರಣವನ್ನು ಪ್ರತಿಪಾದಿಸುವಲ್ಲಿ ಏಕೆ ಪ್ರಮಾಣವಾಗಲಾರವು ಎಂದರೆ -

**ಪುಂಸ್ತ್ವ ಹೇತು ಬಲಾದೇವ ಪೂರ್ವೋಕ್ತೇನೈವ ವರ್ತ್ಮನಾ ॥೧೧೪॥**

**ಶಾಸ್ತ್ರಯೋನಿತ್ವಮೇತೇನ ಕಾರಣಸ್ಯ ಬಲಾದ್ಭವೇತ್ ।**

ಹಿಂದೆ ಹೇಳಿದ ರೀತಿಯಿಂದಲೇ ಪುರುಷತ್ವರೂಪ ಹೇತುವಿನಿಂದಲೇ (ಶಿವನು ಜಗತ್ಕಾರಣನಲ್ಲ, ಪುರುಷನಾದ್ದರಿಂದ ದೇವದತ್ತನಂತೆ ಎನ್ನುವ ಅನುಮಾನದ ಬಲದಿಂದಲೇ) ರುದ್ರಾದಿಗಳಿಗೆ ಜಗತ್ಕಾರಣತ್ವವು ಸಿದ್ಧಿಸುವುದಿಲ್ಲ. ಹೀಗೆ ಜಗತ್ಕಾರಣವನ್ನು ಸಾಧಿಸುವ ಸ್ವತಂತ್ರಾನುಮಾನದ ನಿರಾಕರಣೆಯಿಂದ ಜಗತ್ಕಾರಣನಿಗೆ ಶಾಸ್ತ್ರಯೋನಿತ್ವ ಹೇತುವು ಸಿದ್ಧವಾಯಿತು.

### ಕೇವಲಾನುಮಾನವು ಪ್ರಮಾಣವಲ್ಲ

ಕೇವಲ ಅನುಮಾನದಿಂದ ಜಗತ್ಕಾರಣನನ್ನು ಸಾಧಿಸಲು ಸಾಧ್ಯವಿಲ್ಲ ಎಂಬುದಕ್ಕೆ ಈಗ ಶ್ರುತಿಸಂವಾದವನ್ನೂ ನೀಡುತ್ತಾರೆ.

**ನಾವೇದವಿನ್ನ ತರ್ಕೇಣ ಮತಿರಿತ್ಯಾದಿ ವಾಕ್ಯತಃ ॥೧೧೫॥**

**ತರ್ಕೋ ಜ್ಞಾಪಯಿತುಂ ಶಕ್ತೋ ನೇಶಿತಾರಂ ಕಥಂಚನ ।**

**ವನಕೃತ್ತ್ವಾದಿರೂಪೇಣ ಪಕ್ಷಭೂತಸ್ಯ ಚೇಶಿತುಃ ॥೧೧೬॥**

**ಕಿಂಚಿಜ್ಜ್ಞತ್ವಂ ಹಿ ಪುಂಸ್ತ್ವೇನ ಶಕ್ಯಂ ಸಾಧಯಿತುಂ ಸುಖಂ ।**

**ವೃಕ್ಷಕೃನ್ನಾಖಿಲಂ ವೃಕ್ಷಂ ವೇತ್ತಿ ಪುಂಸ್ತ್ವಾದ್ಧಿ ಚೈತ್ರವತ್ ॥೧೧೭॥**

ವೇದಜ್ಞಾನಿಯಲ್ಲದವನು ಪೂರ್ಣನಾದ ಈ ಪರಮಾತ್ಮನನ್ನು ತಿಳಿಯಲಾರನು (ನಾವೇದವಿನ್ಮನುತೇದಂ ಬೃಹಂತಂ), ಕೇವಲ ತರ್ಕದ ಬಲದಿಂದ ಪರಮಾತ್ಮನ ವಿಷಯಕವಾದ ಬುದ್ಧಿಯನ್ನು ಪಡೆಯುವುದಕ್ಕಾಗಲೀ ನಿರಾಕರಿಸಲಿಕ್ಕಾಗಲೀ ಆಗದು (ನೈಷಾ ತರ್ಕೇಣ ಮತಿರಾಪನೇಯಾ). 'ನೇಂದ್ರೀಯಾಣಿ ನಾನುಮಾನಂ ವೇದಾ ಹ್ಯೇವೇನಂ ವೇದಯಂತಿ' (ಇಂದ್ರಿಯಗಳಾಗಲೀ, ಅನುಮಾನವಾಗಲೀ ಪರಬ್ರಹ್ಮನನ್ನು ತಿಳಿಸಿ ಕೊಡಲಾರವು, ವೇದಗಳೇ ತಿಳಿಸಿಕೊಡುತ್ತವೆ.) ಇತ್ಯಾದಿ ಶ್ರುತಿವಾಕ್ಯಗಳಿಂದ ತಿಳಿದುಬರುವುದೇನೆಂದರೆ, ಜಗತ್ಕರ್ತನನ್ನು ತಿಳಿಸಿಕೊಡಲು ಅನುಮಾನವು ಯಾವುದೇ ರೀತಿಯಿಂದಲೂ ಸಮರ್ಥವಲ್ಲ. 'ವನಕೃತ್ವಾದಿರೂಪೇಣ' ಇತ್ಯಾದಿ ಮಾತುಗಳಿಂದ ಅನುಮಾನದ ಅಸಾಮರ್ಥ್ಯವನ್ನು ಇನ್ನೂ ಸ್ಪಷ್ಟಪಡಿಸುತ್ತಾರೆ.

ಅರಣ್ಯವನ್ನು ನಿರ್ಮಿಸಿದವನು ಯಾರೆಂಬುದು ಸುಲಭವಾಗಿ ತಿಳಿಯಲು ಸಾಧ್ಯವಿಲ್ಲದಿದ್ದರೂ ಅದು ಯಾರಿಂದಲೂ ಮಾಡಲ್ಪಟ್ಟಿಲ್ಲ ಎಂದು ನಾವು ಹೇಳುವುದಿಲ್ಲ. ಅರಣ್ಯವು ಕಾರ್ಯವಾಗಿರುವುದರಿಂದ ಅದಕ್ಕೆ ಒಬ್ಬ ಕರ್ತಾರ ಪುರುಷನು ಇರಲೇಬೇಕು ಎಂದು ಅನುಮಾನದಿಂದ ನಿರ್ಧರಿಸುತ್ತೇವೆ. ಹಾಗೆಯೇ ಜಗತ್ಕಾರಣನಾದ ಈಶ್ವರನು ದೇವದತ್ತನಂತೆ ಒಬ್ಬ ಪುರುಷನಾದ್ದರಿಂದ ಎಂಬ ಅನುಮಾನದಿಂದ ಅವನಿಗೂ ಅಲ್ಪಜ್ಞತ್ವವನ್ನು ಸುಲಭವಾಗಿ ಸಾಧಿಸಲು ಶಕ್ಯವಾಗುವುದು. ಇದೇ ರೀತಿ ಪುರುಷತ್ವ ಹೇತುವಿನಿಂದಲೇ, ಮರವನ್ನು ಬೆಳೆಸುವವನಿಗೆ ಮರದ ಸಮಸ್ತ ಜ್ಞಾನವೂ ಇರುವುದಿಲ್ಲ, ಚೈತ್ರನಂತೆ ಪುರುಷನಾಗಿರುವುದರಿಂದ, ಎಂದು ಹೇಳಬಹುದು. ಹೀಗೆ ಪುರುಷತ್ವ ಹೇತುವಿನಿಂದ 'ಜಗತ್ಕಾರಣನು ಸರ್ವಜ್ಞನಾಗಿರಬೇಕಿಲ್ಲ' ಎಂದು ಅನುಮಾನದಿಂದ ಸಾಧಿಸಲು ಬರುತ್ತದೆ.

ಹೀಗೆ ಕೇವಲ ಅನುಮಾನದಿಂದ ಏನನ್ನಾದರೂ ಸಾಧಿಸಲಿಕ್ಕೆ ಬರುವುದು ಸಾಧ್ಯವಾದ್ದರಿಂದ, ಈಶ್ವರನ ವಿಷಯದಲ್ಲಿ ಅದು ಪ್ರಮಾಣವಾಗಲಾರದು ಎಂದು ಹೇಳುತ್ತಾರೆ -

**ಇತ್ಯಾದ್ಯನುಮಯಾ ಸ್ಪರ್ಧಿ ನಾನುಮಾನಂ ಪರೇಶಿತುಃ ।**
**ಶಕ್ತಂ ವಿಜ್ಞಾಪನೇ ಚಾತಿಪ್ರಸಂಗೋಽನುಮೇಯದೃಶಾ ॥೧೧೮॥**

**ಪಶುತ್ವಾತ್ತುರಗಃ ಶೃಂಗೀ ಪುಷ್ಪವತ್ ಖಂ ಸುತೈರ್ಯುತಾ ।**
**ಸ್ತ್ರೀತ್ವಾಚ್ಚ ರಸಃ ಷಷ್ಠೋ ರಸತ್ವಾತ್ ಸೋತ್ತರೋ ಭವೇತ್ ॥೧೧೯॥**

ಇತ್ಯಾದಿ ಅನುಮಾನದಿಂದ ಸತ್ಪಕ್ಷಕ್ಕೆ ವಿರುದ್ಧವಾದ ಅನುಮಾನವು ಸರ್ವೋತ್ತಮನಾದ ಶ್ರೀಹರಿಯನ್ನು ತಿಳಿಸಿಕೊಡುವುದರಲ್ಲಿ ಸಮರ್ಥವಾಗದು. ಅತೀಂದ್ರಿಯ ಪದಾರ್ಥಗಳ ವಿಷಯದಲ್ಲಿ ಪ್ರಯೋಗಿಸಲ್ಪಡುವ ಇಂಥಹ ಅನುಮಾನದಿಂದ ಅತಿಪ್ರಸಂಗವೇ ಉಂಟಾಗುವುದು. ಮುಂದಿನ ಮಾತುಗಳಿಂದ ಅತಿಪ್ರಸಂಗ ಹೇಗೆ ಎಂಬುದನ್ನು ತೋರಿಸುತ್ತಾರೆ. ಕುದುರೆಗೆ ಕೋಡುಗಳಿವೆ ಅದು ನಾಲ್ಕು ಕಾಲಿನ ಪಶುವಾಗಿರುವುದರಿಂದ ಹಸುವಿನಂತೆ, ಆಕಾಶವು ಪುಷ್ಪವುಳ್ಳದ್ದು ಪದಾರ್ಥವಾದುದರಿಂದ, ಬಂಜೆಯು ಸಂತಾನವುಳ್ಳವಳು ಸ್ತ್ರೀಯಾಗಿರುವದರಿಂದ, ಆರನೇ ರಸವು ತನ್ನಿಂದಾಚೆ ಏಳನೇ ರಸವನ್ನೂ ಹೊಂದಿದೆ ಅದು ರಸವಾಗಿರುವುದರಿಂದ ಮೊದಲನೆಯ ರಸದಂತೆ. ಆಗಮದ ಸಹಕಾರವಿಲ್ಲದ ಸ್ವತಂತ್ರವಾದ ಅನುಮಾನಕ್ಕೆ ಪ್ರಾಮಾಣ್ಯವನ್ನು ಒಪ್ಪಿದರೆ, ಮೇಲಿನ ಅಪದ್ಧ ಮಾತುಗಳಿಗೆಲ್ಲ ಪ್ರಾಮಾಣ್ಯವು ಬರುಬೇಕಾದಿತು.

**ಉಪಕ್ರಮಾದಿಲಿಂಗೇಭ್ಯೋ ನಾನ್ಯಾ ಸ್ಯಾದನುಮಾ ತತಃ ।**

ಆದಕಾರಣ, ಉಪಕ್ರಮ ಉಪಸಂಹಾರ ಇವೇ ಮೊದಲಾದ ತಾತ್ಪರ್ಯನಿರ್ಣಾಯಕ ಲಿಂಗಗಳ ಹಾಗೂ ಆಗಮಾನುಸಾರಿಯಾದ ಅನುಮಾನಗಳ ದೆಸೆಯಿಂದ ಬೇರೆಯಾದ ಅನುಮಾನವು ಪ್ರಾಮಾಣ್ಯ ಸಾಧಕವಾಗಲಾರದು.

ಜಗತ್ಕಾರಣನಾದ ಈಶ್ವರ ಹಾಗೂ ಅವನ ಅನಂತಕಲ್ಯಾಣಗುಣಗಳನ್ನು ಸದಾಗಮಗಳಿಂದಲೇ ನಿರ್ಣಯಿಸಲು ಸಾಧ್ಯ, ಕೇವಲಾನುಮಾನದಿಂದ ಸಾಧಿಸಲು ಶಕ್ಯವಿಲ್ಲ ಎಂಬುದೇ ಈ ಅಧಿಕರಣದ ಸಾರಾಂಶ.

## ಸಮನ್ವಯಾಧಿಕರಣ

**ಸೂತ್ರ: ಓಂ ತತ್ತು ಸಮನ್ವಯಾತ್ ಓಂ (೧-೧-೪)**

ಉಪಕ್ರಮಾದಿ ತಾತ್ಪರ್ಯನಿರ್ಣಾಯಕ ಲಿಂಗಗಳಿಂದ ಚೆನ್ನಾಗಿ ವಿಚಾರ ಮಾಡಲು ವಿಷ್ಣುವೇ ಜಗಜ್ಜನ್ಮಾದಿಕಾರಣನು ಹಾಗೂ ಶಾಸ್ತ್ರಗಳಿಂದ ಮಾತ್ರ

ತಿಳಿಯಲ್ಪಡತಕ್ಕವನು ಎಂದು ತಿಳಿದುಬರುತ್ತದೆ.

## ಸಮನ್ವಯ ಶಬ್ದಾರ್ಥ

ಶ್ರೀಮದಾಚಾರ್ಯರು ಈ ಸೂತ್ರದಲ್ಲಿ ಬಂದಿರುವ ಅನ್ವಯ ಎಂಬ ಶಬ್ದದ ಅರ್ಥವನ್ನು ವಿವರಿಸುತ್ತಾರೆ -

**ತ ಏವಾನ್ವಯನಾಮಾನಸ್ತೈಸ್ಸಮ್ಯಕ್ಪ್ರವಿಚಾರಿತೇ ॥೧೨೦॥**

**ಮುಖ್ಯಾರ್ಥೋ ಭಗವಾನ್ ವಿಷ್ಣುಃ ಸರ್ವಶಾಸ್ತ್ರಸ್ಯ ನಾಪರಃ ।**

ಉಪಕ್ರಮಾದಿ ಲಿಂಗಗಳು ವಾಕ್ಯಗಳಿಗೆ ಮುಖ್ಯತಾತ್ಪರ್ಯಪರವಾದ ಅರ್ಥಗಳನ್ನು ನಿರ್ಣಯಿಸುವುದರಲ್ಲಿ ಸಹಾಯಕವಾಗಿರುವುದರಿಂದ ಅವುಗಳಿಗೆ ಅನ್ವಯ ಎಂದು ಹೆಸರು. ಅವುಗಳಿಂದ ಚೆನ್ನಾಗಿ ಶಾಸ್ತ್ರಜಿಜ್ಞಾಸೆ ಮಾಡಿದಾಗ, ಸಮಸ್ತ ಶಾಸ್ತ್ರಗಳಿಗೂ ಷಡ್ಗುಣೈಶ್ವರ್ಯ ಸಂಪನ್ನನಾದ ವಿಷ್ಣುವಿನಲ್ಲಿಯೇ ಸಂಬಂಧವು ತೋರುವುದರಿಂದ, ಅವನೇ ಸಮಸ್ತ ವೇದಗಳಿಂದಲೂ ಮುಖ್ಯವಾಗಿ ಪ್ರತಿಪಾದಿತನಾಗಿದ್ದಾನೆ ಎಂದು ತಿಳಿದುಬರುತ್ತದೆ. ಆದ್ದರಿಂದ ಗುಣಪರಿಪೂರ್ಣನಾಗಿರುವ ವಿಷ್ಣುವೇ ಜಗಜ್ಜನ್ಮಾದಿಕಾರಣ, ರುದ್ರಾದಿಗಳಲ್ಲ, ಎಂಬುದು ಈ ಸೂತ್ರದಿಂದ ನಿರ್ಣಯಿಸಲ್ಪಡುತ್ತದೆ.

**ವಿವರಣೆ:**

ಮೇಲ್ನೋಟಕ್ಕೆ ತೋರುವ ಅರ್ಥವೇ ವೇದಗಳ ನಿಜವಾದ ಅಭಿಪ್ರಾಯವಲ್ಲ. ವೇದಗಳು ಅಪೌರುಷೇಯವಾದ್ದರಿಂದ ಪೌರುಷೇಯ ಗ್ರಂಥಗಳಿಂದ ಅವುಗಳ ಅರ್ಥ ನಿರ್ಣಯ ಮಾಡುವುದು ಸಾಧ್ಯವಿಲ್ಲ. ವೇದದ ಮೂಲಕವೇ ವೇದದ ಅರ್ಥವನ್ನು ನಿರ್ಣಯಿಸಬೇಕು. ಪೂರ್ವಾಪರ ವಾಕ್ಯಗಳನ್ನು ಚೆನ್ನಾಗಿ ವಿಮರ್ಶಿಸಿ ವೇದದ ಸರಿಯಾದ ಅರ್ಥವನ್ನು ಗ್ರಹಿಸಬೇಕು. ವೇದದ ಒಂದು ವಾಕ್ಯದ ಅರ್ಥವನ್ನು ತಿಳಿದುಕೊಳ್ಳಲು ಅದರ ಪ್ರಾರಂಭ ಹಾಗೂ ಮುಕ್ತಾಯದ ವಾಕ್ಯಗಳನ್ನು ಪರಿಶೀಲಿಸಬೇಕು. ಯಾವ ವಿಷಯಕ್ಕೆ ಹೆಚ್ಚು ಒತ್ತುಕೊಟ್ಟು ಮತ್ತೆ ಮತ್ತೆ ಹೇಳಲಾಗಿದೆ ಎಂಬುದನ್ನು ತಿಳಿದುಕೊಳ್ಳಬೇಕು. ಅದೇರೀತಿ ಯಾವ ಅರ್ಥದಲ್ಲಿ ಅಪೂರ್ವತೆಯಿದೆ, ಯಾವ ಅರ್ಥವನ್ನು ಇಟ್ಟುಕೊಂಡರೆ ವೇದದಲ್ಲಿ ಹೇಳಿರುವ ಫಲಕ್ಕೆ ಅನುಕೂಲವಾಗುವುದು ಹಾಗೂ ಯುಕ್ತಿಯ ಒರೆಗಲ್ಲಿಗೆ ಹಚ್ಚಿದಾಗ ಯಾವ

ಅರ್ಥವು ಸರಿಯೆನಿಸುವುದು ಎಂಬುದನ್ನು ವಿಮರ್ಶಿಸಿ ವೇದಾರ್ಥನಿರ್ಣಯ ಮಾಡಬೇಕು. ಜೊತೆಗೆ ಆಯಾ ಪ್ರಕರಣಗಳಲ್ಲಿ ಬಂದಿರುವ ವಿವರಣೆಗಳ ಪರಿಶೀಲನೆಯಿಂದಲೂ ವೇದಾರ್ಥನಿರ್ಣಯಕ್ಕೆ ಅನುಕೂಲವಾಗುತ್ತದೆ. ಈ ರೀತಿಯ ಏಳು ವಿಧಾನಗಳಿಂದ ವೇದಗಳ ನಿಜವಾದ ಅರ್ಥವನ್ನು ನಿರ್ಣಯಿಸಬೇಕೇ ಹೊರತು ನಮಗೆ ತೋಚಿದ ರೀತಿಯಲ್ಲಲ್ಲ. ಹೀಗೆ ಉಪಕ್ರಮ, ಉಪಸಂಹಾರ, ಅಭ್ಯಾಸ, ಅಪೂರ್ವತಾ, ಫಲ, ಉಪಪತ್ತಿ ಮತ್ತು ಅರ್ಥವಾದ ಎಂಬ ಈ ಏಳು ಪದಾರ್ಥಗಳೇ ತಾತ್ಪರ್ಯನಿರ್ಣಾಯಕ ಲಿಂಗಗಳೆಂದು ಪ್ರಸಿದ್ಧವಾಗಿವೆ.

## ಈಕ್ಷತ್ಯಧಿಕರಣ

**ಸೂತ್ರ: ಓಂ ಈಕ್ಷತೇರ್ನಾಶಬ್ದಂ ಓಂ (೧-೧-೫)**

ಯಾವುದೇ ಒಂದು ಶಬ್ದವು ಒಂದು ವಸ್ತುವನ್ನು ಪ್ರತಿಪಾದಿಸಬೇಕಾದರೆ, ಆ ಶಬ್ದವು ಹೇಳುವ ಗುಣಧರ್ಮಗಳು ಆ ವಸ್ತುವಿನಲ್ಲಿ ಇರಬೇಕು. ಬ್ರಹ್ಮನಲ್ಲಿ ಯಾವ ಗುಣಧರ್ಮಗಳೂ ಇಲ್ಲ. ಅಂದಮೇಲೆ ಅವನನ್ನು ವೇದವು ಹೇಗೆ ಪ್ರತಿಪಾದಸಬಲ್ಲುದು? 'ಯತೋ ವಾಚೋ ನಿವರ್ತಂತೇ' ಮುಂತಾದ ವಾಕ್ಯಗಳ ಮೂಲಕ ಬ್ರಹ್ಮನು ಅವಾಚ್ಯನೆಂದು ವೇದವೇ ಹೇಳುತ್ತದೆ. ಯಾವ ಶಬ್ದವೂ ಬ್ರಹ್ಮನನ್ನು ತಿಳಿಸಲು ಸಾಧ್ಯವಿಲ್ಲವಾದ್ದರಿಂದ, ಅವನು ಸಮಸ್ತ ವೇದಗಳಿಂದ ಪ್ರತಿಪಾದ್ಯ ಎಂಬುವುದೇ ಕೂಡುವುದಿಲ್ಲ. ಆದಕಾರಣ ವಿಷ್ಣುವು ಜಗಜ್ಜನ್ಮಾದಿಕಾರಣ ಎಂಬುದೂ ಸಿದ್ಧಿಸುವುದಿಲ್ಲ. ಅಂದಮೇಲೆ ಬ್ರಹ್ಮಜಿಜ್ಞಾಸೆಯ ಅವಶ್ಯಕತೆಯೇ ಇರುವುದಿಲ್ಲ. ಶಾಸ್ತ್ರಕ್ಕೆ ಆರಂಭಣೀಯತ್ವವೂ ಕೂಡುವುದಿಲ್ಲ ಇತ್ಯಾದಿ ಆಶಂಕಿಸಿದರೆ, ಅದಕ್ಕೆ ಸಮಾಧಾನರೂಪವಾಗಿರುವುದೇ ಈಕ್ಷತ್ಯಧಿಕರಣ.

### ಬ್ರಹ್ಮನು ಅವಾಚ್ಯನಲ್ಲ

**ಈಕ್ಷಣೀಯತ್ವತೋ ವಿಷ್ಣುರ್ವಾಚ್ಯ ಏವ ನ ಚಾನ್ಯಥಾ ॥೧೨೧॥**
**ಲಕ್ಷ್ಯತ್ವಂ ಕ್ವಾಪಿ ದೃಷ್ಟಂ ಹಿ ಕಿಂ ತದಿತ್ಯನವಸ್ಥಿತಿಃ ।**
**ಮಾಧುರ್ಯಾದಿ ವಿಶೇಷಾಶ್ಚ ತಚ್ಛಬ್ದೈರುದಿತಾಃ ಸದಾ ॥೧೨೨॥**

**ವಾಕ್ಯಾರ್ಥೋಽಪಿ ಹಿ ವಾಕ್ಯಾರ್ಥಶಬ್ದೇನೈವೋದಿತೋ ಭವೇತ್ ।**

**ನಾವಾಚ್ಯಂ ತೇನ ಕಿಂಚಿತ್ ಸ್ಯಾತ್..........................॥**

ಈಕ್ಷಣೀಯನಾಗಿರುವುದರಿಂದ (ಜ್ಞಾನಕ್ಕೆ ವಿಷಯನಾಗಿರುವುದರಿಂದ) ವಿಷ್ಣುವು ಶಬ್ದಗಳಿಂದ ವಾಚ್ಯನೇ ಆಗಿರುವನು. 'ಸ ಏತಸ್ಮಾಜ್ಜೀವಘನಾತ್ಪರಾತ್ಪರಂ ಪುರಿಶಯಂ ಪುರುಷಮೀಕ್ಷತೇ', 'ಆತ್ಮನ್ಯೇವಾತ್ಮಾನಂ ಪಶ್ಯೇತ್', ಇತ್ಯಾದಿ ಶ್ರುತಿಗಳಿಂದ ಬ್ರಹ್ಮನಿಗೆ ಈಕ್ಷಣೀಯತ್ವವು ಸಿದ್ಧವಾಗಿದೆ. ವಾಚ್ಯತ್ವವಿಲ್ಲದೇ ಈಕ್ಷಣೀಯತ್ವವು ಸಿದ್ಧಿಸುವುದಿಲ್ಲ. ಆದ್ದರಿಂದ ಬ್ರಹ್ಮನಿಗೆ ವಾಚ್ಯತ್ವವನ್ನು ಒಪ್ಪಿಕೊಳ್ಳಬೇಕು. ಬ್ರಹ್ಮನಿಗೆ ವಾಚ್ಯತ್ವವನ್ನು ಒಪ್ಪದಿದ್ದರೆ ಲಕ್ಷ್ಯತ್ವವೂ ಕೂಡುವುದಿಲ್ಲ. ಅಂದರೆ ಲಕ್ಷ್ಯಾರ್ಥವೂ ಕೂಡುವುದಿಲ್ಲ. ಲಕ್ಷ್ಯಾರ್ಥವನ್ನು ತಿಳಿಸುವುದಕ್ಕೂ ಶಬ್ದವನ್ನೇ ಉಪಯೋಗಿಸಬೇಕು. ಆ ಶಬ್ದದಿಂದಲೂ ಬ್ರಹ್ಮನು ವಾಚ್ಯನಲ್ಲ ಎಂದರೆ, ಅದನ್ನು ತಿಳಿಸಲು ಪುನಃ ಮತ್ತೊಂದು ಶಬ್ದ. ಹೀಗೆ ಅನವಸ್ಥಿತಿಯು ಬರುವುದರಿಂದ ಬ್ರಹ್ಮನಿಗೆ ಶಬ್ದವಾಚ್ಯತ್ವವನ್ನು ಒಪ್ಪಿಕೊಳ್ಳದೇ ಅನ್ಯಥಾ ಮಾರ್ಗವಿಲ್ಲ.

ಕಬ್ಬು, ಹಾಲು, ಬೆಲ್ಲ ಮೊದಲಾದವುಗಳ ಮಾಧುರ್ಯಾದಿಗಳಲ್ಲಿ ವೈವಿಧ್ಯವಿದ್ದರೂ ಅವುಗಳನ್ನು ತಿಳಿಸುವ ಶಬ್ದಗಳು ನಮಗೆ ಗೊತ್ತಿಲ್ಲ ಎಂದಮಾತ್ರಕ್ಕೆ ಅವುಗಳಿಗೆ ಶಬ್ದವಾಚ್ಯತ್ವವೇ ಇಲ್ಲ ಎಂದು ಹೇಳಲಾಗದು. ಸೂದಶಾಸ್ತ್ರ ಬಲ್ಲವರಿಗೆ ವಿವಿಧ ರೀತಿಯ ಮಾಧುರ್ಯಗಳನ್ನು ಪ್ರತಿಪಾದಿಸುವ ಶಬ್ದಗಳು ಗೊತ್ತೇ ಇರುತ್ತವೆ. ಉದಾಹರಣೆಗೆ, 'ವಿಶದಂ ಕ್ಷೀರಮಾಧುರ್ಯಂ ಸ್ಥಿರಮಾಜ್ಯಸ್ಯ ತೀಕ್ಷ್ಣಕಂ। ಗುಡಸ್ಯ ಪನಸಾದೀನಾಂ ನಿರ್ಹಾರೀತ್ಯಭಿಧೀಯತೇ॥' ಹಾಲಿನ ಮಾಧುರ್ಯವು ವಿಶದವೆಂದೂ, ತುಪ್ಪದ ಮಾಧುರ್ಯವು ಸ್ಥಿರವೆಂದೂ, ಬೆಲ್ಲದ ಮಾಧುರ್ಯವು ತೀಕ್ಷ್ಣಕವೆಂದೂ, ಹಲಸಿನ ಮಾಧುರ್ಯವು ನಿರ್ಹಾರಿ ಎಂದೂ ಹೇಳಲ್ಪಡುತ್ತದೆ.

ವಾಕ್ಯಾರ್ಥವೆಂಬುದೂ ಕೂಡ ವಾಕ್ಯಾರ್ಥ ಎಂಬ ಶಬ್ದದಿಂದ ವಾಚ್ಯವಾದುದೇ ಆಗಿದೆ. ಆದ್ದರಿಂದ ಅವಾಚ್ಯವೆಂಬುದು ಯಾವುದೇ ಪ್ರಮಾಣದಿಂದಲೂ ಸಿದ್ಧವಾಗದು. ಯಾವ ವಸ್ತುವೂ ಅವಾಚ್ಯವಾಗಲಾರದು ಎಂದಮೇಲೆ ಬ್ರಹ್ಮನು ಅವಾಚ್ಯ ಎಂದು ಹೇಳಿದರೆ ಬ್ರಹ್ಮನಿಗೆ ವಸ್ತುತ್ವವೇ

ಇಲ್ಲವೆಂದಾಗುವುದು.

ಬ್ರಹ್ಮನು ಅವಾಚ್ಯನು ಎನ್ನುವುದು 'ಯತೋ ವಾಚೋ' ಶ್ರುತಿಯ ಅರ್ಥವಾಗಿದ್ದರೆ, ವಾಚ್ಯತ್ವವನ್ನು ಸಾಧಿಸಿಕೊಡುವ ಈಕ್ಷಣೇಯತ್ವಾದಿ ಅನುಮಾನವು ಅಯುಕ್ತವಾಗುತ್ತಿತ್ತು. ಆ ಶ್ರುತಿಗೆ ಬ್ರಹ್ಮನು ಅವಾಚ್ಯ ಎಂದು ಹೇಳುವುದರಲ್ಲಿ ತಾತ್ಪರ್ಯವೇ ಇಲ್ಲ. ಹಾಗೆ ವ್ಯಾಖ್ಯಾನ ಮಾಡಿದರೆ ಸ್ವಕ್ರಿಯಾವಿರೋಧ ಬರುತ್ತದೆ ಎಂದು ಹೇಳುತ್ತಾರೆ -

**......................................ಯತ ಇತ್ಯಾದಿಕೈರ್ವದನ್ ॥೧೨೩॥**

**ಅವಾಚ್ಯತ್ವಂ ಕಥಂ ಬ್ರೂಯಾನ್ಮೂಕೋಽಹಮಿತಿವತ್ಸುಧೀಃ ।**
**ಯೇನ ಲಕ್ಷ್ಯಮಿತಿ ಪ್ರೋಕ್ತಂ ಲಕ್ಷ್ಯಶಬ್ದೇನ ಸೋಽವದತ್ ॥೧೨೪॥**
**ಏತಸ್ಯಾಪಿ ಹಿ ಶಬ್ದಸ್ಯ ಗೌಣಾರ್ಥಸ್ವೀಕೃತೌ ಸತಾಂ ।**
**ಮಹತೀ ಜಾಯತೇ ಲಜ್ಜಾ ಯತ್ರ ತತ್ರಾಖಿಲಾ ರವಾಃ ॥೧೨೫॥**
**ಅಮುಖ್ಯಾರ್ಥಾ ಇತಿ ವದನ್ಯಸ್ತನ್ಮಾರ್ಗಾನುವರ್ತಿನಾಂ ।**
**ಕಥಂ ನ ಜಾಯತೇ ಲಜ್ಜಾ ವಕ್ತುಂ ಶಾಬ್ದತ್ವಮಾತ್ಮನಃ ॥೧೨೬॥**

ಯತಃ ಇತ್ಯಾದಿ ಶಬ್ದಗಳಿಂದ ಬ್ರಹ್ಮನನ್ನೇ ಹೇಳುತ್ತ, ಬ್ರಹ್ಮನಿಗೆ ಯಾವ ಶಬ್ದದಿದಂಲೂ ವಾಚ್ಯತ್ವವಿಲ್ಲ ಎಂದು ಯಾವನು ತಾನೇ ಹೇಳಿಯಾನು? ಹಾಗೆ ಹೇಳುವವನಿಗೆ 'ನಾನು ಮೂಕನು' ಎನ್ನುವಂತೆ ಸ್ವಕ್ರಿಯಾವಿರೋಧವು ಬರುವುದು. ಅಂಳವನು ಪಂಡಿತನೇ ಸರಿ, ಅಂದರೆ ಮೂರ್ಖ ಎಂದರ್ಥ. ಲಕ್ಷ್ಯ ಎಂಬ ಶಬ್ದವನ್ನು ಬಳಸಿಕೊಂಡೇ ಬ್ರಹ್ಮನು ಲಕ್ಷ್ಯ ಎಂದು ಹೇಳಬೇಕು. ಅಂದರೆ ಬ್ರಹ್ಮನಿಗೆ ಲಕ್ಷ್ಯ ಎಂಬ ಶಬ್ದದಿಂದ ವಾಚ್ಯತ್ವ ಇದೆ ಎಂದು ಒಪ್ಪಿಕೊಂಡಂತಾಯಿತು. ಲಕ್ಷ್ಯ ಎಂಬ ಶಬ್ದದಿಂದಲೂ ಲಕ್ಷಿತನೇ ಆಗುತ್ತಾನೆ ವಾಚ್ಯನಾಗುವುದಿಲ್ಲ ಎಂದು ಹೇಳಿದರೆ ಆಗ ಹಿಂದೆ ಹೇಳಿದಂತೆ ಅನವಸ್ಥಿತಿ ಬರುತ್ತದೆ. ವೇದದಲ್ಲಿನ ಒಂದೇ ಒಂದು ಶಬ್ದಕ್ಕೂ ಮುಖ್ಯಾರ್ಥವನ್ನು ಬಿಟ್ಟು ಅಮುಖ್ಯಾರ್ಥವನ್ನು ಸ್ವೀಕರಿಸಿದರೆ ಸಜ್ಜನರಿಗೆ ಮಹಾಲಜ್ಜೆಯು ಹುಟ್ಟುವುದು. ಹಾಗಿರುವಾಗ, ವೇದದಲ್ಲಿರುವ ಎಲ್ಲ ಶಬ್ದಗಳೂ ಅಮುಖ್ಯಾರ್ಥವನ್ನೇ ಪ್ರತಿಪಾದಿಸುತ್ತವೆ ಎಂದು ಹೇಳುವವನಿಗೂ ಮತ್ತು ಅವನನ್ನೇ ಅನುಸರಿಸುವವರಿಗೂ ಹೇಗೆ ತಾನೇ ನಾಚಿಕೆಯು

ಹುಟ್ಟುವುದಿಲ್ಲ? ಅವರಿಗೆ ಇನ್ನೂ ಹೆಚ್ಚಿನ ನಾಚಿಕೆಯಾಗಬೇಕು ಎಂದು ಭಾವ.

ಮುಖ್ಯಾರ್ಥವನ್ನು ಬಿಟ್ಟು ಅಮುಖ್ಯಾರ್ಥವನ್ನು ಸ್ವೀಕರಿಸಿದ ಮಾತ್ರಕ್ಕೆ ಲಜ್ಜೆ ಪಡಬೇಕಿಲ್ಲ. ಮುಖ್ಯಾರ್ಥವು ಸುಲಭವಾಗಿ ಕೂಡುವಾಗ ಅಮುಖ್ಯಾರ್ಥವನ್ನು ಸ್ವೀಕರಿಸುವುದು ಲಜ್ಜೆಗೆ ಕಾರಣವಾಗುವುದು. ಮುಖ್ಯಾರ್ಥವು ಕೂಡದಿದ್ದಾಗ ಅಮುಖ್ಯಾರ್ಥವನ್ನು ಸ್ವೀಕರಿಸುವುದು ಗುಣವೇ ಆಗುವುದು. ಉದಾಹರಣೆಗೆ, 'ಗಂಗಾಯಾಂ ಘೋಷಃ', 'ಸಿಂಹೋ ಮಾಣವಕಃ' ಇತ್ಯಾದಿಗಳಲ್ಲಿ ಮುಖ್ಯಾರ್ಥವಾದ 'ಗಂಗಾಪ್ರವಾಹದಲ್ಲಿ ಹಳ್ಳಿ', 'ವಟುವು ಸಿಂಹ' ಇತ್ಯಾದಿ ವಾಚನಿಕಾರ್ಥ ಕೂಡುವುದಿಲ್ಲ. ಆಗ ಅದರ ಲಾಕ್ಷಣಿಕಾರ್ಥವಾದ 'ಗಂಗೆಯ ತೀರದಲ್ಲಿ ಹಳ್ಳಿ', 'ವಟುವು ಸಿಂಹದಂತೆ ಶೂರ' ಇತ್ಯಾದಿ ಅರ್ಥ ಮಾಡುವುದು ಕಂಡಿದೆ.

'ಪರಾತ್ಪರಂ ಪುರಿಶಯಂ ಪುರುಷಮೀಕ್ಷತೇ' ಇತ್ಯಾದಿಗಳಲ್ಲಿ ಸಗುಣಬ್ರಹ್ಮನೇ ಈಕ್ಷಣೀಯನೆಂದು ಹೇಳಲ್ಪಡುತ್ತಾನೆ. ಆದಕಾರಣ ಸಗುಣಬ್ರಹ್ಮನೇ ವಾಚ್ಯನಾಗಲಿ. ನಿತ್ಯನೂ ಶುದ್ಧಚೈತನ್ಯನೂ ಆದ ನಿರ್ಗುಣ ಬ್ರಹ್ಮನು ವಾಚ್ಯನಾಗುವುದು ಬೇಡ ಎಂದು ಹೇಳಿದರೆ -

**ಸೂತ್ರ: ಓಂ ಗೌಣಶ್ಚೇನ್ನಾತ್ಮಶಬ್ದಾತ್ ಓಂ (೧-೧-೬)**

**ಸೂತ್ರ: ಓಂ ತನ್ನಿಷ್ಟಸ್ಯ ಮೋಕ್ಷೋಪದೇಶಾತ್ ಓಂ (೧-೧-೭)**

ಈಕ್ಷಣೀಯವಾದ ವಸ್ತುವಿನಲ್ಲಿ ಆತ್ಮ ಶಬ್ದ ಪ್ರಯೋಗವಿದೆ. ಆತ್ಮ, ಬ್ರಹ್ಮ, ಪುರುಷ ಮೊದಲಾದ ಶಬ್ದಗಳು ಪೂರ್ಣಾರ್ಥಕವಾಗಿದ್ದು ಶುದ್ಧಬ್ರಹ್ಮನನ್ನೇ ಹೇಳುತ್ತವೆ. ಜೊತೆಗೆ ಅಂಥಹ ಆತ್ಮನನ್ನು ತಿಳಿದವನಿಗೆ ಮೋಕ್ಷವಾಗುವುದೆಂಬ ಉಪದೇಶವೂ ಅಲ್ಲಿ ಕಂಡಿದೆ. ಗೌಣಾತ್ಮನನ್ನು ತಿಳಿದವನಿಗೆ ಮೋಕ್ಷವಾಗುವುದಿಲ್ಲ, ಶುದ್ಧನಾದ ನಿರ್ಗುಣಬ್ರಹ್ಮನನ್ನು ತಿಳಿದವನಿಗೇ ಮೋಕ್ಷ ಎನ್ನುವುದು ಸಿದ್ಧವಾಗಿರುವುದರಿಂದ, ಪರರು ಹೇಳುವಂತಹ ನಿರ್ಗುಣಬ್ರಹ್ಮನಿಗೇ ಈಕ್ಷಣೀಯತ್ವ ಹೇತುವಿನಿಂದ ವಾಚ್ಯತ್ವವು ಸಿದ್ಧವಾಗುವುದು, ಎನ್ನುವುದು ಈ ಎರಡು ಸೂತ್ರಗಳ ಭಾವ.

ಈಕ್ಷತ್ಯಧಿಕರಣದ ಮೇಲಿನ ಎರಡು ಸೂತ್ರಗಳಲ್ಲಿ ಬಂದಿರುವ ವಿಚಾರವನ್ನು ಶ್ರೀಮದಾಚಾರ್ಯರು ಇಲ್ಲಿ ಸ್ಪಷ್ಟಪಡಿಸುತ್ತಾರೆ -

**ಆತ್ಮಬ್ರಹ್ಮಾದಯಃ ಶಬ್ದಾಃ ಸಾಕ್ಷಾತ್ ಪೂರ್ಣಾಭಿಧಾಯಿನಃ ।**
**ಜನ್ಮಾದಿಕಾರಣಂ ಬ್ರಹ್ಮ ಲಕ್ಷಿತಂ ಚ ಯದಾ ತದಾ ॥೧೨೭॥**
**ವಂಧ್ಯಾಪುತ್ರೋಪಮಂ ಮಾಯಾಶಬಲಂ ವಾಚ್ಯಮಿತ್ಯಪಿ ।**
**ಕಲ್ಪಯಿತ್ವಾ ವಿನಾ ಮಾನಂ ಲಕ್ಷ್ಯಂ ಶುದ್ಧಂ ವದನ್ಪರೈಃ ॥೧೨೮॥**
**ಆತ್ಮಶಬ್ದೋದಿತಸ್ಯೈವ ಜ್ಞಾನಂ ಮುಕ್ತಾವಸಾಧನಂ ।**
**ಆಹ ಶ್ರುತಪರಿತ್ಯಾಗಃ ಸ್ಯಾಚ್ಚಾಸ್ಯಾಶ್ರುತಕಲ್ಪನಾ ॥೧೨೯॥**
**ಸ್ಯಾತ್ಸರ್ವತ್ರ ಚ ಯತ್ಯೈಕಮಪಿ ಲೋಕೋ ಜುಗುಪ್ಸತೇ ।**

ಮಾಯಾಖ್ಯವಾದ ಅಜ್ಞಾನವಿಶಿಷ್ಟ ಸಗುಣಬ್ರಹ್ಮನನ್ನು ಕಲ್ಪಿಸಿಕೊಂಡು, ಅವನಿಗೆ ಎಲ್ಲ ವೈದಿಕಪದಗಳಿಂದಲೂ ವಾಚ್ಯತ್ವವನ್ನು ಹೇಳಿ, ಮಾಯಾತೀತನಾದ ಶುದ್ಧಬ್ರಹ್ಮನು ಎಲ್ಲ ವೈದಿಕಪದಗಳಿಂದಲೂ ಲಕ್ಷ್ಯನೆಂದು ಹೇಳುವ ಈ ಮಾಯಾವಾದಿಗೆ ಶ್ರುತಾರ್ಥ ಪರಿತ್ಯಾಗ ಎನ್ನುವ ದೋಷವು ಬರುವುದು. ವೇದಗಳಲ್ಲಿ ಬಂದಿರುವ ಆತ್ಮ, ಬ್ರಹ್ಮ ಮೊದಲಾದ ಶಬ್ದಗಳು ನೇರವಾಗಿ ಶಬ್ದವೃತ್ತಿಯಿಂದಲೇ ಪರಿಪೂರ್ಣವಾದ ಅರ್ಥವನ್ನು ಹೇಳುತ್ತಿರುವಾಗ ಅದನ್ನು ಬಿಟ್ಟು ಲಾಕ್ಷಣಿಕಾರ್ಥವನ್ನು ಹೇಳಿದರೆ ಅದು ಶ್ರುತಾರ್ಥ ಪರಿತ್ಯಾಗವೆನಿಸುವುದು. ಇಷ್ಟೇ ಅಲ್ಲದೆ ಅಶ್ರುತಕಲ್ಪನಾ ಎಂಬ ಮತ್ತೊಂದು ದೋಷವೂ ಬರುವುದು. ಏಕೆಂದರೆ, ಶ್ರುತಿಗಳಲ್ಲಿ ಉಕ್ತವಾಗಿರುವ ಆತ್ಮ ಬ್ರಹ್ಮ ಇತ್ಯಾದಿ ಶಬ್ದಗಳು ಅದ್ವೈತಿಗಳು ಹೇಳುವ ಮಾಯಾವಿಶಿಷ್ಟನಾದ ಸಗುಣಬ್ರಹ್ಮನನ್ನು ಪ್ರತಿಪಾದಿಸುವದೇ ಅಲ್ಲವು. ಆದಕಾರಣ ಸಗುಣಬ್ರಹ್ಮನು ಬಂಜೆಯ ಮಗನಿಗೆ ಸಮನೆಂದು ಹೇಳಬೇಕು.

ಪ್ರಥಮಸೂತ್ರದಲ್ಲಿ ಪೂರ್ಣಬ್ರಹ್ಮನೇ ಜಿಜ್ಞಾಸ್ಯನೆಂದು ಪ್ರತಿಜ್ಞಾ ಮಾಡಲ್ಪಟ್ಟಿದ್ದಾನೆ ಹಾಗೂ ಆತನೇ ಜಗಜ್ಜನ್ಮಾದಿಕಾರಣನೆಂದೂ ಲಕ್ಷಿತನಾಗಿದ್ದಾನೆ. ಆತನ ವಿಷಯದಲ್ಲಿ ವೇದಾದಿ ಶಾಸ್ತ್ರವು ಪ್ರಮಾಣವಾಗಿದೆ. ಅವನಲ್ಲಿಯೇ ಎಲ್ಲ ಶ್ರುತಿಗಳಿಗೂ ಸಮನ್ವಯವು ಹೇಳಲ್ಪಟ್ಟಿದೆ. 'ಆತ್ಮಾನಂ ಪಶ್ಯೇತ್' ಇತ್ಯಾದಿ ಶ್ರುತಿಗಳಲ್ಲಿ ದ್ರಷ್ಟವ್ಯನೆಂದು ಹೇಳಲ್ಪಟ್ಟವನು ಅದ್ವೈತಿಗಳು ವಾದಿಸುವಂತೆ ಮಾಯಾಖ್ಯ ಸಗುಣಬ್ರಹ್ಮನಲ್ಲ. 'ತರಂತಿ ಶೋಕಮಾತ್ಮವಿತ್' ಎಂದು ಆತ್ಮ ಶಬ್ದದಿಂದ ವಾಚ್ಯನಾದವನ ಜ್ಞಾನದಿಂದ

ಮುಕ್ತಿಯು ಶ್ರುತವಾಗಿದೆ. ಇದನ್ನು ಬಿಟ್ಟು ಲಕ್ಷ್ಯಜ್ಞಾನದಿಂದ ಮುಕ್ತಿಯನ್ನು ಹೇಳುವ ಈ ಮಾಯಾವಾದಿಗೆ ಶ್ರುತಾರ್ಥಪರಿತ್ಯಾಗ ಮತ್ತು ಅಶ್ರುತಕಲ್ಪನಾ ಎಂಬ ಎರಡು ರೀತಿಯ ದೋಷಗಳು ಒಟ್ಟಿಗೇ ಬರುತ್ತವೆ. ಇವೆರಡರಲ್ಲಿ ಯಾವುದೇ ಒಂದು ದೋಷ ಬಂದರೂ ಲೋಕದ ಜನರು ಅದನ್ನು ನಿಂದಿಸುತ್ತಾರೆ. ಅಂದಮೇಲೆ ಈರೀತಿ ವಾದ ಮಾಡುವ ಮಾಯಾವಾದಿಯು ಪರಮನಿಂದ್ಯನಾಗುತ್ತಾನೆ ಎಂದು ತಾತ್ಪರ್ಯ.

ಶ್ರುತಹಾನಿ, ಅಶ್ರುತಕಲ್ಪನಾ ಎನ್ನುವುದು ಲೋಕದಲ್ಲಿ ನಿಂದಿತವಾಗಿದ್ದರೂ, ನಮಗೆ ದೂಷಣವಲ್ಲ ಎಂದು ಮಾಯಾವಾದಿಯು ಹೇಳಿದರೆ -

### ಶ್ರುತ್ಯರ್ಥ ಪರಿತ್ಯಾಗದಿಂದ ಮಹಾ ಅನರ್ಥ

**ನಿಯಮೇನೋಭಯಂ ಸ್ಯಾದ್ಧಿ ಯಸ್ಯ ಸ್ವಪರಯೋರ್ಮತೇ ||೧೩೦||**
**ಅಲಂಕೃತಃ ಸದೈವಾಯಂ ದುರ್ಘಟೈರೇವ ಭೂಷಣೈಃ |**
**ಅಂಧಂತಮೋ ನಿತ್ಯದುಃಖಂ ತಸ್ಯ ಸ್ಯಾದ್ವಸನದ್ವಯಂ ||೧೩೧||**
**ಅನಂದಾ ನಾಮ ತೇ ಲೋಕಾಃ ಅಂಧೇನ ತಮಸಾ ವೃತಾಃ |**
**ತಾಂಸ್ತೇ ಪ್ರೇತ್ಯಾಭಿಗಚ್ಛಂತಿ ಯೇಽವಿದ್ವಾಂಸೋ ಬುಧೋ ಜನಾಃ ||೧೩೨||**
**ಅಸುರ್ಯಾ ನಾಮ ತೇ ಲೋಕಾಃ ಅಂಧೇನ ತಮಸಾ ವೃತಾಃ |**
**ತಾಂಸ್ತೇ ಪ್ರೇತ್ಯಾಭಿಗಚ್ಛಂತಿ ಯೇ ಕೇ ಚಾತ್ಮಹನೋ ಜನಾಃ ||೧೩೩||**
**ಇತ್ಯಾದಿ ಶ್ರುತಯೋ ಮಾನಂ ಶತಶೋಽತ್ರ ಸಮಂತತಃ |**

ಹಿಂದೆ ಹೇಳಿದ ದೂಷಣಗಳೆರಡೂ ಯಾರಿಗೆ ತಮ್ಮ ಮತದಿಂದಲೂ ಪರರ ಮತದಿಂದಲೂ ನಿಯಮದಿಂದ ಭೂಷಣವೇ ಆಗುವುದೋ, ಅವನು ಅಂಗೀಕಾರಕ್ಕೆ ಅಯೋಗ್ಯವಾದ ಆಭರಣಗಳಿಂದ ಯಾವಾಗಲೂ ಅಲಂಕೃತನೇ ಆಗಿರಲಿ. ಅವನಿಗೆ ಅಂಧಂತಮಸ್ಸು ಮತ್ತು ನಿತ್ಯದುಃಖಗಳೇ ಉಡುವ ಮತ್ತು ಹೊದೆಯುವ ವಸ್ತ್ರಗಳು ಎನಿಸಲಿ ಎಂದು ಶ್ರೀಮದಾಚಾರ್ಯರು ಇಲ್ಲಿ ಪರಿಹಾಸ ಮಾಡಿದ್ದಾರೆ. ಶ್ರುತಿಸಿದ್ಧನಾದ ಪರಮಾತ್ಮನನ್ನು ಪರಿತ್ಯಾಗ ಮಾಡಿದರೆ ಕೇವಲ ಮೇಲೆ ಹೇಳಿದ ದೋಷಗಳೇ ಅಲ್ಲ, ಮಹಾ ಅನರ್ಥವೂ ಸಂಭವಿಸುವುದು ಎಂಬುದಾಗಿ ಶ್ರುತಿಗಳಲ್ಲೇ ಉಕ್ತವಾಗಿದೆ. ಯಥಾರ್ಥವಾದ ಜ್ಞಾನವನ್ನು ಹುಟ್ಟಿಸುವ ವೇದ ವಾಕ್ಯಗಳಿದ್ದಾಗಲೂ ಅದಕ್ಕೆ ಅಪಾರ್ಥ

ಕಲ್ಪಿಸುವ ಮೂರ್ಖರು, ಮರಣಾನಂತರದಲ್ಲಿ ಅಂಧಂತಮಸ್ಸಿನಿಂದ ಆವೃತವಾಗಿರುವ ಸುಖದ ಹೆಸರೇ ಇಲ್ಲದ 'ಅನಂದಾ' ಎಂಬ ಲೋಕಗಳನ್ನು ಸೇರುತ್ತಾರೆ. ಅನಂತಾನಂತಕಲ್ಯಾಣಗುಣಗಣ ಪರಿಪೂರ್ಣನೆಂದು ವೇದಗಳಿಂದ ವಾಚ್ಯನಾದ ಪರಮಾತ್ಮನನ್ನು ನಿರ್ಗುಣ ಎಂದು ಹೇಳುವವರು ಅಥವಾ ಅಂಥಹ ಬ್ರಹ್ಮನು ಇಲ್ಲವೆಂದೇ ಹೇಳುವ ಜನರು 'ಆತ್ಮಹನರು' ಎನಿಸಿಕೊಳ್ಳುತ್ತಾರೆ. ಪೂರ್ಣವಾಗಿ ದುಃಖವೇ ತುಂಬಿರುವ ಅಸುರರಿಂದಲೇ ಹೊಂದಲು ಯೋಗ್ಯವಾದ 'ಅಸುರ್ಯಾ' ಎಂಬ ಲೋಕಗಳನ್ನು ಅಂಥವರು ಹೊಂದುತ್ತಾರೆ. ಈ ವಿಷಯದಲ್ಲಿ ಎಲ್ಲ ವೇದಶಾಖೆಗಳಲ್ಲಿಯೂ ನೂರಾರು ಶ್ರುತಿಗಳು ಪ್ರಮಾಣವಾಗಿವೆ.

## ಗೌಣಾತ್ಮನು ಆತ್ಮಶಬ್ದವಾಚ್ಯನಲ್ಲ

ದೃಶ್ಯವಸ್ತುವಿನಲ್ಲಿ ಶ್ರುತವಾದ ಆತ್ಮ ಶಬ್ದವು ಗೌಣಾತ್ಮನನ್ನೇ ಹೇಳುತ್ತದೆ ಎಂಬ ಪರರ ವಾದವನ್ನು ತಿರಸ್ಕರಿಸುವ ಹಾಗೂ ನಿರ್ಗುಣಬ್ರಹ್ಮನೇ ಆತ್ಮಶಬ್ದವಾಚ್ಯನು ಎಂದು ಹೇಳುವ ಸೂತ್ರಗಳನ್ನು ಪಠಿಸಿ ಸೂತ್ರಾರ್ಥವನ್ನು ವಿವರಿಸುತ್ತಾರೆ -

**ಸೂತ್ರ: ಓಂ ಹೇಯತ್ವಾವಚನಾಚ್ಚ ಓಂ (೧-೧-೮)**

'ತಮೇವೈಕ ಜಾನಥ ಆತ್ಮಾನಂ' ಎಂದು ಅಹೇಯತ್ವವು (ಬಿಡತಕ್ಕದ್ದಲ್ಲ ಎಂದು) ಶ್ರುತವಾಗಿರುವುದರಿಂದ ಆತ್ಮಶಬ್ದವಾಚ್ಯನು ಸಗುಣಬ್ರಹ್ಮನಲ್ಲ. 'ಅನ್ಯಾ ವಾಚೋ ವಿಮುಂಚಥ' ಎಂದು ಸಗುಣನಾದ ಅಮುಖ್ಯ ಆತ್ಮನಿಗೆ ಹೇಯತ್ವವು ಶ್ರುತವಾಗಿದೆ ಎಂದು ಸೂತ್ರಾರ್ಥ.

**ಹೇಯತ್ವವಚನಾಚ್ಚೈವ ನಾತ್ಮಾ ಗೌಣಃ ಶ್ರುತೌ ಶ್ರುತಃ ।।೧೩೪।।**

ಹೇಯತ್ವವನ್ನು ಹೇಳದಿರುವುದರಿಂದ ಗೌಣನಾದ ಆತ್ಮನು ವೇದದಲ್ಲಿ ದೃಶ್ಯನಾಗಿ ಶ್ರುತನಾಗಿಯೇ ಇಲ್ಲ.

**ತಮೇವೈಕಂ ಜಾನಥಾನ್ಯಾ ವಾಚೋ ಮುಂಚತ ಚೇತಿ ಹ ।**
**ಉಕ್ತ ಆತ್ಮಾ ಕಥಂ ಗೌಣೋ ಹೇಯಪಕ್ಷೇ ಹ್ಯಸೌ ಶ್ರುತಃ ।।೧೩೫।।**

ಆತ್ಮಶಬ್ದವಾಚ್ಯನಾದ ಆ ಪರಬ್ರಹ್ಮನೊಬ್ಬನನ್ನೇ ತಿಳಿಯಿರಿ, ಅನ್ಯರನ್ನು ಹೇಳುವ ಮಾತುಗಳನ್ನು ಬಿಟ್ಟುಬಿಡಿ. ದೃಶ್ಯನಾದ ಪರಬ್ರಹ್ಮನು ಮುಕ್ತವರ್ಗಕ್ಕೆ

ಆಶ್ರಯನು. ಹೀಗೆ ಶ್ರುತಿಗಳಲ್ಲಿ ಉಕ್ತನಾದ ಆತ್ಮನು ಗೌಣನೆಂದು ಅಂಗೀಕರಿಸಲಿಕ್ಕೆ ಹೇಗೆ ಸಾಧ್ಯ? ಏಕೆಂದರೆ, ಈ ಗೌಣ ಆತ್ಮನು ಮುಮುಕ್ಷುಗಳಿಂದ ಬಿಡಲರ್ಹನೆನ್ನುವ ಪಕ್ಷದಲ್ಲಿ ಹೇಳಲ್ಪಟ್ಟಿದ್ದಾನೆ.

ಬ್ರಹ್ಮಾದಿ ದೇವತೆಗಳಿಗೆ ಉಪಾದೇಯತ್ವವನ್ನು 'ಅಂಗಾವಬದ್ಧಾಸ್ತು' ಇತ್ಯಾದಿ ಸೂತ್ರಗಳಲ್ಲಿ ಹೇಳಿರುವುದರಿದ ಗೌಣಾತ್ಮರಿಗೆ ಉಪಾದೇಯತ್ವವು ಕೂಡುವುದಿಲ್ಲ ಎಂದು ಹೇಗೆ ಹೇಳುತ್ತೀರಿ ಎಂದು ಆಶಂಕಿಸಿದರೆ-

**ಪರಿವಾರತಯಾ ಗ್ರಾಹ್ಯಾ ಅಪಿ ಹೇಯಾ ಪ್ರಧಾನತಃ ।**

ಆ ಹರಿಯೊಬ್ಬನನ್ನೇ ತಿಳಿಯಿರಿ ಎಂಬ ಮಾತಿನಿಂದ ಬ್ರಹ್ಮಾದಿ ದೇವತೆಗಳನ್ನು ಬಿಡಬೇಕೆಂದು ಅರ್ಥವಲ್ಲ. ಶ್ರೀಹರಿಯನ್ನು ಬಿಟ್ಟು ಇತರರು ಪರಿವಾರತಯಾ ಗ್ರಾಹ್ಯರು, ಸರ್ವೋತ್ತಮತ್ವೇನ ಅಲ್ಲ. ಬ್ರಹ್ಮಾದಿದೇವತೆಗಳಿಗೆ ಪ್ರಾಧಾನ್ಯದಿಂದ ಉಪಾದೇಯತ್ವವು ಇರುವುದಿಲ್ಲ ಎಂದು ತಿಳಿಯಬೇಕು.

ಈ ಪ್ರಕಾರವಾಗಿ ಆತ್ಮಶಬ್ದಕ್ಕೆ ನಿರ್ಗುಣತ್ವವನ್ನು ಉಪಪಾದಿಸಿ, ನಿರ್ಗುಣನಿಗೇ ವಾಚ್ಯತ್ವವು ಎಂದು ಸಮರ್ಥಿಸಲಾಯಿತು. ಹೇತ್ವಂತರದಿಂದ ಇದೇ ಅರ್ಥವನ್ನು ಪ್ರತಿಪಾದಿಸುವ ಸ್ವಾಪ್ಯಯಾತ್ ಎನ್ನುವ ಸೂತ್ರವನ್ನು ವ್ಯಾಖ್ಯಾನಿಸುವರು.

**ಸೂತ್ರ: ಓಂ ಸ್ವಾಪ್ಯಯಾತ್ ಓಂ (೧-೧-೯)**

'ಆತ್ಮನ್ಯೇವಾತ್ಮಾನಂ ವಿಲಾಪಯತಿ' ಎಂದು ಶ್ರುತಿಯಲ್ಲಿ ಆತ್ಮನಿಗೆ ಆತ್ಮನಲ್ಲೇ ಲಯವು ಹೇಳಿರುವುದರಿಂದ, ನಿರ್ಗುಣಬ್ರಹ್ಮನೇ ಆತ್ಮಶಬ್ದವಾಚ್ಯ.

**ಪೂರ್ಣಸ್ಯ ಪೂರ್ಣಮಾದಾಯ ಪೂರ್ಣಮೇವಾವಶಿಷ್ಯತೇ ॥೧೩೬॥**

**ಇತಿ ಸ್ವಸ್ಯೈವ ಪೂರ್ಣಸ್ಯ ಪೂರ್ಣೇಽಪ್ಯಯ ಉದಾಹೃತಃ ।**

**ಕಥಂ ಮಾಯಾವ್ಯವಚ್ಛಿನ್ನಃ ಪೂರ್ಣೋಮುಖ್ಯತಯಾ ಭವೇತ್ ॥೧೩೭॥**

ಪೂರ್ಣವಾದ ಮೂಲರೂಪದ ಸಕಾಶದಿಂದ ಪೂರ್ಣವಾದ ಅವತಾರರೂಪವನ್ನು ಸ್ವೀಕರಿಸಿದ ಮೇಲೂ ಪೂರ್ಣವಾದ ಮೂಲರೂಪವೇ ಉಳಿದಿರುತ್ತದೆ. ಹೀಗೆ ವಿಷ್ಣುವಿನಲ್ಲಿ ಪೂರ್ಣವಾದ ತನ್ನ ಅವತಾರರೂಪಕ್ಕೇ ಪೂರ್ಣವಾದ ತನ್ನ ಮೂಲರೂಪದಲ್ಲಿ ಲಯವು ಹೇಳಲ್ಪಟ್ಟಿದೆ. ವಿಷ್ಣುವೊಬ್ಬನಿಗೆ ಮಾತ್ರ ಈ ರೀತಿಯ ಲಯವು ಹೇಳಲ್ಪಟ್ಟಿದೆ, ಬೇರೆ

ಯಾರಿಗೂ ಇಲ್ಲ. ಆದಕಾರಣ ನಿರ್ಗುಣಬ್ರಹ್ಮನಿಗೇ ಮುಖ್ಯವಾಗಿ ವಾಚ್ಯತ್ವವು ಕೂಡುತ್ತದೆ. ಮಾಯಾವಿಶಿಷ್ಟನಾದ ಸಗುಣಬ್ರಹ್ಮನು ಮುಖ್ಯವಾಗಿ ಪೂರ್ಣನು ಹೇಗೆ ಆಗುವನು?

## ಪ್ರಾಕೃತಗುಣರಹಿತ ಶುದ್ಧಬ್ರಹ್ಮನೇ ವಾಚ್ಯನು

ಯುಕ್ತ್ಯಂತರದಿಂದ ನಿರ್ಗುಣ ಅಂದರೆ ಪ್ರಾಕೃತಗುಣರಹಿತ ಬ್ರಹ್ಮನಿಗೆ ವಾಚ್ಯತ್ವವನ್ನು ಶ್ರುತತ್ವಾಚ್ಚ ಎಂಬ ಸೂತ್ರದಿಂದ ಉಪಪಾದಿಸುತ್ತಾರೆ.

**ಸೂತ್ರ: ಓಂ ಶ್ರುತತ್ವಾಚ್ಚ ಓಂ (೧-೧-೧೧)**

'ಏಕೋ ದೇವಃ ಸರ್ವಭೂತೇಷು ಗೂಢಃ ಸರ್ವವ್ಯಾಪೀ ಸರ್ವಭೂತಾಂತರಾತ್ಮಾ। ಕರ್ಮಾಧ್ಯಕ್ಷಃ ಸರ್ವಭೂತಾಧಿವಾಸಃ ಸಾಕ್ಷೀ ಚೇತಾ ಕೇವಲೋ ನಿರ್ಗುಣಶ್ಚ॥' ಎನ್ನುವ ಶ್ರುತಿಯಲ್ಲಿ ನಿರ್ಗುಣಬ್ರಹ್ಮನೇ ಆತ್ಮ ಶಬ್ದದಿಂದ ಶ್ರುತನಾಗಿದ್ದಾನೆ. ಆದಕಾರಣ ಆತನಿಗೆ ವಾಚ್ಯತ್ವವು ಕೂಡುತ್ತದೆ.

ಇಲ್ಲಿ ನಿರ್ಗುಣನು ಶ್ರುತನಾಗಿದ್ದರೂ ಸಗುಣನೇ ಏಕೆ ವಾಚ್ಯನಾಗಬಾರದು ಎಂದು ಕೇಳಿದರೆ -

**ಪದಂ ಚ ನಿರ್ಗುಣ ಇತಿ ಕಥಂ ಗೌಣಂ ವದಿಷ್ಯತಿ ।**
**ಗುಣಾಭಾವೋಪಲಕ್ಷ್ಯಂ ಚೇತ್ಪದಂ ತದಪಿ ವಾಚಕಂ ॥೧೩೮॥**
**ಅತೋಽನವಸ್ಥಿತಿಮುಖ ಸರ್ವದೋಷಸಮಾಸ್ಪದಂ ।**
**ಕಥಮೇತನ್ಮತಂ ಸದ್ಭಿರಾದ್ರಿಯೇತ ವಿಚಕ್ಷಣೈಃ ॥೧೩೯॥**

ನಿರ್ಗುಣನಲ್ಲಿ ಆತ್ಮಶಬ್ದವನ್ನು ಹೇಳುವ 'ಸಾಕ್ಷೀ ಚೇತಾ ಕೇವಲೋ ನಿರ್ಗುಣಶ್ಚ' ಎನ್ನುವ ಶ್ರುತಿಯು ನಿರ್ಗುಣ ಎಂಬ ಪದದಿಂದ ಸಗುಣನನ್ನು ಹೇಗೆ ಹೇಳುವುದು? ಹಾಗೆ ಹೇಳುವುದು ವ್ಯಾಹತವಾಗುವುದು. ಆದ್ದರಿಂದ ಇಲ್ಲಿ ಸಗುಣನು ಹೇಳಲ್ಪಟ್ಟಿಲ್ಲ. ನಿರ್ಗುಣ ಶಬ್ದದಿಂದ ಗುಣಾಭಾವದ ಮೂಲಕವಾಗಿ ಬ್ರಹ್ಮನು ಉಪಲಕ್ಷಿತನೆಂದು ಹೇಳುವುದಾದರೆ, ಗುಣಾಭಾವೋಪಲಕ್ಷಿತ ಪದದಿಂದ ವಾಚ್ಯನಾಗಬೇಕಾಗುವುದು. ಆ ಪದದಿಂದಲೂ ಗುಣಾಭಾವವು ಉಪಲಕ್ಷಿತವಾಗಿ ಬ್ರಹ್ಮನು ಉಪಲಕ್ಷಿತನೆಂದರೆ, ಅನವಸ್ಥಾದಿ ಎಲ್ಲ ದೋಷಗಳೂ ಬರುತ್ತವೆ. ಹೀಗಿರುವಾಗ ಬ್ರಹ್ಮನಿಗೆ ವಾಚ್ಯತ್ವವು ಇಲ್ಲವೆನ್ನುವ ಈ ಮತವು

ವಿವೇಕಿಗಳಾದ ಸಜ್ಜನರಿಂದ ಹೇಗೆ ತಾನೇ ಆದರಿಸಲ್ಪಡುವುದು?

'ಈಕ್ಷತೇರ್ನಾಶಬ್ದಂ' ಎನ್ನುವುದರಿಂದಾರಂಭಿಸಿ 'ಶ್ರುತತ್ವಾಚ್ಚ' ಎನ್ನುವ ವರೆಗಿನ ಸೂತ್ರಗಳಿಂದ ಜಗತ್ತಿಗೆ ಪ್ರಧಾನವು ಕಾರಣ ಎಂದು ಹೇಳುವ ಸಾಂಖ್ಯಮತವು ನಿರಾಕರಿಸಲ್ಪಡುತ್ತದೆ ಎಂದು ಅದ್ವೈತಿಗಳು ಹೇಳುವರು. ಅದು ಅಯುಕ್ತವೆನ್ನುತ್ತಾರೆ -

**ನ ಚ ಸಾಂಖ್ಯನಿರಾಕೃತ್ಯೈ ಸೂತ್ರಾಣ್ಯೇತಾನ್ಯಚೀಕ್ಲೃಪತ್ ।**
**ಭಗವಾನ್ನ ಹ್ಯಶಬ್ದತ್ವಂ ಪ್ರಧಾನೇಽಗೀಕರೋತ್ಯಸೌ ॥೧೪೦॥**
**ಸಮನ್ವಯೇ ಪ್ರತಿಜ್ಞಾತೇ ಶಬ್ದಗೋಚರತೈವ ಹಿ ।**
**ಪ್ರಥಮ ಪ್ರತಿಪಾದ್ಯಾ ಸ್ಯಾತ್ತದಭಾವೇ ಕುತೋಽನ್ವಯಃ ॥೧೪೧॥**
**ಕಥಂ ಚ ಲಕ್ಷಣಾವಾದೀ ಬ್ರೂಯಾದ್ಬ್ರಹ್ಮ ಸಮನ್ವಯಂ ।**
**ಯೋಽಸೌ ಶಬ್ದಸ್ಯ ಮುಖ್ಯಾರ್ಥಸ್ತತ್ರೈವ ಸ್ಯಾತ್ಸಮನ್ವಯಃ ॥೧೪೨॥**

ಈ ಸೂತ್ರಕಾರರು ಶಬ್ದ ಅವಾಚ್ಯತ್ವ ಅಥವಾ ಅಗೋಚರತ್ವವನ್ನು ಪ್ರಧಾನದಲ್ಲಿ ಅಂಗೀಕರಿಸಿರುವುದಿಲ್ಲ. ಆದಕಾರಣ ಸೂತ್ರಕಾರರು ಸಾಂಖ್ಯಮತದ ನಿರಾಕರಣೆಗಾಗಿ ಈ ಸೂತ್ರಗಳನ್ನು ರಚಿಸಿಲ್ಲ. 'ತತ್ತು ಸಮನ್ವಯಾತ್' ಎಂದು ಸರ್ವ ಶಾಸ್ತ್ರಕ್ಕೂ ಬ್ರಹ್ಮನಲ್ಲಿ ಸಮನ್ವಯವು ತಿಳಿದುಬರುತ್ತಿರಲು, ಶಬ್ದವಾಚ್ಯತ್ವವೇ ಮೊದಲಿಗೆ ಪ್ರತಿಪಾದಿತವಾಗಬೇಕು. ಶಬ್ದವಾಚ್ಯತ್ವವೇ ಇಲ್ಲದಿದ್ದರೆ ಸಮನ್ವಯವು ತಾನೇ ಸಾಧ್ಯವಾಗುವುದು? ಶಬ್ದಗಳಿಗೆ ಲಕ್ಷಣಾವೃತ್ತಿಯಿಂದ ಅರ್ಥಹೇಳುವವನು ಬ್ರಹ್ಮನಲ್ಲಿ ಶಬ್ದಗಳಿಗೆ ಸಮನ್ವಯವನ್ನು ಹೇಗೆ ಹೇಳಿಯಾನು? ಯೋಽಸೌ ಎಂಬ ಶಬ್ದಕ್ಕೆ ಮುಖ್ಯಾರ್ಥದಲ್ಲಿಯೇ ಸಮನ್ವಯವು ಸಾಧ್ಯ.

ನಿರ್ಗುಣನು ಪೂರ್ವದಲ್ಲಿ ಪ್ರಸಕ್ತನಾಗಿರುವುದರಿಂದ ತತ್ತು ಸಮನ್ವಯಾತ್ ಎಂಬ ಸೂತ್ರದಲ್ಲಿ ತತ್ ಶಬ್ದದಿಂದ ನಿರ್ಗುಣನನ್ನು ತೆಗೆದುಕೊಳ್ಳಬೇಕೋ ಅಥವಾ ಸಗುಣನು ಪ್ರಸಕ್ತನಾಗಿದ್ದರೂ ಪರಾಮರ್ಶೆ ಕೂಡದಿರುವುದರಿಂದ ನಿರ್ಗುಣನಿಗೆ ಸಮನ್ವಯವನ್ನು ಹೇಳಬೇಕೋ ಎಂದು ಆಶಂಕಿಸಿದರೆ -

**ಜನ್ಮಾದಿಕಾರಣೇ ಸಾಕ್ಷಾದಾಹ ದೇವಃ ಸಮನ್ವಯಂ ।**
**ಉಕ್ತಂ ತದೇವ ಜಿಜ್ಞಾಸ್ಯಂ ಕ್ವಾವಕಾಶೋ ಅತ್ರ ನಿರ್ಗುಣೇ ॥೧೪೩॥**

**ಕಥಂ ಚಾಸಂಭವಸ್ತಸ್ಯ ಮುಖ್ಯಾರ್ಥಸ್ಯ ನಿರಾಕೃತೌ ।**

ಭಗವಾನ್ ಸೂತ್ರಕಾರರು ಮುಖ್ಯವಾಗಿ ಜಗಜ್ಜನ್ಮಾದಿಕಾರಣನಾದ ವಿಷ್ಣುವಿನಲ್ಲಿಯೇ ಮುಖ್ಯವೃತ್ತಿಯಿಂದ ಸಮನ್ವಯವನ್ನು ಹೇಳಿರುವರು. ಅವನೇ ಜಿಜ್ಞಾಸ್ಯನು ಎಂದು ಉಕ್ತನಾಗಿದ್ದಾನೆ. ಈ ಸೂತ್ರದಲ್ಲಿ ನಿರ್ಗುಣಬ್ರಹ್ಮನಲ್ಲಿ ಸಮನ್ವಯಕ್ಕೆ ಅವಕಾಶವೆಲ್ಲಿದೆ? ನಿರ್ಗುಣನಿಗೆ ತತ್ ಶಬ್ದದಿಂದ ಪರಾಮರ್ಶೆ ಕೂಡದಿರುವುದರಿಂದ, ಹಿಂದಿನ ಮೂರು ಸೂತ್ರಗಳಲ್ಲಿ ಪ್ರಕೃತವಾದ ಮುಖ್ಯಾರ್ಥವನ್ನು ಬಿಡಬೇಕೆನ್ನುವುದರಲ್ಲಿ ಅನುಪಪತ್ತಿಯು ಇರುವುದಿಲ್ಲ.

ತತ್ ಶಬ್ದದಿಂದ ನಿರ್ಗುಣನನ್ನು ತೆಗೆದುಕೊಂಡರೆ, ಅವನಲ್ಲಿ ಲಕ್ಷಣಾ ವೃತ್ತಿಯೂ ಕೂಡದಿರುವುದರಿಂದ, ಸಮನ್ವಯಸೂತ್ರವು ವ್ಯರ್ಥವಾಗುತ್ತದೆ ಎಂದು ಹೇಳುತ್ತಾರೆ -

**ಮಾನೇನ ಕೇನ ವಿಜ್ಞೇಯಮವಾಚ್ಯಾಜ್ಞೇಯನಿರ್ಗುಣಂ ॥೧೪೪॥**

**ಅಮೇಯಂ ಚೇನ್ನ ಶಾಸ್ತ್ರಸ್ಯ ತತ್ರ ವೃತ್ತಿಃ ಕಥಂಚನ ।**

ಅವಾಚ್ಯವೂ, ಅಜ್ಞೇಯವೂ, ನಿರ್ಗುಣವೂ ಆದ ವಸ್ತುವು ಯಾವ ಪ್ರಮಾಣದಿಂದ ತಾನೇ ತಿಳಿಯಲು ಸಾಧ್ಯವಾಗುವುದು. ನಿರ್ಗುಣನಾದ ಬ್ರಹ್ಮನನ್ನು ಯಾವುದೇ ಪ್ರಮಾಣದಿಂದಲೂ ತಿಳಿಯಲು ಸಾಧ್ಯವಿಲ್ಲ ಎಂದಮೇಲೆ, ಶಾಸ್ತ್ರವು ಆ ಬ್ರಹ್ಮನನ್ನು ಯಾವ ವೃತ್ತಿಯಿಂದಲೂ ತಿಳಿಸಿಕೊಡಲು ಸಾಧ್ಯವಾಗುವುದಿಲ್ಲ.

**ವಿವರಣೆ:**

ತಿಳಿಯಲರ್ಹವಾದುದೇ ಪ್ರಮೇಯ. ಶಬ್ದಗಳಿಂದ ಅವಾಚ್ಯನಾದರೆ ಜ್ಞೇಯತ್ವವು ಕೂಡುವುದಿಲ್ಲ. ಆದಕಾರಣ ಪ್ರಮೇಯತ್ವವೂ ಕೂಡುವುದಿಲ್ಲ. ಮುಖ್ಯಾರ್ಥ ಕೂಡದಿದ್ದರೂ ಲಕ್ಷಣಾವೃತ್ತಿಯಿಂದ ಶಾಸ್ತ್ರಗಳು ಬ್ರಹ್ಮನನ್ನು ತಿಳಿಸಿಕೊಡುತ್ತವೆ ಎಂದೂ ಹೇಳುವ ಹಾಗಿಲ್ಲ. ಏಕೆಂದರೆ ಲಕ್ಷ್ಯಾರ್ಥಜ್ಞಾನವಿದ್ದಾಗ ಮಾತ್ರ ಲಕ್ಷಣಾವೃತ್ತಿಯು ಕೂಡುವುದು. ಆದಕಾರಣ ನಿರ್ಗುಣನಾದ ಬ್ರಹ್ಮನನ್ನು ಶಾಸ್ತ್ರಗಳಿಂದ ತಿಳಿಯುವುದು ಸಾಧ್ಯವಿಲ್ಲ. ಯಾವ ವೃತ್ತಿಯಿಂದಲೂ ವಾಚ್ಯನಾಗದ ಬ್ರಹ್ಮನ ವಿಷಯದಲ್ಲಿ ಸಮನ್ವಯಸೂತ್ರವು ನಿಷ್ಪ್ರಯೋಜಕವಾಗುವುದು.

## ಗುಣಪೂರ್ಣನೇ ಜಿಜ್ಞಾಸ್ಯನು

ಹೀಗೆ ನಿರ್ಗುಣನಲ್ಲಿ ಸಮನ್ವಯವನ್ನು ನಿರಾಕರಿಸಿ, ಸಗುಣನೇ ಶಾಸ್ತ್ರಗಳಿಂದ ಪ್ರತಿಪಾದ್ಯನು ಎಂದು ಉಪಸಂಹಾರ ಮಾಡುತ್ತಾರೆ -

**ತಸ್ಮಾಚ್ಛಾಸ್ತ್ರೇಣ ಜಿಜ್ಞಾಸ್ಯಮಸ್ಮದೀಯಂ ಗುಣಾರ್ಣವಂ ॥೧೪೫॥**
**ವಾಸುದೇವಾಖ್ಯಮದ್ವಂದ್ವಂ ಪರಂ ಬ್ರಹ್ಮಾಖಿಲೋತ್ತಮಂ ।**

ನಿರ್ಗುಣನಲ್ಲಿ ಸಮನ್ವಯವು ಕೂಡದಿರುವುದರಿಂದ, ನಾವು ಪ್ರತಿಪಾದಿಸುವ ಗುಣಪರಿಪೂರ್ಣನೂ, ಸಮಾಧಿಕರಹಿತನೂ, ಸರ್ವೋತ್ತಮನೂ ಆದ ವಾಸುದೇವನೆಂದು ಪ್ರಸಿದ್ಧನಾದ ಪರಬ್ರಹ್ಮನು ಶಾಸ್ತ್ರಗಳಿಂದ ವಿಚಾರ್ಯನು ಎಂದು ಒಪ್ಪಲೇಬೇಕು.

ಯಾವುದೇ ಪ್ರಮಾಣಕ್ಕೆ ಗೋಚರವಾಗದ ನಿರ್ಗುಣ ವಸ್ತುವಿಗೆ ಅಸ್ತಿತ್ವವೇ ಕೂಡುವುದಿಲ್ಲ ಎನ್ನುತ್ತಾರೆ -

**ವಿಜ್ಞೇಯವಾಚ್ಯಲಕ್ಷ್ಯತ್ವಪೂರ್ವಾಶೇಷವಿಶೇಷತಃ ॥೧೪೬॥**
**ನಿರ್ಗತಂ ಮನಸೋ ವಾಚೋ ಯದಿ ತತ್ಸ್ಯಾದಗೋಚರಂ ।**
**ಅಸ್ತು ತನ್ಮಾವದೇದ್ವಾದೀ ನ ಚಾಸ್ಮಾಚ್ಛಾಸ್ತ್ರಗಂ ತು ತತ್ ॥೧೪೭॥**

ವಿಜ್ಞೇಯತ್ವ, ವಾಚ್ಯತ್ವ, ಲಕ್ಷ್ಯತ್ವ ಮೊದಲಾದ ಎಲ್ಲ ವಿಶೇಷಗಳಿಂದ ಹೊರತಾದುದು, ಮನಸ್ಸಿಗೂ ಹಾಗೂ ವಚನಕ್ಕೂ ಅಗೋಚರವಾದಂಥಹ ವಸ್ತುವು ಇಲ್ಲವೇ ಇಲ್ಲ. ಹೀಗಿದ್ದರೂ ನಿರ್ಗುಣಬ್ರಹ್ಮನು ಸ್ವಪ್ರಕಾಶನಾದ್ದರಿಂದ ಸಿದ್ಧಿಸುತ್ತಾನೆ ಎಂದರೆ ಹಾಗೇ ಆಗಲಿ. ಆದರೆ ಆ ನಿರ್ಗುಣಬ್ರಹ್ಮನು ನಮ್ಮ ವೇದಾದಿ ಶಾಸ್ತ್ರಗಳಿಗೆ ವಿಷಯನೇ ಆಗುವುದಿಲ್ಲವಾದ್ದರಿಂದ ವೇದವನ್ನು ಒಪ್ಪುವ ವಾದಿಯು ನಿರ್ಗುಣಬ್ರಹ್ಮನ ಬಗ್ಗೆ ಹೇಳಬಾರದು.

## ನಿರ್ಗುಣನು ಶಾಸ್ತ್ರಕ್ಕೆ ವಿಷಯನಲ್ಲ

ನಮ್ಮ ಪ್ರಕಾರ ನಿರ್ಗುಣನು ವಾಚ್ಯನಾಗಿರುವುದರಿಂದ ಜ್ಞಾನಕ್ಕೆ ವಿಷಯನು. ಆದ್ದರಿಂದ ನಿರ್ಗುಣಬ್ರಹ್ಮನಲ್ಲಿ ಶಾಸ್ತ್ರವಿಷಯತ್ವವೂ ಕೂಡುವುದು ಎಂಬ ಪರಕೀಯರ ವಾದವನ್ನು ಉನ್ಮತ್ತರ ವಾದ ಎಂದು ದೂಷಿಸುತ್ತಾರೆ -

**ಅವಾಚ್ಯಂ ವಾಚ್ಯಮಿತ್ಯುಕ್ತ್ವಾ ಕಿಮಿತ್ಯುನ್ಮತ್ತವನ್ಮೃಷಾ ।**
**ಅಸ್ಮಚ್ಛಾಸ್ತ್ರಸ್ಯ ಚೌರ್ಯಾಯ ಯತತೇ ಸ್ವೋಕ್ತಿದೂಷಕಃ ॥೧೪೮॥**

ಮೊದಲಿಗೆ ವಚನದಿಂದ ಉಂಟಾಗತಕ್ಕ ಜ್ಞಾನಕ್ಕೆ ಅವಿಷಯನೆಂದು ಹೇಳಿ, ಪುನಃ ವಚನಜನ್ಯಜ್ಞಾನಕ್ಕೆ ವಿಷಯನಾಗುತ್ತಾನೆ ಎಂದು ಹುಚ್ಚನಂತೆ ತನ್ನ ಮಾತನ್ನೇ ತಾನು ದೂಷಿಸುವವನು, ನಿರ್ಗುಣನನ್ನು ಸಾಧಿಸಲು ನಮ್ಮ ವೇದಾದಿ ಶಾಸ್ತ್ರಗಳಿಗೆ ಸಮ್ಮತವಾದ ಅರ್ಥವನ್ನು ಅಪಹರಿಸಿ ಇಲ್ಲದ ಅರ್ಥವನ್ನು ಯೋಜಿಸಲಿಕ್ಕೆ ಪ್ರಯತ್ನಿಸುತ್ತಾನೆ. ಹೀಗೆ ಕಳ್ಳನೂ ವ್ಯಾಹತಭಾಷಿಯೂ ಆದವನಿಗೆ ಯಾವುದೂ ಸಿದ್ಧಿಸುವುದಿಲ್ಲ.

ಶ್ರುತಿ ಸೂತ್ರಗಳಿಗೆ ನಿರ್ಗುಣನೇ ವಿಷಯನೆಂದು ಅಂಗೀಕರಿಸದಿದ್ದರೆ ಶಾಸ್ತ್ರಗಳಿಗೆ ವಿಷಯತ್ವವೇ ಇಲ್ಲದಂತಾಗುವುದರಿಂದ ಅಪ್ರಾಮಾಣ್ಯವು ಬರಬೇಕಾಗುವುದು ಎಂದು ಆಶಂಕಿಸಿದರೆ -

**ಜನ್ಮಾದಿಕಾರಣಂ ಯತ್ತತ್ಸಕ್ಷಾನ್ನಾರಾಯಣಾಭಿಧಂ ।**
**ವದಂತಿ ಶ್ರುತಯೋ ಬ್ರಹ್ಮ ಶಾಸ್ತ್ರಂ ಚೈತತ್ತದರ್ಥತಃ ॥೧೪೯॥**
**ಪ್ರವೃತ್ತಮಸ್ತ್ವವಾಚ್ಯಂ ತೇ ನೈವಂ ಬ್ರೂಯಾಃ ಕಥಂಚನ ।**

ಶ್ರುತಿಗಳು ಮುಖ್ಯವಾಗಿ ಜಗಜ್ಜನ್ಮಾದಿಗಳಿಗೆ ಕಾರಣನಾದ ನಾರಾಯಣನೆಂಬ ಹೆಸರುಳ್ಳ ಬ್ರಹ್ಮನನ್ನು ಹೇಳುತ್ತವೆ. ಈ ಶಾಸ್ತ್ರವಾದರೋ ಅವನನ್ನು ತಿಳಿಸಲಿಕ್ಕಾಗಿಯೇ ಪ್ರವೃತ್ತವಾಗಿದೆ. ಆದ್ದರಿಂದ ನಿನ್ನ ಅವಾಚ್ಯನಾದ ಬ್ರಹ್ಮನು ಶಾಸ್ತ್ರವಿಷಯನಾಗುತ್ತಾನೆಂದು ಎಂದಿಗೂ ಹೇಳಲೇಬೇಡ. 'ನರಾಣಾಂ ಇದಂ ನಾರಂ' 'ನಾರಸ್ಯ ಅಯನಂ ನಾರಾಯಣಂ' ಎಂಬ ವ್ಯುತ್ಪತ್ತಿಯಿಂದ ನಾರಾಯಣ ಎಂಬ ಶಬ್ದದಿಂದಲೇ ಜಗಜ್ಜನ್ಮಾದಿಕಾರಣತ್ವವು ಹೇಳಲ್ಪಡುತ್ತದೆ.

ಎಲ್ಲ ಪ್ರಮಾಣಗಳಿಗೆ ವಿರುದ್ಧವಾಗಿದ್ದರೂ ನಿರ್ಗುಣಬ್ರಹ್ಮನು ಶಾಸ್ತ್ರಗಳಿಗೆ ವಿಷಯನಾಗುವನು ಎಂಬುದು ಶಾಸ್ತ್ರಚೌರ್ಯ ಎಂದು ಹೇಳುತ್ತಾರೆ -

**ಸರ್ವಶಬ್ದೈರವಾಚ್ಯಂ ತದುಕ್ತ್ವಾ ತದ್ವಿಷಯಂ ಪುನಃ ॥೧೫೦॥**
**ಶಾಸ್ತ್ರಂ ವದಂತಮುನ್ಮತ್ತಂ ಕಥಂ ಲೋಕೋ ನ ವಾರಯೇತ್ ।**
**ಮಾ ವದೋ ಮಾ ವಿಜಾನೀಹಿ ತ್ಯಜಾಸ್ಮಾಚ್ಛಾಸ್ತ್ರಚೋರತಾಂ ॥೧೫೧॥**

ಬ್ರಹ್ಮನಿಗೆ ಎಲ್ಲ ಶಬ್ದಗಳಿಂದಲೂ ಅವಾಚ್ಯತ್ವವನ್ನು ಹೇಳಿ ಪುನಃ ಅವನು ಶಾಸ್ತ್ರಗಳಿಗೆ ವಿಷಯನು ಎಂದು ಹೇಳುವ ಹುಚ್ಚನನ್ನು ಪ್ರಜ್ಞಾವಂತರು ಹೇಗೆ ತಾನೇ ತಡೆಯದೇ ಇರುವರು. ಆದಕಾರಣ ಬ್ರಹ್ಮನನ್ನು ಕುರಿತು ಹಾಗೆ

ಹೇಳಲೂ ಬೇಡ, ತಿಳಿಯಲೂ ಬೇಡ. ಇಂಥಹ ಶಾಸ್ತ್ರಚೌರ್ಯವನ್ನು ಕೈಬಿಡು.

ನೀವು ಹೇಳಿದ ಯಾವುದೂ ಸೂತ್ರಾರ್ಥವಾಗಿರುವುದಿಲ್ಲ. ಆದಕಾರಣ ನಮ್ಮನ್ನು (ಅದ್ವೈತಿಗಳನ್ನು) ಖಂಡಿಸುವ ನಿಮಗೂ (ದ್ವೈತಿಗಳಿಗೂ) ದೋಷವು ಬರುವುದಿಲ್ಲವೇ ಎಂದು ಆಶಂಕಿಸಿದರೆ -

**ವಯಂ ತ್ವಾಂ ಶ್ರುತಿಯುಕ್ತಿಭ್ಯಾಂ ಬದ್ಧ್ವಾಸ್ಮಚ್ಛಾಸ್ತ್ರಮಂಜಸಾ ।**
**ವಿಚಾರಯಾಮಃ ಶ್ರುತಿಭಿರ್ಯುಕ್ತಿಭಿಶ್ಚೈವ ಸಾದರಂ ॥೧೫೨॥**

ಅಪವ್ಯಾಖ್ಯಾನ ಮಾಡತಕ್ಕ ನಿನ್ನನ್ನು ನಾವು ಶ್ರುತಿಗಳಿಂದಲೂ ಯುಕ್ತಿಗಳಿಂದಲೂ ಚೆನ್ನಾಗಿ ಕಟ್ಟಿಹಾಕಿ, ನಮ್ಮ ಋಗಾದಿ ಶಾಸ್ತ್ರವನ್ನು ಸೂತ್ರದಲ್ಲಿ ಸೂಚಿತವಾಗಿರುವಂಥಹ ಶ್ರುತಿಗಳಿಂದಲೂ ಮತ್ತು ಯುಕ್ತಿಗಳಿಂದಲೂ ಶಿಷ್ಯರಲ್ಲಿ ಆದರಹುಟ್ಟಿಸುವಂತೆ ಚೆನ್ನಾಗಿಯೇ ವಿಚಾರಮಾಡುವೆವು. ಆದರಿಂದ ಪರಮತ ನಿರಾಕರಣೆರೂಪದ ನಮ್ಮ ವ್ಯಾಖ್ಯಾನಕ್ಕೆ ಯಾವುದೇ ದೋಷವು ಇರುವುದಿಲ್ಲ.

ಹಾಗಾದರೆ ಬ್ರಹ್ಮನು ಅವಾಚ್ಯ ಎಂದು ಹೇಳುವ ಶ್ರುತಿಗಳಿಗೆ ಅರ್ಥವೇನು ಎಂದು ಕೇಳಿದರೆ, ಶ್ರುತ್ಯಂತರದಿಂದಲೇ ಆ ಶ್ರುತಿಗಳಿಗೆ ಅರ್ಥವನ್ನು ಹೇಳಿ ಈ ಅಧಿಕರಣವನ್ನು ಉಪಸಂಹಾರ ಮಾಡುವರು -

**ಅದ್ಭುತತ್ವಾದವಾಚ್ಯಂ ತದತರ್ಕ್ಯಾಽಜ್ಞೇಯಮೇವ ಚ ।**
**ಅನಂತಗುಣಪೂರ್ಣತ್ವಾದಿತ್ಯೂದೇ ಪೈಂಗಿನಾಂ ಶ್ರುತಿಃ ॥೧೫೩॥**
**ಅವಾಚ್ಯಮಿತಿ ಲೋಕೋಽಪಿ ವಕ್ತ್ಯಾಶ್ಚರ್ಯತಮಂ ಭುವಿ ।**

ಆ ಬ್ರಹ್ಮನು ಅತ್ಯಾಶ್ಚರ್ಯತಮನಾದುದರಿಂದ ಪೂರ್ಣವಾಗಿ ವರ್ಣಿಸಲು ಸಾಧ್ಯವಾಗದು. ಅನಂತಗುಣಪೂರ್ಣನಾದ್ದರಿಂದ ತರ್ಕಕ್ಕೆ ಅವಿಷಯನು ಹಾಗೂ ಅವನನ್ನು ಪೂರ್ಣವಾಗಿ ತಿಳಿಯಲು ಸಾಧ್ಯವಿಲ್ಲ. ಹೀಗೆಂದು ಪೈಂಗಿಗಳ ಶ್ರುತಿಯೂ ಪ್ರತಿಪಾದಿಸುತ್ತದೆ. ಲೋಕದಲ್ಲಿಯೂ ಕೂಡ, ಜನರು ಅತ್ಯದ್ಭುತವಾದುದನ್ನು ಮಾತಿನಿಂದ ಹೇಳಲು ಶಕ್ಯವಿಲ್ಲ ಅಥವಾ ಅವಾಚ್ಯ ಎಂಬುದಾಗಿ ಹೇಳುತ್ತಾರೆ.

**ವಿವರಣೆ:** ಸೂತ್ರಕಾರರು ಜಗಜ್ಜನ್ಮಾದಿಕಾರಣನಾದ ಬ್ರಹ್ಮನಲ್ಲಿ ಸಮನ್ವಯವನ್ನು ಪ್ರತಿಜ್ಞೆ ಮಾಡಿರುವರು. ಅವನೇ ಜಿಜ್ಞಾಸ್ಯನೆಂದೂ ಪ್ರತಿಜ್ಞೆ

ಮಾಡಿರುವರು. ನಿರ್ಗುಣಬ್ರಹ್ಮನಿಗೆ ಜಿಜ್ಞಾಸ್ಯತ್ವವು ಕೂಡಲಾರದು. ಮುಖ್ಯಾರ್ಥವನ್ನು ಬಿಡಲು ಯಾವುದೇ ಕಾರಣವೂ ಇಲ್ಲದಿರುವಾಗ ಅಮುಖ್ಯಾರ್ಥವನ್ನು ಹಿಡಿದು ನಿರ್ಗುಣನು ವಾಚ್ಯನೆಂದು ಹೇಳಬಾರದು. ಯಾವುದೇ ಧರ್ಮಗಳನ್ನು ಹೊಂದಿರದ ನಿರ್ಗುಣನು ಅವಾಚ್ಯನೂ ಅಜ್ಞೇಯನೂ ಅಪ್ರಮೇಯನೂ ಆಗುವನು. ಅಪ್ರಮೇಯನು ಶಾಸ್ತ್ರಕ್ಕೆ ವಿಷಯನಾಗುವುದಿಲ್ಲ. ಆದಕಾರಣ ಆತನಲ್ಲಿ ಅಮುಖ್ಯ ಅಥವಾ ಲಕ್ಷಣಾವೃತ್ತಿಯಿಂದಲೂ ವಾಚ್ಯತ್ವವು ಕೂಡುವುದಿಲ್ಲ. ಅವಾಚ್ಯನೆಂಬುದಕ್ಕೆ ಅದ್ಭುತ, ಅಚಿಂತ್ಯ ಇತ್ಯಾದಿಯಾಗಿ ಶ್ರುತಿಗಳೇ ವ್ಯಾಖ್ಯಾನ ಮಾಡಿರುವುದರಿಂದ ಅದ್ವೈತಿಗಳು ಹೇಳುವ ಅರ್ಥ ಕೂಡುವುದಿಲ್ಲ. ಆದ್ದರಿಂದ ಬ್ರಹ್ಮನು ಸಮಸ್ತ ಶಾಸ್ತ್ರಗಳಿಂದಲೂ ಪ್ರತಿಪಾದ್ಯ ಎಂದು ನಿರ್ವಿವಾದವಾಗಿ ಸಿದ್ಧಿಸುವುದು. ಸಮನ್ವಯಸೂತ್ರವು ನಿಷ್ಪ್ರಯೋಜಕವಾಗುವುದಿಲ್ಲ. ಆದಕಾರಣ ಗುಣಪೂರ್ಣನಾದ ಬ್ರಹ್ಮನೇ ಸಕಲ ಶಾಸ್ತ್ರಗಳಿಂದ ಜಿಜ್ಞಾಸ್ಯನು ಎಂಬುದು ಸಿದ್ಧವಾಗುವುದು.

## ಆನಂದಮಾಧಿಕರಣ

**ಸೂತ್ರ: ಓಂ ಆನಂದಮಯೋಽಭ್ಯಾಸಾತ್ ಓಂ (೧-೧-೧೨)**

ತೈತ್ತರೀಯದಲ್ಲಿ ಆನಂದಮಯಾದಿ ಶಬ್ದಗಳು ಶ್ರುತವಾಗಿರುವ ಪ್ರತಿ ಪ್ರಕರಣದಲ್ಲಿಯೂ ಪರಬ್ರಹ್ಮವಾಚಕವಾದ ಬ್ರಹ್ಮ ಮತ್ತು ಆತ್ಮ ಶಬ್ದಗಳೇ ಅನೇಕಾವರ್ತಿ ಬಂದಿರುವುದರಿಂದ ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ ಮತ್ತು ಆನಂದಮಯ ಎನ್ನುವ ಐದು ಶಬ್ದಗಳಿಂದ ವಾಚ್ಯನಾದವನು ಬ್ರಹ್ಮನೇ ಎಂದು ಸೂತ್ರದ ಅಭಿಪ್ರಾಯ.

'ಅಥಾತೋ ಬ್ರಹ್ಮಜಿಜ್ಞಾಸಾ' ಎಂಬ ಸೂತ್ರದಿಂದ ಜಿಜ್ಞಾಸ್ಯತ್ವವೂ, 'ಜನ್ಮಾದ್ಯಸ್ಯ ಯತಃ' ಎನ್ನುವುದರಿಂದ ಲಕ್ಷಣವೂ, 'ಶಾಸ್ತ್ರಯೋನಿತ್ವಾತ್' ಎನ್ನುವುದರಿಂದ ಪ್ರಮಾಣವೂ ಯಾವ ಬ್ರಹ್ಮನಲ್ಲಿ ಹೇಳಲ್ಪಟ್ಟದೆಯೋ, ಆ ಬ್ರಹ್ಮಶಬ್ದವು ಚತುರ್ಮುಖಬ್ರಹ್ಮ ರುದ್ರಾದಿಗಳಲ್ಲಿ ಕೂಡುವುದಿಲ್ಲವೆಂದೂ, ಎಲ್ಲ ಶಬ್ದಗಳೂ ಬ್ರಹ್ಮನನ್ನೇ ಹೇಳುತ್ತವೆಯೆಂದು ಸಮನ್ವಯಸೂತ್ರದಿಂದ ಸಿದ್ಧಪಡಿಸಲಾಯಿತು. ಬ್ರಹ್ಮನು ಯಾವ ಶಬ್ದದಿಂದಲೂ ವಾಚ್ಯನಲ್ಲವಾದ್ದರಿಂದ

ಬ್ರಹ್ಮನಲ್ಲಿ ಶಾಸ್ತ್ರಸಮನ್ವಯವು ಅಸಂಭವವೆಂದು ಆಕ್ಷೇಪಿಸಿದಾಗ, ಈಕ್ಷತ್ಯಧಿಕರಣದಿಂದ ವಾಚ್ಯತ್ವವನ್ನು ಸಿದ್ಧಪಡಿಸಿ, ಬ್ರಹ್ಮನಲ್ಲಿಯೇ ಎಲ್ಲ ಶಾಸ್ತ್ರಗಳ ಮುಖ್ಯತಾತ್ಪರ್ಯವಿರುವುದರಿಂದ ಅವನೇ ಜಿಜ್ಞಾಸ್ಯನು ಎಂದು ಸಾಧಿಸಲಾಯಿತು. ಲಕ್ಷಣ ಮತ್ತು ಪ್ರಮಾಣಗಳನ್ನು ಹೇಳುವುದರಿಂದಲೇ ಬ್ರಹ್ಮನ ಸ್ವರೂಪವು ನಿರ್ಧಾರವಾಗುವುದು. ಅಂದಮೇಲೆ ಈ ಅಧ್ಯಾಯದ 'ಆನಂದಮಯೋಭ್ಯಾಸಾತ್' ಮೊದಲಾದ ಸೂತ್ರಗಳಿಂದ ಏನೂ ಪ್ರಯೋಜನವಿಲ್ಲ ಎಂದು ಆಶಂಕಿಸಿದರೆ -

**ಏವಂ ಶಾಸ್ತ್ರಾವಗಮ್ಯತ್ವೇ ವಿಭಾಗೇನ ಸಮನ್ವಯಂ ।।೧೫।।**

**ಆನಂದಮಯ ಇತ್ಯಾದಿನಾಽಧ್ಯಾಯೇನ ವದತ್ಯಜಃ ।**

ಈ ರೀತಿಯಾಗಿ ಬ್ರಹ್ಮನಿಗೆ ಮುಖ್ಯವೃತ್ತಿಯಿಂದಲೇ ಎಲ್ಲ ಶಾಸ್ತ್ರಗಳಿಂದ ಪ್ರತಿಪಾದ್ಯತ್ವವು ಕೂಡುತ್ತಿರಲು, ಸೂತ್ರಕಾರರು ಪುನಃ 'ಆನಂದಮಯೋಽ-ಭ್ಯಾಸಾತ್' ಇವೇ ಮೊದಲಾದ ಅಧ್ಯಾಯದ ಉಳಿದ ಭಾಗದಿಂದ ವಿಸ್ತಾರವಾಗಿ ಸಮನ್ವಯವನ್ನು ಹೇಳುತ್ತಾರೆ.

**ವಿವರಣೆ:**

ಮೊದಲು 'ತತ್ತು ಸಮನ್ವಯಾತ್' ಎನ್ನುವುದರಿಂದ ಎಲ್ಲ ಶಬ್ದಗಳಿಗೆ ಶ್ರೀಹರಿಯಲ್ಲಿ ಸಮನ್ವಯವನ್ನು ಪ್ರತಿಜ್ಞಾ ಮಾತ್ರ ಮಾಡಿರುವರು. ಅದನ್ನು ವಾಕ್ಯವಿಶೇಷಗಳನ್ನು ಹೇಳಿ ದೃಷ್ಟಾಂತಗಳಿಂದ ವಿಚಾರವನ್ನು ಮಾಡುವ ಮೂಲಕ ಪೂರ್ವಪಕ್ಷಗಳನ್ನು ತಿರಸ್ಕರಿಸಿ, ಸಿದ್ಧಾಂತವನ್ನು ಸ್ಥಾಪಿಸದೇ ಹೋದಪಕ್ಷದಲ್ಲಿ ಪ್ರತಿಜ್ಞಾವು ನಿರರ್ಥಕವಾಗುವುದು. ಆದ್ದರಿಂದ ಮುಂದಿನ ನಿರೂಪಣೆಯು ಉಪಯುಕ್ತವೇ ಆಗಿದೆ. ಸಮನ್ವಯ ಸಾಧಿಸಬೇಕಾದ ಶಬ್ದಗಳಲ್ಲಿ ಮೂರು ರೀತಿಯುಂಟು. ಪ್ರಸ್ತುತ ಈ ಸೂತ್ರದಿಂದ ಆರಂಭಿಸಿ ಮೊದಲನೆಯ ಅಧ್ಯಾಯದ ಮೊದಲನೆಯ ಪಾದದಲ್ಲಿ, ಬೇರೆ ಕಡೆಗಳಲ್ಲಿ ಪ್ರಸಿದ್ಧವಾದ ನಾಮಾತ್ಮಕ ಶಬ್ದಗಳಿಗೆ ಬ್ರಹ್ಮನಲ್ಲಿ ಸಮನ್ವಯವನ್ನು ಸಾಧಿಸುತ್ತಾರೆ. ಈ ಅಧಿಕರಣದಲ್ಲಿ ಗುಣಿಸಾಮಾನ್ಯವಾಚಕಗಳಾದ ಆನಂದಮಯಾದಿ ಶಬ್ದಗಳಿಗೂ ಗುಣವಾಚಕಗಳಾದ ಆನಂದ ಮೊದಲಾದ ಶಬ್ದಗಳಿಗೂ ಬ್ರಹ್ಮನಲ್ಲಿ ಸಮನ್ವಯವನ್ನು ಸಾಧಿಸುತ್ತಾರೆ.

## ಅನ್ಯತ್ರಪ್ರಸಿದ್ಧ ನಾಮಾತ್ಮಕ ಶಬ್ದಗಳ ಸಮನ್ವಯ

**ತತ್ರಾನ್ಯತ್ರಪ್ರಸಿದ್ಧಾನಾಂ ವಿಷ್ಣಾವೇವ ಸಮನ್ವಯಂ ||೧೫೫||**

**ಶಬ್ದಾನಾಂ ಪ್ರಥಮೇ ಪಾದೇ ಗುಣಿಸಾಮಾನ್ಯವಾಚಿನಾಂ |**

**ಗುಣವಾಚಿನಾಂ ಚ ಪ್ರಥಮಮಾಹ ದೇವಃ ಸಮನ್ವಯಂ ||೧೫೬||**

ಸಮನ್ವಯ ಸಾಧಿಸಬೇಕಾದ ಶಬ್ದಗಳಲ್ಲಿ ಬೇರೆಕಡೆಗಳಲ್ಲಿ ಪ್ರಸಿದ್ಧಗಳಾದ ನಾಮಾತ್ಮಕ ಶಬ್ದಗಳಿಗೆ ವಿಷ್ಣುವಿನಲ್ಲಿಯೇ ಸಮನ್ವಯವನ್ನು ಮೊದಲನೇ ಅಧ್ಯಾಯದ ಮೊದಲನೇ ಪಾದದಲ್ಲಿ ಸೂತ್ರಕಾರರು ಹೇಳುತ್ತಾರೆ. ಅದರಲ್ಲಿಯೂ ಮೊದಲಿಗೆ ಈ ಅಧಿಕರಣದಲ್ಲಿ ಗುಣಿವಾಚಕಗಳಾದ ಆನಂದಮಯ ಮೊದಲಾದ ಶಬ್ದಗಳಿಗೂ, ಗುಣವಾಚಕಗಳಾದ ಆನಂದ ಮೊದಲಾದ ಶಬ್ದಗಳಿಗೂ ಮುಖ್ಯವೃತ್ತಿಯಿಂದ ಸಮನ್ವಯವನ್ನು ಹೇಳಿದರು.

**ವಿವರಣೆ:** ವೇದದಲ್ಲಿರುವ ಶಬ್ದಗಳಲ್ಲಿ ನಾಲ್ಕು ವಿಧ. ಕೆಲವು ಶಬ್ದಗಳು, ತತ್ರೈವ ಅಂದರೆ ಬ್ರಹ್ಮನಲ್ಲಿಯೇ ಪ್ರಸಿದ್ಧಗಳು, ಮತ್ತೆ ಕೆಲವು ಅನ್ಯತ್ರ ಅಂದರೆ ಬೇರೆಕಡೆಗಳಲ್ಲಿಯೂ ಪ್ರಸಿದ್ಧಗಳು, ಇನ್ನೂ ಕೆಲವು ಉಭಯತ್ರ ಅಂದರೆ ಬ್ರಹ್ಮನಲ್ಲಿಯೂ ಮತ್ತು ಬೇರೆಕಡೆಗಳಲ್ಲಿಯೂ ಪ್ರಸಿದ್ಧಗಳು, ಉಳಿದ ಕೆಲವು ಅನ್ಯತ್ರೈವ ಪ್ರಸಿದ್ಧಗಳು. ಇವುಗಳಲ್ಲಿ ಬ್ರಹ್ಮನಲ್ಲಿಯೇ ಪ್ರಸಿದ್ಧವಾದ ಶಬ್ದಗಳಿಗೆ ಪುನಃ ಬ್ರಹ್ಮನಲ್ಲಿ ಸಮನ್ವಯ ಸಾಧಿಸಬೇಕಾದ ಅವಶ್ಯಕತೆಯಿಲ್ಲ. ಉಳಿದ ಮೂರುವಿಧಗಳಾದ ಶಬ್ದಗಳಿಗೆ ಸಮನ್ವಯವನ್ನು ಸಾಧಿಸಬೇಕಾಗುವುದು. ಈ ಮೂರುವಿಧಗಳಲ್ಲಿಯೂ ನಾಮಾತ್ಮಕ ಮತ್ತು ಲಿಂಗಾತ್ಮಕ ಎಂಬುದಾಗಿ ಎರಡೆರಡು ವಿಧಗಳಿವೆ. ಇವುಗಳಲ್ಲಿ ಸಾಕ್ಷಾತ್ತಾಗಿ ಧರ್ಮಿಯನ್ನು ಹೇಳುವ ಶಬ್ದಗಳಿಗೆ ನಾಮಾತ್ಮಕಶಬ್ದಗಳೆಂದೂ, ಧರ್ಮದ್ವಾರಾ ಧರ್ಮಿಯನ್ನು ಹೇಳುವ ಶಬ್ದಗಳಿಗೆ ಲಿಂಗಾತ್ಮಕಶಬ್ದಗಳೆಂದೂ ಹೆಸರು. ಸಮನ್ವಯವನ್ನು ಹೇಳಬೇಕಾದ ಮೂರುವಿಧವಾದ ಶಬ್ದಗಳಲ್ಲಿ ಅನ್ಯತ್ರಪ್ರಸಿದ್ಧಗಳಾದ ಶಬ್ದಗಳಿಗೆ ವಿಷ್ಣುವಿನಲ್ಲಿ ಸಮನ್ವಯವನ್ನು ಸೂತ್ರಕಾರರು ಮೊದಲನೇ ಅಧ್ಯಾಯದ ಮೊದಲನೇ ಪಾದದಲ್ಲಿ ನಿರೂಪಿಸುವರು.

ತೈತ್ತರೀಯೋಪನಿಷತ್ತಿನಲ್ಲಿ 'ಸವಾ ಏಷ ಪುರುಷೋಽನ್ನರಸಮಯಃ' ಎಂಬುದಾಗಿ ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ

ಹಾಗೂ ಆನಂದಮಯರು ಉಕ್ತರಾಗಿದ್ದಾರೆ. ಅನ್ನಮಯಾದಿ ಐದರಲ್ಲಿಯೂ ಬ್ರಹ್ಮ ಶಬ್ದವು ಶ್ರುತವಾಗಿದೆ. ಬ್ರಹ್ಮ ಶಬ್ದಕ್ಕೆ ವಿಷ್ಣುವಿನಲ್ಲಿಯೂ ಬೇರೆಕಡೆಗಳಲ್ಲಿಯೂ ಪ್ರಯೋಗವಿದೆ. ಮಯಟ್ ಪ್ರತ್ಯಯವು ವಿಕಾರಾರ್ಥದಲ್ಲಿ ಪ್ರಯೋಗಿಸಲ್ಪಟ್ಟಿದೆ. 'ನಿರ್ವಿಕಾರೋಽಕ್ಷರಃ ಶುದ್ಧಃ' ಇತ್ಯಾದಿ ಪ್ರಮಾಣಗಳಿರುವ ಪ್ರಯುಕ್ತ ವಿಕಾರವು ಪರಬ್ರಹ್ಮನಲ್ಲಿ ಕೂಡುವುದಿಲ್ಲ. ಶರೀರಾದಿ ಕೋಶಗಳಲ್ಲಿ ಕೂಡುತ್ತದೆ. 'ಬ್ರಹ್ಮವಿದಾಪ್ನೋತಿ ಪರಂ' ಎಂದು ಪ್ರಕೃತನಾದ ಪರಬ್ರಹ್ಮನು 'ಬ್ರಹ್ಮಪುಚ್ಛಂ ಪ್ರತಿಷ್ಠಾ' ಎನ್ನುವುದರಿಂದ ಆನಂದಮಯನಿಗೆ ಅವಯವನೆಂದು ತೋರುತ್ತದೆ. ವಿರುದ್ಧವಾಗಿರುವುದರಿಂದ ಅವಯವ ಮತ್ತು ಅವಯವಿಭಾವಗಳು ಒಂದೇ ವಸ್ತುವಿನಲ್ಲಿ ಕೂಡಲಾರದು. ಆದಕಾರಣ ಇಲ್ಲಿ ಪ್ರಸ್ತುತವಾಗಿರುವ ಅನ್ನಮಯಾದಿ ಶಬ್ದಗಳಿಂದ ಪರಬ್ರಹ್ಮನು ವಾಚ್ಯನಾಗಲಾರನು, ಅನ್ನಮಯಾದಿ ಕೋಶಗಳೇ ವಾಚ್ಯವು ಎಂದು ಆಶಂಕಿಸಿದರೆ -

## ಆನಂದಮಯಾದಿಗಳು ವಿಷ್ಣುವನ್ನೇ ಹೇಳುತ್ತವೆ

**ಸಮುದ್ರಶಾಯಿನಂ ಸರ್ವಪ್ರಸೂತಿಪ್ರಭವಂ ಶ್ರುತಿಃ ।**
**ತದೇವ ಬ್ರಹ್ಮಪರಮಮಿತಿ ಸಾವಧೃತಿರ್ಜಗೌ ॥೧೫೭॥**
**ಯತೋಽತೋ ಬ್ರಹ್ಮಶಬ್ದಸ್ಯ ತತ್ರೈವ ನಿಯತತ್ವತಃ ।**
**ಯೇಽನ್ನಂ ಬ್ರಹ್ಮೇತ್ಯಾದಿರೂಪಾದಭ್ಯಾಸಾತ್ತೈತ್ತಿರೀಯಕೇ ॥೧೫೮॥**
**ಅನ್ಯಾಸು ಚೈತದ್ರೂಪಾಸು ಶಾಖಾಸ್ವಪಿ ಸಹಸ್ರಶಃ ।**
**ಆನಂದಮಯ ಇತ್ಯಾದ್ಯೈಃ ಶಬ್ದೈರ್ವಾಚ್ಯೋ ಹರಿಃ ಸ್ವಯಂ ॥೧೫೯॥**

ಎಲ್ಲರ ಉತ್ಪತ್ತಿಗೂ ಕಾರಣಳಾದ ಲಕ್ಷ್ಮೀದೇವಿಯ ಉತ್ಪತ್ತಿಗೂ ಕಾರಣನಾಗಿರುವ ಸಮುದ್ರಶಾಯಿಯಾದ ವಿಷ್ಣುವೇ ಬ್ರಹ್ಮ ಶಬ್ದದಿಂದ ವಾಚ್ಯನೆಂಬುದೇ ಬ್ರಹ್ಮಾದಿ ಎಲ್ಲ ಜ್ಞಾನಿಗಳ ಮತ ಎಂದು ಶ್ರುತಿಯು ಸಮರ್ಥನಪೂರ್ವಕವಾಗಿ ಹೇಳಿರುವುದರಿಂದ ಬ್ರಹ್ಮಶಬ್ದಕ್ಕೆ ವಿಷ್ಣುವಿನಲ್ಲಿಯೇ ವ್ಯಾಪ್ತತ್ವವಿದೆ. 'ಯೇನ್ನಂ ಬ್ರಹ್ಮ' ಇತ್ಯಾದಿ ರೂಪದಿಂದ ಉದಾಹೃತಗಳಾದ ಶ್ಲೋಕಗಳಲ್ಲಿ ಬ್ರಹ್ಮಶಬ್ದಕ್ಕೆ ಅಭ್ಯಾಸವಿದ್ದ ಪ್ರಯುಕ್ತ, ತೈತ್ತರೀಯ ಶ್ರುತಿ ಹಾಗೂ ಇದೇ ರೀತಿಯ ಇತರ ಸಾವಿರಾರು ಶಾಖೆಗಳಲ್ಲಿಯೂ ಆನಂದಮಯ

ಮೊದಲಾದ ಶಬ್ದಗಳಿಂದ ಸಾಕ್ಷಾತ್ ಶ್ರೀಹರಿಯೇ ವಾಚ್ಯನಾಗಿದ್ದಾನೆ.

ಸೂತ್ರದಲ್ಲಿ ಆನಂದಮಯ ಎಂದಿಷ್ಟೇ ಪ್ರತಿಜ್ಞೆ ಮಾಡಿರುವುದರಿಂದ 'ಆನಂದಮಯ ಇತ್ಯಾದ್ಯೈಃ' ಎಂಬ ವ್ಯಾಖ್ಯಾನ ಹೇಗೆ ಕೂಡುವುದು ಎಂದು ಕೇಳಿದರೆ -

**ಉಪಲಕ್ಷಣತ್ವಂ ಶಬ್ದಾನಾಮಾನಂದಮಯಪೂರ್ವಿಣಾಂ ।**
**ಸೂತ್ರಸ್ಯಾಲ್ಪಾಕ್ಷರತ್ವೇನ ಸರ್ವಶಾಖಾವಿನಿರ್ಣಯೇ ॥೧೬೦॥**
**ಪುನಶ್ಚ ಪ್ರಾಪಕಾದ್ಧೇತೋಸ್ತತ್ರಾಧಿಕರಣಾಂತರಂ ।**
**ಸರ್ವೇ ವೇದಾ ಆಮನಂತಿ ಯತ್ಪದಂತ್ವಿತಿ ಹಿ ಶ್ರುತಿಃ ॥೧೬೧॥**

ಆನಂದಮಯ ಶಬ್ದವು ಸಮಾನನ್ಯಾಯದ ಬಲದಿಂದ ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ ಶಬ್ದಗಳಿಗೆ ಉಪಲಕ್ಷಣವು (ತನ್ನ ಅರ್ಥವನ್ನು ಬಿಡದೆ ಅನ್ಯಾರ್ಥ ಗ್ರಹಣಕ್ಕೆ ಕಾರಣವಾದುದೇ ಉಪಲಕ್ಷಣ). ಇದೇರೀತಿಯಾಗಿ ಮೇಲಿನ ಅಧಿಕರಣಗಳಲ್ಲಿ ಬರುವ ಆಕಾಶಾದಿ ಶಬ್ದಗಳೂ ಶಬ್ದಾಂತರಗಳಿಗೆ ಉಪಲಕ್ಷಕವು ಎಂದು ತಿಳಿಯಬೇಕು. ಇಲ್ಲಿ ಆನಂದಮಯ ಎಂಬ ಶಬ್ದದಿಂದ ಮುಖ್ಯಾರ್ಥಕ್ಕೆ ಬಾಧವು ತೋರದಿರುವಾಗ ಲಾಕ್ಷಣಿಕಾರ್ಥ ಮಾಡುವುದು ಅಸಂಗತ ಎಂದು ಹೇಳಿದರೆ, ಸೂತ್ರಸ್ಯಾಲ್ಪಾಕ್ಷರತ್ವೇನ ಎಂಬುದೇ ಅದಕ್ಕೆ ಉತ್ತರವಾಗಿದೆ. ಅಲ್ಪಾಕ್ಷರತ್ವ ಎಂಬುದು ಸೂತ್ರಗಳಿಗೆ ಲಕ್ಷಣವಾಗಿರುವುದರಿಂದ ಹಾಗೂ ಎಲ್ಲ ಶಾಖೆಗಳನ್ನು ಚೆನ್ನಾಗಿ ನಿರ್ಣಯ ಮಾಡುವುದೇ ಸೂತ್ರಗಳ ಪ್ರಯೋಜನವಾದ್ದರಿಂದ, ಒಂದು ಶಬ್ದದ ಪ್ರಯೋಗದಿಂದ ಸಮಾನ ನ್ಯಾಯವುಳ್ಳ ಅರ್ಥಾಂತರಗಳನ್ನು ಉಪಲಕ್ಷಣಯಾ ಯೋಜಿಸಿಕೊಳ್ಳಬೇಕು. ಹಾಗಾದರೆ ಮತ್ತೆ ಹೊಸ ಅಧಿಕರಣಗಳ ಅವಶ್ಯಕತೆಯೇಕೆ ಎಂದು ಪ್ರಶ್ನಿಸಿದರೆ, ಹೊಸದಾಗಿ ಮತ್ತೊಂದು ಹೇತುವು ತಲೆದೋರಿದಾಗ ಪುನಃ ಸಿದ್ಧಾಂತ ನಿರ್ಣಯಕ್ಕಾಗಿ ಹೊಸ ಅಧಿಕರಣಾರಂಭವು ಅಸಂಗತವಾಗುವುದಿಲ್ಲ ಎಂಬುದೇ ಸಮಾಧಾನ. ಸರ್ವ ವೇದಶಾಖೆಗಳೂ ಕಾರ್ಯಪರವಾಗಿಯೇ ಇರುವುದು, ಬ್ರಹ್ಮಪರವಾಗಿರುವುದು ಅತ್ಯಲ್ಪವು. ಆದಪ್ರಯುಕ್ತ ಸೂತ್ರಗಳಿಗೆ ಲಕ್ಷಣಾವನ್ನು ಆಶ್ರಯಿಸದೇ ನಿರ್ಣಯವು ಶಕ್ಯ ಎಂದು ಹೇಳಿದರೆ ಅದು

ಸರಿಯಲ್ಲ. ಏಕೆಂದರೆ ಎಲ್ಲ ವೇದಗಳೂ ಆ ಬ್ರಹ್ಮನನ್ನೇ ತಿಳಿಸಿಕೊಡುತ್ತವೆ ಎಂಬುದಾಗಿ ಶ್ರುತಿಯಿದೆ. ಉಪಲಕ್ಷಣತ್ವವನ್ನು ಆಶ್ರಯಿಸದಿದ್ದರೆ ಅನಂತಾನಂತ ವೇದಗಳಿಂದ ವಾಚ್ಯನಾದ ಪರಬ್ರಹ್ಮನನ್ನು ನಿರ್ಣಯಿಸುವುದು ಅಶಕ್ಯವಾಗುವುದರಿಂದ ಸೂತ್ರಗಳಿಗೆ ವಿಶ್ವತೋಮುಖತ್ವವೆಂಬ ಪ್ರಮುಖವಾದ ಲಕ್ಷಣಕ್ಕೆ ಭಂಗಬರುತ್ತದೆ. ಆದ್ದರಿಂದ ಉಪಲಕ್ಷಣಯಾ ಪ್ರತಿಪಾದನೆಯು ಯುಕ್ತವೇ ಆಗುವುದು.

ಹಾಗಾದರೆ ಶ್ರುತಿಯಲ್ಲಿ ಅನ್ನಮಯ ಎಂಬ ಶಬ್ದವು ಮೊದಲಿಗೆ ಉಕ್ತವಾಗಿರುವಾಗ ಸೂತ್ರಕಾರರು ಅದನ್ನು ಹಿಡಿಯದೇ ಆನಂದಮಯ ಶಬ್ದವನ್ನು ಪ್ರಯೋಗಿಸಿರುವದರಿಂದ ಸೂತ್ರಕಾರರಿಗೆ ಆನಂದಮಯನನ್ನು ಹೇಳುವುದರಲ್ಲಿ ಮಾತ್ರ ತಾತ್ಪರ್ಯವಿರಬೇಕು ಎಂದು ಆಶಂಕಿಸಿದರೆ -

**ಆನಂದಮಯ ರೂಪೇ ತು ಬ್ರಹ್ಮಣಃ ಪುಚ್ಛತೋಕ್ತಿತಃ ।**
**ಸಮಸ್ತಾಬ್ರಹ್ಮತಾ ಪ್ರಾಪ್ತೇರಾನಂದಮಯನಾಮ ಹಿ ॥೧೬೨॥**

ಆನಂದಮಯ ಎಂಬ ಈ ರೂಪದಲ್ಲಿ ಬ್ರಹ್ಮನಿಗೆ ಆನಂದಮಯನ ಪುಚ್ಛತ್ವವನ್ನು (ಆನಂದ ಆತ್ಮಾ ಬ್ರಹ್ಮಪುಚ್ಛಂ ಪ್ರತಿಷ್ಠಾ) ಹೇಳಿರುವ ಪ್ರಯುಕ್ತ, ಸರ್ವಾವಯವಿಯಾದ ಬ್ರಹ್ಮನಿಗೆ ಬ್ರಹ್ಮತ್ವವು (ಅಂದರೆ ಪೂರ್ಣತ್ವವು) ಪ್ರಾಪ್ತವಾಗದಿರುವುದರಿಂದ, ಅದನ್ನು ನಿರಾಕರಿಸುವುದಕ್ಕಾಗಿ, ಸೂತ್ರಕಾರರು ಇಲ್ಲಿ ಶ್ರುತ್ಯಾದಿ ಪ್ರಸಿದ್ಧವಾದ ಆನಂದಮಯ ನಾಮವನ್ನೇ ಗ್ರಹಣ ಮಾಡಿದ್ದಾರೆ. ಆದಕಾರಣ ಬ್ರಹ್ಮನು ಆನಂದಮಯನೇ ಹೊರತು ಪುಚ್ಛವಲ್ಲ. ಇಲ್ಲದಿದ್ದರೆ ಬ್ರಹ್ಮನಿಗೆ ಅವಯವತ್ವವೇ ಸಿದ್ಧಿಸುವುದಿಲ್ಲವಾದ್ದರಿಂದ ಬ್ರಹ್ಮಜಿಜ್ಞಾಸೆಯೇ ಕೂಡುವುದಿಲ್ಲ.

ಹಾಗಾದರೆ ಆನಂದಮಯ ಶಬ್ದಕ್ಕೆ ಅನ್ನಮಯಾದಿ ಉಪಲಕ್ಷಣತ್ವವನ್ನೇ ಏಕೆ ಒಪ್ಪಬೇಕು ಎಂದು ಕೇಳಿದರೆ -

**ಬ್ರಹ್ಮಶಬ್ದಸ್ಯ ಚಾಭ್ಯಾಸಾತ್ಪಂಚರೂಪಾದಿಷು ಸ್ಫುಟಂ ।**
**ಬ್ರಹ್ಮತಾಽವಯವೇಽಪಿ ಸ್ಯಾತ್ತಥಾಽವಯವಿನಿ ಸ್ವತಃ ॥೧೬೩॥**
**ಯಥೈವ ಕೃಷ್ಣಕೇಶಸ್ಯ ಕೃಷ್ಣಸ್ಯ ಬ್ರಹ್ಮತಾಽಖಿಲಾ ।**
**ದರ್ಶಿತಾ ಚೈವ ಪಾರ್ಥಾಯ ನಿಸ್ಸೀಮಾಃ ಶಕ್ತಯೋಽಸ್ಯ ಹಿ ॥೧೬೪॥**

ಅನ್ನಮಯಾದಿ ರೂಪಗಳನ್ನು ಪ್ರತಿಪಾದಿಸುವ ಎಲ್ಲ ಐದು ಪ್ರಕರಣಗಳಲ್ಲಿಯೂ ಸ್ಪಷ್ಟವಾಗಿ ಬ್ರಹ್ಮಶಬ್ದಕ್ಕೆ ಅಭ್ಯಾಸವಿರುವುದು. 'ಬ್ರಹ್ಮಪುಚ್ಛಂ ಪ್ರತಿಷ್ಠಾ' ಎಂದು ಬ್ರಹ್ಮನ ಅವಯವಗಳಿಗೆ ಪೂರ್ಣತ್ವವನ್ನು ಹೇಳಿರುವುದರಿಂದ, ಅವಯವಿಯಾದ ಬ್ರಹ್ಮನಿಗೂ ಪೂರ್ಣತ್ವವು ಸ್ವತಃ ಸಿದ್ಧವೇ ಆಗುವುದು. ಹೇಗೆ ಮೂಲರೂಪದ ಅವಯವ ಸ್ವರೂಪನಾದ ಕೃಷ್ಣಕೇಶರೂಪನಾದ ಕೃಷ್ಣನಿಗೆ ಮೂಲರೂಪದಂತೆಯೇ ಪೂರ್ಣತ್ವವುಂಟೋ, ಹಾಗೆಯೇ ಬ್ರಹ್ಮನ ಪುಚ್ಛವೆಂದು ಹೇಳಿರುವ ಆನಂದಮಯನಿಗೂ ಪೂರ್ಣತ್ವ ರೂಪವಾದ ಬ್ರಹ್ಮತ್ವವು ಬಂದೇ ಬರುವುದು. ಶ್ರೀಕೃಷ್ಣನಿಂದ ಪಾರ್ಥನಿಗಾಗಿ ಪೂರ್ಣತ್ವ ಪ್ರತಿಪಾದಕವಾದ ವಿಶ್ವರೂಪವು ಪ್ರದರ್ಶಿಸಲ್ಪಟ್ಟಿದೆ. ಶ್ರೀಹರಿಗೆ ನಿರವಧಿಕವಾದ ಶಕ್ತಿಗಳು ಪ್ರಮಾಣಸಿದ್ಧವೇ ಆಗಿವೆ.

'ಋತಂ ಸತ್ಯಂ ಪರಂ ಬ್ರಹ್ಮ ಪುರುಷಂ ಕೃಷ್ಣಪಿಂಗಲಂ। ಊರ್ಧ್ವರೇತಂ ವಿರೂಪಾಕ್ಷಂ ಶಂಕರಂ ನೀಲಲೋಹಿತಂ॥' ಎನ್ನುವ ತಾಪನೀಯ ಶ್ರುತಿಯಲ್ಲಿ ರುದ್ರನಲ್ಲಿಯೂ ಪರಬ್ರಹ್ಮ ಶಬ್ದವು ಶ್ರುತವಾಗಿದೆ. ಆದಪ್ರಯುಕ್ತ ಬ್ರಹ್ಮಶಬ್ದದ ಆಧಾರದಿಂದ ಅನ್ನಮಯಾದಿಗಳಿಗೆ ಪರಬ್ರಹ್ಮತ್ವವನ್ನು ಹೇಳಲು ಆಗುವುದಿಲ್ಲ ಎಂದು ಹೇಳಿದರೆ -

ಪರಬ್ರಹ್ಮವಾಚ್ಯತ್ವ ರುದ್ರನಲ್ಲಿ ಕೂಡುವುದಿಲ್ಲ

**ಋತಂ ಸತ್ಯಂ ಪರಂ ಬ್ರಹ್ಮ ಪುರುಷಂ ಕೃಷ್ಣಪಿಂಗಲಂ ।**
**ವಿಷ್ಣ್ವಾಖ್ಯಮುಕ್ತಮನ್ಯತ್ರ ಹ್ಯೂರ್ಧ್ವರೇತಂ ಚ ತತ್ಪ್ರತಿ ॥೧೬೫॥**
**ವಿರೂಪಾಕ್ಷಾಖ್ಯಮಪರಂ ಬ್ರಹ್ಮೋಕ್ತಂ ತದ್ವ್ರತೇ ಸ್ಥಿತಂ ।**
**ಸಮಾನಾಧಿಕೃತತ್ವಂ ಚೇದುತ್ತರಂ ನೀಲಲೋಹಿತಂ ॥೧೬೬॥**
**ಕೃಷ್ಣಪಿಂಗಲರೂಪೇಣ ಪುನರುಕ್ತಂ ಭವಿಷ್ಯತಿ ।**

ಯಥಾರ್ಥಜ್ಞಾನಸ್ವರೂಪನು, ಜಗದಾದಿಗಳನ್ನು ಸೃಷ್ಟಿಸಿದವನು, ಪೂರ್ಣಗಳಾದ ಷಡ್ಗುಣಗಳನ್ನು ಹೊಂದಿರುವನು, ಕಪ್ಪು-ಕೆಂಪು ಬಣ್ಣಗಳಿಂದ ಶೋಭಿಸುವವನು, ವಿಷ್ಣುವೆಂಬ ಹೆಸರುಳ್ಳವನೂ ಆದ ಪರಬ್ರಹ್ಮನು ಪೂರ್ವಾರ್ಧದಲ್ಲಿ ಉಕ್ತನಾಗಿದ್ದಾನೆ. ಉತ್ತರಾರ್ಧದಲ್ಲಿ ವಿರೂಪಾಕ್ಷನೆಂಬ ಹೆಸರುಳ್ಳ ಅಪರಬ್ರಹ್ಮನು ವಿಷ್ಣುವನ್ನು ಕುರಿತು ಊರ್ಧ್ವರೇತಸ್ಸುಳ್ಳವನು

ಹಾಗೂ ವಿಷ್ಣುಪ್ರೀತಿಕರವಾದ ವ್ರತದಲ್ಲಿ ತೊಡಗಿರುವನೆಂದು ಹೇಳಲ್ಪಟ್ಟಿದ್ದಾನೆ. ಪೂರ್ವಾರ್ಧ ಮತ್ತು ಉತ್ತರಾರ್ಧಗಳಿಗೆ ಏಕವಿಷಯತ್ವವನ್ನು ಇಟ್ಟುಕೊಂಡರೆ, ಕೃಷ್ಣಪಿಂಗಲ ಮತ್ತು ನೀಲಲೋಹಿತ ಪದಗಳು ಏಕಾರ್ಥವಾದುದರಿಂದ ಉತ್ತರಾರ್ಧಕ್ಕೆ ಪುನರುಕ್ತಿ ದೋಷ ಬರುವುದು. ಆದ್ದರಿಂದ ಭಿನ್ನವಿಷಯತ್ವವನ್ನು ಅಂಗೀಕರಿಸುವುದೇ ಸೂಕ್ತ.

ರುದ್ರನಿಗೂ ಮತ್ತೊಬ್ಬ ಅಧಿಪತಿಯು ಹೇಳಲ್ಪಟ್ಟಿರುವುದರಿಂದ ಆತನಿಗೆ ಪರಬ್ರಹ್ಮತ್ವವು ಬರುವುದು ಸಾಧ್ಯವಿಲ್ಲ. ಈ ಕಾರಣದಿಂದಲೂ ಪೂರ್ವಾರ್ಧವು ರುದ್ರವಿಷಯಕವಲ್ಲವೆಂದು ನಿರೂಪಿಸುತ್ತಾರೆ -

**ಬ್ರಹ್ಮಾಧಿಪತಿರಿತ್ಯತ್ರ ತಾಪನೀಯ ಶ್ರುತೌ ಪುರಃ ॥೧೬೭॥**
**ಸ್ವರಿತಬ್ರಹ್ಮಶಬ್ದಾಂತಂ ಬಹುವ್ರೀಹಿತ್ವಮೇಷ್ಯತಿ ।**
**ಸ್ವಾಹೇಂದ್ರಶತ್ರುರ್ವರ್ಧಸ್ವ ಯದ್ವಹುವ್ರೀಹಿತಾಮಗಾತ್ ॥೧೬೮॥**
**ತಸ್ಮಾದಸ್ಯೇಂದ್ರ ಏವಾಭೂಚ್ಛತ್ರುರಿತ್ಯುತ್ತರಶ್ರುತೇಃ ।**
**ಪೂರ್ವಾಂತಸ್ವರಿತೇ ಪುಂಸೋರ್ಬಹುವ್ರೀಹಿತ್ವಮೇಷ್ಯತಿ ॥೧೬೯॥**
**ಮಹಾವ್ಯಾಕರಣೇ ಸೂತ್ರಮಿತಿ ಸ್ವರವಿನಿರ್ಣಯೇ ।**

ಈ ತಾಪನೀಯ ಶ್ರುತಿಯಲ್ಲಿಯೇ ಋತಂ ಎನ್ನುವ ವಾಕ್ಯದಿಂದ ಮುಂದಿನ ವಾಕ್ಯದಲ್ಲಿ ಬ್ರಹ್ಮನೇ ಅಧಿಪತಿಯಾಗುಳ್ಳವನೆಂದು ರುದ್ರನಿಗೆ ಪರಾಧೀನತ್ವವನ್ನು ಹೇಳುವ ಬ್ರಹ್ಮಾಧಿಪತಿ ಎನ್ನುವ ಪದವಿದೆ. ಅಂತ್ಯದಲ್ಲಿ ಸ್ವರಿತ ಸ್ವರವುಳ್ಳ ಬ್ರಹ್ಮಶಬ್ದಘಟಿತವಾದ ಬ್ರಹ್ಮಾಧಿಪತಿ ಎನ್ನುವ ಪದವು ಬಹುವ್ರೀಹಿ ಸಮಾಸತ್ವವನ್ನು ('ಬ್ರಹ್ಮ ಅಧಿಪತಿರ್ಯಸ್ಯ' ಎಂದು) ಹೊಂದುವುದು. 'ಇಂದ್ರ ಶತ್ರುರ್ವರ್ಧಸ್ವ ಸ್ವಾಹಾ' ಎನ್ನುವ ಮಂತ್ರದಲ್ಲಿ ಇಂದ್ರಶತ್ರು ಎನ್ನುವ ಪದವು ಅಂತ್ಯದಲ್ಲಿ ಸ್ವರಿತ ಸ್ವರವುಳ್ಳ ಇಂದ್ರಶಬ್ದದ ನಿಮಿತ್ತವಾಗಿ ಬಹುವ್ರೀಹಿಸಮಾಸತ್ವವನ್ನು ಹೊಂದಿರುವಂತೆ ಬ್ರಹ್ಮಾಧಿಪತಿ ಎನ್ನುವುದೂ ಕೂಡ ಬಹುವ್ರೀಹಿಯೇ ಆಗುವುದು. ಇಂದ್ರನಿಗೆ ವೃತ್ರಾಸುರನು ಶತ್ರುವಾಗಬೇಕೆಂಬ ತ್ವಷ್ಟೃವಿನ ಅಭಿಮತಕ್ಕೆ ವಿರುದ್ಧವಾಗಿ, ಮಂತ್ರದ ಉಚ್ಚಾರಣೆಯಲ್ಲಿ ಸ್ವರರಾಹಿತ್ಯ ದೋಷದಿಂದ, ವೃತ್ರಾಸುರನಿಗೆ ದೇವೇಂದ್ರನೇ ಶತ್ರು (ಸಂಹಾರಕನು) ಆದನು. ಮೇಲಿನ ದೃಷ್ಟಾಂತದಿಂದ ತಿಳಿದುಬರುವ

ಪ್ರಕಾರ 'ಇಂದ್ರ ಶತ್ರುಃ' ಎನ್ನುವಲ್ಲಿ ಬಹುವ್ರೀಹಿಸಮಾಸವೇ ಗ್ರಹಣವಾಯಿತು, ತತ್ಪುರುಷಸಮಾಸವಲ್ಲ ಎಂದು ನಿರ್ಣಯವಾಗುವುದು. ಇದು ಕೇವಲ ಉದಾಹರಣೆಯಿಂದ ನಿರ್ಧಾರವಾಗಬೇಕಿಲ್ಲ. ಪುಲ್ಲಿಂಗಗಳಾದ ಪದಗಳಲ್ಲಿ ಪೂರ್ವಾಂತಪದವು ಸ್ವರಿತವಾದರೆ ಬಹುವ್ರೀಹಿ ಸಮಾಸವನ್ನು ಹೊಂದುವುದು. ಹೀಗೆ ಮಹಾವ್ಯಾಕರಣದಲ್ಲಿ ಸ್ವರವಿನಿರ್ಣಯಕ್ಕೆ ಸಂಬಂಧಿಸಿದಂತೆ 'ಪೂರ್ವಾಂತಸ್ವರಿತೇ ಪುಂಸೋರ್ಬಹುವ್ರೀಹಿಃ' ಎಂಬ ಸೂತ್ರವು ಪಠಿತವಾಗಿದೆ.

**ಋತಂ ಸತ್ಯಂ ಪರಂ ಬ್ರಹ್ಮೇತ್ಯಾದ್ಯುದ್ದೇಶ್ಯ ದ್ವಿತೀಯಕಾ ॥೧೭೦॥**
**ವಿಭಕ್ತಿರೂರ್ಧ್ವರೇತಾದಿಃ ಪ್ರಥಮಾ ರುದ್ರಗೋಚರಾ ।**
**ತಸ್ಮಾದ್ವಿಷ್ಣುಂ ಪರಂ ಬ್ರಹ್ಮ ಪ್ರತಿ ರುದ್ರೋ ವ್ರತೇ ಸ್ಥಿತಃ ॥೧೭೧॥**
**ಊರ್ಧ್ವರೇತಾ ಇತಿ ಹ್ಯೇವ ಶ್ರುತ್ಯರ್ಥೋಽವಸಿತೋ ಭವೇತ್ ।**

ಋತಂ ಸತ್ಯಂ ಪರಂ ಬ್ರಹ್ಮ ಮೊದಲಾದ ಪದಸಮೂಹದಲ್ಲಿರತಕ್ಕ ಉದ್ದೇಶಸಹಿತವಾದ ದ್ವಿತೀಯಾ ವಿಭಕ್ತಿಯು ವಿಷ್ಣುವಿಷಯಕವಾದುದು. ಊರ್ಧ್ವರೇತಂ ಮೊದಲಾದ ಪದಸಮೂಹದಲ್ಲಿರತಕ್ಕ ಪ್ರಥಮಾ ವಿಭಕ್ತಿಯು ರುದ್ರವಿಷಯಕವು. ಆದಪ್ರಯುಕ್ತ ಹಿಂದೆ ಹೇಳಿದ ಯುಕ್ತಿಗಳಿಂದ ಪರಬ್ರಹ್ಮ ಶಬ್ದವಾಚ್ಯನಾದ ವಿಷ್ಣುವನ್ನು ಕುರಿತು ರುದ್ರನು ಊರ್ಧ್ವರೇತಸ್ಕನಾಗಿ ವಿಷ್ಣುವಿಗೆ ಪ್ರೀತಿ ಉಂಟುಮಾಡುವ ವ್ರತ ನಿಯಮದಲ್ಲಿದ್ದಾನೆ ಎಂಬುದೇ ಶ್ರುತಿಯ ನಿಶ್ಚಿತವಾದ ಅಭಿಪ್ರಾಯವಾಗುವುದು.

ಈ ಅರ್ಥವೇ ಯುಕ್ತವೆಂದು ಶ್ರುತ್ಯಂತರದಿಂದಲೂ ನಿರೂಪಿಸುತ್ತಾರೆ -

**ಋತಂ ಸತ್ಯಂ ಪರಂ ಬ್ರಹ್ಮ ಪ್ರತಿವಿಷ್ಣುಂ ಸದಾಶಿವಃ ॥೧೭೨॥**
**ಊರ್ಧ್ವರೇತಾ ಧ್ಯಾಯತಿ ಹ ಶಂಕರೋ ನೀಲಲೋಹಿತಃ ।**
**ಇತ್ಯರ್ಥಮೇತಮೇವಾಹ ನೀಲಗ್ರೀವಶ್ರುತಿಃ ಪರಾ ॥೧೭೩॥**
**ಅಥರ್ವಣೇ ಪರಂ ಬ್ರಹ್ಮ ತಸ್ಮಾದೇಕೋ ಹರಿಃ ಶ್ರುತೌ ।**

ಯಥಾರ್ಥಜ್ಞಾನಸ್ವರೂಪನೂ, ಜಗದಾದಿ ಸೃಷ್ಟಿಕರ್ತನೂ, ಪರಬ್ರಹ್ಮ ಶಬ್ದವಾಚ್ಯನೂ ಆದ ವಿಷ್ಣುವನ್ನು ಕುರಿತು ಸುಖಕರನೂ, ನೀಲಲೋಹಿತನೂ, ಊರ್ಧ್ವರೇತಸ್ಕನೂ ಆದ ಸದಾಶಿವನು ಭಕ್ತಿಪೂರ್ವಕ ಧ್ಯಾನಮಾಡುತ್ತಾನೆ ಎಂದು ಶ್ರುತಿಪ್ರಸಿದ್ಧವೇ ಆಗಿದೆ. ಮೇಲೆ ಉದಾಹರಿಸಿದ ತಾಪನೀಯ

ಶ್ರುತಿಯಿಂದ ಬೇರೆಯಾದ ಅಥರ್ವಣ ವೇದಕ್ಕೆ ಸೇರಿದ ನೀಲಗ್ರೀವ ಶ್ರುತಿಯು ಇದೇ ಅರ್ಥವನ್ನೇ ಪ್ರತಿಪಾದಿಸುತ್ತದೆ. ಆದಪ್ರಯುಕ್ತ 'ಋತಂ ಸತ್ಯಂ' ಎನ್ನುವ ಶ್ರುತಿಯಲ್ಲಿ ಉಕ್ತವಾಗಿರುವ ಪರಬ್ರಹ್ಮನು ಸರ್ವೋತ್ತಮನಾದ ಶ್ರೀಹರಿಯೇ ಆಗಿರುವನು.

'ಋತಂ ಸತ್ಯಂ' ಎನ್ನುವ ಶ್ರುತಿಯು ರುದ್ರನಿಗೆ ಋತತ್ವಾದಿಗಳನ್ನು ಹೇಳುತ್ತದೆ. 'ತದೇವರ್ತಂ' ಎನ್ನುವ ಶ್ರುತಿಯು ಅದನ್ನೇ ವಿಷ್ಣುವಿಗೆ ಹೇಳುತ್ತದೆ. ಹೀಗೆ ಎರಡು ಶ್ರುತಿಗಳ ಬಲದಿಂದ ವಿಷ್ಣು ಮತ್ತು ರುದ್ರರಿಗೂ ಪರಬ್ರಹ್ಮತ್ವವು ಕೂಡುವುದರಿಂದ ವಿಷ್ಣುವೇ ಪರಬ್ರಹ್ಮ ಎಂದು ಹೇಗೆ ನಿರ್ಧರಿಸುವಿರಿ ಎಂದು ಆಕ್ಷೇಪ ಬಂದರೆ ಅದಕ್ಕೆ ಬಾಧಕವನ್ನು ಹೇಳುತ್ತಾರೆ-

**ತದೇವರ್ತಮಿತಿ ಪ್ರಾಹ ಕಥಮೇವಾನ್ಯಥಾ ಶ್ರುತಿಃ ||೧೭೪||**

**ಅವಧಾರಯಂತೀ ತಸ್ಯೈವ ಹಿ ಋತತ್ವಾದಿಕಮಂಜಸಾ |**

'ಋತಂ ಸತ್ಯಂ' ಎನ್ನುವ ಶ್ರುತಿಯ ಪೂರ್ವಾರ್ಧ ರುದ್ರಪರವಾದರೆ, 'ತದೇವರ್ತಂ ತದು ಸತ್ಯಮಾಹುಃ ತದೇವ ಬ್ರಹ್ಮ ಪರಮಂ ಕವೀನಾಂ' ಎನ್ನುವ ಶ್ರುತಿಯು ಆ ವಿಷ್ಣುವಿನಲ್ಲಿಯೇ ಋತತ್ವಾದಿಗಳನ್ನು ಜ್ಞಾನಿಗಳಿಗೆ ಸಮ್ಮತಿಯಾಗುವಂತೆ ನಿರ್ಧಾರಕವಾಗಿ ಹೇಗೆ ತಾನೇ ಹೇಳಿತು? ಎರಡು ಶ್ರುತಿಗಳಿಗೆ ವಿರೋಧ ಬಂದರೆ, ಪ್ರಬಲ ಶ್ರುತಿಯಿಂದ ದುರ್ಬಲ ಶ್ರುತಿಗೆ ಬಾಧವು. ನಿಶ್ಚಯಪೂರ್ವಕವಾಗಿ ವಿಷ್ಣುವಿನಲ್ಲಿಯೇ ಪರಬ್ರಹ್ಮತ್ವವನ್ನು ಹೇಳುವ 'ತದೇವರ್ತಂ' ಎನ್ನುವ ಶ್ರುತಿಯೇ ಪ್ರಬಲವಾದುದು.

ಪ್ರಲಯ ಕಾಲದಲ್ಲಿ ರುದ್ರಾದಿಗಳು ಇರಲಿಲ್ಲ, ನಾರಾಯಣನೊಬ್ಬನೇ ಇದ್ದನು ಇತ್ಯಾದಿ ವಾಕ್ಯಗಳಿಂದ ರುದ್ರಾದಿಗಳಿಗೆ ಶ್ರೀಮನ್ನಾರಾಯಣನಿಂದ ಉತ್ಪತ್ತಿಯು ತಿಳಿದುಬರುವುದರಿಂದ, ರುದ್ರಾದಿಗಳಿಗೆ ಪರಬ್ರಹ್ಮವಾಚ್ಯತ್ವ ಇರುವುದಿಲ್ಲ ಎಂದು ನಿರೂಪಿಸುತ್ತಾರೆ -

**ಏಕೋ ನಾರಾಯಣ ಆಸೀನ್ನ ಬ್ರಹ್ಮಾ ನ ಚ ಶಂಕರಃ ||೧೭೫||**

**ವಾಸುದೇವೋಽಗ್ರ ಏವಾಸೀನ್ನ ಬ್ರಹ್ಮಾ ನ ಚ ಶಂಕರಃ |**

**ನೇಂದ್ರಸೂರ್ಯೌ ನ ಚ ಗುಹೋ ನ ಸೋಮೋ ನ ವಿನಾಯಕಃ||೧೭೬||**

**ಇತ್ಯಾದಿ ವಾಕ್ಯತೋ ವಿಷ್ಣೋರುತ್ಪತ್ತಿರವತಾರಗಾ |**

ಪ್ರಲಯ ಕಾಲದಲ್ಲಿ ಸರ್ವೋತ್ತಮನಾದ ನಾರಾಯಣನೊಬ್ಬನೇ ಇದ್ದನು, ಬ್ರಹ್ಮನೂ ಇರಲಿಲ್ಲ ಮತ್ತು ಶಂಕರನೂ ಇರಲಿಲ್ಲ. ಪ್ರಲಯ ಕಾಲದಲ್ಲಿ ವಾಸುದೇವನೊಬ್ಬನೇ ಇದ್ದನು, ಬ್ರಹ್ಮನಾಗಲೀ ಶಂಕರನಾಗಲೀ ಇರಲಿಲ್ಲ. ಇಂದ್ರ ಸೂರ್ಯರೂ ಇರಲಿಲ್ಲ. ಷಣ್ಮುಖನಾಗಲೀ ಚಂದ್ರನಾಗಲೀ ಗಣೇಶನಾಗಲೀ ಇರಲಿಲ್ಲ. ಇತ್ಯಾದಿ ವಾಕ್ಯಗಳಿಂದ ರುದ್ರಾದಿಗಳು ಪ್ರಲಯ ಕಾಲದಲ್ಲಿ ಇರಲಿಲ್ಲವೆಂದೂ, ಅವರಿಗೆ ವಿಷ್ಣುವಿನಿಂದ ಉತ್ಪತ್ತಿ ಎಂದೂ ತಿಳಿದುಬರುತ್ತದೆ. ವಿಷ್ಣುವಿಗೆ ಉತ್ಪತ್ತಿಯನ್ನು ಹೇಳುವಂತೆ ತೋರುವ ವಾಕ್ಯಗಳಿಗೆ, ಪ್ರಲಯಕಾಲದಲ್ಲಿಯೂ ವಿಷ್ಣುವಿಗೆ ಅಸ್ತಿತ್ವವನ್ನು ಹೇಳುವ ಮೇಲಿನ ವಾಕ್ಯಗಳ ಆಧಾರದಿಂದ, ಪ್ರಾದುರ್ಭಾವ ಎಂಬುದಾಗಿ ತಿಳಿಯಬೇಕು.

ಬ್ರಹ್ಮಶಬ್ದವು ಮುಖ್ಯವಾಗಿ ವಿಷ್ಣುವನ್ನೇ ಹೇಳುತ್ತದೆ. ಅಮುಖ್ಯವೃತ್ತಿಯಿಂದ ಬ್ರಹ್ಮಾದಿಗಳಲ್ಲಿ ಕೂಡುವುದು. ಆದಕಾರಣ ಆನಂದಮಯಾದಿ ಶಬ್ದಗಳಿಂದ ವಿಷ್ಣುವನ್ನೇ ಗ್ರಹಣ ಮಾಡಬೇಕು ಎಂದು ಹೇಳುತ್ತಾರೆ -

### ಬ್ರಹ್ಮನೇ ಆನಂದಮಯಾದಿ ಶಬ್ದವಾಚ್ಯನು

**ಮುಖ್ಯಂ ಬ್ರಹ್ಮ ಹರಿಸ್ತಸ್ಮಾತ್ಪ್ರಸ್ತಾವಃ ಪರಮಿತ್ಯಪಿ ॥೧೭೭॥**

**ಮುಖ್ಯಬ್ರಹ್ಮಗ್ರಹೇ ಯುಕ್ತೇ ನಾಮುಖ್ಯಂ ಯುಜ್ಯತೇ ಕ್ವಚಿತ್ ।**

**ಅಸಂಭವೇ ಹಿ ಮುಖ್ಯಸ್ಯ ಗೌಣಾರ್ಥಾಂಗೀಕೃತಿರ್ಭವೇತ್ ॥೧೭೮॥**

'ಬ್ರಹ್ಮವಿದಾಪ್ನೋತಿ ಪರಂ' ಎಂದು ಪರಬ್ರಹ್ಮನಿಗೇ ಪ್ರಸ್ತಾವ ಇರುವುದರಿಂದ, ಮುಖ್ಯವಾಗಿ ಬ್ರಹ್ಮಶಬ್ದವಾಚ್ಯನು ಶ್ರೀಹರಿಯೇ. ಸಾಕ್ಷಾತ್ತಾಗಿ ಮುಖ್ಯಾರ್ಥವು ಕೂಡುವಾಗ ಅಮುಖ್ಯಾರ್ಥವನ್ನು ಸ್ವೀಕರಿಸುವುದು ಎಲ್ಲಿಯೂ ಕಂಡಿಲ್ಲ. ಮುಖ್ಯಾರ್ಥವು ಕೂಡದಿದ್ದರೆ ಮಾತ್ರ ಅಮುಖ್ಯಾರ್ಥವನ್ನು ಅಂಗೀಕರಿಸಬೇಕು. ಹೀಗೆ ಆನಂದಮಯಾದಿ ಶಬ್ದವಾಚ್ಯತ್ವವು ಪರಬ್ರಹ್ಮನಾದ ವಿಷ್ಣುವಿನಲ್ಲಿಯೇ ಕೂಡುವುದು.

### ಪ್ರಾಚುರ್ಯಾರ್ಥದಲ್ಲಿ ಮಯಟ್ ಶಬ್ದ

ಮಯಟ್ ಪ್ರತ್ಯಯವು ವಿಕಾರವಾಚಕವು. ಬ್ರಹ್ಮನಲ್ಲಾದರೋ ವಿಕಾರವು ಕೂಡುವುದಿಲ್ಲ. ಆದ್ದರಿಂದ ಅನ್ನಮಯಾದಿ ಶಬ್ದವಾಚ್ಯನು ಬ್ರಹ್ಮನಲ್ಲ ಎಂದರೆ-

**ಸೂತ್ರ: ಓಂ ವಿಕಾರಶಬ್ದಾನ್ನೇತಿ ಚೇನ್ನ ಪ್ರಾಚುರ್ಯಾತ್ ಓಂ (೧-೧-೧೩)**

ವಿಕಾರಾರ್ಥಕವಾದ ಮಯಟ್ ಶಬ್ದವಿರುವ ಪ್ರಯುಕ್ತ ಅನ್ನಮಯಾದಿ ಶಬ್ದವಾಚ್ಯನು ಪರಬ್ರಹ್ಮನಲ್ಲ ಎಂದರೆ, ಹೀಗೆ ಹೇಳಕೂಡದು. ಇಲ್ಲಿ ಮಯಟ್ ಶಬ್ದವು ಪ್ರಾಚುರ್ಯಾರ್ಥದಲ್ಲಿ ಪ್ರಯೋಗಿಸಲ್ಪಟ್ಟಿದೆ.

ಈ ಸೂತ್ರದಲ್ಲಿ ಹೇಳಿರುವ ಸಿದ್ಧಾಂತವನ್ನು ಶ್ರೀಮದಾಚಾರ್ಯರು ಮುಂದಿನ ವಾಕ್ಯಗಳಲ್ಲಿ ವ್ಯಾಖ್ಯಾನ ಮಾಡುತ್ತಾರೆ -

**ಪ್ರಾಚುರ್ಯಾರ್ಥಾಶ್ಚ ಮಯಟಃ ಸರ್ವೇಽತ್ರ ಪ್ರತಿಪಾದಿತಾಃ ।**

ಪರಬ್ರಹ್ಮನಿಗೆ ಆನಂದಮಯಾದಿವಾಚ್ಯತ್ವವನ್ನು ಹೇಳುವ ಈ ಶ್ರುತಿಯಲ್ಲಿ ಬಂದಿರತಕ್ಕ ಎಲ್ಲ ಮಯಟ್ ಶಬ್ದಗಳೂ ಪ್ರಾಚುರ್ಯಾರ್ಥದಲ್ಲಿಯೇ ಪ್ರತಿಪಾದಿತವಾಗಿವೆ.

**ವಿವರಣೆ:** 'ತತ್ಪ್ರಕೃತವಚನೇ ಮಯಟ್' ಎನ್ನುವ ಪಾಣಿನೀಸೂತ್ರದ ಪ್ರಕಾರ ಮಯಟ್ ಶಬ್ದವು ವಿಕಾರಾರ್ಥದಲ್ಲಿರುವಂತೆಯೇ ಪ್ರಾಚುರ್ಯಾರ್ಥದಲ್ಲಿಯೂ ಮುಖ್ಯವಾಗಿದೆ. ಪೂರ್ಣನಾದ ಪರಬ್ರಹ್ಮನಿಗೆ ವಿಕಾರಾರ್ಥವು ಕೂಡುವುದಿಲ್ಲ. ಆದಪ್ರಯುಕ್ತ ಇಲ್ಲಿ ಪ್ರಾಚುರ್ಯಾರ್ಥವನ್ನೇ ಗ್ರಹಿಸಬೇಕು. 'ವಿಕಾರಪ್ರಧಾನ-ಪ್ರಾಚುರ್ಯೇಷು ಮಯಟ್' ಎಂದು ವಿದ್ವಾಂಸರಲ್ಲಿ ಪ್ರಯೋಗವಿದೆ.

ಅನ್ನಮಯ ಎನ್ನುವುದಕ್ಕೆ ಅನ್ನವಿಕಾರವು ಹೇಗೆ ಕೂಡುವುದಿಲ್ಲವೋ ಹಾಗೆಯೇ ಅನ್ನಪ್ರಾಚುರ್ಯವೆನ್ನುವ ಅರ್ಥವೂ ವಿಷ್ಣುವಿನಲ್ಲಿ ಕೂಡಲಾರದು. ಅನ್ನವನ್ನೇ ಉಪಜೀವಿಸಿಕೊಂಡು ಬದುಕಿರುವ ಪಾರ್ಥಿವ ಶರೀರಗಳಿಗೆ ಅನ್ನಮಯ ಎನ್ನುವುದಕ್ಕೆ ಪ್ರಾಚುರ್ಯಾರ್ಥವು ಕೂಡಬಹುದು. ಹೀಗೆ ಹೇಳುವುದು ಸರಿಯಲ್ಲ. ಏಕೆಂದರೆ ಈ ಶ್ರುತಿಯಲ್ಲಿರುವ ಅನ್ನ ಶಬ್ದಕ್ಕೆ ಪ್ರಸಿದ್ಧವಾದ ಅನ್ನವೆಂದು ಅರ್ಥವಲ್ಲ. 'ಅದ್ಯತೇಽತ್ತಿ ಚ ಭೂತಾನಿ ತಸ್ಮಾದನ್ನಂ ತದುಚ್ಯತೇ' ಎಂದ ಶ್ರುತಿಯು ಅನ್ನ ಶಬ್ದಕ್ಕೆ ನಿರ್ವಚನವನ್ನು ಹೇಳುತ್ತದೆ. ಈ ಶ್ರುತಿಯ ಪ್ರಕಾರ ಅನ್ನ ಶಬ್ದಕ್ಕೆ 'ಪ್ರಾಣಿಗಳನ್ನು ತಿನ್ನುವುದು' ಮತ್ತು 'ಪ್ರಾಣಿಗಳಿಂದ ತಿನ್ನಲ್ಪಡುವಿಕೆ' ಎಂಬ ಅರ್ಥಗಳು ಪ್ರಧಾನವಾಗಿವೆ. ಪರಮೇಶ್ವರನಲ್ಲಿ ಮೊದಲನೆಯ ಅರ್ಥವು ಕೂಡಬಹುದಾದರೂ, ಎರಡನೆಯ ಅದ್ಯತ್ವರೂಪವಾದ ಅರ್ಥವು ಕೂಡುವುದಿಲ್ಲ. ಆದಕಾರಣ ಅನ್ನಮಯ

ಎನ್ನುವುದು ಪರಮೇಶ್ವರನಲ್ಲಿ ಕೂಡುವುದಿಲ್ಲ ಎಂದರೆ -

**ಭೋಗ್ಯತ್ವಮತ್ರ ಚಾದ್ಯತ್ವಮುಪಜೀವ್ಯತಯಾ ಹರೇಃ ||೧೭೯||**

**ಮಹಾಭೋಕ್ತಾ ಮಹಾಭೋಗ್ಯ ಇತ್ಯರ್ಥೋऽನ್ನಮಯೇ ಭವೇತ್ |**

**ಮಹಾಪ್ರಾಣೋ ಮಹಾಬೋಧೋ ಮಹಾವಿಜ್ಞಾನವಾನಪಿ ||೧೮೦||**

ಈ ಶ್ರುತಿಯಲ್ಲಿ ಅದ್ಯತ್ವವೆಂದರೆ ಭೋಗ್ಯತ್ವವೆಂದೇ ಅರ್ಥ. ಎಲ್ಲ ಪ್ರಾಣಿಗಳಿಗೆ ಪರಮಾತ್ಮನು ಉಪಜೀವ್ಯನಾದ್ದರಿಂದ ಅವನಿಗೆ ಭೋಗ್ಯತ್ವವು ಕೂಡುತ್ತದೆ. ಮುಖ್ಯವಾಗಿ ಸರ್ವಭಕ್ಷಕ, ಸರ್ವಸಂಹಾರಕ (ಮಹಾಭೋಕ್ತಾ), ಎಲ್ಲ ಪ್ರಾಣಿಗಳಿಗೂ ಉಪಜೀವ್ಯ (ಮಹಾಭೋಗ್ಯ) ಈ ರೀತಿಯಾಗಿ ಅನ್ನಮಯ ಎನ್ನುವ ಶಬ್ದದಲ್ಲಿ ಅರ್ಥವು ಕೂಡುವುದು. ಇದೇ ರೀತಿ ಮಹಾಚೇಷ್ಟೆಯುಳ್ಳವನೆಂದೂ (ಪ್ರಾಣಮಯ), ಮಹಾಬುದ್ಧಿವುಳ್ಳವನೆಂದೂ (ಮನೋಮಯ), ಮಹಾವಿಶೇಷ ಜ್ಞಾನವುಳ್ಳವನೆಂದೂ (ವಿಜ್ಞಾನಮಯ) ಅರ್ಥವಾಗುವುದು. ಅಪಿ ಶಬ್ದದಿಂದ ಆನಂದಮಯ ಎಂಬ ಶಬ್ದಕ್ಕೆ ಮಹಾನಂದವುಳ್ಳವನೆಂಬ ಅರ್ಥವನ್ನೂ ತೆಗೆದುಕೊಳ್ಳಬೇಕು.

ಪರಮಾತ್ಮನಿಗೆ ಅನ್ನಮಯಾದಿ ಸ್ವರೂಪತ್ವವಿದ್ದರೆ ಬಹುತ್ವ ಬರುವುದರಿಂದ 'ಏಕಮೇವಾದ್ವಿತೀಯಂ' ಎನ್ನುವ ಶ್ರುತಿಗೆ ವಿರೋಧ ಬರುವುದು. ಪರಮಾತ್ಮನಲ್ಲಿ ಪ್ರಚುರವಾದ ಆನಂದಾದಿಗಳು ಇವೆಯೆಂದರೆ ಪರಮಾತ್ಮನಿಗೂ ಅವನ ಆನಂದಾದಿಗಳಿಗೂ ಭೇದವು ಪ್ರಸಕ್ತವಾಗುವುದು. ಮನಶ್ಶಬ್ದಕ್ಕೆ ಜ್ಞಾನವೆಂದು ಇಟ್ಟುಕೊಂಡರೆ ಮನೋಮಯಕ್ಕೆ ಜ್ಞಾನಮಯ ಎಂದರ್ಥವಾಗುವುದರಿಂದ ಪುನರುಕ್ತಿಯಾಗುವುದು. ಹೀಗೆ ಆಶಂಕಿಸಿದರೆ -

**ವಿಶೇಷಸಾಮಾನ್ಯತಯಾ ವಿಜ್ಞಾನಂ ಮನ ಇತ್ಯಪಿ |**

**ಏಕಸ್ಯ ಜ್ಞಾನರೂಪಸ್ಯ ಹರೇರುಕ್ತಿರ್ವಿಭಾಗತಃ ||೧೮೧||**

ಜ್ಞಾನಸ್ವರೂಪನಾದ ಒಬ್ಬನೇ ಆದ ಶ್ರೀಹರಿಗೇ ವಿಶೇಷ ಮತ್ತು ಸಾಮಾನ್ಯ ವಿಷಯತ್ವವಿರುವುದರಿಂದ ವಿಜ್ಞಾನವೆಂದೂ, ಮನವೆಂದೂ ಪ್ರತ್ಯೇಕವಾಗಿ ಹೇಳಿರುವುದು ಯುಕ್ತವೇ ಆಗುವುದು.

**ವಿವರಣೆ:** 'ಸಾಮಾನ್ಯೈರ್ಯೇ ತ್ವವಿಜ್ಞೇಯಾಃ ವಿಶೇಷಾ ಮಮ ಗೋಚರಾಃ| ದೇವಾದೀನಾಂ ತು ತಜ್ಜ್ಞಾನಂ ವಿಜ್ಞಾನಮಿತಿ ಕೀರ್ತಿತಂ||' (ಇತಿ

ಗೀತಾಭಾಷ್ಯೇ). ಸಾಮಾನ್ಯರಿಂದ ತಿಳಿಯಲ್ಪಡದಿರುವ ವಿಶೇಷಗಳೂ ನನ್ನ ಜ್ಞಾನಕ್ಕೆ ವಿಷಯಗಳಾಗುತ್ತವೆ. ದೇವಾದಿಗಳಿಗಾದರೋ ಆ ಜ್ಞಾನವು ವಿಜ್ಞಾನವೆಂದು ಹೇಳಲ್ಪಡುತ್ತದೆ. ಈ ವಚನದಿಂದ ವಿಜ್ಞಾನಶಬ್ದಕ್ಕೆ ವಿಶೇಷ ಜ್ಞಾನ ಎಂದರ್ಥವಾಗುವುದು. ಮನಶಬ್ದವು ಕೇವಲ ಸಾಮಾನ್ಯಜ್ಞಾನವನ್ನು ಹೇಳುತ್ತದೆ.

'ತಸ್ಮಾದ್ವಾ ಏತಸ್ಮಾದನ್ನರಸಮಯಾತ್' ಇತ್ಯಾದಿಗಳಲ್ಲಿ ಅನ್ಯ ಶಬ್ದವಿರುವ ಪ್ರಯುಕ್ತ ಸ್ವಗತಭೇದರಹಿತನಾದ ವಿಷ್ಣುವಿನಲ್ಲಿ ಅನ್ನಮಯಾದಿ ಶಬ್ದವಾಚ್ಯತ್ವವು ಹೇಗೆ ಕೂಡುತ್ತದೆ ಎಂದರೆ -

**ಅಭೇದೇऽಪಿ (ಅಭಿನ್ನೋऽಪಿ) ವಿಶೇಷೇಣೈವಾನ್ಯ ಇತ್ಯುದಿತೋ ಹರಿಃ ।**
**ಭೇದಶಬ್ದಾ ವಿಶೇಷಂ ತು ಹರಾವನ್ಯತ್ರ ಭಿನ್ನತಾಂ ॥೧೮೨॥**
**ಭೂಯುರ್ಹರೇರ್ಜೀವಜಡೈರಪಿ ಭೇದಂ ಹಿ ಮುಖ್ಯತಃ ।**
**ಬ್ರಹ್ಮತರ್ಕವಚೋऽಪ್ಯೇವಮತ ಏಕಃ ಸ ಪಂಚಧಾ ॥೧೮೩॥**
**ಉಕ್ತೋऽನ್ನಮಯ ಇತ್ಯಾದಿ ಭೃಗೋಶ್ಚೈತದ್ವದಿಷ್ಯತಿ ।**

ಶ್ರೀಹರಿಯ ರೂಪರೂಪಗಳಲ್ಲಿ ಭೇದವಿಲ್ಲದಿದ್ದರೂ ಭೇದಕಾರ್ಯ-ನಿರ್ವಾಹಕ ವಿಶೇಷದ ಬಲದಿಂದಲೇ, ಅಭಿನ್ನನಾಗಿದ್ದರೂ ಭಿನ್ನನೆಂದು ಹೇಳಲ್ಪಡುವನು. ಭೇದವನ್ನು ಹೇಳುವ ಅನ್ಯ ಮೊದಲಾದ ಶಬ್ದಗಳು ಶ್ರೀಹರಿಯಲ್ಲಿ ವಿಶೇಷವನ್ನೂ, ಇತರೆಡೆಗಳಲ್ಲಿ ಶ್ರೀಹರಿಯಿಂದ ಭೇದವನ್ನೂ ಹೇಳುತ್ತವೆ. ಪರಮಾತ್ಮನಿಗೆ ಜೀವಜಡಗಳಿಂದಲೂ ಮುಖ್ಯವಾಗಿ ಭೇದವನ್ನೇ ಹೇಳುತ್ತವೆ. ವಿಷ್ಣುವಿನಿಂದ ಹೇಳಲ್ಪಟ್ಟ ಬ್ರಹ್ಮತರ್ಕದ ವಚನವೂ ಇದೇ ರೀತಿಯೇ ಹೇಳುತ್ತದೆ. ಶ್ರೀಹರಿಯು ನಿರ್ಭಿನ್ನನಾಗಿದ್ದರೂ ವಿಶೇಷದ ಬಲದಿಂದಲೇ ಅನ್ನಮಯಾದಿ ಐದು ಪ್ರಕಾರಗಳಲ್ಲಿ ಹೇಳಲ್ಪಟ್ಟಿದ್ದಾನೆ. ಆನಂದವಲ್ಲಿಯಲ್ಲಿ ಪ್ರತಿಪಾದಿಸಲ್ಪಟ್ಟಿರುವ ಅನ್ನಮಯಾದಿ ರೂಪವನ್ನೇ ಭೃಗುವಲ್ಲಿಯಲ್ಲಿ ಭೃಗುವಿಗೋಸ್ಕರ ವರುಣನೂ ಕೂಡ **ಪರಬ್ರಹ್ಮನೆಂದೇ** ಉಪದೇಶಿಸುವನು.

'ಅನ್ನಂ ಪ್ರಾಣಃ' ಇತ್ಯಾದಿಗಳಲ್ಲಿ ಮಯಟ್ ಪ್ರತ್ಯಯವು ಶ್ರುತವಾಗದಿರುವದರಿಂದ, ಆನಂದವಲ್ಲಿಯಲ್ಲಿ ಹೇಳಿದ ಅನ್ನಮಯಾದಿ

ಶಬ್ದವಾಚ್ಯನಾದ ಪರಬ್ರಹ್ಮನನ್ನು ಭೃಗುವಲ್ಲಿಯಲ್ಲಿ ವರುಣನು ಉಪದೇಶ ಮಾಡಿಲ್ಲ ಎಂದರೆ -

**ಪ್ರಾಪ್ಯತ್ವೇನ ಮಯಟ್ ಪ್ರೋಕ್ತೇರ್ನ ತತ್ರಾಪಿ ಅನ್ಯದುಚ್ಯತೇ ।।೧೮೪।।**

**ಪ್ರಚುರಾನ್ನಾದಿರೇವಾತೋ ಹ್ಯನ್ನಮನ್ನಮಯೇತ್ಯಪಿ ।**

**ಉಚ್ಯತೇ ಹ್ಯವಿಶೇಷೇಣ ನಾನ್ಯತ್ಕಿಂಚಿದಿಹೋಚ್ಯತೇ ।।೧೮೫।।**

ಉಪಕ್ರಮದಲ್ಲಿ ಉಪದೇಶಿಸಲ್ಪಟ್ಟ ಈ ಅನ್ನಾದಿ ಶಬ್ದವಾಚ್ಯವಾದುದನ್ನೇ 'ಏತಮನ್ನಮಯಮಾತ್ಮಾನಮುಪಸಂಕ್ರಮ್ಯ' ಇತ್ಯಾದಿ ಪ್ರಾಪ್ಯತ್ವವನ್ನು ಹೇಳುವ ವಾಕ್ಯದಲ್ಲಿ ಮಯಟ್ ಪ್ರತ್ಯಯವನ್ನು ಸ್ಪಷ್ಟವಾಗಿ ಹೇಳಿರುವುದರಿಂದ, ಭೃಗುವಲ್ಲಿ ಇತ್ಯಾದಿಗಳಲ್ಲಿ ಬ್ರಹ್ಮನ ಹೊರತು ಅನ್ಯವಾದುದು ಹೇಳಲ್ಪಟ್ಟಿಲ್ಲ. ಅನ್ನ, ಅನ್ನಮಯ ಮೊದಲಾದ ಶಬ್ದಗಳಿಗೆ ಅರ್ಥಾಂತರವಿಲ್ಲವಾದ್ದರಿಂದ, ಪ್ರಚುರಾನ್ನಾದಿವುಳ್ಳ ಪರಬ್ರಹ್ಮನೇ ಈ ಶಬ್ದಗಳಿಂದ ಹೇಳಲ್ಪಡುತ್ತಾನೆ. ಇಲ್ಲವಾದರೆ ಉಪಕ್ರಮ ವಾಕ್ಯಕ್ಕೂ ಉಪಸಂಹಾರ ವಾಕ್ಯಕ್ಕೂ ವಿರೋಧ ಬರುವುದು. ಆದಕಾರಣ ಈ ಭೃಗುವಲ್ಲಿಯಲ್ಲಿ ಬ್ರಹ್ಮನಿಂದ ವ್ಯತಿರಿಕ್ತವಾದುದು ಬೇರೆ ಯಾವುದೂ ಹೇಳಲ್ಪಟ್ಟಿಲ್ಲ.

ಈ ಪ್ರಕಾರವಾಗಿ ಎರಡು ಸೂತ್ರಗಳಿಂದ ಅನ್ನಮಯಾದಿ ಐದು ಶಬ್ದಗಳು ಪರಮೇಶ್ವರನನ್ನು ಹೇಳುತ್ತವೆಯೆಂದೂ, ಮಯಟ್ ಪ್ರತ್ಯಯವು ಪ್ರಾಚುರ್ಯಾರ್ಥದಲ್ಲಿ ಪ್ರಸಕ್ತವಾಗಿರುವುದೆಂದೂ ಪ್ರತಿಪಾದಿಸಲಾಯಿತು. ಈಗ ಆನಂದಮಯಶಬ್ದಕ್ಕೆ ವಿಷ್ಣುವಾಚ್ಯತ್ವವನ್ನೂ ಅದರಲ್ಲಿರುವ ಮಯಟ್ ಶಬ್ದಕ್ಕೆ ಪ್ರಾಚುರ್ಯಾರ್ಥವನ್ನೂ ಬೇರೊಂದು ಹೇತುವಿನಿಂದ ಉಪಪಾದಿಸುವುದಕ್ಕಾಗಿ ಸೂತ್ರವನ್ನು ಪಠಿಸಿ ವ್ಯಾಖ್ಯಾನ ಮಾಡುತ್ತಾರೆ -

## ಹೇತ್ವಂತರದಿಂದ ಆನಂದಮಯತ್ವ ಪ್ರತಿಪಾದನೆ

**ಸೂತ್ರ: ಓಂ ತದ್ಧೇತುವ್ಯಪದೇಶಾಚ್ಚ ಓಂ (೧-೧-೧೪)**

ಆ ವಿಷ್ಣುವಿಗೆ ಪರಿಪೂರ್ಣವಾದ ಆನಂದವಿದೆ ಎನ್ನುವ ವಿಷಯದಲ್ಲಿ 'ಕೋ ಹ್ಯೇವಾನ್ಯಾತ್' ಎಂದು ಲೋಕಚೇಷ್ಟಕತ್ವರೂಪವಾದ ಹೇತುವನ್ನು ಹೇಳಿರುವುದರಿಂದ ಆನಂದಮಯನು ಬ್ರಹ್ಮನೇ ಎಂದು ಸೂತ್ರಾರ್ಥ.

**ಮಹಾನಂದತ್ವ ಏವಾಸ್ಯ ಹೇತುಃ ಕೋಽನ್ಯಾದಿತಿ ಸ್ಫುಟಂ ।**

**ಉಕ್ತಃ ಶ್ರುತ್ಯಂತರೇ ಯಸ್ಮಾತ್ಸುಖಂ ಲಬ್ಧ್ವಾ ಕರೋತ್ಯಯಂ ॥೧೮೬॥**
**ಕರೋತಿ ನಾಸುಖೀ ಭೂಮಾ ಸುಖಂ ನಾಲ್ಪೇ ಸುಖಂ ಭವೇತ್ ।**
**ಇತ್ಯುಕ್ತಂ ಯತ್ಪ್ರವೃತ್ತಿಶ್ಚ ನೃತ್ತಗಾನಾದಿಕಾ ಸುಖಾತ್ ॥೧೮೭॥**
**ದುಃಖಾದ್ರೋದಾದಿಕಾ ಚೈವ ಸರ್ವಕರ್ತೃತ್ವತೋಽಸ್ಯ ಚ ।**
**ಸರ್ವಶಕ್ತೇರ್ನ ದುಃಖಂ ಸ್ಯಾದತಃ ಕೇವಲ ಲೀಲಯಾ ॥೧೮೮॥**
**ಪ್ರವರ್ತಕೋ ನ ಚೇದೇಷ ಪ್ರಾಣ್ಯಾದನ್ಯಾಚ್ಚ ಕಃ ಪುಮಾನ್ ।**

ಆನಂದಮಯ ಪ್ರಕರಣದಲ್ಲಿ 'ಕೋ ಹ್ಯೇವಾನ್ಯಾತ್ ಕಃ ಪ್ರಾಣ್ಯಾತ್ ಯದೇಷ ಆಕಾಶ ಆನಂದೋ ನ ಸ್ಯಾತ್', ಈ ಆಕಾಶ ಶಬ್ದವಾಚ್ಯನಾದ ಪರಮಾತ್ಮನು ಪೂರ್ಣಾನಂದನಾಗಿರದಿದ್ದರೆ ಯಾವನು ತಾನೇ ಚೇಷ್ಟೆಯನ್ನು ಮಾಡಿಯಾನು ಎನ್ನುವ ವಾಕ್ಯದಿಂದ ಈ ವಿಷ್ಣುವಿಗೇನೇ ಲೋಕಚೇಷ್ಟಕತ್ವರೂಪ ಹೇತುವು ಸ್ಪಷ್ಟವಾಗಿ ಹೇಳಲ್ಪಟ್ಟಿದೆ. ಛಂದೋಗ ಶ್ರುತಿಯಲ್ಲಿ 'ಯದಾ ವೈ ಸುಖಂ ಲಭತೇಥ ಕರೋತಿ' ಇತ್ಯಾದಿ ವಾಕ್ಯದಿಂದ ಈ ಶ್ರೀಹರಿಯು ಸುಖವನ್ನು ಹೊಂದಿರುವುದರಿಂದ ಪ್ರವರ್ತನೆ ಮಾಡುತ್ತಾನೆ, ಸುಖವಿಲ್ಲದಿರುವನು ಪ್ರವರ್ತನೆ ಮಾಡುವುದಿಲ್ಲ, ಎಂಬುದಾಗಿ ಶ್ರೀಹರಿಯ ವ್ಯಾಪಾರಕ್ಕೆ ಆನಂದದಿಂದ ವ್ಯಾಪ್ತಿಯು ಉಕ್ತವಾಗಿದೆ. 'ಶ್ರೀ ಹರಿಯು ಪೂರ್ಣಗುಣವುಳ್ಳವನಾಗಿರುವುದರಿಂದ ಅವನೇ ಪೂರ್ಣಸುಖರೂಪನು, ಯಾವನು ಅಲ್ಪಗುಣವುಳ್ಳವನೋ ಅವನಲ್ಲಿ ಅಲ್ಪಸುಖವೇ ಆಗುವುದು', ಎಂದು ಅದೇ ಶ್ರುತಿಯಲ್ಲಿ ಹೇಳಿದೆ. ಪೂರ್ಣಸುಖವಿದ್ದರೆ ಮಾತ್ರ ಸುಖವುಳ್ಳವನು ಎಂದು ಹೇಳುತ್ತಾರೆ. ಅಲ್ಪಸುಖವಿದ್ದರೆ ಸುಖವಿಲ್ಲ ಎಂದು ಹೇಳುವುದು ರೂಢಿ. ಉದಾಹರಣೆಗೆ ಯಾವನಿಗೆ ಆನಂದವಾಗಿರುತ್ತದೋ ಅವನು ನರ್ತನ, ಗಾಯನಾದಿಗಳನ್ನು ಮಾಡುತ್ತಾ ಸಂತೋಷವನ್ನು ತೋರಿಸುತ್ತಾನೆ. ಆದರೆ ದುಃಖವುಳ್ಳವನು ರೋದನಾದಿಗಳನ್ನು ಮಾಡುತ್ತಾನೆ. ಈ ಶ್ರೀಹರಿಯು ಎಲ್ಲವನ್ನೂ ಮಾಡುವವನೂ, ಎಲ್ಲ ರೀತಿಯ ಶಕ್ತಿಯುಳ್ಳವನೂ ಆದಪ್ರಯುಕ್ತ ಅವನು ಸದಾ ಸುಖಿಯೇ ಆಗಿರುವನು, ಅವನಿಗೆ ಎಂದಿಗೂ ದುಃಖದ ಪ್ರಸಕ್ತಿಯೇ ಇರುವುದಿಲ್ಲ. ಆದಕಾರಣ ಸರ್ವಪ್ರವರ್ತಕನಾದ ಶ್ರೀಹರಿಯು ಪೂರ್ಣಾನಂದದಿಂದ ಯುಕ್ತನಾಗುವನು.

ಪೂರ್ಣಾನಂದನಾಗದಿದ್ದರೆ ಯಾವ ಲೋಕಚೇಷ್ಟೆಯನ್ನೂ ಪ್ರವರ್ತಿಸಲಾರನು. ಶ್ರೀಹರಿಯೇ ಯಾವುದನ್ನೂ ಪ್ರವರ್ತಿಸದಿದ್ದರೆ, ಯಾವಪುರುಷನು ತಾನೇ ವಿಶೇಷ ರೀತಿಯಿಂದಾಗಲೀ ಸಾಧಾರಣ ರೀತಿಯಿಂದಾಗಲೀ ಚೇಷ್ಟೆಯನ್ನು ಮಾಡಿಯಾನು?

ಜಗಚ್ಚೇಷ್ಟಕರ್ತ್ವರೂಪ ಹೇತುವಿನ ಮೂಲಕ ಶ್ರೀಹರಿಯು ಪೂರ್ಣಾನಂದ ಎನ್ನುವುದು ಸಿದ್ಧವಾಗುವುದರಿಂದ, ಆನಂದಮಯ ಎನ್ನುವಲ್ಲಿ ಮಯಟ್ ಶಬ್ದವು ಪ್ರಾಚುರ್ಯಾರ್ಥದಲ್ಲಿ ಉಕ್ತವಾಗಿದೆಯೇ ಹೊರತು ವಿಕಾರಾರ್ಥದಲ್ಲಿ ಅಲ್ಲ ಎಂದು ನಿರ್ಣೀತವಾಗುತ್ತದೆ.

## ಅನ್ನಮಯಾದಿ ಶಬ್ದವಾಚ್ಯನೇ ಮಂತ್ರವರ್ಣೋಕ್ತನು

ಅನ್ನಮಯಾದಿ ಐದು ಶಬ್ದಗಳಿಗೂ ಯುಕ್ತ್ಯಂತರದಿಂದ ಪರಬ್ರಹ್ಮತ್ವವನ್ನು ಪ್ರತಿಪಾದಿಸುವ ಸೂತ್ರ -

**ಸೂತ್ರ: ಓಂ ಮಾಂತ್ರವರ್ಣಿಕಮೇವ ಚ ಗೀಯತೇ ಓಂ (೧-೧-೧೫)**

'ಸತ್ಯಂ ಜ್ಞಾನಮನಂತಂ ಬ್ರಹ್ಮ' ಎನ್ನುವ ಮಂತ್ರವರ್ಣದಿಂದ ಲಕ್ಷಣಯುಕ್ತನಾಗಿ ಹೇಳಲ್ಪಟ್ಟ ಪರಬ್ರಹ್ಮನೇ ಅನ್ನಮಯಾದಿ ಶಬ್ದಗಳಿಂದ ಗಾನಮಾಡಿಸಿಕೊಳ್ಳುತ್ತಾನೆ, ಆದ್ದರಿಂದ ಅನ್ನಮಯಾದಿ ಶಬ್ದವಾಚ್ಯನು ಪರಬ್ರಹ್ಮನೇ ಆಗಿರುವನು ಎಂದು ಸೂತ್ರಾರ್ಥ.

ಮಂತ್ರವರ್ಣವೆಂಬ ವೇದಭಾಗವೂ ಪರಬ್ರಹ್ಮವಿಷಯಕವಾಗಿದ್ದರೆ, ಅದರ ಸಮಾಖ್ಯೆಯಿಂದ ಅನ್ನಮಯಾದಿ ಶಬ್ದವಾಚ್ಯನು ಪರಬ್ರಹ್ಮನೆಂದು ಹೇಳಬಹುದಿತ್ತು. ಆದರೆ ಮಂತ್ರವರ್ಣದಲ್ಲಿ ಬ್ರಹ್ಮ ಎಂದು ಶ್ರುತವಾಗಿದೆ. ಬ್ರಹ್ಮಶಬ್ದಕ್ಕೆ ಅನ್ಯತ್ರವೂ ಪ್ರವೃತ್ತಿಯಿದೆ. ಆದಕಾರಣ ಪರಬ್ರಹ್ಮನಿಗೆ ಅನ್ನಮಯಾದಿ ಶಬ್ದವಾಚ್ಯತ್ವವು ಕೂಡುವುದಿಲ್ಲ ಎಂದರೆ -

**ಬ್ರಹ್ಮವಿತ್ಪರಮಾಪ್ನೋತೀತಿ ಯತ್ಪ್ರಥಮಸೂಚಿತಂ ।।೧೮೯।।**
**ತದೇವ ಮಂತ್ರವರ್ಣೇನ ಸತ್ಯಂ ಜ್ಞಾನಮನಂತವತ್ ।**
**ಲಕ್ಷಿತಂ ತತ್ರ ಸತ್ಯತ್ವಂ ಸೃಷ್ಟ್ಯಾಽನ್ನಪ್ರಾಣಯೋರಪಿ ।।೧೯೦।।**
**ಉಕ್ತಂ ಜ್ಞಾನಂ ತು ಮನಸಾ ವಿಜ್ಞಾನೇನಾಪ್ಯುದೀರಿತಂ ।**
**ಅನಂತತ್ವಂ ತಥಾಽಽನಂದಮಯವಾಚಾಽಪ್ಯುದಾಹೃತಂ ।।೧೯೧।।**

ಬ್ರಹ್ಮನನ್ನು ತಿಳಿದವನು ಪರಬ್ರಹ್ಮನನ್ನು ಹೊಂದುವನು ಎಂಬುದಾಗಿ ಯಾವುದು ಮೊದಲು ಸೂಚಿತವಾಗಿದೆಯೋ, ಅದುವೇ 'ಸತ್ಯಂ ಜ್ಞಾನಮನಂತಂ ಬ್ರಹ್ಮ' ಎಂಬ ವೇದಭಾಗದಿಂದ ಅಸಾಧಾರಣ ಧರ್ಮದಿಂದ ಕೂಡಿರುವುದಾಗಿ ಹೇಳಲ್ಪಟ್ಟಿದೆ. ಆ ಲಕ್ಷಣಗಳಲ್ಲಿ ಸತ್ಯತ್ವವು ಸೃಷ್ಟಿ ಪ್ರಕರಣ, ಅನ್ನಮಯ ಹಾಗೂ ಪ್ರಾಣಮಯ ಪ್ರಕರಣಗಳಿಂದ ಹೇಳಲ್ಪಟ್ಟಿದೆ. ಜ್ಞಾನರೂಪ ಲಕ್ಷಣವಾದರೋ ಮನೋಮಯ ಹಾಗೂ ವಿಜ್ಞಾನಮಯ ಪ್ರಕರಣಗಳಿಂದ ಉಕ್ತವಾಗಿದೆ. ಅನಂತತ್ವರೂಪ ಲಕ್ಷಣವು ಆನಂದಮಯ ಪ್ರಕರಣದಿಂದಲೂ ಹಾಗೂ ಮೇಲಿನ ವಾಕ್ಯಗಳಿಂದಲೂ ಹೇಳಲ್ಪಟ್ಟಿದೆ.

'ಸತ್ಯಂ ಜ್ಞಾನಮನಂತಂ ಬ್ರಹ್ಮ' ಎಂಬ ಪರಬ್ರಹ್ಮನ ಲಕ್ಷಣಗಳಿಗೆ ಮೇಲೆ ಹೇಳಿರುವ ವ್ಯಾಖ್ಯಾನವು ಹೇಗೆ ಕೂಡುವುದು ಎಂದು ಆಶಂಕಿಸಿದರೆ -

**ಸದ್ಭಾವಂ ಯಾಪಯೇದ್ಯಸ್ಮಾತ್ಸತ್ಯಂ ತತ್ತೇನ ಕಥ್ಯತೇ ।**
**ಇತಿ ಸೃಷ್ಟಿರಿಹ ಪ್ರೋಕ್ತಾ ಜಗತ್ಸದ್ಭಾವಯಾಪಕಂ ॥೧೯೨॥**
**ಬ್ರಹ್ಮೇತಿ ಸ್ಥಾಪನಾಯೈವ ಸತ್ವಂ ಜೀವನಮೇವ ಚ ।**
**ವಿಶೀರ್ಣತಾ ಚ ಸತ್ವಂ ಸ್ಯಾತ್ಸನ್ನಮಿತ್ಯಾಹುರೇವ ಯತ್ ॥೧೯೩॥**
**ಅತೋಽದ್ಯತಾಽತ್ತೃತಾಽನ್ನತ್ವಂ ಸತ್ಯ ಶಬ್ದಾರ್ಥ ಏವ ಹಿ ।**

ತನ್ನ ಬಿಟ್ಟು ಉಳಿದೆಲ್ಲವಕ್ಕೂ ಉತ್ಪತ್ತಿಯನ್ನು ಹೊಂದಿಸಿಕೊಡುವುದರಿಂದ ಬ್ರಹ್ಮನು ಸತ್ಯನೆಂದು 'ಆತ್ಮನಃ ಆಕಾಶಃ ಸಂಭೂತಃ' ಇತ್ಯಾದಿ ಸೃಷ್ಟಿವಾಕ್ಯದಿಂದ ಹೇಳಲ್ಪಡುತ್ತಾನೆ. ಈ ಅಭಿಪ್ರಾಯದಿಂದ ಈ ಅನುವಾಕದಲ್ಲಿ ಸೃಷ್ಟಿಕಥನವು ಹೇಳಲ್ಪಟ್ಟಿದೆ. ಬ್ರಹ್ಮನೇ ಚೇತನಾಚೇತನಾತ್ಮಕ ಪ್ರಪಂಚಕ್ಕೆ ಉತ್ಪತ್ತಿಯನ್ನು ಹೊಂದಿಸಿಕೊಡುವವನೆಂಬ ಅರ್ಥವನ್ನು ಸ್ಥಾಪಿಸುವುದಕ್ಕಾಗಿಯೇ ಇಲ್ಲಿ ಸೃಷ್ಟಿಯು ಹೇಳಲ್ಪಟ್ಟಿದೆ. ಕೇವಲ ಅವಯವಾರ್ಥವನ್ನು ಹೇಳುವುದಕ್ಕಲ್ಲ. 'ಅನ್ನಾದ್ಭೂತಾನಿ ಜಾಯಂತೇ।ಜಾತಾನ್ಯನ್ನೇನ ವರ್ಧಂತೇ॥' ಎಂಬ ವಾಕ್ಯದಿಂದ ಪ್ರಾಣಾಧಾರತ್ವವೂ ಕೂಡ ಸತ್ ಶಬ್ದಾರ್ಥವಾಗಿದೆ ಎಂದು ತಿಳಿಯುವುದು. ವಿನಷ್ಟವಾದ ವಸ್ತುವನ್ನು 'ಸನ್ನಂ' ಎಂದು ಹೇಳುವುದರಿಂದ, ಸತ್ ಶಬ್ದದಿಂದ ವಿನಾಶವೂ ಸೂಚಿತವಾಗುವುದು. ಹೀಗೆ ಎಲ್ಲ ಪ್ರಾಣಿಗಳಿಗೂ ಜೀವನ ಹಾಗೂ ವಿನಾಶವು ಸತ್ಯ ಶಬ್ದದಿಂದ ಹೇಳಲ್ಪಟ್ಟಿರುವುದರಿಂದ, ಸತ್ಯ ಶಬ್ದಾರ್ಥವೇ

ಅನ್ನಶಬ್ದ ಪ್ರವೃತ್ತಿ ನಿಮಿತ್ತವು. 'ಅದ್ಯತಾ' ಎನ್ನುವಲ್ಲಿ ಉತ್ಪತ್ತಿ ಹಾಗೂ ವೃದ್ಧಿಗಳೂ, 'ಅತ್ತ್ಯತಾ' ಎನ್ನುವಲ್ಲಿ ಸಂಹಾರಕತ್ವವೂ ಅನ್ನಶಬ್ದದ ಪ್ರವೃತ್ತಿಯಿಂದ ತಿಳಿದುಬರುವುದು.

ಸತ್ಯಶಬ್ದದಿಂದ ಪ್ರಾಣಮಯ ಪ್ರಕರಣವೂ, ಜ್ಞಾನಶಬ್ದದಿಂದ ಮನೋಮಯ ಪ್ರಕರಣವೂ ಹೇಳಲ್ಪಡುತ್ತವೆ ಎಂದು ತಿಳಿಸುತ್ತಾರೆ -

**ಪ್ರಾಣಂ ದೇವಾ ಅನುಪ್ರಾಣಂತಿ ಮನುಷ್ಯಾಃ ಪಶವಶ್ಚ ಯೇ ॥೯೪॥**

**ಆಯುಃ ಪ್ರಾಣೋ ಹಿ ಭೂತಾನಾಮಿತಿ ಯದ್ಗತಿ ಜೀವನೇ ।**

**ಉಕ್ತೇ ಸದಿತಿ ಧಾತ್ವರ್ಥೋ ಗತಿಶ್ಚಾತೋ ಹಿ ಸತ್ಯತಾ ॥೯೫॥**

**ಪ್ರಾಣತ್ವಮವಬೋಧಾರ್ಥೋ ಮನುಧಾತುಃ ಪ್ರಕೀರ್ತಿತಃ ।**

ದೇವತೆಗಳೂ, ಮನುಷ್ಯರೂ ಹಾಗೂ ಪಶುಗಳೂ ಜಗಚ್ಚೇಷ್ಟಕನಾದ ಪ್ರಯುಕ್ತ ಪ್ರಾಣಶಬ್ದವಾಚ್ಯನಾದ ಪರಮಾತ್ಮನನ್ನು ಪ್ರೇರಣೆಯಿಂದ ಚೇಷ್ಟೆ ಮಾಡುತ್ತಾರೆ. ಪ್ರಾಣಿಗಳ ಜೀವನಕ್ಕೆ ಕಾರಣನಾದ್ದರಿಂದ ಪರಮಾತ್ಮನು ಪ್ರಾಣನೆನಿಸುತ್ತಾನೆ. ಈ ರೀತಿಯಾಗಿ ಪರಮಾತ್ಮನಿಂದಲೇ ಎಲ್ಲ ಪ್ರಾಣಿಗಳಿಗೂ ಗಮನ ಜೀವನಗಳು ಹೇಳಲ್ಪಟ್ಟಿವೆ. ಭಾವಪ್ರಧಾನಾರ್ಥವನ್ನು ಇಟ್ಟುಕೊಂಡರೆ ಸತ್ ಧಾತುವಿಗೆ ಸತ್ತ್ವ (ಗತಿ ಅಥವಾ ಜೀವನ) ಎಂದು ಅರ್ಥವಾಗುತ್ತದೆ. ಗತಿಯನ್ನೂ ಜೀವನವನ್ನೂ ಹೊಂದಿಸಿಕೊಡುವುದರಿಂದ ಪರಮಾತ್ಮನು ಸತ್ಯ ಎನಿಸುವನು. ಪ್ರಾಣಶಬ್ದವೂ ಇದನ್ನೇ ಹೇಳುವುದರಿಂದ, ಪ್ರಾಣಮಯ ಪ್ರಕರಣವೂ ಸತ್ಯಶಬ್ದಕ್ಕೆ ವ್ಯಾಖ್ಯಾನವೇ ಆದಂತಾಯಿತು.

'ಮನು ಅವಬೋಧನೇ' ಎಂಬುದಾಗಿ ವ್ಯಾಖ್ಯಾತವಾಗಿರುವ ಮನು ಧಾತುವು ಜ್ಞಾನಾರ್ಥದಲ್ಲಿ ಪ್ರಸಕ್ತವಾಗುವುದರಿಂದ, ಮನೋಮಯ ಪ್ರಕರಣದಿಂದ ಜ್ಞಾನಶಬ್ದವು ವ್ಯಾಖ್ಯಾತವಾದಂತಾಯಿತು. ವಿಜ್ಞಾನಮಯ ಪ್ರಕರಣವೂ ಜ್ಞಾನಶಬ್ದಕ್ಕೆ ವ್ಯಾಖ್ಯಾನ ಎಂಬುದು ಸ್ಪಷ್ಟವೇ ಆಗಿದೆ.

ಆನಂದಮಯ ಪ್ರಕರಣದಿಂದ ಅನಂತತ್ವವು ವ್ಯಾಖ್ಯಾತವಾಗುವುದು ಎಂದು ಹೇಳುತ್ತಾರೆ -

**ನಾಲ್ಪೇ ಸುಖಮಿತಿ ಪ್ರೋಕ್ತ್ಯೈವಾನಂದಮಯತೋಕ್ತಿತಃ ॥೯೬॥**

**ಅನಂತತ್ವಂ ಸುನಿರ್ಣೀತಂ ಪೂರ್ಣಾನಂದೋ ಹಿ ನಾಲ್ಪಕೇ ।**

**ಅತೋ ಹಿ ಮಂತ್ರವರ್ಣೋಕ್ತ ವಿಸ್ತೃತಿಸ್ತು ಸಮಸ್ತಯಾ ||೧೯೭||**

**ಕ್ರಿಯತೇ ಪರಯಾ ಯಸ್ಮಾತ್ ...............................|**

ಪರಮೇಶ್ವರನು ಅನಂತನು ಪೂರ್ಣಾನಂದನಾಗಿರುವುದರಿಂದ ಎನ್ನುವ ವಚನದಿಂದ ಆನಂದಮಯನಿಗೆ ಅನಂತತ್ವವು ಚೆನ್ನಾಗಿ ನಿರ್ಣಯಿಸಲ್ಪಟ್ಟಿದೆ. ಅಲ್ಪನಲ್ಲಿ ಅಂದರೆ ಅಂತವುಳ್ಳವನಲ್ಲಿ ಸುಖವೇ ಇರುವುದಿಲ್ಲ ಎನ್ನುವ ಶ್ರುತಿವಚನದಿಂದ ಅಲ್ಪನಲ್ಲಿ ಪೂರ್ಣಾನಂದವಿಲ್ಲವೆಂದು ನಿರ್ಣೀತವಾಗುವುದು. ವ್ಯತಿರೇಕವ್ಯಾಪ್ತಿಯಿಂದ ಅನಂತನಲ್ಲಿ ಪೂರ್ಣಾನಂದವಿರುವುದು ಎಂಬುದಾಗಿ ನಿರ್ಣಯ ಮಾಡಬಹುದು. ಮಂತ್ರವರ್ಣದಲ್ಲಿ ಹೇಳಲ್ಪಟ್ಟಿರುವ ಸತ್ಯಂ ಜ್ಞಾನಮನಂತಂ ಬ್ರಹ್ಮ ಎನ್ನುವುದರ ವಿಸ್ತಾರವೇ ಮಂತ್ರವರ್ಣಕ್ಕಿಂತ ಮೇಲಿನದಾದ ಶ್ರುತಿಯಿಂದ ಮಾಡಲ್ಪಡುವ ಕಾರಣ ಅನ್ನಮಯಾದಿ ಶಬ್ದಗಳಿಂದ ವಿಷ್ಣುವೇ ವಾಚ್ಯನಾಗಿದ್ದಾನೆ ಎಂದು ಸಿದ್ಧವಾಗುವುದು.

ಹೀಗೆ 'ಆನಂದಮಯೋಽಭ್ಯಾಸಾತ್' ಇತ್ಯಾದಿ ಸೂತ್ರಗಳಿಂದ ತಮ್ಮ ಪಕ್ಷವನ್ನು ಸಾಧಿಸಿ, ಈಗ ಮುಂದಿನ ಸೂತ್ರದಿಂದ ಪರಪಕ್ಷವನ್ನು ತಿರಸ್ಕರಿಸುತ್ತಾರೆ -

**ಸೂತ್ರ: ಓಂ ನೇತರೋಽನುಪಪತ್ತೇಃ ಓಂ (೧-೧-೧೬)**

'ಬ್ರಹ್ಮವಿದಾಪ್ನೋತಿ ಪರಂ' ಎಂದು ಹೇಳಿದ ಮುಕ್ತಿಯನ್ನು ಹೊಂದಿಸಿಕೊಡುವ ಜ್ಞಾನವಿಷಯತ್ವವು ವಿಷ್ಣುವಿನಿಂದ ಅನ್ಯರಲ್ಲಿ ಕೂಡುವುದಿಲ್ಲವಾದ್ದರಿಂದ ಅನ್ನಮಯಾದಿ ಶಬ್ದವಾಚ್ಯನು ಪರಬ್ರಹ್ಮನೇ ಎಂಬುದು ಸೂತ್ರಾರ್ಥ.

## ಅನ್ನಮಯಾದಿ ಪ್ರತಿಪಾದ್ಯರು ಜೀವಾದಿಗಳಲ್ಲ

**...............................................ಇತರೋಽತ್ರ ನ ಕಥ್ಯತೇ |**

ಇತರರು ಅಂದರೆ ಜೀವರಾಗಲೀ, ಶರೀರಾದಿ ಕೋಶಗಳಾಗಲೀ, ಪ್ರಕೃತಿಯಾಗಲೀ ಈ ಅನ್ನಮಯಾದಿ ಪ್ರಕರಣದಲ್ಲಿ ಹೇಳಲ್ಪಡುವುದಿಲ್ಲ. ಏಕೆಂದರೆ -

**ಪುರುಷಂ ವೇತ್ತಿ ಯೋ ಮುಚ್ಯೇನ್ನಾನ್ಯಃ ಪಂಥಾ ಹಿ ವಿದ್ಯತೇ ||೧೯೮||**

**ಇತಿ ಶ್ರುತೇರನ್ಯವೇದೀ ಕಥಂ ಮುಕ್ತಿಂ ಪ್ರಯಾಸ್ಯತಿ |**

ಯಾವನು ಗುಣಪೂರ್ಣನಾದ ಪುರುಷನನ್ನು ತಿಳಿಯುತ್ತಾನೋ ಅವನು ಮುಕ್ತನಾಗುವನು. ಇದಕ್ಕಿಂತ ಬೇರೆಯಾದ ಮೋಕ್ಷಪ್ರಾಪಕ ಮಾರ್ಗವು ಇರುವುದಿಲ್ಲ. ಈ ರೀತಿಯಾಗಿ ಶ್ರುತಿಗಳಲ್ಲಿ ಉಕ್ತವಾಗಿರುವುದರಿಂದ, ಪರಮಾತ್ಮನನ್ನು ಬಿಟ್ಟು ಉಳಿದವರನ್ನು ತಿಳಿದವನು ಹೇಗೆ ತಾನೇ ಮೋಕ್ಷವನ್ನು ಹೊಂದುವನು. 'ತಮೇವ ವಿದ್ವಾನಮೃತ ಇಹ ಭವತಿ। ನಾನ್ಯಃ ಪಂಥಾ ಅಯನಾಯ ವಿದ್ಯತೇ॥' ಎಂಬ ಶ್ರುತಿಯು ಇಲ್ಲಿ ಸೂಚಿತವಾಗಿದೆ.

ಹಾಗಾದರೆ ಪುರುಷನ ಜ್ಞಾನದಿಂದಲೇ ಮೋಕ್ಷವಾಗಲಿ. ಪುರುಷ ಶಬ್ದವಾಚ್ಯನುಮತ್ತೊಬ್ಬನಿರಲು ಸಾಧ್ಯ. ಅಂದಮೇಲೆ ಇತರರ ಜ್ಞಾನದಿಂದ ಮೋಕ್ಷವಾಗುವುದಿಲ್ಲ ಎಂದು ಹೇಳಿದ್ದು ಸರಿಯಲ್ಲ ಎಂದು ಆಕ್ಷೇಪಿಸಿದರೆ -

## ವಿಷ್ಣುವೇ ಪುರುಷ ಶಬ್ದವಾಚ್ಯನು

**ಪುರುಷಃ ಪರ ಆತ್ಮಾಽಜೋ ಬ್ರಹ್ಮ ನಾರಾಯಣಃ ಪ್ರಭುಃ ॥೧೯೯॥**
**ಮಹಾನಾನಂದ ಉದ್ವಿಷ್ಣುರ್ಭರ್ಗ ಓಮ ಇತೀರ್ಯತೇ ।**
**ಸ್ವಯಂ ನಾರಾಯಣೋ ದೇವೋ ನಾನ್ಯಸ್ಯೈತಾನಿ ಕಸ್ಯಚಿತ್ ॥೨೦೦॥**
**ತಸ್ಮಾದೊಮಿತ್ಯುದಾಹೃತ್ಯ ಯಜ್ಞದಾನಾದಿ ಕುರ್ವತೇ ।**

ಪುರುಷ, ಪರ, ಆತ್ಮಾ, ಅಜ, ಬ್ರಹ್ಮ, ನಾರಾಯಣ, ಪ್ರಭು, ಮಹಾನ್, ಆನಂದ, ಉತ್, ವಿಷ್ಣು, ಭರ್ಗ, ಓಂ, ಅಃ ಇತ್ಯಾದಿ ಶಬ್ದಗಳಿಂದ ಕ್ರೀಡಾವಿಶಿಷ್ಟನಾದ ನಾರಾಯಣನೇ ಮುಖ್ಯವೃತ್ತಿಯಿಂದ ಕರೆಸಲ್ಪಡುವನು. ಬೇರೆ ಯಾರಿಗೂ ಎಲ್ಲಿಯೂ ಈ ನಾಮಗಳು ಇರುವುದಿಲ್ಲ. ಓಂಕಾರವು ವಿಷ್ಣುವಿನ ನಾಮವಾಗಿರುವುದರಿಂದಲೇ, ವಿಷ್ಣುವನ್ನು ಉದ್ದೇಶಿಸಿಕೊಂಡು ಯಜ್ಞದಾನಾದಿಗಳನ್ನು ಮಾಡುವವರು ಓಂ ಎಂದು ಉಚ್ಚರಿಸಿಯೇ ಮಂತ್ರಗಳನ್ನು ಹೇಳುತ್ತಾರೆ. ಯಾರಿಗೋ ಸಂಬಂಧಿಸಿದ ನಾಮವನ್ನು ಹೇಳಿ ಇನ್ನಾರನ್ನೋ ಉದ್ದೇಶಿಸಿ ಯಜ್ಞಾದಿಗಳನ್ನು ಮಾಡುತ್ತಾರೆ ಎನ್ನುವುದು ಕೂಡುವುದಿಲ್ಲವಷ್ಟೆ.

ಯುಕ್ತಿಯಿಂದಲೂ ಪುರುಷಶಬ್ದವು ವಿಷ್ಣುಪರ ಎಂದು ತೋರಿಸುತ್ತಾರೆ -

**ಸೂಕ್ತೇನ ಪೌರುಷೇಣೈನಂ ಯಜಂತ್ಯಧ್ಯಾತ್ಮಕೋವಿದಾಃ ॥೨೦೧॥**
**ಇತಿ ಪೈಂಗಿಶ್ರುತಿಸ್ತೇನ ನಾನ್ಯಜ್ಞಾನಾದ್ವಿಮುಚ್ಯತೇ ।**

ಪರಬ್ರಹ್ಮನ ಬಗ್ಗೆ ಸರಿಯಾದ ಅರಿವುಳ್ಳ ಅಧ್ಯಾತ್ಮಕೋವಿದರು ಈ ನಾರಾಯಣನನ್ನು ಕುರಿತು ಪುರುಷಸೂಕ್ತದಿಂದಲೇ ಯಜ್ಞವನ್ನು ಮಾಡುತ್ತಾರೆ. ಹೀಗೆ ಪೈಂಗಿಶ್ರುತಿಯು ಪುರುಷಶಬ್ದಕ್ಕೆ ಪರಮಾತ್ಮನಿಗೊಬ್ಬನಿಗೇ ವಾಚ್ಯತ್ವವನ್ನು ಹೇಳಿರುವುದರಿಂದ 'ತಮೇವ ವಿದ್ವಾನ್' ಎನ್ನುವುದು ವಿಷ್ಣುಪರವೇ ಎಂದು ನಿಶ್ಚಯವಾಗುವುದು.

ವಿಷ್ಣುವನ್ನು ಬಿಟ್ಟು ಇತರರನ್ನು ತೆಗೆದುಕೊಂಡರೆ ಅನುಪಪತ್ತಿಯು ಇರುವಂತೆ ವಿಷ್ಣುವನ್ನು ತೆಗೆದುಕೊಂಡರೂ ಅನುಪಪತ್ತಿಯು ಬಂದೇ ಬರುವುದು. 'ಓಷಧೀಭ್ಯೋನ್ನಂ ಅನ್ನಾತ್ಪುರುಷಃ' ಎಂದು ಪುರುಷನಿಗೆ ವಿಕಾರತ್ವವನ್ನು ಹೇಳಿ, 'ಸ ಏವ ಪುರುಷೋನ್ನರಸಮಯಃ' ಅವನೇ ಅನ್ನರಸಮಯನೆಂದು ಹೇಳಿರುವುದರಿಂದ , ಅನ್ನರಸಮಯತ್ವವು ವಿಷ್ಣುವಿನಲ್ಲಿ ಕೂಡುವುದಿಲ್ಲ. ಪ್ರಾಣಮಯಾದಿಗಳು ವಿಕಾರಪ್ರವಾಹದ ನಡುವೆಯೇ ಉಕ್ತವಾಗಿರುವುದರಿಂದ ಅವು ವಿಷ್ಣುವಿನಲ್ಲಿ ಕೂಡುವುದಿಲ್ಲ ಎಂದು ಹೇಳಿದರೆ-

**ಬ್ರಹ್ಮಶಬ್ದೋದಿತೇ ತಸ್ಮಿನ್ನಾತ್ಮಶಬ್ದಂ ಪ್ರಯುಜ್ಯ ಚ ॥೨೦೨॥**

**ತಸ್ಮಾದಾಕಾಶಸೃಷ್ಟಿಂ ಚ ಪ್ರೋವಾಚಾತ್ರ ಚತುರ್ವಿಧಾಂ ।**

'ಬ್ರಹ್ಮವಿದಾಪ್ನೋತಿ ಪರಂ' ಇತ್ಯಾದಿಯಾಗಿ ಬ್ರಹ್ಮ ಶಬ್ದದಿಂದ ಉಕ್ತನಾದ ವಿಷ್ಣುವಿನಲ್ಲಿಯೇ 'ತಸ್ಮಾದ್ವಾ ಏತಸ್ಮಾದಾತ್ಮನಃ ಆಕಾಶಃ ಸಂಭೂತಃ' ಎಂದು ಆತ್ಮ ಶಬ್ದವನ್ನು ಪ್ರಯೋಗಿಸಿ, ಆ ಪರಮಾತ್ಮನಿಂದ ನಾಲ್ಕು ವಿಧವಾದ ಆಕಾಶ ಸೃಷ್ಟಿಯನ್ನೂ ಕೂಡ ಈ ಅನುವಾಕದಲ್ಲಿ ಹೇಳಿದರು.

ವಿಷ್ಣುವೇ ಚತುರ್ವಿಧ ಆಕಾಶಾದಿ ಶಬ್ದವಾಚ್ಯನು

**ಭೂತಂ ಭೂತಾಭಿಮಾನೀ ಚ ತದ್ದೇಹೋಽನ್ತರ್ನಿಯಾಮಕಃ ॥೨೦೩॥**

**ಹರಿಶ್ಚಾಕಾಶಶಬ್ದೋಕ್ತೋ ಮುಖ್ಯತೋ ಹರಿರೇವ ಚ ।**

**ಆಸಮಂತಾತ್ಕಾಶತೇ ಯದಾಕಾಶೋ ಮುಖ್ಯತೋ ಹರಿಃ ॥೨೦೪॥**

ಆಕಾಶ ಶಬ್ದದಿಂದ ಭೂತಾಕಾಶವೂ, ಭೂತಾಕಾಶದ ಅಭಿಮಾನಿ ಗಣಪತಿಯೂ, ಆಕಾಶಾಭಿಮಾನಿಯ ಶರೀರವೂ ಹಾಗೂ ಇವುಗಳಲ್ಲಿ ಅಂತರ್ನಿಯಾಮಕಾಗಿ ನೆಲೆಸಿರುವ ಶ್ರೀಹರಿಯೂ ಕೂಡ ಆಕಾಶ ಎನ್ನುವ ಶಬ್ದದಿಂದ ಹೇಳಲ್ಪಡುತ್ತಾನೆ. ಮುಖ್ಯವಾಗಿ ಶ್ರೀಹರಿಯೇ ಆಕಾಶ ಶಬ್ದದಿಂದ

ಪ್ರತಿಪಾದ್ಯನು. ಸುತ್ತಮುತ್ತಲೂ ಚೆನ್ನಾಗಿ ಪ್ರಕಾಶಿಸುತ್ತಾನೆ ಎನ್ನುವ ಕಾರಣದಿಂದ ಶ್ರೀಹರಿಯೇ ಮುಖ್ಯವೃತ್ತಿಯಿಂದ ಆಕಾಶ ಶಬ್ದವಾಚ್ಯನು.

ಹೀಗೆ ಮುಖ್ಯಾಮುಖ್ಯಭೇದದಿಂದ ನಾಲ್ಕು ವಿಧವಾದ ಆಕಾಶದ ದೆಶೆಯಿಂದ 'ಆಕಾಶಾದ್ವಾಯುಃ' ಎಂದು ನಾಲ್ಕು ವಿಧವಾದ ವಾಯುವಿಗೆ ಉತ್ಪತ್ತಿಯನ್ನು ಹೇಳಿದರು. ಇದೇ ರೀತಿ ಕಾರ್ಯ-ಕಾರಣ ಸಂಬಂಧವುಳ್ಳ ಅಗ್ನಿ, ಜಲ, ಪೃಥಿವೀ, ವನಸ್ಪತಿಗಳು ಹಾಗೂ ಅನ್ನಗಳಲ್ಲಿಯೂ ಮುಖ್ಯ ಹಾಗೂ ಅಮುಖ್ಯಭೇದದಿಂದ ನಾಲ್ಕು ವಿಧವೆಂದು ಹೇಳಿ, ಇವೆಲ್ಲ ಶಬ್ದಗಳಿಂದಲೂ ಮುಖ್ಯವಾಗಿ ಶ್ರೀಹರಿಯೇ ವಾಚ್ಯನೆಂದು ಹೇಳುತ್ತಾರೆ -

**ಬಲಜ್ಞಾನಸ್ವರೂಪತ್ವಾದ್ವಾಯುರಗ್ನಿರಗಂ ನಯನ್ ।**
**ಆಪ ಆಪಾಲನಾಚ್ಚೈವ ಪೃಥಿವೀ ಪ್ರಥಿತೋ ಯತಃ ॥೨೦೫॥**
**ಉಷ್ಟಾನಾಮಾಶ್ರಯತ್ವೇನ ಸ ಏವೌಷಧಿನಾಮಕಃ ।**
**ಓಷಧೀಷು ಸ್ಥಿತೋ ವಿಷ್ಣುಃ ಕ್ಷುಧಿತೈರಾಶ್ರಿತೋ ಭವೇತ್ ॥೨೦೬॥**
**ಪುರಿ ಶೇತೇ ಯತಃ ಸೋಽಥ ಪುರುಷಶ್ಚೇತಿ ಗೀಯತೇ ।**

ಬಲಜ್ಞಾನಸ್ವರೂಪನಾದ್ದರಿಂದ ಶ್ರೀಹರಿಯು ಮುಖ್ಯವಾಗಿ ವಾಯು ಶಬ್ದವಾಚ್ಯನು. (ವ ಶಬ್ದ ಬಲವಾಚಕ. ಆಯ ದಾತುವಿಗೆ ಗತಿ ಎಂದರ್ಥ. ಗತಿ ಶಬ್ದವು ಜ್ಞಾನವಾಚಕವಾದ್ದರಿಂದ ಆಯು ಎಂದರೆ ಜ್ಞಾನವೆಂದಾಗುವುದು) ನ ಗಚ್ಛತಿ ಎಂಬ ವ್ಯುತ್ಪತ್ತಿಯಿಂದ ಸ್ವತಃ ಪ್ರವರ್ತಿಸಲು ಅಶಕ್ಯವಾದ ಜಗತ್ತು ಅಗ ಎಂದು ಹೇಳಲ್ಪಡುವುದು. ಇಂಥಹ ಜಗತ್ತನ್ನು ಪ್ರವರ್ತಿಸುವುದರಿಂದ ಮುಖ್ಯವಾಗಿ ಅಗ್ನಿ ಶಬ್ದವಾಚ್ಯನು. ಎಲ್ಲವನ್ನೂ ಚೆನ್ನಾಗಿ ರಕ್ಷಿಸುವುದರಿಂದ ಮುಖ್ಯವಾಗಿ ಶ್ರೀಹರಿಯೇ ಆಪಃ ಶಬ್ದವಾಚ್ಯನು. ವಿಸ್ತೃತನಾಗಿರುವ ಪ್ರಯುಕ್ತ (ಪೃಥು ವಿಸ್ತಾರೇ) ಮುಖ್ಯವಾಗಿ ಪೃಥಿವೀ ಶಬ್ದ ವಾಚ್ಯನು ಶ್ರೀಹರಿಯೇ. ಸಂಸಾರದಲ್ಲಿ ಸುಡಲ್ಪಟ್ಟವರಿಗೆ ಮುಖಾಶ್ರಯನಾಗಿರುವುದರಿಂದ ಮುಖ್ಯವಾಗಿ ಓಷಧಿನಾಮಕನು ಶ್ರೀಹರಿಯೇ. ಓಷಧಿನಾಮಕನಾಗಿ ವನಸ್ಪತಿಗಳಲ್ಲಿರುವ ವಿಷ್ಣುವು ಜಾಠರಾಗ್ನಿಯಿಂದ ಸುಡಲ್ಪಟ್ಟವರಿಂದ, ಹಸಿವೆಯಿಂದ ಬಾಧಿತರಾದ ಜನರಿಂದ, ಆಶ್ರಯಿಸಲ್ಪಡುವನು. ಎಲ್ಲರ ಶರೀರಗಳಲ್ಲಿ ನಿಯಾಮಕನಾದ ಪ್ರಯುಕ್ತ ಶ್ರೀಹರಿಯು ಮುಖ್ಯವಾಗಿ ಪುರುಷನೆಂದು ಗಾನಮಾಡಲ್ಪಡುವನು.

ಈ ರೀತಿಯಾಗಿ ಆತ್ಮಾದಿ ಶಬ್ದಗಳಿಗೆ ವ್ಯಾಖ್ಯಾನಮಾಡಿ ಅವುಗಳ ಸೃಷ್ಟಿಯನ್ನು ವಿವರಿಸುತ್ತಾರೆ -

### ಜನಿಸ್ವರೂಪ ನಿರೂಪಣೆ

**ಕ್ರಿಯಾಪ್ರವರ್ತಕತ್ವೇನ ಪ್ರಾದುರ್ಭಾವೋ ಹರೇರ್ಜನಿಃ ॥೨೦೭॥**

**ಆಕಾಶಾದಿಷು ನಾನ್ಯಾಸ್ತಿ ಹ್ಯಭಿಮಾನೋಭಿಮಾನಿನಃ ।**

**ಅಭಿಮಾನಿ ಶರೀರಸ್ಯ ಸಾಕ್ಷಾದ್ಭೂತಸ್ಯ ಚೋದ್ಭವಃ ॥೨೦೮॥**

ಆಕಾಶಾದಿಗಳಲ್ಲಿ ಆಯಾ ಕ್ರಿಯೆಗಳನ್ನು ಪ್ರವರ್ತಿಸುವ ನಿಮಿತ್ತದಿಂದ ಅಭಿವ್ಯಕ್ತಿ ವಿಶೇಷವೇ ಶ್ರೀಹರಿಗೆ ಉತ್ಪತ್ತಿ ಎನಿಸುವುದು. ಬೇರೆ ವಿಧವಾದ ಉತ್ಪತ್ತಿಯು ಅವನಿಗಿಲ್ಲ. ಇದು ಶ್ರುತಿಪ್ರಸಿದ್ಧ. ಭೂತಾದಿ ಅಭಿಮಾನಿಗೆ ನನ್ನದು ಎಂಬ ಅಭಿಮಾನ ಬುದ್ಧಿಯೇ ಉತ್ಪತ್ತಿಯು. ಅಭಿಮಾನಿ ಶರೀರಕ್ಕೆ ಹಾಗೂ ಪಂಚಭೂತಗಳಿಗೆ ಸಾಕ್ಷಾತ್ ಉತ್ಪತ್ತಿಯೇ ಜನಿ ಎನಿಸುವುದು.

ಈ ಪ್ರಕಾರವಾಗಿ ಆತ್ಮ, ಆಕಾಶ ಮೊದಲಾದ ಶಬ್ದಗಳಿಂದ ಮುಖ್ಯವಾಗಿ ಶ್ರೀಹರಿಯೇ ಹೇಳಲ್ಪಟ್ಟಿದ್ದಾನೆ. ಪರಮಾತ್ಮನಿಂದ ಬೇರೆಯಾದ ಭೂತಾದಿಗಳು ಅಮುಖ್ಯ ವೃತ್ತಿಯಿಂದ ವಾಚ್ಯವಾಗಿವೆ. ಇದರಿಂದ ಏನು ತಿಳಿಸಿದಂತಾಯಿತು ಎಂದು ಕೇಳಿದರೆ -

### 'ಸ ವಾ ಏಷ' ಶ್ರುತ್ಯರ್ಥ

**ಏವಂ ದೇಹಾದಿಪರ್ಯಂತಮಾಗತಂ ಹರಿಮೇವ ತು ।**

**ಪರಾಮೃಶತಿ ತಸ್ಯೈವ ಪಂಚರೂಪತ್ವವಿತ್ತಯೇ ॥೨೦೯॥**

**ತ್ಯಕ್ತ್ವಾ ಭೂತಾದಿಕಂ ಸರ್ವಂ ಸ ವಾ ಏಷ ಇತಿ ಶ್ರುತಿಃ ।**

'ಸ ವಾ ಏಷ ಪುರುಷಃ' ಎನ್ನುವ ಶ್ರುತಿಯು ಅಲ್ಲಿ ಹೇಳಲ್ಪಟ್ಟಿರುವ ಭೂತಾದಿ ಎಲ್ಲವನ್ನೂ ಬಿಟ್ಟು, ಆತ್ಮಾದಿ ದೇಹಪರ್ಯಂತವಾಗಿ ಹೇಳಲ್ಪಟ್ಟ ಆಯಾಯ ಶಬ್ದಗಳಿಂದ ಮುಖ್ಯವಾಗಿ ಪರಮಾತ್ಮನ ಬಗ್ಗೆಯೇ ವಿಚಾರ ಮಾಡುತ್ತದೆ. ಸೃಷ್ಟಿಕರ್ತನಾದ ಆ ಶ್ರೀಹರಿಯಲ್ಲಿಯೇ ಅನ್ನಮಯಾದಿ ಪಂಚರೂಪತ್ವವನ್ನು ಪ್ರತಿಪಾದಿಸಲು ಹೀಗೆ ಪರಾಮರ್ಶೆ ಮಾಡುತ್ತದೆ.

ಹಾಗಾದರೆ ಪರಮಾತ್ಮನ ಬಗ್ಗೆಯೇ ಶ್ರುತಿಯು ಹೇಳುತ್ತದೆ ಎಂಬುದಾಗಿ ಹೀಗೆ ಬಹು ಪ್ರಯತ್ನದಿಂದ ಏಕೆ ಸಾಧಿಸಬೇಕು. ಶ್ರುತಿಯಲ್ಲಿ ಕೇವಲ

ಶರೀರವನ್ನೇ ಪರಾಮರ್ಶೆ ಮಾಡಲಾಗಿದೆ ಎಂದು ಏಕೆ ಭಾವಿಸಬಾರದು ಎನ್ನುವುದು ಸರಿಯಲ್ಲ. ಹಾಗೆ ಇಟ್ಟುಕೊಂಡರೆ 'ಏಷಃ ಪುರುಷಃ' ಎಂಬುದಷ್ಟೇ ಸಾಕಾಗುವುದು, ಸಃ ಎಂಬುದು ವ್ಯರ್ಥವಾಗಬೇಕಾಗುವುದು. ಆದ್ದರಿಂದ ನಮ್ಮ ರೀತಿಯಲ್ಲಿಯೇ ಶ್ರುತಿಯು ಪರಾಮರ್ಶೆ ಮಾಡಿದೆಯೆಂದು ಹೇಳುತ್ತಾರೆ -

**ಸ ಇತ್ಯಾತ್ಮಪದೋದ್ದಿಷ್ಟಃ ಏಷ ಜೀವ ಶರೀರಗಃ ||೨೧೦||**
**ಸಾರಾನ್ನಮಯ ಏವಾಯಂ ನ ಲೋಕಾನ್ನಮಯಃ ಪ್ರಭುಃ |**
**ಇತಿ ತಂ ರಸಶಬ್ದೇನ ವಿಶಿನಷ್ಟಿ ಶರೀರಗಂ ||೨೧೧||**

ಮೇಲೆ ಉದಾಹರಿಸಿದ ಶ್ರುತಿಯಲ್ಲಿನ **ಸಃ** ಎನ್ನುವ ಪದದಿಂದ ಆತ್ಮ ಶಬ್ದದಿಂದ ಹೇಳಲ್ಪಟ್ಟವನು ಪರಾಮರ್ಶೆ ಮಾಡಲ್ಪಟ್ಟಿದ್ದಾನೆ. **ಏಷಃ** ಎನ್ನುವ ಪದದಿಂದ ಸರ್ವಜೀವರ ಶರೀರದಲ್ಲಿ ಅಂತರ್ಗತನಾಗಿ ನಿಯಾಮಕನಾಗಿರುವ ರೂಪವು ಪರಾಮರ್ಶೆ ಮಾಡಲ್ಪಡುತ್ತದೆ. ಸರ್ವಸಮರ್ಥನಾದ ಈ ಶ್ರೀಹರಿಯು ಶ್ರೇಷ್ಠವಾದ ಅನ್ನಮಯನೇ ಆಗಿರುವನು, ಲೌಕಿಕವಾದ ಅನ್ನಪ್ರಚುರನಲ್ಲ ಎನ್ನುವುದನ್ನು ಸ್ಪಷ್ಟಪಡಿಸುವುದಕ್ಕಾಗಿ ಶ್ರುತಿಯು ಶರೀರದಲ್ಲಿ ಅಂತರ್ಗತನಾಗಿರುವ ಪರಮಾತ್ಮನನ್ನು **ರಸ** ಎನ್ನುವ ವಿಶೇಷಣದಿಂದ ಯುಕ್ತನನ್ನಾಗಿ ಹೇಳಿದೆ.

ಶರೀರಕ್ಕೆ ಪರಾಮರ್ಶೆಯೆಂದು ಇಟ್ಟುಕೊಂಡರೆ 'ತಸ್ಯೇದಮೇವ ಶಿರಃ| ಅಯಂ ದಕ್ಷಿಣಪಕ್ಷಃ|' ಇತ್ಯಾದಿ ಅವಯವಗಳ ಉಲ್ಲೇಖವು ಪ್ರತ್ಯಕ್ಷವೇ ಆಗಿರುವುದರಿಂದ ವ್ಯರ್ಥವೇ ಆಗುವುದು. ಈಶ್ವರನ ವಿಷಯವೆಂದು ಇಟ್ಟುಕೊಂಡರೆ, ಅವನಿಗೆ ಅವಯವಾದಿಗಳು ಇಲ್ಲವಾದ್ದರಿಂದ ಅನುಪಪತ್ತಿಯು ಬಂದೇ ಬರುವುದು. ಹೀಗೆ ಆಕ್ಷೇಪಿಸಿದರೆ -

'ತಸ್ಯೇದಮೇವ ಶಿರ' ಇತ್ಯಾದಿ ಶ್ರುತ್ಯರ್ಥ

**ಇದಮಿತ್ಯೇವ ನಿರ್ದೇಶೋ ವಸ್ತ್ರಪ್ರಾವೃತವದ್ವಿಭೋಃ |**
**ಶಿರ ಆದೇರ್ಭವೇಜ್ಜೀವ ಶಿರ ಆದೌ ವ್ಯವಸ್ಥಿತೇಃ || ೨೧೨||**
**ತಂ ವಿದಿತ್ವಾಽಸ್ಯ ಮುಕ್ತಿಃ ಸ್ಯಾನ್ನಾನ್ಯ ಜ್ಞಾನಾತ್ಕಥಂಚನ |**

ಜೀವರುಗಳ ಶಿರಸ್ಸು ಮೊದಲಾದವುಗಳಲ್ಲಿ ಪರಮೇಶ್ವರನ ಶಿರಸ್ಸು ಮೊದಲಾದವುಗಳು ವಿಶೇಷ ರೀತಿಯಲ್ಲಿ ಅವಸ್ಥಿತಿ ಹೊಂದಿರುವ ಪ್ರಯುಕ್ತ

'ಇದಂ ಶಿರಂ' ಇತ್ಯಾದಿ ಶ್ರುತಿ ನಿರ್ದೇಶವು ಕೂಡುವುದು. ವಸ್ತ್ರದಿಂದ ಮುಚ್ಚಲ್ಪಟ್ಟ ಕಾಲು ಮೊದಲಾದವುಗಳನ್ನು ವಸ್ತ್ರವನ್ನು ತೋರಿಸಿ ಇದು ಕಾಲು ಇತ್ಯಾದಿ ಹೇಳುವುದು ಹೇಗೆ ಕೂಡುವುದೋ ಹಾಗೆಯೇ ಇಲ್ಲಿಯೂ ತಿಳಿಯಬೇಕು. ಪರಮಾತ್ಮನನ್ನು ಈರೀತಿಯಾಗಿ ತಿಳಿದುಕೊಳ್ಳುವ ಜ್ಞಾನಿಗೆ ಮೋಕ್ಷವಾಗುವುದು. ಪರಮಾತ್ಮನ ಹೊರತು ಬೇರೆಯವರ ಜ್ಞಾನದಿಂದ ಯಾವ ರೀತಿಯಿಂದಲೂ ಮೋಕ್ಷವಾಗಲಾರದು.

ಅನ್ನದ ವಿಕಾರವಾಗಿರುವ ಶರೀರವನ್ನು ಹೊಂದಿರುವುದರಿಂದ ಜೀವನೇ ಅನ್ನಮಯಾದಿ ಶಬ್ದವಾಚ್ಯನು. ಶರೀರಕ್ಕೆ ಸಂಬಂಧಿಸಿದ ಶಿರಸ್ಸು ಮೊದಲಾದ ಅವಯವಗಳು ಉಕ್ತವಾಗಿರುವ ಪ್ರಯುಕ್ತ ಅನ್ನಮಯಾದಿ ವಾಚ್ಯತ್ವವು ಜೀವನಲ್ಲಿ ಕೂಡುವುದು. 'ಬ್ರಹ್ಮಪುಚ್ಛಂ ಪ್ರತಿಷ್ಠಾ' ಎಂದಿರುವುದರಿಂದ ಜೀವನಲ್ಲಿ ಕೂಡುವುದಿಲ್ಲ ಎನ್ನಬಾರದು. ಈ ಜೀವನಿಗೆ ಬ್ರಹ್ಮ ಪುಚ್ಛ ಎನ್ನುವುದು ಅಧಿಷ್ಠಾನ ಅಥವಾ ನಿಜಸ್ವರೂಪ ಎನ್ನುವ ಅರ್ಥದಲ್ಲಿ ಕೂಡುವುದು. ಆದ್ದರಿಂದ ಜೀವಾದಿಗಳು ಅನ್ನಮಯಾದಿ ಶಬ್ದವಾಚ್ಯರಲ್ಲ ಎಂದು ಹೇಳುವ ಹಿಂದಿನ ಸೂತ್ರವು ಅಯುಕ್ತವು. ಅನ್ನಮಯಾದಿ ಶಬ್ದವಾಚ್ಯತ್ವವು ಜೀವರಿಗೂ ಕೂಡುವುದು ಎಂದು ಆಶಂಕಿಸಿದರೆ ಅದನ್ನು ಮುಂದಿನ ಸೂತ್ರದಿಂದ ನಿರಾಕರಿಸುತ್ತಾರೆ.

**ಸೂತ್ರ: ಓಂ ಭೇದವ್ಯಪದೇಶಾಚ್ಚ ಓಂ (೧-೧-೧೭)**

ಆನಂದಮಯನ ದೆಶೆಯಿಂದ ಜೀವಾದಿಗಳಿಗೆ ಭೇದವನ್ನು ಹೇಳಿರುವ ಪ್ರಯುಕ್ತ ಆನಂದಮಯನು ವಿಷ್ಣುವ್ಯತಿರಿಕ್ತರಾದ ಜೀವಾದಿಗಳು ಆಗಲಾರರು.

ಜೀವಬ್ರಹ್ಮರ ಅಭೇದವು ಇಲ್ಲಿ ವಿವಕ್ಷಿತವಲ್ಲ

**ಆದಿತ್ಯೇ ಪುರುಷೇ ಚಾಯಮಿತಿ ಭೇದೋಪದೇಶತಃ ॥೨೧೩॥**

**ನಾಸ್ಯಾಭೇದೋಸ್ತಿ ಜೀವೇನ ..................................।**

ಆದಿತ್ಯನಲ್ಲಿಯೂ, ಪುರುಷನಲ್ಲಿಯೂ ಈ ಪರಬ್ರಹ್ಮನೇ ನಿಯಾಮಕನು ಎಂದು ಬೇದವನ್ನೇ ಹೇಳಿರುವುದರಿಂದ, ಈ ಪರಬ್ರಹ್ಮನಿಗೆ ಜೀವನೊಂದಿಗೆ ಐಕ್ಯವು ಕೂಡುವುದಿಲ್ಲ.

ಈ ಉಪನಿಷತ್ತಿನಲ್ಲಿ ಜೀವ ಪರಮಾತ್ಮರಿಗೆ ಭೇದವೇ ವಿವಕ್ಷಿತವಾಗಿದ್ದರೆ

ಆನಂದಮಯಾದಿಗಳು ಜೀವಪರ ಎಂದು ಹೇಳಬಹುದಿತ್ತು. ಆದರೆ ಹೀಗೆ ಹೇಳಿಲ್ಲ. 'ಸ ಯಶ್ಚಾಯಂ ಪುರುಷೇ ಯಶ್ಚಾಸಾವಾದಿತ್ಯೇ ಸ ಏಕಃ' ಎಂದು ಪುರುಷ, ಆದಿತ್ಯ ಶಬ್ದಗಳಿಂದ ಉಪಲಕ್ಷಿತರಾದ ಸಮಸ್ತ ಜೀವರೂ ನಿಯಮ್ಯರಾಗಿರುವುದರಿಂದ ಅಧಿಕರಣರೂ, ಉತ್ಕೃಷ್ಟನಾದ ಪರಮಾತ್ಮನು ನಿಯಾಮಕನಾದ್ದರಿಂದ ಅಧಿಷ್ಠಾತೃವೂ ಎಂಬುದಾಗಿ ಹೇಳಲ್ಪಟ್ಟಿದ್ದಾರೆ. ಅಲ್ಲದೇ 'ರಸ ಹ್ಯೇವಾಯಂ ಲಬ್ಧ್ವಾ ನಂದೀ ಭವತಿ' 'ಶ್ರೇಷ್ಠನಾದ ಇವನ್ನು ಹೊಂದಿಯೇ ಜೀವನು ಆನಂದವನ್ನು ಗಳಿಸುತ್ತಾನೆ' ಎಂದು ಈಶ-ಜೀವರಿಗೆ ಪ್ರಾಪ್ಯ-ಪ್ರಾಪಕತ್ವವು ಉಕ್ತವಾಗಿದೆ. ಇಲ್ಲಿ ಭೇದೋಪದೇಶವು ಸ್ಪಷ್ಟವೇ ಆಗಿರುವುದು.

ಅನುಮಾನದಿಂದ ಜೀವ ಬ್ರಹ್ಮರಿಗೆ ಅಭೇದವೇ ತಿಳಿದುಬರುವುದರಿಂದ ಭೇದವ್ಯಪದೇಶವು ಕೂಡುವುದಿಲ್ಲ, ಕೇವಲ ವ್ಯಾವಹಾರಿಕ ಭೇದವು ಕೂಡಬಹುದಷ್ಟೆ. ಅನುಮಾನದ ವಿರೋಧ ಬರುವುದರಿಂದ ವಾಸ್ತವವಾಗಿ ಅಭೇದವೇ ವಿವಕ್ಷಿತ ಎಂದರೆ ಮುಂದಿನ ಸೂತ್ರದಿಂದ ಈ ಆಕ್ಷೇಪವನ್ನು ನಿರಾಕರಿಸುತ್ತಾರೆ -

**ಸೂತ್ರ: ಓಂ ಕಾಮಾಚ್ಚ ನಾನುಮಾನಾಪೇಕ್ಷಾ ಓಂ (೧-೧-೧೮)**

ಅನಮಾನವು ವ್ಯಕ್ತಿಯ ಮನಸ್ಸಿಗೆ ತಕ್ಕಂತೆ ಪ್ರವೃತ್ತವಾಗುವುದರಿಂದ, ಅದೃಷ್ಟದ ವಿಷಯದಲ್ಲಿ ಕೇವಲ ಅನುಮಾನವು ಅಪೇಕ್ಷಿತವಲ್ಲ.

ಕಾಮಚಾರಿಯಾದ ಅನುಮಾನವು ಅಭೇದಸಾಧಕವಲ್ಲ

**...................................ನಾನುಮಾ ಕಾಮಚಾರಿಣೀ ।**
**ವಿಮತಾನಿ ಶರೀರಾಣಿ ಮದ್ಭೋಗಾಯತನಾನಿ ಯತ್ ॥೨೧೪॥**
**ಶರೀರಾಣೀತ್ಯಾದಿಕಾ ತು ತತ್ತ್ವಜ್ಞಾನೇ ಹ್ಯಪೇಕ್ಷ್ಯತೇ ।**
**ಪ್ರತ್ಯಕ್ಷಾದಿ ವಿರುದ್ಧತ್ವಾದಕ್ಷಾಗಮಭಯೋಜ್ಝಿತಾ ॥೨೧೫॥**
**ಅನುಮಾ ಕಾಮವೃತ್ತಾ ಹಿ ಕುತ್ರ ನಾವಸರಂ ವ್ರಜೇತ್ ।**
**ಜಡ ಆತ್ಮೈವ ವಸ್ತುತ್ವಾತ್ಪ್ರಮೇಯತ್ವಾಜ್ಜಡಂ ಚಿತಿಃ ॥೨೧೬॥**
**ಘನ ಆಕಾಶ ಇತ್ಯಾದ್ಯಾ ವಾರ್ಯತೇ ಕೇನ ಹೇತುನಾ ।**

ಅನುಮಾನವು ಇಚ್ಛಾನುಸಾರಿಯಾದ್ದರಿಂದ ಅದೃಷ್ಟವಾದ ಪರಬ್ರಹ್ಮನಿಗೂ

ಜೀವನಿಗೂ ಅಭೇದವನ್ನು ಕೇವಲ ಅನುಮಾನದಿಂದ ನಿರ್ಣಯಿಸುವುದು ಶಕ್ಯವಿಲ್ಲ. ಇದಕ್ಕೆ ದೃಷ್ಟಾಂತವನ್ನು ಕೊಡುತ್ತಾರೆ. ವಿವಾದ ವಿಷಯಗಳಾದ ಚೈತ್ರಮೈತ್ರಾದಿ ಶರೀರಗಳು ನನ್ನ ಭೋಗಕ್ಕೆ ಆಶ್ರಯಗಳು ಅವು ನನ್ನ ಶರೀರದಂತೆ ಶರೀರಗಳಾಗಿರುವುದರಿಂದ. ಅದರಂತೆಯೇ ಚೈತ್ರಮೈತ್ರಾದಿಗಳ ಇಂದ್ರಿಯಗಳು ನನಗೇನೆ ಯಥಾರ್ಥಜ್ಞಾನಕ್ಕೆ ಕಾರಣವಾಗಿವೆ, ಅವು ನನ್ನ ಇಂದ್ರಿಯಗಳಂತೆಯೇ ಇಂದ್ರಿಯಗಳಾಗಿರುವುದರಿಂದ ಎಂಬಿತ್ಯಾದಿ ಅನುಮಾನ ಮಾಡುವುದು ಸಾಧ್ಯವಿದೆ. ಆದಕಾರಣ ಪ್ರತ್ಯಕ್ಷಾನುಭವಕ್ಕೆ ವಿರುದ್ಧವಾದ ಅನುಮಾನವು ಪ್ರಮಾಣವಾಗಲಾರದು. ಪುರುಷನ ಇಚ್ಛಾನುಸಾರವಾದ ಪ್ರವೃತ್ತಿಯುಳ್ಳ ಅನುಮಾನಕ್ಕೆ, ಪ್ರತ್ಯಕ್ಷ ಆಗಮಗಳಿಗೆ ವಿರೋಧವಾಗಿದ್ದರೂ, ಭಯವೇ ಇರುವುದಿಲ್ಲ. ಇಂಥಹ ಅನುಮಾನವು ಎಲ್ಲಿ ತಾನೇ ಅವಕಾಶವು ಇರಲು ಸಾಧ್ಯ? ಜೀವನು ವಸ್ತುವಾಗಿರುವುದರಿಂದ ಜ್ಞಾನಕ್ಕೆ ಆಶ್ರಯವಾಗದ ಜಡದಂತೆ ಅವನೂ ಜಡ, ಘಟ ಮೊದಲಾದ ವಸ್ತುಗಳು ಚೇತನಗಳು ಅವುಗಳಂತೆ ಪ್ರಮೇಯವಾಗಿರುವುದರಿಂದ, ಆಕಾಶ ನಿಬಿಡವಾಗಿದೆ ಕಲ್ಲಿನಂತೆ ಅದೂ ಒಂದು ಜಡವಸ್ತುವಾಗಿರುವುದರಿಂದ, ಇತ್ಯಾದಿ ಅನುಮಾನಗಳನ್ನು ಮಾಡುವುದು ಸಾಧ್ಯ. ಪ್ರತ್ಯಕ್ಷಾದಿಗಳಿಗೆ ವಿರುದ್ಧವಾದ ಅನುಮಾನವನ್ನು ಪ್ರಮಾಣವೆಂದು ಅಂಗೀಕರಿಸಿದರೆ, ಮೇಲೆ ಉದಾಹರಿಸಿರುವ ಅಪ್ರಾಮಾಣಿಕ ವಿಷಯಗಳನ್ನು ಪ್ರಮಾಣವೆಂದು ಒಪ್ಪಬೇಕಾಗುವುದು.

ಹಾಗಾದರೆ ಜಿಜ್ಞಾಸಾಧಿಕರಣ ಹಾಗೂ ಜನ್ಮಾದ್ಯಧಿಕರಣಗಳ ವ್ಯಾಖ್ಯಾನದ ಸಂದರ್ಭದಲ್ಲಿಯೇ ಜೀವೇಶಭೇದವು ಸಮರ್ಥಿಸಲ್ಪಟ್ಟಿರುವಾಗ, ಪುನಃ ಅದನ್ನೇ ಸಾಧಿಸುವುದು ಪುನರುಕ್ತಿಯಾಗುವುದು ಎಂದರೆ -

**ನ ಜೀವಭೇದಸೂತ್ರಾಣಾಂ ಶಂಕ್ಯಾತ್ರ ಪುನರುಕ್ತತಾ ॥೨೧೭॥**

**ವಾಕ್ಯಾಂತರದ್ಯೋತಕತ್ವಾತ್ ಪೃಥಗಿತ್ಯತ್ರ ಪೂರ್ಣತಾ ।**

ಶಾಸ್ತ್ರದಲ್ಲಿ ಆಯಾಯ ಪ್ರಕರಣಗಳಲ್ಲಿ ಕಂಡುಬರುವ ಐಕ್ಯಪರವೆಂದು ತೋರುವ ವಾಕ್ಯಗಳಿಗೆ ಅವುಗಳಲ್ಲಿಯೇ ಅಡಗಿರುವ ಭೇದಸಾಧಕವಾದ ವಾಕ್ಯಾಂತರವನ್ನು ತೋರಿಸಿಕೊಡುವುದರಿಂದ ಸೂತ್ರಗಳಿಗೆ ಭೇದಪರತ್ವವನ್ನು ಸಮರ್ಥನೆ ಮಾಡಲಾಗುತ್ತದೆ. ಹೀಗೆ ತಾತ್ಪರ್ಯಭೇದದ ದೆಶೆಯಿಂದ ಶಾಸ್ತ್ರಕ್ಕೆ

ಪುನರುಕ್ತಿ ದೋಷವು ಬರುವುದಿಲ್ಲ. ಶಾಸ್ತ್ರಕಾರರು ಜಿಜ್ಞಾಸಾ ವಾಕ್ಯಗಳಲ್ಲಿರುವ ಅಭೇದಶಂಕೆಯನ್ನು ಅಲ್ಲಿ ಉಕ್ತವಾಗಿರುವ ಬ್ರಹ್ಮಶಬ್ದದಿಂದಲೇ ನಿರಾಕರಿಸಿ ಭೇದಸಮರ್ಥನೆಯನ್ನು ಮಾಡಿದ್ದಾರೆ. ಸೂತ್ರಕಾರರು 'ಪೃಥಗುಪದೇಶಾತ್' ಎನ್ನುವಲ್ಲಿ ಪ್ರಧಾನವಾಗಿ ಭೇದವನ್ನೇ ಪ್ರತ್ಯೇಕವಾಗಿ ಸಮರ್ಥನೆ ಮಾಡಿದ್ದಾರೆ.

ಶರೀರಾದಿ ಕೋಶಗಳು ಅನ್ನಮಯಾದಿ ಶಬ್ದವಾಚ್ಯಗಳು ಎನ್ನುವ ಪಕ್ಷವೂ ಕೂಡ 'ನೇತರೋನುಪಪತ್ತೇಃ' ಎಂಬುದಾಗಿ ಸಾಧಾರಣ ದೋಷದಿಂದ ದೂಷಿತವೇ ಆಗಿದ್ದರೂ, ಪುನಃ ವಿಶೇಷವಾದ ದೂಷಣೆಯನ್ನು ಹೇಳುತ್ತಾರೆ -

**ಸೂತ್ರ: ಓಂ ಅಸ್ಮಿನ್ನಸ್ಯ ಚ ತದ್ಯೋಗಂ ಶಾಸ್ತಿ ಓಂ (೧-೧-೧೯)**

ಈ ಪ್ರಕರಣದಲ್ಲಿ ಬ್ರಹ್ಮನಿಂದ ಇತರನಾದ ಜೀವನಿಗೆ ಮುಕ್ತಿಯಲ್ಲಿಯೂ ಆನಂದಮಯಾದಿ ರೂಪನಾದ ಬ್ರಹ್ಮನೊಂದಿಗೆ ಕೂಡಿಕೊಂಡು ಭೋಗ ಸಂಬಂಧವನ್ನು ಶ್ರುತಿಯು ಶಾಸನ ಮಾಡುವುದರಿಂದ ಐಕ್ಯವು ಕೂಡುವುದಿಲ್ಲ. ಜೀವಬ್ರಹ್ಮರ ಭೇದವೇ ಇಲ್ಲಿ ಉಕ್ತವಾಗಿದೆ. ಆದಕಾರಣ ಆನಂದಮಯ ಶಬ್ದವಾಚ್ಯನು ಪರಬ್ರಹ್ಮನೇ ಹೊರತು ಜೀವನಲ್ಲ.

### ಅನ್ನಮಯಾದಿಗಳಿಗೆ ಕೋಶಪರತ್ವ ನಿರಾಕರಣೆ

**ಯೋಗಮನ್ನಮಯಾದ್ಯೈರ್ಯತ್ಫಲತ್ವೇನಾಸ್ಯ ಶಂಸತಿ ॥೨೧೮॥**
**ಸ್ಥಾನದ್ವಯೇಪ್ಯತಃ ಕೋಶಾ ಏತ ಇತ್ಯತಿಸಾಹಸಂ ।**

'ಸ ಯ ಏವಂವಿತ್' ಎಂದು ಉಕ್ತನಾದ ಬ್ರಹ್ಮಜ್ಞಾನಿಗೆ ಫಲವಾಗಿ ಅನ್ನಮಯಾದಿ ಭಗವದ್ರೂಪಗಳ ಉಪಾಸನೆಯಿಂದ ಅನ್ನಮಯಾದಿಗಳ ಪ್ರಾಪ್ತಿಯನ್ನು ಎರಡು ಅನುವಾಕುಗಳಲ್ಲಿಯೂ 'ಏವಮನ್ನಮಯಮಾತ್ಮಾನ-ಮುಪಸಂಕ್ರಾಮತಿ। ಏತಮನ್ನಮಯಮಾತ್ಮಾನಮುಪಸಂಕ್ರಮ್ಯ।' ಇತ್ಯಾದಿಯಾಗಿ ಶ್ರುತಿಯು ಹೇಳುತ್ತದೆ. ಶರೀರಾದಿಗಳು ಶೋಕರೂಪವಾಗಿರುವುದರಿಂದ ಶರೀರದ ಕೋಶಗಳನ್ನೇ ಅನ್ನಮಯಾದಿಗಳೆಂದು ಪರಿಗಣಿಸಿದರೆ 'ತರತಿ ಶೋಕಮಾತ್ಮವಿತ್' ಇತ್ಯಾದಿ ಶ್ರುತಿಗಳಿಗೆ ವಿರೋಧ ಬರುವುದು. ಆದಪ್ರಯುಕ್ತ ಅನ್ನಮಯಾದಿ ಕೋಶಗಳೇ ಇಲ್ಲಿ ಹೇಳಲ್ಪಟ್ಟಿವೆ ಎನ್ನುವ, ಪೂರ್ವೋತ್ತರಗಳನ್ನು ಪರಾಮರ್ಶಿಸದೇ ಮಾಡಿರುವ, ಈ ವ್ಯಾಖ್ಯಾನವು ಅಸಂಗತವಾಗುವುದು.

ಉಪಸಂಕ್ರಮ ಶಬ್ದವು ಅತಿಕ್ರಮಾರ್ಥಕವಾಗಿರುವುದರಿಂದ ಅನ್ನಮಯಾದಿ ಪ್ರಾಪ್ತಿಯು ಇಲ್ಲಿ ಹೇಳಲ್ಪಟ್ಟಿಲ್ಲ ಎಂದರೆ -

**ಉಪಸಂಕ್ರಮಣಂ ಚೈವ ದ್ವಿತೀಯೋದ್ದೇಶಿತಂ ಪ್ರತಿ ॥೨೧೯॥**

**ಅತಿಕ್ರಮಂ ವದಂತಂ ತಮುಪಶಬ್ದೋ ನಿವಾರಯೇತ್ ।**

ದ್ವಿತೀಯಾ ವಿಭಕ್ತಿಯಿಂದ ಕರ್ಮವಾಗಿ ಹೇಳಲ್ಪಟ್ಟ ಅನ್ನಮಯಾದಿಗಳನ್ನು ಕುರಿತುಇಲ್ಲಿ ಉಪಸಂಕ್ರಮಣವು ಹೇಳಲ್ಪಟ್ಟಿದೆ. ಅದು ಅತಿಕ್ರಮಾರ್ಥಕವೆಂದು ಹೇಳುವವನನ್ನು ಉಪ ಶಬ್ದವು ನಿವಾರಿಸುವುದು. ಏಕೆಂದರೆ ಉಪಪೂರ್ವಕವಾದ ಕ್ರಮ್ ಧಾತುವು ಪ್ರಾಪ್ತ್ಯರ್ಥಕ್ಕೆ ಕಾರಣವಾಗಿದೆ.

**ಅಶ್ರುತಸ್ಯಾತಿಶಬ್ದಸ್ಯ ಸ್ಥಾನಂ ದದ್ಯಾತ್ಕಥಂ ಪುನಃ ॥೨೨೦॥**

**ಶ್ರುತಾಶ್ರುತಪರಿತ್ಯಾಗಕಲ್ಪನೇ ವಿಗತಹ್ರಿಯಾಂ ।**

**ಮೃತಾವೇವ ಪರಿತ್ಯಾಗಃ ಕೃತೋ ಹ್ಯನ್ನಮಯಸ್ಯ ಚ ॥೨೨೧॥**

ಇಲ್ಲಿ ಪುನಃ ಶಬ್ದವು ದೋಷಾಂತರ ಸೂಚಕ. ಈ ರೀತಿಯ ವ್ಯಾಖ್ಯಾಯದಿಂದ ಶ್ರುತವಾದ ಉಪ ಶಬ್ದವನ್ನು ತ್ಯಜಿಸಿ ಅಶ್ರುತವಾದ ಅತಿ ಶಬ್ದಕ್ಕೆ ಸ್ಥಾನವನ್ನು ಕೊಟ್ಟಂತಾಗುವುದು. ಇದರಿಂದ ಶ್ರುತಪರಿತ್ಯಾಗ ಮತ್ತು ಅಶ್ರುತ ಕಲ್ಪನಾ. ಎನ್ನುವ ಎರಡು ರೀತಿಯ ದೋಷಗಳು ಬರಬೇಕಾಗುವುದು. ಇವೆರಡೂ ಲಜ್ಜೆಗೆ ಕಾರಣಗಳು. ಧಾತುಗಳಿಗೆ ಅನೇಕಾರ್ಥವಿರುವುದರಿಂದ ನಮ್ಮ ವ್ಯಾಖ್ಯಾನಕ್ಕೆ ದೋಷವಿಲ್ಲವೆಂದು ಪರರು ಹೇಳುವುದು ಸರಿಯಲ್ಲ. ಏಕೆಂದರೆ ಅನ್ನಮಯ ಮತ್ತು ಪ್ರಾಣಮಯ ಕೋಶಗಳ ಪರಿತ್ಯಾಗವು ಶರೀರ ಮರಣವನ್ನು ಹೊಂದಿದಾಗಲೇ ಮಾಡಲ್ಪಡುತ್ತವೆ.

ಹೀಗೆ ಅನ್ನಮಯಾದಿ ಪಂಚಕೋಶಗಳಿಂದಲೂ ಪರಬ್ರಹ್ಮನೇ ಪ್ರತಿಪಾದ್ಯ ಎಂಬ ಅರ್ಥದಲ್ಲಿ ಸೂತ್ರಗಳಿಗೆ ವ್ಯಾಖ್ಯಾನಮಾಡಿ, ಪುನಃ ಪರಮತದವರಿಂದ ಎದುರಾಗಬಹುದಾದ ಅಪವ್ಯಾಖ್ಯಾನವನ್ನು ತಿರಸ್ಕರಿಸುವುದಕ್ಕಾಗಿ ಶಿಷ್ಯರ ಹಿತದೃಷ್ಟಿಯಿಂದ ಸೂತ್ರದ ಅಭಿಪ್ರಾಯವನ್ನು ಸ್ಪಷ್ಟ ಪಡಿಸುತ್ತಾರೆ -

**ಯೇಽನ್ನಂ ಬ್ರಹ್ಮೇತ್ಯಾದ್ಯುಪಾಸಾಂ ಸಾಮಾನಾಧಿಕರಣ್ಯತಃ ।**

**ಉಕ್ತ್ವಾ ಪಂಚಸ್ವರೂಪಾಣಾಂ ಪುನಸ್ತತ್ಪ್ರಾಪ್ತಿವಾದಿನೀ ॥೨೨೨॥**

**ಸ್ಥಾನದ್ವಯಗತಾ ವೇದವಾಣೀ ತದಪಲಾಪಿನಾಂ ।**

**ತಮಸೋಽನ್ಯತ್ರ ಸಂಸ್ಥಾನಂ ಕಥಮೇವ ಸಹೇತ ಸಾ ॥೨೨೩॥**

ಅನ್ನಮಯಾದಿ ಪಂಚರೂಪಗಳಿಗೆ ಸಮಾನಾಧಿಕರಣವಿರುವ ಪ್ರಯುಕ್ತ 'ಯೇಽನ್ನಂ ಬ್ರಹ್ಮ' ಇತ್ಯಾದಿ ಏಕರೂಪವಾದ ಉಪಾಸನೆಯನ್ನು ಹೇಳಿ, ಪುನಃ ಜ್ಞಾನಫಲರೂಪವಾಗಿ ಅನ್ನಮಯಾದಿಗಳ ಪ್ರಾಪ್ತಿಯನ್ನು ಬ್ರಹ್ಮವಲ್ಲಿ ಹಾಗೂ ಭೃಗುವಲ್ಲಿ ಎಂಬ ಎರಡು ಅನುವಾಕಗಳೂ ಹೇಳುತ್ತವೆ. ಹೀಗೆ ಹೇಳತಕ್ಕ ವೇದವಾಣಿಯು ಅದನ್ನು ಅಪಲಾಪಮಾಡುವ ಮಾಯಾವಾದಿಗಳಿಗೆ ಅಂಧಂತಮಸ್ಸಿಗಿಂತ ಬೇರೆಯಾದ ಸ್ಥಾನಗಳ ಸಂಬಂಧವನ್ನು ಹೇಗೆ ತಾನೆ ಸಹಿಸೀತು. ಅಂದರೆ ಅನ್ನಮಯಾದಿಗಳು ಶರೀರದ ಕೋಶಗಳೇ ಹೊರತು ಬ್ರಹ್ಮನ ರೂಪಗಳಲ್ಲ ಎಂದು ಹೇಳುವವರಿಗೆ ಅಂಧತಮಸ್ಸಿನ ಪ್ರಾಪ್ತಿಯೇ ವೇದವಾಣಿಗೆ ಸಮ್ಮತವಾದುದು ಎಂದು ಭಾವ.

ಹಿಂದೆ 'ಭೃಗೋಶ್ಚ ಏತದ್ವದಿಷ್ಯತಿ' ಎಂದು ಹೇಳಿರುವರು. ಅದರಲ್ಲಿ ಉತ್ತರ ಅನುವಾಕದಲ್ಲಿ (ಭೃಗುವಲ್ಲಿ) ಉಕ್ತವಾಗಿರುವ ಬ್ರಹ್ಮಪರತ್ವವನ್ನು ಈಗ ವಿಸ್ತರಿಸುತ್ತಾರೆ -

ಭೃಗು-ವರುಣ ಸಂವಾದ

**ಅಧೀಹಿ ಭಗವೋ ಬ್ರಹ್ಮೇತ್ಯುಕ್ತೋಽನ್ನಪ್ರಾಣಪೂರ್ವಕಂ ।**
**ಆಹ ಬ್ರಹ್ಮ ಕಥಂ ತನ್ನ ದ್ವಾರಂ ತದಿತಿ ವಾದಿನಃ ॥೨೨೪॥**
**ಉಪಸತ್ತಿಂ ಕಥಂ ವಿದ್ಯುರುಪಸನ್ನಾಯ ಹಿ ತ್ರಿಶಃ ।**
**ವಕ್ತವ್ಯಂ ಬ್ರಹ್ಮ ಗುರುಣಾ ಚತುರ್ವಾರಮಥಾಪಿ ವಾ ॥೨೨೫॥**
**ಸಕೃದ್ವೇತ್ಯಾಗಮಾ ಬ್ರೂಯುಃ ಸಂಪ್ರದಾಯವಿದೋಽಪಿ ಚ ।**
**ತದ್ವತ್ಕಿಂಚಿತ್ಕಥಂ ಬ್ರೂಯಾದುಪಸನ್ನಾಯ ದಿಕ್ಪತಿಃ ॥೨೨೬॥**
**ನ ವದೇದ್ಬ್ರಹ್ಮ ಚ ಕಥಂ ಮಾಯಾವೀ ನ ಹಿ ವಾರಿರಾಟ್ ।**

ಹೇ ಭಗವನ್ (ಪೂಜ್ಯನಾದ ವರುಣನೇ), ನನಗೆ ಪರಬ್ರಹ್ಮನ ಬಗ್ಗೆ ಉಪದೇಶಿಸು ಎಂದು ಭೃಗುವಿನಿಂದ ಕೇಳಲ್ಪಟ್ಟ ವರುಣನು, ಅನ್ನ ಪ್ರಾಣ ಮೊದಲಾದುದನ್ನು ಪರಬ್ರಹ್ಮನೆಂಬುದಾಗಿ ಉಪದೇಶಿಸುತ್ತಾನೆ. 'ಭೃಗುರ್ವೈ ವಾರುಣಿಃ। ವರುಣಂ ಪಿತರಮುಪಸಸಾರ। ಅಧೀಹಿ ಭಗವೋ ಬ್ರಹ್ಮೇತಿ। ತಸ್ಮಾ ಏತತ್ಪ್ರೋವಾಚ। ಅನ್ನಂ ಪ್ರಾಣಂ ಚಕ್ಷುಃ ಶ್ರೋತ್ರಂ ಮನೋ ವಾಚಂ।'

ಈ ರೀತಿ ಬ್ರಹ್ಮನನ್ನು ಕುರಿತಂತೆ ಪ್ರಶ್ನೋತ್ತರ ರೂಪವಾಗಿ ಅನ್ನಾದಿಗಳು ಹೇಳಲ್ಪಟ್ಟಿರುವುದರಿಂದ ಅನ್ನ ಪ್ರಾಣ ಮೊದಲಾದವು ಬ್ರಹ್ಮನ ರೂಪಗಳೇ ಆಗಿವೆ ಎಂದು ತಿಳಿಯುತ್ತದೆ. ಅನ್ನ ಪ್ರಾಣಾದಿಗಳು ಕೇವಲ ಬ್ರಹ್ಮಜ್ಞಾನಕ್ಕೆ ದ್ವಾರವೆಂದು ಹೇಳುವವರು ಬ್ರಹ್ಮಜ್ಞಾನಕ್ಕೋಸ್ಕರ ಉಪಸತ್ತಿಯ ಅನಂತರದಲ್ಲಿ ಗುರುವು ಶಿಷ್ಯನಿಗೆ 'ಅನ್ನ ಪ್ರಾಣಾದಿಗಳಿಂದ ಬ್ರಹ್ಮನೇ ಹೇಳಲ್ಪಟ್ಟದ್ದಾನೆ' ಎಂಬುದಾಗಿ ಮಾಡಿದ ಉಪದೇಶವನ್ನು ತಿಳಿದಿರುವುದಿಲ್ಲ. ಉಪಸತ್ತಿಯನ್ನು ಮಾಡಿದ ಶಿಷ್ಯನಿಗೆ ಗುರುಗಳಿಂದ ಮೂರಾವರ್ತಿ ಅಥವಾ ನಾಲ್ಕಾವರ್ತಿ ಒಂದೇಸಲವಾದರೂ ಚೆನ್ನಾಗಿ ಬ್ರಹ್ಮನೇ ಹೇಳಲ್ಪಡಬೇಕು. ಈ ಪ್ರಕಾರವಾಗಿ ವೇದಗಳು ಹೇಳುತ್ತವೆ. ಸ್ಮೃತಿ ಇತಿಹಾಸ ಪುರಾಣಗಳ ಕರ್ತೃಗಳೂ ಹೀಗೆಯೇ ಹೇಳುತ್ತಾರೆ. ಗುರೂಪಸತ್ತಿಯನ್ನು ಮಾಡಿದವನಿಗೆ ಗುರುವು ಯಥಾರ್ಥವಾದುದನ್ನೇ ಉಪದೇಶ ಮಾಡುವನು. ಅನ್ನಪ್ರಾಣಾದಿಗಳು ಪರಬ್ರಹ್ಮನಲ್ಲ, ಅವು ಬ್ರಹ್ಮಜ್ಞಾನಕ್ಕೆ ದ್ವಾರಮಾತ್ರ ಎಂಬ ಯಥಾರ್ಥವಲ್ಲದ ಜ್ಞಾನವನ್ನು ವರುಣನು ಹೇಗೆ ತಾನೆ ಉಪದೇಶಿಸುವನು. ಬ್ರಹ್ಮನ ವಿಷಯವನ್ನು ಉಪದೇಶಿಸಿರೆಂದು ತನ್ನ ಶಿಷ್ಯನಿಂದ ಕೇಳಲ್ಪಟ್ಟ ವರುಣನು, ಕಪಟಿಯಲ್ಲವಾದ್ದರಿಂದ, ಬ್ರಹ್ಮನನ್ನೇ ಹೇಳುವನು. ಆದಪ್ರಯುಕ್ತ ಆಪ್ತನಾದ ವರುಣನು ಬ್ರಹ್ಮನ ವಿಷಯದಲ್ಲಿ ಬಂದ ಪ್ರಶ್ನೆಗೆ ಉತ್ತರವಾಗಿ ಹೇಳಿದ್ದು ಅನ್ನಾದಿಗಳಿಗೆ ಬ್ರಹ್ಮತ್ವವನ್ನು ಸಾಧಿಸುವುದಕ್ಕೆ ಹೇತುವೆಂದು ಉಕ್ತವಾಯಿತು.

ಹಾಗಾದರೆ ವರುಣನು ಉಪದೇಶಿಸಿದ ಅನ್ನಾದಿಗಳ ಮಧ್ಯದಲ್ಲಿ ಬರುವ ಅನ್ನ ಪ್ರಾಣ ಮನಸ್ಸುಗಳು ಬ್ರಹ್ಮಸ್ವರೂಪವಾಗಲಿ. ಅನ್ನಾದಿ ಶಬ್ದಗಳಿಗೆ ಅತ್ತೃತ್ವಾದಿ ಅರ್ಥವು ಕೂಡುವುದರಿಂದ ಅನುಪಪತ್ತಿಯು ಇರುವುದಿಲ್ಲ. ಆದರೆ ಚಕ್ಷು ಶ್ರೋತ್ರ ವಾಕ್ ಶಬ್ದಗಳು ಬ್ರಹ್ಮಸ್ವರೂಪ ಆಗಲಾರವು. ನೋಡುವುದರಿಂದ ಕಣ್ಣು, ಕೇಳುವುದರಿಂದ ಕಿವಿ, ವಕ್ತೃತ್ವವಿರುವ ಕಾರಣ ವಾಕ್ ಈ ಪ್ರಕಾರವಾಗಿ ಇವು ಕರಣಾರ್ಥಕಗಳಾಗಿವೆ. ಬ್ರಹ್ಮನಿಗೆ ಕರಣತ್ವ ಕೂಡಲಾರದು ಎಂದು ಹೇಳಿದರೆ -

**ಚಷ್ಟ ಇತ್ಯೇವ ತಚ್ಚಕ್ಷುಃ ಶ್ರವಣಾಚ್ಛ್ರೋತ್ರಮುಚ್ಯತೇ ॥೨೨॥**

**ವಚನಾದೇವ ವಾಗ್ಬ್ರಹ್ಮ ಸೃಷ್ಟಿಸ್ಥಿತ್ಯಾದಿಕಾರಣಂ ।**

**ತಚ್ಚ ವಾಧೂಲಶಾಖಾಯಾಮಷ್ಟರೂಪಮುದಾಹೃತಂ ॥೨೨೮॥**

**ವಿಜ್ಞಾನಾನಂದದಸಹಿತಂ ಪೃಥಕ್ ಸೃಷ್ಟ್ಯಾದಿಲಕ್ಷಣೈಃ ।**

ಏವ ಶಬ್ದದಿಂದ ಕರಣಸಾಧನತ್ವವನ್ನು ನಿರಾಕರಿಸುತ್ತಾರೆ. ಬ್ರಹ್ಮನು ಚೆನ್ನಾಗಿ ನೋಡುವ ಪ್ರಯುಕ್ತ ಚಕ್ಷು, ಚೆನ್ನಾಗಿ ಕೇಳುವ ಪ್ರಯುಕ್ತ ಶ್ರೋತ್ರ, ಚೆನ್ನಾಗಿ ಹೇಳುವ ಪ್ರಯುಕ್ತದಿಂದಲೇ ವಾಕ್ ಎಂದು ಕರೆಯಲ್ಪಡುತ್ತಾನೆ. 'ಯತೋ ವಾ ಇಮಾನಿ ಭೂತಾನಿ ಜಾಯಂತೇ' ಇತ್ಯಾದಿ ಶ್ರುತಿವಾಕ್ಯಗಳಿಂದ ಬ್ರಹ್ಮನೇ ಸೃಷ್ಟಿ, ಸ್ಥಿತಿ ಮೊದಲಾದವುಗಳಿಗೆ ಕಾರಣನೆಂದೂ ಹೇಳಲ್ಪಟ್ಟಿದ್ದಾನೆ. ವಿಜ್ಞಾನ ಆನಂದಗಳಿಂದ ಕೂಡಿರುವ ಆ ಬ್ರಹ್ಮನು ಅನ್ನ ಮೊದಲಾದ ಆರು ಹೀಗೆ ಒಟ್ಟು ಎಂಟುವಿಧ ರೂಪವುಳ್ಳವನೆಂಬುದಾಗಿ ವಾಧೂಲಶಾಖೆಯಲ್ಲಿ ಉದಾಹೃತನಾಗಿದ್ದಾನೆ. ಆದಕಾರಣ ಪ್ರಥಮ ಅನುವಾಕದಲ್ಲಿ ಚಕ್ಷುರಾದಿ ಮೂರನ್ನೂ ಉತ್ತರ ಅನುವಾಕದಲ್ಲಿ ವಿಜ್ಞಾನ ಆನಂದಗಳೊಂದಿಗೆ ಕೂಡಿಸಿಕೊಂಡಾಗ ಸಂಖ್ಯಾಸಾಮ್ಯ ಬರುವುದು. ಇಲ್ಲದಿದ್ದರೆ ಪ್ರತ್ಯೇಕವಾಗಿ ಸೃಷ್ಟ್ಯಾದಿ ಲಕ್ಷಣಗಳನ್ನು ಪ್ರತಿಪಾದಿಸುವ ವಾಕ್ಯಗಳನ್ನೇ ಇಲ್ಲಿಯೂ ಉದಾಹರಿಸಬೇಕಿತ್ತು. ಸೃಷ್ಟ್ಯಾದಿ ಲಕ್ಷಣಗಳಿಂದ ಅನ್ಯತ್ರ ಉಕ್ತನಾದ ಬ್ರಹ್ಮನೇ ಇಲ್ಲಿ ಚಕ್ಷು ಮೊದಲಾದ ಎಂಟು ರೂಪಗಳಿಂದ ಹೇಳಲ್ಪಟ್ಟಿದ್ದಾನೆ ಎಂದು ತಿಳಿಯಬೇಕು. ಅನೇಕ ಶಾಖೆಗಳನ್ನು ತಿಳಿದವರಿಗೇನೇ ಬ್ರಹ್ಮನನ್ನು ಚೆನ್ನಾಗಿ ತಿಳಿಯಲು ಅಧಿಕಾರ ಎಂದು ಸೂಚಿಸುವುದಕ್ಕಾಗಿಯೇ ಇಲ್ಲಿ ವಾಧೂಲ ಶಾಖೆಯನ್ನು ಉದಾಹರಿಸಲಾಗಿದೆ.

ಹಾಗಾದರೆ ವಾಧೂಲಶಾಖೆಯಲ್ಲಿ ಹೇಳಿದಂತೆಯೇ ಬ್ರಹ್ಮವಲ್ಲಿ ಹಾಗೂ ಭೃಗುವಲ್ಲಿ ಇವೆರಡು ಕಡೆಗಳಲ್ಲಿಯೂ ಎಂಟು ರೂಪಗಳೆಂದೇ ಏಕೆ ಹೇಳಬಾರದು ಎಂದರೆ -

**ಆವಾಪೋದ್ವಾಪತಃ ಶಾಖಾ ಯತ ಆಹುಃ ಪರಂ ಪದಂ ॥೨೨೯॥**

**ಯತೋ ಭೂತಾನಿ ಜಾಯಂತೇ ಇತ್ಯಾದ್ಯೈರ್ಲಕ್ಷಣಂ ಸ್ವಯಂ ।**

**ಲಕ್ಷಿತಂ ಗುರುಣಾ ಪಶ್ಚಾತ್ತಪಸೈವಾಪರೋಕ್ಷಿತಂ ॥೨೩೦॥**

**ದೃಷ್ಟ್ವೈಕೈಕಸ್ವರೂಪಂ ತು ಸಮಸ್ತೋಕ್ತಾನುದರ್ಶನಂ ।**

**ಇಚ್ಛತಾಽಽಜ್ಞಾಂ ಗುರೋಃ ಪ್ರಾಪ್ಯ ತಪಸೈವಾಪರೋಕ್ಷಿತಂ ॥೨೩೧॥**

**ಅಬ್ರಹ್ಮೇತ್ಯೇವ ವದತಾಂ ಶ್ರುತಹಾನ್ಯಶ್ರುತಗ್ರಹೌ ।**

**ಸಾಕ್ಷಾಲ್ಲಕ್ಷಣತಾಂ ಪ್ರಾಪ್ತಾವಿತಿ ಲಜ್ಜಾ ತದುಕ್ತಿಷು ॥೨೩೨॥**

ಬೇರೆ ಕಡೆಗಳಲ್ಲಿ ಹೇಳದಿದ್ದ ಕೆಲವು ವಿಷಯಗಳ ಪ್ರಕ್ಷೇಪ (ಆವಾಪ), ಬೇರೆ ಕಡೆಗಳಲ್ಲಿ ಹೇಳಿರುವ ವಿಷಯಗಳ ಪರಿತ್ಯಾಗ (ಉದ್ವಾಪ), ಬೇರೆ ಬೇರೆ ಶಾಖೆಗಳಲ್ಲಿ ಹೇಳಿರುವ ಕೆಲವನ್ನು ಮತ್ತೊಂದು ಶಾಖೆಯಲ್ಲಿ ಸಂಗ್ರಹ ಮೊದಲಾದ ರೀತಿಗಳಿಂದ ಪರಮೇಶ್ವರನ ಸ್ವರೂಪವನ್ನು ಪ್ರತಿಪಾದಿಸುವುದು ವೇದಶಾಖೆಗಳ ಸ್ವಭಾವವಾಗಿದೆ. ಆದಪ್ರಯುಕ್ತ ಮೇಲೆ ಹೇಳಿದ ವ್ಯಾಖ್ಯಾನಕ್ಕೆ ವಿರೋಧ ಬರುವುದಿಲ್ಲ. ಯಾವ ಪರಮಾತ್ಮನಿಂದ ಪ್ರಾಣಿಗಳೆಲ್ಲವೂ ಹುಟ್ಟುತ್ತವೋ ಇವೇ ಮೊದಲಾದ ಸ್ವರೂಪಲಕ್ಷಣಗಳಿಂದ ಗುರುವಾದ ವರುಣನಿಂದ ಈ ಅನ್ನಾದಿರೂಪ ಬ್ರಹ್ಮನು ಲಕ್ಷಿತನಾಗಿ ಉಪದಿಷ್ಟನಾಗಿದ್ದಾನೆ. ಆಮೇಲೆ ಶಿಷ್ಯನು ಗುರೂಪದಿಷ್ಟನಾದ ಬ್ರಹ್ಮನನ್ನು ತಪಸ್ಸಿನಿಂದಲೇ ಸಾಕ್ಷಾತ್ಕಾರ ಮಾಡಿಕೊಂಡು ಒಂದೊಂದು ರೂಪವನ್ನೂ ನೋಡಿದನು. ಅನಂತರ ಉಪದಿಷ್ಟವಾದ ಎಲ್ಲ ರೂಪಗಳ ಅಪರೋಕ್ಷವನ್ನು ಬಯಸಿ, ಗುರುವಿನ ಅನುಜ್ಞೆಯನ್ನು ಪಡೆದುಕೊಂಡು, ತಪಸ್ಸಿನಿಂದ ಸಾಕ್ಷಾತ್ಕರಿಸಿಕೊಂಡ ರೂಪವನ್ನು ಅದು ಬ್ರಹ್ಮನಲ್ಲ ಎಂದು ಹೇಳುವುದು ಅಸಂಭವ. ಈ ರೀತಿಯಾಗಿ ಹೇಳುವವರಿಗೆ ಶ್ರುತಹಾನಿ, ಅಶ್ರುತ ಕಲ್ಪನಾ ಎಂಬ ಎರಡು ದೋಷಗಳೇ ಮುಖ್ಯ ಲಕ್ಷಣವಾಗಿ ಇರುತ್ತವೆ. ಇಂಥಹ ಅಪದ್ಧ ವಾದವನ್ನು ದೂಷಿಸುವುದಕ್ಕೆ ನಮಗೇ ನಾಚಿಕೆ ಆಗುವುದು. ಅಂದಮೇಲೆ ಹೀಗೆ ವಾದ ಮಾಡುವ ಮಾಯಾವಾದಿಗಳಿಗೆ ಇನ್ನೂ ಹೆಚ್ಚಿನ ನಾಚಿಕೆಯಾಗಬೇಕು.

ಮಿಥ್ಯೆಯಾದ ಜೀವಪರಮಾತ್ಮರ ಭೇದವನ್ನು ಆಶ್ರಯಿಸಿ 'ಭೇದವ್ಯಪದೇಶಾಚ್ಚ' ಎನ್ನುವ ಸೂತ್ರವು ರಚಿತವಾಗಿದೆ. ಆದಕಾರಣ ಅದರ ವ್ಯಾಖ್ಯಾನದಿಂದ ಭೇದವನ್ನು ನಿರ್ಣಯಿಸುವುದು ಕೂಡಲಾರದು ಎಂದು ಹೇಳಿದರೆ -

**ಸಮೀಪೇ ಸಹ ಭೋಗಸ್ಯ ಮುಕ್ತಿತ್ವೇನೋಕ್ತಿತೋಽಸಕೃತ್ ।**

**ಭೇದೋ ಜೀವೇಶಯೋರ್ಮಿಥ್ಯೇತ್ಯೇವ ಮಿಥ್ಯಾ ಸ್ವಯಂ ಭವೇತ್ ॥೨೩೩॥**

ಪರಮಾತ್ಮನ ಸಮೀಪದಲ್ಲಿಯೇ ಇರುತ್ತ, ಅವನ ಜೊತೆಯಲ್ಲಿಯೇ

ಭೋಗವನ್ನು ಅನುಭವಿಸುವುದೇ ಮುಕ್ತಿ ಎಂದು ಶ್ರುತಿಗಳಲ್ಲಿ ಅನೇಕಾವರ್ತಿ ಹೇಳಿರುವುದರಿಂದ, ಜೀವಬ್ರಹ್ಮರ ಭೇದವು ಮಿಥ್ಯೆ ಎಂದು ಹೇಳುವುದೇ ಸ್ವಯಂ ಮಿಥ್ಯೆಯಾಗುವುದು.

'ಏತಮಾನಂದಮಯಮಾತ್ಮಾನಮುಪಸಂಕ್ರಮ್ಯ' ಇತ್ಯಾದಿಗಳಲ್ಲಿ ಹೇಳಿದ ಸಾಮೀಪ್ಯವೂ, 'ಸೋಽಶ್ನುತೇ ಸರ್ವಾನ್ ಕಾಮಾನ್ ಸಹ' ಇತ್ಯಾದಿಗಳಲ್ಲಿ ಹೇಳಿದ ಸಹಭೋಗವೂ ಭೇದವಿಲ್ಲದೇ ಕೂಡುವುದಿಲ್ಲ. ಮೋಕ್ಷದಲ್ಲಿರುವುದೂ ಮಿಥ್ಯೆ ಎಂದರೆ ಆತ್ಮಸ್ವರೂಪವೇ ಮೋಕ್ಷದಲ್ಲಿರುವುದರಿಂದ ಅದೂ ಮಿಥ್ಯೆಯಾಗಬೇಕಾಗುವುದು. ಆದಪ್ರಯುಕ್ತ 'ಭೇದವ್ಯಪದೇಶಾಚ್ಚ' ಎನ್ನುವ ಸೂತ್ರದಲ್ಲಿ ಹೇಳಿರುವ ಭೇದವು ಮಿಥ್ಯೆಯಾಗುವುದು ಸಾಧ್ಯವಿಲ್ಲ.

ಹೀಗೆ ಮಾಯಾವಾದಿಗಳ ಪಂಚಕೋಶ ವ್ಯಾಖ್ಯಾನವನ್ನು ನಿರಾಕರಿಸಿದರು. ಆದರೆ ಭಾಸ್ಕರಾದಿಗಳು ಆನಂದಮಯ ಮಾತ್ರ ಪರಮಾತ್ಮವಾಚಕ ಉಳಿದ ಅನ್ನಮಯಾದಿ ನಾಲ್ಕು ಕೋಶಗಳು ಎಂದು ಹೇಳುತ್ತಾರೆ. ಈಗ ಈ ವ್ಯಾಖ್ಯಾನವನ್ನು ನಿರಾಕರಿಸುತ್ತಾರೆ -

**ಏತೇನ ಮಯಟಶ್ಚೈವ ದ್ವೈವಿಧ್ಯೇನಾರ್ಥಕಲ್ಪನಾತ್ ।**
**ತದನ್ಯೇಷಾಂ ಮತಮಪಿ ಸತ್ಸಂಸತ್ಸು ನ ಭಾಸತೇ ॥೨೩೪॥**

ಅನ್ನಮಯಾದಿ ಐದು ರೂಪಗಳಿಗೂ ಪರಬ್ರಹ್ಮತ್ವವನ್ನು ಪ್ರತಿಪಾದನೆ ಮಾಡಿರುವುದರಿಂದಲೇ, ಮಯಟ್ ಪ್ರತ್ಯಯಕ್ಕಾದರೂ ಎರಡು ವಿಭಿನ್ನ ರೀತಿಯ ಅರ್ಥವನ್ನು ಕಲ್ಪಿಸುವುದರಿಂದ (ಐದೂ ಕೋಶಗಳೆಂದೂ, ನಾಲ್ಕು ಕೋಶಗಳು ಒಂದು ಮಾತ್ರ ಪರಬ್ರಹ್ಮ ಎನ್ನುವ ಎರಡು ರೀತಿಯ ಅರ್ಥಕಲ್ಪನೆ), ಮಾಯಾವಾದಿಗಳು ಹಾಗೂ ಭಾಸ್ಕರಾದಿಗಳ ಮತಗಳು ವಿದ್ವತ್ಸಭೆಗಳಲ್ಲಿ ಶೋಭಿಸುವುದಿಲ್ಲ.

ಹಾಗಾದರೆ ಸೂತ್ರವ್ಯಾಖ್ಯಾನಕ್ಕೆ ಉಪಕ್ರಮಿಸಿ ಪರರ ಅಪವ್ಯಾಖ್ಯಾನವನ್ನು ನಿರಾಕರಿಸುವುದು ಅಸಂಗತ ಎಂದು ಹೇಳಕೂಡದು. ತಾನು ಮಾಡಿದ ವ್ಯಾಖ್ಯಾನದ ದೃಢೀಕರಣಕ್ಕಾಗಿ ಪರರ ವ್ಯಾಖ್ಯಾನವು ತಪ್ಪು ಎಂದು ತೋರಿಸುವುದು ಅವಶ್ಯಕ ಎನ್ನುವ ಅಭಿಪ್ರಾಯದಿಂದ ಅಧಿಕರಣಾರ್ಥವನ್ನು ಉಪಸಂಹಾರ ಮಾಡುತ್ತಾರೆ -

## ಅಧಿಕರಣಾರ್ಥ ಉಪಸಂಹಾರ

**ಅತೋ ನಾರಾಯಣೋ ದೇವೋ ನಿಶ್ಶೇಷಗುಣವಾಚಕೈಃ ।**
**ಗುಣಿಸಾಮಾನ್ಯವಚನೈರಪಿ ಮುಖ್ಯತಯೋದಿತಃ ॥೨೩೫॥**
**ಅಧ್ಯಾತ್ಮಗೈಶ್ಚ ಪ್ರಾಣಾದ್ಯೈಸ್ತಥೈವ ಹ್ಯಧಿಭೂತಗೈಃ ।**
**ಅನ್ನಾದಿಶಬ್ದೈರ್ಭಗವಾನೇಕೋ ಮುಖ್ಯತಯೋದಿತಃ ॥೨೩೬॥**

ಪರರ ವ್ಯಾಖ್ಯಾನವು ಸೂತ್ರಕಾರರ ಅಭಿಪ್ರಾಯಕ್ಕೆ ವಿರುದ್ಧವಿರುವುದರಿಂದ, ಭಗವಂತನಾದ ನಾರಾಯಣನು ಎಲ್ಲ ರೀತಿಯ ಗುಣವಾಚಕ ಶಬ್ದಗಳಿಂದಲೂ ಹಾಗೂ ಗುಣಿಸಾಮಾನ್ಯವಾಚಕ ಶಬ್ದಗಳಿಂದಲೂ ಮುಖ್ಯವಾಗಿ ಪ್ರತಿಪಾದಿತವಾಗಿದ್ದಾನೆ. ಆಧ್ಯಾತ್ಮಿಕ ಪ್ರಾಣಾದಿ ಶಬ್ದಗಳಿಂದಲೂ , ಆಧಿಭೌತಿಕ ಅನ್ನಾದಿಶಬ್ದಗಳಿಂದಲೂ ಶ್ರೀ ನಾರಾಯಣನೇ ಮುಖ್ಯವಾಗಿ ಹೇಳಲ್ಪಟ್ಟದ್ದಾನೆ. ಇದು ಶ್ರುತಿಪ್ರಸಿದ್ಧವಾಗಿದೆ. ಆದಕಾರಣ ನಮ್ಮ ವ್ಯಾಖ್ಯಾನವು ಅಧಿಕರಣದ ಉಪಕ್ರಮಕ್ಕೆ ವಿರೋಧವಾಗಲಿಲ್ಲ.

ಸಕಲ ಶಬ್ದಗಳಿಗೂ ಮುಖ್ಯವೃತ್ತಿಯಿಂದ ಶ್ರೀಹರಿಯಲ್ಲಿಯೇ ಸಮನ್ವಯವನ್ನು ಸಮರ್ಥಿಸುವ ವಿಷಯದಲ್ಲಿ ಸಂಗತಿಯೂ ಯುಕ್ತಿಯೂ ಇಲ್ಲದಿರುವ ಪ್ರಯುಕ್ತ ಇದು ಅಪವ್ಯಾಖ್ಯಾನ ಎಂದು ಆಕ್ಷೇಪಿಸಿದರೆ -

## ಸಕಲ ಶಬ್ದಗಳಿಗೂ ಭಗವಂತನಲ್ಲಿಯೇ ಸಮನ್ವಯ

**ಜನ್ಮಾದ್ಯಸ್ಯೇತಿ ಸೂತ್ರೇಣ ಗುಣಸರ್ವಸ್ವಸಿದ್ಧಯೇ ।**
**ಬ್ರಹ್ಮಣೋ ಲಕ್ಷಣಂ ಪ್ರೋಕ್ತಂ ಶಾಸ್ತ್ರಮೂಲಂ ಯತಸ್ತತಃ ॥೨೩೭॥**
**ಅನ್ವಯಃ ಸರ್ವಶಬ್ದಾನಾಂ ಗುಣಸರ್ವಸ್ವವೇದಕಃ ।**

ಮೊದಲನೆಯ ಸೂತ್ರದಿಂದ ಪರಬ್ರಹ್ಮನಿಗೆ ಗುಣಪೂರ್ಣತ್ವವನ್ನು ಸಮರ್ಥಿಸಲಾಯಿತು. ಗುಣಪೂರ್ಣತ್ವದ ಸಿದ್ಧಿಗಾಗಿ ಜನ್ಮಾದ್ಯಸ್ಯ ಯತಃ ಎನ್ನುವ ಎರಡನೆಯ ಸೂತ್ರದಿಂದ ಬ್ರಹ್ಮನ ಲಕ್ಷಣಗಳನ್ನು ಹೇಳಲಾಯಿತು. ಈ ಎರಡು ಸೂತ್ರಗಳಿಂದ ಸಾಧ್ಯವಾಗಿ ಗುಣಪೂರ್ಣತ್ವವೂ, ಸಾಧಕವಾಗಿ ಜನ್ಮಾದಿಕಾರಣತ್ವವೂ ಪ್ರಕೃತವಾಗಿದೆ. ಈ ಲಕ್ಷಣಗಳಿಗೆ ಅನುಮಾನಾದಿಗಳಿಂದ ಅತಿವ್ಯಾಪ್ತಿಯು ಶಂಕಿತವಾದರೆ ಅದರ ನಿವಾರಣೆಗಾಗಿ ಶಾಸ್ತ್ರಯೋನಿತ್ವಾತ್ ಎನ್ನುವ ಮೂರನೆಯ ಸೂತ್ರದಲ್ಲಿ ಶಾಸ್ತ್ರವೇ ಪ್ರಮಾಣವಾಗಿರುವುದರಿಂದ ಈ

ಲಕ್ಷಣಗಳು ಸಿದ್ಧಿಸುತ್ತವೆ ಎಂದು ಹೇಳಲಾಯಿತು. ಶಾಸ್ತ್ರೋಕ್ತವಾದ ಎಲ್ಲ ಶಬ್ದಗಳ ಸಮನ್ವಯದಿಂದಲೇ ಸಕಲಗುಣಪೂರ್ಣತ್ವವು ಸಿದ್ಧಿಸುವುದು. ಆದಪ್ರಯುಕ್ತ ಸಮನ್ವಯ ಸೂತ್ರದಿಂದ ಎಲ್ಲ ಶಬ್ದಗಳಿಗೂ ಸಮನ್ವಯವನ್ನು ಪ್ರತಿಜ್ಞಾ ಮಾಡಿರುವುದರಿಂದ ಅದನ್ನು ವಿಸ್ತರಿಸುವುದರಿಂದ ಸೂತ್ರಕಾರರಿಗೆ ಅಸಂಗತಿಯು ಬರುವುದಿಲ್ಲ.

ಪರಮೇಶ್ವರನಿಗೆ ಮುಖ್ಯಾರ್ಥದಲ್ಲಿ ಸರ್ವಶಬ್ದಗಳ ಸಮನ್ವಯ ಕೂಡುವುದಿಲ್ಲ. ಪರಮೇಶ್ವರನಂತೆಯೇ ಬೇರೆಯವರಲ್ಲೂ ಯೌಗಿಕಾರ್ಥವನ್ನು ಮಾಡಬಹುದು. ಈಶ್ವರನಲ್ಲಿ ರೂಢಿಯಿರುವುದಿಲ್ಲ ಹಾಗೂ ಬೇರೆಯವರಲ್ಲಿ ರೂಢಿಯಿರುವುದರಿಂದ ಆಧಿಕ್ಯ ಬರುವುದು. ಯೋಗವು ಪರಮೇಶ್ವರನಲ್ಲಿ ಹಾಗೂ ಇತರರಲ್ಲಿಯೂ ಸಮಾನವಾಗಿದೆ ಎಂದು ಪರರು ಹೇಳುತ್ತಾರೆ. ಅದನ್ನು ಇಲ್ಲಿ ನಿರಾಕರಿಸುತ್ತಾರೆ -

**ಶಬ್ದಪ್ರವೃತ್ತಿಹೇತೂನಾಂ ತಸ್ಮಿನ್ಮುಖ್ಯಸಮನ್ವಯಾತ್ ॥೨೩೮॥**
**ಅನ್ಯಾರ್ಥೇಷ್ವಲ್ಪತಾ ಹೇತೋಸ್ತನ್ನಿಮಿತ್ತತ್ವತಸ್ತಥಾ।**
**ತದ್ವಾಚಕತ್ವ ಶಬ್ದಾನಾಂ ಬಹುಲಾತಿಪ್ರಯೋಗತಃ ॥೨೩೯॥**
**ರೂಢಮಿತ್ಯೇವ ಸಾಧ್ಯಂ ಸ್ಯಾದ್ರೂಢಿರ್ಹಿ ದ್ವಿವಿಧಾ ಮತಾ ।**
**ಅವಿದ್ವದ್ವಿದ್ವದಾಪ್ತ್ಯೈವ ಮುಖ್ಯಾ ಹಿ ವಿದುಷಾಂ ತು ಸಾ ॥೨೪೦॥**
**ವಿದ್ವದ್ರೂಢಿರ್ವೈದಿಕಾ ಸ್ಯಾತ್ಸಾ ಯೋಗಾದೇವ ಲಭ್ಯತೇ ।**
**ತಸ್ಮಾನ್ಮುಖ್ಯಾರ್ಥತಾ ವಿಷ್ಣೋರಿತಿ ಕೃತ್ವಾ ಹೃದಿ ಪ್ರಭುಃ ॥೨೪೧॥**
**ಸಮನ್ವಯಂ ಸಾಧಯತಿ ..........................................।**

ಇಂದ್ರಾದಿ ಶಬ್ದಗಳ ಪ್ರವೃತ್ತಿಗಳಿಗೆ ಕಾರಣವಾದ ಪರಮೈಶ್ವರ್ಯಾದಿಗಳಿಗೆ ಆ ಪರಮೇಶ್ವರನಲ್ಲಿಯೇ ಮುಖ್ಯವಾಗಿ ಸಂಬಂಧವಿರುವುದರಿಂದ, ಇಂದ್ರಾದಿ ಶಬ್ದಗಳುಪರಮೇಶ್ವರನನ್ನೇ ಹೇಳುತ್ತವೆ. ಇತರರಾದ ಪುರಂದರಾದಿಗಳಲ್ಲಿ ಶಬ್ದಪ್ರವೃತ್ತಿಗೆ ಕಾರಣವಾದ ಐಶ್ವರ್ಯಾದಿಗಳಿಗೆ ಅಲ್ಪತ್ವವಿದೆ. ಅಂದರೆ ದೇಶ, ಕಾಲ ಹಾಗೂ ಸ್ವರೂಪಗಳಿಂದ ಅವು ಸಾವಧಿಕವಾಗಿವೆ. ಅಲ್ಪವಾದ ಐಶ್ವರ್ಯಾದಿಗಳೂ ಭಗವಂತನಲ್ಲಿ ಕೂಡುವುದರಿಂದ, ಇಂದ್ರಾದಿಗಳಲ್ಲಿರುವ ಅಲ್ಪವಾದ ಐಶ್ವರ್ಯಾದಿಗಳೂ ಭಗವದಧೀನವೇ ಆಗಿದ್ದು ಅವನಿಂದಲೇ

ದತ್ತವಾಗಿವೆ. ಐಶ್ವರ್ಯಾದಿಗಳು ಇಂದ್ರಾದಿಗಳಲ್ಲಿ ಸಾವಧಿಕವೂ ಭಗವಂತನಲ್ಲಿ ಪರಮಾಧಿಕವೂ ಆಗಿರುವಾಗ ಸಮಾನಯೋಗವೆನ್ನುವುದು ಕೂಡುವುದಿಲ್ಲ.

ಈಶ್ವರನಲ್ಲಿ ಶಬ್ದಗಳಿಗೆ ರೂಢಿಯಿಲ್ಲವೆಂದು ಹೇಳಿದ್ದನ್ನು ಈಗ ನಿರಾಕರಿಸುತ್ತಾರೆ. ಶ್ರೀಹರಿಯಲ್ಲಿಯೇ ಶಬ್ದಸಮುದಾಯದ ಪ್ರಯೋಗವು ಬಹಳ ಹೇಚ್ಚಿನ ರೀತಿಯಲ್ಲಿ ಇರುವುದರಿಂದ ಎಲ್ಲ ಶಬ್ದಗಳಿಗೂ ಶ್ರೀಹರಿಯಲ್ಲಿಯೇ ರೂಢಿಯು ಕೂಡುವುದು. ಅಜ್ಞರು ಮತ್ತು ಪ್ರಾಜ್ಞರುಗಳಿಗೆ ಸಂಬಂಧಿಸಿದಂತೆ ವಿದ್ವದ್ರೂಡಿ ಮತ್ತು ಅವಿದ್ವದ್ರೂಢಿ ಎಂಬುದಾಗಿ ಎರಡು ವಿಧವಾದ ರೂಢಿಯು ಎಲ್ಲರಿಗೂ ಸಮ್ಮತವಾಗಿದೆ. ಜ್ಞಾನಿಗಳ ಬಹುಲವಾದ ಪ್ರಯೋಗವುಳ್ಳ ರೂಢಿಯು ವೈದಿಕವಾದ ಪ್ರಯೋಗಬಾಹುಲ್ಯದಿಂದ ಪ್ರಮಾಣಿತವಾಗಿದೆ. ಇದನ್ನೇ ವಿದ್ವದ್ರೂಢಿ ಎನ್ನುತ್ತಾರೆ. ಈ ರೀತಿಯ ರೂಢಿಯು ಯೋಗವೃತ್ತಿಯಿಂದಲೇ ಕೂಡಿಬರುವುದು. ಆದ್ದರಿಂದ ವಿದ್ವದ್ರೂಢಿಯು ಲೌಕಿಕ ಸಾಮಾನ್ಯವಾದ ಅವಿದ್ವದ್ರೂಢಿಗಿಂತ ಅತ್ಯಂತ ಮೇಲ್ಮಟ್ಟದ್ದು. ಮಹಾಯೋಗ ಹಾಗೂ ವಿದ್ವದ್ರೂಢಿಗಳಿಂದ ಎಲ್ಲ ಶಬ್ದಗಳಿಗೂ ವಿಷ್ಣುವಿನಲ್ಲೇ ಮುಖ್ಯಾರ್ಥವಿರುವುದು. ಆದ್ದರಿಂದ ಸರ್ವಶಬ್ದಗಳಿಗೂ ವಿಷ್ಣುವಿನಲ್ಲಿಯೇ ಸಮನ್ವಯವಿರುವುದು. ತಮ್ಮ ಹೃದ್ಗತವಾದ ಈ ಅಭಿಪ್ರಾಯದಿಂದಲೇ ಸೂತ್ರಕಾರರು 'ಆನಂದಮಯೋಽಭ್ಯಾಸಾತ್' ಮೊದಲಾದ ಸೂತ್ರಗಳಿಂದ ಎಲ್ಲ ಗುಣಸಾಮಾನ್ಯವಾಚಕ ಶಬ್ದಗಳಿಗೆ ಮುಖ್ಯವೃತ್ತಿಯಿಂದ ಶ್ರೀಹರಿಯಲ್ಲಿಯೇ ಸಮನ್ವಯವನ್ನು ಸಾಧಿಸುತ್ತಾರೆ. ಆದಕಾರಣ ಈ ವ್ಯಾಖ್ಯಾನವು ಯುಕ್ತವೇ ಆಗಿದೆ.

## ಅಂತಸ್ಥತ್ವಾಧಿಕರಣ

ತೈತ್ತರೀಯದಲ್ಲಿ ಹೇಳಿರುವ ಅಂತಃಪ್ರವಿಷ್ಟನು ಬ್ರಹ್ಮನೋ ಅಥವಾ ಬ್ರಹ್ಮನಿಂದ ಇತರರಾದ ಇಂದ್ರಾದಿಗಳೋ ಎಂದು ಸಂಶಯ. ಆ ಶ್ರುತಿಯು ಇಂದ್ರಾದಿಗಳಲ್ಲಿ ರೂಢಿಯಿಂದಲೂ ಯೌಗಿಕವಾಗಿಯೂ ಕೂಡುವುದರಿಂದ ಅಂತಃಪ್ರವಿಷ್ಟ ಧರ್ಮದಿಂದ ಶ್ರುತರಾದವರು ಇಂದ್ರಾದಿಗಳೇ ಎಂದು ಪೂರ್ವಪಕ್ಷ. ಅಂತಃಪ್ರವಿಷ್ಟನು ಬ್ರಹ್ಮನೇ, ಇಂದ್ರಾದಿಗಳಲ್ಲ ಎಂದು ನಿರ್ಣಯಿಸಲು ಈ ಅಧಿಕರಣ ಪ್ರಸಕ್ತವಾಗಿದೆ.

## ಅಧಿದೈವಗತ ಶಬ್ದಗಳ ಸಮನ್ವಯ

**ಸೂತ್ರ: ಓಂ ಅಂತಸ್ತದ್ಧರ್ಮೋಪದೇಶಾತ್ ಓಂ (೧-೧-೨೦)**

'ಅಂತಃಪ್ರವಿಷ್ಟಂ ಕರ್ತಾರಮೇತಮನ್ತಶ್ಚದ್ರಮಸಿ ಮನಸಾ ಚರಂತಂ। ಸಹೈವ ಸಂತಂ ನ ವಿಜಾನಂತಿ ದೇವಾ।' ಎಂದು ತೈತ್ತರೀಯ ಶ್ರುತಿಯಲ್ಲಿ ಹೇಳಿರುವ ಅಂತಃಪ್ರವಿಷ್ಟನು ಬ್ರಹ್ಮನೇ, ಇಂದ್ರಾದಿಗಳಲ್ಲ. ಆ ಬ್ರಹ್ಮನ ಸಮುದ್ರಾಂತಸ್ಥತ್ವ, ಬ್ರಹ್ಮಾಂಡವೀರ್ಯತ್ವಾದಿ ರೂಪಗಳಾದ ಧರ್ಮಗಳನ್ನು 'ಅಂತಸ್ಸಮುದ್ರೇ', 'ಯಸ್ಯಾಂಡಕೋಶಂ' ಇತ್ಯಾದಿ ಶ್ರುತಿಗಳಿಂದ ಉಪದೇಶ ಮಾಡಿರುವುದರಿಂದ ಎಂಬುದು ಸೂತ್ರಾರ್ಥ.

'ಆನಂದಮಯೋಽಭ್ಯಾಸಾತ್' ಎನ್ನುವ ಸೂತ್ರದಿಂದಲೇ ಸರ್ವಶಬ್ದಗಳ ಮುಖ್ಯಾರ್ಥನು ವಿಷ್ಣುವೇ ಎಂದು ಸಾಧಿಸಿ ತೋರಿಸಲಾಯಿತು. ಪುನಃ ಅಂತಸ್ಥತ್ವಾದಿ ಧರ್ಮವನ್ನು ಹೇಳಲು ಹೊರಟಿರುವ ಈ ಅಧಿಕರಣಕ್ಕೆ ಪ್ರಸಕ್ತಿಯೇ ಇರುವುದಿಲ್ಲ ಎಂದರೆ, ಸತ್ಯವೇ. ಆದರೂ ಬ್ರಹ್ಮನಲ್ಲಿರುವಂತೆಯೇ ಇಂದ್ರಾದಿಗಳಲ್ಲಿಯೂ ರೂಢಿ ಹಾಗೂ ಯೋಗದಿಂದ ಅಂತಸ್ಥತ್ವಾದಿ ಧರ್ಮಗಳು ಕೂಡಬಹುದೆಂಬ ಅಭಿಪ್ರಾಯದಿಂದ ಪ್ರಸಕ್ತವಾದ ಅಧಿಕಾಶಂಕೆಯ ನಿರಾಸೆಗಾಗಿ ಅಂತಸ್ತದ್ಧರ್ಮೋಪದೋಶಾತ್ ಎನ್ನುವ ಅಧಿಕರಣದ ತಾತ್ಪರ್ಯವನ್ನು ಇಲ್ಲಿ ತಿಳಿಸುತ್ತಾರೆ -

**......................................ದೇವಾನಾಂ ತತ್ರ ಶಕ್ತತಾಂ ।**
**ಆಶಂಕ್ಯ ತತ್ರ ರೂಢಿಂ ಚ ತಚ್ಛಬ್ದಾನಾಮಪಿ ಸ್ವಯಂ ।।೨೪೨।।**
**ಸಮುದ್ರಾಂತಸ್ಥಿತತ್ವಾದ್ಯೈಸ್ತದ್ಧರ್ಮೈರ್ವಿಷ್ಣುರೂಢತಾಂ ।**
**ಸಾಧಯಿತ್ವಾಭಿದಾಂ ತೈಶ್ಚ ಪುನರೇವ ನ್ಯವಾರಯತ್ ।।೨೪೩।।**

ಇಂದ್ರಾದಿ ದೇವತೆಗಳಿಗೆ ಆಯಾ ಶಬ್ದಗಳಲ್ಲಿ ಪ್ರವೃತ್ತಿನಿಮಿತ್ತವಾದ ಶಕ್ತಿಯಿದೆ ಹಾಗೂ ಸಾಕ್ಷಾತ್ತಾಗಿಯೂ ಯೋಗದಿಂದಲೂ ರೂಢಿಯಿದೆ ಎನ್ನುವ ಆಶಂಕೆಯನ್ನು ಸೂತ್ರಕಾರರು ಈ ಅಧಿಕರಣದಲ್ಲಿ ನಿವಾರಿಸಿದ್ದಾರೆ. ಸಮುದ್ರಾಂತಸ್ಥತ್ವ ಮೊದಲಾದ ವಿಷ್ಣುಧರ್ಮಗಳಿಂದ ಅಂತಃಪ್ರವಿಷ್ಟತ್ವಕ್ಕೆ ವಿಷ್ಣುವಿನಲ್ಲಿಯೇ ಮುಖ್ಯವಾದ ರೂಢಿಯೂ ಯೋಗವೂ ಇರುವುದೆಂದು 'ಅಂತಸ್ತದ್ಧರ್ಮೋಪದೇಶಾತ್' ಎನ್ನುವ ಸೂತ್ರದಿಂದ ಸಾಧಿಸಿದರು.

ದೇವತೆಗಳಿಗೂ ವಿಷ್ಣುವಿಗೂ ಐಕ್ಯವಿರುವುದರಿಂದ ವಿಷ್ಣುವಿನ ಧರ್ಮವು ಅವರಲ್ಲಿಯೂ ಕೂಡುತ್ತದೆ ಎಂದು ಹೇಳುವುದು ಸರಿಯಲ್ಲ. 'ಇಂದ್ರಸ್ಯಾತ್ಮಾ' ಇತ್ಯಾದಿ ಭೇದವ್ಯಪದೇಶಕವಾದ ಶ್ರುತಿಗಳಿರುವುದರಿಂದಲೂ ಹಾಗೂ ಅಭೇದದ ವಿಷಯದಲ್ಲಿ ಪ್ರಮಾಣವಿಲ್ಲದಿರುವುದರಿಂಲೂ ಇಂದ್ರಾದಿಗಳು ವಿಷ್ಣುವಿನಿಂದ ಭಿನ್ನರು ಎಂಬುದಾಗಿ 'ಭೇದವ್ಯಪದೇಶಾಚ್ಚಾನ್ಯಃ' ಎನ್ನುವ ಸೂತ್ರದಿಂದ ಅಭೇದವನ್ನು ನಿವಾರಿಸಿದರು. ಆದಪ್ರಯುಕ್ತ ಅಂತಃಪ್ರವಿಷ್ಟನು ವಿಷ್ಣುವೇ, ಇಂದ್ರಾದಿಗಳಲ್ಲ ಎನ್ನುವುದೇ ಈ ಅಧಿಕರಣದ ಸಾರಾಂಶ.

## ಆಕಾಶಾಧಿಕರಣ

ಈ ಪ್ರಕಾರವಾಗಿ ಆಧಿದೈವಿಕ ಶಬ್ದಗಳ ಸಮನ್ವಯವನ್ನು ಹೇಳಿ, ಈಗ ಆಧಿಭೌತಿಕ ಶಬ್ದಗಳ ಸಮನ್ವಯವನ್ನು ಪ್ರತಿಪಾದಿಸುವ ಇಚ್ಛೆಯುಳ್ಳವರಾಗಿ, ಭೂತಗಳಲ್ಲಿ ಪ್ರಧಾನವಾದ ಆಕಾಶ ಶಬ್ದ ಸಮನ್ವಯವನ್ನು ಶ್ರೀಹರಿಯಲ್ಲಿ ಸೂತ್ರಕಾರರು ಪ್ರತಿಪಾದಿಸುವರು.

### ಅಧಿಭೂತ ಶಬ್ದಗಳ ಸಮನ್ವಯ

**ಸೂತ್ರ: ಓಂ ಆಕಾಶಸ್ತಲ್ಲಿಂಗಾತ್ ಓಂ (೧-೧-೨೨)**

ಛಾಂದೋಗ್ಯದಲ್ಲಿ ಉಕ್ತವಾಗಿರುವ ಆಕಾಶ ಶಬ್ದವಾಚ್ಯನು ಶ್ರೀಹರಿಯೇ, ಪರೋವರೀಯಸ್ತ್ವಾದಿ ವಿಷ್ಣುವಿನ ಲಿಂಗವಿರುವಪ್ರಯುಕ್ತ ಎಂದು ಸೂತ್ರಾರ್ಥ.

'ಅಸ್ಯಲೋಕಸ್ಯ ಕಾ ಗತಿರಿತ್ಯಾಕಾಶ ಇತಿ ಹೋವಾಚ । ಸರ್ವಾಣಿ ಹ ವಾ ಇಮಾನಿ ಭೂತಾನ್ಯಾಕಾಶಾದೇವ ಸಮುತ್ಪದ್ಯಂತೇ' ಇತ್ಯಾದಿ ಛಾಂದೋಗ್ಯ ಶ್ರುತಿಯಲ್ಲಿ - ಈ ಲೋಕಕ್ಕೆ ಆಕಾಶವೇ ಆಶ್ರಯವು, ಎಲ್ಲ ಭೂತಗಳೂ ಆಕಾಶದಿಂದಲೇ ಹುಟ್ಟುತ್ತವೆ, ಆಕಾಶದಲ್ಲಿಯೇ ಲೀನವಾಗುತ್ತವೆ, ಎಲ್ಲ ಭೂತಗಳಿಗಿಂತ ಆಕಾಶವೇ ಶ್ರೇಷ್ಠವಾದುದು, ಆಕಾಶವೇ ಮುಖ್ಯಾಶ್ರಯ, ಆಕಾಶವೇ ಸರ್ವೋತ್ತಮ ಹಾಗೂ ಅನಂತವೆಂದು ಗಾನಮಾಡಲ್ಪಡತಕ್ಕದ್ದು ಎಂದು ಹೇಳಲಾಗಿದೆ. ಯೋಗದಿಂದಲೂ ರೂಢಿಯಿಂದಲೂ ಆಕಾಶ ಶಬ್ದವು ಭೂತಾಕಾಶದಲ್ಲಿಯೇ ಪ್ರಸಿದ್ಧವಾಗಿದೆ. ಅವಕಾಶಪ್ರದವಾದ್ದರಿಂದ ಆಕಾಶ ಎಂಬ ನಿರ್ವಚನದಿಂದಲೂ ಇದು ಸಿದ್ಧವಾಗಿದೆ. ಭೂತಾಕಾಶ ವಿಷಯದಲ್ಲಿಯೇ

ಲೌಕಿಕ ಹಾಗೂ ವೈದಿಕ ಪ್ರಯೋಗಗಳೂ ಬಹಳವಾಗಿ ಕಂಡಿವೆ. ಆದಕಾರಣ ಇಲ್ಲಿ ಪ್ರಸಕ್ತವಾಗಿರುವುದು ಭೂತಾಕಾಶವೇ ಎಂದು ಹೇಳುವುದು ಸರಿಯಲ್ಲ. ಏಕೆಂದರೆ ಲಿಂಗಗಳಿಗೆ ಬಾಹುಲ್ಯದ ನಿಮಿತ್ತವಾದ ಪ್ರಾಬಲ್ಯಕ್ಕಿಂತ ಸ್ವಭಾವ ಪ್ರಯುಕ್ತ ಪ್ರಾಬಲ್ಯವೇ ಬಲಿಷ್ಠವು. ಆದಪ್ರಯುಕ್ತ ಮೊದಲಿಗೆ ತಿಳಿಯಲ್ಪಟ್ಟ ಸ್ವಭಾವತಃ ಪ್ರಬಲವಾದ ಶ್ರುತಿಗೆ ವಿರೋಧವಾಗದಂತೆ ಲಿಂಗಗಳನ್ನು ಯೋಜಿಸಿ ಅರ್ಥಮಾಡಬೇಕು. ಹಾಗಾದರೆ ಅಂತಸ್ತಧರ್ಮೋಪದೇಶಾತ್ ಎನ್ನುವ ಸೂತ್ರದಲ್ಲಿಯೇ ಇಂದ್ರಾದಿ ಶಬ್ದಗಳಿಗೆ ಭಗವತ್ಪರತ್ವವನ್ನು ನಿರ್ಣಯ ಮಾಡಿರುವುದರಿಂದ ಆಕಾಶ ಶಬ್ದವನ್ನು ಭಗವಂತನಲ್ಲಿಯೇ ಸಮನ್ವಯ ಮಾಡಬಹುದಾಗಿದೆ. ಅಭ್ಯಧಿಕಾಶಂಕೆಯೂ ಇರುವುದಿಲ್ಲ. ಅಂದಮೇಲೆ ಈಗ ಹೊಸ ಅಧಿಕರಣದ ಪ್ರಾರಂಭವು ಅನವಶ್ಯಕ ಎಂದು ಹೇಳಿದರೆ, ಹಾಗಲ್ಲ ಇಲ್ಲಿಯೂ ಅಭ್ಯಧಿಕಾಶಂಕೆ ಬರುವುದು ಎಂಬುದನ್ನು ತೋರಿಸಿ ಆಶಂಕೆಯನ್ನು ನಿರಾಸೆ ಮಾಡುತ್ತಾರೆ -

**ಚೇಷ್ಟಾ ಹಿ ಚೇತನಾನಾಂ ಯಾ ಸಾ ಭವೇತ್ತತ್ಪ್ರಸಾದತಃ ।**
**ಅಚೇತನಸ್ವಭಾವಸ್ತು ವಿವರಾದಿಃ ಕಥಂ ತತಃ ॥೨೪೪॥**
**ಇತಿ ಶಂಕಾನಿವೃತ್ತ್ಯರ್ಥಮಾಕಾಶ ಇತಿ ನಾಮ ಚ ।**
**ಪರತೋಽಪಿ ವರೀಯಸ್ತ್ವಪೂರ್ವಾಲ್ಲಿಂಗಾದ್ಧರೇರ್ಭವೇತ್ ॥೨೪೫॥**
**ನಭೋ ದದಾತಿ ಶ್ವಸತಾಂ ಮಾರ್ಗಂ ಯನ್ನಿಯಮಾದದಃ ।**
**ಇತ್ಯಾದಿ ವಾಕ್ಯೈಃ ......................................॥**

ಚೇತನರ ಚೇಷ್ಟೆಗಳು ಶ್ರೀಹರಿಯ ಅನುಗ್ರಹದಿಂದಲೇ ಆಗುವುದು ಎಂಬುದೇನೋ ಸರಿಯೇ. ಆದರೆ ಅಚೇತನಗಳ ಸ್ವಭಾವವನ್ನು ಹೊಂದಿರುವ ಆಕಾಶಾದಿಗಳು ಈಶ್ವರನಿಂದ ಚೇಷ್ಟಿತವು ಹೇಗೆ ಆಗುವುದು ಎನ್ನುವ ಶಂಕಾನಿವೃತ್ತಿಗಾಗಿ, ನಿರವಕಾಶವಾದ ಪರೋವರೀಯಸ್ತ್ವವೇ ಮೊದಲಾದ ಲಿಂಗಗಳಿರುವುದರಿಂದ ಆಕಾಶ ಎಂಬ ನಾಮಧೇಯವೂ ವಿಷ್ಣುವಾಚಕವೇ ಆಗುವುದು ಎಂದು ತಿಳಿಸುತ್ತಾರೆ. ಈ ಆಕಾಶವು ಯಾರ ಪ್ರೇರಣೆಯಿಂದಲೇ ಶ್ವಾಸೋಚ್ಛ್ವಾಸ ಮಾಡುವ ಪ್ರಾಣಿಗಳಿಗೆ ಅವಕಾಶ ಕೊಡುವುದೋ ಇವೇ ಮೊದಲಾದ ವಾಕ್ಯಗಳಿಂದ ಭೂತಾಕಾಶಕ್ಕೆ ಸ್ವಾತಂತ್ರ್ಯೇಣ ಅವಕಾಶಪ್ರದತ್ವವು

ಇರುವುದಿಲ್ಲ ಎಂದು ತಿಳಿದುಬರುವುದು. ನಿರವಧಿಕವಾದ ಅವಕಾಶಪ್ರದತ್ವವು ಸರ್ವೋತ್ತಮನಾದ ವಿಷ್ಣುವಿನ ಧರ್ಮವೇ ಎಂಬುದು ಇದರಿಂದ ನಿಶ್ಚಯವಾಗುತ್ತದೆ: ಆದಪ್ರಯುಕ್ತ ಆಕಾಶ ಮತ್ತು ಅದರಿಂದ ಉಪಲಕ್ಷಿತವಾದ ಎಲ್ಲ ಅಧಿಭೂತ ಶಬ್ದಗಳಿಂದ ಪರಮ ಮುಖ್ಯವೃತ್ತಿಯಿಂದ ಶ್ರೀಹರಿಯೇ ವಾಚ್ಯನು ಎಂದು ಸಿದ್ಧವಾಗುವುದು.

## ಪ್ರಾಣಾಧಿಕರಣ

### ಪ್ರಾಣಾದಿ ಆಧ್ಯಾತ್ಮಿಕ ಶಬ್ದಗಳ ಸಮನ್ವಯ

ಈಗ ಆಧ್ಯಾತ್ಮಿಕ ಶಬ್ದಗಳ ಸಮನ್ವಯವನ್ನು ಸಾಧಿಸುವ ಇಚ್ಛೆಯುಳ್ಳವರಾಗಿ ಸೂತ್ರಕಾರರು ಪ್ರಧಾನವಾದ ಪ್ರಾಣ ಶಬ್ದದ ಸಮನ್ವಯವನ್ನು ಮಾಡುತ್ತಾರೆ -

**ಸೂತ್ರ: ಓಂ ಅತ ಏವ ಪ್ರಾಣಃ ಓಂ (೧-೧-೨೩)**

ನಿರವಕಾಶವಾದ ಲಕ್ಷ್ಮೀಪತಿತ್ವ ಲಿಂಗವಿರುವುದರಿಂದ ತೈತ್ತರೀಯದಲ್ಲಿ ಶ್ರುತನಾದ ಪ್ರಾಣ ಶಬ್ದವಾಚ್ಯನು ವಿಷ್ಣುವೇ.

'ತದ್ವೈ ತ್ವಂ ಪ್ರಾಣೋಽಭವಃ। ಮಹಾನ್ಭೋಗಃ ಪ್ರಜಾಪತೇಃ। ಭುಜಃ ಕರಿಷ್ಯಮಾಣಃ ಯದ್ದೇವಾನ್ ಪ್ರಾಣಯೋ ನ ವಾ।' ಎಂದು ತೈತ್ತರೀಯದಲ್ಲಿ ಶ್ರುತವಾಗಿದೆ. ಈ ಪ್ರಾಣ ಶಬ್ದವಾಚ್ಯನು ಪರಮಾತ್ಮನೋ ಮುಖ್ಯಪ್ರಾಣನೋ ಎಂದು ಸಂಶಯ. ಜಡವಾದ ವಾಯುವಿನಲ್ಲಿ ಪ್ರಾಣಶಬ್ದ ಪ್ರಯೋಗವಿದ್ದರೂ ಅದು ಇಲ್ಲಿ ಕೂಡುವುದಿಲ್ಲ. ಏಕೆಂದರೆ ಅಚೇತನವನ್ನು ಕುರಿತು 'ತದ್ವೈ ತ್ವಂ' ಎಂದು ಹೇಳುವುದಿಲ್ಲ. ಅಂದಮೇಲೆ ಮುಖ್ಯಪ್ರಾಣನೆಂದೇ ಹೇಳಬೇಕು. ಪ್ರಾಣಶಬ್ದಕ್ಕೆ ಲೌಕಿಕ ವೈದಿಕ ಗ್ರಂಥಗಳಲ್ಲಿ ಮುಖ್ಯಪ್ರಾಣನಲ್ಲಿಯೇ ಪ್ರಯೋಗ ಬಾಹುಲ್ಯವಿದೆ. ಜೊತೆಗೆ 'ಪ್ರಾಣಂತಿ ಅನೇನ' ಎಂಬ ನಿರುಕ್ತಿಯೂ ಉಂಟು. ಆದ್ದರಿಂದ ಇಲ್ಲಿ ಮುಖ್ಯಪ್ರಾಣನೇ ಹೇಳಲ್ಪಟ್ಟಿದ್ದಾನೆ ಎಂದು ಆಶಂಕಿಸಿದರೆ -

**.......................................ಅಧ್ಯಾತ್ಮಮನ್ವಯವ್ಯತಿರೇಕತಃ ॥೨೪೬॥**

**ಪ್ರಾಣಾದಿ ಹೇತುತಾದೃಷ್ಟೇರತಿದೇಶೋ ಹಿ ತಾದೃಶಃ ।**

**ಲಿಂಗಂ ಬಲವದೇವ ಸ್ಯಾತ್ ಪ್ರೇರಕೋಽಸ್ಯಾಪಿ ಯದ್ಧರಿಃ ॥೨೪೭॥**

ಆತ್ಮನನ್ನು ಅಧಿಕರಿಸಿಕೊಂಡು ಆತ್ಮನಿಗೆ ಭೋಗಕ್ಕೆ ಆಶ್ರಯವಾದುದರಿಂದ ಶರೀರವು ಅಧ್ಯಾತ್ಮ ಎನಿಸುವುದು. ಆ ಶರೀರದಲ್ಲಿ ಮುಖ್ಯಪ್ರಾಣನಿದ್ದರೆ ಮಾತ್ರ ಜೀವನ ಇಲ್ಲದಿದ್ದರೆ ಜೀವನವಿಲ್ಲ ಎನ್ನುವ ಅನ್ವಯ-ವ್ಯತಿರೇಕಗಳಿಂದ ಶರೀರಸ್ಥನಾದ ಜೀವನ ಚೇಷ್ಟಾದಿ ಕಾರಣತ್ವವು ಮುಖ್ಯಪ್ರಾಣನಿಗೇನೇ ದೃಶ್ಯವಾಗಿದೆ. ಪ್ರಾಣಾದಿ ಕಾರಣತ್ವವು ಪರಮಾತ್ಮನಲ್ಲಿ ತೋರುವುದಿಲ್ಲ. ಆದಕಾರಣ ಇಲ್ಲಿ ಮುಖ್ಯಪ್ರಾಣನೇ ಪ್ರಾಣಶಬ್ದದಿಂದ ಹೇಳಲ್ಪಟ್ಟಿದ್ದಾನೆ ಎಂದು ಹೇಳುವುದು ಸರಿಯಲ್ಲ. ಪ್ರಬಲವಾದ ಶ್ರೀಪತಿತ್ವ ಎಂಬ ವಿಷ್ಣುಲಿಂಗವು ಇಲ್ಲಿ ಶ್ರುತವಾಗಿರುವ ಪ್ರಯುಕ್ತ ಪ್ರಾಣ ಶಬ್ದವು ಮುಖ್ಯಾರ್ಥದಲ್ಲಿ ವಿಷ್ಣುವಿಗೇ ಅನ್ವಯಿಸುತ್ತದೆ. ಶರೀರಸ್ಥ ಜೀವನು ಯಾವ ಮುಖ್ಯಪ್ರಾಣನಿಗೆ ಅಧೀನನೋ, ಆ ಮುಖ್ಯಪ್ರಾಣನೂ ಶ್ರೀಹರಿಯಿಂದ ಪ್ರೇರಿತನಾಗಿಯೇ ಅಧೀನನಾಗಿಯೇ ಪ್ರವೃತ್ತನಾಗುವನು. ಆದ್ದರಿಂದ ಶ್ರೀಹರಿಯೇ ಮುಖ್ಯತಃ ಪ್ರಾಣಶಬ್ದವಾಚ್ಯನು.

## ಜ್ಯೋತಿರಧಿಕರಣ

**ಸೂತ್ರ: ಓಂ ಜ್ಯೋತಿಶ್ಚರಣಾಭಿಧಾನಾತ್ ಓಂ (೧-೧-೨೪)**

ಅಗ್ನಿಸೂಕ್ತದಲ್ಲಿ ಉಕ್ತನಾದ ಜ್ಯೋತಿಶಬ್ದವಾಚ್ಯನು ವಿಷ್ಣುವೇ, ಅಗ್ನಿಯಲ್ಲ. ವಿಷ್ಣುವಿಗೆ ಇಂದ್ರಿಯ ವಿದೂರತ್ವ ಲಿಂಗವು ಉಕ್ತವಾಗಿರುವುದರಿಂದ.

*ಈ ಅಧಿಕರಣದ ಅಧಿಕಾಶಂಕಾವನ್ನು ಭಾಷ್ಯದಲ್ಲಿಯೇ ಅಗ್ನಿಸೂಕ್ತತ್ವಾತ್ ಎಂದು ತೋರಿಸಿರುವದರಿಂದ ಈ ಅಧಿಕರಣವನ್ನು ಇಲ್ಲಿ ವಿವರಿಸಿಲ್ಲ.*

## ಗಾಯತ್ರ್ಯಧಿಕರಣ

### ಅಧಿವೇದಗತ ಶಬ್ದಗಳ ಸಮನ್ವಯ

ಈ ಅಧಿಕರಣದಲ್ಲಿ ಅಧಿವೇದಗತ ಗಾಯತ್ರಿಯೇ ಮೊದಲಾದ ಅಶೇಷ ಛಂದೋವಾಚಕ ನಾಮಗಳ ಸಮನ್ವಯ ಮಾಡುತ್ತಾರೆ. ಛಂದಸ್ಸುಗಳಲ್ಲಿ ಗಾಯತ್ರಿಯೇ ಪ್ರದಾನವಾದ್ದರಿಂದ ಇಲ್ಲಿ ಗಾಯತ್ರಿಯನ್ನು ತೆಗೆದುಕೊಳ್ಳಲಾಗಿದೆ. ಉಪಲಕ್ಷಣಯಾ ಎಲ್ಲ ಛಂದೋವಾಚಕ ಶಬ್ದಗಳನ್ನು ಇಲ್ಲಿ ಪರಿಗಣಿಸಬೇಕು.

**ಸೂತ್ರ: ಓಂ ಛಂದೋಭಿಧಾನಾನ್ನೇತಿ ಚೇನ್ನ ತಥಾ ಚೇತೋರ್ಪಣ**
**ನಿಗದಾತ್ತಥಾ ಹಿ ದರ್ಶನಂ ಓಂ (೧-೧-೨೫)**

ಗಾಯತ್ರಿಯು ಒಂದು ಛಂದಸ್ಸು ಎಂದು ಪ್ರಸಿದ್ಧವಾಗಿರುವುದರಿಂದ ಗಾಯತ್ರೀ ಶಬ್ದವಾಚ್ಯನು ಪರಬ್ರಹ್ಮನಲ್ಲ ಎಂದು ಹೇಳಿದರೆ ಅದು ಸರಿಯಲ್ಲ. ಉಪಾಸನೆಗಾಗಿ 'ಗಾಯತ್ರೀ ವಾ ಇದಂ ಭೂತಂ' ಎಂದು ಹೇಳುವ ಶ್ರುತಿಯು ಮುಂದೆ 'ಗಾಯತಿ ಚ ತ್ರಾಯತೇ ಚ ತಸ್ಮಾದ್ಗಾಯತ್ರೀ' ಎಂದು ಗಾನ ತ್ರಾಣ ಕರ್ತೃತ್ವರೂಪವಾದ ವಿಷ್ಣುಲಿಂಗವನ್ನು ಗಾಯತ್ರಿಯ ಲಕ್ಷಣವಾಗಿ ಹೇಳುವುದು. ಆದಪ್ರಯುಕ್ತ ಗಾಯತ್ರೀ ಶಬ್ದವಾಚ್ಯನು ವಿಷ್ಣುವೇ, ಪ್ರಸಿದ್ಧವಾದ ಛಂದಸ್ಸಲ್ಲ.

'ಗಾಯತ್ರೀ ವಾ ಇದಂ ಸರ್ವಂ' ಇತ್ಯಾದಿ ಛಾಂದೋಗದಲ್ಲಿ ಶ್ರುತವಾಗಿದೆ. ಗಾಯತ್ರೀ ಎನ್ನುವುದು ಮಂತ್ರವೋ ಅಥವಾ ವಿಷ್ಣುವೋ ಎಂದು ಸಂಶಯ. ಛಂದೋ ವಿಶೇಷದಲ್ಲಿ ಪ್ರಸಿದ್ಧವಾಗಿರುವುದರಿಂದ ಗಾಯತ್ರಿಯು ಮಂತ್ರವೇ ಎಂದು ಪೂರ್ವಪಕ್ಷ. ಇದೂ ಕೂಡ ಪೂರ್ವನ್ಯಾಯದಿಂದಲೇ ಪರಿಹೃತವಾಗಿದೆ ಎಂದು ಅಭ್ಯಧಿಕಾಶಂಕೆ ಮಾಡಿ ಅದನ್ನು ಪರಿಹರಿಸುತ್ತಾರೆ.

**ನಿತ್ಯತ್ವಾದೇವ ಶಬ್ದಸ್ಯ ತತ್ಸ್ವಭಾವಃ ಕಥಂ ಹರೇಃ ।**
**ಕಥಂ ಪ್ರಸಿದ್ಧಬಹುಲಶಬ್ದಾನಾಮನ್ಯತಾರ್ಥತಾ ॥೨೪೮॥**
**ಇತಿ ಚೇತ್ತದ್ಧರೇರೇವ ಬಾಹುಲ್ಯಾಚ್ಛ್ರುತಿಲಿಂಗಯೋಃ ।**
**ತಾದೃಶತ್ವಾಚ್ಚ ತಚ್ಛಕ್ತೇಃ ......................................॥**

ವೇದವು ನಿತ್ಯವಾದುದರಿಂದ, ನಿತ್ಯವಾದ ಶಬ್ದಸ್ವಭಾವವು ಶ್ರೀಹರಿಯ ಅಧೀನವಾಗುವದು ಹೇಗೆ ಸಾಧ್ಯ. ಸ್ವಬಾವಕ್ಕೆ ಅನ್ಯಾಧೀನತ್ವವಿರುವುದಿಲ್ಲ. 'ಗಾಯತ್ರೀ ವಾ ಇದಂ ಸರ್ವಂ ವಾಗ್ವೈ ಗಾಯತ್ರೀ' ಇತ್ಯಾದಿ ಶಬ್ದಗಳಲ್ಲಿಯೇ ಪ್ರಸಿದ್ಧವಾದ ಅನೇಕ ಶಬ್ದಗಳು ಕೇಳಿಬರುತ್ತವೆ. ಯಾವುದೇ ಬಾಧಕವಿಲ್ಲದೇ ಅಂಥಹ ಶಬ್ದಗಳಿಗೆ ಅನ್ಯಾರ್ಥ ಕಲ್ಪಿಸುವುದು ಸಾಧ್ಯವಿಲ್ಲ. ಹೀಗೆ ಹೇಳುವುದು ಉಚಿತವಲ್ಲ. ಜ್ಯೋತಿ ಪ್ರಕರಣ ಹಾಗೂ ಗಾಯತ್ರೀ ಪ್ರಕರಣದಲ್ಲಿ ಉಕ್ತವಾಗಿರುವ ಶಬ್ದಗಳು ಶ್ರೀಹರಿಯನ್ನೇ ಹೇಳುತ್ತವೆ. ಗಾಯತ್ರೀ ಪದ ಪ್ರವೃತ್ತಿನಿಮಿತ್ತವು ಮುಖ್ಯವಾಗಿ ಹರಿಯಲ್ಲಿಯೇ ಕೂಡುವುದು. ಇತರವಾದ ಛಂದಸ್ಸಿನಲ್ಲಿರುವ ಪ್ರವೃತ್ತಿನಿಮಿತ್ತವೂ ಶ್ರೀಹರಿಯ ಅಧೀನವೇ.

ಗಾಯತ್ರೀ ಜ್ಯೋತಿ ಇತ್ಯಾದಿ ನಾಮಗಳಿಗೆ ಶ್ರುತಿ ಮತ್ತು ಲಿಂಗಗಳ ಬಾಹುಲ್ಯದಿಂದ ಪರಮಾತ್ಮನಲ್ಲಿಯೇ ವಾಚಕತ್ವವು ಕೂಡುವುದು. ಆಯಾ ಶಬ್ದಗಳ ಪ್ರವೃತ್ತಿನಿಮಿತ್ತವು ಅವುಗಳ ಸ್ವಭಾವವಾಗಿದ್ದರೂ, ಎಲ್ಲ ವಸ್ತುಗಳ ಸ್ವಭಾವವೂ ಪರಮಾತ್ಮನ ನಿಯಮನ ಶಕ್ತಿಗೆ ಅಧೀನವಾಗಿರುವುದರಿಂದ ಸರ್ವವೂ ಪರಮಾತ್ಮನ ಅಧೀನವೇ ಆಗಿದ್ದು, ಮುಖ್ಯವೃತ್ತಿಯಿಂದ ಪರಮಾತ್ಮವಾಚಕಗಳೇ ಆಗಿರುತ್ತವೆ. ಆದ್ದರಿಂದ ಗಾಯತ್ರೀ ಶಬ್ದವಾಚ್ಯನು ಪರಮಾತ್ಮನೇ ಆಗಿರುವನು.

## ಪಾದಾಂತ್ಯಪ್ರಾಣಾಧಿಕರಣ

**ಸೂತ್ರ: ಓಂ ಪ್ರಾಣಸ್ತಥಾಽನುಗಮಾತ್ ಓಂ (೧-೧-೨೮)**

'ಅತ ಏವ ಪ್ರಾಣಃ' ಎನ್ನುವ ಪ್ರಾಣಾಧಿಕರಣದಿಂದಲೇ ಈ ಅಧಿಕರಣವು ಗತಾರ್ಥವಾಗಿರುವುದರಿಂದ ಆರಂಭಣೀಯವಲ್ಲ ಎಂದರೆ ಅದು ಸರಿಯಲ್ಲ. 'ತಾ ಏತಾಃ ಶೀರ್ಷನ್ ಶ್ರಿಯಃ ಶ್ರಿತಾಃ' ಇತ್ಯಾದಿ ವಾಕ್ಯಾಂತರ ವಿಷಯತ್ವವಿರುವುದರಿಂದ ಈ ಅಧಿಕರಣವು ವ್ಯರ್ಥವಲ್ಲ ಎಂದು ಹೇಳುತ್ತೇವೆ ಎಂದರೆ ಹಾಗೆ ಹೇಳಕೂಡದು. ವಿಷಯ ವಾಕ್ಯಗಳು ಬೇರೆ ಇರುವುದರಿಂದ ಬೇರೆ ಅಧಿಕರಣವನ್ನು ಹೇಳುವುದಾದರೆ ಶಾಸ್ತ್ರಗಳಿಗೆ ಪರ್ಯವಸಾನವೇ ಇಲ್ಲದಂತಾಗುವುದು. ಅಭ್ಯಧಿಕಾಶಂಕೆಯಿರುವುದರಿಂದ ಎಂದು ಹೇಳಿದರೆ, ಇಲ್ಲಿ ಅಂತಹದೇನೂ ತೋರುವುದಿಲ್ಲ. ಒಂದುವೇಳೆ ಅಂತಹ ಶಂಕೆಯಿರುವುದಾದರೆ ಆ ಸೂತ್ರ ಹೇಳಿದೊಡನೆಯೇ ಈ ಅಧಿಕರಣವನ್ನು ಆರಂಭಿಸಬೇಕಿತ್ತು. ಹೀಗೆ ಅಧಿಕಾಶಂಕೆ ಮಾಡಿಕೊಂಡು ನಿರಾಕರಿಸುತ್ತಾರೆ -

**.............................ಬಾಹುಲ್ಯೇ ಶ್ರುತಿಲಿಂಗಯೋಃ ||೨೪೯||**

**ಅನ್ಯಸ್ಯ ಮುಖ್ಯವಾಚ್ಯತ್ವಮಿತಿ ತನ್ಮಾತ್ರಗಸ್ಯ ಹಿ |**
**ವಿಷ್ಣಾವೇವ ತು ಲಿಂಗಾನಿ ಪ್ರಾಣಸ್ಥಾನಿ ತು ಸರ್ವಶಃ ||೨೫೦||**
**ಪ್ರಾಣಸಂವಾದಪೂರ್ವಾಣಿ ಮುಖ್ಯತೋ ಜೀವಗಾನಿ ಚ |**
**ಅಭ್ಯಾರ್ಚಭೃತವರ್ಷಾಣಿ ಪ್ರಾಣವಂಶತ್ವಮಿತ್ಯಪಿ ||೨೫೧||**

ವಿಷ್ಣುವಿನಿಂದ ಇತರರಾದ ಜೀವ ಇಂದ್ರ ಪ್ರಾಣಾದಿಗಳ ಪರವಾಗಿ ಬಹಳವಾದ ಶ್ರುತಿ ಲಿಂಗಗಳು ಕಂಡಿರುವ ಪ್ರಯುಕ್ತ ಇಂದ್ರಾದಿಗಳಿಗೇ

ಮುಖ್ಯವಾಗಿ ಪ್ರಾಣಶಬ್ದ ವಾಚ್ಯತ್ವವು ಕೂಡುವುದು ಎಂದು ಆಶಂಕಿಸಿದರೆ, ಅದು ಯುಕ್ತವಲ್ಲ. ಏಕೆಂದರೆ ಪರಬ್ರಹ್ಮವಿಷಯಕವಾದ ಶ್ರುತಿ ಲಿಂಗಗಳಿಗೆ ಬಾಹುಲ್ಯವಿರುವಾಗ ಇತರರಾದ ಇಂದ್ರಾದಿಗಳಿಗೆ ಪ್ರಾಣಶಬ್ದ ಮುಖ್ಯವಾಚ್ಯತ್ವವು ಕೂಡುವುದಿಲ್ಲ. ಪ್ರಾಣನನ್ನೇ ಹೇಳುವಂತೆ ತೋರುವ 'ಪ್ರಾಣೋ ವಂಶಃ' ಇತ್ಯಾದಿ ವಾಕ್ಯಗಳಲ್ಲಿ ಹೇಳಿದ ಚಕ್ಷುರಾದಿ ಇಂದ್ರಿಯಗಳ ಆಶ್ರಯತ್ವ ಮೊದಲಾದ ಎಲ್ಲ ಪ್ರಾಣಲಿಂಗಗಳೂ, ಜೀವರಲ್ಲಿ ತೋರತಕ್ಕ 'ತಂ ಯಚ್ಛತಂ ವರ್ಷಾಣ್ಯಭ್ಯಾರ್ಚತ್' ಇತ್ಯಾದಿ ವಾಕ್ಯಗಳಲ್ಲಿ ಹೇಳಿದ ಶತಾಯುಷ್ಯ ಮೊದಲಾದ ಎಲ್ಲ ಜೀವಲಿಂಗಗಳೂ ಮುಖ್ಯವಾಗಿ ಇಂದ್ರ ಮತ್ತು ಜೀವಾದಿಗಳಲ್ಲಿರತಕ್ಕ ವಿಷ್ಣುವಿಗೇ ಕೂಡುತ್ತವೆ.

### ಪಾದಾರ್ಥ ಉಪಸಂಹಾರ

**ತಸ್ಮಾದನ್ಯತ್ರಗೈಃ ಶಬ್ದೈರುಕ್ತನ್ಯಾಯೈಃ ಸಮಂತತಃ ।**
**ಏಕೋ ನಾರಾಯಣೋ ದೇವೋ ಭಣ್ಯತೇ ನಾತ್ರ ಸಂಶಯಃ ॥೨೫೨॥**

ಆದಕಾರಣ ವಿಷ್ಣುವ್ಯತಿರಿಕ್ತರಾದ ಇಂದ್ರಾದಿಗಳ ಪರವೆಂದು ತೋರುವಂತೆ ಹೇಳಲ್ಪಟ್ಟ ನ್ಯಾಯಗಳಿಂದ ಎಲ್ಲ ವೇದಗಳಲ್ಲಿರತಕ್ಕ ನಾಮಾತ್ಮಕ ಶಬ್ದಗಳಿಂದ ಮುಖ್ಯಾರ್ಥನಾಗಿ ಕ್ರೀಡಾದಿ ವಿಶಿಷ್ಟನಾದ ನಾರಾಯಣನೇ ಹೇಳಲ್ಪಡುತ್ತಾನೆ. ಈ ವಿಷಯದಲ್ಲಿ ಸಂಶಯವಿರುವುದಿಲ್ಲ.

**ವಾಸುದೇವಾದಿ ರೂಪೇಣ ಚತುರ್ಮೂರ್ತಿಶ್ಚ ಸರ್ವಶಃ ।**
**ಅಥವಾ ಪಂಚಮೂರ್ತಿಃ ಸ ಪ್ರೋಕ್ತೋಧಿಕರಣಂ ಪ್ರತಿ ॥೨೫೩॥**

ವಾಸುದೇವ ಮೊದಲಾದ ನಾಲ್ಕು ರೂಪಗಳಿಂದ (ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ) ಎಲ್ಲ ಪಾದಗಳಲ್ಲಿಯೂ ಅಥವಾ ನಾರಾಯಣ, ವಾಸುದೇವ ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ ಎಂಬ ಐದು ರೂಪಗಳಿಂದ ಆ ಪರಮಾತ್ಮನು ಎಲ್ಲ ಅಧಿಕರಣಗಳಲ್ಲಿಯೂ ವಿಶೇಷವಾಗಿ ಹೇಳಲ್ಪಟ್ಟಿದ್ದಾನೆ. ಅದೇ ನಾರಾಯಣನೇ ಎಲ್ಲ ಸೂತ್ರಗಳಲ್ಲಿಯೂ, ಎಲ್ಲ ಪದಗಳಲ್ಲಿಯೂ, ಎಲ್ಲ ಅಕ್ಷರಗಳಲ್ಲಿಯೂ ವರ್ಣಿಸಲ್ಪಟ್ಟಿದ್ದಾನೆ.

**ಪ್ರತಿಸೂತ್ರಂ ಪ್ರತಿಪದಂ ಪ್ರತ್ಯಕ್ಷರಮಥಾಪಿ ವಾ ।**
**ತೈಸ್ತೈರ್ಯುಕ್ತಿಶ್ರುತಿನ್ಯಾಯವಿಶೇಷೈರ್ಯೋಗ್ಯತಾ ಯಥಾ ॥೨೫೪॥**

ಆಯಾಯ ಮೂರ್ತಿಗಳಲ್ಲಿ ಪ್ರಸಿದ್ಧವಾದ ಲಿಂಗ, ಶ್ರುತಿ, ಸಮಾಖ್ಯಾದಿ ಭೇದಜ್ಞಾಪಕ ನ್ಯಾಯಗಳಿಂದ ಆಯಾಯ ಮೂರ್ತಿಗಳು ಪ್ರತಿಪಾದಿತವಾಗಿವೆ ಎಂದು ತಿಳಿದುಕೊಳ್ಳಬಹುದು. ಹಾಗಾದರೆ ವಾಸುದೇವಾದಿ ನಾಲ್ಕು ಅಥವಾ ನಾರಾಯಣಾದಿ ಐದು ರೂಪಗಳು ಎಲ್ಲ ಅಕ್ಷರ, ಪದ, ಸೂತ್ರ, ಅಧಿಕರಣ, ಪಾದಗಳಲ್ಲಿ ತೋರುತ್ತವೆ ಎಂಬುದು ಹೇಗೆ ಕೂಡುತ್ತದೆ ಎಂದರೆ, ಆಯಾ ಪುರುಷರ ಯೋಗ್ಯತೆಗೆ ತಕ್ಕಂತೆ ತೋರುವುದರಿಂದ ಇಲ್ಲಿ ಹೇಳಿರುವ ವಿಕಲ್ಪವು ಕೂಡುವುದು.

**ಬೃಹತ್ತಂತ್ರಪ್ರಮಾಣೇನ ಬಹ್ವರ್ಥಮಪಿ ಸಂಗ್ರಹಾತ್ ।**

**ಉಚ್ಯತೇ ನರಬುದ್ಧೀನಾಮಪಿ ಕಿಂಚಿದ್ಗ್ರಹಾರ್ಥತಃ ॥೨೫೫॥**

ಬೃಹತ್ತಂತ್ರ ಪ್ರಮಾಣದಿಂದ ಇಂಥಹ ವಿಶೇಷ ಅರ್ಥಗಳು ಬಹಳವಾಗಿ ತಿಳಿಯಲ್ಪಡುತ್ತವೆ. ಈ ಗ್ರಂಥದಲ್ಲಿ ಸೂತ್ರಗಳಿಗೆ ಅನೇಕ ಅರ್ಥಗಳು ಉಕ್ತವಾಗಿದ್ದರೂ, ಅಲ್ಪ ಬುದ್ಧಿಯುಳ್ಳವರಿಗೂ ಸ್ವಲ್ಪವಾದರೂ ಸೂತ್ರಗಳ ಅರ್ಥಜ್ಞಾನವಾಗಲಿ ಎಂಬ ಉದ್ದೇಶದಿಂದ ಇಲ್ಲಿ ಸಂಗ್ರಹಿಸಿ ಹೇಳಲಾಗಿದೆ.

**ಗ್ರಂಥೋಯಮಪಿ ಬಹ್ವರ್ಥೋ ಭಾಷ್ಯಂ ಚಾತ್ಯರ್ಥವಿಸ್ತರಂ ।**

**ಬಹುಜ್ಞಾ ಏವ ಜಾನಂತಿ ವಿಶೇಷೇಣಾರ್ಥಮೇತಯೋಃ ॥**

**ತಸ್ಮಾನ್ಮಹಾಗುಣೋ ವಿಷ್ಣುರ್ನಾಮ್ನಾಮಪುನರುಕ್ತಿತಃ ॥೨೫೬॥**

ಸಂಪೂರ್ಣವಾಗಿ ಅರ್ಥಗಳನ್ನು ಇಲ್ಲಿ ವ್ಯಾಖ್ಯಾನ ಮಾಡದೇ ಇದ್ದರೂ, ಈ ಅನುವ್ಯಾಖ್ಯಾನವು ಅನೇಕಾರ್ಥವುಳ್ಳದ್ದಾಗಿದೆ. ನಮ್ಮಿಂದ ರಚಿತವಾದ ಭಾಷ್ಯಗ್ರಂಥವೂ ಹೆಚ್ಚಿನ ಅರ್ಥವಿಸ್ತಾರವನ್ನು ಹೊಂದಿದೆ. ಹೆಚ್ಚಿನ ಜ್ಞಾನವುಳ್ಳವರೇ ವಿಶೇಷವಾಗಿ ಈ ಗ್ರಂಥಗಳ ಅರ್ಥಗಳನ್ನು ತಿಳಿಯಲು ಸಾಧ್ಯ. ಎಲ್ಲ ವೇದಗಳಲ್ಲಿರತಕ್ಕ ಎಲ್ಲ ನಾಮಗಳಿಂದಲೂ ವಾಚ್ಯನಾದ ಪ್ರಯುಕ್ತವೂ, ನಾಮಗಳಿಗೆ ಪುನರುಕ್ತಿಯಿಲ್ಲದಿರುವದರಿಂದಲೂ ವಿಷ್ಣುವು ಅನಂತಕಲ್ಯಾಣಗುಣಗಣಪರಿಪೂರ್ಣನು ಎಂಬುದು ಸಿದ್ಧವಾಗುವುದು.

**॥ ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತೇ**

**ಶ್ರೀಮದನುವ್ಯಾಖ್ಯಾನೇ ಪ್ರಥಮಾಧ್ಯಾಯಸ್ಯ ಪ್ರಥಮಃ ಪಾದಃ ॥**

* * *

# ಮೊದಲನೆಯ ಅಧ್ಯಾಯ

# ಎರಡನೆಯ ಪಾದ

ಮೊದಲನೆಯ ಪಾದದಲ್ಲಿ ಅನ್ಯತ್ರ ಪ್ರಸಿದ್ಧವಾದ ಎಲ್ಲ ನಾಮಾತ್ಮಕ ಶಬ್ದಗಳಿಗೆ ಸಮನ್ವಯವನ್ನು ನಿರೂಪಿಸಿದರು. ಎರಡನೆಯ ಪಾದದಲ್ಲಿ ಎಲ್ಲ ಲಿಂಗಾತ್ಮಕ ಶಬ್ದಗಳಿಗೆ ಸಮನ್ವಯವನ್ನು ನಿರೂಪಿಸುತ್ತಾರೆ. ಈ ಪಾದಕ್ಕೆ ಪೂರ್ವೋತ್ತರ ಪಾದಭೇದ ಹಾಗೂ ತನ್ನಲ್ಲಿ ಏಕವಾಕ್ಯತ್ವವು ಸಿದ್ಧಿಸುವುದಕ್ಕಾಗಿ ಈ ಪಾದದಲ್ಲಿ ಪ್ರತಿಪಾದಿತವಾದ ಅರ್ಥವನ್ನು ತೋರಿಸುತ್ತಾರೆ.

**ಓಂ ಲಿಂಗಾತ್ಮಕಾನಾಂ ಶಬ್ದಾನಾಂ ವೃತ್ತಿರ್ನಾರಾಯಣೇ ಪರೇ ।**

**ಚಿಂತ್ಯತೇ ...........................................................॥**

ಯಾವ ಶಬ್ದಗಳಿಗೆ ಲಿಂಗವೇ ಪ್ರವೃತ್ತಿ ನಿಮಿತ್ತವೋ ಅಥವಾ ಸ್ವರೂಪವೋ ಅವೇ ಲಿಂಗಾತ್ಮಕ ಶಬ್ದಗಳು. ವೇದಗಳಲ್ಲಿರತಕ್ಕ ಅಂಥಹ ಎಲ್ಲ ಶಬ್ದಗಳಿಗೂ ಸರ್ವೋತ್ತಮನಾದ ನಾರಾಯಣನಲ್ಲಿಯೇ ಮುಖ್ಯವೃತ್ತಿಯು ಎಂಬುದು ಈ ಪಾದದಲ್ಲಿ ಸಮರ್ಥಿಸಲ್ಪಡುತ್ತದೆ.

## ಸರ್ವಗತತ್ವಾಧಿಕರಣ

## ಸತ್ತಾಲಿಂಗಸಮನ್ವಯ

**ಸೂತ್ರ : ಓಂ ಸರ್ವತ್ರ ಪ್ರಸಿದ್ಧೋಪದೇಶಾತ್ ಓಂ (೧-೨-೧)**

'ಮನೋಮಯಃ ಪ್ರಾಣಶರೀರೋ ಭಾರೂಪಃ' ಎಂದು ಹೇಳಿದ ಮನೋಮಯತ್ವಾದಿಗಳಿಂದ ಪರಮಾತ್ಮನು ಉಪಾಸ್ಯನು ಎಂದು ಪ್ರತಿಪಾದಿಸಲು ಈ ಅಧಿಕರಣವೆಂದು ಮಾಯಾವಾದಿಗಳು ಹಾಗೂ ರಾಮಾನುಜೀಯರು ವ್ಯಾಖ್ಯಾನ ಮಾಡುತ್ತಾರೆ. ಅದು ಸರಿಯಲ್ಲ ಎಂದು ಇಲ್ಲಿ ನಿರೂಪಿಸುತ್ತಾರೆ -

**...... ಸರ್ವಗತ್ವಂ ತು ಪ್ರಥಮಂ ಪ್ರವಿಚಾರ್ಯತೇ ॥೧॥**

**ತತ್ರ ತತ್ರ ಸ್ಥಿತೋ ವಿಷ್ಣುಸ್ತತ್ತಚ್ಛಕ್ತಿಪ್ರಬೋಧಕಃ ।**

**ದೂರತೋಽಪ್ಯತಿಶಕ್ತಃ ಸ ಲೀಲಯಾ ಕೇವಲಂ ಪ್ರಭುಃ ॥೨॥**

**ಇತಿ ಜ್ಞಾಪಯಿತುಂ ............................................।**

ಸರ್ವಸಮರ್ಥನಾದ ವಿಷ್ಣುವು ದೂರದಲ್ಲಿದ್ದುಕೊಂಡೇ ಆಯಾಯ ವಸ್ತುಗಳಿಗೆ ಆಯಾಯ ಶಕ್ತಿಯನ್ನು ಹೊಂದಿಸಿಕೊಡುವುದರಲ್ಲಿ ಅತ್ಯಂತ ಸಮರ್ಥನಾಗಿದ್ದರೂ, ಕೇವಲ ಕ್ರೀಡೆಯಿಂದ ಆಯಾಯ ವಸ್ತುಗಳಲ್ಲಿಯೇ ಅಂತರ್ಯಾಮಿಯಾಗಿ ಇದ್ದುಕೊಂಡು ಆಯಾಯ ವಸ್ತುಗಳಲ್ಲಿರುವ ಸಹಜವಾದ ಶಕ್ತಿಯನ್ನು ಪ್ರಬೋಧಿಸಿ ಅವುಗಳನ್ನು ಕಾರ್ಯದಲ್ಲಿ ತೊಡಗಿಸುತ್ತಾನೆ. ಇದನ್ನು ತಿಳಿಸಿಕೊಡಲು 'ಏತಮಸ್ಯಾಮೇತಂ ದಿವಿ' ಇತ್ಯಾದಿ ವಾಕ್ಯಗಳಿಂದ ಉಕ್ತವಾದ ಪರಮೇಶ್ವರನ ಸರ್ವಗತತ್ವ ಧರ್ಮವೇ ಈ ಪಾದದಲ್ಲಿ ಪ್ರಥಮವಾಗಿ ವಿಚಾರಮಾಡಲ್ಪಡುತ್ತದೆ.

'ಸರ್ವೇಷು ಭೂತೇಷು' ಎಂದು ಸರ್ವಗತನಿಗೆ ಅಲ್ಪಾಶ್ರಯತ್ವವು ಶ್ರುತವಾಗಿರುವುದರಿಂದಲೂ, ಚಕ್ಷುರ್ಮಯತ್ವಾದಿ ಜೀವಲಿಂಗಗಳನ್ನು ಹೇಳಿರುವುದರಿಂದಲೂ, ಆದಿತ್ಯಶ್ರುತಿಯಿದ್ದ ಪ್ರಯುಕ್ತವೂ ಸರ್ವತ್ರ ಹೇಳಲ್ಪಟ್ಟವನು ಬ್ರಹ್ಮನೇ ಎನ್ನುವುದು ಯುಕ್ತವಲ್ಲ ಎಂದರೆ, ಅದು ಸರಿಯಲ್ಲ. ಹೀಗೆ ಹೇಳಿರುವುದು ಉಪಾಸನೆಗೆ ಅನುಕೂಲವಾಗಲೆಂದು ಮಾತ್ರ. ವ್ಯಾಪ್ತವಾದ ಆಕಾಶಕ್ಕೆ ಏಕದೇಶದಲ್ಲಿ ಹೇಗೆ ಅವಸ್ಥಿತಿಯು ಕೂಡುವುದೋ ಹಾಗೆಯೇ ಸರ್ವಗತನಾದ ವಿಷ್ಣುವಿಗೂ ಅಲ್ಪವಾದ ಭೂತಾದಿಗಳಲ್ಲಿ ಅವಸ್ಥಿತಿಯು ಕೂಡುವುದು.

ಜೀವನ ಶರೀರದಲ್ಲಿ ವಿಷ್ಣುವು ಜೀವನ ಜೊತೆಯಲ್ಲಿಯೇ ಇರುವುದಾದರೆ, ಆಗ ವಿಷ್ಣುವಿಗೆ ಜೀವನೊಂದಿಗೆ ಸಮಾನಭೋಗ ಬರಬೇಕಾಗುವುದು ಎಂದರೆ, ವಿಷ್ಣುವಿಗೆ ವಿಶೇಷ ಸಾಮರ್ಥ್ಯವಿರುವುದರಿಂದ ಹಾಗೆ ಹೇಳಕೂಡದು. ಇದಕ್ಕೆ ಉತ್ತರವಾಗಿ ಮುಂದಿನ ಸೂತ್ರ -

**ಸೂತ್ರ: ಓಂ ಕರ್ಮಕರ್ತೃವ್ಯಪದೇಶಾಚ್ಚ ಓಂ (೧-೨-೪)**

'ಆತ್ಮಾನಂ ಪರಸ್ಮೈ ಶಂಸತಿ' ಎನ್ನುವ ಶಂಸನಕ್ರಿಯೆಯಲ್ಲಿ ಆತ್ಮಶಬ್ದವಾಚ್ಯನಾದ ವಿಷ್ಣುವು ಕರ್ಮನೆಂದೂ ಜೀವನು ಕರ್ತನೆಂದೂ ಹೇಳಲ್ಪಟ್ಟಿರುವುದರಿಂದ ಶರೀರವುಳ್ಳ ಈ ಜೀವನು ಸರ್ವಗತನಲ್ಲ.

ಯಾವುದೇ ಕ್ರಿಯೆಯಲ್ಲಿ ಒಬ್ಬನಿಗೇ ಕರ್ಮ-ಕರ್ತೃಭಾವ ಕೂಡುವುದಿಲ್ಲ. ಆದಪ್ರಯುಕ್ತ ಕರ್ಮ-ಕರ್ತೃಗಳಿಗೆ ಯಾವಾಗಲೂ ಭೇದವೇ ನಿಯತವಾದುದು ಎಂಬುದೇ ಸೂತ್ರದ ಅಭಿಪ್ರಾಯ.

ಕರ್ಮಕರ್ತೃಗಳಿಗೆ ಯಾವಾಗಲೂ ಭೇದವೇ ವಿವಕ್ಷಿತ ಎನ್ನುವ ನಿಯಮ ಕೂಡುವುದಿಲ್ಲ. ಏಕೆಂದರೆ 'ಮಾಮಹಂ ಜಾನಾಮಿ', ನನ್ನನ್ನು ನಾನು ತಿಳಿಯುತ್ತೇನೆ, ಎನ್ನುವಲ್ಲಿ ಒಂದು ಕ್ರಿಯೆಯಲ್ಲಿ ಒಬ್ಬನಿಗೇ ಕರ್ತೃತ್ವವೂ ಕರ್ಮತ್ವವೂ ದೃಷ್ಟವಾಗಿದೆ. ಭೇದವನ್ನು ಅಂಗೀಕರಿಸಿದರೆ ತನ್ನನ್ನು ತಾನು ತಿಳಿಯುವುದು ಎನ್ನುವ ಅನುಭವಕ್ಕೆ ವಿರೋಧ ಬರುವುದು. ಆದ್ದರಿಂದ ಕರ್ಮಕರ್ತೃಭಾವವು ಭೇದವ್ಯಾಪ್ತವಲ್ಲ ಎಂಬುದು ಸಿದ್ಧವಾಗುವುದು. ಆದಕಾರಣ ಕರ್ಮಕರ್ತೃಗಳಿಗೆ ಭೇದವನ್ನು ಹೇಳುವುದು ಕೂಡುವುದಿಲ್ಲ ಎಂದರೆ -

**.........................ಕರ್ಮಕರ್ತ್ರೋರುತ್ಸರ್ಗತೋ ಭಿದಾ ।**

**ಅಭೇದೋಽಪಿ ವಿಶೇಷೇ ಸ್ಯಾದ್ಬಲೀ ಸೋಽಪ್ಯನಪೋದಿತಃ ॥೩॥**

ಅಪವಾದವಿಲ್ಲದಿದ್ದಾಗ ಕರ್ಮಕರ್ತೃಗಳಿಗೆ ಸ್ವಾಭಾವಿಕವಾಗಿ ನಿಯತವಾದ ಭೇದವು (ಔತ್ಸರ್ಗಿಕ ಭೇದ) ಇರುವುದು. ಅಪವಾದವಿರುವಾಗ ಅಭೇದವೂ ಕೂಡುವುದು. ಅಪವಾದವಿಲ್ಲದಿದ್ದರೆ ಔತ್ಸರ್ಗಿಕ ಭೇದವು ಬಲಿಷ್ಠವಾಗುವುದು.

ಅಪವಾದವಿಲ್ಲದಿದ್ದರೆ ಕರ್ತೃಕರ್ಮಭಾವಕ್ಕೆ ನಿಯಮೇನ ಭೇದವಿರುವುದು. ಆದರೂ 'ತದಾತ್ಮಾನಮೇವಾವೇತ್' 'ಮಾಮಹಂ ಜಾನಾಮಿ' ಇತ್ಯಾದಿಗಳಲ್ಲಿ ಒಂದೇ ವಸ್ತುವಿಗೆ ಕರ್ತೃಕರ್ಮಭಾವವು ಶ್ರುತವಾಗಿದೆ. ಇಂಥಹ ಕಡೆಗಳಲ್ಲಿ ಅಭೇದವು ಕೂಡುವುದು.

ಈ ಅಧಿಕರಣದಲ್ಲಿ ಸರ್ವಗತತ್ವವು ಪ್ರತಿಪಾದಿಸಲ್ಪಡುವುದೆಂದು ಉಕ್ತವಾಯಿತು. ಅದನ್ನು ಮಾತ್ರ ಪ್ರತಿಪಾದಿಸುವುದಾದಲ್ಲಿ, ಸೂತ್ರಗಳಿಗೆ ವಿಶ್ವತೋಮುಖತ್ವ ಇಲ್ಲವೆಂದೂ, ಶಾಸ್ತ್ರಕ್ಕೆ ಪರ್ಯವಸಾನವೇ ಇಲ್ಲವೆಂದೂ ಆಗಬೇಕಾದೀತು. ಸರ್ವಗತತ್ವವು ಇತರ ಸೂತ್ರಗಳಿಗೆ ಉಪಲಕ್ಷಣವೆಂದು ಹೇಳುವ ಪಕ್ಷದಲ್ಲಿ ಉಪಾಧಿಗಳನ್ನು ಹೇಳಬೇಕು. ಇಲ್ಲವಾದರೆ ಬೇರೆ ಅಧಿಕರಣಗಳ ಪ್ರಸಕ್ತಿಯೇ ಇಲ್ಲದಂತಾದೀತು. ಹೀಗೆ ಆಕ್ಷೇಪಿಸಿದರೆ,

ಪ್ರಥಮಾಧಿಕರಣದ ಉಪಾಧಿಯನ್ನು ಇಲ್ಲಿ ಹೇಳುತ್ತ ಪ್ರಸಂಗದಿಂದ ಎಲ್ಲ ಅಧಿಕರಣಗಳ ಉಪಾಧಿಗಳನ್ನು (ಸಂಗ್ರಾಹಕ ಧರ್ಮಗಳನ್ನು) ಹೇಳುತ್ತಾರೆ.

### ಈ ಪಾದದಲ್ಲಿನ ಅಧಿಕರಣಗಳ ಉಪಾಧಿಗಳು

**ಏತದ್ಭಾವಾಭಿದಂ ಲಿಂಗಂ ಕ್ರಿಯಾಲಿಂಗೇ ತತಃ ಪರಂ ।**

**ಅಂತರ್ಯಾಮ್ಯಂತರಶ್ಚೇತಿ ಕ್ರಿಯಾಭಾವಾಖ್ಯಮುಚ್ಯತೇ ॥೪॥**

**ಅದೃಶ್ಯತ್ವಾದ್ಯಭಾವಾಖ್ಯಂ ಶ್ರುತಿರ್ಲಿಂಗಾಧಿಕಾ ಪರಾ ।**

ಇಲ್ಲಿ ಹೇಳಿರುವ ಸರ್ವಗತತ್ವವು ಭಾವಾಖ್ಯವಾದ ಅಂದರೆ ಸತ್ತಾ ಎನ್ನುವ ಲಿಂಗವನ್ನು ಹೇಳುತ್ತದೆ. ಮುಂದಿನ ಅತ್ತೃತ್ವಾಧಿಕರಣ, ಗುಹಾಧಿಕರಣಗಳಲ್ಲಿ ಕ್ರಿಯಾತ್ಮಕಲಿಂಗವೂ, ಅಂತರಾಧಿಕರಣದಲ್ಲಿ ಅಂತಸ್ಥಿತಿಸಹಿತರಮಣರೂಪವಾದ ಕ್ರಿಯಾತ್ಮಕಲಿಂಗವೂ, ಅಂತರ್ಯಾಮ್ಯಧಿಕರಣದಲ್ಲಿ ಅಂತಸ್ಥಿತಿಸಹಿತವಾದ ನಿಯಮನರೂಪಕ್ರಿಯಾತ್ಮಕಲಿಂಗವೂ ಹೇಳಲ್ಪಡುತ್ತವೆ. ಅದೃಶ್ಯತ್ವಾಧಿಕರಣದಲ್ಲಿ ಅಭಾವಾತ್ಮಕಲಿಂಗವೂ, ವೈಶ್ವಾನರಾಧಿಕರಣದಲ್ಲಿ ವಾಚಕತ್ವ ಮೊದಲಾದ ಬಹು ಲಿಂಗಗಳಿಂದ ಕೂಡಿರುವ ವೈಶ್ವಾನರನಾಮವೂ ಪ್ರತಿಪಾದಿಸಲ್ಪಡುವುದು.

## ಅತ್ತೃತ್ವಾಧಿಕರಣ

### ಕ್ರಿಯಾಲಿಂಗ ಸಮನ್ವಯ

**ಸೂತ್ರ: ಓಂ ಅತ್ತಾ ಚರಾಚರಗ್ರಹಣಾತ್ ಓಂ (೧-೨-೯)**

ಈ ಅಧ್ಯಾಯದಲ್ಲಿ ಸಮನ್ವಯ ಮಾಡಲಾಗುವ ಎಲ್ಲ ಶಬ್ದಗಳೂ ಬ್ರಹ್ಮನ ಲಕ್ಷಣವಾಗಿಯೇ ಪ್ರಕೃತವಾಗಿವೆ ಎಂದು ಆನಂದಮಯಾಧಿಕರಣದ ಅಂತ್ಯದಲ್ಲಿ ಹೇಳಲ್ಪಟ್ಟಿದೆ. ಲಕ್ಷಣವು ಲಕ್ಷ್ಯನಾದ ಬ್ರಹ್ಮನಿಂದ ಅಭಿನ್ನವೆಂದು ಲಕ್ಷಣಸೂತ್ರದಲ್ಲಿ ಪ್ರತಿಪಾದಿತವಾಗಿದೆ. ಈ ಅಧಿಕರಣದಲ್ಲಿ ಕ್ರಿಯಾಲಿಂಗ ಸಮನ್ವಯವೆಂದು ಉಕ್ತವಾಗಿದೆ. ಇದರಿಂದ ಅದನಾದಿ ಕ್ರಿಯೆಗಳಿಗೆ ಪರಮೇಶ್ವರಸ್ವರೂಪತ್ವವನ್ನು ಹೇಳಿದಂತಾಯಿತು. ಇದಕ್ಕೆ ಆಕ್ಷೇಪವನ್ನು ತೋರಿಸಿ ಪರಿಹರಿಸುತ್ತಾರೆ -

**ಅನಿತ್ಯತ್ವಾತ್ಕ್ರಿಯಾಣಾಂ ತು ಕಥಮೇವ ಸ್ವರೂಪತಾ ॥೫॥**

**ಇತಿ ಚೇತ್ಸವಿಶೇಷೋಽಪಿ ಕ್ರಿಯಾಶಕ್ತ್ಯಾತ್ಮನಾ ಸ್ಥಿರಃ ।**

ಅದನಾದಿ ಕ್ರಿಯೆಗಳಾದರೂ ಅನಿತ್ಯಗಳಾಗಿರುವುದರಿಂದ ಅವು ನಿತ್ಯನಾದ ಪರಮೇಶ್ವರನ ಸ್ವರೂಪ ಹೇಗಾದೀತು? ವಿರುದ್ಧ ಧರ್ಮಗಳಿಂದ ಕೂಡಿರುವ ನಿತ್ಯ ಮತ್ತು ಅನಿತ್ಯ ವಸ್ತುಗಳಿಗೆ ಅಭೇದವು ಕೂಡುವುದಿಲ್ಲ. ಒಂದುವೇಳೆ ಅಭೇದವನ್ನು ಒಪ್ಪಿದರೆ ಜಗತ್ತಿಗೂ ಪರಮೇಶ್ವರನಿಗೂ ಅಭೇದ ಬರಬೇಕಾದೀತು. ಹೀಗೆ ಆಕ್ಷೇಪಿಸಿದರೆ ಅದು ಅಯುಕ್ತ. ಕ್ರಿಯಾರೂಪವಾದ ಆ ವಿಶೇಷ ಧರ್ಮವೂ ಪರಮಾತ್ಮನಲ್ಲಿ ಶಕ್ತಿರೂಪವಾಗಿ ನಿತ್ಯದಲ್ಲಿಯೂ ಇರುವುದು. ಪರಮಾತ್ಮನಿಗೆ ಸಂಬಂಧಿಸಿದ ಕ್ರಿಯೆಗಳೂ ನಿತ್ಯ, ಪರಮಾತ್ಮನೂ ನಿತ್ಯವಾದುದರಿಂದ ಅಭೇದವು ಕೂಡುವುದು.

ಪರಮಾತ್ಮನ ಸ್ವರೂಪವಾಗಿರುವ ಸಂಹಾರಾದಿ ಕ್ರಿಯೆಗಳು ಶಕ್ತಿರೂಪದಲ್ಲಿ ನಿತ್ಯವಾಗಿವೆ ಎಂದು ಒಪ್ಪಿದರೂ ಎಲ್ಲ ಕ್ರಿಯೆಗಳೂ ಎಲ್ಲ ಕಾಲದಲ್ಲಿ ಅಭಿವ್ಯಕ್ತಿರೂಪ ಪಡೆಯುವುದಿಲ್ಲ. ಸೃಷ್ಟಿಕಾಲದಲ್ಲಿ ಸಂಹಾರಕ್ರಿಯೆಯು ವ್ಯಕ್ತವಾಗದು. ಅಂತೆಯೇ ಸಂಹಾರಕಾಲದಲ್ಲಿ ಸೃಷ್ಟಿಕ್ರಿಯೆಯು ವ್ಯಕ್ತವಾಗುವುದಿಲ್ಲ. ಅಂದಮೇಲೆ ಕ್ರಿಯೆಯ ಶಕ್ತಿ ಮತ್ತು ವ್ಯಕ್ತಿರೂಪಗಳು ಪರಸ್ಪರ ಭಿನ್ನಗಳೋ ಅಥವಾ ಅಭಿನ್ನಗಳೋ? ಮೊದಲನೇ ಕಲ್ಪದಲ್ಲಿ ಕ್ರಿಯೆಯು ಶಕ್ತಿರೂಪದಿಂದ ನಿತ್ಯವಾದರೆ ವ್ಯಕ್ತಿರೂಪದಿಂದ ಅನಿತ್ಯವಾಗಬೇಕಾಗುವುದು. ಎರಡನೆಯ ಕಲ್ಪದಲ್ಲಿ, ಅಂದರೆ ಅಭಿನ್ನವೆಂದು ಒಪ್ಪುವುದಾದರೆ, ಸದಾ ವ್ಯವಹಾರಾದಿಗಳು ಬರಬೇಕಾಗುವುವು ಎಂದರೆ -

**ಶಕ್ತಿತಾ ವ್ಯಕ್ತಿತಾ ಚೇತಿ ವಿಶೇಷೋಽಪಿ ವಿಶೇಷವಾನ್ ॥೬॥**

**ಅಭಿನ್ನೋಽಪಿ ಕ್ರಿಯಾದಿಶ್ಚ ಸ್ವಭಾವ ಇತಿ ಹಿ ಶ್ರುತಿಃ ।**

ಶಕ್ತಿವ್ಯಕ್ತಿಗಳು ಅಭಿನ್ನಗಳೇ ಆಗಿವೆ. ಆದರೂ ಸದಾ ವ್ಯವಹಾರಾದಿಗಳು ಬರಬೇಕಾಗುವುವು ಎಂದು ಮೇಲೆ ಹೇಳಿದ ದೋಷವು ಬರುವುದಿಲ್ಲ. ಏಕೆಂದರೆ ಈ ವಿಷಯದಲ್ಲಿ ಶಕ್ತಿತ್ವ ಮತ್ತು ವ್ಯಕ್ತಿತ್ವ ಎನ್ನುವ ಭೇದನಿರ್ವಾಹಕ ವಿಶೇಷವೂ ಇದೆ. ಎರಡು ಪ್ರಕಾರವಾಗಿರುವ ಈ ವಿಶೇಷವು ಅಭಿನ್ನವಾಗಿದ್ದರೂ, ಸ್ವನಿರ್ವಾಹಕವಾದ್ದರಿಂದ, ವಿಶೇಷವುಳ್ಳದ್ದೆಂದು ಅಗೀಕರಿಸಲ್ಪಡುವುದು. ಆದ್ದರಿಂದ ಅನುಪಪತ್ತಿಯು ಇರುವುದಿಲ್ಲ. ಪರಮೇಶ್ವರನ ಕ್ರಿಯೆಗಳು ನಿತ್ಯವೆಂಬುದಕ್ಕೆ 'ಪರಾಸ್ಯ ಶಕ್ತಿರ್ವಿವಿಧೈವ

ಶ್ರೂಯತೇ ಸ್ವಾಭಾವಿಕೀ ಜ್ಞಾನಬಲಕ್ರಿಯಾ ಚ' ಇತ್ಯಾದಿ ಶ್ರುತಿಗಳು ಪ್ರಮಾಣವಾಗಿವೆ. ಆದಪ್ರಯುಕ್ತ ಪರಮೇಶ್ವರನ ಕ್ರಿಯೆಗಳು ಅವನ ಸ್ವಭಾವವಾಗಿವೆ, ಅಂದರೆ ನಿತ್ಯವಾಗಿವೆ, ಎಂದು ಸಿದ್ಧವಾಗುವುದು.

ಈ ವಿಷಯದಲ್ಲಿ ಸ್ಪಷ್ಟವಾದ ಶ್ರುತಿಯನ್ನು ಉದಾಹರಿಸುತ್ತಾರೆ -

**ಜ್ಞಾನಂ ನಿತ್ಯಂ ಕ್ರಿಯಾ ನಿತ್ಯಾ ಬಲಂ ಶಕ್ತಿಃ ಪರಮಾತ್ಮನಃ ॥೭॥**
**ನಿತ್ಯಾನಂದೋಽವ್ಯಯಃ ಪೂರ್ಣೋ ಭಗವಾನ್ವಿಷ್ಣುರಚ್ಯುತಃ ।**
**ಇತಿ ಪೈಂಗಿಶ್ರುತಿಶ್ಚಾಹ ..................................॥**

ಪರಮಾತ್ಮನ ಜ್ಞಾನವು ನಿತ್ಯ, ಕ್ರಿಯೆಯು ನಿತ್ಯ, ಬಲ ಶಕ್ತಿಗಳೂ ನಿತ್ಯ. ಶ್ರೀಹರಿಯು ನಿತ್ಯವಾದ ಆನಂದವುಳ್ಳವನು, ವೃದ್ಧಿಹ್ರಾಸ ರಹಿತನು, ಗುಣಪೂರ್ಣನು, ವ್ಯಾಪ್ತನು ಹಾಗೂ ವಿನಾಶರಹಿತನು. ಈ ಪ್ರಕಾರವಾಗಿ ಪೈಂಗಿಶ್ರುತಿಯು ಪ್ರತಿಪಾದಿಸುತ್ತದೆ.

ಹಾಗಾದರೆ, ಈಶ್ವರನ ಕ್ರಿಯೆಗಳಿಗೆ ನಿತ್ಯತ್ವವಿರಲಿ, ಜೀವರಲ್ಲಿರತಕ್ಕ ಎಲ್ಲ ಕ್ರಿಯೆಯೂ ಅನಿತ್ಯವೋ ಎಂದು ಆಶಂಕಿಸಿದರೆ, ಅದಕ್ಕೆ ಪ್ರಮಾಣಾಂತರದಿಂದ ಭೇದವನ್ನು ತೋರಿಸುತ್ತಾರೆ -

**..............................ಶಕ್ತಿಸದ್ಭಾವ ಏವ ತು ॥೮॥**
**ಕ್ರಿಯಾದಿ ನಿತ್ಯತಾ ಜ್ಞೇಯಾ ತದನ್ಯತ್ರ ತ್ವನಿತ್ಯತಾ ।**
**ಇತಿ ಸತ್ತತ್ವವಚನಂ........................................॥**

ಶಕ್ತಿಗೆ ನಿತ್ಯತ್ವವಿದ್ದರೆ ಕ್ರಿಯಾದಿಗಳು ನಿತ್ಯವೆಂದು ತಿಳಿಯತಕ್ಕದ್ದು. ಶಕ್ತಿಗೆ ನಿತ್ಯತ್ವವಿಲ್ಲದಿರುವ ಕಡೆಗಳಲ್ಲಿ (ಅಂದರೆ ಜೀವಾದಿಗಳಲ್ಲಿ), ಕ್ರಿಯಾದಿಗಳು ಅನಿತ್ಯತ್ವವೆಂದು ತಿಳಿಯಬೇಕು. ಹೀಗೆ ಸತ್ತತ್ವ ಎಂಬ ಗ್ರಂಥದಲ್ಲಿ ಹೇಳಿದೆ.

## ಗುಹಾಧಿಕರಣ

### ಫಲಭೋಗರೂಪ ಕ್ರಿಯಾಲಿಂಗ ಸಮನ್ವಯ

**ಸೂತ್ರ: ಓಂ ಗುಹಾಪ್ರವಿಷ್ಟಾವಾತ್ಮಾನೌ ಹಿ ತದ್ದರ್ಶನಾತ್ ಓಂ (೧-೨-೧೧)**

'ಋತಂ ಪಿಬಂತೌ ಸುಕೃತಸ್ಯ ಲೋಕೇ ಗುಹಾಂ ಪ್ರವಿಷ್ಟೌ' ಎನ್ನುವ ಶ್ರುತಿಯು ಜೀವನ ಹೃದಯ ಗುಹೆಯಲ್ಲಿದ್ದು ಸುಕೃತಗಳನ್ನು ಭೋಗಿಸುವವರು

ಜೀವ ಮತ್ತು ಪರಮೇಶ್ವರ ಎಂದು ಇಬ್ಬರನ್ನು ಪ್ರತಿಪಾದಿಸುವುದೋ ಅಥವಾ ಕೇವಲ ಪರಮೇಶ್ವರನನ್ನೋ ಎಂದು ಸಂಶಯ. ದ್ವಿವಚನವಿರುವುದರಿಂದ ಜೀವ ಮತ್ತು ಈಶ್ವರ ಇಬ್ಬರನ್ನು ಎಂದು ಪೂರ್ವಪಕ್ಷ. ಬ್ರಹ್ಮಶಬ್ದ ಮೊದಲಾದ ಬಾಧಕವೂ ಇಲ್ಲ. ಕೇವಲ ಈಶ್ವರ ಎಂದಿಟ್ಟುಕೊಂಡರೆ ಕರ್ಮಫಲಭೋಗವು ಈಶ್ವರನಿಗೆ ಕೂಡುವುದಿಲ್ಲ. ಜೀವನೊಬ್ಬನಿಗೇ ಮುಖ್ಯವಾಗಿ ಕರ್ಮಫಲಭೋಗವು, ಈಶ್ವರನಿಗೆ ಛತ್ರಿನ್ಯಾಯದಿಂದ ಔಪಚಾರಿಕವಾಗಿ ಫಲಭೋಗವು. ಆದಪ್ರಯುಕ್ತ ಜೀವ ಮತ್ತು ಈಶ್ವರ ಇಬ್ಬರನ್ನೂ ಇಲ್ಲಿ ಹೇಳಲಾಗಿದೆ ಎಂದು ಹೇಳಿದರೆ, ಅದು ಸರಿಯಲ್ಲ. ಗುಹಾಪ್ರವಿಷ್ಟತ್ವರೂಪಲಿಂಗ ಹಾಗೂ ಬ್ರಹ್ಮಶಬ್ದದಿಂದ ವಿಶೇಷಣವಿದ್ದ ಪ್ರಯುಕ್ತ ಈ ಶ್ರುತಿ ವಾಕ್ಯವು ಪರಮೇಶ್ವರನೊಬ್ಬನನ್ನೇ ಪ್ರತಿಪಾದಿಸುತ್ತದೆ ಎಂದು ಸಿದ್ಧಾಂತ ಮಾಡಿರುವರು. ಇದರಲ್ಲಿ ಕರ್ಮಫಲಭೋಗವು ಭಾಷ್ಯದಲ್ಲಿ ಪ್ರತಿಪಾದಿತವಾಗಿದೆ. ದ್ವಿವಚನ ವಿಷಯದಲ್ಲಿ ಸ್ಪಷ್ಟವಾದ ಪರಿಹಾರವು ಅಲ್ಲಿ ಹೇಳಲ್ಪಟ್ಟಿಲ್ಲ. ಅದನ್ನು ಇಲ್ಲಿ ಪರಿಹರಿಸುತ್ತಾರೆ.

ಗುಹಾಪ್ರವಿಷ್ಟನು ಪರಮೇಶ್ವರನೊಬ್ಬನು ಮಾತ್ರ ಎಂದು ಇಟ್ಟುಕೊಂಡರೆ, ಸ್ವಗತಭೇದವಿವರ್ಜಿತನಾದ ಪರಮೇಶ್ವರನಲ್ಲಿ ಭೇದವನ್ನು ಹೇಳುವ ದ್ವಿವಚನವು ಕೂಡುವುದಿಲ್ಲ. ಆದಕಾರಣ ಜೀವ ಮತ್ತು ಈಶ್ವರ ಇಬ್ಬರೂ ಇಲ್ಲಿ ಪ್ರತಿಪಾದಿತರಾಗಿರುವರು ಎಂದು ಹೇಳಿದರೆ -

**ಸೂತ್ರ: ಓಂ ವಿಶೇಷಣಾಚ್ಚ ಓಂ (೧-೨-೧೨)**

**...............................ದ್ವಿತ್ವಂ ಚೈಕಸ್ಯ ಯುಜ್ಯತೇ ||**

**ಯಃ ಸೇತುರಿತಿ ಚೈಕತ್ವವಚನೇನ ವಿಶೇಷಣಾತ್ ||೯||**

ದ್ವಿವಚನವು ಭೇದರಹಿತನಾದ ಒಬ್ಬನೇ ಪರಮಾತ್ಮನಲ್ಲಿ ಕೂಡುವುದು. ಏಕೆಂದರೆ, 'ಋತಂ ಪಿಬಂತೌ' ಎಂದು ದ್ವಿವಚನದಿಂದ ಜೀವ ಮತ್ತು ಪರಮೇಶ್ವರ ಇಬ್ಬರೂ ಇಲ್ಲಿ ಪ್ರತೀತರಾದಂತೆ ತೋರಿದರೂ, ಇವರಿಗೆ 'ಯಃ ಸೇತುಃ' ಎನ್ನುವ ಏಕವಚನದಿಂದ ವಿಶೇಷಣವಿದೆ. ಅಲ್ಲದೆ ದ್ವಿವಚನವು ಭೇದವನ್ನೇ ಹೇಳುತ್ತದೆ ಎನ್ನುವ ವಿಷಯದಲ್ಲಿ ವ್ಯಾಕರಣದ ಅನುಶಾಸನವಿರುವುದಿಲ್ಲ. ಅಭೇದವಿದ್ದರೂ ಅನೇಕತ್ವವು ಕೂಡುವುದು.

ಆದಪ್ರಯುಕ್ತ ಪರಮಾತ್ಮನೊಬ್ಬನೇ ಆತ್ಮ ಅಂತರಾತ್ಮ ಎಂಬ ಎರಡು ರೂಪಗಳಿಂದ ಉಕ್ತನಾಗಿರುವನು.

## ಅಂತರಾಧಿಕರಣ

### ಕ್ರಿಯಾಭಾವರೂಪ ಲಿಂಗ ಸಮನ್ವಯ

**ಸೂತ್ರ: ಓಂ ಅಂತರ ಉಪಪತ್ತೇಃ ಓಂ (೧-೨-೧೩)**

ಅಂತರ ಉಪಪತ್ತೇಃ ಎನ್ನುವ ಸೂತ್ರದಲ್ಲಿ ಭಾವವನ್ನೇ ಪ್ರತಿಜ್ಞಾ ಮಾಡಿರುತ್ತಾರೆ, ಕ್ರಿಯೆಯನ್ನು ಹೇಳಿಲ್ಲ. ಆದಕಾರಣ ಈ ಅಧಿಕರಣದಲ್ಲಿ ಕ್ರಿಯಾಭಾವರೂಪ ಲಿಂಗಸಮನ್ವಯವೆಂದು ಹೇಳುವುದು ಅಯುಕ್ತ ಎಂದು ಆಕ್ಷೇಪಿಸಿದರೆ, ಅಂತರ ಶಬ್ದವು ಎರಡು ಅರ್ಥಗಳನ್ನು ಹೊಂದಿದೆ ಎಂದು ವ್ಯಾಖ್ಯಾನ ಮಾಡುತ್ತಾರೆ.

**ಅಂತಸ್ಥಿತ್ವಾ ರಮಣಕೃದಂತರಃ ಸ ಉದಾಹೃತಃ ।**
**ರಮಣಂ ಚಾತ್ಮಶಬ್ದೇನಾಽಽದೇಯಂ ಮಾತೀತಿ ಚೋಚ್ಯತೇ ॥೧೦॥**

ಆ ಪರಮೇಶ್ವರನು ಚಕ್ಷುಸ್ಸಿನೊಳಗೆ ಇದ್ದು ಕ್ರೀಡಿಸುವನಾದ್ದರಿಂದ ಅಂತರ ಎಂದು ಹೇಳಲ್ಪಟ್ಟಿದ್ದಾನೆ. ಕೇವಲ ಅಕ್ಷಿಸ್ಥಿತತ್ವವಷ್ಟೇ ಅಲ್ಲ ರಮಣಕರ್ತೃತ್ವವೂ ಕೂಡ ಇಲ್ಲಿ ಉಕ್ತವಾಗಿದೆ ಎಂದು ಮೊದಲನೆಯ ಚ ಶಬ್ದದಿಂದ ಅವಗತವಾಗುತ್ತದೆ. ಕೇವಲ ಸೂತ್ರದಲ್ಲಿ ಮಾತ್ರವಲ್ಲ ಶ್ರುತಿಯಲ್ಲಿಯೂ ಕೂಡ 'ಏಷ ಆತ್ಮಾ' ಎನ್ನುವ ವಾಕ್ಯದಿಂದ ಹೇಳಲ್ಪಟ್ಟಿದೆ ಎಂದು ಎರಡನೆಯ ಚ ಶಬ್ದದಿಂದ ಸೂಚಿತವಾಗಿದೆ. 'ಯ ಏಷೋಽನ್ತರಕ್ಷಿಣಿ ಪುರುಷೋ ದೃಶ್ಯತೇ ಏಷ ಆತ್ಮೇತಿ ಹೋವಾಚ' ಎಂಬುದೇ ಇಲ್ಲಿ ಉದಾಹೃತ ಶ್ರುತಿವಾಕ್ಯ. 'ಆದೇಯಂ' ಉಪಾದೇಯವಾದ ಸುಖವನ್ನೂ ಸುಖಸಾಧನವನ್ನೂ, 'ಮಾತಿ' ಅನುಭವಿಸುತ್ತಾನೆ ಎಂಬ ನಿರ್ವಚನದಿಂದ ಆತ್ಮ ಶಬ್ದದಿಂದ ಹೇಳಲ್ಪಡುತ್ತಾನೆ.

ಸೂತ್ರಕಾರರಿಗೆ ಇಲ್ಲಿ ರಮಣಕರ್ತೃತ್ವರೂಪವಾದ ಅರ್ಥವೇ ವಿವಕ್ಷಿತವಾಗಿದೆ. ಇಲ್ಲದಿದ್ದರೆ ಅಂತರುಪಪತ್ತೇಃ ಎಂದಿಷ್ಟೇ ಹೇಳುತ್ತಿದ್ದರು. ಹೀಗೆ ಹೇಳಿದರೆ ಸೂತ್ರಕ್ಕೆ ಲಘುತ್ವವೂ ಬರುತ್ತಿತ್ತು. ಅಂತಃ ಶಬ್ದಕ್ಕೆ

ಕ್ರೀಡಾರ್ಥಕವಾದ ರಮ್ ಧಾತುವನ್ನು ಹಚ್ಚಿರುವುದರಿಂದ ಸೂತ್ರಕಾರರಿಗೆ ಈ ಸೂತ್ರದಿಂದ ರಮಣರೂಪವಾದ ಅರ್ಥವನ್ನು ಹೇಳುವ ಉದ್ದೇಶವಿರುವುದು.

### ಚಕ್ಷುರಂತಸ್ಥನು ವಿಷ್ಣುವೇ

'ಸುಖವಿಶಿಷ್ಟಾಭಿಧಾನಾದೇವ ಚ' ಎನ್ನುವ ಸೂತ್ರದಲ್ಲಿ ವಿಶಿಷ್ಟ ಪದವು ವ್ಯರ್ಥ. ಸುಖಾಭಿಧಾನಾದೇವ ಎಂದು ಹೇಳಿದ್ದರೆ ಪೂರ್ಣವಾಗುತ್ತಿತ್ತು. ಸೂತ್ರಕ್ಕೆ ಲಘುತ್ವವೂ ಬರುತ್ತಿತ್ತು. ಸುಖ ಸಂಬಂಧವನ್ನು ಹೇಳುವುದೇ ಅಯುಕ್ತ. 'ಪ್ರಾಣೋ ಬ್ರಹ್ಮ ಕಂ ಬ್ರಹ್ಮ' ಎನ್ನುವ ಶ್ರುತಿಯಲ್ಲಿ ಸುಖವನ್ನು ಮಾತ್ರ ಹೇಳಿದೆ ಎಂದರೆ -

**ವಿಶಿಷ್ಟಸುಖವತ್ವಾಚ್ಚ ಬ್ರಹ್ಮತ್ವಂ ಚ ವಿಶಿಷ್ಟತಾ ।**

ಇಲ್ಲಿ ವಿಶಿಷ್ಟಸುಖವತ್ವ ಎಂದರೆ ಪೂರ್ಣಸುಖರೂಪತ್ವ ಎಂದರ್ಥ. ಬ್ರಹ್ಮತ್ವವೆಂದರೂ ವಿಶಿಷ್ಟತಾ ಅಥವಾ ಪೂರ್ಣತಾ ಎಂದೇ ಅರ್ಥವು. ಪೂರ್ಣ ಸುಖತ್ವವನ್ನೇ 'ಕಂ ಬ್ರಹ್ಮ' ಎಂಬುದಾಗಿ ಶ್ರುತಿಯಲ್ಲಿ ಹೇಳಿದೆ.

ಚಕ್ಷುರಂತಸ್ಥನು ಈಶ್ವರನೇ ಆಗಿದ್ದರೂ, ಕಣ್ಣು ಮತ್ತು ಆದಿತ್ಯರಿಗೆ ಅಗ್ನಿಯೇ ನಿಯಾಮಕನಾಗಿ ಇಲ್ಲಿ ಉಕ್ತನಾಗಿದ್ದಾನೆ ಎಂದು ಪೂರ್ವಪಕ್ಷ. ಇದನ್ನು ನಿರಾಕರಿಸುವ 'ಓಂ ಅನವಸ್ಥಿತೇರಸಂಭವಾಚ್ಚ ನೇತರಃ ಓಂ' ಎನ್ನುವ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ.

**ಅನ್ಯೋನ್ಯನಿಯತಿಶ್ಚೇಶನಿಯಮೇ ನಾನ್ಯಥಾ ಭವೇತ್ ॥೧೧॥**

**ಚೇತನಾನಾಂ ವಿಶೇಷೋ ಯಃ ಸ್ವಭಾವೋಽಪೀಶ್ವರಾರ್ಪಿತಃ ।**

**ಅನ್ಯೋನ್ಯನಿಯಮೇ ತಸ್ಮಾದನವಸ್ಥಿತ್ಯಸಂಭವೌ ॥೧೨॥**

ಜೀವರಿಗೆ ನಿಯತವಾಗಿರುವ ನಿಯಮ್ಯ-ನಿಯಾಮಕ ಭಾವವು (ಬ್ರಹ್ಮಾದಿ ದೇವತೆಗಳಿಗೆ ನಿಯಾಮಕತ್ವ ಹಾಗೂ ಜೀವರಿಗೆ ನಿಯಮ್ಯತ್ವ ಎಂಬ ಅನ್ಯೋನ್ಯ ನಿಯತ ಸಂಬಂಧವು) ಈಶ್ವರನ ಪ್ರೇರಣೆಯಿದ್ದರೆ ಮಾತ್ರ ಯುಕ್ತವಾಗುವುದು. ಪ್ರೇರಕ ಪರಂಪರೆಯು ಪರನಿರಪೇಕ್ಷನಾದ ಭಗವಂತನಲ್ಲಿ ಕೊನೆಗೊಳ್ಳುವುದರಿಂದ ಅನವಸ್ಥಿತಿ ಅಸಂಭವಾದಿಗಳು ಉಂಟಾಗದು. ಶ್ರೀಹರಿಯ ಪ್ರೇರಣೆಯಿಲ್ಲವಾದರೆ ಅನ್ಯೋನ್ಯ ನಿಯಮನವು ಕೂಡಲಾರದು. ಬ್ರಹ್ಮಾದಿಗಳ ನಿಯಾಮಕತ್ವ ಹಾಗೂ ಮನುಷ್ಯಾದಿಗಳ ನಿಯಮ್ಯತ್ವ

ರೂಪವಾದ ವಿಶೇಷವು ಅವರವರ ಸ್ವಭಾವವೇ ಎನ್ನುವುದು ನಿಜವೇ. ಆದರೆ ಆ ಸ್ವಭಾವವೂ ಕೂಡ ಈಶ್ವರನಿಂದಲೇ ಕೊಡಲ್ಪಟ್ಟದ್ದು. ಈಶ್ವರನನ್ನು ಅಂಗೀಕರಿಸದೇ ಚೇತನರಿಗೆ ನಿಯಮ್ಯ-ನಿಯಾಮಕತ್ವ ಸ್ವಬಾವವನ್ನು ಒಪ್ಪಿದರೆ ಅನವಸ್ಥಿತಿ ಅಸಂಭವಾದಿಗಳು ಉಂಟಾಗುತ್ತವೆ.

ಈಶ್ವರನನ್ನು ಅಂಗೀಕರಿಸಿ, ಅಗ್ನಿಯು ಅಕ್ಷಿ ಮತ್ತು ಆದಿತ್ಯನಲ್ಲಿದ್ದು ನಿಯಾಮಕನಾಗಿ ಹೇಳಲ್ಪಡುತ್ತಾನೆ ಎನ್ನುವರಿಗೆ ದೋಷವನ್ನು ಹೇಳುತ್ತಾರೆ.

**ಈಶ್ವರಶ್ಚೇನ್ನಿಯಂತಾ ಸ್ಯಾತ್ಸ ಏವ ಪ್ರಥಮಾಗತಃ ।**
**ಕಿಮಿತ್ಯಪೋದ್ಯತೇ ಕಸ್ಮಾದ್ವ್ಯಥಾಽವಸ್ಥಿತಿಕಲ್ಪನಾ ॥೧೩॥**
**ದೋಷವತ್ಯೇವ ತಸ್ಮಾತ್ಸಾ ನೈವ ಕಾರ್ಯಾ ಕಥಂಚನ ।**

ಈಶ್ವರನು ಎಲ್ಲರಿಗೂ ನಿಯಾಮಕನೆಂದು ಒಪ್ಪುವುದಾದರೆ, ಆಗ ಮುಖ್ಯವಾಗಿ ಅಕ್ಷಿ ಮತ್ತು ಆದಿತ್ಯಸ್ಥನಾಗಿರುವನೆಂದು ಪ್ರಮಾಣಸಿದ್ಧವಾದ ಆ ಈಶ್ವರನನ್ನು ಹೇಗೆ ತಾನೇ ಪರಿತ್ಯಾಗ ಮಾಡಲು ಸಾಧ್ಯ? ಯಾವ ಕಾರಣದಿಂದ ಈಶ್ವರ ಮತ್ತು ಆದಿತ್ಯರ ನಡುವೆ ವ್ಯರ್ಥವಾಗಿ ಅಗ್ನಿಗೆ ನಿಯಾಮಕತಯಾ ಅವಸ್ಥಿತಿಯು ಕಲ್ಪನೆ ಮಾಡಲ್ಪಡುತ್ತದೆ? ಹೀಗೆ ಕಲ್ಪನೆ ಮಾಡುವುದು ಶ್ರುತಹಾನಿ ಹಾಗೂ ಅಶ್ರುತ ಕಲ್ಪನಾ ಎಂಬ ದೋಷವುಳ್ಳದ್ದೇ ಆಗುವುದು. ಆದಕಾರಣ ಎಂದಿಗೂ ಈರೀತಿಯ ಕಲ್ಪನಾ ಮಾಡತಕ್ಕದ್ದಲ್ಲ.

## ಅಂತರ್ಯಾಮ್ಯಧಿಕರಣ

### ರಮಣರೂಪ ಕ್ರಿಯಾಲಿಂಗ ಸಮನ್ವಯ

**ಸೂತ್ರ: ಓಂ ಅಂತರ್ಯಾಮ್ಯಧಿದೈವಾದಿಷು ತದ್ಧರ್ಮವ್ಯಪದೇಶಾತ್ ಓಂ (೧-೨-೧೮)**

ಶರೀರಾಂತಸ್ಥನಾಗಿ ನಿಯಮನ ಮಾಡುವುದೇ ಅಂತರ್ಯಾಮಿತ್ವ ಎಂದು ಹೇಳಲ್ಪಡುತ್ತದೆ. ಇದನ್ನು ಈಗಾಗಲೇ ಅಂತರಾಧಿಕರಣದಲ್ಲಿಯೇ ಪ್ರತಿಪಾದಿಸಲಾಗಿದೆ ಎಂದು ಹೇಳಿದರೆ, ಪ್ರಮೇಯ ಭೇದವಿರುವುದರಿಂದ ಈ ಅಧಿಕರಣವು ಗತಾರ್ಥವಾಗುವುದಿಲ್ಲ ಎಂದು ಹೇಳುತ್ತಾರೆ. ಈ ಅಧಿಕರಣದಲ್ಲಾದರೋ ಅಂತಸ್ಥಿತಿರೂಪವಾದ ಭಾವಯುಕ್ತವಾದ

ನಿಯಮನಾಖ್ಯವಾದ ಕ್ರಿಯಾತ್ಮಕಲಿಂಗಕ್ಕೆ ಸಮನ್ವಯವನ್ನು ಸಾಧಿಸಲಾಗುವುದು.

'ಏಷ ತೇ ಆತ್ಮಾ ಅಂತರ್ಯಾಮ್ಯಮೃತಃ' ಎಂದು ಶ್ರುತವಾದ ಅಂತರ್ಯಾಮಿಯು ಬ್ರಹ್ಮನೇ. 'ಯಂ ಪೃಥಿವೀ ನ ವೇದ ಯಃ ಪೃಥಿವೀಮಂತರೋ ಯಮಯತಿ' ಇತ್ಯಾದಿಗಳಿಂದ ಈ ಅಂತರ್ಯಾಮಿಗೆ ಪೃಥಿವ್ಯಾದಿಗಳಿಂದ ತಿಳಿಯಲ್ಪಡದಿರುವಿಕೆ, ಅವುಗಳ ಒಳಗಿದ್ದುಕೊಂಡು ನಿಯಮನ ಮಾಡುವಿಕೆ ಮೊದಲಾದ ಬ್ರಹ್ಮನ ಧರ್ಮಗಳನ್ನು ಹೇಳಿರುವುದರಿಂದ, ಪ್ರಕೃತಿಯಾಗಲೀ ಜೀವರಾಗಲೀ ಇಲ್ಲಿ ಹೇಳಲ್ಪಟ್ಟಿಲ್ಲ.

ಬಹಳ ಕೆಲಸವನ್ನು ಮಾಡುವವರಿಗೆ ಬಹಳಷ್ಟು ಪ್ರಯತ್ನ ಬೇಕು. ಲೋಕದಲ್ಲಿ ಅತಿಯತ್ನದ ನಿಮಿತ್ತ ಅತಿಯಾದ ಕ್ಲೇಶಗಳು ಹಾಗೂ ಅದರಿಂದ ಚಿತ್ತವಿಕ್ಷೇಪಾದಿಗಳು ನಿಯತವಾಗಿ ಕಂಡುಬರುತ್ತವೆ. ಚಿತ್ತವಿಕ್ಷೇಪದಿಂದ ಕೂಡಿರುವವರಿಗೆ ರಮಣತ್ವ ಕೂಡುವುದಿಲ್ಲ. ಬಹುಯತ್ನಪೂರ್ವಕವಾದ ಸರ್ವವನ್ನೂ ನಿಯಮನ ಮಾಡುವ ಶ್ರೀಹರಿಗೆ ಚಿತ್ತವಿಕ್ಷೇಪದ ಸಾಧ್ಯತೆ ಇರುವುದರಿಂದ, ನಿಯಾಮಕತ್ವವೂ ರಮಣತ್ವವೂ ಒಟ್ಟಿಗೆ ಕೂಡುವುದಿಲ್ಲ. ಆದ್ದರಿಂದ ಸರ್ವನಿಯಾಮಕತ್ವವು ಕೂಡುವುದಿಲ್ಲ ಎಂದು ಪೂರ್ವಪಕ್ಷ. ಸರ್ವಾಂತರ್ಯಾಮಿತ್ವ ಎಂಬ ಹೇತುವಿನಿಂದ ಈ ಪೂರ್ವಪಕ್ಷವನ್ನು ನಿರಾಕರಿಸಿ ಶ್ರೀಹರಿಗೆ ರಮಣರೂಪವಾದ ಸರ್ವನಿಯಾಮಕತ್ವವನ್ನು ಇಲ್ಲಿ ಸಮರ್ಥಿಸುತ್ತಾರೆ.

**ರಮಣಂ ನಾತಿಯತ್ನಸ್ಯ ವಿಕ್ಷೇಪಾದೇವ ಯುಜ್ಯತೇ ॥೧೪॥**
**ಇತಿ ಚೇತ್ಸರ್ವನಿಯಮೋ ಯಸ್ಯ ಕಸ್ಮಾನ್ನ ಶಕ್ಯತೇ ।**
**ಸ್ವಾತ್ಮನಾಽನಿಯತಂ ವಸ್ತು ಪ್ರತೀಪಂ ಹ್ಯಾತ್ಮನೋ ಭವೇತ್ ॥೧೫॥**
**ಸ್ವಾಧೀನಸತ್ತಾಶಕ್ತ್ಯಾದಿ ಕಥಮಾತ್ಮಪ್ರತೀಪಕಂ ।**

ಅತಿಯತ್ನವುಳ್ಳವರಿಗೆ ಚಿತ್ತವಿಕ್ಷೇಪದಿಂದಾಗಿಯೇ ರಮಣವು ಕೂಡುವುದಿಲ್ಲ ಎಂದು ಆಕ್ಷೇಪಿಸಿದರೆ, ಇದು ಲೋಕದಲ್ಲಿ ಕಂಡಿರುವ ಸಾಮಾನ್ಯವಾದ ನಿಯಮ. ಆದರೆ ಪರಮೇಶ್ವರನು ಸರ್ವಾಂತರ್ಯಾಮಿಯಾಗಿರುವುದರಿಂದಲೇ ಈ ನಿಯಮವು ಕೂಡುವುದಿಲ್ಲ. ಈಶ್ವರನಿಗೆ ಚಿತ್ತವಿಕ್ಷೇಪವು ಅಶಕ್ಯವಾದುದು. ಆದಪ್ರಯುಕ್ತ ಅವನಿಗೆ ಸರ್ವನಿಯಾಮಕತ್ವವು ರಮಣತ್ವಕ್ಕೆ ಕಾರಣವಾದ

ಕ್ರೀಡೆಯೇ ಎನಿಸುವುದು. ಯಾವ ವಸ್ತುವು ನಮ್ಮ ನಿಯಮನಕ್ಕೆ ಒಳಪಡುವುದಿಲ್ಲವೋ ಅದು ನಮ್ಮ ಮನೋವ್ಯಾಕುಲತೆಗೆ ಕಾರಣವಾಗುವುದು. ಈ ಜಗತ್ತಿನ ಸತ್ತಾ ಶಕ್ತಿ ಇತ್ಯಾದಿ ಎಲ್ಲವೂ ಸರ್ವದಾ ಈಶ್ವರನ ಅಧೀನವೇ ಆಗಿರುವಾಗ, ಅವನಿಗೆ ಚಿತ್ತವಿಕ್ಷೇಪವು ಹೇಗೆ ಸಾಧ್ಯ?

## ಅದೃಶ್ಯತ್ವಾದ್ಯಧಿಕರಣ

### ಅದೃಶ್ಯತ್ವಾದಿ ಗುಣಗಳ ಸಮನ್ವಯ

**ಸೂತ್ರ: ಓಂ ಅದೃಶ್ಯತ್ವಾದಿಗುಣಕೋ ಧರ್ಮೋಕ್ತೇಃ ಓಂ (೧-೨-೨೧)**

ಈ ಅಧಿಕರಣದಲ್ಲಿ 'ಯತ್ತದದ್ರೇಶ್ಯಂ' ಇತ್ಯಾದಿ ವಾಕ್ಯಗಳಲ್ಲಿ ಹೇಳಿದ ಅದೃಶ್ಯತ್ವಾದಿ ಧರ್ಮಗಳನ್ನು ಬ್ರಹ್ಮನಲ್ಲಿ ಸಮನ್ವಯವನ್ನು ಪ್ರತಿಪಾದಿಸುತ್ತಾರೆ. ಹಿಂದೆ ಜನ್ಮಾಧಿಕರಣ ಹಾಗೂ ಅತ್ತೃತ್ವಾಧಿಕರಣದಲ್ಲಿ ಹೇಳಿದ ಪ್ರಕಾರ ಅದೃಶ್ಯತ್ವಾದಿ ಧರ್ಮಗಳಿಗೂ ಬ್ರಹ್ಮಸ್ವರೂಪತ್ವವು ಅಂಗೀಕೃತವಾಗಿದೆ. ಅದಕ್ಕೆ ಅಭ್ಯಧಿಕಾಶಂಕೆಯಿಂದ ಬರುವ ಆಕ್ಷೇಪವನ್ನು ತೋರಿಸುತ್ತಾರೆ.

**ಗುಣಕ್ರಿಯಾದಯೋ ಭಾವಾ ಯದಿ ವಾ ಸ್ಯುರಭೇದಿನಃ ॥೧೬॥**

**ಅಭೇದೋಽಭಾವಧರ್ಮಾಣಾಂ ಬ್ರಹ್ಮಣಾ ಯುಜ್ಯತೇ ಕಥಂ ।**

ಆನಂದಾದಿ ಗುಣಗಳು, ಸಂಹರಣಾದಿ ಕ್ರಿಯೆಗಳು, ಸರ್ವಗತತ್ವಾದಿ ಭಾವಗಳು, ಅನ್ನಮಯಾದಿ ರೂಪಗಳು ಹಾಗೂ ಪುಚ್ಛಾದಿ ಅವಯವಗಳು ಭಾವ ಪದಾರ್ಥಗಳಾಗಿರುವುದರಿಂದ, ಅವುಗಳಿಗೆ ಭಾವ ಪದಾರ್ಥವಾದ ಬ್ರಹ್ಮನೊಂದಿಗೆ ಅಭೇದವಿದೆ ಎಂದು ಹೇಳಿದರೆ ಹಾಗೆಯೇ ಆಗಲಿ. ಆದರೆ ಅದೃಶ್ಯತ್ವಾದಿ ಧರ್ಮಗಳು, ಅಭಾವ ಪದಾರ್ಥಗಳಾಗಿರುವುದರಿಂದ, ಬ್ರಹ್ಮನೊಂದಿಗೆ ಅಭೇದವನ್ನು ಹೇಳುವುದು ಯುಕ್ತವಲ್ಲ. ಭಾವ ಮತ್ತು ಅಭಾವಗಳು ವಿರುದ್ಧವಾದ ಧರ್ಮಗಳಾಗಿರುವುದರಿಂದ ಅವುಗಳಿಗೆ ಐಕ್ಯವು ಕೂಡುವುದಿಲ್ಲ. ಈ ಆಕ್ಷೇಪವನ್ನು ಮುಂದಿನ ವಾಕ್ಯದಿಂದ ಪರಿಹರಿಸುತ್ತಾರೆ.

**ನಾಭಾವೋ ಭಾವ ಇತಿ ಚ ವಿಶೇಷಃ ಪ್ರಾಯಶೋ ಭವೇತ್ ॥೧೭॥**

ಅನ್ಯೋನ್ಯಾಭಾವಕ್ಕೂ ಭಾವಕ್ಕೂ ವಿಶೇಷ ಅಥವಾ ಭೇದವು ಲೋಕದಲ್ಲಿ ಹೆಚ್ಚಾಗಿ ಕಂಡುಬರುವುದಿಲ್ಲ.

## ಅನ್ಯೋನ್ಯಾಭಾವದ ವಿವರಣೆ

ಇಲ್ಲಿ ಅಭಾವ ಎಂದರೆ ಅನ್ಯೋನ್ಯಾಭಾವ ಎಂದರ್ಥ. ದೃಶ್ಯದಿಂದ ಬೇರೆಯಾದುದು ಅದೃಶ್ಯ, ಅದರ ಭಾವ ಅಥವಾ ಧರ್ಮವೇ ಅದೃಶ್ಯತ್ವ. ಅದೃಶ್ಯತ್ವಾದಿ ಶಬ್ದಗಳಿಂದ ದೃಶ್ಯಾದಿ ಅನ್ಯೋನ್ಯಾಭಾವವು ಹೇಳಲ್ಪಡುತ್ತದೆ. ಅಭಾವ ಎಂದರೆ ದೃಶ್ಯಾದಿ ವಿರೋಧಿತ್ವ ರೂಪವಾದ ಅರ್ಥವಾಗಲಿ ಎನ್ನುವುದು ಸರಿಯಲ್ಲ. ಬ್ರಹ್ಮನು ದೃಶ್ಯನಾಗಿದ್ದರೂ ಅವನ ಧರ್ಮಗಳು ಅದೃಶ್ಯವಾಗಿರಲಿ ಎಂದು ಹೇಳುವುದು ಸ್ವವ್ಯಾಘಾತ ನಿಮಿತ್ತದಿಂದಾಗಿ ಕೂಡುವುದಿಲ್ಲ. ಬ್ರಹ್ಮ ಹಾಗೂ ಅವನ ದೃಶ್ಯಾದಿ ಧರ್ಮಗಳೂ ಭಾವ ಪದಾರ್ಥಗಳೇ ಆಗಿವೆ. ಆದಕಾರಣ ಭಾವಾಭಾವರೂಪವಾದ ವಿರೋಧವಿಲ್ಲ. ಅನ್ಯೋನ್ಯಾಭಾವಕ್ಕೂ ಭಾವಕ್ಕೂ ಲೋಕದಲ್ಲಿಯೂ ಹೆಚ್ಚಾಗಿ ಭೇದವು ಕಂಡುಬರದು. ಆದ್ದರಿಂದ ಅನ್ಯೋನ್ಯಾಭಾವಕ್ಕೂ ಬ್ರಹ್ಮನಿಗೂ ಅಭೇದವನ್ನು ಹೇಳಿದರೆ ಅನುಪಪತ್ತಿಯು ಬರುವುದಿಲ್ಲ. ಅನ್ಯೋನ್ಯಾಭಾವವು ನಿಯಮೇನ ಪ್ರತಿವಸ್ತುವಿನಲ್ಲಿಯೂ ಪ್ರಾಗಭಾವಾದಿಗಳಿಗಿಂತ ಹೆಚ್ಚಾಗಿ ಇರುವುದು. ನಿತ್ಯ ಹಾಗೂ ಅನಾದಿ ವಸ್ತುಗಳಿಗೆ ಪ್ರಾಗಭಾವವು ಅಸಂಭವ. ಅನ್ಯೋನ್ಯಾಭಾವವೇ ಬೇರೆ ಕಡೆಗಳಲ್ಲಿ ಧರ್ಮಿಸ್ವರೂಪವಾಗಿರುವುದರಿಂದ ಬ್ರಹ್ಮನಲ್ಲಿಯೂ ಧರ್ಮಿಸ್ವರೂಪವೆಂದು ಅಂಗೀಕರಿಸಬೇಕು.

ಯಾರು ಅನ್ಯೋನ್ಯಾಭಾವವನ್ನು ಧರ್ಮಿಸ್ವರೂಪವೆಂದು ಒಪ್ಪುವುದಿಲ್ಲವೋ ಅವನನ್ನು ಪ್ರಶ್ನಿಸಬೇಕು. ನೀನು ಯಾವ ಕಾರಣದಿಂದ ಒಪ್ಪುವುದಿಲ್ಲ, ವಿರೋಧದ ಶಂಕೆಯಿಂದಲೋ, ಪ್ರಮಾಣವಿಲ್ಲವೆಂದೋ ಅಥವಾ ಬಾಧಕವಿರುವುದರಿಂದಲೋ? ಮೊದಲನೆಯ ಕಲ್ಪದಲ್ಲಿ ಅನ್ಯೋನ್ಯಾಭಾವಕ್ಕೆ ಧರ್ಮಿಯಿಂದ ವಿರೋಧವು ಹೇಗೆಂದು ಕೇಳಬೇಕು. ವಿಧಿನಿಷೇಧರೂಪತ್ವದ ನಿಮಿತ್ತದಿಂದ ಎಂದು ಹೇಳಿದರೆ, ಅದಾದರೂ ಹೇಗೆ ಕೂಡುತ್ತದೆ ಎಂದು ಕೇಳಬೇಕು. ನಿಷೇಧಾರ್ಥಕವಾದ ನಞ ಇದ್ದರೆ ನಿಷೇಧರೂಪತ್ವವೂ ಅದಿಲ್ಲದಿದ್ದರೆ ವಿಧಿರೂಪತ್ವವೂ ಎಂದು ಹೇಳಿದರೆ -

**ಅತದ್ಭಾವೋಽನ್ಯತಾ ಚೇತಿ ನ ವಿಶೇಷೋಽಸ್ತಿ ಕಶ್ಚನ ।**
**ದೋಷಾಭಾವೋ ಗುಣ ಇತಿ ಪ್ರಸಿದ್ಧೋ ಲೌಕಿಕೇಷ್ವಪಿ ॥೧೮॥**

**ಅದೃಶ್ಯತ್ವಾದಿಕಾಂಸ್ತಸ್ಮಾದ್ಗುಣಾನಾಹ ಸ್ವಯಂ ಪ್ರಭುಃ ।**

'ಪಟಕ್ಕೆ ಘಟತ್ವವಿಲ್ಲ' 'ಅದು ಘಟದಿಂದ ಬೇರೆಯೇ ಆಗಿರುವುದು' ಹೀಗೆ ಎರಡು ಪ್ರಕಾರದಿಂದ ಹೇಳಿದರೂ ತಾತ್ಪರ್ಯ ಒಂದೇ ಆಗುವುದು. ಈ ಹೇಳಿಕೆಗಳಲ್ಲಿ ಯಾವುದೇ ರೀತಿಯ ವೈಲಕ್ಷಣ್ಯವಿರುವುದಿಲ್ಲ. ದೋಷಾಭಾವವೇ ಗುಣ, ಗುಣಾಭಾವವೇ ದೋಷ ಇತ್ಯಾದಿ ವ್ಯವಹಾರವು ಲೌಕಿಕರಲ್ಲಿಯೂ ಪ್ರಸಿದ್ಧವಾಗಿದೆ. ವಿಧಿರೂಪಗಳಿಗೆ ನಞ್ ಪ್ರಯೋಗದಿಂದ ನಿಷೇಧರೂಪತ್ವವೂ, ನಿಷೇಧಗಳಿಗೆ ನಞ್ ಪ್ರಯೋಗದಿಂದ ವಿಧಿರೂಪತ್ವವೂ ಬರುವುದು. ಈ ಪ್ರಕಾರವಾಗಿ ನಞ್ ಪ್ರಯೋಗವಿದ್ದರೂ ಗುಣರೂಪತ್ವವು ಕೂಡುವುದರಿಂದ ಸೂತ್ರಕಾರರಾದ ತಾವು ನಞ್ ಪ್ರಯೋಗವಿರುವ ಅದೃಶ್ಯತ್ವಾದಿಗಳನ್ನು ಗುಣವೆಂದೇ ಹೇಳಿದ್ದಾರೆ.

**ಭಾವಾಭಾವವಿರೋಧೋಽಪಿ ನ ತು ಸರ್ವತ್ರ ವಿದ್ಯತೇ ॥೧೯॥**

**ತದಭಾವೋ ಹಿ ತದ್ಭಾವವಿರೋಧೀ ನ ತತೋ ಪರಃ ।**

ಭಾವ ಮತ್ತು ಅಭಾವಗಳಿಗೆ ವಿರೋಧವೂ ಕೂಡ ಎಲ್ಲ ಕಡೆಗಳಲ್ಲಿ ಇರುವುದಿಲ್ಲ. ಉದಾಹರಣೆಗೆ, ಘಟ ಇದ್ದಲ್ಲಿಯೇ ಪಟಾಭಾವವು ಕಂಡುಬರುವುದು. ಘಟದಲ್ಲಿನ ಪಟಾಭಾವವು ಘಟಸ್ವರೂಪದಿಂದ ವಿರೋಧಿಯಾದುದಲ್ಲ. ಹಾಗೆಯೇ ಪಟದಲ್ಲಿರುವ ಘಟಾಭಾವವು ಪಟಸ್ವರೂಪದಿಂದ ವಿರೋಧಿಯಾದುದಲ್ಲ. ಇವೆರಡೂ ಅನುಭವ ಸಿದ್ಧವು.

ಹಾಗಾದರೆ ಅನ್ಯೋನ್ಯಾಭಾವಕ್ಕೆ (ಘಟದಲ್ಲಿ ಪಟದ ಅಭಾವ, ಪಟದಲ್ಲಿ ಘಟದ ಅಭಾವ) ಧರ್ಮಿಸ್ವರೂಪತ್ವ ವಿಷಯದಲ್ಲಿ ಪ್ರಮಾಣವಿಲ್ಲ ಎಂದು ಹೇಳಿದರೆ, ಹಾಗೆ ಹೇಳಕೂಡದು. ಅನ್ಯೋನ್ಯಾಭಾವವೂ ಭೇದವೂ ಒಂದೇ ಆಗಿವೆ. ಭೇದವು ವಸ್ತು ಸ್ವರೂಪವೆಂದು ಎಲ್ಲರೂ ಅಂಗೀಕರಿಸಿರುವರು. ಇಲ್ಲವಾದರೆ ಅನವಸ್ಥಾದಿ ದೋಷಗಳು ಉಂಟಾಗುತ್ತವೆ.

ಹಾಗಾದರೆ ಪೃಥಕ್ತ್ವ, ಅನ್ಯೋನ್ಯಾಭಾವ ಮತ್ತು ಸ್ವರೂಪ ಎಂದು ಮೂರು ವಿಧವಾದ ಭೇದವನ್ನು ನಾವು ಅಂಗೀಕರಿಸುತ್ತೇವೆ. ದ್ರವ್ಯದಲ್ಲಾದರೋ ಮೂರು ವಿಧವಾದ ಭೇದವೂ ಕೂಡುವುದು. ಗುಣಾದಿ ಪಂಚಕದಲ್ಲಿ ಎರಡೇ ವಿಧವು. ಪೃಥಕ್ತ್ವವೂ ಒಂದು ಗುಣವಾಗಿರುವುದರಿಂದ ಗುಣಾದಿಗಳಲ್ಲಿ ಪೃಥಕ್ತ್ವ ಎಂಬ

ಭೇದವು ಅಸಂಭವ. ಅಭಾವದಲ್ಲಿ ಸ್ವರೂಪಭೇದ ಮಾತ್ರ ಕೂಡುವುದು. ಅಭಾವದಲ್ಲಿ ಅನ್ಯೋನ್ಯಾಭಾವರೂಪ ಭೇದವನ್ನು ಒಪ್ಪಿದರೆ ಅನವಸ್ಥಾ ದೋಷವು ಬರುವುದು. ಅನ್ಯೋನ್ಯಾಭಾವವು ಭೇದವೇ ಆಗಿದ್ದರೂ, ಭೇದವು ಧರ್ಮಿಸ್ವರೂಪವೇ ಆಗಿದ್ದರೂ, ಅನ್ಯೋನ್ಯಾಭಾವಕ್ಕೆ ಧರ್ಮಿಸ್ವರೂಪತ್ವವು ಇರುವುದಿಲ್ಲ. ಏಕೆಂದರೆ ಅದು ಸ್ವರೂಪಭೇದದಿಂದ ಬೇರೆಯಾದ ಭೇದವಾಗಿದೆ. ಹೀಗೆ ಹೇಳಿದರೆ -

**ಪೃಥಕ್ತ್ವಾಭಾವತದ್ರೂಪಾನ್ಭೇದಾಂಸ್ತ್ರೀನ್ಕಲ್ಪಯಂತಿ ಚೇತ್ ।।೨೦।।**
**ಕಲ್ಪನಾಗೌರವಾದ್ಯಾಸ್ತು ದೋಷಾಸ್ತತ್ರ ವಿರೋಧಿನಃ ।**
**ಪೃಥಕ್ತ್ವಾನ್ಯತ್ವಭೇದಾಸ್ತು ಪರ್ಯಾಯೇಣೈವ ಲೌಕಿಕೈಃ ।।೨೧।।**
**ವ್ಯವಹ್ರಿಯಂತೇ ಸತತಂ ವೈದಿಕೈರಪಿ ಸರ್ವಶಃ ।**

ಪೃಥಕ್ತ್ವ, ಅನ್ಯೋನ್ಯಾಭಾವ, ಸ್ವರೂಪಭೇದ ಹೀಗೆ ಮೂರು ವಿಧಗಳಾದ ಭೇದಗಳನ್ನು ಕಲ್ಪಿಸುವುದಾದರೆ, ಕಲ್ಪನಾಗೌರವ ದೃಷ್ಟಹಾನಿ ಅದೃಷ್ಟಕಲ್ಪನಾ ಎನ್ನುವ ದೋಷಗಳು ವಿರೋಧಿಗಳಾಗಿ ಬರುತ್ತವೆ. ಪೃಥಕ್ತ್ವ ಅನ್ಯೋನ್ಯಾಭೇದ ಸ್ವರೂಪಭೇದ ಇವುಗಳು ಎಲ್ಲ ಲೌಕಿಕ ಹಾಗೂ ವೈದಿಕರಿಂದಲೂ ಪರ್ಯಾಯಾರ್ಥಕವಾಗಿಯೇ ಯಾವಾಗಲೂ ವ್ಯವಹರಿಸಲ್ಪಡುತ್ತವೆ.

**ದೃಷ್ಟಹಾನಿರದೃಷ್ಟಸ್ಯ ಕಲ್ಪನೇತ್ಯೇವ ದೂಷಣಂ ।।೨೨।।**
**ಯದಾ ತದಧಿಕೋ ದೋಷೋ ವಿದ್ಯತೇ ಕೋ ನು ವಾದಿನಾಂ ।**

ದೃಷ್ಟಹಾನಿ, ಅದೃಷ್ಟಕಲ್ಪನಾ, ಕಲ್ಪನಾಗೌರವಾದಿ ದೋಷಗಳು ಬಂದರೆ ಬರಲಿ ಮುಂದೆ ಏನು ಎಂದು ಕೇಳಿದರೆ, ವಾದಿಗಳಿಗೆ ಅವುಗಳಿಗಿಂತ ಮೀರಿದ ಅಧಿಕವಾದ ದೋಷವು ಬೇರೆ ಯಾವುದಾದರೂ ಇರಲು ಸಾಧ್ಯವೇ ಎಂದು ಶ್ರೀಮದಾಚಾರ್ಯರು ಪರಿಹಾಸ ಮಾಡುತ್ತಾರೆ.

**ಭಾವಾಭಾವಸ್ವರೂಪಸ್ತು ವಿಶೇಷಾ ಏವ ವಸ್ತುನಃ ।।೨೩।।**
**ಅಭಿನ್ನಾ ಏವ ಸಂಗ್ರಾಹ್ಯಾ ವ್ಯವಹಾರಪ್ರಸಿದ್ಧಯೇ।**

ಭಾವಾಭಾವಸ್ವರೂಪವುಳ್ಳ ಅತ್ತೃತ್ವ, ಅದೃಶ್ಯತ್ವ ಇತ್ಯಾದಿಗಳೂ ಬ್ರಹ್ಮನಿಂದ ಅಭಿನ್ನವೇ ಆಗಿದ್ದರೂ, ಧರ್ಮ-ಧರ್ಮಿ ಮೊದಲಾದ ವ್ಯವಹಾರ ಸಿದ್ಧಿಗಾಗಿ ಧರ್ಮಗಳಿಗೂ ಧರ್ಮಿಗೂ ಸವಿಶೇಷಾಭೇದವನ್ನು ಅಂಗೀಕರಿಸಬೇಕು.

ವಿಶೇಷಕ್ಕೂ ಧರ್ಮಿಗೂ ಭೇದವಿಲ್ಲದಿದ್ದರೂ ವಿಶೇಷವು ಭೇದನಿಮಿತ್ತಕವಾದ ವ್ಯವಹಾರವನ್ನು ನಿರ್ವಹಿಸುತ್ತದೆ ಎಂದು ಸ್ವರೂಪಗ್ರಾಹಕ ಪ್ರಮಾಣದಿಂದಲೇ ಸಿದ್ಧವಾಗುವುದು.

ಕೆಲವರು ಗುಣಕ್ರಿಯಾದಿಗಳಿಗೆ ದ್ರವ್ಯದಿಂದ ಅತ್ಯಂತಭೇದವನ್ನು ಹಾಗೂ ಸಮವಾಯವನ್ನು ಅಂಗೀಕರಿಸಿ ವ್ಯವಹಾರಾದಿಗಳನ್ನು ಮಾಡುವರು. ಅವರು ವಿಶೇಷವನ್ನು ಒಪ್ಪುವುದಿಲ್ಲ. ಅವರ ಪ್ರಕಾರ ಶ್ರುತಿಗಳು ಧರ್ಮ-ಧರ್ಮಿಗಳಿಗೆ ಅಭೇದವನ್ನು ಪ್ರತಿಪಾದಿಸುವುದು ಕೇವಲ ಉಪಾಸನಾರ್ಥವಾಗಿ ಅಥವಾ ಧರ್ಮಗಳೂ ಧರ್ಮಿಯಂತೆಯೇ ನಿತ್ಯ ಎಂದು ಹೇಳುವುದಕ್ಕಾಗಿ. ವಿಶೇಷವನ್ನು ಒಪ್ಪದ ಇನ್ನೂ ಕೆಲವರು ಭೇದಪ್ರತಿಷೇಧವನ್ನು ಶ್ರುತ್ಯರ್ಥವಾಗಿ ಹೇಳುತ್ತಾರೆ. ಕೆಲವರು ಬ್ರಹ್ಮನು ಅಖಂಡ ಅಥವಾ ನಿರ್ವಿಶೇಷವೆಂದು ಅಂಗೀಕರಿಸಿ ಭೇದಾಭೇದಾದಿ ವ್ಯವಹಾರವೆಲ್ಲವೂ ಅವಿದ್ಯಾರೋಪಿತ ನಿಮಿತ್ತಕವೆಂದು ಹೇಳುತ್ತ ವಿಶೇಷವನ್ನು ಅಲ್ಲಗೆಳೆಯುತ್ತಾರೆ. ಈ ಮೂರು ಪ್ರಕಾರದ ವಾದಿಗಳಿಂದಲೂ ವಿಶೇಷವನ್ನು ಒಪ್ಪುವಂತೆ ಮಾಡುತ್ತಾರೆ.

**ಯಥೈಕಃ ಸಮವಾಯೋಽಪಿ ಭೇದಾಭೇದೌ ಚ ವಸ್ತುನಿ ॥೨೪॥**
**ಅಂಗೀಕಾರ್ಯಾ ವಿಶೇಷೇಣ ಸ್ಥಾನೇಷು ವ್ಯವಹರ್ತೃಭಿಃ ।**
**ಅಖಂಡವಾದಿನೋಽಪಿ ಸ್ಯಾದ್ವಿಶೇಷೋಽನಿಚ್ಛತೋಽಪ್ಯಸೌ ॥೨೫॥**
**ವ್ಯಾವೃತ್ತೇ ನಿರ್ವಿಶೇಷೇ ತು ಕಿಂ ವ್ಯಾವರ್ತ್ಯಬಹುತ್ವತಃ ।**

ಧರ್ಮ-ಧರ್ಮಿಗಳಿಗೆ ಭೇದವನ್ನು ಪ್ರತಿಪಾದಿಸುವವರು ತಮ್ಮ ಶಾಸ್ತ್ರದ ಎಲ್ಲ ಪ್ರದೇಶಗಳಲ್ಲಿಯೂ ಒಂದೇ ಸಮವಾಯವು ಸಮತ್ವ ಬುದ್ಧಿಯನ್ನು ಉಂಟುಮಾಡುತ್ತದೆ ಎಂದು ಹೇಳುತ್ತ ಸಮವಾಯಕ್ಕೂ ವಸ್ತುವಿಗೂ ಅಭೇದವನ್ನು ಹೇಳುತ್ತಾರೆ. ಭೇದಾಭೇದಗಳಿಗೆ ಧರ್ಮಿಯಿಂದ ಅಭೇದವನ್ನು ಹೇಳುವವರು ವ್ಯವಹಾರ ನಿರ್ವಹಣೆಗಾಗಿ ಭೇದವನ್ನೂ ಅಂಗೀಕರಿಸುತ್ತಾರೆ. ಹೀಗೆ ಭೇದವಿರುವಲ್ಲಿ ಅಭೇದವನ್ನೂ, ಭೇದಾಭೇದವಿರುವಲ್ಲಿ ಭೇದವನ್ನೂ ನಿರ್ವಹಿಸಲು ವಿಶೇಷವನ್ನು ಅಂಗೀಕರಿಸದೇ ಗತ್ಯಂತರವಿಲ್ಲ. ಅದರಂತೆಯೇ ಬ್ರಹ್ಮ ನಿರ್ವಿಶೇಷ ಎಂದು ಹೇಳುವ ಅಖಂಡವಾದಿಗಳೂ ಕೂಡ ತಮಗೆ ಅನಿಷ್ಟವಾಗಿದ್ದರೂ ವಿಶೇಷವನ್ನು ಅಂಗೀಕರಿಸಲೇಬೇಕು. ಲಕ್ಷ್ಯವಾದ ಅರ್ಥಕ್ಕೆ

ಭೇದವಿಲ್ಲವಾದರೂ ಬ್ರಹ್ಮನಲ್ಲಿ ಆರೋಪಿತವಾದ ಅಸತ್ಯತ್ವ, ಅಜ್ಞಾನತ್ವ ಮೊದಲಾದ ಧರ್ಮಗಳು ಹೆಚ್ಚಿನ ಸಂಖ್ಯೆಯಲ್ಲಿರುವ ಪ್ರಯುಕ್ತ ಅವುಗಳನ್ನು ತೆಗೆದುಹಾಕಿ ಬ್ರಹ್ಮನಿಗೆ ಅಖಂಡತ್ವವನ್ನು ಪ್ರತಿಪಾದಿಸುವುದರಲ್ಲಿ ಸತ್ಯ ಜ್ಞಾನ ಮೊದಲಾದ ಶಬ್ದಗಳಿಗೆ ಸಾರ್ಥಕ್ಯವಿದೆ ಎಂದು ಹೇಳುವುದು ಸರಿಯಲ್ಲ. ಏಕೆಂದರೆ ಅಖಂಡವಾದಿಗಳು ವ್ಯಾವೃತ್ತನಾದ ಅಂದರೆ ನಿರ್ಗುಣನಾದ ಬ್ರಹ್ಮನಲ್ಲಿ ಯಾವುದೇ ವ್ಯಾವರ್ತಕ ವಿಶೇಷಗಳನ್ನು ಒಪ್ಪಿರುವುದಿಲ್ಲ. ಆದಪ್ರಯುಕ್ತ ಎಲ್ಲರೂ ವಿಶೇಷವನ್ನು ಒಪ್ಪಲೇಬೇಕು. ವಿಶೇಷದ ಬಲದಿಂದ ಧರ್ಮ-ಧರ್ಮಿ ಎನ್ನುವ ವ್ಯವಹಾರವು ಕೂಡುವುದರಿಂದ ಅದೃಶ್ಯತ್ವಾದಿ ಗುಣಗಳು ಬ್ರಹ್ಮನ ಸ್ವರೂಪ ಎನ್ನುವುದು ಸಿದ್ಧವಾಗುವುದು.

## ವೈಶ್ವಾನರಾಧಿಕರಣ

**ಸೂತ್ರ: ಓಂ ವೈಶ್ವಾನರಃ ಸಾಧಾರಣಶಬ್ದವಿಶೇಷಾತ್ ಓಂ (೧-೨-೨೪)**

ಈ ಅಧಿಕರಣದಲ್ಲಿ ನಾಮಾತ್ಮಕ ಶಬ್ದಗಳನ್ನು ಸಮನ್ವಯ ಮಾಡುವ ಪ್ರಯುಕ್ತ ಈ ಪಾದದಲ್ಲಿ ಅಂತರ್ಭಾವ ಕೂಡುವುದಿಲ್ಲ. ಲಿಂಗಸಮನ್ವಯವೂ ಇಲ್ಲಿ ಸಿದ್ಧವಾಗುವುದರಿಂದ ಹಿಂದಿನ ಪಾದದಲ್ಲಿಯೂ ಇದು ಕೂಡುವುದಿಲ್ಲ. ಅನ್ಯತ್ರ ಪ್ರಸಿದ್ಧವಾದ ಶಬ್ದಗಳ ಸಮನ್ವಯವು ಮಾಡಲ್ಪಡುವ ಪ್ರಯುಕ್ತ ಈ ಎರಡು ಪಾದಗಳಲ್ಲಿಯೂ ಕೂಡುವುದಿಲ್ಲ ಎಂದೂ ಹೇಳುವಹಾಗಿಲ್ಲ. ಇಲ್ಲಿ ಹೇಳಲು ಅನರ್ಹವೆಂದರೆ ಸಮನ್ವಯವೇ ಸಿದ್ಧಿಸದು. ಆದಕಾರಣ ಈ ಅಧಿಕರಣದಲ್ಲಿ ಅಂತರ್ಭಾವವು ಹೇಗೆ ಎಂದು ಕೇಳಿದರೆ, ಲಿಂಗಾಧಿಕಾ ಎನ್ನುವಲ್ಲಿ ಅಂತರ್ಭಾವವನ್ನು ಸಮರ್ಥನೆ ಮಾಡಿರುವರು. ಅಥವಾ ಎರಡು ಪಾದಗಳ ಅರ್ಥವಾಗಿರುವ ಕಾರಣ ಒಂದೇ ಪಾದದಲ್ಲಿ ಪ್ರವೇಶವು ಕೂಡದಿರುವುದರಿಂದ, ಪಾದದ್ವಯ ಶೇಷವಾಗಿ ಎರಡೂ ಪಾದಗಳ ಅಂತ್ಯದಲ್ಲಿ ಈ ಅಧಿಕರಣವನ್ನು ನಿಬಂಧನೆ ಮಾಡಿದ್ದಾರೆ. ಇದನ್ನು ತಿಳಿಸಲು ಪಾದದ್ವಯಾರ್ಥವನ್ನು ಉಪಸಂಹಾರ ಮಾಡುತ್ತಾರೆ.

**ಬಹುಲಿಂಗಸಮಾಯುಕ್ತೈರ್ಬಹುಭೀ ರೂಢನಾಮಭಿಃ ॥೨೬॥**

**ಪ್ರಸಿದ್ಧೈರನ್ಯಗತ್ವೇನ ವಾಚ್ಯಃ ಸಾಕ್ಷಾಜ್ಜನಾರ್ದನಃ ।**

ಅನ್ಯತ್ರ ಪ್ರಸಿದ್ಧವಾದ ಅನೇಕ ಲಿಂಗಗಳಿಂದ ಕೂಡಿರುವ, ಅನೇಕ

ರೂಢಿನಾಮಗಳಿಂದ ಮುಖ್ಯವೃತ್ತಿಯಿಂದ ಶ್ರೀಹರಿಯು ವಾಚ್ಯನೆನಿಸುತ್ತಾನೆ.

## ವೈಶ್ವಾನರಾಧಿಕರಣದ ತಾತ್ಪರ್ಯ

**ವೈಶ್ವಾನರಾದಯಃ ಶಬ್ದಾ ಅಪಿ ತದ್ವಾಚಕಾಸ್ತತಃ ॥೨೭॥**

ಅಗ್ನಿ ಇತ್ಯಾದಿಗಳಲ್ಲಿ ಪ್ರಸಿದ್ಧವಾದ ವೈಶ್ವಾನರ ಮೊದಲಾದ ಶಬ್ದಗಳೂ ಪರಮೇಶ್ವರ ವಾಚಕಗಳೇ ಆಗಿವೆ. ಹಾಗಾದರೆ ವೈಶ್ವಾನರನಿಗೆ ವಿಷ್ಣುತ್ವ ನಿರ್ಧಾರಣವು ಹೇಗೆ ಆಗುವುದೆಂದರೆ -

**ತಾನಿ ಲಿಂಗಾನಿ ತೇ ಶಬ್ದಾ ಅಪಿ ತದ್ಗಾ ಹಿ ಸರ್ವಶಃ ।**

**ಬಹುಲಾಪ್ಯಜ್ಞರೂಢಿಸ್ತತ್ಪ್ರಾಜ್ಞರೂಢಿಂ ನ ಬಾಧತೇ ॥೨೮॥**

ಆಯಾಯ ಪ್ರಕರಣಗಳಲ್ಲಿರತಕ್ಕ ಎಲ್ಲ ಲಿಂಗಗಳೂ, ಎಲ್ಲ ಶಬ್ದಗಳೂ ಪರಮೇಶ್ವರ ವಿಷಯಕಗಳೇ ಆಗಿವೆ. ಇದು ಶ್ರುತಿಪ್ರಸಿದ್ಧವು. ಹಾಗಾದರೆ ಅಗ್ನ್ಯಾದಿ ಶಬ್ದಗಳು ಅನ್ಯತ್ರ ರೂಢವಾಗಿರುವುದರಿಂದ ವಿಷ್ಣುಪರ ಎಂದು ಹೇಳುವುದು ಉಚಿತವಲ್ಲ. ವಿಷ್ಣುವಿನಲ್ಲಿಯೂ ರೂಢಿಯಿರುವುದರಿಂದ ಎಂದು ಹೇಳಕೂಡದು. ವಿಷ್ಣುವಿನಲ್ಲಿ ಅಲ್ಪ ರೂಢಿಯಿದ್ದರೆ ಅನ್ಯತ್ರ ಬಹಳ ಹೆಚ್ಚಿನ ರೂಢಿಯಿರುವುದು. ಬಾಹುಲ್ಯದ ನಿಮಿತ್ತ ಅನ್ಯತ್ರ ರೂಢಿಯೇ ಪ್ರಬಲ. ಆದಪ್ರಯುಕ್ತ ವಿಷ್ಣುವಿನಲ್ಲಿ ಕೂಡುವುದಿಲ್ಲ ಎಂದು ಹೇಳಿದರೆ - ಅನ್ಯತ್ರ ಇರುವುದು ಅಜ್ಞರೂಢಿ. ವಿಷ್ಣುವಿನಲ್ಲಿ ಪ್ರಾಜ್ಞರೂಢಿ. ಅಜ್ಞರೂಢಿಯು ಎಷ್ಟೇ ಹೆಚ್ಚಿದ್ದರೂ, ಪ್ರಾಜ್ಞರೂಢಿಯನ್ನು ಬಾಧಿಸಲಾರದು.

**॥ ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯ ವಿರಚಿತೇ**

**ಶ್ರೀಮದನುವ್ಯಾಖ್ಯಾನೇ ಪ್ರಥಮಾಧ್ಯಾಯಸ್ಯ ದ್ವಿತೀಯಃ ಪಾದಃ ॥**

*

**॥ ಇಲ್ಲಿಗೆ ಶ್ರೀಮನ್ನ್ಯಾಯಸುಧಾ ಟೀಕಾನುಸಾರಿ ವಿವರಣೆ ಸಹಿತ ರಚಿತವಾದ ಶ್ರೀಮದನುವ್ಯಾಖ್ಯಾನದ ಮೊದಲನೆಯ ಅಧ್ಯಾಯದ ಎರಡನೆಯ ಪಾದದ ಕನ್ನಡಾನುವಾದವು ಮುಕ್ತಾಯವಾಯಿತು ॥**

* * *

# ಮೊದಲನೆಯ ಅಧ್ಯಾಯ

# ಮೂರನೆಯ ಪಾದ

ಈ ಪಾದದಲ್ಲಿ ಉಭಯತ್ರ ಪ್ರಸಿದ್ಧವಾದ, ಅಂದರೆ ವಿಷ್ಣುವಿನಲ್ಲಿಯೂ ಹಾಗೂ ಬೇರೆ ಕಡೆಗಳಲ್ಲಿಯೂ ಪ್ರಸಿದ್ಧವಾದ, ನಾಮಾತ್ಮಕ ಹಾಗೂ ಲಿಂಗಾತ್ಮಕ ಶಬ್ದಗಳ ಸಮನ್ವಯ ಮಾಡುತ್ತಾರೆ.

ಪೂರ್ವೋತ್ತರ ಪಾದಗಳಿಂದ ಈ ಪಾದಕ್ಕೆ ಭಿನ್ನವಾಕ್ಯತ್ವವನ್ನೂ ಹಾಗೂ ತನ್ನಲ್ಲಿ ಏಕವಾಕ್ಯತ್ವವನ್ನೂ ಸಿದ್ಧಿಸುವುದಕ್ಕಾಗಿ ಮೂರನೆಯ ಪಾದದಲ್ಲಿ ಪ್ರತಿಪಾದಿಸಲ್ಪಡುವ ಅರ್ಥವನ್ನು ತೋರಿಸುತ್ತಾರೆ.

**ತತ್ರಾನ್ಯತ್ರ ಪ್ರಸಿದ್ಧಾನಾಂ ಲಿಂಗನಾಮ್ನಾಂ ಪುನರ್ಹರಿಃ ।**

**ವಿಶೇಷಾನ್ಮುಖ್ಯತೋ ವೃತ್ತಿಂ ಸ್ವಸ್ಮಿನ್ನೇವಾತ್ರ ವಕ್ತ್ಯಜಃ ॥೧॥**

ಜನ್ಮಾದಿ ದೋಷರಹಿತರಾದ ಸೂತ್ರಕಾರರು ಈ ಮೂರನೆಯ ಪಾದದಲ್ಲಿ ಶ್ರೀಹರಿಯಲ್ಲಿಯೂ ಹಾಗೂ ಬೇರೆ ಕಡೆಗಳಲ್ಲಿಯೂ ಪ್ರಸಿದ್ಧವಾದ ದ್ಯುಭುವಾದಿ ಆಶ್ರಯತ್ವಾದಿ ಲಿಂಗಗಳಿಗೂ, ಭೂಮಾದಿ ನಾಮಗಳಿಗೂ ವಿಶೇಷವಾಗಿ ಪರಮಮುಖ್ಯವೃತ್ತಿಯಿಂದ ಶ್ರೀಹರಿಯಲ್ಲಿ ಸಮನ್ವಯವನ್ನು ಹೇಳುತ್ತಾರೆ.

## ದ್ಯುಭ್ವಾದ್ಯಧಿಕರಣ

**ಸೂತ್ರ: ಓಂ ದ್ಯುಭ್ವಾದ್ಯಾಯತನಂ ಸ್ವಶಬ್ದಾತ್ ಓಂ (೧-೩-೧)**

ಈ ಅಧಿಕರಣದಲ್ಲಿ ಮೊದಲನೆಯ ಸೂತ್ರದಿಂದ 'ಯಸ್ಮಿನ್ ದ್ಯೌಃ ಪೃಥಿವೀ ಚಾಂತರಿಕ್ಷಮೋತಂ ಮನಃ ಸ ಪ್ರಾಣೈಶ್ಚ ಸರ್ವೈಃ ತಮೇವೈಕಂ ಜಾನಥ ಆತ್ಮಾನಂ' ಇತ್ಯಾದಿ ವಾಕ್ಯಗಳಿಂದ ಹೇಳಲ್ಪಟ್ಟ ಸ್ವರ್ಗ, ಪೃಥಿವೀ ಮೊದಲಾದ ಲೋಕಗಳಿಗೆ ಆಶ್ರಯನು (ದ್ಯುಭುವಾದ್ಯಾಶ್ರಯನು) ವಿಷ್ಣುವೇ, ಆತ್ಮಶಬ್ದದ ಪ್ರಯೋಗವಿರುವುದರಿಂದ ಎಂದು ಪ್ರತಿಪಾದಿಸಿದರು. ದ್ಯುಭುವಾದ್ಯಾಶ್ರಯತ್ವವು ರುದ್ರಾದಿಗಳಿಗೆ ಹೇಳಲ್ಪಟ್ಟಿದೆ, ವಿಷ್ಣುವಿಗಲ್ಲ ಎಂದು ಶಂಕಿಸುವ ಪೂರ್ವಪಕ್ಷವನ್ನು 'ನಾನುಮಾನಮತಚ್ಛಬ್ದಾತ್' 'ಪ್ರಾಣಭೃಚ್ಚ' ಎಂಬ

ಸೂತ್ರಗಳಿಂದ ನಿರಾಕರಿಸುವರು. ಇಲ್ಲಿ 'ಅತತ್' ಶಬ್ದಕ್ಕೆ 'ತಚ್ಛಬ್ದಾಭಾವಾತ್' (ಅಂದರೆ ರುದ್ರಾದಿವಾಚಕ ಶಬ್ದವಿಲ್ಲದಿರುವುದರಿಂದ) ಎಂಬುದಾಗಿ ಭಾಷ್ಯದಲ್ಲಿ ವ್ಯಾಖ್ಯಾನಮಾಡಲಾಗಿದೆ. ಈರೀತಿಯ ಸಮಾಸವು ಕೂಡುವುದಿಲ್ಲವಾದ್ದರಿಂದ ಈ ವ್ಯಾಖ್ಯಾನವು ಅಯುಕ್ತವೆಂದು ತೋರುತ್ತದೆ. ಹೀಗೆ ಆಶಂಕಿಸಿದರೆ -

### ಆತ್ಮಶಬ್ದವಾಚ್ಯನು ವಿಷ್ಣುವೇ

**ವಿಷ್ಣಾವೇವ ಆತ್ಮಶಬ್ದಸ್ಯ ರೂಢತ್ವಾನ್ನ ಶಿವಾದಿಕಾನ್ ।**

**ಶ್ರುತಿರ್ವಕ್ತಿ..........................................................॥**

ಆತ್ಮ ಶಬ್ದಕ್ಕೆ ವಿಷ್ಣುವಿನಲ್ಲಿಯೇ ಶ್ರುತಿಪ್ರಸಿದ್ಧವಾದ ರೂಢಿಯಿರುವುದರಿಂದ 'ಯಸ್ಮಿನ್ ದ್ಯೌಃ' ಇತ್ಯಾದಿ ಶ್ರುತಿಯು ರುದ್ರಾದಿಗಳನ್ನು ಆತ್ಮ ಶಬ್ದದಿಂದ ಹೇಳುವುದಿಲ್ಲ. ಆದಕಾರಣ ದ್ಯುಭುವಾದ್ಯಾಶ್ರಯನು ವಿಷ್ಣುವೇ, ರುದ್ರಾದಿಗಳಲ್ಲ.

## ಭೂಮಾಧಿಕರಣ

**ಸೂತ್ರ: ಓಂ ಭೂಮಾಸಂಪ್ರಸಾದಾದಧ್ಯುಪದೇಶಾತ್ ಓಂ (೧-೩-೮)**

ಶಂಕರಾಚಾರ್ಯರು ಹಾಗೂ ರಾಮಾನುಜಾಚಾರ್ಯರು ಈ ಸೂತ್ರದಲ್ಲಿ 'ಭೂಮ' ಎಂಬ ಶಬ್ದದಿಂದ ಹೇಳಲ್ಪಟ್ಟವನು ಪರಬ್ರಹ್ಮನೇ ಎಂದು ಒಪ್ಪಿದರೂ ಅದಕ್ಕೆ 'ಸಂಪ್ರಸಾದಾತ್' ಎನ್ನುವುದು ಮಾತ್ರ ಹೇತುವೆಂದು ವ್ಯಾಖ್ಯಾನ ಮಾಡಿದ್ದಾರೆ. ಸಂಪ್ರಸಾದ ಎಂದರೆ ಸುಪ್ತಿ. ಇಲ್ಲಿ ಜಾಗ್ರತನಾದ ಪ್ರಾಣನೇ ಲಕ್ಷಿತನಾಗಿದ್ದಾನೆ. ಆ ಪ್ರಾಣನ ದೆಶೆಯಿಂದ ಮುಂದೆ ಉಪದೇಶ ಮಾಡಿರುವುದರಿಂದ (ಅಧ್ಯುಪದೇಶಾತ್), ಭೂಮ ಶಬ್ದವಾಚ್ಯನು ಪರಬ್ರಹ್ಮ ಎನ್ನುವುದು ಶಂಕರಾಚಾರ್ಯರ ವ್ಯಾಖ್ಯಾನ. ರಾಮಾನುಜಾಚಾರ್ಯರು ಸಂಪ್ರಸಾದ ಎಂದರೆ ಜೀವಾತ್ಮಾ ಎಂದು ಅರ್ಥ ಮಾಡಿದ್ದಾರೆ. ಇವೆರಡು ವ್ಯಾಖ್ಯಾನಗಳೂ ಅಯುಕ್ತ. ಏಕೆಂದರೆ ಪ್ರಸಿದ್ಧವಾದ ಪ್ರಾಣಾದಿ ಪದಗಳನ್ನು ಬಿಟ್ಟು ಅಪ್ರಸಿದ್ಧವಾದ ಸಂಪ್ರಸಾದ ಪದವನ್ನು ಸ್ವೀಕರಿಸಲಿಕ್ಕೆ ಕಾರಣವೇ ಇರುವುದಿಲ್ಲ. ಇಲ್ಲಿ ಭೂಮಶಬ್ದವಾಚ್ಯತ್ವನ್ನು ಉಪಪಾದಿಸಲು ಸೂತ್ರಕಾರರು ಸಂಪ್ರಸಾದ ಹಾಗೂ ಅಧ್ಯುಪದೇಶ ಎಂಬ ಎರಡು ಹೇತುಗಳನ್ನು ಹೇಳಿದ್ದಾರೆ ಎಂದು ಶ್ರೀಮದಾಚಾರ್ಯರು ಹೇಳುತ್ತಾರೆ. ಅಧ್ಯುಪದೇಶಾತ್ ಎನ್ನುವ

ಹೇತುವು ಅನ್ಯತ್ರದಲ್ಲಿಯೂ ಕೂಡುವುದರಿಂದ ಅದು ಪರಮಾತ್ಮನನ್ನೇ ಹೇಳುತ್ತದೆ ಎಂದು ಹೇಗೆ ಹೇಳುತ್ತೀರಿ ಎಂದು ಪ್ರಶ್ನಿಸಿದರೆ -

## ಭೂಮಶಬ್ದವಾಚ್ಯನು ವಿಷ್ಣುವೇ

**...............ಅಖಿಲೇಶತ್ವಾದ್ಭೂಮಾ ವಿಷ್ಣುಃ ಸುಖಾಧಿಕಃ ॥೨॥**

ಅಧಿ ಶಬ್ದವು ವಿಷ್ಣುವಾಚಕ. ಅಧ್ಯುಪದೇಶಾತ್ ಎಂದರೆ ಅಖಿಲೇಶತ್ವಾತ್ ಎಂದೂ, ಸಂಪ್ರಸಾದಾತ್ ಎಂದರೆ ಪೂರ್ಣಸುಖರೂಪತ್ವಾತ್ ಎಂದೂ ಅರ್ಥವಾಗುವುದರಿಂದ, ಸರ್ವನಿಯಾಮಕನೂ ಸುಖಪೂರ್ಣನೂ ಆಗಿರುವ ಪ್ರಯುಕ್ತ ವಿಷ್ಣುವೇ ಭೂಮಶಬ್ದವಾಚ್ಯನು.

## ಅಕ್ಷರಾಧಿಕರಣ

## ಬ್ರಹ್ಮನು ಅಕ್ಷರಶಬ್ದವಾಚ್ಯನು

**ಸೂತ್ರ: ಓಂ ಅಕ್ಷರಮಂಬರಾಂತಧೃತೇಃ ಓಂ (೧-೩-೧೦)**

'ಏತದ್ವೈ ತದಕ್ಷರಂ ಗಾರ್ಗೀ' ಎನ್ನುವ ಶ್ರುತಿಯಲ್ಲಿ ಹೇಳಲ್ಪಟ್ಟ ಅಕ್ಷರನು ಬ್ರಹ್ಮನೇ. ಅಕ್ಷರನೇ ಆಕಾಶಕ್ಕೆ ಆಧಾರನು ಹಾಗೂ ಈ ಅಕ್ಷರನ ಶಾಸನದಿಂದಲೇ ಆಕಾಶವು ವಸ್ತುಗಳಿಗೆ ಆಧಾರವಾಗಿರುವುದು. ಈ ರೀತಿ ಶ್ರುತಿಗಳಲ್ಲಿ ಉಕ್ತವಾಗಿದೆ. ಅಕ್ಷರನಿಗೆ ಬ್ರಹ್ಮತ್ವವನ್ನು ಉಪಪಾದಿಸುವುದಕ್ಕಾಗಿ ಹೇತ್ವಂತರವನ್ನು ಅನ್ಯಭಾವವ್ಯಾವೃತ್ತೇಶ್ಚ ಎನ್ನುವ ಸೂತ್ರವು ಹೇಳುತ್ತದೆ ಎಂಬುದಾಗಿ ಭಾಷ್ಯದಲ್ಲಿ ವ್ಯಾಖ್ಯಾತವಾಗಿದೆ. ಇದು ಸರಿಯಲ್ಲ. ಏಕೆಂದರೆ 'ಅಸ್ಥೂಲಮನಣ್ವಹ್ರಸ್ವಮದೀರ್ಘಂ' ಎನ್ನುವ ಶ್ರುತಿಯಲ್ಲಿ ಅಣುತ್ವ-ಮಹತ್ವ, ಹ್ರಸ್ವತ್ವ-ದೀರ್ಘತ್ವ ಇತ್ಯಾದಿ ಒಂದಕ್ಕೊಂದು ವಿರುದ್ಧವಾದ ಧರ್ಮಗಳು ಬ್ರಹ್ಮನಿಗೆ ಹೇಳಲ್ಪಟ್ಟಿವೆ. ಪರಸ್ಪರ ವಿರುದ್ಧವಾದ ಧರ್ಮಗಳು ಒಂದೇ ಕಡೆಯಲ್ಲಿ ಒಟ್ಟಿಗೇ ಕೂಡಲಾರವು. ಆದಪ್ರಯುಕ್ತ ಅಕ್ಷರ ಶಬ್ದವಾಚ್ಯನು ಬ್ರಹ್ಮನಲ್ಲ ಎಂದು ಹೇಳಿದರೆ -

**ಅತೋ ವಿರುದ್ಧವದ್ಭಾತಮಪಿ ವ್ಯಾಖ್ಯಾಯ ತತ್ತ್ವತಃ ।**
**ಯೋಜನೀಯಂ ಹರೌ ವಾಕ್ಯಂ ವಿರುದ್ಧೈರ್ಲಕ್ಷಣೈರ್ಯುತಂ ॥೩॥**

ಪರಸ್ಪರ ವಿರುದ್ಧಗಳಾದ ಲಕ್ಷಣಗಳಿಂದ ಯುಕ್ತನಾಗಿರುವುದೇ ಪರಬ್ರಹ್ಮನ

ವಿಶೇಷ ಲಕ್ಷಣ. ಆದಪ್ರಯುಕ್ತ ಪರಸ್ಪರ ವಿರುದ್ಧಾರ್ಥಕವೆಂದು ತೋರುವ ವಾಕ್ಯವನ್ನು ಯಥಾರ್ಥ ವ್ಯಾಖ್ಯಾನದಿಂದ ಶ್ರೀಹರಿಯಲ್ಲಿ ಕೂಡಿಸಲು ಸಾಧ್ಯ.

ಬ್ರಹ್ಮನು ವಿರುದ್ಧಲಕ್ಷಣಗಳಿಂದ ಯುಕ್ತನೆನ್ನುವುದು ಅಯುಕ್ತವು. ನನ್ನ ತಾಯಿ ಬಂಜೆ ಎನ್ನುವಂತೆ ವ್ಯಾಹತವಾದುದು. ಅಣುತ್ವ ಮಹತ್ವಾದಿಗಳು ವಿರುದ್ಧವೆಂದರೆ ಅವುಗಳಿಂದ ಕೂಡಿದ್ದು ಒಂದೇ ಆಗಿರುವುದು ಹೇಗೆ ಸಾಧ್ಯ. ಒಬ್ಬನಲ್ಲಿಯೇ ಅವುಗಳು ಕೂಡಿವೆಯೆಂದರೆ ಅವು ವಿರುದ್ಧವಾಗಿರಲು ಹೇಗೆ ಸಾಧ್ಯ. ಅವಿರೋಧವಿದ್ದಾಗ ಮಾತ್ರ ಒಂದೆಡೆಯಲ್ಲಿ ಇರುವಿಕೆಯೆಂಬುದು ಕೂಡುವುದು. ಹೀಗೆ ಆಶಂಕಿಸಿದರೆ -

## ಅಣುತ್ವ-ಮಹತ್ವಾದಿ ಧರ್ಮಗಳಿಗೆ ಬ್ರಹ್ಮನಲ್ಲಿ ವಿರೋಧವಿಲ್ಲ

**ಬ್ರಹ್ಮ್ಯೈವ ತಾನಿ ಲಿಂಗಾನಿ ತದನ್ಯತ್ರ ತ್ವಸಂತ್ಯಪಿ ।**
**ಅವಿರೋಧೇನ ಗೋವಿಂದೇ ಸಂತ್ಯಸ್ಥೂಲಾದಿಕಾನಿ ಚ ।।೪।।**

ಬ್ರಹ್ಮನನ್ನು ಬಿಟ್ಟು ಇತರ ಕಡೆಗಳಲ್ಲಿ ಅಣುತ್ವ-ಮಹತ್ವಾದಿ ಲಕ್ಷಣಗಳು ಪರಸ್ಪರ ವಿರುದ್ಧವಾದುದರಿಂದಲೇ ಕೂಡಲಾರವು. ಆದರೆ ಬ್ರಹ್ಮನಲ್ಲಿ ಅದೇ ಲಕ್ಷಣಗಳು ಅವಿರೋಧವಾಗಿಯೇ ಒಟ್ಟಿಗೇ ಇರುತ್ತವೆ. ಅಣೋರಣೀಯಾನ್ ಇತ್ಯಾದಿ ಶ್ರುತಿಗಳೂ, ಯಶೋದ, ಅರ್ಜುನ ಮೊದಲಾದವರ ಪ್ರತ್ಯಕ್ಷವೂ ಇದಕ್ಕೆ ಪ್ರಮಾಣವಾಗಿದೆ. ಅಲ್ಲದೆ ಅಣುತ್ವ-ಮಹತ್ವಾದಿಗಳು ಬ್ರಹ್ಮನಲ್ಲಿ ಒಟ್ಟಿಗೇ ಇರುತ್ತವೆ ಎನ್ನುವುದನ್ನು ವಿರೋಧಿಸುವ ಯಾವದೇ ಪ್ರಮಾಣವೂ ಇರುವುದಿಲ್ಲ.

ಈ ಪ್ರಕಾರವಾಗಿ ಅಸ್ಥೂಲಾದಿ ಪದಗಳಿಗೆ ಅಣುತ್ವಾದಿ ಅರ್ಥವನ್ನು ಸ್ವೀಕರಿಸಿ ಶ್ರುತಿಗೆ ಬ್ರಹ್ಮವಿಷಯತ್ವವನ್ನು ಪ್ರತಿಪಾದಿಸಿದರು. ಈಗ ಸ್ಥೂಲತ್ವಾದಿ ನಿವೃತ್ತಿಪರವೆಂದು ಇಟ್ಟುಕೊಂಡರೂ ದೋಷವಿಲ್ಲ ಎಂಬ ಅಭಿಪ್ರಾಯದಿಂದ ಸೂತ್ರಕ್ಕೆ ವ್ಯಾಖ್ಯಾನ ಮಾಡುತ್ತಾರೆ.

## ಬ್ರಹ್ಮನಿಗೆ ಅಸ್ವಭಾವತ್ವವಿಲ್ಲ

**ಅನ್ಯವಸ್ತು ಸ್ವಭಾವಾನಾಂ ಸ್ಥೌಲ್ಯಾದೀನಾಮಪಾಕೃತಿಂ ।**
**ನಾರಾಯಣೇ ಶ್ರುತಿರ್ವಕ್ತಿ ನ ತು ತಸ್ಯಾಸ್ವಭಾವತಾಂ ।।೫।।**
**ಸರ್ವಧರ್ಮಾ ಸರ್ವನಾಮಾ ಸರ್ವಕರ್ಮಾ ಗುಣಾಃ ಶ್ರುತಾಃ ।**

**ದೋಷಾಃ ಶ್ರುತಾಶ್ಚ ನೇತ್ಯಾದ್ಯಾ ಪ್ರಮಾಣಂ ಶ್ರುತಿರತ್ರ ಚ ||೬||**

ಬ್ರಹ್ಮನ ದೆಶೆಯಿಂದ ಇತರವಾದ ಘಟಾದಿಗಳ ಸ್ವಭಾವಭೂತವಾದ ಸ್ಥೂಲತ್ವಾದಿ ಧರ್ಮಗಳು ನಾರಾಯಣನಲ್ಲಿ ಇಲ್ಲವೆಂದು ಅಸ್ಥೂಲಮನಣು ಇತ್ಯಾದಿ ಶ್ರುತಿಯು ಹೇಳುತ್ತದೆಯೇ ಹೊರತು ಅವನಿಗೆ ಅಸ್ವಭಾವತ್ವವನ್ನು ಹೇಳುವುದಿಲ್ಲ. ಹೀಗೇಕೆ ಅರ್ಥ ಮಾಡಬೇಕು ಎಂದರೆ - ಬ್ರಹ್ಮನು ಎಲ್ಲ ಧರ್ಮಗಳನ್ನೂ, ಎಲ್ಲ ನಾಮಗಳನ್ನೂ, ಎಲ್ಲ ಕರ್ಮಗಳನ್ನೂ ಹೊಂದಿರುವನು ಎಂಬುದಾಗಿ ಗುಣಗಳೇ ಶ್ರುತವಾಗಿವೆ. ಅವನಲ್ಲಿ ಯಾವುದೇ ದೋಷಗಳು ಶ್ರುತವಾಗಿಲ್ಲ. ಇದೇ ಮೊದಲಾದ ಶ್ರುತಿಯು ಈ ವಿಷಯದಲ್ಲಿ ಪ್ರಮಾಣವಾಗಿದೆ. ಬ್ರಹ್ಮನಲ್ಲಿರುವ ಸ್ಥೂಲತ್ವ-ಅಣುತ್ವ ಇತ್ಯಾದಿ ಧರ್ಮಗಳು ಅಪ್ರಾಕೃತವಾಗಿರುವುದರಿಂದ ಅವುಗಳಿಗೆ ವಿರೋಧವಿರುವುದಿಲ್ಲ.

ಈ ಪಾದದಲ್ಲಿ ಉಕ್ತವಾಗಿರುವ ಮುಂದಿನ ಸೂತ್ರಗಳಿಗೆ ಭಾಷ್ಯದಲ್ಲಿಯೇ ಸ್ಪಷ್ಟವಾಗಿ ವ್ಯಾಖ್ಯಾನ ಮಾಡಿರುವುರಿಂದ ಇಲ್ಲಿ ಹೇಳತಕ್ಕ ವಿಶೇಷಾಂಶಗಳೇನೂ ಇರುವುದಿಲ್ಲ. ಆದರೂ 'ಪರಮಾಖ್ಯವಿದ್ಯಾವ್ಯಾಖ್ಯಾಂ ಕರೋಮಿ' ಎಂದು ಈ ಗ್ರಂಥದಲ್ಲಿ ಪ್ರತಿಜ್ಞಾ ಮಾಡಿರುವುದರಿಂದ, ಇಲ್ಲಿ ಈ ಪಾದದ ಅಧಿಕರಣಗಳಿಗೆ ಸಂಬಂಧಿಸಿದಂತೆ ಪೂರ್ವಪಕ್ಷಯುಕ್ತಿ ಹಾಗೂ ಸಿದ್ಧಾಂತಯುಕ್ತಿಗಳನ್ನು ಸಂಗ್ರಹವಾಗಿ ತಿಳಿಸುತ್ತಾರೆ.

ಶ್ರೀಮಜ್ಜಯತೀರ್ಥರು ಶ್ರೀಮನ್ನ್ಯಾಯಸುಧಾದಲ್ಲಿ ಈ ಶ್ಲೋಕಗಳಿಗೆ ವ್ಯಾಖ್ಯಾನ ಮಾಡಿರುವುದಿಲ್ಲ. ಶ್ರೀಪರಿಮಳಾಚಾರ್ಯರು ಶ್ರೀಮದಾಚಾರ್ಯರ ಈ ಶ್ಲೋಕಗಳ ಭಾವವನ್ನು ತಮ್ಮ ಟಿಪ್ಪಣಿ ಪರಿಮಳದಲ್ಲಿ ಸ್ವಲ್ಪ ವಿವರವಾಗಿ ತಿಳಿಸಿಕೊಟ್ಟಿದ್ದಾರೆ. ಅದರ ತಾತ್ಪರ್ಯವನ್ನು ಇಲ್ಲಿ ನೀಡಲಾಗಿದೆ.

**ಲಿಂಗಂ ಸಾಧಾರಣ ಶಬ್ದೌ ಸ್ಥಾನಂ ಲಿಂಗಮನುಗ್ರಹಃ |**

**ಪುನಃ ಶಬ್ದಾ ಲಿಂಗಶಬ್ದೌ ವಿಚಾರ್ಯಾ ದ್ವಿಃಸ್ಥಿತಾ ಇಹ ||೭||**

ದ್ಯುಭ್ವಾದ್ಯಧಿಕರಣದಲ್ಲಿ ಸರ್ವಾಧಾರತ್ವ ಲಿಂಗವೂ, ಭೂಮ ಮತ್ತು ಅಕ್ಷರಾಧಿಕರಣಗಳಲ್ಲಿ ಆಯಾಯ ನಾಮಾತ್ಮಕ ಶಬ್ದಗಳು, ಈಕ್ಷತ್ಯಧಿಕರಣದಲ್ಲಿ ಸೃಷ್ಟಿಸ್ಥಾನವು ಅಂದರೆ ಸೃಷ್ಟ್ಯರ್ಥವಾಗಿ ಪ್ರಲಯಕಾಲದಲ್ಲಿ ಇರುವಿಕೆಯು, ದಹರಾಧಿಕರಣದಲ್ಲಿ ಹೃತ್ಪದ್ಮದಲ್ಲಿ ಇರುವಿಕೆ ಎಂಬ ಲಿಂಗವು,

ಅನುಕೃತ್ಯಧಿಕರಣದಲ್ಲಿ ಆನುಕೂಲ್ಯ ಗ್ರಹಣ ಎಂಬ ಲಿಂಗವು, ಮತ್ತೆ ಶಬ್ದಾದೇವ ಪ್ರಮಿತಃ, ಕಂಪನಾತ್, ಜ್ಯೋತಿಃ, ಆಕಾಶ ಎಂಬ ನಾಲ್ಕು ಅಧಿಕರಣಗಳಲ್ಲಿ ಕ್ರಮವಾಗಿ ಈಶಾನ-ವಜ್ರ-ಜ್ಯೋತಿ-ಆಕಾಶ ಶಬ್ದಗಳು, ಸುಷುಪ್ತ್ಯಧಿಕರಣದಲ್ಲಿ ಸ್ವಪ್ನಾದಿ ದ್ರಷ್ಟೃತ್ವ ಲಿಂಗ, ಪತ್ಯಧಿಕರಣದಲ್ಲಿ ಬ್ರಾಹ್ಮಣ ಶಬ್ದ ಈ ಪ್ರಕಾರವಾಗಿ ಈ ಮೂರನೆಯ ಪಾದದ ಅಧಿಕರಣಗಳಲ್ಲಿ ಉಭಯತ್ರ ಸಾಧಾರಣವಾಗಿರುವ ಧರ್ಮಗಳು ವಿಚಾರ ಮಾಡಲ್ಪಡುತ್ತವೆ.

ಅಧಿಕರಣಗಳಲ್ಲಿ ಸೂಚಿತವಾಗಿರುವ ಪೂರ್ವಪಕ್ಷ ನ್ಯಾಯಗಳು

**ಬಾಹುಲ್ಯಂ ಲಿಂಗಶಬ್ದಾನಾಮನುಕ್ತಿಶ್ಚ ವಿರುದ್ಧತಾ ।**
**ಅದೃಷ್ಟಿರನ್ವಯಾಭಾವೋ ವಿಪರೀತಶ್ರುತಿಭ್ರಮಃ ॥೮॥**
**ಲಿಂಗಾವಕಾಶರಾಹಿತ್ಯಭ್ರಮಸ್ತಾದೃಗ್ದ್ವಯಂ ತಥಾ ।**
**ಬಹುತಾದ್ಯಕ್ಷಮುಕ್ತಸ್ಯ ವಿರೋಧೋಽರ್ಥಾತ್ತಥಾಗತಿಃ ॥೯॥**
**ಸಮಸ್ತಮೇತದಿತ್ಯತ್ರ ಪೂರ್ವಪಕ್ಷೇಷು ಯುಕ್ತಯಃ ।**
**ತಾ ಏವ ಬಲವತ್ಯಸ್ತು ಗತ್ಯಂತರವಿವರ್ಜಿತಾಃ ॥೧೦॥**
**ಸಿದ್ಧಾಂತಯುಕ್ತಯೋ ಜ್ಞೇಯಾ ದೃಶ್ಯಂತೇ ತಾಶ್ಚ ಸರ್ವಶಃ ।**

ದ್ಯುಭ್ವಾದ್ಯಧಿಕರಣದಲ್ಲಿ ದ್ಯುಭುವಾಶ್ರಯತ್ವಾದಿ ಲಿಂಗಪ್ರತಿಪಾದಕಶಬ್ದಗಳಿಗೆ ರುದ್ರಾದಿ ಪ್ರತಿಪಾದಕಶ್ರುತಿಗಳ ಲಿಂಗಬಾಹುಲ್ಯವು, ಭೂಮಾಧಿಕರಣದಲ್ಲಿ ಪ್ರಾಣನ ದೆಶೆಯಿಂದ ಮತ್ತೊಬ್ಬ ಶ್ರೇಷ್ಠನನ್ನು ಹೇಳದಿರುವುದು, ಅಕ್ಷರಾಧಿಕರಣದಲ್ಲಿ ಅತೃತ್ತ್ವವನ್ನು ಹೇಳಿ 'ನ ತದಶ್ನಾತಿ ಕಿಂಚನ' ಎಂಬುದಾಗಿ ವಿರೋಧ ಹೇಳುವುದು, ಈಕ್ಷತ್ಯಧಿಕರಣದಲ್ಲಿ ಜಗತ್ತಿಗಿಂತ ಅತ್ಯಂತ ಭಿನ್ನನಾದ ಶ್ರೀಹರಿಗೆ ಪ್ರಪಂಚರೂಪದಿಂದ ಪರಿಣಾಮವು, ದಹರಾಧಿಕರಣದಲ್ಲಿ ವಾಕ್ಯಗಳಿಗೆ ಅನ್ವಯವಿಲ್ಲವೆಂದು ಹೇಳುವುದು, ಅನುಕೃತ್ಯಧಿಕರಣದಲ್ಲಿ 'ಕಥಂ ನು ತದಿತಿ' ಎನ್ನುವ ತತ್ ಶಬ್ದ ಶ್ರುತಿಯು ಜ್ಞಾನಿಸುಖ ಪರಾಮರ್ಶೆಯನ್ನು ಮಾಡುವುದರಿಂದ ಪರಮಾತ್ಮನಿಗೆ ಸಂಬಂಧಿಸಿಲ್ಲ ಎನ್ನುವ ಭ್ರಮೆಯು, ಶಬ್ದಾದೇವ ಎನ್ನುವ ಅಧಿಕರಣದಲ್ಲಿ ಪ್ರಾಣಾಪಾನನೇತೃತ್ವಾದಿ ಲಿಂಗಗಳಿಗೆ ಪ್ರಾಣನಿಂದ ಇತರನಾದ ವಿಷ್ಣುವಿನಲ್ಲಿ ಅವಕಾಶವಿಲ್ಲವೆನ್ನುವ ಭ್ರಮೆಯು, ಕಂಪನಾಧಿಕರಣದಲ್ಲಿ ವಜ್ರಶಬ್ದ ಮತ್ತು ಉದ್ಯತತ್ವ ಎನ್ನುವ ನಿರವಕಾಶ ಶ್ರುತಿ

ಮತ್ತು ಲಿಂಗಗಳು, ಜ್ಯೋತಿರಧಿಕರಣದಲ್ಲಿ ಜೀವಪ್ರಾಪಕವಾದ ಬಹಳವಾದ ಲಿಂಗಗಳಿರುವುದರಿಂದ ಜೀವನಿಂದ ಇತರನಾದ ಪರಮಾತ್ಮನಲ್ಲಿ ಅವಕಾಶವು ಇಲ್ಲವೆಂದು ಹೇಳುವುದು, ಆಕಾಶಾಧಿಕರಣದಲ್ಲಿ ಆಕಾಶ ಶಬ್ದಕ್ಕೆ ರೂಢಿಯನ್ನು ಬಿಟ್ಟು ವಿಷ್ಣುಪರವಾದ ಯೌಗಿಕಾರ್ಥವನ್ನು ಸ್ವೀಕರಿಸುವುದಕ್ಕೆ ವಿರೋಧವು, ಸುಷುಪ್ತಿ ಅಧಿಕರಣದಲ್ಲಿ ಜೀವೇಶ್ವರರಿಗೆ ಅಭೇದವಿರುವ ಪ್ರಯುಕ್ತ ಶ್ರುತಿಯು ಈಶ್ವರನನ್ನು ಕುರಿತು ಹೇಳಿದರೂ ಅದು ಜೀವನ ವಿಷಯಕವೆಂಬುದಾಗಿ ಅರ್ಥ ಮಾಡುವುದು, ಪತ್ಯಧಿಕರಣದಲ್ಲಿ ನಿರವಕಾಶವಾದ ಎರಡು ಶ್ರುತಿಗಳಿರುವುದರಿಂದ ಚತುರ್ಮುಖನಿಗೂ ಪರಮಾತ್ಮನಿಗೂ ಅಭೇದವನ್ನು ಹೇಳದೇ ಗತಿಯಿಲ್ಲವೆಂದು - ಇವೆಲ್ಲವೂ ಕ್ರಮವಾಗಿ ಈ ಪಾದದ ಪ್ರಥಮ ಹನ್ನೆರಡು ಅಧಿಕರಣಗಳಲ್ಲಿ ಉಕ್ತವಾಗಿರುವ ಪೂರ್ವಪಕ್ಷ ಯುಕ್ತಿಗಳು ಎಂದು ತಿಳಿಯಬೇಕು.

### ಸೂತ್ರಗಳಲ್ಲಿ ಸೂಚಿತವಾಗಿರುವ ಸಿದ್ಧಾಂತನ್ಯಾಯಗಳು

**ಮುಕ್ತೋಪಸೃಪ್ಯತಾ ಪ್ರಾಣಾದಾಧಿಕ್ಯಂ ಸರ್ವತಸ್ತಥಾ ||೧೧||**
**ವೈಲಕ್ಷಣ್ಯಂ ಸ್ವಭಾವಸ್ಯ ಪ್ರೇಕ್ಷಾಪೂರ್ವಾ ಕ್ರಿಯಾ ತಥಾ |**
**ಅರಸ್ಯ ಣ್ಯಸ್ಯ ಚೇಶತ್ವಂ ಸೂರ್ಯಾದ್ಯನುಕೃತಿಸ್ತಥಾ ||೧೨||**
**ವಾಮನಾಖ್ಯಾ ಸರ್ವಕಂಪಸ್ತಚ್ಛಬ್ದಾನನ್ಯಸಿದ್ಧತಾ |**
**ಅನಾಮರೂಪತಾ ಭೇದಸ್ಯೋಪಜೀವ್ಯಪ್ರಮಾಣತಾ ||೧೩||**
**ಸರ್ವೈಶ್ವರ್ಯಾದಿಕಾದ್ಯಾಸ್ತಾ ವೇದೇಶೇನ ಪ್ರದರ್ಶಿತಾಃ |**

'ಮುಕ್ತೋಪಸೃಪ್ಯವ್ಯಪದೇಶಾತ್' ಎನ್ನುವ ೨ನೇ ಸೂತ್ರದಿಂದ ವಿಷ್ಣುವಿಗೆ ಮುಕ್ತಪ್ರಾಪ್ಯತ್ವವೂ, 'ಭೂಮಾ ಸಂಪ್ರಸಾದಾದಧ್ಯುಪದೇಶಾತ್' ಎನ್ನುವ ೮ನೇ ಸೂತ್ರದಿಂದ ಪ್ರಾಣನೂ ಸೇರಿದಂತೆ ಸರ್ವವಸ್ತುಗಳಿಂದಲೂ ಉತ್ತಮತ್ವವೂ, 'ಅನ್ಯಭಾವವ್ಯಾವೃತ್ತೇಶ್ಚ' ಎನ್ನುವ ೧೨ನೇ ಸೂತ್ರದಿಂದ ಶ್ರೀಹರಿಗೆ ಅನ್ಯವಸ್ತುಗಳ ಧರ್ಮಗಳ ದೆಶೆಯಿಂದ ಎಲ್ಲ ರೀತಿಯಿಂದ ವೈಲಕ್ಷಣ್ಯವೂ, ಹಾಗೆಯೇ 'ಅಕ್ಷರಂಬರಾಂತಧೃತೇಃ' ಎನ್ನುವ ೧೦ನೇ ಸೂತ್ರದಿಂದ ಆಕಾಶಾಂತವಾದ ಸಮಸ್ತ ಪ್ರಪಂಚಧಾರಕತ್ವವೂ, 'ಈಕ್ಷತಿಕರ್ಮವ್ಯಪದೇಶಾತ್ಸಃ' ಎನ್ನುವ ೧೩ನೇ ಸೂತ್ರದಿಂದ ಪ್ರೇಕ್ಷಾಪೂರ್ವಕವಾದ ಸೃಷ್ಟ್ಯಾದಿ

ವ್ಯಾಪಾರಗಳೂ, ಹಾಗೆಯೇ 'ದಹರ ಉತ್ತರೇಭ್ಯಃ' ಎನ್ನುವ ೧೪ನೇ ಸೂತ್ರದಿಂದ ಪಾಪಾದಿಗಳ ಅತ್ಯಂತ ಅಭಾವವೂ, 'ಗತಿ ಶಬ್ದಾಭ್ಯಾಂ ತಥಾಹಿ ದೃಷ್ಟಂ ಲಿಂಗಂ ಚ' ಎನ್ನುವ ೧೫ನೇ ಸೂತ್ರದಿಂದ ಅಮೃತ(ಅರ) ಮತ್ತು ಸಮುದ್ರ(ಣ್ಯ)ಗಳಿಗೆ ನಿಯಾಮಕತ್ವವೂ, 'ಅನುಕೃತೇಸ್ತಸ್ಯ ಚ' ಎನ್ನುವ ೨೨ನೇ ಸೂತ್ರದಿಂದ ಸರ್ವಪ್ರಕಾಶಕತ್ವವೂ, 'ಶಬ್ದಾದೇವ ಪ್ರಮಿತಃ' ಎನ್ನುವ ೨೪ನೇ ಸೂತ್ರದಿಂದ ವಾಮನ ಎಂಬ ನಾಮಧೇಯವೂ, 'ಕಂಪನಾತ್' ಎನ್ನುವ ೩೯ನೇ ಸೂತ್ರದಿಂದ ಸರ್ವಜಗಚ್ಚೇಷ್ಟಕತ್ವವೂ, 'ಜ್ಯೋತಿರ್ದರ್ಶನಾತ್' ಎನ್ನುವ ೪೦ನೇ ಸೂತ್ರದಿಂದ ಜ್ಯೋತಿ ಶಬ್ದಕ್ಕೆ ವಿಷ್ಣುವನ್ನು ಬಿಟ್ಟು ಬೇರೆ ಕಡೆಗಳಲ್ಲಿ ಅಸಂಭವತ್ವವೂ, 'ಆಕಾಶೋಽರ್ಥಾಂತರತ್ವಾದಿ ವ್ಯಪದೇಶಾತ್' ಎನ್ನುವ ೪೧ನೇ ಸೂತ್ರದಿಂದ ನಾಮಾತ್ಮಕ ಹಾಗೂ ರೂಪಾತ್ಮಕವಾದ ಪ್ರಪಂಚದ ದೆಶೆಯಿಂದ ಭೇದವೂ, 'ಸುಷುಪ್ತ್ಯುತ್ಕ್ರಾಂತ್ಯೋರ್ಭೇದೇನ' ಎನ್ನುವ ೪೨ನೇ ಸೂತ್ರದಿಂದ ಭೇದಕ್ಕೆ ಉಪಜೀವ್ಯಪ್ರಮಾಣತ್ವವೂ, 'ಪತ್ಯಾದಿಶಬ್ದೇಭ್ಯಃ' ಎನ್ನುವ ೪೩ನೇ ಸೂತ್ರದಿಂದ ಸರ್ವೈಶ್ವರ್ಯ ಸರ್ವಾಧಿಪತ್ಯ ಮೊದಲಾದವುಗಳೂ, ಹೀಗೆ ವೇದನಿಯಾಮಕರಾದ ಶ್ರೀ ವೇದವ್ಯಾಸರಿಂದ ಸಿದ್ಧಾಂತಯುಕ್ತಿಗಳು ಸೂತ್ರಗಳಿಂದ ತೋರಿಸಲ್ಪಟ್ಟಿವೆ.

ಭಾಷ್ಯದ ಪ್ರಕಾರ ಈ ಪಾದದಲ್ಲಿ ಹದಿನಾಲ್ಕು ಅಧಿಕರಣಗಳಿವೆಯೆಂದು ಪ್ರತಿಪಾದಿತವಾಗಿದೆ. ಆದರೆ ಇಲ್ಲಿ ಪೂರ್ವಪಕ್ಷ ಹಾಗೂ ಸಿದ್ಧಾಂತ ನ್ಯಾಯಗಳು ಕೇವಲ ಹನ್ನೆರಡು ಅಧಿಕರಣಗಳಿಗೆ ಸರಿಹೊಂದುವಂತೆ ಹೇಳಲ್ಪಟ್ಟಿವೆ. ವಿಷಯಾದಿಗಳಿಲ್ಲದೆ ಅಧಿಕರಣವು ಕೂಡುವುದಿಲ್ಲ. ಈ ಪಾದದಲ್ಲಿ ಸೇರಿರುವ ದೇವತಾಧಿಕರಣ ಮತ್ತು ಅಪಶೂದ್ರಾಧಿಕರಣ ಎನ್ನುವ ಎರಡು ಅಧಿಕರಣಗಳು ಸಮನ್ವಯವನ್ನು ಹೇಳುವುದಿಲ್ಲ. ಇವು ಅಧಿಕಾರ-ಅನಧಿಕಾರಗಳನ್ನು ಹೇಳುವುದರಿಂದ ಸಮನ್ವಯಾಧ್ಯಾಯದಲ್ಲಿಯೇ ಕೂಡುವುದಿಲ್ಲ ಎಂದಮೇಲೆ ಈ ಪಾದದಲ್ಲಿ ಅವು ಹೇಗೆ ಸಂಗತವಾಗುತ್ತವೆ ಎಂದು ಪ್ರಶ್ನಿಸಿದರೆ -

**ಅಧಿಕಾರಶ್ಚ ತದ್ಧಾನಿಃ ಪ್ರಸಂಗಾದೇವ ಚಿಂತಿತೌ ॥೧೪॥**

ಈ ಪಾದದಲ್ಲಿ ಅಂತರ್ಭಾವರೂಪವಾದ ಸಂಗತಿಯು ಇಲ್ಲವಾದರೂ,

ವೇದವಿದ್ಯೆಯಲ್ಲಿ ದೇವತೆಗಳಿಗೆ ಅಧಿಕಾರವುಂಟು, ಶೂದ್ರರಿಗೆ ಇಲ್ಲ ಎನ್ನುವ ವಿಷಯವು ಪ್ರಸಂಗರೂಪವಾದ ಸಂಗತಿಯು ಇರುವುದರಿಂದಲೇ ಇಲ್ಲಿ ವಿಚಾರ ಮಾಡಲ್ಪಟ್ಟವೆ.

ದೇವತೆಗಳಿಗೆ ವೈದಿಕ ಉಪಾಸನಾದಿಗಳಲ್ಲಿ ಅಧಿಕಾರವಿಲ್ಲ. ಏಕೆಂದರೆ, ದೇವತಾ ಪದವಿಯಲ್ಲಿರುವ ಅವರಿಗೆ ಉಪಾಸನಾದಿಗಳ ಫಲದ ಅಪೇಕ್ಷೆಯೇ ಇರುವುದಿಲ್ಲ. ಫಲದ ಕಾಮನೆ ಇರುವವರಿಗೆ ಮಾತ್ರ ಉಪಾಸನಾದಿ ವೈದಿಕ ವಿಧಿಯು ಹೇಳಲ್ಪಟ್ಟದೆ. ಹೀಗೆ ಜೈಮಿನ್ಯಾಚಾರ್ಯರು ಅಭಿಪ್ರಾಯ ಪಡುತ್ತಾರೆ. ಇದನ್ನು ನಿರಾಕರಿಸಿ ದೇವತೆಗಳಿಗೂ ಮಧು ಮೊದಲಾದ ಎಲ್ಲ ವೈದಿಕ ವಿದ್ಯೆಗಳಲ್ಲಿಯೂ ಅಧಿಕಾರವಿದೆ ಎಂದು ಸಮರ್ಥಿಸಬೇಕಾಗಿದೆ. ಜೊತೆಗೆ ಶೂದ್ರಾದಿಗಳಿಗೆ ವೇದೋಕ್ತ ಮಧುವಿದ್ಯಾದಿಗಲ್ಲಿ ಅಧಿಕಾರವಿಲ್ಲ ಎನ್ನುವುದನ್ನೂ ಸ್ಥಾಪಿಸಬೇಕಾಗಿದೆ. ಈ ಪ್ರಕಾರವಾಗಿ ಸಂಗತಿಯು ಇರುವುದರಿಂದ ಮೇಲೆ ಆಕ್ಷೇಪಿಸಲಾದ ಎರಡು ಅಧಿಕರಣಗಳಿಗೂ ಈ ಪಾದದಲ್ಲಿ ಅವಕಾಶ ಕೊಟ್ಟಿರುವುದು ಸುಸಂಗತವೇ ಆಗುವುದು.

## ದೇವತಾಧಿಕರಣ

**ಸೂತ್ರ: ಓಂ ಮಧ್ವಾದಿಷ್ವಸಂಭವಾದನಧಿಕಾರಂ ಜೈಮಿನಿಃ ಓಂ (೧-೩-೩೧)**

**ಸೂತ್ರ: ಓಂ ಜ್ಯೋತಿಷಿ ಭಾವಾಚ್ಚ ಓಂ (೧-೩-೩೨)**

ದೇವತೆಗಳಿಗೆ ವೇದವಿದ್ಯಾಧಿಕಾರವನ್ನು ಆಕ್ಷೇಪಿಸುವುದೇ ಈ ಅಧಿಕರಣದ ಮೊದಲೆರಡು ಸೂತ್ರಗಳ ವಿಷಯ.

ಮಧುವಿದ್ಯಾದಿ ವೈದಿಕವಿದ್ಯೆಗಳಲ್ಲಿ ದೇವತೆಗಳಿಗೆ ಅಧಿಕಾರವಿಲ್ಲವೆಂದು ಜೈಮಿನ್ಯಾಚಾರ್ಯರು ತಿಳಿಯುತ್ತಾರೆ. ದೇವತಾ ಪದವಿಯನ್ನು ಗಳಿಸುವಾಗಲೇ ಮೋಕ್ಷೇತರವಾದ ಫಲಗಳೂ ಅವರಿಗೆ ಸಿಕ್ಕಿರುತ್ತವೆ. ಆದ್ದರಿಂದ ಅವರಿಗೆ ಫಲಗಳ ಕಾಮನೆಯಿರುವುದಿಲ್ಲ. ಆದಪ್ರಯುಕ್ತ ದೇವತೆಗಳಿಗೆ ವೇದವಿದ್ಯೆಗಳಲ್ಲಿ ಅಧಿಕಾರ ಕೂಡುವುದಿಲ್ಲ. ದೇವತೆಗಳು ಸರ್ವಜ್ಞರಾದ ಪ್ರಯುಕ್ತ ಮೋಕ್ಷಾರ್ಥ ವಿದ್ಯೆಯಲ್ಲಿಯೂ ಅವರಿಗೆ ಅಧಿಕಾರವಿರುವುದಿಲ್ಲ. ಏಕೆಂದರೆ ಮೋಕ್ಷಾರ್ಥ ವಿದ್ಯೆಯಿಂದ ಸಾಧ್ಯವಾದ ಜ್ಞಾನವನ್ನು ಅವರು ಪದವಿಪ್ರಾಪ್ತವಾಗುವಾಗಲೇ ಪಡೆದಿರುತ್ತಾರೆ.

## ದೇವತೆಗಳಿಗೂ ವೇದವಿದ್ಯಾಧಿಕಾರವುಂಟು

ಜೈಮಿನ್ಯಾಚಾರ್ಯರ ಮೇಲಿನ ಅಭಿಪ್ರಾಯವನ್ನು ನಿರಾಕರಿಸಿ ದೇವತೆಗಳಿಗೆ ವೇದವಿದ್ಯಾಧಿಕಾರವುಂಟು ಎನ್ನುವುದನ್ನು ಸಮರ್ಥಿಸಲು ಮುಂದಿನ ಸೂತ್ರ.

**ಸೂತ್ರ: ಓಂ ಭಾವಂ ತು ಬಾದರಾಯಣೋಽಸ್ತಿ ಓಂ (೧-೩-೩೩)**

ಮೋಕ್ಷಫಲ ಮತ್ತು ಅದಕ್ಕೆ ಕಾರಣವಾದ ಜ್ಞಾನದಲ್ಲಿಯೂ ಅತಿಶಯವಿರುವುದರಿಂದ ದೇವತೆಗಳಿಗೆ ವೇದವಿದ್ಯಾಧಿಕಾರವುಂಟು ಎಂದು ಬಾದರಾಯಣರು (ವೇದವ್ಯಾಸರು) ತಿಳಿಯುತ್ತಾರೆ.

## ಜೈಮಿನಿ ಮತ್ತು ಬಾದರಾಯಣರ ಮತಗಳಿಗೆ ವಿರೋಧವಿಲ್ಲ

ಮೇಲೆ ಹೇಳಿದ ಸೂತ್ರದಲ್ಲಿ ಜೈಮಿನಿ ವಚನಕ್ಕೆ ಸೂಕ್ತವಾದ ಪರಿಹಾರ ಸೂಚಿತವಾಗಿಲ್ಲ. ಬಾದರಾಯಣರ ಮತಕ್ಕೆ ವಿರುದ್ಧವಾಗಿರುವುದರಿಂದ ಅದು ಅಪ್ರಮಾಣವೆಂದು ತಿಳಿಯಬೇಕೋ ಎಂದು ಕೇಳಿದರೆ, ಹಾಗೆ ಹೇಳಕೂಡದು. ವಿಷಯಗಳು ಬೇರೆಬೇರೆಯಾಗಿರುವುದರಿಂದ ಜೈಮಿನಿಯವರ ಅಭಿಪ್ರಾಯಕ್ಕೂ ಬಾದರಾಯಣರಿಗೂ ವಿರೋಧವಿಲ್ಲ ಎನ್ನುತ್ತಾರೆ -

**ತತ್ಫಲಾಯ ವಿಧಿಃ ಸಿದ್ಧೇ ಚೋಪಾಸಾಯ ನಿರಾಕೃತಃ ।**
**ಯತೋ ಜೈಮಿನಿನಾಽನ್ಯಾರ್ಥಮಸಿದ್ಧೇಽರ್ಥೇ ವಿಧಿಸ್ತಥಾ ॥೧೫॥**
**ವಿದ್ಯಾಧಿರಾಜಸ್ಯ ಮತಮವಿರೋಧಸ್ತತಸ್ತಯೋಃ ।**

'ಸ ಏತದೇವಾಮೃತಂ ವೇದ ವಸೂನಾಮೇವೈಕೋ ಭೂತ್ವಾ ಅಗ್ನಿನೈವ ಮುಖೇನೈತೇದೇವಾಮೃತಂ ದೃಷ್ಟ್ವಾ ತೃಪ್ಯತಿ' ಇತ್ಯಾದಿ ಶ್ರುತಿಸಿದ್ಧವಾದ ವಸುಪದ ಪ್ರಾಪ್ತಿಯೇ ಮೊದಲಾದ ಫಲಕ್ಕೋಸ್ಕರ ಜ್ಞಾತವಾದ ಬ್ರಹ್ಮಸ್ವರೂಪದ ವಿಷಯದಲ್ಲಿ ಉಪಾಸನಾ ವಿಧಿಯು ಜೈಮಿನ್ಯಾಚಾರ್ಯರಿಂದ ನಿರಾಕರಿಸಲ್ಪಟ್ಟಿದೆ. ಅನ್ಯಫಲಕ್ಕೋಸ್ಕರ, ಅಜ್ಞಾತವಾದ ಬ್ರಹ್ಮನ ಗುಣಾದಿಗಳ ವಿಷಯದಲ್ಲಿ ಉಪಾಸನೆಯು ವಿದ್ಯಾಧಿರಾಜರಾದ ವೇದವ್ಯಾಸರಿಂದ ವಿಧಿಸಲ್ಪಟ್ಟಿದೆ. ಆದಕಾರಣ ಅವರ ಮತಗಳಲ್ಲಿ ವಿರೋಧವಿರುವುದಿಲ್ಲ.

ಹಾಗಾದರೆ ಅನ್ಯಫಲವೆಂದರೇನು? ಸರ್ವಜ್ಞರಾದ ದೇವತೆಗಳಿಗೂ ಉಪಾಸನಾ ವಿಧಿಗೆ ಕಾರಣವಾದ ಅಸಿದ್ಧವಾದ ಅರ್ಥವು ಹೇಗೆ ಕೂಡುವುದು ಎಂದರೆ -

**ಮೋಕ್ಷೇ ಫಲವಿಶೇಷೋಽಸ್ತಿ ನ ಚ ಸರ್ವಂ ಪ್ರಕಾಶತೇ ॥೧೬॥**

**ಸರ್ವದಾ ತೇನ ದೇವಾನಾಮಪಿ ಯಕ್ತಾ ಹ್ಯುಪಾಸನಾ ।**

ಮೋಕ್ಷದಲ್ಲಿಯೂ ಫಲವಿಶೇಷವಿದೆ. ಬ್ರಹ್ಮನ ಎಲ್ಲ ಗುಣಸಮೂಹವೂ ದೇವತೆಗಳಿಗೆ ಯಾವಾಗಲೂ ಪ್ರಕಾಶಿಸುವುದಿಲ್ಲ. ಯಾವುದು ಪ್ರಕಾಶಿಸುತ್ತದೋ ಅದೂ ಕೂಡ ಸದಾ ಪ್ರಕಾಶವಾಗುವುದಿಲ್ಲ. ಆಗಾಗ ತಿರೋಹಿತವಾಗುವುದು. ಆದಪ್ರಯುಕ್ತ ತಿರೋಹಿತವಾದುದು ಪುನಃ ಪ್ರಕಾಶಿಸುವುದಕ್ಕಾಗಿಯೂ ಹಾಗೂ ಮುಕ್ತಿಯಲ್ಲಿ ಸುಖವಿಶೇಷರೂಪದ ಫಲಕ್ಕಾಗಿ ಅಜ್ಞಾತವಾದ ಗುಣವಿಶೇಷಗಳ ಪ್ರಕಾಶನಕ್ಕಾಗಿಯೂ ದೇವತೆಗಳಿಗೂ ಉಪಾಸನೆಯು ಯುಕ್ತವೇ ಆಗುವುದು.

## ಪರಮೇಶ್ವರನಿಂದ ಇತರರು ಸರ್ವಜ್ಞರಲ್ಲ

ಸರ್ವಜ್ಞರಾದ ದೇವತೆಗಳಿಗೆ ಸರ್ವವೂ ಪ್ರಕಾಶಿಸುವುದಿಲ್ಲ ಎನ್ನುವುದು ಕೂಡುವುದಿಲ್ಲ ಎಂದರೆ ಹಾಗೆ ಹೇಳಕೂಡದು. ಏಕೆಂದರೆ ಪರಮೇಶ್ವರನಿಂದ ಇತರರಾದವರಿಗೆ ಸರ್ವಜ್ಞತ್ವವೇ ಸಿದ್ಧವಾಗದು ಎನ್ನುತ್ತಾರೆ -

**ನಿತ್ಯಂ ವೃದ್ಧಿಕ್ಷಯಾಪೇತಂ ವಿಷ್ಣೋಃ ಪೂರ್ಣಂ ತು ವೇದನಂ ॥೧೭॥**

**ಸ್ಪಷ್ಟಾತಿಸ್ಪಷ್ಟವಿಶದಂ ಬ್ರಹ್ಮಣೋಽಶೇಷವಸ್ತುಗಂ ।**

**ಅನ್ಯೇಷಾಂ ಕ್ರಮಶೋ ಜ್ಞಾನಂ ಮಿತವಸ್ತುಗತಂ ಸದಾ ॥೧೮॥**

ಸದಾಕಾಲವೂ ವೃದ್ಧಿಕ್ಷಯರಹಿತವಾದ ಸರ್ವವಿಷಯಕವಾದ ನಿರತಿಶಯ ಸ್ಪಷ್ಟವಾದ ಜ್ಞಾನವು ವಿಷ್ಣುವಿಗೆ ಮಾತ್ರ ಇರುವುದು. ಚತುರ್ಮುಖ ಬ್ರಹ್ಮನಿಗೆ ಪರ್ಯಾಲೋಚನೆಯಿಂದ ವಿಷ್ಣುವ್ಯತಿರಿಕ್ತ ಅಶೇಷ ವಸ್ತುವಿಷಯಕ ಜ್ಞಾನವಿದೆ. ಇತರ ದೇವತೆಗಳಿಗೆ ಪರಮೇಶ್ವರಾತಿರಿಕ್ತ ಅಶೇಷ ವಸ್ತುವಿಷಯಕ ಜ್ಞಾನವು ಅಸಂಭವ. ಆಯಾ ದೇವತೆಗಳ ಯೋಗ್ಯತೆ ಹಾಗೂ ಉಪಾಸನೆಗಳಿಗೆ ತಕ್ಕಂತೆ ಕ್ರಮವಾದ ವಸ್ತುವಿಷಯಕ ಜ್ಞಾನವು ಯಾವಾಗಲೂ ಇರುವುದು.

**ಇತ್ಯಾದಯೋ ವಿಶೇಷಾಸ್ತು ಸದಾ ವಿದ್ಯಾಪತೇರ್ಹೃದಿ ।**

**ಜೈಮಿನ್ಯಾದ್ಯಾಸ್ತು ಸಾಮಾನ್ಯವೇತ್ತೃತ್ವಾತ್ತಥಾಽವದನ್ ।**

**ವಿದ್ಯೇಶಮತಮೇತಸ್ಮಾನ್ನೈವ ಸದ್ಭಿರ್ವಿರುದ್ಧ್ಯತೇ ॥೧೯॥**

ಬ್ರಹ್ಮಾದಿ ಎಲ್ಲ ದೇವತೆಗಳ ಜ್ಞಾನದಲ್ಲಿನ ಕ್ರಮವಿಶೇಷತೆಗಳ ಸಂಪೂರ್ಣವಾದ ತಿಳಿವಳಿಕೆಯು ಸರ್ವಜ್ಞರಾದ ವೇದವ್ಯಾಸರ ಮನಸ್ಸಿನಲ್ಲಿ

ಯಾವಾಗಲೂ ಇರುತ್ತದೆ. ಜೈಮಿನ್ಯಾದಿಗಳು ಯೋಗ್ಯರೇ ಆಗಿದ್ದರೂ ಎಲ್ಲ ದೇವತೆಗಳ ಬಗ್ಗೆ ಸಾಮಾನ್ಯವಾದ ಜ್ಞಾನವನ್ನು ಹೊಂದಿರುವ ಕಾರಣ 'ದೇವತೆಗಳಿಗೆ ವೇದವಿದ್ಯೆಗಳ ಉಪಾಸನೆಯಲ್ಲಿ ಅಧಿಕಾರವಿಲ್ಲ' ಎಂದು ಹೇಳಿದರು. ಆದಪ್ರಯುಕ್ತ ಜೈಮಿನ್ಯಾದಿಗಳ ಮತವು, 'ಮೋಕ್ಷದಲ್ಲಿ ವಿಶೇಷ ಫಲಕ್ಕೋಸ್ಕರ ದೇವತೆಗಳಿಗೆ ಉಪಾಸನೆ ಕೂಡುವುದು' ಎನ್ನುವ ವೇದವ್ಯಾಸರ ಮತವನ್ನು ವಿರೋಧಿಸಲಾರದು.

**॥ ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತೇ ಶ್ರೀಮದನುವ್ಯಾಖ್ಯಾನೇ ಪ್ರಥಮಾಧ್ಯಾಯಸ್ಯ ತೃತೀಯಃ ಪಾದಃ ॥**

**॥ ಇಲ್ಲಿಗೆ ಶ್ರೀಮನ್ನ್ಯಾಯಸುಧಾ ಟೀಕಾನುಸಾರಿ ವಿವರಣೆ ಸಹಿತ ರಚಿತವಾದ ಶ್ರೀಮದನುವ್ಯಾಖ್ಯಾನದ ಮೊದಲನೆಯ ಅಧ್ಯಾಯದ ಮೂರನೆಯ ಪಾದದ ಕನ್ನಡಾನುವಾದವು ಮುಕ್ತಾಯವಾಯಿತು ॥**

* * *

# ಮೊದಲನೆಯ ಅಧ್ಯಾಯ

# ನಾಲ್ಕನೆಯ ಪಾದ

ಈ ಪಾದದಲ್ಲಿ ವಿಷ್ಣುವಿನಲ್ಲಿ ಅಪ್ರಸಿದ್ಧವಾದ ಮತ್ತು ಬೇರೆ ಕಡೆಯಲ್ಲಿ ಮಾತ್ರ ಪ್ರಸಿದ್ಧವಾದ ನಾಮಾತ್ಮಕ ಹಾಗೂ ಲಿಂಗಾತ್ಮಕ ಶಬ್ದಗಳ ಸಮನ್ವಯವನ್ನು ಮಾಡುತ್ತಾರೆ.

## ಆನುಮಾನಿಕಾಧಿಕರಣ

ದುಃಖಿ, ಬದ್ಧ, ಇತ್ಯಾದಿ ಶಬ್ದಗಳ ಸಮನ್ವಯ

**ಸೂತ್ರ: 'ಓಂ ಆನುಮಾನಿಕಮಪ್ಯೇಕೇಷಾಮಿತಿ ಚೇನ್ನ ಶರೀರರೂಪಕವಿನ್ಯಸ್ತಗೃಹೀತೇ ದರ್ಶಯತಿ ಚ ಓಂ' (೧-೪-೧)**

ಇಲ್ಲಿ 'ಮಹತಃ ಪರಮವ್ಯಕ್ತಮವ್ಯಕ್ತಾತ್ಪುರುಷಃ ಪರಃ' ಎನ್ನುವ ವಾಕ್ಯವನ್ನು ಉದಾಹರಿಸಿ, ಅವ್ಯಕ್ತ ಶಬ್ದವನ್ನು ಪರಬ್ರಹ್ಮನಲ್ಲಿಯೇ ಉಪಪಾದಿಸಲಾಯಿತು. ಈ ವಿಷಯದಲ್ಲಿ ಸಕಲ ಶ್ರುತಿ ಸ್ಮೃತಿಗಳ ವಿರೋಧಬರುವುದರಿಂದ, 'ಅವ್ಯಕ್ತ ಶಬ್ದವಾಚ್ಯನು ಪರಬ್ರಹ್ಮನೆಂದಾದರೆ ಆಗ ಅವನಿಗೆ ಪುರುಷನಿಂದ ಅವರತ್ವವು ಬರಬೇಕಾಗುವುದು' ಎನ್ನುವ ಪೂರ್ವಪಕ್ಷಿಯ ಹೇಳಿಕೆಯನ್ನು ನಿರಾಕರಿಸಿ ಅದಕ್ಕೆ ಮುಂದಿನ ಸೂತ್ರದಿಂದ ಪರಿಹಾರವನ್ನು ಸೂಚಿಸುತ್ತಾರೆ.

**ಸೂತ್ರ: ಓಂ ತದಧೀನತ್ವಾದರ್ಥವತ್ ಓಂ (೧-೪-೨)**

**ದುಃಖಿಬದ್ಧಾವರಾದ್ಯಾಸ್ತು ತದಧೀನತ್ವ ಹೇತುತಃ ।**
**ಶಬ್ದಾಃ ಬ್ರಹ್ಮಣಿ ವರ್ತಂತೇ ರಾಜ್ಞಿ ಯದ್ವತ್ಪರಾಜಯಃ ॥೧॥**

ರಾಜನ ಅಧೀನರಾಗಿರುವ ಸೈನಿಕರು ಪರಾಜಿತರಾದಾಗ, ರಾಜನೇ ಪರಾಜಿತನೆಂದು ಹೇಗೆ ಹೇಳುವರೋ, ಹಾಗೆಯೇ ದುಃಖಿ, ಬದ್ಧ ಅವರ ಮೊದಲಾದ ಶಬ್ದಗಳಾದರೂ ಶ್ರೀಹರಿಯಲ್ಲಿ ಇಲ್ಲದಿದ್ದರೂ ಪ್ರಧಾನಾದಿಗಳಂತೆ ಅವನ ಅಧೀನದಲ್ಲಿರುವುದರಿಂದ ಸ್ವಾಮಿತ್ವೇನ ಆ ಶಬ್ದಗಳಿಗೆ ಶ್ರೀಹರಿಯಲ್ಲಿ ವಾಚ್ಯತ್ವವು ಕೂಡುವುದು. 'ನಿರವಷ್ಠೋ ನಿರವದ್ಯಃ', 'ನಾಮಾನಿ ಸರ್ವಾಣಿ

ಯಮಾ ವಿಶಂತಿ', ಈ ಎರಡು ಶ್ರುತಿಗಳನ್ನು ಅನುಸರಿಸಿ ದುಃಖಾದಿಗಳು ಶ್ರೀಹರಿಯಲ್ಲಿ ಸರ್ವಥಾ ಇಲ್ಲದಿದ್ದರೂ ಜೀವರಲ್ಲಿರುವ ದುಃಖಾದಿಗಳಿಗೆ ಶ್ರೀಹರಿಯೇ ಸ್ವಾಮಿಯಾಗಿರುವುದರಿಂದ ದುಃಖಾದಿ ಶಬ್ದವಾಚ್ಯನೆಂದು ಒಪ್ಪಿದರೆ ಯಾವ ಅನುಪಪತ್ತಿಯೂ ಇರುವುದಿಲ್ಲ.

**ಸ್ವಾತಂತ್ರ್ಯಂ ತದ್ಗತತ್ವಂ ಚ ಶಬ್ದವೃತ್ತೇರ್ಹಿ ಕಾರಣಂ ।**

**ಸ್ವಾತಂತ್ರ್ಯ ತತ್ರ ಮುಖ್ಯಂ ಸ್ಯಾತ್ ಕುತೋ ರಾಜ್ಞಿ ಜಯೋಽನ್ಯಥಾ ॥೨॥**

ಸಾಂತಂತ್ರ್ಯ ಮತ್ತು ತದ್ಗತತ್ವಗಳು ಶಬ್ದಗಳ ಪ್ರವೃತ್ತಿಗೆ ಕಾರಣವಾಗಿವೆ. ಇವುಗಳಲ್ಲಿ ಸ್ವಾತಂತ್ರ್ಯವೇ ಮುಖ್ಯವಾದ ಕಾರಣ. ಸ್ವಾತಂತ್ರ್ಯವು ಶಬ್ದಪ್ರವೃತ್ತಿಗೆ ಕಾರಣವಾಗದಿದ್ದರೆ ರಾಜನಲ್ಲಿ ಜಯನಿಮಿತ್ತಕವಾದ ಜಯಿ ಶಬ್ದವು ಹೇಗೆ ಕೂಡುವುದು?

ಸ್ವಾತಂತ್ರ್ಯಕ್ಕೆ ಮುಖ್ಯ ಕಾರಣತ್ವವನ್ನು ಉಪಪಾದಿಸುತ್ತಾರೆ -

**ನ ಹಿ ಭೃತ್ಯಸ್ಯ ವಿಜಯಿಶಬ್ದಸ್ತಾವತ್ಪ್ರಯುಜ್ಯತೇ ।**

**ಯಾವದ್ರಾಜ್ಞ್ಯನ್ಯಗತ್ವೇಽಪಿ ಸ್ವಾತಂತ್ರ್ಯಾಭಾಸಮಾತ್ರತಃ ॥೩॥**

ಜಯವು ಭೃತ್ಯನಲ್ಲಿದ್ದರೂ, ವಿಜಯಿ ಶಬ್ದವು ಕೇವಲ ಸ್ವಾತಂತ್ರ್ಯಾಭಾಸದಿಂದ ರಾಜನಲ್ಲಿ ಪ್ರಯೋಗಿಸಲ್ಪಡುವಷ್ಟು ಮುಖ್ಯವಾಗಿ ಭೃತ್ಯನಲ್ಲಿ ಪ್ರಯೋಗಿಸಲ್ಪಡುವುದಿಲ್ಲ. ಆದಪ್ರಯುಕ್ತ ಶಬ್ದಪ್ರವೃತ್ತಿಗೆ ಮುಖ್ಯವಾದ ನಿಮತ್ತವು ಸ್ವಾತಂತ್ರ್ಯವೇ ಹೊರತು ತದ್ಗತತ್ವವಲ್ಲ.

ಸ್ವಾಮಿತ್ವವು ಪ್ರವೃತ್ತಿನಿಮಿತ್ತವೆಂದು ಒಪ್ಪುವುದಾದರೆ, ಆಗ ಭೃತ್ಯನು ಬದ್ಧನಾದರೆ ಅಥವಾ ಮೃತನಾದರೆ ರಾಜನು ಬದ್ಧನಾದನು ಅಥವಾ ರಾಜನು ಮೃತನಾದನು ಎಂದು ಹೇಳಬೇಕಾಗುವುದು. ಆದ್ದರಿಂದ ಸ್ವಾಮಿತ್ವವು ಪ್ರವೃತ್ತಿನಿಮಿತ್ತವಲ್ಲ ಎಂದು ಹೇಳಿದರೆ -

**ಭೃತ್ಯಬಂಧಾದಿಕಂ ರಾಜ್ಞಿ ರಾಜ್ಞೋ ಬಂಧಾದಿಯೋಗ್ಯತಃ ।**

**ಕಾರಣಂ ಸಂಶಯಸ್ಯ ಸ್ಯಾದಿತಿ ನೈವ ಪ್ರಯುಜ್ಯತೇ ॥೪॥**

ರಾಜನಿಗೂ ಬಂಧಾದಿಗಳನ್ನು ಹೊಂದುವ ಯೋಗ್ಯತೆಯಿರುವ ಪ್ರಯುಕ್ತ, ರಾಜನ ಅಧೀನನಾದ ಭೃತ್ಯನ ಬಂಧಾದಿಗಳನ್ನು ವಿವಕ್ಷಾ ಮಾಡಿಕೊಂಡು 'ರಾಜಾ ಬದ್ಧಃ' ಇತ್ಯಾದಿ ವಾಕ್ಯಗಳನ್ನು ರಾಜನಲ್ಲಿ ಪ್ರಯೋಗ ಮಾಡುವುದಿಲ್ಲ.

ರಾಜಾಧೀನನಾದ ಭೃತ್ಯನು ಬಂಧಿತಾಗಿರುವನೋ ಅಥವಾ ರಾಜನೇ ಬಂಧಿತನಾಗಿರುವನೋ ಎಂಬ ಸಂಶಯದ ಕಾರಣದಿಂದ ಭೃತ್ಯನ ಬಂಧನಾದಿಗಳು ರಾಜನಲ್ಲಿ ಪ್ರಯೋಗಿಸಲ್ಪಡುವುದಿಲ್ಲ.

ಸಂಶಯಕ್ಕೆ ಕಾರಣವಾದರೂ ವಾಕ್ಯವನ್ನು ಪ್ರಯೋಗಿಸಲು ಅಡ್ಡಿಯೇನಿಲ್ಲ. ಏಕೆಂದರೆ ವ್ಯಾಖ್ಯಾನದಿಂದ ಸಂಶಯವನ್ನು ನಿವಾರಿಸಬಹುದು. ಇಲ್ಲದಿದ್ದರೆ ರಾಜಾ ಜಯೀ ಎಂಬ ಪ್ರಯೋಗದಲ್ಲಿಯೂ ಸಂಶಯ ಬರುಬಹುದಾದ್ದರಿಂದ ಪ್ರಯೋಗವು ಕೂಡದೇ ಹೋಗುವುದು ಎಂದರೆ -

**ಅಮಂಗಲತ್ವಾಚ್ಛಬ್ದಾನಾಂ ರಾಜ್ಞೋ ಯೋಗಾದಮಂಗಲೇ ।**
**ಅಪ್ರಿಯತ್ವಾತ್ತು ಶಬ್ದಸ್ಯ ಸ್ಯಾತ್ಪ್ರಯೋಗನಿವರ್ತನಂ ॥೫॥**

ರಾಜನಿಗೆ ಅಮಂಗಲವಾದ ಬಂಧನಾದಿಗಳಲ್ಲಿ ಯೋಗವಿರುವುದರಿಂದ, ಬದ್ಧ ಮೃತ ಮೊದಲಾದ ಶಬ್ದಗಳು ಅಮಂಗಲಕರವೂ ಹಾಗೂ ರಾಜ ಮತ್ತು ಅವನ ಸಂಬಂಧಿಗಳಿಗೆ ಅಪ್ರೀತಿಕರವೂ ಆದುದರಿಂದ ಅಂಥಹ ಶಬ್ದಗಳು ರಾಜನಲ್ಲಿ ಪ್ರಯೋಗಿಸಲ್ಪಡುವುದಿಲ್ಲ. ಜಯ ಪರಾಜಯಗಳು ಭೃತ್ಯರಿಂದಲೇ ಆಗುತ್ತವೆ ಎನ್ನುವುದರಲ್ಲಿ ಸಂಶಯವಿಲ್ಲದಿರುವುದರಿಂದ ರಾಜನಲ್ಲಿ ಅವುಗಳ ಪ್ರಯೋಗವು ಸ್ವಾತಂತ್ರ್ಯದ ನಿಮಿತ್ತ ಕೂಡುತ್ತದೆ.

ರಾಜನಲ್ಲಿ ಹೇಗೆ ಬದ್ಧ, ದುಃಖ ಮೊದಲಾದ ಶಬ್ದಗಳಿಗೆ ಪ್ರಯೋಗವಿಲ್ಲವೋ ಹಾಗೆಯೇ ವಿಷ್ಣುವಿನಲ್ಲಿಯೂ ಪ್ರಯೋಗವಿಲ್ಲವೆಂದು ಏಕೆ ಹೇಳಬಾರದು ಎಂದರೆ -

**ಗುಣಾಸ್ತು ತಾದೃಶಾ ಯತ್ರ ಪ್ರಯುಜ್ಯಂತೇಽಖಿಲಾ ಅಪಿ ।**
**ಪೂಜ್ಯೇಷ್ವೇವ ವಿಶೇಷೇಣ ಸ್ವಾತಂತ್ರ್ಯಂ ಮುಖ್ಯಕಾರಣಂ ॥೬॥**

ಯಾವ ಪಕ್ಷದಲ್ಲಿ ಸ್ವಾಮ್ಯನಿಮಿತ್ತಕವಾದ ಶಬ್ದಗಳು ಶುಭವನ್ನೇ ಹೇಳುತ್ತವೋ ಹಾಗೂ ಪಾಕ್ಷಿಕವಾಗಿ ಅಮಂಗಲವನ್ನು ಸೂಚಿಸುವುದಿಲ್ಲವೋ ಅಂಥಹ ಪಕ್ಷದಲ್ಲಿ ಎಲ್ಲ ಶಬ್ದಗಳೂ ಪ್ರಯೋಗಿಸಲ್ಪಡುತ್ತವೆ. ಸ್ವಾಮಿತ್ವವನ್ನು ಹೊಂದಿರುವ ರಾಜಾದಿಗಳಲ್ಲಿ ಶಬ್ದಪ್ರವೃತ್ತಿಗೆ ಸ್ವಾತಂತ್ರ್ಯವೇ ಮುಖ್ಯಕಾರಣ. ಮಂಗಲಕರವಾದ ಶಬ್ದಗಳು ರಾಜಾದಿಗಳಲ್ಲಿಯೇ ಪ್ರಾಚುರ್ಯದಿಂದ ಪ್ರಯೋಗಿಸಲ್ಪಡುತ್ತವೆ, ತದ್ಗತತ್ವವನ್ನುಳ್ಳ ಭೃತ್ಯಾದಿಗಳಲ್ಲಿ ಅಮುಖ್ಯವಾಗಿ

ಪ್ರಯೋಗಿಸಲ್ಪಡುತ್ತವೆ. ಆದಪ್ರಯುಕ್ತ ಶಬ್ದಪ್ರವೃತ್ತಿಗೆ ಸ್ವಾತಂತ್ರ್ಯವೇ ಮುಖ್ಯ ಕಾರಣವೆಂದು ನಿಶ್ಚಯಿಸಲ್ಪಡುತ್ತದೆ.

**ಅತೋ ದೋಷಾತಿದೂರತ್ವಾತ್ಸಂಶಯಸ್ಯಾಪ್ಯಸಂಭವಾತ್ ।**

**ದೋಷಾಣಾಂ ವಿಷ್ಣುಗತ್ವಸ್ಯ ಪ್ರಾಜ್ಞಬುದ್ಧಿವ್ಯಪೇಕ್ಷಯಾ ॥೭॥**

**ಸ್ವಾತಂತ್ರ್ಯಾರ್ಥಮಭಿಪ್ರೇತ್ಯ ದೋಷಶಬ್ದಾಶ್ಚ ವಿಷ್ಣವಿ ।**

ವಿಷ್ಣುವು ದೋಷಾತಿದೂರನೆಂದು ನಿಶ್ಚಯವಾಗಿರುವುದರಿಂದ ಪ್ರಾಜ್ಞರ ಬುದ್ಧಿಯ ಅಪೇಕ್ಷೆಯಿಂದ ದುಃಖ ಬದ್ಧ ಅವರ ಇತ್ಯಾದಿ ದೋಷವನ್ನು ಹೇಳುವ ಶಬ್ದಗಳಿಗೆ ವಿಷ್ಣುಗತತ್ವವು ಸಂಶಯಕ್ಕೂ ಅತಿದೂರವಾದುದು. ಆದಪ್ರಯುಕ್ತ ದೋಷ ಶಬ್ದಗಳೂ ಕೂಡ ವಿಷ್ಣುವಿನಲ್ಲಿ ಸ್ವಾತಂತ್ರ್ಯ, ಸೂಚಿಸುವ ಅರ್ಥದಿಂದ ಪ್ರಯೋಗಿಸಲ್ಪಡುತ್ತವೆ. ವಿಷ್ಣವಿ ಎನ್ನುವ ಪ್ರಯೋಗ ವೈದಿಕಸಾಹಿತ್ಯದಲ್ಲಿ ಕಂಡುಬರುತ್ತದೆ. ಶ್ರೀಮದಾಚಾರ್ಯರು ತಾವು ಪರಮವೈದಿಕರು ಎಂದು ತಿಳಿಸುವುದಕ್ಕಾಗಿ ವಿಷ್ಣೌ ಎನ್ನುವ ಬದಲಿಗೆ ವಿಷ್ಣವಿ ಎಂದು ಪ್ರಯೋಗಿಸಿದ್ದಾರೆ.

ದೋಷ ಶಬ್ದಗಳೂ ವಿಷ್ಣುವಿನಲ್ಲಿ ಗುಣವಾಚಕಗಳಾಗಿಯೇ ಕೂಡುತ್ತವೆ ಎನ್ನುವ ವಿಷಯದಲ್ಲಿ ಶ್ರುತಿಸಮ್ಮತಿಯನ್ನು ಹೇಳುತ್ತಾರೆ -

**ವಾಸುದೇವಶ್ರುತಿಶ್ಚಾಹ ನೈವ ವಿಷ್ಣಾವಮಂಗಲಂ ॥೮॥**

**ಮಂಗಲಾಮಂಗಲೇಽನ್ಯತ್ರ ತತೋ ನಾಮಂಗಲಂ ವದೇತ್ ।**

**ಸ್ವಾತಂತ್ರ್ಯಾಪೇಕ್ಷಯಾ ವಿಷ್ಣೌ ದೋಷೋ ನಾಮಂಗಲೋಕ್ತಿತಃ ॥೯॥**

ವಿಷ್ಣುವಿನಲ್ಲಿ ದುಃಖಾದಿ ಅಮಂಗಲಗಳು ಎಂದಿಗೂ ಇಲ್ಲವೇ ಇಲ್ಲ. ಆದಕಾರಣ ಸ್ವಾತಂತ್ರ್ಯಾಪೇಕ್ಷೆಯಿಂದ ವಿಷ್ಣುವಿನಲ್ಲಿ ಅಮಂಗಲೋಕ್ತಿಯಿಂದ ಅನರ್ಥವಿಲ್ಲ. ವಿಷ್ಣುವಿನಲ್ಲಿರುವಂಥ ಸ್ವಾತಂತ್ರ್ಯ-ಸ್ವಾಮಿತ್ವಗಳು ರಾಜಾದಿಗಳಲ್ಲಿ ಇಲ್ಲದಿರುವುದರಿಂದ ಮಂಗಲ-ಅಮಂಗಲಗಳೆರಡೂ ಅವರಲ್ಲಿ ಸಂಭವವಿವೆ. ವಿಷ್ಣುವಿನಲ್ಲಿ ಎಂದಿಗೂ ಅಮಂಗಲವಾಚಕ ಶಬ್ದಗಳನ್ನು ಹೇಳಬಾರದು - ಹೀಗೆ ವಾಸುದೇವಶ್ರುತಿಯೂ ಹೇಳಿದೆ.

ಒಂದು ಶಬ್ದವು ಕೆಲವು ಸಂದರ್ಭಗಳಲ್ಲಿ ದೋಷವನ್ನು ಹೇಳುವುದರಿಂದ ಅನರ್ಥಕ್ಕೆ ಕಾರಣವಾದರೂ, ಅದೇ ಶಬ್ದವು ಕೆಲವು ಕಡೆಗಳಲ್ಲಿ ದೋಷಕ್ಕೆ

ಕಾರಣವಾಗುವುದಿಲ್ಲ ಎಂಬುದನ್ನು ದೃಷ್ಟಾಂತದಿಂದ ತಿಳಿಸಿಕೊಡುತ್ತಾರೆ -

**ಬಹುಭುಕ್ತ್ವಂ ಯಥಾ ದೋಷೋ ನೃಷು ನೈವ ಹರೌ ಕ್ವಚಿತ್ ।**
**ಏವಂ ದುಃಖ್ಯಾದಿಶಬ್ದಾಶ್ಚ ಸ್ವಾತಂತ್ರ್ಯಾಪೇಕ್ಷಯೋದಿತಾಃ ॥೧೦॥**
**ನೈವ ದೋಷಾ ಹರೌ ತದ್ಗಬುದ್ಧ್ಯೋಕ್ತಾ ದೋಷಕಾರಿಣಃ ।**
**ತಸ್ಮಾತ್ತೇ ದೋಷಶಬ್ದಾಶ್ಚ ತತ್ರೈವ ಗುಣವಾಚಕಾಃ ॥೧೧॥**

ಬಹುವಾಗಿ ತಿನ್ನುವಿಕೆ ಎನ್ನುವುದು ಮನುಷ್ಯರಲ್ಲಿ ದೋಷವೇ ಆಗಿದ್ದರೂ, ಶ್ರೀಹರಿಯ ವಿಷಯದಲ್ಲಿ ಸ್ವಲ್ಪಮಾತ್ರವೂ ದೋಷವೆನಿಸಲಾರದು. 'ಅಸ್ವರ್ಗ್ಯಂ ಚಾತಿಭೋಜನಂ' ಎಂದು ಮನುಸ್ಮೃತಿಯು ಮನುಷ್ಯರಲ್ಲಿ ಬಹುಭೋಜನವನ್ನು ನಿಂದಿಸುತ್ತದೆ. ಸಂಸಾರಧರ್ಮಗಳ ಅತ್ಯಂತಾಭಾವವಿರುವ ಪ್ರಯುಕ್ತ ಹಾಗೂ ಸರ್ವಸಂಹರ್ತೃತ್ವರೂಪ ಗುಣವು ಹೇಳಲ್ಪಟ್ಟಿರುವುದರಿಂದ, ಪರಮಾತ್ಮನ ಪಕ್ಷದಲ್ಲಿ ಬಹುಭೋಕ್ತೃತ್ವವು ದೋಷವಾಗುವುದಿಲ್ಲ. ಇದೇರೀತಿ ದುಃಖಿ ಮೊದಲಾದ ಶಬ್ದಗಳೂ ಶ್ರೀಹರಿಯಲ್ಲಿ ಸ್ವಾತಂತ್ರ್ಯವನ್ನು ಅಪೇಕ್ಷಿಸಿಕೊಂಡು ಹೇಳುವ ಕಾರಣ ದೋಷಗಳು ಆಗುವುದೇ ಇಲ್ಲ. ರಾಜಾದಿಗಳಲ್ಲಾದರೋ ದುಃಖಾದಿಗಳು ಇರುವುದಾಗಿ ಕಂಡುಬರುವುದರಿಂದ ದುಃಖಿ ಮೊದಲಾದ ಪ್ರಯೋಗಗಳು ದೋಷಕ್ಕೆ ಕಾರಣಗಳಾಗುತ್ತವೆ. ಆದ್ದರಿಂದ ಬೇರೆಕಡೆಗಳಲ್ಲಿ ದೋಷಕ್ಕೆ ಕಾರಣಗಳಾಗುವ ಶಬ್ದಗಳೂ ಕೂಡ ಶ್ರೀಹರಿಯಲ್ಲಿ ಗುಣವಾಚಕಗಳಾಗಿಯೇ ಇರುತ್ತವೆ.

ಹೀಗೆ ಆನುಮಾನಿಕಾಧಿಕರಣದಲ್ಲಿ ಶ್ರೀಮದಾಚಾರ್ಯರು 'ಅವ್ಯಕ್ತ ಶಬ್ದವಾಚ್ಯನು ಪರಬ್ರಹ್ಮನೆಂದಾದರೆ ಆಗ ಅವನಿಗೆ ಪುರುಷನಿಂದ ಅವರತ್ವವು ಬರಬೇಕಾಗುವುದು' ಎನ್ನುವ ಪೂರ್ವಪಕ್ಷಿಯ ಆಶಂಕೆಯನ್ನು ನಿವಾರಿಸಿ, ಅವರತ್ವಾದಿಗಳು ಪರಮಾತ್ಮನಲ್ಲಿ ದೋಷವೇ ಆಗಲಾರವು ಎನ್ನುವುದನ್ನು ಶ್ರುತಿ ಹಾಗೂ ಯುಕ್ತಿಗಳಿಂದ ಸಮರ್ಥಿಸಿದರು. ಆದಪ್ರಯುಕ್ತ ಪರಮಾತ್ಮನು ಅವ್ಯಕ್ತಾದಿ ಶಬ್ದವಾಚ್ಯನು ಎನ್ನುವುದು ಸಿದ್ಧವಾಯಿತು.

## ಜ್ಯೋತಿರುಪಕ್ರಮಾಧಿಕರಣ

ಈ ಅಧಿಕರಣದಲ್ಲಿ ಜ್ಯೋತಿಷ್ಟೋಮಾದಿ ಸಕಲ ಕ್ರಿಯಾವಾಚಕ ಶಬ್ದಗಳನ್ನು ಪರಬ್ರಹ್ಮನಲ್ಲಿ ಸಮನ್ವಯ ಮಾಡುತ್ತಾರೆ.

## ಕ್ರಿಯಾವಾಚಕ ಶಬ್ದಗಳ ಸಮನ್ವಯ

ಜ್ಯೋತಿಷ್ಟೋಮಾದಿ ಕರ್ಮಪರವಾದ ಎಲ್ಲ ಶಬ್ದಗಳೂ ಪರಮಾತ್ಮನನ್ನೇ ಹೇಳುವುದಾದರೆ, ಕ್ರಿಯಾವಿಧಿಗಳನ್ನು ಹೇಳುವ ಶಬ್ದಗಳ ಅಭಾವದಿಂದಾಗಿ ಕರ್ಮಾನುಷ್ಠಾನವೇ ಕೂಡುವುದಿಲ್ಲ. ಈ ರೀತಿ ಕರ್ಮಲೋಪದ ಪ್ರಸಂಗ ಬರುವುದರಿಂದ ಕ್ರಿಯೆಯನ್ನು ಹೇಳುವ ಶಬ್ದಗಳನ್ನು ಪರಬ್ರಹ್ಮನಲ್ಲಿ ಸಮನ್ವಯ ಮಾಡಕೂಡದು ಎಂದು ಹೇಳಿದರೆ ಸೂತ್ರವನ್ನು ಪಠಿಸಿ ಸಮನ್ವಯವನ್ನು ತೋರಿಸುತ್ತಾರೆ -

**ಸೂತ್ರ: ಓಂ ಜ್ಯೋತಿರುಪಕ್ರಮಾತ್ತು ತಥಾ ಹ್ಯಧೀಯತೇ ಏಕೇ ಓಂ (೧-೪-೧೦)**

'ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ। ವಸಂತೇ ವಸಂತೇ ಜ್ಯೋತಿಷಾ ಯಜೇತ' ಇತ್ಯಾದಿ ಕರ್ಮಕಾಂಡದಲ್ಲಿ ಜ್ಯೋತಿರಾದಿ ಶಬ್ದದಿಂದ ಪರಮ ಮುಖ್ಯವೃತ್ತಿಯಿಂದ ಪರಬ್ರಹ್ಮನೇ ಹೇಳಲ್ಪಟ್ಟಿದ್ದಾನೆ, ಕರ್ಮಾದಿಗಳಲ್ಲ. ಏಕೆಂದರೆ ಆ ಬ್ರಹ್ಮನನ್ನು 'ಏಷ ಇಮಂ ಲೋಕಮಭ್ಯಾರ್ಚತ್' ಎಂದು ಉಪಕ್ರಮಿಸಿಯೇ ಸರ್ವಶಬ್ದವಾಚ್ಯನೆಂದು 'ತಾ ವಾ ಏತಾಃ ಸರ್ವಾ ಋಚಃ' ಇವೇ ಮೊದಲಾದ ಶ್ರುತಿಗಳಿಂದ ಅಧ್ಯಯನ ಮಾಡುತ್ತಾರೆ.

**ಜಾತಮೋತಂ ಹರೌ ಯಸ್ಮಾಜ್ಜ್ಯೋತಿಃ ಷಃ ಪ್ರಾಣರೂಪತಃ ।**
**ಆಯಜೇತಶ್ಚಾಯಜೇತೋ ವಸಂತಿಶ್ಚ ವಸಂಸ್ತತಃ ॥೧೨॥**

ಜ-ಜಾತಮ್, ಓತಿಃ-ಓತಮ್ (ಜಃ ಓತಿಃ ಯಸ್ಮಿನ್ ಸಃ ಜ್ಯೋತಿಃ). ಹುಟ್ಟಿದ ಜಗತ್ತು ಯಾರಲ್ಲಿ ಪ್ರವಿಷ್ಟವಾಗಿದೆಯೋ (ರಕ್ಷಿತವಾಗಿದೆಯೋ) ಅವನೇ ಜ್ಯೋತಿ ಶಬ್ದವಾಚ್ಯನು. ಚೇಷ್ಟಕರೂಪನಾದ್ದರಿಂದ ಷಃ ಎನಿಸುತ್ತಾನೆ. (ಷಕಾರಃ ಪ್ರಾಣ ಆತ್ಮಾ). ಜಗದಾಶ್ರಯನೂ ಚೇಷ್ಟಕನೂ ಆದ ಶ್ರೀಹರಿಯೇ ಜ್ಯೋತಿಷ ಶಬ್ದವಾಚ್ಯ. (ಜ್ಯೋತಿಶ್ಚಾಸೌ ಷಶ್ಚೇತಿ ಜ್ಯೋತಿಷಃ, ತಸ್ಯ ಸಂಬುದ್ಧಿಃ ಜ್ಯೋತಿಷ).

ಎಲ್ಲರೀತಿಯಿಂದಲೂ ಚೆನ್ನಾಗಿ ಯಜ್ಞಾಖ್ಯಕರ್ಮದಿಂದ ಅಥವಾ ಯಾಜ್ಞಿಕ ಪುರುಷರಿಂದ ಹೊಂದಲ್ಪಟ್ಟವನಾದ್ದರಿಂದ ಆಯಜೇತ. ಅಂದರೆ ಶ್ರೀಹರಿಯು ಸಕಲ ಯಜ್ಞಕರ್ಮಗಳನ್ನು ಭೋಗಿಸುವವನೂ ಯಜ್ಞಮಾಡುವವರಿಂದ ಜ್ಞಾನದ್ವಾರಾ ಪ್ರಾಪ್ಯನೂ ಆಗಿರುವನು. ಸರ್ವತ್ರ ವ್ಯಾಪ್ತನಾಗಿರುವುದರಿಂದ

ವಸಂತ. ಆದರವನ್ನು ಸೂಚಿಸುವುದಕ್ಕಾಗಿ ವಸಂತೇ ವಸಂತೇ ಎಂದು ಎರಡಾವರ್ತಿ ಸಂಬೋಧನೆಯು.

**ವಿಗತಚ್ಛಾದನತ್ವಾತ್ತು ಗಚ್ಛಭೂತಕ್ಷರಂಕರಃ ।**

**ಭುಂಕ್ಷ್ವೇತ್ಯುಕ್ತೋ ಹರಿರ್ಹುಂ ಚ ಹುತಮಸ್ಮಿನ್ ಜಗದ್ಯತಃ ॥೧೩॥**

ಅವಿದ್ಯಾದಿ ಆವರಣವು ಯಾರಿಂದ ಹೋಗಲ್ಪಟ್ಟದೆಯೋ ಅಂದರೆ ಯಾರು ಅವಿದ್ಯಾದಿಗಳಿಂದ ಅತ್ಯಂತ ದೂರನಾಗಿರುವನೋ ಅವನೇ ಗಚ್ಛ ಎಂಬುದಾಗಿ ಕರೆಯಲ್ಪಡುತ್ತಾನೆ. ಸರ್ವಪ್ರಾಣಿಗಳನ್ನು ಸಂಹರಿಸುತ್ತಾನಾದ್ದರಿಂದ ಶ್ರೀಹರಿಯು ಭುಂಕ್ಷ್ವನೆಂದು ಸಂಬೋಧಿಸಲ್ಪಡುತ್ತಾನೆ. ಪ್ರಲಯಕಾಲದಲ್ಲಿ ಈ ಜಗತ್ತು ಶ್ರೀಹರಿಯ ದೆಶೆಯಿಂದ ಶ್ರೀಹರಿಯಲ್ಲಿಯೇ ಹೋಮಿಸಲ್ಪಡುವುದು. ಆದಕಾರಣ ಶ್ರೀಹರಿಯು ಹುಂ ಶಬ್ದವಾಚ್ಯನು. ಹುಂ ಎಂದರೆ ಸರ್ವಜಗನ್ನಾಶಕನು ಎಂದರ್ಥ.

**ಸ್ಫುಟತ್ವಾತ್ ಸ್ಫಡಿತಿ ಪ್ರೋಕ್ತಃ ಕವರಕ್ಷಣ ಇತ್ಯತಃ ।**

**ಕವಚಂ ವರ್ತತೇ ಯಸ್ಮಾತ್ ಷಡ್ಗುಣತ್ವೇನ ಸರ್ವದಾ ॥೧೪॥**

**ವಷಟ್ ತದ್ಗತ್ವತಸ್ತೇಷಾಂ ವೌಷಡಿತ್ಯೇವ ಕಥ್ಯತೇ ।**

ಭಕ್ತರಿಗೆ ತನ್ನನ್ನು ಕುರಿತು ವ್ಯಕ್ತನಾಗುವ ಪ್ರಯುಕ್ತ ಅಥವಾ ಅಸಂಕುಚಿತ ವ್ಯಾಪಾರವುಳ್ಳ ಪ್ರಯುಕ್ತ (ಸ್ಫುಟ ವಿಕಸನೆ) ಫಟ್ ಎಂದು ಹೇಳಿಸಿಕೊಳ್ಳುತ್ತಾನೆ. ಸರ್ವರಕ್ಷಕನಾದ ಪ್ರಯುಕ್ತ ಕವಚ (ಕವತಿ ರಕ್ಷತಿ ಇತಿ ಕವಚಮ್). ಯಾವಾಗಲೂ ಷಡ್ಗುಣಗಳಿಂದ ಇರುತ್ತಾನೆ ಆದ್ದರಿಂದ ವಷಟ್ (ವರ್ತತೇ ಇತಿ ವಃ, ಷಡ್ಗುಣಾತ್ಮಕತ್ವಾತ್ ಷಟ್, ವಶ್ಚಾಸೌ ಷಟ್ ಚ ಇತಿ ವಷಟ್). ಷಟ್ ಅಂದರೆ ಆರು ಗುಣಗಳಿಗೆ ವೌ ಅಂದರೆ ವಿಷ್ಣುವಿನಲ್ಲಿಯೇ ಸ್ವರೂಪತ್ವ ಕೂಡುವ ಪ್ರಯುಕ್ತ ವಿಷ್ಣುವು ವೌಷಟ್ ಎಂದೇ ಹೇಳಲ್ಪಡುತ್ತಾನೆ.

**ಸ್ವೀಯಂ ಸ್ವೀಕುರುತೇ ಯಸ್ಮಾತ್ಸ್ವಾಹೇತ್ಯುಕ್ತೋ ಜನಾರ್ದನಃ ॥೧೫॥**

**ನಮಂತ್ಯಸ್ಮಿನ್ ಗುಣಾ ಯಸ್ಮಾನ್ನಮ ಇತ್ಯೇವ ಕಥ್ಯತೇ ।**

ಬೇರೆ ದೇವತೆಗಳನ್ನು ಉದ್ದೇಶಿಸಿ ಸಮರ್ಪಿತವಾದ ಹವಿರಾದಿಗಳನ್ನು ಅವು ಸ್ವಾಭಾವಿಕವಾಗಿ ತನ್ನದೇ ಆಗಿರುವುದರಿಂದ, ತಾನೇ ಸ್ವೀಕರಿಸುವ ಪ್ರಯುಕ್ತ ಸ್ವಾಹಾ ಎನಿಸುತ್ತಾನೆ. ಈ ವಿಷ್ಣುವಿನಲ್ಲಿಯೇ ಎಲ್ಲ ಗುಣಗಳೂ

ನಮ್ಯತಾಭಾವವನ್ನು ಹೊಂದಿರುವ ಪ್ರಯುಕ್ತ ಅಥವಾ ಈ ಪರಮೇಶ್ವರನಲ್ಲಿ ಅಪ್ರಧಾನರಾದ ಬ್ರಹ್ಮಾದಿ ಎಲ್ಲ ದೇವತೆಗಳೂ ಶರಣು ಬರುವುದರಿಂದಲೂ ಶ್ರೀಹರಿಯು ನಮಃ ಎಂದು ಕರೆಯಲ್ಪಡುತ್ತಾನೆ.

**ಇತ್ಯಶೇಷಕ್ರಿಯಾನಾಮಶಬ್ದೈರೇಕೋ ಜನಾರ್ದನಃ ॥೧೭॥**

**ಉಚ್ಯತೇ ಮುಖ್ಯತೋ ಯಸ್ಮಾತ್ಪದವರ್ಣಸ್ವರಾತ್ಮಭಿಃ ।**

**ತಸ್ಮಾದನಂತಗುಣತಾ ಶ್ರುತಿತಾತ್ಪರ್ಯತೋಽಸ್ಯ ಹಿ ॥೧೭॥**

ಈ ಪ್ರಕಾರವಾಗಿ ಎಲ್ಲ ಪದ, ವರ್ಣ, ಸ್ವರ, ಕ್ರಿಯಾ ಹಾಗೂ ನಾಮವಾಚಕ ಸಮಸ್ತ ಶಬ್ದಗಳಿಂದಲೂ ಒಬ್ಬನೇ ಒಬ್ಬನಾದ ಶ್ರೀಹರಿಯು ಪರಮ ಮುಖ್ಯವೃತ್ತಿಯಿಂದ ಹೇಳಲ್ಪಡುತ್ತಾನೆ. ಆದಪ್ರಯುಕ್ತ ಸಕಲ ಶ್ರುತಿಗಳ ತಾತ್ಪರ್ಯವನ್ನನುಸರಿಸಿ ಈ ಶ್ರೀಹರಿಗೇ ಅನಂತಗುಣಗಳು ಇರುತ್ತವೆ ಎನ್ನುವುದು ಸಿದ್ಧವಾಗುವುದು.

ಈ ರೀತಿಯಲ್ಲಿ ಯೋಗವೃತ್ತಿಯನ್ನು ಆಶ್ರಯಿಸಿ ಪರಮಾತ್ಮನಲ್ಲಿ ಸರ್ವಶಬ್ದಗಳ ಸಮನ್ವಯವನ್ನು ಸಾಧಿಸುವುದರಿಂದ ಪ್ರಯೋಜನವಿದೆ ಎಂದು ಹೇಳುತ್ತಾರೆ -

**ವಿಜ್ಞಾನಾರ್ಥತ್ವತಃ ಸರ್ವಶಬ್ದಾನಾಂ ನಾಸ್ತಿ ದೂಷಣಂ ।**

**ಅಂಗೀಕೃತೇಽಪಿ ನೈವಾಸ್ತಿ ದೋಷೋ ವಾಕ್ಯಸಮನ್ವಯೇ ॥೧೮॥**

ವಸಂತ ಮೊದಲಾದ ಶಬ್ದಗಳನ್ನು ರೂಢಿಗನುಸಾರವಾಗಿ ಅರ್ಥಮಾಡಿದಾಗ ಅನಿತ್ಯತ್ವ ಮೊದಲಾದ ದೂಷಣಗಳು ಬರುತ್ತವೆ. ಮೇಲೆ ಹೇಳಿರುವ ಪ್ರಕಾರವಾಗಿ ಪರಮಾತ್ಮನ ಅನಂತಾನಂತಗುಣಗಳ ವಿಶೇಷ ಜ್ಞಾನವನ್ನು ಪ್ರತಿಪಾದಿಸುವ ಸಲುವಾಗಿ ಪರಮಮುಖ್ಯಯೋಗವೃತ್ತಿಯಿಂದ ಎಲ್ಲ ವೈದಿಕ ಶಬ್ದಗಳಿಗೂ ಪರಮಾತ್ಮನಲ್ಲಿ ಸಮನ್ವಯ ಮಾಡಿದಾಗ ಯಾವುದೇ ದೋಷಗಳು ಇರುವುದಿಲ್ಲ. ಈ ಪ್ರಕಾರವಾಗಿ ಕರ್ಮಕಾಂಡದಲ್ಲಿರತಕ್ಕ ಎಲ್ಲ ಪದಗಳಿಗೂ ಪರಮಾತ್ಮನಲ್ಲಿ ಸಮನ್ವಯವನ್ನು ಸಾಧಿಸಿ ಸಮನ್ವಯಸೂತ್ರದ ಅನುಪಪತ್ತಿಯನ್ನು ಪರಿಹರಿಸಿದರು. ಇದೇ ರೀತಿ ವಾಕ್ಯಾನ್ವಯಪಕ್ಷವನ್ನು ಅಂಗೀಕರಿಸಿದರೂ ಯಾವುದೇ ದೋಷವಿರುವುದಿಲ್ಲ. ಇದರಿಂದ ವಾಕ್ಯಾನ್ವಯಾತ್ ಎನ್ನುವ ೨೦ನೇ ಸೂತ್ರದ ತಾತ್ಪರ್ಯವೂ

ಉಕ್ತವಾಯಿತು.

ಹಾಗಾದರೆ ಕರ್ಮಕಾಂಡಗಳಲ್ಲಿ ಬರತಕ್ಕ ವಾಕ್ಯಗಳು ಸಾಂಗವಾದ ಕರ್ಮಗಳ ಪರವಾಗಿಯೇ ಎಂದು ಪ್ರಸಿದ್ಧವಾಗಿರುವಾಗ ಆ ವಾಕ್ಯಗಳನ್ನು ಪರಬ್ರಹ್ಮನಲ್ಲಿ ಸಮನ್ವಯ ಮಾಡುವುದು ಯುಕ್ತವಲ್ಲ ಎಂದರೆ -

**ತದರ್ಥತ್ವೇನ ಕರ್ಮಾದೇಃ ಸಂಭವಾದಲ್ಪಬುದ್ಧಯೇ ।**

ಅಲ್ಪಬುದ್ಧಿಗಳ ಕರ್ಮಾದಿಗಳಿಗೂ ಬ್ರಹ್ಮಜ್ಞಾನಾರ್ಥತ್ವವು ಕೂಡುವುದರಿಂದ ವಾಕ್ಯಾನ್ವಯಕ್ಕೆ ಅನುಪಪತ್ತಿಯು ಬರುವುದಿಲ್ಲ.

ಅಲ್ಪಬುದ್ಧಿಗಳಿಗೆ ಪದಾನ್ವಯವೇ ಬ್ರಹ್ಮಜ್ಞಾನಕ್ಕೆ ಕಾರಣವಾಗುವುದಾದರೆ ವಾಕ್ಯಾನ್ವಯದಿಂದ ಏನು ಪ್ರಯೋಜನ ಎಂದು ಕೇಳಿದರೆ -

**ಕಶ್ಛಂದಸಾಂ ಯೋಗಮಿತಿ ಶ್ರುತೇರ್ಯೋಗಾರ್ಥತತ್ತ್ವವಿತ್ ॥೧೯॥**

**ಬ್ರಹ್ಮೈಕೋ ನೈವ ಚಾನ್ಯೋಽಸ್ತಿ ಕ ಇತ್ಯಸ್ಯೋಭಯಾರ್ಥತಃ ।**

'ಕಶ್ಛಂದಸಾಂ ಯೋಗಮಾವೇದ ಧೀರಃ' ಎಂದು ಶ್ರುತಿಯು ಹೇಳುವಂತೆ, ವೈದಿಕ ಪದಗಳ ಯೋಗವೃತ್ತಿಯನ್ನು ಮಹಾಬುದ್ಧಿವಂತರೇ ತಿಳಿಯಲು ಅಸಾಧ್ಯ ಎಂದಮೇಲೆ ಅಲ್ಪಬುದ್ಧಿಗಳಿಗೆ ಹೇಗೆ ತಾನೇ ತಿಳಿದೀತು. ಆದ್ದರಿಂದ ವಾಕ್ಯಾನ್ವಯವನ್ನು ಹೇಳಿದ್ದು ಯುಕ್ತವೇ ಆಗುವುದು. ಹೀಗೆಂದ ಮಾತ್ರಕ್ಕೆ ಯೋಗಾರ್ಥಜ್ಞಾನವುಳ್ಳವರು ಯಾರೂ ಇಲ್ಲವೆಂದು ತಿಳಿಯಬಾರದು. ಇಲ್ಲಿ ಶ್ರುತಿಯು ಕಃ ಪದವನ್ನು ಉಭಯಾರ್ಥದಲ್ಲಿ ಪ್ರಯೋಗಿಸಿದೆ. ಕಃ ಎನ್ನುವುದಕ್ಕೆ ಚತುರ್ಮುಖಬ್ರಹ್ಮನಲ್ಲಿಯೂ ಪ್ರಸಿದ್ಧಿ ಇರುವುದರಿಂಡ, ಬ್ರಹ್ಮನೊಬ್ಬನೇ ಪದಗಳ ಅವಯವ ಶಕ್ತಿಯ ಯಥಾರ್ಥವಾದ ಜ್ಞಾನವನ್ನು ಹೊಂದಿರುವನು. ಅಂಥಹ ಜ್ಞಾನವು ಮತ್ತೊಬ್ಬರಿಗೆ ಇಲ್ಲವೇ ಇಲ್ಲ.

ಬ್ರಹ್ಮನೊಬ್ಬನೇ ಪದಗಳ ಯೋಗವೃತ್ತಿಯಿಂದ ಅರ್ಥಸಂಬಂಧವನ್ನು ತಿಳಿದಿರುವನೆಂದಾದರೆ, 'ಏಕಸ್ಯ ಪ್ರತಿಭಾತಂ ಕೃತಕಾನ್ನ ವಿಶಿಷ್ಯತೇ' ಎನ್ನುವ ನ್ಯಾಯದಿಂದ ಶಬ್ದಾರ್ಥಸಂಬಂಧವು ಕೃತಕ ಎಂದಾಗುವುದು. ಇದರಿಂದಾಗಿ ಜೈಮಿನ್ಯಾಚಾರ್ಯರು ಹೇಳಿರುವ ಶಬ್ದಗಳಿಗೆ ಅರ್ಥಗಳಿಂದ ಸಹಜವಾದ ಸಂಬಂಧವನ್ನು (ಔತ್ಪತ್ತಿಕಸ್ತು ಶಬ್ದಸ್ಯಾರ್ಥೇನ ಸಂಬಂಧಃ) ಬಿಟ್ಟಂತೆಯೇ ಆಗುವುದು ಎಂದರೆ -

**ತಸ್ಯಾಪಿ ಪೂರ್ವಸಿದ್ಧಸ್ಯ ಜ್ಞಾನಮೇವೇತಿ ನಿಶ್ಚಯಾತ್ ॥೨೦॥**

**ನಿತ್ಯಯೋಗೋಽಪಿ ಶಬ್ದಾನಾಮರ್ಥೈರ್ನೈವ ನಿಷಿದ್ಧ್ಯತೇ ।**

ಬ್ರಹ್ಮನೊಬ್ಬನಿಗೇ ಶಬ್ದಾರ್ಥಗಳ ಸಂಬಂಧ ಜ್ಞಾನವು ಇರುವುದು ಎಂಬುದು ನಿಶ್ಚಿತವಾದರೂ, ಈ ಹಿಂದೆ ಇದ್ದುದೇ ಮತ್ತು ತಿಳಿಯಲ್ಪಟ್ಟುದೇ ಆದ ಶಬ್ದಾರ್ಥಸಂಬಂಧದ ಜ್ಞಾನವೇ ಆಗುವುದು. ಕೇವಲ ಉತ್ಪ್ರೇಕ್ಷೆಯಲ್ಲ. ಇದು ಶ್ರುತ್ಯಾದಿಗಳಿಂದ ನಿರ್ಣಯಿಸಲ್ಪಟ್ಟ ಜ್ಞಾನವೇ ಆಗಿರುವುದು. ಆದಪ್ರಯುಕ್ತ ಅರ್ಥಗಳಿಂದ ಶಬ್ದಗಳಿಗೆ ನಿತ್ಯವಾದ ಸಂಬಂಧವಿದೆ ಎಂಬ ಜೈಮಿನ್ಯಾಚಾರ್ಯರ ಅಭಿಪ್ರಾಯವನ್ನು ನಾವು ಪರಿತ್ಯಾಗಮಾಡಿಲ್ಲ.

ಬ್ರಹ್ಮನಿಗೆ ಸರ್ವಶಬ್ದಗಳ ಯೋಗಾರ್ಥಜ್ಞಾನವಿದೆ ಹಾಗೂ ಇತರ ಅಧಿಕಾರಿಗಳಲ್ಲಿ ಏಕದೇಶದಲ್ಲಿ ಯೋಗಾರ್ಥಜ್ಞಾನವಿದೆ ಎಂದೂ ಪ್ರಮಾಣಗಳಿಂದ ತಿಳಿದುಬರುವುದರಿಂದ, ಶಾಸ್ತ್ರಗಳಿಗೆ ಅನೇಕ ಅಧಿಕಾರಿಗಳು ಇದ್ದಾರೆಂಬುದು ನಿಶ್ಚಯವಾಗುವುದು.

## ಪ್ರಕೃತ್ಯಧಿಕರಣ

ಈಗ 'ಪ್ರಕೃತಿಶ್ಚ ಪ್ರತಿಜ್ಞಾದೃಷ್ಟಾಂತಾನುಪರೋಧಾತ್' 'ಏತೇನ ಸರ್ವೇ ವ್ಯಾಖ್ಯಾತಾಃ ವ್ಯಾಖ್ಯಾತಾಃ' ಎನ್ನುವ ೭ನೇ ಮತ್ತು ೭ನೇ ಅಧಿಕರಣಗಳ ತಾತ್ಪರ್ಯವನ್ನು ಸಂಕ್ಷೇಪವಾಗಿ ಹೇಳುತ್ತಾರೆ -

**ಸ್ತ್ರೀಶಬ್ದಾಶ್ಚ ನಿಷೇಧಾರ್ಥಾಃ ಸರ್ವೇಽಪಿ ಬ್ರಹ್ಮವಾಚಕಾಃ ॥೨೧॥**

ಪ್ರಕೃತ್ಯಾದಿ ಎಲ್ಲ ಸ್ತ್ರೀಲಿಂಗ ಶಬ್ದಗಳೂ, ನಿಷೇಧ ಅಥವಾ ಅಭಾವವನ್ನು ಹೇಳುವ ಅಸತ್ ಶೂನ್ಯ ಇತ್ಯಾದಿ ಎಲ್ಲ ಶಬ್ದಗಳೂ ಪರಬ್ರಹ್ಮನನ್ನೇ ಪ್ರತಿಪಾದಿಸುತ್ತವೆ.

ಇಲ್ಲಿ ಶ್ರೀಮದಾಚಾರ್ಯರು ಎಲ್ಲ ಸೂತ್ರಗಳನ್ನೂ ವ್ಯಾಖ್ಯಾನ ಮಾಡಿಲ್ಲ. ಆದ್ದರಿಂದ 'ವ್ಯಾಖ್ಯಾಂ ಕರೋಮ್ಯನ್ವಪಿ ಚಾಹಮೇವ' ಎಂಬ ಪ್ರತಿಜ್ಞೆಗೆ ಹಾನಿಯಾಗುವುದಿಲ್ಲವೇ ಎಂದು ಆಕ್ಷೇಪ ಬಂದರೆ - ವಿಷಯಾದಿಗಳನ್ನು ಹೇಳುವುದರಿಂದಲೇ ವ್ಯಾಖ್ಯಾನ ಮಾಡಿದಂತೆ ಆಗುವುದು ಎಂಬ ಅಭಿಪ್ರಾಯದಿಂದ ಈ ಪಾದದಲ್ಲಿರುವ ಎಲ್ಲ ಅಧಿಕರಣಗಳ ವಿಷಯ ಪೂರ್ವಪಕ್ಷ ಸಿದ್ಧಾಂತಯುಕ್ತಿಗಳನ್ನು ಹೇಳುತ್ತಾರೆ.

## ಅಧಿಕರಣಗಳ ಉಪಾಧಿಗಳು

**ವಿರೋಧಿಸರ್ವಬಾಹುಲ್ಯಕಾರಣಸ್ತ್ರೀನಿಷೇಧಿನಾಂ ।**

**ಪೃಥಕ್ ಸಮನ್ವಯಾರ್ಥಾನಿ ಸ್ಥಾನಾನ್ಯೇತಾನಿ ಸರ್ವಶಃ ॥೨೨॥**

ಪರಮೈಶ್ವರ್ಯಕ್ಕೆ ವಿರೋಧಿಗಳಾದ ಬದ್ಧ ದುಃಖಿ ಅವರ ಮೊದಲಾದ ಶಬ್ದಗಳೂ (೧), ಹಿಂದೆ ಹೇಳಿದ ಮತ್ತು ಮುಂದೆ ಹೇಳಲ್ಪಡುವ ವಾಕ್ಯರೂಪ ಸಮನ್ವಯ ಪ್ರಕಾರಕ್ಕೆ ವ್ಯತಿರಿಕ್ತವಾದ ಅಂದರೆ ಪದವರ್ಣಸ್ವರಾದಿ ರೂಪವಾದ ಎಲ್ಲ ಶಬ್ದಗಳೂ (೨), ಬಾಹುಲ್ಯವಿಶಿಷ್ಟಾರ್ಥವನ್ನು ಹೇಳುವ ಎಲ್ಲ ಶಬ್ದಗಳೂ (೩), ಅವಾಂತರಕಾರಣಗಳನ್ನು ಹೇಳುವ ಶಬ್ದಗಳೂ (೪), ಸ್ತ್ರೀಲಿಂಗಗಳಾದ ಪ್ರಕೃತ್ಯಾದಿ ಶಬ್ದಗಳೂ (೬), ಹಾಗೂ ನಿಷೇಧವನ್ನು ಹೇಳುವ ಶೂನ್ಯ ಅಸತ್ ಮೊದಲಾದ ಶಬ್ದಗಳೂ (೭) ಹೀಗೆ ಏಳು ಪ್ರಕಾರದ ಶಬ್ದಗಳಿಗೆ ಪ್ರತ್ಯೇಕವಾಗಿ ಸಮನ್ವಯವನ್ನು ಸಾಧಿಸುವುದೇ ಈ ಪಾದದಲ್ಲಿರುವ ಎಲ್ಲ ಅಧಿಕರಣಗಳ ಪ್ರಯೋಜನವಾಗಿದೆ.

ಈ ಪಾದದಲ್ಲಿ ಏಳು ಅಧಿಕರಣಗಳೆಂದು ಭಾಷ್ಯಟೀಕೆಗಳಿಂದ ತೋರುವುದು. ಆದರೆ ಇಲ್ಲಿ ಆರು ಅಧಿಕರಣಗಳ ಉಪಾಧಿಗಳು ಮಾತ್ರ ಹೇಳಲ್ಪಟ್ಟಿವೆ. ಸಮಾಕರ್ಷಾತ್ ಇತ್ಯಾದಿ ಎಂಟು ಸೂತ್ರಗಳನ್ನೊಳಗೊಂಡಿರುವ ಐದನೇ ಅಧಿಕರಣವು ನಾಲ್ಕನೆಯ ಅಧಿಕರಣದ ಶೇಷವೆಂದು ಪರಿಗಣಿಸಿದರೆ ತಾತ್ಪರ್ಯದಲ್ಲಿ ಆರೇ ಅಧಿಕರಣವೆಂದಾಗುವುದು. ನಾಲ್ಕನೆಯ ಅಧಿಕರಣದ ಉಪಾಧಿಯೇ ಇಲ್ಲಿಗೂ ಅನ್ವಯವಾಗುವುದು. ಅಥವಾ ೫ನೇ ಅಧಿಕರಣವನ್ನು ಪ್ರತ್ಯೇಕವಾಗಿ ಪರಿಗಣಿಸಿದರೂ ಎರಡನೆಯ ಅಧಿಕರಣದ ಉಪಾಧಿಯನ್ನು ಹೇಳುವ **ಸರ್ವ** ಎಂಬ ಶಬ್ದದಿಂದಲೇ ಐದನೇ ಅಧಿಕರಣದ ಉಪಾಧಿಯೂ ಹೇಳಿದಂತಾಗುವುದು. ಈ ಪ್ರಕಾರ ಎಲ್ಲ ಅಧಿಕರಣಗಳ ಉಪಾಧಿಗಳನ್ನೂ ಇಲ್ಲಿ ಹೇಳಿದ್ದಾರೆ ಎಂದು ತಿಳಿಯಬೇಕು.

## ಪೂರ್ವಪಕ್ಷಯುಕ್ತಿಗಳು

**ಸರ್ವಮಾನ್ಯೈರ್ವಿರೋಧಶ್ಚ ವ್ಯುತ್ಪತ್ತೇರಪ್ಯಶಕ್ಯತಾ ।**

**ಪರಸ್ಪರವಿರೋಧಶ್ಚ ವಿರೋಧಃ ಕಾರ್ಯತದ್ವತೋಃ ॥೨೩॥**

**ಸ್ತ್ರೀಲಿಂಗತ್ವಂ ನಿಷೇಧಶ್ಚ ಪೂರ್ವಪಕ್ಷೇಷು ಯುಕ್ತಯಃ ।**

ಸಿದ್ಧಾಂತಯುಕ್ತಿಗಳು

**ದೋಷಾತ್ಕಸ್ಪೃಷ್ಟಿನಿಯಮಃ ಶಬ್ದಾರ್ಥಾಽನೇಕತಾ ತಥಾ ॥೨೪॥**

**ಬಹುರೂಪತ್ವಮೀಶಸ್ಯ ವ್ಯಕ್ತ್ಯವ್ಯಕ್ತಿ ವಿಶೇಷಿತಾ ।**

**ಉತ್ಪಾದನಂ ಸ್ವದೇಹಾಚ್ಚ ದುರ್ಜನಾವ್ಯಕ್ತತಾ ತಥಾ ॥೨೫॥**

**ಇತ್ಯಾದಿ ಯುಕ್ತಯಃ ಸಾಕ್ಷಾತ್ಸಿದ್ಧಾಂತಸ್ಥಾಪಿಕಾ ಇಹ ।**

'ಸರ್ವಮಾನೈರ್ವಿರೋಧ' ಎನ್ನುವುದರಿಂದ ಪ್ರಾರಂಭಿಸಿ 'ನಿಷೇಧಶ್ಚ' ಎನ್ನುವವರೆಗೆ ಪೂರ್ವಪಕ್ಷಯುಕ್ತಿಗಳು. 'ದೋಷ' ಎನ್ನುವುದರಿಂದ ಪ್ರಾರಂಭಿಸಿ 'ಅವ್ಯಕ್ತತಾ' ಎನ್ನುವವರೆಗೆ ಸಿದ್ಧಾಂತದಯುಕ್ತಿಗಳು. ಈ ಯುಕ್ತಿಗಳನ್ನು ಶ್ರೀರಾಘವೇಂದ್ರತೀರ್ಥರು ತಮ್ಮ ಪರಿಮಳ ಗ್ರಂಥದಲ್ಲಿ ಸೂಕ್ತವಾಗಿ ಹೊಂದಿಸಿ ಸಂಗ್ರಹವಾಗಿ ತಿಳಿಸಿದ್ದಾರೆ. ಅದರ ಸಂಗ್ರಹವನ್ನೇ ಇಲ್ಲಿ ನೀಡಲಾಗಿದೆ.

**ಆನುಮಾನಿಕಾಧಿಕರಣ**ದಲ್ಲಿ ಸರ್ವಪ್ರಮಾಣಗಳಿಂದ ವಿರೋಧ ಎಂದು ಪೂರ್ವಪಕ್ಷಯುಕ್ತಿ, ನಿಯಮೇನ ಶ್ರೀಹರಿಯಲ್ಲಿ ದೋಷಗಳ ಸಂಪರ್ಕವೇ ಇಲ್ಲವೆಂದು ಸಿದ್ಧಾಂತಯುಕ್ತಿ. **ಜ್ಯೋತಿರಧಿಕರಣ**ದಲ್ಲಿ ಅವಯವಾರ್ಥಕ್ಕೆ ಅಶಕ್ಯತಾ ಎಂದು ಪೂರ್ವಪಕ್ಷಯುಕ್ತಿ, ಶಬ್ದಾರ್ಥಗಳಿಗೆ ಅನೇಕತ್ವವಿದೆ ಎಂದು ಸಿದ್ಧಾಂತಯುಕ್ತಿ. **ನಸಂಖ್ಯಾಧಿಕರಣ**ದಲ್ಲಿ ಒಬ್ಬನಲ್ಲಿಯೇ ಏಕತ್ವ-ಬಹುತ್ವ ಇತ್ಯಾದಿ ಧರ್ಮಗಳು ಪರಸ್ಪರವಿರೋಧವಾದ್ದರಿಂದ ಕೂಡುವುದಿಲ್ಲ ಎಂದು ಪೂರ್ವಪಕ್ಷಯುಕ್ತಿ, ಶ್ರೀಹರಿಗೆ ಬಹುರೂಪತ್ವವಿರುವುದರಿಂದ ವಿರೋಧವಿಲ್ಲ ಎಂದು ಸಿದ್ಧಾಂತಯುಕ್ತಿ. **ಕಾರಣತ್ವೇನಾಧಿಕರಣ**ದಲ್ಲಿ ಒಬ್ಬನಲ್ಲಿಯೇ ಕಾರ್ಯ-ಕಾರಣಭಾವಗಳಿಗೆ ವಿರೋಧ ಎಂದು ಪೂರ್ವಪಕ್ಷಯುಕ್ತಿ, ಶ್ರೀಹರಿಯಲ್ಲಿ ಅಭಿವ್ಯಕ್ತಿ-ಅನಭಿವ್ಯಕ್ತಿರೂಪ ವಿಶೇಷತೆಯು ಸಿದ್ಧಾಂತಯುಕ್ತಿ. **ಪ್ರಕೃತ್ಯಧಿಕರಣ**ದಲ್ಲಿ ಸ್ತ್ರೀಲಿಂಗತ್ವವು ಪೂರ್ವಪಕ್ಷಯುಕ್ತಿ, ಸ್ವದೇಹದಿಂದ ಉತ್ಪಾದನೆ ಎಂದು ಸಿದ್ಧಾಂತಯುಕ್ತಿ. **ಏತೇನ ಸರ್ವೇ ವ್ಯಾಖ್ಯಾತಾಃ** ಎಂಬ ಅಧಿಕರಣದಲ್ಲಿ ನಿಷಿದ್ಧಾತ್ಮಕತ್ವ ಎಂದು ಪೂರ್ವಪಕ್ಷಯುಕ್ತಿ, ದುರ್ಜನರಿಗೆ ವ್ಯಕ್ತವಾಗದಿರುವಿಕೆ ಎಂದು ಸಿದ್ಧಾಂತಯುಕ್ತಿ.

ಈ ರೀತಿ **ಆನುಮಾನಿಕಮಪ್ಯೇಕೇಷಾಂ** ಇವೇ ಮೊದಲಾದ ಸೂತ್ರಗಳನ್ನು

ಸಂಕ್ಷೇಪವಾಗಿ ವ್ಯಾಖ್ಯಾನಮಾಡಿ, ಈಗ ಸಿಂಹಾವಲೋಕನ ನ್ಯಾಯದಿಂದ **ಸಮಾಕರ್ಷಾಧಿಕರಣ, ಜ್ಯೋತಿರಧಿಕರಣ**ಗಳನ್ನು 'ಅನ್ವಯಃ ಸರ್ವಶಬ್ದಾನಾಂ' ಇತ್ಯಾದಿಗಳಿಂದ ಸ್ವಲ್ಪವಿಸ್ತಾರವಾಗಿ ವ್ಯಾಖ್ಯಾನ ಮಾಡುತ್ತಾರೆ.

**ಅನ್ವಯಃ ಸರ್ವಶಬ್ದಾನಾಮಶಕ್ಯೋ ಜ್ಞಾತುಮಂಜಸಾ ।।೨೬।।**

**ಇತಿ ಯಲ್ಲೋಕವೈಮುಖ್ಯಂ ಜೈಮಿನ್ಯಾದಿಮತಂ ವದನ್ ।**

**ವಿದ್ಯಾಧಿನಾಥೋ ಭಗವಾನಪಾಚಕ್ರೇ ಸ್ವಯಂ ಪ್ರಭುಃ ।।೨೭।।**

**ಸ್ವಶಿಷ್ಯಾಣಾಂ ಪ್ರಸಿದ್ಧ್ಯರ್ಥಂ ಮತಮಾತ್ಮೀಯಮಂಶತಃ ।**

**ವಿಜ್ಞಾತಂ ತೈಃ ಜಗಾದಾತ್ರ ತಾರತಮ್ಯಂ ನೃಣಾಂ ವದನ್ ।।೨೮।।**

ಪರಬ್ರಹ್ಮನಲ್ಲಿ ಎಲ್ಲ ಶಬ್ದಗಳಿಗೂ ಸಮನ್ವಯವನ್ನು ಚೆನ್ನಾಗಿ ತಿಳಿಯಲು ಅಶಕ್ಯರಾದ ಮಂದಜನರು ಮೋಕ್ಷಮಾರ್ಗದಿಂದ ವಿಮುಖರಾಗಿ ಸುಲಭವಾಗಿ ಫಲದೊರೆಯುವ ಧರ್ಮಮಾರ್ಗದಲ್ಲಿ ಪ್ರವರ್ತರಾಗಿ ಮೋಕ್ಷದಿಂದ ವಂಚಿತರಾಗುವರು. ಆದಪ್ರಯುಕ್ತ ಸ್ವಯಂ ಸಮರ್ಥರಾದ ಭಗವಾನ್ ವೇದವ್ಯಾಸರು ತಾವೇ ಜೈಮಿನ್ಯಾದಿಗಳ ಮತವನ್ನು ಹೇಳುತ್ತ ವಾಕ್ಯಾನ್ವಯವನ್ನು ತೋರಿಸಿ ನಿರಾಕರಿಸಿದರು. ಜೈಮಿನ್ಯಾದಿಗಳು ವೇದವ್ಯಾಸರ ಶಿಷ್ಯರೇ ಆಗಿರುವುದರಿಂದ ಅವರಿಗೆ ಪ್ರಸಿದ್ಧಿ ಬರುವುದಕ್ಕೋಸ್ಕರ ತಮ್ಮದೇ ಮತವು ಜೈಮಿನ್ಯಾದಿಗಳಿಂದ ಏಕದೇಶವಾಗಿ(ಭಾಗಶಃ) ತಿಳಿಯಲ್ಪಟ್ಟದೆಯೆಂದು ಹೇಳುತ್ತ, ಅಲ್ಪಾಧಿಕಾರಿಗಳಲ್ಲಿರುವ ಅವಸ್ಥಾತಾರತಮ್ಯ ದೃಷ್ಟಿಯಿಂದ ಮತಭೇದವಿದೆ (ಅಮುಮುಕ್ಷು, ಮುಮುಕ್ಷು ಹಾಗೂ ಜ್ಞಾನಿತ್ವರೂಪ ಅವಸ್ಥಾತ್ರಯದಲ್ಲಿ ಉತ್ತರೋತ್ತರ ಆಧಿಕ್ಯವು), ಆದರೆ ವಿರೋಧವಿರುವುದಿಲ್ಲ ಎಂದು ಹೇಳಿದರು.

## ಶಬ್ದಪ್ರವೃತ್ತಿಯ ಪ್ರಭೇದಗಳು

ಜ್ಯೋತಿರಧಿಕರಣದಲ್ಲಿ ಯೋಗವೃತ್ತಿಯಿಂದ ಪರಮೇಶ್ವರನಲ್ಲಿ ಎಲ್ಲ ಶಬ್ದಗಳಿಗೂ ಸಮನ್ವಯವನ್ನು ಹೇಳಿದರು. ಇದು ಯುಕ್ತವಲ್ಲ. ಪ್ರಕೃತ್ಯಾದಿಗಳಿಗೆ ಅನ್ಯಪರತ್ವವಿಲ್ಲವಾದರೆ ನಿರ್ವಚನವೇ ಕೂಡಲಾರದು. ಪ್ರಕೃತ್ಯಾದಿ ಶಬ್ದಗಳಿಗೆ ಅನ್ಯಪರವೆಂದು ಅರ್ಥಮಾಡಿದರೆ ಭಗವಂತನಿಗೆ ಸರ್ವಶಬ್ದಗಳ ವಾಚ್ಯತ್ವವು ಇಲ್ಲದೇ ಹೋಗುವುದು. 'ವಸಂತೇ ವಸಂತೇ ಜ್ಯೋತಿಷಾ ಯಜೇತ'

ಇತ್ಯಾದಿಗಳಿಗೆ ಭಗವತ್ಪರತ್ವವನ್ನು ಹೇಳಿದರೆ ಲೋಕವ್ಯವಹಾರಕ್ಕೇ ಲೋಪ ಬರುವುದು. ಹೀಗೆ ಹೇಳಿದರೆ -

**ತೇಷು ತೇಷು ಪದಾರ್ಥೇಷು ರೂಢಿರಂಗೀಕೃತಾ ಯತಃ ।**

**ಪ್ರಯೋಜನಬಹುತ್ವೇನ ತಸ್ಯ ತಸ್ಯಾವಿರೋಧತಃ ॥೨೯॥**

**ಉಪದೇಶಾದಿಸಾಮರ್ಥ್ಯಾದ್ವಿಷ್ಣೌ ಶಕ್ತಿಶ್ಚ ಗೃಹ್ಯತೇ ।**

ವ್ಯುತ್ಪತ್ತಿಯು ಕೂಡುವುದು, ಕರ್ಮಾನುಷ್ಠಾನವು ಕೂಡುವುದು, ಲೋಕವ್ಯವಹಾರಕ್ಕೆ ಬಾಧಕವಿಲ್ಲದಿರುವುದು- ಹೀಗೆ ಅನೇಕ ಪ್ರಯೋಜನಗಳು ಕಂಡಿರುವುದರಿಂದ ಆಯಾಯ ಶಬ್ದಗಳಿಂದ ವಾಚ್ಯಗಳೆಂದು ಪ್ರಸಿದ್ಧಗಳಾದ ಅರ್ಥಗಳಲ್ಲಿ ಆಯಾಯ ಶಬ್ದಗಳಿಗೆ ರೂಢಿಯು ಅಂಗೀಕೃತವಾಗಿದೆ. ಆದಕಾರಣ ಆ ಅರ್ಥಗಳನ್ನು ಬಿಡದೆ, ಉಪದೇಶ ಲಿಂಗ ಪ್ರಕರಣಾದಿಗಳ ಬಲದಿಂದ ಎಲ್ಲ ಶಬ್ದಗಳಿಗೂ ವಿಷ್ಣುವಿನಲ್ಲಿ ಶಕ್ತಿಯು ಗ್ರಹಿಸಲ್ಪಡುತ್ತದೆ.

ಹಾಗಾದರೆ ಎಲ್ಲ ಶಬ್ದಗಳಿಗೂ ಈಶ್ವರನಲ್ಲಿಯೂ ಬೇರೆಕಡೆಗಳಲ್ಲಿಯೂ ಹೀಗೆ ಉಭಯಾರ್ಥತ್ವ ಒಪ್ಪುವುದಾದರೆ, ಈಶ್ವರನಂತೆಯೇ ಇತರರಿಗೂ ಸರ್ವೋತ್ತಮತ್ವವನ್ನು ಒಪ್ಪಬೇಕಾದೀತು. ಇದು ಈಶ್ವರತ್ವಕ್ಕೇ ವಿರೋಧ. ಆದ್ದರಿಂದ ಎರಡು ಅರ್ಥಗಳನ್ನು ಅಂಗೀಕರಿಸುವಂತಿಲ್ಲ ಎಂದು ಹೇಳಿದರೆ -

**ತಥಾಪ್ಯೇತದ್ವಿರೋಧೇ ತು ತದ್ವಾಚಿತ್ವಮಪೋದ್ಯತೇ ॥೩೦॥**

**ಅವಿರೋಧೇ ತು ಬಹ್ವರ್ಥಾಃ ಏತನ್ಮೂಲತಯಾ ಮತಾಃ ।**

ಶಬ್ದಗಳು ಉಭಯಾರ್ಥಕಗಳು ಎಂದು ಸಾಮಾನ್ಯರೂಪದಲ್ಲಿ ಹೇಳಿದ್ದು. ಹಾಗಿದ್ದರೂ ಪರಮೇಶ್ವರತ್ವಕ್ಕೆ ವಿರೋಧ ಬರುವುದಾದರೆ ಅನ್ಯಪರವಾದ ಅರ್ಥವನ್ನು ಬಿಡತಕ್ಕದ್ದು. ಎಲ್ಲ ಶಬ್ದಗಳಿಗೂ ಪರಮಮುಖ್ಯವೃತ್ತಿಯಿಂದ ಪರಮಾತ್ಮನ ಪರವಾಗಿಯೇ ಅರ್ಥ ಮಾಡಬೇಕು. ಅಮುಖ್ಯಾರ್ಥದಿಂದ ಇತರ ಪದಾರ್ಥಗಳಲ್ಲಿ ಅನ್ವಯಿಸಬೇಕು. ಏಕೆಂದರೆ ಎಲ್ಲ ಶಬ್ದಗಳಿಗೂ ಪರಮೇಶ್ವರನೇ ಮುಖ್ಯಾರ್ಥನು. ಪರಮೇಶ್ವರತ್ವಕ್ಕೆ ವಿರೋಧ ಬಾರದಂತೆ ಶಬ್ದಗಳಿಗೆ ಬಹ್ವರ್ಥಗಳನ್ನು ಮಾಡುವುದಕ್ಕೆ ಅಡ್ಡಿಯಿಲ್ಲ.

ಪುರಂದರಾದಿಗಳಲ್ಲಿಯೂ ಇಂದ್ರಾದಿ ಶಬ್ದಗಳು ಮುಖ್ಯವೃತ್ತಿಗಳೆಂದು ಹೇಳಲ್ಪಡುವ ರೂಢಿಯೋಗಗಳಿಂದಲೇ ಪ್ರವೃತ್ತವಾಗುತ್ತವೆ. ಆದ್ದರಿಂದ ಅಕ್ಷ

ಇತ್ಯಾದಿ ಶಬ್ದಗಳಂತೆಯೇ ಇಂದ್ರಾದಿ ಶಬ್ದಗಳಿಗೂ ವಿಷ್ಣು ಹಾಗೂ ಇಂದ್ರಪರ ಎಂಬುದಾಗಿ ಎರಡು ಅರ್ಥಗಳೂ ಮುಖ್ಯವೇ ಆಗುತ್ತವೆ. ಕೇವಲ ವಿಷ್ಣುವನ್ನೇ ಹೇಳುತ್ತವೆ ಎನ್ನುವುದು ಸರಿಯಲ್ಲ ಎಂದರೆ -

**ಇತೋ ಹಿ ರೂಢತಾऽನ್ಯೇಷಾಮುಪಜೀವ್ಯತ್ವಮತ್ರ ಹಿ ॥೬೧॥**

**ತತ್ಸಿದ್ಧಿಸ್ತದಪೇಕ್ಷಾ ಚ ಸಾಪೇಕ್ಷಾ ಚ ಹರೀಚ್ಛಯಾ ।**

ಪುರಂದರಾದಿಗಳಿಗೆ ಇಂದ್ರಾದಿ ಶಬ್ದಗಳಿಂದ ವಾಚ್ಯತ್ವವು ರೂಢಿಯಲ್ಲಿದೆ ಎನ್ನುವುದು ಸತ್ಯವೇ ಆದರೂ, ಆ ರೂಢಿಯೂ ಕೂಡ ಶ್ರೀಹರಿಯಿಂದಲೇ ಆಗುವುದು. ಈ ಯೋಗವಿಷಯತ್ವದಲ್ಲಿ ಶ್ರೀಹರಿಗೇ ಉಪಜೀವ್ಯತ್ವವು. ಆದ್ದರಿಂದ ಶ್ರೀಹರಿಯೇ ಮುಖ್ಯಾರ್ಥನು, ಪುರಂದರಾದಿಗಳಲ್ಲ. ಶ್ರೀಹರಿಯ ಅಪೇಕ್ಷೆಯನ್ನನುಸರಿಸಿಯೇ ಬೇರೆ ಕಡೆಗಳಲ್ಲಿ ಶಬ್ದಗಳ ಪ್ರವೃತ್ತಿಯು ಸಿದ್ಧಿಸುವುದು. ಆದರೆ ಶ್ರೀಹರಿಯಲ್ಲಿ ಮಾತ್ರ ಅನ್ಯಾಪೇಕ್ಷೆಯಿಲ್ಲದೆಯೇ ಶಬ್ದಗಳಿಗೆ ಪ್ರವೃತ್ತಿಯು ಕೂಡುವುದು.

**ವಿವರಣೆ:**

ಯಾವುದಿಲ್ಲದೆ ಯಾವುದಕ್ಕೆ ಪ್ರವೃತ್ತ್ಯಾದಿಗಳು ಆಗುವುದಿಲ್ಲವೋ ಅದು ಅದಕ್ಕೆ ಉಪಜೀವ್ಯವೆನಿಸುವುದು. ಉಪಜೀವ್ಯವನ್ನು ಅವಲಂಬಿಸಿಕೊಂಡು ತನ್ನ ಪ್ರವೃತ್ತ್ಯಾದಿಗಳನ್ನು ಮಾಡುವ ವಸ್ತು ಉಪಜೀವಕವೆನಿಸುವುದು. ಉಪಜೀವ್ಯವು ಮುಖ್ಯ. ಉಪಜೀವಕವು ಅಮುಖ್ಯ. ಸುಡುವುದು ಎನ್ನುವುದು ಬೆಂಕಿಯಲ್ಲಿ ಮುಖ್ಯಾರ್ಥ, ಕಾದ ಕಬ್ಬಿಣದಲ್ಲಿ ಅಮುಖ್ಯಾರ್ಥ. ಎಲ್ಲ ಶಬ್ದಗಳಿಗೂ ಶ್ರೀಹರಿಯಲ್ಲಿಯೇ ಮುಖ್ಯಾರ್ಥ, ಬೇರೆ ಕಡೆಗಳಲ್ಲಿ ಅಮುಖ್ಯಾರ್ಥ. ಅರ್ಥಾಂತರವನ್ನು ಅಪೇಕ್ಷಿಸಿಯೇ ಶ್ರೀಹರಿಯಲ್ಲಿ ಶಬ್ದಗಳ ಪ್ರವೃತ್ತಿಯು. ಆದ್ದರಿಂದ ಶ್ರೀಹರಿಯಲ್ಲಿಯೂ ಅಮುಖ್ಯಾರ್ಥವೆಂದು ಹೇಳಕೂಡದು. ಏಕೆಂದರೆ ಆ ಅರ್ಥಾಂತರಾಪೇಕ್ಷೆಯೂ ಶ್ರೀಹರಿಯ ಇಚ್ಛೆ ಮತ್ತು ನಿಯಮನಕ್ಕೆ ಒಳಪಟ್ಟಿರುವುದು.

ಈ ಪ್ರಕಾರವಾಗಿ ಶ್ರೀಹರಿಯ ಸನ್ನಿಧಾನಾದಿಗಳಿಂದಲೇ ಶಬ್ದಗಳಿಗೆ ಬೇರೆ ಕಡೆಗಳಲ್ಲಿ ಪ್ರವೃತ್ತಿಯನ್ನು ಅಂಗೀಕರಿಸಿದರೆ, ಕಾದಕಬ್ಬಿಣದಲ್ಲಿ ಸುಡುವುದು ಎನ್ನುವ ಅರ್ಥ ಹೇಗೆ ಲಾಕ್ಷಣಿಕವೋ ಹಾಗೆಯೇ ಲೋಕದಲ್ಲಿ ಎಲ್ಲ

ಶಬ್ದಗಳೂ ಲಾಕ್ಷಣಿಕವೇ ಆಗಬೇಕಾಗುವುದು. ಗಂಗಾ ಎಂಬ ಶಬ್ದಕ್ಕೆ ಗಂಗಾ ಪ್ರವಾಹ ಎನ್ನುವುದು ಮುಖ್ಯಾರ್ಥ, ತೀರ ಎನ್ನುವುದು ಲಾಕ್ಷಣಿಕಾರ್ಥ ಎಂಬ ವಿಶೇಷವೇ ಕೂಡಲಾರದು. ಎರಡೂ ಲಾಕ್ಷಣಿಕಾರ್ಥಗಳೇ ಆಗಬೇಕಾಗುತ್ತವೆ. ಹೀಗೆ ಆಶಂಕಿಸಿದರೆ ಈಕ್ಷತ್ಯಧಿಕರಣದಲ್ಲಿ **ತನ್ಮೂಲತಯಾ** ಇತ್ಯಾದಿಗಳಿಂದ ಹೇಳಿದ ಅರ್ಥವನ್ನು ಇಲ್ಲಿ ಉಪಸಂಹಾರ ಮಾಡುತ್ತಾರೆ.

**ತಸ್ಮಾತ್ಪರಮಮುಖ್ಯತ್ವಂ ವಿಷ್ಣಾವನ್ಯತ್ರ ಮುಖ್ಯತಾ ॥೩೨॥**

**ಉಪಲಕ್ಷಣಾ ಚ ಗೌಣೀ ಚ ತಿಸ್ರಃ ಶಬ್ದಸ್ಯ ವೃತ್ತಯಃ ।**

ಪುರಂದರಾದಿಗಳಲ್ಲಿ ಇಂದ್ರಾದಿ ಶಬ್ದಗಳು ಲಾಕ್ಷಣಿಕವಲ್ಲ. ರೂಢಿಯು ಕೋಶಗಳಿಂದ ಸಿದ್ಧವಾಗಿದೆ. ಪರಮೈಶ್ವರ್ಯರೂಪವಾದ ಯೌಗಿಕಾರ್ಥವೂ ಇದೆ. ಆದರೆ ಈ ರೀತಿಯ ಅರ್ಥಗಳು ಪರಮೇಶ್ವರನ ಅಧೀನವಾಗಿ ಅವನ ಇಚ್ಛೆಯಿಂದಲೇ ಪ್ರವೃತ್ತಿಯನ್ನು ಹೊಂದಿವೆ. ಶ್ರೀಹರಿಯಲ್ಲಾದರೋ ಬೇರೆ ಯಾರ ಅಧೀನ ಅಥವಾ ಅಪೇಕ್ಷೆಯಿಲ್ಲದೆ ಶಬ್ದಗಳಿಗೆ ಪ್ರವತ್ತಿಯು ಇರುವುದು. ಹೀಗೆ ಎಲ್ಲ ಶಬ್ದಗಳಿಗೂ ಶ್ರೀಹರಿಯಲ್ಲಿ ಪರಮಮುಖ್ಯಾರ್ಥವೂ ಬೇರೆ ಕಡೆಗಳಲ್ಲಿ ಮುಖ್ಯಾರ್ಥವೂ ಎಂದು ತಿಳಿಯುವುದು. ಮುಖ್ಯಾರ್ಥದಲ್ಲಿಯೂ ಲಕ್ಷಣಾವೃತ್ತಿ ಮತ್ತು ಗೌಣೀವೃತ್ತಿ ಎಂಬುದಾಗಿ ಎರಡು ವಿಧ. ಈ ಪ್ರಕಾರವಾಗಿ ಮೂರು ವಿಧದ ಶಬ್ದವೃತ್ತಿಗಳು ಪ್ರಸಿದ್ಧವಾಗಿವೆ.

ಪರಮಮುಖ್ಯವೃತ್ತಿಯಲ್ಲಿ ಮಹಾಯೋಗ ಮತ್ತು ಮಹಾಯೋಗರೂಢಿ ಎಂದು ಎರಡು ವಿಧ. ಯೋಗವಿಲ್ಲದೆ ವಿದ್ವದ್ರೂಢಿ ಸಾಧ್ಯವಿಲ್ಲವಾದ್ದರಿಂದ ಈಶ್ವರನಲ್ಲಿ ಮಹಾರೂಢಿ ಎಂಬ ಇನ್ನೊಂದು ಪ್ರಕಾರದ ವೃತ್ತಿಯು ಸಂಭವಿಸುವುದಿಲ್ಲ. ಇಲ್ಲಿ ಮಹಾಯೋಗ ಮತ್ತು ಮಹಾಯೋಗರೂಢಿ ಲಕ್ಷಣಗಳನ್ನು ಹೇಳುತ್ತಾರೆ–

**ಪ್ರವೃತ್ತಿಹೇತೋರ್ಬಾಹುಲ್ಯಂ ಜ್ಞೇಯಂ ಪರಮಮುಖ್ಯತಾ ॥೩೩॥**

**ತತ್ರ ಪ್ರಯೋಗಬಾಹುಲ್ಯಂ ಯದಿ ತತ್ಪರತಾ ಕಿಮು ।**

**ಉಭಯಂ ದೃಶ್ಯತೇ ವಿಷ್ಣೌ ಶಬ್ದಾನಾಮಪಿ ಸರ್ವಶಃ ॥೩೪॥**

**ಪ್ರಯೋಗಮಾತ್ರ ಬಾಹುಲ್ಯಂ ರೂಢಿರಿತ್ಯಭಿಧೀಯತೇ ।**

ಶಬ್ದಪ್ರವೃತ್ತಿಗೆ ಕಾರಣವಾದ ಅರ್ಥದಲ್ಲಿ ಬಾಹುಲ್ಯವಿದ್ದರೆ ಅಂಥಹ

ಶಬ್ದವೃತ್ತಿಯನ್ನು ಮಹಾಯೋಗರೂಪವಾದ ಪರಮಮುಖ್ಯವೃತ್ತಿಯೆಂದು ತಿಳಿಯಬೇಕು. ಆದರೊಂದಿಗೆ ರೂಢಿನಿಮಿತ್ತಕ ಪ್ರಯೋಗಕ್ಕೂ ಬಾಹುಲ್ಯವಿದ್ದರೆ, ಆಗ ಅದಕ್ಕಿಂತ ಪರಮಮುಖ್ಯವಾದ ವೃತ್ತಿಯು ಬೇರೆ ಯಾವುದಿರಲು ಸಾಧ್ಯ? ಅಂಥಹ ಶಬ್ದವೃತ್ತಿಯನ್ನು ಮಹಾಯೋಗರೂಢಿವೃತ್ತಿ ಎಂದು ತಿಳಿಯತಕ್ಕದ್ದು. ಎಲ್ಲ ಶಬ್ದಗಳಿಗೂ ವಿಷ್ಣುವಿನಲ್ಲಿ ಮಹಾಯೋಗ, ಮಹಾಯೋಗರೂಢಿ ಎನ್ನುವ ಎರಡು ವೃತ್ತಿಗಳೂ ಪ್ರಮಾಣಗಳಿಂದ ಕಂಡುಬರುತ್ತವೆ. ಯಾವ ಶಬ್ದಕ್ಕೆ ಯಾವ ಅರ್ಥದಲ್ಲಿ ಪ್ರಯೋಗಮಾತ್ರ ಬಾಹುಲ್ಯವಿದೆಯೋ ಆ ಅರ್ಥದಲ್ಲಿ ಆ ಶಬ್ದವೃತ್ತಿಯು ರೂಢಿ ಎಂದು ಕರೆಸಲ್ಪಡುವುದು.

ಹೀಗೆ ಅವ್ಯವಹಿತವಾದ, ಅಂದರೆ ಮುಖ್ಯಾರ್ಥವ್ಯವಧಾನವಿಲ್ಲದೇ ಶಬ್ದಾರ್ಥ ಜ್ಞಾನಕ್ಕೆ ಕಾರಣಭೂತವಾದ ಮುಖ್ಯವೃತ್ತಿಯ ಲಕ್ಷಣವನ್ನು ನಿರೂಪಿಸಿ, ಈಗ ವ್ಯವಹಿತವಾದ, ಅಂದರೆ ಮುಖ್ಯಾರ್ಥವ್ಯವಧಾನದಿಂದ ಶಬ್ದಾರ್ಥ ಜ್ಞಾನಕ್ಕೆ ಕಾರಣಭೂತವಾದ ಗೌಣೀ, ಲಕ್ಷಣಾ ಎನ್ನುವ ಅಮುಖ್ಯವೃತ್ತಿಯನ್ನು ನಿರೂಪಿಸುತ್ತಾರೆ -

**ಪ್ರಯೋಗಯುಕ್ತಸಾದೃಶ್ಯಂ ಸಂಬಂಧೋ ವಾಽಪ್ಯಮುಖ್ಯತಃ ॥೩೫॥**

**ವೃತ್ತಿಹೇತುರಿತಿ ಜ್ಞೇಯಃ ಪೂರ್ವಾಯೋಗೇ ಪರಗ್ರಹಃ ।**

ಪದಾರ್ಥಶಕ್ತಿಗೆ ವಿಷಯವಾದ ಮುಖ್ಯಾರ್ಥಕ್ಕೆ ಸಾದೃಶ್ಯ ಅಥವಾ ಸಂಬಂಧವೂ ಕೂಡ ಅಮುಖ್ಯವೃತ್ತಿಗೆ ಹೇತುವೆಂಬುದಾಗಿ ತಿಳಿಯತಕ್ಕದ್ದು. ಸಾದೃಶ್ಯವು ಗೌಣೀವೃತ್ತಿಗೂ, ಸಂಬಂಧವು ಲಕ್ಷಣಾವೃತ್ತಿಗೂ ಕಾರಣವು. ಆದರೆ ಮುಖ್ಯಾರ್ಥವು ಕೂಡದಿರುವಾಗ ಮಾತ್ರ ಅಮುಖ್ಯಾರ್ಥವನ್ನು ಗ್ರಹಿಸಬೇಕು.

'ಉಭಯಂ ದೃಶ್ಯತೇ ವಿಷ್ಣೌ' ಎನ್ನುವಲ್ಲಿ ಸೂಚಿತವಾದ ಮಹಾಯೋಗ ಮತ್ತು ಮಹಾಯೋಗರೂಢಿ ಎಂಬ ಎರಡು ರೀತಿಯ ವೃತ್ತಿಗಳಲ್ಲಿ ಮಹಾಯೋಗವು ಅಜ್ಞರೂಢಿಗಿಂತ ಪ್ರಬಲ ಎಂಬುದನ್ನು ಇಲ್ಲಿ ಉಪಪಾದಿಸುತ್ತಾರೆ -

**ಏತಮೇವ ತಥಾ ಸಂತಂ ಶತರ್ಚೇತ್ಯಾದಿ ನಾಮಭಿಃ ॥೩೬॥**

**ಆಚಕ್ಷತ ಇತಿ ಹ್ಯತ್ರ ಸಂತಮಿತ್ಯವಧಾರಣಾತ್ ।**

**ಯೋಗಸ್ಯ ರೂಢೇಃ ಪ್ರಾಬಲ್ಯಂ ವಿದ್ವದ್ರೂಢಿಂ ಚ ತತ್ರಗಾಂ ॥೬೭॥**

**ಬಹುಶೋ ದರ್ಶಯತ್ಯಂಜಸ್ತಾತ್ಪರ್ಯಾತ್ಸನಿರುಕ್ತಿಕಂ ।**

'ತಂ ಯಚ್ಛತಂ ವರ್ಷಾಣ್ಯಭ್ಯಾರ್ಚತ್ತಸ್ಮಾಚ್ಛತರ್ಚಿನ ಇತ್ಯಾಚಕ್ಷತ। ಏತಮೇವ ಸಂತಂ। ಸ ಯದಿದಂ ಸರ್ವಂ ಮಧ್ಯತೋ ದಧೇ। ಯದಿದಂ ಕಿಂಚ ತಸ್ಮಾನ್ಮಧ್ಯಮಾ ತಸ್ಮಾನ್ಮಧ್ಯಮಾ ಇತ್ಯಾಚಕ್ಷತ। ಏತಮೇವ ಸಂತಂ' ಹೀಗೆ ಶ್ರುತಿಯಿದೆ. ಪುರುಷರಲ್ಲಿ ನೂರು ವರ್ಷ ಪರ್ಯಂತವಾಗಿ ಇರುವ ಕಾರಣದಿಂದ ಈ ಶ್ರೀಹರಿಯನ್ನೇ ಶತರ್ಚಿ ಮೊದಲಾದ ನಾಮಗಳಿಂದ ವಾಚ್ಯನಾಗಿ ಅಥವಾ 'ಶತಂ ಅರ್ಚಂತಿ' ಎನ್ನುವ ವ್ಯುತ್ಪತ್ತಿಯಿಂದ ಶತರ್ಚಿ ಎನ್ನುವ ನಾಮದಿಂದ ವಿದ್ವಾಂಸರು ಹೇಳುತ್ತಾರೆ. ಅಲ್ಲದೆ ಈ ಶ್ರುತಿಯು 'ಸಂತಂ' ಎನ್ನುವ ಪದದಿಂದಲೂ 'ಏತಮೇವ' ಎನ್ನುವ ಅವಧಾರಣದಿಂದಲೂ ಲೋಕರೂಢಿಯ ದೆಶೆಯಿಂದ ಭಗವದ್ವಿಷಯಕ ಯೋಗಕ್ಕೆ ಪ್ರಾಬಲ್ಯವನ್ನು ತೋರಿಸುತ್ತದೆ. ಪರಮೇಶ್ವರನ ವಿಷಯದಲ್ಲಿ ವಿದ್ವದ್ರೂಢಿಯನ್ನೂ ಕೂಡ ಅನೇಕಾವರ್ತಿ ಚೆನ್ನಾಗಿ ನಿರುಕ್ತಿಸಹಿತವಾಗಿ ತಾತ್ಪರ್ಯಪೂರ್ವಕವಾಗಿಯೇ ತೋರಿಸುತ್ತದೆ.

'ಆಚಕ್ಷತೇ' ಎಂದು ವಿದ್ವಾಂಸರ ಪ್ರಯೋಗಬಾಹುಲ್ಯವನ್ನು ಹೇಳಿರುವುದರಿಂದ, ಶತರ್ಚ್ಯಾದಿ ಶಬ್ದಗಳಿಗೆ ವಿದ್ವದ್ರೂಡಿಯು ಹೇಳಿದಂತಾಯಿತು. 'ತಥಾ ಸಂತಂ' ಎನ್ನವುದರಿಂದ ಶ್ರೀಹರಿಯಲ್ಲಿಯೇ ಮುಖ್ಯಾರ್ಥವನ್ನು ಸೂಚಿಸಿದಂತಾಯಿತು. 'ಏತಮೇವ' ಎನ್ನುವ ಅವಧಾರಣದಿಂದ ಇತರರಿಗೆ ಶತರ್ಚ್ಯಾದಿ ಶಬ್ದಗಳ ಮುಖ್ಯಾರ್ಥವನ್ನು ನಿಷೇಧಿಸಿದಂತಾಯಿತು.

## ವಿಷ್ಣುವಿಗೆ ಸರ್ವಶಬ್ದವಾಚ್ಯತ್ವ

ಬೇರೆ ವಾಕ್ಯಗಳಿಂದಲೂ ವಿಷ್ಣುವಿಗೆ ಸರ್ವಶಬ್ದವಾಚ್ಯತ್ವವನ್ನು ಈಗ ಉಪಪಾದಿಸುತ್ತಾರೆ -

**ಅಃ ಇತಿ ಬ್ರಹ್ಮಕಥಿತಂ ತದ್ವ್ಯಾಖ್ಯಾನಾತ್ಮತಾ ತಥಾ ॥೬೮॥**

**ಶಬ್ದಾನಾಮಪಿ ಸರ್ವೇಷಾಂ ನಾಮವಿತ್ಯತಕೃತ್ಯತಾ ।**

'ಅಃ ಇತಿ ಬ್ರಹ್ಮ' ಎನ್ನುವ ಶ್ರುತಿಯಲ್ಲಿ ಅಕಾರವು ಬ್ರಹ್ಮವಾಚಕವೆಂದು

ಉಕ್ತವಾಗಿದೆ. ಹಾಗೆಯೇ 'ಅಕಾರೋ ವೈ ಸರ್ವಾ ವಾಕ್' ಎನ್ನುವ ಶ್ರುತಿಯಲ್ಲಿ ಅಕಾರದ ವ್ಯಾಖ್ಯಾನರೂಪವೇ ಎಲ್ಲ ಶಬ್ದಗಳೂ ಎಂದು ಹೇಳಲ್ಪಟ್ಟಿದೆ. ನಾಮಮಾತ್ರವನ್ನು ತಿಳಿದವನು ಮುಕ್ತಿಯನ್ನು ಹೊಂದುವವನೆಂದು ಅದೇ ಶ್ರುತಿಯಲ್ಲಿ ಹೇಳಲ್ಪಟ್ಟಿದೆ.

**ವಿಷ್ಣುನಾಮಾರ್ಥರೂಪತ್ವಂ ಸಂಹಿತಾದೇರಥಾಬ್ರವೀತ್ ॥೩೯॥**

ಸಕಲ ವೈದಿಕ ಸಂಹಿತೆಗಳ ಪೂರ್ವೋತ್ತರ ವರ್ಣಗಳೂ ವಿಷ್ಣುನಾಮದ ಅರ್ಥವನ್ನೇ ಪ್ರತಿಪಾದಿಸುತ್ತವೆ ಎಂಬುದಾಗಿ ವೇದವು ಸಾರುತ್ತಿದೆ.

**ಣಕಾರಂ ಚ ಷಕಾರಂ ಚ ಬಲಚೇಷ್ಟಾತ್ಮಕನಂ ವದನ್ ।**
**ತಜ್ಜ್ಞಾನಪೂರ್ವಕತ್ವೇನ ಸಂಹಿತಾಧ್ಯಯನಂ ತಥಾ ॥೪೦॥**

'ಣಕಾರೋ ಬಲಂ ಷಕಾರಃ ಪ್ರಾಣ ಆತ್ಮಾ (ಐತರೇಯ ವಾಕ್ಯ)' ಎಂದು ವಿಷ್ಣುನಾಮದಲ್ಲಿರುವ ಣಕಾರ ಮತ್ತು ಷಕಾರಗಳಿಗೆ ಪರಮೇಶ್ವರನ ಬಲ ಮತ್ತು ಚೇಷ್ಟೆಗಳ ಪ್ರತಿಪಾದಕತ್ವವನ್ನು ಹೇಳುವ ವೇದವು ಈರೀತಿಯ ಜ್ಞಾನಪೂರ್ವಕವಾಗಿ ಎಲ್ಲ ವೇದಸಂಹಿತೆಗಳ ಅಧ್ಯಯನವನ್ನು ಮಾಡಬೇಕೆಂದು ಹೇಳಿದೆ.

ಹಾಗಾದರೆ ಎಲ್ಲ ವೇದಗಳಲ್ಲಿರತಕ್ಕ ಪೂರ್ವೋತ್ತರ ವರ್ಣಸಂಹಿತೆಗಳು ಣಕಾರ-ಷಕಾರಾರ್ಥಗಳನ್ನು ಪ್ರತಿಪಾದಿಸುತ್ತವೆ, ವಿಷ್ಣುನಾಮಾರ್ಥವನ್ನಲ್ಲ. ಣಕಾರ, ಷಕಾರಗಳೇ ವಿಷ್ಣುನಾಮಗಳಲ್ಲ ಎಂದು ಹೇಳಿದರೆ -

**ಉಪಸರ್ಗತ್ವತೋ ವೇಸ್ತು ತಾಚ್ಛೀಲ್ಯಾರ್ತಾದುನಸ್ತಥಾ ।**
**ಣಕಾರಶ್ಚ ಷಕಾರಶ್ಚ ನಾಮರೂಪತಯಾ ಮತೌ ॥೪೧॥**

ವಿಷ್ಣುನಾಮದಲ್ಲಿ ಬೇರೆ ವರ್ಣಗಳೂ ಇರುತ್ತವೆ ಎನ್ನುವುದು ಸತ್ಯವೇ. ಆದರೂ ವಿ ಎನ್ನುವುದಕ್ಕೆ ಉಪಸರ್ಗತ್ವರೂಪದಿಂದ ಉತ್ತರಪದಾರ್ಥಕ್ಕೆ ವಿಶೇಷವಾದ್ದರಿಂದ ಹಾಗೆಯೇ **ಉನಃ** ಪ್ರತ್ಯಯಕ್ಕೆ ತಾಚ್ಛೀಲ್ಯರೂಪ ಅರ್ಥವಿರುವುದರಿಂದ, ಣಕಾರ, ಷಕಾರಗಳೇ ಪ್ರಧಾನವಾಗಿ ವಿಷ್ಣುನಾಮಗಳ ಸ್ವರೂಪಗಳೆಂಬುದಾಗಿ ವೇದದ ಅಭಿಮತ.

**ತಸ್ಮಾತ್ಸಮನ್ವಯೋ ವಿಷ್ಣೌ ಸ್ವರವರ್ಣಪದಾತ್ಮನಃ ।**
**ಅಪಿ ವೇದಸ್ಯ ಕಿಮುತ ವಾಕ್ಯರೂಪೇಣ ಸಂಗತಿಃ ॥೪೨॥**

ಆದಕಾರಣ ಸ್ವರವರ್ಣಪದಸ್ವರೂಪಗಳಾದ ಶಬ್ದಗಳಿಗೆ ವಿಷ್ಣುವಿನಲ್ಲಿಯೇ ಸಮನ್ವಯವು. ಅಂದಮೇಲೆ ವೇದಕ್ಕೆ ವಾಕ್ಯರೂಪದಿಂದಲೂ ಸಂಗತಿಯನ್ನು ಹೇಳುವುದಿನ್ನೇನಿದೆ?

## ಶ್ರುತಿಯಿಂದ ಸರ್ವಶಬ್ದವಾಚ್ಯತ್ವ ಸಮರ್ಥನೆ

ಇಲ್ಲಿಯವರೆಗೆ ಉಪಪತ್ತಿಯನ್ನು ಅಪೇಕ್ಷಿಸಿ ಶ್ರೀಹರಿಯು ಸರ್ವಶಬ್ದ-ವಾಚ್ಯನೆಂದು ಹೇಳುವ ಶ್ರುತಿಗಳನ್ನು ಉದಾಹರಿಸಿದರು. ಈಗ ಸ್ಪಷ್ಟವಾಗಿ ಪದವಾಕ್ಯ ಸಮನ್ವಯವನ್ನು ಪ್ರತಿಪಾದಿಸುವ ಶ್ರುತಿಗಳನ್ನು ಉದಾಹರಿಸುತ್ತಾರೆ-

**ಘೋಷಾಃ ಸರ್ವೇಽಪಿ ವೇದಾಶ್ಚ ಸರ್ವೇ ವೇದಾಶ್ಚ ಯತ್ಪದಂ ।**
**ಇಂದ್ರಂ ಮಿತ್ರಂ ಯಮಿಂದ್ರಂ ಚ ಪ್ರಥಮಃ ಸಂಸ್ಕೃತಿಸ್ತಥಾ ॥೪೩॥**
**ನಾಮಧಾಃ ಸರ್ವದೇವಾನಾಮೇಕ ಇತ್ಯಾದಿಕಾ ಶ್ರುತಿಃ ।**
**ಪ್ರಮಾಣಮುಕ್ತವಿಷಯೇ.......................................॥**

'ತಾ ವಾ ಏತಾಃ। ಸರ್ವಾ ಋಚಃ। ಸರ್ವೇ ವೇದಾಃ। ಸರ್ವೇ ಘೋಷಾ। ಏಕೈವ ವ್ಯಾಹೃತಿಃ। ಪ್ರಾಣ ಏವ', 'ಸರ್ವೇ ವೇದಾ ಯತ್ಪದಮಾಮನಂತಿ। ತಪಾಂಸಿ ಸರ್ವಾಣಿ ಚ ಯದ್ವದಂತಿ। ಯದಿಚ್ಛಂತೋ ಬ್ರಹ್ಮಚರ್ಯಂ ಚರಂತಿ। ತತ್ತೇ ಪದಂ ಸಂಗ್ರಹೇಣ ಬ್ರವೀಮಿ', 'ಇಂದ್ರಂ ಮಿತ್ರಂ ವರುಣಮಗ್ನಿಮಾಹುರಥೋ ದಿವ್ಯಃ ಸ ಸುಪರ್ಣೋ ಗರುತ್ಮಾನ್। ಏಕಂ ಸದ್ವಿಪ್ರಾ ಬಹುಧಾ ವದಂತ್ಯಗ್ನಿಂ ಯಮಂ ಮಾತರಿಶ್ವಾನಮಾಹುಃ', 'ಯಮಿಂದ್ರಮಾಹುರ್ವರುಣಂ ಯಮಾಹುರ್ಯಂ ಮಿತ್ರಮಾಹುರ್ಯಮು ಸತ್ಯಮಾಹುಃ', 'ಸ ಪ್ರಥಮಸಂಸ್ಕೃತಿರ್ವಿಶ್ವಕರ್ಮಾ ಸ ಪ್ರಥಮೋ ಮಿತ್ರೋ ವರುಣೋಽಗ್ನಿಃ', 'ಯೋ ದೇವಾನಾಂ ನಾಮಧಾ ಏಕ ಏವ' ಇತ್ಯಾದಿ ಶ್ರುತಿ ಸಮೂಹವು ಪದಸಮನ್ವಯ ಹಾಗೂ ವಾಕ್ಯಸಮನ್ವಯಗಳಲ್ಲಿ ಪ್ರಮಾಣವು. ಆದಿಪದದಿಂದ 'ನಾಮಾನಿ ಸರ್ವಾಣಿ' ಇತ್ಯಾದಿ ವಾಕ್ಯಗಳನ್ನು ಗ್ರಹಿಸಬೇಕು.

ಎಲ್ಲ ಋಚೆಗಳೂ, ಎಲ್ಲ ವೇದಗಳೂ, ಸಮುದ್ರಾದಿ ಎಲ್ಲ ಘೋಷಗಳೂ ಒಬ್ಬನೇ ಆದ ಪ್ರಾಣನನ್ನೇ ಅಂದರೆ ವಿಷ್ಣುವನ್ನೇ ಪ್ರತಿಪಾದಿಸುತ್ತವೆ ಎಂದು ಐತರೇಯೋಪನಿಷತ್ತು ಹೇಳುತ್ತದೆ. ಸಮಸ್ತವೇದಗಳೂ ಯಾವ ಸ್ವರೂಪವನ್ನು ಪ್ರತಿಪಾದಿಸುತ್ತವೆಯೋ ಅದನ್ನೇ ಸಂಗ್ರಹವಾಗಿ ಹೇಳುವೆವು ಎಂದು

ಕಾಠಕೋಪನಿಷತ್ತಿನಲ್ಲಿ ಉಪಕ್ರಮಿಸಿ, 'ತದ್ವಿಷ್ಣೋಃ ಪರಮಂ ಪದಂ' ಎಂದು ಉಪಸಂಹಾರ ಮಾಡಿರುವುದರಿಂದ ಎಲ್ಲ ವೇದಗಳಿಂದ ವಿಷ್ಣುವೇ ಪ್ರತಿಪಾದ್ಯನು. ಒಬ್ಬನೇ ಆದ ಶ್ರೀಹರಿಯನ್ನು ಇಂದ್ರ, ಸೂರ್ಯ, ವರುಣ, ಅಗ್ನಿ, ಸತ್ಯ ಇತ್ಯಾದಿ ಶಬ್ದಗಳಿಂದ ವಾಚ್ಯನೆಂದು ಜ್ಞಾನಿಗಳು ಬಹುರೀತಿಯಲ್ಲಿ ಹೇಳುತ್ತಾರೆ ಎಂದು ಋಗ್ವೇದದಲ್ಲಿ ಶ್ರೀಹರಿಗೆ ಸರ್ವಶಬ್ದ ವಾಚ್ಯತ್ವನ್ನು ಹೇಳಲಾಗಿದೆ. ಶ್ರೀಹರಿಯೇ ಸರ್ವೋತ್ತಮ, ಸರ್ವಜಗತ್ಕರ್ತಾ ಎಂಬುದಾಗಿ ಪ್ರಥಮಸಂಸ್ಕೃತಿ ಇತ್ಯಾದಿ ಶ್ರುತಿಯು ಹೇಳುತ್ತದೆ. ಶ್ರೀಹರಿಯೊಬ್ಬನೇ ಎಲ್ಲ ದೇವತೆಗಳ ನಾಮಧಾರಕನು ಎಂದು ಋಗ್ವೇದವು ಹೇಳುತ್ತದೆ.

ಇಂದ್ರಾದಿ ನಾಮಗಳಿಗೆ ಭಗವತ್ಪರತ್ವವಿದ್ದರೆ 'ಇಂದ್ರಸ್ಯ ನು ವೀರ್ಯಾಣಿ' ಇತ್ಯಾದಿ ವಾಕ್ಯಗಳಿಗೂ ಅದು ಸಿದ್ಧಿಸುವುದು.

ಹಾಗಾದರೆ ಈ ಅರ್ಥವನ್ನು ಪ್ರತಿಪಾದಿಸತಕ್ಕ ಸೂತ್ರವೇ ಕಾಣದಿರುವುದರಿಂದ, ಸೂತ್ರಿತವಾಗದ ಅರ್ಥವನ್ನು ಹೇಳುವಿರೇಕೆ ಎಂದರೆ -

**................................ತದೇವೋಕ್ತಮುಪಕ್ರಮಾತ್ ॥೪೪॥**

**ಇತಿ ಸ್ವಯಂ ಭಗವತಾ ಬ್ರುವತಾಽಶೇಷಮನ್ವಯಂ ।**

ಈ ವಿಷಯವು ಸೂತ್ರಕಾರರಾದ ಭಗವಾನ್ ವೇದವ್ಯಾಸರಿಂದ ಸಾಕ್ಷಾತ್ತಾಗಿ ಹೇಳಲ್ಪಟ್ಟಿದೆ. 'ಜ್ಯೋತಿರುಪಕ್ರಮಾತ್ತು ತಥಾ ಹ್ಯಧೀಯತೇ ಏಕೇ' ಎನ್ನುವುದೇ ಆ ಸೂತ್ರ. ಜೊತೆಗೆ 'ತತ್ತು ಸಮನ್ವಯಾತ್' ಎನ್ನುವ ಸೂತ್ರದಲ್ಲಿ ಬ್ರಹ್ಮನಲ್ಲಿ ಎಲ್ಲ ಶಬ್ದಗಳಿಗೆ ಸಮನ್ವಯವು ಹೇಳಲ್ಪಟ್ಟಿದೆ.

## ಪ್ರಧಾನಕ್ಕೆ ಶಬ್ದವಾಚ್ಯತ್ವ ನಿಷೇಧಿಸಲ್ಪಟ್ಟಿಲ್ಲ

ಈ ಪ್ರಕಾರವಾಗಿ ಸಂಕ್ಷೇಪ ಹಾಗೂ ವಿಸ್ತಾರದಿಂದ 'ಆನುಮಾನಿಕಂ' ಇತ್ಯಾದಿ ಸೂತ್ರಗಳಿಗೆ ವ್ಯಾಖ್ಯಾನಮಾಡಿ, ಈಗ ಇತರರು ಮಾಡಿರುವ ವ್ಯಾಖ್ಯಾನವನ್ನು ತಿರಸ್ಕರಿಸುತ್ತಾರೆ -

**ನ ಶಬ್ದವಾಚ್ಯತೈವಾತ್ರ ಪ್ರಧಾನಸ್ಯ ನಿಷಿಧ್ಯತೇ ॥೪೫॥**

**ಸರ್ವವೇದೇತಿಹಾಸೇಷು ಪುರಾಣೇಷು ಚ ಸಂಗ್ರಹಾತ್ ।**

ಈ ಪ್ರಥಮಾಧ್ಯಾಯದಲ್ಲಿಯೇ ಪ್ರಧಾನಕ್ಕೆ ಶಬ್ದವಾಚ್ಯತ್ವವು ನಿಷೇಧಿಸಲ್ಪಡುತ್ತದೆ ಎನ್ನುವುದು ಕೂಡುವುದಿಲ್ಲ. ಏಕೆಂದರೆ ಎಲ್ಲ ವೇದ,

ಇತಿಹಾಸ ಹಾಗೂ ಪುರಾಣಗಳಲ್ಲಿಯೂ ಪ್ರಧಾನಕ್ಕೆ ಶಬ್ದವಾಚ್ಯತ್ವವು ಸಂಗ್ರಹವಾಗಿ ಪ್ರತಿಪಾದಿತವಾಗಿದೆ.

ಇದಕ್ಕೆ ಸಂವಾದಿಯಾಗಿ ತ್ರಿಗುಣತ್ವಾದಿ ಲಕ್ಷಣಯುಕ್ತವಾದ ಪ್ರಧಾನವನ್ನು ಪ್ರತಿಪಾದಿಸುವ ಇತಿಹಾಸವಾಕ್ಯವನ್ನು ಹೇಳುತ್ತಾರೆ -

**ಸತ್ತ್ವಂ ರಜಸ್ತಮ ಇತಿ ಗುಣಾಃ ಪ್ರಕೃತಿಸಂಭವಾಃ ॥೪೬॥**

**ನಿಬಧ್ನಂತಿ ಮಹಾಬಾಹೋ ದೇಹೇ ದೇಹಿನಮವ್ಯಯಂ ।**

**ಇತ್ಯಾದಿವಾಕ್ಯರೂಪೇಣ.......................................॥**

ಜಡಪ್ರಕೃತಿಯಿಂದ ಹುಟ್ಟಿರುವ ಸತ್ವಗುಣ, ರಜೋಗುಣ, ತಮೋಗುಣ ಎನ್ನುವ ಮೂರು ಗುಣಗಳು ದೇಹದಲ್ಲಿರುವ ಸ್ವರೂಪತಃ ನಾಶವಿಲ್ಲದ ದೇಹಾಭಿಮಾನಿಯಾದ ಜೀವನನ್ನು ಬಂಧಿಸುತ್ತವೆ ಎಂದು ಅರ್ಜುನನಿಗೆ ಶ್ರೀಕೃಷ್ಣನು ಉಪದೇಶಿಸಿರುವ ಭಗವದ್ಗೀತೆಯಲ್ಲಿ ತ್ರಿಗುಣಾತ್ಮಕವಾದ ಪ್ರಧಾನವು ಪ್ರತಿಪಾದಿಸಲ್ಪಟ್ಟಿದೆ. ಆದಿಪದದಿಂದ 'ಭೂಮಿರಾಪೋಽನಲೋ ವಾಯುಃ ಖಂ ಮನೋ ಬುದ್ಧಿರೇವ ಚ' ಇತ್ಯಾದಿ ವಾಕ್ಯವನ್ನೂ ಗ್ರಹಿಸಬೇಕು.

'ಅವ್ಯಕ್ತಾತ್ಪುರುಷಃ ಪರಃ' ಎಂದು ಅವ್ಯಕ್ತ ಶಬ್ದವು ಪ್ರಧಾನವನ್ನು ಹೇಳುವುದಿಲ್ಲವಾದರೆ, ಮತ್ತೆ ಬೇರೆ ಯಾವುದು ಅವ್ಯಕ್ತಶಬ್ದವಾಚ್ಯವು ಎಂದು ಕೇಳುತ್ತೇವೆ. ಅವ್ಯಕ್ತ ಶಬ್ದದಿಂದ ಶರೀರವೇ ಮುಖ್ಯವಾಗಿ ಹೇಳಲ್ಪಡುವುದು ಅಥವಾ ಶರೀರಕ್ಕೆ ಮೂಲಭೂತಕಾರಣವಾದ ಭೂತಸೂಕ್ಷ್ಮಗಳೇ ಅವ್ಯಕ್ತ ಶಬ್ದದಿಂದ ವಾಚ್ಯವಾಗಿವೆ ಎಂದು ಹೇಳಿದರೆ, ಉಭಯ ಪಕ್ಷಗಳಲ್ಲಿಯೂ ದೋಷವನ್ನು ತೋರಿಸುತ್ತಾರೆ -

**...........................ಯತ್ರಾರ್ಥೋ ನಾನ್ಯ ಇಷ್ಯತೇ ॥೪೭॥**

**ತೇಜೋಽಬನ್ನಾತ್ಮಕ ವಾಽಪಿ ಯದ್ಯುಪಾದಾನಮಿಷ್ಯತೇ ।**

**ಅನಾದ್ಯೇವಾಪರಾಧಃ ಕಃ ಪ್ರಧಾನಮಿತಿ ಚೋದಿತೇ ॥೪೮॥**

ಅವ್ಯಕ್ತ ಶಬ್ದಕ್ಕೆ ಪರಬ್ರಹ್ಮಪರವಾದ ಅರ್ಥವನ್ನು ಅಂಗೀಕರಿಸದೆ, ಶರೀರಕ್ಕೆ ಉಪಾದಾನಕಾರಣವಾದ ತೇಜಸ್ಸು-ಜಲ-ಪೃಥಿವ್ಯಾತ್ಮಕ ಭೂತಸೂಕ್ಷ್ಮಗಳನ್ನೇ ಅವ್ಯಕ್ತ ಶಬ್ದದಿಂದ ಪ್ರತಿಪಾದಿಸುವುದಾದರೆ, ಪ್ರಧಾನವೇ ಅವ್ಯಕ್ತ ಶಬ್ದದಿಂದ ವಾಚ್ಯ ಎಂದು ಹೇಳಿದರೆ ಯಾವ ದೋಷವಿದೆ?

'ಯದಗ್ನೇ ರೋಹಿತಂ ರೂಪಂ। ತೇಜಸಸ್ತದ್ರೂಪಂ। ಯಚ್ಛುಕ್ಲಂ ತದಪಾಂ। ಯತ್ಕೃಷ್ಣಂ ತದನ್ನಸ್ಯ' ಎನ್ನುವ ಮಂತ್ರದಲ್ಲಿ ತೇಜಸ್ಸು ಜಲ ಪೃಥಿವಿಗಳನ್ನು ಲೋಹಿತಾದಿ ರೂಪವುಳ್ಳವೆಂದು ಕೆಲವರು ವ್ಯಾಖ್ಯಾನಿಸುತ್ತಾರೆ. ಅದರ ಸಮಾಖ್ಯೆಯಿಂದ 'ಅಜಾಮೇಕಾಂ ಲೋಹಿತಶುಕ್ಲಕೃಷ್ಣಾಂ। ಬಹ್ವೀಃ ಪ್ರಜಾಃ ಸೃಜಮಾನಾಂ ಸರೂಪಾಃ। ಅಜೋ ಹ್ಯೇಕೋ ಜುಷಮಾಣೋಽನು-ಶೇತೇ ಜಹಾತ್ಯೇನಾಂ ಭುಕ್ತಭೋಗಾಮಜೋಽನ್ಯಃ।' ಎನ್ನುವ ಮಂತ್ರದಲ್ಲಿಯೂ ಅಜಾ ಶಬ್ದವಾಚ್ಯವಾದುದು ಪೃಥಿವಿ-ಜಲ-ತೇಜೋರೂಪವಾದುದೇ ಎಂದು ತಿಳಿಯತಕ್ಕದ್ದು. ಅಜಾ ಶಬ್ದವಾಚ್ಯವಾದುದಕ್ಕೆ ನಾಲ್ಕು ವಿಧದ ಪ್ರಾಣಿವರ್ಗಕ್ಕೆ ಉಪಾದಾನರೂಪದಿಂದ ಅನೇಕ ಪ್ರಜೋತ್ಪಾದಕತ್ವವು ಹಾಗೂ ಭೋಗ್ಯತ್ವವೂ ಕೂಡುವುದು ಎಂದು ಮಾಯಾವಾದಿಗಳು ಹೇಳುತ್ತಾರೆ. ಅದಕ್ಕೆ ದೂಷಣವನ್ನು ಹೇಳುತ್ತಾರೆ -

**ಅಜಾಮೇಕಾಮಿತಿ ಪ್ರಾಹ ಶ್ರುತಿರೇತಾಂ ಯದಾ ತದಾ ।**
**ಕೋ ದೋಷಃ ಸರ್ವಥೈವಾಸ್ತಿ ಪರಿಣಾಮಿ ಜಡಂ ಯದಿ ॥೪೯॥**

'ಯದಗ್ನೇ ರೋಹಿತಂ' ಎನ್ನುವ ಮಂತ್ರದಲ್ಲಿ ತೇಜಸ್ಸು-ಜಲ-ಪೃಥಿವೀ ರೂಪವಾದ ಜಡವು ಪ್ರತಿಪಾದ್ಯವೆಂದು ಅಂಗೀಕರಿಸಲ್ಪಡುವುದಾದರೆ, 'ಅಜಾಮೇಕಾಂ' ಎನ್ನುವ ಶ್ರುತಿಯು ಈ ಪ್ರಕೃತಿಯನ್ನು (ಪ್ರಧಾನವನ್ನು) ಹೇಳುತ್ತದೆ ಎಂದು ಹೇಳಿದರೆ ಆಗ ಅಪರಿಹಾರ್ಯವಾದ ಯಾವುದೇ ದೋಷವೂ ಇರುವುದಿಲ್ಲ.

## ಅಜಾದಿ ಶಬ್ದಗಳು ಪರಮಮುಖ್ಯವೃತ್ತಿಯಿಂದ ಬ್ರಹ್ಮಪರ

**ಅಸ್ಮಾಕಂ ಪರಮಮುಖ್ಯಾರ್ಥೋ ಭಗವಾನೇಕ ಏವ ತು ।**
**ಮುಖ್ಯಮಾತ್ರತಯಾ ರೂಢಂ ಸರ್ವಮಭ್ಯುಪಗಮ್ಯತೇ ॥೫೦॥**
**ಸರ್ವೇಷಾಮಪಿ ಶಬ್ದಾನಾಂ ಗೌಣಾದ್ಯಂ ತದಯೋಗತಃ ।**

ನಮ್ಮ ಮತದಲ್ಲಾದರೋ ಎಲ್ಲ ಶಬ್ದಗಳಿಗೂ ಶ್ರೀಹರಿಯೊಬ್ಬನೇ ಪರಮ ಮುಖ್ಯವೃತ್ತಿಯಿಂದ ವಾಚ್ಯನು. ಶಬ್ದಗಳಿಗೆ ರೂಢಿಯಿಂದ ಪ್ರಸಿದ್ಧವಾಗಿರುವ ಅರ್ಥವೆಲ್ಲವೂ ಮುಖ್ಯಾರ್ಥಮಾತ್ರವೆಂದು ತಿಳಿಯಲ್ಪಡುವುದು. ಮುಖ್ಯಾರ್ಥವು ಕೂಡದಿದ್ದರೆ ಗೌಣಾರ್ಥವು ಅಂಗೀಕರಿಸಲ್ಪಡುವುದು. ಆದಪ್ರಯುಕ್ತ ಅಜಾದಿ

ಶಬ್ದಗಳು ಪರಮಮುಖ್ಯವೃತ್ತಿಯಿಂದ ಪರಬ್ರಹ್ಮನನ್ನೂ, ಮುಖ್ಯವೃತ್ತಿಯಿಂದ ಪ್ರಧಾನವನ್ನೂ ಪ್ರತಿಪಾದಿಸುವುದೆಂಬುದಾಗಿ ಅಂಗೀಕರಿಸಿದರೆ ಯಾವ ಅನುಪಪತ್ತಿಯೂ ಇರುವುದಿಲ್ಲ.

ನೀವು ಹೇಳಿದ ಅಭಿಪ್ರಾಯವನ್ನಾದರೂ ನಾವು ಏಕೆ ಅಂಗೀಕರಿಸಬೇಕು ಎಂದು ಆಕ್ಷೇಪಿಸಿದರೆ, ಸೂತ್ರಕಾರರೇ ಗ್ರಂಥಾಂತರದಲ್ಲಿ ವೈದಿಕ ಶಬ್ದಗಳಿಗೆ ಈ ಪ್ರಕಾರವಾಗಿ ಅನೇಕಾರ್ಥಗಳನ್ನು ಅಂಗೀಕರಿಸಿದ್ದಾರೆ ಎಂದು ಹೇಳುತ್ತಾರೆ-

**ಅರ್ಥದ್ವಯಮಭಿಪ್ರೇತ್ಯ ಪ್ರವೃತ್ತೇ ಹರಿರುಕ್ತವಾನ್ ॥೫೧॥**

**ಕಾರ್ಯಾಣಾಂ ಕಾರಣಂ ಪೂರ್ವಂ ವಚಸಾಂ ವಾಚ್ಯಮುತ್ತಮಂ ।**

**ಯೋಗಾನಾಂ ಪರಮಾಂ ಸಿದ್ಧಿಂ ಪರಮಂ ತೇ ಪದಂ ವಿದುಃ ॥೫೨॥**

'ವೈದಿಕವಚನಗಳಿಗೆ ಮುಖ್ಯವೃತ್ತಿಯಿಂದ ಪ್ರತಿಪಾದ್ಯವೂ, ಯೋಗವೃತ್ತಿಗಳಿಗೆ ಮುಖ್ಯಫಲರೂಪವೂ, ಮಹದಾದಿ ಎಲ್ಲ ಕಾರ್ಯಗಳಿಗೆ ಮುಖ್ಯಕಾರಣವೂ ಆಗಿರುವ ನಿನ್ನ ಸ್ವರೂಪವನ್ನು ಆ ಜ್ಞಾನಿಗಳು ಸರ್ವೋತ್ಕೃಷ್ಟವೆಂಬುದಾಗಿ ತಿಳಿಯುತ್ತಾರೆ.' ಹೀಗೆ ಶಬ್ದಗಳಿಗೆ ಪರಮಮುಖ್ಯಾರ್ಥ ಮತ್ತು ಮುಖ್ಯಾರ್ಥ ಎಂದು ಎರಡು ರೀತಿಯ ಅರ್ಥಗಳನ್ನು ಪ್ರತಿಪಾದಿಸುವ ಶಕ್ತಿಯಿದೆ ಎಂಬ ಅಭಿಪ್ರಾಯವನ್ನು ಭಗವಾನ್ ವೇದವ್ಯಾಸರು ಪ್ರವೃತ್ತ ಎಂಬ ಗ್ರಂಥದಲ್ಲಿ ವ್ಯಕ್ತಪಡಿಸಿದ್ದಾರೆ.

ವೈದಿಕ ಶಬ್ದಗಳಿಗೆ ಎರಡು ರೀತಿಯ ಅರ್ಥಗಳಿವೆ ಎನ್ನುವುದಕ್ಕೆ ಪ್ರಮಾಣಾಂತರವನ್ನು ಹೇಳುತ್ತಾರೆ -

**ಇತಿ ಬುದ್ಧೌ ಸಮಾರೋಹಾದುಭಯೋರ್ಯೋಗರೂಢಯೋಃ ।**

**ತ್ಯಾಗೇ ಚ ಕಾರಣಾಭಾವಾದುಭಯಾರ್ಥತ್ವಮಿಷ್ಯತೇ ॥೫೩॥**

ಹೀಗೆ ಯೋಗ ಮತ್ತು ರೂಢಿ ಎಂಬ ಎರಡು ಅರ್ಥಗಳೂ ಚೆನ್ನಾಗಿ ನಮ್ಮ ಬುದ್ಧಿಯಲ್ಲಿ ಆರೂಢವಾಗಿರುವುದರಿಂದಲೂ (ಬುದ್ಧಿಯು ಸ್ವತಃ ಪ್ರಮಾಣವಾಗಿರುವುರಿಂದ), ಎರಡು ಅರ್ಥಗಳ ಪರಿತ್ಯಾಗಕ್ಕೆ ಯಾವುದೇ ಕಾರಣವಿಲ್ಲದಿರುವುದರಿಂದಲೂ, ವೈದಿಕವಚನಗಳಿಗೆ ಎರಡು ಅರ್ಥಗಳಿವೆ ಎನ್ನುವುದು ಪ್ರಾಮಾಣಿಕರಿಂದ ಅಂಗೀಕರಿಸಲ್ಪಡುತ್ತದೆ.

**ವಿಪರೀತಪ್ರಮಾಭಾವೇ ಪೂರ್ವಾರೋಹಸ್ತು ಕಾರಣಂ ।**

**ಸಾ ಭವೇದ್ಯತ್ರ ಸ ವ್ಯರ್ಥಃ ಪೂರ್ವಾರೋಹೋ ಭ್ರಮೋ ಯಥಾ ॥೫೪॥**

**ಅತೋ ಜಗದುಪಾದಾನಂ ಪ್ರಧಾನಂ ವಕ್ತಿ ಸಾ ಶ್ರುತಿಃ ।**

ವಿರುದ್ಧವಾದ ಪ್ರಮಾಣವಿಲ್ಲದಿದ್ದರೆ ಪೂರ್ವದಲ್ಲಿ ಬುದ್ಧ್ಯಾರೂಢವಾದ ಅರ್ಥವು ಸ್ವೀಕಾರಾರ್ಹವು ಅಂದರೆ ವ್ಯವಹಾರಕ್ಕೆ ಕಾರಣವು. ವಿರುದ್ಧವಾದ ಪ್ರಮಾಣವು ಕಂಡುಬರುವ ಕಡೆಗಳಲ್ಲಿ ಪೂರ್ವಾರೂಢವಾದ ಅರ್ಥವು, ಶುಕ್ತಿಯನ್ನು ನೋಡಿದಾಗ ಬರುವ 'ಇದಂ ರಜತಂ' ಎಂಬ ಭ್ರಾಂತಿಜ್ಞಾನದಂತೆ, ವ್ಯರ್ಥವಾಗುವುದು. ಆದಕಾರಣ 'ಅಜಾಮೇಕಾಂ' ಎನ್ನುವ ಶ್ರುತಿಯು, ಪ್ರಧಾನವನ್ನು ಜಗತ್ತಿಗೆ ಉಪಾದಾನ ಕಾರಣವನ್ನಾಗಿ ಹೇಳುತ್ತದೆ.

'ನಸಂಖ್ಯೋಪಸಂಗ್ರಹಾತ್' ಎನ್ನುವ ಅಧಿಕರಣವೂ ಕೂಡ ಪ್ರಧಾನಕ್ಕೆ ಶಬ್ದವಾಚ್ಯತ್ವವಿಲ್ಲವೆಂದು ಪ್ರತಿಪಾದಿಸುವುದು ಎಂದು ಸಾಂಖ್ಯರು ವ್ಯಾಖ್ಯಾನ ಮಾಡುವರು. ಅದು ಹೇಗೆಂದರೆ, 'ಯಸ್ಮಿನ್ ಪಂಚ ಪಂಚಜನಾ ಆಕಾಶಶ್ಚ ಪ್ರತಿಷ್ಠಿತಃ ತಮೇವ ಮನ್ಯಮಾತ್ಮಾನಂ ವಿದ್ವಾನ್ ಬ್ರಹ್ಮಾಮೃತೋ ಮೃತಮ್' ಎನ್ನುವ ಮಂತ್ರದಲ್ಲಿ ಪಂಚ ಪಂಚ ಎಂದು ಎರಡಾವರ್ತಿ ಪ್ರಯೋಗವಿದೆ. ಇಲ್ಲಿ ಪಂಚಸಂಖ್ಯೆಯೇ ವಿಷಯವಾಗುಳ್ಳ ಮತ್ತೊಂದು ಪಂಚಸಂಖ್ಯೆಯು ಶ್ರುತವಾಗಿರುವ ಪ್ರಯುಕ್ತ ಪಂಚಪಂಚಕಾಃ ಎಂದರೆ ಇಪ್ಪತ್ತೈದು ಎಂದಾಗುವುದು. ಇಲ್ಲಿ ಸಾಂಖ್ಯಸ್ಮೃತಿ ಪ್ರಸಿದ್ಧವಾದ ಇಪ್ಪತ್ತೈದು ತತ್ವಗಳನ್ನು ಸಂಗ್ರಹಿಸಿರುವುದರಿಂದ ಪ್ರಧಾನಾದಿಗಳಿಗೆ ಶಬ್ದಬೋಧ್ಯತ್ವವು ಪ್ರಾಪ್ತವಾಗುವುದು.

### ನ ಸಂಖ್ಯಾಧಿಕರಣದ ಅಪವ್ಯಾಖ್ಯಾನ ನಿರಾಸೆ

ಈ ಅಧಿಕರಣವು ಸಾಂಖ್ಯಮತವನ್ನು ನಿರಾಕರಿಸುವುದು ಎಂದು ಶಾಂಕರಭಾಷ್ಯದಲ್ಲಿ ಪ್ರತಿಪಾದಿಸಿಲಾಗಿದೆ. ಏಕೆಂದರೆ ಸಾಂಖ್ಯಮತದಲ್ಲಿ ಹೇಳಿರುವ ೨೫ ತತ್ವಗಳು ಇಲ್ಲಿ ತೋರುವುದಿಲ್ಲ. ಇಲ್ಲಿ ಪಂಚಪಂಚ ಎಂಬುದಾಗಿ ಐದು ತತ್ವಗಳ ಐದು ವರ್ಗ ಹೇಳಿರುವಂತೆ ತೋರುವುದು. ಈ ಐದೈದಕ್ಕೆ ಸಂಗ್ರಾಹಕವಾದ ಸಾಧಾರಣವಾದ ಧರ್ಮಗಳಿಲ್ಲ. ನಾನಾಭಾವವನ್ನು ಹೊಂದಿರುವ ತತ್ವಗಳು ಒಂದೇ ಗುಂಪಿನಲ್ಲಿ ಸೇರಲು ಸಾಧ್ಯವಿಲ್ಲ. ಜೊತೆಗೆ ಸಾಂಖ್ಯಸ್ಮೃತಿಯಲ್ಲಿ ಹೇಳಿಲ್ಲದ ಆತ್ಮಾ ಹಾಗೂ ಆಕಾಶ

ಎಂಬ ಇನ್ನೂ ಎರಡು ತತ್ವಗಳು ಹೆಚ್ಚಾಗಿ ಇಲ್ಲಿ ಕಂಡುಬರುತ್ತವೆ. ಈಪ್ರಕಾರವಾಗಿ ಸಾಂಖ್ಯಪ್ರಸಿದ್ಧ ತತ್ವಗಳು ಇಲ್ಲಿ ಪ್ರತಿಪಾದಿತವಾಗಿಲ್ಲವಾದ್ದರಿಂದ ಪ್ರಧಾನಾದಿಗಳಿಗೆ ಶಬ್ದಬೋಧ್ಯತ್ವವು ಇರುವುದಿಲ್ಲ ಎಂದು ಅದ್ವೈತಿಗಳು ಹೇಳುತ್ತಾರೆ.

ಹಾಗಾದರೆ ೨೫ ತತ್ವಗಳಿವೆ ಎನ್ನುವ ಪ್ರಕ್ರಿಯೆಯೇ ಸರ್ವಥಾ ಅಪ್ರಾಮಾಣಿಕವೋ ಅಥವಾ ಈ ವಾಕ್ಯವು ಆ ತತ್ವಗಳನ್ನು ಹೇಳುವುದಿಲ್ಲವೋ ಎಂದು ಸಿದ್ಧಾಂತಿಗಳು ಅವರನ್ನು ಪ್ರಶ್ನಿಸಬೇಕು. ಎರಡು ಪಕ್ಷಗಳೂ ಕೂಡುವುದಿಲ್ಲ ಎಂದು ಹೇಳುತ್ತಾರೆ -

**ಯತ್ತತ್ತ್ರಿಗುಣಮವ್ಯಕ್ತಂ ನಿತ್ಯಂ ಸದಸದಾತ್ಮಕಂ ||೫೫||**

**ಪ್ರಧಾನಂ ಪ್ರಕೃತಿಂ ಪ್ರಾಹುರವಿಶೇಷಂ ವಿಶೇಷವತ್ |**

ಯಾವುದು ತ್ರಿಗುಣಾತ್ಮಕವೂ, ಅವ್ಯಕ್ತವೂ, ನಿತ್ಯವಾದುದೂ, ಕಾರ್ಯ-ಕಾರಣಾತ್ಮಕವೂ ಆಗಿದ್ದು ಕಾರ್ಯರೂಪ ವಿಶೇಷತ್ವವನ್ನು ಹೊಂದಿಲ್ಲವೋ ಅದನ್ನು ಪ್ರಧಾನವೆಂದೂ, ಕಾರ್ಯರೂಪ ವಿಶೇಷತ್ವವನ್ನು ಹೊಂದಿರುವುದನ್ನು ಪ್ರಕೃತಿ ಎಂದೂ ಹೇಳುತ್ತಾರೆ.

ವಿಶೇಷವುಳ್ಳದ್ದು ಹೇಗೆಂದರೆ, ವಿವರಿಸುತ್ತಾರೆ -

**ಪಂಚಭಿಃ ಪಂಚಭಿರ್ಬ್ರಹ್ಮ ಚತುರ್ಭಿರ್ದಶಭಿಸ್ತಥಾ ||೫೬||**

**ಏತಚ್ಚತುರ್ವಿಂಶತಿಕಂ ಗಣಂ ಪ್ರಾಧಾನಿಕಂ ವಿದುಃ |**

**ಇತಿ ಭಾಗವತೇ ಪ್ರಾಹ ವಿದ್ಯಾಧೀಶಃ ಸ್ವಯಂ ಪ್ರಭುಃ ||೫೭||**

ಪಂಚಮಹಾಭೂತಗಳಿಂದ(ಪಂಚಭಿಃ), ಪಂಚತನ್ಮಾತ್ರೆಗಳಿಂದ(ಪಂಚಭಿಃ), ಮಹತ್ತತ್ವ ಅಹಂಕಾರ ಮನಸ್ಸು ಮತ್ತು ಬುದ್ಧಿಯೆಂಬ ನಾಲ್ಕು ತತ್ವಗಳಿಂದ (ಚತುರ್ಭಿಃ), ಹಾಗೆಯೇ ಹತ್ತು ಇಂದ್ರಿಯಗಳಿಂದ (ಪಂಚಜ್ಞಾನೇಂದ್ರಿಯಗಳು ಮತ್ತು ಪಂಚಕರ್ಮೇಂದ್ರಿಯಗಳು) ಪೂರಿತವಾದ ಒಟ್ಟು ೨೪ ತತ್ವಗಳ ಸಮೂಹವನ್ನು ಪ್ರಧಾನಕಾರ್ಯವನ್ನಾಗಿ ತಿಳಿಯುತ್ತಾರೆ. ಹೀಗೆ ಸೂತ್ರಕಾರರಾದ ವೇದವ್ಯಾಸರು ತಾವೇ ಭಾಗವತದಲ್ಲಿ ಹೇಳಿದ್ದಾರೆ.

'ಕಾರಣತ್ವೇನ ಚಾಕಾಶಾದಿಷು' ಇತ್ಯಾದಿ ಸೂತ್ರಗಳಿಗೆ ಅದ್ವೈತಿಗಳು ಮಾಡಿರುವ ವ್ಯಾಖ್ಯಾನವು ಅಪವ್ಯಾಖ್ಯಾನವೆಂಬುದಾಗಿ ಸ್ಪಷ್ಟವಾಗಿ ದೂಷಿತವೇ

ಆಗಿರುವುದರಿಂದ ('ಅಧ್ಯಾಯಸಂಗತೇಃಪಾದಸಂಗತೇರಪ್ಯಭಾವತಃ । ಪೂರ್ವ-ಪಕ್ಷಾನುತ್ಥಿತೇಶ್ಚ ಸಿದ್ಧಾಂತಸ್ಯಾಪ್ಯಯೋಗತಃ।'ಎಂದು ಚಂದ್ರಿಕಾದಲ್ಲಿ ಹೇಳಿರುವ ಪ್ರಕಾರ ದೂಷಿತವಾಗಿರುವುದರಿಂದ) ಇಲ್ಲಿ ಅದನ್ನು ಮತ್ತೆ ಖಂಡಿಸಿಲ್ಲ.

## ಬ್ರಹ್ಮನು ಉಪಾದಾನಕಾರಣನಲ್ಲ

ಪರಬ್ರಹ್ಮನು ಜಗತ್ತಿಗೆ ಉಪಾದಾನಕಾರಣನೆಂದು ಪ್ರತಿಪಾದಿಸುವುದಕ್ಕಾಗಿ ಪ್ರಕೃತ್ಯಧಿಕರಣವು ಎಂಬುದಾಗಿ ಮಾಯಾವಾದಿಗಳು ವ್ಯಾಖ್ಯಾನ ಮಾಡುತ್ತಾರೆ. ಈ ವ್ಯಾಖ್ಯಾನವನ್ನು ನಿರಾಕರಿಸುತ್ತಾರೆ -

**ನ ಚ ಪ್ರಕೃತಿಶಬ್ದೇನ ಬ್ರಹ್ಮೋಪಾದನಮುಚ್ಯತೇ ।**

ಪ್ರಕೃತಿ ಎನ್ನುವ ಶಬ್ದದಿಂದ ಪರಬ್ರಹ್ಮನು ಉಪಾದಾನಕಾರಣನೆಂದು ಹೇಳಲ್ಪಡುವುದಿಲ್ಲ.

ಏಕೆಂದರೆ ಪ್ರಮಾಣಾಂತರಗಳಿಗೆ ಅವಿರುದ್ಧವಾಗಿ ಸೂತ್ರಾರ್ಥವನ್ನು ವಿವರಿಸಬೇಕು. ಬ್ರಹ್ಮನಿಗೆ ಉಪಾದಾನಕಾರಣತ್ವವನ್ನು ಹೇಳುವುದು ಶ್ರುತ್ಯಾದಿಗಳಿಗೆ ವಿರುದ್ಧವು. ಪರಿಣಾಮಿಕಾರಣವು ಉಪಾದಾನವೆನಿಸುತ್ತದೆ. ಘಟಾದಿಗಳಿಗೆ ಮಣ್ಣು ಇತ್ಯಾದಿಗಳಂತೆ. ಪರಿಣಾಮಿಕಾರಣವು ರೂಪಾಂತರ ಅಥವಾ ವಿಕಾರತ್ವವನ್ನು ಹೊಂದಿಸುತ್ತದೆ. ಬ್ರಹ್ಮನಿಗಾದರೋ ವಿಕಾರತ್ವವನ್ನು ಶ್ರುತ್ಯಾದಿಗಳು ನಿಷೇಧಿಸುತ್ತವೆ. ಈ ಪ್ರಕಾರವಾಗಿ ಶ್ರುತ್ಯಾದಿ ಪ್ರಮಾಣಗಳಿಗೆ ವಿರುದ್ಧವಾದುದನ್ನು ಸೂತ್ರಾರ್ಥವೆಂದು ಹೇಳುವುದು ಕೂಡುವುದಿಲ್ಲ ಎಂದು ಹೇಳುತ್ತಾರೆ -

**ಅವಿಕಾರಃ ಸದಾ ಶುದ್ಧೋ ನಿತ್ಯ ಆತ್ಮಾ ಸದಾ ಹರಿಃ ॥೫೮॥**
**ಸದೈಕರೂಪವಿಜ್ಞಾನಬಲ ಆನಂದರೂಪಕಃ ।**
**ನಿರ್ವಿಕಾರೋಽಕ್ಷರಃ ಶುದ್ಧೋ ನಿರಾತಂಕೋಽಜರೋಽಮರಃ ॥೫೯॥**
**ಅವಿಶ್ವೋ ವಿಶ್ವಕರ್ತಾಽಜೋ ಯಃ ಪರಃ ಸೋಽಭಿಧೀಯತೇ ।**
**ನಿರ್ವಿಕಾರಮನೌಪಮ್ಯಂ ಸದೈಕರಸಮಕ್ಷಯಂ ॥೬೦॥**
**ಬ್ರಹ್ಮೇತಿ ಪರಮಾತ್ಮೇತಿ ಯಂ ವಿದುರ್ವೈದಿಕಾ ಜನಾಃ ।**
**ಇತಿ ಶ್ರುತಿಪುರಾಣೋಕ್ತ್ಯಾ ನ ವಿಕಾರೀ ಜನಾರ್ದನಃ ॥೬೧॥**

ಶ್ರೀಹರಿಯು ಯಾವಾಗಲೂ ಪರಿಣಾಮರಹಿತನು. ಯಾವಾಗಲೂ

ಶುದ್ಧನು. ಉತ್ಪತ್ತಿನಾಶಗಳಿಲ್ಲದವನು. ಯಾವಾಗಲೂ ಅಂದರೆ ಮೋಕ್ಷದಲ್ಲೂ ಸ್ವಾಮಿಯು. ಯಾವಾಗಲೂ ಏಕಪ್ರಕಾರವಾದ ವಿಜ್ಞಾನಬಲಗಳಿಂದ ಕೂಡಿರುವನು. ಆನಂದಸ್ವರೂಪನು. ಯಾವುದೇ ರೀತಿಯ ವಿಕಾರವಿಲ್ಲದವನು. ನಾಶರಹಿತನು. ಜಡಗಳಿಂದ ಅಮಿಶ್ರನು. ನಿರ್ಭಯನು. ಮುಪ್ಪಿಲ್ಲದವನು. ಸಾವಿಲ್ಲದವನು. ಪ್ರಪಂಚದಿಂದ ಭಿನ್ನನು ಅಂದರೆ ಪ್ರಪಂಚರೂಪದಿಂದ ಪರಿಣಾಮವಿಲ್ಲದವನು. ಸಕಲಜಗತ್ಕರ್ತನು. ಉತ್ಪತ್ತಿಯಿಲ್ಲದವನು. ಇಂಥಹ ವಿಶ್ವವಿಲಕ್ಷಣನಾದ ಪರಬ್ರಹ್ಮನು ಸರ್ವೋತ್ತಮನೆಂದು ಹೇಳಲ್ಪಡುತ್ತಾನೆ. ನಿರ್ವಿಕಾರನೂ, ಅನುಪಮನೂ, ಯಾವಾಗಲೂ ಸ್ವಗತಭೇದವರ್ಜಿತನೂ ಅಥವಾ ಆನಂದಸ್ವರೂಪನೂ, ನಾಶರಹಿತನೂ ಆಗಿರುವ ಯಾರನ್ನು ವೈದಿಕ ಜನರು ಪರಮಾತ್ಮ ಎಂದು ತಿಳಿಯುತ್ತಾರೋ - ಇವೇ ಮೊದಲಾದ ಶ್ರುತಿ ಹಾಗೂ ಪುರಾಣಗಳ ವಚನದಿಂದ ಶ್ರೀಹರಿಯು ವಿಕಾರಿಯಲ್ಲವೆಂದು ತಿಳಿಯಲ್ಪಡುವನು.

ಧರ್ಮಿಗೆ ಮತ್ತು ಧರ್ಮಕ್ಕೆ ಎಂಬುದಾಗಿ ವಿಕಾರದಲ್ಲಿ ಎರಡು ವಿಧ. ಉದಾಹರಣೆಗೆ, ಮೃದಾದಿಗಳಿಗೆ ಘಟಾದಿ ರೂಪಾಂತರವು ಧರ್ಮಿಗೆ ಸಂಬಂಧಿಸಿದ ವಿಕಾರವಾದರೆ, ಬದರಾದಿ ಫಲಗಳಲ್ಲಿ ವರ್ಣವ್ಯತ್ಯಾಸರೂಪದ ವಿಕಾರವು ಧರ್ಮಕ್ಕೆ ಸಂಬಂಧಿಸಿದ ವಿಕಾರ. ಮೇಲೆ ಉದಾಹರಿಸಲಾಗಿರುವ ಪ್ರಮಾಣ ವಚನಗಳಲ್ಲಿ, 'ಅವಿಕಾರಃ ಸದಾ ಶುದ್ಧಃ' ಎನ್ನುವುದು ಧರ್ಮಿಯ ವಿಕಾರವನ್ನೂ, 'ಸದೈಕರೂಪ' ಎನ್ನುವುದು ಧರ್ಮದ ವಿಕಾರವನ್ನೂ ನಿಷೇಧಿಸುವುದರಿಂದ ಪುನರುಕ್ತಿಯಿಲ್ಲ.

## ವಿಕಾರದ ಪ್ರಭೇದಗಳು

### ಬ್ರಹ್ಮನಿಗೆ ನಿರ್ವಿಕಾರತ್ವ ಸಮರ್ಥನೆ

ಬ್ರಹ್ಮನಿಗೆ ವಿಕಾರತ್ವವು ಯುಕ್ತಿವಿರುದ್ಧವೂ ಆಗಿದೆ ಎಂಬುದನ್ನು ತಿಳಿಸುವುದಕ್ಕಾಗಿ ವಿಕಾರದ ಪ್ರಭೇದಗಳನ್ನು ಹೇಳುತ್ತಾರೆ -

**ಪರಾಧೀನವಿಶೇಷಾಪ್ತಿರನಿವರ್ತ್ಯೋಽನ್ಯಥಾಭವಃ ।**
**ಕ್ಷೀರಾದಿವದ್ವಿಕಾರಃ ಸ್ಯಾನ್ನೈವ ಸ ಸ್ಯಾದ್ಧರೇಃ ಕ್ವಚಿತ್ ॥೬೨॥**

ಪರಾಧೀನ ವಿಶೇಷಾಪ್ತಿರೂಪವಾದ ವಿಕಾರದಲ್ಲಿ ವಿಶೇಷಾಪ್ತಿ ಹಾಗೂ

ವಿಶೇಷಿಪರಿವೃತ್ತಿ ಎಂದು ಎರಡು ವಿಧ. ವಿಶೇಷಾಪ್ತಿಯೆಂದರೆ ಧರ್ಮಿಯು ಇದ್ದಹಾಗೆಯೇ ಇದ್ದು ಧರ್ಮವು ಮಾತ್ರ ಪರಿಣಾಮ ಹೊಂದುವುದು. ವಿಶೇಷಿಪರಿವೃತ್ತಿಯೆಂದರೆ ಧರ್ಮದ ಸ್ವರೂಪವೇ ಪರಿಣಾಮ ಹೊಂದುವುದು. ಈ ಎರಡು ರೀತಿಯ ವಿಕಾರಗಳಲ್ಲಿ ಅನಿವರ್ತ್ಯ, ನಿವರ್ತ್ಯ ಎಂದು ಪುನಃ ಎರಡು ವಿಧ. ಕ್ಷೀರಾದಿವತ್ ಎನ್ನುವುದು ನಾಲ್ಕು ವಿಧದ ವಿಕಾರಕ್ಕೂ ಉದಾಹರಣೆಯಾಗಿದೆ. ಒಟ್ಟಿನಲ್ಲಿ ಹೇಳುವುದಾದರೆ ಎಲ್ಲ ರೀತಿಯ ವಿಕಾರವೂ ಪರಾಧೀನವೇ ಆಗಿರುವುದು. ಆದಪ್ರಯುಕ್ತ ಶ್ರೀಹರಿಯಲ್ಲಿ ಎಂದಿಗೂ ಯಾವ ರೀತಿಯ ವಿಕಾರವೂ ಇರುವುದಿಲ್ಲ.

ಈ ವಿಷಯದಲ್ಲಿ ರಾಮಾನುಜಾಚಾರ್ಯರು ಪ್ರಕೃತಿಶ್ಚ ಇತ್ಯಾದಿ ಸೂತ್ರಗಳಿಗೆ 'ಬ್ರಹ್ಮನು ಜಗತ್ತಿಗೆ ಉಪಾದಾನಕಾರಣ' ಎಂದು ವ್ಯಾಖ್ಯಾನ ಮಾಡಲು ನಾವು ಹೇಳಿದ ದೂಷಣಗಳಿಗೆ ಹೆದರಿ, ಸೂತ್ರತಾತ್ಪರ್ಯವನ್ನು ಹೀಗೆ ಹೇಳುತ್ತಾರೆ - ಪರಮಸೂಕ್ಷ್ಮವಾದ ಅಚಿದ್ರೂಪ ಪ್ರಧಾನವೇ ಶರೀರವಾಗುಳ್ಳವನು ಬ್ರಹ್ಮ. ಈ ವಿಷಯವು 'ಯೋಽವ್ಯಕ್ತೇ ತಿಷ್ಠನ್ನಸ್ಯಾವ್ಯಕ್ತಂ ಶರೀರಂ' ಇತ್ಯಾದಿ ಶ್ರುತಿಗಳಿಂದ ಸಿದ್ಧವಾಗಿದೆ. ಬ್ರಹ್ಮಾಧಿಷ್ಠಿತವಾದ ಬ್ರಹ್ಮಾತ್ಮಕವಾದ ಪ್ರಧಾನವು ಜಗತ್ತಿಗೆ ಉಪಾದಾನ ಕಾರಣವಾಗಿರುವುದರಿಂದ ಬ್ರಹ್ಮನೇ ಜಗದುಪಾದಾನಕಾರಣನು ಎಂದು ಅಂಗೀಕರಿಸುತ್ತೇವೆ. ಬ್ರಹ್ಮನಿಗೆ ಜಗದ್ರೂಪವಾದ ವಿಕಾರವಿರುವುದಿಲ್ಲ. ಆದಕಾರಣ ನೀವು ಹಿಂದೆ ಹೇಳಿದ ದೋಷಗಳು ನಮ್ಮ ಸಿದ್ಧಾಂತಕ್ಕೆ ಬರುವುದಿಲ್ಲ ಎಂದು ಹೇಳಿದರೆ -

**ಅಪಾದಾನತ್ವಮೇವಾಸ್ಯ ಯದ್ಯುಪಾದಾನತೇಷ್ಯತೇ ।**

**ಅಂಗೀಕೃತಂ ತತ್ಪಿತೃವನ್ ...........................॥**

ಹೀಗೆ ಹೇಳುವ ಪಕ್ಷದಲ್ಲಿ, ಈ ಜಗದುತ್ಪತ್ತಿಯಲ್ಲಿ ಅಪಾದಾನಕಾರಣನಾದ ಬ್ರಹ್ಮನಿಗೇ, ಪುತ್ರನ ಜನನದಲ್ಲಿ ತಂದೆಯಂತೆ, ಉಪಾದಾನತ್ವವನ್ನು ಹೇಳುವುದಾದರೆ ಅಂಥಹ ಉಪಾದಾನತ್ವವು ನಮಗೆ ಅಂಗೀಕೃತವೇ ಆಗಿದೆ.

ಬ್ರಹ್ಮನಿಗೆ ಉಪಾದಾನತ್ವವನ್ನು ಅಂಗೀಕರಿಸುವುದಾದರೆ ಅದರ ನಿರಾಕರಣೆಯು ಹೇಗೆ ಕೂಡುವುದು ಎಂದು ಆಶಂಕಿಸಿದರೆ -

**..........................ನ ತು ವಿಶ್ವಾತ್ಮನಾ ಭವಃ ॥೬೩॥**

ಶುದ್ಧಚೈತನ್ಯಸ್ವರೂಪನೇ ಆಗಿರುವ ಬ್ರಹ್ಮನಿಗೆ ಭಾಸ್ಕಾರಾದಿಗಳಿಂದ ಅಂಗೀಕೃತವಾಗಿರುವಂಥಹ ಜಗದಾತ್ಮಕವಾದ ಉತ್ಪತ್ತಿಯು ನಮ್ಮಿಂದ ಅಂಗೀಕರಿಸಲ್ಪಡುವುದಿಲ್ಲ. ಆದಕಾರಣ ಉಪಾದಾನತ್ವ ನಿರಾಕರಣೆಯು ಕೂಡುವುದು.

ಜಗದುಪಾದಾನವಾದ ಪ್ರಧಾನಕ್ಕೆ ಅಧಿಷ್ಠಾತೃವಾಗಿರುವುದರಿಂದ ಬ್ರಹ್ಮನಿಗೆ ಉಪಾದಾನಕಾರಣತ್ವವು ಎಂದು ರಾಮಾನುಜೀಯರು ಹೇಳುವ ಬ್ರಹ್ಮನ ಲಕ್ಷಣವು ನಾವು ಮಾಡುವ ಅರ್ಥಕ್ಕೆ ವಿರೋಧವೇನಲ್ಲ. ಆದರೆ ಇದು ಸೂತ್ರದಿಂದ ಪ್ರತಿಪಾದ್ಯವಾದ ಅರ್ಥವಲ್ಲ. ಜೊತೆಗೆ ಉಪಾದಾನಕ್ಕೆ ನಿಯಾಮಕನಾದವನೇ ಉಪಾದಾನನೆನ್ನುವ ವ್ಯವಹಾರವೂ ಲೋಕದಲ್ಲಿ ಇರುವುದಿಲ್ಲ. ಲೋಕದಲ್ಲಿ ವಿಕಾರವುಳ್ಳದ್ದನ್ನೇ ಉಪಾದಾನ ಎಂದು ಹೇಳುತ್ತಾರೆ. ಉಪಾದಾನನಿಯಾಮಕನನ್ನು ಉಪಾದಾನನೆಂದು ಹೇಳುವುದಿಲ್ಲ.

ತಂದೆಯು ಮಗನಿಗೆ ಉಪಾದಾನಕಾರಣನೇ ಆಗಿರುವುದರಿಂದ, ನೀವು ಕೊಟ್ಟಿರುವ 'ಪಿತೃವತ್' ಎನ್ನುವ ದೃಷ್ಟಾಂತವೇ ಯುಕ್ತವಾಗಲಾರದು ಎಂದು ಬ್ರಹ್ಮಪರಿಣಾಮವಾದಿಯು ಹೇಳುತ್ತಾನೆ. ಬ್ರಹ್ಮನು ಜಗತ್ಕಾರಣವೆನ್ನುವಲ್ಲಿ 'ಯಥೋರ್ಣನಾಭಿಃ ಸೃಜತೇ ಗೃಹ್ಣತೇ ಚ' 'ಪಿತಾಹಮಸ್ಯ ಜಗತೋ ಮಾತಾ' ಇತ್ಯಾದಿ ಶ್ರುತಿಯು ಊರ್ಣನಾಭಿಯ (ಜೇಡರ ಹುಳುವಿನ) ದೃಷ್ಟಾಂತವನ್ನು ತೆಗೆದುಕೊಂಡಿರುವುದರಿಂದ ಬ್ರಹ್ಮನಿಗೆ ಉಪಾದಾನ ಕಾರಣತ್ವವೇ ಇಲ್ಲಿ ವಿವಕ್ಷಿತ. ಜೇಡರ ಬಲೆಯ ತಂತುಗಳಿಗೆ ಜೇಡರ ಹುಳುವೇ ಉಪಾದಾನಕಾರಣವಾಗಿದೆ. ಈ ದೃಷ್ಟಾಂತದ ಆಧಾರದಿಂದ ಬ್ರಹ್ಮನೇ ಜಗತ್ತಿಗೆ ಪರಿಣಾಮಿಕಾರಣ ಎಂದು ಬ್ರಹ್ಮಪರಿಣಾಮಿವಾದಿಯು ಹೇಳಿದರೆ -

**ನ ಚೋರ್ಣನಾಭಜನಿತೃಮಾತೄಣಾಂ ಚ ವಿಕಾರಿತಾ ।**
**ಚೇತನತ್ವಾತ್ತದನ್ನಂ ಹಿ ಕಾರ್ಯರೂಪತಯಾ ಭವೇತ್ ॥೬೪॥**

ಚೇತನವಾದ್ದರಿಂದ ಜೇಡರ ಹುಳುವೇ ತಂತುವಾಗಿ ಪರಿಣಮಿಸುವುದಿಲ್ಲ. ಅದು ತಿಂದ ಆಹಾರವು ತಂತುವಿನ ರೂಪದಲ್ಲಿ ಪರಿಣಾಮ ಹೊಂದುವುದು. ಹಾಗೆಯೇ ತಾಯಿತಂದೆಯರೇ ಮಗುವಾಗಿ ವಿಕಾರ ಹೊಂದುವುದಿಲ್ಲ. ಅವರು

ತಿಂದ ಅನ್ನವು ಶರೀರದ ಧಾತುಗಳ ರೂಪದಲ್ಲಿ ಪರಿಣಾಮ ಹೊಂದಿ ಪುತ್ರಾದಿಗಳ ಅಚೇತನಾತ್ಮಕ ಶರೀರಕ್ಕೆ ಉಪಾದಾನಕಾರಣವಾಗುತ್ತದೆ. ತಂತುವಿಗೆ ಜೇಡರಹುಳುವು ನಿಮಿತ್ತಕಾರಣವಷ್ಟೆ. ಅದೇರೀತಿ ಪುತ್ರಾದಿಗಳ ಶರೀರದ ಉತ್ಪತ್ತಿಗೆ ತಂದೆತಾಯಿಯರು ನಿಮಿತ್ತಕಾರಣರಾಗುತ್ತಾರೆ.

ಪ್ರಲಯಕಾಲದಲ್ಲಿ ಪರಮೇಶ್ವರನು ಮಹದಾದಿ ಇಡೀ ಜಗತ್ತನ್ನು ನುಂಗಿ ಪ್ರಧಾನರೂಪದಲ್ಲಿ ತನ್ನ ಅಧೀನದಲ್ಲಿ ಇಟ್ಟುಕೊಂಡಿರುತ್ತಾನೆ. ಸೃಷ್ಟಿಯ ಕಾಲದಲ್ಲಿ ಬ್ರಹ್ಮನ ನಿಮಿತ್ತದಿಂದ ಅಂಥಹ ಪ್ರಧಾನವೇ ಮಹದಾದಿ ಕಾರ್ಯಗಳಿಗೆ ಉಪಾದಾನಕಾರಣವಾಗುವುದು. ಪಿತ್ರಾದಿ ದೃಷ್ಟಾಂತಗಳಿಗೆ ಇದೇ ಸರಿಯಾದ ಅರ್ಥವು. ಆದಪ್ರಯುಕ್ತ ಬ್ರಹ್ಮನು ವಿಶ್ವಾತ್ಮನಾ ಪರಿಣಾಮ ಹೊಂದುವುದಿಲ್ಲ ಎಂಬುದೇ ಸರಿಯಾದ ಸಿದ್ಧಾಂತ.

## ಬ್ರಹ್ಮನಿಗೆ ಅಪಾದಾನಕಾರಣತ್ವ ಸಮರ್ಥನೆ

ಈ ಪ್ರಕಾರವಾಗಿ ಶ್ರುತಿ ಪುರಾಣ ಹಾಗೂ ಯುಕ್ತಿಗಳಿಂದ ಬ್ರಹ್ಮನು ನಿರ್ವಿಕಾರನೆಂದು ತಿಳಿದುಬರುವುದರಿಂದ ಜಗತ್ತಿಗೆ ಉಪಾದಾನಕಾರಣ ಎನ್ನುವುದು ಕೂಡುವುದಿಲ್ಲ. ಶ್ರುತಿ-ಸ್ಮೃತಿ-ಪುರಾಣ-ಯುಕ್ತಿಗಳಿಂದ ಬ್ರಹ್ಮನು ನಿಮಿತ್ತಕಾರಣನೆಂದೇ ಪ್ರತೀತವಾಗುವುದೆಂದು ತಿಳಿಸುತ್ತಾರೆ -

**ಅಪಾದಾನತಯಾ ವಿಶ್ವಕರ್ತೃತ್ವಂ ಬುದ್ಧಿಪೂರ್ವಕಂ ।**
**ಉಕ್ತಂ ಭಾಲ್ಲವಶಾಖಾಯಾಂ ಬ್ರಹ್ಮತರ್ಕೇ ಚ ಸಾದರಂ ॥೬೫॥**

ಬ್ರಹ್ಮನು ಕುಂಬಾರನಂತೆ ತಟಸ್ಥನಾದ ಕರ್ತನಲ್ಲ. ಅಶೇಷ ವಿಶೇಷಜ್ಞಾನ ಪೂರ್ವಕವಾಗಿ ಅಪಾದಾನತ್ವರೂಪದಲ್ಲಿ ಬ್ರಹ್ಮನಿಗೆ ವಿಶ್ವಕರ್ತೃತ್ವವು ಭಾಲ್ಲವ ಶಾಖೆಯಲ್ಲಿಯೂ, ಬ್ರಹ್ಮತರ್ಕದಲ್ಲಿಯೂ ಆದರಪೂರ್ವಕವಾಗಿ ಹೇಳಲ್ಪಟ್ಟಿದೆ.

**ವಿವರಣೆ:**

ಮಣ್ಣಿನ ಒಂದು ರಾಶಿಯಿಂದ ಮಡಿಕೆಯುಂಟಾದಾಗ ಅಲ್ಲಿರುವ ಮಣ್ಣೆಲ್ಲ ಪೂರ್ತಿಯಾಗಿ ಮಡಿಕೆಯಾಗುವುದಿಲ್ಲ. ಆ ಮಣ್ಣಿನ ರಾಶಿಯ ಒಂದು ಭಾಗ ಮಾತ್ರ ಮಡಿಕೆಯಾಗಿ ರೂಪುಗೊಳ್ಳುತ್ತದೆ. ಇನ್ನೊಂದು ಭಾಗ ಮಣ್ಣಾಗಿಯೇ ಉಳಿಯುತ್ತದೆ. ಮಣ್ಣಿನ ರಾಶಿಯಿಂದ ಒಂದು ಭಾಗ ಪ್ರತ್ಯೇಕಗೊಂಡು ಮಡಿಕೆಯಾದಾಗ, ಮಣ್ಣೇ ಮಡಿಕೆಯಾಯಿತು ಅಥವಾ ಮಣ್ಣಿನಿಂದ

ಮಡಿಕೆಯಾಗಿದೆ ಎಂಬುದಾಗಿ ಎರಡು ರೀತಿಯಲ್ಲಿ ವ್ಯವಹಾರ ಮಾಡುತ್ತೇವೆ. ಮಡಿಕೆಯಾಗಿ ಪರಿಣಾಮ ಹೊಂದಿದ ಮಣ್ಣಿನ ಭಾಗವನ್ನು ಮಾತ್ರ ಮನಸ್ಸಿನಲ್ಲಿಟ್ಟುಕೊಂಡು ಮಣ್ಣೇ ಮಡಿಕೆಯಾಯಿತೆಂದು ಹೇಳುತ್ತೇವೆ. ಮಡಿಕೆಯಾಗಿ ಪರಿವರ್ತನೆಗೊಳ್ಳದೆ ಹಾಗೆಯೇ ಉಳಿದ ಮಣ್ಣಿನ ಭಾಗವನ್ನು ಮನಸ್ಸಿನಲ್ಲಿಟ್ಟುಕೊಂಡು ಮಣ್ಣಿನಿಂದ ಮಡಿಕೆಯಾಗಿದೆ ಎನ್ನುತ್ತೇವೆ. ಮಡಿಕೆಯಾಗಿ ಪರಿವರ್ತನೆಯಾದ ಮಣ್ಣು ಮಡಿಕೆಯಿಂದ ಪ್ರತ್ಯೇಕ ಅಸ್ತಿತ್ವವನ್ನು ಪಡೆದಿರುವುದಿಲ್ಲ. ಹೀಗೆ ಮಡಿಕೆಯ ಮೂಲದ್ರವ್ಯವಾದ ಮಣ್ಣಿನ ಭಾಗವು ಮಡಿಕೆಯ ಉತ್ಪತ್ತಿಯಲ್ಲಿ **ಉಪಾದಾನಕಾರಣ** ಎನಿಸುತ್ತದೆ. ಪರಿವರ್ತನೆಯಾಗದೆ ಉಳಿದ ಮಣ್ಣಿನ ಭಾಗವು ತನ್ನಿಂದ ಮಡಿಕೆಯು ವಿಭಜನೆಗೊಳ್ಳಲು ಅವಧಿಯಾಗಿದೆ. ಮಡಿಕೆಯಿಂದ ಬೇರೆಯೇ ಆಗಿದ್ದು ಮಡಿಕೆಯ ಉತ್ಪತ್ತಿಗೆ ಅವಧಿಯಾಗಿರುವ ಈ ಮಣ್ಣಿನ ಭಾಗವನ್ನು **ಅಪಾದಾನ ಕಾರಣ** ಎಂದು ಹೇಳುತ್ತಾರೆ. ಈ ಅಪಾದಾನ ಮತ್ತು ಉಪಾದ್ಾನಗಳೆರಡೂ ಬೇರೆಯೇ ಆಗಿವೆ. ಇದೇ ಪ್ರಕಾರವಾಗಿ ಪ್ರಧಾನ ಅಥವಾ ಪ್ರಕೃತಿಯಿಂದ ಜಗತ್ತು ಸೃಷ್ಟಿಗೊಳ್ಳುವಾಗಲೂ ಎರಡು ಭಾಗವನ್ನು ಸ್ವೀಕರಿಸಬೇಕು. ಜಗತ್ತಿನ ಮೂಲದ್ರವ್ಯವಾದ ಪ್ರಕೃತಿಯು ಪೂರ್ತಿಯಾಗಿ ಜಗತ್ತಾಗಿ ರೂಪುಗೊಂಡಿದ್ದರೆ ಪ್ರಕೃತಿಯೇ ಇಲ್ಲದಂತಾಗುವುದು. ಆದರೆ ಹಾಗಾಗುವುದಿಲ್ಲ. ಜಗತ್ತಾಗಿ ಪರಿಣಾಮಗೊಳ್ಳದ ಜಡಪ್ರಕೃತಿಯ ಒಂದು ಭಾಗವು ಹಾಗೆಯೇ ಉಳಿಯುತ್ತದೆ. ಉಳಿದ ಭಾಗವು ಜಗತ್ತಾಗಿ ಪರಿಣಾಮ ಹೊಂದುತ್ತದೆ. ಜಗತ್ತು ಪ್ರತ್ಯೇಕಗೊಳ್ಳಲು ಅವಧಿಯಾದ ಪ್ರಕೃತಿಯ ಭಾಗವು ಜಗತ್ತಿಗೆ ಅಪಾದಾನವಾದರೆ, ಪರಿಣಾಮಗೊಂಡ ಭಾಗವು ಜಗತ್ತಿಗೆ ಮೂಲದ್ರವ್ಯವಾದ ಉಪಾದಾನ ವಸ್ತು. ಅದೇ ಜಗತ್ತಾಗಿ ಪರಿಣಾಮಗೊಂಡಿದೆ. ಉಳಿದ ಭಾಗದಿಂದ ಪ್ರತ್ಯೇಕಗೊಂಡು ಜಗತ್ತು ರೂಪುಗೊಂಡಿದೆ. ಈ ರೀತಿ ಪ್ರಕೃತಿಯಿಂದಲೇ ಜಗತ್ತು ಸೃಷ್ಟಿಯಾಗಿದೆ ಎನ್ನುವುದಾದರೆ, ಪರಮಾತ್ಮನಿಂದ ಜಗತ್ತು ಹುಟ್ಟಿತು ಎನ್ನುವ ವೇದವಾಕ್ಯಗಳಿಗೆ ಅರ್ಥವೇನು? ಜಗತ್ತಿನ ಉತ್ಪತ್ತಿಯಲ್ಲಿ ಭಗವಂತನ ಪಾತ್ರವೇನು? ಎನ್ನುವ ಪ್ರಶ್ನೆಗಳು ಉದ್ಭವ ವಾಗುತ್ತವೆ. ಈ ಪ್ರಶ್ನೆಗಳಿಗೆ ಶ್ರೀಮದಾಚಾರ್ಯರು ಅತ್ಯಂತ ಸೂಕ್ತವಾದ

ರೀತಿಯಲ್ಲಿ ವೇದಸಮ್ಮತವಾದ ವಿವರಣೆ ನೀಡಿದ್ದಾರೆ. ಪರಮಾತ್ಮನು ಪ್ರಕೃತಿಯ ಎರಡು ಭಾಗಗಳಲ್ಲಿಯೂ ನೆಲೆಸಿ, ಅದರ ಒಂದು ಭಾಗವು ಜಗತ್ತಾಗಿ ಪರಿಣಾಮಗೊಳ್ಳುವಂತೆ ಮಾಡುತ್ತಾನೆ. ಪ್ರಕೃತಿಯಿಂದ ಭಿನ್ನನಾಗಿ ಪ್ರಕೃತಿಯಲ್ಲಿ ನಿಂತು ಈ ಕಾರ್ಯವನ್ನು ಮಾಡುತ್ತಾನೆ. ವಿಶ್ವದ ಸೃಷ್ಟಿಯ ವ್ಯಾಪಾರದಲ್ಲಿ ಪರಮಾತ್ಮನನ್ನು ತಂದೆಗೆ ಹೋಲಿಸಬಹುದು. ತಂದೆಯ ಶರೀರದಿಂದ ಒಂದು ಚಿಕ್ಕ ತುಣುಕು (ವೀರ್ಯ) ಪ್ರತ್ಯೇಕಗೊಂಡು ಮಗುವಿನ ದೇಹವಾಗಿ ಪರಿಣಾಮಗೊಳ್ಳುತ್ತದೆ. ಆ ದೇಹದಿಂದ ಭಿನ್ನನಾಗಿದ್ದರೂ ಅದರಲ್ಲಿ ಅಧಿಷ್ಠಿತನಾಗಿ ತಂದೆಯು ಮಗುವಿನ ಉತ್ಪತ್ತಿಗೆ ನಿಮಿತ್ತಕಾರಣನೆನಿಸುವನು. ತಂದೆಯ ದೇಹದ ಭಾಗವಾದ ವೀರ್ಯವು ಮಗುವಿನ ದೇಹದ ಮೂಲದ್ರವ್ಯವಾಗಿ ಉಪಾದಾನಕಾರಣವೆನಿಸುವುದು. ಈ ಮೂಲದ್ರವ್ಯವು ಪ್ರತ್ಯೇಕಗೊಳ್ಳಲು ಅವಧಿಯಾದ ತಂದೆಯ ಶರೀರವು ಅಪಾದಾನವಾಗಿದೆ. ವೀರ್ಯದ ಅಧಿಷ್ಠಾತೃವಾದ ತಂದೆಯು ಮಗುವಿನ ಸೃಷ್ಟಿಕರ್ತನೆನಿಸುವನು. ಜಗತ್ತಿನ ಸೃಷ್ಟಿಯಲ್ಲಿ ಭಗವಂತನ ಪಾತ್ರವೂ ಇದೇ ಆಗಿದೆ. ಪರಬ್ರಹ್ಮನು ಸಕಲಜಗತ್ಕಾರಣ ಎನ್ನುವುದು ಈ ಅರ್ಥದಲ್ಲಿಯೇ. ಪ್ರಧಾನವು ಉಪಾದಾನಕಾರಣವೆಂದೂ ಭಗವಂತನು ಮೇಲೆ ಹೇಳಿದ ರೀತಿಯಲ್ಲಿ ನಿಮಿತ್ತಕಾರಣನೆಂದೂ ತಿಳಿಯಬೇಕು.

ಒಟ್ಟಿನಲ್ಲಿ ಹೇಳುವುದಾದರೆ, ಸಕಲ ಕಾರ್ಯಕ್ರಿಯಾಕಾರಕ ಫಲವಿಷಯಕ ಬುದ್ಧ್ಯಾದಿಯುಳ್ಳ ಪರಬ್ರಹ್ಮನು ಕುಂಬಾರನಂತೆ ಬಾಹ್ಯರೂಪದಿಂದ ಅನುಗ್ರಹ ಮಾಡುತ್ತ, ಪ್ರಧಾನಾದಿಗಳ ಒಳಗೆ ಅಂತರ್ಯಾಮಿರೂಪದಿಂದ ಪರಿಣಾಮಾದಿ ಶಕ್ತಿಗಳನ್ನು ಪ್ರೇರಿಸುತ್ತ, ತನ್ನ ಶರೀರರೂಪಕ ಪ್ರಧಾನಾದಿ ಪರಿಣಾಮಭೂತ ಮಹದಾದಿ ಕಾರ್ಯಗಳು ವ್ಯಕ್ತಗೊಳ್ಳುವುದಕ್ಕೆ ಅವಧಿಯಾಗುತ್ತಾನೆ.

ಮೇಲೆ ಹೇಳಿದ ವಿಷಯವನ್ನೇ ವಿವರಿಸುತ್ತಾರೆ -

**ಇಚ್ಛಾಮಾತ್ರಾತ್ಪ್ರಭೋಃ ಸೃಷ್ಟಿರವಿಕಾರಸ್ಯ ಸರ್ವದಾ ।**
**ಸ್ವಭಾವೋಽಯಮನಂತಸ್ಯ ರಜೋ ಯೇನಾಭವಜ್ಜಗತ್ ॥೬೬॥**
**ಸ್ವದೇಹಾದಿಚ್ಛಯಾ ವಿಶ್ವಂ ಭುಕ್ತಪೂರ್ವಂ ಜನಾರ್ದನಃ ।**
**ಸಸರ್ಜ ಮಾತಾಪಿತೃವದೂರ್ಣನಾಭಿವದೇವ ವಾ ॥೬೭॥**

**ಪ್ರಧಾನಂ ಪರಿಣಾಮ್ಯೇಶೋ ನಿರ್ವಿಕಾರಃ ಸ್ವಯಂ ಸದಾ ।**

**ನ ಚೇತನವಿಕಾರಃ ಸ್ಯಾದ್ಯತ್ರ ಕ್ವಾಪಿ ಹ್ಯಚೇತನಂ ॥೬೮॥**

**ನಾಚೇತನವಿಕಾರೋಽಪಿ ಚೇತನಃ ಸ್ಯಾತ್ಕದಾಚನ ।**

**ನ ಚಾನ್ಯಸ್ಯಾನ್ಯರೂಪತ್ವಂ ವಿಕೃತತ್ವೇಽಪಿ ದೃಶ್ಯತೇ ॥೬೯॥**

**ನ ಕ್ಷೀರಾದನ್ಯಥಾ ದಧ್ನಃ ಕೇನಚಿದ್ದೃಶ್ಯತೇ ಕ್ವಚಿತ್ ।**

**ಸರ್ವಜ್ಞಾದ್ಬ್ರಹ್ಮಣೋಽನ್ಯತ್ವಂ ಜಗತೋ ಹ್ಯನುಭೂಯತೇ ॥೭೦॥**

ಸರ್ವಸ್ವಾಮಿಯಾದ ಶ್ರೀಹರಿಯು ಯಾವಾಗಲೂ ನಿರ್ವಿಕಾರನು. ಕೇವಲ ಇಚ್ಛೆಯಿಂದಲೇ ಅವನ ಸೃಷ್ಟಿಯು. ಈ ಸೃಷ್ಟಿಯು ಪರಿಣಾಮಿ ಕಾರಣದಿಂದಲ್ಲ ಎಂದು ತಿಳಿಸುವ ಸಲುವಾಗಿ ಇಚ್ಛಾಮಾತ್ರ ಎಂದು ಹೇಳಲಾಗಿದೆ. ಈ ಸೃಷ್ಟಿಯು ಅನಂತ ಶಬ್ದವಾಚ್ಯನಾದ ಶ್ರೀಹರಿಯ ಸ್ವಭಾವವೇ ಆಗಿದೆ. ರಜಸ್ ಶಬ್ದದಿಂದ ಉಪಲಕ್ಷಿತವಾದ ತ್ರಿಗುಣಾತ್ಮಕವಾದ ಪ್ರಧಾನವು ಜಗದ್ರೂಪವಾಗಿ ಪರಿಣಮಿಸಿತು. ಪ್ರಲಯಕಾಲದಲ್ಲಿ ಸೂಕ್ಷ್ಮರೂಪದಿಂದ ತನ್ನ ಉದರದಲ್ಲಿ ಸಂರಕ್ಷಿಸಿದ್ದ ವಿಶ್ವವನ್ನು, ಶ್ರೀಹರಿಯು ಸೃಷ್ಟಿಕಾಲದಲ್ಲಿ ಪ್ರಧಾನವನ್ನು ಉಪಾದಾನವನ್ನಾಗಿ ಮಾಡಿಕೊಂಡು, ಸಚ್ಚಿದಾನಂದಾತ್ಮಕವಾದ ತನ್ನ ದೇಹದ ದೆಶೆಯಿಂದ ಸ್ವೇಚ್ಛೆಯಿಂದ ಅವಧಿಭೂತವಾದ ಸ್ಥೂಲರೂಪದಿಂದ ಅಭಿವ್ಯಕ್ತಿಗೊಳಿಸಿದನು. ಯಾವಾಗಲೂ ನಿರ್ವಿಕಾರನಾದ ಶ್ರೀಹರಿಯು ಈ ಜಗತ್ತಿನ ಸೃಷ್ಟಿಗೆ ನಿಮಿತ್ತಕಾರಣನು, ಪ್ರಧಾನವೇ ಉಪಾದಾನಕಾರಣವು. ಮಗುವಿನ ಶರೀರಕ್ಕೆ ತಂದೆತಾಯಿಗಳಂತೆ, ಜೇಡರ ಬಲೆಯ ತಂತುಗಳಿಗೆ ಜೇಡರ ಹುಳುವಿನಂತೆ, ಶ್ರೀಹರಿಯ ಸೃಷ್ಟಿಯು. ಎಂದಿಗೂ ಎಲ್ಲಿಯೂ ಅಚೇತನವು ಚೇತನದ ವಿಕಾರವಾಗಲು ಸಾಧ್ಯವಿಲ್ಲ. ಹಾಗೆಯೇ ಚೇತನವೂ ಅಚೇತನದ ವಿಕಾರವಾಗುವುದು ಅಸಂಭವ. ಒಂದು ವಸ್ತುವಿಗೆ ಮತ್ತೊಂದು ವಸ್ತುವಿನ ವಿಕಾರತ್ವವು ಎಲ್ಲಿಯೂ ಕಂಡುಬರುವುದಿಲ್ಲ. ಹಾಲು ಮೊಸರಾದಾಗ ಇವೆರಡೂ ಬೇರೆ ಬೇರೆಯಾಗಿ ನಮಗೆ ಕಾಣುವುದಿಲ್ಲ. ವಿಕಾರ-ವಿಕಾರಿಗಳು ಪರಸ್ಪರ ವಿಭಿನ್ನಗಳಾಗಿ ಕಂಡುಬರುವುದಿಲ್ಲ. ಹಾಲು ಮೊಸರಾದಂತೆ ಬ್ರಹ್ಮನು ಜಗತ್ತಾಗಿ ಪರಿಣಮಿಸಿದರೆ ಒಂದೇ ಕಾಲದಲ್ಲಿ ಬ್ರಹ್ಮ, ಜಗತ್ತು ಇವೆರಡು ನಮಗೆ ತೋರಲು ಸಾಧ್ಯವಿಲ್ಲ. ಈ ಜಗತ್ತು

ಸರ್ವಜ್ಞನಾದ ಪರಮಾತ್ಮನಿಂದ ಸದಾ ಭಿನ್ನವಾಗಿಯೇ ತಿಳಿಯಲ್ಪಡುವುದು. ಆದ್ದರಿಂದ ಈ ಜಗತ್ತು ಪರಮಾತ್ಮನ ವಿಕಾರವಲ್ಲ. ಆದಪ್ರಯುಕ್ತ ಪರಮಾತ್ಮನು ಜಗತ್ತಿಗೆ ನಿಮಿತ್ತಕಾರಣನೇ ಹೊರತು ಉಪಾದಾನಕಾರಣನಲ್ಲ ಎಂದು ಸಿದ್ಧವಾಗುವುದು.

ಹಾಗಾದರೆ 'ಜಗತ್ ಬ್ರಹ್ಮಣಾಽಭಿನ್ನಂ ಸತ್ವಾತ್ ಬ್ರಹ್ಮವತ್' ಎನ್ನುವ ಅನುಮಾನದಿಂದ ಅಭೇದವು ಸಿದ್ಧವಾಗುವುದು ಎಂದರೆ -

**ಅಭೇದಃ ಸತ್ವಮಾತ್ರೇಣ ಸ್ಯಾತ್ಸರ್ವಸ್ವರ್ಣಯೋರಪಿ ।।೭೧।।**

ಸತ್ತಾಮಾತ್ರದಿಂದ ಬ್ರಹ್ಮನಿಗೂ ಜಗತ್ತಿಗೂ ಅಭೇದವು ಸಾಧಿಸುವುದಾದರೆ ಅದೇ ರೀತಿಯ ಹೇತುವಿನಿಂದ ಕಬ್ಬಿಣಕ್ಕೂ ಬಂಗಾರಕ್ಕೂ ಅಭೇದವು ಬರಬೇಕಾಗುವುದು.

ಬ್ರಹ್ಮನಲ್ಲಿ ಎರಡು ಭಾಗಗಳಿವೆ. ಒಂದು ಭಾಗವು ಚಿನ್ಮಯವಾಗಿ ನಿರ್ವಿಕಾರವಾಗಿ ಯಾವಾಗಲೂ ಇರುವುದು. ಇದೇ ಜಗತ್ತಿನ ಕರ್ತೃವಾಗಿದೆ. ಇನ್ನೊಂದು ಭಾಗವು ಮಾತ್ರ ಜಗತ್ತಾಗಿ ಪರಿಣಾಮಗೊಳ್ಳುವ ಜಗತ್ತಿನ ಮೂಲದ್ರವ್ಯವೆನಿಸಿದೆ. ಹೀಗೆ ಎರಡು ಭಾಗಗಳಿರುವುದರಿಂದ ಸಂಸಾರದಲ್ಲಿ ಬ್ರಹ್ಮ, ಜಗತ್ತು ಎರಡನ್ನೂ ಗ್ರಹಿಸಿಕೊಂಡು ಉಪಾಸನೆ ಆರಾಧನೆಗಳನ್ನು ಮಾಡುವುದು ಸಾಧ್ಯವೆಂದು ಹೇಳಿದರೆ -

**ಭಾಗೇನ ಪರಿಣಾಮಶ್ಚೇದ್ಭಾಗಯೋರ್ಭೇದ ಏವ ಹಿ ।**
**ಯೋ ಭಾಗೋ ನ ವಿಕಾರೀ ಸ್ಯಾತ್ಸ ಏವಾಸ್ಮಾಕಮೀಶ್ವರಃ ।।೭೨।।**

ಬ್ರಹ್ಮನ ಸದ್ಭಾಗದಿಂದ ಪರಿಣಾಮವೆಂದು ಅಂಗೀಕರಿಸುವುದಾದರೆ ಚಿದ್ಭಾಗಕ್ಕೆ ನಿರ್ವಿಕಾರತ್ವವನ್ನು ಒಪ್ಪಬೇಕಾಗುವುದು. ಎರಡು ಭಾಗಗಳಿಗೆ ಭೇದವೇ ಪ್ರಾಪ್ತವಾಗುವುದು. ಯಾವ ಭಾಗವು ವಿಕಾರ ಹೊಂದಿಲ್ಲವೋ ಆ ಭಾಗವೇ ನಮ್ಮ ಪರಮೇಶ್ವರನು.

**ವಿವರಣೆ:** ಪರಿಣಾಮಗೊಂಡಿರುವ ಭಾಗವೂ ಪರಿಣಾಮಗೊಳ್ಳದ ನಿರ್ವಿಕಾರವಾದ ಇನ್ನೊಂದು ಭಾಗವೂ ಒಂದೇ ಆಗಿರಲು ಸಾಧ್ಯವಿಲ್ಲ. ಪೂರ್ತಿಯಾಗಿ ಇವೆರಡು ಭಾಗಗಳೂ ಬೇರೆ ಬೇರೆಯೇ ಆಗಿದ್ದರೆ ಇವೆರಡೂ ಪ್ರತ್ಯೇಕವಾದ ವಸ್ತುಗಳೇ ಆಗುತ್ತವೆ. ಅವುಗಳನ್ನು ನಾವು ಭಾಗಗಳೆಂದು

ಕರೆಯುವುದರಲ್ಲಿ ಅರ್ಥವಿಲ್ಲ. ನಿರ್ವಿಕಾರವಾದ ಚೇತನ ವಸ್ತುವು ವಿಶ್ವದ ಕರ್ತೃವಾಗಿದ್ದರೆ ಅದಕ್ಕಿಂತ ಬೇರೆಯಾದ ಇನ್ನೊಂದು ವಸ್ತುವೇ ಜಗತ್ತಾಗಿ ಪರಿಣಾಮ ಹೊಂದುವುದು ಎಂದೇ ಹೇಳಿದಂತಾಯಿತು. ಇದರಿಂದ ವಿಶ್ವದ ಕರ್ತೃವೂ, ವಿಶ್ವದ ಉಪಾದಾನವಾದ ಮೂಲದ್ರವ್ಯವೂ ಬೇರೆ ಬೇರೆ ಎಂಬ ಸಿದ್ಧಾಂತವನ್ನೇ ಹೇಳಿದಂತಾಯಿತು. ಇದು ನಮಗೆ ಒಪ್ಪಿಗೆಯೇ ಆಗಿದೆ.

ಸದ್ರೂಪದಿಂದ ಬ್ರಹ್ಮನು ಉಪಾದಾನಕಾರಣನು, ಚಿದ್ರೂಪದಿಂದ ನಿಮಿತ್ತ ಕಾರಣನು ಎಂದು ಹೇಳುವುದು ಸರಿಯಲ್ಲ. ಸತ್ ಚಿತ್ ಆನಂದ ಇವೇ ಮೊದಲಾದ ಚೈತನ್ಯರೂಪಗಳ ಸಮುದಾಯವೇ ಬ್ರಹ್ಮ ಎಂದು ನಾವು ಹೇಳುತ್ತೇವೆ. ಒಂದು ಭಾಗವು ಬ್ರಹ್ಮ ಮತ್ತೊಂದು ಭಾಗವು ಬ್ರಹ್ಮನಲ್ಲ ಎನ್ನುವುದು ಕೂಡುವುದಿಲ್ಲ ಎಂದು ಹೇಳಿದರೆ -

**ಭಿನ್ನಾನಾಂ ಸಮುದಾಯಸ್ಯ ನಾಮ ಬ್ರಹ್ಮೇತಿ ಚೇದ್ಭವೇತ್ ।**
**ಬ್ರಹ್ಮೋಪಾದಾನತಾ ನ ಸ್ಯಾತ್ತದಾ ವಿಶ್ವಸ್ಯ ಹಿ ಕ್ವಚಿತ್ ॥೭೩॥**

ಭಿನ್ನಗಳಾದ ಭಾಗಗಳ ಸಮೂಹಕ್ಕೆ ಬ್ರಹ್ಮ ಎನ್ನುವ ನಾಮಧೇಯವು ಇರುವುದಾದರೆ, ಆಗ ಜಗತ್ತಿಗೆ ಬ್ರಹ್ಮನು ಉಪಾದಾನಕಾರಣನೆನ್ನುವುದು ಯಾವ ರೀತಿಯಿಂದಲೂ ಕೂಡದೇ ಹೋಗುವುದು. ಅದೇರೀತಿ ಒಂದೊಂದು ಭಾಗಕ್ಕೂ ಬ್ರಹ್ಮ ಎನ್ನುವ ನಾಮಧೇಯವಿಲ್ಲವೆಂದರೆ ನಿಮಿತ್ತಕಾರಣವೂ ಕೂಡುವುದಿಲ್ಲ.

'ಅಪಾದಾನೇ ಪಂಚಮೀ' ಎನ್ನುವ ಸೂತ್ರದಿಂದ ಅಪಾದಾನದಲ್ಲಿ ಪಂಚಮಿಯು ವಿಹಿತವಾಗಿದೆ. 'ಜನಿಕರ್ತುಃ ಪ್ರಕೃತಿಃ' ಎನ್ನುವ ಸ್ಮೃತಿಯಿಂದ ಉಪಾದಾನವು ಅಪಾದಾನದ ವಿಶೇಷ ಎಂದು ತಿಳಿದುಬರುವುದು. ಆದಕಾರಣ ಪಂಚಮಿಯು ಉಪಾದಾನಾರ್ಥದಲ್ಲಿಯೂ ವಿಹಿತವಾಗುವುದು. ನಿಯಮೇನ ಅಪಾದಾನಕ್ಕೆ ಉಪಾದಾನತ್ವವು ಸಿದ್ಧಿಸುವುದರಿಂದ 'ಯತೋ ವಾ ಇಮಾನಿ ಭೂತಾನಿ ಜಾಯಂತೇ' ಇತ್ಯಾದಿ ವಾಕ್ಯಗಳಲ್ಲಿ ಜಾಯಂತೇ ಇತ್ಯಾದಿ ಜನಿವಾಚಕ ಪದಗಳಿಂದ ಅಪಾದಾನ ವಿಶೇಷ, ಅಂದರೆ ಉಪಾದಾನತ್ವವನ್ನೇ ಸ್ವೀಕರಿಸಬೇಕೆಂದರೆ -

**ಶೃಂಗಾಚ್ಛರೋಽವಿಲೋಮಭ್ಯೋ ದೂರ್ವಾ ಗೋಮಯತಸ್ತಥಾ ।**

**ವೃಶ್ಚಿಕಶ್ಚೇತ್ಯೇವಮಾದ್ಯೇಷ್ವಪಾದಾನತ್ವಮಿಷ್ಯತೇ ॥೭೪॥**

ಕೋಡಿನ ದೆಶೆಯಿಂದ ಶರ ಎಂಬ ತೃಣವಿಶೇಷವು, ಮೇಷ ರೋಮಗಳ ದೆಶೆಯಿಂದ ಗರಿಕೆ ಹುಲ್ಲು, ಗೋಮಯದ ದೆಶೆಯಿಂದ ಚೇಳು, ಇವೇ ಮೊದಲಾದ ಪಂಚಮಿಯಿಂದ ಹೇಳಲ್ಪಟ್ಟ ಉದಾಹರಣಪೂರ್ವಕ ವಾಕ್ಯಗಳಲ್ಲಿ ಶೃಂಗಾದಿಗಳಿಗೆ ಶರಾದಿಗಳನ್ನು ಕುರಿತು ಅಪಾದಾನತ್ವವೇ ಅಂಗೀಕರಿಸಲ್ಪಟ್ಟಿದೆ. ಏಕೆಂದರೆ ಕೋಡು ಅಥವಾ ರೋಮವೇ ಹುಲ್ಲಾಗಿ ಪರಿಣಮಿಸುವುದು, ಸೆಗಣಿಯೇ ಚೇಳಾಗುವುದು ಎಂದಿಗೂ ಸಾಧ್ಯವಿಲ್ಲ. ಆದಕಾರಣ ಈ ದೃಷ್ಟಾಂತವಾಕ್ಯಗಳಲ್ಲಿ ಪಂಚಮಿಯು ಉಪಾದಾನಾರ್ಥದಲ್ಲಿ ಪ್ರಯೋಗವಾಗಿಲ್ಲ. ಇದನ್ನೇ ವಿಸ್ತರಿಸುತ್ತಾರೆ -

**ಉಪಾದಾನೈಕದೇಶತ್ವಂ ಯದ್ಯಪ್ಯತ್ರ ಪ್ರದೃಶ್ಯತೇ ।**
**ಅಪ್ಯಪಾದಾನತೈವಾತ್ರ ದೃಷ್ಟಾಂತೋ ಬ್ರಹ್ಮಣೋ ಭವೇತ್ ॥೭೫॥**
**ನ ಹ್ಯುಪಾದಾನತೈವಾತ್ರ ಬಾಹ್ಯಾವಯವಗೌರವಾತ್ ।**

ಈ ಶೃಂಗಾದಿಗಳಲ್ಲಿ ಏಕದೇಶದಿಂದ ಶರಾದಿಗಳಿಗೆ ಉಪಾದಾನತ್ವವು ತೋರುವುದಾದರೂ, ಇವು ಬ್ರಹ್ಮನ ವಿಷಯದಲ್ಲಿ ಪಂಚಮ್ಯರ್ಥದಲ್ಲಿ ಅಪಾದಾನತ್ವವನ್ನು ಪ್ರತಿಪಾದಿಸುವ ಉದಾಹರಣೆಗಳೇ ಆಗಿವೆ. ಇಲ್ಲಿ ಉಪಾದಾನತ್ವವನ್ನು ಹೇಳಕೂಡದು. ಶೃಂಗದಿಂದ ಹುಟ್ಟಿಕೊಂಡ ಹುಲ್ಲುಗಳಿಗೆ ಬಹುತ್ವವಿರುವುದರಿಂದ ಹಾಗೂ ಉತ್ಪತ್ತಿಯ ನಂತರವೂ ಅವು ಶೃಂಗದಿಂದ ಭಿನ್ನವಾಗಿಯೇ ತೋರುವುದರಿಂದ ಇಲ್ಲಿ ಶೃಂಗಾತ್ ಎನ್ನುವ ಪಂಚಮ್ಯರ್ಥಕ ಪ್ರಯೋಗವು ಕೂಡುತ್ತದೆ.

ಗೋಮಯದಿಂದ ಚೇಳಿನ ಉತ್ಪತ್ತಿಯು ಹೇಳಲ್ಪಟ್ಟಿರುವುದರಿಂದ, ಚೇತನವು ಅಚೇತನದ ವಿಕಾರವಾಗುವುದು ಸಾಧ್ಯವಿಲ್ಲ ಎಂದು ನೀವು ಹೇಳಿದ್ದು ಕೂಡುವುದಿಲ್ಲ ಎಂದರೆ -

**ನ ಚಾಚೇತನತಸ್ತತ್ರ ಚೇತನಸ್ಯ ಸಮುದ್ಭವಃ ॥೭೬॥**
**ಉಪಾದಾನತಯಾ ಕಿಂ ತರ್ಹ್ಯುಪಾದಾನಂ ಹ್ಯಚೇತನಂ ।**
**ಕಾರ್ಯದೇಹಗತಸ್ಯಾಸ್ಯ ಚೇತನಸ್ಯ ಪ್ರದೃಶ್ಯತೇ ॥೭೭॥**

ಅಚೇತನದ ದೆಶೆಯಿಂದ ಚೇತನದ ಉತ್ಪತ್ತಿಯು ಇಲ್ಲವೇ ಇಲ್ಲ.

ಆದರೂ ನಾವು ಕಾರಣತ್ವವನ್ನು ಪೂರ್ತಿಯಾಗಿ ನಿಷೇಧಿಸುವುದಿಲ್ಲ. ಕಿಂತು ಉಪಾದಾನಕಾರಣತ್ವವನ್ನು ಮಾತ್ರ ನಿಷೇಧಿಸುತ್ತೇವೆ. ಅಚೇತನವಾದ ಗೋಮಯಾದಿಗಳು ವೃಶ್ಚಿಕಾದಿಗಳಿಗೆ ಏಕದೇಶದಿಂದ ಉಪಾದಾನವೂ ಏಕದೇಶದಿಂದ ಅಪಾದಾನವೂ ಆಗಿರುತ್ತವೆ. ಹೇಗೆಂದರೆ, ಅಚೇತನವಾದ ಶರೀರಕ್ಕೆ ಉಪಾದಾನಕಾರಣವಾಗಿದ್ದರೆ, ಆ ಶರೀರದಲ್ಲಿನ ಚೇತನದ ಉತ್ಪತ್ತಿಗೆ ಅಪಾದನಕಾರಣವಾಗಿರುತ್ತವೆ.

ಈ ಪ್ರಕಾರವಾಗಿ ಬ್ರಹ್ಮನು ಉಪಾದಾನಕಾರಣನಲ್ಲ ಎಂಬುದಕ್ಕೆ ಪ್ರಮಾಣಗಳನ್ನು ನೀಡಿ, ಉಪಾದಾನಕಾರಣತ್ವದ ಪರವಾಗಿ ಇತರರು ಹೇಳಿದ ಪ್ರಮಾಣಗಳನ್ನು ನಿರಾಕರಿಸಿದರು. ಈಗ 'ಆತ್ಮಕೃತೇಃ ಪರಿಣಾಮಾತ್' ಎನ್ನುವ ಸೂತ್ರಾರ್ಥವಾಗಿ ಹೇಳಿದ 'ಸಚ್ಚ ತ್ಯಚ್ಚ' ಶ್ರುತಿಗೆ ಪರಕೀಯರು ಮಾಡಿರುವ ವ್ಯಾಖ್ಯಾನವನ್ನು ನಿರಾಕರಿಸುತ್ತಾರೆ -

### ಸಚ್ಚ ತ್ಯಚ್ಚ ಇತ್ಯಾದಿ ಶ್ರುತ್ಯರ್ಥ

**ಸಚ್ಚ ತ್ಯಚ್ಚಾಭವದಿತಿ ನಾಸ್ಯ ವಿಶ್ವತ್ವಮುಚ್ಯತೇ ।**
**ತತ್ಸೃಷ್ಟ್ವೇತಿ ಗಿರೈವಾಸ್ಯ ಪೂರ್ವಂ ವಿಶ್ವಸ್ಯ ಸಿದ್ಧಿತಃ ॥೭೮॥**

'ಸಚ್ಚ ತ್ಯಚ್ಚಾಭವತ್। ನಿರುಕ್ತಂ ಚಾನಿರುಕ್ತಂ ಚ। ನಿಲಯನಂ ಚಾನಿಲಯನಂ ಚ। ವಿಜ್ಞಾನಂ ಚಾವಿಜ್ಞಾನಂ ಚ। ಸತ್ಯಂ ಚಾನೃತಂ ಚ। ಸತ್ಯಮಭವತ್।' ಎನ್ನುವ ಶ್ರುತಿಯಲ್ಲಿ ಈ ಬ್ರಹ್ಮನಿಗೆ ಸತ್ ತ್ಯತ್ ಮೊದಲಾದ ಶಬ್ದಗಳಿಂದ ವಾಚ್ಯವಾದ ಮೂರ್ತ ಮತ್ತು ಅಮೂರ್ತ ಎಂಬ ಎರಡು ಗುಂಪುಗಳಿಂದ ಕೂಡಿದ ವಿಶ್ವಭಾವವು ಹೇಳಲ್ಪಡುವುದು ಎನ್ನುವುದು ಕೂಡುವುದಿಲ್ಲ. ಏಕೆಂದರೆ, 'ಯ ಇದಂ ಸರ್ವಮಸೃಜತ। ಯದಿದಂ ಕಿಂಚ। ತತ್ಸೃಷ್ಟ್ವಾ ತದೇವಾನುಪ್ರಾವಿಶತ್। ತದನುಪ್ರವಿಶ್ಯ। ಸಚ್ಚ ತ್ಯಚ್ಚಾಭವತ್।' ಎನ್ನುವ ವಚನದಿಂದ ಸತ್ ತ್ಯದಾದಿಗಳು ಉತ್ಪತ್ತಿಯಾಗುವ ಮುಂಚೆಯೇ ಬ್ರಹ್ಮನಿಗೆ ಈ ಮೂರ್ತಾಮೂರ್ತರೂಪ ಜಗತ್ತಿನ ಉತ್ಪತ್ತಿಯು ತಿಳಿದಿರುವುದು.

ಈ ಶ್ರುತಿಯ ಒಟ್ಟು ತಾತ್ಪರ್ಯವೇನೆಂದರೆ, ಸತ್ ತ್ಯದಾದಿಗಳ ಉತ್ಪತ್ತಿಗೆ ಮುಂಚಿತವಾಗಿಯೇ ಹುಟ್ಟಿರುವ ಪ್ರಯುಕ್ತ, ಈ ಜಗತ್ತು ಸತ್

ತ್ಯತ್ ಮೊದಲಾದ ಶಬ್ದಾರ್ಥವೆಂದು ಇಲ್ಲಿ ವಿವಕ್ಷಿತವಾಗಿಲ್ಲ.

ಹಾಗಾದರೆ ಶ್ರುತ್ಯರ್ಥವು ಯಾವುದೆಂದರೆ -

**ಸತ್ತ್ವಾತ್ತತೇರ್ವೈದಿಕತ್ವಾತ್ ಸಮ್ಯಗ್ವಕ್ತುಮಶಕ್ಯತಃ ।**

**ಆಶ್ರಯತ್ವಾತ್ಸ್ವಾಶ್ರಯತ್ವಾತ್ ಜ್ಞಾನತ್ವಾದ್ದುರ್ವಿದತ್ವತಃ ॥೭೯॥**

**ಸತ್ತತೇರ್ಯಾತನಾಚ್ಚೈವ ಹ್ಯಪ್ರಾಪ್ಯತ್ವಾಚ್ಚ ದುರ್ಜನೈಃ ।**

**ನಿತ್ಯಸಾಧುಗುಣವ್ಯಾಪ್ತಿ ಯಂತೃರೂಪತ್ವತಃ ಸದಾ ॥೮೦॥**

**ಜಗದ್ಗತೇನ ರೂಪೇಣ ಬ್ರಹ್ಮೈವ ಹಿ ತಥೋಚ್ಯತೇ ।**

ಜಗದ್ರೂಪವಾಗಿ ಪರಿಣಾಮವಿಲ್ಲದೇ ಸತ್ವ ಮೊದಲಾದ ಧರ್ಮಗಳ ಯೋಗದಿಂದ, ಪರಬ್ರಹ್ಮನೇ ಸತ್ ತ್ಯತ್ ಮೊದಲಾದ ಶಬ್ದಗಳಿಂದ ಹೇಳಲ್ಪಡುತ್ತಾನೆ. ಸರ್ವೋತ್ತಮನಾದ್ದರಿಂದ ಸತ್ ಎಂದೂ, ವ್ಯಾಪ್ತನಾದ್ದರಿಂದ ತ್ಯತ್ ಎಂದೂ, ವೇದಗಮ್ಯನಾದ್ದರಿಂದ ನಿರುಕ್ತನೆಂದೂ, ಪೂರ್ಣವಾಗಿ ಹೇಳಲಿಕ್ಕೆ ಅಶಕ್ಯವಾದ್ದರಿಂದ ಅನಿರುಕ್ತನೆಂದೂ, ಜಗತ್ತಿಗೆ ಆಶ್ರಯನಾದ್ದರಿಂದ ನಿಲಯನನೆಂದೂ, ಸ್ವಾಶ್ರಯನಾದ್ದರಿಂದ ಅಂದರೆ ತನಗೆ ಮತ್ತೊಬ್ಬನು ಆಶ್ರಯನಾಗಿಲ್ಲವಾದ್ದರಿಂದ ಅನಿಲಯನನೆಂದೂ, ವಿಶೇಷಜ್ಞಾನರೂಪನಾದ್ದರಿಂದ ವಿಜ್ಞಾನನೆಂದೂ, ದುರ್ಜ್ಞೇಯನಾದ್ದರಿಂದ ಅವಿಜ್ಞಾನನೆಂದೂ, ಚೆನ್ನಾಗಿ ವ್ಯಾಪ್ತನು ಹಾಗೂ ಪ್ರವೃತ್ತಿ ಮಾಡಿಸುವವನು ಎನ್ನುವ ವ್ಯುತ್ಪತ್ತಿಯಿಂದ ಸತ್ಯನೆಂದೂ, ದುರ್ಜನರು ಇವನನ್ನು ಹೊಂದಲು ಸಾಧ್ಯವಿಲ್ಲವಾದ್ದರಿಂದ ಅನೃತನೆಂದೂ ಹೇಳಲ್ಪಡುತ್ತಾನೆ. ಸದಾಕಾಲವೂ ನಿತ್ಯವಾದ ಸದ್ಗುಣಗಳಿಂದ ವ್ಯಾಪ್ತನಾಗಿದ್ದು ಭಕ್ತರಲ್ಲಿ ಸಾಧುಗುಣಗಳ ಬಾಹುಲ್ಯವನ್ನು ಪ್ರೇರಿಸುವುದರಿಂದ ಸತ್ಯನೆನಿಸುತ್ತಾನೆ. ಜಗತ್ತಿನ ಎಲ್ಲ ವಸ್ತುಗಳಲ್ಲಿಯೂ ಆವಾವ ರೂಪಗಳಿಂದಲೇ ಇದ್ದು ನಿಯಮನ ಮಾಡುವುದರಿಂದ ಪರಬ್ರಹ್ಮನು ಆವಾವ ಶಬ್ದಗಳಿಂದ ವಾಚ್ಯನಾಗಿದ್ದಾನೆ.

ಹಾಗಾದರೆ 'ಸತ್ ತ್ಯತ್' ಇತ್ಯಾದಿ ಧರ್ಮಗಳು ಅನಾದಿಯಾದ್ದರಿಂದ 'ಸಚ್ಚತ್ಯಚ್ಚ ಅಭವತ್' ಎನ್ನುವ ಪ್ರಯೋಗವು ಹೇಗೆ ಕೂಡುವುದು ಎಂದರೆ -

**ವ್ಯಕ್ತಿರುಕ್ತಗುಣಾನಾಂ ಹಿ ಪುರುಷಾಪೇಕ್ಷಯಾ ನೃಣಾಂ ॥೮೧॥**

**ಭವೇದಭವದಿತ್ಯಾದ್ಯಃ ಪ್ರಯೋಗಾಶ್ಚಾತ್ರ ಯುಜ್ಯತೇ ।**

ಮನುಷ್ಯರಿಗೆ ಉಪದೇಷ್ಟೃ ಪುರುಷನನ್ನು ಅಪೇಕ್ಷಿಸಿ ಅಥವಾ ಶ್ರೋತೃವಿನ ಬುದ್ಧಿಯನ್ನು ಅಪೇಕ್ಷಿಸಿ ಸದಾದಿ ಶಬ್ದೋಕ್ತ ಧರ್ಮಗಳಿಗೆ ಪ್ರತೀತಿಯು ಆಗುವುದು. ಈ ಕಾರಣದಿಂದ ನಿತ್ಯಗುಣವುಳ್ಳವನಾದ ಬ್ರಹ್ಮನಲ್ಲಿಯೂ ಸತ್ ಮೊದಲಾದವು ಉಂಟಾದವು ಎನ್ನುವ ಪ್ರಯೋಗವು ಕೂಡುವುದು. ಅಂದರೆ ಸೃಷ್ಟಿಗೆ ಮುಂಚೆ ಉಪದೇಶ ಮಾಡುವವರೂ ಉಪದೇಶ ಪಡೆಯುವವರೂ ಇರಲಿಲ್ಲ. ಪರಮಾತ್ಮನ ನಿತ್ಯವಾದ ಗುಣಗಳು ಅಪ್ರತೀತವಾಗಿದ್ದವು. ಸೃಷ್ಟಿಯ ಅನಂತರ ಪರಮಾತ್ಮನು ಸಜ್ಜನರಿಂದ ಪ್ರತೀತವಾದ ಗುಣಗಳುಳ್ಳವನಾದನು ಎಂದು ತಾತ್ಪರ್ಯ.

### ಪರಿಣಾಮವಾದದ ನಿರಾಸೆಯ ಉಪಸಂಹಾರ

**ತಸ್ಮಾದಶೇಷಕರ್ತೃಕೋ ನಿರ್ವಿಕಾರೋ ರಮಾಪತಿಃ ॥೮೨॥**

**ಶಬ್ದೈಃ ಪ್ರಕೃತಿರಿತ್ಯಾದ್ಯೈಃ ಸ್ತ್ರೀಲಿಂಗೈರಭಿಧೀಯತೇ ।**

ಲಕ್ಷ್ಮೀಪತಿಯಾದ ಶ್ರೀಹರಿಯೊಬ್ಬನೇ ನಿರ್ವಿಕಾರನಾದದ್ದರಿಂದ ಅಶೇಷ ಜಗತ್ಕರ್ತನು. ಏಕಃ ಎಂಬ ಶಬ್ದವು ಬ್ರಹ್ಮನಲ್ಲಿ ಎರಡು ಭಾಗಗಳಿಲ್ಲ ಎಂಬುದನ್ನು ಸ್ಪಷ್ಟಪಡಿಸುತ್ತದೆ. ಪ್ರಕೃತಿ ಮೊದಲಾದ ಸ್ತ್ರೀಲಿಂಗದ ಶಬ್ದಗಳಿಂದ ಶ್ರೀಹರಿಯೊಬ್ಬನೇ ವಾಚ್ಯನಾಗಿದ್ದಾನೆ. ಪರಬ್ರಹ್ಮನಲ್ಲಿ ಪ್ರಕೃತಿ ಇತ್ಯಾದಿ ಎಲ್ಲ ಸ್ತ್ರೀಲಿಂಗ ಶಬ್ದಗಳ ಸಮನ್ವಯವೇ ಪ್ರಕೃತ್ಯಧಿಕರಣದಿಂದ ಉದ್ದೇಶ. ಬ್ರಹ್ಮನಿಗೆ ಉಪಾದಾನತ್ವರೂಪವಾದ ಅರ್ಥವು ಇಲ್ಲಿ ವಿವಕ್ಷಿತವಲ್ಲ.

**ಬಹುಸ್ಯಾಮಿತಿ ತಸ್ಯೈವ ಹ್ಯುಕ್ತಮಾರ್ಗೇಣ ಯುಜ್ಯತೇ ॥೮೩॥**

**ತತ್ತದ್ಗತೇನ ರೂಪೇಣ.......................................।**

'ಸೋಽಕಾಮಯತ। ಬಹುಸ್ಯಾಂ ಪ್ರಜಾಯೇಯ। ಸಚ್ಚತ್ಯಚ್ಚಾಭವತ್।' ಎನ್ನುವ ವಾಕ್ಯದಿಂದ ಸಿದ್ಧವಾದ ಬಹುರೂಪತ್ವವು ನಿರ್ವಿಕಾರನಾದ ಶ್ರೀಹರಿಗೇ ಹಿಂದೆ ಹೇಳಿದ ರೀತಿಯಿಂದ ಯುಕ್ತವಾಗುವುದು. ಅನಂತ ಪದಾರ್ಥಗಳಲ್ಲಿ ಆಯಾಯ ರೂಪಗಳಿಂದ ಅಂತರ್ನಿಯಾಮಕನಾಗಿದ್ದು ಅನಂತರೂಪಗಳನ್ನು ಹೊಂದುವೆನು ಎಂದು ಆ ಶ್ರೀಹರಿಯು ಇಚ್ಛೆಪಟ್ಟನು ಎಂಬುದು ಈ ಶ್ರುತ್ಯರ್ಥ.

ಹಾಗಾದರೆ ಪೂರ್ವವಾಕ್ಯದಲ್ಲಿ 'ನಿಯಾಮಕನಾಗಿ ಬಹುರೂಪವನ್ನು

ಹೊಂದುವೆನು' ಎನ್ನುವ ಸಂಕಲ್ಪವನ್ನು ಹೇಳಿ, ಅನಂತರ ಉತ್ತರವಾಕ್ಯದಲ್ಲಿ ಇವೆಲ್ಲವನ್ನೂ ಸೃಷ್ಟಿಸಿದನು ಎನ್ನುವ ಅರ್ಥದಲ್ಲಿ 'ಸ ಇದಂ ಸರ್ವಮಸೃಜತ' ಎಂದು ಹೇಳುವುದು ಅಸಂಗತವಾಗುವದು. ಹಾಗಾದರೆ ಶ್ರೀಹರಿಯು ಸ್ವತಂತ್ರ, ಸತ್ಯಸಂಕಲ್ಪ ಇತ್ಯಾದಿ ಮಾತುಗಳು ಅಪ್ರಮಾಣವಾಗಬೇಕಾಗುವುದು ಎಂದು ಹೇಳಿದರೆ -

**..............................ತದರ್ಥಂ ಹ್ಯಸೃಜಜ್ಜಗತ್ ॥೮೪॥**

ಬಹುರೂಪಗಳಲ್ಲಿ ನಿಯಾಮಕತ್ವವು ಸಿದ್ಧಿಸಬೇಕಾದರೆ ಬಹುರೂಪದಲ್ಲಿ ನಿಯಮ್ಯ ಪದಾರ್ಥಗಳು ಅವಶ್ಯಕವಾದ್ದರಿಂದ, ನಿಯಮ್ಯವಾದ ಜಗತ್ತನ್ನು ಸೃಷ್ಟಿಸಿದನು. ಆದಕಾರಣ ಈ ಶ್ರುತಿಯು ಸುಸಂಗತವಾಗಿಯೇ ಇರುವುದು.

ಅನೇಕ ರೂಪಗಳಿಂದ ಆಯಾಯ ಪದಾರ್ಥಗಳಲ್ಲಿ ಪ್ರವೇಶಿಸಿ ಕ್ರೀಡಿಸುವುದಕ್ಕೋಸ್ಕರ ಶ್ರೀಹರಿಯು ಜಗತ್ತನ್ನು ಸೃಷ್ಟಿಸಿದನು. ಆದಪ್ರಯುಕ್ತ ಶ್ರೀಹರಿಯು ಜಗದಾಕಾರದಿಂದ ಪರಿಣಾಮವನ್ನು ಹೊಂದುವುದಿಲ್ಲ ಎಂದು ಸಿದ್ಧವಾಗುವುದು.

ಈ ಪ್ರಕಾರವಾಗಿ ಅಪವ್ಯಾಖ್ಯಾನವನ್ನು ದೂಷಿಸಿ, ಈಗ ಬ್ರಹ್ಮವಿವರ್ತ ವಾದವನ್ನು ದೂಷಿಸುವುದಕ್ಕಾಗಿ ಅನುವಾದ ಮಾಡುತ್ತಾರೆ -

## ವಿವರ್ತವಾದದ ನಿರಾಸೆ

**ಯಚ್ಚಾವಿಕೃತಮೇವೈಕಂ ಬ್ರಹ್ಮ ವಿಶ್ವಾತ್ಮನಾ ಮೃಷಾ ।**
**ದೃಶ್ಯತೇ ಮಂದದೃಷ್ಟ್ಯೈವ ಸ ಸರ್ಗ ಇತಿ ಕಥ್ಯತೇ ॥೮೫॥**

ನಿರ್ವಿಕಾರನೂ, ನಿರವಯವನೂ, ಅದ್ವಿತೀಯನೂ ಆದ ಪರಬ್ರಹ್ಮನೇ ಜಗದಾಕಾರನಾಗಿ ಪರಿಣಾಮ ಹೊಂದುವನು. ಅಂದರೆ ಬ್ರಹ್ಮನಲ್ಲಿ ಜಗತ್ತು ಆರೋಪಿತವಾಗಿದೆ ಎಂದರ್ಥ. ಅವಿದ್ಯಾ ನಿಮಿತ್ತವಾದ ಭ್ರಾಂತಿಯಿಂದಾಗಿ ಅದನ್ನೇ ಸೃಷ್ಟಿ ಎನ್ನುತ್ತಾರೆ. ಇದು ಅದ್ವೈತಿಗಳ ಬ್ರಹ್ಮವಿವರ್ತವಾದ. ಈ ವಾದವನ್ನು ಶ್ರೀಮದಾಚಾರ್ಯರು ಇಲ್ಲಿ ದೂಷಿಸುತ್ತಾರೆ -

**ಸಾ ಮಂದದೃಷ್ಟಿಸ್ತಸ್ಯೈವ ಬ್ರಹ್ಮಣಃ ಕಿಂ ತತೋಽನ್ಯಗಾ ।**
**ಬ್ರಹ್ಮಣಶ್ಚೇತ್ಕ್ವ ಸಾರ್ವಜ್ಞಮನ್ಯಗಾ ಚೇತ್ಸ್ವತೋಽನ್ಯತಾ ॥೮೬॥**

ಬ್ರಹ್ಮನಲ್ಲಿ ಜಗತ್ತು ಆರೋಪಿತವಾಗಿದೆಯೆಂಬ ತಿಳಿವಳಿಕೆಗೆ ಕಾರಣವಾದ

ಆ ಭ್ರಾಂತಿಯು ಯಾರಿಗೆ? ಬ್ರಹ್ಮನಿಗೋ ಅಥವಾ ಜೀವನಿಗೋ? ಬ್ರಹ್ಮನಿಗೆ ಎಂದು ಹೇಳಿದರೆ ಬ್ರಹ್ಮನಿಗೆ ಸರ್ವಜ್ಞತ್ವವನ್ನು ಹೇಳುವ ಶ್ರುತಿಗೆ ವಿರೋಧ ಬರುತ್ತದೆ. ಅಜ್ಞಾನವೇ ಭ್ರಾಂತಿಗೆ ಕಾರಣವಾದ್ದರಿಂದ, ಸರ್ವಜ್ಞನಿಗೆ ಅಜ್ಞಾನವು ಕೂಡುವುದಿಲ್ಲವಾದ್ದರಿಂದ, ಭ್ರಾಂತಿಯೂ ಅಸಂಭವ. ಜೀವನಿಗೆ ಎಂದು ಹೇಳುವ ಹಾಗಿಲ್ಲ. ಏಕೆಂದರೆ ಬ್ರಹ್ಮನಿಂದ ಅನ್ಯನಾದ ಜೀವನ್ನು ಒಪ್ಪಿದರೆ ಅದ್ವೈತಕ್ಕೇ ಭಂಗ ಬರುವುದು.

ಹಾಗಾದರೆ ಜೀವಬ್ರಹ್ಮಭೇದವು ವಾಸ್ತವವೇ ಎಂದು ಒಪ್ಪೋಣ. ಜಡಾತ್ಮಕವಾದ ಪ್ರಪಂಚವು ಬ್ರಹ್ಮನಲ್ಲಿ ಭ್ರಾಂತಿಕಲ್ಪಿತವಾಗಿರಲಿ ಎಂದು ಹೇಳುತ್ತೇನೆ ಎಂದರೆ - (ಈ ರೀತಿಯಾಗಿ ಮಾಯಾವಾದಿಗಳು ಒಪ್ಪುವುದಿಲ್ಲ. ಆದಾಗ್ಯೂ ಸೂತ್ರಾರ್ಥವನ್ನು ನಿರಾಕರಿಸುವುದಕ್ಕಾಗಿ ಹೀಗೆ ವಾದ ಮಾಡಿದರೂ ಅದು ಅಯುಕ್ತವೆಂದು ತೋರಿಸುತ್ತಾರೆ) -

**ನಾದೇಹಯೋಗಿನೋ ದೃಷ್ಟಿರಿತಿ ತತ್ಕಾರಣಂ ಸ್ವತಃ ।**

ದೇಹಸಂಬಂಧವಿಲ್ಲದವರಿಗೆ ಇಂದ್ರಿಯಗಳ ಅಭಾವದ ಕಾರಣ ಪದಾರ್ಥಗಳ ದರ್ಶನವೇ ಆಗುವುದಿಲ್ಲ. ಆದಕಾರಣ ಆರೋಪಕ್ಕೆ ಕಾರಣವಾದ ಇಂದ್ರಿಯ ಹಾಗೂ ಅದಕ್ಕೆ ಆಶ್ರಯವಾದ ಶರೀರದ ಅಸ್ತಿತ್ವವನ್ನು ಭ್ರಮಾಕಲ್ಪನೆಯಿಲ್ಲದೇ ಅಂಗೀಕರಿಸಬೇಕಾಗುತ್ತದೆ.

ಹಾಗಾದರೆ ಬ್ರಹ್ಮವ್ಯತಿರಿಕ್ತವಾದ ಜೀವರಿಗೂ ಸಕಾರಣವಾದ ದೇಹ ಇಂದ್ರಿಯಾದಿಗಳಿಗೂ ಭ್ರಾಂತಿ ಕಲ್ಪಿತವಲ್ಲದ ಅಸ್ತಿತ್ವವಿರಲಿ. ಆದರೆ ಇವುಗಳಿಂದ ಅತಿರಿಕ್ತವಾದ ಪ್ರಪಂಚವು ಭ್ರಾಂತಿಕಲ್ಪಿತವಾಗಲಿ ಎಂದು ಹೇಳಿದರೆ -

**ದೇಹಿನಃ ಕಾರಣಯುತಾ ದೇಹಾಶ್ಚ ಯದಿ ನ ಭ್ರಮಾತ್ ॥೮೭॥**

**ಕಿಂ ಭ್ರಾಂತಿಕಲ್ಪಿತಂ ತತ್ರ .......................................।**

ಜ್ಞಾನಕಾರಣವಾದ ದೇಹೇಂದ್ರಿಯಗಳಿಂದ ಕೂಡಿರುವ ಜೀವರೂ, ಇಂದ್ರಿಯಗಳಿಗೆ ಆಶ್ರಯವಾದ ಶರೀರಗಳೂ ಭ್ರಾಂತಿಕಲ್ಪಿತವಲ್ಲ ಎಂದು ಹೇಳುವುದಾದರೆ, ಇವುಗಳಿಗೆ ಅತಿರಿಕ್ತವಾದ ಪ್ರಪಂಚವೇ ಇಲ್ಲವಾದ್ದರಿಂದ, ಭ್ರಾಂತಿಯನ್ನು ಯಾವುದಕ್ಕೆ ಹೇಳಬೇಕು?

## ಜೀವಬ್ರಹ್ಮಭೇದ ಭ್ರಾಂತಿಕಲ್ಪಿತವಲ್ಲ

ಜೀವಬ್ರಹ್ಮಭೇದವೂ ಭ್ರಾಂತಿಸಿದ್ಧವಾದ ಪ್ರಯುಕ್ತ 'ಅನ್ಯಗಾ ಚೇತ್ಸ್ವತೋಽನ್ಯತಾ' ಎಂದು ಹೇಳಿದ್ದು ಅಯುಕ್ತ. ಭ್ರಾಂತಿಯಿಂದ ತಾನು ಬ್ರಹ್ಮನಿಂದ ಭಿನ್ನ ಎಂದು ತಿಳಿದ ಜೀವನಿಗೆ ಬಾಹ್ಯ ಮತ್ತು ಆಧ್ಯಾತ್ಮಿಕ ವಿಷಯಕವಾದ ಭ್ರಮೆ ಇರುವುದೆಂದು ಹೇಳುತ್ತೇವೆ ಎಂದರೆ -

**...........................ಭೇದೋಽಪಿ ಭ್ರಮಜೋ ಯದಿ ।**

**ಭ್ರಾಂತೇರಜ್ಞಾನಮೂಲತ್ವಾತ್ತಸ್ಯ ಭೇದವ್ಯಪೇಕ್ಷಯಾ ।।೮೮।।**

**ನಾಜ್ಞಾನಕಲ್ಪಕಂ ಕಿಂಚಿದನ್ಯೋನ್ಯಾಶ್ರಯತಾ ಯತಃ ।**

ಕೇವಲ ಪ್ರಪಂಚಮಾತ್ರವಲ್ಲ ಜೀವಬ್ರಹ್ಮರ ಭೇದವೂ ಭ್ರಾಂತಿಸಿದ್ಧ ಎಂದು ಅಂಗೀಕರಿಸುವುದಾದರೆ, ಆಗ ಅನ್ಯೋನ್ಯಾಶ್ರಯ ಹಾಗೂ ಚಕ್ರಕ ಎಂಬ ದೋಷವು ಬರುವುದು. ಅನ್ಯೋನ್ಯೋಶ್ರಾಯ ಬಾಹುಲ್ಯವು ಚಕ್ರಕವೆನಿಸುವುದು. ಅದು ಹೇಗೆಂದರೆ, ಜೀವಬ್ರಹ್ಮರ ಭೇದಕ್ಕೆ ಭ್ರಾಂತಿಯು ಕಾರಣ. ಆ ಭ್ರಾಂತಿಗೆ ಭಾವರೂಪವಾದ ಅಜ್ಞಾನ ಕಾರಣ. ಆ ಅಜ್ಞಾನಕ್ಕೆ ಭೇದವೇ ಆಶ್ರಯ. ಈ ಪ್ರಕಾರವಾಗಿ ಅನ್ಯೋನ್ಯಾಶ್ರಯ ಚಕ್ರಕಾದಿ ದೋಷಗಳು ಬರುವ ಕಾರಣ, ಬ್ರಹ್ಮವ್ಯತಿರಿಕ್ತನಾದ ಜೀವನ ಹೊರತು ಅಜ್ಞಾನಕಲ್ಪಿತವಾದುದು ಬೇರೆ ಯಾವುದೂ ಇರಲು ಸಾಧ್ಯವಿಲ್ಲ.

ದೇಹಾದಿಗಳೂ ಭ್ರಾಂತಿಕಲ್ಪಿತವಾದ ಕಾರಣ ನಾದೇಹಯೋಗಿನಃ ಮೊದಲಾದ ವಾಕ್ಯಗಳಿಂದ ಯಾವುದು ಹೇಳಲ್ಪಟ್ಟಿದೆಯೋ ಅದು ಯುಕ್ತವಲ್ಲ. ಭ್ರಮೆಗೆ ಕಾರಣವಿಲ್ಲ ಎಂದು ಹೇಳಕೂಡದು. ಏಕೆಂದರೆ ಆ ದೇಹಾದಿಗಳ ಭ್ರಮೆಗೂ ಪೂರ್ವದಲ್ಲಿರುವ ದೇಹವೇ ಕಾರಣವಾಗಿರುವುದು. ಹೀಗೆ ಮಾಯಾವಾದಿಯು ಹೇಳಿದರೆ, ಭ್ರಾಂತಿ ಪರಂಪರೆಗೆ ಕೊನೆಯೇ ಇಲ್ಲದಂತಾಗುವುದರಿಂದ ಅಪರಿಹಾರ್ಯವಾದ ಅನವಸ್ಥಾ ದೋಷವು ಉಂಟಾಗುವುದು. ವಾಸ್ತವವಾಗಿ ಭ್ರಾಂತಿ ಪರಂಪರೆಯಲ್ಲಿಯೇ ಪ್ರಮಾಣವಿಲ್ಲ. ಹಾಗಾದರೆ 'ನೇಹ ನಾನಾಸ್ತಿ ಕಿಂಚನ' ಇತ್ಯಾದಿ ಶ್ರುತಿಗಳು ಭ್ರಮೆಯ ವಿಷಯದಲ್ಲಿ ಪ್ರಮಾಣವಲ್ಲವೇ ಎಂದು ಮಾಯಾವಾದಿಯು ಕೇಳಿದರೆ -

**ಭ್ರಮತ್ವೇ ತ್ವಿಯಮುಕ್ತಿಶ್ಚ ತದಂತಃ ಪತನಾನ್ನಹಿ ।**

ಆಕಾಶ ಮೊದಲಾದ ಸಮಸ್ತ ಪ್ರಪಂಚಕ್ಕೆ ಭ್ರಾಂತಿಸಿದ್ಧತ್ವವಿದ್ದರೆ, 'ನೇಹ ನಾನಾಸ್ತಿ ಕಿಂಚನ' ಎನ್ನುವ ವಾಕ್ಯವೂ ಈ ಪ್ರಪಂಚದಲ್ಲಿಯೇ ಸೇರುವ ಕಾರಣ ಮಿಥ್ಯೆಯೇ ಆಗಬೇಕು.

ಈ ಸಮಸ್ತ ಪ್ರಪಂಚವೂ ಭ್ರಾಂತಿಕಲ್ಪಿತವಾದರೂ ವ್ಯಾವಹಾರಿಕವಾಗಲು ಅಡ್ಡಿಯಿಲ್ಲ. ಆದಪ್ರಯುಕ್ತ ಈ ಶ್ರುತಿಯೂ ವ್ಯಾವಹಾರಿಕವೇ ಆಗುವುದರಿಂದ ಅರ್ಥಜ್ಞಾನಕ್ಕೆ ಕಾರಣವಾಗುವುದು ಎಂದು ಹೇಳಿದರೆ -

**ವ್ಯಾವಹಾರಿಕತಾ ಚಾಸ್ಯ ಸ್ಯಾದಬಾಧ್ಯತ್ವ ಏವ ಹಿ ॥೮೯॥**

ಪ್ರಪಂಚವು ವ್ಯಾವಹಾರಿಕ ಎಂದು ಅಂಗೀಕರಿಸಲ್ಪಡುವುದಾದರೆ ಅಬಾಧ್ಯ ಎಂದು ಅಂಗೀಕರಿಸಬೇಕಾಗುವುದು. ಹಾಗೆ ನೀನು ಅಂಗೀಕರಿಸುವುದಿಲ್ಲ. ಆದಕಾರಣ ವ್ಯಾವಹಾರಿಕವೆಂದೂ ಅಂಗೀಕರಿಸುವುದಕ್ಕೆ ಯೋಗ್ಯವಲ್ಲ.

ಶುಕ್ತಿರಜತಾದಿಗಳು ಬಾಧ್ಯಗಳಾಗಿದ್ದರೂ ಅವು ಅಭಿಜ್ಞಾದಿ ವ್ಯವಹಾರಕ್ಕೆ ವಿಷಯಗಳಾಗುವುದು ಕಂಡಿದೆ. ಆದ್ದರಿಂದ ಎಲ್ಲೆಲ್ಲಿ ವ್ಯಾವಹಾರಿಕವಿಷಯತ್ವವು ಇರುವುದೋ ಅಲ್ಲಲ್ಲಿ ಅಬಾಧ್ಯತ್ವವು ಇರುವುದು ಎನ್ನುವ ತರ್ಕಕ್ಕೆ ವ್ಯಾಪ್ತಿ ಇಲ್ಲವೆಂದರೆ -

**ಬಾಧ್ಯಂ ನಾರ್ಥಕ್ರಿಯಾಕಾರಿ ...............................।**

ಶುಕ್ತಿರಜತಗಳು ಬಾಧ್ಯವಾಗಿದ್ದರೂ ಅಭಿಜ್ಞಾದಿ ವ್ಯವಹಾರಕ್ಕೆ ವಿಷಯಗಳು ಎನ್ನುವುದು ಸತ್ಯವೇ. ಆದಾಗ್ಯೂ ಅವು ಅರ್ಥಕ್ರಿಯಾಕಾರಿಗಳಲ್ಲ. ಏಕೆಂದರೆ ಈ ಶುಕ್ತಿರಜತವು ಬೆಳ್ಳಿಯ ಉಂಗುರ ಕಿರೀಟಾದಿಗಳನ್ನು ತಯಾರಿಸುವಂಥಹ ಅರ್ಥಕ್ರಿಯೆಗಳಲ್ಲಿ ಪ್ರಯೋಜಕವಲ್ಲ. ಅರ್ಥಕ್ರಿಯಾಕಾರಿತ್ವವೇ ವ್ಯಾವಹಾರಿಕತ್ವದ ಲಕ್ಷಣ, ಅಭಿಜ್ಞಾದಿ ವಿಷಯತ್ವವಲ್ಲ. ಆದ್ದರಿಂದ ತರ್ಕಕ್ಕೆ ವ್ಯಾಪ್ತಿ ವೈಕಲ್ಯವಿಲ್ಲ.

ಹಾಗಾದರೆ ಅಸತ್ಯವಾದ ಸ್ವಪ್ನದಲ್ಲಿ ಆಗತಕ್ಕ ಸ್ತ್ರೀಸಂಭೋಗಾದಿಗಳಿಂದ ಧಾತುವಿಸರ್ಜನೆ ಮೊದಲಾದ ಅರ್ಥಕ್ರಿಯೆಗಳು ಕಂಡುಬರುವುದರಿಂದ ತರ್ಕಕ್ಕೆ ವ್ಯಾಪ್ತಿಯಿಲ್ಲ ಎಂದು ಹೇಳಿದರೆ -

## ಸ್ವಪ್ನ ಮಿಥ್ಯೆಯಲ್ಲ

**.......................ನ ಚ ಸ್ವಪ್ನೋಽಪಿ ನೋ ಮೃಷಾ ।**

**ವಾಸನಾಜನಿತತ್ವೇನ ತಸ್ಯಾಪ್ಯಂಗೀಕೃತತ್ವತಃ ॥೯೦॥**

ನಮ್ಮ ಬಾದರಾಯಣರ ಮತದಲ್ಲಿ ಸ್ವಪ್ನದಲ್ಲಿ ತೋರುವ ಪದಾರ್ಥಗಳೂ ಮಿಥ್ಯೆ ಅಲ್ಲವೇ ಅಲ್ಲ. ಅನಾದಿಯಾದ ಪೂರ್ವಸಂಸ್ಕಾರದಿಂದ ಹುಟ್ಟಿದ ಪದಾರ್ಥಗಳೇ ಸ್ವಪ್ನದಲ್ಲಿ ಕಂಡುಬರುತ್ತವೆ ಎಂದು ಅಂಗೀಕರಿಸಲ್ಪಟ್ಟಿದೆ. ಆದಕಾರಣ ಸ್ವಾಪ್ನಪದಾರ್ಥವು ಮಿಥ್ಯೆಯಲ್ಲ.

ಬಾದರಾಯಣರ ಸಿದ್ಧಾಂತವು ಶ್ರುತ್ಯನುಸಾರಿಯಾಗಿರುವುದು. ಸ್ವಪ್ನದಲ್ಲಿ ತೋರುವ ಪದಾರ್ಥಗಳಿಗೆ ಕರ್ತಾರನಿದ್ದಾನೆಂದು ಶ್ರುತಿಯು ಹೇಳುತ್ತದೆ. ಶ್ರುತಿಯು ಸ್ವಾಪ್ನಾರ್ಥಕ್ಕೆ ಸತ್ಯತ್ವವನ್ನೇ ಪ್ರತಿಪಾದಿಸುವುದರಿಂದ, ಸ್ವಪ್ನವು ಮಿಥ್ಯೆಯಲ್ಲ ಎನ್ನುವುದೇ ಸೂತ್ರಕಾರರ ಅಭಿಮತವೆಂದು ಹೇಳುತ್ತಾರೆ -

**ಸ ಹಿ ಕರ್ತೇತಿ ವಾಕ್ಯಾಚ್ಚ ಜಾಗ್ರತ್ವಮಿತಿ ಹಿ ಭ್ರಮಃ ।**
**ಸರ್ಪಭ್ರಮಾದಾವಪಿ ಹಿ ಜ್ಞಾನಮಸ್ತ್ಯೇವ ತಾದೃಶಂ ॥**
**ತದೇವಾರ್ಥಕ್ರಿಯಾಕಾರಿ ತತ್ಸದೇವಾರ್ಥಕಾರಕಂ ॥೯೧॥**

'ಸಂಧ್ಯಂ ತೃತೀಯಂ ಸ್ವಪ್ನಸ್ಥಾನಂ' ಎಂದು ಉಪಕ್ರಮಿಸಿ 'ಅಥ ವೇಶಾಂತಾಃ ಪುಷ್ಕರಿಣ್ಯಃ ಸೃಜತೇ ಸ ಹಿ ಕರ್ತಾ' ಎನ್ನುವ ವಾಕ್ಯದಿಂದ ಶ್ರೀಹರಿಯೇ ಸ್ವಾಪ್ನ ಪದಾರ್ಥಗಳ ಸೃಷ್ಟಿಕರ್ತ ಎಂದು ತಿಳಿದುಬರುವುದು. ಪೂರ್ವ ಸಂಸ್ಕಾರವನ್ನು ಉಪಾದಾನವನ್ನಾಗಿ ಮಾಡಿಕೊಂಡು ಪರಮಾತ್ಮನು ಸ್ವಾಪ್ನ ಪದಾರ್ಥಗಳನ್ನು ಸೃಷ್ಟಿ ಮಾಡುತ್ತಾನೆ. ಸ್ವಾಪ್ನ ಪದಾರ್ಥಗಳಿಗೆ ಶ್ರೀಹರಿಯು ನಿಮಿತ್ತಕಾರಣನು. ಆದಕಾರಣ ಸ್ವಾಪ್ನ ಪದಾರ್ಥಗಳು ಸುಳ್ಳಲ್ಲ.

ಹಾಗಾದರೆ 'ಸ್ವಪ್ನಮಾಯಾ ಸರೂಪಾ' ಇತ್ಯಾದಿ ವಾಕ್ಯಗಳಲ್ಲಿ ಸ್ವಪ್ನಕ್ಕೆ ಭ್ರಾಂತಿತ್ವವನ್ನು ಹೇಳಿರುವುದು ಹೇಗೆ ಕೂಡುವುದು ಎಂದರೆ -

ಸ್ವಾಪ್ನ ಪದಾರ್ಥಗಳನ್ನು ನೋಡುತ್ತಿರುವಾಗ ನಾನು ಎಚ್ಚರವಾಗಿಯೇ ಇದ್ದು ಅವುಗಳನ್ನು ನೋಡುತ್ತಿದ್ದೇನೆ ಎಂದು ತಿಳಿಯುವುದು ಅಥವಾ ಜಾಗ್ರದಾವಸ್ಥೆಯಲ್ಲಿ ಕಾಣುವ ಪದಾರ್ಥಕ್ಕೂ ಸ್ವಾಪ್ನ ಪದಾರ್ಥಕ್ಕೂ ಐಕ್ಯವನ್ನು ತಿಳಿಯುವುದು ಅಥವಾ ಹೊರಗಿನ ಮಣ್ಣು ಇತ್ಯಾದಿಗಳಿಂದ ಸ್ವಾಪ್ನ ಪದಾರ್ಥವು ನಿರ್ಮಿತವಾಗಿದೆ ಇತ್ಯಾದಿಯಾಗಿ ತಿಳಿಯುವುದೇ ಭ್ರಮೆ. ಎಚ್ಚರವಾದ ಮೇಲೆ ಬಾಧ ಬರುವುದರಿಂದ ಈ ರೀತಿಯ ಜ್ಞಾನವು ಭ್ರಮೆ ಎನಿಸಿಕೊಳ್ಳುತ್ತದೆ. ಸ್ವಪ್ನದಲ್ಲಿ ಕಂಡ ಹಾವು ಮೊದಲಾದವುಗಳಿಂದ ಭಯ

ನಡುಕ ಬೆವರುವಿಕೆ ಇತ್ಯಾದಿಗಳು ಉಂಟಾಗುವುದು ಎಲ್ಲರಿಗೂ ಅನುಭವವಿದೆ. ಸರ್ಪಜ್ಞಾನವೇ ಭಯಾದಿಗಳಿಗೆ ಕಾರಣ ಹೊರತು ನಿಜವಾದ ಸರ್ಪವಲ್ಲ. ಆದಪ್ರಯುಕ್ತ ಸ್ವಪ್ನದಲ್ಲಿ ಹಾವು ಇತ್ಯಾದಿಗಳ ಜ್ಞಾನವುಂಟಾಗಿದ್ದು ಸುಳ್ಳಲ್ಲ. ಆದರೆ ಅದೇ ನಿಜವಾದ ಹಾವು ಇತ್ಯಾದಿಯಾಗಿ ತಿಳಿಯುವುದು ಸುಳ್ಳು. ಹಗ್ಗದಲ್ಲಿ ಹಾವು ಎನ್ನುವ ಭ್ರಾಂತಿಯಲ್ಲಿಯೂ ನಿಜವಾದ ಸರ್ಪದ ಜ್ಞಾನವು ಇದ್ದೇ ಇರುವುದು. ಸ್ವಪ್ನದಲ್ಲಿ ಕಂಡದ್ದು ನಿಜವಾದ ಹಾವಲ್ಲ ಎಂಬುದು ಸತ್ಯವಾದರೂ ಸ್ವಪ್ನದಲ್ಲಿ ಹಾವನ್ನು ನೋಡಿದೆ ಎನ್ನುವ ಅನುಭವಕ್ಕೆ ಕಾರಣವಾಗುವ ಜ್ಞಾನವು ಸುಳ್ಳಲ್ಲ. ಆ ಜ್ಞಾನವೂ ಸುಳ್ಳಾಗಿದ್ದರೆ ಅದು ಭಯ ಕಂಪನಾದಿಗಳಿಗೆ ಕಾರಣವಾಗುತ್ತಿರಲಿಲ್ಲ. ಆ ಜ್ಞಾನವು ಇದ್ದುದಾಗಿಯೇ ಭಯ ಕಂಪನಾದಿಗಳನ್ನು ಉಂಟುಮಾಡುವುದು. ಯಾವುದು ಅರ್ಥಕ್ರಿಯಾಕಾರಕವಾದ ಜ್ಞಾನವೋ ಅಂಥಹ ಜ್ಞಾನವು ಸತ್ಯವೇ ಆಗಿರುವುದು. ಸ್ವಾಪ್ನಜ್ಞಾನವು ಅರ್ಥಕ್ರಿಯಾಕಾರಿಯಾದುದರಿಂದ ಸ್ವಪ್ನವು ಮಿಥ್ಯೆಯಲ್ಲ.

**ಬ್ರಹ್ಮ ತ್ವರ್ಥಕ್ರಿಯಾಕಾರಿ ಪರತಃ ಸ್ವತ ಏವ ವಾ ।**
**ಅಂಗೀಕೃತಂ ಹಿ ತೇನೈವ ಪರತಸ್ತ್ವೇ ನ ಚ ಪ್ರಮಾ ॥೯೨॥**

ಬ್ರಹ್ಮನಾದರೂ ಅರ್ಥಕ್ರಿಯೆಗಳಿಗೆ ಪ್ರಪಂಚಕ್ಕಿಂತ ಅತಿಶಯನಾಗಿ ಉಪಯುಕ್ತನೆಂದು ಮಾಯಾವಾದಿಯಿಂದಲೇ ಅಂಗೀಕರಿಸಲ್ಪಟ್ಟಿದೆ (ಜನ್ಮಾದಿಸೂತ್ರದಲ್ಲಿ ಬ್ರಹ್ಮನು ಜಗತ್ಕಾರಣನೆಂದು ಮಾಯಾವಾದಿಯಿಂದ ಅಂಗೀಕೃತವಾಗಿದೆ). ಅದು ಸ್ವಾಬಾವಿಕವಾಗಿ ತನ್ನಿಂದಲೇ ಆಗಲಿ ಅಥವಾ ಮತ್ತೊಂದರ ಸಹಾಯದಿಂದಾಗಲೀ ಅಂಗೀಕರಿಸಲ್ಪಟ್ಟಿದೆ ಎಂದು ಹೇಳಿದರೆ, ಅದು ಸರಿಯಲ್ಲ. ನಾನು ಬ್ರಹ್ಮನಲ್ಲಿ ಸ್ವಾಭಾವಿಕ ಅರ್ಥಕ್ರಿಯಾಕಾರಿತ್ವವನ್ನು ಒಪ್ಪಿರುವುದಿಲ್ಲ. ಬ್ರಹ್ಮನಲ್ಲಿ ಮಾಯಾ ಸಂಬಂಧದಿಂದ ಅರ್ಥಕ್ರಿಯೆಯು ತೋರುವದು ಎಂದು ಮಾಯಾವಾದಿಯು ಹೇಳುತ್ತಾನೆ. ಹಾಗೆ ಹೇಳುವುದು ಸರಿಯಲ್ಲ. ಏಕೆಂದರೆ ಬ್ರಹ್ಮನಿಗೆ ಮಾಯಾಸಂಬಂಧದಿಂದ ಅರ್ಥಕ್ರಿಯೆಯನ್ನು ಸಮರ್ಥಿಸಲು ಯಾವುದೇ ಪ್ರಮಾಣವಿಲ್ಲ.

"ಬ್ರಹ್ಮನ ಜಗನ್ನಿರ್ಮಾಣಾದಿ ಅರ್ಥಕ್ರಿಯಾಕಾರಿತ್ವವು ಪ್ರತ್ಯಕ್ಷ ಅನುಮಾನ ಮೊದಲಾದವುಗಳಿಗೆ ವಿಷಯವಾಗುವುದಿಲ್ಲ. ಆದುದರಿಂದ ಶ್ರುತಿಯಿಂದಲೇ

ಪ್ರತೀತವಾಗಬೇಕು. ಶ್ರುತಿಪ್ರತಿಪಾದಿತವೆಲ್ಲವೂ ಬಾಧಕವಿಲ್ಲವಾದರೆ ಸತ್ಯವೇ. ಬ್ರಹ್ಮನಿಗೆ ಅರ್ಥಕ್ರಿಯಾಕಾರಿತ್ವವು 'ನಿಷ್ಕಲಂ ನಿಷ್ಕ್ರಿಯಂ ಶಾಂತಂ' ಇತ್ಯಾದಿ ಶ್ರುತಿಯಿಂದ ಬಾಧಿತವಾಗುವುದು. ಆದಕಾರಣ ಬ್ರಹ್ಮನಿಗೆ ಮಾಯಾ ಸಂಬಂಧದಿಂದ ಅರ್ಥಕ್ರಿಯೆಯನ್ನು ಹೇಳುತ್ತೇವೆ" ಎಂದು ಮಾಯಾವಾದಿಯು ಹೇಳಿದರೆ - 'ಸ ಇದಂ ಸರ್ವಮಸೃಜತ' ಇತ್ಯಾದಿ ಬ್ರಹ್ಮನಿಗೆ ಸ್ವಾಭಾವಿಕ ಜಗತ್ಕಾರಣತ್ವಾದಿಗಳನ್ನು ಹೇಳುವ ಪ್ರಬಲವಾದ ಶ್ರುತಿಗಳಿಂದ ನಿಷ್ಕಲಂ ಇತ್ಯಾದಿ ಶ್ರುತಿಗೆ ಬಾಧಕ ಬರುವುದು. ಆದಕಾರಣ ಬ್ರಹ್ಮನಿಗೆ ಮಾಯಿಕತ್ವ ವಿಷಯದಲ್ಲಿ ಪ್ರಮಾಣವಿಲ್ಲ ಎಂದು ಹೇಳುತ್ತೇವೆ.

ಹಾಗಾದರೆ ಅಬಾಧ್ಯವಾದುದೇ ಅರ್ಥಕ್ರಿಯಾಕಾರಿಯಾಗಲಿ. ಬ್ರಹ್ಮೈಕ್ಯ ಜ್ಞಾನವಾಗುವುದಕ್ಕೆ ಮುಂಚೆ ಪ್ರಪಂಚವೂ ಅಬಾಧ್ಯವೆಂದು ಅಂಗೀಕರಿಸುತ್ತೇವೆ. ಆದಕಾರಣ ಪ್ರಪಂಚದಲ್ಲಿ ಸೇರಿರುವ ಶ್ರುತಿಯೂ ಕೂಡ ಅಮುಖ್ಯ ಸತ್ಯವಾಗಿರುವುದರಿಂದ ಸಾಧಕವಾಗಿರುವುದು ಎಂದರೆ -

**ಅಮುಖ್ಯಸತ್ಯಮಾನಸ್ಯ ಸಾಧಕತ್ವೇ ಸದಾಽಽವಯೋಃ ।**

**ನ ಹಿ ಸಂಪ್ರತಿಪತ್ತಿಃ ಸ್ಯಾದತಸ್ತಿಷ್ಠತು ಸಾ ಪ್ರಮಾ ॥೯೩॥**

ಅಮುಖ್ಯಸತ್ಯವಾದ ಪ್ರಮಾಣಕ್ಕೆ ಸಾಧಕತ್ವ ವಿಷಯದಲ್ಲಿ ಯಾವಾಗಲೂ ನಮ್ಮಿಬ್ಬರಿಗೆ ಸಮ್ಮತಿಯು ಇರುವುದಿಲ್ಲ. ಆದಕಾರಣ ಬ್ರಹ್ಮಜ್ಞಾನಬಾಧ್ಯವಾದ ಆ ಪ್ರಮಾಣವು ಒಂದು ಕಡೆ ಇರಲಿ. ಅದನ್ನು ಪ್ರಮಾಣವಾಗಿ ಹೇಳಬೇಡ. (ಅಪ್ರಮಾ ಎನ್ನುವ ಪಾಠವನ್ನು ಇಟ್ಟುಕೊಂಡರೆ) ಆ ಶ್ರುತಿಯು ಅಪ್ರಮಾಣವಾದ್ದರಿಂದ ಅದನ್ನು ಪ್ರಮಾಣವಾಗಿ ಹೇಳಬೇಡ ಎಂದರ್ಥ.

ಹೀಗೆ ಸ್ವರೂಪದಿಂದಲೂ ವಿಷಯತ್ವದಿಂದಲೂ ಅಸತ್ಯವಾಗಿರುವುದಕ್ಕೆ ಪ್ರಮಾಣಸಾಧಕತ್ವವನ್ನು ಹೇಳುವ ಶ್ರುತಿಯು ವಿವಾದಾಸ್ಪದ ಎಂದಾಗಲಿ. ಹಾಗಿದ್ದರೂ ಪ್ರಪಂಚಕ್ಕೆ ಮಿಥ್ಯಾತ್ವವನ್ನು ಸಾಧಿಸುವುದಕ್ಕಾಗಿ ಆ ಶ್ರುತಿಯನ್ನು ಏಕೆ ಪ್ರಮಾಣವಾಗಿ ತೆಗೆದುಕೊಳ್ಳಬಾರದು ಎಂದು ಕೇಳಿದರೆ -

**ನ ಹಿ ವಿಪ್ರತಿಪನ್ನೇನ ಶಕ್ಯಂ ಸಾಧಯಿತುಂ ಕ್ವಚಿತ್ ।**

**ಸಾಧಕತ್ವಂ ತು ಸತ್ಯಸ್ಯ ಸಾಕ್ಷಿಣೋ ಹ್ಯಾವಯೋರ್ದ್ವಯೋಃ ॥೯೪॥**

**ಸಮ್ಯಕ್ಸಂಪ್ರತಿಪನ್ನಂ ತನ್ನ ವಿವರ್ತಮತಂ ಭವೇತ್ ।**

ವಿವಾದವಿಷಯಕ ಪ್ರಮಾಣದಿಂದ ಏನನ್ನೂ ಸಾಧಿಸುವುದಕ್ಕೆ ಆಗದು. ಸತ್ಯವಾದ ಸಾಕ್ಷಿಗೆ ಸಾಧಕತ್ವವೆಂಬುದು ನಮ್ಮಿಬ್ಬರಿಗೂ ಪೂರ್ಣವಾಗಿ ಸಮ್ಮತವಾದುದೇ ಆಗಿದೆ. ವಿಶ್ವವು ಆರೋಪಿತವೆನ್ನುವ ಮತವು ಸಾಕ್ಷಿಯಿಂದ ಅಂಗೀಕೃತವಾಗದು. ಆದಕಾರಣ ವಿವರ್ತವಾದವನ್ನು ನಾವು ನಿರಾಕರಿಸುತ್ತೇವೆ. ಜಗತ್ಸತ್ಯತ್ವವು ಸಾಕ್ಷಿಯಿಂದಲೇ ಸಿದ್ಧವಾಗುವುದು ಎಂದು ಅಭಿಪ್ರಾಯ.

ಯಾವುದೇ ರೀತಿಯ ಪ್ರಮಾಣ-ಪ್ರಮೇಯ ವ್ಯವಸ್ಥೆಯನ್ನು ನಾನು ಅಂಗೀಕರಿಸಿಲ್ಲ. ಪರಕೀಯ ರೀತಿಯಿಂದಲೇ ಎಲ್ಲವನ್ನೂ ಹೇಳುತ್ತೇನೆ. ನಾನು ಎಂದೂ ಸಾಕ್ಷಿಗೆ ಸಾಧಕತ್ವವನ್ನು ಅಂಗೀಕರಿಸಿಲ್ಲ. ಹಾಗಿದ್ದರೂ ನನ್ನನ್ನು ಕುರಿತು ನೀನು ಸಾಕ್ಷಿಯನ್ನು ಅಂಗೀಕರಿಸಿರುವೆ ಎಂದು ಹೇಗೆ ಹೇಳುತ್ತೀರಿ ಎಂದರೆ -

**ಯದಿ ನಾಂಗೀಕೃತಂ ಕಿಂಚಿದನಂಗೀಕೃತತಾಽಪಿ ಹಿ ॥೯೫॥**

**ನಾಂಗೀಕೃತೇತಿ ಮೂಕಃ ಸ್ಯಾದಿತಿ ನಾಸ್ಮದ್ವಿವಾದಿತಾ ।**

ಯಾವುದೂ ನನ್ನಿಂದ ಅಂಗೀಕರಿಸಲ್ಪಡುವುದಿಲ್ಲವೆಂದು ಹೇಳುವವನಿಂದ ಅವನ ಆ ಹೇಳಿಕೆಯೂ ಅಂಗೀಕರಿಸಲ್ಪಡುವುದಿಲ್ಲ. ಹೀಗೆ ಅವನು ಮೂಕನಾಗುವನು. ಅಂದರೆ ಅವನಿಗೆ ವಾಕ್ ಪ್ರವೃತ್ತಿಯೇ ಕೂಡುವುದಿಲ್ಲ. ಅವನು ನಮಗೆ ಪ್ರತಿವಾದಿಯೇ ಆಗಲಾರನು.

ಹೀಗೆ ಬ್ರಹ್ಮವಿವರ್ತವಾದವನ್ನು (ವಿಶ್ವಮಿಥ್ಯಾತ್ವವನ್ನು) ನಿರಾಕರಿಸಿ, ವಿಶ್ವಸತ್ಯತ್ವಕ್ಕೆ ಸಾಧಕವಾದ ಪ್ರಮಾಣವನ್ನು ಹೇಳುತ್ತಾರೆ -

## ವಿಶ್ವಸತ್ಯತ್ವ ಪ್ರತಿಪಾದಕ ಶ್ರುತಿಗಳು

**ವಿಶ್ವಂ ಸತ್ಯಂ ಯಚ್ಚಿಕೇತ ಪ್ರಘಾನ್ವಸ್ಯ ಯಥಾರ್ಥತಃ ॥೯೬॥**

**ಇತ್ಯಾದಿ ಶ್ರುತಯಃ ಸರ್ವಾ ವಿಶ್ವಸತ್ಯತ್ವವಾಚಿಕಾಃ ।**

**ವಿಶ್ವಂ ಸತ್ಯಂ** (ವಿಶ್ವಂ ಸತ್ಯಂ ಮಘವಾನಾ ಯುವೋರಿದಾಪಶ್ಚನ ಪ್ರಮಿನಂತಿ ವ್ರತಂ ವಾಂ), **ಯಚ್ಚಿಕೇತ** (ಯಚ್ಚಿಕೇತ ಸತ್ಯಮಿತ್ತನ್ನ ಮೋಘಂ ವಸುಸ್ಪಾರ್ಹಮುತ ಜೇತೋತ ದಾತಾ), **ಪ್ರಘ್ವಾನಸ್ಯ** (ಪ್ರ ಘಾ ನ್ವಸ್ಯ ಮಹತೋ ಮಹಾನಿ ಸತ್ಯಾ ಸತ್ಯಸ್ಯ ಕರಣಾನಿ ವೋಚಂ), **ಯಥಾರ್ಥತಃ** (ಕವಿರ್ಮನೀಷೀ ಪರಿಭೂಃ ಸ್ವಯಂಭೂಃ ಯಾಥಾತಥ್ಯತೋಽರ್ಥಾನ್ ವ್ಯದಧಾಚ್ಛಾಶ್ವತೀಭ್ಯಃ ಸಮಾಭ್ಯಃ) ಇತ್ಯಾದಿ ಎಲ್ಲ ಶ್ರುತಿಗಳು ವಿಶ್ವಕ್ಕೆ

ಸತ್ಯತ್ವವನ್ನು ಹೇಳುತ್ತವೆ. ಈ ಶ್ರುತಿಗಳ ಅರ್ಥವನ್ನು ಕೆಳಗೆ ಕೊಡಲಾಗಿದೆ.

"ಮಘವನ್ ಶಬ್ದವಾಚಕವಾದ ಇಂದ್ರಾದಿ ಭಗವದ್ರೂಪಗಳೇ, ನಿಮ್ಮಿಂದ ರಕ್ಷಿಸಲ್ಪಡುವ ಈ ವಿಶ್ವವು ಸತ್ಯವೇ ಆಗಿದೆ. ನಿಮ್ಮ ಈ ಕಾರ್ಯವನ್ನು ಅಬಭಿಮಾನಿ ದೇವತೆಗಳೂ ಸತ್ಯವೆಂಬುದಾಗಿಯೇ ತಿಳಿಯುತ್ತಾರೆ."

"ಸತ್ಯವಾದ ಸಂಪತ್ತನ್ನು ಬಲ್ಯಾದಿಗಳಿಂದ ಗೆದ್ದು ಪುನಃ ಇಂದ್ರಾದಿಗಳಿಗೆ ತಂದುಕೊಟ್ಟ ಆ ಶ್ರೀಹರಿಯು ಯಾವುದನ್ನು ಸೃಷ್ಟಿ ಮಾಡಿದನೋ ಅದು ಯಥಾರ್ಥವೇ ಆಗಿದೆ, ಮಿಥ್ಯೆಯಲ್ಲ."

"ಸರ್ವೋತ್ತಮನಾದ ಸರ್ವಕರ್ತನಾದ ವಿಷ್ಣುವಿನ ಪಾರಮಾರ್ಥಿಕವಾದ ಸೃಷ್ಟ್ಯಾದಿ ಕರ್ಮಗಳನ್ನು ಸತ್ಯವೆಂಬುದಾಗಿಯೇ ಹೇಳುವೆನು."

"ಸರ್ವಜ್ಞನೂ, ಎಲ್ಲರ ಮನೋಪ್ರೇರಕನೂ, ಸರ್ವಸಂಹಾರಕನೂ ಆದ ಶ್ರೀಹರಿಯು ಮಹದಾದಿ ತತ್ವಗಳನ್ನು ಯಾವಾಗಲೂ ಸತ್ಯವಾಗಿರುವಂತೆಯೇ ಸೃಷ್ಟಿಸಿದನು."

ಈ ಪ್ರಕಾರವಾಗಿ ಆಗಮ ಅನುಮಾನಗಳಿಂದ ಸಿದ್ಧವಾದ ವಿಶ್ವಸತ್ಯತ್ವಕ್ಕೆ ಪ್ರತ್ಯಕ್ಷದ ಸಮ್ಮತಿಯನ್ನೂ ಹೇಳುತ್ತಾರೆ –

ಸಾಕ್ಷಿಪ್ರತ್ಯಕ್ಷ ಅಬಾಧಿತ

**ಸತ್ಯತಂ ಗಗನಾದೇಶ್ಚ ಸಾಕ್ಷಿಪ್ರತ್ಯಕ್ಷಸಾಧಿತಂ ||೯೭||**

**ಸಾಕ್ಷಿಸಿದ್ಧಸ್ಯ ನ ಕ್ವಾಪಿ ಬಾಧ್ಯತ್ವಂ ತದದೋಷತಃ |**

ಆಂತರಿಕ ಪದಾರ್ಥಗಳಾದ ಸುಖಾದಿಗಳಿಗೆ ಮಾತ್ರವಲ್ಲದೆ ಬಾಹ್ಯ ಪದಾರ್ಥಗಳಾದ ಗಗನಾದಿಗಳಿಗೂ ಕೂಡ ಸಾಕ್ಷಿಪ್ರತ್ಯಕ್ಷದಿಂದಲೇ ಸತ್ಯತ್ವವು ಸಾಧಿಸಲ್ಪಡುವುದು. ಸಾಕ್ಷಿಗೆ ಯಾವತ್ತೂ ದೋಷವಿಲ್ಲವಾದ್ದರಿಂದ, ಸಾಕ್ಷಿ ಪ್ರತ್ಯಕ್ಷದಿಂದ ಸಿದ್ಧವಾದುದಕ್ಕೆ ಯಾವಾಗಲೂ ಬಾಧ್ಯತ್ವವಿರುವುದಿಲ್ಲ.

**ಸರ್ವಕಾಲೇಷ್ವಬಾಧ್ಯತ್ವಂ ಸಾಕ್ಷಿಣೈವ ಪ್ರತೀಯತೇ ||೯೮||**

**ಕಾಲೋ ಹಿ ಸಾಕ್ಷಿಪ್ರತ್ಯಕ್ಷಃ ಸುಷುಪ್ತೌ ಚ ಪ್ರತೀತಃ |**

ಎಲ್ಲ ಕಾಲಗಳಲ್ಲಿಯೂ ಗಗನಾದಿಗಳಿಗೆ ಅಬಾಧ್ಯತ್ವವು ಸಾಕ್ಷಿಯಿಂದಲೇ ವೇದ್ಯವಾಗುವುದು. ಸುಷುಪ್ತಿಯಲ್ಲಿಯೂ ತೋರುವುದರಿಂದ ಕಾಲವು ಸಾಕ್ಷಿ ಪ್ರತ್ಯಕ್ಷಕ್ಕೆ ವಿಷಯವಾಗಿದೆ.

**ವಿವರಣೆ:**

'ಯದಿ ಸಾಕ್ಷೀ ಸ್ವಯಂಭಾತೋ ನ ಮಾನಂ ಕೇನ ಗಮ್ಯತೇ। ಅಕ್ಷಜಾದೇಶ್ಚ ಮಾನತ್ವಮನವಸ್ಥಾಽನ್ಯಥಾ ಭವೇತ್॥' ಇತ್ಯಾದಿ ವೈಶೇಷಿಕಾಧಿಕರಣದಲ್ಲಿ ಹೇಳಿರುವಂತೆ ಸಾಕ್ಷೀಂದ್ರಿಯವೇ ಸಾಕ್ಷಿನಿಷ್ಠವಾದ ಪ್ರಾಮಾಣ್ಯಗ್ರಾಹಕವಾಗಿದೆ. ಸುಷುಪ್ತಿಯ ಕಾಲದಲ್ಲಿ ಇಂದ್ರಿಯಗಳು ಉಪರತವಾಗಿರುವುದರಿಂದ ಬಾಹ್ಯಪ್ರತ್ಯಕ್ಷಾದಿಗಳಿಗೆ ಆಗ ಪ್ರವೃತ್ತಿ ಇರುವುದಿಲ್ಲ. ಹಾಗಿದ್ದರೂ ಆಗ ಕಾಲದ ಪ್ರತೀತಿ ಇರುವುದು. ಇಷ್ಟು ಕಾಲದವರೆಗೆ ನಾನು ಸುಖವಾಗಿ ನಿದ್ರಿಸಿದ್ದೆನು ಎಂಬುದಾಗಿ ಸುಷುಪ್ತಿಯಿಂದ ಎಚ್ಚೆತ್ತವನಿಗೆ ಪರಾಮರ್ಶೆಯು ಕಂಡಿದೆ. ಅನುಭೂತವಾಗದೇ ಇರುವುದಕ್ಕೆ (ಅನುಭವಕ್ಕೆ ಬರದೇ ಇರುವ ವಿಷಯಕ್ಕೆ) ಪರಾಮರ್ಶೆಯು ಕೂಡುವುದಿಲ್ಲ. ಆದ್ದರಿಂದ ಕಾಲವು ಸಾಕ್ಷಿವೇದ್ಯವೆಂದೇ ತಿಳಿಯುತ್ತದೆ.

ಸುಷುಪ್ತಿಕಾಲದಲ್ಲಿ ಅನುಭೂತವಾದುದಕ್ಕೆ ಇದು ಪರಾಮರ್ಶೆಯಾಗಿದ್ದರೆ ಹೀಗೆ ಹೇಳಿದ್ದು ಸರಿಹೋಗುತ್ತಿತ್ತು. ಆದರೆ ಇದು ಪರಾಮರ್ಶೆಯಲ್ಲ. ಕಿಂತು ಆವಾಗಲೇ ಕಳೆದುಹೋದ ಸುಷುಪ್ತಿಕಾಲವನ್ನು ಅನುಭವಿಸಿ, ಆಗ ಸುಷುಪ್ತಿಕಾಲದಲ್ಲಿದ್ದ ದುಃಖಾನುಭವದ ಅರಿವು ಎಚ್ಚತ್ತಮೇಲೆ ಉಂಟಾಗುವುದು ಎಂದು ಹೇಳುತ್ತೇವೆ ಎಂದರೆ -

**ಅತೀತಾನಾಗತೌ ಕಾಲಾವಪಿ ನಾಸಾಕ್ಷಿಗೋಚರೌ ।**
**ಪಕ್ಷೀಕರ್ತುಮಶಕ್ಯತ್ವಾನ್ನಾನುಮಾ ತತ್ರ ವರ್ತತೇ ॥೯೯॥**

ಭೂತ ಮತ್ತು ಭವಿಷ್ಯತ್ಕಾಲಗಳೂ ಕೂಡ ಸಾಕ್ಷೀತರ ಇಂದ್ರಿಯ ಗೋಚರವಲ್ಲ. ಅಂದರೆ ಸಾಕ್ಷಿಗೋಚರವೇ ಆಗಿವೆ ಎಂದರ್ಥ. ಪಕ್ಷೀಕರಿಸಲು ಅಶಕ್ಯವಾದುದರಿಂದ ಕಾಲದ ವಿಷಯದಲ್ಲಿ ಅನುಮಾನವು ಪ್ರಮಾಣವಾಗದು.

**ವಿವರಣೆ:** ಕಾಲವು ರೂಪವಿಲ್ಲದ ದ್ರವ್ಯವಾದುದರಿಂದ ಚಾಕ್ಷುಷ ಪ್ರತ್ಯಕ್ಷಕ್ಕೆ ವೇದ್ಯವಾಗಲಾರದು. ಕಿವುಡರಿಗೂ ಕಾಲವು ಅನುಭವಕ್ಕೆ ಬರುವುದರಿಂದ ಅದು ಆಗಮವೇದ್ಯವೂ ಆಗಲಾರದು. ಕಾಲವನ್ನು ಪಕ್ಷವನ್ನಾಗಿ ಮಾಡಲಿಕ್ಕೆ ಅಶಕ್ಯವಾದುದರಿಂದ ವ್ಯಾಪ್ತಿಸ್ಮರಣ ಪಕ್ಷಧರ್ಮತಾ ಜ್ಞಾನಗಳು ಕೂಡುವುದಿಲ್ಲ. ಆದಕಾರಣ ಕಾಲದ ವಿಷಯದಲ್ಲಿ ಅನುಮಾನವೂ ಪ್ರವೃತ್ತವಾಗಲಾರದು.

ಇದನ್ನೇ ವಿಸ್ತರಿಸುತ್ತಾರೆ -

**ತದೇತದಿತಿ ಸರ್ವಂ ಚ ದೃಶ್ಯಂ ವಾ ಸ್ಮೃತಿಗೋಚರಂ ॥೧೦೦॥**

**ಸಾಕ್ಷಿಸಿದ್ಧೇನ ಕಾಲೇನ ಖಚಿತಂ ಹ್ಯೇವ ವರ್ತತೇ ।**

**ತಸ್ಮಾನ್ನ ತಂ ವಿನಾ ಕಿಂಚಿತ್ಸ್ಮರ್ತುಂ ದ್ರಷ್ಟುಮಥಾಪಿ ವಾ ॥೧೦೧॥**

**ಶಕ್ಯಂ ತನ್ನಿತ್ಯಸಿದ್ಧೇರ್ಹಿ ನಾನುಮಾಽವಸರೋ ಭವೇತ್ ।**

**ಅತೋಽದೋಷಪ್ರತೀತಸ್ಯ ಸತ್ಯತ್ವಂ ಸಾಕ್ಷಿಣಾ ಮತಂ ॥೧೦೨॥**

ಅದು ಎಂದು ಸ್ಮೃತಿಗೆ ಗೋಚರವಾದುದು ಅಥವಾ ಇದು ಎಂದು ಸಮೀಪದಲ್ಲಿಯೇ ಕಾಣತಕ್ಕ ಎಲ್ಲವೂ ಸಾಕ್ಷಿಸಿದ್ಧವಾದ ಕಾಲದಿಂದ ಸಂಬದ್ಧವಾಗಿಯೇ ಇರುತ್ತದೆ. ಆದಕಾರಣ ಕಾಲದ ಜ್ಞಾನವಿಲ್ಲದೆ ಏನನ್ನೂ ಸ್ಮರಿಸುವುದಕ್ಕಾಗಲೀ ಕಾಣುವುದಕ್ಕಾಗಲೀ ಶಕ್ಯವಿಲ್ಲ. ಕಾಲವು ಸಾಕ್ಷಿಯಿಂದ ನಿತ್ಯಸಿದ್ಧವಾಗಿರುವುದರಿಂದ ಕಾಲಾನುಮಾನಕ್ಕೆ ಅವಕಾಶವು ಆಗಲಾರದು. (ಅನಿಶ್ಚಿತ ವಿಷಯದಲ್ಲಿ ಮಾತ್ರ ಅನುಮಾನಕ್ಕೆ ಅವಕಾಶ). ಆದಪ್ರಯುಕ್ತ ನಿರ್ದೋಷವಾದ ಪ್ರತ್ಯಕ್ಷಾದಿ ಪ್ರಮಾಣದಿಂದ ತಿಳಿಯಲ್ಪಟ್ಟ ಗಗನಾದಿ ಪ್ರಪಂಚಕ್ಕೆ ತ್ರೈಕಾಲಿಕ ಅಬಾಧ್ಯರೂಪವಾದ ಸತ್ಯತ್ವವು ಕಾಲತ್ರಯವನ್ನು ಗ್ರಹಿಸತಕ್ಕ ಸಾಕ್ಷಿಯಿಂದಲೇ ಅಂಗೀಕೃತವಾಗುವುದು. (ದೋಷಯುಕ್ತವಾದ ಪ್ರಮಾಣದಿಂದ ಪ್ರತೀತವಾದ ಶುಕ್ತಿರಜತಾದಿಗಳಿಗೆ ಸತ್ಯತ್ವವನ್ನು ಸಾಕ್ಷಿಯು ಅಂಗೀಕರಿಸುವುದಿಲ್ಲ ಎಂದ ತಾತ್ಪರ್ಯ).

ಸಾಕ್ಷಿಯೂ ಕೂಡ ಪ್ರಾಮಾಣ್ಯವನ್ನು ನಿರ್ಧರಿಸಬೇಕಾದರೆ ಪರೀಕ್ಷೆಯಿಂದ ಸಿದ್ಧವಾದ ಜ್ಞಾನವನ್ನೇ ಅವಲಂಬಿಸುವುದಾದರೆ ಅನವಸ್ಥಾ ದೋಷವು ಬರುವುದು ಎಂದು ಹೇಳಿದರೆ -

**ಪರೀಕ್ಷಾದೇಶ್ಚ ಸತ್ಯತ್ವಂ ತೇನ ಹ್ಯೇವ ಮತಂ ಭವೇತ್ ।**

ಪರೀಕ್ಷಾದಿಗಳಿಗಾದರೂ ಯಾಥಾರ್ಥ್ಯವೂ ಸಾಕ್ಷಿಯಿಂದಲೇ ವೇದ್ಯ ಎಂಬುದು ಅನುಭವದಿಂದ ಸಿದ್ದವಾಗಿದೆ. ಆದಕಾರಣ ಅನವಸ್ಥೆಯು ಆಗಲಾರದು.

ಜಗತ್ತಿಗೆ ತ್ರೈಕಾಲಿಕ ಅಬಾಧ್ಯತ್ವ ಅಥವಾ ಸತ್ಯತ್ವವು ಸಾಕ್ಷಿಯಿಂದ ಸಿದ್ಧವಾಗಿದೆ ಎಂದು ಅಂಗೀಕರಿಸದಿದ್ದರೆ ಬಾಧಕವನ್ನು ಹೇಳುತ್ತಾರೆ -

**ಅನ್ಯಥಾ ಶ್ರುತಿಯುಕ್ತ್ಯಾದಿ ಪ್ರಮಾಣೈಶ್ಚ ಸಹೈವ ತು ॥೧೦೩॥**

**ಆಕಸ್ಮಾದ್ಧಿನಿವೃತ್ತಿಶ್ಚ ಕಿಂ ವಿಶ್ವಸ್ಯ ನ ಶಂಕ್ಯತೇ ।**

ಸಾಕ್ಷಿಯು ತ್ರೈಕಾಲಿಕ ಅಬಾಧ್ಯರೂಪವಾದ ಪ್ರಾಮಾಣ್ಯವನ್ನು ಗ್ರಹಿಸದೇ ಹೋದರೆ, ಶ್ರುತಿ ಯುಕ್ತಿ ಮೊದಲಾದ ಪ್ರಮಾಣಗಳಿದ್ದರೂ, ಬ್ರಹ್ಮನಿಗೂ ಪ್ರಪಂಚದಂತೆ ನಿಷ್ಕಾರಣವಾಗಿ ನಿವೃತ್ತಿಯನ್ನು ಏಕೆ ಶಂಕಿಸಬಾರದು?

**ಇತಃಪೂರ್ವಂ ತಥಾಭಾವಾದ್ಯದಿ ನೋ ಸಂಸೃತೇರ್ಗತಿಃ ॥೧೦೪॥**

ಇದಕ್ಕಿಂತ ಮೊದಲು ನಿವೃತ್ತಿಯಾಗದಿರುವುದರಿಂದ ಬ್ರಹ್ಮನಿಗೆ ನಿವೃತ್ತಿಯು ಇರುವುದಿಲ್ಲ ಎಂದು ಹೇಳುವುದಾದರೆ ಸಂಸಾರಕ್ಕೂ ನಿವೃತ್ತಿಯು ಆಗದೇ ಹೋಗುವುದು.

**ವಾಕ್ಯಾನುಮಾದಿತಶ್ಚೇತ್ಸಾತ್ತತ್ಪ್ರಾಮಾಣ್ಯಂ ಚ ಸಾಕ್ಷಿತಃ ।**

**ತತ್ಪ್ರಾಮಾಣ್ಯಂ ಯಥಾ ಸಾಕ್ಷೀ ಸ್ಥಾಪಯತ್ಯೇವಮೇವ ಹಿ ॥೧೦೫॥**

**ಸರ್ವಕಾಲೇಷ್ವಪಿ ಸ್ಥೈರ್ಯಾದ್ವ್ಯಭಿಚಾರಮಪೋಹ್ಯ ಚ ।**

**ಏವಮಕ್ಷಜಮಾನತ್ವಸಿದ್ಧಾಂ ವಿಶ್ವಸ್ಯ ಸತ್ಯತಾಂ ॥೧೦೬॥**

**ಕಿಮಿತಿ ಸ್ಥಾಪಯೇನ್ನಾಯಂ ನಿರ್ದೋಷಜ್ಞಾನಶಕ್ತಿತಃ ।**

ವಾಕ್ಯ, ಅನುಮಾನ ಮೊದಲಾದ ಪ್ರಮಾಣಗಳಿಂದ ಸಂಸಾರಕ್ಕೆ ನಿವೃತ್ತಿಯು ನಿಶ್ಚಿತವಾಗಿದೆ ಎಂದು ಹೇಳಿದರೆ, ಆಗ ಆ ವಾಕ್ಯಾದಿಗಳ ಪ್ರಾಮಾಣ್ಯವೂ ಕೂಡ ಸಾಕ್ಷಿಯಿಂದಲೇ ಸಿದ್ಧವಾಗುವುದು ಎಂದು ಹೇಳಬೇಕು. ಬ್ರಹ್ಮಸತ್ಯತ್ವಾದಿ ವಾಕ್ಯಗಳಿಗೆ ಪ್ರಾಮಾಣ್ಯವನ್ನು ಸಾಕ್ಷಿಯು ಕೇವಲ ತಾತ್ಕಾಲಿಕವಾಗಿ ಮಾತ್ರವಲ್ಲದೆ ಆತ್ಯಂತಿಕವಾಗಿಯೇ ಗ್ರಹಿಸುತ್ತದೆ. ಅಂದರೆ ಬಾಧಕವನ್ನು ನಿರಾಕರಿಸಿಯೇ ಗ್ರಹಿಸುತ್ತದೆ. ಪ್ರತ್ಯಕ್ಷಪ್ರಮಾಣದಿಂದ ಸಿದ್ಧವಾದ ಜಗತ್ಸತ್ಯತ್ವವನ್ನು ಸಾಕ್ಷಿಯು ಸಾರ್ವಕಾಲಿಕವಾಗಿಯೇ ಗ್ರಹಿಸುತ್ತದೆ. ಸಾಕ್ಷಿಯು ನಿರ್ದೋಷಜ್ಞಾನರೂಪತ್ವವನ್ನು ಹೊಂದಿರುವ ಕಾರಣ ಅದರ ಪ್ರಾಮಾಣ್ಯವು ಸ್ಥಿರವಾಗಿದೆ. ಹೀಗೆ ಒಪ್ಪದಿದ್ದರೆ ಬ್ರಹ್ಮಸತ್ಯತ್ವವೂ ಸಿದ್ಧವಾಗುವುದಿಲ್ಲ.

ಪ್ರತ್ಯಕ್ಷಾದಿ ಜ್ಞಾನವು ನಿರ್ದೋಷವಾಗಿದ್ದರೆ ಸಾಕ್ಷಿಯು ಅದರ ಪ್ರಾಮಾಣ್ಯವನ್ನು ಶಾಶ್ವತವಾಗಿ ಗ್ರಹಿಸುತ್ತದೆ ಎಂದು ಹೇಳಬಹುದಿತ್ತು. ಆದರೆ ಪ್ರತ್ಯಕ್ಷಾದಿ ಜ್ಞಾನವು ಶುಕ್ತಿರಜತಾದಿ ಜ್ಞಾನದಂತೆ ಅವಿದ್ಯಾರೋಪಿತ ಪ್ರಪಂಚದ

ವಿಷಯವಾಗಿದೆ. ಈ ಅವಿದ್ಯೆ ಅಥವಾ ಅಜ್ಞಾನವು ಜೀವನನ್ನು ಆಶ್ರಯಿಸಿದೆ. ಏಕೆಂದರೆ ಪ್ರಪಂಚವು ಒಬ್ಬ ಜೀವನ ಅಜ್ಞಾನದಿಂದ ಸೃಷ್ಟಿಯಾದುದೆಂದು 'ಅನಾದಿ ಮಾಯಯಾ ಸುಪ್ತೋ ಯದಾ ಜೀವಃ ಪ್ರಬುದ್ಧ್ಯತ' ಇತ್ಯಾದಿ ಶ್ರುತಿಸಿದ್ಧವಾಗಿದೆ ಎಂದು ಮಾಯಾವಾದಿಯು ಹೇಳುತ್ತಾನೆ. ಮಾಯಾವಾದವು ಅಂಗೀಕರಿಸಿರುವ ಬಹಳ ಮುಖ್ಯವಾದ ಪ್ರಮೇಯ ಏಕಜೀವವಾದ. ಅದನ್ನು ನಿರಾಕರಿಸುತ್ತಾರೆ -

## ಏಕಜೀವವಾದದ ನಿರಾಸೆ

**ಏಕಾಜ್ಞಾನಕೃತಂ ವಿಶ್ವಮಿತಿ ಯಚ್ಚೋಚ್ಯತೇ ಮೃಷಾ ॥೧೦೭॥**
**ಬಹುಜ್ಞಾನಕೃತಂ ವಿಶ್ವಮಿತಿ ತಸ್ಯೋತ್ತರಂ ಭವೇತ್ ।**
ಶ್ಲೋ **ಪರಸ್ಯತ್ಕೃತಾಂ ಜಾನನ್ನಪಿ ಯಃ ಸ್ವಾತ್ಮತಸ್ಕರಃ ॥೧೦೮॥**
**ಪರೋ ನಾಸ್ತಾತಿ ವದತಿ ಕಿಮಿತ್ಯುನ್ಮತ್ತವದ್ವದೇತ್ ।**
**ಪರಾಭಾವೇಽಪಿ ವಾಗ್ವ್ಯರ್ಥಾ ಯದಿ ನೇವೋಚ್ಯತೇ ತದಾ ॥೧೦೯॥**
**ಕಶಾವೇತ್ರಾದಿಕಂ ತಸ್ಯ ತಸ್ಕರಸ್ಯೋತ್ತರಂ ಭವೇತ್ ।**

ಜಗತ್ತು ಒಬ್ಬ ಜೀವನ ಅಜ್ಞಾನದಿಂದ ಸೃಷ್ಟಿಯಾದದ್ದು ಎಂದು ಪ್ರಮಾಣವಿಲ್ಲದೆ ಹೇಳುವ ಬ್ರಹ್ಮವಿವರ್ತವಾದಿಗೆ ಜಗತ್ತು ಬಹುಜೀವರ ಜ್ಞಾನದಿಂದ ಸೃಷ್ಟಿಸಲ್ಪಟ್ಟದ್ದು ಎನ್ನುವುದೇ ಉತ್ತರವಾಗುವುದು. ತನಗಿಂತ ಬೇರೆಯವನಾದ ಪ್ರತಿವಾದಿಯು ಇದ್ದಾನೆಂಬ ಸತ್ಯವನ್ನು ತಿಳಿದವನಾಗಿದ್ದರೂ ಮತ್ತೊಬ್ಬನು ಇಲ್ಲವೇ ಇಲ್ಲ ಎಂದು ಹೇಳುವವನು ತನ್ನ ಅನುಭವವನ್ನೇ ಅಲ್ಲಗಳೆಯುವ ಆತ್ಮತಸ್ಕರನೆನಿಸುವನು. ಹಾಗೆ ವಾದಿಸುವವನು ಹುಚ್ಚನೇ ಸರಿ. ಮತ್ತೊಬ್ಬನು ಇಲ್ಲವೇ ಇಲ್ಲ ಎಂದು ಹೇಳುವವನು ಏನೇ ಮಾತನಾಡಿದರೂ ಅವೆಲ್ಲವೂ ವ್ಯರ್ಥವೇ ಆಗುವುದು. ನನ್ನಿಂದ ಯಾವತ್ತೂ ಏನೂ ಹೇಳಲ್ಪಡುವುದಿಲ್ಲವೆಂದರೆ, ಸ್ವಕ್ರಿಯಾವಿರೋಧಿಯಾದ ಹಾಗೂ ಸಕಲ ಜನರ ತಿಳಿವಳಿಕೆಯನ್ನು ಅಪಲಾಪಮಾಡತಕ್ಕ ಉನ್ಮತ್ತನಾದ ಆ ಕಳ್ಳನಿಗೆ ಚಾಟಿ, ಬೆತ್ತ ಇತ್ಯಾದಿಗಳಿಂದಲೇ ಉತ್ತರ ಕೊಡಬೇಕು.

ಈ ಪ್ರಕಾರವಾಗಿ ವಿಶ್ವಮಿಥ್ಯಾತ್ವವನ್ನು ಪ್ರತಿಪಾದಿಸುವುದಕ್ಕಾಗಿ ಪರರು ಉದಾಹರಿಸಿದ ಶ್ರುತಿಗಳಿಗೆ ಬಾಹ್ಯಯುಕ್ತಿಗಳಿಂದ ವಿರೋಧವನ್ನು ತೋರಿಸಿ

ವಿಶ್ವಸತ್ಯತ್ವವನ್ನು ಸಮರ್ಥಿಸಿದರು. ಈಗ ಆ ಶ್ರುತಿಗಳಿಗೆ ಅವಿರೋಧವಾದ ವಿಶ್ವಸತ್ಯತ್ವ ಪ್ರತಿಪಾದಕವಾದ ಅರ್ಥವನ್ನು ವ್ಯಾಖ್ಯಾನ ಮಾಡುತ್ತಾರೆ -

ಪ್ರಪಂಚೋ ಯದಿ ವಿದ್ಯೇತ ಇತ್ಯಾದಿ ಶ್ರುತ್ಯರ್ಥ

**ಪ್ರಪಂಚೋ ಯದಿ ವಿದ್ಯೇತ ನಿವರ್ತೇತ ನ ಸಂಶಯಃ ||೧೧೦||**

**ಮಾಯಾಮಾತ್ರಮಿದಂ ದ್ವೈತಮದ್ವೈತಂ ಪರಮಾರ್ಥತಃ |**

ಪಂಚಭೇದಾತ್ಮಕವಾದ ಪ್ರಪಂಚವು ಹುಟ್ಟುವುದಾದರೆ ನಾಶವಾಗುವುದು. ಈ ಭೇದವು ಹರಿಯ ಪ್ರಜ್ಞೆಯಿಂದ ಮಿತವೂ ರಕ್ಷಿತವೂ ಆಗಿದೆ. ಹರಿಯೋಬ್ಬನೇ ಸರ್ವೋತ್ತಮನಾದವನು ಎಂಬುದೇ ಅದ್ವೈತ ಶಬ್ದಕ್ಕೆ ಶ್ರೇಷ್ಠವಾದ ಅರ್ಥ.

**ವಿಕಲ್ಪೋ ವಿನಿವರ್ತೇತ ಕಲ್ಪಿತೋ ಯದಿ ಕೇನಚಿತ್ ||೧೧೧||**

**ಉಪದೇಶಾದಯಂ ವಾದೋಽಜ್ಞಾತೇ ದ್ವೈತಂ ನ ವಿದ್ಯತೇ |**

ವಿವಿಧ ಭೇದವು ಯಾರಿಂದಲಾದರೂ ಅಜ್ಞಾನದಿಂದ ಕಲ್ಪಿತವಾಗಿದ್ದರೆ ನಾಶವಾಗುತ್ತಿತ್ತು. ಶ್ರುತ್ಯಾದಿಗಳಿಂದ ಉಪದಿಷ್ಟವಾದ ಭೇದಸತ್ಯತ್ವಾದಿ ಜ್ಞಾಪಕವಾದುದೇ ಸಜ್ಜನರ ವಾದ. ಭೇದವಿಲ್ಲವೆನ್ನುವುದು ಅಜ್ಞಾನಿಗಳ ವಾದ.

**ಇತ್ಯತ್ರ ಯದಿ ಶಬ್ದೌ ಚ ನಿವರ್ತೇತೇತಿ ಚ ದ್ವಯಂ ||೧೧೨||**

**ವಿಶ್ವಸ್ಯ ಸತ್ಯತಾಮಾಹುರ್ವಿದ್ಯೇತೋತ್ಪತ್ತಿಮೇವ ಚ |**

ಮೇಲಿನ ಎರಡು ಶ್ರುತಿವಾಕ್ಯಗಳಲ್ಲಿ ಬಂದಿರುವ ಎರಡು ಯದಿ ಶಬ್ದಗಳೂ ಮತ್ತು ಎರಡು ನಿವರ್ತೇತ ಎನ್ನುವ ಶಬ್ದಗಳೂ ಜಗತ್ತಿಗೆ ಸತ್ಯತ್ವವನ್ನೂ ಅನಾದಿತ್ವವನ್ನೂ ಕೂಡ ಹೇಳುತ್ತವೆ. ವಿದ್ಯೇತ ಎನ್ನುವ ಶಬ್ದವೂ ಉತ್ಪತ್ತಿ ಎನ್ನುವ ಅರ್ಥವನ್ನೇ ಹೇಳುವುದು. ನಿವರ್ತೇತ ಎನ್ನುವ ಶಬ್ದವು ವಿನಾಶವೆನ್ನುವ ಅರ್ಥವನ್ನೇ ಹೇಳುವುದು, ಬಾಧವೆನ್ನುವ ಅರ್ಥವನ್ನಲ್ಲ.

**ವಿದೋತ್ಪತ್ತಾವಿತಿ ಹ್ಯಸ್ಮಾದ್ಧಾತೋರುತ್ಪತ್ತಿರೇವ ಹಿ ||೧೧೩||**

**ನಿವೃತ್ತಿರ್ವ್ಯಾಪ್ತಿಯುಕ್ ಪ್ರಾಯಃ .........................**

ವಿದವೆನ್ನುವ ಧಾತುವು ಉತ್ಪತ್ತಿ ಎನ್ನುವ ಅರ್ಥದಲ್ಲಿ ವ್ಯಾಖ್ಯಾನ ಮಾಡಲ್ಪಡುವುದರಿಂದ ವಿದ್ಯೇತ ಎಂದರೆ ಹುಟ್ಟುವಿಕೆ ಎಂದೇ ತಿಳಿಯತಕ್ಕದ್ದು. ಯಾವುದಕ್ಕೆ ಉತ್ಪತ್ತಿಯಿದೆಯೋ ಅದಕ್ಕೆ ವಿನಾಶವೂ ಇರುವುದು ಎಂದು

ಹೆಚ್ಚಾಗಿ ವ್ಯಾಪ್ತಿಯು ಇರುವುದು.

## ಪಂಚಭೇದ ನಿರೂಪಣೆ

**.............................ಪ್ರಪಂಚೋ ಭೇದಪಂಚಕಃ ।**

**ಜೀವೇಶ್ವರಭಿದಾ ಚೈವ ಜಡೇಶ್ವರಭಿದಾ ತಥಾ ॥೧೧೪॥**

**ಜೀವಭೇದೋ ಮಿಥಶ್ಚೈವ ಜಡಜೀವಭಿದಾ ತಥಾ ।**

**ಮಿಥಶ್ಚ ಜಡಭೇದೋಽಯಂ ಪ್ರಪಂಚೋ ಭೇದಪಂಚಕಃ ॥೧೧೫॥**

ಪ್ರಪಂಚ ಎನ್ನುವ ಶಬ್ದವು ಪಂಚಭೇದಗಳ ಸಮೂಹವನ್ನು ಹೇಳುತ್ತದೆ. ಜೀವರಿಗೂ ಈಶ್ವರನಿಗೂ ಭೇದ, ಜಡಗಳಿಗೂ ಈಶ್ವರನಿಗೂ ಭೇದ, ಜೀವ-ಜೀವರಿಗೆ ಪರಸ್ಪರ ಭೇದ, ಜೀವರಿಗೂ ಜಡಗಳಿಗೂ ಭೇದ, ಜಡ-ಜಡಗಳಿಗೆ ಪರಸ್ಪರ ಭೇದ - ಹೀಗೆ ಉತ್ಕೃಷ್ಟವಾದ ಐದು ವಿಧದ ಭೇದಗಳಿಂದ ಕೂಡಿರುವುದೇ ಪ್ರಪಂಚ ಎನಿಸುವುದು.

**ಸೋಽಯಂ ಸತ್ಯೋ ಹ್ಯನಾದಿಶ್ಚ ಸಾದಿಶ್ಚೇನ್ನಾಶಮಾಪ್ನುಯಾತ್ ।**

**ದ್ವೈತಂ ನ ವಿದ್ಯತ ಇತಿ ತಸ್ಮಾದಜ್ಞಾನಿನಾಂ ಮತಂ ॥೧೧೬॥**

ಪಂಚಭೇದಾತ್ಮಕವಾದ ಈ ಪ್ರಪಂಚವು ಸತ್ಯವೂ ಅನಾದಿಯೂ ಆಗಿದೆ. ಸಾದಿಯಾಗಿದ್ದರೆ ನಾಶವನ್ನು ಹೊಂದುತ್ತಿತ್ತು. ಆದುದರಿಂದ ಭೇದವು ಇಲ್ಲವೆನ್ನುವುದು ಅಜ್ಞಾನಿಗಳ ಮತ.

**ಇತಿ ಶ್ರುತೇರ್ಮಿತಂ ತ್ರಾತಂ ಮಾಯಾಖ್ಯಹರಿವಿದ್ಯಯಾ ।**

**ಉತ್ತಮೋಽರ್ಥೋ ಹರಿಸ್ತ್ವೇಕಃ ತದನ್ಯನ್ಮಧ್ಯಮಾಧಮಂ ॥೧೧೭॥**

'ಮಾಯಾಮಾತ್ರಮಿದಂ ದ್ವೈತಂ' ಎನ್ನುವ ಶ್ರುತಿಯ ವ್ಯಾಖ್ಯಾನ ಮಾಡುತ್ತಾರೆ. ಈ ಭೇದವು ಮಾಯಾ ಎನ್ನುವ ಶ್ರೀಹರಿಯ ವಿಜ್ಞಪ್ತಿಯಿಂದ ಮಿತವೂ, ರಕ್ಷಿಸಲ್ಪಟ್ಟದ್ದೂ ಆಗಿದೆ. ಈಗ 'ಅದ್ವೈತಂ ಪರಮಾರ್ಥತಃ' ಎನ್ನುವ ಶ್ರುತಿಯ ವ್ಯಾಖ್ಯಾನವನ್ನು ಮಾಡುತ್ತಾರೆ. ಸರ್ವೋತ್ತಮನಾದ ಶ್ರೀಹರಿಯ ದೆಶೆಯಿಂದ ಇತರವಾದುದು ಮಧ್ಯಮ ಹಾಗೂ ಅಧಮಗಳಾಗಿವೆ. ಶ್ರೀತತ್ವವು ಮಧ್ಯಮವೆನಿಸಿದರೆ ಬ್ರಹ್ಮಾದಿಗಳು ಅಧಮರು. ಆದಕಾರಣ ಸರ್ವೋತ್ಕೃಷ್ಟವಾದ ವಸ್ತುವೆಂದರೆ ಶ್ರೀಹರಿಯೊಬ್ಬನೇ.

ಈಗ ಪರಿಣಾಮವಾದಿಯೂ ವಿವರ್ತವಾದಿಯೂ 'ಪ್ರತಿಜ್ಞಾದೃಷ್ಟಾಂತಾನು-

ಪರೋಧಾತ್' ಎನ್ನುವ ಸೂತ್ರದ ವ್ಯಾಖ್ಯಾನಾವಸರದಲ್ಲಿ ವಿಷಯವಾಕ್ಯವೆಂದು ಸ್ವೀಕರಿಸಿರುವ 'ಉತ ತಮಾದೇಶಮಪ್ರಾಕ್ಷ್ಯ' ಇತ್ಯಾದಿ ಶ್ರುತಿಯನ್ನು ವ್ಯಾಖ್ಯಾನ ಮಾಡುತ್ತಾರೆ -

ಈ ಶ್ರುತಿಗೆ ಪರಿಣಾಮವಾದಿಗಳ ವ್ಯಾಖ್ಯಾನ ಹೀಗಿದೆ -

ಬ್ರಹ್ಮನು ಸಕಲ ವಸ್ತುಗಳಿಗೆ ಉಪಾದಾನಕಾರಣನೆಂದು ತಿಳಿಯದ ಶ್ವೇತಕೇತುವು, "ಒಂದು ವಸ್ತುವಿನ ಜ್ಞಾನದಿಂದ ಮತ್ತೊಂದರ ಜ್ಞಾನವು ಎಲ್ಲಿಯೂ ಕಾಣದಿರುವುದರಿಂದ, ಬ್ರಹ್ಮನನ್ನು ತಿಳಿದರೆ ಎಲ್ಲವನ್ನೂ ತಿಳಿದಂತೆಯೇ ಎಂದು ಹೇಗೆ ಹೇಳುತ್ತೀರಿ" (ಕಥಂ ನು ಭಗವಃ ಸ ಆದೇಶೋ ಭವತಿ) ಎಂದು ಗುರುಗಳಾದ ಉದ್ದಾಲಕರನ್ನು ಪ್ರಶ್ನಿಸುತ್ತಾನೆ. ಆಗ ಉದ್ದಾಲಕರು ಶ್ವೇತಕೇತುವನ್ನು ಕುರಿತು, "ಜಗತ್ತಿಗೆ ಬ್ರಹ್ಮನು ಉಪಾದಾನ ಕಾರಣ. ಜಗತ್ತಿಗೂ ಬ್ರಹ್ಮನಿಗೂ ಅಭೇದವಿದೆ. ಆದಕಾರಣ ಬ್ರಹ್ಮನನ್ನು ತಿಳಿದರೆ ಸಕಲ ಜಗತ್ತಿನ ಜ್ಞಾನವಾಗುವುದು" ಎಂದು ಉಪದೇಶಿಸಿ, ಅದನ್ನು ಸ್ಪಷ್ಟೀಕರಿಸಲು ಮೂರು ದೃಷ್ಟಾಂತಗಳನ್ನು ನೀಡುತ್ತಾರೆ.

'ಯಥಾ ಸೋಮ್ಯೈಕೇನ ಮೃತ್ಪಿಂಡೇನ ವಿಜ್ಞಾತೇನ ಸರ್ವಂ ಮೃಣ್ಮಯಂ ವಿಜ್ಞಾತಂ ಸ್ಯಾತ್।

'ಯಥಾ ಸೋಮ್ಯೈಕೇನ ಲೋಹಮಣಿನಾ ವಿಜ್ಞಾತೇನ ಸರ್ವಂ ಲೋಹಮಯಂ ವಿಜ್ಞಾತಂ ಸ್ಯಾತ್।'

'ಯಥಾ ಸೋಮ್ಯೈಕೇನ ನಖನಿಕೃಂತನೇನ ವಿಜ್ಞಾತೇನ ಸರ್ವಂ ಕಾರ್ಷ್ಣಾಯಸಂ ವಿಜ್ಞಾತಂ ಸ್ಯಾತ್।' (ಛಾಂದೋಗ್ಯ).

ಹೇಗೆ ಒಂದು ಮಣ್ಣಿನ ಮುದ್ದೆಯ ಜ್ಞಾನದಿಂದ ಮಣ್ಣಿನಿಂದ ಮಾಡಲ್ಪಟ್ಟ ಎಲ್ಲ ವಸ್ತುಗಳ ಜ್ಞಾನವಾಗುವುದೋ, ಒಂದು ಲೋಹಮಣಿಯ ಜ್ಞಾನದಿಂದ ಎಲ್ಲ ಲೋಹಮಯ ವಸ್ತುಗಳ ಜ್ಞಾನವಾಗುವುದೋ, ಒಂದು ಉಗುರು-ಕತ್ತರಿಯ ಜ್ಞಾನದಿಂದ ಎಲ್ಲ ಉಕ್ಕಿನ ವಸ್ತುಗಳ ಜ್ಞಾನವಾಗುವುದೋ, ಅದೇ ಪ್ರಕಾರವಾಗಿ ಒಬ್ಬ ಬ್ರಹ್ಮನನ್ನು ತಿಳಿಯುವುದರಿಂದ ಬ್ರಹ್ಮನ ಪರಿಣಾಮರೂಪವಾದ ಜಗತ್ತಿನ ಎಲ್ಲ ವಸ್ತುಗಳ ಜ್ಞಾನವಾಗುವುದು. ಪ್ರತಿಯೊಂದು ದೃಷ್ಟಾಂತ ವಾಕ್ಯದ ಜೊತೆಯಲ್ಲಿ 'ವಾಚಾರಂಭಣಂ ವಿಕಾರೋ

ನಾಮಧೇಯಂ ಮೃತ್ತಿಕೇತ್ಯೇವ ಸತ್ಯಂ' ಇತ್ಯಾದಿಯಾಗಿ ಹೇಳಲಾಗಿದೆ. ಘಟ ಮೊದಲಾದವು ಮಣ್ಣು ಮೊದಲಾದವುಗಳ ವಿಕಾರಗಳು ಹಾಗೂ ಅವುಗಳ ನಾಮಧೇಯಗಳು ವಾಗಿಂದ್ರಿಯದಿಂದ ಹುಟ್ಟಿದಂಥವು. ಆದಕಾರಣ ಘಟಾದಿಗಳು ಮಣ್ಣಿನ ಕಾರ್ಯವೇ ಆಗಿದ್ದರೂ ಮಣ್ಣಿನಿಂದ ಅಭಿನ್ನವೆಂದೇ ತಿಳಿಯಲ್ಪಡುವುದು. 'ಉತ ತಮಾದೇಶಮಪ್ರಾಕ್ಷ್ಯೋ ಯೇನಾಶ್ರುತಂ ಶ್ರುತಂ ಭವತ್ಯಮತಂ ಮತಮವಿಜ್ಞಾತಂ ವಿಜ್ಞಾತಂ' ಇತ್ಯಾದಿ ಶ್ರುತಿಯಿಂದ ಜಗತ್ತು ಬ್ರಹ್ಮನ ಪರಿಣಾಮವಾಗಿರುವುದರಿಂದ ಜಗತ್ತಿಗೆ ಬ್ರಹ್ಮನಿಂದ ಅಭೇದವಿರುವುದೆಂದು ತಿಳಿದುಬರುವುದು. ಆದಪ್ರಯುಕ್ತ ಒಬ್ಬ ಬ್ರಹ್ಮನನ್ನು ತಿಳಿಯುವುದರಿಂದ ಎಲ್ಲ ಜಗತ್ತನ್ನೂ ತಿಳಿದಂತಾಗುವುದು. ಈ ಪ್ರಕಾರವಾಗಿ ಪರಿಣಾಮವಾದಿಗಳು ಬ್ರಹ್ಮಾಭೇದ ಪರವಾಗಿ ಈ ಶ್ರುತಿಗೆ ವ್ಯಾಖ್ಯಾನ ಮಾಡುತ್ತಾರೆ.

ಇದೇ ಶ್ರುತಿಗೆ ವಿವರ್ತವಾದಿಗಳು ಹೀಗೆ ವ್ಯಾಖ್ಯಾನ ಮಾಡುತ್ತಾರೆ -

ಒಂದು ಮಣ್ಣಿನ ಮುದ್ದೆಯನ್ನು ಪಾರಮಾರ್ಥಿಕವಾಗಿ ಮಣ್ಣು ಎಂದು ತಿಳಿದರೆ ಮೃಣ್ಮಯವಾದ ಘಟಾದಿ ಎಲ್ಲ ವಸ್ತುಗಳೂ ಅದೇ ಮಣ್ಣಿನಿಂದಲೇ ಆದಂಥವು ಎಂದು ತಿಳಿಯಲ್ಪಡುವುದು. ಘಟಾದಿಗಳು ಮಣ್ಣೇ ಆಗಿದ್ದರೂ ಘಟ ಇತ್ಯಾದಿ ನಾಮಧೇಯವು ಕೇವಲ ವ್ಯವಹಾರಕ್ಕಾಗಿ ಮಾತ್ರ ಮಾತಿನ ರೂಪದಲ್ಲಿ ಹುಟ್ಟಿಕೊಳ್ಳುವುದು. ಕೇವಲ ವಚನದಲ್ಲಿ ಮಾತ್ರ ವಿಕಾರವು, ವಾಸ್ತವವಾಗಿ ವಿಕಾರ ಎಂಬುದಿಲ್ಲ. ಅಂದರೆ ಘಟಾದಿಗಳು ಸುಳ್ಳು, ಮೃತ್ತಿಕಾ ಎನ್ನುವುದು ಮಾತ್ರ ಸತ್ಯ. ಆದಪ್ರಯುಕ್ತ ಬ್ರಹ್ಮನೊಬ್ಬನೇ ಸತ್ಯ, ಉಳಿದ ಜಗತ್ತೆಲ್ಲವೂ ಕೇವಲ ವ್ಯಾವಹಾರಿಕವಾದ್ದರಿಂದ ಸುಳ್ಳು ಎಂಬುದಾಗಿ ಈ ದೃಷ್ಟಾಂತಗಳಿಂದ ನಿಶ್ಚಿತವಾಗುವುದು. ಇದು ವಿವರ್ತವಾದಿಗಳ ವ್ಯಾಖ್ಯಾನ.

ಇವೆರಡು ವ್ಯಾಖ್ಯಾನಗಳೂ ಶ್ರುತಿಗೆ ಅಭಿಪ್ರೇತವಾದ ಅರ್ಥಕ್ಕೆ ವಿರೋಧವಾಗಿವೆ. ಒಂದು ವಸ್ತುವಿನ ಜ್ಞಾನದಿಂದ ಸರ್ವವಸ್ತುಗಳ ಜ್ಞಾನ ಎನ್ನುವ ಪ್ರತಿಜ್ಞೆಗೆ ಪೂರಕವಾಗಿ ಉಕ್ತವಾಗಿರುವ ಮೃತ್ಪಿಂಡಾದಿ ದೃಷ್ಟಾಂತಗಳು ವಿಕಾರ-ವಿವರ್ತ ಎಂಬ ಅಭಿಪ್ರಾಯದಲ್ಲಿ ಹೇಳಲ್ಪಟ್ಟಿವೆ ಎನ್ನುವುದು ಶ್ರುತಿವಾಕ್ಯದಿಂದ ನೇರವಾಗಿ ತೋರುವುದಿಲ್ಲ. ಆದರೂ ವಾಚಾರಂಭಣಂ

ಎನ್ನುವ ಉಪಪಾದಕ ವಾಕ್ಯದ ಬಲದಿಂದ ಈ ರೀತಿ ಅರ್ಥ ಮಾಡುತ್ತೇವೆ ಎಂದು ಹೇಳಿದರೆ, ಶ್ರುತಿಯ ನಿಜವಾದ ಅರ್ಥವನ್ನು ವಿವರಿಸುವ ಮೂಲಕ ಪರವಾದಿಗಳ ವ್ಯಾಖ್ಯಾನ ಸರಿಯಲ್ಲ ಎಂದು ತೋರಿಸುತ್ತಾರೆ -

ವಾಚಾರಂಭಣಂ ಶ್ರುತ್ಯರ್ಥ

**ವಾಚಾರಬ್ಧಂ ತು ಸಾಂಕೇತ್ಯಂ ನಾಮ ಸ್ಯಾದ್ವಿಕೃತಂ ಬಹು ।**
**ನಿತ್ಯಂ ತು ನಾಮಧೇಯಂ ಯನ್ಮೃತ್ತಿಕೇತ್ಯಾದಿ ವೈದಿಕಂ ॥೧೧೮॥**
**ಪ್ರಾಧಾನ್ಯಾತ್ತತ್ಪರಿಜ್ಞಾನಾತ್ಪ್ರಾಕೃತಾಜ್ಞೋಽಪಿ ಪೂರುಷಃ ।**
**ವಿದ್ವಾನಿತ್ಯುಚ್ಯತೇ ಸದ್ಭಿರೇವಂ ನಿತ್ಯಪರಾತ್ಮವಿತ್ ॥೧೧೯॥**

**ವಾಚಾರಂಭಣ** ಶಬ್ದಕ್ಕೆ ವಾಗಿಂದ್ರಿಯದಿಂದ ಉತ್ಪತ್ತಿಯಾದದ್ದು ಎಂದರ್ಥ. ಈ ಶಬ್ದದಿಂದ ಸಾಂಕೇತಿಕ ನಾಮವೇ ವಾಚ್ಯವಾಗುವುದು. ವಿವಿಧಃ ಕಾರಃ ವಿಕಾರಃ ಎನ್ನುವ ವ್ಯುತ್ಪತ್ತಿಯಿಂದ ವಿಕಾರ ಎಂದರೆ ಅನೇಕ ಪ್ರಕಾರವುಳ್ಳದ್ದು ಎಂದರ್ಥವಾಗುವುದು. ಮೃತ್ತಿಕಾ ಲೋಹಮಣಿ ಇವೇ ಮೊದಲಾದ ಸಂಸ್ಕೃತ ನಾಮಧೇಯವು ನಿತ್ಯವಾದದ್ದು. ಶ್ರುತಿಯಲ್ಲಿನ ವೈದಿಕ ಶಬ್ದಕ್ಕೆ ಸಂಸ್ಕೃತವೆಂದೂ ಸತ್ಯ ಎನ್ನುವ ಶಬ್ದಕ್ಕೆ ನಿತ್ಯವೆಂದೂ ಅರ್ಥಮಾಡಬೇಕು. ಸಂಸ್ಕೃತ ಭಾಷೆಗೆ ಪ್ರಾಧಾನ್ಯವಿರುವ ಪ್ರಯುಕ್ತ, ಪ್ರಾಕೃತ ಭಾಷೆಯ ಜ್ಞಾನವಿಲ್ಲದಿದ್ದರೂ ಸಂಸ್ಕೃತ ಭಾಷೆಯ ಜ್ಞಾನವನ್ನು ಹೊಂದಿರುವ ಪುರುಷನನ್ನು ಸಜ್ಜನರು ಎಲ್ಲವನ್ನೂ ತಿಳಿದವನೆಂದು ಹೇಳುತ್ತಾರೆ. ಇದೇ ರೀತಿ ನಿತ್ಯನಾದ ಪ್ರಧಾನನಾದ ಪರಮಾತ್ಮನನ್ನು ತಿಳಿದ ಪುರುಷನೂ ಕೂಡ ಎಲ್ಲವನ್ನೂ ತಿಳಿದವನು ಎಂದು ಹೇಳಿಸಿಕೊಳ್ಳಲ್ಪಡುತ್ತಾನೆ.

**ವಿವರಣೆ:** ಸಾಂಕೇತಿಕ ನಾಮವು ಉತ್ಪತ್ತಿಯನ್ನು ಹೊಂದಿರುವುದರಿಂದ ಅನಿತ್ಯವೆನಿಸುತ್ತದೆ. ಪುರುಷನ ಇಚ್ಛಾನುಸಾರ ಅನೇಕ ವಿಧವಾಗಿರುವುದರಿಂದ ಅದು ವಿಕಾರವೆಂದು ಹೇಳಲ್ಪಡುತ್ತದೆ. ಮೃತ್ತಿಕಾ ಇತ್ಯಾದಿ ನಾಮಧೇಯವು ವೈದಿಕವಾಗಿರುವುದರಿಂದ ನಿತ್ಯವೂ ಅನಾದಿಯೂ ಆಗಿದೆ. ಕೃತಕವೂ, ಅನಿತ್ಯವೂ, ಪರರ ಅಪೇಕ್ಷೆಯನ್ನು ಹೊಂದಿರುವುದೂ ಆಗಿರುವುದರಿಂದ ಸಾಂಕೇತಿಕ ನಾಮಧೇಯವು ಅಪ್ರಧಾನವಾಗಿದೆ. ಸಂಸ್ಕೃತವು ಅನಾದಿನಿತ್ಯವೂ ಪರರ ಅಪೇಕ್ಷೆಯಿಲ್ಲದಿರುವುದೂ ಆಗಿರುವುದರಿಂದ ಪ್ರಧಾನವೆನಿಸಿದೆ.

ಅಪ್ರಧಾನವಾದ ಪ್ರಾಕೃತ ಭಾಷೆಯ ಶಬ್ದಗಳು ಪ್ರಧಾನವಾದ ಸಂಸ್ಕೃತ ಭಾಷೆಯ ವಿಕಾರಗಳೇ ಆಗಿವೆ. ಆದುದರಿಂದ ಪ್ರದಾನವಾದ ಸಂಸ್ಕೃತದ ಜ್ಞಾನದಿಂದ ಅಪ್ರಧಾನವಾದ ಪ್ರಾಕೃತ ಭಾಷೆಯ ಜ್ಞಾನವಾಗುವುದು. ಇದೇ ರೀತಿ ಪರಾನಪೇಕ್ಷನಾದ ಪರಮಾತ್ಮನು ಪ್ರಧಾನ. ಎಲ್ಲ ರೀತಿಯಿಂದಲೂ ಪರಮಾತ್ಮನನ್ನೇ ಅವಲಂಬಿಸಿರುವ ಕಾರಣ ಸಕಲ ಜಗತ್ತು ಅಪ್ರಧಾನ. ಆದಪ್ರಯುಕ್ತ ಪ್ರಧಾನನಾದ ಒಬ್ಬ ಪರಮಾತ್ಮನನ್ನು ತಿಳಿದರೆ ಇಡೀ ಜಗತ್ತನ್ನು ತಿಳಿದಂತೆಯೇ ಎಂದು ಶ್ರುತಿಯು ಹೇಳಿದೆ. ಪರಮಾತ್ಮನೊಬ್ಬನೇ ಸತ್ಯ ಉಳಿದ ಜಗತ್ತೆಲ್ಲವೂ ಸುಳ್ಳು ಎನ್ನುವುದರಲ್ಲಿ ಶ್ರುತಿಗೆ ಸಮ್ಮತವಿಲ್ಲ.

ಸತ್ಯ ಶಬ್ದಕ್ಕೆ ನಿತ್ಯವೆನ್ನುವ ಅರ್ಥವನ್ನು ನಾವು ಒಪ್ಪುವುದಿಲ್ಲ. ಏಕೆಂದರೆ ಸತ್ಯ ಶಬ್ದಕ್ಕೆ ನಿತ್ಯವೆನ್ನುವ ಅರ್ಥದಲ್ಲಿ ರೂಢಿಯೂ ಇಲ್ಲ ಯೋಗವೂ ಇಲ್ಲ ಎಂದು ಹೇಳಿದರೆ –

**ಸದಾತನಂ ಸತ್ಯಮಿತಿ ನಿತ್ಯಮೇವೋಚ್ಯತೇ ಬುಧೈಃ ।**
**ಪ್ರಯೋಗಶ್ಚೋತ್ತರತ್ರಾಸ್ತಿ ಜರಾ ಯದ್ಯೇನಮಾಪ್ನುಯಾತ್ ॥೧೨೦॥**
**ದೇಹಃ ಪ್ರಧ್ವಂಸತೇ ಚಾಯಂ ಕಿಂ ತತೋಽಸ್ಯಾತಿ(ವಿ)ಶಿಷ್ಯತೇ ।**
**ಹನ್ಯತೇ ನ ವಧೇನಾಯಂ ಜರಯಾ ನ ಚ ಜೀರ್ಯತೇ ॥**
**ಏತತ್ಸತ್ಯಂ ಬ್ರಹ್ಮಪುರಮಿತಿ ನಿತ್ಯತ್ವ ಏವ ಹಿ ॥೧೨೧॥**

ಸದಾತನ ಅಂದರೆ ಯಾವಾಗಲೂ ಇರುವುದು ಸತ್ಯ ಎನ್ನುವ ನಿರ್ವಚನದಿಂದ ಸತ್ಯ ಎನ್ನುವ ಪದದಿಂದ ನಿತ್ಯವಾದುದು ಹೇಳಲ್ಪಡುತ್ತದೆ. ಶಬ್ದ ನಿರ್ವಚನವನ್ನು ಬಲ್ಲ ವೈಯಾಕರಣಿಗಳು ನಿತ್ಯವಾದುದನ್ನು ಸತ್ಯ ಎನ್ನುವ ಪದದಿಂದ ಹೇಳುತ್ತಾರೆ. ಎಂಟನೇ ಪ್ರಘಟ್ಟಕದಲ್ಲಿ ಸತ್ಯಶಬ್ದಕ್ಕೆ ನಿತ್ಯತ್ವದಲ್ಲಿಯೇ ಪ್ರಯೋಗವೂ ಕೂಡ ಇದೆ. ಆ ಪ್ರಯೋಗವನ್ನೇ ತೋರಿಸುವುದಕ್ಕಾಗಿ ಇಲ್ಲಿ 'ಯದ್ಯೈನಂ ಜರಾವಾಪ್ನೋತಿ ಪ್ರಧ್ವಂಸತೇ ವಾ ಕಿಂ ತತೋಽಸ್ಯಾತಿವಿಶಿಷ್ಯತೇ। ಇತಿ ಸ ಬ್ರೂಯಾನ್ನಾಸ್ಯ ಜರಯೈತಜ್ಜೀರ್ಯತೇ ನ ವಧೇನಾಸ್ಯ ಹನ್ಯತೇ ಏತತ್ಸತ್ಯಂ ಬ್ರಹ್ಮಪುರಂ॥' ಎನ್ನುವ ವಾಕ್ಯವನ್ನು ಅರ್ಥತಃ ಪಠಿಸುತ್ತಾರೆ 'ಜರಾ ಯದ್ಯೇನಂ' ಇತ್ಯಾದಿ. ಈ ವಾಕ್ಯದ ಅರ್ಥ ಕೆಳಕಂಡಂತಿದೆ –

ಈ ಶರೀರವು ಯಾವಾಗ ಮುದಿತನವನ್ನು ಹೊಂದುವುದೋ ಅಥವಾ

ನಷ್ಟವಾಗುವುದೋ, ಆಗ ಈ ಶರೀರದಲ್ಲಿ ಅಂತರ್ಗತನಾದ ಪರಮಾತ್ಮನು ಆಕಾಶದಂತೆ ನಾಶವಾಗದೇ ಇರುವನೋ ಅಥವಾ ಘಟಾದಿಗಳಂತೆ ನಾಶವನ್ನು ಹೊಂದುವನೋ ಎಂದು ಪ್ರಶ್ನೆಯ ರೂಪದಲ್ಲಿ ಈ ವಾಕ್ಯದ ಪೂರ್ವಭಾಗ. ಅದಕ್ಕೆ ಉತ್ತರರೂಪವಾಗಿ ಈ ವಾಕ್ಯದ ಉತ್ತರಭಾಗ. ಈ ಶರೀರಕ್ಕೆ ಮುಪ್ಪು ಬಂದಾಗ ಪರಮಾತ್ಮನಾದರೋ ಮುಪ್ಪನ್ನು ಹೊಂದುವುದಿಲ್ಲ. ಈ ಶರೀರದ ಸಂಹಾರವಾದಾಗಲೂ ಪರಮಾತ್ಮನು ಸಂಹರಿಸಲ್ಪಡುವುದಿಲ್ಲ. ಈ ಪರಮಾತ್ಮನು ಪೂರ್ಣನಾದುದರಿಂದ ಪುರ ಎಂದೂ, ನಿತ್ಯನಾದ್ದರಿಂದ ಸತ್ಯ ಎಂದೂ ಕರೆಯಲ್ಪಡುತ್ತಾನೆ. ಪರಮಾತ್ಮನಿಗೆ ವಿನಾಶವಿಲ್ಲವೆಂಬುದು ಇಲ್ಲಿ ಪ್ರಸಕ್ತವಾಗಿರುವುದರಿಂದ, ಸತ್ಯ ಶಬ್ದಕ್ಕೆ ನಿತ್ಯ ಎಂದೇ ಅರ್ಥ ಮಾಡಬೇಕು. ಪರಮಾತ್ಮನು ಸತ್ಯ ಉಳಿದೆಲ್ಲವೂ ಅಸತ್ಯ ಎಂದು ಹೇಳುವಲ್ಲಿ ಈ ವಾಕ್ಯಕ್ಕೆ ತಾತ್ಪರ್ಯವಿರುವುದಿಲ್ಲ. ದೇಹಾದಿಗಳಿಗೆ ಜರಾಮರಣಾದಿಗಳು ಹೇಳಲ್ಪಟ್ಟಿವೆ. ಆದಪ್ರಯುಕ್ತ ಅವು ಅನಿತ್ಯ ಎಂದೇ ತಾತ್ಪರ್ಯ. ಅವು ಅನೃತವೆಂದು ಅರ್ಥ ಮಾಡಕೂಡದು. ಪರಮಾತ್ಮನಿಗೆ ಜರಾಮರಣಾದಿಗಳು ಇಲ್ಲವಾದ್ದರಿಂದ ಇಲ್ಲಿ ಪ್ರಯೋಗವಾಗಿರುವ ಸತ್ಯ ಶಬ್ದಕ್ಕೆ ನಿತ್ಯತ್ವವನ್ನೇ ತಿಳಿಯಬೇಕು.

ಹೀಗೆ ವಾಚಾರಂಭಣಂ ಇತ್ಯಾದಿ ವಾಕ್ಯಗಳಿಗೆ ತಮ್ಮಮತದ ಪ್ರಕಾರವಾಗಿ ವ್ಯಾಖ್ಯಾನ ಮಾಡಿ, ಈಗ ವಿವರ್ತವಾದಿಗಳ ವ್ಯಾಖ್ಯಾನದಲ್ಲಿನ ದೋಷಗಳನ್ನು ಹೇಳುತ್ತಾರೆ -

**ವಾಚಾರಂಭಣಮಿತ್ಯುಕ್ತೇ ಮಿಥ್ಯೇತ್ಯಶ್ರುತಕಲ್ಪನಂ ।**
**ಪುನರುಕ್ತಿರ್ನಾಮಧೇಯಮಿತೀತ್ಯಸ್ಯ ನಿರರ್ಥತಾ ॥೧೨೨॥**

ವಾಚಾರಂಭಣಂ ಎನ್ನುವ ಶಬ್ದವು ಮಿಥ್ಯೆಯೆಂದು ವ್ಯಾಖ್ಯಾನ ಮಾಡುವುದರಿಂದ ಅಶ್ರುತಕಲ್ಪನಾ ಎನ್ನುವ ದೋಷ ಬರುವುದು. ನಾಮಧೇಯವೆನ್ನುವುದು ಪುನರುಕ್ತಿಯಾಗುವುದು. ಮೃತ್ತಿಕೇತ್ಯೇವ ಎನ್ನುವಲ್ಲಿ ಇರುವ ಇತಿ ಶಬ್ದಕ್ಕೆ ನಿರರ್ಥಕತ್ವವು ಬರುವುದು.

**ವಿವರಣೆ:** ಪರಕೀಯರ ವ್ಯಾಖ್ಯಾನದ ಪ್ರಕಾರ ವಿಕಾರ ಮತ್ತು ನಾಮಧೇಯ ಇವೆರಡೂ ವಾಚಾರಂಭಣಂ ಎನ್ನುವುದಕ್ಕೆ ವ್ಯಾಖ್ಯಾನವಾಗಿವೆ. ಆದಕಾರಣ ಪುನರುಕ್ತಿಯಾಗುವುದು. ವಾಚಾರಂಭಣಂ ವಿಕಾರಃ ನಾಮಧೇಯಂ ಇವುಗಳಿಗೆ

ಅನ್ವಯವಿಲ್ಲದಿರುವುದರಿಂದ 'ಮಾತ್ರ' ಶಬ್ದವನ್ನು ಅಧ್ಯಾಹಾರ ಮಾಡಿಕೊಂಡು ಮಿಥ್ಯೆ ಎಂದು ಪರರು ವ್ಯಾಖ್ಯಾನ ಮಾಡುತ್ತಾರೆ. ಇದು ಅಶ್ರುತಕಲ್ಪನಾ. ಮೃತ್ತಿಕೆಗೇ ಸತ್ಯತ್ವವನ್ನು ಹೇಳುವುದು ಪರರಿಗೆ ಇಷ್ಟವಾದುದು. ಮಾಯಾವಾದಿಗಳ ಪ್ರಕಾರ ಮಣ್ಣೇ ಸತ್ಯ ಉಳಿದದ್ದೆಲ್ಲ ಮಿಥ್ಯಾ ಎಂದು ಹೇಳಲು 'ಮೃತ್ತಿಕೈವ ಸತ್ಯಂ' ಎಂದು ವಾಚಾರಂಭಣ ಶ್ರುತಿಯಲ್ಲಿ ಹೇಳಬೇಕಾಗಿತ್ತು. ಇತಿ ಶಬ್ದಕ್ಕೆ ಅನೇಕಾರ್ಥಗಳಿವೆ. ಅನ್ಯಾರ್ಥ, ಹೇತ್ವರ್ಥ, ಏವಾರ್ಥ, ಪ್ರಕಾರಾರ್ಥ, ಇತ್ಯಾದಿ, ಮೊದಲಾದ ಅರ್ಥದಲ್ಲಿ ಇತಿ ಶಬ್ದವು ಪ್ರಯೋಗಿಸಲ್ಪಡುತ್ತದೆ. ಅದರಲ್ಲಿ ಯಾವುದೂ ಈ ಸಂದರ್ಭದಲ್ಲಿ ಯುಕ್ತವಾಗುವುದಿಲ್ಲ. ಆದ್ದರಿಂದ 'ಮೃತ್ತಿಕೇತ್ಯೇವ ಸತ್ಯಂ' ಎಂದು ಶ್ರುತಿಯಲ್ಲಿರುವ ಇತಿ ಶಬ್ದವು ವ್ಯರ್ಥವಾಗುವುದು. ಹೀಗೆ ಪರರ ವ್ಯಾಖ್ಯಾನಕ್ಕೆ ಅನೇಕ ದೋಷಗಳು ಬರುತ್ತವೆ.

ಈಗ 'ಯಥಾ ಸೌಮ್ಯ' ಇತ್ಯಾದಿ ದೃಷ್ಟಾಂತ ವಾಕ್ಯಗಳನ್ನು ತಮ್ಮ ಮತದ ಪ್ರಕಾರ ವ್ಯಾಖ್ಯಾನ ಮಾಡುವ ಅವಸರದಲ್ಲಿ ಪರಕೀಯ ವ್ಯಾಖ್ಯಾನದಲ್ಲಿರುವ ದೋಷಗಳನ್ನು ತೋರಿಸುತ್ತಾರೆ -

**ಏಕಃ ಪಿಂಡೋ ಮಣಿಶ್ಚೇತಿ ಪದವೈಯರ್ಥ್ಯಮೇವ ಚ ।**
**ವಿಕಾರಿತ್ವವಿವಕ್ಷಾಯಾಂ ನಚೈಕ ನಖಕೃಂತನಂ ॥೧೨೬॥**
**ಸರ್ವಂ ಕಾರ್ಷ್ಣಾಯಸಂ ಚ ಸ್ಯಾತ್ ಅತಃ ಸಾದೃಶ್ಯ ಏವ ಚ ।**
**ವಿವಕ್ಷಾऽತ್ರ ತು ನಿತ್ಯತ್ವೇ ಪ್ರಧಾನ್ಯೇ ಚೋಕ್ತವರ್ತ್ಮನಾ ॥೧೨೭॥**

ಜಗತ್ತು ಬ್ರಹ್ಮನ ವಿಕಾರ ಅಥವಾ ಬ್ರಹ್ಮನಲ್ಲಿ ಆರೋಪಿತ ಎಂಬ ಅಭಿಪ್ರಾಯದಿಂದ ಒಂದು ವಸ್ತುವಿನ ಜ್ಞಾನದಿಂದ ಎಲ್ಲ ವಸ್ತುಗಳ ಜ್ಞಾನವು ಎಂದು ಹೇಳುವುದಾದರೆ, 'ಮೃದಾ ವಿಜ್ಞಾತಯಾ ಮೃಣ್ಮಯಂ ವಿಜ್ಞಾತಂ ಸ್ಯಾತ್' 'ಲೋಹೇನ ವಿಜ್ಞಾತೇನ ಲೋಹಮಯಂ ವಿಜ್ಞಾತಂ ಸ್ಯಾತ್' 'ಕಾರ್ಷ್ಣಾಯಸಾ ವಿಜ್ಞಾತೇನ ಕಾರ್ಷ್ಣಾಯಸಂ ವಿಜ್ಞಾತಂ ಸ್ಯಾತ್' ಇಷ್ಟರಿಂದಲೇ ಇಷ್ಟಪೂರ್ತಿಯಾಗುವುದು. ಆದಪ್ರಯುಕ್ತ ಮೂರು ಏಕ ಶಬ್ದಗಳೂ, ಪಿಂಡ, ಮಣಿ, ನಖನಿಕೃಂತನ ಶಬ್ದಗಳೂ, ಮೂರು ಸರ್ವ ಎನ್ನುವ ಶಬ್ದಗಳೂ ಅರ್ಥವಿಲ್ಲದಂತಾಗುವುವು. ಎಲ್ಲ ಮೃಣ್ಮಯಾದಿಗಳಿಗೂ ಒಂದು ಮೃತ್ಪಿಂಡದ

ವಿಕಾರತ್ವವು ಕೂಡುವುದಿಲ್ಲವಾದ್ದರಿಂದ ವಿರುದ್ಧಾರ್ಥವುಳ್ಳ ಶಬ್ದಗಳಾಗುವುವು. ಯಾವ ಒಂದು ಮೃಣ್ಮಯಕ್ಕೂ ಒಂದು ಮೃತ್ಪಿಂಡದಲ್ಲಿ ಆರೋಪಿತತ್ವವು ಇರುವುದಿಲ್ಲ. ಅಂದಮೇಲೆ ಎಲ್ಲ ಮೃಣ್ಮಯಗಳಿಗೆ ಆರೋಪಿತತ್ವವು ಸರ್ವಥಾ ಕೂಡಲಾರದು. ನಖನಿಕೃಂತನ ದೃಷ್ಟಾಂತದಲ್ಲಾದರೋ ಕಾರ್ಯರೂಪವಾದ ಎಲ್ಲ ಕಬ್ಬಿಣದ ವಸ್ತುಗಳಿಗೂ ಒಂದು ಉಗುರುಕತ್ತರಿಯು ಕಾರಣರೂಪವು ಎನ್ನುವುದು ಕೂಡುವುದಿಲ್ಲ. ಏಕೆಂದರೆ ಉಗುರುಕತ್ತರಿಯೂ ಕಾರ್ಯರೂಪವೇ ಆಗಿರುವುದು. ಆದಕಾರಣ ಈ ದೃಷ್ಟಾಂತಗಳಿಗೆ ಆರೋಪಿತತ್ವ ಅಥವಾ ವಿಕಾರಿತ್ವ ಎನ್ನುವ ಅರ್ಥದಲ್ಲಿ ವ್ಯಾಖ್ಯಾನ ಮಾಡುವುದು ಸರಿಯಲ್ಲ. ಹಿಂದೆ ಹೇಳಿದ ರೀತಿಯಿಂದ ಸಾದೃಶ್ಯಾದಿ ಅರ್ಥದಲ್ಲಿಯೇ ಮೃತ್ಪಿಂಡಾದಿ ದೃಷ್ಟಾಂತಗಳಿಗೆ ವ್ಯಾಖ್ಯಾನ ಮಾಡಬೇಕು. ಮೃತ್ಪಿಂಡದ ದೃಷ್ಟಾಂತವು ಸಾದೃಶ್ಯಾರ್ಥದಲ್ಲಿಯೂ, ಲೋಹಮಣಿಯ ದೃಷ್ಟಾಂತವು ಪ್ರಾಧಾನ್ಯ ಎಂಬ ಅರ್ಥದಲ್ಲಿಯೂ, ನಖನಿಕೃಂತನ ದೃಷ್ಟಾಂತವು ಕೈಮುತ್ಯ ನ್ಯಾಯದಿಂದಲೂ ಹೇಳಲ್ಪಟ್ಟವೆ. ವಾಚಾರಂಭಣ ಇತ್ಯಾದಿ ವಾಕ್ಯಕ್ಕೆ ನಿತ್ಯತ್ವ ಹಾಗೂ ಪ್ರಾಧಾನ್ಯ ವಿಷಯಕವಾಗಿಯೇ ಅರ್ಥವಿವಕ್ಷಾ ಮಾಡಬೇಕು.

ಹಾಗಾದರೆ ಈ ಪಕ್ಷದಲ್ಲಿಯೂ 'ಸದೇವ ಸೌಮ್ಯೇದಮಗ್ರ ಆಸೀತ್' ಇತ್ಯಾದಿ ಉತ್ತರ ಗ್ರಂಥಗಳಿಗೆ ಸಂಗತ್ಯಭಾವವೆಂಬ ದೋಷವಿದೆ. ನಮಗಾದರೋ ಕಾರ್ಯಕಾರಣ ಭಾವಾದಿಗಳನ್ನು ವಿಸ್ತರಿಸುವುದಕ್ಕಾಗಿ ಪ್ರಯೋಜನವಿದೆ ಎಂದು ಹೇಳಿದರೆ –

**ಪ್ರಾಧಾನ್ಯಪ್ರತಿಪತ್ತ್ಯರ್ಥೇ(ರ್ಥಂ) ಸೃಷ್ಟ್ಯಾದೇಶ್ಚೈವ(ಷ) ವಿಸ್ತರಃ ।**
**ತಸ್ಮಾತ್ಕೇನಾಪಿ ಮಾರ್ಗೇಣ ನ ವಿವರ್ತಮತಂ ಭವೇತ್ ॥೧೨೫॥**

ಬ್ರಹ್ಮನಿಗೆ ಪ್ರಾಧಾನ್ಯರೂಪತ್ವವನ್ನು ಸ್ಪಷ್ಟಪಡಿಸುವುದಕ್ಕಾಗಿಯೇ ಸೃಷ್ಟ್ಯಾದಿಗಳನ್ನು ಪ್ರತಿಪಾದಿಸತಕ್ಕ ಗ್ರಂಥದ ವಿಸ್ತಾರವು ಪ್ರವೃತ್ತವಾಗಿದೆ. ಆದಕಾರಣ ಅಸಂಗತಿಯಿಲ್ಲ. ಸಕಲ ಜಗತ್ತು ಬ್ರಹ್ಮನಲ್ಲಿ ಆರೋಪಿತ ಎನ್ನುವ ಮತವು ಯಾವುದೇ ರೀತಿಯಿಂದ ವಿಚಾರ ಮಾಡಿದರೂ ಯುಕ್ತವಾಗಲಾರದು.

**ತದಸಂಖ್ಯಾತದೋಷೇತಂ ಹೇಯಮೇವ ಶುಭಾರ್ಥಿಭಿಃ ।**
**ಅಸಂಖ್ಯತ್ವೇನ ದೋಷಾಣಾಂ ಗ್ರಂಥಾಧಿಕ್ಯಭಯಾದಪಿ ॥೧೨೬॥**

**ಉಪರಮ್ಯತೇ ...................................................।**

ಆದ್ದರಿಂದ ಅಸಂಖ್ಯಾತ ದೋಷಗಳಿಂದ ಕೂಡಿರುವ ವಿವರ್ತಮತವು ಸತ್ಸಿದ್ಧಾಂತದ ಮೂಲಕ ಶುಭವನ್ನು ಅಪೇಕ್ಷಿಸುವ ಸಜ್ಜನರಿಂದ ತ್ಯಾಜ್ಯವೇ ಆಗುವುದು. ಮಾಯಾವಾದವು ಅಸಂಖ್ಯಾತ ದೋಷಗಳಿಂದ ಕೂಡಿದೆ. ಅವೆಲ್ಲವನ್ನೂ ಇಲ್ಲಿ ವಿವರಿಸಿಲ್ಲ. ಕೆಲವು ಮುಖ್ಯವಾದ ದೋಷಗಳನ್ನು ಮಾತ್ರ ಹೇಳಲಾಗಿದ್ದು, ಉಪಲಕ್ಷಣದಿಂದ ಉಳಿದ ದೋಷಗಳನ್ನು ತಿಳಿಯಬಹುದು. ಎಲ್ಲ ದೋಷಗಳನ್ನೂ ವಿವರಿಸುವುದಾದರೆ ಗ್ರಂಥಾಧಿಕ್ಯವಾಗುವುದು. ಇದರಿಂದ ಜಿಜ್ಞಾಸುಗಳಿಗೆ ಪ್ರವೃತ್ತಿಯು ಬರದೇ ಹೋಗುವುದು ಎನ್ನುವ ಭಯದಿಂದ ಈ ವಿಷಯದ ವ್ಯಾಖ್ಯಾನ ಇಲ್ಲಿಗೇ ಮುಕ್ತಾಯ ಮಾಡಲ್ಪಡುತ್ತದೆ.

ಬ್ರಹ್ಮನು ಪರಿಣಾಮ ಅಥವಾ ವಿಕಾರತ್ವ ರೂಪದಿಂದ ಜಗತ್ಕಾರಣನು ಆಗದಿದ್ದರೆ, ಯಾವ ರೀತಿಯಲ್ಲಿ ಬ್ರಹ್ಮನಿಗೆ ಜಗತ್ಕಾರಣತ್ವವು ಜನ್ಮಾದಿ ಸೂತ್ರದಲ್ಲಿ ಪ್ರತಿಪಾದಿತವಾಗಿದೆ ಎಂದು ಕೇಳಿದರೆ -

**........................ತತೋ ವಿಷ್ಣುರಿಚ್ಛಾಪೂರ್ವಕಮಶ್ರಮಃ ।**

**ಕರೋತಿ ಪಿತೃವದ್ವಿಶ್ವಂ ಪೂರ್ಣಾಶೇಷಗುಣಾತ್ಮಕಃ ॥೧೨೭॥**

ಹಿಂದೆ ಹೇಳಿರುವ ಪ್ರಕಾರ ಪರಿಣಾಮವಾದವೇ ಮೊದಲಾದವು ನಿರಾಸೆ ಮಾಡಲ್ಪಟ್ಟಿರುವುದರಿಂದ, ತಂದೆಯಂತೆ ನಿಮಿತ್ತನಾಗಿ, ಕೇವಲ ತನ್ನ ಇಚ್ಛಾಪೂರ್ವಕವಾಗಿ, ವಿಷ್ಣುವು ಜಗತ್ತಿನ ಸೃಷ್ಟ್ಯಾದಿಗಳನ್ನು ನಿರಾಯಾಸವಾಗಿ ಮಾಡುತ್ತಾನೆ ಎನ್ನುವುದೇ ಜನ್ಮಾದಿ ಸೂತ್ರದ ಸಿದ್ಧಾಂತ. ಶ್ರೀಹರಿಯು ಪ್ರತ್ಯೇಕವಾಗಿಯೂ ನಿರವಧಿಕಗಳಾದ ಸಮಸ್ತಗಳಾದ ಜ್ಞಾನಾನಂದಾದಿ ಗುಣಗಳ ಸ್ವರೂಪನಾಗಿರುವನು.

ಈ ಪ್ರಕಾರವಾಗಿ ಈ ಅಧ್ಯಾಯದಲ್ಲಿ ಅಥಾತೋ ಬ್ರಹ್ಮಜಿಜ್ಞಾಸಾ ಎನ್ನುವ ಪ್ರಥಮ ಸೂತ್ರದಲ್ಲಿ ಜಿಜ್ಞಾಸ್ಯನಾಗಿ ಹೇಳಲ್ಪಟ್ಟಿರುವ ಬ್ರಹ್ಮಾಖ್ಯ ವಿಷ್ಣುವು ಅನಂತಕಲ್ಯಾಣಗುಣಪರಿಪೂರ್ಣನು ಎನ್ನುವ ಪರಮಪ್ರಮೇಯವು ಎಲ್ಲ ಪ್ರಕಾರದ ಶಬ್ದಗಳ ಸಮನ್ವಯದ ಮೂಲಕ ಸಿದ್ಧವಾಯಿತು. ಸರ್ವೋತ್ತಮನಾದ ವಿಷ್ಣುವಿನ ಜಿಜ್ಞಾಸೆಯು ಅವಶ್ಯ ಕರ್ತವ್ಯ ಎನ್ನುವುದು ಇದರಿಂದ ಸಮರ್ಥಿತವಾಯಿತು.

॥ ಇತಿ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯ ವಿರಚಿತೇ
ಶ್ರೀಮದನುವ್ಯಾಖ್ಯಾನೇ ಪ್ರಥಮಾಧ್ಯಾಯಸ್ಯ ಚತುರ್ಥಃ ಪಾದಃ ॥
॥ ಪ್ರಥಮೋಽಧ್ಯಾಯಃ ಸಮಾಪ್ತಃ ॥

*

॥ ಇಲ್ಲಿಗೆ ಅಂಗಾರಕುಲೋತ್ಪನ್ನ ಶ್ರೀನಿವಾಸಮೂರ್ತಿಯ ಸುಪುತ್ರ
ವೆಂಕಟೇಶಮೂರ್ತಿಯಿಂದ ಶ್ರೀಮನ್ನ್ಯಾಯಸುಧಾ ಟೀಕಾನುಸಾರಿ ವಿವರಣೆ ಸಹಿತ
ರಚಿತವಾದ ಶ್ರೀಮದನುವ್ಯಾಖ್ಯಾನದ ಮೊದಲನೆಯ ಅಧ್ಯಾಯ
ನಾಲ್ಕನೆಯ ಪಾದದ ಕನ್ನಡಾನುವಾದವು ಮುಕ್ತಾಯವಾಯಿತು ॥

*

॥ ಮೊದಲನೆಯ ಅಧ್ಯಾಯವು ಮುಕ್ತಾಯವಾಯಿತು॥

*

॥ ಶ್ರೀಕೃಷ್ಣಾರ್ಪಣಮಸ್ತು ॥

* * *

## ನಮ್ಮ ಪ್ರಕಾಶನದ ಪ್ರಧಾನ ಪೋಷಕರು

೧. ಶ್ರೀ ಎಸ್. ವೆಂಕಟೇಶ ಮೂರ್ತಿ, ಬೆಂಗಳೂರು

೨. ಶ್ರೀ ಎಂ. ಕೆ. ರಾಘವೇಂದ್ರ ರಾವ್, ಬೆಂಗಳೂರು

೩. ಶ್ರೀ ಎಸ್. ಆರ್. ಪಾಂಡುರಂಗಿ, ಬೆಂಗಳೂರು

೪. ಶ್ರೀ ಬಿ. ಎನ್. ವಿಜಯೇಂದ್ರ ರಾವ್, ಬೆಂಗಳೂರು

೫. ಶ್ರೀ ಟಿ. ಕೆ. ನಾರಾಯಣ ಮೂರ್ತಿ, ಬೆಂಗಳೂರು

೬. ಶ್ರೀಮತಿ ಟಿ. ಕೆ. ಮಧುರಾಬಾಯಿ, ಬೆಂಗಳೂರು

೭. ಶ್ರೀ ರಾಘವೇಂದ್ರ ದರ್ಶನ ಕೇಂದ್ರ, ಬೆಂಗಳೂರು

೮. ಶ್ರೀ ಆರ್. ಹೆಚ್. ಕುಲಕರ್ಣಿ, ಗುಲಬರ್ಗಾ

೯. ಶ್ರೀ ಡಿ. ಎಸ್. ರಂಗನಾಥ್, ಬೆಂಗಳೂರು

## ನಮ್ಮ ಪುಸ್ತಕಗಳ ಪ್ರಧಾನ ಮಾರಾಟಗಾರರು

೧. ವೇದಾಂತ ಬುಕ್ ಹೌಸ್, ಚಾಮರಾಜಪೇಟೆ, ಬೆಂಗಳೂರು

೨. ಟಿ. ಎನ್. ಕೃಷ್ಣಯ್ಯ ಶೆಟ್ಟಿ ಅಂಡ್ ಸನ್ಸ್, ಚಿಕ್ಕಪೇಟೆ, ಬೆಂಗಳೂರು

೩. ಸಾಹಿತ್ಯ ಕೇಂದ್ರ, ಪಂಜೆ ಮಂಗೇಶ ರಾವ್ ರಸ್ತೆ, ಮಂಗಳೂರು

೪. ನವಭಾರತ ಪುಸ್ತಕ ಭಂಡಾರ, ಪ್ರಧಾನ ಅಂಚೆ ಕಛೇರಿ ಬಳಿ, ಉಡುಪಿ

೫. ಸಮಾಜ ಪುಸ್ತಕಾಲಯ, ಶಿವಾಜಿ ರಸ್ತೆ, ಧಾರವಾಡ

೬. ಗೀತಾ ಬುಕ್ ಹೌಸ್, ಕೆ. ಆರ್. ಸರ್ಕಲ್, ಮೈಸೂರು

೭. ಆರ್. ಜಿ. ಏಜೆನ್ಸೀಸ್, ಸೋಮವಾರಪೇಟೆ, ರಾಯಚೂರು

೮. ಶ್ರೀ ವಾದಿರಾಜ ಪೂಜಾ ಭಂಡಾರ, ನಂ ೩೪, ಬಿ. ಬಿ. ರಸ್ತೆ, ಶಿವಮೊಗ್ಗ

೯. ಚಂದ್ರಿಕಾ ಸ್ಟೋರ್ಸ್, ಸೋಸಲೆ ವ್ಯಾಸರಾಜಮಠ, ಬಸವನಗುಡಿ, ಬೆಂಗಳೂರು

೧೦. ಪೂಜಾ ಬುಕ್ ಹೌಸ್, ಚಾಮರಾಜಪೇಟೆ ೬ನೇ ಮುಖ್ಯರಸ್ತೆ, ಬೆಂಗಳೂರು

೧೧. ಶ್ರೀ ಗುರುರಾಘವೇಂದ್ರ ಬುಕ್ಸ್ ಅಂಡ್ ಕ್ಯಾಸೆಟ್ಸ್, ಶ್ರೀರಾಘವೇಂದ್ರ ಸ್ವಾಮಿ ಮಠ, ಜೇವರ್ಗಿ ರಸ್ತೆ, ಗುಲಬರ್ಗಾ

ಮಿಥ್ಯಾಸಿದ್ಧಾಂತದುರ್ಧ್ವಾಂತ ವಿಧ್ವಂಸನ ವಿಚಕ್ಷಣಃ ।
ಜಯತೀರ್ಥಾಖ್ಯ ತರಣಿರ್ಭಾಸತಾಂ ನೋ ಹೃದಂಬರೇ ॥



ಶ್ರೀ ಜಯತೀರ್ಥರು


ಪ್ರಕಾಶಕರು :

**ಪವನಜ ಪ್ರಕಾಶನ**

ನಂ. 1625, 5ನೇ 'ಬಿ' ಕ್ರಾಸ್, ಎರಡನೆಯ ಬ್ಲಾಕ್
ಬನಶಂಕರಿ 1ನೇ ಸ್ಟೇಜ್, ಬೆಂಗಳೂರು-560 050
ದೂರವಾಣಿ : 6600932

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತಮ್

# ಶ್ರೀಮದನುವ್ಯಾಖ್ಯಾನಮ್

ಸಂಪುಟ-೨

## ಎರಡನೆಯ ಅಧ್ಯಾಯ (ಅವಿರೋಧಾಧ್ಯಾಯ)



ಪ್ರೊ॥ ಎಸ್. ವೆಂಕಟೇಶಮೂರ್ತಿ

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತಮ್

# ಶ್ರೀಮದನುವ್ಯಾಖ್ಯಾನಮ್

## ಸಂಪುಟ - 2

## ಎರಡನೆಯ ಅಧ್ಯಾಯ (ಅವಿರೋಧಾಧ್ಯಾಯ)

ಶ್ರೀಮಜ್ಜಯತೀರ್ಥರ ಶ್ರೀಮನ್ನ್ಯಾಯಸುಧಾನುಸಾರಿ

ಕನ್ನಡದಲ್ಲಿ ಅರ್ಥ ಮತ್ತು ವಿವರಣೆ ಸಹಿತ

ಲೇಖಕರು

ಪ್ರೊ|| ಎಸ್. ವೆಂಕಟೇಶ ಮೂರ್ತಿ, ಎಂ. ಎಸ್‌ಸಿ

ಪ್ರಕಾಶಕರು

ಪವನಜ ಪ್ರಕಾಶನ

ನಂ. 1625, 5 ನೇ ಬಿ ಕ್ರಾಸ್, ಎರಡನೆಯ ಬ್ಲಾಕ್,

ಬನಶಂಕರಿ ಮೊದಲನೆಯ ಸ್ಟೇಜ್, ಬೆಂಗಳೂರು 560050

Sri Madhvacharya's

***Śrīmadanuvyākhyānam***

Part - 2

**Rendered in Kannada by:**
**Prof. S. Venkatesha Murthy, M. Sc.**
**Published by:**
**Pavanaja Prakashana,**
**#1625, 5th 'B' Cross, Second Block, Banashankari**
**First Stage, Bangalore 560050; Phone: 6600932**

**First Edition: 2002**
**Pages: 256**
**Price: Rs. 75/-**

ಶ್ರೀಮನ್ಮಧ್ವಾಚಾರ್ಯ ವಿರಚಿತ

ಶ್ರೀಮದನುವ್ಯಾಖ್ಯಾನಮ್: ಸಂಪುಟ - 2

ಮೊದಲನೆಯ ಮುದ್ರಣ : 2002

ಪುಟಗಳು : 256

ಬೆಲೆ : ರೂ. 75/-

ಮುದ್ರಕರು :
ಪರಿಮಳ ಮುದ್ರಣಾಲಯ,
ಹನುಮಂತನಗರ, ಬೆಂಗಳೂರು 560019

# ಉಪೋದ್ಘಾತ

ಸಮಸ್ತ ವೇದಗಳ ಎಲ್ಲ ವಾಕ್ಯಗಳೂ, ಎಲ್ಲ ಪದಗಳೂ, ಎಲ್ಲ ವರ್ಣಗಳೂ ಸರ್ವಜ್ಞತ್ವ, ಸರ್ವಶಕ್ತಿಮತ್ವ, ಸರ್ವೈಶ್ವರ್ಯ ಮುಂತಾದ ಅನಂತ ಗುಣಗಳಿಂದ ಯುಕ್ತನೂ, ಅಜ್ಞಾನ ಪಾರತಂತ್ರ್ಯಾದಿ ಸಮಸ್ತ ದೋಷಗಳಿಂದ ದೂರನೂ ಆದ ಪರಮಾತ್ಮನನ್ನು ಪರಮ ಮುಖ್ಯವೃತ್ತಿಯಿಂದ ಪ್ರತಿಪಾದಿಸುತ್ತವೆ ಎಂಬುದನ್ನು ಶ್ರೀಮದಾಚಾರ್ಯರು ಶ್ರೀಮದನುವ್ಯಾಖ್ಯಾನದ ಪ್ರಥಮಾಧ್ಯಾಯದಲ್ಲಿ ಶ್ರುತಿ, ಸ್ಮೃತಿ ಹಾಗೂ ಯುಕ್ತಿಗಳ ಸಹಾಯದಿಂದ ಬಹಳ ಸಮರ್ಥವಾಗಿ ನಿರೂಪಿಸಿದ್ದಾರೆ.

ಪರಮಾತ್ಮನಲ್ಲಿ ಸರ್ವಶಬ್ದಗಳ ಸಮನ್ವಯವನ್ನು ಪ್ರತಿಪಾದಿಸುವ ಮೊದಲನೆಯ ಅಧ್ಯಾಯದ ಈ ಪ್ರಮೇಯದಲ್ಲಿ ಬರಬಹುದಾದ ವಿರೋಧವನ್ನು ಪರಿಹರಿಸುವುದೇ ಎರಡನೆಯ ಅಧ್ಯಾಯದ ಉದ್ದೇಶ. ವಿರೋಧವನ್ನು ನಿವಾರಿಸದಿದ್ದರೆ, ಸರ್ವಶಬ್ದ ಸಮನ್ವಯದಲ್ಲಿ ಸಂದೇಹಗಳು ತಲೆದೋರುವುದರಿಂದ ಪರಮಾತ್ಮನ ಸರ್ವಗುಣ ಪೂರ್ಣತ್ವದ ಬಗ್ಗೆ ನಿಶ್ಚಿತ ಜ್ಞಾನವುಂಟಾಗದು. ವಿರೋಧವು ಯುಕ್ತಿಗಳಿಂದ, ವಿವಿಧ ದರ್ಶನಗಳಿಂದ, ಸ್ಮೃತಿಗಳಿಂದ ಹಾಗೂ ಶ್ರುತಿಗಳಿಂದಲೂ ಬರಬಹುದು. ಹೀಗೆ ಬಹುವಿಧವಾದ ವಿರೋಧಗಳನ್ನು ನಾಲ್ಕು ಗುಂಪುಗಳಾಗಿ ವಿಭಾಗಿಸಿ, ಕ್ರಮವಾಗಿ ಎರಡನೆಯ ಅಧ್ಯಾಯದ ನಾಲ್ಕು ಪಾದಗಳಲ್ಲಿ ನಾಲ್ಕು ರೀತಿಯ ವಿರೋಧಗಳನ್ನು ಪರಿಹರಿಸಲಾಗಿದೆ.

ಎರಡನೆಯ ಅಧ್ಯಾಯದ ಮೊದಲನೆಯ ಪಾದವು ಯುಕ್ತಿಗಳ ವಿರೋಧಗಳನ್ನು ಪರಿಹಾರ ಮಾಡುವುದಾದರೆ, ಎರಡನೆಯ ಪಾದವು ವಿವಿಧ ಮತಗಳಿಂದ ಬರುವ ವಿರೋಧ ಹಾಗೂ ಆಕ್ಷೇಪಗಳನ್ನು ನಿವಾರಣೆ ಮಾಡುತ್ತದೆ. ಮೂರನೆಯ ಮತ್ತು ನಾಲ್ಕನೆಯ ಪಾದಗಳು ಶ್ರುತಿಗಳಿಂದಲೇ ಆಪಾತವಾಗಿ ತೋರುವ ವಿರೋಧವನ್ನು ಪರಿಹರಿಸುತ್ತವೆ. ಮೂರನೆಯ ಪಾದವು ಸಾಮಾನ್ಯವಾದ ವೇದ ವಾಕ್ಯಗಳ ವಿರೋಧವನ್ನು ನಿರಾಕರಿಸಿದರೆ, ನ್ಯಾಯೋಪೇತವಾದ ಅಂದರೆ ಯುಕ್ತಿಯುಕ್ತವಾಗಿ ಪ್ರಬಲವಾದ ವೇದವಾಕ್ಯಗಳ ವಿರೋಧವನ್ನು ಪರಿಹರಿಸುವುದು ನಾಲ್ಕನೆಯ ಪಾದದ ಉದ್ದೇಶ. ಎರಡನೆಯ ಅಧ್ಯಾಯದ ನಾಲ್ಕು ಪಾದಗಳ ಎಲ್ಲ ಅಧಿಕರಣಗಳಲ್ಲಿ ಪ್ರತಿಪಾದಿತವಾಗಿರುವ ಪ್ರಮೇಯಗಳನ್ನು ಸಂಗ್ರಹವಾಗಿ ಈ ಕೆಳಗೆ ನೀಡಲಾಗಿದೆ –

**ಮೊದಲನೆಯ ಪಾದ (ಯುಕ್ತಿ ವಿರೋಧ ಪರಿಹಾರ):**

೧. ಸ್ಮೃತ್ಯಧಿಕರಣ – ಪಾಶುಪತಾದಿ ಸ್ಮೃತಿಗಳ ವಿರೋಧದ ಪರಿಹಾರ

೨. ನ ವಿಲಕ್ಷಣತ್ವಾಧಿಕರಣ – ಶ್ರುತ್ಯಾದಿ ಪ್ರಾಮಾಣ್ಯ ವಿಷಯದಲ್ಲಿ ಯುಕ್ತಿ ವಿರೋಧದ ಪರಿಹಾರ

೩. ಅಭಿಮಾನ್ಯಧಿಕರಣ – ಮೃದಬ್ರವೀತ್ ಇತ್ಯಾದಿ ವೇದವಾಕ್ಯಗಳಿಗೆ ಅಭಿಮಾನಿ ಪರತ್ವ ನಿರೂಪಣೆಯ ಮೂಲಕ ಯುಕ್ತಿವಿರೋಧದ ಪರಿಹಾರ

೪. ಅಸದಧಿಕರಣ – ಪ್ರಾಗಭಾವಕ್ಕೆ ಕರ್ತತ್ವವನ್ನು ಸಾಧಿಸುವ ಯುಕ್ತಿಯಿಂದ

ಪರಮಾತ್ಮನ ಜಗತ್ಕರ್ತೃತ್ವಕ್ಕೆ ಬರುವ ವಿರೋಧದ ಪರಿಹಾರ

೫. ಭೋಕ್ತ್ರಧಿಕರಣ – ಜೀವಬ್ರಹ್ಮರಿಗೆ ಐಕ್ಯ ನಿರಾಸೆ

೬. ತದನನ್ಯತ್ವಾಧಿಕರಣ – ಸರ್ವಕರ್ತೃವಾದ ವಿಷ್ಣುವಿಗೆ ಅನ್ಯ ಸ್ವತಂತ್ರ ಸಾಧನದ ಅವಶ್ಯಕತೆಯಿಲ್ಲ ಹಾಗೂ ಈಶಾದನ್ಯ ಪ್ರಕೃತ್ಯಾದಿಗಳಿಗೆ ಈಶ್ವರಾಧೀನತ್ವವೆಂಬ ಪ್ರಮೇಯಗಳ ಪ್ರತಿಪಾದನೆ

೭. ಇತರವ್ಯಪದೇಶಾಧಿಕರಣ – ಜೀವನು ಸ್ವತಂತ್ರ ಕರ್ತ ಎಂಬ ವಿಷಯದಲ್ಲಿ ಶ್ರುತಿ ಹಾಗೂ ಯುಕ್ತಿಗಳ ನಿರಾಕರಣೆ

೮. ಶ್ರುತ್ಯಧಿಕರಣ – ಪರಮಾತ್ಮನ ಸ್ವತಂತ್ರಕರ್ತೃತ್ವದ ವಿಷಯದಲ್ಲಿ ಪರಕೀಯರ ಯುಕ್ತಿಗಳಿಂದ ಬರುವ ವಿರೋಧದ ನಿರಾಸೆ ಹಾಗೂ ಅಚಿಂತ್ಯಾದ್ಭುತ ಶಕ್ತಿಮತ್ವ ಸಮರ್ಥನೆ

೯. ನ ಪ್ರಯೋಜನವತ್ವಾಧಿಕರಣ – ಫಲನಿರಪೇಕ್ಷವಾದ ಈಶ್ವರನ ಸೃಷ್ಟ್ಯಾದಿ ವ್ಯಾಪಾರವು ಕೇವಲ ಕ್ರೀಡಾರೂಪವಾದುದು ಎಂಬ ಪ್ರಮೇಯದ ಸಮರ್ಥನೆ

೧೦.ವೈಷಮ್ಯಾಧಿಕರಣ – ಪರಮಾತ್ಮನಲ್ಲಿ ವೈಷಮ್ಯಾದಿ ದೋಷಗಳ ನಿರಾಕರಣೆ

೧೧.ಸರ್ವಧರ್ಮೋಪಪತ್ತ್ಯಧಿಕರಣ – ಪರಮಾತ್ಮನ ಸರ್ವಗುಣಪೂರ್ಣತ್ವ ಹಾಗೂ ದೋಷದೂರತ್ವ ಸಮರ್ಥನೆ

**ಎರಡನೆಯ ಪಾದ (ಸಮಯಗಳ ವಿರೋಧ ಪರಿಹಾರ):**

೧. ರಚನಾನುಪಪತ್ತ್ಯಧಿಕರಣ – ನಿರೀಶ್ವರ ಸಾಂಖ್ಯರ ಮತ ನಿರಾಕರಣೆ

೨. ಅನ್ಯತ್ರಾಭಾವಾಧಿಕರಣ – ಸೇಶ್ವರ ಸಾಂಖ್ಯರ ಮತ ನಿರಾಕರಣೆ

೩. ಅಭ್ಯುಪಗಮಾಧಿಕರಣ – ಚಾರ್ವಾಕರ ಮತ ನಿರಾಕರಣೆ

೪. ಪುರುಷಾಶ್ಮಾಧಿಕರಣ – ನಿರೀಶ್ವರ ಸಾಂಖ್ಯರ ಏಕದೇಶಿಗಳಾದ ಜೀವೋಪಸರ್ಜನ ಪ್ರಕೃತಿ ಕರ್ತೃತ್ವವಾದಿಗಳ ಮತ ನಿರಾಕರಣೆ

೫. ಅನ್ಯಥಾನುಮಿತ್ಯಧಿಕರಣ – ನಿರೀಶ್ವರ ಸಾಂಖ್ಯರ ಏಕದೇಶಿಗಳಾದ ಪ್ರಕೃತಿ ಉಪಸರ್ಜನ ಪುರುಷಕರ್ತೃತ್ವವಾದಿಗಳ ಮತ ನಿರಾಕರಣೆ

೬. ವೈಶೇಷಿಕಾಧಿಕರಣ – ಪರಮಾಣ್ವಾರಂಭವಾದಿಗಳಾದ ವೈಶೇಷಿಕರ ಮತ ನಿರಾಕರಣೆ

೭. ಸಮುದಾಯಾಧಿಕರಣ – ಅವೈದಿಕ ಪಾಷಂಡಿ ಬೌದ್ಧರ ಏಕದೇಶಿಗಳಾದ ಪರಮಾಣುಪುಂಜವಾದಿಗಳಾದ ವೈಭಾಷಿಕ ಹಾಗೂ ಸೌತ್ರಾಂತಿಕರ ಮತ ನಿರಾಕರಣೆ

೮. ಶೂನ್ಯಾಧಿಕರಣ – ಶೂನ್ಯವಾದಿಗಳಾದ ಮಾಧ್ಯಮಿಕರ ಮತ ನಿರಾಕರಣೆ

೯. ಅನುಪಲಬ್ಧ್ಯಧಿಕರಣ – ವಿಜ್ಞಾನವಾದಿಗಳಾದ ಯೋಗಾಚಾರ ಮತ ನಿರಾಕರಣೆ

೧೦.ನೈಕಸ್ಮಿನ್ನಧಿಕರಣ – ಜೈನರ ಮತ ನಿರಾಕರಣೆ

೧೧.ಪತ್ಯುಧಿಕರಣ – ಪಾಶುಪತಾದಿ ವೈದಿಕ ಪಾಷಂಡಿ ಮತಗಳ ನಿರಾಕರಣೆ

೧೨.ಉತ್ಪತ್ತ್ಯಧಿಕರಣ – ಶಕ್ತಿಯೇ ಜಗತ್ಕಾರಣವೆಂದು ಪ್ರತಿಪಾದಿಸುವ ಮಹಾವಾಮ, ಮಧ್ಯವಾಮ ಹಾಗೂ ಅಣುವಾಮವೆಂಬ ಮೂರು ವಿಧವಾದ ಶಾಕ್ತ ಮತಗಳ ನಿರಾಕರಣೆ

ಮೂರನೆಯ ಪಾದ (ಸಾಮಾನ್ಯ ಶ್ರುತಿ ವಿರೋಧ ಪರಿಹಾರ):

೧. ವಿಯದಧಿಕರಣ – ಆಕಾಶಾದಿಗಳಿಗೆ ಪರಮಾತ್ಮನಿಂದಲೇ ಪರಾಧೀನ ವಿಶೇಷಾವಾಪ್ತಿರೂಪವಾದ ಉತ್ಪತ್ತಿಯ ಸಮರ್ಥನೆ

೨. ಮಾತರಿಶ್ವಾಧಿಕರಣ – ವಾಯ್ವಾದಿಗಳಿಗೆ ಪರಮಾತ್ಮನಿಂದಲೇ ಪರಾಧೀನ ವಿಶೇಷಾವಾಪ್ತಿರೂಪವಾದ ಉತ್ಪತ್ತಿಯ ಸಮರ್ಥನೆ

೩. ಅಸಂಭವಾಧಿಕರಣ – ಸ್ವತಂತ್ರನಾದ ವಿಷ್ಣುವಿಗೆ ಅನುತ್ಪತ್ತಿ ಸಮರ್ಥನೆ

೪. ತೇಜೋಧಿಕರಣ – ಅಗ್ನಿಗೆ ವಾಯುವಿನಿಂದ ಉತ್ಪತ್ತಿಯನ್ನು ಹೇಳುವ ಶ್ರುತಿಗೆ, ವಾಯುವಿಗೆ ದ್ವಾರತ್ವವನ್ನು ಸಮರ್ಥಿಸುವ ಮೂಲಕ, ವಿರೋಧ ಪರಿಹಾರ

೫. ಅಬಧಿಕರಣ – ನೀರಿಗೆ ಅಗ್ನಿಯಿಂದ ಉತ್ಪತ್ತಿಯನ್ನು ಹೇಳುವ ಶ್ರುತಿಗೆ ದ್ವಾರತ್ವದ ಮೂಲಕ ವಿರೋಧ ಪರಿಹಾರ

೬. ಪೃಥಿವ್ಯಧಿಕರಣ – ನೀರಿಗೆ ಅನ್ನಕಾರಣತ್ವ ಹಾಗೂ ಪೃಥಿವೀಕಾರಣತ್ವ ಹೇಳುವ ಶ್ರುತಿಗೆ, ಅನ್ನ ಶಬ್ದಕ್ಕೆ ಪೃಥಿವೀ ಪ್ರತಿಪಾದಕತ್ವವನ್ನು ಸಮರ್ಥಿಸುವ ಮೂಲಕ ವಿರೋಧ ಪರಿಹಾರ

೭. ತದಭಿಧ್ಯಾನಾಧಿಕರಣ – ರುದ್ರನಿಗೆ ಸಂಹಾರಕರ್ತೃತ್ವವನ್ನು ಹೇಳುವ ಶ್ರುತಿಗೆ, ದ್ವಾರತ್ವವನ್ನು ಪ್ರತಿಪಾದಿಸುವ ಮೂಲಕ ವಿರೋಧ ಪರಿಹಾರ

೮. ವಿಪರ್ಯಯಾಧಿಕರಣ – ಆದಿಸೃಷ್ಟಿ ಕ್ರಮದಿಂದ ಲಯಬೋಧಕ ಶ್ರುತಿ ವಿರೋಧ ಪರಿಹಾರ

೯. ಅಂತರಾಧಿಕರಣ – ವಿಜ್ಞಾನ ಹಾಗೂ ಮನಸ್ತತ್ವಗಳಿಗೆ ವ್ಯುತ್ಕ್ರಮದಿಂದ ಲಯಾಭಾವವನ್ನು ಹೇಳುವ ಶ್ರುತಿಗೆ ವಿರೋಧ ಪರೀಹಾರ

೧೦.ನಾತ್ಮಾಧಿಕರಣ – ಪರಮಾತ್ಮನಿಗೆ ಲಯವಿಲ್ಲವೆಂದು ಸಮರ್ಥನೆ

೧೦.ಜ್ಞಾಧಿಕರಣ – ಜೀವರಿಗೆ ದೇಹ ಸಂಬಂಧ ರೂಪ ಉತ್ಪತ್ತಿಯ ಸಮರ್ಥನೆ

೧೨.ಉತ್ಕ್ರಾಂತ್ಯಧಿಕರಣ – ಜೀವರು ಅಣುವಾಗಿದ್ದರೂ ಪ್ರಕಾಶರೂಪ ವ್ಯಾಪ್ತತ್ವ ಹೊಂದಿದ್ದಾರೆ ಎಂಬುದರ ಸಮರ್ಥನೆ

೧೩.ವ್ಯತಿರೇಕಾಧಿಕರಣ – ಜೀವಿಗೆ ಏಕರೂಪತ್ವ ಅನೇಕರೂಪತ್ವ ಹೇಳುವ ಶ್ರುತಿಗಳಿಗೆ ವಿರೋಧ ಪರೀಹಾರ

೧೪.ಪೃಥಗಧಿಕಣ – ಜೀವರು ಬ್ರಹ್ಮನಿಂದ ಭಿನ್ನರು ಎಂದು ಪ್ರತಿಪಾದನೆ

೧೫.ಯಾವದಧಿಕರಣ – ಜೀವರು ಸ್ವರೂಪತಃ ನಿತ್ಯರು ಎಂದು ಪ್ರತಿಪಾದನೆ

೧೬.ಪುಂಸ್ತ್ವಾಧಿಕರಣ – ಜೀವನಿಗೆ ಸುಖಾದಿರೂಪತ್ವ ಹಾಗೂ ತದಭಾವ ಹೇಳುವ ಶ್ರುತಿಗಳಿಗೆ ವಿರೋಧ ಪರಿಹಾರ

೧೭.ಕರ್ತೃತ್ವಾಧಿಕರಣ – ಜೀವರಿಗೆ ಈಶ್ವರಾಧೀನಕರ್ತೃತ್ವದ ಸಮರ್ಥನೆ

೧೮.ಅಂಶಾಧಿಕರಣ – ಜೀವರು ಪರಮಾತ್ಮನ ಭಿನ್ನಾಂಶರೆಂಬ ಪ್ರಮೇಯದ ನಿರೂಪಣೆ

೧೯.ಅದೃಷ್ಟಾಧಿಕರಣ – ಜೀವರಿಗೆ ಪರಮಾತ್ಮನ ಪ್ರತಿಬಿಂಬತ್ವ ಸಮರ್ಥನೆ

ನಾಲ್ಕನೆಯ ಪಾದ (ನ್ಯಾಯೋಪೇತ ಶ್ರುತಿವಿರೋಧ ಪರಿಹಾರ):

೧. ಪ್ರಾಣೋತ್ಪತ್ತ್ಯಧಿಕರಣ – ಇಂದ್ರಿಯಗಳಿಗೆ ಉತ್ಪತ್ತಿಯುಂಟು. ಸೂಕ್ಷ್ಮರೂಪದಿಂದ ಅನಾದಿತ್ವವಿರುವುದರಿಂದ ಅನಾದಿತ್ವ ಹೇಳುವ ಶ್ರುತಿಗೆ ವಿರೋಧವಿಲ್ಲ

೨. ತತ್ಪ್ರಾಗಧಿಕರಣ – ಮನಸ್ಸಿಗೂ ಉತ್ಪತ್ತಿಯುಂಟು. ಇತರ ಇಂದ್ರಿಯಗಳಿಗೆ ಹೋಲಿಸಿದರೆ ಅಲ್ಪವಾದ ಉಪಚಯ ಹೊಂದುವುದರಿಂದ ನಿತ್ಯತ್ವವನ್ನು ಹೇಳುವ ಶ್ರುತಿಗೆ ವಿರೋಧವಿಲ್ಲ

೩. ತತ್ಪೂರ್ವಾಧಿಕರಣ – ವಾಗಿಂದ್ರಿಯಕ್ಕೆ ಉತ್ಪತ್ತಿಯಿದ್ದರೂ, ಆದಕ್ಕೆ ನಿತ್ಯತ್ವವನ್ನು ಹೇಳುವ ಶ್ರುತಿಗೆ ವಿರೋಧವಿಲ್ಲವೆಂಬುದರ ಸಮರ್ಥನೆ

೪. ಸಪ್ತಗತ್ಯಧಿಕರಣ – ಇಂದ್ರಿಯ ಸಂಖ್ಯಾ ವಿಷಯ ಶ್ರುತಿ ವಿರೋಧ ಪರಿಹಾರ

೫. ಅಣ್ವಧಿಕರಣ – ಇಂದ್ರಿಯಗಳ ಪರಿಮಾಣದ ವಿಷಯದಲ್ಲಿ ಶ್ರುತಿವಿರೋಧ ಪರಿಹಾರ

೬. ಶ್ರೇಷ್ಠಾಧಿಕರಣ – ಮುಖ್ಯಪ್ರಾಣನಿಗೆ ಅನುತ್ಪತ್ತಿ ಹೇಳುವ ಶ್ರುತಿ ವಿರೋಧ ಪರಿಹಾರ

೭. ಚಕ್ಷುರಾದ್ಯಧಿಕರಣ – ಮುಖ್ಯಪ್ರಾಣನಿಗೆ ಸ್ವಾತಂತ್ರ್ಯ ಹೇಳುವ ಶ್ರುತಿ ವಿರೋಧ ಪರಿಹಾರ

೮. ಪಂಚವೃತ್ತ್ಯಧಿಕರಣ – ಪ್ರಾಣಾಪಾನಾದಿ ಪಂಚರೂಪಗಳಿಗೆ ದಾಸತ್ವ ಹಾಗೂ ತತ್ಸ್ವರೂಪತ್ವ ಪ್ರತಿಪಾದಕ ಶ್ರುತಿಗಳಿಗೆ ವಿರೋಧ ಪರಿಹಾರ

೯. ಅಣ್ವಧಿಕರಣ – ಮುಖ್ಯಪ್ರಾಣನಿಗೆ ವ್ಯಾಪ್ತತ್ವ ಹಾಗೂ ಅಣುತ್ವಗಳನ್ನು ಹೇಳುವ ಶ್ರುತಿಗಳಿಗೆ ವಿರೋಧ ಪರಿಹಾರ

೧೦.ಜ್ಯೋತಿರಧಿಕರಣ – ಚಕ್ಷುರಾದಿ ಇಂದ್ರಿಯಗಳಿಗೆ ಜೀವಕರಣತ್ವ ಶ್ರುತಿ ವಿರೋಧ ಪರಿಹಾರ

೧೧.ತಇಂದ್ರಿಯಾಧಿಕರಣ – ಮುಖ್ಯಪ್ರಾಣನಿಗೆ ಇಂದ್ರಿಯತ್ವ ಪ್ರತಿಪಾದಕ ಶ್ರುತಿ ವಿರೋಧ ಪರಿಹಾರ

೧೨.ಸಂಜ್ಞಾಧಿಕರಣ – ನಾಮರೂಪಾತ್ಮಕ ಪ್ರಪಂಚಕ್ಕೆ ಚತುರ್ಮುಖನಿಂದ ಸೃಷ್ಟಿಯೆಂದು ಹೇಳುವ ಶ್ರುತಿ ವಿರೋಧ ಪರಿಹಾರ

೧೩.ಮಾಂಸಾಧಿಕರಣ – ಶರೀರಕ್ಕೆ ಪೃಥಿವ್ಯಾದಿ ಮೂರು ಭೂತಗಳ ಮಧ್ಯದಲ್ಲಿ ಅನ್ಯತಮ ವಿಕಾರಿತ್ವ ಹೇಳುವ ಶ್ರುತಿ ವಿರೋಧ ಪರಿಹಾರ.

ಇಲ್ಲಿಗೆ ಶ್ರೀಮದನುವ್ಯಾಖ್ಯಾನದ ಎರಡನೆಯ ಅಧ್ಯಾಯದ ಎಲ್ಲ ಪಾದ ಹಾಗೂ ಅಧಿಕರಣಗಳ ವಿಷಯ ಸಂಗ್ರಹ ರೂಪವಾದ ಉಪೋದ್ಘಾತವು ಮುಕ್ತಾಯವಾಯಿತು.

॥ ಶ್ರೀಮಧ್ವಾಂತರ್ಗತ ಶ್ರೀಕೃಷ್ಣಾರ್ಪಣಮಸ್ತು ॥

# ವಿಷಯಾನುಕ್ರಮಣಿಕೆ


| ಎರಡನೆಯ ಅಧ್ಯಾಯ | ಪುಟ |
|---|---|
| **ಮೊದಲನೆಯ ಪಾದ** | **1–76** |
| ಅವಿರೋಧ ಪ್ರತಿಪಾದನದ ಆರಂಭ | 1 |
| ಪ್ರಥಮ ಪಾದದಲ್ಲಿ ಯುಕ್ತಿವಿರೋಧಾಭಾವದ ನಿರೂಪಣೆ | 2 |
| ನಾಲ್ಕು ಪಾದಗಳೂ ಪಾದಚತುಷ್ಟಯಾರ್ಥಕಗಳು | 2 |
| ನಾಲ್ಕು ಅಧ್ಯಾಯಗಳೂ ಅಧ್ಯಾಯಚತುಷ್ಟಯಾರ್ಥಕಗಳು | 2 |
| ಚತುರ್ಮೂರ್ತ್ಯಾತ್ಮಕ ಬ್ರಹ್ಮಮೀಮಾಂಸಾಶಾಸ್ತ್ರಕ್ಕೆ ಚತುರಾತ್ಮಕತ್ವ | 2 |
| ಪ್ರಥಮಪಾದೀಯ ಪೂರ್ವಪಕ್ಷ ಹಾಗೂ ಸಿದ್ಧಾಂತಯುಕ್ತಿಗಳು | 3 |
| **ಸ್ಮೃತ್ಯಧಿಕರಣ** | **7** |
| ಪಾಶುಪತಾದಿ ಸ್ಮೃತಿಗಳು ಪ್ರಮಾಣವೆಂಬ ಪೂರ್ವಪಕ್ಷದ ನಿರೂಪಣೆ | 7 |
| ಪಂಚರಾತ್ರಾದಿಗಳು ಪ್ರಮಾಣವೆಂಬ ಸಿದ್ಧಾಂತ ನಿರೂಪಣೆ | 8 |
| ಪಾಶುಪತಾದಿ ಸ್ಮೃತಿಗಳಿಗೆ ಆಪ್ತಮೂಲತ್ವವಿಲ್ಲ | 9 |
| ಪಂಚರಾತ್ರಾದಿಗಳಿಗೆ ವೇದಮೂಲತ್ವ ಕಾರಣ ಅಪ್ರಮಾಣ್ಯವಿಲ್ಲ | 9 |
| ವೇದೋಕ್ತ ಹಾಗೂ ಪಾಶುಪತಾದ್ಯುಕ್ತ ಅಧಿಕಾರಗಳಲ್ಲಿ ವೈಲಕ್ಷಣ್ಯ | 9 |
| ಪರಸ್ಪರ ವಿಸಂವಾದದಿಂದ ಪಾಶುಪತಾದಿ ಸ್ಮೃತಿಗಳಿಗೆ ಅಪ್ರಮಾಣ್ಯ | 11 |
| **ನ ವಿಲಕ್ಷಣತ್ವಾಧಿಕರಣ** | **12** |
| ಯುಕ್ತಿವಿರೋಧ ಪರಿಹಾರದ ಆರಂಭ | 12 |
| ನಿತ್ಯ ಹಾಗೂ ದೋಷವರ್ಜಿತವಾದ ವೇದಗಳಿಗೆ ಪ್ರಾಮಾಣ್ಯ | 12 |
| ಬುದ್ಧಿಪೂರ್ವಕತ್ವಾಭಾವವಿದ್ದರೂ ವೇದಗಳಿಗೆ ಪ್ರಾಮಾಣ್ಯವು | 13 |
| ಶ್ರುತಿಸಂವಾದತ್ವದಿಂದ ಪಂಚರಾತ್ರಾದಿ ಸ್ಮೃತಿಗಳಿಗೆ ಪ್ರಾಮಾಣ್ಯವು | 13 |
| ಆಗಮಗಳಿಗೆ ಪರಸ್ಪರ ವಿರೋಧ ಕಂಡರೆ ಯುಕ್ತಿಯಿಂದ ನಿರ್ಣಯ | 14 |
| ಪ್ರತ್ಯಕ್ಷ ಆಗಮ ಯುಕ್ತಿಗಳಿಗೆ ಉಪಜೀವ್ಯತ್ವ ವ್ಯವಸ್ಥೆ | 15 |
| ಯುಕ್ತಿಯ ತ್ರೈವಿಧ್ಯ | 16 |
| ಪ್ರಮಾಣ ಸಾಮಾನ್ಯ ಲಕ್ಷಣ | 17 |
| ಸ್ಮೃತಿ ಅನುವಾದಗಳಿಗೂ ಪ್ರಾಮಾಣ್ಯ ವ್ಯವಸ್ಥೆ | 18 |

ಪ್ರತ್ಯಕ್ಷದ ಲಕ್ಷಣ ಹಾಗೂ ಪ್ರಕಾರಗಳು 20
ಅನುಮಾನದ ಸ್ವರೂಪ 22
ಪರೋಕ್ತ ಪಂಚಾವಯವ ನಿಯಮ ನಿರಾಕರಣೆ 23
ದ್ವಿವಿಧ ಅನುಮಾನ ದೂಷಣಗಳು – ವಿರೋಧ ಮತ್ತು ಅಸಂಗತಿ 24
ವಿರೋಧದಲ್ಲಿ ಮೂರು ವಿಧ 24
ನಿಗ್ರಹಸ್ಥಾನಗಳ ನಿರೂಪಣೆ 26
ಕಥಾಲಕ್ಷಣದ ನಿರೂಪಣೆ 27
ಕಥೆಯಲ್ಲಿ ತ್ರೈವಿಧ್ಯ 27
ವಾದ, ಜಲ್ಪ ಮತ್ತು ವಿತಂಡಾಗಳ ಲಕ್ಷಣಾದಿಗಳ ನಿರೂಪಣೆ 27
ಸಭ್ಯ, ಸಭಾಪತಿ, ಪ್ರಾಶ್ನಿಕರುಗಳ ಲಕ್ಷಣ 32
ವಾದಜಲ್ಪಗಳಿಗೂ ವಿತಂಡಾಕ್ಕೂ ವೈಲಕ್ಷಣ ಕಥನ 33
ವಾದಜಲ್ಪಗಳ ಪ್ರಮಾಣೋಪನ್ಯಾಸ ಪ್ರಕಾರ 34
ತ್ರಿಪಂಚಾವಯವಾದಿ ನಿಯಮವಿಲ್ಲದ ವ್ಯಾಪ್ತಿಯೇ ಅನುಮಾನ 35
ಪ್ರಾಭಾಕರೋಕ್ತ ಪ್ರಮಾಣ ಲಕ್ಷಣಕ್ಕೆ ಸ್ಮೃತಿಯಲ್ಲಿ ಅವ್ಯಾಪ್ತಿ 36
ಸ್ಮೃತಿ ಹಾಗೂ ಸಂಸ್ಕಾರಗಳ ಲಕ್ಷಣ 37
ಬ್ರಹ್ಮಾದಿ ವಿಷಯದಲ್ಲಿ ವೇದವೇ ಪ್ರಮಾಣ, ಯುಕ್ತ್ಯಾದಿಗಳಲ್ಲ 37
**ಅಭಿಮಾನ್ಯಧಿಕರಣ 38**
ಪೂರ್ವಪಕ್ಷ – ಮೃದಬ್ರವೀತ್ ಇತ್ಯಾದಿ ಶ್ರುತಿಗಳು ಯುಕ್ತಿವಿರುದ್ಧ 38
ಸಿದ್ಧಾಂತ – ಅಭಿಮಾನಿಪರತ್ವಾದ್ದರಿಂದ ಯುಕ್ತಿವಿರುದ್ಧವಲ್ಲ 39
ಪೃಥಿವ್ಯಾದಿ ಅಭಿಮಾನಿಗಳು ಯೋಗಿಗಳಿಂದ ದೃಶ್ಯರು 40
ಆತ್ಮನಿ ಚೈವಂ ಇತ್ಯಾದಿ ಸೂತ್ರವಿರೋಧ ಪರಿಹಾರ 41
ಈ ಅಧಿಕರಣದ ನ್ಯಾಯ ನಿರೂಪಣೆ 41
**ಅಸದಧಿಕರಣ 42**
ಅಧಿಕರಣದ ಸಂಗತ್ಯಾದಿಗಳ ನಿರೂಪಣೆ 42
ಸೂತ್ರೋಕ್ತ ಪೂರ್ವಪಕ್ಷ ನಿರೂಪಣೆ 42
ಸಿದ್ಧಾಂತಾಂಶದ ವ್ಯಾಖ್ಯಾನ 43
ಅಭಾವಕ್ಕೆ ಕರ್ತೃತ್ವವಿಲ್ಲವೆಂಬುದರ ಸಮರ್ಥನೆ 43

ಕರ್ತೃತ್ವ ಸ್ವರೂಪದ ನಿರೂಪಣೆ 44
ಪ್ರತಿರೋಧಮಾತ್ರತ್ವ ಹೇತುವಿನ ನಿರೂಪಣೆ 44
ಭಾವಾಭಾವ, ಧರ್ಮಧರ್ಮಿಗಳ ಸ್ವರೂಪ ನಿರೂಪಣೆ 45
ಪ್ರಳಯದಲ್ಲಿ ಈಶ್ವರಾದಿಗಳ ಸದ್ಭಾವ ಸಮರ್ಥನೆ 47
ಪ್ರಳಯದ ವಿಷಯದಲ್ಲಿ ಪರಕೀಯರ ವಾದ ನಿರಾಕರಣೆ 48
ಚೇತನಕರ್ತೃತ್ವ ವಿಷಯದಲ್ಲಿ ಅನುಮಾನ ನಿರೂಪಣೆ 50
ಆಗಮಾನುಗೃಹೀತ ಅನುಮಾನಕ್ಕೆ ಪ್ರಾಮಾಣ್ಯವು 50
ಪರಮತ ನಿರೂಪಣೆ ಮತ್ತು ನಿರಾಕರಣೆ 51
ಶಿಷ್ಟಾಪರಿಗ್ರಹ ಸೂತ್ರಾರ್ಥ ವಿವರಣೆ 52
ಪುನರುಕ್ತಿ ಶಂಕಾ ಪರಿಹಾರ 53
ಜೀವಕರ್ತೃತ್ವವು ಯುಕ್ತಿವಿರುದ್ಧವು 55
**ಭೋಕ್ತ್ರಧಿಕರಣ 56**
ಮುಕ್ತಿಯಲ್ಲಿ ಜೀವನಿಗೆ ಬ್ರಹ್ಮಭಾವವಿಲ್ಲ 56
ಏಕೀಭಾವ ಶ್ರುತ್ಯರ್ಥ ನಿರೂಪಣೆ 57
ಪರೋಕ್ತ ಸೂತ್ರಾರ್ಥ ನಿರಾಕರಣೆ 58
**ತದನನ್ಯತ್ವಾಧಿಕರಣ 58**
ಬ್ರಹ್ಮಾನ್ಯ ಸ್ವತಂತ್ರ ಕಾರಣವಿಲ್ಲ 59
ಪ್ರಕೃತ್ಯಾದಿಗಳಿಗೆ ಬ್ರಹ್ಮಾಧೀನವಾದ ಕಾರಣತ್ವ 60
ಅಸದ್ವ್ಯಪದೇಶ ಶ್ರುತಿಗೆ ಅರ್ಥಾಂತರ ವ್ಯವಸ್ಥೆ 60
ಸರ್ವಶಕ್ತನಾದ ಈಶ್ವರನಿಂದ ಸ್ವೇಚ್ಛೆಯಿಂದ ಜಗತ್ಸೃಷ್ಟಿ 61
ಕಾರ್ಯಕ್ಕೆ ನಿಮಿತ್ತಕಾರಣದಿಂದ ಭೇದ,
ಉಪಾದಾನಕಾರಣದಿಂದ ಭೇದಾಭೇದ 62
ಈಶ್ವರನಿಂದ ಜಗತ್ಸೃಷ್ಟಿಯ ವೈಲಕ್ಷಣ್ಯದಲ್ಲಿ ಶ್ರುತಿ ಪ್ರಮಾಣ 63
**ಇತರವ್ಯಪದೇಶಾಧಿಕರಣ 63**
ಜೀವನು ಈಶ್ವರಾಧೀನನಾದ್ದರಿಂದ ಕೃತ್ಸ್ನಪ್ರಸಕ್ತಿ ದೋಷವಿಲ್ಲ 63
ಚೇತನರು ಅನಂಶಿಗಳೆಂದು ಹೇಳುವ ಶ್ರುತ್ಯರ್ಥ ವಿವರಣೆ 65
ಚೇತನರಿಗೆ ಅನೇಕತ್ವ ಹಾಗೂ ಅಂಶಿತ್ವದ ಸಮರ್ಥನೆ 66

**ಶ್ರುತೇಸ್ತು ಶಬ್ದಮೂಲತ್ವಾಧಿಕರಣ** 66
ಈಶ್ವರನಿಗೆ ಕೃತ್ಸ್ನಪ್ರಸಕ್ತ್ಯಾದಿ ದೋಷವಿಲ್ಲ 66
ದ್ವಿತೀಯಾಧ್ಯಾಯದ ವಿಷಯ ಕಥನ 66
ವಿಕರಣತ್ವ ಸೂತ್ರಾರ್ಥ ನಿರೂಪಣೆ 68
**ನ ಪ್ರಯೋಜನವತ್ವಾಧಿಕರಣ** 69
ಲೋಕವತ್ ಸೂತ್ರದ ತಾತ್ಪರ್ಯ ಕಥನ 69
ಪ್ರಯೋಜನತ್ವಾನುಮಾನ ನಿರಾಕರಣೆ 70
ಈಶ್ವರನ ಪ್ರವೃತ್ತಿಯಲ್ಲಿ ಸ್ವಪ್ರಯೋಜನವಿಲ್ಲ 71
ಪರಮತ ನಿರಾಕರಣೆ 71
ಪರಪ್ರಯೋಜನಾರ್ಥತ್ವ ವರ್ಣನೆ 71
ಶ್ರುತಿಯಿಂದ ಈಶ್ವರನ ಇಚ್ಛಾವಿಷಯತ್ವ ಸಮರ್ಥನೆ 71
ಈಶ್ವರನ ಪ್ರಸಾದವೆಂದರೆ ಇಚ್ಛಾವಿಶೇಷವು 72
**ವೈಷಮ್ಯ ನೈರ್ಘೃಣ್ಯಾಧಿಕರಣ** 73
ವೈಷಮ್ಯನೈರ್ಘೃಣ್ಯ ಸೂತ್ರಾರ್ಥ ನಿರೂಪಣೆ 74
**ಸರ್ವಧರ್ಮೋಪಪತ್ತ್ಯಧಿಕರಣ** 75
ಈಶ್ವರನಲ್ಲಿ ಸರ್ವಧರ್ಮ ಉಪಪಾದಕ ಯುಕ್ತಿಯ ನಿರೂಪಣೆ 76
**ಎರಡನೆಯ ಪಾದ** **77–192**
ಪ್ರಥಮಪಾದದ ಸಂಗತಿ ನಿರೂಪಣೆ 77
ಪ್ರವಾಹತಃ ಅನಾದಿಯಾದ ಸಮಯಗಳ ವಿರೋಧ ಪರಿಹಾರ 78
**ರಚನಾನುಪತ್ತ್ಯಧಿಕರಣ** 80
ನಿರೀಶ್ವರ ಸಾಂಖ್ಯಮತದ ಅನುವಾದ 80
ನಿರೀಶ್ವರ ಸಾಂಖ್ಯರಲ್ಲಿ ಎರಡು ವಿಧ 81
ಎರಡು ರೀತಿಯ ನಿರೀಶ್ವರ ಸಾಂಖ್ಯಮತಗಳೂ ಅಯುಕ್ತ 82
ಉತ್ಪತ್ತಿಯಲ್ಲಿ ಚೇತನನ ಇಚ್ಛಾಧೀನತ್ವ ಸಮರ್ಥನೆ 82
ಈಶ್ವರನ ಪ್ರವೃತ್ತಿಯ ವಿಷಯದಲ್ಲಿ ಅನುಮಾನ ಪ್ರಮಾಣ 83
ಪ್ರಧಾನಕ್ಕೆ ಸ್ವತಂತ್ರ ಪ್ರವೃತ್ತಿಯಿಲ್ಲ 83
ಅಚೇತನಕ್ಕೆ ಸ್ವಾತಂತ್ರ್ಯವಾಗಲೀ ಇಚ್ಛೆಯಾಗಲೀ ಇಲ್ಲ 85

| | |
|---|---|
| ಪಯೋಂಬುವಚ್ಚ ಸೂತ್ರದ ವ್ಯಾಖ್ಯಾನ | 87 |
| ಕಾಮಕ್ಕೆ ಉಭಯಧರ್ಮತ್ವ ವ್ಯವಸ್ಥೆ | 87 |
| ಆತ್ಮನಿಗೇ ಇಚ್ಛಾಸ್ವಾಮಿತ್ವವು, ಮನಸ್ಸಿಗಲ್ಲ | 88 |
| ಈಶ್ವರನಲ್ಲಿಯೇ ಮುಖ್ಯವಾದ ಸ್ವಾಮಿತ್ವವು | 89 |
| ಕರ್ತೃತ್ವವಿರುವ ಆತ್ಮನಿಗೇ ಭೋಕ್ತೃತ್ವವು, ಪ್ರಕೃತಿಗಲ್ಲ | 91 |
| ಸಾಂಖ್ಯ ಮತ್ತು ಮಾಯಾವಾದಿ ಮತಗಳು ಸಮಾನ | 91 |
| **ಅನ್ಯತ್ರಾಭಾವಾಧಿಕರಣ** | **91** |
| ಸೇಶ್ವರಸಾಂಖ್ಯಮತ – ಅನುವಾದ ಸಹಿತ ನಿರಾಕರಣೆ | 92 |
| ಪ್ರಕೃತಿ ಪುರುಷರ ಸತ್ತಾದಿ ಎಲ್ಲವೂ ಪರಮಾತ್ಮಾಧೀನ | 93 |
| ಸತ್ತಾದಿ ಎಲ್ಲವೂ ಭಗವದಧೀನವೆಂಬುದಕ್ಕೆ ಶ್ರುತಿ ಪ್ರಮಾಣ | 94 |
| **ಅಭ್ಯುಪಗಮಾಧಿಕರಣ** | **94** |
| ಚಾರ್ವಾಕಮತ – ಅನುವಾದ ಸಹಿತ ನಿರಾಕರಣೆ | 95 |
| **ಪುರುಷಾಶ್ಮಾಧಿಕರಣ** | **97** |
| ಪರುಷೋಪಸರ್ಜನ ಪ್ರಕೃತಿಕರ್ತೃತ್ವವಾದ ನಿರಾಕರಣೆ | 98 |
| **ಅನ್ಯಥಾನುಮಿತ್ಯಧಿಕರಣ** | **99** |
| ಪ್ರಕೃತ್ಯುಪಸರ್ಜನ ಪುರುಷಕರ್ತೃತ್ವವಾದ ನಿರಾಕರಣೆ | 100 |
| **ವೈಶೇಷಿಕಾಧಿಕರಣ** | **101** |
| ಪರಮಾಣ್ವಾರಂಭವಾದಿ ವೈಶೇಷಿಕಮತದ ಅನುವಾದ | 101 |
| ವೈಶೇಷಿಕಾದಿ ಮತ ನಿರಾಕರಣೆ | 103 |
| ಮಹದ್ದೀರ್ಘವತ್ವಾದಿ ಸೂತ್ರಾರ್ಥ ನಿರೂಪಣೆ | 104 |
| ಅಣುತ್ವ ಮಹತ್ವಗಳಿಗೆ ವಿಶ್ರಾಂತಿಯಿಲ್ಲವೆಂದು ಸಮರ್ಥನೆ | 106 |
| ಕಾಲಾದಿಗಳಿಗೆ ಪರಿಮಾಣೋತ್ಕರ್ಷಾದಿ ಆನಂತ್ಯ ಕಥನ | 107 |
| ಬ್ರಹ್ಮನಿಗೆ ದೇಶಕಾಲಾದಿ ಸರ್ವಾನಂತ್ಯ ನಿರೂಪಣೆ | 110 |
| ಪ್ರತ್ಯಕ್ಷಾದಿ ಪ್ರಾಮಾಣ್ಯಸಿದ್ಧಿಗಾಗಿ ಸಾಕ್ಷಿಯು ಅವಶ್ಯ ಅಂಗೀಕಾರ್ಯವು | 111 |
| ಪರಮಾಣು ಸಂಯೋಗವಾದ | 111 |
| ಆಕಾಶಾದಿ ಪರಿಮಾಣೋತ್ಕರ್ಷ ಆನಂತ್ಯಕ್ಕೆ ಸಾಕ್ಷಿಸಿದ್ಧತ್ವ ಸಮರ್ಥನೆ | 114 |
| ಸಮವಾಯಾದಿ ಸೂತ್ರಾರ್ಥ ನಿರೂಪಣೆ | 116 |

| | |
|---|---|
| ಗುಣಗುಣ್ಯಾದಿಗಳಿಗೆ ಅತ್ಯಂತ ಭೇದ ನಿರಾಕರಣೆ | 117 |
| ಅಭೇದವಿದ್ದರೂ ವಿಶೇಷಬಲದಿಂದ ಭೇದ ವ್ಯವಹಾರ | 119 |
| ವಿಶೇಷದ ಲಕ್ಷಣ | 120 |
| ಅಂಶ–ಅಂಶಿ ಸಂಯೋಗೈಕ್ಯ ಸಮರ್ಥನೆ | 125 |
| ಅಂಶಿಗಳಿಗೆ ಅಂಶಗಳಿಂದ ಅತ್ಯಂತಾಭೇದ ಹಾಗೂ ಭೇದಾಭೇದ | 126 |
| ಸಂಯೋಗ ವಿಭಾಗ ಪೃಥಕ್ತ್ವಗಳು ಏಕೈಕ ದ್ರವ್ಯಾಶ್ರಿತವು | 128 |
| ಭೇದವು ಉಭಯ ಧರ್ಮಿಕವು | 128 |
| ನರತ್ವಾದಿ ಜಾತಿಯು ಪ್ರತಿವ್ಯಕ್ತಿ ಭಿನ್ನವು | 129 |
| ಜಾತಿಯು ಪ್ರತಿವ್ಯಕ್ತಿಭಿನ್ನ ಎಂಬ ವಿಷಯದಲ್ಲಿ ಪ್ರಮಾಣೋಕ್ತಿಯು | 130 |
| ಸಮವಾಯಕ್ಕೆ ಸರ್ವತ್ರ ಏಕತ್ವ ಹಾಗೂ ನಿತ್ಯತ್ವಗಳಿಲ್ಲ | 132 |
| ಅನ್ಯೋನ್ಯಾಭಾವ ಭೇದ ಪೃಥಕ್ತ್ವಗಳು ಪರಸ್ಪರ ಭಿನ್ನವಲ್ಲ | 136 |
| ಸಮವಾಯ ನಿರಾಕರಣದ ಉಪಸಂಹಾರ | 137 |
| ಈಶ್ವರನು ಕೇವಲ ಅಷ್ಟಗುಣನಲ್ಲ, ಅನಂತಗುಣಸಮುದ್ರನು | 138 |
| ಈಶ್ವರನ ಜ್ಞಾನಕ್ಕೆ ಸ್ವಪ್ರಕಾಶತ್ವ ಸಮರ್ಥನೆ | 140 |
| ಈಶ್ವರನಲ್ಲಿ ಸುಖಾಭಾವಾದಿ ಅನುಮಾನದ ನಿರಾಸೆ | 141 |
| ಜೀವಾ ಏವ ತು ದುಃಖಿನಃ ಶ್ರುತ್ಯರ್ಥ | 142 |
| ಕಾಲವಿಶೇಷಗಳು ಈಶ್ವರಜನ್ಯವು | 145 |
| ಕಾಲವು ಸ್ವಗತ ಹಾಗೂ ಈಶ್ವರಾಧೀನ | 146 |
| ನಿತ್ಯ ಮತ್ತು ಅನಿತ್ಯ ಪದಾರ್ಥಗಳ ಸ್ವಭಾವವೂ ಈಶ್ವರಾಧೀನವೇ | 146 |
| ವೈಶೇಷಿಕಮತವು ಶ್ರುತಿವಿರುದ್ಧವಾದುದರಿಂದ ಅನುಪಾದೇಯವು | 147 |
| **ಸಮುದಾಯಾಧಿಕರಣ** | **147** |
| ಸೌಗತಮತ ನಿರಸನ | 147 |
| ಸಮುದಾಯ ವಾದ ನಿರಸನ | 150 |
| ಸರ್ವಕ್ಷಣಿಕತಾ ವಾದ ನಿರಸನ | 152 |
| ವೈಭಾಷಿಕ ಹಾಗೂ ಸೌತ್ರಾಂತಿಕ ಮತ ನಿರಸನ | 157 |
| **ಶೂನ್ಯಾಧಿಕರಣ** | **158** |
| ಮಾಧ್ಯಮಿಕ ಮತ – ಅನುವಾದ ಮತ್ತು ನಿರಕಾರಣೆ | 158 |

ಅಸತ್ ಮತ್ತು ಶೂನ್ಯಗಳಿಗೆ ಜಗತ್ಕಾರಣತ್ವ ನಿರಾಕರಣೆ 160
ವಿಶ್ವ ಅಸತ್ವತ್ವ ನಿರಾಕರಣೆ 161
ವಿಶ್ವಕ್ಕೆ ಸ್ವಪ್ನ–ಭ್ರಾಂತಿ ಸಮತ್ವದ ನಿರಸನ 162
ಜಗತ್ತಿಗೆ ಸತ್ಕಾರಣತ್ವ ವಿಷಯದಲ್ಲಿ ದೋಷಾಭಾವ 164
ಮಿಥ್ಯಾತ್ವ ಸಾಧಕ ಅನುಮಾನ ನಿರಾಕರಣೆ 165
ಭೇದಕ್ಕೆ ಧರ್ಮಿಸ್ವರೂಪತ್ವ ಸಮರ್ಥನೆ 167
ಶೂನ್ಯವಾದ ಮಾಯಾವಾದಗಳಿಗೆ ಸಾಮ್ಯದರ್ಶನ 168
ಪ್ರಪಂಚಮಿಥ್ಯಾತ್ವಕ್ಕೆ ಪ್ರತ್ಯಕ್ಷವಿರುದ್ಧತ್ವ ಹಾಗೂ ನಿಷ್ಪ್ರಮಾಣತ್ವ ವ್ಯವಸ್ಥೆ 169
**ಅನುಪಲಬ್ಧ್ಯಧಿಕರಣ 169**
ಯೋಗಾಚಾರ ಮತ – ಅನುವಾದ ಮತ್ತು ನಿರಾಕರಣೆ 170
**ನೈಕಸ್ಮಿನ್ನಧಿಕರಣ 171**
ಜೈನಮತ ನಿರಸನ 171
ಸಪ್ತಭಂಗಿತ್ವಕ್ಕೆ ಭಂಗ 172
ಆತ್ಮನಿಗೆ ಕಾಯಪರಿಮಾಣತ್ವ ನಿರಾಕರಣೆ 173
ಆತ್ಮನಿಗೆ ಅನಿತ್ಯತ್ವ ಶಂಕಾ ಪರಿಹಾರ 173
ಜೈನೋಕ್ತ ಮುಕ್ತಿಸ್ವರೂಪ ನಿರಾಕರಣೆ 175
ಸ್ಥಾವರಗಳಿಗೆ ಅನಾತ್ಮಕತ್ವ ನಿರಾಕರಣೆ 177
ವೃಕ್ಷಾದಿಗಳಿಗೆ ಸೇಂದ್ರಿಯತ್ವ ಮತ್ತು ಸಾತ್ಮಕತ್ವ ಸಮರ್ಥನೆ 177
**ಪತ್ಯುರಧಿಕರಣ 177**
ಪಾಶುಪತ ಮತ – ಅನುವಾದ ಮತ್ತು ನಿರಾಕರಣೆ 177
ಪಶುಪತಿಗೆ ಸರ್ವೋತ್ತಮತ್ವ, ಜಗತ್ಕಾರಣತ್ವಾದಿಗಳು ಅಸಂಮಜಸ 179
ಶ್ರುತಿಗಳಿಂದ ವಿಷ್ಣುವಿನ ನಿರ್ದೋಷತ್ವ ಸಮರ್ಥನೆ 181
ವಿಷ್ಣುವಿಗೆ ಜ್ಞಾನಾನಂದಾತ್ಮಕ ದೇಹವತ್ವ ಸಮರ್ಥನೆ 183
ಶಿವಾದಿ ನಾಮಗಳು ಮುಖ್ಯತಃ ವಿಷ್ಣುವನ್ನೇ ಪ್ರತಿಪಾದಿಸುತ್ತವೆ 183
ಶೈವ ಪುರಾಣಗಳಿಂದಲೂ ಶಿವನಿಗೆ ಜಗತ್ಕಾರಣತ್ವ ಸಿದ್ಧಿಸುವುದಿಲ್ಲ 184
**ಉತ್ಪತ್ತ್ಯಧಿಕರಣ 185**
ಶಾಕ್ತಮತ ಅನುವಾದ 185

| | |
|---|---|
| ಶಾಕ್ತಮತದ ನಿರಾಕರಣೆ | 186 |
| ಪಂಚರಾತ್ರ ಪ್ರಾಮಾಣ್ಯ ಸಮರ್ಥನೆ | 188 |
| ಶಾಂಡಿಲ್ಯ ವೃತ್ತಾಂತ ಕಥನದಲ್ಲಿ ವೇದನಿಂದಾಶಂಕಾ ಪರಿಹಾರ | 191 |
| ಪಾದಾರ್ಥ ಉಪಸಂಹಾರ | 192 |
| **ಮೂರನೆಯ ಪಾದ** | **193–229** |
| ಪಾದಪ್ರತಿಪಾದ್ಯ ಸಂಗತ್ಯಾದಿಗಳ ನಿರೂಪಣೆ | 193 |
| ಈ ಪಾದದಲ್ಲಿನ ಅಧಿಕರಣಗಳ ಪೂರ್ವಪಕ್ಷ ಯುಕ್ತಿಗಳ ಸಂಗ್ರಹ | 193 |
| ಸಿದ್ಧಾಂತ ಯುಕ್ತಿಗಳ ಸಂಗ್ರಹ | 194 |
| **ವಿಯದಧಿಕರಣ** | **203** |
| ವಿಯತ್ ಪದವು ಪ್ರಕೃತ್ಯಾದಿಗಳನ್ನೂ ಹೇಳುತ್ತದೆ | 203 |
| ಆಕಾಶಾದಿಗಳಿಗೆ ಪರಾಧೀನವಿಶೇಷಾವಾಪ್ತಿರೂಪ ಉತ್ಪತ್ತಿಯು | 204 |
| ಆಕಾಶಾದಿಗಳಿಗೆ ಅಭೂತ್ವಾಭವನರೂಪ ಉತ್ಪತ್ತಿಯ ನಿರಾಕರಣೆ | 204 |
| ಭೂತಾಕಾಶಕ್ಕೆ ಉತ್ಪತ್ತಿಯೆಂಬುದು ಅಭಮಾನಿಪರತ್ವವು | 204 |
| ಅವ್ಯಾಕೃತಾಕಾಶವು ಸಾಕ್ಷಿಪ್ರತ್ಯಕ್ಷಸಿದ್ಧ | 205 |
| ಅವ್ಯಾಕೃತಾಕಾಶದ ಉತ್ಪತ್ತಿಯ ವಿಶೇಷಕ್ಕೆ ಶ್ರುತಿಪ್ರಮಾಣ | 205 |
| ಪ್ರಕೃತ್ಯಾದಿಗಳಿಗೆ ಪರಾಧೀನವಿಶೇಷಾವಾಪ್ತಿರೂಪ ಉತ್ಪತ್ತಿ | 205 |
| ಕ್ಷಣಲವಾದಿ ಕಾಲವಿಶೇಷಗಳಿಗೆ ಅಭೂತ್ವಾಭವನರೂಪ ಉತ್ಪತ್ತಿ | 206 |
| ರಮಾದೇವಿಗೆ ಸಿಸೃಕ್ಷು ವಿಶೇಷಾವಾಪ್ತಿರೂಪ ಉತ್ಪತ್ತಿ | 206 |
| ಪ್ರಧಾನಾದಿಗಳಿಗೆ ಈಶ್ವರಾಧೀನ ವಿಕಾರದಿಂದ ಸೃಷ್ಟಿಯು | 206 |
| ಪುರುಷರಿಗೆ ದೇಹಸಂಬಂಧರೂಪ ಸೃಷ್ಟಿಯು | 206 |
| **ಮಾತರಿಶ್ವಾಧಿಕರಣ** | **206** |
| ಮುಖ್ಯವಾಯುವು ಪ್ರಲಯದಲ್ಲಿಯೂ ಪ್ರತಿಭಾತಪರಾವರನು | 206 |
| ಮುಖ್ಯವಾಯುವಿಗೆ ಪರಾಧೀನವಿಶೇಷಾವಾಪ್ತಿರೂಪ ಜನ್ಮವು | 206 |
| ವೇದಕ್ಕೂ ಈಶ್ವರೇಚ್ಛೆಯಿಂದ ಅಭಿವ್ಯಕ್ತಿರೂಪ ಉತ್ಪತ್ತಿ | 207 |
| **ಅಸಂಭವಾಧಿಕರಣ** | **207** |
| ಸ್ವತಂತ್ರನಾದ ಪರಮಾತ್ಮನಿಗೆ ಇತರರಂತೆ ಉತ್ಪತ್ತಿಯಿಲ್ಲ | 207 |
| **ವ್ಯತಿರೇಕಾಧಿಕರಣ** | **208** |

ಅಚ್ಛೇದ್ಯನಾದ ಜೀವನಿಗೆ ಬಹುರೂಪತ್ವ ಹಾಗೂ ಬಹುಭೋಕ್ತೃತ್ವ 208
ಎಲ್ಲವೂ ಶ್ರೀಹರಿಯ ವಶ, ಅವನೇ ಸ್ವತಂತ್ರನು 208
**ಪೃಥಗಧಿಕರಣ** **209**
ಜೀವ ಪರಮಾತ್ಮರಿಗೆ ಅಭೇದವೆಂದು ಪೂರ್ವಪಕ್ಷ 209
ಪೂರ್ವಪಕ್ಷದ ನಿರಾಕರಣೆ – ಭೇದಶ್ರುತಿಗಳ ದೃಷ್ಟಾಂತ 210
ಮುಕ್ತಿಯಲ್ಲಿಯೂ ಜೀವಪರಮಾತ್ಮರಿಗೆ ಭೇದ ಸಮರ್ಥನೆ 211
ಅನುಮಾನದಿಂದಲೂ ಅಭೇದ ಸಿದ್ಧಿಯಿಲ್ಲ 214
ಅನಿರ್ವಚನೀಯತ್ವವು ಸರ್ವ ಪ್ರಮಾಣಗಳಿಗೆ ವಿರುದ್ಧವು 214
ಜೀವೇಶ್ವರ ಭೇದವು ಸಾಕ್ಷಿಪ್ರತ್ಯಕ್ಷದಿಂದ ವೇದ್ಯ 217
ಜೀವಾಭೇದ ಸಾಧನೆ ಉಪಜೀವ್ಯ ಶ್ರುತಿಗೆ ವಿರುದ್ಧ 217
ಸಾರ್ವಜ್ಞಾದಿ ಶ್ರುತಿ ಪ್ರಾಮಾಣ್ಯ ಸಮರ್ಥನೆ 218
ಅಹಂ ದುಃಖೀ ಇತ್ಯಾದಿ ಅನುಭವವು ಮಿಥ್ಯೆಯಲ್ಲ 219
ಸಾಕ್ಷಿ ಪ್ರಾಮಾಣ್ಯ ಸಮರ್ಥನೆ 220
ಅಭೇದ ಶ್ರುತಿಗಳಿಗೆ ಸಾದೃಶ್ಯಾದಿ ಪರವಾಗಿ ಸಮರ್ಥನೆ 221
ಈಶ್ವರನಿಗೂ ಅವುನಗುಣಾದಿಗಳುಗೂ ಅಭೇದ ಸಮರ್ಥನೆ 223
**ಅಂಶಾಧಿಕರಣ** **223**
ಜೀವಬ್ರಹ್ಮರಿಗೆ ಮುಖ್ಯವಾದ ಅಭೇದ ನಿರಾಕರಣೆ 224
ಸ್ವಾಭಾವಿಕ ಭೇದಾಭೇದಗಳೂ ಇಲ್ಲ 224
ಸ್ವರೂಪಾಂಶ ಹಾಗೂ ಭಿನ್ನಾಂಶಗಳ ಲಕ್ಷಣ 225
ಮತ್ಸ್ಯಾದಿಗಳು ಈಶ್ವರನ ಸ್ವರೂಪಾಂಶಗಳು, ಜೀವರು ಭಿನ್ನಾಂಶರು 225
ಅಂಶ ದ್ವೈವಿಧ್ಯದಲ್ಲಿ ದೃಷ್ಟಾಂತಗಳು 226
ಸ್ವರೂಪಾಂಶ ಹಾಗೂ ಭಿನ್ನಾಂಶಗಳ ಬಗ್ಗೆ ಮತ್ತಷ್ಟು ವಿವರ 228
ಮೂರನೆಯ ಪಾದದ ಅರ್ಥ ಸಂಗ್ರಹ 228
**ನಾಲ್ಕನೆಯ ಪಾದ** **230–237**
ನಾಲ್ಕನೆಯ ಪಾದದ ಸಂಗತ್ಯಾದಿಗಳ ನಿರೂಪಣೆ 230
ನಾಲ್ಕನೆಯ ಪಾದದ ಪೂರ್ವಪಕ್ಷ ಹಾಗೂ ಸಿದ್ಧಾಂತ ಯುಕ್ತಿಗಳು 230

* * *

# ಸಮರ್ಪಣೆ

ಕಳೆದ ವರ್ಷ ಅಮೇರಿಕದಲ್ಲಿ ಉಗ್ರಗಾಮಿಗಳ ಬೆಂಕಿಯ ತಾಂಡವಕ್ಕೆ ಆಹುತಿಯಾದ ವಿಶ್ವ ವಾಣಿಜ್ಯ ಕೇಂದ್ರದ ದಾರುಣ ದುರಂತದಲ್ಲಿ, ತನ್ನ ಸಂಸ್ಥೆಗಾಗಿ ಅತಿನಿಷ್ಠೆಯಿಂದ ಕರ್ತವ್ಯ ನಿರತರಾಗಿದ್ದಾಗಲೇ ಕೆಲವೇ ಕ್ಷಣಗಳಲ್ಲಿ ಪಂಚಭೂತಗಳಲ್ಲಿ ಲೀನವಾಗಿ ಭಗವಂತನ ಪಾದಾರವಿಂದವನ್ನು ಸೇರಿದ, ಇನ್ನೂ ಚಿಕ್ಕ ವಯಸ್ಸಿನಲ್ಲಿಯೇ ಉನ್ನತ ಪ್ರತಿಭೆಯ ಉತ್ತುಂಗ ಶಿಖರವನ್ನು ಮುಟ್ಟಿದ್ದ, ದಿವಂಗತ ಶ್ರೇಯಸ್ ಶ್ರೀನಿವಾಸ್ ಹಾಗೂ ಮರಣದಲ್ಲಿಯೂ ಅವನ ಜೊತೆಯಲ್ಲಿಯೇ ತಾವೂ ಪಯಣಿಸಿದ ವಿಪ್ರೋ ಸಂಸ್ಥೆಯ ಅವನ ಸಹಚರ ಆತ್ಮಗಳಿಗೆ ಹಾಗೂ ಇತರ ಸಾವಿರಾರು ದಿವಂಗತ ಆತ್ಮಗಳಿಗೆ ಸದ್ಗತಿಯನ್ನು ಕೋರುತ್ತ, ಅವರೆಲ್ಲರ ಸ್ಮರಣೆಗಾಗಿ ಶ್ರೀಮದಾಚಾರ್ಯರ ಮೇರುಕೃತಿ ಶ್ರೀಮದನುವ್ಯಾಖ್ಯಾನದ ಎರಡನೆಯ ಅಧ್ಯಾಯದ ಕನ್ನಡಾನುವಾದವನ್ನು ಒಳಗೊಂಡ ಈ ಎರಡನೆಯ ಸಂಪುಟವು ಪ್ರಕಟವಾಗುತ್ತಿದೆ. ಅಗಲಿದ ಪ್ರತಿಭೆಗಳ ಸದ್ಗತಿಗಾಗಿ ಈ ಗ್ರಂಥವನ್ನು ಪ್ರಕಟಿಸಿ ಅರ್ಪಿಸಲು ಆರ್ಥಿಕ ಸಹಾಯ ನೀಡಿದ ಅವರ ಶ್ರೇಯೋಭಿಲಾಷಿಗಳಿಗೆ ಹೃತ್ಪೂರ್ವಕ ಕೃತಜ್ಞತೆಗಳು. ಶ್ರೀಹರಿವಾಯುಗಳು ದಿವಂಗತರಿಗೆ ಸದ್ಗತಿಯನ್ನು ಕರುಣಿಸಲಿ ಹಾಗೂ ಅವರ ಸ್ಮರಣೆಗಾಗಿ ಆರ್ಥಿಕ ನೆರವು ನೀಡಿ ಈ ಗ್ರಂಥದ ಪ್ರಕಟಣೆಗೆ ಅನುವು ಮಾಡಿಕೊಟ್ಟವರಿಗೂ ವಿಶೇಷವಾಗಿ ಅನುಗ್ರಹ ಮಾಡಲಿ ಹಾಗೂ ಅವರ ಉತ್ತರೋತ್ತರ ಏಳಿಗೆಗೆ ಕಾರಣವಾಗಲಿ ಎಂಬುದಾಗಿ ಶ್ರೀಹರಿವಾಯುಗಳಲ್ಲಿ ನಮ್ಮ ಕಳಕಳಿಯ ಪ್ರಾರ್ಥನೆ

ಶ್ರೀಮದ್ಧನುಮಭೀಮಮಧ್ವಾಂತರ್ಗತ ಶ್ರೀರಾಮಕೃಷ್ಣವೇದವ್ಯಾಸಾತ್ಮಕ ಶ್ರೀಲಕ್ಷ್ಮೀಹಯಗ್ರೀವಾಯ ನಮಃ

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತಮ್

# ಶ್ರೀಮದನುವ್ಯಾಖ್ಯಾನಮ್

## ಎರಡನೆಯ ಅಧ್ಯಾಯ – ಅವಿರೋಧಾಧ್ಯಾಯ

### ಮೊದಲನೆಯ ಪಾದ

ಶ್ರೀಮನ್ನ್ಯಾಯಸುಧಾ ಮಂಗಲ ಶ್ಲೋಕಃ

**ಯತ್ಪದಂ ವೇದಸಂವೇದ್ಯಂ ಕಟಾಕ್ಷೇಣಾಪಿ ವೀಕ್ಷಿತುಮ್ ।**

**ನ ಕ್ಷಮಂತೇ ವಿಮತಯಸ್ತಮುಪಾಸೇ ಶ್ರಿಯಃಪತಿಮ್॥**

ಶ್ರೀಮದನುವ್ಯಾಖ್ಯಾನಮ್

**ಉಕ್ತಃ ಸಮನ್ವಯಃ ಸಾಕ್ಷಾದವಿರೋಧೋಽತ್ರ ಸಾಧ್ಯತೇ ।**

ಶ್ರೀಮನ್ನಾರಾಯಣನು ಸಕಲ ಜಗಜ್ಜನ್ಮಾದಿಗಳಿಗೆ ನಿಮಿತ್ತಕಾರಣನು. ಸರ್ವಜ್ಞತ್ವ ಸರ್ವೈಶ್ವರ್ಯತ್ವಾದಿ ಅನಂತ ಕಲ್ಯಾಣಗುಣಗಳಿಂದ ಪರಿಪೂರ್ಣನು. ಅವಿದ್ಯಾ ಅವದ್ಯತ್ವಾದಿ ಸಕಲ ದೋಷರಹಿತನು. ಆ ಪರಬ್ರಹ್ಮನಾದ ನಾರಾಯಣನಲ್ಲಿ, ಸ್ವರ–ವರ್ಣ–ಪದ–ವಾಕ್ಯ–ಮಹಾವಾಕ್ಯ ರೂಪವಾದ ಸಮಸ್ತವಾದ ಶಾಸ್ತ್ರಕ್ಕೂ ಪರಮಮುಖ್ಯ ವೃತ್ತಿಯಿಂದ ಸಮನ್ವಯವನ್ನು ಮೊದಲನೆಯ ಅಧ್ಯಾಯದಲ್ಲಿ ಸಮರ್ಥಿಸಲಾಯಿತು. ಪ್ರಸ್ತುತ ಎರಡನೆಯ ಅಧ್ಯಾಯದಲ್ಲಿ ಅವಿರೋಧವನ್ನು ಸಮರ್ಥಿಸುತ್ತಾರೆ. ಅವಿರೋಧವು ಸಮನ್ವಯಕ್ಕೆ ಹೇತುವಾಗಿರುವುದರಿಂದ ಪ್ರಥಮ ಮತ್ತು ದ್ವಿತೀಯ ಅಧ್ಯಾಯಗಳಿಗೆ ಕಾರ್ಯಕಾರಣಭಾವರೂಪವಾದ ಸಂಗತಿಯು ಸೂಚಿತವಾಗಿದೆ.

ಹಾಗಾದರೆ ಶ್ರೀಮನ್ನಾರಾಯಣನ ಜಗಜ್ಜನ್ಮಾದಿಕರ್ತೃತ್ವರೂಪವಾದ ಲಕ್ಷಣಕ್ಕೆ ಅವಿರೋಧವನ್ನು ಸಮರ್ಥಿಸುವ ಈ ಅಧ್ಯಾಯಕ್ಕೆ ಏಕಾರ್ಥತೆಯಿರುವುದರಿಂದ ಚತುರ್ವಿಧರೂಪವಾದ ಪಾದಭೇದವಾದರೂ ಯಾವ ಕಾರಣದಿಂದ ಕೂಡುವುದು? ಅದರಲ್ಲಿಯೂ ಯುಕ್ತಿವಿರೋಧವನ್ನೇ ಮೊದಲಿಗೆ ತೆಗೆದುಕೊಳ್ಳಲು ಕಾರಣವೇನು ಎಂದು ಕೇಳಿದರೆ –

**ಚತುರ್ವಿಧಸ್ಯ ತಸ್ಯಾದೌ ಯೌಕ್ತಃ ತತ್ರಾಪಿ ಚ ಸ್ಮೃತೇಃ ॥೧॥**

ನಾಲ್ಕುವಿಧವಾದ ವಿರೋಧವನ್ನು ಈ ಅಧ್ಯಾಯದ ನಾಲ್ಕು ಪಾದಗಳಲ್ಲಿ ಪರಿಹರಿಸುತ್ತಾರೆ. ಯುಕ್ತಿವಿರೋಧ, ಸಮಯವಿರೋಧ, ಶ್ರುತಿವಿರೋಧ ಮತ್ತು ನ್ಯಾಯೋಪೇತ ಶ್ರುತಿವಿರೋಧ – ಹೀಗೆ ನಾಲ್ಕು ಪ್ರಕಾರ ವಿರೋಧಗಳಿವೆ. ಅವುಗಳಲ್ಲಿ ಯುಕ್ತಿವಿರೋಧವು ಪ್ರಬಲವಾದ್ದರಿಂದ ಮೊದಲನೆಯ ಪಾದದಲ್ಲಿ ಯುಕ್ತಿ ಸಂಬಂಧಿಯಾದ ವಿರೋಧಾಭಾವವು ಸಾಧಿಸಲ್ಪಡುತ್ತದೆ. ಅದರಲ್ಲಿಯೂ ಪ್ರಥಮಾಧಿಕರಣದಲ್ಲಿ ಪಾಶುಪತಾದಿ ಸ್ಮೃತಿಗಳ ವಿರೋಧವು ಪರಿಹರಿಸಲ್ಪಡುತ್ತದೆ.

ಯುಕ್ತಿವಿರೋಧವನ್ನು ಪರಿಹರಿಸತಕ್ಕ ಈ ಪಾದದಲ್ಲಿ ಸ್ಮೃತಿವಿರೋಧ ಪರಿಹಾರವು ಅಸಂಗತವಾಗುವುದು ಎಂದು ಆಕ್ಷೇಪಿಸಿದರೆ –

**ತಸ್ಯಾಶ್ಚತುಃಸ್ವರೂಪತ್ವಾತ್ ಪ್ರತ್ಯೇಕಂ ಚತುರಾತ್ಮಕಾಃ ।**

**ಪಾದಾಃ ಸರ್ವೇ ತದಂಶಾಶ್ಚ ಮೂರ್ತೀನಾಂ ವರ್ಣಮಾಗಮಾತ್ ॥೨॥**

ಆ ಪಾಶುಪತಾದಿ ಸ್ಮೃತಿಗಳಿಗೆ ಯುಕ್ತಿಸಮಯಾದಿ ನಾಲ್ಕು ವಿರೋಧಗಳ ಸ್ವರೂಪತ್ವವಿರುವುದರಿಂದ ಮೊದಲಿಗೆ ಸ್ಮೃತಿ ವಿರೋಧವನ್ನು ಪರಿಹರಿಸುವುದು ಯುಕ್ತವೇ ಆಗುವುದು. ಒಂದೇ ಒಂದು ಅಧಿಕರಣವೇ ನಾಲ್ಕುಪಾದಗಳ ಅರ್ಥ ಸಂಬಂಧದಿಂದ ನಾಲ್ಕು ಸ್ವರೂಪವಾಗಿರುವುದು ಎಂದಷ್ಟೇ ತಿಳಿಯತಕ್ಕದ್ದಲ್ಲ. ಎಲ್ಲ ಅಧ್ಯಾಯಗಳ ಎಲ್ಲ ಪಾದಗಳೂ ಪ್ರತ್ಯೇಕವಾಗಿ ಆಯಾ ಅಧ್ಯಾಯಗಳ ಎಲ್ಲ ನಾಲ್ಕು ಪಾದಗಳ ಅರ್ಥವನ್ನು ಹೊಂದಿರುತ್ತವೆ. ಇದೇ ಪ್ರಕಾರವಾಗಿ ಪ್ರತಿಯೊಂದು ಅಧ್ಯಾಯವೂ ಎಲ್ಲ ನಾಲ್ಕು ಅಧ್ಯಾಯಗಳ ಅರ್ಥಸಂಬಂಧವನ್ನು ಹೊಂದಿರುತ್ತವೆ. ವಾಸುದೇವ–ಸಂಕರ್ಷಣ–ಪ್ರದ್ಯುಮ್ನ–ಅನಿರುದ್ಧ ಎನ್ನುವ ನಾಲ್ಕು ಮೂರ್ತಿಗಳನ್ನು ಪ್ರತಿಪಾದಿಸುವುದರಿಂದಲೂ ಶಾಸ್ತ್ರಕ್ಕೆ ಚತುರಾತ್ಮಕತ್ವವನ್ನು ತಿಳಿಯತಕ್ಕದ್ದು. ಕೇವಲ ಪ್ರತ್ಯಕ್ಷರ, ಪ್ರತಿಪದ, ಪ್ರತಿಸೂತ್ರ, ಪ್ರತ್ಯಧಿಕರಣ ಮಾತ್ರವಲ್ಲ, ಮತ್ತೆ ಈ ಶಾಸ್ತ್ರದಲ್ಲಿನ ಒಂದು ವರ್ಣ ಮೊದಲ್ಗೊಂಡು ನಾಲ್ಕು ಅಧ್ಯಾಯಾತ್ಮಕವಾದ ಸಮಸ್ತ ಶಾಸ್ತ್ರಪರ್ಯಂತವೂ ನಾಲ್ಕು ಮೂರ್ತಿಗಳು ಪ್ರತಿಪಾದಿಸಲ್ಪಡುತ್ತವೆ ಎಂಬುದಾಗಿ ಬೃಹತ್ತಂತ್ರ ಮೊದಲಾದ ಆಗಮಗಳಿಂದ ತಿಳಿಯಲ್ಪಡುತ್ತದೆ.

ಮೊದಲಿಗೆ ಈ ಪಾದದಲ್ಲಿರುವ ಅಧಿಕರಣಗಳ ಪೂರ್ವಪಕ್ಷ ಮತ್ತು ಸಿದ್ಧಾಂತ ಯುಕ್ತಿಗಳನ್ನು ಸಂಕ್ಷೇಪದಿಂದ ಹೇಳುತ್ತಾರೆ –

**ಆಪ್ತತಾ ಸಮತಾದೃಷ್ಟಿಶ್ರುತಿಸಾಮ್ಯಬಲೋದ್ಭವಾಃ ।**

**ಸರ್ವಾನುಸಾರೋ ಲಘುತಾ ವಿಶೇಷಾದರ್ಶನಾಫಲೇ ॥೩॥**

**ಇಷ್ಟಾಸಿದ್ಧಿಶ್ಚ ನಿಯಮಃ ಪೂರ್ವಪಕ್ಷೇಷು ಯುಕ್ತಯಃ ।**

**ಏತಾ ಏವ ತ್ವತಿಬಲಾಃ ಸಿದ್ಧಾಂತಸ್ಯ ನಿಯಾಮಿಕಾಃ ॥೪॥**

ಆಪ್ತತ್ವ, ಸಮತ್ವ ಇತ್ಯಾದಿಗಳು ಪೂರ್ವಪಕ್ಷಯುಕ್ತಿಗಳು. ಇವುಗಳೇ ಅತಿಬಲವುಳ್ಳ ಪ್ರಯುಕ್ತ ಸಿದ್ಧಾಂತಕ್ಕೆ ನಿಯಾಮಕಗಳು. ಹೇಗೆಂದರೆ –

ಸ್ಮೃತ್ಯಧಿಕರಣದಲ್ಲಿ ಆಪ್ತತ್ವ, ನವಿಲಕ್ಷಣತ್ವಾಧಿಕರಣದಲ್ಲಿ ಸಮತ್ವ, ಅಭಿಮಾನ್ಯಧಿಕರಣದಲ್ಲಿ ಅದೃಷ್ಟಿ, ಅಸದಧಿಕರಣದಲ್ಲಿ ಶ್ರುತಿಸಾಮ್ಯ, ಭೋಕ್ತ್ರಧಿಕರಣದಲ್ಲಿ ಬಲೋದ್ಭವ, ಆರಂಭಣಾಧಿಕರಣದಲ್ಲಿ ಸರ್ವಾನುಸಾರತ್ವ, ಇತರವ್ಯಪದೇಶಾಧಿಕರಣದಲ್ಲಿ ಲಘುತ್ವ, ಶ್ರುತ್ಯಧಿಕರಣದಲ್ಲಿ ವಿಶೇಷದ ಅದರ್ಶನ, ನ ಪ್ರಯೋಜನಾಧಿಕರಣದಲ್ಲಿ ಪ್ರಯೋಜನಾಭಾವ, ವೈಷಮ್ಯಾಧಿಕರಣದಲ್ಲಿ ಇಷ್ಟಾಸಿದ್ಧಿ ಹಾಗೂ ಹನ್ನೊಂದನೆಯ ಸರ್ವಧರ್ಮಾಧಿಕರಣದಲ್ಲಿ ನಿಯಮ (ಅಂದರೆ ವ್ಯಾಪ್ತಿ). ಈ ಪ್ರಕಾರವಾಗಿ ಅಧಿಕರಣಗಳ ಯುಕ್ತಿಗಳನ್ನು ತಿಳಿಯತಕ್ಕದ್ದು.

**ಶ್ರೀಮದಾಚಾರ್ಯರು ಸೂತ್ರರೂಪವಾಗಿ ಮೇಲೆ ಸೂಚಿಸಿರುವ ಈ ಪಾದದ ಎಲ್ಲ ಅಧಿಕರಣಗಳ ಪೂರ್ವಪಕ್ಷ ಹಾಗೂ ಸಿದ್ಧಾಂತ ಯುಕ್ತಿಗಳನ್ನು ನ್ಯಾಯವಿವರಣ ಟೀಕೆಯನ್ನು ಅನುಸರಿಸಿ ಈ ಕೆಳಗೆ ವಿವರಣೆ ನೀಡಲಾಗಿದೆ –**

### ೧. ಸ್ಮೃತ್ಯಧಿಕರಣ (ಆಪ್ತತ್ವವೆಂಬ ಯುಕ್ತಿ)

ಪೂರ್ವಪಕ್ಷ – ರುದ್ರಾದಿಗಳ ವಾಕ್ಯಗಳು ಆಪ್ತಿಮೂಲಕ ಹಾಗೂ ನಿರ್ದುಷ್ಟವಾದುದರಿಂದ, ಆಪ್ತಿಮೂಲತ್ವವಿಲ್ಲದ ವೇದಕ್ಕಿಂತ ಪ್ರಬಲ. ಆದ್ದರಿಂದ ವಿಷ್ಣುವಿಗೆ ಜಗತ್ಕಾರಣತ್ವವನ್ನು ಪ್ರತಿಪಾದಿಸುವ ವೇದವಾಕ್ಯಗಳು ಅಪ್ರಮಾಣ.

ಸಿದ್ಧಾಂತ – ವಿಷ್ಣು ಮುಂತಾದವರಿಂದ ರಚಿಸಲ್ಪಟ್ಟ ಪಂಚರಾತ್ರ ಮುಂತಾದ ಸ್ಮೃತಿಗಳೂ ಅನೇಕವಿವೆ. ಅವುಗಳೂ ಆಪ್ತಿಮೂಲಕ ಹಾಗೂ ನಿರ್ದುಷ್ಟವಾಗಿವೆ. ಜೊತೆಗೆ ವೇದಮೂಲತ್ವವೂ ಇದೆ. ಶ್ರುತ್ಯನುಸಾರವಾದ ವಿಷ್ಣುವಿನ ಆಪ್ತತ್ವವೇ ಮುಖ್ಯವಾದುದೆಂದು ತಿಳಿಯುತ್ತದೆ. ರುದ್ರನಲ್ಲಿ ಅಜ್ಞಾನಾದಿಗಳಿವೆಯೆಂದು ಶ್ರುತಿಸಿದ್ಧವಾಗಿರುವುದರಿಂದ ಇಂಥಹ ಆಪ್ತತ್ವವಿಲ್ಲ. ಆದ್ದರಿಂದ ವಿಷ್ಣುವಿನಲ್ಲಿ ಪ್ರಬಲವಾದ ಆಪ್ತತ್ವವಿರುವುದರಿಂದ ಅವನಿಗೇ ಜಗತ್ಕಾರಣತ್ವವು ಸಿದ್ಧವಾಗುತ್ತದೆ.

### ೨. ನ ವಿಲಕ್ಷಣತ್ವಾಧಿಕರಣ (ಸಮತ್ವವೆಂಬ ಯುಕ್ತಿ)

ಪೂರ್ವಪಕ್ಷ – ಪಾಶುಪತಾದಿ ಸ್ಮೃತಿಗಳಲ್ಲಿ ಹೇಳಿದ ಕಾರ್ಯಗಳಿಗೆ ಫಲಸಂವಾದವಿಲ್ಲವಾದ್ದರಿಂದ ಅವುಗಳು ಅಪ್ರಮಾಣವೆಂದು ಹಿಂದಿನ ಅಧಿಕರಣದಲ್ಲಿ ಹೇಳಿದೆ. ಅದರಂತೆಯೇ ವೇದದಲ್ಲಿ ಹೇಳಿರುವ ಕಾರೀರೀ ಯಾಗವನ್ನು ಮಾಡಿದಾಗ ಮಳೆ ಬರದಿರುವುದೂ ಕಂಡಿದೆ. ಹೀಗೆ ಪಾಶುಪತಾದಿ ಸ್ಮೃತಿಗಳಿಗೆ ಬರುವ ಅಪ್ರಮಾಣ್ಯ ಶಂಕೆಯು ವೇದವಾಕ್ಯಗಳಿಗೂ ಬರುವುದು. ಪಾಶುಪತಾದಿಗಳು ಅಪ್ರಮಾಣವಾದರೆ ಅದೇ ಯುಕ್ತಿಯಿಂದ ವೇದವಾಕ್ಯಗಳೂ ಅಪ್ರಮಾಣವಾಗುವವು.

ಸಿದ್ಧಾಂತ – ವೇದೋಕ್ತ ಕರ್ಮಾಚರಣೆ ಮಾಡಿದರೂ ಫಲ ಬರದಿರುವುದಕ್ಕೆ ಅನೇಕ ಕಾರಣಗಳು ಇರುತ್ತವೆ. ಕರ್ತೃವಿನಲ್ಲಿರುವ ಅಶ್ರದ್ಧಾದಿ ದೋಷಗಳ ಮೇಲೆ ಫಲವು ಅವಲಂಬಿಸಿರುತ್ತದೆ. ವೇದವಾಕ್ಯಗಳು ನಿರ್ದೋಷವೆಂದು ಅಪೌರುಷೇಯತ್ವ ಇತ್ಯಾದಿ ಯುಕ್ತಿಗಳಿಂದ ನಿರ್ಣೀತವಾಗಿವೆ. ವೇದವು ಸ್ವತಃ ಪ್ರಮಾಣ. ಅದರ ಪ್ರಾಮಾಣ್ಯ ನಿಶ್ಚಯಕ್ಕೆ ಬೇರೆ ಸ್ಮೃತಿಗಳ ಸಹಕಾರ ಬೇಕಿಲ್ಲ. ಫಲವಿಸಂವಾದ ಕಂಡರೂ ವೇದವು ಪ್ರಮಾಣವೇ.

### ೩. ಅಭಿಮಾನ್ಯಧಿಕರಣ (ಅದೃಷ್ಟಿಯೆಂಬ ಯುಕ್ತಿ)

ಪೂರ್ವಪಕ್ಷ – ಮೃದಬ್ರವೀತ್ (ಮಣ್ಣು ಮಾತಾನಾಡಿತು) ಇತ್ಯಾದಿ ವೇದವಾಕ್ಯಗಳು ಅಚೇತನವಾದ ಮಣ್ಣು ಇತ್ಯಾದಿಗಳಿಗೆ ಚೇತನ ಧರ್ಮಗಳಾದ ವಕ್ತೃತ್ವಾದಿಗಳನ್ನು ಪ್ರತಿಪಾದಿಸುತ್ತವೆ. ಇದು ಲೋಕದಲ್ಲಿ ಕಂಡುಬರುವುದಿಲ್ಲ (ಅದೃಷ್ಟಿ). ಆದ್ದರಿಂದ ಪ್ರಮಾಣಕ್ಕೆ ವಿರುದ್ಧ. ಇದೇ ರೀತಿ ಎಲ್ಲ ವೇದವಾಕ್ಯಗಳೂ ಅಪ್ರಮಾಣವಾಗುತ್ತವೆ. ಆದ್ದರಿಂದ ವೇದದಿಂದ ವಿಷ್ಣುವಿಗೆ ಜಗತ್ಕಾರಣತ್ವವು ಸಿದ್ಧಿಸುವುದಿಲ್ಲ.

ಸಿದ್ಧಾಂತ – ಈ ವಾಕ್ಯಗಳಿಗೆ ಮೇಲ್ನೋಟಕ್ಕೆ ಯುಕ್ತಿಯ ವಿರೋಧವಿದೆ. ಆದರೆ ವೇದವು ನಿರ್ದೋಷವಾದ್ದರಿಂದ ಅಪ್ರಮಾಣ್ಯವು ದೃಷ್ಟವಲ್ಲ. ವೇದದ ಪ್ರಾಮಾಣ್ಯಕ್ಕೆ ವಿರೋಧವಾಗದಂತೆ ಈ ವಾಕ್ಯಗಳಿಗೆ ಅರ್ಥಮಾಡಬೇಕು. ಇಲ್ಲಿ ಮಣ್ಣು ಮುಂತಾದವುಗಳಿಂದ ಅವುಗಳ ಅಭಿಮಾನಿ ದೇವತೆಗಳನ್ನು ತೆಗೆದುಕೊಳ್ಳಬೇಕು. ಆಗ ಈ ವಾಕ್ಯಗಳು ಅಪ್ರಮಾಣವಾಗುವುದಿಲ್ಲ. ಆದ್ದರಿಂದ ವೇದಗಳಿಂದ ವಿಷ್ಣುವಿಗೆ ಜಗತ್ಕಾರಣತ್ವವು ಸಿದ್ಧವಾಗುತ್ತದೆ.

### ೪. ಅಸದಧಿಕರಣ (ಶ್ರುತಿಸಾಮ್ಯವೆಂಬ ಯುಕ್ತಿ)

ಪೂರ್ವಪಕ್ಷ – ವಿಷ್ಣುವಿಗೆ ಜಗತ್ಕಾರಣವನ್ನು ಹೇಳುವ ವಾಕ್ಯಗಳಂತೆಯೇ ಅಸತ್ತಿಗೆ ಜಗತ್ಕಾರಣವನ್ನು ಹೇಳುವ ಅಸದೇವೇದಮಗ್ರ ಆಸೀತ್ ಇತ್ಯಾದಿ ವೇದವಾಕ್ಯಗಳಿವೆ. ಇವೆರಡೂ ಶ್ರುತಿಗಳೇ ಆದ್ದರಿಂದ ಪ್ರಾಮಾಣ್ಯವು ಸಮಾನವಾಗಿದೆ. ಆದ್ದರಿಂದ ವಿಷ್ಣುವೇ ಜಗತ್ಕಾರಣವೆಂಬುದು ನಿಶ್ಚಯವಾಗುವುದಿಲ್ಲ.

ಸಿದ್ಧಾಂತ – ವಿಷ್ಣುವಿಗೆ ಜಗತ್ಕಾರಣವನ್ನು ಹೇಳುವ ವಾಕ್ಯಗಳು ಅನೇಕ ವಾಕ್ಯಗಳಿವೆ. ಇಷ್ಟೇ ಅಲ್ಲದೆ ಅಸತ್ ಇತ್ಯಾದಿ ಎಲ್ಲ ಶಬ್ದಗಳೂ ವಿಷ್ಣುವನ್ನೇ ಹೇಳುತ್ತವೆ ಎಂಬುದಕ್ಕೂ ಪ್ರಮಾಣವಾಗಿ ಅನೇಕ ಶ್ರುತಿಗಳಿವೆ. ಅಸದಾದಿಗಳೂ ಮುಖ್ಯಾರ್ಥದಲ್ಲಿ ವಿಷ್ಣುವನ್ನೇ ಹೇಳುತ್ತವೆ. ಆದ್ದರಿಂದ ವಿಷ್ಣುವೇ ಜಗತ್ಕಾರಣನು.

### ೫. ಭೋಕ್ತ್ರಧಿಕರಣ (ಬಲೋದ್ಭವವೆಂಬ ಯುಕ್ತಿ)

ಪೂರ್ವಪಕ್ಷ – ಮುಕ್ತನಾದ ಜೀವನಿಗೂ ಈಶ್ವರನಿಗೂ ಐಕ್ಯವನ್ನು ಹೇಳುವ

ಶ್ರುತಿಯಿದೆ. ಈ ಶ್ರುತಿಯ ಬಲದಿಂದ, ಜೀವರಿಗಿಂತ ಅಭಿನ್ನನಾದ ಈಶ್ವರನಲ್ಲಿ ಜಗತ್ಕಾರಣತ್ವ ಕೂಡುವುದಿಲ್ಲ. ಹೀಗೆ ಪೂರ್ವಪಕ್ಷಯುಕ್ತಿಯು ಶ್ರುತಿಬಲೋದ್ಭವು.

ಸಿದ್ಧಾಂತ – ನಿರಂಜನಃ ಪರಮಂ ಸಾಮ್ಯಮುಪೈತಿ ಎಂಬ ಶ್ರುತಿಯಂತೆ ಮುಕ್ತ ಜೀವರಿಗೂ ಪರಮಾತ್ಮನಿಗೂ ಭೇದವೇ ಇದೆಯೆಂದು ಸಿದ್ಧವಾಗಿದೆ. ಪೂರ್ವಪಕ್ಷಿಗಳು ಉದಾಹರಿಸುವ ಪರೇऽವ್ಯಯೇ ಸರ್ವ ಏಕೀಭವಂತಿ ಎಂಬ ಶ್ರುತಿಯಲ್ಲಿ ಒಂದಾದರು ಎಂದರೆ ಒಂದೇ ಸ್ಥಾನವನ್ನು ಹೊಂದಿದರು ಅಥವಾ ಒಂದೇ ಅಭಿಪ್ರಾಯವುಳ್ಳವರಾದರು ಎಂದರ್ಥ. ಈ ಶ್ರುತಿಯಿಂದಲೂ ಜೀವೇಶ್ವರಿಗೆ ಐಕ್ಯವು ಸಿದ್ಧವಾಗುವುದಿಲ್ಲ. ಇಲ್ಲಿ ಸಿದ್ಧಾಂತಯುಕ್ತಿಯೂ ಶ್ರುತಿಬಲೋದ್ಭವವೇ. ಇದು ಪೂರ್ವಪಕ್ಷಯುಕ್ತಿಗಿಂತ ಪ್ರಬಲವು. ಆದ್ದರಿಂದ ವಿಷ್ಣುವೇ ಜಗತ್ಕಾರಣನು.

### ೬. ಆರಂಭಣಾಧಿಕರಣ (ಸರ್ವಾನುಸಾರವೆಂಬ ಯುಕ್ತಿ)

ಪೂರ್ವಪಕ್ಷ – ಲೋಕದಲ್ಲಿ ಕುಂಬಾರಾದಿಗಳು ಮಡಿಕೆ ಮುಂತಾದವುಗಳನ್ನು ಮಾಡಬೇಕಾದರೆ ಸ್ವತಂತ್ರವಾದ ಮಣ್ಣು ಮುಂತಾದ ಸಾಧನಗಳನ್ನು ಅವಲಂಬಿಸಿಯೇ ಮಾಡುವುದು ಕಂಡಿದೆ. ಹಾಗೆಯೇ ಪರಮಾತ್ಮನಿಂದ ಈ ಲೋಕವು ಸೃಷ್ಟಿಯಾಗಬೇಕಾದರೂ ಪ್ರಕೃತಿ ಇತ್ಯಾದಿ ಸ್ವತಂತ್ರವಾದ ಸಾಧನಗಳು ಅವಲಂಬಿಸಿಯೇ ಆಗಬೇಕು. ಹೀಗೆ ಸಾಧನಾಂತರ ಸಾಪೇಕ್ಷವಿರುವ ಕರ್ತೃವಿನಲ್ಲಿ ಸರ್ವಗುಣತ್ವವು ಅಸಂಭವ. ಆದ್ದರಿಂದ ಪರಮಾತ್ಮನಿಗೂ ಸರ್ವಗುಣತ್ವವಿಲ್ಲ.

ಸಿದ್ಧಾಂತ – ಪರಮಾತ್ಮನು ಸರ್ವೇಶ್ವರ ಸರ್ವಶಕ್ತ ಹಾಗೂ ಎಲ್ಲವೂ ಅವನ ಅಧೀನವೇ ಎಂದು ಶ್ರುತಿಗಳಿಂದ ತಿಳಿಯುತ್ತದೆ. ಪ್ರಕೃತ್ಯಾದಿ ಯಾವ ಸಾಧನವೂ ಸ್ವತಂತ್ರವಲ್ಲ. ವಿಷ್ಣುವೊಬ್ಬನೇ ಸ್ವತಂತ್ರನು. ಆದ್ದರಿಂದ ಅವನಿಗೆ ಸರ್ವಗುಣತ್ವವೂ ಸರ್ವಕರ್ತೃತ್ವವೂ ಕೂಡುವುದು.

### ೭. ಇತರವ್ಯಪದೇಶಾಧಿಕರಣ (ಲಘುತ್ವವೆಂಬ ಯುಕ್ತಿ)

ಪೂರ್ವಪಕ್ಷ – ನಮ್ಮ ಕಣ್ಣಿಗೆ ಕಾಣುವ ಜೀವನೇ ಕರ್ತೃವೆಂದು ಅಂಗೀಕರಿಸಿದರೆ ಲಾಘವವಿದೆ. ಅದನ್ನು ಬಿಟ್ಟು ಕಾಣದ ಈಶ್ವರನಿಗೆ ಕರ್ತೃತ್ವವನ್ನು ಅಂಗೀಕರಿಸುವುದು ಸರಿಯಲ್ಲ. ಕಲ್ಪನಾಗೌರವದ ಕಾರಣ ಈಶ್ವರನಿಗೆ ಜಗತ್ಕಾರಣತ್ವವು ಕೂಡುವುದಿಲ್ಲ.

ಸಿದ್ಧಾಂತ – ನಾನ್ಯತೋಸ್ತಿ ಕರ್ತಾ ಮುಂತಾದ ಶ್ರುತಿಗಳಿಂದ ಬ್ರಹ್ಮನಿಗೇ ಕರ್ತೃತ್ವವು ಸಿದ್ಧವಾಗಿದೆ. ಜೀವನಿಗೆ ಘಟಾದಿ ಕರ್ತತ್ವವು ಕಂಡಿದ್ದರೂ, ಮಹದಾದಿ ಕರ್ತೃತ್ವವು ಯಾವ ಪ್ರಮಾಣದಿಂದಲೂ ಸಿದ್ಧವಾಗಿಲ್ಲ. ಆದ್ದರಿಂದ ಜೀವನಿಗೆ ಕರ್ತತ್ವವನ್ನಂಗೀಕರಿಸಿದರೆ ಕಲ್ಪನಾಗೌರವ. ಈಶ್ವರನಿಗೆ ಕರ್ತತ್ವವನ್ನು ಒಪ್ಪುವುದು ಲಾಘವ. ಆದ್ದರಿಂದ ಈಶ್ವರನಿಗೆ ಜಗತ್ಕರ್ತೃತ್ವ ಸಿದ್ಧಿಸುವುದು.

## ೮. ಶಬ್ದಮೂಲತ್ವಾಧಿಕರಣ (ವಿಶೇಷಾದರ್ಶನವೆಂಬ ಯುಕ್ತಿ)

ಪೂರ್ವಪಕ್ಷ – ಜೀವನಿಗೆ ಸ್ವತಂತ್ರವಾದ ಕರ್ತತ್ವವಿದ್ದರೆ ಅವನು ತನಗೆ ಯಾವಾಗಲೂ ಹಿತವನ್ನೇ ಮಾಡಿಕೊಳ್ಳಬೇಕು ಮತ್ತು ಎಂದೂ ಅಹಿತವನ್ನು ಮಾಡಿಕೊಳ್ಳಬಾರದು. ಆದರೆ ಇದು ಲೋಕದಲ್ಲಿ ಕಂಡಿಲ್ಲ. ಇದೇ ವಿಶೇಷಾ– ದರ್ಶನವು. ಈ ರೀತಿಯ ದೋಷದಿಂದಾಗಿ ಜೀವನಿಗೆ ಸ್ವತಂತ್ರ ಕರ್ತೃತ್ವವಿಲ್ಲವೆಂದು ಹಿಂದಿನ ಅಧಿಕರಣದಲ್ಲಿ ಸಾಧಿಸಿಲಾಗಿದೆ. ಹೀಗೆ ಜೀವನಲ್ಲಿರುವ ದೋಷವು ಈಶ್ವರನಲ್ಲಿಯೂ ಇರಬಹುದಾದ್ದರಿಂದ ಅವನಿಗೆ ಜಗತ್ಕಾರಣತ್ವವು ಕೂಡುವುದಿಲ್ಲ.

ಸಿದ್ಧಾಂತ – ಪರಮಾತ್ಮನು ವಿಚಿತ್ರಶಕ್ತಿವಂತನು, ಸರ್ವಶಕ್ತನು ಇತ್ಯಾದಿ ಶ್ರುತಿಗಳಿಂದ ಸಿದ್ಧವಾಗಿರುವುದರಿಂದ ಅವನಲ್ಲಿ ಹಿತಾಕರಣಾದಿ ದೋಷಗಳ ಪ್ರಸಕ್ತಿ ಇಲ್ಲ. ಆದರೆ ಜೀವನು ಸರ್ವಶಕ್ತನೆಂದು ಹೇಳುವ ಯಾವ ಶ್ರುತಿಯೂ ಇಲ್ಲವಾದ್ದರಿಂದ, ಅವನಿಗೆ ದೋಷಗಳು ಬರುತ್ತವೆ. ಆದ್ದರಿಂದ ಈಶ್ವರನೇ ಜಗತ್ಕಾರಣನು.

## ೯. ನ ಪ್ರಯೋಜನಾಧಿಕರಣ (ಅಫಲವೆಂಬ ಯುಕ್ತಿ)

ಪೂರ್ವಪಕ್ಷ – ಈಶ್ವರನಿಗೆ ಸೃಷ್ಟ್ಯಾದಿಗಳಿಂದ ಪ್ರಯೋಜನವಿದ್ದರೆ ಅವನು ಅದಕ್ಕೆ ಮುಂಚೆ ಅಪೂರ್ಣನೆನಿಸುವನು. ಪ್ರಯೋಜನವಿಲ್ಲದಿದ್ದರೆ ಪ್ರವೃತ್ತಿಯೇ ಕೂಡುವುದಿಲ್ಲ. ಹೀಗೆ ಎರಡೂ ಪಕ್ಷಗಳಲ್ಲೂ ದೋಷವಿದೆ. ಆದ್ದರಿಂದ ಈಶ್ವರನು ಜಗತ್ಕಾರಣನಲ್ಲ.

ಸಿದ್ಧಾಂತ – ಅಥೈಷ ಏವ ಪರಮ ಆನಂದಃ (ಈ ವಿಷ್ಣುವು ಸಂಪೂರ್ಣವಾದ ಆನಂದವುಳ್ಳವನು) ಎಂಬ ಶ್ರುತಿಯಂತೆ ಪರಮಾತ್ಮನು ಗುಣಪರಿಪೂರ್ಣನು. ಅವನಿಗೆ ಸೃಷ್ಟಿಯಿಂದ ಯಾವುದೇ ಫಲಾಪೇಕ್ಷೆಯಿಲ್ಲ. ಫಲಾಪೇಕ್ಷೆಯುಳ್ಳವನಿಗೆ ಸರ್ವಕರ್ತತ್ವಾದಿ ಶಕ್ತಿಯು ಕಂಡಿಲ್ಲ. ಆದ್ದರಿಂದ ಫಲಾಪೇಕ್ಷೆಯಿಲ್ಲದ ಪರಮಾತ್ಮನು ಸರ್ವಕರ್ತನಾಗಿದ್ದಾನೆ. ಅವನ ಸೃಷ್ಟಿಯು ಕೇವಲ ಲೀಲಾರೂಪವಾದುದು. ಫಲವಿಲ್ಲ ಎಂಬ ಯುಕ್ತಿಯಿಂದಲೇ ಪರಮಾತ್ಮನು ಜಗತ್ಕಾರಣನೆಂದು ಸಿದ್ಧವಾಗುತ್ತದೆ.

## ೧೦. ವೈಷಮ್ಯ ನೈರ್ಘೃಣ್ಯಾಧಿಕರಣ (ಇಷ್ಟಾಸಿದ್ಧಿಯೆಂಬ ಯುಕ್ತಿ)

ಪೂರ್ವಪಕ್ಷ – ಈಶ್ವರನು ಸರ್ವಕರ್ತನೆಂದು ಹಿಂದೆ ನಿರ್ಣಯಿಸಲಾಗಿದೆ. ಹಾಗಾದರೆ ಅವನು ಜೀವಾದಿಗಳ ಕರ್ಮವನ್ನು ಅನುಸರಿಸಿ ಅವರಿಗೆ ಸುಖದುಃಖಾದಿಗಳನ್ನು ನೀಡುತ್ತಾನೋ ಅಥವಾ ತನಗೆ ತೋಚಿದಂತೆ ಫಲ ನೀಡುತ್ತಾನೋ ಎಂದು ಕೇಳಿದರೆ, ಮೊದಲನೆಯ ಪಕ್ಷದಲ್ಲಿ ಪರಮಾತ್ಮನ ಸ್ವಾತಂತ್ರ್ಯಕ್ಕೆ ಹಾನಿ. ಸರ್ವಕರ್ತೃತ್ವ ಹೇಳುವ ಶ್ರುತಿಗೆ ವಿರೋಧ. ಎರಡನೆಯ ಪಕ್ಷದಲ್ಲಿ ಜೀವನು ಕರ್ಮಗಳನ್ನು ಮಾಡುವುದೇ ಬೇಕಿಲ್ಲ. ಇದರಿಂದ ಜೀವನಿಗೆ

ಕರ್ಮಗಳನ್ನು ವಿಧಿಸುವ ಶ್ರುತಿಗೆ ವಿರೋಧ. ಹೀಗೆ ಇಷ್ಟವಾದ ಸ್ವಾತಂತ್ರ್ಯದಿಂದ ಸರ್ವಕರ್ತತ್ವದ ಅಸಿದ್ಧಿ.

ಸಿದ್ಧಾಂತ – ಪರಮಾತ್ಮನು ಯಾರನ್ನು ಊರ್ಧ್ವಲೋಕಗಳಿಗೆ ಒಯ್ಯಬೇಕೆಂದು ಬಯಸುತ್ತಾನೋ ಅವನಿಂದ ಸಾಧುಕರ್ಮಗಳನ್ನು ಮಾಡಿಸುತ್ತಾನೆ ಇತ್ಯಾದಿ ಶ್ರುತಿಯಂತೆ ಕರ್ಮಗಳು ಪರಮಾತ್ಮನ ಅಧೀನವಾಗಿವೆ. ಆದರೂ ಆ ಕರ್ಮಗಳ ಅನುಸಾರ ಫಲ ಕೊಡುತ್ತಾನೆ. ಹೀಗೆ ಅಂಗೀಕರಿಸದಿದ್ದರೆ ಇಷ್ಟವಾದ ವೇದಗಳ ಪ್ರಾಮಾಣ್ಯವೇ ಸಿದ್ಧಿಸದು. ಆದ್ದರಿಂದ ಪರಮಾತ್ಮನಿಗೆ ಸರ್ವಕರ್ತತ್ವವು ಸಿದ್ಧಿಸುತ್ತದೆ.

### ೧೧. ಸರ್ವಧರ್ಮೋಪಪತ್ತ್ಯಧಿಕರಣ (ನಿಯಮವೆಂಬ ಯುಕ್ತಿ)

ಪೂರ್ವಪಕ್ಷ – ಜೀವರಲ್ಲಿ ಯಾರಲ್ಲೂ ಸರ್ವಗುಣಪೂರ್ಣತ್ವವು ಕಂಡಿಲ್ಲ. ಈಶ್ವರನೂ ಜೀವನಂತೆ ಚೇತನ. ಆದ್ದರಿಂದ ಈಶ್ವರನೂ ಜೀವನಂತೆ ಅಪೂರ್ಣನೇ ಆಗಿರಬೇಕು. ಇಲ್ಲಿ ಚೇತನರೆಲ್ಲರೂ ಅಪೂರ್ಣರೆಂಬ ನಿಯಮವೇ ಯುಕ್ತಿ.

ಸಿದ್ಧಾಂತ – ಈಶ್ವರನು ಚೇತನನಾದರೂ, ಜೀವರುಗಳಂತೆ ಅಸ್ವತಂತ್ರನಲ್ಲ. ಪರಮಾತ್ಮನು ಸ್ವತಂತ್ರನೆಂದು ಶ್ರುತಿಗಳು ಹೇಳುತ್ತವೆ. ಸ್ವತಂತ್ರನಾದವನು ಪೂರ್ಣನಾಗಿರಬೇಕೆಂದು ನಿಯಮ. ಆದ್ದರಿಂದ ವಿಷ್ಣುವು ಸರ್ವಗುಣಪೂರ್ಣ.

ಹೀಗೆ ಯಾವುದೇ ಯುಕ್ತಿಗಳಿಂದ ಈಶ್ವರನ ಗುಣಪೂರ್ಣತ್ವಕ್ಕೆ ವಿರೋಧವಿಲ್ಲ ಎಂದು ಈ ಪಾದದಲ್ಲಿ ನಿರ್ಣಯಿಸಲಾಗಿದೆ ಎಂಬುದಾಗಿ ಶ್ರೀಮದಾಚಾರ್ಯರು ಮೇಲಿನ ಶ್ಲೋಕಗಳಿಂದ ಶಿಷ್ಯರ ಬುದ್ಧಿಶಾಣತ್ವಸಿದ್ಧಿಗಾಗಿ ಈ ಪಾದದ ಎಲ್ಲ ಅಧಿಕರಣಗಳ ಪೂರ್ವಪಕ್ಷ ಹಾಗೂ ಸಿದ್ಧಾಂತಯುಕ್ತಿಗಳನ್ನು ಸಂಗ್ರಹವಾಗಿ ನೀಡಿದ್ದಾರೆ.

## ಸ್ಮೃತ್ಯಧಿಕರಣಮ್

ಹಿಂದಿನ ಅಧ್ಯಾಯದಲ್ಲಿ ಪರಬ್ರಹ್ಮನಾದ ವಿಷ್ಣುವಿಗೆ ಸಕಲ ಜಗಜ್ಜನ್ಮಾದಿಕಾರಣತ್ವ, ಸರ್ವಜ್ಞತ್ವಾದಿ ಸಕಲಗುಣಪೂರ್ಣತ್ವ, ಸಮಸ್ತ ದೋಷದೂರತ್ವ ಮೊದಲಾದವನ್ನು ಪ್ರತಿಪಾದಿಸಿರುವುದು ಪಾಶುಪತಾದಿ ಸ್ಮೃತಿಗಳಿಗೆ ವಿರುದ್ಧವಾದುದರಿಂದ ಕೂಡುವುದಿಲ್ಲ. ಆ ಸ್ಮೃತಿಗಳು ರುದ್ರಾದಿಗಳಿಗೆ ಜಗಜ್ಜನ್ಮಾದಿಕಾರಣತ್ವ ಮುಂತಾದವನ್ನು ಪ್ರತಿಪಾದಿಸುತ್ತವೆ. ಆ ಸ್ಮೃತಿಗಳಿಗೆ ಅನ್ಯಾರ್ಥಕಲ್ಪನೆಗೆ ಅವಕಾಶವಿರುವುದಿಲ್ಲ. ಆದಪ್ರಯುಕ್ತ ರುದ್ರಾದಿಗಳಿಗೆ ಜನ್ಮಾದಿಕಾರಣತ್ವವನ್ನು ಒಪ್ಪದಿದ್ದರೆ ಆ ಸ್ಮೃತಿಗಳಿಗೆ ಅಪ್ರಾಮಾಣ್ಯವು ಬರುವುದು ಎಂದು ಪೂರ್ವಪಕ್ಷ. ಇದು ಸರಿಯಲ್ಲ. ಏಕೆಂದರೆ ಪಂಚರಾತ್ರಾದಿ ಸ್ಮೃತಿಗಳು ವಿಷ್ಣುವಿಗೇ ಜಗಜ್ಜನ್ಮಾದಿಕಾರಣತ್ವವನ್ನು ಪ್ರತಿಪಾದಿಸುತ್ತವೆ. ಆ ಸ್ಮೃತಿಗಳಿಗೆ ಅರ್ಥಾಂತರವನ್ನು ಹೇಳಲು ಬರುವುದಿಲ್ಲವಾದ್ದರಿಂದ ಪಾಶುಪತಾದಿ ಸ್ಮೃತಿಗಳು

ಹೇಳುವಂತೆ ರುದ್ರಾದಿಗಳಿಗೆ ಜಗಜ್ಜನ್ಮಾದಿಕಾರಣತ್ವವನ್ನು ಒಪ್ಪಿದರೆ ಪಂಚರಾತ್ರಾದಿ ಸ್ಮೃತಿಗಳಿಗೆ ಅಪ್ರಾಮಾಣ್ಯರೂಪ ದೋಷವು ಬರುವುದು. ಆದಪ್ರಯುಕ್ತ ವಿಷ್ಣುವಿಗೇ ಜಗಜ್ಜನ್ಮಾದಿಕಾರಣತ್ವವನ್ನು ಒಪ್ಪಬೇಕು ಎಂಬುದು ಸಿದ್ಧಾಂತ.

**ಸೂತ್ರ– ಓಂ ಸ್ಮೃತ್ಯನವಕಾಶದೋಷಪ್ರಸಂಗ**

**ಇತಿ ಚೇನ್ನಾನ್ಯಸ್ಮೃತ್ಯನವಕಾಶದೋಷಪ್ರಸಂಗಾತ್ ಓಂ**

ಈ ಸೂತ್ರದ ವ್ಯಾಖ್ಯಾನದಲ್ಲಿ ಮೊದಲಿಗೆ 'ಆಪ್ತೈಃ' ಇತ್ಯಾದಿ ವಾಕ್ಯದಿಂದ ಪೂರ್ವಪಕ್ಷವನ್ನು ಸ್ಪಷ್ಟಪಡಿಸಿ, 'ಇತಿ ಚೇದ್' ಇತ್ಯಾದಿ ವಾಕ್ಯದಿಂದ ಸಿದ್ಧಾಂತವನ್ನು ಸಮರ್ಥಿಸುತ್ತಾರೆ

**ಆಪ್ತೈಃ ಪ್ರತ್ಯಕ್ಷತೋ ದೃಷ್ಟ್ವಾ ಪ್ರೋಕ್ತಮರ್ಥಂ ಕಥಂ ಶ್ರುತಿಃ ।**

**ಪಿಪೀಲಿಕಾಲಿಪಿನಿಭಾ ವಾರಯೇತ್ಸರ್ವಗಾ ಹಿ ತೇ ॥೫॥**

ರುದ್ರ, ಕಪಿಲ ಮೊದಲಾದವರಲ್ಲಿ ಆಪ್ತತ್ವವಿದೆ. ಅವರಿಂದ ಪ್ರತ್ಯಕ್ಷವಾಗಿ ಕಂಡು ಹೇಳಲ್ಪಟ್ಟ ಶಿವಾದಿಗಳಿಗೆ ಜಗತ್ಕಾರಣತ್ವಾದಿ ರೂಪವಾದ ಅರ್ಥವನ್ನು, ಪಿಪೀಲಿಕಾ ಲಿಪಿಗೆ ಸಮಾನವಾದ ಶ್ರುತಿಯು ನಿರಾಕರಿಸಲು ಸಾಧ್ಯವಿಲ್ಲ. ಇರುವೆಯು ಮಣ್ಣಿನ ಮೇಲೆ ಹರಿದಾಡಿದಾಗ ಮೂಡುವ ಅಕ್ಷರಗಳು ಪ್ರಮಾಣವಾಗಲು ಸಾಧ್ಯವಿಲ್ಲ. ಏಕೆಂದರೆ ಆ ಅಕ್ಷರಗಳನ್ನು ಇರುವೆಯು ಬುದ್ಧಿಪೂರ್ವಕವಾಗಿ ರಚಿಸಿರುವುದಿಲ್ಲ. ಆದರಂತೆಯೇ ಶ್ರುತಿಯು ಅಪೌರುಷೇಯವಾದ್ದರಿಂದ ಯಾವುದೇ ಪುರುಷನಿಂದ ಬುದ್ಧಿಪೂರ್ವಕವಾಗಿ ರಚಿಸಲ್ಪಟ್ಟಿರುವುದಿಲ್ಲ. ರುದ್ರಾದಿಗಳಾದರೋ ಸರ್ವಜ್ಞರು ಎಂದು ಪ್ರಸಿದ್ಧ. ಆದಪ್ರಯುಕ್ತ ಪಾಶುಪತಾದಿ ಸ್ಮೃತಿಗಳ ಪ್ರಾಮಾಣ್ಯವನ್ನು ಶ್ರುತಿಯು ಹೇಗೆ ತಾನೇ ನಿರಾಕರಿಸೀತು?

ಈ ಪ್ರಕಾರವಾಗಿ ಪೂರ್ವಪಕ್ಷದ ಸೂತ್ರಾಂಶವನ್ನು ಸ್ಪಷ್ಟಪಡಿಸಿ ಈಗ ಸೂತ್ರದ ಸಿದ್ಧಾಂತಾಂಶವನ್ನು ಹೇಳುತ್ತಾರೆ –

**ಇತಿ ಚೇದ್ಯದ್ಯಶೇಷಜ್ಞಾ ರುದ್ರಾದ್ಯಾ ಹರಿಪೂರ್ವಕಾಃ ।**

**ಕಿಂ ನಾಶೇಷವಿದೋ ಮಾನಂ ಹ್ಯುಭಯತ್ರ ಸಮಂ ಭವೇತ್ ॥೬॥**

**ನ ಚಾಪ್ತಿನಿಶ್ಚಯಸ್ತತ್ರ ಶಕ್ಯತೇ ವ್ಯಭಿಚಾರತಃ ।**

ಹೀಗೆ ಹೇಳಿದರೆ ಅದು ಸರಿಯಲ್ಲ. ರುದ್ರಾದಿಗಳು ಸರ್ವಜ್ಞರೂ ಆಪ್ತರೂ ಎಂದಾದರೆ, ಪಂಚರಾತ್ರಾದಿ ಸ್ಮೃತಿಗಳನ್ನು ರಚಿಸಿರುವ ಶ್ರೀಹರಿಯೇ ಮೊದಲಾದವರು ಸರ್ವಜ್ಞರೂ ಆಪ್ತರೂ ಆಗಿರಲು ಸಾಧ್ಯವಿಲ್ಲವೇ?

ಪೂರ್ವಪಕ್ಷಿಗಳು ಯಾವಕಾರಣದಿಂದ ರುದ್ರಾದಿಗಳಿಗೆ ಆಪ್ತತ್ವವನ್ನು ಪ್ರಮಾಣವೆಂದು ಹೇಳುವರೋ ಅದೇ ಕಾರಣದಿಂದಲೇ ಸಿದ್ಧಾಂತಿಗಳೂ ಶ್ರೀಹರಿ ಮನು ಮೊದಲಾದವರಿಗೆ ಆಪ್ತತ್ವವನ್ನು ಪ್ರತಿಪಾದಿಸುವರು. ಈ ರೀತಿ ಎರಡು ಸ್ಮೃತಿಗಳೂ ಪ್ರಾಮಾಣ್ಯ ವಿಷಯದಲ್ಲಿ ಸಮಾನವಾಗುತ್ತವೆ. ಹೀಗಿದ್ದರೂ ಈ ಎರಡು ಸ್ಮೃತಿಗಳಲ್ಲಿ ಯಾವುದು ಮೂಲಪ್ರಮಾಣದಿಂದ ಕೂಡಿದೆಯೋ ಅದಕ್ಕೇ ಪ್ರಾಮಾಣ್ಯವು. ಮೂಲಪ್ರಮಾಣದ ಸಂವಾದವನ್ನು ಹೊಂದಿಲ್ಲದಿರುವ ಸ್ಮೃತಿಯು ಪ್ರಮಾಣವಾಗಲಾರದು. ಪಂಚರಾತ್ರಾದಿ ಸ್ಮೃತಿಗಳನ್ನು ನಿರ್ಮಿಸಿರುವ ನಾರಾಯಣನಲ್ಲಿ ಎಲ್ಲ ಶಾಸ್ತ್ರಕಾರರೂ ಆಪ್ತತ್ವವನ್ನು ಅಂಗೀಕರಿಸಿದ್ದಾರೆ. ಆದರೆ ಶಿವಾದಿಗಳಲ್ಲಿ ಆಪ್ತಿನಿಶ್ಚಯಕ್ಕೆ ಉಪಾಯವಿಲ್ಲ.

**ವಿವರಣೆ:** 'ನಿತ್ಯಂ ವೃದ್ಧಿಕ್ಷಯಾಪೇತಮ್' ಇತ್ಯಾದಿಯಾಗಿ ಪರಮ ಪುರುಷನಾದ ನಾರಾಯಣನಿಂದ ಇತರರಲ್ಲಿ ಸರ್ವಜ್ಞತ್ವದ ಅಭಾವವನ್ನು ಹೇಳಲಾಗಿದೆ. ಹೀಗೆ ಶಿವಾದಿಗಳಲ್ಲಿ ಸರ್ವಜ್ಞತ್ವಕ್ಕೆ ವ್ಯಭಿಚಾರ ಬರುವುದರಿಂದ ಅವರಿಗೆ ಆಪ್ತತ್ವವನ್ನು ಹೇಳಲಿಕ್ಕೆ ಬರುವುದಿಲ್ಲ. ಅಲ್ಲದೆ ಪಾಶುಪತಾದಿ ಸ್ಮೃತಿಗಳಲ್ಲಿ ಹೇಳಿದಂತೆ ಅನುಷ್ಠಾನ ಮಾಡಿದರೆ ದೃಷ್ಟ ಫಲವು ಕಂಡುಬರುವುದಿಲ್ಲವಾದ್ದರಿಂದ ರುದ್ರಾದಿಗಳಿಗೆ ಆಪ್ತಿನಿಶ್ಚಯಕ್ಕೆ ಭಂಗ ಬರುವುದು. ಆದಪ್ರಯುಕ್ತ ಪಾಶುಪತಾದಿ ಸ್ಮೃತಿಗಳು ಪ್ರಮಾಣವಾಗಲಾರವು.

ಹಾಗಾದರೆ ಕೆಲವು ಕಡೆ ಪಂಚರಾತ್ರಾದಿ ಸ್ಮೃತಿಗಳಲ್ಲಿ ಹೇಳಿದ್ದನ್ನು ಮಾಡಿದರೂ ದೃಷ್ಟಫಲವು ಕಾಣದಿರುವುದರಿಂದ ಅವುಗಳಿಗೂ ಫಲವ್ಯಭಿಚಾರ ಬರುವುದು. ಆದಪ್ರಯುಕ್ತ ಪಂಚರಾತ್ರಾದಿ ಸ್ಮೃತಿಗಳಿಗೂ ಅಪ್ರಾಮಾಣ್ಯ ಬರುವುದರಿಂದ ಅವುಗಳ ವಿರೋಧದಿಂದ ಪಾಶುಪತಾದಿ ಸ್ಮೃತಿಗಳು ಅಪ್ರಮಾಣ ಎಂದು ಹೇಳಕೂಡದು. ಹೀಗೆ ಹೇಳಿದರೆ –

**ನ ಚಾಸ್ಯಾ ವ್ಯಭಿಚಾರೇಪಿ ಹೀಯತೇ ಮಾನತಾ ಕ್ವಚಿತ್ ।।೭।।**

**ನಿರ್ದೋಷವಾಕ್ಯಮೂಲತ್ವಾನ್ನ ಚ ತದ್ಯುಕ್ತಿಮೂಲತಾ ।**

ಈ ಪಂಚರಾತ್ರಾದಿ ಸ್ಮೃತಿಗಳಿಗೆ ಕೆಲವು ಕಡೆ ಫಲವ್ಯಭಿಚಾರವಿದ್ದರೂ, ಅವುಗಳ ಪ್ರಾಮಾಣ್ಯಕ್ಕೆ ಭಂಗಬರುವುದಿಲ್ಲ. ಏಕೆಂದರೆ ಅವು ನಿರ್ದೋಷವಾಕ್ಯರೂಪವಾದ ವೇದಗಳನ್ನೇ ಮೂಲವನ್ನಾಗಿ ಹೊಂದಿವೆ. ಅವುಗಳ ಪ್ರಾಮಾಣ್ಯವು ಪಾಶುಪತಾದಿ ಸ್ಮೃತಿಗಳಂತೆ ಫಲಜನಕತ್ವಾದಿರೂಪವಾದ ಯುಕ್ತಿಮೂಲತ್ವವನ್ನು ಹೊಂದಿಲ್ಲ.

ಹಾಗಾದರೆ ಪಂಚರಾತ್ರಾದಿ ಸ್ಮೃತಿಗಳಿಗೆ ಪ್ರಾಮಾಣ್ಯವನ್ನು ಅಂಗೀಕರಿಸುವವರು ಸರ್ವಥಾ ಫಲಜನಕತ್ವಾದಿ ಪ್ರವೃತ್ತಿ ಸಾಮರ್ಥ್ಯವನ್ನು ಅಂಗೀಕರಿಸಬೇಕು. ಫಲವ್ಯಭಿಚಾರಕ್ಕೆ ಕರ್ತೃ–ಕರಣಾದಿಗಳಲ್ಲಿರುವ ವೈಗುಣ್ಯ ಅಥವಾ ದೋಷವೇ

ಕಾರಣವೆಂದು ಒಪ್ಪಬೇಕು. ಇಲ್ಲದಿದ್ದರೆ ಫಲವ್ಯಭಿಚಾರವಾದುದು ಪ್ರಮಾಣವೆಂದರೆ ವ್ಯಾಹತವಾಗುವುದು. ಅಲ್ಲದೇ ಫಲಸಂವಾದದಿಂದ ಸುಲಭವಾಗಿ ಪ್ರಾಮಾಣ್ಯವನ್ನು ನಿಶ್ಚಯಿಸಲು ಬರುವಾಗ, 'ನ ಚ ತದ್ಯುಕ್ತಿಮೂಲತಾ' ಎನ್ನುವುದು ಹೇಗೆ ಕೂಡುವುದು ಎಂದು ಜಿಜ್ಞಾಸೆಗಾಗಿ ಕೇಳಿದರೆ –

**ವೇದೋಕ್ತಸ್ಯಾಧಿಕಾರಸ್ಯ ದುರ್ನಿರೂಪತ್ವತಃ ಸದಾ ।।೮।।**

**ನಿಯಮೋ ವ್ಯಭಿಚಾರೋ ವಾ ನೈವ ಜ್ಞಾತುಂ ಹಿ ಶಕ್ಯತೇ ।**

ವೇದೋಕ್ತ ಅಥವಾ ಪಂಚರಾತ್ರಾದಿ ಆಗಮಗಳಲ್ಲಿ ಹೇಳಲ್ಪಟ್ಟ ಅಧಿಕಾರ ಮತ್ತು ಸಾಧನಾನುಷ್ಠಾನಕ್ಕೆ ಉಕ್ತವಾದ ಫಲವು ಸ್ವಾಭಾವಿಕವಾಗಿಯೇ ನಮ್ಮ ಪ್ರತ್ಯಕ್ಷಕ್ಕೆ ವಿಷಯವಲ್ಲವಾದ್ದರಿಂದ, ಫಲವಿಷಯದಲ್ಲಿ ನಿಯಮವಾಗಲೀ ವ್ಯಭಿಚಾರವಾಗಲೀ ತಿಳಿಯಲು ಶಕ್ಯವಿಲ್ಲ. ಆದಪ್ರಯುಕ್ತ ಫಲಸಂವಾದದಿಂದ ಪ್ರಾಮಾಣ್ಯಾದಿಗಳನ್ನು ನಿಶ್ಚಯಿಸುವುದು ಸಾಧ್ಯವಿಲ್ಲ.

ಹಾಗಾದರೆ ಪಂಚರಾತ್ರಾದಿಗಳ ಪ್ರಾಮಾಣ್ಯವನ್ನು ಇಷ್ಟಪಡುವವನು ಫಲ ಕಾಣದಿರುವುದಕ್ಕೆ ಅಧಿಕಾರಾದಿ ವೈಕಲ್ಯವನ್ನು ಕಲ್ಪಿಸುವಂತೆ ನಾನೂ ಕೂಡ ಪಾಶುಪತಾದಿ ಸ್ಮೃತಿಗಳಲ್ಲಿ ಫಲವ್ಯಭಿಚಾರವು ಅಧಿಕಾರಾದಿ ವೈಕಲ್ಯ ನಿಮಿತ್ತಕವೆಂದು ಕಲ್ಪಿಸುತ್ತೇನೆ ಎಂದು ಪೂರ್ವಪಕ್ಷಿಯು ಹೇಳಿದರೆ, ಅದು ಅಯುಕ್ತವೆಂದು ಹೇಳುತ್ತಾರೆ–

**ಅಧಿಕಾರೋ ಹಿ ಸುಲಭಃ ಕಥಿತೋಽನ್ಯಾಗಾಮೇಷ್ವಲಮ್ ।।೯।।**

**ವೇದೋಕ್ತೋ ಹ್ಯಧಿಕಾರಸ್ತು ದುರ್ಲಭಃ ಸರ್ವಮಾನುಷೈಃ ।**

ಪಾಶುಪತಾದಿ ಆಗಮಗಳಲ್ಲಿ ಹೇಳಲ್ಪಟ್ಟ ಅಧಿಕಾರವು (ಸಾಧನವೂ ಕೂಡ) ಸುಲಭವಾಗಿ ಅಂದರೆ ಅನಾಯಾಸವಾಗಿ ಸಾಧ್ಯವಾಗುವಂಥಹದು. ವೇದಗಳಲ್ಲಿ ಹೇಳಲ್ಪಟ್ಟ ಅಧಿಕಾರವಾದರೋ ಎಲ್ಲ ಮನುಷ್ಯರಿಂದ ಹೊದಲು ಅಶಕ್ಯವಾಗಿದೆ. ಇದು ಪ್ರಸಿದ್ಧವು. ಆದಪ್ರಯುಕ್ತ ಪಂಚರಾತ್ರಾದಿ ಆಗಮಗಳಲ್ಲಿ ಅಧಿಕಾರ ವೈಕಲ್ಯವನ್ನು ಕಲ್ಪಿಸುವುದು ಅಸಂಭಾವಿತವೇನಲ್ಲ ಎಂದು ಭಾವ.

ಹಾಗಾದರೆ ಬೇರೆ ಆಗಮಗಳಲ್ಲಿ ಅಧಿಕಾರ ಸಾಧನೆಯು ಸುಲಭ ಎಂದು ಹೇಗೆ ಹೇಳುತ್ತೀರಿ ಎಂದು ಕೇಳಿದರೆ –

**ಅನ್ಯಾಗಾಮೇಷು ವಿಪ್ರತ್ವಮಪಿ ಚಂಡಾಲಜನ್ಮನಾಮ್ ।।೧೦।।**

**ಮಂಡಲಾಂತಃಪ್ರವೇಶೇನ ಕ್ರಮಶಃ ಪ್ರತಿಪಾದ್ಯತೇ ।**

ಬೇರೆ ಆಗಮಗಳಲ್ಲಿ ಹೇಳಿರುವ ಪ್ರಕಾರ, ಅನೇಕ ಜನ್ಮಗಳ ಮಹಾತಪಸ್ಸು

ಇತ್ಯಾದಿಗಳಿಂದಲೂ ಹೊಂದಲಸಾಧ್ಯವಾದ ಬ್ರಾಹ್ಮಣ್ಯ ಯತಿತ್ವ ಇತ್ಯಾದಿಗಳೂ ಕೂಡ, ಕರ್ಮದಿಂದ ಅಥವಾ ಹುಟ್ಟಿನಿಂದ ಚಂಡಾಲನಾದವನಿಗೂ ಕ್ರಮವಾಗಿ ಮಂಡಲದೊಳಗೆ ಪ್ರವೇಶದಿಂದ ಪ್ರತಿಪಾದಿಸಲ್ಪಡುತ್ತದೆ.

**ವಿವರಣೆ:** ಯಾವನು ಎಷ್ಟೆಷ್ಟು ಜಾತಿಗಳಿಂದ ವ್ಯವಹಿತನಾಗುತ್ತಾನೋ ಅವನಿಗೆ ಅಷ್ಟು ಮಂಡಲಗಳನ್ನು ಕಲ್ಪಿಸಬೇಕು. ಅವುಗಳಲ್ಲಿ ಯಾವಾವ ಮಂಡಲವನ್ನು ಪ್ರವೇಶಿಸುತ್ತಾನೋ ಆಯಾಯ ಜಾತಿಯವನಾಗುತ್ತಾನೆ. ಕೊನೆಯ ಮಂಡಲವನ್ನು ಪ್ರವೇಶಿಸುವವನು ಬ್ರಾಹ್ಮಣನಾಗುತ್ತಾನೆ. "ದೀಕ್ಷಾ ಪ್ರವೇಶ ಮಾತ್ರೇಣ ಬ್ರಾಹ್ಮಣೋ ಭವತಿ ಕ್ಷಣಾತ್। ಕಾಪಾಲಂ ವ್ರತಮಾಸ್ಥಾಯ ಯತಿರ್ಭವತಿ ಮಾನವಃ॥" ಇವೇ ಮೊದಲಾಗಿ ಬೇರೆ ಆಗಮಗಳಲ್ಲಿ ಹೇಳಿರುವ ಅನುಷ್ಠಾನವು ಸುಲಭಸಾಧ್ಯವಾಗಿದೆ.

ಅಧಿಕಾರ ಸಾಧನಗಳಿಗೆ ಸೌಲಭ್ಯವು ಹೇಳಲ್ಪಟ್ಟಿರುವಂತೆ ಕೆಲವು ಕಡೆಗಳಲ್ಲಿ ದೌರ್ಬಲ್ಯವೂ ಹೇಳಲ್ಪಟ್ಟಿರುವುದರಿಂದ ಬೇರೆ ಆಗಮಗಳಲ್ಲಿ ಪರಸ್ಪರ ವಿರೋಧ ಬರುವುದರಿಂದ ಅವುಗಳಿಗೆ ಅಪ್ರಾಮಾಣ್ಯ ಬರುವುದು ಎನ್ನುತ್ತಾರೆ –

**ಅಧಿಕಾರಂ ದುರಾಪಾದ್ಯಮುಕ್ತ್ವಾऽತಿಸುಲಭಂ ಪುನಃ ॥೧೧॥**

**ಅಶಕ್ಯಂ ಸಾಧನಂ ಚೋಕ್ತ್ವಾ ಸುಶಕಂ ತತ್ಫಲಾಪ್ತಯೇ ।**

**ಉಚ್ಯತೇऽತಸ್ತದುಕ್ತಂ ಹಿ ವ್ಯಭಿಚಾರಿ ಫಲೇऽಪಿ ತು ॥೧೨॥**

**ಕಥಂ ಪ್ರಮಾಣತಾಂ ಗಚ್ಛೇತ್..........................।**

ಬೇರೆ ಆಗಮಗಳಲ್ಲಿ ಕೆಲವು ಕಡೆಗಳಲ್ಲಿ ಅಧಿಕಾರವನ್ನು ಹೊಂದುವುದು ಅಸಾಧ್ಯವೆಂದು ಹೇಳಿ, ಪುನಃ ಮತ್ತೊಂದು ಕಡೆಯಲ್ಲಿ ಅತಿ ಸುಲಭವಾಗಿ ಸಾಧ್ಯ ಎಂದು ಹೇಳಿರುವುದು ಕಂಡಿದೆ. ಅದರಂತೆಯೇ ಕೆಲವು ಕಡೆಗಳಲ್ಲಿ ಸಾಧನವು ಅಶಕ್ಯವೆಂದು ಹೇಳಿ, ಫಲವಾದರೋ ಸುಲಭಸಾಧ್ಯ ಎಂದು ಹೇಳಲ್ಪಟ್ಟಿದೆ. ಈ ಪ್ರಕಾರವಾಗಿ ಸಾಧನ ಹಾಗೂ ಫಲಗಳ ವಿಷಯದಲ್ಲಿ ವ್ಯಭಿಚಾರವಿರುವುದರಿಂದ ಪಾಶುಪತಾದಿ ಆಗಮಗಳ ವಚನಗಳು ಹೇಗೆ ಪ್ರಾಮಾಣ್ಯವನ್ನು ಹೊಂದುವವು? ಅಂದರೆ ಅವು ಯಾವ ರೀತಿಯಿಂದಲೂ ಪ್ರಮಾಣವಾಗಲಾರವು ಎಂದು ಭಾವ.

**ವಿವರಣೆ:** ಹೀಗೆ ಸ್ಮೃತಿವಿರೋಧವನ್ನು ಪರಿಹರಿಸಿ, ಈಗ ಯುಕ್ತಿವಿರೋಧವನ್ನು ಪರಿಹರಿಸುತ್ತಾರೆ. ಅದು ಹೇಗೆಂದರೆ – ಶ್ರುತ್ಯಾದಿ ಸಮನ್ವಯದಿಂದ ಬ್ರಹ್ಮನಿಗೆ ಜಗಜ್ಜನ್ಮಾದಿಕಾರಣತ್ವವು ನಿರೂಪಿತವಾಯಿತು. ಆದರೆ ಫಲವ್ಯಭಿಚಾರದ ಕಾರಣ ಶ್ರುತಿಗೆ ಅಪ್ರಾಮಾಣ್ಯ ಬರುವುದು. ಏಕೆಂದರೆ ಪುತ್ರಕಾಮೇಷ್ಟಿ ಇತ್ಯಾದಿಗಳನ್ನು ಮಾಡಿದರೂ ಪುತ್ರೋತ್ಸವಾದಿಗಳು ಆಗದಿರುವುದು ಕಂಡಿದೆ. ಹೀಗಿದ್ದರೂ ಶ್ರುತಿಯನ್ನು ಪ್ರಮಾಣ ಎಂದು ಒಪ್ಪುವುದಾದರೆ ಇದೇ ರೀತಿ ಫಲವ್ಯಭಿಚಾರವನ್ನು

ಹೊಂದಿರುವ ಪಾಶುಪತಾದಿಗಳೂ ಪ್ರಮಾಣವೆಂದು ಒಪ್ಪಬೇಕು. ಶ್ರುತಿಯ ಏಕದೇಶದಲ್ಲಿ ಅಪ್ರಾಮಾಣ್ಯ ಬಂದರೆ ಅದೇ ನ್ಯಾಯದಿಂದ ಬೇರೆ ಕಡೆಗಳಲ್ಲಿಯೂ ಅಪ್ರಾಮಾಣ್ಯ ಬರುವುದು. ಪಿಪೀಲಿಕಾಲಿಪಿಯಂತೆ ಬುದ್ಧಿಪೂರ್ವಕವಲ್ಲದ್ದು ಅಪ್ರಮಾಣ ಎಂದು ಹೇಳಿದರೆ ಅಪೌರುಷೇಯವಾದ ಶ್ರುತಿಯೂ ಬುದ್ಧಿಪೂರ್ವಕ ರಚನೆಯಲ್ಲವಾದ್ದರಿಂದ ಅಪ್ರಮಾಣವೇ ಆಗುವುದು. ಪೌರುಷೇಯವೆಂದು ಹೇಳಿದರೆ ಮೂಲಪ್ರಮಾಣದ ಅಭಾವದಿಂದಾಗಿ ಶ್ರುತಿಯೂ ವಂಚಕನ ವಚನದಂತೆ ಅಪ್ರಮಾಣವಾಗುವುದು. ಶ್ರುತಿಗೆ ಆಪ್ತಿಮೂಲತ್ವದ ಅಭಾವವಿರುವ ಕಾರಣ ಉನ್ಮತ್ತನ ಮಾತಿನಂತೆ ಅಪ್ರಮಾಣವಾಗುವುದು.

ಈ ಪ್ರಕಾರವಾದ ಯುಕ್ತಿಯಿಂದ ವೇದಕ್ಕೆ ಅಪ್ರಾಮಾಣ್ಯ ಶಂಕೆಯು ಉಂಟಾದರೆ ಅದನ್ನು ಮುಂದಿನ ಅಧಿಕರಣದಲ್ಲಿ ಪರಿಹರಿಸುತ್ತಾರೆ –

## ನವಿಲಕ್ಷಣತ್ವಾಧಿಕರಣಮ್

**ಸೂತ್ರ: ಓಂ ನ ವಿಲಕ್ಷಣತ್ವಾದಸ್ಯ ತಥಾತ್ವಂ ಚ ಶಬ್ದಾತ್ ಓಂ**

ಈ ಸೂತ್ರದ ತಾತ್ಪರ್ಯವನ್ನು ಹೇಳುತ್ತಾರೆ –

**.................................ನಿತ್ಯತ್ವಾತ್ ಪುರುಷೋದ್ಭವೈಃ ।**

**ಉಜ್ಝಿತಂ ಸರ್ವದೋಷೈಶ್ಚ ಕಥಂ ನೋ ಮಾನತಾಂ ವ್ರಜೇತ್ ।।೧೩।।**

ವೇದವಾಕ್ಯವು ನಿತ್ಯವಾಗಿರುವುದರಿಂದ, ಅಂದರೆ ಅಪೌರುಷೇಯವಾದ್ದರಿಂದ, ಪುರುಷರಿಂದ ಸಂಭವಿಸಬಹುದಾದ ಎಲ್ಲ ದೋಷಗಳಿಂದಲೂ ದೂರವಾಗಿದೆ. ಆದುದರಿಂದ ಹೇಗೆ ತಾನೆ ಪ್ರಾಮಾಣ್ಯವನ್ನು ಹೊಂದಲಾರದು? ಅಂದರೆ ಅದು ಪ್ರಮಾಣವೇ ಆಗುವುದು ಎಂದು ತಾತ್ಪರ್ಯ.

ವಿವರಣೆ: ನಿತ್ಯತ್ವ ಅಪೌರುಷೇಯತ್ವಗಳ ನಿಮಿತ್ತದಿಂದ ವೇದಗಳಿಗೆ ಪ್ರಾಮಾಣ್ಯವು ನಿಶ್ಚಿತವಾದ ಮೇಲೆ, ಫಲವ್ಯಭಿಚಾರ ಮೊದಲಾದ ಕಾರಣಗಳನ್ನು ಮುಂದಿಟ್ಟು ಅಪ್ರಾಮಾಣ್ಯ ಶಂಕಾ ಮಾಡುವುದು ಸರಿಯಲ್ಲ. ಫಲವ್ಯಭಿಚಾರಕ್ಕೆ ಅಧಿಕಾರ, ಸಾಮಗ್ರಿ ಇತ್ಯಾದಿ ಪ್ರತಿಬಂಧಕಗಳಿವೆಯೆಂದು ಕಲ್ಪಿಸಬೇಕು.

ಹಾಗಾದರೆ ನಾವು ವೇದಪ್ರಾಮಾಣ್ಯವನ್ನು ಅಂಗೀಕರಿಸಿದರೂ ವೇದನಿತ್ಯತ್ವವನ್ನು ಒಪ್ಪುವುದಿಲ್ಲ ಎಂದು ಹೇಳಿದರೆ, ಸೂತ್ರದಲ್ಲಿ ಸೂಚಿತವಾದ ಶ್ರುತಿಗಳನ್ನು ಉದಾಹರಿಸುವ ಮೂಲಕ ನಿತ್ಯತ್ವವನ್ನು ಉಪಪಾದಿಸುತ್ತಾರೆ –

**ವಿರೂಪನಿತ್ಯಯಾ ವಾಚಾ ನಿತ್ಯಯಾಽನಿತ್ಯಯಾ ಸದಾ ।**

**ಇತ್ಯಾದಿಶ್ರುತಿಭಿರ್ವೇದೋ ನಿತ್ಯ ಇತ್ಯವಗಮ್ಯತೇ ।।೧೪।।**

ವಿರೂಪನಾಮಕ ಋಷಿಯೇ, ನಿತ್ಯವಾದ ವೇದವಚನದಿಂದ, ಯಾವಾಗಲೂ ಇರತಕ್ಕ ನಿತ್ಯವಾದ ಶ್ರುತಿಯಿಂದಲೂ ಅನಿತ್ಯವಾದ ಸ್ಮೃತಿಯಿಂದಲೂ ಸರ್ವೋತ್ತಮನಾದ ಭಗವಂತನನ್ನು ಸ್ತುತಿಸುತ್ತೇನೆ – ಇತ್ಯಾದಿ ಶ್ರುತಿಗಳಿಂದ ವೇದವು ನಿತ್ಯವೆಂದು (ಅಪೌರುಷೇಯವೆಂದು) ತಿಳಿಯಲ್ಪಡುತ್ತದೆ.

**ವಿವರಣೆ:** 'ವಿರೂಪನಿತ್ಯಯಾ ವಾಚಾ' ಎನ್ನುವುದರಿಂದ 'ತಸ್ಮೈ ನೂನಮಭಿದ್ಯವೇ ವಾಚಾ ವಿರೂಪನಿತ್ಯಯಾ। ವೃಷ್ಣೇ ಚೋದಸ್ವ ಸುಷ್ಟುತಿಮ್' ಎನ್ನುವ ಶ್ರುತಿಯನ್ನು ತೆಗೆದುಕೊಳ್ಳಬೇಕು. 'ನಿತ್ಯಯಾಽನಿತ್ಯಯಾ' ಎನ್ನುವುದರಿಂದ 'ನಿತ್ಯಯಾಽನಿತ್ಯಯಾ ವಾವ ಸ್ತೌಮಿ ಬ್ರಹ್ಮ ತತ್ಪರಮಂ ಪದಮ್' ಎನ್ನುವ ಶ್ರುತಿಯನ್ನು ಹಾಗೂ 'ಶ್ರುತಿರ್ವಾವ ನಿತ್ಯಾಽನಿತ್ಯಾ ವಾವ ಸ್ಮೃತಯೋ ಯಾಶ್ಚಾನ್ಯಾ ವಾಚಃ' ಎನ್ನುವ ಶ್ರುತಿಯನ್ನೂ ತೆಗೆದುಕೊಳ್ಳಬೇಕು. 'ಋಚಃ ಸಾಮಾನಿ ಜಜ್ಞಿರೇ' 'ಋಗ್ವೇದ ಏವಾಗ್ನೇರಜಾಯತ' ಇತ್ಯಾದಿ ವಾಕ್ಯಗಳಿಗೆ ಆ ಶ್ರುತಿಗಳು ಪುರುಷರಿಂದ ಹುಟ್ಟಿದವು ಎಂದು ಅರ್ಥ ಮಾಡಬಾರದು. ಹೀಗೆ ಮಾಡಿದರೆ ಅಪೌರುಷೇಯತ್ವ ಪ್ರತಿಪಾದಿಸುವ ಪ್ರಬಲ ಶ್ರುತಿಗಳಿಗೆ ವಿರೋಧ ಬರುವುದು. ಆ ಶ್ರುತಿಗಳು ಆಯಾಯ ಪುರುಷರಿಂದ ಪ್ರವರ್ತಿತವಾದವು ಎಂದು ಅರ್ಥಮಾಡಬೇಕು.

ಪಿಪೀಲಿಕಾಲಿಪಿಯಂತೆ ಶ್ರುತಿಯು ಅಬುದ್ಧಿಪೂರ್ವಕ ಎಂಬ ಕಾರಣ ನೀಡಿ, ಈ ಹಿಂದೆ ಶ್ರುತಿಗೆ ಅಪ್ರಮಾಣ್ಯ ಶಂಕೆಯನ್ನು ಮಾಡಿದ್ದನ್ನು ಈಗ ನಿರಾಕರಿಸುತ್ತಾರೆ –

**ಪಿಪೀಲಿಕಾಲಿಪಿಶ್ಚಾಪಿ ಪ್ರಮಾಣಮವಿರೋಧತಃ ।**

ವಿರೋಧವಿಲ್ಲದಿದ್ದರೆ ಪಿಪೀಲಿಕಾಲಿಪಿಯೂ ಪ್ರಮಾಣವೇ ಆಗುವುದು.

**ವಿವರಣೆ:** ಬುದ್ಧಿಪೂರ್ವಕವಲ್ಲ ಎಂಬ ಕಾರಣದಿಂದಲೇ ಯಾವುದೇ ಒಂದು ವಾಕ್ಯವು ಅಪ್ರಮಾಣವಾಗಲಾರದು. ಅದು ಯಥಾರ್ಥವಾದ ವಿಷಯಕ್ಕೆ ವಿರುದ್ಧವಾಗಿರಬಾರದು ಎನ್ನುವುದೇ ಪ್ರಾಮಾಣ್ಯ ನಿಶ್ಚಯಕ್ಕೆ ಮುಖ್ಯವಾದ ಹೇತು. ಆದಕಾರಣ ದೃಷ್ಟಾಂತಕ್ಕೆ ಸಾಧ್ಯವೈಕಲ್ಯ ಎನ್ನುವ ದೋಷ ಬರುವುದರಿಂದ, 'ವೇದಃ ಅಪ್ರಮಾಣಂ ಅಬುದ್ಧಿಪೂರ್ವಕತ್ವಾತ್ ಪಿಪೀಲಿಕಾಲಿಪಿವತ್' ಎನ್ನುವುದು ದುಷ್ಟಾನುಮಾನ ಎನಿಸುವುದು.

ಹಾಗಾದರೆ ಅಬುದ್ಧಿಪೂರ್ವಕತ್ವ ಹೇತುವಿನಿಂದ ನಾವು ಶ್ರುತಿಗೆ ಅಪ್ರಮಾಣ್ಯವನ್ನು ಅನುಮೇಯಿಸುವುದಿಲ್ಲ. ಪಿಪೀಲಿಕಾಲಿಪಿಯಂತೆ ಅಬುದ್ಧಿ ಪೂರ್ವಕವಾದುದರಿಂದ ಶ್ರುತಿಯು ಯಥಾರ್ಥಜ್ಞಾನಸಾಧನವಲ್ಲ. ಆದಪ್ರಯುಕ್ತ ಅದು ಅಪ್ರಮಾಣ ಎಂದು ಹೇಳಿದರೆ –

**ಯಥಾ ದ್ರೌಣೇರುಲೂಕೇನ ಕೃತಮಪ್ಯಾಸ ಬೋಧಕಮ್ ॥೧೫॥**

**ಅವಿರುದ್ಧಂ ವಿರುದ್ಧಂ ತು ವಿರೋಧಾದೇವ ಬಾಧಿತಮ್ ।**

ಮಹಾಭಾರತದಲ್ಲಿನ ಅಶ್ವತ್ಥಾಮನಿಗೆ ಸಂಬಂಧಿಸಿದ ಒಂದು ಪ್ರಸಂಗವನ್ನು ಇಲ್ಲಿ ಉದಾಹರಿಸುತ್ತಾರೆ. ದುರ್ಯೋಧನನ ಆಶೆಯಂತೆ ದ್ರೌಪದಿಯ ಐವರು ಮಕ್ಕಳನ್ನು ಸಂಹರಿಸುವ ಯೋಜನೆಯನ್ನು ಚಿಂತಿಸುತ್ತ ಮರದ ಕೆಳಗೆ ಕುಳಿತಿದ್ದ ಅಶ್ವತ್ಥಾಮನಿಗೆ ಒಂದು ಗೂಬೆಯು ಕಾಗೆಗಳನ್ನು ಸಂಹರಿಸುವ ತಂತ್ರವನ್ನು ನೋಡಿ ಜ್ಞಾನೋದಯವಾಯಿತಂತೆ. ರಾತ್ರಿ ವೇಳೆಯಲ್ಲಿ ಮಲಗಿದ್ದ ಅನೇಕ ಕಾಗೆಗಳನ್ನು ಒಂದೇ ಗೂಬೆಯು ಕೊಂದುಹಾಕಿದ್ದನ್ನು ನೋಡಿ ಅಶ್ವತ್ಥಾಮನಿಗೂ ನಾನೂ ಹೀಗೆಯೇ ಮಾಡಬಹುದು ಎಂದು ಪ್ರಚೋದನೆಯಾಯಿತು. ಗೂಬೆಯು ಅಶ್ವತ್ಥಾಮನಿಗೆ ತಿಳುವಳಿಕೆ ಕೊಡಬೇಕೆಂದು ಬುದ್ಧಿಪೂರ್ವಕವಾಗಿ ಹಾಗೆ ಮಾಡಲಿಲ್ಲವಾದರೂ ಅದು ಅಶ್ವತ್ಥಾಮನಿಗೆ ಯಥಾರ್ಥಜ್ಞಾನಕ್ಕೆ ಸಾಧನವಾಯಿತು. ಹಾಗೆಯೇ ಶ್ರುತಿಯೂ ಕೂಡ ಬುದ್ಧಿಪೂರ್ವಕವಾಗದಿದ್ದರೂ ಯಥಾರ್ಥಜ್ಞಾನಕ್ಕೆ ಸಾಧನವಾಗುವುದು. ಹಾಗಾದರೆ ಉನ್ಮತ್ತವಾಕ್ಯದಂತೆ ಪ್ರಮಾಣವಿರುದ್ಧವಾದ್ದರಿಂದ ಶ್ರುತಿಯು ಅಪ್ರಮಾಣವಾಗುವುದು ಎಂದು ಹೇಳುತ್ತೇವೆ ಎಂದರೆ ಅದೂ ಸರಿಯಲ್ಲ. ಉನ್ಮತ್ತವಾಕ್ಯವೂ ಕೂಡ ಪ್ರಮಾಣಕ್ಕೆ ವಿರುದ್ಧವೆಂಬ ಕಾರಣದಿಂದಲೇ ಅಪ್ರಮಾಣವಾಗುವುದೇ ಹೊರತು ಅದು ಕೇವಲ ಉನ್ಮತ್ತವಾಕ್ಯ ಎಂಬ ಕಾರಣದಿಂದಲ್ಲ.

**ವಿರೋಧಾದರ್ಶನಾತ್ತಸ್ಮಾದ್ವೇದಪ್ರಾಮಾಣ್ಯಮಿಷ್ಯತೇ ॥೧೬॥**

**ತನ್ಮೂಲತ್ವಾತ್ಸ್ಮೃತೀನಾಂ ತು ವಿರೋಧೋ ಯತ್ರ ನ ಕ್ವಚಿತ್ ।**

ಯಥಾರ್ಥಜ್ಞಾನವನ್ನು ಹುಟ್ಟಿಸುವ ವಿಷಯದಲ್ಲಿ ವಿರೋಧ ಕಂಡುಬರುವುದಿಲ್ಲ ಎನ್ನುವ ನಿಮಿತ್ತದಿಂದಲೇ ಶ್ರುತಿಗೆ ಪ್ರಾಮಾಣ್ಯವು ನಿಶ್ಚಯಿಸಲ್ಪಡುತ್ತದೆ. ಪಂಚರಾತ್ರಾದಿ ಸ್ಮೃತಿಗಳಿಗಾದರೋ ವೇದಮೂಲತ್ವದಿಂದ ಪ್ರಾಮಾಣ್ಯವು ಅಂಗೀಕರಿಸಲ್ಪಡುವುದು. ಯಾವ ವಿಷಯದಲ್ಲಿ ಯಾವ ಸ್ಮೃತಿಗಳಿಗೆ ಸರ್ವಥಾ ಪ್ರಮಾಣವಿರೋಧವಿಲ್ಲವೋ ಅವುಗಳಿಗೆ ಆ ವಿಷಯದಲ್ಲಿ ಪ್ರಾಮಾಣ್ಯವು ಅಂಗೀಕರಿಸಲ್ಪಡುವುದು.

ಪ್ರಮಾಣವಿರೋಧವು ಇಲ್ಲದಿರುವದರಿಂದ ಶ್ರುತಿಸ್ಮೃತಿಗಳು ಪ್ರಮಾಣ ಎಂದು ಹೇಳುವುದು ಅಯುಕ್ತ. ಏಕೆಂದರೆ ಶ್ರುತ್ಯಾದಿಗಳಲ್ಲಿ ಹೇಳಲ್ಪಟ್ಟ ಈಶ್ವರನ ಸರ್ವಜ್ಞತ್ವಾದಿಗಳಿಗೆ 'ಈಶ್ವರೋ ನ ಸರ್ವಜ್ಞಃ ಪುರುಷತ್ವಾತ್ ಯಜ್ಞದತ್ತವತ್' ಇತ್ಯಾದಿ ಅನುಮಾನದಿಂದ ವಿರೋಧವಿದೆ ಎಂದು ಹೇಳಿದರೆ –

**ವಿರೋಧೋಽಪಿ ಸ ಏವೋಕ್ತಃ ಪ್ರತ್ಯಕ್ಷೇಣಾಗಮೇನ ವಾ ॥೧೭॥**

'ವಿರೋಧಾದೇವ ಬಾಧಿತಂ' ಎಂದು ಅಪ್ರಮಾಣ್ಯಸಾಧಕವಾಗಿ ನಾವು ಹಿಂದೆ

ಹೇಳಿದ ವಿರೋಧವೂ ಕೂಡ ಪ್ರತ್ಯಕ್ಷ ಅಥವಾ ಆಗಮಗಳಿಂದಲೇ ಹೊರತು, ಅನುಮಾನದಿಂದಲ್ಲ.

ಹಾಗಾದರೆ ಮೀಮಾಂಸೆಯು ಯುಕ್ತ್ಯನುಸಂಧಾನಾತ್ಮಕವೇ ಆಗಿರುವುದರಿಂದ ಯುಕ್ತಿಯ ಸಹಕಾರವಿಲ್ಲದೆ ವೇದಾರ್ಥವಿಚಾರಕ್ಕೆ ಆರಂಭಣವೇ ಕೂಡುವುದಿಲ್ಲ ಎಂದು ಆಶಂಕಿಸಿದರೆ –

**ಆಗಮೇನಾಗಮಸ್ಯೈವ ವಿರೋಧೇ ಯುಕ್ತಿರಿಷ್ಯತೇ ।**

ಒಂದು ಆಗಮಕ್ಕೆ ಮತ್ತೊಂದು ಆಗಮದಿಂದ ವಿರೋಧವು ಕಂಡುಬಂದಾಗ ಮಾತ್ರ ವೇದಾರ್ಥನಿರ್ಣಯಕ್ಕಾಗಿ ಅನುಮಾನವು ಗ್ರಹಿಸಲ್ಪಡುತ್ತದೆ.

ಪ್ರತ್ಯಕ್ಷ ಆಗಮಗಳ ವಿರೋಧವೂ ಕೂಡ ಸ್ವರೂಪತಃ ಅಪ್ರಾಮಾಣ್ಯ ಸಾಧಕಗಳಲ್ಲ. ಉಪಜೀವ್ಯತ್ವಾದಿಗಳಿಂದ ಪ್ರಾಬಲ್ಯವಿದ್ದರೆ ಮಾತ್ರ ಪ್ರತ್ಯಕ್ಷಾದಿ ವಿರೋಧವು ಅಪ್ರಮಾಣ್ಯ ನಿಶ್ಚಯಕ್ಕೆ ಪ್ರಯೋಜಕವಾಗುತ್ತವೆ. ದುರ್ಬಲಗಳಾದರೆ ಸ್ವಯಂ ಬಾಧಿತವಾಗುತ್ತವೆ. ಸಮಬಲವುಳ್ಳವು ಪ್ರತಿಬಂಧವನ್ನು ಮಾತ್ರ ಮಾಡುವುದರಿಂದ ಅವು ಅಪ್ರಮಾಣ್ಯ ನಿಶ್ಚಯಕ್ಕೆ ಕಾರಣವಾಗಲಾರವು. ಹೀಗೆ ಉಪಜೀವ್ಯಾದಿಗಳ ವಿರೋಧದಿಂದ ವೇದಕ್ಕೆ ಅಪ್ರಾಮಾಣ್ಯ ಬರಬಹುದಾದರೂ, ಅದು ಸರ್ವಥಾ ಅಯಥಾರ್ಥತ್ವ ರೂಪವಲ್ಲ. ಅಪೌರುಷೇಯವಾದುದರಿಂದ ವೇದವು ನಿರ್ದೋಷತ್ವವನ್ನು ಹೊಂದಿದೆ. ಆದ್ದರಿಂದ ವೇದಕ್ಕೆ ಸರ್ವಥಾ ಅಪ್ರಾಮಾಣ್ಯವು ಕೂಡುವುದಿಲ್ಲ. ಆದಪ್ರಯುಕ್ತ ಆಗಮಗಳ ಪರಸ್ಪರ ವಿರೋಧ ಪರಿಹರಿಸಲು ಅನ್ಯಾರ್ಥವನ್ನು ಅವಶ್ಯವಾಗಿ ಕಲ್ಪಿಸಬೇಕು ಎಂದು ಹೇಳುತ್ತಾರೆ –

**ಉಪಜೀವ್ಯವಿರೋಧೇ ತು ವೇದಸ್ಯಾನ್ಯಾರ್ಥಕಲ್ಪನಾ ॥೧೮॥**

**ಪ್ರತ್ಯಕ್ಷಮುಪಜೀವ್ಯಂ ಸ್ಯಾತ್ಪ್ರಾಯೋ ಯುಕ್ತಿರಪಿ ಕ್ವಚಿತ್ ।**

**ಆಗಮೈಕಪ್ರಮಾಣೇಷು ತಸ್ಯೈವ ಹ್ಯುಪಜೀವ್ಯತಾ ॥೧೯॥**

ವೇದಕ್ಕೆ ಉಪಜೀವ್ಯ, ನಿರವಕಾಶತ್ವ ಇತ್ಯಾದಿಗಳ ವಿರೋಧವಿದ್ದಾಗ ಅನ್ಯಾರ್ಥ ಕಲ್ಪನೆ ಮಾಡಬೇಕು. ಲೌಕಿಕ ವಿಷಯಗಳಲ್ಲಿ ಹೆಚ್ಚು ಸಂದರ್ಭಗಳಲ್ಲಿ ಪ್ರತ್ಯಕ್ಷವೇ ಉಪಜೀವ್ಯ, ಕೆಲವು ಕಡೆಗಳಲ್ಲಿ ಯುಕ್ತಿಯೂ ಕೂಡ ಉಪಜೀವ್ಯವಾಗಬಹುದು. ಅಂಥಹ ಸಂದಂರ್ಭಗಳಲ್ಲಿ ಪ್ರತ್ಯಕ್ಷಾದಿಗಳಿಂದ ಸಿದ್ಧವಾದ ಪದಾರ್ಥಕ್ಕಿಂತ ಬೇರೆ ರೀತಿಯಾಗಿ ಹೇಳತಕ್ಕ ಶ್ರುತಿಗೆ ಅನ್ಯಾರ್ಥವನ್ನು ಮಾಡಬೇಕು. ಆದರೆ ಆಗಮವೊಂದನ್ನೇ ಪ್ರಮಾಣವನ್ನಾಗಿ ಹೊಂದಿರುವ 'ಜನಿತೋತ ವಿಷ್ಣೋಃ' ಇತ್ಯಾದಿ ಭಗವದ್ವಿಷಯಕ ಪ್ರತಿಪಾದಕ ಶ್ರುತಿಗಳಿಗೆ 'ನಿರವಷ್ಟಃ ನಿರವದ್ಯಃ' ಇತ್ಯಾದಿ ವೇದಗಳಿಗೇ ಉಪಜೀವ್ಯತ್ವವು. ಆದಪ್ರಯುಕ್ತ ಆಗಮಸಿದ್ಧಗಳಾದ ವಿಷಯಗಳಿಗೆ

ಅನ್ಯಥಾತ್ವವನ್ನು ಗ್ರಹಿಸತಕ್ಕ ಪ್ರತ್ಯಕ್ಷಾದಿಗಳು ಅಯಥಾರ್ಥಗಳೆಂದು ತಿಳಿಯಬೇಕು.

ಎರಡು ಆಗಮಗಳಿಗೆ ಪರಸ್ಪರ ವಿರೋಧವಿದ್ದ ಪಕ್ಷದಲ್ಲಿ ಮತ್ತೊಂದು ಆಗಮವನ್ನು ಆಶ್ರಯಿಸಿ ಯುಕ್ತಿಯ ಬಲದಿಂದ ವಿಚಾರ ಮಾಡತಕ್ಕದ್ದು ಎಂದು ಹೇಳಿದ್ದು ಅಯುಕ್ತ. ಇದು ಎಲ್ಲ ಕಡೆಗಳಲ್ಲಿಯೂ ಕೂಡುವುದಿಲ್ಲ ಎಂದರೆ –

**ಯುಕ್ತೋಽಯುಕ್ತಶ್ಚ ಯದ್ಯರ್ಥ ಆಗಮಸ್ಯ ಪ್ರತೀಯತೇ ।**

**ಸ್ಯಾತ್ತತ್ರ ಯುಕ್ತಃ ಏವಾರ್ಥೋ..................................॥**

ವೇದಕ್ಕೆ ಯುಕ್ತವೂ ಅಯುಕ್ತವೂ ಆದ ಅರ್ಥವು ತೋರುವುದಾದರೆ, ಅಂಥಹ ಕಡೆಗಳಲ್ಲಿ ಯುಕ್ತವಾದ ಅರ್ಥವನ್ನೇ ಗ್ರಹಿಸಬೇಕು. ಅಂದರೆ ಶ್ರುತಿಗೆ ಶ್ರುತ್ಯಂತರದಿಂದ ಅವಿರುದ್ಧವಾದ ಹಾಗೂ ಯುಕ್ತಿಯುಕ್ತವಾದ ಅರ್ಥವನ್ನು ಗ್ರಹಿಸಬೇಕು. ಅಯುಕ್ತವಾದ ಅರ್ಥವನ್ನು ಕೈಬಿಡಬೇಕು.

ಈಗ ಯುಕ್ತಿಯಲ್ಲಿ ಮೂರು ವಿಧಗಳಿವೆಯೆಂದು ತಿಳಿಸುತ್ತಾರೆ –

**...................................ಯುಕ್ತಿಶ್ಚ ತ್ರಿವಿಧಾ ಮತಾ ॥೨೦॥**

**ವ್ಯಾಪ್ತಿಃ ಪ್ರತ್ಯಕ್ಷಗಾ ಯಸ್ಯಾ ಯುಕ್ತಿಗಾಽಽಗಮಗಾ ತಥಾ ।**

**ಪ್ರತ್ಯಕ್ಷಾಗಮಮೂಲಾ ತು ಯುಕ್ತಿಸ್ತತ್ರ ಬಲೀಯಸೀ ॥೨೧॥**

ಯುಕ್ತಿಗೆ ಸಾಧ್ಯದಿಂದ ವ್ಯಾಪ್ತಿಯು ಹೇಗೆ ಗ್ರಹಿಸಲ್ಪಡುತ್ತದೆ ಎನ್ನುವುದನ್ನು ಅವಲಂಬಿಸಿ ಯುಕ್ತಿಯಲ್ಲಿ ಮೂರು ವಿಧ. ವ್ಯಾಪ್ತಿಯು ಪ್ರತ್ಯಕ್ಷದಿಂದ ತಿಳಿಯಲ್ಪಡುವುದು ಒಂದು ಬಗೆಯ ಯುಕ್ತಿ. ವ್ಯಾಪ್ತಿಯು ಯುಕ್ತಿಯಿಂದಲೇ ತಿಳಿಯಲ್ಪಡುವುದು ಎರಡನೆಯ ವಿಧದ ಯುಕ್ತಿ. ವ್ಯಾಪ್ತಿಯು ಆಗಮದಿಂದ ಗ್ರಹಿಸಲ್ಪಟ್ಟರೆ ಅದು ಮೂರನೆಯ ರೀತಿಯ ಯುಕ್ತಿ. ಇವುಗಳಲ್ಲಿ ಪ್ರತ್ಯಕ್ಷ ಅಥವಾ ಆಗಮದಿಂದ ಗೃಹೀತವಾದ ವ್ಯಾಪ್ತಿಯನ್ನು ಹೊಂದಿರುವ ಯುಕ್ತಿಯೇ ಬಲಿಷ್ಠವೆಂದು ತಿಳಿಯಬೇಕು. ಯುಕ್ತಿ ಮೂಲಕವಾದ ಯುಕ್ತಿಯು ಪ್ರತ್ಯಕ್ಷ ಅಥವಾ ಆಗಮವನ್ನೇ ಮೂಲವನ್ನಾಗಿ ಹೊಂದಿರುವ ಯುಕ್ತಿಗಿಂತ ದುರ್ಬಲವು.

**ವಿವರಣೆ:** ಈ ಪ್ರಕಾರವಾಗಿ ಪ್ರಮಾಣವಿರೋಧದಿಂದಲೇ ಅಪ್ರಾಮಾಣ್ಯದ ನಿಶ್ಚಯವು. ಮೇಲೆ ಹೇಳಿದ ಪ್ರಕಾರ ಪ್ರಮಾಣಗಳಲ್ಲಿ ಕೇವಲ ಮೂರು ವಿಧ ಮಾತ್ರ. ಶ್ರುತಿಗಳಿಗೆ ಈ ಮೂರು ವಿಧ ಪ್ರಮಾಣಗಳ ವಿರೋಧವೂ ಇರುವುದಿಲ್ಲ. ಶ್ರುತಿಗಳಿಗೆ ಬೋಧಕತ್ವ ಇರುವುದರಿಂದ ಅವು ಸ್ವತ ಏವ ಪ್ರಮಾಣವಾಗಿವೆ. ಆದರೆ ಪ್ರಮಾಣ ಅಪ್ರಮಾಣಗಳ ಲಕ್ಷಣವನ್ನೇ ತಿಳಿಯದಿದ್ದವರಿಗೆ ಪ್ರಾಮಾಣ್ಯ ನಿಶ್ಚಯವು ಸಾಧ್ಯವಿಲ್ಲ. ಆದ್ದರಿಂದ ಮುಂದಿನ ಕೆಲವು ಶ್ಲೋಕಗಳಲ್ಲಿ ಉದ್ದೇಶ – ಲಕ್ಷಣ –

ವಿಭಾಗ – ಪರೀಕ್ಷೆಗಳಿಂದ ಪ್ರಮಾಣಾದಿಗಳ ಸ್ವರೂಪವನ್ನು ನಿರೂಪಿಸುತ್ತಾರೆ. ಈಗಾಗಲೇ ಪ್ರಮಾಣಲಕ್ಷಣ ಮೊದಲಾದ ಗ್ರಂಥಗಳಲ್ಲಿ ಈ ವಿಷಯವನ್ನು ವಿವರವಾಗಿ ಪ್ರಸ್ತಾಪ ಮಾಡಿದ್ದರೂ, ಇಲ್ಲಿ ಪ್ರಸಂಗ ಬಂದಿದ್ದರಿಂದ, ಶಿಷ್ಯರ ಹಿತಕ್ಕಾಗಿ ಭಾಷ್ಯಕಾರರು ಅವುಗಳನ್ನು ಒಗ್ಗೂಡಿಸಿ ಇಲ್ಲಿ ಪುನಃ ನಿರೂಪಣೆ ಮಾಡಿರುತ್ತಾರೆ. ಇದರಿಂದ ವಿಚಾರ–ವಿಮರ್ಶೆಗಳಿಗೆ ಖಚಿತತೆ ಬರುತ್ತದೆ. ಆದ್ದರಿಂದ ಪುನರುಕ್ತಿ ಎಂಬ ದೋಷಕ್ಕೆ ಕಾರಣವಾಗುವುದಿಲ್ಲ.

ಮೊದಲಿಗೆ ಪ್ರಮಾಣದ ಸಾಮಾನ್ಯಲಕ್ಷಣವನ್ನು ನಿರೂಪಿಸುತ್ತಾರೆ –

**ಯಾಥಾರ್ಥ್ಯಮೇವ ಮಾನತ್ವಂ ತನ್ಮುಖ್ಯಂ ಜ್ಞಾನಶಬ್ದಯೋಃ ।**

**ಅರ್ಥತ್ವಮರ್ಯತೈವ ಸ್ಯಾನ್ನ ಕ್ರಿಯಾರ್ಥೇಷು ಸಾ ಮತಾ ॥೨೨॥**

ಯಾಥಾರ್ಥ್ಯವೇ ಪ್ರಮಾಣದ ಲಕ್ಷಣ. ವಸ್ತು ಹೇಗಿದೆಯೋ ಹಾಗೆಯೇ ತಿಳಿಸುಕೊಡುವುದೇ ಯಾಥಾರ್ಥತ್ವ. ಅದು ಜ್ಞಾನ ಶಬ್ದಗಳಲ್ಲಿ ಮುಖ್ಯವು. ಕರಣಭೂತಗಳಾದ ಪ್ರತ್ಯಕ್ಷ ಅನುಮಾನಗಳಲ್ಲಿ ಅಮುಖ್ಯವು. ಅರ್ಥ ಶಬ್ದದ ಪ್ರವೃತ್ತಿ ನಿಮಿತ್ತವು ತಿಳಿಯಲ್ಪಡುವಿಕೆಯೇ ಹೊರತು ವಿಷಯತ್ವವಲ್ಲ. ಕ್ರಿಯೆಗೆ ಸಂಬಂಧಿಸಿದ ವಿಷಯಗಳಲ್ಲಿ ಜ್ಞೇಯತ್ವವಿರುವುದಿಲ್ಲ. ಆದುದರಿಂದ ಅದು ಆರ್ಯಸಮ್ಮತವಲ್ಲ. ಜ್ಞೇಯತ್ವವಿಲ್ಲದಿರುವುದರಿಂದಲೇ ಕ್ರಿಯೆಯಲ್ಲಿ ಯಾಥಾರ್ಥ್ಯವಿಲ್ಲ. ಆದ್ದರಿಂದ ಲಕ್ಷಣಕ್ಕೆ ಕ್ರಿಯೆಯಲ್ಲಿ ಅತಿವ್ಯಾಪ್ತಿಯಿರುವುದಿಲ್ಲ.

'ತನ್ಮುಖ್ಯಂ ಜ್ಞಾನಶಬ್ದಯೋಃ' ಎಂದು ಹೇಳಿದ್ದು ಕೂಡುವುದಿಲ್ಲ. ಹಾಗೆ ಒಪ್ಪುವುದಾದರೆ ಜ್ಞಾನದಂತೆ ಶಬ್ದಕ್ಕೂ ಕೇವಲಪ್ರಮಾಣತ್ವವನ್ನು ಒಪ್ಪಬೇಕಾಗುವುದು ಎಂದು ಆಶಂಕಿಸಿದರೆ ಅದನ್ನು ಯುಕ್ತಿಪೂರ್ವಕವಾಗಿ ಪರಿಹರಿಸುತ್ತಾರೆ –

**ಜ್ಞಾನಾರ್ಥೇ ಜ್ಞೇಯತಾ ಮುಖ್ಯಾ ಶಬ್ದಾರ್ಥೇ ತದನಂತರಮ್ ।**

**ಯಥಾರ್ಥಜ್ಞಾನಜನಕಾಃ ಯಥಾರ್ಥಾ ಯುಕ್ತಯಃ ಸ್ಮೃತಾಃ ॥೨೩॥**

ಜ್ಞೇಯತ್ವವು ಜ್ಞಾನವಿಷಯದಲ್ಲಿ ಪ್ರಾಥಮಿಕ ಮುಖ್ಯತ್ವವನ್ನೂ, ಶಬ್ದದ ವಿಷಯದಲ್ಲಿ ತದನಂತರದ ಮುಖ್ಯತ್ವವನ್ನೂ ಅಂದರೆ ಅಮುಖ್ಯತ್ವವನ್ನೂ ಹೊಂದಿರುವುದು. ಜ್ಞಾನದಲ್ಲಿಯೇ ಯಾಥಾರ್ಥರೂಪವಾದ ಪ್ರಾಮಾಣ್ಯವು ಮುಖ್ಯ. ಕರಣಗಳಲ್ಲಿ ಅಮುಖ್ಯ. ಕರಣಗಳಲ್ಲಿ ಶಬ್ದಕ್ಕೆ ಪ್ರಾಧಾನ್ಯವಿರುವುದರಿಂದ ಇಲ್ಲಿ ಜ್ಞಾನದೊಂದಿಗೆ ಶಬ್ದವನ್ನೂ ಮುಖ್ಯವೆಂದು ಹೇಳಿದರು. ಯಥಾರ್ಥ ಜ್ಞಾನವನ್ನು ಹುಟ್ಟಿಸುವ ಯುಕ್ತಿಗಳು ಯಥಾರ್ಥ ಯುಕ್ತಿಗಳೆಂದು ಹೇಳಲ್ಪಡುತ್ತವೆ.

ಒಟ್ಟಿನಲ್ಲಿ ಹೇಳುವುದಾದರೆ, ಯಾಥಾರ್ಥ್ಯವು ಜ್ಞಾನದಲ್ಲಿ ಮುಖ್ಯವಾದರೆ,

ಕರಣಗಳಲ್ಲಾದರೋ ಅಮುಖ್ಯ. ಕರಣಗಳಲ್ಲಿಯೂ ಕೂಡ ಶಬ್ದದಲ್ಲಿ ಮುಖ್ಯ. ಪ್ರತ್ಯಕ್ಷಾನುಮಾನಗಳಲ್ಲಿ ಅಮುಖ್ಯ. ಆದಪ್ರಯುಕ್ತ ಪ್ರಾಮಾಣ್ಯಜನಕತ್ವವು ಜ್ಞಾನಕ್ಕೆ ಮುಖ್ಯವೂ ಪ್ರತ್ಯಕ್ಷಾದಿಗಳಿಗೆ ಅಮುಖ್ಯವೂ ಎಂದು ತಾತ್ಪರ್ಯ.

**ಅನುಪ್ರಮಾಣಮೇತಾನಿ ಹ್ಯಕ್ಷಯುಕ್ತಿವಚಾಂಸ್ಯತಃ ।**

**ಪ್ರಾಮಾಣ್ಯಂ ನಾನುವಾದಸ್ಯ ಸ್ಮೃತೇರಪಿ ವಿಹೀಯತೇ ॥೨೪॥**

**ಯಾಥಾರ್ಥ್ಯಮೇವ ಪ್ರಾಮಾಣ್ಯಶಬ್ದಾರ್ಥೋ ಯದ್ವಿವಕ್ಷಿತಃ ।**

ಜ್ಞಾನವು ಕೇವಲಪ್ರಮಾಣವಾದರೆ ಪ್ರತ್ಯಕ್ಷ ಅನುಮಾನ ಆಗಮಗಳು ಅನುಪ್ರಮಾಣಗಳು. ಯಾಥಾರ್ಥ್ಯವೇ ಪ್ರಮಾಣದ ಮುಖ್ಯಲಕ್ಷಣ. ಆದ್ದರಿಂದ ಯಥಾರ್ಥವಾದ ಅನುವಾದ ಹಾಗೂ ಸ್ಮೃತಿಗಳಿಗೂ ಪ್ರಾಮಾಣ್ಯವನ್ನು ಅವಶ್ಯವಾಗಿ ಅಂಗೀಕರಿಸತಕ್ಕದ್ದು.

ಬಾಧಕವಿರುವುದರಿಂದ ಸ್ಮೃತ್ಯಾದಿಗಳಿಗೆ ಪ್ರಮಾಣ್ಯವನ್ನು ಅಂಗೀಕರಿಸುವಂತಿಲ್ಲ ಎಂದು ಹೇಳಿದರೆ –

**ಅಂಗೀಕೃತಂ ಚೇತ್ಪ್ರಾಮಾಣ್ಯಂ ಸ್ಮೃತ್ಯಾದೇಃ ಕಾ ವಿರುದ್ಧತಾ ॥೨೫॥**

ಸ್ಮೃತಿ ಹಾಗೂ ಅನುವಾದಗಳಿಗೆ ಪ್ರಮಾಣ್ಯವನ್ನು ಅಂಗೀಕರಿಸಿದರೆ ಯಾವ ವಿರೋಧವಿದೆ ಅಥವಾ ಬಾಧಕವಾದರೂ ಏನಿದೆ?

ಫಲವಿಲ್ಲದಿರುವ ಕಾರಣ ಸ್ಮೃತಿ ಅನುವಾದಗಳು ಅಪ್ರಮಾಣವೇ ಆಗುತ್ತವೆ. ಯಾವುದು ಪ್ರಮಾಣವೋ ಅದಕ್ಕೆ ಸಫಲತ್ವವಿರುವುದು ಪ್ರತ್ಯಕ್ಷಾದಿಗಳಂತೆ ಎಂಬ ಬಾಧಕವಿರುವುದರಿಂದ, ಬಾಧಕವಿಲ್ಲ ಎನ್ನುವುದು ಹೇಗೆ ಕೂಡುವುದು ಎಂದರೆ –

**ನ ಚಾಫಲತ್ವಂ ವಕ್ತವ್ಯಂ ಸರ್ವಸ್ಮೃತ್ಯನುವಾದಯೋಃ ।**

**ಫಲವತ್ವಂ ನ ಚಾಸ್ಮಾಭಿಃ ಪ್ರಾಮಾಣ್ಯಂ ಹಿ ವಿವಕ್ಷಿತಮ್ ॥೨೬॥**

ಹಾಗೆ ಹೇಳುವುದು ಸರಿಯಲ್ಲ. ಏಕೆಂದರೆ ಕೆಲವು ಸ್ಮೃತಿಗಳಿಗೂ ಕೆಲವು ಅನುವಾದಗಳಿಗೂ ಸಫಲತ್ವವು ಕಂಡಿರುವುದರಿಂದ, ಎಲ್ಲ ಸ್ಮೃತ್ಯನುವಾದಗಳಿಗೂ ನಿಷ್ಫಲತ್ವವನ್ನು ಹೇಳತಕ್ಕದ್ದಲ್ಲ. ನಿಷ್ಫಲತ್ವ ಹೇತುವು ಅಪ್ರಯೋಜಕ. ಫಲವತ್ವವು ಪ್ರಾಮಾಣ್ಯಕ್ಕೆ ದ್ಯೋತಕವೆಂದು ನಾವು ಅಂಗೀಕರಿಸಿರುವುದಿಲ್ಲ. ಯಾಥಾರ್ಥ್ಯದ ಅಭಾವವೇ ಅಪ್ರಾಮಾಣ್ಯ ನಿಶ್ಚಾಯಕವು. ಅಪ್ರಾಮಾಣ್ಯಕ್ಕೆ ಕರಣದೋಷ ಬಾಧಕ ಪ್ರತ್ಯಯಗಳು ಪ್ರಯೋಜಕಗಳೇ ಹೊರತು ನಿಷ್ಫಲತ್ವವಲ್ಲ.

ಕರಣದೋಷ, ಬಾಧಕಪ್ರತ್ಯಯಗಳಂತೆಯೇ ನಿಷ್ಫಲತ್ವವೂ ಅಪ್ರಾಮಾಣ್ಯಕ್ಕೆ

ಪ್ರಯೋಜಕ ಎಂದು ಏಕೆ ಒಪ್ಪಬಾರದು ಎಂದರೆ –

**ತೃಣಾದಿದರ್ಶನೇ ಕಿಂ ಚ ಫಲವತ್ತ್ವಂ ನಿಗದ್ಯತೇ ।**

ಗ್ರಾಮಕ್ಕೆ ಹೊರಟ ದಾರಿಹೋಕನಿಗೆ ದಾರಿಯಲ್ಲಿ ಹುಲ್ಲು ಮೊದಲಾದವುಗಳ ದರ್ಶನದಿಂದ ಫಲವುಂಟೆಂದು ಹೇಳಲ್ಪಡುವುದೋ ಏನು? ತೃಣಾದಿ ದರ್ಶನವು ನಿಷ್ಫಲವಾದ್ದರಿಂದ ಅಪ್ರಮಾಣ ಎಂದು ಹೇಳುವುದು ಲೋಕದ ವ್ಯವಹಾರಕ್ಕೆ ವಿರುದ್ಧವಾದುದು. ಆದಪ್ರಯುಕ್ತ ನಿಷ್ಫಲತ್ವವು ಅಪ್ರಾಮಾಣ್ಯಕ್ಕೆ ಹೇತುವಲ್ಲ.

ತೃಣಾದಿ ದರ್ಶನದಿಂದಲೂ ಕಿಂಚಿತ್ ಸುಖದುಃಖಾದಿಗಳು ಹುಟ್ಟುವುದರಿಂದ ಅದಕ್ಕೆ ನಿಷ್ಫಲತ್ವವಿರುವುದಿಲ್ಲ ಎಂದು ಹೇಳಿದರೆ –

**ಸುಖದುಃಖಾದಿಕಂ ಕಿಂಚಿತ್ಸ್ಮೃತಾವಪಿ ಹಿ ದೃಶ್ಯತೇ ॥೨೭॥**

ಸ್ಮೃತ್ಯಾದಿಗಳಲ್ಲೂ ಕಿಂಚಿತ್ ಸುಖದುಃಖಾದಿಗಳು ಕಂಡುಬರುತ್ತವೆಯಷ್ಟೆ. ಆದಪ್ರಯುಕ್ತ 'ಸ್ಮೃತ್ಯಾದಿಗಳು ಅಪ್ರಮಾಣ ನಿಷ್ಫಲತ್ವವಿರುವುದರಿಂದ' ಎನ್ನುವ ಹೇತುವಿಗೆ ಸ್ವರೂಪಾಸಿದ್ಧಿ ಎನ್ನುವ ದೋಷ ಬರುವುದು.

'ಸ್ಮೃತ್ಯಾದಿಕಂ ನ ಪ್ರಮಾಣಂ ಜ್ಞಾತತಾನುತ್ಪಾದಕತ್ವಾತ್ ವ್ಯತಿರೇಕೇಣ ಪ್ರತ್ಯಕ್ಷಾದಿವತ್' ಎನ್ನುವ ಹೇತುವಿನಿಂದ ಸ್ಮೃತಿ ಅನುವಾದಗಳಿಗೆ ಅಪ್ರಾಮಾಣ್ಯ ಬರುವುದು. ಪ್ರತ್ಯಕ್ಷಾದಿಗಳು ಜ್ಞಾತತೆಯನ್ನು ಹುಟ್ಟಿಸುತ್ತವೆಯಾದ್ದರಿಂದ ಪ್ರಮಾಣ. ಅನಧಿಗತಾರ್ಥಗಂತೃತ್ವವೇ ಜ್ಞಾತತಾ. ಅಂದರೆ ಗೊತ್ತಿಲ್ಲದ್ದನ್ನು ತಿಳಿಸಿಕೊಡುವಿಕೆ. ಸ್ಮೃತ್ಯಾದಿಗಳಾದರೋ ಜ್ಞಾತತಾ ಅನುತ್ಪಾದಕವಾದ್ದರಿಂದ ಅಪ್ರಮಾಣ ಎಂದು ಹೇಳುವುದಾದರೆ –

**ನ ಪರಿಚ್ಛೇದಕಾರ್ಯೇಣ ಪ್ರಮಾಣಮಿತಿ ಚ ಪ್ರಮಾ ।**

ಜ್ಞಾತತೆಯನ್ನು ಹುಟ್ಟಿಸುವುದೇ ಪ್ರಮಾಣ ಎನ್ನುವುದು ಸರಿಯಲ್ಲ. ಆದ್ದರಿಂದ ಸ್ಮೃತ್ಯಾದಿಗಳು ಜ್ಞಾತತಾ ಅನುತ್ಪಾದಕಗಳಾದ್ದರಿಂದ ಅಪ್ರಮಾಣ ಎಂದು ಹೇಳಿದ್ದು ಕೂಡುವುದಿಲ್ಲ. ಏಕೆಂದರೆ ಜ್ಞಾತತಾ ವಿಷಯದಲ್ಲಿ ಪ್ರಮಾಣವೇ ಇಲ್ಲ. ಅನಧಿಗತಾರ್ಥಗಂತೃತ್ವವೇ ಪ್ರಮಾಣ ಎಂದರೆ, ಹಿಂದೊಮ್ಮೆ ಘಟವನ್ನು ನೋಡಿ ಅದರ ಜ್ಞಾನ ಮಾಡಿಕೊಂಡಮೇಲೆ ಮತ್ತೊಂದು ದಿನ ಅದಕ್ಕೆ ಸದೃಶವಾದ ಧರ್ಮವುಳ್ಳ ವಸ್ತುವನ್ನು ನೋಡಿ ಅದರಂತೆಯೇ ಇದೂ ಒಂದು ಘಟ ಎಂದು ತಿಳಿದರೆ, ಆ ಘಟದ ಜ್ಞಾನವು ಅಪ್ರಮಾಣವಾಗಬೇಕಾಗುವುದು. ಆದಪ್ರಯುಕ್ತ ಪ್ರಾಮಾಣ್ಯವು ಎಲ್ಲಿದೆಯೋ ಅಲ್ಲಿ ಅನಧಿಗತಾರ್ಥಗಂತೃತ್ವವು ಎನ್ನುವ ವ್ಯಾಪ್ತಿಯೇ ಕೂಡುವುದಿಲ್ಲ.

ಈ ಪ್ರಕಾರವಾಗಿ ಪ್ರಮಾಣದ ಸಾಮಾನ್ಯ ಲಕ್ಷಣವನ್ನು ತಿಳಿಸಿಕೊಟ್ಟು, ಅದರ

ವಿಶೇಷ ಲಕ್ಷಣವನ್ನು ತಿಳಿಸಿಕೊಡುವ ಅಪೇಕ್ಷೆಯುಳ್ಳವರಾಗಿ ಮೊದಲಿಗೆ ಪ್ರತ್ಯಕ್ಷದ ಲಕ್ಷಣವನ್ನು ತಿಳಿಸುತ್ತಾರೆ –

**ನಿರ್ದೋಷಾಕ್ಷೋದ್ಭವಂ ಹ್ಯತ್ರ ಪ್ರತ್ಯಕ್ಷಮಿತಿ ಗೀಯತೇ ॥೨೮॥**

**ಪ್ರಾಕೃತಂ ಶುದ್ಧಂ ಚೈತನ್ಯಮಕ್ಷಂ ತು ದ್ವಿವಿಧಂ ಮತಮ್ ।**

ಪ್ರಮಾಣಗಳಲ್ಲಿ ಅಜ್ಞಾನ ವಿಪರೀತಜ್ಞಾನ ಮೊದಲಾದವುಗಳಿಗೆ ಕಾರಣವಾಗುವ ದೋಷಗಳಿಂದ ರಹಿತವಾದ ಇಂದ್ರಿಯಗಳಿಂದ ಹುಟ್ಟುವ ಜ್ಞಾನವು ಪ್ರತ್ಯಕ್ಷ ಎಂದು ಪ್ರಸಿದ್ಧಿ ಪಡೆದಿದೆ. ಈ ಪ್ರತ್ಯಕ್ಷದಲ್ಲಿಯೂ ಪ್ರಾಕೃತ ಮತ್ತು ಶುದ್ಧಚೈತನ್ಯ ಎಂಬುದಾಗಿ ಎರಡು ವಿಧವೆಂದು ಪ್ರಮಾಣ ಪ್ರಮಿತವಾಗಿದೆ.

**ವಿವರಣೆ:** ಇಲ್ಲಿ ಪ್ರಕೃತಿ ಶಬ್ದದಿಂದ ಅಹಂಕಾರ ಹಾಗೂ ಪಂಚಭೂತಗಳು ಹೇಳಲ್ಪಡುತ್ತವೆ. ಇವು ಸೂಕ್ಷ್ಮರೂಪದಿಂದ ನಿತ್ಯವಾಗಿದ್ದರೂ ಸೃಷ್ಟಿಯಲ್ಲಿ ಸ್ಥೂಲರೂಪದಲ್ಲಿ ಉಪಚಯವನ್ನು ಹೊಂದುವುದರಿಂದ ಪ್ರಾಕೃತ ಎನಿಸಿಕೊಳ್ಳುತ್ತವೆ. ಶುದ್ಧ ಎನ್ನುವುದರ ವಿವರಣೆಯೇ ಚೈತನ್ಯ ಎಂದು. ಪ್ರತ್ಯಕ್ಷದಲ್ಲಿ ಎರಡು ವಿಧವೆಂದರೆ ಇಂದ್ರಿಯಗಳಲ್ಲೂ ಎರಡು ವಿಧ ಎಂದ ಹೇಳಿದಂತಾಯಿತು.

ಇಂದ್ರಿಯಗಳಲ್ಲಿ ಎರಡು ವಿಧವೆಂದು ಪ್ರಮಿತವಾಗಿದೆ ಎಂದು ಹೇಳಿದರು. ಅದು ಹೇಗೆ ಎಂಬುದನ್ನು ವಿವರಿಸುತ್ತಾರೆ –

**ಶುದ್ಧಮೀಶರಮಾಮುಕ್ತೇಷ್ವನ್ಯತ್ರ ಪ್ರಾಕೃತೈರ್ಯುತಮ್ ॥೨೯॥**

**ನಿರ್ದೋಷಮೇವ ಚೈತನ್ಯಮನ್ಯತ್ರೋಭಯಮಿಷ್ಯತೇ ।**

ಈಶ ರಮಾ ಹಾಗೂ ಮುಕ್ತರಲ್ಲಿರುವ ಇಂದ್ರಿಯವು ಶುದ್ಧ ಚೈತನ್ಯ ಸ್ವರೂಪವೇ ಆಗಿರುವುದು. ಸಂಸಾರಿಗಳಲ್ಲಿ ಪ್ರಾಕೃತ ಮತ್ತು ಶುದ್ಧ ಎಂಬ ಎರಡು ವಿಧ ಇಂದ್ರಿಯಗಳೂ ಇರುತ್ತವೆ. ಉತ್ತಮ ಜೀವರಿಗೆ ಸಂಬಂಧಿಸಿದ ಶುದ್ಧಚೈತನ್ಯ ಸ್ವರೂಪವಾದ ಇಂದ್ರಿಯವು ಯಾವಾಗಲೂ ನಿರ್ದೋಷವೇ ಆಗಿರುವುದು. ಮಧ್ಯಮ ಜೀವರಿಗೆ ಸಂಬಂಧಿಸಿದ ಪ್ರಾಕೃತೇಂದ್ರಿಯದಲ್ಲಿ ಕಾಲಭೇದದಿಂದ ಸದೋಷತ್ವ ಹಾಗೂ ನಿರ್ದೋಷತ್ವ ಎಂಬುದಾಗಿ ಎರಡು ವಿಧ ಇಂದ್ರಿಯಗಳು ಅಂಗೀಕರಿಸಲ್ಪಡುತ್ತವೆ. ಅಧಮ ಜೀವರಿಗೆ ಸಂಬಂಧಿಸಿದ ಇಂದ್ರಿಯವು ಸದಾ ದೋಷಯುಕ್ತವೇ ಆಗಿರುವುದು. ಹೀಗೆ ಪ್ರಾಮಾಣಿಕರಿಂದ ಅಂಗೀಕರಿಸಲ್ಪಡುವುದು.

ಯಥಾರ್ಥವಾದ ತತ್ತ್ವಜ್ಞಾನವನ್ನು ಹೊಂದಿರುವ ಸಾತ್ವಿಕರು, ಮಿಶ್ರಜ್ಞಾನವನ್ನು ಹೊಂದಿರುವ ರಾಜಸರು ಹಾಗೂ ಕೇವಲ ಮಿಥ್ಯಾಜ್ಞಾನದಿಂದ ಕೂಡಿರುವ ತಾಮಸರು ಹೀಗೆ ಮೂರು ವಿಧ ಜೀವರ ಬುದ್ಧಿಸ್ವರೂಪವನ್ನು ವಿವರಿಸುವ ಭಗವದ್ಗೀತೆಯ ೧೮ ನೇ ಅಧ್ಯಾಯದ ವಾಕ್ಯವನ್ನು ಇಲ್ಲಿ ಸ್ಮರಿಸಬಹುದಾಗಿದೆ.

ಸಂಸಾರಿಗಳಲ್ಲಿ ಪ್ರವೃತ್ತಿಯು ಸಿದ್ಧಿಸಬೇಕಾದರೆ ಇಂದ್ರಿಯವನ್ನು ಅವಶ್ಯ ಅಂಗೀಕರಿಸಬೇಕು. ಅವರ ಇಂದ್ರಿಯವೂ ಶುದ್ಧವೇ ಆಗಲಿ ಎಂದು ಹೇಳುವುದು ಯುಕ್ತವಲ್ಲ. ಹಾಗಾದರೆ ಸಂಸಾರದಲ್ಲಿಯೂ ನಿಯಮೇನ ಯಥಾರ್ಥಜ್ಞಾನವೇ ಬರಬೇಕಾಗುವುದು. ಆದಪ್ರಯುಕ್ತ ಸಂಸಾರಿಗಳಲ್ಲಿ ಪ್ರಾಕೃತ ಇಂದ್ರಿಯವನ್ನಷ್ಟೇ ಒಪ್ಪಬೇಕು. ಪ್ರಾಕೃತ ಇಂದ್ರಿಯದಿಂದಲೇ ಸರ್ವವೂ ಕೂಡುವಾಗ ಸಂಸಾರಿಗಳಲ್ಲಿ ಶುದ್ಧೇಂದ್ರಿಯವನ್ನು ಅಂಗೀಕರಿಸುವ ಪ್ರಸಕ್ತಿಯೇ ಇರುವುದಿಲ್ಲ. ಮುಕ್ತಾವಸ್ಥೆಯಲ್ಲಿ ಶುದ್ಧೇಂದ್ರಿಯವಿರುವ ಪ್ರಯುಕ್ತ, ಮುಕ್ತಿಗಿಂತ ಮೊದಲು ಸಂಸಾರಾವಸ್ಥೆಯಲ್ಲೂ ಶುದ್ಧೇಂದ್ರಿಯವನ್ನು ಅಂಗೀಕರಿಸುವುದು ಯುಕ್ತವಲ್ಲ. ಆದಪ್ರಯುಕ್ತ ಮುಕ್ತಿಯಂತೆ ಶುದ್ಧೇಂದ್ರಿಯವೂ ಆಮೇಲೆಯೇ ಪ್ರಾಪ್ತವಾಗುವುದೆಂದು ಹೇಳಿದರೆ –

**ಸುಖದುಃಖಾದಿ ವಿಷಯಂ ಶುದ್ಧಂ ಸಂಸಾರಗೇಷ್ವಪಿ ।।೩೦।।**

ಕೇವಲ ಈಶ ರಮಾ ಮುಕ್ತರಲ್ಲಿ ಮಾತ್ರವಲ್ಲ, ಸಂಸಾರಿಗಳಲ್ಲಿಯೂ ಸುಖ ದುಃಖಾದಿಗಳನ್ನು ವಿಷಯಯೀಕರಿಸುವ ಸಲುವಾಗಿ ಶುದ್ಧವಾದ ಇಂದ್ರಿಯವನ್ನು ಅಂಗೀಕರಿಸಬೇಕು.

ಸಂಸಾರಿಗಳಿಗೆ ಸುಖದುಃಖಾದಿವಿಷಯಕವಾದ ಇಂದ್ರಿಯವನ್ನು ಒಪ್ಪೋಣ. ಆದರೆ ಪ್ರಾಕೃತ ಇಂದ್ರಿಯದಿಂದಲೇ ಸುಖದುಃಖಾದಿಗಳ ಜ್ಞಾನ ಸಾಧ್ಯವಿರುವಾಗ ಅದು ಶುದ್ಧವೆಂದೇ ಏಕೆ ಒಪ್ಪಬೇಕು ಎಂದು ಕೇಳಿದರೆ –

**ನಿರ್ದೋಷತ್ವಾತಿನಿಯಮಾತ್ತದ್ಬಲಿಷ್ಠತಮಂ ಮತಮ್ ।**

ಸುಖದುಃಖಾದಿ ವಿಷಯಕವಾದ ಇಂದ್ರಿಯವು ಅತ್ಯಂತ ಬಲಿಷ್ಠವಾದ್ದರಿಂದ ಸರ್ವಥಾ ಅಬಾಧ್ಯವೆಂದು ಸರ್ವಸಮ್ಮತವಾಗಿದೆ. ಅತಿಶಯವಾಗಿ ನಿಯಮೇನ ನಿರ್ದೋಷತ್ವವಿದ್ದರೆ ಮಾತ್ರ ಸರ್ವಥಾ ಅಬಾಧ್ಯತ್ವವು ಕೂಡುವುದು. ನಿಯಮೇನ ನಿರ್ದೋಷತ್ವವು ಶುದ್ಧವಾದ ಸಾಕ್ಷೀಂದ್ರಿಯಕ್ಕೇ ಸಂಬಂಧಿಸಿದ ಧರ್ಮ. ಪ್ರಾಕೃತೇಂದ್ರಿಯಕ್ಕೆ ನಿಯಮೇನ ನಿರ್ದೋಷತ್ವವು ಕೂಡುವುದಿಲ್ಲ. ಆದಪ್ರಯುಕ್ತ ಸಂಸಾರಿಗಳಲ್ಲಿಯೂ ಶುದ್ಧೇಂದ್ರಿಯವನ್ನು ಅಂಗೀಕರಿಸಬೇಕು.

ಹಾಗಾದರೆ 'ಶ್ರೋತ್ರಂ ಚಕ್ಷುಃಸ್ಪರ್ಶನಂ ಚ ರಸನಂ ಘ್ರಾಣಮೇವ ಚ। ಅಧಿಷ್ಠಾಯ ಮನಶ್ಚಾಯಂ ವಿಷಯಾನುಪಸೇವತೇ।। ಎಂದು ಗೀತೆಯಲ್ಲಿ (ಅ–೧೫ ಶ್ಲೋ–೯) ಮನಸ್ಸು ಸೇರಿದಂತೆ ಒಟ್ಟು ಆರು ಇಂದ್ರಿಯಗಳೆಂದು ಹೇಳಿರುವುದರಿಂದ ಇಲ್ಲಿ ಪ್ರಾಕೃತ ಮತ್ತು ಶುದ್ಧ ಎಂದು ಎರಡು ವಿಧ ಇಂದ್ರಿಯವೆಂದು ಹೇಳಿದ್ದು ಅಯುಕ್ತ ಎಂದರೆ –

**ಪಂಚೇಂದ್ರಿಯಮನೋಭೇದಾತ್ಪ್ರಾಕೃತಂ ಷಡ್ವಿಧಂ ಸ್ಮೃತಮ್ ।।೩೧।।**

ಶ್ರೋತ್ರಾದಿ ಐದು ಮತ್ತು ಮನಸ್ಸು ಕೂಡಿಕೊಂಡು ಪ್ರಾಕೃತೇಂದ್ರಿಯವು ಆರು ವಿಧವೆಂದು ಸ್ಮೃತವಾಗಿದೆ.

**ವಿವರಣೆ:** ಪ್ರಾಕೃತ ಇಂದ್ರಿಯವು ಆರು ವಿಧವೆಂದು ಹೇಳಲ್ಪಟ್ಟಿರುವುದರಿಂದ ಗೀತಾ ವಾಕ್ಯಕ್ಕೆ ವಿರೋಧವಿಲ್ಲ. ಇಲ್ಲಿ ಜ್ಞಾನೇಂದ್ರಿಯವನ್ನು ಮಾತ್ರ ವಿವಕ್ಷಾ ಮಾಡಿಕೊಂಡು ಆರು ವಿಧ ಎಂದು ಹೇಳಲಾಗಿದೆ. ಆದ್ದರಿಂದ ಇದರೊಟ್ಟಿಗೆ ಐದು ಕರ್ಮೇಂದ್ರಿಗಳನ್ನೂ ಸೇರಿಸಿಕೊಂಡು ಹನ್ನೊಂದು ಇಂದ್ರಿಯಗಳು ಎಂದು ಕೆಲವು ಕಡೆ ಉಕ್ತವಾಗಿರುವುದಕ್ಕೆ ವಿರೋಧ ಬರುವುದಿಲ್ಲ. ಬುದ್ಧಿಯನ್ನು ಪ್ರತ್ಯೇಕವಾಗಿ ಪರಿಗಣಿಸಿ ಏಳು ಇಂದ್ರಿಯಗಳೆಂದು ಹೇಳಿದರೆ ಬುದ್ಧಿಯು ಮನಸ್ಸಿನಲ್ಲಿಯೇ ಒಂದು ಪ್ರಭೇದವಾಗಿರುವುದರಿಂದ ವಿರೋಧವಿಲ್ಲ. ಶ್ರೋತ್ರೇಂದ್ರಿಯವು ಭೂತಾಕಾಶದ ಪರಿಣಾಮವೆಂದು ಹೇಳಲ್ಪಟ್ಟಿರುವುದರಿಂದ ಆಕಾಶಾತ್ಮಕವಾದ ಶ್ರೋತ್ರೇಂದ್ರಿಯವು ಪ್ರಾಕೃತೇಂದ್ರಿಯವೇ ಎನಿಸುವುದು. ಶ್ರೋತ್ರೇಂದ್ರಿಯಕ್ಕೆ ಅವ್ಯಾಕೃತಾಕಾಶಾತ್ಮಕವನ್ನು ಅಂಗೀಕರಿಸಿದರೆ ಶಬ್ದವು ಎಲ್ಲ ಕಡೆಗಳಲ್ಲಿಯೂ ತೋರಬೇಕಾಗುವುದು. ಇದು ಅನುಭವಕ್ಕೆ ವಿರೋಧ. ಆದಪ್ರಯುಕ್ತ ಶ್ರೋತ್ರೇಂದ್ರಿಯವು ಪ್ರಾಕೃತವೇ ಎಂದು ಒಪ್ಪಬೇಕು. ಹೀಗೆ ಪ್ರಾಕೃತೇಂದ್ರಿಯದಲ್ಲಿಯೇ ಆರು, ಏಳು, ಹತ್ತು, ಹನ್ನೊಂದು, ಹನ್ನೆರಡು ಎಂಬುದಾಗಿ ನಾನಾ ವಿಧಗಳು ಅವಿರೋಧವಾಗಿಯೇ ಕೂಡುತ್ತವೆ. ಆದ್ದರಿಂದ ಪ್ರಾಕೃತ ಮತ್ತು ಶುದ್ಧ ಎಂಬ ವಿವಕ್ಷೆಯಿಂದ ಎರಡು ವಿಧ ಇಂದ್ರಿಯವೆಂಬ ಮೇಲಿನ ವಚನಕ್ಕೆ ವಿರೋಧ ಬರುವುದಿಲ್ಲ.

ಪ್ರತ್ಯಕ್ಷ ಅನುಮಾನ ಮತ್ತು ಆಗಮ ಎಂಬ ಕ್ರಮದಲ್ಲಿ ಅನುಪ್ರಮಾಣದಲ್ಲಿ ಮೂರು ವಿಧವೆಂದು ಉಕ್ತವಾಗಿದೆ. ಪ್ರತ್ಯಕ್ಷದ ನಿರೂಪಣೆಯ ನಂತರ ಈಗ ಜ್ಞಾನ ರೂಪವಾದ ಕೇವಲಪ್ರಮಾಣಕ್ಕೂ, ಜ್ಞಾನಸಾಧನರೂಪವಾದ ಅನುಪ್ರಮಾಣಕ್ಕೂ ಲಕ್ಷಣವನ್ನು ಹೇಳುತ್ತಾರೆ –

**ಅನುಮಾ ಯುಕ್ತಿರೇವೋಕ್ತಾ ವ್ಯಾಪ್ತಿರೇವ ತು ಸಾ ಸ್ಮೃತಾ ।**

**ಪ್ರತಿಜ್ಞಾತಾರ್ಥಸಿದ್ಧ್ಯರ್ಥಂ ವ್ಯಾಪ್ತಿರೇವ ಯದೋದಿತಾ ।।೩೨।।**

**ಅವಶಿಷ್ಟಂ ಕಿಮತ್ರಾಸ್ತಿ ಲಿಂಗಂ ತತ್ರ ವಿಜಾನತಃ ।**

ಅನುಮಾನವು ಯುಕ್ತಿ ಎನ್ನುವ ಶಬ್ದದಿಂದಲೇ ಹೇಳಲ್ಪಡುತ್ತದೆ. ವ್ಯಾಪ್ತಿ ಸ್ಮರಣ ಯುಕ್ತವಾದ ವ್ಯಾಪ್ಯವೇ ಅನುಮಾನ. ಪ್ರತಿಜ್ಞಾತವಾದ ಅರ್ಥದ ಸಿದ್ಧಿಗಾಗಿ ವ್ಯಾಪ್ತಿಯೇ ಹೇಳಲ್ಪಟ್ಟಾಗ ಆ ವಿಷಯದಲ್ಲಿ ಲಿಂಗ ಅಥವಾ ಹೇತುವನ್ನು ತಿಳಿದವನಿಗೆ ಹೇಳಬೇಕಾದುದು ಇನ್ನೇನೂ ಉಳಿದಿರುವುದಿಲ್ಲ.

**ವಿವರಣೆ:** 'ವಿಶೇಷೇಣ ಆಪ್ಯತೇ ಇತಿ ವ್ಯಾಪ್ತಿಃ' ಎನ್ನುವ ವ್ಯುತ್ಪತ್ತಿಯಿಂದ, ಸಾಧ್ಯದೊಂದಿಗೆ ಅವ್ಯಭಿಚರಿತ (ಅಂದರೆ ಎಂದಿಗೂ ಬಿಟ್ಟಿರದ) ಸಂಬಂಧವನ್ನು

ಹೊಂದಿರುವುದೇ ವ್ಯಾಪ್ತಿ. 'ಪರ್ವತದಲ್ಲಿ ಬೆಂಕಿಯಿದೆ ಹೊಗೆಯಿರುವುದರಿಂದ ಅಡಿಗೆಮನೆಯಲ್ಲಿರುವಂತೆ' ಎಂಬ ಅನುಮಾನದಲ್ಲಿ, ಪರ್ವತವು ಪಕ್ಷ, ಬೆಂಕಿಯು ಸಾಧ್ಯ, ಹೊಗೆಯಿರುವುದರಿಂದ ಎನ್ನುವುದು ಹೇತು, ಅಡಿಗೆಮನೆಯು ದೃಷ್ಟಾಂತ. 'ಎಲ್ಲಿ ಹೊಗೆಯಿರುವುದೋ ಅಲ್ಲಿ ನಿಯಮೇನ ಬೆಂಕಿ ಇರುವುದು' ಎನ್ನುವುದು ವ್ಯಾಪ್ತಿ. ಬೆಂಕಿಗೂ ಹೊಗೆಗೂ ಇರುವ ವ್ಯಾಪ್ಯ-ವ್ಯಾಪಕ ಸಂಬಂಧವನ್ನು ತಿಳಿದವನಿಗೆ ಮಾತ್ರ ಹೊಗೆಯನ್ನು ನೋಡಿದಾಗ ವ್ಯಾಪ್ತಿಯ ಸ್ಮರಣೆ ಬಂದು ಬೆಂಕಿಯ ಅಸ್ತಿತ್ವದ ಜ್ಞಾನವಾಗುವುದು. ವ್ಯಾಪ್ತಿಜ್ಞಾನವಿಲ್ಲದವನಿಗೆ ಕೇವಲ ಹೊಗೆಯನ್ನು ನೋಡುವುದರಿಂದ ಬೆಂಕಿಯ ಜ್ಞಾನ ಬರುವುದು ಸಾಧ್ಯವಿಲ್ಲ. ಆದಪ್ರಯುಕ್ತ ವ್ಯಾಪ್ತಿಸ್ಮರಣದಿಂದ ಸಹಿತವಾದ ವ್ಯಾಪ್ಯಜ್ಞಾನವೇ ಅನುಮಾನಕ್ಕೆ ಉಪಯುಕ್ತವು.

ಪರಾರ್ಥಾನುಮಾನಕ್ಕೆ (ಅಂದರೆ ಪರರಿಗೆ ಉಪದೇಶಿಸಲು ಪ್ರಯೋಗಿಸುವ ಅನುಮಾನಕ್ಕೆ) ಪ್ರತಿಜ್ಞಾ, ಹೇತು, ದೃಷ್ಟಾಂತ, ಉಪನಯ, ನಿಗಮನ ಎಂಬುದಾಗಿ ಐದು ಅವಯವಗಳು ನಿಯಮೇನ ಅವಶ್ಯ ಎಂದು ಹೇಳಿದರೆ –

**ಯದಿ ಲಿಂಗಮಸಿದ್ಧಂ ಸ್ಯಾತ್ಕುತ ಏವಾಸ್ಯ ಮಾನತಾ ॥೩೩॥**

**ಯದಿ ಸ್ಮಾರಕಮಾತ್ರಂ ಸ್ಯಾತ್ಸ್ಮರ್ತುರ್ನಾತ್ರ ಪ್ರಯೋಜನಮ್ ।**

ವಿವಾದಿತ ವಿಷಯದಲ್ಲಿ ಲಿಂಗವೇ ಅಸಿದ್ಧವಾಗಿದ್ದರೆ ಆಗ ಅದಕ್ಕೆ ಪ್ರಾಮಾಣ್ಯವಾದರೂ ಹೇಗೆ ಬಂದೀತು? ಬರುವುದಿಲ್ಲ ಎಂದರ್ಥ. ವ್ಯಾಪ್ತಿಜ್ಞಾನದ ಸ್ಮರಣೆಯನ್ನು ಹುಟ್ಟಿಸುವುದು ಮಾತ್ರ ಹೇತು ದೃಷ್ಟಾಂತಾದಿಗಳಿಗೆ ಪ್ರಯೋಜನ ಎಂದು ಹೇಳಿದರೆ, ಈ ಮೊದಲೇ ವ್ಯಾಪ್ತಿಜ್ಞಾನವನ್ನು ಹೊಂದಿದವನಿಗೆ ಹೇತ್ವಾದಿಗಳನ್ನು ತಿಳಿಸುವ ವಚನಗಳು ವ್ಯರ್ಥವೇ ಆಗುತ್ತವೆ.

**ನ ಪಂಚಾವಯವೋಕ್ತೌ ಚ ವಿವಾದಾವಸಿತಿರ್ಭವೇತ್ ॥೩೪॥**

**ದೃಷ್ಟಾಂತಾದಿಷು ಚೈವಂ ಸ್ಯಾತ್ಸಾಧನಂ ಪುನರೇವ ತು ।**

**ಲಿಂಗೋಕ್ತಾವಪಿ ಚೈವಂ ಸ್ಯಾದನುಮಾವಸಿತಿರ್ಧ್ರುವಾ ॥೩೫॥**

ಐದು ಅವಯವಗಳನ್ನು ಹೇಳಿದರೂ ವಿವಾದವು ಅಂತ್ಯಗೊಂಡು ಸಾಧ್ಯದ ಜ್ಞಾನವು ಆಗದೇ ಹೋಗಬಹುದು. ಸಾಧ್ಯದ ಜ್ಞಾನವಾಗಬೇಕಾದರೆ ಶ್ರೋತೃವಿನ ಜ್ಞಾನದ ಮಟ್ಟಕ್ಕೆ ತಕ್ಕಂತೆ ಎಷ್ಟು ಅವಯವಗಳನ್ನು ಹೇಳಬೇಕೋ ಅಷ್ಟನ್ನು ಮಾತ್ರ ಹೇಳಿದರೆ ಸಾಕು. ಕೆಲವರಿಗೆ ಕೇವಲ ದಷ್ಟಾಂತವೊಂದೇ ಸಾಕಾಗಬಹುದು. ಮತ್ತೆ ಕೆಲವರಿಗೆ ಎರಡು, ಮೂರು, ನಾಲ್ಕು ಅಥವಾ ಐದು ಅವಯವಗಳೂ ಅವಶ್ಯವಾಗಬಹುದು. ವ್ಯಾಪ್ತಿಯನ್ನು ಹೇಳುವುದರಿಂದಲೇ ಅನುಮಾನ ಸಂಬಂಧಿಯಾದ ವಾಕ್ಯದ ಪರ್ಯವಸಾನವಾಗುವುದು. ಲಿಂಗದಿಂದಲೂ ವ್ಯಾಪ್ತಿ

ಪಕ್ಷಧರ್ಮತಾಗಳ ಸ್ಮರಣಾದಿಗಳು ಉಂಟಾಗುವುದರಿಂದ, ವ್ಯಾಪ್ತಿಯನ್ನು ಹೇಳಿದರೆ ಹೇಗೋ ಹಾಗೆಯೇ ಲಿಂಗವನ್ನು ಹೇಳಿದರೂ ಅನುಮಾನ ಸಂಬಂಧಿಯಾದ ವಾಕ್ಯದ ಪರ್ಯವಸಾನವು ನಿಶ್ಚಯವಾಗಿ ಆಗುವುದು.

ನಿರ್ದೋಷವಾದ ಯುಕ್ತಿಯೇ ಅನುಮಾನ. ದೋಷದ ಪರಿಜ್ಞಾನವಿದ್ದಾಗ ಮಾತ್ರ ಯುಕ್ತಿಯು ದೋಷರಹಿತವೋ ಅಲ್ಲವೋ ಎಂದು ತಿಳಿಯುವುದು ಸಾಧ್ಯ ಆದಪ್ರಯುಕ್ತ ಮೊದಲಿಗೆ ಯುಕ್ತಿದೋಷಗಳನ್ನು ನಿರೂಪಿಸುವುದು ಅವಶ್ಯಕ. ಧೂಮಾದಿಗಳಿಗೆ ಅಗ್ನ್ಯಾದಿಗಳ ಜ್ಞಾನವನ್ನು ಹುಟ್ಟಿಸುವ ಶಕ್ತಿಯಿದ್ದರೂ, ನಿಶ್ಚಯ ಜ್ಞಾನಕ್ಕೆ ಪ್ರತಿಬಂಧಕವಾದ ದೋಷದಿಂದ ಕೂಡಿದ್ದರೆ, ಸಂಶಯ ವಿಪರ್ಯಯಗಳನ್ನು ಹುಟ್ಟಿಸುತ್ತವೆ. ಯುಕ್ತಿದೋಷಗಳಲ್ಲಿ ಸಾಕ್ಷಾತ್ ಮತ್ತು ವಾಚನಿಕ ಎಂಬುದಾಗಿ ಎರಡು ವಿಧ. ಅದರಲ್ಲಿ ಮೊದಲಿಗೆ ಸಾಕ್ಷಾತ್ ದೋಷವನ್ನು ವಿಭಾಗಮಾಡಿ ಹೇಳುತ್ತಾರೆ –

**ವಿರೋಧೋಽಸಂಗತಿಶ್ಚೈವ ಸಾಕ್ಷಾದ್ಯುಕ್ತೇಸ್ತು ದೂಷಣಮ್ ।**

**ಪ್ರತಿಜ್ಞಾಯಾಮಸಂಬಂಧೋ ಯುಕ್ತೇರುಕ್ತಾ ಹ್ಯಸಂಗತಿಃ ॥೩೬॥**

ಸಾಕ್ಷಾತ್ ದೋಷವೆಂದರೆ ವಚನದ ಸಂಪರ್ಕವಿಲ್ಲದೇ ಅರ್ಥದಲ್ಲಿರತಕ್ಕ ದೋಷ. ಇದರಲ್ಲಿ ವಿರೋಧ ಮತ್ತು ಅಸಂಗತಿ ಎಂಬುದಾಗಿ ಎರಡು ವಿಧ. ಯುಕ್ತಿಗೆ ಪ್ರತಿಜ್ಞಾರ್ಥದ ವಿಷಯದಲ್ಲಿ ಆಕಾಂಕ್ಷಾರೂಪವಾದ ಸಂಬಂಧವು ಇಲ್ಲದಿರುವುದು ಅಸಂಗತಿ.

**ವಿರೋಧೋಽಪಿ ತ್ರಿಧೈವ ಸ್ಯಾತ್ಪ್ರತಿಜ್ಞಾರ್ಥವಿರುದ್ಧತಾ ।**

**ಲಿಂಗರಾಹಿತ್ಯಮವ್ಯಾಪ್ತಿರ್ನ್ಯೂನಾಧಿಕ್ಯೇ ತು ವಾಚಿಕೇ ॥೩೭॥**

ಸಾಧ್ಯವೆಂಬ ಧರ್ಮದಿಂದ ಸಹಿತವಾದ ಧರ್ಮಿಯು ಪ್ರತಿಜ್ಞಾರ್ಥವೆನಿಸುತ್ತದೆ. ಇದಕ್ಕಿರುವ ಪ್ರತಿಸ್ಪರ್ಧಿಯೇ ವಿರೋಧವು. ಯಾವ ಅರ್ಥದಲ್ಲಿ ಸಾಧ್ಯದ ಸಿದ್ಧಿಗೆ ಉಪಯುಕ್ತವಾದ ಲಿಂಗಜ್ಞಾನದ ಅಭಾವವೇ ಲಿಂಗರಾಹಿತ್ಯ. ವ್ಯಾಪ್ತ್ಯಾಭಾವವೇ ಅವ್ಯಾಪ್ತಿ. ಈ ಪ್ರಕಾರವಾಗಿ ಪ್ರತಿಜ್ಞಾರ್ಥವಿರೋಧ, ಲಿಂಗರಾಹಿತ್ಯ ಮತ್ತು ಅವ್ಯಾಪ್ತಿ ಎಂಬುದಾಗಿ ಸಾಕ್ಷಾತ್ ಯುಕ್ತಿ ವಿರೋಧವು ಮೂರೇ ವಿಧ.

ಹೀಗೆ ಸಾಕ್ಷಾತ್ತಾಗಿರುವ ಯುಕ್ತಿಯ ದೋಷಗಳನ್ನು ಹೇಳಿ ಈಗ ವಚನದ ಮೂಲಕ ಉಂಟಾಗುವ ದೋಷಗಳನ್ನು ಹೇಳುತ್ತಾರೆ. ನ್ಯೂನ ಮತ್ತು ಆಧಿಕ್ಯಗಳು ವಾಚನಿಕ ದೋಷಗಳು. ನ್ಯೂನ ಎಂದರೆ ಅವಶ್ಯವಾಗಿ ಹೇಳಬೇಕಾದ್ದನ್ನು ಪೂರ್ತಿಯಾಗಿ ಹೇಳದಿರುವುದು. ಕಾರ್ಯವಾಗಿದ್ದರೂ ಪುನಃ ಅದನ್ನು ಹೇಳುವುದು ಆಧಿಕ್ಯವೆಂಬ ದೋಷಕ್ಕೆ ಕಾರಣ.

ಹಾಗಾದರೆ ಸೋಪಾಧಿಕತ್ವ ಎಂಬ ಉಪಾಧಿನಿಮಿತ್ತಕವಾದ ದೋಷವು ಇರಬೇಕಾದರೆ ಇವಿಷ್ಟೇ ಅನುಮಾನ ದೋಷಗಳು ಎಂದು ಹೇಳುವುದು ಕೂಡುವುದಿಲ್ಲ ಎಂದರೆ, ಸೋಪಾಧಿಕತ್ವವೂ ಹಿಂದೆ ಹೇಳಿದ ದೋಷಗಳಲ್ಲಿಯೇ ಅಂತರ್ಭಾವವಾಗುವುದು ಎಂದು ತೋರಿಸುತ್ತಾರೆ –

**ಸಾಧ್ಯವ್ಯಾಪಕವೈಲೋಮ್ಯಮವ್ಯಾಪ್ತಿಃ ಸಾಧನಸ್ಯ ಚ ।**

'ಸಾಧ್ಯವ್ಯಾಪಕವೈಲೋಮ್ಯ' ಎಂದರೆ ಸಾಧ್ಯಕ್ಕೆ ವ್ಯಾಪಕವಾದ ಉಪಾಧಿಯಿಂದ ಸಾಧನವಾದ ಹೇತುವಿಗೆ ವ್ಯಾಪ್ಯ–ವ್ಯಾಪಕ ಭಾವವಿಲ್ಲದಿರುವುದು ಎಂದರ್ಥ. ಇದು ಅವ್ಯಾಪ್ತಿಯೇ ಆಗಿದೆ. ಸೋಪಾಧಿಕತ್ವ ಎಂಬುದು ಅವ್ಯಾಪ್ತಿಯಲ್ಲಿಯೇ ಅಂತರ್ಭಾವ ಹೊಂದುವುದು.

**ವಿವರಣೆ:** ಸಾಧ್ಯವೆನಿಸಿದ ಅಧರ್ಮಸಾಧನತ್ವ ಇತ್ಯಾದಿಗಳಿಗೆ ವ್ಯಾಪಕವಾದುದು ನಿಷಿದ್ಧತ್ವಾದಿ ಧರ್ಮವು. ಏಕೆಂದರೆ ಎಲ್ಲಿ ಅಧರ್ಮಸಾಧನತ್ವವೋ ಅಲ್ಲಿ ನಿಷಿದ್ಧತ್ವವು ಎಂಬುದಾಗಿ ನಿಯಮವಿರುತ್ತದೆ. ಎಲ್ಲಿ ಹಿಂಸಾತ್ವವೋ ಅಲ್ಲಿ ನಿಷಿದ್ಧತ್ವವು ಎಂಬ ನಿಯಮವಿಲ್ಲ. ಯಾಗೀಯ ಹಿಂಸಾದಲ್ಲಿ ಹಿಂಸಾತ್ವವಿದ್ದರೂ ಅಧರ್ಮಸಾಧನವಲ್ಲ. ಅದ್ದರಿಂದ ನಿಷಿದ್ಧತ್ವವಿಲ್ಲ. ಇದರಿಂದ ಸೋಪಾಧಿಕತ್ವದ ಸ್ವರೂಪವು ಹೇಳಲ್ಪಡುತ್ತದೆ. ಸಾಧ್ಯಕ್ಕೆ ವ್ಯಾಪಕವಾಗಿದ್ದು ಸಾಧನಕ್ಕೆ ವ್ಯಾಪಕವಾಗದಿರುವ ಧರ್ಮವೇ ಉಪಾಧಿ.

ಯಾವುದೇ ರೀತಿಯ ವಿರೋಧವಿದ್ದರೂ ಅದು ಪ್ರತಿಜ್ಞಾರ್ಥ ವಿರೋಧವೇ. ಆದ್ದರಿಂದ ದುರ್ಬಲದಿಂದ ವಿರೋಧವೂ ಪ್ರತಿಜ್ಞಾರ್ಥ ವಿರೋಧವೆಂದಾಗಲಿ ಎಂದರೆ –

**ದುರ್ಬಲೇನ ವಿರೋಧೇಽಪಿ ನ ಪ್ರಮಾಣಮಸಾಧಕಮ್ ॥೩೮॥**

ದುರ್ಬಲದಿಂದ ವಿರೋಧವಿದ್ದರೂ ಅನುಮಾನವು ಅಸಾಧಕವಾಗಲಾರದು. ಆದರೆ ಪ್ರಬಲ ಅಥವಾ ಸಮಬಲ ಪ್ರಮಾಣ ವಿರೋಧವೇ ಪ್ರತಿಜ್ಞಾರ್ಥ ವಿರೋಧವೆನಿಸುತ್ತದೆ ಎಂದು ಹೇಳುತ್ತಾರೆ.

ಹೀಗೆ ಅನುಮಾನ ವಿರೋಧವು ಮೂರಕ್ಕಿಂತ ಹೆಚ್ಚು ಇಲ್ಲವೆಂದು ಸಮರ್ಥಿಸಿದರೂ, ಅನುಮಾನವಿರೋಧದಲ್ಲಿ ಮೂರು ವಿಧವೆಂಬುದು ಯುಕ್ತವಲ್ಲ. ಪ್ರತಿಜ್ಞಾವಿರೋಧವು ಅವ್ಯಾಪ್ತಿಯಲ್ಲಿಯೇ ಸೇರುತ್ತದೆ. ಹೀಗೆ ಆಶಂಕಿಸಿದರೆ, ಭಿಕ್ಷುಪಾದ ಪ್ರಸರಣ ನ್ಯಾಯದಿಂದ(ಭಿಕ್ಷುವಿಗೆ ಕಾಲನ್ನು ಚಾಚುವ ಅವಕಾಶ ದೊರೆತರೆ, ಅದರಿಂದ ಅವನು ಸ್ವಲ್ಪ ಸ್ವಲ್ಪವೇ ಸರಿಯುತ್ತ ಮನೆಯೊಳಗೆ ಪ್ರವೇಶಿಸುತ್ತಾನೆ. ಇದೇ ಭಿಕ್ಷುಪಾದ ಪ್ರಸರಣ ನ್ಯಾಯ) 'ಸ್ವವಾಕ್ಯೇನ' ಇತ್ಯಾದಿ ವಾಕ್ಯದಿಂದ ಪರಿಹರಿಸುತ್ತಾರೆ –

**ಸ್ವವಾಕ್ಯೇನ ವಿರೋಧೇಽಪಿ ನೈವ ಸಾಧಕತಾಂ ವ್ರಜೇತ್ ।**

ಕೇವಲ ಪ್ರಮಾಣವಿರೋಧವಿದ್ದರೆ ಮಾತ್ರವಲ್ಲ, ತನ್ನ ವಾಕ್ಯದಿಂದ ವಿರೋಧವಿದ್ದರೂ ಪ್ರಮಾಣವು ಸಾಧಕತ್ವವನ್ನು ಹೊಂದುವುದೇ ಇಲ್ಲ. ಅಂದರೆ ಸಾಧಕವಾಗುವುದೇ ಇಲ್ಲ.

**ವಿವರಣೆ:** ಪ್ರತಿಜ್ಞಾರ್ಥವಿರೋಧವು ಪ್ರಮಾಣವಿರೋಧ ಮತ್ತು ಸ್ವವಾಕ್ಯ ವಿರೋಧ ಎಂದು ಎರಡು ವಿಧ. ಇದರಲ್ಲಿ ಪ್ರಮಾಣವಿರೋಧವು ಪ್ರಬಲ ಪ್ರಮಾಣವಿರೋಧ ಮತ್ತು ಸಮಬಲ ಪ್ರಮಾಣವಿರೋಧ ಎಂದು ಎರಡು ವಿಧ. ಸ್ವವಾಕ್ಯವಿರೋಧವು ಅಪಸಿದ್ಧಾಂತ ಮತ್ತು ಜಾತಿ ಎಂದು ಎರಡು ವಿಧ. ಜಾತಿಯಾದರೋ ಸ್ವವಚನವಿರೋಧ, ಸ್ವನ್ಯಾಯವಿರೋಧ ಹಾಗೂ ಸ್ವಕ್ರಿಯಾ ವಿರೋಧ ಎಂದು ಮೂರು ವಿಧ. ಆದಪ್ರಯುಕ್ತ ಸ್ವವಾಕ್ಯವಿರೋಧವನ್ನು ಪ್ರತ್ಯೇಕವಾಗಿ ಪರಿಗ್ರಹಿಸಲೇಬೇಕು.

ಹೀಗೆ ಅನುಮಾನದ ದೋಷಗಳನ್ನು ನಿರೂಪಿಸಿ, ಪ್ರಸಂಗವಿರುವುದರಿಂದ, ಪರಕೀಯರು ನಿರೂಪಿಸಿದ ಎಲ್ಲ ನಿಗ್ರಹಸ್ಥಾನಗಳಿಗೂ ವಿರೋಧಾದಿಗಳಲ್ಲಿಯೇ ಅಂತರ್ಭಾವ ಎಂಬುದಾಗಿ ಹೇಳುತ್ತಾರೆ –

**ಸಂವಾದಾನುಕ್ತಿಸಂಯುಕ್ತಾ ಏತ ಏವ ತು ನಿಗ್ರಹಾಃ ।।೩೯।।**

ಸಂವಾದ, ಅನುಕ್ತಿಗಳಿಂದ ಕೂಡಿರುವ ವಿರೋಧ, ಅಸಂಗತಿ, ನ್ಯೂನ, ಆಧಿಕ್ಯ ಇವುಗಳೇ ನಿಗ್ರಹಸ್ಥಾನಗಳು.

**ವಿವರಣೆ:** ಇವುಗಳಿಂದ ಪ್ರತಿವಾದಿಯು ನಿಗ್ರಹಿಸಲ್ಪಡುತ್ತಾನೆ ಅಂದರೆ ಪರಾಜಯಿಸಲ್ಪಡುತ್ತಾನೆ ಎಂಬ ಅರ್ಥದಲ್ಲಿ ಇವು ನಿಗ್ರಹಸ್ಥಾನಗಳು. ಇಲ್ಲಿ ಸ್ಥಾನ ಶಬ್ದವು ನಿಮಿತ್ತ ಎಂಬ ಅರ್ಥದಲ್ಲಿದೆ. ವಿವಾದ ವಿಷಯವಾದ ಪ್ರಮೇಯದ ಅಂಗೀಕಾರವು ಸಂವಾದವೆನಿಸಿದರೆ, ಪರರಿಗೆ ಬೋಧಿಸುವುದಕ್ಕಾಗಿ ಅವಶ್ಯವಾಗಿ ಹೇಳಬೇಕಾಗಿದ್ದನ್ನು ಹೇಳದಿರುವುದೇ ಅನುಕ್ತಿ.

ಕಥೆಯಿಂದ ಹೊರಗಿರುವ ಅಪಸ್ಮಾರ, ಉನ್ಮಾದ ಮೊದಲಾದ ವಿರೋಧಗಳಿಗೆ ನಿಗ್ರಹಸ್ಥಾನವು ಇರುವುದಿಲ್ಲ ಎಂಬುದನ್ನು ತಿಳಿಸುವುದಕ್ಕೆ ಇಲ್ಲಿ 'ತು' ಎಂಬ ಶಬ್ದವು ಪ್ರಯೋಗಿಸಲ್ಪಟ್ಟಿದೆ.

ಹಾಗಾದರೆ ಕಥೆಯೆಂದರೆ ಯಾವುದು ಎಂದು ಕೇಳಿದರೆ, ಆ ಕಥೆಯ ಸ್ವರೂಪವನ್ನು ನಿರೂಪಿಸುವ ಸಲುವಾಗಿ ಕಥೆಯ ಸಾಮಾನ್ಯ ಲಕ್ಷಣ, ವಿಭಾಗ ಹಾಗೂ ಉದ್ದೇಶಗಳನ್ನು ಹೇಳುತ್ತಾರೆ –

**ವಾದೋ ಜಲ್ಪೋ ವಿತಂಡೇತಿ ಕಥಾಸ್ತಿಸ್ರೋ ವಿಜಾನತಾಮ್ ।**

ಅನೇಕ ವಿದ್ವಾಂಸರು ಮಾಡುವ ವಿಚಾರವನ್ನು ವಿಷಯೀಕರಿಸುವ ವಾಕ್ಯ ಸಂದರ್ಭ ರೂಪವಾದುದು ಕಥೆಯೆನಿಸುತ್ತದೆ. ಆ ಕಥೆಗಳಲ್ಲಿ ವಾದ, ಜಲ್ಪ ಹಾಗೂ ವಿತಂಡಾ ಎಂಬುದಾಗಿ ಮೂರು ವಿಧಗಳಿವೆಯೆಂದು ಜ್ಞಾನಿಗಳ ಮತವು.

**ವಿವರಣೆ:** ಕಥೆಯಲ್ಲಿ ಒಂದೇ ವಿಧವೆಂದು ಬೌದ್ಧರು. ವಾದ ವಿತಂಡ ಎಂಬುದಾಗಿ ಎರಡೇ ವಿಧಗಳೆಂದು ಶ್ರೀಹರ್ಷ. ವಾದ, ಜಲ್ಪ, ವಾದವಿತಂಡಾ ಹಾಗೂ ಜಲ್ಪವಿತಂಡಾ ಎಂಬುದಾಗಿ ನಾಲ್ಕು ವಿಧಗಳೆಂದು ಗೌಡನೈಯಾಯಿಕರು. ಇವರ ಮತವನ್ನು ನಿರಾಕರಿಸುವದಕ್ಕಾಗಿ 'ಕಥಾಸ್ತಿಸ್ರೋ ವಿಜಾನತಾಮ್' ಎಂದು ಹೇಳಿದ್ದಾರೆ. ಕಡಿಮೆ ಅಥವಾ ಹೆಚ್ಚಿನ ಸಂಖ್ಯೆಯನ್ನು ಹೇಳುವುದು ಜ್ಞಾನಿಗಳ ಮತಕ್ಕೆ ವಿರೋಧ ಬರುವುದರಿಂದ ಅಯುಕ್ತವು.

ಈಗ ವಾದ, ಜಲ್ಪ ಮತ್ತು ವಿತಂಡಾಗಳ ಲಕ್ಷಣವನ್ನು ಹೇಳುತ್ತಾರೆ –

**ಸ್ವಾರ್ಥಂ ಪರಾರ್ಥಮಪಿ ವಾ ತತ್ತ್ವನಿರ್ಣಯಸಾಧಿನೀ ।।೪೦।।**

**ಕೇವಲಂ ತು ಕಥಾ ವಾದೋ ಜಲ್ಪೋಽರ್ಥಾದಿವ್ಯಪೇಕ್ಷಯಾ ।**

**ಸತಾಮೇವ ಕಥಾ ಜ್ಞೇಯಾ ವಿತಂಡಾ ತ್ವಸತಾಂ ಸತಾಮ್ ।।೪೧।।**

**ಅಪ್ರಕಾಶ್ಯ ಸ್ವಸಿದ್ಧಾಂತಮಸತಾಂ ಪಕ್ಷದೂಷಣಮ್ ।**

ಸ್ವಪ್ರಯೋಜನ ಅಥವಾ ಪರಪ್ರಯೋಜನದ ಉದ್ದೇಶದಿಂದ ನೇರವಾಗಿ ತತ್ತ್ವನಿರ್ಣಯ ಸಾಧಕವಾದ ಕಥೆಯು ವಾದ ಎನಿಸುತ್ತದೆ. ವಾದದಲ್ಲಿ ತತ್ತ್ವನಿರ್ಣಯವಲ್ಲದೆ ಬೇರೆ ಯಾವ ಉದ್ದೇಶವೂ ಇರುವುದಿಲ್ಲ ಎಂದು ತಿಳಿಸಲು ಕೇವಲಂ ಎಂದು ಹೇಳಿದ್ದಾರೆ. ಜಲ್ಪಕಥೆಯಲ್ಲಿಯೂ ತತ್ತ್ವನಿರ್ಣಯದ ಉದ್ದೇಶವಿದ್ದರೂ, ವಾದವು ಜಲ್ಪಕ್ಕಿಂತ ವಿಲಕ್ಷಣ ಎಂದು ತಿಳಿಸಲು 'ತು' ಶಬ್ದವನ್ನು ಪ್ರಯೋಗಿಸಿದ್ದಾರೆ.

ಹಣ ಕೀರ್ತಿ ಇತ್ಯಾದಿಗಳ ಅಪೇಕ್ಷೆಯಿಂದ ಸಜ್ಜನರ ನಡುವೆಯೇ ನಡೆಯುವ ಕಥೆಯು ಜಲ್ಪವೆಂದು ತಿಳಿಯತಕ್ಕದ್ದು. ವಾದದಿಂದ ಬೇರೆ ಎಂದು ತಿಳಿಸಲು 'ಅರ್ಥಾದಿ ವ್ಯಪೇಕ್ಷಯಾ' ಎಂದು ಹೇಳಿದ್ದಾರೆ. ಯದ್ಯಪಿ ವಾದಕಥೆಯೂ ಸಜ್ಜನರ ನಡುವೆಯೇ ನಡೆಯುವುದು ಹಾಗೂ ಹಣ ಕೀರ್ತಿ ಇತ್ಯಾದಿಗಳ ಲಾಭವೂ ಇರುವುದು. ಆದರೆ ವಾದದಲ್ಲಿ ಪ್ರವೃತ್ತರಾದವರಿಗೆ ಅವುಗಳ ಅಪೇಕ್ಷೆಯಿರುವುದಿಲ್ಲ. ವಿತಂಡಾಕ್ಕಿಂತ ವಿಭಿನ್ನ ಎಂದು ತಿಳಿಸಲು 'ಸತಾಮೇವ' ಎಂದು ಹೇಳಿದ್ದಾರೆ.

ಅಸಜ್ಜನರಿಗೂ ಸಜ್ಜನರಿಗೂ ಆಗತಕ್ಕ ವಾದಜಲ್ಪಗಳಿಂದ ವಿಲಕ್ಷಣವಾದ ಕಥೆಯಾದರೋ ವಿತಂಡಾ ಎನಿಸುತ್ತದೆ. ಸಜ್ಜನರು ಸ್ವಸಿದ್ಧಾಂತವನ್ನು ಸಾಧಿಸದೆ, ಅಸಜ್ಜನರ ಪಕ್ಷವನ್ನು ದೂಷಣೆ ಮಾಡುವುದೇ ವಿತಂಡಾ ಕಥೆಯ ಲಕ್ಷಣ. ಈ

ನಿಯಮವಾದರೂ ಏಕೆ ಎಂದು ಪ್ರಶ್ನಿಸಿದರೆ, ತತ್ವಜ್ಞಾನಕ್ಕೆ ಅಯೋಗ್ಯರಾದ ಅಸಜ್ಜನರ ಸಮ್ಮುಖದಲ್ಲಿ ಸಜ್ಜನರು ತಮ್ಮ ಸಿದ್ಧಾಂತವನ್ನು ಸಾಧಿಸಿದರೆ ಅಯೋಗ್ಯರಿಗೂ ತತ್ವಜ್ಞಾನವು ಉಂಟಾಗುವ ಪ್ರಸಂಗ ಬರುವುದು. ಆದರೆ ಅವರಿಗೆ ತತ್ವಜ್ಞಾನವು ನಿಷೇಧಿಸಲ್ಪಟ್ಟಿದೆ.

ಸ್ವಪಕ್ಷವನ್ನು ಸಾಧಿಸದೆ ಪರಪಕ್ಷವನ್ನು ನಿರಾಕರಿಸುವ ಕಥೆಯು ವಿತಂಡಾದ ಲಕ್ಷಣ ಎನ್ನುವುದು ಸರಿಯಲ್ಲ. ಪರಪಕ್ಷದ ಖಂಡನೆಯು ಪರಪಕ್ಷ ಪ್ರತಿಪಾದಕವಾದ ಪ್ರಮಾಣಗಳ ದೂಷಣದಿಂದಲೇ ಆಗಬೇಕು. ನಿರಾಶ್ರಯವಾದ ದೂಷಣವನ್ನು ಮಾಡಲಿಕ್ಕೆ ಸಾಧ್ಯವಿಲ್ಲವಾದ್ದರಿಂದ ಸ್ವಪಕ್ಷಸಾಧನೆಯಿಲ್ಲದ ವಿತಂಡಾದಲ್ಲಿ ಪರಪಕ್ಷ ದೂಷಣೆಯು ಕೂಡುವುದಿಲ್ಲ. ಹೀಗೆ ಆಶಂಕಿಸಿದರೆ –

**ಉಕ್ತೇ ತೈಃ ಪ್ರಥಮಂ ಮಾನೇ ವಕ್ತವ್ಯಂ ತಸ್ಯ ದೂಷಣಮ್ ॥೪೨॥**

ಮೊದಲಿಗೆ ಅಸಜ್ಜನರು ತಮ್ಮ ಪಕ್ಷದ ಸಾಧನೆಗಾಗಿ ಪ್ರಮಾಣವನ್ನು ಹೇಳಬೇಕು. ಅನಂತರ ಸಜ್ಜನರು ಅದರ ದೂಷಣವನ್ನು ಮಾಡಬೇಕು. ವಾದಿಯಾದ ಅಸಜ್ಜನನು ಪರಪಕ್ಷದ ನಿರಾಕರಣೆಯ ಮೂಲಕ ಸ್ವಪಕ್ಷದ ಸಾಧನೆಯನ್ನು ಮಾಡಬೇಕು. ಪ್ರತಿವಾದಿ ಸಜ್ಜನನು ಅವನ ಪ್ರಮಾಣದ ದೂಷಣೆಯನ್ನಷ್ಟೇ ಮಾಡಿದರೆ ಸಾಕು.

**ವಿವರಣೆ:** ವಿದ್ಯೆಯಲ್ಲಿ ಸಮಾನತೆಯಿಲ್ಲದಿದ್ದರೂ ಗುರು ಶಿಷ್ಯ ಮುಂತಾದವರು ವಾದದಲ್ಲಿ ಅಧಿಕಾರ ಹೊಂದುತ್ತಾರೆ. ಏಕೆಂದರೆ ಅವರ ಉದ್ದೇಶ ಕೇವಲ ತತ್ವನಿರ್ಣಯವಷ್ಟೇ ಆಗಿರುತ್ತದೆ. ಸೋಲು–ಗೆಲವು, ಪ್ರತಿಷ್ಠೆ–ಕೀರ್ತಿ ಇತ್ಯಾದಿಗಳು ಮುಖ್ಯವಲ್ಲ. ಆದರೆ ಜಲ್ಪವಿತಂಡಾಗಳಲ್ಲಿ ಸಮಾನವಿದ್ಯೆಯನ್ನು ಹೊಂದಿರುವರಿಗೆ ಮಾತ್ರ ಅಧಿಕಾರವು. ಏಕೆಂದರೆ 'ಯಯೋರೇವ ಸಮಂ ವಿತ್ತಂ ಯಯೋರೇವ ಸಮಂ ಶ್ರುತಂ। ತಯೋರ್ವಿವಾಹೋ ವಾದಶ್ಚ ನೋತ್ತಮಾಧಮಯೋಃ ಕ್ವಚಿತ್' ಎಂಬುದಾಗಿ ಸ್ಮೃತಿಯು ಇರುವುದು. ಇಲ್ಲವಾದರೆ ಅತಿ ನಿಕೃಷ್ಟನಾಗಿರುವವನಿಗೂ ವ್ಯರ್ಥವಾದ ಕೀರ್ತಿಪ್ರಶಸ್ತಿಗಳೂ, ಉತ್ತಮನಾದವನಿಗೆ ಅಪಮಾನವೂ ಸಂಭವಿಸಬಹುದು. 'ಅಪೂಜ್ಯಃ ಪೂಜ್ಯತೇ ಯತ್ರ ಪೂಜ್ಯೋ ಯತ್ರಾವಮಾನಿತಃ। ತ್ರೀಣಿ ತತ್ರ ಭವಿಷ್ಯಂತಿ ದುರ್ಭಿಕ್ಷಂ ಮರಣಂ ಭಯಂ' ಎಂಬುದಾಗಿ ಶ್ರುತಿಯೂ ಇರುವುದು.

ಆದ್ದರಿಂದ ವಾದಿಗಳ ವಿದ್ಯಾಪರೀಕ್ಷೆಯು ಅವಶ್ಯಕವೆಂದು ಹೇಳುತ್ತಾರೆ –

**ವಿದ್ಯಾ ಪರೀಕ್ಷಾಪೂರ್ವೈವ ವಿತಂಡಾ ಜಲ್ಪ ಏವ ಚ ।**

ವಿತಂಡಾ ಜಲ್ಪಗಳಲ್ಲಿ ಚರ್ಚೆ ಪ್ರಾರಂಭಿಸುವ ಪೂರ್ವದಲ್ಲಿಯೇ ವಾದಿ ಪ್ರತಿವಾದಿಗಳ ವಿದ್ಯೆಯ ಮಟ್ಟವನ್ನು ಪರೀಕ್ಷಿಸಿ, ಅವರಲ್ಲಿ ಸಾಮ್ಯವಿದೆಯೆಂದು

ನಿಶ್ಚಯ ಮಾಡಿಕೊಳ್ಳಬೇಕು. ಸಾಮ್ಯವಿದ್ದವರಿಗೇ ಜಲ್ಪ ವಿತಂಡಾಗಳಲ್ಲಿ ಪ್ರವೇಶ.

ಹಾಗಾದರೆ ಜಲ್ಪ ವಿತಂಡಾಗಳಲ್ಲಿ ವಿದ್ಯಾಸಾಮ್ಯಾದಿಗಳನ್ನು ನಿರ್ಧರಿಸಲು ಯಾವ ರೀತಿಯಿಂದ ಪರೀಕ್ಷೆ ಮಾಡಬೇಕು ಎಂದು ಕೇಳಿದರೆ –

**ಉಚ್ಚನೀಚತ್ವನಿರ್ಣೀತಿರ್ಯತೋ ಜಯಪರಾಜಯೌ ।।೪೩।।**

**ವಿನೈವ ತತ್ತ್ವ ನಿರ್ಣೀತಿಂ ನ ಹಿ ಜಲ್ಪಾದಿನಾ ಕ್ವಚಿತ್ ।**

ವಿದ್ಯೆಯಿಂದ ಶ್ರೇಷ್ಠನು ಎಂದು ನಿರ್ಣಯಿಸಲ್ಪಡುವುದೇ ಜಯ, ಕಡಿಮೆಯವನು ಎಂದು ನಿರ್ಣಯಿಸಲ್ಪಡುವುದೇ ಪರಾಜಯ. ಆದಪ್ರಯುಕ್ತ ವಾದದಿದಂಲೇ ವಿದ್ಯಾಪರೀಕ್ಷೆಯನ್ನು ಮಾಡಬೇಕು. ತತ್ವನಿರ್ಣಯಸಾಧನವಾದ ವಾದವನ್ನು ಬಿಟ್ಟು ಜಲ್ಪಾದಿಗಳಿಂದ ಎಂದಿಗೂ ಉಚ್ಚತ್ವ–ನೀಚತ್ವ ಜ್ಞಾನವು ಆಗುವುದು ಸಾಧ್ಯವಿಲ್ಲ.

**ಉಚ್ಚನೀಚತ್ವವಿಜ್ಞಾನಮಿತಿ ವಿದ್ಯಾಪರೀಕ್ಷಣಮ್ ।।೪೪।।**

**ವಾದೇನ ಚೋಚ್ಚನೀಚತ್ವವಿಜ್ಞಾನಂ ಭವತಿ ಸ್ಫುಟಮ್ ।**

**ಇತಿ ವಾದಸ್ಯ ಪೂರ್ವತ್ವಂ ತತ್ಸಿದ್ಧೌ ವ್ಯರ್ಥತಾऽನ್ಯಯೋಃ ।।೪೫।।**

ವಾದದಿಂದಲೇ ಉಚ್ಚತ್ವ–ನೀಚತ್ವ ಜ್ಞಾನವು ಸ್ಪಷ್ಟವಾಗಿ ನಿರ್ಣೀತವಾಗುವುದು. ಆದಕಾರಣ ವಾದಕಥೆಗೆ ಪೂರ್ವತ್ವವು ಅಥವಾ ಕಾರಣತ್ವವು ಬರುವುದು. ಅಂದರೆ ಜಲ್ಪವಿತಂಡಾಗಳನ್ನು ಅಪೇಕ್ಷಿಸುವವರು ವಿದ್ಯಾಪರೀಕ್ಷೆಗಾಗಿ ಮೊದಲು ವಾದಕಥೆ ಯಲ್ಲಿ ತೊಡಗುವುದು ಅನಿವಾರ್ಯ ಎಂದಾಯಿತು.

ವಾದದಿಂದಲೇ ಉಚ್ಚತ್ವ ನೀಚತ್ವ ನಿರ್ಣಯವಾಗುತ್ತಿರಲು ವಿತಂಡಾ ಜಲ್ಪಗಳಿಗೆ ನಿಷ್ಪ್ರಯೋಜಕತ್ವವು ಬರುವುದು. ಆದಕಾರಣ ವಿದ್ಯಾಸಾಮ್ಯತೆ ಕಂಡುಬರದಿದ್ದರೆ ವಿದ್ಯಾಪರೀಕ್ಷೆಗಾಗಿ ನಡೆಸಿದ ವಾದದಿಂದಲೇ ಕಥೆಗೆ ಪರ್ಯವಸಾನವು.

ಜಲ್ಪ ವಿತಂಡಾಗಳನ್ನು ಅಪೇಕ್ಷಿಸುವವರಿಗೆ ಪೂರ್ವದಲ್ಲಿ ವಿದ್ಯಾಪರೀಕ್ಷೆ ನಡೆಸಬೇಕೆಂಬ ನಿಯಮಕ್ಕೆ ಅಪವಾದವನ್ನು ಹೇಳುತ್ತಾರೆ –

**ಬಹುವಿದ್ಯತ್ವಸಿದ್ಧೌ ತು ನೈವ ವಾದೋऽಪಿ ಕಾರಣಮ್ ।**

ಪರೀಕ್ಷೆಗಿಂತ ಮುಂಚೆಯೇ ಲೋಕಸಂವಾದಾದಿಗಳ ಮೂಲಕ ವಾದಿ–ಪ್ರತಿವಾದಿಗಳಲ್ಲಿ ಒಬ್ಬನಿಗೆ ಮತ್ತೊಬ್ಬನಿಗಿಂತ ವಿದ್ಯೆಯಲ್ಲಿ ಆಧಿಕ್ಯವಿರುವುದು ಎಂದು ಸಿದ್ಧವಾಗಿದ್ದರೆ ಆಗ ವಾದಕ್ಕೆ ಕೂಡ ಅವಕಾಶವಿರುವುದಿಲ್ಲ. ಅಂದಮೇಲೆ ಜಲ್ಪ ವಿತಂಡಾಗಳಿಗೆ ಅವಕಾಶವನ್ನು ಕೊಡಕೂಡದು ಎಂದು ಬೇರೆ ಹೇಳಬೇಕೇನು?

ಏಕೆಂದರೆ ವಾದಕಥೆಯು ವಿದ್ಯಾಪರೀಕ್ಷೆಯ ಕಾರಣವಾದುದು.

ಸ್ಪರ್ಧಾ ಮನೋಭಾವವುಳ್ಳವರಿಗೆ ಹಾಗೂ ಖ್ಯಾತಿಯನ್ನು ಅಪೇಕ್ಷಿಸುವವರಿಗೆ ವಾದವು ಕೂಡುವುದಿಲ್ಲ. ಏಕೆಂದರೆ ಅಂಥವರಲ್ಲಿ ಅಸತ್ಸಾಧನ, ಅಸದುತ್ತರ ಮುಂತಾದವುಗಳು ಅವಶ್ಯವಾಗಿ ಇರುತ್ತವೆ. ಆದಕಾರಣ ವಿದ್ಯೆಯ ಸಾಮ್ಯ ವೈಷಮ್ಯಗಳ ನಿರ್ಣಯವು ಸಾಧ್ಯವಿಲ್ಲ ಎಂದು ಆಶಂಕಿಸಿದರೆ –

**ಸಭಾಸಭಾಪಪ್ರಾಶ್ನಿಕಪೂರ್ವಸ್ತು ಸ್ಪರ್ಧಿನಾಮಪಿ ।।೪೬।।**

ವಾದವು ಸಭಾ, ಸಭಾಪತಿ, ಪ್ರಾಶ್ನಿಕರಿಂದ ನಿಯಮಿಸಲ್ಪಟ್ಟಿರುತ್ತದೆ. ಆದಕಾರಣ ಸ್ಪರ್ಧಿಗಳಿಗೂ ವಾದವು ಯುಕ್ತವೇ ಆಗಿದೆ. ಏಕೆಂದರೆ ಸಭೆಯ ನಿಯಮಾವಳಿಗೆ ತಕ್ಕಂತೆ ಹಾಗೂ ಸಭಾಪತಿಯ ಅಪ್ಪಣೆಯಂತೆಯೇ ವಾದವು ನಡೆಯಬೇಕೆಂಬ ನಿಯಮವಿರುತ್ತದೆ. ಅಸತ್ಸಾಧನಾದಿಗಳಿಗೆ ಅವಕಾಶವಿರುವುದಿಲ್ಲ.

ವಾದದಿಂದ ತತ್ವನಿರ್ಣಯ ಸಿದ್ಧಿಯಾದರೂ ಗೆದ್ದವರಿಗೆ ಇಷ್ಟವಾದ ದ್ರವ್ಯಾದಿಗಳು ಸಿದ್ಧಿಸುವುದಿಲ್ಲ ಎಂದು ಹೇಳಿದರೆ, ಹಾಗೆ ಹೇಳಕೂಡದು. ಏಕೆಂದರೆ–

**ವಾದ ಏವೋಭಯಾರ್ಥಃ ಸ್ಯಾನ್ನಿರ್ಣೀತಿಜಯಕಾರಕಃ ।**

ವಾದದಲ್ಲಿ ತತ್ವನಿಶ್ಚಯ ಹಾಗೂ ಜಯ ಎಂಬ ಎರಡು ವಿಧ ಪ್ರಯೋಜನವು ಇರುತ್ತದೆ. ಜಯದಿಂದ ಸಾಧ್ಯವಾದ ದ್ರವ್ಯಾದಿಗಳ ಲಾಭವೂ ಆಗುವುದು.

ವಿದ್ಯೆಯಲ್ಲಿ ಅಸಮರಾಗಿದ್ದರೆ ಜಯಿಸಿದವನಿಗೆ ದ್ರವ್ಯಾದಿಗಳು ಲಭಿಸುತ್ತವೆ. ವಿದ್ಯಾಸಾಮ್ಯವು ನಿರ್ಣೀತವಾದರೆ ಇಬ್ಬರಿಗೂ ದ್ರವ್ಯಾದಿಗಳು ಕೊಡಲ್ಪಡುತ್ತವೆ. ಬೇರೆ ಪ್ರಯೋಜನವಿರುವುದಿಲ್ಲ. ಆದಪ್ರಯುಕ್ತ ಪುನಃ ಜಲ್ಪವಿತಂಡಾಗಳ ಅವಶ್ಯಕತೆಯಿರುವುದಿಲ್ಲ ಎಂದು ಹೇಳಕೂಡದು. ಏಕೆಂದರೆ –

**ತತ್ತ್ವಾಪ್ರಕಾಶ ಏವೈಕೋ ವಿತಂಡಾಜಲ್ಪಯೋಃ ಫಲಮ್ ।।೪೭।।**

ತತ್ವವನ್ನು ಪ್ರಕಾಶಗೊಳಿಸದೇ ಪರವಂಚನಾ ಸಾಮರ್ಥ್ಯವನ್ನು ಹೊಂದಿರುವ ವಾದಿಗೆ ಅದರಿಂದ ದ್ರವ್ಯಾದಿಗಳ ಲಾಭವೊಂದೇ ವಿತಂಡಾಜಲ್ಪಗಳ ಫಲವು. ಆದಪ್ರಯುಕ್ತ ಜಲ್ಪವಿತಂಡಾಗಳಲ್ಲಿ ಪ್ರವೃತ್ತಿಯು ಕೂಡುವುದು.

ಹೀಗೆ ವಾದಕಥೆಯಿಂದ ವಿದ್ಯಾಪರೀಕ್ಷೆಯೆಂಬ ಪಕ್ಷವು ಸಮರ್ಥಿತವಾಯಿತು. ಈಗ ಬೇರೆ ರೀತಿಯಿಂದಲೂ ಸಾಧ್ಯವೆಂಬ ಪಕ್ಷವನ್ನು ಸಮರ್ಥಿಸುತ್ತಾರೆ –

**ವಿನಾ ವಾದೇನ ವಿದ್ಯಾಯಾ ಯದಿ ಶಕ್ಯಂ ಪರೀಕ್ಷಣಮ್ ।**

**ಸ್ಯಾಜ್ಜಲ್ಪಾದಿರಪಿ ಕ್ವಾಪಿ ವಾದ ಏವಾನ್ಯಥಾ ಭವೇತ್ ।।೪೮।।**

ವಾದಕಥೆಯ ಸಹಾಯವಿಲ್ಲದೆ ಸಂಪ್ರತಿಪನ್ನ ವಿದ್ವತ್ಪ್ರಸಿದ್ಧ್ಯಾದಿಗಳಿಂದ ವಿದ್ಯೆಯ ಪರೀಕ್ಷೆಯು ಎಲ್ಲಿಯಾದರೂ ಸಾಧ್ಯವಿದ್ದ ಪಕ್ಷದಲ್ಲಿ, ಆಗ ಸಮಾನ ವಿದ್ಯೆಯನ್ನು ಹೊಂದಿರುವವರಿಗೆ ವಾದಪೂರ್ವಪರೀಕ್ಷೆಯಿಲ್ಲದೆಯೇ ಜಲ್ಪವಿತಂಡಾದಿಗಳಿಗೆ ಅರ್ಹತೆಯು ಲಭಿಸುವುದು. ವಾದವಿಲ್ಲದೇ ವಿದ್ಯಾಪರೀಕ್ಷೆಯು ಅಶಕ್ಯವಾಗಿರುವ ಸಂದರ್ಭಗಳಲ್ಲಿ ಮಾತ್ರ ವಾದವು ಪ್ರಥಮ ಕರ್ತವ್ಯವಾಗುವುದು.

ಹಾಗಾದರೆ ವಿದ್ಯಾಪರೀಕ್ಷೆಯಾದರೂ ವಾದದಿಂದಲೇ ಆಗಬೇಕು ಎನ್ನುವುದು ಸರಿಯಲ್ಲ. ಕೇವಲ ತತ್ತ್ವನಿರ್ಣಯಕ್ಕೋಸ್ಕರ ಎಂದು ಹೇಳುವ ಹಾಗಿಲ್ಲ. ಏಕೆಂದರೆ ವಾದದಿಂದ ವಿದ್ಯಾಪರೀಕ್ಷೆ ಮಾಡಿದಾಗ ಅಲ್ಲಿಯೂ ಜಯಾಪಜಯಗಳು, ದ್ರವ್ಯಾದಿಗಳ ಲಾಭವು ಆಗುವುದೆಂದು ಹೇಳಲಾಗಿದೆ. ಇದು ಜಲ್ಪದ ಲಕ್ಷಣ. ಆದ್ದರಿಂದ ವಿದ್ಯಾಪರೀಕ್ಷೆಗೆ ಜಲ್ಪ–ವಾದಗಳ ಸಮಾಹಾರವಾದ ಬೇರೊಂದು ಕಥೆ ಏಕೆ ಆಗಬಾರದು? ಹಾಗಲ್ಲವೆಂದರೆ, ಇಲ್ಲಿ ವಾದಕಥೆಗೆ ಜಲ್ಪಶಬ್ದ ವಾಚ್ಯತ್ವವನ್ನು ಮಾತ್ರ ಆಪಾದಿಸುವುದೋ ಅಥವಾ ವಾದಶಬ್ದ ವಾಚ್ಯತ್ವವಿಲ್ಲವೆಂದೋ ಅಥವಾ ಎರಡು ನಿಮಿತ್ತಗಳು ಸೇರಿರುವಾಗ ವಾದಶಬ್ದಕ್ಕೆ ವ್ಯವಹಾರವು ಯುಕ್ತವಲ್ಲವೆಂದು ಆಪಾದಿಸಲ್ಪಡುವುದೋ ಎಂದು ಕೇಳಿದರೆ, ಈ ಎಲ್ಲ ಪ್ರಶ್ನೆಗಳಿಗೂ ಉತ್ತರವನ್ನು ಹೇಳುತ್ತಾರೆ –

**ಜಲ್ಪ ಇತ್ಯಪಿ ನಾಮಸ್ಯಾದ್ವಾದಸ್ಯೈತಾದೃಶಸ್ಯ ತು ।**

ಎರಡು ನಿಮಿತ್ತಗಳ ಸಮಾಹಾರವಾದ ವಾದಕ್ಕೆ ಜಲ್ಪ ಎನ್ನುವ ಹೆಸರು ಬರುವುದೆಂದು ಹೇಳುತ್ತಾರೆ.

**ವಿವರಣೆ:** ಇದಕ್ಕೆ ಸಂವಾದಿಯಾಗಿ 'ತುಲಾಯಾಂ ಪ್ರಮಾಣ ಪ್ರಮೇಯವತ್' ಎಂಬ ನ್ಯಾಯಸೂತ್ರದ ದೃಷ್ಟಾಂತವನ್ನು ನ್ಯಾಯಸುಧಾಕಾರರು ಈ ಸಂದರ್ಭದಲ್ಲಿ ನೀಡಿದ್ದಾರೆ. ಒಂದು ತಕ್ಕಡಿಯ ಪ್ರಾಮಾಣ್ಯವು ಇನ್ನೊಂದು ತಕ್ಕಡಿಯಿಂದ ನಿರ್ಧರಿಸಲ್ಪಡಲು ಆ ತಕ್ಕಡಿಯು ಪ್ರಮೇಯವೆನಿಸುವುದು. ಅದೇ ತಕ್ಕಡಿಯು ಚಿನ್ನ ಇತ್ಯಾದಿಗಳ ಭಾರವನ್ನು ನಿರ್ಧರಿಸಲು ಬಳಸಿದಾಗ ಅದು ಪ್ರಮಾಣವೆನಿಸುವುದು. ಹೀಗೆ ಎರಡು ನಿಮಿತ್ತಗಳ ಕಾರಣದಿಂದ ಒಂದೇ ತಕ್ಕಡಿಗೆ ಪ್ರಮಾಣ ಮತ್ತು ಪ್ರಮೇಯ ಎಂಬುದಾಗಿ ಉಭಯ ಶಬ್ದವಾಚ್ಯತ್ವವು ಕೂಡುವಂತೆ, ವಾದ–ಜಲ್ಪ ಎಂಬುದಾಗಿ ವಾದಕ್ಕೆ ಎರಡು ನಿಮಿತ್ತಗಳಿಂದ ಉಭಯಶಬ್ದವಾಚ್ಯತ್ವವೂ ಕೂಡುವುದು ಎಂದು ತಾತ್ಪರ್ಯ.

ವಾದಕಥೆಯಲ್ಲಿ ಪ್ರವೇಶ ಪಡೆಯಲು ವಾದಿಗಳಿಗೆ ಅಧಿಕಾರವಿದೆಯೋ ಇಲ್ಲವೋ ಎಂಬುದನ್ನು ನಿರ್ಣಯಿಸುವುದೇ ವಿದ್ಯಾಪರೀಕ್ಷೆಯ ಮುಖ್ಯ ಉದ್ದೇಶ. ದ್ರವ್ಯಾದಿ ಲಾಭವು ಅವಾಂತರ ನಿಮಿತ್ತವಾದ್ದರಿಂದ ಮುಖ್ಯವಲ್ಲ. ಆದಪ್ರಯುಕ್ತ ವಿದ್ಯಾಪರೀಕ್ಷಾರ್ಥವಾದ ಕಥೆಯು ವಾದವೇ ಆಗುವುದು ಎಂದು ಹೇಳುತ್ತಾರೆ –

**ಪ್ರತಿಜ್ಞಾಮಾತ್ರಸಾಧ್ಯತ್ವಮಪಿ ಸ್ಯಾದ್ಯಾಜ್ಞವಲ್ಕ್ಯವತ್ ॥೪೯॥**

**ಸಂವಾದೇ ವಾದಿನೋಃ ಕ್ವಾಪಿ ವಿವಾದೇ ಹೇತುರಿಷ್ಯತೇ ।**

ವಿದ್ಯಾಪರೀಕ್ಷೆಗಾಗಿರುವ ಕಥೆಯಲ್ಲಿ ಯಾವುದಾದರೊಂದು ಪ್ರಮೇಯದ ಬಗ್ಗೆ ಕೇವಲ ಪ್ರತಿಜ್ಞೆಯಿಂದಲೇ ಅಂದರೆ ಪ್ರಮಾಣೋಪನ್ಯಾಸವಿಲ್ಲದ ವಚನದಿಂದಲೇ, ಯಾಜ್ಞವಲ್ಕ್ಯನ ಕಥೆಯಲ್ಲಿ ಹೇಗೋ ಹಾಗೆ, ಜ್ಞಾಪಕತ್ವವು ಆಗುವುದು. ವಾದಿ ಪ್ರತಿವಾದಿಗಳಿಗೆ ಸಂವಾದದಲ್ಲಿ ಪರಸ್ಪರ ಆಪ್ತತ್ವವಿದ್ದರೆ ಪ್ರತಿಜ್ಞಾಮಾತ್ರದಿಂದಲೇ ಪ್ರಮೇಯವು ತಿಳಿಯಲ್ಪಡುವುದು. ವಿವಾದವಿದ್ದರೆ ಪ್ರಮೇಯಕ್ಕೆ ಹೇತುವಾದ ಪ್ರಮಾಣವೆಂದು ಮಾತ್ರ ಅಂಗೀಕರಿಸಲ್ಪಡುವುದು. ಇದರಿಂದ ವಿದ್ಯಾಪರೀಕ್ಷಾರ್ಥ ಕಥೆಯು ವಾದವೆಂದೇ ನಿರ್ಣೀತವಾಗುವುದು.

**ವಿವರಣೆ:** ಬೃಹದಾರಣ್ಯೋಪನಿಷತ್ತಿನಲ್ಲಿ ಐದನೆಯ ಅಧ್ಯಾಯದಲ್ಲಿ ಶಾಕಲ್ಯ ಬ್ರಾಹ್ಮಣದಲ್ಲಿ, 'ಕತ್ಯೇವ ದೇವತಾ ಯಾಜ್ಞವಲ್ಕ್ಯ?' (ದೇವತೆಗಳು ಎಷ್ಟು ಜನ?) ಎಂದು ಶಾಕಲ್ಯನು ಯಾಜ್ಞವಲ್ಕ್ಯನನ್ನು ಪ್ರಶ್ನಿಸಿದಾಗ, ಅದಕ್ಕೆ ಉತ್ತರವಾಗಿ 'ತ್ರಿಯಸ್ತ್ರಿಂಶತ್' (ಮೂವತ್ತು ಮೂರು) ಎಂಬ ವಚನಮಾತ್ರದಿಂದಲೇ ಯಾಜ್ಞವಲ್ಕ್ಯನು ಪ್ರತಿಜ್ಞೆ ಮಾಡಿರುವನು. ವಿದ್ಯಾಪರೀಕ್ಷೆಗಾಗಿಯೇ ಈ ರೀತಿಯ ಪ್ರಶ್ನೋತ್ತರವು ಎಂಬುದು ಉಪಕ್ರಮವನ್ನು ನೋಡಿದಾಗ ತಿಳಿಯುತ್ತದೆ. ವಿದ್ಯಾಪರೀಕ್ಷಾರ್ಥ ಕಥೆಯಲ್ಲಿ ಕೇವಲ ಪ್ರತಿಜ್ಞೆಯಿಂದಲೇ ಸಾಧ್ಯಜ್ಞಾಪನವು ಆಗುವುದೆಂದು ಈ ದೃಷ್ಟಾಂತದಿಂದ ಸಿದ್ಧಿಸುತ್ತದೆ.

ಈಗ ಸಭಿಕರು, ಸಭಾಪತಿ ಹಾಗೂ ಪ್ರಾಶ್ನಿಕರ ಲಕ್ಷಣವನ್ನು ತಿಳಿಸುತ್ತಾರೆ –

**ಸಭಾ ಸಭಾಪತಿಶ್ಚೈವ ಪ್ರಾಶ್ನಿಕಾಶ್ಚೈವ ವೈಷ್ಣವಾಃ ॥೫೦॥**

**ರಾಗದ್ವೇಷವಿಹೀನಾಶ್ಚ ಸ್ಯುಃ ಸಭ್ಯಾಃ ಸರ್ವವೇದಿನಃ ।**

ಸಭಿಕರು, ಸಭಾಪತಿ ಹಾಗೂ ಪ್ರಾಶ್ನಿಕರು ವಿಷ್ಣುಭಕ್ತಿಯುಳ್ಳವರೇ ಆಗಿರಬೇಕು. ಅವರಿಗೆ ರಾಗದ್ವೇಷಗಳು ಇರಬಾರದು. ಸಭಿಕರು ಹಾಗೂ ಪ್ರಾಶ್ನಿಕರು ವಾದಿಪ್ರತಿವಾದಿಗಳ ದರ್ಶನದ ಹಾಗೂ ಕಥೋಪಯುಕ್ತವಾದ ಸರ್ವವನ್ನೂ, ಅಂದರೆ ವ್ಯಾಕರಣಾದಿಗಳನ್ನು, ತಿಳಿದವರಾಗಿರಬೇಕು. ಸಭಾಪತಿಯು ಸರ್ವವನ್ನೂ ತಿಳಿದಿರುವುದಕ್ಕೆ ಕಥೆಯಲ್ಲಿ ಉಪಯೋಗವಿಲ್ಲ. ಇದನ್ನು ತಿಳಿಸುವ ಉದ್ದೇಶದಿಂದ ಇಲ್ಲಿ ಸಭಾಪತಿಯನ್ನು ಉಲ್ಲೇಖಿಸಿಲ್ಲ.

ವಾದಿ-ಪ್ರತಿವಾದಿಗಳ ಗುಣದೋಷಗಳನ್ನು ನಿರ್ಣಯಿಸುವಲ್ಲಿ ಪ್ರಾಶ್ನಿಕರ ಉಪಯೋಗವಿದೆ. ಆದ್ದರಿಂದ ಅವರಿಗೆ ಸರ್ವ ವಿಷಯಕ ಜ್ಞಾನವಿರಬೇಕೆಂದು ಅಂಗೀಕರಿಸುತ್ತೇವೆ. ಆದರೆ ಸಭಿಕರಿಗೆ ಇದರ ಅವಶ್ಯಕತೆ ಏಕೆ ಎಂದು ಕೇಳಿದರೆ –

**ಪ್ರಾಶ್ನಿಕಾಶ್ಚೈತದಜ್ಞಾನೇ ಸಭ್ಯಾಶ್ಚೈಷಾಂ ಚ ದೂರಗಾಃ ।।೫೧।।**

**ಪ್ರಮಾಣಂ ನಿರ್ಣಯಾಯ ಸ್ಯುಃ ಪಕ್ಷಪಾತವಿವರ್ಜಿತಾಃ ।**

ಕೆಲವು ಸಂದರ್ಭಗಳಲ್ಲಿ ಪ್ರಾಶ್ನಿಕರಿಗೂ ಕೆಲವು ಸೂಕ್ಷ್ಮವಾದ ಪ್ರಮೇಯಗಳ ಬಗ್ಗೆ ಅಜ್ಞಾನ ಬರಬಹುದು. ಸಂಬಂಧಿಸಿದ ಪ್ರಮೇಯದ ಬಗ್ಗೆ ಜ್ಞಾನವಿರುವ ಹಾಗೂ ಪಕ್ಷಪಾತರಹಿತರಾದ ಸಭಿಕರೂ, ವಾದಿ–ಪ್ರತಿವಾದಿಗಳ ಗುಣದೋಷಗಳ ನಿರ್ಣಯದ ವಿಷಯದಲ್ಲಿ, ಪ್ರಮಾಣರೆನಿಸುತ್ತಾರೆ. ಆ ಸಭಿಕರಿಗೂ ಅಜ್ಞಾನವಿದ್ದ ಪಕ್ಷದಲ್ಲಿ, ಪಕ್ಷಪಾತರಹಿತರಾದ ದೇಶಾಂತರದಲ್ಲಿರುವ ಸಭ್ಯರೂ ವಾದಿಗಳ ಗುಣದೋಷಗಳ ನಿರ್ಣಯದಲ್ಲಿ ಪ್ರಮಾಣರೆನಿಸುತ್ತಾರೆ.

'ಅಪ್ರಕಾಶ್ಯ ಸ್ವಸಿದ್ಧಾಂತಂ' ಎಂದು ವಿತಂಡಾ ಕಥೆಯ ಲಕ್ಷಣವು ಹೇಳಲ್ಪಟ್ಟಿದೆ. ಅದು ವಾದ ಜಲ್ಪಗಳಿಂದ ಹೇಗೆ ಭಿನ್ನವಾಗಿದೆ ಎಂಬುದನ್ನು ತಿಳಿಸುತ್ತಾರೆ –

**ಉಭಾಭ್ಯಾಂ ಸಾಧನಂ ಚೈವ ದೂಷಣಂ ವಾದಜಲ್ಪಯೋಃ ।।೫೨।।**

ವಾದಜಲ್ಪಗಳಲ್ಲಿ ವಾದಿಪ್ರತಿವಾದಿಗಳಿಬ್ಬರಿಂದಲೂ ಸ್ವಪಕ್ಷಸಾಧನವೂ, ಪರಪಕ್ಷ ದೂಷಣವೂ ಮಾಡಲ್ಪಡತಕ್ಕದ್ದು. ವಿತಂಡಾದಲ್ಲಾದರೋ ಕೇವಲ ಪರಪಕ್ಷ ದೂಷಣದಿಂದಲೇ ಕೃತಾರ್ಥತೆಯು ಎಂದು ಹಿಂದೆ ಪ್ರತಿಪಾದಿಸಲಾಗಿದೆ. ವಾದಜಲ್ಪಗಳಲ್ಲಿ ಸ್ವಪಕ್ಷಸಾಧನೆಯೂ ಅವಶ್ಯಕ ಎಂದು ಇಲ್ಲಿ ಹೇಳಿರುವುದರಿಂದ, ಇವುಗಳಿಗೆ ವಿತಂಡಾ ಕಥೆಯಿಂದ ಪ್ರತ್ಯೇಕವಾದ ಲಕ್ಷಣ ಹೇಳಲ್ಪಟ್ಟಿತು.

ವಾದಿ ಪ್ರತಿವಾದಿಗಳಿಬ್ಬರೂ ಸೂಕ್ತವಾದ ಪ್ರಮಾಣಗಳಿಂದ ಮಂಡನೆ ಮತ್ತು ಖಂಡನೆಗಳನ್ನು ಸಾಧಿಸಬೇಕು ಎಂದು ಹೇಳಲಾಯಿತು. ಇಲ್ಲಿ ಸಾಧನಕ್ಕಾಗಿ ಯಾವ ಪ್ರಮಾಣವನ್ನು ಪ್ರಯೋಗಿಸಬೇಕು ಎಂದರೆ, ಎಲ್ಲಿ ಯಾವ ಪ್ರಮಾಣವು ಅವಶ್ಯಕವೋ ಅದನ್ನೇ ಹೇಳಬೇಕು ಎಂದು ಉತ್ತರಿಸಬಹುದು. ಇದು ಒಪ್ಪತಕ್ಕದ್ದೇ ಸರಿ. ಆದರೆ ಒಂದು ವಿಷಯದಲ್ಲಿ ಒಂದಕ್ಕಿಂತ ಹೆಚ್ಚು ಪ್ರಮಾಣವಿದ್ದರೆ ಎಲ್ಲವನ್ನೂ ಹೇಳಬೇಕೋ, ಅಥವಾ ಒಂದೇ ಪ್ರಮಾಣ ಹೇಳಿದರೆ ಸಾಕೋ, ಅದರಲ್ಲಿಯೂ ಯಾವ ಪ್ರಮಾಣವನ್ನು ಹೇಳುವುದು ಎಂದು ಆಶಂಕಿಸಿದರೆ –

**ಸದ್ಭಿರಾಗಮ ಏವೈಕಃ ಪ್ರಯೋಜ್ಯೋಽಭೀಷ್ಟಸಾಧಕಃ ।**

**ಸ್ವಸಿದ್ಧಾಂತಾನುಸಾರೇಣ ಹ್ಯಸದ್ಭಿರನುಮೋಚ್ಯತೇ ।।೫೩।।**

ಸಜ್ಜನರಿಂದ ಅಭೀಷ್ಟಸಾಧಕವಾದ ಮುಖ್ಯವಾದ ಆಗಮವೊಂದೇ ಪ್ರಮಾಣವಾಗಿ ಪ್ರಯೋಗಿಸಲ್ಪಡಬೇಕು. ಅಸಜ್ಜನರಿಂದ ತಮ್ಮ ಸಿದ್ಧಾಂತದ ಅನುಸಾರವಾಗಿಯೇ ಅನುಮಾನ ಅಂದರೆ ಯುಕ್ತಿಯು ಪ್ರಮಾಣರೂಪವಾಗಿ ಹೇಳಲ್ಪಡುತ್ತದೆ. ಹೀಗೆ ನಿಯಮವಿದೆ. ಇಲ್ಲದಿದ್ದರೆ ಕಥೆಯೇ ಕೂಡುವುದಿಲ್ಲ.

ಸಜ್ಜನರು ಆಗಮಪ್ರಮಾಣವನ್ನು ಹೇಳಬೇಕೆಂದು ಹೇಳಿದ್ದು ಯುಕ್ತವಲ್ಲ. ಏಕೆಂದರೆ ವೈದಿಕನಾದ ಪ್ರತಿವಾದಿಗೆ ಅದನ್ನು ದೂಷಿಸಿದಲ್ಲಿ ಅಪಸಿದ್ಧಾಂತವು ಬರುವುದು. ದೂಷಣೆ ಮಾಡದಿದ್ದರೆ, ಪರಪಕ್ಷದೂಷಣೆಯಿಲ್ಲವಾದ್ದರಿಂದ ಕಥಾ ಪ್ರಸಂಗವೇ ಇಲ್ಲದಂತಾಗುತ್ತದೆ. ಹೀಗೆ ಆಶಂಕಿಸಿದರೆ –

**ಪ್ರತ್ಯಕ್ಷಾಗಮವೈರೂಪ್ಯಮಾಶ್ರಿತ್ಯಾನ್ಯಾರ್ಥತೈವ ತು ।**

**ಆಗಮೇ ದರ್ಶನೀಯಾತ್ರ ದೋಷೋ ಲಿಂಗವಿಲೋಮತಾ ॥೫೪॥**

**ಲಿಂಗಾನುಕೂಲ್ಯಂ ಸ್ವಾರ್ಥಸ್ಯ ಶ್ರುತ್ಯಾದೀನಾಮನುಗ್ರಹಃ ।**

ವಾದಿಯಿಂದ ಪ್ರಯೋಗಿಸಲ್ಪಟ್ಟ ಆಗಮಕ್ಕೆ ಪರಾಭಿಮತವಾದ ಅರ್ಥದಲ್ಲಿ ಪ್ರತ್ಯಕ್ಷದಿಂದ ವಿರೋಧ ಕಂಡುಬಂದರೆ, ಪ್ರತ್ಯಕ್ಷಕ್ಕೆ ಅವಿರೋಧವಾಗಿ ಆಗಮಕ್ಕೆ ಅರ್ಥವನ್ನು ತೋರಿಸತಕ್ಕದ್ದು. ಇದರಿಂದ ಆಗಮಕ್ಕೆ ಅಪ್ರಮಾಣದ ನಿವಾರಣೆಯಾಗುವುದರಿಂದ ಅಪಸಿದ್ಧಾಂತವೆನಿಸುವುದಿಲ್ಲ. ಆಗಮವು ಪ್ರತ್ಯಕ್ಷಕ್ಕೆ ವಿರೋಧವಾಗಿದೆ ಎಂಬ ಪ್ರತಿವಾದಿಯ ಹೇಳಿಕೆಯನ್ನು, ಆಗಮಕ್ಕೆ ಅನ್ಯಾರ್ಥ ಮಾಡುವ ಮೂಲಕ, ದೂಷಣೆ ಮಾಡುವುದರಿಂದ ಪರಮತ ಖಂಡನೆಯೂ ಆಯಿತು. ಜೊತೆಗೆ ಪರವಾದಿಯ ಹೇಳಿಕೆಗೆ ಉಪಕ್ರಮಾದಿ ಲಿಂಗವಿರೋಧವೆಂಬ ದೋಷವನ್ನೂ ತೋರಿಸತಕ್ಕದ್ದು. ಅಲ್ಲದೆ ತನ್ನ ಅರ್ಥಕ್ಕೆ ಲಿಂಗಾನುಕೂಲ್ಯವನ್ನೂ, ವೇದ ಮೊದಲಾದವುಗಳ ಅನುಗ್ರಹವನ್ನೂ (ಸಮ್ಮತಿಯನ್ನೂ) ತೋರಿಸತಕ್ಕದ್ದು.

ಅನುಮಾನದ ಪ್ರಯೋಗದಲ್ಲಿ ತಮ್ಮ ತಮ್ಮ ಸಿದ್ಧಾಂತದ ಪ್ರಕಾರ ನಿಯಮೇನ ಇಂತಿಷ್ಟೇ ಅವಯವಗಳಿರಬೇಕು ಎಂಬ ಕಲ್ಪನೆಯನ್ನು ಸಮರ್ಥಿಸಬೇಕು ಎಂಬ ಪರಕೀಯನ ಹೇಳಿಕೆಯು ಸರಿಯಲ್ಲ. ಏಕೆಂದರೆ ಈ ರೀತಿಯ ಸಮರ್ಥನೆ ಅಶಕ್ಯವೆಂದು ಹೇಳುತ್ತಾರೆ –

**ತ್ರಿಪಂಚಾವಯವಾಮೇವ ಯುಗ್ಮಾವಯವಿನೀಮಪಿ ॥೫೫॥**

**ನಿಯಮಾದ್ಯೋಽನುಮಾಂ ಬ್ರೂಯಾತ್ತಂ ಬ್ರೂಯಾದ್ಯದಿ ತಾದೃಶೀ ।**

**ನಾನುಮೇತಿ ತದಾ ಕೇನ ಸಾಧ್ಯಾವಯವಕಲ್ಪನಾ ॥೫೬॥**

ಅವಯವ ನಿಯಮವನ್ನು ಒಪ್ಪಿದವನು, ಅನುಮಾನ ಪ್ರಯೋಗದಲ್ಲಿ ನಿಯಮೇನ ಪ್ರತಿಜ್ಞಾ–ಹೇತು–ದೃಷ್ಟಾಂತ ಅಥವಾ ದೃಷ್ಟಾಂತ–ಉಪನಯ–ನಿಗಮನ ಎಂದು ಮೂರು, ಪ್ರತಿಜ್ಞಾ–ಹೇತು–ದೃಷ್ಟಾಂತ–ಉಪನಯ–ನಿಗಮನ ಎಂಬುದಾಗಿ ಐದು ಅಥವಾ ದೃಷ್ಟಾಂತ–ಉಪನಯಗಳೆಂಬ ಎರಡೇ ಅವಯವಗಳು ಎಂದು ಹೇಳಿದರೆ, ಅವನನ್ನು ಕುರಿತು ಆ ನಿಯಮವನ್ನು ಒಪ್ಪದ ಮತ್ತೊಬ್ಬನು, ಅದು ಅನುಮಾನದ ಪ್ರಯೋಗವೇ ಆಗುವುದಿಲ್ಲವೆಂದು ಹೇಳಿದ ಪಕ್ಷದಲ್ಲಿ, ಯಾವ

ಪ್ರಮಾಣದಿಂದ ಈ ರೀತಿಯ ಪಂಚಾವಯವ ಕಲ್ಪನೆಯು ಸಮರ್ಥಿಸಲ್ಪಟ್ಟೀತು?

**ವಿವರಣೆ:** ಮೀಮಾಂಸಕರು ಹಾಗೂ ತಾರ್ಕಿಕರೇ ಮೊದಲಾದವರು ಅನುಮಾನವು ಮೂರು ಹಾಗೂ ಐದು ಅವಯವಗಳಿಂದ ಕೂಡಿರುವುದೆಂದು ಹೇಳುವರು. ಬೌದ್ಧರು ನಿಯಮೇನ ಎರಡೇ ಅವಯವಗಳೆಂದು ಹೇಳುವರು. ಪಂಚಾವಯವು ಅವಶ್ಯವೆನ್ನುವ ನೈಯಾಯಿಕರು ತಮ್ಮ ಹೇಳಿಕೆಯನ್ನು ಪ್ರತ್ಯಕ್ಷದಿಂದ ಸಾಧಿಸಿ ತೋರಿಸಲು ಸಾಧ್ಯವಿಲ್ಲ. ಏಕೆಂದರೆ ಪಂಚಾವಯವವುಳ್ಳ ವಾಕ್ಯಕ್ಕೂ ಲಿಂಗ ಜ್ಞಾನಕ್ಕೂ ಇರುವ ಕಾರ್ಯಕಾರಣಭಾವರೂಪವಾದ ಅರ್ಥವು ಪ್ರತ್ಯಕ್ಷಕ್ಕೆ ವಿಷಯವಾಗುವುಗಿಲ್ಲ. ಆಗಮದಿಂದ ಸಿದ್ಧ ಮಾಡುವ ಪಕ್ಷದಲ್ಲಿ ಅಂಥಹ ಯಾವುದೇ ಆಗಮವಿರುವುದಿಲ್ಲ. 'ಪಂಚಾವಯವಯುಕ್ತಸ್ಯ ವಾಕ್ಯಸ್ಯ ಗುಣದೋಷ ವಿತ್' ಎನ್ನುವ ಭಾರತಾದಿ ವಾಕ್ಯವು ಪ್ರಮಾಣವೆಂದು ಹೇಳಿದರೆ ಅದೂ ಸರಿಯಲ್ಲ. ಏಕೆಂದರೆ ಅಲ್ಲಿ ಹೇಳಿರುವ ಪಂಚಾವಯವಗಳು ಬೇರೆಯೇ ಆಗಿವೆ. ಅರ್ಥಾಪತ್ತಿ ಯಿಂದ ಸಾಧಿಸುತ್ತೇನೆ ಎಂದರೆ ಅದು ಅನುಮಾನದಿಂದ ಬೇರೆಯಲ್ಲವಾದ್ದರಿಂದ ಅದರಿಂದಲೂ ಸಾಧಿಸುವ ಹಾಗಿಲ್ಲ.

ಹಾಗಾದರೆ ಪ್ರತ್ಯಕ್ಷಾದಿಗಳಿಂದ ಪಂಚಾವಯವ ಕಲ್ಪನೆಯು ಸಿದ್ಧಿಸದಿದ್ದರೆ ಅಡ್ಡಿಯಿಲ್ಲ. ಅನುಮಾನದಿಂದಲಾದರೂ ಅದು ಸಿದ್ಧಿಸುವುದು ಎಂದರೆ –

**ನಿಯತಾವಯವಾಸಿದ್ಧೌ ವ್ಯಾಪ್ತಿಮಾತ್ರೇಣ ಸಾಧನಮ್ ।**

**ಕರ್ತವ್ಯಮೇವ ತೇನ ಸ್ಯಾತ್ತಸ್ಮಾತ್ಸೈವಾನುಮಾ ಮತಾ ॥೫೭॥**

ಬೌದ್ಧನು ಐದು ಅವಯವಗಳುಳ್ಳ ವಾಕ್ಯವು ಜ್ಞಾನಕ್ಕೆ ಅವಶ್ಯವೆಂದು ಒಪ್ಪುವುದಿಲ್ಲ. ತಾರ್ಕಿಕರು ಎರಡೇ ಅವಯಗಳುಳ್ಳ ವಾಕ್ಯದಿಂದ ಜ್ಞಾನವು ಸಿದ್ಧಿಸುವುದೆಂದು ಒಪ್ಪುವುದಿಲ್ಲ. ಅನುಮಾನದಿಂದಲೂ ಅವಯವನಿಯಮವು ಸಿದ್ಧಿಸುವುದಿಲ್ಲ. ಐದು ಅವಯವಗಳನ್ನು ಹೇಳುವ ತಾರ್ಕಿಕನಿಗೆ, ಬೌದ್ಧನು ಅಧಿಕ ಎಂಬ ನಿಗ್ರಹಸ್ಥಾನವನ್ನು ಆಪಾದಿಸುತ್ತಾನೆ. ತಾರ್ಕಿಕನು ಬೌದ್ಧನಿಗೆ ನ್ಯೂನ ಎಂಬ ನಿಗ್ರಹವನ್ನು ಹೇಳುತ್ತಾನೆ. ಹೀಗೆ ಅವಯವನಿಯಮವು ಸಿದ್ಧಿಸದೇ ಇರುವಾಗ, ಬೇರೆ ಉಪಾಯವಿಲ್ಲದ ಕಾರಣದಿಂದ, ವ್ಯಾಪ್ತಿವಚನದಿಂದ ಮಾತ್ರವೇ ತಾರ್ಕಿಕನು ಅವಯವ ನಿಯಮವನ್ನು ಸಮರ್ಥನೆ ಮಾಡತಕ್ಕದ್ದು. ಬೌದ್ಧನೂ ಇದನ್ನೇ ಅನುಸರಿಸಬೇಕಾಗುತ್ತದೆ. ಆದಪ್ರಯುಕ್ತ ವ್ಯಾಪ್ತಿವಚನ ಇತ್ಯಾದಿಗಳಿಂದಲೇ ಪರಾರ್ಥ ಅನುಮಾನವು ಸಾಧಿಸಲ್ಪಡುವುದು. (ಯಾವುದಿದ್ದರೆ ಯಾವುದರ ಕಾರ್ಯ ಸಿದ್ಧಿಯೋ, ಯಾವುದಿಲ್ಲದಿದ್ದರೆ ಯಾವುದರ ಕಾರ್ಯಸಿದ್ಧಿ ಆಗುವುದಿಲ್ಲವೋ ಎಂಬ ಅನ್ವಯವ್ಯತಿರೇಕಗಳ ವ್ಯಾಪ್ತಿ) ಇಲ್ಲಿಗೆ ಅನುಮಾನ ಪ್ರಕರಣವು ಮುಗಿದುದು.

ಇಲ್ಲಿಯವರೆಗೆ ಸಾಮಾನ್ಯ ಹಾಗೂ ವಿಶೇಷ ರೂಪಗಳಿಂದ ಪ್ರಮಾಣಗಳ

ಲಕ್ಷಣ ಮುಂತಾದವುಗಳನ್ನು ನಿರೂಪಿಸಲಾಯಿತು. ಅದರಲ್ಲಿ ಪರಕೀಯರಿಂದ ನಿರೂಪಿತವಾದ ಸಾಮಾನ್ಯ ಲಕ್ಷಣಗಳು ನಿರಸ್ತವಾದವು. ಆದರೂ ಸ್ಮೃತಿಯ ಬಗ್ಗೆ ಹೇಳಬೇಕಾದ ವಿಶೇಷಾಂಶವು ಇರುವುದರಿಂದ, ಪ್ರಾಭಾಕರರು ಹೇಳಿದ ಲಕ್ಷಣವನ್ನು ವಿಶೇಷಾಕಾರವಾಗಿ ಇಲ್ಲಿ ನಿರಾಕರಿಸುತ್ತಾರೆ –

**ಅನುಭೂತಿಃ ಪ್ರಮಾಣಂ ಚೇತ್ಕೇನ ಸ್ಮೃತಿರಪೋದ್ಯತೇ ।**

**ಪೂರ್ವಾನುಭೂತೇ ಕಿಂ ಮಾನಮಿತ್ಯುಕ್ತೇ ಸ್ಯಾತ್ಕಿಮುತ್ತರಮ್ ॥೫೮॥**

**ಮಾನಸಂ ತದ್ಧಿ ವಿಜ್ಞಾನಂ ತಚ್ಚ ಸಾಕ್ಷಿಪ್ರಮಾಣಕಮ್ ।**

ಪ್ರಾಭಾಕರರು ಹೇಳುವಂತೆ ಅನುಭವವು ಪ್ರಮಾಣವಾದರೂ ಸ್ಮೃತಿಯು ಪ್ರಮಾಣವಲ್ಲ. ಅನುಭವವು ಪ್ರಮಾಣವೆಂದು ಒಪ್ಪುವ ಪಕ್ಷದಲ್ಲಿ, ಸ್ಮೃತಿಯೂ ಏಕೆ ಪ್ರಮಾಣವಾಗಲಾರದು? ಅದನ್ನು ಏಕೆ ಕೈಬಿಡಬೇಕು? ಸ್ಮೃತಿಯು ಅನುಭವವಲ್ಲ. ಆದ್ದರಿಂದ ಅದು ಪ್ರಮಾಣವಲ್ಲ ಎಂದು ಹೇಳುತ್ತೇವೆ ಎಂದರೆ, ಹಿಂದೆ ಅನುಭವಕ್ಕೆ ಬಂದದ್ದು ಸುಳ್ಳೇ? ಎಂದು ಕೇಳಬೇಕು. ಹಾಗೇನೂ ನಾನು ಹೇಳಲಿಲ್ಲ, ಹಿಂದಿನ ಅನುಭವವು ಸತ್ಯವೇ ಎಂದು ಉತ್ತರಿಸಿದರೆ, ಅನುಭವವು ಸತ್ಯವೆಂದು ಹೇಳಲು ಸ್ಮೃತಿಯಲ್ಲದೇ ಬೇರೆ ಯಾವ ಪ್ರಮಾಣವಿದೆ ಎಂದು ಅವನನ್ನು ಕೇಳಬೇಕು. ಅದಕ್ಕೆ ಅವನು ಉತ್ತರವನ್ನು ಕೊಡಲಾಗುವುದಿಲ್ಲ. ಅಂದು ಅನುಭವಿಸಿದ ವಸ್ತುವಿಗೆ ಈಗ ಇಂದ್ರಿಯಗಳ ಸನ್ನಿಕರ್ಷವಿರುವುದಿಲ್ಲ. ಆದಕಾರಣ ಅದು ಇಂದಿನ ಪ್ರತ್ಯಕ್ಷದಿಂದ ವಿಜ್ಞಾತವಾಗುವುದು ಸಾಧ್ಯವಿಲ್ಲ. ಆದರೆ ಅಂದಿನ ಪ್ರತ್ಯಕ್ಷವು ಮಾನಸಿಕ ಸಂಸ್ಕಾರದಿಂದ ಇಂದು ಸ್ಮರಣೆಗೆ ಬರುವುದು. ಮಾನಸಿಕ ಪ್ರತ್ಯಕ್ಷ ಅಥವಾ ಸಾಕ್ಷಾತ್ಕಾರವು ಸಾಕ್ಷಿರೂಪವೇ ಆಗಿದೆ. ಹೀಗೆ ಸಾಕ್ಷಿಯಿಂದ ಸಿದ್ಧವಾಗುವ ಸ್ಮೃತಿಯ ಪ್ರಾಮಾಣ್ಯವು ಅಬಾಧಿತವಾದುದು. ಆದ್ದರಿಂದ ಸ್ಮೃತಿಯು ಪ್ರಮಾಣವಲ್ಲ ಎನ್ನುವುದು ಕೂಡುವುದಿಲ್ಲ.

ಒಂದು ವಸ್ತುವಿನ ಜ್ಞಾನವಾಗಬೇಕಾದ ಪಕ್ಷದಲ್ಲಿ, ಇಂದ್ರಿಯಗಳಿಗೂ ಆ ವಸ್ತುವಿಗೂ ಪ್ರಾಪ್ತಿ (ಸಂಯೋಗ) ಉಂಟಾಗಬೇಕೆಂಬ ನಿಯಮವಿದೆ. ಆದರೆ ಹಿಂದೆ ಆಗಿಹೋದ ವಸ್ತುವಿನ ಸ್ಮರಣೆಯ ಕಾಲದಲ್ಲಿ ಆ ವಸ್ತುವಿಗೂ ಮನಸ್ಸಿಗೂ ಸಂಯೋಗವು ಇರುವುದಿಲ್ಲ. ಆದುದರಿಂದ ಸ್ಮೃತಿಯು ಮಾನಸಪ್ರತ್ಯಕ್ಷಜನ್ಯ ಎನ್ನುವುದು ಹೇಗೆ ಕೂಡುವುದು ಎಂದು ಆಶಂಕಿಸಿದರೆ –

**ಅತೀತಾನಾಗತಂ ಯದ್ವದ್ಯೋಗಿಭಿರ್ದೃಶ್ಯತೇಽಜಸಾ ॥೫೯॥**

**ಏವಂ ಪೂರ್ವಾನುಭೂತಂ ಚ ಮಾನಸೈವಾವಗಮ್ಯತೇ ।**

ಅಣಿಮಾದಿ ಸಿದ್ಧಿಯನ್ನು ಗಳಿಸಿರುವ ಯೋಗಿಗಳಿಂದ ಭೂತ ಭವಿಷ್ಯತ್ಕಾಲಗಳ

ವಸ್ತುಗಳು ಸಾಕ್ಷಾತ್ತಾಗಿಯೇ ನೋಡಲ್ಪಡುತ್ತವೆ. ಇಂಥಹ ಯೋಗಿಗಳ ವಿಷಯವು ಇತಿಹಾಸ ಪುರಾಣಗಳಲ್ಲಿ ಪ್ರಸಿದ್ಧವಾಗಿವೆ. ಹೀಗೆಯೇ ಪೂರ್ವದಲ್ಲಿ ಅನುಭವಕ್ಕೆ ಗೋಚರವಾದ ವಸ್ತುವೂ ಮನಸ್ಸಿನಿಂದಲೇ ತಿಳಿಯಲ್ಪಡುತ್ತದೆ.

**ವಿಜ್ಞಾತಂ ಮನಸಾ ಪೂರ್ವಂ ಮಯ್ಯೈತತ್ಕೃತಮಿತ್ಯಪಿ ॥೬೦॥**

**ಸಾಕ್ಷಾದನುಭವಾತ್ಸಿದ್ಧಂ ಕಥಮೇವ ಹ್ಯಪೋದ್ಯತೇ ।**

ಇದು ನನ್ನಿಂದ ಪೂರ್ವದಲ್ಲಿ ಮಾಡಲ್ಪಟ್ಟಿದ್ದು, ಇದು ನನ್ನಿಂದ ಮನಸ್ಸಿನಿಂದ ಸ್ಮರಿಸಲ್ಪಟ್ಟಿದ್ದೂ ಆಗಿರುವುದು. ಹೀಗೆ ಸ್ಮರಣೆಗೆ ಮಾನಸಜನ್ಯತ್ವವು ಸಾಕ್ಷಿ ಅನುಭವದಿಂದ ಸಿದ್ಧವಾಗಿದೆ.

ಮನಸ್ಸು ಸಾಕ್ಷೀಂದ್ರಿಯಕ್ಕೆ ಗೋಚರವಾದರೂ, ಮನಸ್ಸಿಗೂ ಸ್ಮೃತಿಗೂ ಕಾರ್ಯ ಕಾರಣಭಾವವು ಪ್ರತ್ಯಕ್ಷಗೋಚರವಲ್ಲ ಎಂದು ಹೇಳಕೂಡದು. ಅನ್ವಯ ವ್ಯತಿರೇಕಗಳ ಮೂಲಕ ಸಾಕ್ಷಿಗೆ ಆ ವಿಷಯದಲ್ಲಿ ಪ್ರಾಮಾಣ್ಯವು ಅಂಗೀಕರಿಸಲ್ಪಟ್ಟಿದೆ. ಆದಕಾರಣ ಸ್ಮೃತಿಯು ಅನುಭವವೆಂಬುದನ್ನು ಹೇಗೆ ತಾನೇ ನಿರಾಕರಿಸುವುದು ಸಾಧ್ಯ?

ಯಾಥಾರ್ಥ್ಯಮೇವ ಇತ್ಯಾದಿಗಳಿಂದ ಹೇಳಲ್ಪಟ್ಟ ಪ್ರಮೇಯಕ್ಕೆ ಪ್ರಕೃತದಲ್ಲಿ ಉಪಯೋಗವನ್ನು ಹೇಳುತ್ತಾರೆ –

**ಏವಂ ಲಕ್ಷಣಕೇ ಮಾನತ್ರಯೇ ಬ್ರಹ್ಮಾದಿವಸ್ತುಷು ॥೬೧॥**

**ಪ್ರಮಾಣಂ ವೇದ ಏವೈಕಸ್ತತ್ಪ್ರಾಮಾಣ್ಯಂ ಚ ಸಾಧಿತಮ್ ।**

ಹೀಗೆ ಯಾಥಾರ್ಥ್ಯರೂಪ ಲಕ್ಷಣವುಳ್ಳ ಪ್ರಮಾಣತ್ರಯದಲ್ಲಿ ವೇದವೊಂದೇ ಬ್ರಹ್ಮಾದಿ ವಸ್ತುಗಳಲ್ಲಿ ಮುಖ್ಯ ಪ್ರಮಾಣವು. ವೇದಪ್ರಾಮಾಣ್ಯವಾದರೋ ಹಿಂದೆಯೇ ಸಾಧಿಸಲ್ಪಟ್ಟಿದೆ.

**ವಿವರಣೆ:** ಬ್ರಹ್ಮ ಮೊದಲಾದ ಅತೀಂದ್ರಿಯ ವಸ್ತುಗಳ ವಿಷಯದಲ್ಲಿ ವೇದವೊಂದೇ ಪ್ರಮಾಣವು. ಯುಕ್ತ್ಯಾದಿಗಳಿಗೆ ಇಲ್ಲಿ ಅವಕಾಶವಿಲ್ಲ. ಪ್ರಾಕೃತ ರೂಪಾದಿಗಳುಳ್ಳ ದ್ರವ್ಯಗಳಲ್ಲಿಯೇ ಇಂದ್ರಿಯಗಳ ಪ್ರವೃತ್ತಿಯು. ಬ್ರಹ್ಮಾದಿಗಳಿಗೆ ಪ್ರಾಕೃತ ರೂಪಾದಿಗಳಿಲ್ಲ. ಇಂದ್ರಿಯಗಳಿಗೆ ಬ್ರಹ್ಮಾದಿಗಳ ಬಗ್ಗೆ ಜ್ಞಾನವನ್ನು ಹುಟ್ಟಿಸುವ ಅವಕಾಶವಿಲ್ಲ. ಆದಕಾರಣ ಈ ವಿಷಯದಲ್ಲಿ ಪ್ರತ್ಯಕ್ಷವು ಪ್ರಮಾಣವಾಗಲಾರದು. ಅನುಮಾನವು ವ್ಯಾಪ್ತಿಯನ್ನು ಅವಲಂಬಿಸಿದೆ. ಆದರೆ ವೇದಸಹಕೃತವಲ್ಲದ ಅನುಮಾನಕ್ಕೆ ಬ್ರಹ್ಮಾದಿಗಳಲ್ಲಿ ಪ್ರವೃತ್ತಿಯಿಲ್ಲ. ಪೌರುಷೇಯ ಆಗಮವಾದರೂ ಪರತಂತ್ರವು. ಹೀಗೆ ಪ್ರತ್ಯಕ್ಷ, ಅನುಮಾನ ಹಾಗೂ ಪೌರುಷೇಯ ಆಗಮಗಳಿಂದ ವೇದದ ಪ್ರಾಮಾಣ್ಯದ ವಿಷಯದಲ್ಲಿ ವಿರೋಧ ಬರುವುದು

ಸಾಧ್ಯವಿಲ್ಲ. ಆದಕಾರಣ ವೇದಪ್ರಾಮಾಣ್ಯವು ಅಬಾಧಿತವಾದುದು.

## ಅಭಿಮಾನ್ಯಧಿಕರಣಮ್

**ಸೂತ್ರ: ಓಂ ಅಭಿಮಾನಿ ವ್ಯಪದೇಶಾಸ್ತು ವಿಶೇಷಾನುಗತಿಭ್ಯಾಂ ಓಂ**

**ಸೂತ್ರಾರ್ಥ:** ಮೃದಬ್ರವೀತ್ ಇತ್ಯಾದಿ ಶ್ರುತಿಗಳಲ್ಲಿ ಮೃದಾದಿ ಅಭಿಮಾನಿ ದೇವತೆಗಳೇ ಹೇಳಲ್ಪಟ್ಟಿದ್ದಾರೆ, ಮೃದಾದಿ ಜಡ ವಸ್ತುಗಳಲ್ಲ. ಶಕ್ತಿ ಹಾಗೂ ತಮ್ಮಿಂದ ಅಭಿಮನ್ಯವಾದ ವಸ್ತುಗಳಲ್ಲಿ ವ್ಯಾಪ್ತಿ ಇವುಗಳನ್ನು ಅಭಿಮಾನಿ ದೇವತೆಗಳು ಹೊಂದಿರುವುದರಿಂದ, ಅವರಿಗೆ ಸದೇಹತ್ವವನ್ನು ಒಪ್ಪಿದರೂ ಅಂತರ್ಧಾನ ಶಕ್ತಿಯಿಂದ ಅಗೋಚರತ್ವವು ಕೂಡುತ್ತದೆ.

ವೇದಕ್ಕೆ ಯುಕ್ತ್ಯಂತರದಿಂದ ವಿರೋಧವನ್ನು ಈ ಪ್ರಕರಣದಲ್ಲಿ ಪರಿಹರಿಸುತ್ತಾರೆ. ಹಿಂದಿನ ಅಧಿಕರಣದಲ್ಲಿಯೇ ಉಪಲಕ್ಷಣದಿಂದ ಎಲ್ಲ ಯುಕ್ತಿಗಳ ವಿರೋಧವೂ ಪರಿಹರಿಸಲ್ಪಟ್ಟಿವೆ. ಆದ್ದರಿಂದ ಈ ಅಧಿಕರಣಕ್ಕೆ ಆರಂಭಣೀಯತ್ವವು ಕೂಡುವುದಿಲ್ಲವೆಂದು ಹೇಳಕೂಡದು. ಅಭ್ಯಧಿಕಾಶಂಕೆಯು ಬರುವುದರಿಂದ ಈ ಅಧಿಕರಣಕ್ಕೆ ಆರಂಭಣೀಯತ್ವವು ಕೂಡುತ್ತದೆ ಎನ್ನುವ ಅಭಿಪ್ರಾಯದಿಂದ ಪೂರ್ವಪಕ್ಷವನ್ನು ಮೊದಲು ಅನುವಾದ ಮಾಡುತ್ತಾರೆ –

**ತಥಾಪಿ ಮೃಜ್ಜಲಾದೀನಾಂ ಬುದ್ಧಿವಾಗಾದಿವಾಚಕಃ ।।೬೨।।**

**ದೃಷ್ಟವ್ಯಾಪ್ತಿವಿರುದ್ಧತ್ವಾತ್ತತ್ರ ಮಾನಂ ಕಥಂ ಭವೇತ್ ।**

ವೇದಕ್ಕೆ ಫಲವ್ಯಭಿಚಾರ, ಆಪ್ತನಿಂದ ಉಕ್ತವಾಗಿದೆಯೆಂಬ ಗುಣವಿಲ್ಲದಿರುವುದು ಇತ್ಯಾದಿ ವಿರೋಧವು ಪರಿಹರಿಸಲ್ಪಟ್ಟಿದೆ. ಹಾಗಿದ್ದರೂ ವೇದಪ್ರಾಮಾಣ್ಯಕ್ಕೆ ವಿರೋಧವು ತಪ್ಪದು. ಏಕೆಂದರೆ 'ಮೃದಬ್ರವೀತ್' ಇತ್ಯಾದಿ ವೇದವು ಮಣ್ಣು, ನೀರು, ಅಗ್ನಿ ಮುಂತಾದವುಗಳಿಗೆ ಜ್ಞಾನ, ವಕ್ತೃತ್ವ, ಶ್ರೋತೃತ್ವ ಮುಂತಾದವುಗಳನ್ನು ಪ್ರತಿಪಾದಿಸುವುದು. ಇದು ಪ್ರಮಾಣಸಿದ್ಧವಾದ ವ್ಯಾಪ್ತಿ ಪಕ್ಷಧರ್ಮತೆಗಳಿಂದ ಸಹಿತವಾದ ಯುಕ್ತಿಗೆ ವಿರುದ್ಧ. ಇಂಥಹ ವಚನಗಳಿಂದ ಕೂಡಿರುವ ವೇದವು ಹೇಗೆ ತಾನೇ ಪ್ರಮಾಣವಾದೀತು? ಹೀಗೆ ಪೂರ್ವಪಕ್ಷವು.

**ವಿವರಣೆ:** 'ಮೃದಬ್ರವೀತ್' 'ಆಪೋಽಬ್ರುವನ್' 'ತತ್ತೇಜ ಐಕ್ಷತ' 'ತಾ ಆಪ ಐಕ್ಷಂತ' 'ಶ್ರುಣೋತ ಗ್ರಾವಾಣೋ ವಿದುಷೋಽನು ಪ್ರಾಣಾಃ' 'ಆಪೋ ವಾ ಅಕಾಮಯಂತ' ಇತ್ಯಾದಿ ವೇದವು ಪ್ರಮಾಣವಲ್ಲ. ಏಕೆಂದರೆ 'ನೀಲಂ ನಭಃ' ಎನ್ನುವ ವಾಕ್ಯದಂತೆ ಯುಕ್ತಿಗೆ ವಿರುದ್ಧವಾದ ಅರ್ಥವನ್ನು ಹೇಳುತ್ತದೆ. ಮಣ್ಣಿನಿಂದ ಮಾಡಿದ ಮಡಿಕೆ ಮಾತನಾಡುವುದಿಲ್ಲ, ಅದು ಜಡವಾಗಿರುವ ಕಾರಣ ಜ್ಞಾನರಹಿತವಾಗಿರುವುದರಿಂದ, ಎನ್ನುವ ಯುಕ್ತಿಯು ಪ್ರತ್ಯಕ್ಷದಿಂದ ಸಿದ್ಧವಾಗಿದೆ.

ಮಣ್ಣು ಮಾತನಾಡಿತು ಎಂದು ಹೇಳುವ ವೇದವು ಪ್ರತ್ಯಕ್ಷದಿಂದ ಸಹಕೃತವಾದ ಯುಕ್ತಿಗೆ ವಿರುದ್ಧವಾದ್ದರಿಂದ ಅಪ್ರಮಾಣವಾಗುವುದು. ಇದೇ ರೀತಿ ಯುಕ್ತಿ ವಿರೋಧದಿಂದ ನೀರು ಬೆಂಕಿ ಇತ್ಯಾದಿಗಳ ಬಗ್ಗೆ ಹೇಳಲ್ಪಟ್ಟಿರುವ ವೇದ ವಾಕ್ಯಗಳೂ ಪ್ರಮಾಣವಾಗುವುದಿಲ್ಲ. ಈ ಪ್ರಕಾರವಾಗಿ ವೇದದ ಒಂದು ಕಡೆಯಲ್ಲಿ ಅಪ್ರಮಾಣವು ಬರುತ್ತಿರಲು, 'ಯತೋ ವಾ ಇಮಾನಿ ಭೂತಾನಿ ಜಾಯಂತೇ ಇತ್ಯಾದಿ ವಾಕ್ಯಾಂತರಂ ಅಪ್ರಮಾಣಂ ವೇದವಾಕ್ಯತ್ವಾತ್ ಮೃದಬ್ರವೀತ್ ಇತ್ಯಾದಿ ವಾಕ್ಯವತ್' ಎಂಬ ಅನುಮಾನದಿಂದ ಬೇರೆ ವೇದವಾಕ್ಯಗಳಿಗೂ ಅಪ್ರಮಾಣವನ್ನು ಹೇಳುತ್ತೇವೆ ಎಂದು ಪೂರ್ವಪಕ್ಷ. ಹಿಂದಿನ ನವಿಲಕ್ಷಣತ್ವಾಧಿಕರಣದ ನ್ಯಾಯದಿಂದಲೇ ಈ ವಿರೋಧವನ್ನೂ ಪರಿಹರಿಸಬೇಕು ಎಂದು ಹೇಳಕೂಡದು. ಅಲ್ಲಿ ಹೇಳಿದ ಫಲವ್ಯಭಿಚಾರಾದಿ ರೂಪವಾದ ಅಪ್ರಮಾಣ್ಯಸಾಧಕ ಹೇತುವಿಗೆ ವ್ಯಾಪ್ತಿ ಪಕ್ಷಧರ್ಮತಾಗಳು ನಿಶ್ಚಿತವಾಗದೇ ಇದ್ದುದರಿಂದ ಯುಕ್ತಿವಿರೋಧವನ್ನು ಪರಿಹರಿಸಲಿಕ್ಕೆ ಸಾಧ್ಯವಾಯಿತು. ಆದರೆ ಇಲ್ಲಿ ಹೇಳಿದ ಯುಕ್ತಿಗೆ ವ್ಯಾಪ್ತಿ ಪಕ್ಷಧರ್ಮತಾದಿಗಳು ಪ್ರಮಾಣ ದೃಷ್ಟವಾಗಿವೆ. ನಿರವಕಾಶವಾದ ದೃಢವಾದ ಯುಕ್ತಿವಿರೋಧವನ್ನು ಪರಿಹರಿಸಲು ಸಾಧ್ಯವಿಲ್ಲ. ಹಾಗಾದರೆ, ನಿತ್ಯವಾದುದರಿಂದ ವೇದವು ಪ್ರಮಾಣವು, ವೇದವಿರುದ್ಧವಾದ ಯುಕ್ತಿಯೇ ಅಪ್ರಮಾಣವು ಎಂದರೆ, ಹಾಗೆ ಹೇಳಕೂಡದು. ವ್ಯಾಪ್ತಿಪಕ್ಷಧರ್ಮತೆಗಳಿಂದ ಕೂಡಿದ ನಿರವಕಾಶ ಯುಕ್ತಿಗೆ ವಿರುದ್ಧವಾದ್ದರಿಂದ ವೇದಕ್ಕೇ ಅಪ್ರಾಮಾಣ್ಯವು. ಈಗಿನ ಮಣ್ಣು ಮುಂತಾದವು ಮಾತಾಡುವುದಿಲ್ಲವಾದರೂ, ವೇದಕಾಲದಲ್ಲಿ ಅವು ಮಾತನಾಡುತ್ತಿದ್ದವು ಎಂದು ಹೇಳಿದರೆ, ಅದು ಪ್ರತ್ಯಕ್ಷಾದಿ ಪ್ರಮಾಣಸಿದ್ಧವಲ್ಲ. ಹೀಗೆ ಯಾವರೀತಿಯಲ್ಲಿ ನೋಡಿದರೂ 'ಮೃದಬ್ರವೀತ್' ಇತ್ಯಾದಿ ವೇದವು ಅಪ್ರಮಾಣವಾಗುವುದು. ಅಂದಮೇಲೆ ಬ್ರಹ್ಮನಿಗೆ ಜಗತ್ಕಾರಣತ್ವವನ್ನು ಹೇಳುವ 'ಯತೋ ವಾ ಇಮಾನಿ ಭೂತಾನಿ ಜಾಯಂತೇ' ಮುಂತಾದ ವೇದವೂ ಅಪ್ರಮಾಣವಾಗುವುದು. ಆದಪ್ರಯುಕ್ತ ಬ್ರಹ್ಮನಿಗೆ ಜಗತ್ಕಾರಣತ್ವವು ಸಿದ್ಧಿಸುವುದಿಲ್ಲವಾದ್ದರಿಂದ ಬ್ರಹ್ಮಜಿಜ್ಞಾಸೆ ಮಾಡಬೇಕಿಲ್ಲ.

ಹೀಗೆ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ, 'ತತಃ' ಇತ್ಯಾದಿ ಮಾತುಗಳಿಂದ ಸಿದ್ಧಾಂತವನ್ನು ಹೇಳುತ್ತಾರೆ –

**ತತಸ್ತನ್ನಾಮಕಃ ಕಶ್ಚಿತ್ಪುಮಾನನ್ಯೋ ಭವೇದಿತಿ ॥೬೩॥**

**ಯುಕ್ತ್ಯಾಗಮವಿರೋಧೇನ ಪ್ರಾಪ್ತಮತ್ರಾಭಿಧೀಯತೇ ।**

ವೇದ ಹಾಗೂ ಯುಕ್ತಿಗಳು ನಿರವಕಾಶವಾಗಿರುವುದರಿಂದ ವೇದದಲ್ಲಿ ಹೇಳಲ್ಪಟ್ಟಿರುವ ಮಣ್ಣು ಮುಂತಾದವುಗಳಿಗೆ ಅಭಿಮಾನಿ ದೇವತೆಗಳ ಪರವಾಗಿ ಅರ್ಥಮಾಡಬೇಕು. ಮೃತ್ ಮುಂತಾದ ಹೇಸರುಳ್ಳ, ನಮ್ಮ ಇಂದ್ರಿಯಗಳಿಗೆ

ಅಗೋಚರನೂ ಹಾಗೂ ನಮಗಿಂತ ವಿಲಕ್ಷಣನೂ ಆದ, ಚೇತನನು ಮೃದಬ್ರವೀತ್ ಎಂಬಲ್ಲಿ ಮೃತ್ ಶಬ್ದದಿಂದ ಪ್ರತಿಪಾದಿಸಲ್ಪಡುತ್ತಾನೆ. ಯುಕ್ತಿ ಆಗಮಗಳಿಗೆ ಪರಸ್ಪರ ಅವಿರೋಧವು ಬರುವುದರಿಂದ, ಹಿಂದೆ ಹೇಳಿದ ಪ್ರಕಾರ ಪ್ರಮಿತವಾದುದು ಈ ಅಧಿಕರಣದಲ್ಲಿ ಹೇಳಲ್ಪಡುತ್ತದೆ. ಈ ಪ್ರಕಾರವಾಗಿ ಮೃದಬ್ರವೀತ್ ಇತ್ಯಾದಿ ವೇದವು ಅಭಿಮಾನಿ ಚೇತನನನ್ನು ಕುರಿತು ಹೇಳುವುದರಿಂದ ವೇದಕ್ಕೆ ಅಪ್ರಾಮಾಣ್ಯ ಬರುವುದಿಲ್ಲ ಎಂದು ಸಿದ್ಧವಾಗುವುದು.

ಮೃದಾದಿಗಳ ಅಭಿಮಾನಿ ದೇವತೆಗಳಿಗೆ ಮೃದಾದಿ ಶಬ್ದವಾಚ್ಯತ್ವವುಂಟು ಎಂದು ಹೇಳುವುದು ಅಯುಕ್ತ. ಏಕೆಂದರೆ ಮೃದಾದಿ ಶಬ್ದಗಳು ಜಡ ಪದಾರ್ಥಗಳಾದ ಮಣ್ಣು ಇತ್ಯಾದಿಗಳಲ್ಲಿ ರೂಢಿಯಲ್ಲಿದೆಯೇ ಹೊರತು, ಚೇತನಗಳಲ್ಲಿ ಅಲ್ಲ. ಸೂತ್ರಕಾರರೂ ಕೂಡ ದೇವತೆಗಳಲ್ಲಿ ಮೃದಾದಿ ಶಬ್ದಗಳಿಗೆ ವಚನವೃತ್ತಿಯನ್ನು ಹೇಳಿಲ್ಲ. ಹೀಗೆ ಆಕ್ಷೇಪ ಬಂದರೆ –

**ಬಾಲರೂಢಿಂ ವಿನೈವಾಪಿ ವಿದ್ವದ್ರೂಢಿಸಮಾಶ್ರಯಾತ್ ।।೬೪।।**

**ತತ್ತನಾಮಾನ ಏವೈತೇ ತತ್ತದ್ವಸ್ತ್ವಭಿಮಾನಿನಃ ।**

**ಸಂತಿ..................................।।**

ಮೃತ್ ಮುಂತಾದ ಶಬ್ದಗಳಿಗೆ ಮಣ್ಣು ಮುಂತಾದ ವ್ಯವಹಾರವು ಅಜ್ಞ ರೂಢಿಯ ಪ್ರಕಾರ ಕೂಡುವುದು. ಆದರೆ ಅಜ್ಞರೂಢಿಗಿಂತ ವಿದ್ವದ್ರೂಢಿಯು ಪ್ರಬಲ. ವೇದಗಳಿಗೆ ಅರ್ಥಮಾಡಬೇಕಾದರೆ ವಿದ್ವದ್ರೂಢಿಯನ್ನು ಚೆನ್ನಾಗಿ ಆಶ್ರಯಿಸಬೇಕು. ವಿದ್ವದ್ರೂಢಿಯ ಪ್ರಕಾರ ಪೃಥಿವ್ಯಾದಿ ದೇವತೆಗಳು ಮೃತ್ ಮುಂತಾದ ಆಯಾಯ ನಾಮಗಳಿಂದ ವಾಚ್ಯರಾಗುತ್ತಾರೆ ಹಾಗೂ ಆಯಾಯ ವಸ್ತುಗಳ ಮೇಲೆ ಅಭಿಮಾನವುಳ್ಳವರೇ ಆಗುತ್ತಾರೆ.

ಹಾಗಾದರೆ ಅಭಿಮಾನಿದೇವತೆಗಳಿಗೆ ಏಕದೇಶದಲ್ಲಿರುವಿಕೆಯನ್ನು ಒಪ್ಪಿದರೆ ವೈಯರ್ಥ್ಯ ಬರುವುದು. ದೇಹವಿಲ್ಲವೆಂದರೆ ವಕ್ತೃತ್ವಾದಿಗಳು ಕೂಡುವುದಿಲ್ಲ. ವ್ಯಾಪ್ತರಿಗೆ ದೇಹವಿದ್ದ ಪಕ್ಷದಲ್ಲಿ ಕಾಣದಿರುವಿಕೆ ಎಂಬ ಬಾಧವು ಬರುವುದು. ಹೀಗೆ ದೋಷಗಳನ್ನು ಆಪಾದಿಸಿದರೆ, ಪರಿಹಾರಕ್ಕಾಗಿ ಸೂತ್ರಾಂಶವಾದ ವಿಶೇಷಾನು ಗತಿಭ್ಯಾಂ ಎಂಬುದಕ್ಕೆ 'ಕಶ್ಚಿತ್ತುಮಾನನ್ಯಃ' ಎಂಬುದಾಗಿ ತಾತ್ಪರ್ಯತಃ ವ್ಯಾಖ್ಯಾನ ಮಾಡಿದ್ದಾರೆ. ಅದನ್ನು 'ತೇಷಾಂ ವಿಶೇಷೇಣ' ಇತ್ಯಾದಿ ಮುಂದಿನ ಮಾತುಗಳಿಂದ ವಿವರಿಸುತ್ತಾರೆ –

**.........ತೇಷಾಂ ವಿಶೇಷೇಣ ಶಕ್ತಿರನ್ಯೇಭ್ಯ ಉಚ್ಯತೇ ।।೬೫।।**

**ವ್ಯಾಪ್ತಿಶ್ಚೋಕ್ತಾನುಸಾರೇಣ ದೃಶ್ಯಂತೇ ಚಾಧಿಕಾರಿಭಿಃ ।**

ಅಭಿಮಾನಿ ದೇವತೆಗಳಿಗೆ ನಮ್ಮಂಥವರಿಗಿಂತ ಅತಿಶಯವಾಗಿ 'ಆತ್ಮನಿ ಚೈವಂ ವಿಚಿತ್ರಾಶ್ಚ ಹಿ' ಇತ್ಯಾದಿಗಳಲ್ಲಿ ಹೇಳಿರುವ ಪ್ರಕಾರ ಸಾಮರ್ಥ್ಯವೂ, ವ್ಯಾಪ್ತಿಯೂ, ದೇಹವತ್ವವೂ ಕೂಡ ಹೇಳಲ್ಪಡುತ್ತದೆ. ನಮ್ಮಂಥವರ ಕಣ್ಣಿಗೆ ಕಾಣದವುಗಳನ್ನೂ ಕಾಣುವ ಸಾಮರ್ಥ್ಯವುಳ್ಳ ಯೋಗಿಗಳಿಂದ ಆ ಅಭಿಮಾನಿ ದೇವತೆಗಳು ನೋಡಲ್ಪಡುತ್ತಾರೆ.

ಹಾಗಿದ್ದರೂ ಮೃದಬ್ರವೀತ್ ಮುಂತಾದ ವೇದವಾಕ್ಯಗಳಿಗೆ ಅಬೋಧಕತ್ವ ರೂಪವಾದ ಅಪ್ರಾಮಾಣ್ಯವು ಬಂದೇ ಬರುವುದು. ಪದಗಳು ಪದಾರ್ಥಗಳೊಡನೆ ಇರುವ ವಾಚ್ಯ–ವಾಚಕಭಾವರೂಪ ಸಂಬಂಧದ ಜ್ಞಾನರೂಪವಾದ ವ್ಯುತ್ಪತ್ತಿಯನ್ನು ಅಪೇಕ್ಷಿಸುತ್ತವೆ. ಹೀಗೆ ಅನ್ವಯ–ವ್ಯತಿರೇಕಗಳಿಂದ ತಿಳಿದುಬರುತ್ತದೆ. ಮೃದಾದಿ ಶಬ್ದಗಳಿಗೆ ತದಭಿಮಾನಿ ದೇವತೆಗಳಲ್ಲಿ ವ್ಯುತ್ಪತ್ತಿಯು ಕೂಡುವುದಿಲ್ಲ. ಏಕೆಂದರೆ ವಾಚ್ಯವಾಚಕ ಸಂಬಂಧವನ್ನು ತಿಳಿಯಬೇಕಾದರೆ ವಾಚ್ಯವಾದ ವಸ್ತುವಿನ ಜ್ಞಾನವು ಅವಶ್ಯಕ. ಆದರೆ ಇಲ್ಲಿ ಮೃದಾದಿ ಶಬ್ದದಿಂದ ವಾಚ್ಯರಾದ ದೇವತೆಗಳು ನಮ್ಮ ಪ್ರತ್ಯಕ್ಷಕ್ಕೆ ಗೋಚರವಾಗುವುದಿಲ್ಲ. ಲಿಂಗದ ಅಭಾವದಿಂದಾಗಿ ಯುಕ್ತಿಯಿಂದ ಅವರನ್ನು ತಿಳಿಯಲು ಸಾಧ್ಯವಿಲ್ಲ. ವ್ಯುತ್ಪತ್ತಿಯು ಕೂಡುವುದಿಲ್ಲವಾದ್ದರಿಂದ ಶಬ್ದದಿಂದಲೂ ದೇವತೆಗಳ ಬಗ್ಗೆ ಜ್ಞಾನವು ಬರುವುದಿಲ್ಲ. ಎಲ್ಲಿಯೂ ಕಾಣದೇ ಇದ್ದುದನ್ನು ಕಲ್ಪನೆ ಮಾಡಬೇಕಾಗುವುದು. ದೃಶ್ಯತೇ ಚ ಎಂದು ಹೇಳಿದ್ದರೂ, ಅದು ಯೋಗಿಗಳಿಗೆ ಸಂಬಂಧಿಸಿದ್ದು. ನಮಗಂತೂ ದೇವತೆಗಳು ಕಾಣುವುದು ಸಾಧ್ಯವಿಲ್ಲ. ಆದ್ದರಿಂದ ದೇವತೆಗಳಲ್ಲಿ ಮೃದಾದಿ ಶಬ್ದವಾಚ್ಯತ್ವವು ಕೂಡುವುದಿಲ್ಲ. ಹೀಗೆ ಆಶಂಕಿಸಿದರೆ –

**ಶಾಸ್ತ್ರೋಕ್ತವಸ್ತುನಶ್ಚೈವ ವ್ಯುತ್ಪತ್ತಿಃ ಶಾಸ್ತ್ರಲಿಂಗತಃ ।।೬೬।।**

**ವ್ಯುತ್ಪತ್ತಿಃ ಸಾ ಬಲವತೀ ಮೂರ್ಖವ್ಯುತ್ಪತ್ತಿತೋ ಹಿ ಯತ್ ।**

**ದೃಢಯುಕ್ತಿವಿರೋಧೇ ತು ಸರ್ವತ್ರ ನ್ಯಾಯ ಈದೃಶಃ ।।೬೭।।**

ಕೇವಲ ಶಾಸ್ತ್ರದಿಂದಲೇ ತಿಳಿಯಲು ಯೋಗ್ಯವಾದ ವಸ್ತುಗಳಿಗೂ ವಾಚ್ಯವಾಚಕ ಸಂಬಂಧರೂಪವಾದ ವ್ಯುತ್ಪತ್ತಿಯು ಕೂಡುತ್ತದೆ. ಶಾಸ್ತ್ರರೂಪಲಿಂಗದಿಂದಲೇ ಆ ಜ್ಞಾನವು ಸಂಭವಿಸುವುದು. ಶಬ್ದಶಕ್ತಿಯನ್ನು ತಿಳಿದ ಜ್ಞಾನಿಗಳಿಂದ ಶಾಸ್ತ್ರಲಿಂಗದ ಜ್ಞಾನದಿಂದ ಸಂಪಾದಿಸಲ್ಪಟ್ಟ ವ್ಯುತ್ಪತ್ತಿಯು ಶಾಸ್ತ್ರಲಿಂಗದ ಜ್ಞಾನವಿಲ್ಲದ ಮೂರ್ಖರ ವ್ಯುತ್ಪತ್ತಿಗಿಂತ ಪ್ರಬಲವಾಗಿರುವುದು. ಈ ಕಾರಣದಿಂದ ಮೃದಾದಿ ನಾಮಗಳಿಂದ ವಾಚ್ಯರಾದ ದೇವತೆಗಳೇ ಆಯಾಯ ಶಬ್ದಗಳಿಂದ ಪ್ರತಿಪಾದಿಸಲ್ಪಡುತ್ತಾರೆ. ವೇದ ವಾಕ್ಯಗಳಿಗೆ ವ್ಯಾಪ್ತಿ ಪಕ್ಷಧರ್ಮತಾ ಸಹಿತವಾದ ದೃಢವಾದ ಯುಕ್ತಿವಿರೋಧವು ಕಂಡುಬರುವ ಎಲ್ಲ ಕಡೆಗಳಲ್ಲಿಯೂ, ಇದೇ ರೀತಿ ನ್ಯಾಯವನ್ನು ಅನುಸರಿಸಿ, ಅವಿರೋಧವಾದ ಅರ್ಥವನ್ನು ಸ್ವೀಕರಿಸಿ, ವಿರೋಧವನ್ನು ಪರಿಹರಿಸತಕ್ಕದ್ದು.

## ಅಸದಧಿಕರಣಮ್

### ಓಂ ಅಸದಿತಿ ಚೇನ್ನ ಪ್ರತಿಷೇಧಮಾತ್ರತ್ವಾತ್ ಓಂ

ಈ ಅಧಿಕರಣದಲ್ಲಿ ಪ್ರಾಗಭಾವಕ್ಕೆ ಜಗತ್ಕರ್ತೃತ್ವವನ್ನು ಹೇಳುವ ಶ್ರುತಿಸಂವಾದ ಸಹಿತವಾದ ಯುಕ್ತಿಯನ್ನು ನಿರಾಕರಿಸುತ್ತಾರೆ.

'ನ ವಿಲಕ್ಷಣತ್ವಾತ್' ಎನ್ನುವ ಅಧಿಕರಣದಲ್ಲಿಯೇ ವೇದಕ್ಕೆ ಬರತಕ್ಕ ಎಲ್ಲ ಯುಕ್ತಿ ವಿರೋಧಗಳನ್ನೂ ಪರಿಹರಿಸಲಾಗಿದೆ. ದೃಢವಾದ ಯುಕ್ತಿವಿರೋಧದ ಪರಿಹಾರವೂ ಅಭಿಮಾನ್ಯಧಿಕರಣದಲ್ಲಿ ಹೇಳಿದ ನ್ಯಾಯದಿಂದ ಸಾಧಿಸಲ್ಪಡುವುದು. ಹೀಗೆ ಗತಾರ್ಥ ವಾಗುವುದರಿಂದ ಈ ಅಧಿಕರಣವು ಅನಾರಂಭಣೀಯವೆಂದು ಆಶಂಕೆಯು ಬರಲು, ಗತಾರ್ಥತೆಯನ್ನು ಪರಿಹರಿಸುತ್ತ, ಈ ಅಧಿಕರಣದ ಉಪಾಧಿಯನ್ನು ಹೇಳುತ್ತಾರೆ –

**ಅಲ್ಪವಾಕ್ಯಯುತಾ ಯುಕ್ತಿರ್ಬಹುಲ್ಯೈವ ವಿರೋಧಿನೀ ।**

**ಯತ್ರ ತತ್ರ ಕಥಂ ವಸ್ತುನಿರ್ಣಯಃ ಸ್ಯಾದಿತೀರಿತೇ ।।೬೮।।**

**ವಿರೋಧಿಯುಕ್ತಿಬಾಹುಲ್ಯಾದಿತಿ ನ್ಯಾಯೋ ವಿನಿಶ್ಚಿತಃ ।**

ಅಲ್ಪವಾಕ್ಯಗಳಿಂದ ಕೂಡಿದ ಯುಕ್ತಿಯು ಹೆಚ್ಚಾಗಿಯೇ ವಿರೋಧಿಯಾದಾಗ ವಸ್ತುವಿನ ನಿಶ್ಚಯವು ಹೇಗೆ ಆಗುವುದು ಎಂಬುದಾಗಿ ಪೂರ್ವಪಕ್ಷಿಯು ಆಕ್ಷೇಪ. ಅದು ಸರಿಯಲ್ಲ. ಏಕೆಂದರೆ ಪೂರ್ವಪಕ್ಷದ ಯುಕ್ತಿಗಳಿಗಿಂತ ಸಿದ್ಧಾಂತಯುಕ್ತಿಗಳಿಗೆ ಪ್ರಾಬಲ್ಯವಿದೆ. ಆದಪ್ರಯುಕ್ತ ವಸ್ತುನಿರ್ಣಯವು ಆಗುವುದು ಎಂಬ ನ್ಯಾಯವು ಈ ಅಧಿಕರಣದಲ್ಲಿ ನಿಶ್ಚಯಿಸಲ್ಪಟ್ಟಿದೆ.

ಹಾಗಾದರೆ ಪೂರ್ವಪಕ್ಷಕ್ಕೆ ಶ್ರುತಿಯುಕ್ತಿಗಳ ಸಹಕಾರವಿರುವಾಗ ಕೇವಲ ಪ್ರಬಲವಾದ ಯುಕ್ತಿಯನ್ನು ಆಶ್ರಯಿಸಿರುವ ಸಿದ್ಧಾಂತವು ಹೇಗೆ ಕೂಡುವುದು ಎಂದರೆ, ಹಿಂದೆ ಹೇಳಿದ್ದನ್ನೇ ವಿವರಿಸುತ್ತಾರೆ –

**ಯುಕ್ತೇಸ್ತು ಯುಕ್ತಿಬಾಹುಲ್ಯಮಾಗಮಾದಾಗಮಸ್ಯ ಚ ।।೬೯।।**

**ಕಥಂ ನ ನಿರ್ಣಯಂ ಕುರ್ಯಾದಿತಿ..................।**

ಪೂರ್ವಪಕ್ಷದಲ್ಲಿ ಹೇಳಿದ ಯುಕ್ತಿಗಳಿಗಿಂತ ಸಿದ್ಧಾಂತ ಯುಕ್ತಿಗಳಿಗೆ ಬಾಹುಲ್ಯವು. ಹಾಗೆಯೇ ಪೂರ್ವಪಕ್ಷದಲ್ಲಿ ತೋರಿಸಿದ ಆಗಮಗಳಿಗಿಂತ ಸಿದ್ಧಾಂತದಲ್ಲಿಯ ಆಗಮಗಳಿಗೆ ಬಾಹುಲ್ಯವು. ಸಿದ್ಧಾಂತದ ಯುಕ್ತಿ ಹಾಗೂ ಆಗಮಗಳು ಪ್ರಬಲವಾಗಿರುವಾಗ ನಿರ್ಣಯವು ಹೇಗೆ ಆಗಲಾರದು? ಆದಕಾರಣ ಈ ಅಧಿಕರಣದ ಆರಂಭವು ಯುಕ್ತವೇ ಆಗುವುದು. (ಇಲ್ಲಿ ಬಾಹುಲ್ಯವು ಪ್ರಾಧಾನ್ಯ

ಹಾಗೂ ಪ್ರಾಬಲ್ಯವನ್ನು ಸೂಚಿಸುವುದು.)

ಇನ್ನು ಯಾವುದೇ ವಸ್ತುವು ಹುಟ್ಟುವುದಕ್ಕೆ ಮೊದಲಿಗೆ ಆ ವಸ್ತುವಿನ ಅಭಾವವಿರುತ್ತದೆ. ಇದನ್ನೇ ಪ್ರಾಗಭಾವ ಎನ್ನುತ್ತಾರೆ. ಈಶ್ವರಾದಿಗಳಿಗೆ ಪ್ರಲಯ ಕಾಲದಲ್ಲಿ ಸತ್ವಾಭಾವವು ಶ್ರುತಿಗಳಲ್ಲಿ ಹೇಳಲ್ಪಟ್ಟಿದೆ. ಆದ್ದರಿಂದ ಪ್ರಾಗಭಾವಕ್ಕೆ ಕಾರಣತ್ವವು ಸಿದ್ಧಿಸುತ್ತದೆ. 'ಅಸದೇವೇದಮಗ್ರ ಆಸೀತ್' 'ಸದಸದೇವ ಸನ್ಮನೋಽ-ಕುರುತ' 'ಅಸತಃ ಸದಜಾಯತ' ಇವೇ ಮೊದಲಾದ ಶ್ರುತಿಗಳ ಸಂವಾದವೂ ಇರುವುದು. ಆದ್ದರಿಂದ ಅಸತ್ತಿಗೇ ಜಗತ್ಕಾರಣತ್ವವನ್ನು ಅಂಗೀಕರಿಸಬೇಕು ಎಂದರೆ–

**...................................ಅಸತ್ಕಾರಣಂ ನ ಹಿ ।**

**ಶ್ರುತ್ಯರ್ಥೋ ಭವತಿ ಕ್ವಾಪಿ ಶ್ರುತಿಪ್ರಾಯೋಪಪತ್ತಿಭಿಃ ।।೭೦।।**

**ಅವಿರೋಧಶ್ಚತುರ್ಥೇ ತು ಪಾದೇ ಸಮ್ಯಕ್ಸಮರ್ಥ್ಯತೇ ।**

ಅಸತ್ ಅಥವಾ ಪ್ರಾಗಭಾವವು ಜಗತ್ಕರ್ತೃವು ಎಂಬುದು ಶ್ರುತ್ಯರ್ಥವಲ್ಲ. ಇದು ಯುಕ್ತಿಗೆ ವಿರುದ್ಧವಾದುದರಿಂದ ಅನುಮಾನದಿಂದಲೂ ಅಸತ್ತಿಗೆ ಕಾರಣತ್ವವನ್ನು ಸಾಧಿಸಲು ಶಕ್ಯವಿಲ್ಲ. ಸಂಭಾವಿತವಾದುದೇ ಶ್ರುತ್ಯರ್ಥವೂ, ಅನುಮಾನದಿಂದ ಸಾಧಿಸಲಿಕ್ಕೆ ಯೋಗ್ಯವೂ ಆಗುವುದು. ಪ್ರಾಗಭಾವಕ್ಕೆ ಕರ್ತೃತ್ವವು ಎಲ್ಲಿಯೂ ಕಂಡುಬಂದಿಲ್ಲ. ನಾಲ್ಕನೆಯ ಪಾದದಲ್ಲಿ ಶ್ರುತಿಪ್ರಧಾನವಾದ ಯುಕ್ತಿಗಳಿಂದ ಶ್ರುತಿಗಳಿಗೆ ಅವಿರೋಧವು ಚೆನ್ನಾಗಿ ಸಮರ್ಥಿಸಲ್ಪಡುತ್ತದೆ.

ಈಗ ಅಸತ್ತಿಗೆ ಭಾವತ್ವರೂಪ ಅರ್ಥವನ್ನಿಟ್ಟುಕೊಂಡು 'ಅಸದಿತಿ ಚೇನ್ನ' ಎಂಬ ಸೂತ್ರವನ್ನು ವ್ಯಾಖ್ಯಾನಿಸುತ್ತಾರೆ –

**ಅಸತ್ಕಾರ್ಯಂ ಯಥಾ ದೃಷ್ಟಂ ವಸ್ತುತ್ವಾತ್ಕಾರಣಂ ತಥಾ ।।೭೧।।**

**ಇತಿ ಚೇನ್ನ ನಿಷೇಧೈಕಸ್ವರೂಪಸ್ಯ ನ ಕರ್ತೃತಾ ।**

ಮಹದಾದಿ ಕಾರ್ಯಪದಾರ್ಥಗಳು ಪ್ರಲಯಕಾಲದಲ್ಲಿ ಇರುವುದಿಲ್ಲವೆಂದು ಪ್ರಮಿತವಾಗಿವೆ. ಇದೇರೀತಿ ಭಾವಪದಾರ್ಥವಾದುದರಿಂದ ಕಾರಣರೆಂದು ಸಿದ್ಧಾಂತಿಗಳಿಂದ ಅಂಗೀಕರಿಸಲ್ಪಟ್ಟ ಈಶ್ವರಾದಿಗಳೂ ಪ್ರಲಯದಲ್ಲಿ ಇರುವುದಿಲ್ಲ ಎಂದು ಹೇಳಕೂಡದು. ಏಕೆಂದರೆ ನಿಷೇಧವೇ ಸ್ವರೂಪವಾಗಿವುಳ್ಳ ಅಭಾವಕ್ಕೆ ಕರ್ತೃತ್ವವು ಕೂಡುವುದಿಲ್ಲ.

ಹಾಗಾದರೆ ಪ್ರಾಗಭಾವಕ್ಕೆ ನಿಷೇಧೈಕ ಸ್ವರೂಪತ್ವವೂ ಇದ್ದು ಕರ್ತೃತ್ವವೂ ಇದ್ದರೆ ಏನು ವಿರೋಧವಿದೆ? ಘಟಾದಿಗಳ ಅಭಾವಕ್ಕೆ ಕರ್ತೃತ್ವವಿಲ್ಲದಿದ್ದರೂ, ಪ್ರಲಯ ಕಾಲದಲ್ಲಿರುವ ವಿಶ್ವಪ್ರಾಗಭಾವಕ್ಕೆ ಕರ್ತೃತ್ವವು ಇರುವುದು. ಹೀಗೆ ಆಶಂಕಿಸಿದರೆ –

**ಬುದ್ಧಿಪೂರ್ವಪ್ರವೃತ್ತಿರ್ಹಿ ಕರ್ತೃತ್ವಮಿತಿ ನಿಶ್ಚಿತಮ್ ॥೭೨॥**

**ಪ್ರತಿಷೇಧಾತ್ಮಕತ್ವಂ ತು ಭಾವಸ್ಯಾಭಾವಧರ್ಮತಃ ।**

ಬುದ್ಧಿಪೂರ್ವಕವಾದ ಇಚ್ಛಾ ಪ್ರಯತ್ನ ಮುಂತಾದ ರೂಪವಾದ ಪ್ರವೃತ್ತಿಯೇ ಕರ್ತೃತ್ವ ಎಂಬುದಾಗಿ ಇಲ್ಲಿ ಎಲ್ಲ ಪರೀಕ್ಷಕರಿಂದಲೂ ನಿರ್ಣಯಿಸಲ್ಪಟ್ಟಿದೆ. ಪ್ರಾಗಭಾವಕ್ಕೆ ಬುದ್ಧಿಪೂರ್ವಕವಾದ ಪ್ರವೃತ್ತಿಯು ಅಸಂಭವವಾದ್ದರಿಂದ ಕರ್ತೃತ್ವವು ಕೂಡುವುದಿಲ್ಲ. ಕರ್ತೃತ್ವವುಳ್ಳ ಕುಂಬಾರ ಮುಂತಾದ ಭಾವಪದಾರ್ಥಗಳಿಗೆ ಭೇದವೆಂದು ಕರೆಯಲ್ಪಡುವ ಅನ್ಯೋನ್ಯಾಭಾವ ಎಂಬ ಧರ್ಮವು ಇರುವುದರಿಂದ ನಿಷೇಧೈಕ ಸ್ವರೂಪತ್ವವು ಕೂಡುವುದು.

ಇದು ಅಸಂಗತ. ಏಕೆಂದರೆ, ಕರ್ತೃತ್ವವುಳ್ಳ ಕುಂಬಾರ ಮುಂತಾದವರಿಗೆ ನಿಷೇಧಾತ್ಮಕತ್ವವಿಲ್ಲ. ನಿಷೇಧರೂಪವಾದ ಅನ್ಯೋನ್ಯಾಭಾವಕ್ಕೆ ಕರ್ತೃತ್ವವು ಇರುವುದಿಲ್ಲ. ಹೀಗೆ ಆಶಂಕಿಸಿದರೆ–

**ಧರ್ಮಧರ್ಮ್ಯೈಕ್ಯತಶ್ಚೈವ ನ ತು ತನ್ಮಾತ್ರತಾ ಭವೇತ್ ॥೭೩॥**

ಧರ್ಮ–ಧರ್ಮಿಗಳಿಗೆ (ಅಂದರೆ ಅನ್ಯೋನ್ಯಾಭಾವ ಮತ್ತು ಕುಂಬಾರಾದಿಗಳಿಗೆ) ಐಕ್ಯವಿದ್ದುದರಿಂದ ಹಾಗೂ ಕುಂಬಾರಾದಿ ಭಾವಪದಾರ್ಥಗಳಿಗೆ ಅಭಾವರೂಪವಾದ ಧರ್ಮವಿದ್ದುದರಿಂದ, ನಿಷೇಧಾತ್ಮಕತ್ವವು ಇದೆ. ಹೀಗೆ ಭಾವಪದಾರ್ಥಗಳಿಗೆ ನಿಷೇಧಾತ್ಮಕತ್ವ ಇದ್ದರೂ, ನಿಷೇಧಸ್ವರೂಪಮಾತ್ರತ್ವವು ಕೂಡುವುದಿಲ್ಲ. ಇಲ್ಲಿ ಭೇದನಿರಾಕರಣಕ್ಕಾಗಿ 'ಏವ' ಶಬ್ದವನ್ನೂ, ನಿಷೇಧರೂಪತ್ವಕ್ಕೆ ಕುಂಬಾರಾದಿಗಳಲ್ಲಿ ಅಕರ್ತೃತ್ವದೊಡನೆ ವ್ಯಭಿಚಾರ ಹೇಳಿದರೆ ಅದನ್ನು ನಿರಾಕರಿಸಲು 'ಮಾತ್ರ' ಶಬ್ದವನ್ನೂ ಪ್ರಯೋಗಿಸಲಾಗಿದೆ.

ಕುಂಬಾರ ಮೊದಲಾದ ಭಾವಪದಾರ್ಥಗಳಿಗೆ ವಿಧಿ ಹಾಗೂ ನಿಷೇಧ ರೂಪತ್ವಗಳೆರಡೂ ಇರುವುದರಿಂದ ಕೇವಲ ಪ್ರತಿಷೇಧರೂಪತೆಯು ಇರುವುದಿಲ್ಲ. ಹಾಗೆಯೇ ಪ್ರಾಗಭಾವಕ್ಕೂ ಕೇವಲ ಪ್ರತಿಷೇಧರೂಪತೆಯು ಇರುವುದಿಲ್ಲ. ಆದ್ದರಿಂದ ಹೇತುವು ಸ್ವರೂಪಾಸಿದ್ಧವಾಗುವುದು. ಘಟದ ಪ್ರಾಗಭಾವರೂಪ ದೃಷ್ಟಾಂತವು ಸಾಧನ ರಹಿತವಾಗುವುದು. ಹೀಗೆ ಆಶಂಕಿಸಿದರೆ –

**ಅಭಾವಸ್ಯ ಚ ಭಾವೋಽಪಿ ಧರ್ಮೋಽಥಾಪಿ ಹಿ ಧರ್ಮಿಣಃ ।**

**ತಾದೃಕ್ತ್ವಂ ಮಾತ್ರತೇಹೋಕ್ತಾ ಬುದ್ಧಿರಾಹಿತ್ಯಮೇವ ತತ್ ॥೭೪॥**

ಪಕ್ಷವೆನಿಸಿದ ವಿಶ್ವದ ಪ್ರಾಗಭಾವಕ್ಕೂ ದೃಷ್ಟಾಂತವೆನಿಸಿದ ಘಟಾಭಾವಕ್ಕೂ ಭಾವರೂಪವಾದ ಪ್ರಮೇಯತ್ವ ಮುಂತಾದ ಧರ್ಮವು ಇರುತ್ತದೆ. ಧರ್ಮವು ಧರ್ಮಿಯಿಂದ ಅಭಿನ್ನವೂ ಆಗಿದೆಯೆಂಬುದಾಗಿ 'ಚ' ಶಬ್ದದಿಂದ ಹೇಳಲ್ಪಡುತ್ತದೆ.

ಆದರೂ ಸ್ವರೂಪಾಸಿದ್ಧಿ ಮುಂತಾದ ದೋಷಗಳು ಬರುವುದಿಲ್ಲ. ಏಕೆಂದರೆ ಧರ್ಮಿಗೆ ಪ್ರತಿಷೇಧಾತ್ಮಕತ್ವವೇ ಪ್ರತಿಷೇಧಮಾತ್ರತ್ವವೆಂದು ಈ ಸೂತ್ರದಲ್ಲಿ ಹೇಳಲ್ಪಟ್ಟಿದೆ. ಪ್ರತಿಷೇಧಮಾತ್ರತ್ವವಿರುವುದರಿಂದಲೇ ವಿಶ್ವದ ಪ್ರಾಗಭಾವಕ್ಕೆ ಘಟಾಭಾವಕ್ಕೆ ಇರುವಂತೆಯೇ ಬುದ್ಧಿರಾಹಿತ್ಯವು ಸಿದ್ಧಿಸುತ್ತದೆ.

ಭಾವಕ್ಕೆ ಅಭಾವರೂಪ ಧರ್ಮವಿರುವುದರಿಂದ ಅಭಾವಕ್ಕೆ ಭಾವರೂಪ ಧರ್ಮವೂ ಇದೆಯೆಂಬುದಾಗಿ ಹೇಳಿದ್ದು ಅಯುಕ್ತವು. ಏಕೆಂದರೆ ಭಾವಕ್ಕೆ ಅಭಾವರೂಪ ಧರ್ಮವೂ, ಅಭಾವಕ್ಕೆ ಭಾವರೂಪ ಧರ್ಮವೂ ಇದೆ ಎಂಬುದಕ್ಕೆ ಪ್ರಮಾಣವಿಲ್ಲ. ಸಂಬಂಧವಿರುವ ವಸ್ತ್ರ ಮತ್ತು ಅದರ ಬಿಳಿಯ ಬಣ್ಣ ಇವುಗಳಲ್ಲಿ ಧರ್ಮ–ಧರ್ಮಿಭಾವವು ಕಂಡಿದೆ. ಸಂಬಂಧವೇ ಇಲ್ಲದ ಮೇರು ಮಂದರಗಳಲ್ಲಿ ಧರ್ಮ–ಧರ್ಮಿಭಾವವು ಕಂಡಿಲ್ಲ. ಆದ್ದರಿಂದ ಭಾವ–ಅಭಾವಗಳಿಗೆ ಸಂಬಂಧವೇ ಇರುವುದಿಲ್ಲ. ಅವು ವಿರುದ್ಧ ಸ್ವಭಾವವುಳ್ಳದ್ದಾಗಿವೆ. ಏಕೆಂದರೆ ವಿಧಿನಿಷೇಧ ರೂಪಗಳಾಗಿವೆ. ಅವುಗಳಿಗೆ ಅಭೇದವೂ ಹೇಳಲ್ಪಟ್ಟಿದೆ. ಪರಸ್ಪರ ಭಿನ್ನವಾದ ವಸ್ತುಗಳಿಗೆ ಮಾತ್ರ ಧರ್ಮ–ಧರ್ಮಿಭಾವವು ಕೂಡುವುದು. ಆದ್ದರಿಂದ ಭಾವಾ–ಭಾವಗಳಿಗೆ ಧರ್ಮ– ಧರ್ಮಿಭಾವವೂ ಕೂಡುವುದಿಲ್ಲ. ಹೀಗೆ ಆಶಂಕಿಸಿದರೆ –

**ವಿಶೇಷ್ಯತೈವ ಧರ್ಮಿತ್ವಂ ಪ್ರಥಮಪ್ರತಿಪತ್ತಿಷು ।**

**ನಿಷೇಧವಿಧಿರೂಪತ್ವಂ ಭಾವಾಭಾವತ್ವಮತ್ರ ಹಿ ।।೭೫।।**

ವಿಶೇಷ್ಯತ್ವವೇ ಧರ್ಮಿತ್ವವು. ಆದ್ದರಿಂದ ವಿಶೇಷಣತ್ವವೇ ಧರ್ಮತ್ವವು ಎಂದು ತಿಳಿಯಬೇಕು. ಮೊದಲಿಗೆ ಜ್ಞಾನಬರುವಾಗಲೇ ವಿಧಿ ಹಾಗೂ ನಿಷೇಧರೂಪವಾಗಿ ತೋರುವ ಧರ್ಮಗಳು ಭಾವ ಹಾಗೂ ಅಭಾವಗಳೆಂದು ಇಲ್ಲಿ ವಿವಕ್ಷಿತವಾಗಿದೆ.

**ವಿವರಣೆ:** ಯಾವುದು ಯಾವುದರಿಂದ ವಿಶೇಷವಾಗಿ ತಿಳಿಯಲ್ಪಡುವುದೋ ಅದು ಅದರ ಧರ್ಮಿಯೆನಿಸುತ್ತದೆ. ಇನ್ನೊಂದು ಧರ್ಮವೆನಿಸುತ್ತದೆ. ಅಂದರೆ ಧರ್ಮವು ವಿಶೇಷಣ, ಧರ್ಮಿಯು ವಿಶೇಷ್ಯ. ಬೇರೆ ರೀತಿಯಲ್ಲಿ ಧರ್ಮ–ಧರ್ಮಿಗಳನ್ನು ಹೇಳಲಿಕ್ಕೆ ಶಕ್ಯವಿಲ್ಲ. ಭಾವ–ಅಭಾವಗಳಿಗೆ ವಿಶೇಷ್ಯ–ವಿಶೇಷಣ ಭಾವವು ಸರ್ವಾನುಭವ ಸಿದ್ಧವಾಗಿದೆ. ಏಕೆಂದರೆ ಈ ರೀತಿಯ ವಿಶೇಷ್ಯ–ವಿಶೇಷಣ ಭಾವವು ಇಲ್ಲದಿದ್ದಲ್ಲಿ 'ಘಟವು ಪಟವಲ್ಲ' ಹಾಗೂ 'ಅಭಾವವು ಪ್ರಮೇಯವು' ಎಂಬ ವ್ಯವಹಾರವು ಕೂಡುವುದಿಲ್ಲ. ಭಾವ–ಅಭಾವಗಳಿಗೆ ಸಂಬಂಧವಿಲ್ಲ. ಆದ್ದರಿಂದ ಧರ್ಮ–ಧರ್ಮಿ ಭಾವವು ಕೂಡುವುದಿಲ್ಲ ಎಂದು ಹೇಳುವುದು ಯುಕ್ತವಲ್ಲ. ಭಾವ–ಅಭಾವಗಳಿಗೆ ವಿಶೇಷ್ಯ–ವಿಶೇಷಣರೂಪವಾದ ಸಂಬಂಧವಿದೆ. ಆದ್ದರಿಂದ ಧರ್ಮ–ಧರ್ಮಿ ಭಾವವು ಕೂಡುವುದು. ಭಾವ–ಅಭಾವಗಳಲ್ಲಿ ಅಭೇದವಿದ್ದರೂ ವಿಶೇಷ ಶಕ್ತಿಯಿಂದ ವಿಶೇಷ್ಯ–ವಿಶೇಷಣತ್ವ ರೂಪವಾದ ಧರ್ಮ–ಧರ್ಮಿ ಭಾವವು ಯುಕ್ತವೇ ಆಗುತ್ತದೆ. ಭಾವಾಭಾವಗಳಿಗೆ

ಅಭೇದವಿದ್ದರೆ ಘಟಾದಿಗಳಿಗೆ ಭಾವತ್ವವೂ ಪ್ರಾಗಭಾವಾದಿಗಳಿಗೆ ಅಭಾವತ್ವವು ಎಂಬ ನಿಯಮವೇ ಇಲ್ಲದಂತಾಗುವುದು ಎಂದು ಹೇಳುವುದು ಯುಕ್ತವಲ್ಲ. ಏಕೆಂದರೆ ಇದು ಲೋಕದಲ್ಲಿ ವ್ಯವಹಾರಸಿದ್ಧವಾದ ನಿಯಮ. ಪ್ರಥಮ ಪ್ರತಿಪತ್ತಿಗೆ ವಿಧಿರೂಪದಲ್ಲಿ ತೋರುವುದು ಭಾವ, ನಿಷೇಧರೂಪದಲ್ಲಿ ತೋರುವುದು ಅಭಾವ ಎನ್ನುವ ವ್ಯವಸ್ಥೆಯು ಎಲ್ಲರಿಂದಲೂ ಅಂಗೀಕೃತವಾಗಿದೆ. ಒಂದು ಘಟವನ್ನು ನೋಡಿದ ಕೂಡಲೇ ಅದರಲ್ಲಿ ಘಟದ ಭಾವವಿದೆ ಎಂದು ಮೊದಲು ವಿಧಿರೂಪವಾಗಿ ತಿಳಿಯಲ್ಪಟ್ಟು, ಆಮೇಲೆ ಅದು ಪಟವು ಆಗುವುದಿಲ್ಲ ಎಂದು ಪಟದ ನಿಷೇಧರೂಪವಾಗಿ ತಿಳಿಯಲ್ಪಡುತ್ತದೆ. ಪ್ರಾಗಭಾವಾದಿಗಳೂ ಮೊದಲು ನಿಷೇಧರೂಪವಾಗಿ ಧರ್ಮಿ ಸ್ವರೂಪದಿಂದ ತಿಳಿಯಲ್ಪಟ್ಟು, ಆಮೇಲೆ ಅಲ್ಲಿ ಪ್ರಾಗಭಾವವವಿದೆ ಎಂಬ ಪ್ರಮೇಯವಾಗಿ ವಿಧಿರೂಪದಿಂದ ತಿಳಿಯಲ್ಪಡುತ್ತದೆ.

ಈಗ 'ಅಸತ್ಕಾರ್ಯಂ ಯಥಾ ದೃಷ್ಟಂ' ಎನ್ನುವ ಅನುಮಾನವನ್ನು ವಿಶೇಷವಾಗಿ ನಿರಾಕರಿಸುವ ಅಪೇಕ್ಷೆಯಿಂದ ಸೂತ್ರಕಾರರು ಮುಂದಿನ ಸೂತ್ರದಲ್ಲಿ ಅದರ ಪ್ರಸ್ತಾವ ಮಾಡಿದ್ದಾರೆ –

**ಸೂತ್ರ: ಓಂ ಅಪೀತೌ ತದ್ವತ್ಪ್ರಸಂಗಾದಸಮಂಜಸಮ್ ಓಂ**

ಸೂತ್ರಾರ್ಥ: ಅಭಾವಕ್ಕೆ ಜಗತ್ಕರ್ತೃತ್ವವನ್ನು ಅಂಗೀಕರಿಸಿದರೆ, ಪ್ರಲಯದಲ್ಲಿ ಈಶ್ವರ ಮೊದಲ್ಗೊಂಡು ಎಲ್ಲಕ್ಕೂ ಅಭಾವವಿರುವುದೆಂಬ ಪ್ರಸಂಗವು ಬರುವುದು. ಆದರೆ ಪ್ರಲಯದಲ್ಲಿ ಈಶ್ವರಾದಿಗಳ ಅಸ್ತಿತ್ವವು ಪ್ರಮಾಣಗಳಿಂದ ತಿಳಿದುಬರುತ್ತಿರಲು ಅವುಗಳನ್ನು ಬಿಟ್ಟು ಅಭಾವಕ್ಕೆ ಜಗತ್ಕರ್ತೃತ್ವವನ್ನು ನಿರ್ಣಯಿಸುವುದು ಶಕ್ಯವಿಲ್ಲ.

ಈಶ್ವರಾದಿಗಳು ಭಾವಪದಾರ್ಥವಾದುದರಿಂದ ಘಟದಂತೆಯೇ ಎನ್ನುವ ಅನುಮಾನದಿಂದ ಈಶ್ವರಾದಿಗಳಿಗೆ ಪ್ರಲಯದಲ್ಲಿ ಇಲ್ಲದಿರುವಿಕೆ ಎಂಬುದು ಕೂಡುವುದು ಎಂದರೆ –

**ಸರ್ವನಾಶೇಷ್ವಪಿ ಸದಾ ಶಿಷ್ಟತ್ವಾದ್ಯಸ್ಯ ಕಸ್ಯ ನುಃ ।**

**ನಾಶೋಽಯಂ ವಿಮತೋಽಪಿ ಸ್ಯಾತ್ ನಾಶತ್ವಾತ್ಕರ್ತೃಶೇಷವಾನ್ ॥೭೬॥**

ಯಾವಾಗಲೂ ಎಲ್ಲ ವಸ್ತುಗಳ ನಾಶಗಳಲ್ಲಿಯೂ ನಾಶದ ಕರ್ತೃವೋ ಅಥವಾ ಅಕರ್ತೃವೋ ಆದ ಯಾವನೋ ಒಬ್ಬ ಪುರುಷನು ಉಳಿಯುವನು. ಅಂತೆಯೇ ಈ ವಿವಾದ ವಿಷಯವಾದ ಮಹಾಪ್ರಲಯರೂಪ ವಿನಾಶವೂ ಕೂಡ, ಅದು ನಾಶವಾಗಿರುವುದರಿಂದ, ಪುರುಷಶೇಷವುಳ್ಳದ್ದು ಆಗುವುದು.

ಒಟ್ಟಿನಲ್ಲಿ ಅಭಿಪ್ರಾಯವೇನೆಂದರೆ, ಜಗತ್ತು ನಾಶವಾದಾಗ ಅದರ ಕರ್ತೃವಾದ ಪುರುಷನೊಬ್ಬನು ಉಳಿಯುತ್ತಾನೆ. ಪ್ರಲಯದಲ್ಲಿ ನಾಶವಾಗದೇ ಉಳಿಯುವ

ಪುರುಷನೊಬ್ಬನಿಗೇ ವಿಶ್ವಕರ್ತೃತ್ವವು ಸಂಭವಿಸುವಾಗ, ಅಭಾವಕ್ಕೆ ಕರ್ತೃತ್ವವನ್ನು ಕಲ್ಪಿಸುವುದಕ್ಕೆ ಅವಕಾಶವಿರುವುದಿಲ್ಲ. ಲೋಕದಲ್ಲಿಯೂ, ಘಟದ ಉತ್ಪತ್ತಿಗೆ ಮುಂಚೆ ಕುಂಬಾರ ಹಾಗೂ ಪ್ರಾಗಭಾವಗಳೆರಡೂ ಇರುವಾಗ, ಪ್ರಾಗಭಾವಕ್ಕೆ ಕರ್ತೃತ್ವವು ಕಂಡಿರುವುದಿಲ್ಲ. ಬದಲಾಗಿ ಕುಂಬಾರನೇ ಘಟದ ಕರ್ತೃ ಎಂದು ಕಂಡಿರುತ್ತದೆ.

ಸುಂದೋಪಸುಂದ ನ್ಯಾಯದಿಂದ, ನಾಶಕ್ಕೆ ಕಾರಣನಾದ ಪುರುಷನೂ ನಾಶ ಹೊಂದುವುದರಿಂದ, ನಾಶವಾದ ಮೇಲೆ ಯಾವ ಪುರುಷನೂ ಉಳಿಯುವುದಿಲ್ಲ. ಆದಕಾರಣ ಅಭಾವಕ್ಕೇ ಜಗತ್ಕರ್ತೃತ್ವವನ್ನು ಹೇಳಬೇಕು ಎಂದು ಪೂರ್ವಪಕ್ಷಿಯ ವಾದ. (ಸುಂದ, ಉಪಸುಂದ ಎಂಬ ಇಬ್ಬರು ದೈತ್ಯರು, ತಿಲೋತ್ತಮೆಯೆಂಬ ಅಪ್ಸರ ಸ್ತ್ರೀಯನ್ನು ಕಾಮಿಸಿ, ಪರಸ್ಪರ ಹೊಡೆದಾಡಿಕೊಂಡು ಇಬ್ಬರೂ ನಾಶವನ್ನು ಹೊಂದಿದರು. ಕೊನೆಯಲ್ಲಿ ಇಬ್ಬರಲ್ಲಿ ಯಾರೂ ಉಳಿಯಲಿಲ್ಲ. ಇದೇ ಸುಂದೋಪ ಸುಂದ ನ್ಯಾಯ ಎಂಬುದಾಗಿ ಪುರಾಣ ಪ್ರಸಿದ್ಧ.). ಇದಕ್ಕೆ ಉತ್ತರವನ್ನು 'ನ ಚಾಶೇಷ' ಇತ್ಯಾದಿ ವಚನದಿಂದ ಹೇಳುತ್ತಾರೆ –

**ನ ಚಾಶೇಷನ್ಯನಾಶಸ್ತು ದೃಷ್ಟೋ ದೃಶ್ಯೋಽಸ್ತಿ ವಾ ಕ್ವಚಿತ್ ।**

**ಧರ್ಮಾಧರ್ಮಾಶ್ರಯತ್ವೇನ ಸ್ವೀಕಾರ್ಯೋಽಪಿ ನರೋ ಲಯೇ ॥೭೭॥**

ಎಲ್ಲ ಪುರುಷರ ನಾಶವೆನ್ನುವುದು ಎಲ್ಲಿಯೂ, ಈ ಹಿಂದೆಯೂ ಕಂಡುಬಂದಿಲ್ಲ ಮತ್ತು ಮುಂದೆಯೂ ಕಂಡುಬರುವಂಥಹದೂ ಅಲ್ಲ. ವರ್ತಮಾನದಲ್ಲಂತೂ ಯಾರಿಗೂ ಕಂಡುಬರುತ್ತಿಲ್ಲ.

ಹಿಂದೆ ಹೇಳಿದ ಅನುಮಾನದಿಂದಷ್ಟೇ ಅಲ್ಲ, ಧರ್ಮ ಮತ್ತು ಅಧರ್ಮಗಳಿಗೆ ಆಶ್ರಯವಾಗಿರುವುದೆಂಬ ಕಾರಣದಿಂದಲೂ, ಪ್ರಲಯ ಕಾಲದಲ್ಲಿ ಜೀವಾತ್ಮನ ಇರುವಿಕೆಯನ್ನು ಒಪ್ಪಲೇಬೇಕು.

ವಿವರಣೆ: ಅಭಿಪ್ರಾಯವೇನೆಂದರೆ, ಪ್ರಲಯಕಾಲದಲ್ಲಿರುವ ಧರ್ಮವು ಆಶ್ರಯವುಳ್ಳದ್ದಾಗಿದೆ. ಅದು ಧರ್ಮವಾಗಿರುವುದರಿಂದ, ಈಗಿನ ಕಾಲದ ಧರ್ಮದಂತೆ ಎಂದು ಅನುಮಾನ. ಇದೇರೀತಿ ಅಧರ್ಮಕ್ಕೂ ಅನುಮಾನವನ್ನು ಪ್ರಯೋಗಿಸಬೇಕು. ಧರ್ಮಾಧರ್ಮಗಳ ಆಶ್ರಯನು ಜೀವಾತ್ಮನಿಂದ ಅನ್ಯನು ಎನ್ನುವುದು ಯುಕ್ತವಲ್ಲ. ಆದುದರಿಂದ ಪ್ರಲಯದಲ್ಲಿ ಜೀವನು ಇರುವುದರಿಂದ, ಯಾವುದೇ ಭಾವಪದಾರ್ಥವು ಇಲ್ಲವೆಂದು ಸಾಧಿಸುವುದು ಅಯುಕ್ತವಾಗುವುದು. ಈಶ್ವರನನ್ನು ಸಾಧಿಸುವುದಕ್ಕಾಗಿಯೂ ಈ ಅನುಮಾನವನ್ನು ಹೇಳಬಹುದು. ಆಶ್ರಯ ಶಬ್ದಕ್ಕೆ ಅಧಿಷ್ಠಾತೃವೆಂಬ ಅರ್ಥವೂ ಇದೆ. ಧರ್ಮಾಧರ್ಮಗಳು ಅತೀಂದ್ರಿಯ ಪದಾರ್ಥಗಳು. ಆದುದುರಿಂದ ಜೀವನು ಅಧಿಷ್ಠಾತೃವಾಗಿರಲು

ಸಾಧ್ಯವಿಲ್ಲ. ಆದಕಾರಣ ಜೀವನಿಂದ ಭಿನ್ನನಾದ ಈಶ್ವರನು ಧರ್ಮಾಧರ್ಮಗಳ ಅಧಿಷ್ಠಾತೃವಾಗಿರುವನು. ಈ ಕಾರಣದಿಂದ ಪ್ರಲಯದಲ್ಲಿ ಈಶ್ವರನ ಅಸ್ತಿತ್ವವನ್ನು ಅಂಗೀಕರಿಸಲೇಬೇಕು.

ಹಾಗಾದರೆ ಪ್ರಲಯದಲ್ಲಿ ಯಾವುದೇ ಭಾವಕ್ಕೂ ಅಸ್ತಿತ್ವವನ್ನು ಒಪ್ಪದ ನನ್ನ ಪಕ್ಷದಲ್ಲಿ ಧರ್ಮಾಧರ್ಮಗಳೂ ಇಲ್ಲವೇ ಇಲ್ಲ. ಧರ್ಮಾಧರ್ಮಗಳೇ ಇಲ್ಲವೆಂದ ಮೇಲೆ ಅವುಗಳಿಗೆ ಆಶ್ರಯ ಅಥವಾ ಅಧಿಷ್ಠಾತೃವಾಗಿ ಜೀವನಾಗಲೀ ಈಶ್ವರನಾಗಲೀ ಇರಲು ಸಾಧ್ಯವಿಲ್ಲ. ಹೀಗೆ ಪೂರ್ವಪಕ್ಷಿಯು ಹೇಳಿದರೆ, ಅವನನ್ನು ಕೇಳಬೇಕು – ಧರ್ಮಾಧರ್ಮಗಳೆಂಬ ಸಂಜ್ಞೆಯುಳ್ಳ ಅದೃಷ್ಟವು ಇದೆ. ಅದು ಕಾರ್ಯಕ್ಕೆಲ್ಲ ಕಾರಣವಾಗಿರುವುದು. ಆದರೆ ಅದು ಪ್ರಲಯದಲ್ಲಿ ಇರುವುದಿಲ್ಲ ಎಂದು ಹೇಳುತ್ತೀಯೋ? ಅಥವಾ ಅದೃಷ್ಟವಿದ್ದರೂ ಅದು ಕಾರಣವಲ್ಲವೆಂದು ನಿನ್ನ ಅಭಿಪ್ರಾಯವೋ? ಅಥವಾ ಅದೃಷ್ಟವೆಂಬುದೇ ಇಲ್ಲವೆಂದು ಹೇಳುತ್ತೀಯೋ? ಮೊದಲನೆಯ ಕಲ್ಪವನ್ನು 'ಅನಾದಿತ್ವಂ' ಇತ್ಯಾದಿ ವಚನದಿಂದ ನಿರಾಕರಿಸುತ್ತಾರೆ –

**ಅನಾದಿತ್ವಂ ವಿನಾಽದೃಷ್ಟಂ ಕಥಂ ಸ್ಯಾತ್ಕಾರಣಂ ಕ್ವಚಿತ್ ।**

ಪ್ರಲಯಕಾಲದಲ್ಲಿ ಅದೃಷ್ಟವು ಇಲ್ಲವೆಂದರೆ, ಸೃಷ್ಟಿಕಾಲದಲ್ಲಿ ಉಂಟಾಗುವ ಕಾರ್ಯಕ್ಕೆ ಕಾರಣವು ಹೇಗೆ ಆಗುವುದು? ಅಸ್ತಿತ್ವವನ್ನೇ ಹೊಂದಿರದ ವಸ್ತುವು ಯಾವುದೇ ಕಾರ್ಯಕ್ಕೆ ಕಾರಣವಾಗಲಾರದು. ಅಂದರೆ ಸೃಷ್ಟಿಕಾರ್ಯಕ್ಕೆ ಕಾರಣವೇ ಇಲ್ಲದಂತಾಗುವ ಪ್ರಸಂಗ ಬರುವುದು. ಆದುದರಿಂದ ಇಲ್ಲದ ಅದೃಷ್ಟವನ್ನು ಕಾರಣವೆಂದು ಹೇಳಿದರೆ, ಉತ್ಪತ್ತಿಯುಳ್ಳ ಎಲ್ಲ ಪದಾರ್ಥಗಳಿಗೂ ಒಂದು ನಿಮಿತ್ತ ಕಾರಣವು ಇರುವುದೆಂಬ ನಿಯಮಕ್ಕೆ ಇಲ್ಲಿ ಭಂಗ ಉಂಟಾಗುವುದು.

ಹಾಗಾದರೆ ಈಗಿನ ಕಾರ್ಯಗಳಿಗೆಲ್ಲ ಅದೃಷ್ಟವು ಕಾರಣವು. ಆದರೆ ಆದಿ ಕಾಲದಲ್ಲಿ ಉಂಟಾಗುವ ಕಾರ್ಯಕ್ಕೆ ಅದೃಷ್ಟವು ಕಾರಣವಲ್ಲ ಎಂದು ನಾನು ಅಂಗೀಕರಿಸುತ್ತೇನೆ. ಆದಕಾರಣ ಅದೃಷ್ಟವು ಪ್ರಲಯಕಾಲದಲ್ಲಿ ಇರಬೇಕಿಲ್ಲ ಎಂದು ಹೇಳಿದರೆ, ಇದನ್ನೂ 'ಅನಾದಿತ್ವಂ' ಎನ್ನುವುದರಿಂದ ನಿರಾಕರಿಸುತ್ತಾರೆ –

ಪ್ರಲಯದಲ್ಲಿ ಅಸ್ತಿತ್ವವಿಲ್ಲವೆಂಬ ಕಾರಣದಿಂದಲೇ ಆದಿಕಾಲದ ಕಾರ್ಯಕ್ಕೆ ಕಾರಣವಾಗದಿರುವ ಅದೃಷ್ಟವು, ಈಗಿನ ಕಾಲದಲ್ಲಿ ಉಂಟಾಗುವ ಕಾರ್ಯಕ್ಕೆ ಕಾರಣವು ಹೇಗೆ ಆಗುವುದು? ಯಾವುದೇ ರೀತಿಯಿಂದಲೂ ಆಗಲಾರದು. ಈಗಿನ ಕಾರ್ಯಕ್ಕೆ ಅದೃಷ್ಟವು ಕಾರಣವಲ್ಲ ಕಾರ್ಯವಾಗಿರುವುದರಿಂದ ಆದಿಕಾಲದ ಕಾರ್ಯದಂತೆ ಎನ್ನುವ ಅನುಮಾನವು ಸಂಭವಿಸುತ್ತದೆ. ಈಗಿನ ಕಾರ್ಯಕ್ಕೆ ಅದೃಷ್ಟವೇ ಕಾರಣವು ಎಂದು ಅಂಗೀಕರಿಸಿದ ಪಕ್ಷದಲ್ಲಿ, ಈಗಿನಂತೆ ಸೃಷ್ಟಿಕಾಲದ ಕಾರ್ಯವೂ ಅದೃಷ್ಟದ ಕಾರ್ಯವೇ ಎಂದು ಒಪ್ಪಬೇಕಾಗುವುದು.

ಆದಿಕಾಲದಲ್ಲಿರುವ ಕಾರ್ಯಕ್ಕೆ ಅದೃಷ್ಟವು ಕಾರಣವಾಗುವುದು ಬೇಡ. ಹಾಗಿದ್ದರೂ ಪ್ರಲಯಕಾಲದಲ್ಲಿ ಅದೃಷ್ಟವು ಇದೆಯೆಂದು ಅಂಗೀಕರಿಸಬೇಕು. ಏಕೆಂದರೆ, 'ಅನಾದಿತ್ವಂ ವಿನಾ' ಪ್ರಲಯದಲ್ಲಿ ಅಸ್ತಿತ್ವವಿಲ್ಲದಿದ್ದರೆ ಅದೃಷ್ಟವು ಈಗಿನ ಕಾಲದ ಕಾರ್ಯಕ್ಕೂ ಕಾರಣವು ಹೇಗೆ ಆಗುವುದು? ಮಧ್ಯದಲ್ಲಿ ಅದೃಷ್ಟವು ಹುಟ್ಟಿಕೊಳ್ಳುತ್ತದೆ ಎನ್ನುವುದು ಕೂಡುವುದಿಲ್ಲ.

ಹಾಗಾದರೆ ಅದೃಷ್ಟವು ಉತ್ಪತ್ತಿಯುಳ್ಳ ಎಲ್ಲ ಪದಾರ್ಥಗಳಿಗೂ ನಿಮಿತ್ತಕಾರಣ ವಾಗಿದ್ದರೂ, ಪ್ರಲಯಕಾಲದಲ್ಲಿ ಅದರ ಅಸ್ತಿತ್ವವನ್ನು ಅಂಗೀಕರಿಸುವುದು ಬೇಡ. ಆದಿಕಾಲದಲ್ಲಿಯೇ ಹುಟ್ಟುವ ಅದೃಷ್ಟವು ಮಹದಾದಿಕಾರ್ಯಗಳಿಗೆ ಕಾರಣವಾಗುವುದು ಎಂದು ಅಂಗೀಕರಿಸಲಿಕ್ಕೆ ಅಡ್ಡಿಯಿಲ್ಲ ಎಂದರೆ, ಆದಿಕಾಲದಲ್ಲಿ ಹುಟ್ಟುವ ಅದೃಷ್ಟವು ಅದರ ಹಿಂದಿನ ಅದೃಷ್ಟದಿಂದ ಹುಟ್ಟಿದೆಯೋ ಅಥವಾ ಇಲ್ಲವೋ ಎಂದು ಕೇಳಬೇಕು. 'ಪೂರ್ವಾದೃಷ್ಟಾತ್' ಇತ್ಯಾದಿ ವಚನದಿಂದ ಇವೆರಡು ಕಲ್ಪಗಳನ್ನೂ ನಿರಾಕರಿಸುತ್ತಾರೆ –

**ಪೂರ್ವದೃಷ್ಟಾತ್ಪರಾದೃಷ್ಟಂ ಯದಿ ನೈವೋತ್ತರಂ ಕುತಃ ॥೭೮॥**

ಪೂರ್ವದಲ್ಲಿದ್ದ ಅದೃಷ್ಟದಿಂದ ಆಮೇಲಿನ ಅದೃಷ್ಟವು ಹುಟ್ಟುತ್ತದೆ ಎನ್ನುವ ಪಕ್ಷದಲ್ಲಿ, ಆದಿಕಾಲದಲ್ಲಿ ಹುಟ್ಟತಕ್ಕ ಅದೃಷ್ಟವನ್ನು ನಾವು ಪಕ್ಷವೆಂದು ಪರಿಗಣಿಸುವುದೇ ಇಲ್ಲ. ಆದರೆ ಅದಕ್ಕೆ ಕಾರಣವೆನಿಸಿದ ಪ್ರಲಯಕಾಲದಲ್ಲಿರುವ ಪೂರ್ವಾದೃಷ್ಟವನ್ನೇ ಪಕ್ಷವೆಂದು ಹೇಳುತ್ತೇವೆ. ಆದುದರಿಂದ ಆಶ್ರಯಾಸಿದ್ಧಿಯು ಹೇಗೆ ಬರುವುದು?

ಎರಡನೆಯ ಕಲ್ಪಕ್ಕೂ 'ಪೂರ್ವಾದೃಷ್ಟಾತ್' ಎಂಬುದರಿಂದಲೇ ಉತ್ತರಿಸುತ್ತಾರೆ. ಮೊದಲಿನ ಅದೃಷ್ಟದಿಂದ ಆಮೇಲಿನ ಅದೃಷ್ಟವು ಹುಟ್ಟುವುದೇ ಇಲ್ಲವೆಂದು ಅಂಗೀಕರಿಸಿದ ಪಕ್ಷದಲ್ಲಿ, ಆದಿಕಾಲದಲ್ಲಿನ ಅದೃಷ್ಟದ ಉತ್ಪತ್ತಿಯು ಕೂಡುವುದೇ ಇಲ್ಲ.

ಹಾಗಾದರೆ ಹುಟ್ಟತಕ್ಕ ಎಲ್ಲ ಅದೃಷ್ಟಗಳೂ ಹಿಂದಿನ ಅದೃಷ್ಟದಿಂದಲೇ ಹುಟ್ಟುತ್ತವೆ ಎಂದು ಹೇಳುವುದಿಲ್ಲ. ಆದಿಕಾಲದ ಅದೃಷ್ಟಕ್ಕೆ ಅದರ ಹಿಂದಿನ ಅದೃಷ್ಟವು ಕಾರಣವಲ್ಲ. ಮಹದಾದಿ ಕಾರ್ಯಗಳಿಗೆ ಅದೃಷ್ಟವು ಕಾರಣವು ಎಂದು ಹೇಳಿದರೆ – ಸೃಷ್ಟಿಯ ಮೊದಲಿನ ಅದೃಷ್ಟವು ಅದಕ್ಕೆ ಹಿಂದಿನ ಅದೃಷ್ಟದಿಂದ ಹುಟ್ಟುವುದಿಲ್ಲ ಎನ್ನುವ ಪಕ್ಷದಲ್ಲಿ, ಆಮೇಲಿನ ಮಹದಾದಿ ಕಾರ್ಯಗಳೂ ಅದೃಷ್ಟದಿಂದ ಹುಟ್ಟುವುದೆಂದು ಏಕೆ ಅಂಗೀಕರಿಸಬೇಕು? ಮಹದಾದಿ ಕಾರ್ಯವೂ ಅದೃಷ್ಟಾಪೇಕ್ಷೆಯಿಲ್ಲದೇ ಹುಟ್ಟುವುದು ಎನ್ನುವುದು ಅಯುಕ್ತವಾಗಲಾರದು. ಇಲ್ಲದಿದ್ದಲ್ಲಿ ಆ ಅದೃಷ್ಟವೂ ಕಾರ್ಯವೇ ಆಗಿರುವುದರಿಂದ ಅದಕ್ಕೂ ಮತ್ತೊಂದು ಅದೃಷ್ಟದ ಅಪೇಕ್ಷೆಯು ಇದೆ ಎಂದು ಅಂಗೀಕರಿಸಬೇಕಾಗುತ್ತದೆ.

ಹಾಗಾದರೆ, ಅದೃಷ್ಟವು ಕಾರ್ಯಕ್ಕೆ ಕಾರಣವೇ ಆಗುವುದಿಲ್ಲ ಅಥವಾ ಅದೃಷ್ಟವೇ ಇಲ್ಲ ಎಂದು ಹೇಳುತ್ತೇವೆ. ಏಕೆಂದರೆ ಅದೃಷ್ಟವು ಇದೆಯೆಂದಾಗಲೀ, ಅದೃಷ್ಟವು ಕಾರಣವೆಂಬುದಾಗಲೀ ಪ್ರತ್ಯಕ್ಷಕ್ಕೆ ಗೋಚರವಾಗದು. ಆದುದರಿಂದ ಅನುಮಾನದಲ್ಲಿ ಆಶ್ರಯಾಸಿದ್ಧಿಯು ತಪ್ಪುವುದೇ ಇಲ್ಲ. ಹೀಗೆ ಆಶಂಕಿಸಿದರೆ –

**ಅದೃಷ್ಟಂ ಕಾರಣಂ ನೋ ಚೇಲ್ಲಯೇ ಮಾನಂ ಚ ಕಿಂ ಭವೇತ್ ।**

ಪ್ರತ್ಯಕ್ಷಕ್ಕೆ ಅಗೋಚರವಾದ್ದರಿಂದ ಅದೃಷ್ಟವೇ ಇಲ್ಲ ಹಾಗೂ ಇದ್ದರೂ ಕಾರಣವಲ್ಲ ಎಂದು ಹೇಳುವುದಾದರೆ, ಪ್ರಲಯ ವಿಷಯದಲ್ಲಾದರೂ ಏನು ಪ್ರಮಾಣವಿರುವುದು? ಪ್ರಲಯವಾದರೂ ಪ್ರತ್ಯಕ್ಷಕ್ಕೆ ಅಗೋಚರವು. ಪ್ರಲಯದಲ್ಲಿ ಈಶ್ವರಾದಿಗಳು ಇರುವುದಿಲ್ಲವೆಂಬ ಅನುಮಾನವೂ ಪ್ರಮಾಣವಾಗಲಾರದು. ಏಕೆಂದರೆ ಪರಕೀಯರ ಪ್ರಕಾರ ಈಶ್ವರಾದಿಗಳಿಗೆ ಪ್ರಸಿದ್ಧಿಯಿಲ್ಲ. ಆದ್ದರಿಂದ ಪರಕೀಯಾನುಮಾನದಲ್ಲಿ ಪಕ್ಷದಲ್ಲಿ ಸಾಧ್ಯಾಪ್ರಸಿದ್ಧಿ ಎಂಬ ದೋಷವು ಬರುವುದು.

ಈ ಅಧಿಕರಣದ ಮೊದಲನೆಯ ಸೂತ್ರದಲ್ಲಿ ಪ್ರಾಗಭಾವಕ್ಕೆ ಕರ್ತೃತ್ವವನ್ನು ನಿರಾಕರಿಸುವುದಕ್ಕಾಗಿ ಅನುಮಾನವನ್ನು ಹೇಳಿದರು. ಈಗ ಈ ಸೂತ್ರದಿಂದಲೂ "ಜಗತ್ತಿಗೆ ಅಭಾವವು ಕರ್ತೃವಲ್ಲ. ಏಕೆಂದರೆ ಚೇತನನೇ ಕರ್ತನು ಎನ್ನುವ ವಿಷಯದಲ್ಲಿ ದೃಷ್ಟಾಂತವಿರುವುದು" ಎನ್ನುವ ಅಭಿಪ್ರಾಯದಿಂದ, ಜಗತ್ತು ಚೇತನ ಕರ್ತೃಕ ಎನ್ನುವ ವಿಷಯದಲ್ಲಿ ಅನುಮಾನವನ್ನು ಹೇಳುತ್ತಾರೆ –

**ಉತ್ಪತ್ತಿನಾಶಕಾರೀ ಚ ಬುದ್ಧಿಮಾನ್ ದೃಶ್ಯತೇ ಕ್ವಚಿತ್ ॥೭೯॥**

**ತದ್ದೃಷ್ಟಾಂತೇನ ಸರ್ವತ್ರ ಕರ್ತಾ ಕಿಂ ನಾನುಮೀಯತೇ ।**

ಬುದ್ಧಿಪೂರ್ವಕವಾಗಿ ಉತ್ಪತ್ತಿನಾಶಗಳನ್ನು ಮಾಡುವ ಕರ್ತೃವು ಘಟಪಟಾದಿ ಪದಾರ್ಥಗಳಲ್ಲಿ ಕಂಡುಬರುತ್ತಾನೆ. ಈ ದೃಷ್ಟಾಂತದಿಂದ ಜಗತ್ಸೃಷ್ಟ್ಯಾದಿ ಎಲ್ಲ ಕಾರ್ಯಗಳಲ್ಲಿಯೂ ಬುದ್ಧಿಯುಳ್ಳ ಕರ್ತನಿರಲೇಬೇಕೆಂದು ಅನುಮಾನದಿಂದ ಏಕೆ ಊಹಿಸಬಾರದು?

ಹಾಗಾದರೆ ಅನುಮಾನದಿಂದ ಈಶ್ವರನಿಗೆ ಜಗತ್ಕರ್ತೃತ್ವವನ್ನು ಪ್ರತಿಪಾದಿಸುವ ಸೂತ್ರಕಾರರ ಈ ಹೇಳಿಕೆಯು ತಮ್ಮ ಹಿಂದಿನ ವಚನಕ್ಕೆ ವಿರುದ್ಧವಾಗಿದೆ. 'ಶಾಸ್ತ್ರಯೋನಿತ್ವಾತ್' ಇತ್ಯಾದಿ ಸೂತ್ರಗಳಿಂದ ಈಶ್ವರನ ಬಗ್ಗೆ ಅನುಮಾನದ ಪ್ರಾಮಾಣ್ಯವನ್ನು ಸ್ವತಃ ಸೂತ್ರಕಾರರೇ ನಿರಾಕರಿಸಿದ್ದಾರೆ. ಹೀಗೆ ಆಶಂಕಿಸಿದರೆ –

**ಆಗಮಾನುಗೃಹೀತಾ ತು ಮಾನಮೇಷಾಽನುಮಾಽಪಿ ತು ॥೮೦॥**

ಸೂತ್ರಕಾರರು ಎಲ್ಲ ರೀತಿಯಿಂದಲೂ ಈಶ್ವರನ ವಿಷಯದಲ್ಲಿ ಅನುಮಾನದ ಪ್ರಮಾಣ್ಯವನ್ನು ನಿರಾಕರಿಸಿಲ್ಲ. ಆದರೆ ಆಗಮಗಳಿಂದ ಅನುಗೃಹೀತವಾಗಿಲ್ಲದ

ಅನುಮಾನಗಳಿಗೆ ಮಾತ್ರ ಪ್ರಾಮಾಣ್ಯವನ್ನು ನಿರಾಕರಿಸಿದ್ದಾರೆ. ಆಗಮಗಳಿಂದ ಅನುಗೃಹೀತವಾದ ಅನುಮಾನವು ಈಶ್ವರನ ವಿಷಯದಲ್ಲಿ ಪ್ರಮಾಣವೇ ಆಗುವುದು ಎಂಬುದಾಗಿಯೇ ಸೂತ್ರಕಾರರ ಅಭಿಮತವಾಗಿದೆ. ಹಾಗಿಲ್ಲದಿದ್ದರೆ ವೇದಾರ್ಥ ನಿರ್ಣಯದಲ್ಲಿ ಯುಕ್ತಿಯ ಅನುಸಂಧಾನರೂಪವಾದ ಜಿಜ್ಞಾಸೆಯನ್ನೇ ಆರಂಭಿಸುತ್ತಿರಲಿಲ್ಲ. ಈಗ ಹೇಳಲ್ಪಟ್ಟ ಅನುಮಾನವಾದರೂ 'ಯತೋ ವಾ ಇಮಾನಿ ಭೂತಾನಿ' ಇತ್ಯಾದಿ ಆಗಮಗಳಿಂದ ಅನುಗೃಹೀತವಾದುದೇ ಆಗಿದೆ. ಆದಪ್ರಯುಕ್ತ ಈಶ್ವರನ ವಿಷಯದಲ್ಲಿ ಪ್ರಮಾಣವಾಗುವುದು. ಆದುದರಿಂದ ಯಾವುದೇ ವಿರೋಧವಿರುವುದಿಲ್ಲ.

ಹೀಗೆ ಅಭಾವಕ್ಕೆ ವಿಶ್ವಕರ್ತೃತ್ವವನ್ನು ಸಾಧಿಸುವ ಅನುಮಾನವನ್ನು ನಿರಾಕರಿಸಿ, ವಿಶ್ವಕ್ಕೆ ಈಶ್ವರನೇ ಕರ್ತೃವು ಎಂಬ ಉತ್ತರವನ್ನು ಅನುಮಾನದಿಂದಲೇ ಸಮರ್ಥಿಸಲಾಯಿತು. ಇದನ್ನು ಮತಾಂತರದಿಂದ (ತರ್ಕದ ಅಪ್ರಾಮಾಣ್ಯವನ್ನು ವಾದಿಸುವವರ ಮತದಿಂದ) ಆಕ್ಷೇಪಿಸಿ ಸಮಾಧಾನ ಹೇಳತಕ್ಕ ಸೂತ್ರ –

**ಸೂತ್ರ: ಓಂ ತರ್ಕಾಪ್ರತಿಷ್ಠಾನಾದನ್ಯಥಾಪ್ಯನುಮೇಯಮಿತಿ**

**ಚೇದೇವಮಪ್ಯನಿರ್ಮೋಕ್ಷ ಪ್ರಸಂಗಃ ಓಂ**

ಸೂತ್ರಾರ್ಥ: ಅನುಮಾನವನ್ನು ಆಧರಿಸಿರುವ ಪೂರ್ವಪಕ್ಷವಾಗಲೀ ಸಿದ್ಧಾಂತವಾಗಲೀ ಪ್ರಮಾಣವೆನಿಸುವುದಿಲ್ಲ. ಏಕೆಂದರೆ, ಹೀಗೆಯೇ ಅನುಮಾನ ಮಾಡತಕ್ಕದ್ದು, ಬೇರೆ ರೀತಿಯಿಂದ ಮಾಡತಕ್ಕದ್ದಲ್ಲ ಎಂಬುದಾಗಿ ತರ್ಕಕ್ಕೆ ವ್ಯವಸ್ಥೆಯಿರುವುದಿಲ್ಲ. ವಿಪರೀತವಾಗಿಯೂ ಅನುಮಾನ ಮಾಡಲು ಬರುತ್ತದೆ. ಹೀಗೆ ಶಂಕಿಸುವುದು ಸರಿಯಲ್ಲ. ಏಕೆಂದರೆ ತರ್ಕಕ್ಕೆ ಅಪ್ರಾಮಾಣ್ಯವನ್ನು ಹೇಳಿದರೆ ಮೋಕ್ಷವೇ ಇಲ್ಲದಂತಾಗುವುದು. ಒಟ್ಟಿನಲ್ಲಿ ಸೂತ್ರದ ಅಭಿಪ್ರಾಯವೇನೆಂದರೆ – ಕೇವಲ ತರ್ಕವು ಪ್ರಮಾಣವಲ್ಲ. ಆದರೆ ಪ್ರತ್ಯಕ್ಷ, ಆಗಮ ಮುಂತಾದ ಪ್ರಮಾಣಗಳ ಅನುಗ್ರಹವಿದ್ದರೆ ಅಂಥಹ ತರ್ಕವೂ ಪ್ರಮಾಣವಾಗಿ ಗ್ರಾಹ್ಯವಾಗುತ್ತದೆ.

ಈ ಸೂತ್ರದ ಅಭಿಪ್ರಾಯವನ್ನು ಮುಂದಿನ ವಚನದಿಂದ ಸ್ಪಷ್ಟಪಡಿಸುತ್ತಾರೆ –

**ಆಗಮಾನುಗ್ರಹಾಭಾವೇ ನ ತರ್ಕಃ ಸ್ಯಾತ್ಪ್ರತಿಷ್ಠಿತಃ ।**

**ಅಕ್ಷಜಾಗಮಮೂಲಸ್ಯ ಸ್ಯಾದೇವಾಸ್ಯ ಪ್ರತಿಷ್ಠಿತಿಃ ।।೮೧।।**

ಪ್ರಮಾಣದ ಅನುಗ್ರಹವಿಲ್ಲದೇ ಹೋದರೆ ತರ್ಕವು (ಅನುಮಾನವು) ಪ್ರಮಾಣ ಎನಿಸುವುದಿಲ್ಲ. ಪ್ರತ್ಯಕ್ಷಾಗಮಗಳೇ ಮೂಲವಾಗುಳ್ಳ ಈ ಅನುಮಾನಕ್ಕೆ ಪ್ರಾಮಾಣ್ಯವು ಬಂದೇ ಬರುತ್ತದೆ.

ಈ ವ್ಯವಸ್ಥೆಯನ್ನು ಒಪ್ಪದೆ, ಎಲ್ಲ ಕಡೆಯಲ್ಲಿಯೂ ಪ್ರತಿಪಕ್ಷಾನುಮಾನಕ್ಕೆ

ಅವಕಾಶವಿದೆಯೆಂದೂ, ಎಲ್ಲ ಅನುಮಾನಗಳೂ ಅಪ್ರಮಾಣವೆಂದೂ ವಾದಿಸುವ ಪ್ರತಿಪಕ್ಷದವನಿಗೆ 'ಅನ್ಯಥಾ' ಎಂಬ ವಚನದಿಂದ ಉತ್ತರವನ್ನು ಹೇಳುತ್ತಾರೆ –

**ಅನ್ಯಥಾಽಸ್ಯಾಪ್ರತಿಷ್ಠಾ ಚ ಸ್ವವಾಚಾ ವ್ಯಾಹತೈವ ಹಿ ।**

ಹಿಂದೆ ಹೇಳಿದ ವ್ಯವಸ್ಥೆಯನ್ನು ಒಪ್ಪದಿದ್ದ ಪಕ್ಷದಲ್ಲಿ, ಎಲ್ಲ ಅನುಮಾನಗಳಿಗೆ ಅಪ್ರಾಮಾಣ್ಯವು ತನ್ನ ವಚನದಿಂದಲೇ ಬಾಧಿತವಾಗುವುದು. ಅಂದರೆ ಯಾವನು ಹೀಗೆ ಅಂಗೀಕರಿಸುವುದಿಲ್ಲವೋ ಅವನಿಗೆ ಸ್ವವಚನ ವಿರೋಧವು ಬರುವುದರಿಂದ ಮೋಕ್ಷವೇ ಇಲ್ಲವೆನ್ನುವ ಪ್ರಸಂಗವು ಬರುತ್ತದೆ.

**ಸೂತ್ರ: ಓಂ ಏತೇನ ಶಿಷ್ಟಾ ಅಪರಿಗ್ರಹಾ ಅಪಿ ವ್ಯಾಖ್ಯಾತಾಃ ಓಂ**

ಇದು ಈ ಅಧಿಕರಣದ ಕೊನೆಯ ಸೂತ್ರ. ಈ ಸೂತ್ರವನ್ನು ಕೆಲವರು ಹೀಗೆ ವ್ಯಾಖ್ಯಾನಿಸುತ್ತಾರೆ – 'ನ ವಿಲಕ್ಷಣತ್ವ' ಮುಂತಾದ ಸೂತ್ರಗಳಿಂದ ಪ್ರಕೃತವಾದ ಉಪಾದಾನಕಾರಣವಾಗಿ ಹೇಳಲ್ಪಟ್ಟ ಪ್ರಧಾನವನ್ನೇ ಜಗತ್ಕಾರಣವೆಂಬ ವಾದವನ್ನು ನಿರಾಕರಿಸಲಾಯಿತು. ಪರಮಾಣು ಮೊದಲಾದವುಗಳೇ ಜಗತ್ಕಾರಣ ಎಂಬ ವಾದವನ್ನು ಶಿಷ್ಟರಾದ ಮನು ವ್ಯಾಸ ಮೊದಲಾದವರು ಪರಿಗ್ರಹಿಸಿರುವುದಿಲ್ಲ. ಅಂಥಹ ವಾದಗಳೂ ಇದರಿಂದ ನಿರಸ್ತವಾದವು ಎಂದು ತಿಳಿಯಬೇಕು. ಹೀಗೆ ಕೆಲವರು ಈ ಸೂತ್ರಕ್ಕೆ ವ್ಯಾಖ್ಯಾನ ಮಾಡುತ್ತಾರೆ. ಈ ವ್ಯಾಖ್ಯಾನವನ್ನು 'ನ ಚ' ಇತ್ಯಾದಿ ವಚನದಿಂದ ನಿರಾಕರಿಸುತ್ತಾರೆ –

**ನ ಚ ಶಿಷ್ಟಾಗೃಹೀತತ್ವಂ ನಿರೀಶಾದೀಶವಾದಿನಃ ॥೮೨॥**

ನಿರೀಶ್ವರವಾದಿ ಸಾಂಖ್ಯನಿಗಿಂತ ಈಶ್ವರವಾದಿಗಳಾದ ವೈಶೇಷಿಕರಿಗೆ ಶಿಷ್ಟರಿಂದ ಪರಿಗ್ರಹಿಸಲ್ಪಟ್ಟಿಲ್ಲ ಎಂಬ ಭಾವವು ಇಲ್ಲವೇ ಇಲ್ಲ.

**ವಿವರಣೆ:** ಈಶ್ವರನನ್ನು ಒಪ್ಪುವ ವೈಶೇಷಿಕಾದಿಗಳಿಗಿಂತ ಈಶ್ವರನನ್ನು ಒಪ್ಪದ ಸಾಂಖ್ಯನೇ ಹೆಚ್ಚಿನ ರೀತಿಯಲ್ಲಿ ಶಿಷ್ಟರಿಗೆ ವಿರುದ್ಧನೆಂಬ ವಿಚಾರವೇ ಉಚಿತವಾಗುತ್ತದೆ. ಏಕೆಂದರೆ ಈ ಅಧಿಕರಣದಲ್ಲಿ ಬ್ರಹ್ಮನು ಜಗತ್ಕಾರಣನು ಎಂಬ ವಿಷಯಕ್ಕೆ ವಿರುದ್ಧವಾದ ವಾದಗಳನ್ನು ನಿರಾಕರಿಸಲಾಗುತ್ತದೆ. ಸಾಂಖ್ಯನು ಈಶ್ವರನನ್ನೇ ಒಪ್ಪುವುದಿಲ್ಲ ಎಂದ ಮೇಲೆ ಈಶ್ವರನು ಜಗತ್ಕಾರಣನೆಂಬುದನ್ನು ಅವನು ಹೇಗೆ ಒಪ್ಪುತ್ತಾನೆ? ಹೀಗೆ ವೇದಾಂತಕ್ಕೆ ಅತ್ಯಂತ ವಿರುದ್ಧವಾದ್ದರಿಂದ ಸಾಂಖ್ಯನ ವಾದವು ಶಿಷ್ಟರಿಗೆ ಅಸಮ್ಮತವು. ಆದರೆ ವೈಶೇಷಿಕಾದಿಗಳು ಬ್ರಹ್ಮನನ್ನೂ, ಅವನು ಜಗತ್ತಿಗೆ ನಿಮಿತ್ತಕಾರಣವೆಂಬುದನ್ನೂ ಅಂಗೀಕರಿಸಿದ್ದಾರೆ. ಆದರೆ ಪ್ರಧಾನಕ್ಕೆ ಉಪಾದಾನ ಕಾರಣತ್ವವನ್ನು ಅಂಗೀಕರಿಸಿಲ್ಲ. ಈ ಕಾರಣದಿಂದ ವೇದಾಂತಕ್ಕೆ ಸ್ವಲ್ಪ ವಿರೋಧಿಯಾದುದರಿಂದ ವೈಶೇಷಿಕರ ವಾದವು ಸ್ವಲ್ಪಮಟ್ಟಿಗೆ ಅಸಮ್ಮತವು.

ಹಾಗಾದರೆ ಸೂತ್ರಾರ್ಥವು ಯಾವುದು ಎಂದರೆ –

**ಅತೋಽವಶಿಷ್ಟಜೀವಾದಿಕರ್ತೃತಾಽತ್ರ ನಿಷಿಧ್ಯತೇ ।**

ಬೇರೆ ಅರ್ಥಗಳನ್ನು ಈಗಾಗಲೇ ನಿರಾಕರಿಸಿರುವುದರಿಂದ ಅವಶಿಷ್ಟವಾದ ಜೀವಾದಿ ಕರ್ತೃತ್ವವು ಈ ಸೂತ್ರದಲ್ಲಿ ನಿರಾಕರಿಸಲ್ಪಡುತ್ತದೆ. ಅಂದರೆ, ವೇದಕ್ಕೆ ಅಸಮ್ಮತವಾದ ಜೀವ, ಪ್ರಧಾನ, ಅಸತ್ತು, ಕಾಲ, ಸ್ವಭಾವ ಮುಂತಾದವುಗಳಿಗೆ ಜಗತ್ಕಾರಣತ್ವವನ್ನು ಹೇಳುವ ಮತಗಳೆಲ್ಲವೂ ಈ ಸೂತ್ರದಿಂದ ನಿರಾಕೃತವಾದವು ಎಂದು ವ್ಯಾಖ್ಯಾನ ಮಾಡಿದಂತಾಯಿತು.

ಹಾಗಾದರೆ ಜೀವಾದಿ ಎಂಬಲ್ಲಿರುವ ಆದಿ ಶಬ್ದದಿಂದ ಅಸತ್ಕರ್ತೃತ್ವ ವಾದವೂ ಪರಿಗ್ರಹಿಸಲ್ಪಟ್ಟಿದೆ ಎಂದು ಹೇಳುವುದು ಯುಕ್ತವಲ್ಲ. ಏಕೆಂದರೆ 'ಅಸದಿತಿ ಚೇನ್ನ' ಎಂಬ ಸೂತ್ರದ ವ್ಯಾಖ್ಯಾನದಲ್ಲಿ ಇದನ್ನು ನಿರಾಕರಸಿರುವುದರಿಂದ, ಮತ್ತೆ ಅದನ್ನು ಗ್ರಹಿಸಿದರೆ ಪುನರುಕ್ತಿ ಮುಂತಾದ ದೋಷಗಳು ಬರುತ್ತವೆ. ಹೀಗೆ ಆಶಂಕಿಸಿದರೆ–

**ತನ್ಮನೋಽಕುರುತೇತ್ಯಾದೇರಸತೋ ಮನಸೋ ಜನಿಃ ।।೮೩।।**

**ನಿವಾರಿತಾ ತು ಪೂರ್ವತ್ರ ಹ್ಯಕಸ್ಮಾದಿತಿ ತದ್ವಿನಾ ।**

**ಅಸತೋ ವಿಶ್ವಜನನಮಾಶಂಕ್ಯಾತ್ರ ನಿಷಿಧ್ಯತೇ ।।೮೪।।**

ಪ್ರಾಗಭಾವದ ಮನಸ್ಸಿನಿಂದ, ಅಂದರೆ ಜ್ಞಾನ ಇಚ್ಛೆ ಪ್ರಯತ್ನಗಳಿಂದ, ಜಗತ್ತು ಹುಟ್ಟಿತು ಎಂದು 'ತನ್ಮನೋಽಕುರುತ' ಇತ್ಯಾದಿ ಪ್ರಮಾಣದಿಂದಲೂ ಹಿಂದಿನ ಯುಕ್ತಿಯಿಂದಲೂ ಆಶಂಕಿಸಲ್ಪಟ್ಟದ್ದು ಮೊದಲಿಗೆ ನಿರಾಕರಿಸಲ್ಪಟ್ಟಿತು. 'ಪ್ರತಿಷೇಧ ಮಾತ್ರತ್ವಾತ್' ಇತ್ಯಾದಿ ವಚನದಿಂದ ಇದು ಸ್ಪಷ್ಟವು. 'ಅಕಸ್ಮಾದ್ಧೀಮಾವಿರಾಸೀತ್' ಇತ್ಯಾದಿ ಶ್ರುತಿಗಳಿಂದ, ಮನಸ್ಸನ್ನು ಹೊರತುಪಡಿಸಿ (ಜ್ಞಾನೇಚ್ಛಾದಿಗಳಿಲ್ಲದೆ), ಶೂನ್ಯದ ದೆಶೆಯಿಂದ ಜಗತ್ತಿನ ಉತ್ಪತ್ತಿಯನ್ನು ಆಶಂಕಿಸಿ, ಅದು ಇಲ್ಲಿ ನಿಷೇಧಿಸಲ್ಪಡುತ್ತದೆ.

**ವಿವರಣೆ:** ಹಾಗಾದರೆ ಜಗತ್ತಿಗೆ ಅಭಾವವು ಕರ್ತೃವಲ್ಲ ಎಂದು ಒಪ್ಪೋಣ. ಆದರೂ ಜೀವಾದಿಗಳಿಂದ ಉತ್ಪತ್ತಿಯನ್ನು ಹೊಂದುತ್ತದೆ. ಏಕೆಂದರೆ 'ಜೀವಾದ್ಭವಂತಿ ಭೂತಾನಿ' 'ಪ್ರಧಾನಾದಿದಮುತ್ಪನ್ನಂ' 'ಅಕಸ್ಮಾದ್ಧೀದಮಾವಿ–ರಾಸೀತ್' ಇತ್ಯಾದಿ ಶ್ರುತಿಗಳು ಜೀವಾದಿಗಳಿಗೆ ಕಾರಣತ್ವವನ್ನು ಹೇಳುತ್ತವೆ. ಘಟ, ದಧಿ, ಕಂಟಕ, ತೈಕ್ಷ್ಣ್ಯ ಮೊದಲಾದ ದೃಷ್ಟಾಂತಗಳೂ ಇದರ ಪರವಾಗಿ ಇವೆ. ಘಟವು ಚೇತನದಿಂದ ಉತ್ಪತ್ತಿಗೂ, ದಧಿಯು ಅಚೇತನದಿಂದ ಉತ್ಪತ್ತಿಗೂ, ತೈಕ್ಷ್ಣ್ಯ ಕಂಟಕಗಳು ಕಾರಣವಿಲ್ಲದೆ ಉತ್ಪತ್ತಿಗೂ ದೃಷ್ಟಾಂತಗಳು. ಜಗತ್ತು ಜೀವಕರ್ತೃಕವು ಕಾರ್ಯವಾದುದರಿಂದ ಘಟದಂತೆ ಇತ್ಯಾದಿ ಅನುಮಾನಗಳಿಂದಲೂ ಜೀವಾದಿ

ಕರ್ತೃತ್ವವಾದವು ಸಿದ್ಧಿಸುತ್ತದೆಯೆಂದು ಹೇಳಿದರೆ, ಬುದ್ಧಿ ಇತ್ಯಾದಿಗಳನ್ನು ಹೊಂದಿರುವ ಮುಖ್ಯವಾದ ಕರ್ತೃತ್ವವನ್ನು ನಾವು ಜೀವಾದಿಗಳಿಗೆ ಅಂಗೀಕರಿಸಿಯೇ ಇಲ್ಲ. ಈವ್ಯಾಖ್ಯಾನದಲ್ಲಿ ಉಕ್ತವಾಗಿರುವ ಕರ್ತೃ ಶಬ್ದವು ಕೇವಲ ಕಾರಣತ್ವದಲ್ಲಿಯೇ ತಾತ್ಪರ್ಯವುಳ್ಳದ್ದೆಂದು ತಿಳಿಯಬೇಕು.

ಇಲ್ಲಿ ಜೀವಾದಿಗಳಿಗೆ ವಿಶ್ವಕಾರಣತ್ವವನ್ನು ಮಾತ್ರ ಶಂಕಿಸುತ್ತೀರೋ? ಅಥವಾ ಜೀವಾದಿಗಳಿಗೇ ಕಾರಣತ್ವವೆಂದು ಶಂಕಿಸುತ್ತೀರೋ? ಎಂದು ಪ್ರಶ್ನೆ. ಮೊದಲನೆಯ ಕಲ್ಪದಲ್ಲಿ ಸಿದ್ಧಾಂತ ವಿರೋಧವಿಲ್ಲ. ಏಕೆಂದರೆ ಜೀವನು ಅದೃಷ್ಟವನ್ನು ಆಶ್ರಯಿಸಿರುವುದರಿಂದ ನಿಮಿತ್ತಕಾರಣನೆಂದೂ, ಪ್ರಧಾನವು ಉಪಾದಾನ ಕಾರಣವೆಂದೂ ಅಂಗೀಕರಿಸಿದ್ದೇವೆ. ಎರಡನೆಯ ಪಕ್ಷವು ಕೂಡುವುದಿಲ್ಲ. ಏಕೆಂದರೆ ಹಿಂದೆ ಹೇಳಿದ ದೃಷ್ಟಾಂತಗಳಲ್ಲಿ ಜೀವನೊಬ್ಬನೇ ಕಾರಣನೆಂಬುದಕ್ಕೆ ಸ್ಥಾಪಕ ಯುಕ್ತಿಯು ಇರುವುದಿಲ್ಲ. ಅಲ್ಲದೆ ಯಾವುದು ಕಾರ್ಯವೋ ಅದು ಸಕರ್ತೃಕವು ಎಂಬ ನಿಯಮವೂ ಇದೆ. ಇಲ್ಲಿ 'ಪ್ರಾಪಕಂ' ಇತ್ಯಾದಿ ವಚನದಿಂದ ಜೀವನಿಗೇ ಕಾರಣತ್ವವೆಂಬ ಪಕ್ಷವೇ ಆಶಂಕಿಸಲ್ಪಡುತ್ತದೆ.

**ಪ್ರಾಪಕಂ ವಾಕ್ಯಮಾತ್ರಂ ತು ಪರಿಹಾರೋಽವಿಶೇಷತಃ ।**

'ನ ಜೀವಾತ್ ಕಾರಣಂ ಪರಂ' 'ನ ಹ್ಯನ್ಯತ್ಕಾರಣಂ ಮತಂ' (ಜೀವನಿಂದ ಬೇರೆಯಾದ ಕಾರಣವಿಲ್ಲ, ಇನ್ನೊಂದು ಕಾರಣವಿಲ್ಲ) ಇತ್ಯಾದಿ ವಾಕ್ಯಮಾತ್ರವು ಜೀವಾದಿಗಳೇ ಕಾರಣವೆಂಬ ಆಶಂಕೆಯನ್ನು ಹುಟ್ಟಿಸುತ್ತವೆ. ಈ ಪೂರ್ವಪಕ್ಷಕ್ಕೆ ಪರಿಹಾರವು ಸಮಾನವಾಗಿದೆ. ಅಂದರೆ, ಪೂರ್ವಪಕ್ಷಗಳು ಪ್ರತಿಷೇಧಮಾತ್ರ ಸ್ವರೂಪವನ್ನು ಹಾಗೂ ದೃಷ್ಟಾಂತವನ್ನು ಹೊಂದಿರುವುದು ಎಂಬ ಕಾರಣಗಳಿಂದ ಯುಕ್ತಿವಿರುದ್ಧಗಳಾಗಿವೆ. 'ಸ್ವಪಕ್ಷ ದೋಷಾಚ್ಚ' ಎಂಬ ಸೂತ್ರದಿಂದ ಅವುಗಳಿಗೆ ಅಪ್ರಾಮಾಣಿಕತ್ವವೂ ಉಕ್ತವಾಗಿದೆ. ಅಂಥಹುದೇ ಪರಿಹಾರವು ಇಲ್ಲಿಯೂ ಸಮಾನವಾಗಿದೆ ಎಂದರ್ಥ.

**ವಿವರಣೆ:** ಜೀವಾದಿಗಳೇ ಕಾರಣವೆಂದು ಹೇಳುವ ವಾಕ್ಯಗಳು ಲೋಕ ವಿರುದ್ಧವೆಂದು ತಿಳಿಯಬಾರದು. ಏಕೆಂದರೆ ಕೇವಲ ವಾಕ್ಯದಿಂದಲೇ ಸಿದ್ಧವಾಗುವ ಅರ್ಥದಲ್ಲಿ ವಾಕ್ಯದಿಂದ ತೋರುವ ಅರ್ಥವೇ ಗ್ರಹಿಸಲ್ಪಡುತ್ತದೆ. ಹೊರತು ಲೋಕವನ್ನು ಅನುಸರಿಸುವುದಿಲ್ಲ. ಹೀಗೆ ಪೂರ್ವಪಕ್ಷಿಯು ತಿಳಿಯುತ್ತಾನೆ. ಪ್ರಧಾನಾದಿಗಳಿಗೆ ಜಗತ್ಕಾರಣತ್ವವನ್ನು ಹೇಳುವ ಮತಗಳನ್ನು ದ್ವಿತೀಯಪಾದದಲ್ಲಿ ನಿರಾಕರಿಸುವರು. ಆ ಮತಗಳನ್ನು ಈ ಪಾದದಲ್ಲಿಯೂ ನಿರಾಕರಿಸಿದರೆ ಪುನರುಕ್ತಿ ದೋಷವು ಬರುವುದು ಎಂದು ಆಶಂಕಿಸಿದರೆ ಅದನ್ನೂ 'ಪ್ರಾಪಕಂ' ಇತ್ಯಾದಿ ವಚನದಿಂದ ಪರಿಹರಿಸುತ್ತಾರೆ. ಇಲ್ಲಿ ಶಂಕಾಪ್ರಾಪಕವು ಕೇವಲ ವಾಕ್ಯವೇ ಹೊರತು ಮತವಲ್ಲ. ಇಲ್ಲಿ ಶ್ರುತಿಯಿಂದ ಅನುಗೃಹೀತವಾದ ಯುಕ್ತಿಗಳಿಂದ ಪ್ರತಿಪಾದಿತವಾದ

ಪ್ರಧಾನಾದಿಗಳು ಕಾರಣವೆಂಬ ಮತವು ನಿರಾಕರಿಸಲ್ಪಡುತ್ತದೆ. ಮುಂದಿನ ಪಾದದಲ್ಲಿ ಸಾಂಖ್ಯ ಮುಂತಾದ ಮತಗಳು ನಿರಾಕರಿಸಲ್ಪಡುತ್ತವೆ. ಆದುದರಿಂದ ಪುನರುಕ್ತಿ ದೋಷವಿಲ್ಲ.

ಜೀವಾದಿಗಳಿಗೆ ಕರ್ತತ್ವವನ್ನು ಹೇಳುವ ವಾದಗಳು ಯುಕ್ತಿವಿರುದ್ಧಗಳೆಂಬುದು ಹೇಗೆ ಎಂದು ಆಶಂಕಿಸಿದರೆ –

**ಕ್ವಚಿಜ್ಜೀವಾಕೃತಂ ದೃಷ್ಟ್ವಾಽಚೇತನಾದೇವ ಚಾಕೃತಮ್ ॥೮೫॥**

**ತದ್ವದೇವಾನುಮಾಽನ್ಯತ್ರ ವಸ್ತುತ್ವಾತ್ಕ್ರಿಯತೇ ಶ್ರುತೇಃ ।**

ಕೆಲವು ಕಡೆಗಳಲ್ಲಿ ಜೀವನಿಗಾಗಲೀ ಅಚೇತನಕ್ಕಾಗಲೀ ಕರ್ತತ್ವವಿಲ್ಲವೆಂದು ಕಂಡುಬರುವುದರಿಂದ, ಅದರಂತೆಯೇ ಮಹದಾದಿ ಇತರ ವಸ್ತುಗಳೂ, ಅವು ವಸ್ತುವಾಗಿರುವುದರಿಂದ, ಅವುಗಳಿಗೂ ಕರ್ತತ್ವವಿಲ್ಲವೆಂದೂ ತಿಳಿಯಲ್ಪಡುತ್ತದೆ. ಹಾಗೂ 'ಸ ಇದಂ ಸರ್ವಮಸೃಜತ' ಇತ್ಯಾದಿ ಶ್ರುತಿಗಳಿರುವುದರಿಂದ ಜೀವಾದಿಗಳಿಗೆ ಕರ್ತತ್ವವಿಲ್ಲವೆಂದು ಅನುಮಿತಿಯು ಮಾಡಲ್ಪಡುತ್ತದೆ.

**ವಿವರಣೆ:** ಇಲ್ಲಿ ಕೆಳಕಂಡ ಪ್ರಕಾರವಾಗಿ ಅನುಮಾನವು ಪ್ರಯೋಗಿಸಲ್ಪಡುತ್ತದೆ. ಮಹದಾದಿ ಕಾರ್ಯಗಳು ಜೀವಕೃತವಲ್ಲ, ಜೀವನಂತೆ ವಸ್ತುವಾಗಿರುವುದರಿಂದ. ವಿವಾದಾಸ್ಪದವಾದ ಈ ಜಗತ್ತು ಪ್ರಧಾನದಿಂದ ಹುಟ್ಟಿದ್ದಲ್ಲ, ಪ್ರಧಾನದಂತೆಯೇ ವಸ್ತುವಾಗಿರುವುದರಿಂದ. ವಿವಾದಾಸ್ಪದವಾದ ಈ ಜಗತ್ತು ಅಸತ್ತಿನಿಂದ ಹುಟ್ಟಿದ್ದಲ್ಲ, ಘಟದಂತೆಯೇ ವಸ್ತುವಾಗಿರುವುದರಿಂದ. ಅಲ್ಲದೆ ಈ ಜಗತ್ತನ್ನು ಕುರಿತು ಜೀವನಿಗೆ ನಿಮಿತ್ತಕಾರಣತ್ವವೂ ಪ್ರದಾನಕ್ಕೆ ಉಪಾದಾನಕಾರಣತ್ವವೂ ಅಂಗೀಕರಿಸಲ್ಪಟ್ಟಿದೆ. ಆದರೂ ಅವುಗಳಿಗೆ ಸ್ವತಂತ್ರವಾಗಿ ಜಗತ್ಕಾರಣತ್ವವು ಇಲ್ಲ ಎಂದು ತಿಳಿಸಲು ಈ ವಚನಗಳು ಪ್ರಸಕ್ತವಾಗಿವೆ. ಆದಕಾರಣ ವಿರೋಧವಿಲ್ಲ.

ಹಾಗಾದರೆ ಈ ಜಗತ್ತು ಈಶ್ವರನಿಂದ ಹುಟ್ಟಿಲ್ಲ ಈಶ್ವರನಂತೆಯೇ ವಸ್ತುವಾದುದರಿಂದ ಎಂದು ಅನುಮಾನಿಸಲು ಶಕ್ಯವಾಗಿದೆ. ಆದ್ದರಿಂದ ಸತ್ಪ್ರತಿಪಕ್ಷವು ಬರುತ್ತದೆ ಎಂದು ಆಶಂಕಿಸಿದರೆ, ಅದನ್ನು ಪರಿಹರಿಸಲು ಇಲ್ಲಿ 'ಶ್ರುತೇಃ' ಎಂದು ಹೇಳಿದ್ದಾರೆ. 'ಸ ಇದಂ ಸರ್ವಮಸೃಜತ' ಇತ್ಯಾದಿ ಶ್ರುತಿಗಳಿಂದ ಮಹದಾದಿ ಎಲ್ಲವೂ ಈಶ್ವರನಿಂದ ಹುಟ್ಟಿವೆ ಎಂದು ತಿಳಿದುಬರುವುದು. ಇದರಿಂದ ಪ್ರತಿಪಕ್ಷಾನುಮಾನಗಳಿಗೆ ಬಾಧಬರುವುದರಿಂದ ಅವುಗಳಿಗೆ ಅಪ್ರಾಮಾಣ್ಯವು ಬರುವುದೆಂದು ಅರ್ಥ. ಹಾಗಾದರೆ 'ಜೀವಾದ್ಭವಂತಿ' ಇತ್ಯಾದಿ ಶ್ರುತಿಗಳಿರುವುದರಿಂದ ನಿಮ್ಮ ಅನುಮಾನಗಳಲ್ಲಿಯೂ ಇದು ಸಮಾನವು ಎಂದು ಆಕ್ಷೇಪಿಸಿದರೆ, ಅದಕ್ಕೂ ಉತ್ತರವಾಗಿ 'ಶ್ರುತೇಃ' ಎಂದು ಹೇಳಿದ್ದಾರೆ. ಜೀವ ಮುಂತಾದ ಶಬ್ದಗಳಿಗೆ ಬ್ರಹ್ಮ ಎಂಬುದಾಗಿ 'ನಾಮಾನಿ ಸರ್ವಾಣಿ ಯಮಾವಿಶಂತಿ'

ಇತ್ಯಾದಿ ಶ್ರುತಿ ಪ್ರಸಿದ್ಧವಿರುವುದರಿಂದ ನಮ್ಮ ಅರ್ಥಕ್ಕೆ ಶ್ರುತಿ ವಿರೋಧವಿರುವುದಿಲ್ಲ. ಈ ಪ್ರಕಾರವಾಗಿ ಈ ಅಧಿಕರಣದಲ್ಲಿ ಪ್ರಾಗಭಾವಾದಿಗಳಿಗೆ ಪ್ರಬಲವಾದ ಯುಕ್ತಿ ವಿರೋಧವಿರುವುದರಿಂದ ಜಗಜ್ಜನ್ಮಾದಿಕಾರಣತ್ವವು ನಿರಾಕರಿಸಲ್ಪಟ್ಟಿತು. ಹಾಗೂ ಶ್ರುತಿಸಂವಾದವಿರುವುದರಿಂದ ಬ್ರಹ್ಮನಿಗೆ ಜಗತ್ಕಾರಣತ್ವವು ಸಮರ್ಥಿತವಾಯಿತು.

## ಭೋಕ್ತ್ರಧಿಕರಣಮ್

ಹಿಂದಿನ ಅಧಿಕರಣದಲ್ಲಿ ಬ್ರಹ್ಮನು ಜಗತ್ಕಾರಣ ಎಂಬ ವಿಷಯದಲ್ಲಿ ಶ್ರುತಿಗಳ ಸಂವಾದವಿರುವುದರಿಂದ ಪ್ರಬಲವಾದ ಯುಕ್ತಿಯಿಂದ ವಿರೋಧವನ್ನು ಪರಿಹರಿಸಿದರು. ಈ ಅಧಿಕರಣದಲ್ಲಿ ಶ್ರುತಿಸಿದ್ಧವಾದ ಲಿಂಗಸಹಿತವಾದ ಪ್ರಬಲವಾದ ಯುಕ್ತಿಯಿಂದ ವಿರೋಧವನ್ನು ಪರಿಹರಿಸುತ್ತಾರೆ. ಹೇಗೆಂದರೆ ಬ್ರಹ್ಮನಿಗೆ ವಾಸ್ತವವಾದ ಜಗತ್ಕಾರಣತ್ವವು ಸಂಭವಿಸುವುದಿಲ್ಲ. ಏಕೆಂದರೆ ಬ್ರಹ್ಮನು ಸರ್ವಕಾರಣನಲ್ಲದ ಮುಕ್ತಜೀವನಿಂದ ಅತ್ಯಂತಾಭಿನ್ನನು. ಮುಕ್ತಜೀವನು ಈಶ್ವರನಿಂದ ಅತ್ಯಂತಾಭಿನ್ನನು ಎಂಬುದು 'ಕರ್ಮಾಣಿ ವಿಜ್ಞಾನಮಯಶ್ಚ ಆತ್ಮಾ ಪರೇಽವ್ಯಯೇ ಸರ್ವ ಏಕೀಭವಂತಿ' ಇತ್ಯಾದಿ ಶ್ರುತಿಸಿದ್ಧವಾಗಿದೆ. ಇನ್ನು ಜೀವನಿಗೆ ಸಂಸಾರಾವಸ್ಥೆಯಲ್ಲಿ ಸರ್ವಕಾರಣತ್ವವು ತೋರಿಬರುವುದಿಲ್ಲ. ಸಂಸಾರಾವಸ್ಥೆಯಲ್ಲಿ ಇಲ್ಲದ ಅಪೂರ್ವತೆಯು ಮುಕ್ತನಾದಾಗ ಕಂಡುಬರುವುದು ಸಾಧ್ಯವಿಲ್ಲ. ಹೀಗೆ ಜೀವನಿಗೆ ಸರ್ವಕಾರಣತ್ವವು ಸಿದ್ಧಿಸುವುದಿಲ್ಲವು. ಆದ್ದರಿಂದ ಜೀವನಿಂದ ಅಭಿನ್ನನಾದ ಬ್ರಹ್ಮನಿಗೂ ಜಗತ್ಕಾರಣತ್ವಾದಿಗಳು ಸಿದ್ಧಿಸದೇ ಹೋಗುವುದು ಎಂದು ಪೂರ್ವಪಕ್ಷ. ಇದಕ್ಕೆ ಉತ್ತರವಾಗಿ ಹೊರಟಿರುವ ಸೂತ್ರ –

**ಸೂತ್ರ: ಓಂ ಭೋಕ್ತ್ರಾಪತ್ತೇರವಿಭಾಗಶ್ಚೇತ್ಸ್ಯಾಲ್ಲೋಕವತ್ ಓಂ**

ಸೂತ್ರಾರ್ಥ: ಭೋಕ್ತೃವಾದ ಜೀವನಿಗೆ ಮೋಕ್ಷದಲ್ಲಿ ಬ್ರಹ್ಮಭಾವವು ಶ್ರುತವಾಗಿರುವುದರಿಂದ, ಜೀವ ಬ್ರಹ್ಮರಿಗೆ ವಿಭಾಗವು (ಭೇದವು) ಇರುವುದಿಲ್ಲ, ಎಂದರೆ ಹಾಗೆ ಹೇಳಕೂಡದು. ಏಕೆಂದರೆ ವಾಸ್ತವವಾಗಿ ಜೀವ ಬ್ರಹ್ಮರಿಗೆ ಭೇದವೇ ಇದೆ. 'ಪರೇಽವ್ಯಯೇ ಸರ್ವ ಏಕೀಭವಂತಿ' ಎಂಬುದಾಗಿ ಶ್ರುತಿಯಲ್ಲಿ ಹೇಳಿರುವ ಏಕೀಭಾವ ಎಂಬ ಪ್ರಯೋಗವು ಲೋಕವ್ಯವಹಾರದಲ್ಲಿ ಹೇಗೋ ಹಾಗೆಯೇ ಕೂಡುವುದು. ಬೇರೆ ಬೇರೆ ಪಾತ್ರೆಗಳಲ್ಲಿದ್ದ ನೀರುಗಳನ್ನು ಒಂದೇ ಪಾತ್ರೆಯಲ್ಲಿ ಕೂಡಿಸಿದಾಗ ಆ ನೀರು ಈ ನೀರು ಒಂದಾಯಿತು ಎಂಬ ಏಕೀಭಾವವು ಸ್ಥಾನೈಕ್ಯ ಎಂಬ ಅರ್ಥದಲ್ಲಿ ಹೇಳಲಾಗುತ್ತದೆ. ಅದೇ ರೀತಿ ಹಿಂದೆ ಬೇರೆ ಬೇರೆಯಾಗಿದ್ದ ಬ್ರಾಹ್ಮಣರು ಈಗ ಒಂದಾದರು ಎಂದರೆ ಭಿನ್ನ ಭಿನ್ನ ಅಭಿಪ್ರಾಯ ಹೊಂದಿದ್ದವರು ಈಗ ಒಂದೇ ಅಭಿಪ್ರಾಯಕ್ಕೆ ಬಂದರು ಎಂಬುದಾಗಿ ಮತ್ಯೈಕ್ಯ ರೂಪವಾದ ಏಕೀಭಾವವನ್ನು ಹೇಳಲಾಗುತ್ತದೆ. ಮುಕ್ತಿಯಲ್ಲಿ ಜೀವ ಬ್ರಹ್ಮರು ಒಂದೇ ಆಗುವರು ಎಂದರೆ ಸ್ಥಾನಭೇದ ಮತ್ತು ಮತಭೇದಗಳಿರುವುದಿಲ್ಲ ಎಂದಷ್ಟೇ ಅರ್ಥವಾಗುವುದು.

ಹೊರತು ಸರ್ವರೀತಿಯಿಂದ ಐಕ್ಯರಾದರು ಎಂಬ ಅಭಿಪ್ರಾಯವಿರುವುದಿಲ್ಲ.

ಹೀಗೆ ಹೇಳುವುದು ಸರಿಯಲ್ಲ. 'ಏಕೀಭವಂತಿ' ಎನ್ನುವ ಶ್ರುತಿಗೆ ಐಕ್ಯರೂಪ ಮುಖ್ಯಾರ್ಥದಲ್ಲಿ ಬಾಧಕವಿರುವುದಿಲ್ಲ. ಬಾಧಕವಿಲ್ಲದೆ ಸ್ಥಾನೈಕ್ಯ ಇತ್ಯಾದಿ ಅನ್ಯಾರ್ಥ ಕಲ್ಪಿಸಿದರೆ ಅತಿಪ್ರಸಂಗವು ಬರುವುದು. ಹೀಗೆ ಆಕ್ಷೇಪ ಬಂದರೆ, ಮುಖ್ಯಾರ್ಥದಲ್ಲಿ ಬಾಧಕವನ್ನು ತೋರಿಸುವ ಮೂಲಕ 'ಸ್ಯಾಲ್ಲೋಕವತ್' ಎಂಬ ಸೂತ್ರಾಂಶವನ್ನು ನಾನ್ಯತ್ ಇತ್ಯಾದಿಯಾಗಿ ವ್ಯಾಖ್ಯಾನಿಸುತ್ತಾರೆ –

**ನಾನ್ಯದನ್ಯತ್ವಮಾಪನ್ನಂ ಕ್ವಚಿದ್ದೃಷ್ಟಂ ಕಥಂಚನ ।।೮೬।।**

**ಅತೋ ಜೀವಸ್ಯ ನ ಬ್ರಹ್ಮಭಾವಃ ಸ್ಯಾದ್ಧಿ ಕದಾಚನ ।**

ಬೇರೆಯೇ ಆಗಿರುವ ಒಂದು ವಸ್ತುವು ತನ್ನಿಂದ ಇತರವಾದ ಇನ್ನೊಂದು ವಸ್ತುವಿನೊಂದಿಗೆ ಅಭೇದವನ್ನು ಹೊಂದಿದೆ ಎಂಬುದು ಎಂದಿಗೂ ಯಾವುದೇ ಉಪಾಯದಿಂದಲೂ ಕಂಡುಬಂದಿಲ್ಲ. ಆದಕಾರಣ ಜೀವನಿಗೂ ಯಾವುದೇ ಕಾಲದಲ್ಲಿಯೂ (ಮುಕ್ತಿಯಲ್ಲಿಯೂ ಕೂಡ) ಬ್ರಹ್ಮತ್ವವು ಬರುವುದೇ ಇಲ್ಲ.

**ಕ್ವಚಿದ್ಭಿನ್ನತಯಾ ದೃಷ್ಟಂ ತದಭಿನ್ನತಯಾ ಕಥಮ್ ।।೮೭।।**

**ದೃಶ್ಯೇನ್ನೋ ದೃಷ್ಟಪೂರ್ವಂ ಹಿ ತಾದೃಶಂ ನ ಚ ದೃಶ್ಯತೇ ।**

ಒಂದು ಕಾಲದಲ್ಲಿ ಬೇರೆ ವಸ್ತುವಿಗಿಂತ ಭಿನ್ನವೆಂದೇ ತಿಳಿಯಲ್ಪಟ್ಟ ಒಂದು ವಸ್ತುವು ಬೇರೆ ಯಾವುದೋ ಕಾಲದಲ್ಲಿ ಅದರಿಂದ ಅಭಿನ್ನವಾಗಿ ಹೇಗೆ ತಾನೇ ತಿಳಿಯಲ್ಪಡುವುದು? ಏಕೆಂದರೆ ಮೊದಲಿಗೆ ಭಿನ್ನವೆಂದು ತಿಳಿಯಲ್ಪಟ್ಟ ವಸ್ತುವು ಕಾಲಾಂತರದಲ್ಲಿ ಅಭಿನ್ನವೆಂದು ಪ್ರಮಿತವಾದುದು ಹಿಂದೆ ಎಂದೂ ಕಂಡಿಲ್ಲ, ಮುಂದೆ ಎಂದಿಗೂ ಹಾಗೆ ಕಂಡುಬರುವುದೇ ಇಲ್ಲ. ಆದಕಾರಣ ಏಕೀಭವಂತಿ ಇತ್ಯಾದಿ ಶ್ರುತಿಗೆ ಮುಖ್ಯಾರ್ಥಕ್ಕೆ ಬಾಧ ಬರುವುದರಿಂದ ಅಮುಖ್ಯಾರ್ಥವನ್ನೇ ಸ್ವೀಕರಿಸತಕ್ಕದ್ದು. ಹೀಗೆ ಪರರು ಹೇಳಿದ ಯುಕ್ತಿಯು ಅಸಿದ್ಧವಾದುದರಿಂದ ಬ್ರಹ್ಮನ ಜಗತ್ಕಾರಣತ್ವ ವಿಷಯದಲ್ಲಿ ಯುಕ್ತಿವಿರೋಧವಿಲ್ಲವೆಂದು ಸಿದ್ಧಿಸುತ್ತದೆ.

**ವಿವರಣೆ:** ಬ್ರಹ್ಮನಿಗೆ ಪರಿಣಾಮವನ್ನು ಹೇಳುವವರು ಈ ಸೂತ್ರವನ್ನು ಬೇರೆ ರೀತಿಯಿಂದ ವ್ಯಾಖ್ಯಾನ ಮಾಡುತ್ತಾರೆ. ಇದಕ್ಕೆ ಹಿಂದಿನ ಅಧಿಕರಣದಲ್ಲಿ ಬ್ರಹ್ಮನು ಚೇತನಾಚೇತನಾತ್ಮಕ ಪ್ರಪಂಚಕ್ಕೆ ಉಪಾದಾನ ಕಾರಣವಾದುದರಿಂದ ಅದು ಬ್ರಹ್ಮನಿಂದ ಅಭಿನ್ನವೆಂದು ಹೇಳಲ್ಪಟ್ಟಿದೆ. ಇದನ್ನು ಆಕ್ಷೇಪಿಸಿ ಸಮಾಧಾನ ಹೇಳಲು ಈ ಸೂತ್ರವು ಹೊರಟಿದೆ. ಹೇಗೆಂದರೆ, ಚೇತನಾಚೇತನಾತ್ಮಕ ಪ್ರಪಂಚವು ಬ್ರಹ್ಮನಿಂದ ಅಭಿನ್ನವಾದರೆ, ಚೇತನನು ಭೋಕ್ತೃವು, ಅಚೇತನಾತ್ಮಕ ವಿಷಯಗಳು ಭೋಗ್ಯವು ಎಂಬ ವಿಭಾಗವು ಆಗದಿರಲಿ. ಏಕೆಂದರೆ ಭೋಕ್ತೃವೂ ಭೋಗ್ಯವೂ

ಒಂದೇ ಆಗಬೇಕಾಗುವುದು ಎಂದು ಹೇಳಿದರೆ ಅದು ಸರಿಯಲ್ಲ. ಈ ವಿಭಾಗವು ಅವಶ್ಯಕವೇ ಆಗಿದೆ. ಏಕೆಂದರೆ ಪ್ರತ್ಯಕ್ಷಾದಿಗಳಿಂದ ಸಿದ್ಧವಾಗಿದೆ. ಹೇಗೆ ಲೋಕದಲ್ಲಿ ಸಮುದ್ರದ ನೊರೆ ಮತ್ತು ತರಂಗಗಳು ಸಮುದ್ರದ ಸ್ವರೂಪಗಳೇ ಆಗಿದ್ದರೂ ಅವುಗಳನ್ನು ಪ್ರತ್ಯೇಕವಾಗಿ ಗ್ರಹಿಸುವುದಕ್ಕೆ ಯಾವುದೇ ಭಂಗ ಬರುವುದಿಲ್ಲವೋ, ಘಟಾಕಾಶ ಮಠಾಕಾಶಗಳು ಮಹಾಕಾಶದ ಸ್ವರೂಪಗಳೇ ಆಗಿದ್ದರೂ ಅವುಗಳ ವಿಭಾಗಕ್ಕೆ ಬಾಧಕವಿಲ್ಲವೋ ಹಾಗೆಯೇ ಜಗತ್ತಿಗೂ ಬ್ರಹ್ಮನಿಗೂ ಸ್ವರೂಪತಃ ಭೇದವಿಲ್ಲದಿದ್ದರೂ ಅವುಗಳಲ್ಲಿ ವಿಭಾಗವು ಕೂಡುವುದು. ಇದು ಬ್ರಹ್ಮ ಪರಿಣಾಮವಾದಿಗಳ ವ್ಯಾಖ್ಯಾನ.

ಈ ವ್ಯಾಖ್ಯಾನವನ್ನು ದೂಷಿಸುತ್ತಾರೆ –

**ಭೋಕ್ತೃತ್ವಾಪತ್ತಿತ ಇತಿ ಯನ್ಮತಂ ತತ್ಕುತೋ ಹರಿಃ ।।೮೮।।**

**ಭೋಕ್ತ್ರಾಪತ್ತೇರಿತಿ ಪ್ರಾಹ..........................।**

ಭೋಕ್ತ್ರಾಪತ್ತೇಃ ಎನ್ನುವುದಕ್ಕೆ ಭೋಕ್ತೃತ್ವಾಪತ್ತೇಃ ಎಂಬ ವ್ಯಾಖ್ಯಾನವು ಒಂದು ವೇಳೆ ಸೂತ್ರಕಾರಿಗೆ ಸಮ್ಮತವಾಗಿದ್ದರೆ, ಭೋಕ್ತ್ರಾಪತ್ತೇಃ ಎಂದು ಏಕೆ ಹೇಳಿದರು? ಆದ್ದರಿಂದ ಭೋಕ್ತೃತ್ವಾಪತ್ತಿ ಎಂಬ ಅರ್ಥದಲ್ಲಿ ವ್ಯಾಖ್ಯಾನ ಮಾಡುವುದು ಸೂತ್ರಕಾರರಿಗೆ ಸಮ್ಮತವಲ್ಲ.

**ವಿವರಣೆ:** ರಾಮಾನುಜೀಯರ ವ್ಯಾಖ್ಯಾನದ ಪ್ರಕಾರ, ಬ್ರಹ್ಮನಿಗೆ ಚಿದಚಿದ್ವಸ್ತುಗಳು ಶರೀರವಾದರೆ ಜೀವನಿಗೆ ಹೇಗೋ ಹಾಗೆ ಬ್ರಹ್ಮನಿಗೂ ಸುಖದುಃಖಾದಿ ಭೋಕ್ತೃತ್ವವು ಬರಬೇಕಾಗುವುದು. ಆದ್ದರಿಂದ ಜೀವಬ್ರಹ್ಮರಲ್ಲಿ ಸ್ವಭಾವವಿಭಾಗವು ಇಲ್ಲದೇ ಹೋಗಲಿ. ಹೀಗೆ ಶಂಕಿಸುವುದು ಸರಿಯಲ್ಲ. ಹೀಗೆ ವ್ಯಾಖ್ಯಾನಿಸುವವರಿಗೂ ಸಮಾನ ಶಬ್ದ ದೋಷವು, ಅಂದರೆ ಭೋಕ್ತ್ರ ಶಬ್ದಕ್ಕೆ ಭಾವಪ್ರಧಾನವಾದ ಭೋಕ್ತೃತ್ವ ಎನ್ನುವ ಅರ್ಥವನ್ನು ಹೇಳುವ ದೋಷವು ಬರುವುದು. ಉದಾಹರಣೆಗೆ ಹೇಳುವುದಾದರೆ, ಕಾಡಿನಲ್ಲಿ ಮಲಗಿದ್ದರೂ ರಾಜನಿಗೆ ಹುಳು ಹುಪ್ಪಟಾದಿ ಕಡಿತ ಮುಂತಾದ ಉಪದ್ರವಗಳು ಇರುವುದಿಲ್ಲ. ಏಕೆಂದರೆ ರಾಜನಿಗೆ ಅವುಗಳನ್ನು ನಿವಾರಿಸಿಕೊಳ್ಳಲು ಅಗತ್ಯವಾದ ಸಾಧನ ಸಲಕರಣೆಗಳೂ ಅವನ ಅಧೀನವಾಗಿದ್ದು ಅವನಿಗೆ ಸ್ವಾತಂತ್ರ್ಯವೂ ಇರುತ್ತದೆ. ಹಾಗೆಯೇ ಬ್ರಹ್ಮನಿಗೂ ಸುಖದುಃಖಾದಿ ಬೋಕ್ತೃತ್ವವು ಬರುವುದಿಲ್ಲ.

## ತದನನ್ಯತ್ವಾಧಿಕರಣಮ್

### ಓಂ ತದನನ್ಯತ್ವಮಾರಂಭಣಶಬ್ದಾದಿಭ್ಯಃ ಓಂ

ಹಿಂದಿನ ಅಧಿಕರಣದಲ್ಲಿ ಪ್ರಮಾಣಮೂಲಕತ್ವ ಹಾಗೂ ಪ್ರಮಾಣ

ಸಂವಾದದಿಂದ ಕೂಡಿದ ಪ್ರಬಲವಾದ ಯುಕ್ತಿಯ ವಿರೋಧವನ್ನು ಪರಿಹರಿಸಿದರು. ಈಗ ಬಾಹುಲ್ಯ ನಿಮಿತ್ತಕ ಪ್ರಬಲವಾದ ಯುಕ್ತಿಯಿಂದ ಬರುವ ವಿರೋಧವನ್ನು ಈ ಅಧಿಕರಣದಲ್ಲಿ ಪರಿಹರಿಸುತ್ತಾರೆ.

ಬ್ರಹ್ಮಪರಿಣಾಮವಾದಿಯು ಈ ಸೂತ್ರಕ್ಕೆ ಹೀಗೆ ವ್ಯಾಖ್ಯಾನ ಮಾಡುತ್ತಾನೆ. ಹಿಂದೆ ಸಾಂಖ್ಯಮತವು ನಿರಾಕೃತವಾಯಿತು. ಈಗ ವೈಶೇಷಿಕಾದಿ ಮತಗಳನ್ನು ನಿರಾಕರಿಸುತ್ತಾರೆ. ವೈಶೇಷಿಕರ ಪ್ರಕಾರ, ಸ್ವರೂಪ ಕಾರ್ಯ ವ್ಯಪದೇಶ ಇತ್ಯಾದಿಗಳ ಭೇದಗಳಿಂದ ಕಾರ್ಯಕ್ಕೆ ಕಾರಣಸ್ವರೂಪತ್ವವು ಇಲ್ಲವಾಗುವುದರಿಂದ ಪ್ರಪಂಚಕ್ಕೆ ಬ್ರಹ್ಮನಿಂದ ಅಭೇದವಿಲ್ಲವೆಂಬ ಆಕ್ಷೇಪವನ್ನು ತೋರಿಸಿ ಈ ಸೂತ್ರದಿಂದ ಸಮಾಧಾನ ಹೇಳಲಾಗುತ್ತದೆ. ಹೇಗೆಂದರೆ, ಕಾರಣನಾದ ಬ್ರಹ್ಮನಿಂದ ಕಾರ್ಯವೆನಿಸಿದ ಪ್ರಪಂಚಕ್ಕೆ ಅಭೇದವು. ಏಕೆಂದರೆ, 'ಯಥಾ ಸೌಮ್ಯೈಕೇನ ಮೃತ್ಪಿಂಡೇನ ಸರ್ವಂ ಮೃಣ್ಮಯಂ ವಿಜ್ಞಾತಂ ಸ್ಯಾದ್ ವಾಚಾರಂಭಣಂ ವಿಕಾರೋ ನಾಮಧೇಯಂ ಮೃತ್ತಿಕೇತ್ಯೇವ ಸತ್ಯಂ' ಇತ್ಯಾದಿ ಶಬ್ದಗಳ ದೆಶೆಯಿಂದ. ಈ ವ್ಯಾಖ್ಯಾನವನ್ನು ನಿರಾಕರಿಸುತ್ತಾರೆ –

**..............................ಕಥಂ ಚ ತದನನ್ಯತಾ ।**

**ಜಗತಸ್ತ್ವವಿಕಾರಿತ್ವಂ ಉಕ್ತನ್ಯಾಯೇನ ಸಾಧಿತೇ ।।೮೯।।**

**ಸ್ವತಂತ್ರಕಾರಣಾನ್ಯತ್ವಂ ತೇನ ಹ್ಯತ್ರ ನಿಷಿಧ್ಯತೇ ।**

ಹಿಂದೆ 'ನ ಚ ಪ್ರಕೃತಿಶಬ್ದೇನ' ಇತ್ಯಾದಿ ಉಕ್ತ ನ್ಯಾಯದಿಂದ ಜಗತ್ತು ಬ್ರಹ್ಮನ ವಿಕಾರವಲ್ಲವೆಂದು ಸಾಧಿಸಲಾಗಿದೆ. ಹೀಗಿರಲು ಈ ಸೂತ್ರದಿಂದ ಜಗತ್ತಿಗೆ ಬ್ರಹ್ಮನಿಂದ ಅತ್ಯಂತಾಭೇದವು ಹೇಗೆ ತಾನೇ ಪ್ರತಿಪಾದಿಸಲ್ಪಡುವುದು? ಆದಕಾರಣ ಬ್ರಹ್ಮನಿಗೆ ಬೇರೆಯಾದುದಕ್ಕೆ ಸ್ವತಂತ್ರಕಾರಣತ್ವವು ಈ ಅಧಿಕರಣದಲ್ಲಿ ನಿಷೇಧಿಸಲ್ಪಡುತ್ತದೆ.

ಹಾಗಾದರೆ 'ಅದ್ಭ್ಯಃ ಸಂಭೂತಃ' ಇತ್ಯಾದಿ ವಚನವಿರುವುದರಿಂದ ಬ್ರಹ್ಮಾತಿರಿಕ್ತವಾದ ಸ್ವತಂತ್ರಕಾರಣವು ಉಪಲಬ್ಧವಾಗುವುದಿಲ್ಲ ಎನ್ನುವುದು ಹೇಗೆ ಕೂಡುತ್ತದೆ ಎಂದು ಆಕ್ಷೇಪಿಸಿದರೆ, ಅದಕ್ಕೆ ಪರಿಹಾವಾಗಿ ಮುಂದಿನ ಸೂತ್ರ –

**ಸೂತ್ರ: ಓಂ ಸತ್ವಾಚ್ಚಾವರಸ್ಯ ಓಂ**

**ಸೂತ್ರಾರ್ಥ:** ಬ್ರಹ್ಮಾತಿರಿಕ್ತವಾದ ಕಾರಣವೇ ಇಲ್ಲವೆಂದು ಹೇಳಿದರೆ ಈ ದೋಷವು ಬರುವುದು. ಆದರೆ ನಾವು ಹಾಗೆ ಹೇಳುವುದಿಲ್ಲ. ಬ್ರಹ್ಮನಿಗಿಂತ ಅವರವಾದ ಅಂದರೆ ಬ್ರಹ್ಮಾಧೀನವಾದ ಪ್ರಕೃತಿ ಮುಂತಾದ ಕಾರಣಕ್ಕೆ ಅಸ್ತಿತ್ವವಿದೆ. ಆದಪ್ರಯುಕ್ತ 'ಅದ್ಭ್ಯಃ ಸಂಭೂತಃ' ಇತ್ಯಾದಿ ವಚನವು ಯುಕ್ತವಾಗುವುದು.

ಪ್ರಕೃತಿ ಮುಂತಾದ ಕಾರಣಗಳ ಸಮೂಹವು ಈಶ್ವರನ ಅಧೀನದಲ್ಲಿರುವುದು ಎನ್ನುವ ವಿಷಯಕ್ಕೆ ಪ್ರಮಾಣವನ್ನು ತೋರಿಸುವ ಮೂಲಕ ಸೂತ್ರಕ್ಕೆ ವ್ಯಾಖ್ಯಾನ ಮಾಡುತ್ತಾರೆ –

**ದ್ರವ್ಯಂ ಕರ್ಮ ಚ ಕಾಲಶ್ಚ ಸ್ವಭಾವಶ್ಚೇತನಾ ಧೃತಿಃ ॥೯೦॥**

**ಯತ್ಪ್ರಸಾದಾದಿಮೇ ಸಂತಿ ನ ಸಂತಿ ಯದುಪೇಕ್ಷಯಾ ।**

**ಇತಿ ಶ್ರುತೇಃ ..........................................॥**

ಪ್ರಕೃತಿ ಮುಂತಾದ ದ್ರವ್ಯ, ಧರ್ಮಾಧರ್ಮಗಳು, ಕಾಲ, ಪ್ರಕೃತ್ಯಾದಿಗಳ ಪರಿಣಾಮರೂಪ ಸ್ವಭಾವ, ಜೀವರು, ಸರ್ವಧಾರಕವಾದ ಚಿತ್ಪ್ರಕೃತಿ ಅಂದರೆ ಮಹಾಲಕ್ಷ್ಮಿ, ಇವೆಲ್ಲವೂ ಯಾವನ ಅನುಗ್ರಹದಿಂದ ಇವೆಯೋ, ಯಾವನು ಉಪೇಕ್ಷೆ ಮಾಡಿದರೆ ಇರುವುದಿಲ್ಲವೋ ಎಂಬುದಾಗಿ ಶ್ರುತಿಗಳು ಹೇಳುತ್ತವೆ.

**ಸೂತ್ರ: ಓಂ ಅಸದ್ವ್ಯಪದೇಶಾನ್ನೇತಿ ಚೇನ್ನ**

**ಧರ್ಮಾಂತರೇಣ ವಾಕ್ಯಶೇಷಾತ್ ಓಂ**

**ಸೂತ್ರಾರ್ಥ:** 'ನಾಸದಾಸೀನ್ನೋಸದಾಸೀತ್ತದಾನೀಂ' ಇತ್ಯಾದಿ ಶ್ರುತಿಗಳಲ್ಲಿ ಮಹಾಪ್ರಲಯದಲ್ಲಿ ಮೂರ್ತವಾಗಲೀ ಅಮೂರ್ತವಾಗಲೀ ಇರಲಿಲ್ಲ ಎಂಬುದಾಗಿ ಸಮಸ್ತವಾದ ಪ್ರಪಂಚಕ್ಕೆ ಅಸತ್ವವನ್ನು ಹೇಳಿರುವುದರಿಂದ ಹಿಂದೆ ಪ್ರಕೃತ್ಯಾದಿಗಳಿಗೆ ಅಸ್ತಿತ್ವವನ್ನು ಹೇಳಿದ್ದು ಅಯುಕ್ತ ಎಂದು ಹೇಳಿದರೆ ಅದು ಸರಿಯಲ್ಲ. ಏಕೆಂದರೆ ಪ್ರಕೃತ್ಯಾದಿಗಳು ಇರುತ್ತವೆ ಎಂದು ಹೇಳತಕ್ಕ 'ತಮಃ ಆಸೀತ್' ಇತ್ಯಾದಿ ವಾಕ್ಯಶೇಷವಿದ್ದ ಪ್ರಯುಕ್ತ. ಸ್ವಾತಂತ್ರ್ಯವೆಂಬ ಧರ್ಮವಿಶೇಷದ ಅಭಿಪ್ರಾಯದಿಂದ ಅಸತ್ವವನ್ನು ಹೇಳಿರುವುದರಿಂದ ಪ್ರಕೃತ್ಯಾದಿಗಳಿಗೆ ಈಶ್ವರನ ಅಧೀನವಾದ ಅಸ್ತಿತ್ವವು ಯುಕ್ತವಾಗುತ್ತದೆ.

ಇದನ್ನೇ 'ತದ್ವಶಃ' ಎಂಬ ವಚನದಿಂದ ವ್ಯಾಖ್ಯಾನ ಮಾಡುತ್ತಾರೆ –

**ತದ್ವಶಸ್ಯ ಭಾವೋ ನ ಪರ ಇತ್ಯತಃ ॥೯೧॥**

ಪ್ರಕೃತ್ಯಾದಿಗಳಿಗೆ ಈಶ್ವರಾಧೀನವಾದ ಅಸ್ತಿತ್ವವಿದೆ. ಆದರೆ ಸ್ವಾತಂತ್ರ್ಯ ಮುಂತಾದ ಧರ್ಮಗಳು ಇರುವುದಿಲ್ಲ ಎಂಬುದಾಗಿ 'ತಸ್ಮಾದ್ಧಾನ್ಯನ್ನಪರಃ ಕಿಂಚನಾಸ' ಎನ್ನುವ ವಾಕ್ಯಶೇಷದಿಂದ ತಿಳಿದುಬರುವುದು.

ಹಾಗಾದರೆ ಈಶ್ವರನು ಪ್ರಕೃತ್ಯಾದಿಗಳನ್ನು ಕಾರಣವಾಗಿ ಬಳಸದೇ ಸೃಷ್ಟ್ಯಾದಿಗಳನ್ನು ಮಾಡುವನೋ ಅಥವಾ ನಿಯಮವಾಗಿ ಅವುಗಳ ಸಹಾಯದಿಂದಲೇ ಮಾಡುವನೋ ಎಂದು ಕೇಳುತ್ತೇವೆ. ಮೊದಲನೆಯ ಕಲ್ಪವನ್ನು

ಒಪ್ಪಿಕೊಂಡರೆ ನೀವು ಹಿಂದೆ ಪ್ರತಿಪಾದಿಸಿದ ಪ್ರಕೃತ್ಯಾದಿಗಳಿಗೆ ಕಾರಣತ್ವವೇ ಕೂಡುವುದಿಲ್ಲ. ಎರಡನೆಯ ಕಲ್ಪದಲ್ಲಾದರೂ ಈಶ್ವರನ ಸ್ವಾತಂತ್ರ್ಯಕ್ಕೇ ಭಂಗ ಬರುವುದು. ಕೆಲವು ಕಾರ್ಯಗಳನ್ನು ಪ್ರಕೃತ್ಯಾದಿಗಳನ್ನು ಕಾರಣವಾಗಿಟ್ಟುಕೊಂಡು ಮಾಡಿದರೆ, ಇನ್ನೂ ಕೆಲವನ್ನು ಅವುಗಳ ನೆರವಿಲ್ಲದೇ ಸ್ವತಂತ್ರವಾಗಿ ಮಾಡುವನು ಎಂದು ಹೇಳುವುದು ಯುಕ್ತವಾಗುವುದಿಲ್ಲ. ಆದುದರಿಂದ ಈಶ್ವರನು ಯಾವುದೇ ಕಾರಣದ ಅಪೇಕ್ಷೆಯಿಲ್ಲದೆಯೇ ಸೃಷ್ಟ್ಯಾದಿಗಳನ್ನು ಮಾಡುತ್ತಾನೆ ಎಂದು ಒಪ್ಪುವುದೇ ಶ್ರೇಷ್ಠ. ಇದರಿಂದ ಈಶ್ವರನ ನಿರವಧಿಕವಾದ ಪ್ರಭುತ್ವವನ್ನು ಸಮರ್ಥಿಸಿದಂತಾಗುವುದು. ತಮಸ್ಸು ಇತ್ಯಾದಿಗಳು ಪ್ರಲಯಕಾಲದಲ್ಲಿ ಇದ್ದವೆಂದು ಶ್ರುತವಾಗಿದ್ದರೂ, ಅವುಗಳು ಈಶ್ವರನ ಸೃಷ್ಟ್ಯಾದಿ ಕ್ರಿಯೆಯಲ್ಲಿ ಕಾರಣರೂಪದಿಂದ ಶ್ರುತವಾಗಿಲ್ಲ. ಆದ್ದರಿಂದ ಪ್ರಮಾಣಬಾಧವೂ ಇರುವುದಿಲ್ಲ. ಹೀಗೆ ಆಶಂಕಿಸಿದರೆ ಅದಕ್ಕೆ ಪರಿಹಾರರೂಪವಾಗಿ ಮುಂದಿನ ಸೂತ್ರ –

**ಸೂತ್ರ: ಓಂ ಯುಕ್ತೇಃ ಶಬ್ದಾಂತರಾಚ್ಚ ಓಂ**

ಸೂತ್ರಾರ್ಥ: ಈಶ್ವರನು ಸ್ವೇಚ್ಛೆಯಿಂದ ಸ್ವಾಧೀನವಾದ ಸಾಧನಾಂತರಗಳನ್ನು ಉಪಾದಾನಮಾಡಿಕೊಂಡು ಸೃಷ್ಟಿಯನ್ನು ಮಾಡುತ್ತಾನೆ ಎಂಬುದು ಯುಕ್ತವಾದ ಪ್ರಯುಕ್ತ ಈಶ್ವರನ ಸ್ವಾತಂತ್ರ್ಯಕ್ಕೆ ಬಾಧಬರುವುದಿಲ್ಲ. ಹೀಗೇಕೆ ಅರ್ಥ ಮಾಡಬೇಕು ಎಂದರೆ, 'ಅದ್ಭ್ಯಃ ಸಂಭೂತೋ ಹಿರಣ್ಯಗರ್ಭಃ' ಇತ್ಯಾದಿ ಶಬ್ದಾಂತರಗಳೂ ಇರುತ್ತವೆ.

ಹಾಗಾದರೆ ಈ ಸೂತ್ರದಲ್ಲಿ ಯುಕ್ತೇಃ ಎಂಬುದಾಗಿ ತಮ್ಮ ಪಕ್ಷದಲ್ಲಿ ಕಾರಣತ್ವಾದಿಗಳು ಕೂಡುವುದು ಎಂದು ಹೇಳಿದ್ದು ಹೇಗೆ ಎಂಬ ಪ್ರಶ್ನೆ ಬಂದರೆ –

**ಶಕ್ತೋಽಪಿ ಹ್ಯನ್ಯಥಾ ಕರ್ತುಂ ಸ್ವೇಚ್ಛಾನಿಯಮತೋ ಹರಿಃ ।**

**ಕಾರಣೈರ್ನಿಯತೈರೇವ ಕರೋತೀದಂ ಜಗತ್ಸದಾ ॥೯೨॥**

ಕಾರಣಗಳಿಲ್ಲದೇ ಕಾರ್ಯಗಳನ್ನು ಮಾಡುವುದಕ್ಕೆ ಸಮರ್ಥನಾಗಿದ್ದರೂ, ಶ್ರೀಹರಿಯು ತನ್ನ ಇಚ್ಛೆಗೆ ತಕ್ಕಂತೆ ನಿಯಮಗಳನ್ನು ರೂಪಿಸಿಕೊಂಡು, ತನ್ನ ಅಧೀನದಲ್ಲಿರುವ ನಿಯತವಾದ ಕಾರಣಗಳಿಂದಲೇ ಈ ಜಗತ್ತನ್ನು ಯಾವಾಗಲೂ ಸೃಷ್ಟಿ ಮಾಡುತ್ತಾನೆ. 'ಅನ್ಯಥಾ ಕರ್ತುಂ' ಎಂಬುದಕ್ಕೆ ಇನ್ನೊಂದು ರೀತಿಯಿಂದಲೂ ಅರ್ಥಮಾಡಬಹುದು. ಶ್ರೀಹರಿಯು ಪ್ರಕೃತಿಯಿಂದ ಅಹಂಕಾರವನ್ನು, ಅಹಂಕಾರದಿಂದ ಮಹತ್ತತ್ವವನ್ನು, ಹಾಗೆಯೇ ಪ್ರಕೃತಿಯನ್ನು ನಿಮಿತ್ತಕಾರಣವನ್ನಾಗಿಯೂ ಕಾಲಾದಿಗಳನ್ನು ಉಪಾದಾನಕಾರಣವನ್ನಾಗಿಯೂ ಮಾಡಿಕೊಂಡು ಸೃಷ್ಟಿಯನ್ನು ಮಾಡುವುದರಲ್ಲಿ ಸಮರ್ಥನೇ ಆಗಿರುವನು. ಹಾಗಿದ್ದರೂ, ಸೃಷ್ಟಿಕ್ರಿಯೆಯು ನಿಶ್ಚಿತವಾದ ಕ್ರಮದಿಂದಲೇ ಆಗಬೇಕೆಂದು ತಾನೇ

ಮಾಡಿಕೊಂಡ ನಿಯಮಕ್ಕೆ ಭಂಗಬಾರದಂತೆ ಶ್ರೀಹರಿಯು ಕಾರಣಾಂತರಗಳನ್ನು ಅಪೇಕ್ಷಿಸಿ ಕಾರ್ಯಗಳನ್ನು ಮಾಡುವನು.

'ಭಾವೇ ಚೋಪಲಬ್ಧೇಃ' ಎನ್ನುವ ಸೂತ್ರಕ್ಕೆ ಕೆಲವರು ವಿಪರೀತವಾಗಿ ವ್ಯಾಖ್ಯಾನ ಮಾಡುತ್ತಾರೆ. ಹೇಗೆಂದರೆ, ಮಣ್ಣು ಮುಂತಾದ ಕಾರಣಗಳು ಇದ್ದರೇ ಘಟ ಮುಂತಾದ ಕಾರ್ಯದ ಉಪಲಬ್ಧಿಯಾಗುವುದರಿಂದ, ಕಾರ್ಯಕ್ಕೆ ಕಾರಣದಿಂದ ಅಭೇದವಿರುತ್ತದೆ. ಏಕೆಂದರೆ, ಯಾವುದು ಯಾವುದರಿಂದ ಭಿನ್ನವೋ ಅದು ಅದರ ಅಸ್ತಿತ್ವವಿದ್ದಾಗಲೇ ಉಪಲಬ್ಧವಾಗುವುದೆಂಬುದು ಸರಿಯಲ್ಲ. ತೈಲ ಮುಂತಾದ ಕಾರ್ಯವಸ್ತುವಿನಲ್ಲಿ ತಿಲಾದಿ ಕಾರಣವಸ್ತುವು ಉಪಲಬ್ಧವಾಗಿರುತ್ತದೆ. ಹಾಗೆಯೇ ಕುಂಡಲ ಮುಂತಾದ ಕಾರ್ಯವಸ್ತುವಿನಲ್ಲಿ ಸುವರ್ಣ ಮುಂತಾದ ಕಾರಣವಸ್ತುವು ಉಪಲಬ್ಧವಾಗಿರುತ್ತದೆ. ಕಾರ್ಯ–ಕಾರಣಗಳಲ್ಲಿ ಅಭೇದವಿಲ್ಲದಿದ್ದರೆ ಕಾರಣದಿಂದ ಕಾರ್ಯದ ಉತ್ಪತ್ತಿಯು ಆಗದೇ ಹೋಗುವುದು. ಕಾರಣ ಮತ್ತು ಕಾರ್ಯಗಳಿಗೆ ಅಭೇದವನ್ನು ಹೇಳುವ ಈ ವ್ಯಾಖ್ಯಾನವನ್ನು 'ನಿತ್ಯಭೇದೋ' ಇತ್ಯಾದಿ ವಚನದಿಂದ ನಿರಾಕರಿಸುತ್ತಾರೆ –

**ನಿತ್ಯಭೇದೋ ನಿಮಿತ್ತೇನ ಹ್ಯುಪಾದಾನೇನ ತು ದ್ವಯಮ್ ।**

**ಅಸದ್ಯತ್ಕಾರ್ಯರೂಪೇಣ ಕಾರಣಾತ್ಮತಯಾಸ್ತಿ ಹಿ ॥೯೩॥**

ಕಾರ್ಯಕ್ಕೆ ನಿಮಿತ್ತ ಕಾರಣದಿಂದ ನಿಯಮೇನ ಭೇದವೂ, ಉಪಾದಾನ ಕಾರಣದಿಂದ ಭೇದಾಭೇದವೂ ಇರುವುದು. ಇದು ಪ್ರಮಾಣ ಪ್ರಸಿದ್ಧವಾಗಿದೆ. ಕಾರ್ಯವು ಕಾರಣದಿಂದ ಭಿನಾಭಿನ್ನವೆಂಬುದು ಹೇಗೆ ಪ್ರಮಾಣಸಿದ್ದವಾಗುತ್ತದೆ ಎಂದು ಆಕ್ಷೇಪ ಬಂದರೆ, 'ಅಸತ್' ಇತ್ಯಾದಿ ವಚನದಿಂದ ಪರಿಹರಿಸುತ್ತಾರೆ. ಘಟಾದಿಗಳು ಮೃದಾದಿ ಕಾರಣರೂಪದಿಂದ ಉತ್ಪತ್ತಿಗೆ ಮುಂಚೆ ಇರುವುದು ಸತ್ಯವಾದರೂ, ಅವೇ ಮೃದಾದಿಗಳು ಘಟಾದಿ ಕಾರ್ಯರೂಪದಿಂದ ಇರುವುದಿಲ್ಲ. ಹೀಗೆ ಉಪಾದಾನ ಕಾರಣದಿಂದ ಕಾರ್ಯವು ಭೇದಾಭೇದವೆಂದು ನಿರ್ಣಯಿಸಲ್ಪಡುತ್ತದೆ.

ಹೀಗಾದರೂ ಏಕೆ ಅಂಗೀಕರಿಸಬೇಕು ಎಂದರೆ –

**ಅನವಸ್ಥಾಽನ್ಯಥಾ ಹಿ ಸ್ಯಾತ್ಸರ್ವತ್ರೋತ್ಪತ್ತಿನಾಶಯೋಃ ।**

ಉತ್ಪತ್ತಿಗೆ ಮುಂಚೆ ಕಾರ್ಯವಸ್ತುವಿಗೆ ಕಾರ್ಯರೂಪದಿಂದ ಆತ್ಯಂತಿಕ ಸತ್ವವನ್ನೂ ಕಾರಣದಿಂದ ಅತ್ಯಂತಾಭೇದವನ್ನೂ ಅಂಗೀಕರಿಸಿದರೆ, ಎಲ್ಲ ಕಡೆಗಳಲ್ಲಿಯೂ ಉತ್ಪತ್ತಿ ಮತ್ತು ವಿನಾಶಗಳಿಗೆ ಅನವಸ್ಥೆಯು ಬರಬೇಕಾಗುವುದು.

ಹಿಂದೆ 'ಶಕ್ತೋಽಪಿ ಹಿ' 'ಯಚ್ಚ ನಿತ್ಯಭೇದಃ' ಎಂಬುದಾಗಿ ಹೇಳಿದ ಎರಡು

ಸಂಗತಿಗಳನ್ನೂ ಶ್ರುತಿಯಿಂದಲೂ ಸಮರ್ಥಿಸುತ್ತಾರೆ –

**ಶಕ್ತೋಽಪಿ ಭಗವಾನ್ವಿಷ್ಣುರಕರ್ತುಂ ಕರ್ತುಮನ್ಯಥಾ ।।೯೪।।**

**ಸ್ವಭಿನ್ನಂ ಕಾರಣಾಭಿನ್ನಂ ಭಿನ್ನಂ ವಿಶ್ವಂ ಕರೋತ್ಯಜಃ ।**

**ಇತಿ ಶ್ರುತೇರವಸಿತ ಉಕ್ತಾರ್ಥೋಽಯಮಶೇಷತಃ ।।೯೫।।**

ಉತ್ಪತ್ತಿರಹಿತನೂ ಷಡ್ಗುಣಪೂರ್ಣನೂ ಆದ ಶ್ರೀಹರಿಯು ಯಾವುದೇ ಕಾರ್ಯವನ್ನು ಮಾಡದಿರಲಿಕ್ಕೂ, ಕಾರಣಗಳಿಲ್ಲದೆಯೇ ಅಥವಾ ಕಾರಣಗಳಲ್ಲಿ ವ್ಯತ್ಯಾಸಮಾಡಿ ಕಾರ್ಯವನ್ನು ಮಾಡಲು ಸಮರ್ಥನಾದರೂ ನಿಮಿತ್ತಕಾರಣನಾಗಿ ತನ್ನಿಂದ ಭಿನ್ನವಾಗಿಯೂ, ಉಪಾದಾನ ಕಾರಣದಿಂದ ಭಿನ್ನಾಭಿನ್ನವಾಗಿಯೂ ಈ ಜಗತ್ತನ್ನು ಸ್ವೇಚ್ಛಾನುಸಾರಿಯಾದ ನಿಯಮಗಳಿಂದ ತನ್ನ ಅಧೀನವಾದ ಕಾರಣವಸ್ತುಗಳಿಂದ ಸೃಷ್ಟ್ಯಾದಿ ಕಾರ್ಯಗಳನ್ನು ಮಾಡುತ್ತಾನೆ. ಹೀಗೆ ಶ್ರುತಿಯಿಂದ ಹಿಂದೆ ಹೇಳಿದ ಹಾಗೂ ಈಗ ಹೇಳಲ್ಪಟ್ಟ ಈ ವಿಷಯವು ಸಿದ್ಧವಾಯಿತು.

## ಇತರವ್ಯಪದೇಶಾಧಿಕರಣಮ್

### ಓಂ ಇತರವ್ಯಪದೇಶಾದ್ಧಿತಾಕರಣಾದಿದೋಷಪ್ರಸಕ್ತಿಃ ಓಂ

ಈ ಅಧಿಕರಣದಲ್ಲಿ ಶ್ರುತಿಪ್ರಾಪ್ತವಾದ ಜೀವಕರ್ತೃತ್ವ ಪಕ್ಷವು ವಿಸ್ತಾರವಾಗಿ ನಿರಾಕರಿಸಲ್ಪಡುತ್ತದೆ. ಇಲ್ಲಿ ಜೀವನಿಗೆ ಯಾವುದೇ ವಿಧದಿಂದಲೂ ಕರ್ತೃತ್ವವಿಲ್ಲ ಎಂದು ಪ್ರತಿಪಾದಿಸಲಾಗಿದೆಯೆಂದು ಹೇಳಕೂಡದು. ಏಕೆಂದರೆ 'ಕರ್ತಾ ಶಾಸ್ತ್ರಾರ್ಥವತ್ವಾತ್' ಎಂದು ಮುಂದೆ ಹೇಳಲಾಗುವ ವಿಷಯದಿಂದ ವಿರೋಧವು ಬರುವುದು. ಹಾಗಾದರೆ ಜೀವನಿಗೆ ಈಶ್ವರಾಧೀನವಾದ ಕರ್ತೃತ್ವವನ್ನು ಅಂಗೀಕರಿಸಿ, ಸ್ವಾತಂತ್ರ್ಯವನ್ನು ಮಾತ್ರ ಇಲ್ಲಿ ನಿಷೇಧಿಸಲಾಗಿದೆ ಎಂದು ಹೇಳುವುದೂ ಯುಕ್ತವಲ್ಲ. 'ಹಿತಾಕರಣಾದಿ ದೋಷಪ್ರಸಕ್ತಿಃ' ಮುಂತಾದ ಸೂತ್ರಗಳಿಗೆ ಹಾಗೆ ಅರ್ಥ ಮಾಡಲು ಶಕ್ಯವಾದರೂ, 'ಕೃತ್ಸ್ನಪ್ರಸಕ್ತಿರ್ನಿರವಯತ್ವ ಶಬ್ದಕೋಪೋ ವಾ' ಎನ್ನುವ ಸೂತ್ರವು ಕರ್ತೃತ್ವವನ್ನು ಸರ್ವಥಾ ನಿಷೇಧಿಸುವುದಾಗಿ ಕಂಡುಬರುತ್ತದೆ. ಆದುದರಿಂದ ಜೀವನಿಗೆ ಕರ್ತೃತ್ವವಿಲ್ಲವೆಂಬ ಅರ್ಥದಲ್ಲಿಯೇ ತಾತ್ಪರ್ಯವಿರುವುದು. ಹೀಗೆ ಹೇಳುವುದೂ ಕೂಡುವುದಿಲ್ಲ. ಏಕೆಂದರೆ ಮುಂದೆ ಹೇಳಲಾಗುವ ವಿಷಯಗಳಿಂದ ವಿರೋಧವು ಬರುವುದು. ಹಾಗಾದರೆ ಜೀವನಿಗೆ ಕೇವಲ ಅಭಿಮಾನಿಕವಾದ ಕರ್ತೃತ್ವವು ಇರುವುದು, ವಾಸ್ತವವಾಗಿ ಕರ್ತೃತ್ವವು ಇಲ್ಲ. ಆದುದರಿಂದ ವಿರೋಧ ಬರುವುದಿಲ್ಲವೆಂದು ಹೇಳಿದರೆ ಅದೂ ಕೂಡುವುದಿಲ್ಲ. ಏಕೆಂದರೆ 'ವಿಹಾರೋಪದೇಶಾತ್' ಇತ್ಯಾದಿ ಸೂತ್ರಗಳಿಂದ ವಾಸ್ತವವಾದ ಕರ್ತೃತ್ವವನ್ನೇ ಸಾಧನ ಮಾಡಲಾಗುವುದು. ಆದಪ್ರಯುಕ್ತ ಈ ಅಧಿಕರಣಕ್ಕೆ ಸಂಗತಿಯೇ ಇಲ್ಲ. ಹೀಗೆ ಪೂರ್ವಪಕ್ಷಿಯು ಆಶಂಕಿಸಿದರೆ, ಜೀವಕರ್ತೃತ್ವವು ಈಶ್ವರಾಧೀನವೆಂದು

ಒಪ್ಪದಿದ್ದರೆ ಇಂಥಹ ಪ್ರಸಂಗವು ಬರುತ್ತದೆ. ಆದ್ದರಿಂದ ಮೊದಲು ಜೀವಕರ್ತೃತ್ವವು ಈಶ್ವರಾಧೀನವಾದುದು ಎಂದು ಅಂಗೀಕರಿಸಬೇಕು ಎಂದು ಹೇಳಿ, ಅದಕ್ಕೆ ವಿರೋಧವಾದ ತರ್ಕಗಳನ್ನು ಪರಿಹರಿಸುವ ಕ್ರಮವನ್ನು ಅನುವ್ಯಾಖ್ಯಾನಕಾರರು ಇಲ್ಲಿ ಆಗಮವಾಕ್ಯವನ್ನು ದೃಷ್ಟಾಂತವಾಗಿ ನೀಡುವುದರ ಮೂಲಕ ತೋರಿಸುತ್ತಾರೆ –

**ಅನಂಶಸ್ಯಾಪಿ ಜೀವಸ್ಯ ಕಿಂಚಿತ್ಸಾಮರ್ಥ್ಯಯೋಜನಾಮ್ ।**

**ಕಾರ್ಯೇಷು ಯಃ ಕರೋತ್ಯದ್ಧಾ ನಮಸ್ತಸ್ಮೈ ಸ್ವಯಂಭುವೇ ॥೯೬॥**

ನಿರಂಶನೂ ಆದ ಜೀವನಿಗೆ ಕಾರ್ಯಕ್ಕೆ ಅನುರೂಪವಾದ ಕಿಂಚಿತ್ ಸಾಮರ್ಥ್ಯ ಪ್ರಯೋಗವನ್ನು ಯಾವಾತನು ಕಾರ್ಯಗಳಲ್ಲಿ ಚೆನ್ನಾಗಿ ಮಾಡುತ್ತಾನೋ ಅಂಥಹ ಸ್ವತಂತ್ರನಾದ ನಾರಾಯಣನಿಗೆ ನಮಸ್ಕಾರ.

ಜೀವನು ನಿರಂಶನಾಗಿದ್ದರೂ ಪರಮೇಶ್ವರನ ಅಚಿಂತ್ಯಶಕ್ತಿಯಿಂದ ಕಾರ್ಯಕ್ಕೆ ಎಷ್ಟು ಬೇಕೋ ಅಷ್ಟು ಶಕ್ತಿಯನ್ನು ಮಾತ್ರ ಪ್ರಯೋಗಿಸುವ ಸಾಮರ್ಥ್ಯವು ಅವನಲ್ಲಿ ಕೂಡುವುದು. ಆದ್ದರಿಂದ ಕೃತ್ಸ್ನಪ್ರಸಕ್ತಿ ಸಾಮರ್ಥ್ಯರೂಪ ದೋಷವು ಬರುವುದಿಲ್ಲ.

ಹೀಗೆ ಜೀವನಿಗೆ ಈಶ್ವರಾಧೀನ ಕರ್ತೃತ್ವವನ್ನು ಒಪ್ಪಿದರೆ ಯಾವುದೇ ದೋಷವು ಬರುವುದಿಲ್ಲವೆಂದು ತೋರಿಸಿ, ಈಗ ಅಭಿಪ್ರೇತವಾದ ಅರ್ಥದಲ್ಲಿ ಸೂತ್ರವನ್ನು ಯೋಜಿಸುತ್ತಾರೆ –

**ಯದಿ ಭಾಗೇನ ಕಾರ್ಯೇಷು ಜೀವಶಕ್ತಿಂ ನ ಯೋಜಯೇತ್ ।**

**ಹರಿಸ್ತದಾ ಹಿ ಸರ್ವತ್ರ ಕೃತ್ಸ್ನಯತ್ನೋಽಶಿತಾಽಪಿ ವಾ ॥೯೭॥**

ಒಂದು ವೇಳೆ ಶ್ರೀಹರಿಯು ಕಾರ್ಯಗಳಲ್ಲಿ ಕಾರ್ಯಕ್ಕೆ ಅನುಗುಣವಾದ ಅಂಶದಿಂದ ಜೀವನಿಗೆ ಶಕ್ತಿಯನ್ನು ಉಪಯೋಗಿಸುವಂತೆ ಮಾಡದಿದ್ದರೆ, ಆಗ ಹುಲ್ಲು ಎತ್ತುವಿಕೆ ಮುಂತಾದ ಎಲ್ಲ ಕಾರ್ಯಗಳಲ್ಲಿಯೂ ತನ್ನ ಪೂರ್ಣವಾದ ಶಕ್ತಿಯನ್ನು ಬಳಸಬೇಕಾಗುತ್ತದೆ. ಇಲ್ಲವೇ ಏಕದೇಶ ಪ್ರವೃತ್ತಿಯಲ್ಲಿ ಅಂಶವುಳ್ಳವನು ಆಗಬೇಕಾಗುವುದು. ಆದರೆ ಇದು ಶ್ರುತಿ ಹಾಗೂ ಅನುಭವಗಳಿಗೆ ವಿರುದ್ಧ. ಆದ್ದರಿಂದ ಈಶ್ವರಾಧೀನವಾಗಿಯೇ ಜೀವನು ಕರ್ತನು ಎಂದು ನಿಶ್ಚಿತವಾಗುತ್ತದೆ.

ಹಾಗಾದರೆ ಜೀವನ ಶಕ್ತಿಯಿಂದಲೇ ಇದನ್ನು ಕೂಡಿಸಬಹುದು ಎಂದರೆ, ಹೀಗೆ ಹೇಳುವುದು ಅಯುಕ್ತ. ಏಕೆಂದರೆ ಅಘಟಿತವಾದುದನ್ನು ಘಟನ ಮಾಡುವ ಅಚಿಂತ್ಯವಾದ ಶಕ್ತಿಯು ಜೀವನಿಗೆ ಇರುವುದಿಲ್ಲ. ಹಾಗೇನಾದರೂ ಅಂಥಹ ಶಕ್ತಿ ಇದ್ದಿದ್ದರೆ ಹಿತಾಕರಣಾದಿ ದೋಷದ ಪ್ರಸಕ್ತಿಯೇ ಬರುತ್ತಿರಲಿಲ್ಲ.

ಹಾಗಾದರೆ 'ವ್ಯತಿರೇಕೋ ಗಂಧವತ್' ಎಂಬ ಸೂತ್ರಾಂಶದಿಂದ ಜೀವರಿಗೆ

ಬಹುರೂಪತ್ವವನ್ನು ಸೂತ್ರಕಾರರೇ ಮುಂದೆ ಹೇಳುವರು. ಹಾಗೂ ಉತ್ಕ್ರಾಂತಿ ಗತ್ಯಾಗತೀನಾಂ ಎಂಬ ಸೂತ್ರದಿಂದ ಜೀವರಿಗೆ ಅಣುತ್ವವನ್ನು ಹೇಳುವರು. ಅಂಶತ್ವವನ್ನು ಒಪ್ಪದಿದ್ದರೆ, ಅಣುವಾದ ಜೀವನಿಗೆ ಏಕಕಾಲದಲ್ಲಿ ಬಹುರೂಪಗಳು ಕೂಡುವುದಿಲ್ಲ. ಹೀಗೆ ಸೂತ್ರಗಳಿಂದಲೇ ಸಾಂಶತ್ವವು ಸಿದ್ಧವಾಗಿರುವಾಗ, ಈ ಅಧಿಕರಣದಲ್ಲಿ ಸೂತ್ರಕಾರರು 'ನಿರವಯತ್ವ ಶಬ್ದ ಕೋಪೋ ವಾ' ಎಂದು ಹೇಗೆ ಹೇಳಿದರು? ಎನ್ನುವ ಗೂಢಾಭಿಸಂಧಿಯ ಆಶಂಕೆಯನ್ನು 'ಅಂಶಿನೋ ಹಿ' ಮುಂತಾದ ವಚನದಿಂದ ಪರಿಹರಿಸುತ್ತಾರೆ –

**ಅಂಶಿನೋ ಹಿ ಪಟಾದ್ಯಾ ಯೇ ಭಿನ್ನೈರೇವ ಪರಸ್ಪರಮ್ ।**

**ಅಂಶೈರಂಶಿನ ಉಚ್ಯಂತೇ ನೈವಮೇವ ಹಿ ಚೇತನಾಃ ।।೯೮।।**

**ಅತೋಽನಂಶಿನ ಇತ್ಯೇವ ಶ್ರುತಿರೇತೇಷು ವರ್ತತೇ ।**

**ಅಪ್ಯನೇಕಸ್ವರೂಪೇಷು ವಿಶೇಷಾದೇವ ಕೇವಲಮ್ ।।೯೯।।**

**ಬಹುಸ್ವರೂಪತಾಖ್ಯಾ ತು ತೇಷ್ವಸ್ತ್ಯೇವ ಹಿ ಸಾಂಶತಾ ।**

ಅಂಶಿಗಳೆಂದು ಪ್ರಸಿದ್ಧವಾಗಿರುವ ಪಟಾದಿಗಳು ಪರಸ್ಪರವಾಗಿ ಭಿನ್ನಗಳೇ ಆದರೂ ಅಂಶಿಯಿಂದ ಭಿನ್ನಾಭಿನ್ನಗಳಾದ ಅಂಶಗಳಿಂದ (ತಂತುಗಳಿಂದ) ಕೂಡಿರುವುದಾಗಿ ಹೇಳಲ್ಪಡುತ್ತವೆ. ಆದರೆ ಚೇತನಗಳು ಅಂಶಗಳನ್ನು ಹೊಂದಿದ್ದರೂ ಪಟಾದಿಗಳಲ್ಲಿರುವ ಹಾಗೆ ಭಿನ್ನಾಭಿನ್ನವಾದ ಅಂಶಗಳಿಂದ ಕೂಡಿದ ಅಂಶಿಗಳಲ್ಲ. ಆದ್ದರಿಂದ ಅಭೇದವಿದ್ದರೂ ಭೇದಕಾರ್ಯನಿರ್ವಾಹಕವೂ, ಭೇದಪ್ರತಿನಿಧಿಯೂ ಆದ ವಿಶೇಷದಿಂದಲೇ ಬಹುಸ್ವರೂಪವುಳ್ಳ, ಆದ್ದರಿಂದಲೇ ಸಾಂಶರೂ ಆದ ಈ ಚೇತನರಲ್ಲಿ ಅನಂಶಿನಃ (ಅಂಶವಿಲ್ಲದವರು) ಇತ್ಯಾದಿ ಶ್ರುತಿಯು ಇರುತ್ತದೆ. ಸರ್ವಥಾ ಅಂಶಗಳೇ ಇಲ್ಲವೆಂಬುದು ಶ್ರುತಿಯ ಅಭಿಪ್ರಾಯವಲ್ಲ. ಆದ್ದರಿಂದ ವಿರೋಧವಿಲ್ಲವೆಂದು ಅಭಿಪ್ರಾಯ.

ಚೇತನರಲ್ಲಿ ಅಂಶ–ಅಂಶಿಗಳಿಗೆ ಭೇದವಿಲ್ಲವಾದರೂ ವಿಶೇಷದ ಬಲದಿಂದಲೇ ಬಹುಸ್ವರೂಪತ್ವವವು ಹೇಳಲ್ಪಡುತ್ತದೆ. ಇದು ಪ್ರಮಾಣಪ್ರಸಿದ್ಧವಾಗಿದೆ. ಆದ್ದರಿಂದ ಸಾಂಶತ್ವವೂ ಕೂಡುತ್ತದೆ.

ಹಾಗಾದರೆ ಈಶ್ವರಾಧೀನತೆಯ ಅಪೇಕ್ಷೆಯಿಲ್ಲದೇ ಸಾಂಶತ್ವ–ನಿರಂಶತ್ವಗಳು ಸಿದ್ಧಿಸುವುದರಿಂದ, ಏಕದೇಶದಿಂದ ಕ್ರಿಯೆಯು ಕೂಡುವಾಗ, ಕೃತ್ಸ್ನಪ್ರಸಕ್ತಿಯಿಲ್ಲ. ವಿಭಿನ್ನಾಂಶಗಳಿಲ್ಲದ ಪ್ರಯುಕ್ತ ನಿರವಯತ್ವ ಶಬ್ದಕೋಪವೂ ಪರಿಹಾರವಾಗುತ್ತದೆ. ಇದಕ್ಕೆ ಬೇರೆಯಾದ ಈಶ್ವರನ ಕಾರ್ಯವೇನೂ ತೋರುವುದಿಲ್ಲ ಎಂಬ ಪೂರ್ವಪಕ್ಷಿಯ ಗೂಢಾಭಿಸಂಧಿಯು ಇರುವುದಾದರೆ ಅದನ್ನು ಪರಿಹರಿಸುತ್ತಾರೆ –

**ಬಹುತ್ವೇನಾವಿನಾಭಾವಾದ್ಭಿನ್ನತಾ ನಿಯಮಾದ್ಭವೇತ್ ।।೧೦೦।।**

**ಯದಿ ನೈವಂ ನಿಯಮಕೃದ್ಭಗವಾನ್ಪುರುಷೋತ್ತಮಃ ।**

ಗುಣಪೂರ್ಣನಾದ ನಾರಾಯಣನು ಹೀಗೆ ನಿಯಮವನ್ನು ಮಾಡದಿದ್ದ ಪಕ್ಷದಲ್ಲಿ, ಬಹುತ್ವಕ್ಕೂ ಭೇದಕ್ಕೂ ನಿಯತ ಸಂಬಂಧವಿರುವುದರಿಂದ, ಬಹುತ್ವ ಹೇತುವಿನಿಂದ ಜೀವರಲ್ಲಿಯೂ ಅಂಶ–ಅಂಶಿ ಭೇದವು ಬರಬೇಕಾಗುವುದು.

ಆದ್ದರಿಂದ ಜೀವರ ಸ್ವರೂಪ, ಸ್ವಭಾವ, ವಿಶೇಷಗಳಿಗೆ ಈಶ್ವರನೇ ನಿಯಾಮಕನಾಗಿದ್ದು, ಚೇತನರಲ್ಲಿ ವಿಶೇಷವನ್ನು ನಿಮಿತ್ತವನ್ನಾಗಿ ಮಾಡಿ, ವಿರುದ್ಧವಾಗಿದ್ದರೂ ಅಭೇದ ಬಹುತ್ವಗಳನ್ನು ಒಂದೇ ಕಡೆಯಲ್ಲಿ ವ್ಯವಸ್ಥೆಗೊಳಿಸಿ, ಕೃತ್ಸ್ನಪ್ರಸಕ್ತಿಯ ದೋಷ ಬರದಂತೆ, ಜೀವನಲ್ಲಿ ಕಾರ್ಯಾನುರೂಪ ಶಕ್ತಿಯನ್ನು ಯೋಜನೆ ಮಾಡುತ್ತ, ಜೀವನಿಂದ ಕಾರ್ಯಗಳನ್ನು ಮಾಡಿಸುತ್ತಾನೆ ಎಂಬುದೇ ಎಲ್ಲರೂ ಒಪ್ಪಬೇಕಾದ ಸಿದ್ಧಾಂತ.

## ಶ್ರುತೇಸ್ತು ಶಬ್ದಮೂಲತ್ವಾಧಿಕರಣಮ್

### ಓಂ ಶ್ರುತೇಸ್ತು ಶಬ್ದಮೂಲತ್ವಾತ್ ಓಂ

ಈಶ್ವರನ ಸ್ವತಂತ್ರ ಕರ್ತೃತ್ವದ ವಿಷಯದಲ್ಲಿ ಹಿಂದೆ ಹೇಳಿದ ಕೃತ್ಸ್ನಪ್ರಸಕ್ತಿ ಮುಂತಾದ ದೋಷಗಳು ಬರುವುದಿಲ್ಲ. ಏಕೆಂದರೆ, ಲೋಕದಲ್ಲಿ ಪರಸ್ಪರ ವಿರುದ್ಧವೆನಿಸಿರುವ ಅಣುತ್ವ–ಮಹತ್ವ ಮುಂತಾದ ಧರ್ಮಗಳು ಅವನಲ್ಲಿ ಸ್ವಲ್ಪವೂ ವಿರೋಧವಿಲ್ಲದೇ ಕೂಡುತ್ತವೆ ಎಂಬುದು ಶ್ರುತಿ ಪ್ರಸಿದ್ಧ. ಪರಮಾತ್ಮನ ಧರ್ಮಗಳು ಕೇವಲ ಆಗಮಗಳಿಂದಲೇ ವೇದ್ಯವು. ಯುಕ್ತಿಗೆ ನಿಲುಕುವುದಿಲ್ಲ. ಆದ್ದರಿಂದ ಯುಕ್ತಿ ವಿರೋಧವಿರುವುದಿಲ್ಲ ಎಂಬ ತತ್ವವನ್ನು ಈ ಅಧಿಕರಣದಲ್ಲಿ ಸಮರ್ಥಿಸಲಾಗಿದೆ.

ಈ ಅಧಿಕರಣದಲ್ಲಿ ಪ್ರಸಕ್ತವಾಗಿರುವ ಪೂರ್ವಪಕ್ಷವು ಹೀಗಿದೆ –

ಜೀವನಿಗೆ ಹೇಗೋ ಹಾಗೆ ಈಶ್ವರನಿಗೂ ಕೃತ್ಸ್ನಪ್ರಸಕ್ತಿ ದೋಷವು ಬರುವುದು. ಆದಪ್ರಯುಕ್ತ ಈಶ್ವರನಿಗೂ ಕರ್ತೃತ್ವವು ಯುಕ್ತವಾಗುವುದಿಲ್ಲ. ಬ್ರಹ್ಮಾಂಡ ಮತ್ತು ಪಿಪೀಲಿಕಾಂಡ (ಇರುವೆ ಮೊಟ್ಟೆ) ಮುಂತಾದ ವಿವಿಧ ಗಾತ್ರದ ಪದಾರ್ಥಗಳ ನಿರ್ಮಾಣದಲ್ಲಿ ಸಮಾನವಾದ ಶಕ್ತಿಯನ್ನು ಪ್ರಯೋಗಿಸುವವನು ಪ್ರೇಕ್ಷಾವಂತ ಎನಿಸಲಾರನು. ಬೇರೆ ಗತಿಯಿಲ್ಲವಾದ್ದರಿಂದ ದೋಷವಿಲ್ಲ ಎಂದು ಹೇಳಿದರೆ ಈಶ್ವರತ್ವಕ್ಕೇ ಘಾತವುಂಟಾಗುವುದು. ಇದರ ನಿವಾರಣೆಗಾಗಿ ಏಕದೇಶ ಪ್ರವೃತ್ತಿಯನ್ನು ಅಂಗೀಕರಿಸಿದರೆ, 'ನೇಹ ನಾನಾಸ್ತಿ' ಇತ್ಯಾದಿ ನಿರವಯತ್ವ ಪ್ರತಿಪಾದಕ ಶ್ರುತಿಗಳ ವಿರೋಧ ಬರುವುದು. ಈಶ್ವರನಿಗೆ ಶರೀರೇಂದ್ರಿಯಗಳು ಇಲ್ಲವಾದ್ದರಿಂದ ಕರ್ತತ್ವವು ಕೂಡುವುದಿಲ್ಲ. ಏಕೆಂದರೆ ಲೋಕದಲ್ಲಿ ಹೀಗೆ

ಕಂಡಿರುವುದಿಲ್ಲ. ಈಶ್ವರನು ನಿರ್ವಿಶೇಷನಾದ್ದರಿಂದ ಅವನಲ್ಲಿ ವಿಶೇಷವೂ ಕೂಡುವುದಿಲ್ಲ. ಆದ್ದರಿಂದ ಈಶ್ವರನಿಗೆ ಸರ್ವಕರ್ತೃತ್ವವು ಯುಕ್ತವಾಗುವುದಿಲ್ಲ.

ಹೀಗೆ ಬರುವ ಪೂರ್ವಪಕ್ಷವನ್ನು ಈ ಅಧಿಕರಣದಲ್ಲಿ ನಿರಾಕರಿಸುತ್ತಾರೆ. ಅದರ ತಾತ್ಪರ್ಯವನ್ನು 'ತಸ್ಯ ತು' ಇತ್ಯಾದಿ ವಚನದಿಂದ ಹೇಳುತ್ತಾರೆ –

**ತಸ್ಯ ತ್ವಶೇಷಶಕ್ತಿತ್ವಾದ್ಯುಜ್ಯತೇ ಸರ್ವಮೇವ ಚ ॥೧೦೧॥**

ಜೀವನಿಂದ ವಿಶೇಷವುಳ್ಳ ಆ ನಾರಾಯಣನಿಗೆ 'ಯೋಽಸೌ ವಿರುದ್ಧೋಽ-ವಿರುದ್ಧಃ' ಇತ್ಯಾದಿ ಶ್ರುತಿಯಲ್ಲಿ ಅಲೌಕಿಕತ್ವವು ಉಕ್ತವಾಗಿದೆ. ಅವನನ್ನು ಆಗಮಗಳಿಂದ ಮಾತ್ರ ತಿಳಿಯಲು ಸಾಧ್ಯ. ಆದಪ್ರಯುಕ್ತ ಈಶ್ವರನಲ್ಲಿ ಯುಕ್ತಿ ವಿರೋಧಕ್ಕೆ ಅವಕಾಶವು ಇರುವುದಿಲ್ಲ. 'ವಿಚಿತ್ರ ಶಕ್ತಿಃ ಪುರುಷಃ' 'ಸರ್ವೈರ್ಯುಕ್ತಾ ಶಕ್ತಿಭಿರ್ದೇವತಾ ಸಾ' ಇತ್ಯಾದಿ ಶ್ರುತಿಗಳಿಂದ ಈಶ್ವರನು ವಿಚಿತ್ರವಾದ ಸಮಸ್ತ ಶಕ್ತಿಯುಳ್ಳವನೆಂದು ತಿಳಿದುಬರುವುದು. ಆದಪ್ರಯುಕ್ತ ಈಶ್ವರನಲ್ಲಿ ಎಲ್ಲವೂ ಯುಕ್ತಿಸಮ್ಮತವೇ ಆಗುತ್ತವೆ. ಎಲ್ಲವೂ ಅಂದರೆ – ಭಿನ್ನಾಂಶಗಳಿಲ್ಲದಿದ್ದರೂ ಕಾರ್ಯಗಳಲ್ಲಿ ಸಮಗ್ರ ಶಕ್ತಿಯ ಪ್ರಸಕ್ತಿಯು ಇಲ್ಲವೆಂಬುದು, ಸ್ವರೂಪಾಂಶಗಳ ಬಾಹುಲ್ಯವಿದ್ದರೂ ಭೇದಾಭಾವವು, ಅಂಶದಿಂದ ಕಾರ್ಯವನ್ನು ಮಾಡಿದರೂ ನಿರವಯತ್ವ ಶ್ರುತಿಯ ವ್ಯಾಕೋಪದ ಅಭಾವವು, ಪ್ರಾಕೃತ ದೇಹರಹಿತನಾದರೂ ಕರ್ತೃತ್ವದ ನಿರ್ವಹಣೆ ಮುಂತಾದ ಎಲ್ಲವೂ ಕೂಡುತ್ತವೆ.

ಇನ್ನು ಪರಿಣಾಮವಾದಿಗಳೂ ವಿವರ್ತವಾದಿಗಳೂ, ಬ್ರಹ್ಮನು ಜಗತ್ತಿಗೆ ಉಪಾದಾನ ಕಾರಣನೆಂಬುದನ್ನು 'ಕೃತ್ಸ್ನಪ್ರಸಕ್ತಿಃ' ಎಂಬ ಸೂತ್ರದಿಂದ ಆಕ್ಷೇಪಿಸಿ, 'ಶ್ರುತೇಸ್ತು' ಇತ್ಯಾದಿ ಸೂತ್ರಗಳಿಂದ ಅದರ ಸಮಾಧಾನವು ಹೇಳಲ್ಪಡುವುದು ಎಂಬುದಾಗಿ ವ್ಯಾಖ್ಯಾನ ಮಾಡುತ್ತಾರೆ. ಹೇಗೆಂದರೆ, ತದಾತ್ಮಾನಂ ಸ್ವಯಮಕುರುತ ಇತ್ಯಾದಿ ಶ್ರುತಿಗಳಿಂದ ಬ್ರಹ್ಮವು ಜಗದುಪಾದಾನಕಾರಣವೆಂಬ ಸಂಗತಿಯೂ, ಕೃತ್ಸ್ನ ಪರಿಣಾಮವಿಲ್ಲವೆಂಬ ಸಂಗತಿಯೂ ತಿಳಿದುಬರುತ್ತದೆ. ಇದಕ್ಕೆ ಶಬ್ದಗಳೇ ಮೂಲ ಪ್ರಮಾಣವಾದ್ದರಿಂದ ಯುಕ್ತಿವಿರೋಧಕ್ಕೆ ಅವಕಾಶವಿರುವುದಿಲ್ಲ. 'ಸರ್ವಕರ್ಮಾ ಸರ್ವಕಾಮ' ಇತ್ಯಾದಿ ಶ್ರುತಿಯಲ್ಲಿ ಪರದೇವತೆಯಲ್ಲಿ ಸರ್ವಶಕ್ತಿತ್ವವು ಉಕ್ತವಾಗಿದೆ. ಆದುದರಿಂದ ನಿರವಯವನಾದರೂ ಕೃತ್ಸ್ನ ಪ್ರಸಕ್ತಿಯು ಇಲ್ಲದಿರುವುದರಿಂದ ಬ್ರಹ್ಮನಿಗೆ ಜಗತ್ತಿನ ಉಪಾದಾನಕಾರಣತ್ವವು ಯುಕ್ತವಾಗುತ್ತದೆ. ಇತ್ಯಾದಿ ವ್ಯಾಖ್ಯಾನವು ಅಯುಕ್ತವು. ಏಕೆಂದರೆ ಹಾಗಾದಲ್ಲಿ ಈ ಸೂತ್ರಗಳಿಗೆ ಈ ಅಧ್ಯಾಯದಲ್ಲಿ ಅಂತರ್ಭಾವರೂಪ ಸಂಗತಿಯು ಇಲ್ಲವೆಂದಾಗುವ ಪ್ರಸಂಗವು ಬರುವುದು. ಅದು ಹೇಗೆಂದರೆ –

**ವಿರೋಧಃ ಸರ್ವವೈಶಿಷ್ಟ್ಯೇ ಯೋ ದ್ವಿತೀಯೇ ನಿರಸ್ಯತೇ ।**

**ನಾರಾಯಣಸ್ಯ ತ್ವಧ್ಯಾಯೇ ತದನ್ಯೇ ತತ್ರ ತತ್ರಗಾಃ ।।೧೦೨।।**

ಪರಬ್ರಹ್ಮನಾದ ನಾರಾಯಣನಿಗೆ ಸಮಸ್ತ ಚೇತನಾಚೇತನಾತ್ಮಕ ಪ್ರಪಂಚದಿಂದ ವೈಲಕ್ಷಣ್ಯ, ಸರ್ವೋತ್ತಮತ್ವ ಮುಂತಾದ ವೈಶಿಷ್ಟ್ಯದ ವಿಷಯದಲ್ಲಿ ಕಂಡುಬರುವ ಯುಕ್ತ್ಯಾದಿ ವಿರೋಧವಾದರೂ ಈ ದ್ವಿತೀಯಾಧ್ಯಾಯದಲ್ಲಿ ನಿರಾಕರಿಸಲ್ಪಡುತ್ತದೆ. ಇದಕ್ಕಿಂತ ಬೇರೆಯಾದ ವಿರೋಧಗಳು ಆಯಾಯ ಅಧಿಕರಣಗಳಲ್ಲಿಯೇ ನಿರಾಕರಿಸಲ್ಪಟ್ಟಿರುತ್ತವೆ.

ಹಾಗಾದರೆ ಶ್ರುತಿಗಳ ಪರಸ್ಪರ ವಿರೋಧವೂ ಎರಡನೆಯ ಅಧ್ಯಾಯದಲ್ಲಿ 'ನ ವಿಯದಶ್ರುತೇಃ' ಇತ್ಯಾದಿ ಸೂತ್ರಗಳಿಂದ ಪರಿಹರಿಸಲ್ಪಟ್ಟಿದೆ. ಆದುದರಿಂದ ಬ್ರಹ್ಮನ ಸರ್ವವೈಶಿಷ್ಟ್ಯದ ವಿಷಯದಲ್ಲಿಯೇ ವಿರೋಧವು ಇದೇ ಅಧ್ಯಾಯದಲ್ಲಿ ಪರಿಹರಿಸಲ್ಪಡುತ್ತದೆ ಎಂಬುದು ಹೇಗೆ ಸಂಗತವಾಗುವುದು ಎಂದರೆ –

**ಸೃಷ್ಟಿಸಂಹಾರವಾಕ್ಯಾನಾಂ ಜೀವರೂಪಾಭಿಧಾಯಿನಾಂ ।**

**ಅಪ್ಯನ್ಯೋನ್ಯಾವಿರೋಧಸ್ತು ದ್ವಿತೀಯಾಧ್ಯಾಯಗೋಚರಃ ।।೧೦೩।।**

ಜೀವರ ಸ್ವರೂಪವನ್ನು (ಹಾಗೂ ಪ್ರಾಣಾದಿಗಳನ್ನು) ಹೇಳುವ ವಾಕ್ಯಗಳಿಗೂ, ಸೃಷ್ಟಿ ಸಂಹಾರಗಳನ್ನು ಪ್ರತಿಪಾದಿಸುವ ವಾಕ್ಯಗಳಿಗೂ ಪರಸ್ಪರ ವಿರೋಧ ಪರಿಹಾರವು ಎರಡನೆಯ ಅಧ್ಯಾಯದ ವಿಷಯವೇ ಆಗಿದ್ದರೂ ಸಹ, ಅದು ಪರಮೇಶ್ವರನ ಸರ್ವವೈಶಿಷ್ಟ್ಯ ವಿರೋಧ ಪರಿಹಾರರೂಪವೇ ಆಗಿರುತ್ತದೆ.

ಇನ್ನು ಈಶ್ವರನಿಗೆ ಶರೀರ–ಇಂದ್ರಿಯಾದಿ ಕರಣಗಳಿಲ್ಲವಾದ್ದರಿಂದ ಕರ್ತೃತ್ವವು ಕೂಡುವುದಿಲ್ಲವೆಂಬ ಆಕ್ಷೇಪದ ಸಮಾಧಾನಕ್ಕಾಗಿ ಹೊರಟಿರುವ ಸೂತ್ರ –

**ಸೂತ್ರ: ಓಂ ವಿಕರಣತ್ವಾನ್ನೇತಿ ಚೇತ್ತದುಕ್ತಂ ಓಂ**

ಈ ಸೂತ್ರವು ಅನಾರಂಭಣೀಯವು, ಪುನರುಕ್ತವಾದುದರಿಂದ ಎಂದು ಆಕ್ಷೇಪ. ಶ್ರುತೇಸ್ತು ಶಬ್ದಮೂಲತ್ವಾತ್, ಆತ್ಮನಿ ಚೈವಂ ವಿಚಿತ್ರಾಶ್ಚ ಹಿ, ಸರ್ವೋಪೇತಾ ಚ ತದ್ದರ್ಶನಾತ್ ಎನ್ನುವ ಸೂತ್ರಗಳಿಂದಲೇ ಅಲೌಕಿಕತ್ವ, ಶಬ್ದೈಕ ಸಮಧಿಗಮ್ಯತ್ವ, ವಿಚಿತ್ರಾನಂತಶಕ್ತಿತ್ವ ಮುಂತಾದ ಯುಕ್ತಿಗಳಿಂದ ಎಲ್ಲ ಅಸಂಭವನೀಯತೆಯನ್ನೂ ಪರಿಹರಿಸಲಾಗಿದೆ. ಈ ವಿಷಯದಲ್ಲಿ ಯಾವುದೇ ಅಭ್ಯಧಿಕಾಶಂಕೆಯೂ ಬಂದಿಲ್ಲ. ಆದ್ದರಿಂದ ಈ ಸೂತ್ರಕ್ಕೆ ಆರಂಭಣೀಯತ್ವವು ಕೂಡುವುದಿಲ್ಲ ಎಂದರೆ –

**ಮಾನಮೇಯವಿಶೇಷೇಣ ಪುನರುಕ್ತಿರ್ನ ಜಾಯತೇ ।**

'ಅತ ಏವ ಪ್ರಾಣಃ' ಇತ್ಯಾದಿಗಳಲ್ಲಿ ಪ್ರಮಾಣವು ಒಂದೇ ಆಗಿದ್ದರೂ, ಪ್ರಮೇಯದ ವಿಷಯದಲ್ಲಿ ವಿಶೇಷವಿರುವುದರಿಂದ ಹೇಗೆ ಪುನರುಕ್ತಿಯಿಲ್ಲವೋ,

ಹಾಗೆಯೇ ಪ್ರಮೇಯಗಳಲ್ಲಿ ಐಕ್ಯವಿದ್ದರೂ ಪ್ರಮಾಣಗಳಲ್ಲಿ ವಿಶೇಷವಿರುವ ಪ್ರಯುಕ್ತ ಪುನರುಕ್ತಿಯು ಸಂಭವಿಸುವುದಿಲ್ಲ.

## ನ ಪ್ರಯೋಜನವತ್ವಾಧಿಕರಣಮ್

ಯಾವ ಪ್ರಯೋಜನಕ್ಕಾಗಿ ಸೃಷ್ಟ್ಯಾದಿಗಳೋ ಆ ಪ್ರಯೋಜನದ ನ್ಯೂನತೆಯು ಕಂಡುಬರುವುದರಿಂದ ಈಶ್ವರನಲ್ಲಿ ಅಪೂರ್ಣತೆಯು ಪ್ರಾಪ್ತವಾಗುವುದು. ಈ ಆಕ್ಷೇಪ ಪರಿಹಾರಕ್ಕಾಗಿ ಈ ಅಧಿಕರಣವು ಪ್ರಸಕ್ತವಾಗಿದೆ. ಈಶ್ವರನಿಗೆ ಸೃಷ್ಟ್ಯಾದಿಗಳಿಂದ ಪ್ರಯೋಜನವು ಇದೆಯೋ ಇಲ್ಲವೋ? ಎಂಬುದಾಗಿ ಪ್ರಶ್ನೆ. ಪ್ರಯೋಜನವಿದೆಯೆಂದರೆ ಅಪೂರ್ಣತೆಯು ಬರಬೇಕಾದೀತು. ಪ್ರಯೋಜನವು ಇಲ್ಲವೆಂದರೆ ಕರ್ತೃತ್ವವೇ ಕೂಡುವುದಿಲ್ಲ. ಹೀಗೆ ಎರಡು ಕಲ್ಪಗಳಲ್ಲಿಯೂ ಈಶ್ವರನಿಗೆ ಸೃಷ್ಟ್ಯಾದಿ ಕರ್ತೃತ್ವವು ಕೂಡಲಾರದು ಎಂದು ಪೂರ್ವಪಕ್ಷಿಯ ಅಭಿಪ್ರಾಯ. ಇದರಲ್ಲಿ ಮೊದಲನೆಯದನ್ನು **ಓಂ ನ ಪ್ರಯೋಜನವತ್ವಾತ್ ಓಂ** ಎಂಬ ಮೊದಲನೆಯ ಸೂತ್ರದಿಂದಲೂ ಎರಡನೆಯ ಪಕ್ಷವನ್ನು **ಓಂ ಲೋಕವತ್ತು ಲೀಲಾಕೈವಲ್ಯಂ ಓಂ** ಎಂಬ ಎರಡನೆಯ ಸೂತ್ರದಿಂದಲೂ ನಿರಾಕರಿಸುತ್ತಾರೆ. ಇದನ್ನೇ ಅನುವ್ಯಾಖ್ಯಾನದಲ್ಲಿ 'ಸದಾ ' ಇತ್ಯಾದಿ ವಚನದಿಂದ ವಿವರಿಸುತ್ತಾರೆ –

**ಸದಾ ಪ್ರವೃತ್ತಿರೀಶಸ್ಯ ಸ್ವಭಾವಾದೇವ ಕೇವಲಮ್ ।।೧೦೪।।**

ಹೇಗೆ ಲೋಕದಲ್ಲಿ ಅಗ್ನಿ ವಾಯ್ವಾದಿಗಳಿಗೆ ಊರ್ಧ್ವಗಮನಾದಿ ಪ್ರವೃತ್ತಿಯು ಸ್ವಭಾವದಿಂದಲೇ ಇರುವುದೋ, ಹಾಗೆಯೇ ಈಶ್ವರನಿಗೆ ಪ್ರಯೋಜನವು ಇಲ್ಲದಿದ್ದರೂ ಯಾವಾಗಲೂ ಸ್ವಭಾವದಿಂದಲೇ ಸೃಷ್ಟ್ಯಾದಿಗಳಲ್ಲಿ ಪ್ರವೃತ್ತಿಯು ಪ್ರಮಾಣ ಪ್ರಮಿತವಾಗಿದೆ.

ಹಾಗಾದರೆ ಏನೂ ಪ್ರಯೋಜನವಿಲ್ಲದೆ ಚೇತನರ ಪ್ರವೃತ್ತಿಯುಂಟಾಗುವುದು ಲೋಕದಲ್ಲಿ ಕಂಡಿಲ್ಲವೆಂದು ಆಕ್ಷೇಪಿಸಿದರೆ, ಮತ್ತನಿಗೆ ಯಾವುದೇ ಪ್ರಯೋಜನವಿಲ್ಲದಿದ್ದರೂ ಕೇವಲ ಸುಖೋದ್ರೇಕದಿಂದಲೇ ನೃತ್ಯ ಗಾನಾದಿಗಳಲ್ಲಿ ಪ್ರವೃತ್ತಿಯು ಕಂಡುಬರುವುದೆಂದು ಹೇಳುತ್ತೇವೆ. ಹಾಗಾದರೆ ಜ್ಞಾನಿಗಳ ಪ್ರವೃತ್ತಿಯು ಪ್ರಯೋಜನ ಅಥವಾ ಯಾವುದೇ ಉದ್ದೇಶವಿಲ್ಲದೆ ಆಗುವುದು ಕಂಡಿಲ್ಲ. ಈ ಸೃಷ್ಟ್ಯಾದಿ ವ್ಯಾಪಾರವು ಜ್ಞಾನಿಯ ಪ್ರವೃತ್ತಿಯೇ ಆದ್ದರಿಂದ ಪ್ರಯೋಜನ ಉದ್ದೇಶಗಳು ಇರಬೇಕಾಗುತ್ತವೆ. ಹೀಗೆ ಬರುವ ಆಶಂಕೆಯನ್ನು 'ಅಂಗಚೇಷ್ಟಾ' ಇತ್ಯಾದಿ ವಚನದಿಂದ ಪರಿಹರಿಸುತ್ತಾರೆ –

**ಅಂಗಚೇಷ್ಟಾ ಯಥಾ ಪುಂಸಃ ಕಾಶ್ಚಿದುದ್ದೇಶವರ್ಜಿತಾಃ ।**

**ದೇವಸ್ಯೈಷ ಸ್ವಭಾವೋಽಯಮಿತ್ಯಾಹ ಶ್ರುತಿರಂಜಸಾ ।।೧೦೫।।**

ಪ್ರವಚನಾದಿಗಳನ್ನು ಮಾಡುವ ಸಮಯದಲ್ಲಿ ಉದ್ದೇಶವಿಲ್ಲದಿದ್ದರೂ ಹೇಗೆ ಪುರುಷನ ಅಂಗಚೇಷ್ಟಾದಿ ಪ್ರವೃತ್ತಿಯು ಕಂಡುಬರುವುದೋ ಹಾಗೆಯೇ ಈಶ್ವರನ ಪ್ರವೃತ್ತಿಯು. ಇದಕ್ಕೆ ಪ್ರಮಾಣವನ್ನು ಹೇಳುತ್ತಾರೆ – 'ದೇವಸ್ಯೈಷ ಸ್ವಭಾವೋಽ-ಯಮಾಪ್ತಕಾಮಸ್ಯ ಕಾ ಸ್ಪೃಹಾ' ಎನ್ನುವ ಶ್ರುತಿಯು ಚೆನ್ನಾಗಿಯೇ ಈ ಅರ್ಥವನ್ನು ಹೇಳುತ್ತದೆ. ಅಂದರೆ, ಶ್ರೀಹರಿಯ ಈ ಸೃಷ್ಟ್ಯಾದಿ ವಿಷಯಕವಾದ ಇಚ್ಛಾಪೂರ್ವಕ ಪ್ರವೃತ್ತಿಯು ಸ್ವಭಾವವೇ ಆದುದರಿಂದ ಆಪ್ತಕಾಮನಾದ ಶ್ರೀಹರಿಗೆ ಯಾವ ಪ್ರಯೋಜನದ ಅವಶ್ಯಕತೆಯೇ ಇರುವುದಿಲ್ಲವಾದ್ದರಿಂದ, ಪ್ರಯೋಜನದ ಇಚ್ಛೆಯಾದರೂ ಏಕಿರುವುದು?

ಇನ್ನು ಪರಿಪೂರ್ಣನಾದ ಪರಬ್ರಹ್ಮನಿಗೂ ತನ್ನ ಸಂಕಲ್ಪಮಾತ್ರದಿಂದಲೇ ಉಂಟಾಗುವ ಜಗತ್ತಿನ ಸೃಷ್ಟಿ ಸ್ಥಿತಿ ಸಂಹಾರಾದಿಗಳಿಗೆ ಲೀಲೆಯೇ ಒಂದು ಪ್ರಯೋಜನವು ಎಂದು ರಾಮಾನುಜೀಯರು ವ್ಯಾಖ್ಯಾನ ಮಾಡುತ್ತಾರೆ. ಅವರ ವ್ಯಾಖ್ಯಾನವನ್ನು 'ಕ್ರೀಡಾ' ಇತ್ಯಾದಿ ವಚನದಿಂದ ನಿರಾಕರಿಸುತ್ತಾರೆ –

**ಕ್ರೀಡಾಂ ಪ್ರಯೋಜನಂ ಕೃತ್ವಾ ಸೃಷ್ಟಿಃ ಶ್ರುತಿವಿರೋಧಿನೀ ।**

**ಇತಿ ಕೇವಲಲೀಲೈವ ನಿರ್ಣೀತಾ ಪ್ರಭುಣಾ ಸ್ವಯಮ್ ।।೧೦೬।।**

ಕ್ರೀಡೆಯನ್ನು ಪ್ರಯೋಜನವನ್ನಾಗಿವುಳ್ಳ ಸೃಷ್ಟಿಯು ಶ್ರುತಿವಿರೋಧಿಯಾಗಿದೆ. ದೇವಸ್ಯೈಷ ಸ್ವಭಾವೋಽಯಂ ಆಪ್ತಕಾಮಸ್ಯ ಕಾ ಸ್ಪೃಹಾ ಎಂಬುದಾಗಿ ಸಯುಕ್ತಿಕವಾಗಿ ಪರಮಾತ್ಮನಿಗೆ ಪ್ರಯೋಜನ ಲೇಶವೂ ಇಲ್ಲವೆಂದು ಶ್ರುತಿಯಿಂದ ಸಿದ್ಧಾಂತ ಮಾಡಲ್ಪಟ್ಟಿದೆ. ಆದುದರಿಂದ ಅವರ ವ್ಯಾಖ್ಯಾನವು ಅಯುಕ್ತವೇ ಆಗುವುದು. ಸೂತ್ರಕಾರರಾದ ಭಗವಾನ್ ವೇದವ್ಯಾಸರಿಂದ ಶ್ರುತ್ಯನುಸಾರಿಯಾದ ಕೇವಲ ಲೀಲೆಯೇ ಸೃಷ್ಟ್ಯಾದಿ ಪ್ರವೃತ್ತಿಯೆಂದು ಸ್ಪಷ್ಟವಾಗಿ ನಿರ್ಣಯಿಸಲ್ಪಟ್ಟಿದೆ. ಕ್ರೀಡೆಯೆಂಬ ಪ್ರಯೋಜನಕ್ಕಾಗಿ ಎಂಬುದು ಸೂತ್ರಕಾರರ ಅಭಿಪ್ರಾಯವಾಗಿದ್ದರೆ ಈ ಸೂತ್ರದಲ್ಲಿ 'ಲೀಲಾರ್ಥಂ' ಎಂದು ಹೇಳಬೇಕಿತ್ತು. ಹಾಗೆ ಹೇಳಿಲ್ಲ. 'ಲೀಲಾಕೈವಲ್ಯಂ' ಕೇವಲ ಕ್ರೀಡೆಯೇ ಎಂದು ಹೇಳಲ್ಪಟ್ಟಿದೆ.

ಯಾವುದೇ ವಿಷಯದಲ್ಲಿ ಪ್ರವೃತ್ತಿ ಹುಟ್ಟಲಿಕ್ಕೆ ತನಗಾಗಲೀ ಪರರಿಗಾಗಲೀ ಅದರಿಂದ ಪ್ರಯೋಜನವು ಅವಶ್ಯವಾಗಿ ಇರಬೇಕು. ಇಲ್ಲದಿದ್ದರೆ ಪ್ರವೃತ್ತಿಯೇ ಕೂಡುವುದಿಲ್ಲ. ಆದರೆ ಈಶ್ವರನ ಪ್ರವೃತ್ತಿಯಲ್ಲಿ ಯಾವುದೇ ರೀತಿಯ ಪ್ರಯೋಜನಸವಿರುವುದಿಲ್ಲ. ಸೂತ್ರಕಾರರು 'ನ ಪ್ರಯೋಜನವತ್ತ್ವಾತ್' ಎಂಬ ಸೂತ್ರದಿಂದ ಇದನ್ನು ಸ್ಪಷ್ಟಪಡಿಸಿದ್ದಾರೆ. 'ಆಪ್ತಕಾಮಸ್ಯ ಕಾ ಸ್ಪೃಹಾ' ಎಂಬುದಾಗಿ ಶ್ರುತಿಯೂ ಇದನ್ನೇ ಹೇಳುತ್ತದೆ. ಆದ್ದರಿಂದ ಈಶ್ವರನಿಗೆ ಸೃಷ್ಟ್ಯಾದಿಗಳಲ್ಲಿ ಪ್ರವೃತ್ತಿಯೇ ಕೂಡುವುದಿಲ್ಲ ಎಂದರೆ –

**ಆತ್ಮಪ್ರಯೋಜನಾರ್ಥಾಯ ಸ್ಪೃಹಾಂ ಶ್ರುತಿರವಾರಯತ್ ।**

**ನ ಪ್ರಯೋಜನವತ್ತ್ವೇನೇತ್ಯತ ಆಹ ಜಗದ್ಗುರುಃ ॥೧೦೭॥**

'ಆತ್ಮಕಾಮಸ್ಯ ಕಾ ಸ್ಪೃಹಾ' ಎನ್ನುವ ಶ್ರುತಿಯೂ ಹಾಗೂ 'ನ ಪ್ರಯೋಜನವತ್ತ್ವಾತ್' ಎಂದು ಸೂತ್ರಕಾರರೂ, ಈಶ್ವರನಲ್ಲಿ ಸ್ವಪ್ರಯೋಜನಕ್ಕಾಗಿ ಸೃಷ್ಟ್ಯಾದಿ ಇಚ್ಛೆಯನ್ನು ನಿರಾಕರಿಸಿರುತ್ತಾರೆ. ಆದರೆ ಪರರಿಗೆ ಪ್ರಯೋಜನಕ್ಕೋಸ್ಕರ ಎಂಬುದು ಶ್ರುತಿಯಿಂದಲೂ ಸೂತ್ರಕಾರರಿಂದಲೂ ಅಂಗೀಕೃತವೇ ಆಗಿದೆ. ಈಶ್ವರನು ಸೃಷ್ಟ್ಯಾದಿಗಳನ್ನು ಮಾಡುತ್ತಾನೆ ಎಂಬುದು ಪ್ರಮಾಣಸಿದ್ಧ. ಸ್ವಪ್ರಯೋಜನವಿಲ್ಲವೆಂದಮೇಲೆ ಪರಪ್ರಯೋಜನದ ಉದ್ದೇಶವಿದೆ ಎಂಬುದು ಸ್ಪಷ್ಟ. ಇದನ್ನೇ ಸೂತ್ರಕಾರರು 'ನ' ಎನ್ನುವುದರಿಂದ ಸ್ವಪ್ರಯೋಜನವಿಲ್ಲವೆಂದು ತಿಳಿಸಿ, ಪರಪ್ರಯೋಜನಕ್ಕಾಗಿ ಪರಮಾತ್ಮನ ಪ್ರವೃತ್ತಿ ಎಂಬುದನ್ನು 'ಪ್ರಯೋಜನವತ್ತ್ವಾತ್' ಎನ್ನುವುದರಿಂದ ಸ್ಪಷ್ಟಪಡಿಸಿದ್ದಾರೆ.

ಹಾಗಾದರೆ 'ಕಾ ಸ್ಪೃಹಾ' ಎನ್ನುವ ಶ್ರುತಿಯು ಈಶ್ವರನಿಗೆ ಪ್ರಯೋಜನದ ಇಚ್ಛೆಯನ್ನಷ್ಟೇ ನಿಷೇಧಿಸಲು ಹೊರಟಿಲ್ಲ. ಆದರೆ ಇಚ್ಛಾರೂಪವಾದ ಗುಣವನ್ನೇ ನಿಷೇಧಿಸುತ್ತದೆ ಎಂದು ಕೆಲವರ ವ್ಯಾಖ್ಯಾನ. ಅದನ್ನು 'ಇಚ್ಛಾಮಾತ್ರಂ' ಇತ್ಯಾದಿ ವಚನದಿಂದ ನಿರಾಕರಿಸುತ್ತಾರೆ –

**ಇಚ್ಛಾಮಾತ್ರಂ ಪ್ರಭೋಃ ಸೃಷ್ಟಿರಿತಿ ಸೃಷ್ಟೌ ವಿನಿಶ್ಚಿತಾಃ।**

**ಇತಿ ಪ್ರಶಂಸಯಾ ಕಾಮಶ್ರುತಿಭ್ಯಶ್ಚೈವ ಯುಕ್ತಿತಃ ॥೧೦೮॥**

**ಮಹಾತಾತ್ಪರ್ಯಯುಕ್ತೇಶ್ಚ ನೇಚ್ಛಾಮಾತ್ರಂ ನಿಷಿಧ್ಯತೇ।**

'ಕಾ ಸ್ಪೃಹಾ' ಎನ್ನುವ ಶ್ರುತಿಯು ಈಶ್ವರನಿಗೆ ಇಚ್ಛೆಯೇ ಇಲ್ಲವೆಂದು ಹೇಳುವುದಿಲ್ಲ. ಏಕೆಂದರೆ ಈಶ್ವರನಿಗೆ ಇಚ್ಛೆಯಿದೆಯೆಂಬುದು ಪ್ರಮಾಣ ಸಿದ್ಧವು. ಸೃಷ್ಟಿಯ ವಿಷಯದಲ್ಲಿ ವಿಶಿಷ್ಟವಾದ ನಿಶ್ಚಿತ ಬುದ್ಧಿಯುಳ್ಳವರು ಶ್ರೀಹರಿಯ ಸೃಷ್ಟಿಯು ಕೇವಲ ಅವನ ಇಚ್ಛೆಗೆ ಒಳಪಟ್ಟಿರುವುದು ಎಂದು ತಿಳಿಯುತ್ತಾರೆ. ಹೀಗೆ ತಿಳಿದವರನ್ನು ವಿನಿಶ್ಚಿತರು ಎಂದು ಪ್ರಶಂಸೆ ಮಾಡಿರುವುದರಿಂದಲೂ, 'ಕಾಮ-ಸ್ತದಗ್ರೇ ಸಮವರ್ತತಾಧಿ' 'ಸೋಽಕಾಮಯತ' ಇತ್ಯಾದಿ ಕಾಮಪ್ರತಿಪಾದಕ ಶ್ರುತಿಗಳಿರುವುದರಿಂದಲೂ ಹಾಗೂ 'ಈಶ್ವರಃ ಇಚ್ಛಾವಾನ್ ಆತ್ಮತ್ವಾತ್ ಯಜ್ಞದತ್ತ ವತ್' ಇತ್ಯಾದಿ ಯುಕ್ತಿಯಿಂದಲೂ ಶ್ರೀಹರಿಗೆ ಇಚ್ಛೆಯಿದೆಯೆಂಬುದು ಸಿದ್ಧವು. ಮಹಾತಾತ್ಪರ್ಯರೂಪ ಯುಕ್ತಿಯೂ ಇರುವುದು. ಈಶ್ವರನಲ್ಲಿ, ಇಚ್ಛೆಯಿಲ್ಲದ ಪಕ್ಷದಲ್ಲಿ, ಸರ್ವವೇದಗಳ ಮಹಾತಾತ್ಪರ್ಯವು ಇಲ್ಲದಂತಾಗುವುದು ಎಂಬ ಬಾಧಕವಿದೆ. ಆದಪ್ರಯುಕ್ತ ಈಶ್ವರನಿಗೆ ಇಚ್ಛೆಯಿಲ್ಲವೆನ್ನುವುದು ನಿಷೇಧಿಸಲ್ಪಡುತ್ತದೆ.

ಹಾಗಾದರೆ ಮಹಾತಾತ್ಪರ್ಯರೂಪ ಯುಕ್ತಿಯಿರುವುದರಿಂದ ಎಂದು ಹೇಳಿದುದು ಅಯುಕ್ತವು. ಹೇಗೆಂದರೆ ಈಶ್ವರನು ಇಚ್ಛೆಯುಳ್ಳವನಾಗಿರದಿದ್ದರೆ ಆಗ ಶ್ರುತಿಯ ಮಹಾತಾತ್ಪರ್ಯಕ್ಕೆ ವಿಷಯನಾಗಲಾರನು ಎನ್ನುವಲ್ಲಿ ವ್ಯಾಪ್ತಿಯು ಇರುವುದಿಲ್ಲ. ಏಕೆಂದರೆ ಧರ್ಮಾದಿಗಳಿಗೆ ಇಚ್ಛೆಯಿಲ್ಲದಿದ್ದರೂ ಅವುಗಳಿಗೆ ಆವಾವ ಶಾಸ್ತ್ರಗಳ ಮಹಾತಾತ್ಪರ್ಯ ವಿಷಯತ್ವವು ಕಂಡಿರುತ್ತದೆ. ಹೀಗೆ ಆಶಂಕಿಸಿದರೆ –

**ಮೋಕ್ಷಾರ್ಥಾಃ ಶ್ರುತಯೋ ಯಸ್ಮಾತ್ಸ ಚ ತಸ್ಯ ಪ್ರಸಾದತಃ ।।೧೦೯।।**

**ಉನ್ನಿನೀಷತಿ ವಾಕ್ಯಾಚ್ಚ ಲೋಕದೃಷ್ಟಾನುಸಾರತಃ।**

ಎಲ್ಲ ಶ್ರುತಿಗಳೂ ಮೋಕ್ಷವನ್ನೇ ಪ್ರಯೋಜನವನ್ನಾಗಿ ಹೊಂದಿವೆ. ಆ ಮೋಕ್ಷವಾದರೂ ಪರಮೇಶ್ವರನ ಪ್ರಸಾದದಿಂದಲೇ ಸಾಧ್ಯ. ಆ ಪ್ರಸಾದಕ್ಕಾದರೂ ಈಶ್ವರನ ಇಚ್ಛೆಯೇ ನಿಮಿತ್ತಕಾರಣವು. ಆದ್ದರಿಂದ ಆ ಪರಮೇಶ್ವರನಿಗೆ ಇಚ್ಛೆಯನ್ನು ಅಂಗೀಕರಿಸಬೇಕು. ಹಾಗಿಲ್ಲದಿದ್ದ ಪಕ್ಷದಲ್ಲಿ ಪರಮಾತ್ಮನ ಪ್ರಸಾದವಾಗಲೀ, ಮೋಕ್ಷವಾಗಲೀ ಸಾಧ್ಯವಿಲ್ಲ. ಈಶ್ವರನ ಜ್ಞಾನದಿಂದಲೇ ಮೋಕ್ಷವು ಲಭಿಸುವುದರಿಂದ ಇಚ್ಛೆಯಾಗಲೀ ಪ್ರಸಾದವಾಗಲೀ ಬೇಕಿಲ್ಲ ಎಂದು ಆಶಂಕಿಸಿದರೆ 'ಲೋಕದೃಷ್ಟಾನುಸಾರತಃ' ಎಂಬುದೇ ಆಶಂಕೆಗೆ ಪರಿಹಾರ. 'ವಿಮತೋ ಬಂಧ ಮೋಕ್ಷಃ ಪ್ರಭುಪ್ರಸಾದಸಾಧ್ಯೋ ಮೋಕ್ಷತ್ವಾತ್ ಶೃಂಖಲಾಮೋಕ್ಷವತ್' ಅಂದರೆ, ವಿಮತವಾದ ಮೋಕ್ಷವು ಈಶ್ವರನ ಪ್ರಸಾದದಿಂದ ಸಾಧ್ಯವಾದುದು ಮೋಕ್ಷವಾದ ಕಾರಣದಿಂದ. ಇದಕ್ಕೆ ಶೃಂಖಲಾ ಮೋಕ್ಷವೇ (ಬೇಡಿಯ ಕಳಚುವಿಕೆ) ದೃಷ್ಟಾಂತವು. ಇವೇ ಮೊದಲಾದ ಲೋಕದಲ್ಲಿ ದೃಷ್ಟವಾದ ವ್ಯಾಪ್ತಿಯಿಂದ ಕೂಡಿದ ಅನುಮಾನಕ್ಕೆ ಅನುಸಾರವಾಗಿ ಎಂದರ್ಥ. ಈ ರೀತಿಯ ಅನುಮಾನದಿಂದ ಮಾತ್ರವಲ್ಲ, ಆಗಮದಿಂದಲೂ ಎಂಬುದನ್ನು 'ಉನ್ನಿನೀಷತೇ' ಇತ್ಯಾದಿ ವಚನದಿಂದ ಹೇಳುತ್ತಾರೆ. 'ಏಷ ಹ್ಯೇವ ಸಾಧುಕರ್ಮ ಕಾರಯತಿ। ತಂ ಯಮೇಭ್ಯೋ ಲೋಕೇಭ್ಯಃ ಉನ್ನಿನೀಷತೇ' 'ತದಿಚ್ಛಯಾ ಯತೋ ಹ್ಯಸ್ಯ ಬಂದಮೋಕ್ಷೌ ಪ್ರತಿಷ್ಠಿತೌ' ಅಂದರೆ, 'ಈ ಪರಮೇಶ್ವರನೇ ಯಾರನ್ನು ಈ ಲೋಕಗಳಿಂದ ಊರ್ಧ್ವಲೋಕಗಳಿಗೆ ಕಳುಹಿಸಬೇಕೆಂದು ಇಚ್ಛಿಸುತ್ತಾನೋ, ಅವನಿಂದ ಯಥಾರ್ಥ ಜ್ಞಾನಕ್ಕೆ ಸಾಧನವಾದ ಉತ್ತಮ ಕರ್ಮಗಳನ್ನು ಮಾಡಿಸುತ್ತಾನೆ' 'ಅವನ ಇಚ್ಛೆಯಿಂದಲೇ ಜೀವನ ಬಂಧಮೋಕ್ಷಗಳು ಪ್ರತಿಷ್ಠಿತವಾಗಿವೆ' ಇತ್ಯಾದಿ ಆಗಮ ವಾಕ್ಯಗಳಿಂದಲೂ ಈಶ್ವರನ ಪ್ರಸಾದದಿಂದಲೇ ಮೋಕ್ಷವು ಎಂದು ಸಿದ್ಧವಾಗುತ್ತದೆ.

**ಇಚ್ಛಾನಿಮಿತ್ತಕೋ ಯಸ್ಮಾತ್ತದಭಾವೇ ಕುತಃ ಶ್ರುತಿಃ ।।೧೧೦।।**

**ಮಹಾತಾತ್ಪರ್ಯರಹಿತಾ ಪ್ರಮಾಣತ್ವಂ ಗಮಿಷ್ಯತಿ।**

ಪರಮಾತ್ಮನ ಇಚ್ಛೆಯ ನಿಮಿತ್ತವಾಗಿಯೇ ಶ್ರುತಿಗಳು ಮೋಕ್ಷವನ್ನೇ

ಪ್ರಯೋಜನವನ್ನಾಗಿ ಹೊಂದಿವೆ. ಆ ಇಚ್ಛೆಯೇ ಇಲ್ಲದಿದ್ದರೆ ಮಹಾತಾತ್ಪರ್ಯ ರಹಿತವಾಗುವ ಶ್ರುತಿಯು ಹೇಗೆ ಪ್ರಾಮಾಣ್ಯವನ್ನು ಪಡೆಯುತ್ತದೆ? ಆದುದರಿಂದ ಪರಮಾತ್ಮನಿಗೆ ಇಚ್ಛೆಯಿದೆ ಎಂಬುದನ್ನು ಅವಶ್ಯವಾಗಿ ಅಂಗೀಕರಿಸತಕ್ಕದ್ದು.

ಇನ್ನು ಶ್ರುತಿಗಳಿಗೆ ಮೋಕ್ಷಾಖ್ಯ ಪ್ರಯೋಜನವಿರುವುದರಿಂದಲೇ ಪ್ರಾಮಾಣ್ಯವು ಎಂದು ಹೇಳುವುದು ಅಯುಕ್ತವು. ಏಕೆಂದರೆ ಯಾಥಾರ್ಥ್ಯವೇ ಪ್ರಾಮಾಣ್ಯದ ಲಕ್ಷಣವೆಂದು ಹೇಳಲ್ಪಟ್ಟಿದೆ. ಆದ್ದರಿಂದ ಫಲವತ್ವ ಎಂಬುದು ಪ್ರಾಮಾಣ್ಯ ನಿರ್ಧಾರಕವಾಗಲಾರದು. ತೃಣಾದಿಗಳ ದರ್ಶನದಿಂದ ಯಾವುದೇ ಪ್ರಯೋಜನವಿಲ್ಲ ಎಂದರೂ ಅದರಲ್ಲಿ ಪ್ರಾಮಾಣ್ಯವಿದೆ. ಹೀಗೆ ಆಶಂಕಿಸಿದರೆ –

**ಯಾಥಾರ್ಥ್ಯಮೇವ ಮಾನತ್ವಮಪಿ ವಾಕ್ಯಂ ಪ್ರಯೋಜಕಮ್ ॥೧೧೧॥**

**ಮಾನತ್ವಮೇತಿ ತತ್ರಾಪಿ ಯತ್ಸಂಪೂರ್ಣಪ್ರಯೋಜನಮ್।**

ಯಾಥಾರ್ಥ್ಯವೇ ಪ್ರಾಮಾಣ್ಯವು ಎಂಬುದು ಸತ್ಯವೇ. ಆದರೂ ಯಾವ ವಾಕ್ಯವು ಮಹಾಪ್ರಯೋಜನ, ಪ್ರಧಾನವಿಷಯಗಳನ್ನು ಹೊಂದಿರುವುದೋ ಅದು ಪ್ರಾಮಾಣ್ಯವನ್ನು ಹೊಂದುವುದು. ಅವಾಂತರ ವಿಷಯ ಪ್ರಯೋಜನಗಳಿಂದ ವಾಕ್ಯದ ಪ್ರಮಾಣ್ಯವು ಸಂಭವಿಸುವುದಿಲ್ಲ. ಅಂದರೆ, ಯಾವ ವಾಕ್ಯವು ಯಾವ ಮಹಾಪ್ರಯೋಜನವನ್ನು ಉದ್ದೇಶಿಸಿ ಯಾವ ಪ್ರಧಾನ ವಿಷಯವನ್ನು ಪ್ರತಿಪಾದಿಸಲು ಪ್ರವೃತ್ತವಾಗಿದೆಯೋ, ಆ ವಾಕ್ಯಕ್ಕೆ ಆ ವಿಷಯಪ್ರಯೋಜನ ಗಳಿಂದಲೇ ಯುಕ್ತವಾದ ಪ್ರಾಮಾಣ್ಯವನ್ನು ಹೊಂದುತ್ತದೆ. ಇಲ್ಲವಾದರೆ ಅವಾಂತರ ಪ್ರಯೋಜನಾದಿಗಳೂ ಸಿದ್ಧಿಸಲಾರವು. ವೇದವಾಕ್ಯವಾದರೋ ಮೋಕ್ಷವನ್ನು ಉದ್ದೇಶಿಸಿ ಪರಮೇಶ್ವರನಲ್ಲಿ ಮಹಾತಾತ್ಪರ್ಯವುಳ್ಳದ್ದಾಗಿ ಹೇಳಲ್ಪಟ್ಟಿದೆ. ಆದ್ದರಿಂದ ಆ ಪರಮೇಶ್ವರನ ವಿಷಯಕ ಜ್ಞಾನ ಹಾಗೂ ಅದರಿಂದ ಮೋಕ್ಷವೆಂಬ ವಿಷಯ ಪ್ರಯೋಜನಗಳಿಂದಲೇ ಪ್ರಾಮಾಣ್ಯವು ಎಂದು ತಾತ್ಪರ್ಯ.

## ವೈಷಮ್ಯನೈರ್ಘೃಣ್ಯಾಧಿಕರಣಮ್

### ಓಂ ವೈಷಮ್ಯನೈರ್ಘೃಣ್ಯೇ ನ ಸಾಪೇಕ್ಷತ್ವಾತ್ತಥಾ ಹಿ ದರ್ಶಯತಿ ಓಂ

ಪ್ರಾಣಿಗಳಿಗೆ ವಿವಿಧವಾದ ದೇಹೇಂದ್ರಿಯಗಳನ್ನೂ, ವಿಷಯಗಳನ್ನೂ ಹೊಂದಿಸುವ ಈಶ್ವರನು, ಅವುಗಳಿಂದ ಧರ್ಮ ಹಾಗೂ ಅಧರ್ಮ ರೂಪವಾದ ಕರ್ಮಗಳನ್ನು ಮಾಡಿಸಿ ಸುಖ ಹಾಗೂ ದುಃಖ ರೂಪವಾದ ಫಲಗಳನ್ನು ನೀಡುತ್ತಾನೆ ಎಂಬುದು ಪ್ರಮಾಣಗಳಿಂದ ಸಿದ್ಧವಾಗಿದೆ. ಜೀವರ ಕರ್ಮವನ್ನು ಅಪೇಕ್ಷಿಸಿ ಫಲವನ್ನು ನೀಡುವುದಾದರೆ ಈಶ್ವರನ ಸ್ವಾತಂತ್ರ್ಯಕ್ಕೆ ಚ್ಯುತಿ ಬರುವುದು. ಕರ್ಮವನ್ನು ಅಪೇಕ್ಷಿಸದೇ ಫಲವನ್ನು ನೀಡುತ್ತಾನೆ ಎಂದರೆ ನಿಷ್ಕಾರಣವಾಗಿ ಕೆಲವರಿಗೆ ಸುಖವನ್ನೂ ಕೆಲವರಿಗೆ ದುಃಖವನ್ನೂ ಕೊಡುವುದರಿಂದ

ವಿಷಮನಾಗುವನು. ಕಾರಣವಿಲ್ಲದೇ ದುಃಖವನ್ನು ನೀಡಿದರೆ ಅವನು ನಿಷ್ಕರುಣಿ ಎನಿಸುವನು. ಹೀಗೆ ಈಶ್ವರನಿಗೆ ನಮ್ಮಂತೆ ವೈಷಮ್ಯ ಮತ್ತು ನೈರ್ಘೃಣ್ಯಗಳು ಕಂಡುಬರುವುದರಿಂದ ಸರ್ವಕರ್ತೃತ್ವವು ಕೂಡುವುದಿಲ್ಲ. ಹೀಗೆ ಬರುವ ಪೂರ್ವಪಕ್ಷವನ್ನು ಈ ಅಧಿಕರಣದಲ್ಲಿ ನಿರಾಕರಿಸಲಾಗುತ್ತದೆ. ಅದರಲ್ಲಿ ಮೊದಲನೆಯ ಸೂತ್ರದಿಂದ ಈಶ್ವರನಿಗೆ ಕರ್ಮಾದಿ ಸಾಪೇಕ್ಷವಾದ ಕರ್ತೃತ್ವವನ್ನು ಅಂಗೀಕರಿಸಿ, ವೈಷಮ್ಯ ನೈರ್ಘೃಣ್ಯಗಳು ಪರಿಹರಿಸಲ್ಪಟ್ಟಿವೆ. 'ಪುಣ್ಯೇನ ಪುಣ್ಯಂ ಲೋಕಂ ನಯತಿ, ಪಾಪೇನ ಪಾಪಂ' ಎನ್ನುವ ಶ್ರುತಿಯು ವಿಷಮವಾದ ಕರ್ಮದಿಂದ ವಿಷಮವಾದ ಫಲವೆಂದು ಹೇಳುವುದರಿಂದ ಈಶ್ವರನಿಗೆ ಯಾವ ದೋಷವೂ ಬರುವುದಿಲ್ಲ. ಕಾರಣವಿಲ್ಲದೆ ವಿಷಮ ಫಲಕ್ಕೆ ಕಾರಣವಾಗುವ ಕರ್ಮಗಳನ್ನಾದರೂ ಏಕೆ ಮಾಡಿಸಬೇಕು? ಹೀಗೆ ಮಾಡುವುದು ನಿಷ್ಕಾರುಣ್ಯವಲ್ಲವೇ? ಎಂದು ಆಕ್ಷೇಪಿಸಿದರೆ –

'ನ ಕರ್ಮವಿಭಾಗಾದಿತಿ ಚೇನ್ನಾನಾದಿತ್ವಾತ್' ಎನ್ನುವ ಸೂತ್ರದಿಂದ ಕರ್ಮಾದಿಗಳಿಗೆ ಅನಾದಿತ್ವವು ಹೇಳಲ್ಪಟ್ಟಿತು. ವೈಷಮ್ಯಾದಿಗಳು ಇಲ್ಲದಿದ್ದರೂ, ಕರ್ಮವನ್ನು ಅಪೇಕ್ಷಿಸಿಯೇ ಫಲ ನೀಡುವವನಿಗೆ ಸ್ವಾತಂತ್ರ್ಯ ಬರಲಾರದು ಎಂದು ಆಶಂಕಿಸಿದರೆ – ಅದಕ್ಕೆ ಉತ್ತರವಾಗಿ 'ಉಪಪದ್ಯತೇ ಚ' ಎನ್ನುವ ಸೂತ್ರವು ಹೊರಟಿತು. ಕರ್ಮಾದಿಗಳ ಅಸ್ತಿತ್ವ ಮುಂತಾದವೂ ಕೂಡ ಈಶ್ವರನ ಅಧೀನವೆಂದು ಆರಂಭಣಾಧಿಕರಣದಲ್ಲಿ ಸಮರ್ಥಿಸಲಾಗಿದೆ. ತನ್ನ ಅಧೀನದಲ್ಲಿರುವ ಸತ್ತಾದಿಗಳನ್ನು ಅಪೇಕ್ಷಿಸಿದರೆ ಸ್ವಾತಂತ್ರ್ಯಕ್ಕೆ ಚ್ಯುತಿಯಿರುವುದಿಲ್ಲ. ಹಾಗಿದ್ದರೂ ವೈಷಮ್ಯಾದಿ ದೋಷಗಳು ಬರಬೇಕಾಗುತ್ತವೆ ಎಂದು ಆಕ್ಷೇಪಿಸಿದರೆ – ಅದಕ್ಕೆ ಉತ್ತರವಾಗಿ 'ಉಪಲಭ್ಯತೇ ಚ' ಎಂದು ಹೇಳಿದ್ದಾರೆ. ಅಂದರೆ, ಇಂಥಹ ವೈಷಮ್ಯಾದಿಗಳು ಪರಮಾತ್ಮನಲ್ಲಿ ಯಾವುದೇ ದೋಷವಿಲ್ಲದೆ ಕೂಡುತ್ತವೆ. 'ಸ ಕಾರಯೇತ್ಪುಣ್ಯ-ಮಥಾಽಪಿ ಪಾಪಂ ನ ತಾವತಾ ದೋಷವಾನೀಶಿತಾಪಿ' ಇತ್ಯಾದಿ ಪ್ರಮಾಣಗಳಿಂದ ಇದು ಸಿದ್ಧವಾಗಿದೆ. ಆದಕಾರಣ ಇದು ಅನಿಷ್ಟವಲ್ಲ ಎಂದರೆ – ಇದು ಅಯುಕ್ತ ಎಂದು ಪೂರ್ವಪಕ್ಷ. ಏಕೆಂದರೆ ವೈಷಮ್ಯ ನೈರ್ಘೃಣ್ಯಗಳು ನಿಜವಾಗಿಯೂ ದೂಷಣಗಳೋ ಅಲ್ಲವೋ ಎಂದು ಪ್ರಶ್ನೆ. ದೂಷಣವಾಗಿದ್ದರೆ ಕೊನೆಯಲ್ಲಾದರೂ ಅದನ್ನು ಒಪ್ಪುವುದು ಹೇಗೆ? ದೂಷಣವಲ್ಲವೆಂದು ಹೇಳಿದರೆ ಅದನ್ನು ಮೊದಲೇ ಅಂಗೀಕರಿಸಬಹುದಲ್ಲ? ಮೊದಲು ಕರ್ಮಸಾಪೇಕ್ಷತೆಯನ್ನು ಒಪ್ಪಿ, ಅನಂತರ ಅದರಲ್ಲಿನ ದೋಷಗಳನ್ನು ಪರಿಹರಿಸುವ ಕ್ಲೇಷವಾದರೂ ಏಕೆ ಎಂದರೆ –

**ವೈಷಮ್ಯಂ ಚೈವ ನೈರ್ಘೃಣ್ಯಂ ವೇದಾಪ್ರಾಮಾಣ್ಯಕಾರಣಮ್ ।।೧೧೨।।**

**ನಾಂಗೀಕಾರ್ಯಮತೋಽನ್ಯತ್ತು ನ ವೈಷಮ್ಯಾದಿನಾಮಕಮ್।**

ವೇದಗಳ ಅಪ್ರಮಾಣ್ಯಕ್ಕೆ ಕಾರಣವಾಗುವ ವೈಷಮ್ಯ ನೈರ್ಘೃಣ್ಯಗಳನ್ನು

ಈಶ್ವರನಲ್ಲಿ ಅಂಗೀಕರಿಸಕೂಡದು. ಇಂಥಹ ವೈಷಮ್ಯಾದಿಗಳಿಂದ ಬೇರೆಯಾದುದು ವೈಷಮ್ಯಾದಿಗಳೇ ಅಲ್ಲ ಹಾಗೂ ದೂಷಣವಾಗುವುದೂ ಇಲ್ಲ.

**ವಿವರಣೆ:** ವೈಷಮ್ಯ ನೈರ್ಘೃಣ್ಯಗಳಲ್ಲಿ ಎರಡು ವಿಧ. ಕರ್ಮಾದಿಗಳನ್ನು ಅಪೇಕ್ಷಿಸದೇ ಬರುವಂಥಹದು ಒಂದು ವಿಧ. ಕರ್ಮಾದಿಗಳನ್ನು ಅಪೇಕ್ಷಿಸಿಯೂ ಅವುಗಳ ಅಸ್ತಿತ್ವ ಮುಂತಾದವು ಈಶ್ವರನ ಅಧೀನವಾದ್ದರಿಂದ ಬರುವಂಥಹದು ಇನ್ನೊಂದು ವಿಧ. ಇವುಗಳಲ್ಲಿ ಮೊದಲನೆಯದು ವೇದಗಳ ಅಪ್ರಾಮಾಣ್ಯಕ್ಕೆ ಕಾರಣವಾಗುವುದರಿಂದ ಈಶ್ವರನಲ್ಲಿ ಇಂಥಹ ವೈಷಮ್ಯವನ್ನು ಅಂಗೀಕರಿಸುವುದು ಉಚಿತವಲ್ಲ. ಕರ್ಮಾದಿಗಳ ಸತ್ತಾದಿಗಳಿಗೂ ಈಶ್ವರಾಧೀನತ್ವವಿದ್ದ ಪ್ರಯುಕ್ತ ಕರ್ಮಾದಿ ಸಾಪೇಕ್ಷತ್ವ ರೂಪ ವೈಷಮ್ಯ ನೈರ್ಘೃಣ್ಯಗಳೂ ಕೂಡ ವೈಷಮ್ಯಾದಿ ನಾಮವುಳ್ಳದ್ದಲ್ಲ. ಆದ್ದರಿಂದ ಅವು ದೂಷಣವೇ ಆಗುವುದಿಲ್ಲ. ವೈಷಮ್ಯಾದಿಗಳು ಸ್ವರೂಪತಃ ದೋಷಗಳೇ ಅಲ್ಲ. ಆದರೆ ದೋಷದ ಕಾರಣಗಳಾದುದರಿಂದ ದೋಷವೆನಿಸುತ್ತವೆ. ಪರಾಧೀನರಾದ ಜೀವರಲ್ಲಿ ದೋಷಕ್ಕೆ ಕಾರಣವಾಗುವ ಇವು ಸ್ವತಂತ್ರನಾದ ಪರಮಾತ್ಮನ ವಿಷಯದಲ್ಲಿ ದೋಷಕ್ಕೆ ಕಾರಣವಾಗುವುದೇ ಇಲ್ಲ.

## ಸರ್ವಧರ್ಮೋಪಪತ್ತ್ಯಧಿಕರಣಮ್

**ಸೂತ್ರ: ಓಂ ಸರ್ವಧರ್ಮೋಪಪತ್ತೇಶ್ಚ ಓಂ**

ಸೂತ್ರಾರ್ಥ: ಈಶ್ವರನಲ್ಲಿ ಜ್ಞಾನ ಆನಂದ ಮುಂತಾದ ಎಲ್ಲ ಸದ್ಗುಣಗಳಿಗೂ, ದುಃಖ ಮುಂತಾದ ದೋಷಾಭಾವಗಳಿಗೂ ಉಪಪತ್ತಿಯಿರುವುದರಿಂದ ಈಶ್ವರನು ಸಮಸ್ತ ಕಲ್ಯಾಣಗುಣಗಳಿಂದ ಪೂರ್ಣನೆಂದೂ ಸಮಸ್ತ ದೋಷದೂರನೆಂದೂ ಸಿದ್ಧವಾಗುವುದು.

ಎಲ್ಲ ಚೇತನಗಳೂ ಅಪೂರ್ಣವಾದ ಗುಣ ಹಾಗೂ ದೋಷಗಳಿಂದ ಕೂಡಿರುವುದಾಗಿ ಕಂಡಿದೆ. ಅದೇ ರೀತಿ ಚೇತನತ್ವವಿರುವುದರಿಂದ ಈಶ್ವರನೂ ಅಪೂರ್ಣಗುಣವುಳ್ಳವನೂ ದೋಷಿಯೂ ಆಗಲಿ ಎಂಬ ಪೂರ್ವಪಕ್ಷವನ್ನು ಈ ಅಧಿಕರಣದಲ್ಲಿ ನಿರಾಕರಿಸುತ್ತಾರೆ. ಇದನ್ನು ಭಾಷ್ಯದಲ್ಲಿ ಶ್ರುತಿಯನ್ನು ಉದಾಹರಿಸುವ ಮೂಲಕ ನಿರಾಕರಿಸಿದ್ದಾರೆ. ಅದನ್ನೇ ಯುಕ್ತಿಯಿಂದ ಇಲ್ಲಿ ಸ್ಪಷ್ಟಪಡಿಸುತ್ತಾರೆ –

**ಯದಧೀನತಾ ಗುಣಾಶ್ಚೈವ ದೋಷಾ ಅಪಿ ಹಿ ಸರ್ವಶಃ ||೧೧೩||**

**ಗುಣಾಸ್ತಸ್ಯ ಕಥಂ ನ ಸ್ಯುಃ ಸರ್ವದೋಷಾಶ್ಚ ಕಥಂ ಪುನಃ|**

ಸಮಸ್ತಗಳಾದ ಗುಣಗಳೂ ದೋಷಗಳೂ ಕೂಡ ಶ್ರೀಹರಿಯ ಅಧೀನಗಳೇ ಎಂಬುದಾಗಿ ಶ್ರುತಿಗಳಿಂದ ಸಿದ್ಧವಾಗಿದೆ. ಆದ್ದರಿಂದ ಶ್ರೀಹರಿಗೆ ಜ್ಞಾನಾನಂದಾದಿ ಗುಣಗಳು ಇದ್ದೇ ಇರುತ್ತವೆ ಮತ್ತು ದೋಷಾದಿಗಳು ಇರುವುದೇ ಇಲ್ಲವು.

**ಸರ್ವಧರ್ಮೋಪಪತ್ತೇಸ್ತದ್ವಾಕ್ಯೈರಪಿ ಹಿ ತಾದೃಶೈಃ ।।೧೧೪।।**

**ನಿರ್ದೋಷಾಶೇಷಗುಣಕೋ ನಿರ್ಣೀತೋ ಭಗವಾನ್ ಹರಿಃ।**

ಸರ್ವಧರ್ಮ ಪ್ರತಿಪಾದಕ ಯುಕ್ತಿಯಿರುವುದರಿಂದಲೂ, ಗುಣಪೂರ್ಣತ್ವ ಹಾಗೂ ದೋಷದೂರತ್ವ ಪ್ರತಿಪಾದಕ ವಾಕ್ಯಗಳಿರುವುದರಿಂದಲೂ ಭಗವಾನ್ ಶ್ರೀಹರಿಯು ನಿರ್ದೋಷನೆಂದೂ ಸಮಸ್ತಗುಣಪೂರ್ಣನೆಂದೂ ಸಿದ್ಧವಾಗುವುದು. ಇಲ್ಲಿ 'ಹಿ' ಶಬ್ದವು 'ಗುಣಾಃ ಶ್ರುತಾಃ ಸುವಿರುದ್ಧಾಶ್ಚ ದೇವೇ ಸಂತ್ಯಶ್ರುತಾಃ ಅಪಿ ನೈವಾತ್ರ ಶಂಕಾ' ಇತ್ಯಾದಿ ಶ್ರುತಿ ವಾಕ್ಯವನ್ನು ಸೂಚಿಸುತ್ತದೆ.

**ವಿವರಣೆ:** ಈಶ್ವರನು ಸಕಲಗುಣಪರಿಪೂರ್ಣ ಹಾಗೂ ಸಮಸ್ತದೋಷದೂರ ಎಂಬುದನ್ನು ಮುಂದೆ ಹೇಳಿರುವ ಯುಕ್ತಿಗಳಿಂದ ತಿಳಿಯಬಹುದು. ನಮಗೆ ಬೇಕೆನಿಸಿದ ವಸ್ತುವು ದೊರೆಯದಿರಲು ಎರಡು ಕಾರಣಗಳಿವೆ. ಅದರಲ್ಲಿ ಸ್ವಾತಂತ್ರ್ಯವಿಲ್ಲದಿರುವುದು ಹಾಗೂ ಅದನ್ನು ಪಡೆಯುವ ಇಚ್ಛೆಯಿಲ್ಲದಿರುವುದು. ಅದೇರೀತಿಯಲ್ಲಿ ಎರಡು ಕಾರಣಗಳಿಂದ ವಸ್ತುವನ್ನು ಬಿಡಲಿಕ್ಕೆ ಆಗುವುದಿಲ್ಲ. ಬಿಡಲು ಸ್ವಾತಂತ್ರ್ಯವಗಲೀ ಇಚ್ಛೆಯಾಗಲೀ ಇಲ್ಲದಿರುವುದು. ಈಶ್ವರನಿಗಾದರೋ ಸರ್ವತ್ರ ಸ್ವಾತಂತ್ರ್ಯವು ಇರುತ್ತದೆ ಮತ್ತು ಸರ್ವದಾ ಆನಂದಾದಿ ಗುಣಗಳನ್ನು ಹೊಂದಿರಬೇಕೆಂಬ ಹಾಗೂ ದುಃಖಾದಿ ದೋಷಗಳು ಇರಬಾರದೆಂಬ ಇಚ್ಛೆಯೂ ಇರುತ್ತದೆ. ಏಕೆಂದರೆ ಅವನು ಸರ್ವಜ್ಞನಾಗಿದ್ದಾನೆ. ಆದ್ದರಿಂದ ಈಶ್ವರನಿಗೆ ಸಕಲಗುಣಪೂರ್ಣತ್ವವೂ ಸಮಸ್ತ ದೋಷದೂರತ್ವವೂ ಹೇಗೆ ಸಂಭವಿಸಲಾರದು? ಇಲ್ಲಿ ಈ ಯುಕ್ತಿಗಳಿವೆ. ಈಶ್ವರನು ಸಕಲಗುಣಪೂರ್ಣನೂ ಸಕಲದೋಷದೂರನೂ ಆಗಿರುವನು, ಸ್ವತಂತ್ರನಾದ ಪ್ರಯುಕ್ತ. ಈಶ್ವರನು ಪೂರ್ಣ ಗುಣವುಳ್ಳವನು, ಪೂರ್ಣ ಜ್ಞಾನವುಳ್ಳವನು, ಪೂರ್ಣ ಸುಖವುಳ್ಳವನು, ಅದರಲ್ಲಿ ಇಚ್ಛೆಯಿದ್ದು ಸ್ವತಂತ್ರನಾಗಿರುವ ಪ್ರಯುಕ್ತ. ಯಾವನು ಯಾವುದರಲ್ಲಿ ಇಚ್ಛೆಯುಳ್ಳವನಾಗಿದ್ದು ಸ್ವತಂತ್ರನಿರುತ್ತಾನೋ ಅವನು ಅದನ್ನುಳ್ಳವನು. ಈಶ್ವರನು ವಿವಾದಾಸ್ಪದವಾದ ದೋಷವುಳ್ಳವನಲ್ಲ, ಅದನ್ನು ಬಿಡುವ ಇಚ್ಛೆಯುಳ್ಳವನು ಹಾಗೂ ಸ್ವತಂತ್ರನಾಗಿರುವ ಪ್ರಯುಕ್ತ. ಈ ಪ್ರಕಾರವಾಗಿ ಸರ್ವಧರ್ಮಗಳ, ಅಂದರೆ ಎಲ್ಲ ಗುಣಗಳ ಹಾಗೂ ದೋಷಾಭಾವಗಳ ಪ್ರತಿಪಾದಕಯುಕ್ತಿಯಿರುವುದರಿಂದಲೂ, ಸಕಲಗುಣಪೂರ್ಣತ್ವ ಪ್ರತಿಪಾದಕವಾಕ್ಯಗಳು ಇರುವುದರಿಂದಲೂ ಭಗವಾನ್ ಶ್ರೀಹರಿಯು ನಿರ್ದೋಷಗಳಾದ ಅಶೇಷಗುಣಗಳಿಂದ ಕೂಡಿರುವನೆಂದು ಸಿದ್ಧವಾಗುವುದು.

।। ಇತಿ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯ ವಿರಚಿತೇ

ಶ್ರೀಮದನುವ್ಯಾಖ್ಯಾನೇ ದ್ವಿತೀಯಾಧ್ಯಾಯಸ್ಯ ಪ್ರಥಮಃ ಪಾದಃ ।।

।। ಇಲ್ಲಿಗೆ ಶ್ರೀಮದನಾಂದತೀರ್ಥಭಗವತ್ಪಾದಾಚಾರ್ಯವಿರಚಿತ ಶ್ರೀಮದನುವ್ಯಾಖ್ಯಾನದ ಎರಡನೆಯ ಅಧ್ಯಾಯದ ಮೊದಲನೆಯ ಪಾದದ ಕನ್ನಡ ಅನುವಾದವು ಮುಗಿದುದು ।।

# ಎರಡನೆಯ ಅಧ್ಯಾಯ
# ಎರಡನೆಯ ಪಾದ

ಜಗಜ್ಜನ್ಮಾದಿ ಕಾರಣನೂ ಸಕಲಗುಣಪೂರ್ಣನೂ ಸಮಸ್ತದೋಷದೂರನೂ ಆದ ಪರಬ್ರಹ್ಮನಾದ ವಿಷ್ಣುವಿನಲ್ಲಿ ಎಲ್ಲ ಶ್ರುತಿಗಳಿಗೆ ಸಮನ್ವಯವನ್ನು ಮೊದಲನೆಯ ಅಧ್ಯಾಯದಲ್ಲಿ ಪ್ರತಿಪಾದಿಸಲಾಯಿತು. ಶ್ರುತಿಸಮನ್ವಯಕ್ಕೆ ಪರರಿಂದ ಮಾಡಲ್ಪಟ್ಟ ನಾಲ್ಕು ರೀತಿಯ ವಿರೋಧವನ್ನು ಮೊದಲನೆಯ ಪಾದದಲ್ಲಿ ಕ್ರಮದಿಂದ ನಿರಾಕರಿಸಿದರು. ಸಾಂಖ್ಯಾದಿ ಶಾಸ್ತ್ರಗಳ ವಿರೋಧವನ್ನು ಈ ಎರಡನೆಯ ಪಾದದಲ್ಲಿ ನಿರಾಕರಿಸುತ್ತಾರೆ.

**ಸ್ಮೃತಿಯುಕ್ತಿಶ್ರುತಿಗುಣಯುಕ್ತಯೋ ಬಹುಯುಕ್ತಯಃ ।**

**ಏವಂ ಚತುರ್ವಿಧಾ ನೈವ ವಿರುಧ್ಯಂತೇಽನ್ವಯಂ ಪ್ರತಿ ॥೧॥**

**ಇತಿ ಪ್ರಥಮಪಾದೇನ ನಿರ್ಣೀತೇಽಪ್ಯಭಿಯೋಗತಃ ।**

**ದರ್ಶನಾನಾಂ ಪ್ರವೃತ್ತತ್ವಾನ್ಮಂದ ಆಶಂಕತೇ ಪುನಃ ॥೨॥**

ಸ್ಮೃತಿ, ಯುಕ್ತಿ, ಶ್ರುತ್ಯುಪಸರ್ಜನ ಯುಕ್ತಿಗಳು, ಬಹುಯುಕ್ತಿಗಳು, ಹೀಗೆ ನಾಲ್ಕು ವಿಧವಾದ ವಿರೋಧಗಳು ಶ್ರುತಿಸಮನ್ವಯದಿಂದ ಸಿದ್ಧವಾದ ಅರ್ಥವನ್ನು ವ್ಯತ್ಯಸ್ತಗೊಳಿಸಲು ಸಮರ್ಥವಾಗುವುದಿಲ್ಲ. ಹೀಗೆ ಪ್ರಥಮಪಾದದಿಂದ ನಿರ್ಣಯಿಸಲ್ಪಟ್ಟಿದ್ದರೂ, ಸಾಂಖ್ಯಾದಿ ದರ್ಶನಗಳು ಆಗ್ರಹದಿಂದ ಪ್ರವೃತ್ತವಾದುದರಿಂದ, ಅಜ್ಞರಿಗೆ ಸಮನ್ವಯದ ವಿಷಯದಲ್ಲಿ ಪುನಃ ಶಂಕೆಯು ಬರುತ್ತದೆ.

ಇನ್ನು ಶ್ರುತಿಗಳಾದರೋ ಅಪೌರುಷೇಯವಾದ್ದರಿಂದ ಅವುಗಳಲ್ಲಿ ದೋಷ ಶಂಕೆಗೆ ಅವಕಾಶವಿಲ್ಲ. ಅವು ಪ್ರಬಲಯುಕ್ತಿಗಳಿಂದ ಉಪಪಾದಿತವಾದ ಅರ್ಥದಿಂದ ಕೂಡಿವೆ ಹಾಗೂ ಸಮಸ್ತ ಪ್ರತಿಪಕ್ಷಗಳ ನಿರಾಸೆಯಿಂದ ದೃಢೀಕರಿಸಲ್ಪಟ್ಟಿವೆ. ಹೀಗೆ ನಿಶ್ಚಿತವಾದ ಶ್ರುತಿಗಳಿಂದ ಸಮನ್ವಯವನ್ನು ಸಾಧಿಸಿದ ಮೇಲೆ ಸಾಂಖ್ಯಾದಿ ಶಾಸ್ತ್ರಗಳ ಆಗ್ರಹದಿಂದ ಪುನಃ ಶಂಕೆಯು ಬರುವುದು ಹೇಗೆ ಸಾಧ್ಯ? ಹೀಗೆ ಪ್ರಮಾಣದಿಂದ ನಿರ್ಣಯಿಸಲ್ಪಟ್ಟಿದ್ದರೂ ಸಂಶಯ ಬರುವುದಾದರೆ ಯಾವ ವಿಷಯದಲ್ಲಿಯೂ ಇದಮಿತ್ಥಂ ಎನ್ನುವ ನಿರ್ಣಯವಾಗುವುದೇ ಸಾಧ್ಯವಿಲ್ಲ. ಹೀಗೆ ಆಕ್ಷೇಪವು ಬಂದರೆ ಅದರ ನಿವಾರಣೆಗಾಗಿಯೇ 'ಮಂದಃ ಆಶಂಕತೇ' ಕೇವಲ ಅಜ್ಞನು ಹೀಗೆ ಶಂಕೆ

ಪಡುತ್ತಾನೆ ಎಂಬುದಾಗಿ ಹೇಳಿದ್ದಾರೆ ಎಂದರೆ ಅದು ಸಮಂಜಸವಾಗದು. ಏಕೆಂದರೆ ಕಾರಣವನ್ನು ಆಲೋಚಿಸದೆ ಶಂಕಿಸುವ ಪುರುಷನಿಗೆ ಶಾಸ್ತ್ರದಲ್ಲಿ ಅಧಿಕಾರವೇ ಇರುವುದಿಲ್ಲ. ಆದ್ದರಿಂದ 'ಆಗ್ರಹದಿಂದ ಸಾಂಖ್ಯಾದಿ ಶಾಸ್ತ್ರಗಳು ಪ್ರವೃತ್ತವಾಗಿವೆ' ಎಂದು ಹೇಳಿದ ಶಂಕಾಕಾರಣವನ್ನು 'ಅನಾದಿ' ಇತ್ಯಾದಿ ವಚನದಿಂದ ವಿವರಿಸುತ್ತಾರೆ –

**ಅನಾದಿಕಾಲತೋ ವೃತ್ತಾಃ ಸಮಯಾ ಹಿ ಪ್ರವಾಹತಃ ।**

**ನ ಚೋಚ್ಛೇದೋಸ್ತಿ ಕಸ್ಯಾಪಿ ಸಮಸ್ಯೇತ್ಯತೋ ವಿಭುಃ ॥೩॥**

ಸಂಖ್ಯಾದಿ ಶಾಸ್ತ್ರಗಳು ಪ್ರವಾಹ ರೂಪದಿಂದ ಅನಾದಿಕಾಲದಿಂದ ಇರತಕ್ಕವುಗಳೇ ಆಗಿವೆ. ಯಾವುದೊಂದು ಸಮಯಕ್ಕೂ ಸಹ ನಾಶವೆಂಬುದು ಇರುವುದಿಲ್ಲ. ಈ ಕಾರಣದಿಂದ ಮಂದನು ಶಂಕಿಸುತ್ತಾನೆ.

**ಭ್ರಾಂತಿಮೂಲತ್ವಮೇತೇಷಾಂ ಪೃಥಗ್ದರ್ಶಯತಿ ಸ್ಫುಟಮ್ ।**

**ತರ್ಕೈರ್ದೃಢತಮೈರೇವ ವಾಕ್ಯೈಶ್ಚಾಗಮವಾದಿನಾಮ್ ॥೪॥**

ಆದ್ದರಿಂದಲೇ ಭಗವಾನ್ ವೇದವ್ಯಾಸರು, ಈ ಸಾಂಖ್ಯಾದಿ ಸಮಯಗಳು ಭ್ರಾಂತಿ ಮೂಲಕವಾದವುಗಳು ಎಂಬುದನ್ನು ವಿಸ್ತಾರವಾಗಿ ಅತ್ಯಂತ ದೃಢವಾದ (ಪರರಿಂದ ಅಬಾಧ್ಯವಾದ) ಯುಕ್ತಿಗಳಿಂದಲೂ ಹಾಗೂ ಆಗಮ ಪ್ರಮಾಣ್ಯವನ್ನು ಒಪ್ಪುವ ವಾದಿಗಳನ್ನು ಕುರಿತು ಪ್ರಬಲವಾದ ಆಗಮವಾಕ್ಯಗಳಿಂದಲೂ ಸ್ಪಷ್ಟವಾಗಿ ತೋರಿಸುತ್ತಾರೆ.

ಹಾಗಾದರೆ ಅನಾದ್ಯನಂತ ಕಾಲದಿಂದ ನಾಶವಿಲ್ಲದ ಒಂದೇ ರೀತಿಯ ಪ್ರವೃತ್ತಿಯು ವೇದಾದಿ ಆಗಮಗಳಿಗೆ ಅಂಗೀಕರಿಸಲ್ಪಟ್ಟಿದೆ. ಆದರೆ ಅವು ಭ್ರಾಂತಿಮೂಲಕಗಳಲ್ಲ. ಅನಾದ್ಯನಂತಕಾಲದಿಂದ ಚಾಲ್ತಿಯಲ್ಲಿರುವ ಸಾಂಖ್ಯಾದಿ ಸಮಯಗಳಿಗೂ ಸಮಾನ ನ್ಯಾಯದಿಂದ ಭ್ರಾಂತಿಮೂಲಕತ್ವವು ನಿರಾಕರಿಸಲ್ಪಡುತ್ತದೆ. ಹೀಗೆ ಆಶಂಕಿಸಿದರೆ –

**ದೌರ್ಲಭ್ಯಾಚ್ಛುದ್ಧಬುದ್ಧೀನಾಂ ಬಾಹುಲ್ಯಾದಲ್ಪವೇದಿನಾಮ್ ।**

**ತಾಮಸತ್ವಾಚ್ಚ ಲೋಕಸ್ಯ ಮಿಥ್ಯಾಜ್ಞಾನಪ್ರಸಕ್ತಿತಃ ॥೫॥**

**ವಿದ್ವೇಷಾತ್ಪರಮೇ ತತ್ತ್ವೇ ತತ್ತ್ವವೇದಿಷು ಚಾನಿಶಮ್ ।**

**ಅನಾದಿವಾಸನಾಯೋಗಾದಸುರಾಣಾಂ ಬಹುತ್ವತಃ ॥೬॥**

**ದುರಾಗ್ರಹಗೃಹೀತತ್ವಾದ್ವರ್ತಂತೇ ಸಮಯಾಃ ಸದಾ ।**

ನಿರ್ಮಲವಾದ ಅಂತಃಕರಣವುಳ್ಳ ಸಜ್ಜನರು ವಿರಳ. ಭ್ರಮದ ಅಧಿಷ್ಠಾನ ಸ್ವರೂಪವನ್ನಷ್ಟೇ ತಿಳಿದಿರುವ ಸಮಯಪ್ರವರ್ತಕರೇ ಬಹಳ. ರಾಜರು ಮುಂತಾದವರಲ್ಲಿ ತಮೋಗುಣದ್ದೇ ಪ್ರಾಧಾನ್ಯ. ಆದ್ದರಿಂದ ಕುಪಂಡಿತರುಗಳಿಂದ ಮಿಥ್ಯಾಜ್ಞಾನದ ಪ್ರಸಕ್ತಿ. ಸರ್ವೋತ್ತಮನಾದ ಶ್ರೀಹರಿಯಲ್ಲಿ ಹಾಗೂ ಅವನಲ್ಲಿ ಶ್ರದ್ಧೆಯುಳ್ಳ ತತ್ವಜ್ಞಾನಿಗಳಲ್ಲಿ ಮಿಥ್ಯಾಜ್ಞಾನಿಗಳಿಗಿರುವ ನಿರಂತರವಾದ ದ್ವೇಷ. ಅನಾದಿಯಾದ ಅಯೋಗ್ಯವಾದ ಸಂಸ್ಕಾರದ ಸಂಬಂಧದಿಂದ ವಿಪರೀತವಾದ ಪ್ರಯತ್ನಾದಿಗಳಲ್ಲಿ ಪ್ರಚೋದಿಸುವ ಬುದ್ಧ್ಯಾದಿಗಳಿಗೆ ಅಭಿಮಾನಿಗಳಾದ ಅಸುರರ ಆಧಿಕ್ಯ. ದುರಾಗ್ರಹಗ್ರಸ್ತರಾದ ಮತಪ್ರವರ್ತಕರು. ಆದಪ್ರಯುಕ್ತ ಯಾವಾಗಲೂ ಸಮಯಗಳು ಇದ್ದೇ ಇರುತ್ತವೆ.

ಹಾಗಾದರೆ ಸುದೃಢವಾದ ಈ ಮತಗಳನ್ನು ನಿಃಶೇಷವಾಗಿ ನಿರಾಕರಿಸುವುದು ಅಶಕ್ಯವಾದ್ದರಿಂದ, ಈ ನಿರಾಕರಣೆಯು ವ್ಯರ್ಥವೆಂದರೆ –

**ತಥಾऽಪಿ ಶುದ್ಧಬುದ್ಧೀನಾಮೀಶಾನುಗ್ರಹಯೋಗಿನಾಮ್ ।।೭।।**

**ಸುಯುಕ್ತಯಸ್ತಮೋ ಹನ್ಯುರಾಗಮಾನುಗತಾಃ ಸದಾ ।**

**ಇತಿ ವಿದ್ಯಾಪತಿಃ ಸಮ್ಯಕ್ಸಮಯಾನಾಂ ನಿರಾಕೃತಿಮ್ ।।೮।।**

**ಚಕಾರ ನಿಜಭಕ್ತಾನಾಂ ಬುದ್ಧಿಶಾಣತ್ವಸಿದ್ಧಯೇ ।**

ಹಾಗಿದ್ದರೂ ನಿರ್ಮಲವಾದ ಅಂತಃಕರಣವುಳ್ಳ ಹಾಗೂ ಪರಮಾತ್ಮನ ಅನುಗ್ರಹಕ್ಕೆ ಪಾತ್ರರಾದ ಸಜ್ಜನರಿಗೆ, ಆಗಮ ಮೊದಲಾದ ಪ್ರಮಾಣಗಳಿಂದ ಗೃಹೀತವಾದ ವ್ಯಾಪ್ತ್ಯಾದಿಗಳುಳ್ಳ, ಸುಯುಕ್ತಿಗಳು ಅಜ್ಞಾನವನ್ನು ಯಾವಾಗಲೂ ನಾಶಮಾಡಲಿ ಎಂಬ ಕಾರಣದಿಂದ ವೇದವ್ಯಾಸರು ದೃಢವಾದ ಯುಕ್ತಿಗಳಿಂದ ಹಾಗೂ ವಾಕ್ಯಗಳಿಂದ ಸಮಯಗಳ ನಿರಾಕರಣೆಯನ್ನು ಚೆನ್ನಾಗಿಯೇ ಮಾಡಿದ್ದಾರೆ. ಅಲ್ಲದೆ ಎಂದಿಗೂ ದುರ್ಮತಗಳಿಂದ ಪ್ರಭಾವಿತರಾಗದ ತಮ್ಮ ನಿಜಭಕ್ತರಾದ ಬ್ರಹ್ಮಾದಿಗಳ ಬುದ್ಧಿಶಾಣತ್ವ ಸಿದ್ಧಿಗಾಗಿ ಇಲ್ಲಿ ಸಮಯಗಳ ನಿರಾಕರಣೆ ಮಾಡಿದ್ದಾರೆ. ಸಜ್ಜನರಿಗೆ ಅಜ್ಞಾನನಿರಸನ ರೂಪವಾದ ಪ್ರಯೋಜನವೂ, ಅಜ್ಞಾನದ ಪ್ರಸಕ್ತಿಯೇ ಇಲ್ಲದ ಬ್ರಹ್ಮಾದಿಗಳಿಗೆ ಬುದ್ಧಿಶಾಣತ್ವರೂಪ ಪ್ರಯೋಜನವೂ ಇರುವುದರಿಂದ ವೇದವ್ಯಾಸರು ಇಲ್ಲಿ ಮಾಡಿರುವ ಸಮಯಗಳ ನಿರಾಕರಣೆಯು ವ್ಯರ್ಥವಲ್ಲ.

## ರಚನಾನುಪಪತ್ತ್ಯಧಿಕರಣಮ್

### ಓಂ ರಚನಾನುಪಪತ್ತೇಶ್ಚ ನಾನುಮಾನಮ್ ಓಂ

ಮೊದಲನೆಯದಾದ ಈ ಅಧಿಕರಣದಲ್ಲಿ ನಿರೀಶ್ವರ ಸಾಂಖ್ಯಮತವನ್ನು ನಿರಾಕರಿಸುತ್ತಾರೆ. ಮೊದಲು ಈ ಮತದ ಸ್ವರೂಪವನ್ನು ತಿಳಿಸುತ್ತಾರೆ –

**ಚೇತನಾಚೇತನಂ ತತ್ತ್ವದ್ವಯಮೇವ ನಿರೀಶ್ವರಾಃ ॥೯॥**

**ಆಹುಸ್ತತ್ಪಂಚಪಂಚತ್ವವಿಭಾಗಸ್ಥಮಚೇತನಮ್ ।**

**ಚೇತನಂ ತದಸಂಖ್ಯಾತಂ ಭಿನ್ನಮನ್ಯದ್ಭಿದೋಜ್ಝಿತಮ್ ॥೧೦॥**

ನಿರೀಶ್ವರಾಃ ಎಂದರೆ ಈಶ್ವರನನ್ನು ಅಂಗೀಕರಿಸದೆ ಇರುವ ಸಾಂಖ್ಯರು. ಅವರು ಕೇವಲ ಚೇತನ ಮತ್ತು ಅಚೇತನ ಎಂಬುದಾಗಿ ಎರಡೇ ತತ್ವಗಳು ಇರುವುದೆಂದೂ ಅದರಲ್ಲಿ ಅಚೇತನ ತತ್ವವು ಇಪ್ಪತ್ತೈದು ವಿಭಾಗಗಳಿಂದ ಕೂಡಿದೆಯೆಂದೂ ಹೇಳುತ್ತಾರೆ. ಚೇತನ ಮತ್ತು ಅಚೇತನಗಳೆಂಬ ಈ ಎರಡು ತತ್ವಗಳೂ ಅಸಂಖ್ಯಾತವಾಗಿವೆ. ಚೇತನಗಳು ಪರಸ್ಪರ ಭಿನ್ನವಾಗಿದ್ದರೂ ಅಚೇತನಗಳಲ್ಲಿ ಪರಸ್ಪರ ಭೇದವಿಲ್ಲ ಎಂಬುದಾಗಿಯೂ ಹೇಳುತ್ತಾರೆ.

ಇನ್ನು ಈಶ್ವರನನ್ನು ಅಂಗೀಕರಿಸದಿದ್ದರೆ ಯಾರಿಗೂ ಪ್ರವೃತ್ತಿಯೇ ಕೂಡಲಾರದು. ಸೃಷ್ಟ್ಯಾದಿಗಳೂ ಸಂಭವಿಸುವುದಿಲ್ಲ. ಅಚೇತನವು ಚೇತನದಿಂದ ಅಧಿಷ್ಠಿತವಾಗದೆ ಎಲ್ಲಿಯೂ ಪ್ರವೃತ್ತಿಯುಳ್ಳದ್ದಾಗಿ ಕಂಡಿಲ್ಲ. ಆದ್ದರಿಂದ ಪ್ರಧಾನಕ್ಕೆ ಒಂದು ಅಧಿಷ್ಠಾತೃವೆನಿಸಿದ ಈಶ್ವರನಿರಬೇಕು. ಆದಕಾರಣ ಈಶ್ವರನೆಂಬ ಮೂರನೆಯ ತತ್ವವನ್ನು ಹೇಗೆ ಅಂಗೀಕರಿಸುವುದಿಲ್ಲ ಎಂದು ಆಶಂಕಿಸಿದರೆ –

**ಅಚೇತನಸ್ಯ ಕರ್ತೃತ್ವಂ ಸ್ವಾತಂತ್ರ್ಯೇಣ ನಿಗದ್ಯತೇ ।**

ಅಚೇತನಕ್ಕೆ ಅಂದರೆ ಪ್ರಧಾನ ಅಥವಾ ಜಡಪ್ರಕೃತಿಗೆ ಸ್ವತಂತ್ರವಾದ ಕರ್ತೃತ್ವವು ಇರುವುದಾಗಿ ಸಾಂಖ್ಯರಿಂದ ಹೇಳಲ್ಪಡುತ್ತದೆ. ಸ್ವಾತಂತ್ರ್ಯೇಣ ಎಂದರೆ ಚೇತನಾಧಿಷ್ಠಾನವಿಲ್ಲದೆ ಎಂದರ್ಥ. ಕರ್ತೃತ್ವವು ಅಚೇತನಕ್ಕೆ ಮಾತ್ರ, ಚೇತನಕ್ಕಿಲ್ಲ ಎಂದು ತಾತ್ಪರ್ಯ.

ಇದನ್ನೇ 'ವತ್ಸವಿವೃದ್ಧಿನಿಮಿತ್ತಂ ಕ್ಷೀರಸ್ಯ ಯಥಾ ಪ್ರವೃತ್ತಿರಜ್ಞಸ್ಯ। ಪುರುಷಸ್ಯ ವಿಮೋಕ್ಷನಿಮಿತ್ತಂ ತಥಾ ಪ್ರವೃತ್ತಿಃ ಪ್ರಧಾನಸ್ಯ॥' ಎಂಬುದಾಗಿ ಸಾಂಖ್ಯ ಕಾರಿಕೆಯಲ್ಲಿ ಹೇಳಲಾಗಿದೆ. 'ಅಚೇತನವಾದ ಹಾಲಿಗೆ ಕರುವಿನ ಬೆಳವಣಿಗೆಗಾಗಿ ಪ್ರವೃತ್ತಿಯು ಹೇಗೆ ಆಗುತ್ತದೋ ಹಾಗೆಯೇ ಪುರುಷನ ವಿಮೋಚನೆಯೆಂಬ ಪ್ರಯೋಜನಕ್ಕಾಗಿ ಅಚೇತನವಾದ ಪ್ರಧಾನಕ್ಕೆ ಪ್ರವೃತ್ತಿಯು ಆಗುತ್ತದೆ' ಹೀಗೆ ಈ ಕಾರಿಕೆಯ ಅರ್ಥ.

ಅಚೇತನದ ವಿಷಯದಲ್ಲಿ 'ಅನ್ಯದ್ ಭಿದೋಜ್ಝಿತಂ' ಪರಸ್ಪರ ಭೇದವಿಲ್ಲ ಎಂದು ಹೇಳಲಾಯಿತು. ಇದು ಸರಿಯಲ್ಲ. ಏಕೆಂದರೆ ಅಚೇತನಗಳಿಗೂ ಚೇತನಗಳ ಹಾಗೆ ಪರಸ್ಪರ ಭೇದವಿರುವುದು ಪ್ರತ್ಯಕ್ಷಸಿದ್ಧವಾಗಿದೆ. ಹೀಗೆ ಆಶಂಕಿಸಿದರೆ –

**ಪರಸ್ಪರವಿಭೇದಶ್ಚ ಕಾರ್ಯಾಣಾಮಾಲಯಂ ಭವೇತ್ ॥೧೧॥**

ಪ್ರಲಯದ ಪರ್ಯಂತವಾಗಿ ಕಾರ್ಯಗಳಿಗೆ (ಕಾರ್ಯಜನ್ಯ ಪದಾರ್ಥಗಳಿಗೆ) ಪರಸ್ಪರವಾಗಿ ಭೇದವೂ ಕೂಡ ಇರುವುದೆಂದು ಸಾಂಖ್ಯರಿಂದ ಹೇಳಲ್ಪಡುತ್ತದೆ.

ಇನ್ನು ಸಾಂಖ್ಯರಲ್ಲಿಯೂ ಇರುವ ಮತಭೇದವನ್ನು 'ಭೋಕ್ತೃತಾಂ' ಇತ್ಯಾದಿ ವಚನದಿಂದ ಹೇಳುತ್ತಾರೆ –

**ಭೋಕ್ತೃತಾಂ ಚೇತನಸ್ಯಾಹುಃ ಕೇಚಿತ್ತಾಮಪಿ ನಾಪರೇ ।**

ಸಾಂಖ್ಯರಲ್ಲಿ ಕೆಲವರು ಚೇತನನಿಗೆ ಭೋಕ್ತೃತ್ವವನ್ನು ಹೇಳುತ್ತಾರೆ. ಇತರರು ಭೋಕ್ತೃತ್ವವನ್ನೂ ಹೇಳುವುದಿಲ್ಲ.

**ವಿವರಣೆ:** ಭೋಕ್ತೃತ್ವವನ್ನು ಒಪ್ಪದವರು ಅದಕ್ಕೆ 'ತಸ್ಮಾನ್ನ ಬಧ್ಯತೇ ನ ಮುಚ್ಯತೇ ನಾಪಿ ಸಂಸರತಿ ಕಶ್ಚಿತ್। ವಧ್ಯತೇ ಸಂಸರತಿ ಮುಚ್ಯತೇ ಚ ನಾನಾಶ್ರಯಾ ಚ ಪ್ರಕೃತಿಃ॥' ಎಂಬ ಪ್ರಮಾಣವನ್ನು ಹೇಳುತ್ತಾರೆ. "ತ್ರೈಗುಣ್ಯಾದಿಗಳಿಲ್ಲದಿರುವುದರಿಂದ ಪುರುಷನು ಬಂಧಿಸಲ್ಪಡುವುದಿಲ್ಲ, ಮುಕ್ತನಾಗುವುದಿಲ್ಲ ಮತ್ತು ಯಾವನೂ ಸಂಸಾರಿಯೂ ಆಗುವುದಿಲ್ಲ. ಆದರೆ ಅನೇಕ ಪುರುಷರ ಸಂಬಂಧ ಹೊಂದಿದ ಪ್ರಕೃತಿಯು ಬಂಧಿಸಲ್ಪಡುತ್ತದೆ, ಸಂಸಾರವನ್ನು ಹೊಂದುತ್ತದೆ, ಮತ್ತು ಮುಕ್ತಿಯನ್ನೂ ಹೊಂದುತ್ತದೆ." ಹೀಗೆ ಈ ಪ್ರಮಾಣವಾಕ್ಯದ ಅರ್ಥ. ಪ್ರಕೃತಿಯಲ್ಲಿಯೇ ಬಂಧ ಮೋಕ್ಷ ಹಾಗೂ ಸಂಸಾರಗಳು ಇರುತ್ತವೆ. ಅವು ಪುರುಷರಲ್ಲಿ ಉಪಚಾರದಿಂದ ಹೇಳಲ್ಪಡುತ್ತವೆ. ಭೃತ್ಯನಲ್ಲಿರುವ ಜಯಾಪಜಯಗಳು ಅವರಿಗೆ ಆಶ್ರಯನಾದ ರಾಜನಲ್ಲಿ ಹೇಗೆ ಉಪಚಾರದಿಂದ ಇರುತ್ತವೋ ಹಾಗೆಯೇ ಪ್ರಕೃತಿಯಲ್ಲಿರತಕ್ಕ ಭೋಗ(ಸಂಸಾರ) ಹಾಗೂ ಮುಕ್ತಿಗಳು ಆಶ್ರಯನಾದ ಪುರುಷನಿಗೆ ಹೇಳಲ್ಪಡುತ್ತವೆ. ಆದರೆ ವಾಸ್ತವವಾಗಿ ಭೋಗಾದಿಗಳು ಇರುವುದಿಲ್ಲ.

ಹಾಗಾದರೆ ಚೇತನನಿಗೆ ಕರ್ತೃತ್ವವಿಲ್ಲದಿದ್ದರೆ ಭೋಕ್ತೃತ್ವವಾದರೂ ಹೇಗೆ ಕೂಡುತ್ತದೆ ಎಂದು ಕೇಳಿದರೆ –

**ಸ್ವರೂಪಚೇತನ್ಯಬಲಾತ್ಸ್ವಪ್ರಕಾಶಾಚ್ಚ ಭೋಗಿತಾಮ್ ॥೧೨॥**

ಸುಖದುಃಖಾದಿಗಳನ್ನು ಅನುಭವಿಸುವುದು ಭೋಕ್ತೃತ್ವವೆನಿಸುತ್ತದೆ. ಅದು ಕ್ರಿಯಾವೇಶವಿಲ್ಲದೆ ಸ್ವರೂಪ ಚೈತನ್ಯದ ಬಲದಿಂದಲೇ ಕೂಡುತ್ತದೆ. ಈ ಸುಖಾದಿ ಅನುಭವತ್ವವು ಸ್ವಪ್ರತೀತಿಯಿಂದ ಸಿದ್ಧವಾಗಿದೆ. ಇದನ್ನೇ 'ಭೋಕ್ತೃತ್ವ ಯೋಗ್ಯತಾ ಚ ಪುರುಷಸ್ಯ ಚೈತನ್ಯಂ' ಎಂಬುದಾಗಿ ಹೇಳಿದ್ದಾರೆ. ಅಂದರೆ ಸುಖದುಃಖಾದಿಗಳನ್ನು ಭೋಗ ಮಾಡುವ ಯೋಗ್ಯತೆಯು ಪುರುಷನ ಚೈತನ್ಯವೆನಿಸುತ್ತದೆ ಎಂದರ್ಥ.

ಹಾಗಾದರೆ ಸ್ವಪ್ರತೀತಿಯಿಂದ ಸಿದ್ಧಿಸಿದ ಭೋಕ್ತೃತ್ವವನ್ನು ಇತರರು ಏಕೆ ಒಪ್ಪುವುದಿಲ್ಲ ಎಂದರೆ, ಅದಕ್ಕೆ ಉತ್ತರವನ್ನು 'ಪ್ರಕೃತೇಶ್ಚ' ಇತ್ಯಾದಿ ಮಾತುಗಳಿಂದ

ಹೇಳುತ್ತಾರೆ –

**ಪ್ರಕೃತೇಶ್ಚ ಸ್ವರೂಪಸ್ಯ ವಿವೇಕಾಗ್ರಹಮೇವ ತು ।**

**ಅಭೋಗವಾದಿನೋ ಭೋಗಮಾಹುರ್ಭೇದಗ್ರಹಾತ್ತಯೋಃ ।।೧೩।।**

**ಭೋಗಿನಾಂ ಮುಕ್ತಿರುದ್ದಿಷ್ಟಾ ಸ ಏವಾಭೋಗವಾದಿನಾಮ್ ।**

ಪ್ರಕೃತಿಯ ಸ್ವರೂಪಕ್ಕೂ ಆತ್ಮಸ್ವರೂಪಕ್ಕೂ ಇರುವ ಭೇದದ ಅಜ್ಞಾನವೇ ಭೋಗದ ವ್ಯವಹಾರಕ್ಕೆ ಕಾರಣವೆಂದು ಭೋಕ್ತೃತ್ವವನ್ನು ಒಪ್ಪದವರು ಹೇಳುತ್ತಾರೆ.

ಪುರುಷನಿಗೆ ಭೋಗವನ್ನು ಒಪ್ಪುವವರ ಮತದಲ್ಲಿ ಪುರುಷನಿಗೆ ಪ್ರಕೃತಿಯೊಡನೆ ಸಂಯೋಗವು ಕೇವಲ ಭೋಗಕ್ಕಲ್ಲ, ಮೋಕ್ಷಕ್ಕಾಗಿಯೂ ಆಗಿದೆ. ಪ್ರಕೃತಿ–ಪುರುಷ ಎಂಬ ಭೇದವು ತಿಳಿಯುವವರೆಗೆ ಪ್ರಕೃತಿಸಂಯೋಗವು ಪುರುಷನ ಭೋಗಕ್ಕೆ ಕಾರಣವಾಗುತ್ತದೆ. ಹೀಗೆ ಭೇದದ ಅಜ್ಞಾನವೇ ಬಂಧವು. ಭೇದದ ಜ್ಞಾನವೇ ಮುಕ್ತಿಗೆ ಕಾರಣವಾಗುವುದು. ಹೀಗೆ ಬಂಧವು ಕೂಡುವುದರಿಂದ, ಬಂಧನಿವೃತ್ತಿ ರೂಪವಾದ ಮೋಕ್ಷವೂ ಕೂಡುವುದು.

ಪುರುಷನಿಗೆ ಭೋಗವನ್ನು ಒಪ್ಪದವರ ಮತದಲ್ಲಿ, ಪ್ರಕೃತಿ ಪುರುಷರ ನಡುವೆ ಭೇದದ ಜ್ಞಾನವೇ ಬಂಧವು, ಭೇದದ ಅಜ್ಞಾನವೇ ಮುಕ್ತಿಯೆಂದು ಹೇಳಲ್ಪಟ್ಟಿದೆ.

ಹೀಗೆ ಈವರೆಗೆ ಉಪನ್ಯಾಸ ಮಾಡಲ್ಪಟ್ಟ ಮತವು ದುಷ್ಟವಾದುದರಿಂದ ಅದನ್ನು ಈಗ ನಿರಾಕರಿಸುತ್ತಾರೆ –

**ಈಶಸ್ಯಾಸಂಗ್ರಹಾದೇವ ನ ಯುಕ್ತೌ ತಾವುಭಾವಪಿ ।।೧೪।।**

**ಚೇತನೇಚ್ಛಾನುಸಾರೇಣ ಯದಾ ದೃಷ್ಟಃ ಪಟೋದ್ಭವಃ ।**

**ಏತಾದೃಶತ್ವಮನ್ಯಸ್ಯ ವಸ್ತುತ್ವಾತ್ಕೇನ ವಾರ್ಯತೇ ।।೧೫।।**

ಈಶ್ವರನನ್ನು ಅಂಗೀಕಾರ ಮಾಡದಿರುವ ಕಾರಣದಿಂದಲೇ ಪುರುಷನಿಗೆ ಭೋಕ್ತೃತ್ವವನ್ನು ಒಪ್ಪುವ ಹಾಗೂ ಒಪ್ಪದಿರುವ ಈ ಎರಡೂ ಪಕ್ಷಗಳೂ ಅಯುಕ್ತವು. ಲೋಕದಲ್ಲಿ ಚೇತನನ ಇಚ್ಛಾನುಸಾರವಾಗಿ ಪಟದ ಉತ್ಪತ್ತಿಯು ಕಂಡುಬರುವುದು. ಇತರವಾದ ಮಹದಾದಿಗಳಿಗೂ ಪಟದಂತೆಯೇ ವಸ್ತುತ್ವವನ್ನು ಹೊಂದಿವೆ. ಆದುದರಿಂದ ಅವುಗಳಿಗೂ ಪಟದಂತೆಯೇ ಚೇತನೇಚ್ಛಾನುಸಾರಿಯಾದ ಉತ್ಪತ್ತಿಯು ಯಾವ ಕಾರಣದಿಂದ ನಿವಾರಿಸಲ್ಪಡುತ್ತದೆ? ಆದ್ದರಿಂದ ಮಹದಾದಿ ಕಾರ್ಯಗಳ ಉತ್ಪತ್ತಿಯಲ್ಲಿಯೂ ಚೇತನನ ಕಾರಣತ್ವವನ್ನು ಒಪ್ಪಲೇಬೇಕು.

ಘಟ ಪಟಾದಿಗಳ ಉತ್ಪತ್ತಿಯಲ್ಲಿ ಚೇತನರಾದ ಕುಂಬಾರ ಮುಂತಾದವರ

ಪ್ರವೃತ್ತಿಯು ಕಂಡುಬರುವುದರಿಂದ, ಅದರ ದೃಷ್ಟಾಂತದಿಂದ ಮಹದಾದಿಗಳ ಉತ್ಪತ್ತಿಯೂ ಚೇತನನ ಇಚ್ಛಾಧೀನವಾಗಿರುವುದು. ಹೀಗೆ ಸ್ವಪಕ್ಷವನ್ನು ಸಾಧನೆ ಮಾಡಿ, ಪರಪಕ್ಷದ ನಿರಾಕರಣಕ್ಕಾಗಿ 'ರಚನಾನುಪತ್ತೇಶ್ಚ ನಾನುಮಾನಂ' ಎಂಬ ಸೂತ್ರವನ್ನು ವ್ಯಾಖ್ಯಾನಿಸಲು 'ನ ಚ ಕಾಚಿತ್' ಇತ್ಯಾದಿ ವಚನದಿಂದ ಪೀಠಿಕೆಯನ್ನು ರಚಿಸುತ್ತಾರೆ –

**ನ ಚ ಕಾಚಿತ್ಪ್ರಮೋಕ್ತಾರ್ಥೇ ಶ್ರುತಿರೇವ ಪ್ರಮಾ ಹಿ ನಃ ।**

**ಆಪ್ತತ್ವಮುಕ್ತಮಾರ್ಗೇಣ ವಕ್ತುರ್ನೈವೋಪಪದ್ಯತೇ ।।೧೬।।**

**ಅಪ್ರಾಮಾಣ್ಯಸ್ವತಸ್ತಸ್ಯ ಸ್ವೀಕಾರಾದಪಿ ಮಾಯಿವತ್ ।**

**ಸ್ವೋಕ್ತಾಖಿಲನಿಷೇಧೀ ಸ್ಯಾನ್ನ ಕಿಂಚಿತ್ಪ್ರಸಿದ್ಧ್ಯತಿ ।।೧೭।।**

ಸಾಂಖ್ಯನು ಹೇಳಿದ ಪ್ರಧಾನವೇ ಸ್ವತಂತ್ರವಾಗಿ ಜಗತ್ಕಾರಣವೆಂಬ ವಿಷಯದಲ್ಲಿ ಯಾವ ಪ್ರಮಾಣವೂ ಇರುವುದಿಲ್ಲ. ಶ್ರುತಿಯು ನಮ್ಮ ಮತದ ವಿಷಯದಲ್ಲಿಯೇ ಪ್ರಮಾಣವಾಗಿರುತ್ತದೆ. ಶ್ರುತಿಗೆ ವಿರುದ್ಧವಾದುದನ್ನು ಹೇಳಿರುವುದರಿಂದ ಸಾಂಖ್ಯ ಶಾಸ್ತ್ರವನ್ನು ರಚಿಸಿದವನಿಗೆ ಆಪ್ತತ್ವವು ಕೂಡುವುದೇ ಇಲ್ಲ. ಅಪ್ರಮಾಣ್ಯವನ್ನು ಸ್ವತಃ ಎಂದು ಅಂಗೀಕರಿಸಿರುವುದರಿಂದಲೂ ಅವನಿಗೆ ಆಪ್ತತ್ವವು ಕೂಡುವುದಿಲ್ಲ. ಮಾಯಾವಾದಿಯಂತೆ ತಾನು ಹೇಳಿದ ಎಲ್ಲವನ್ನೂ ತಾನೇ ನಿಷೇಧಿಸುವವನು ಆಗುವನು. ಪರಸ್ಪರ ವಿರೋಧವಿದ್ದರೆ ಯಾವುದೂ ಸಿದ್ಧಿಸುವುದಿಲ್ಲ.

ಹಾಗಾದರೆ ಮಹದಾದಿ ಪ್ರಪಂಚಕ್ಕೆ ಅವ್ಯಕ್ತವಾದ ಪ್ರಕೃತಿಯು ಕಾರಣವು ಎನ್ನುವ ವಿಷಯದಲ್ಲಿ ಪ್ರತ್ಯಕ್ಷವು ಪ್ರಮಾಣವಾಗುವುದು ಬೇಡ. ಆಗಮವೂ ಕೂಡ ಪ್ರಮಾಣವಾಗದಿದ್ದರೆ ಅಡ್ಡಿಯಿಲ್ಲ. ಆದರೆ ಅನುಮಾನದಿಂದ ಪ್ರಕೃತಿಯು ಮಹದಾದಿ ಉತ್ಪತ್ತಿಗೆ ಕಾರಣವೆಂದು ಸಿದ್ಧಿಸುತ್ತದೆ ಹೀಗೆ ಸಾಂಖ್ಯರ ಪೂರ್ವಪಕ್ಷ.

ಹಾಗಾದರೆ ಈ ಅನುಮಾನದಿಂದ ಪ್ರಕೃತಿಯು ಜಗತ್ತಿನ ಉಪಾದಾನಕಾರಣವೆಂದು ಸಿದ್ಧಿಸುವುದೋ ಅಥವಾ ಸ್ವತಂತ್ರವಾಗಿ ಕಾರಣವೆಂದು ಸಿದ್ಧಿಸುವುದೋ ಎಂದು ಕೇಳುತ್ತೇವೆ. ಮೊದಲನೆಯ ಪಕ್ಷದಲ್ಲಿ ಸಿದ್ಧಸಾಧನವು. ಏಕೆಂದರೆ ನಾವೂ ಸಹ ಪ್ರಧಾನವನ್ನು ಜಗತ್ತಿನ ಉಪಾದಾನಕಾರಣವಾಗಿ ಅಂಗೀಕರಿಸಿದ್ದೇವೆ. ಎರಡನೆಯ ಪಕ್ಷವನ್ನು ನಿರಾಕರಿಸಲು 'ರಚನಾನುಪಪತ್ತೇಶ್ಚ ನಾನುಮಾನಂ' ಎಂಬ ಸೂತ್ರವು ಹೊರಟಿದೆ. 'ಇದಂ' ಇತ್ಯಾದಿ ವಚನದಿಂದ ಇದನ್ನು ವ್ಯಾಖ್ಯಾನಿಸುತ್ತಾರೆ –

**ಇದಂ ನಾಚೇತನವಶಂ ವಸ್ತುತ್ವಾತ್ಪ್ರತಿಪನ್ನವತ್ ।**

**ಇತ್ಯೇವ ಪ್ರತಿಷಿದ್ಧಸ್ಯ ಕೇನ ಮೂಲಾನುಮಾ ಭವೇತ್ ।।೧೮।।**

ಈ ಮಹದಾದಿ ಕಾರ್ಯವು ಸ್ವತಂತ್ರವಾದ ಅಚೇತನಾಧೀನವಾದ ಉತ್ಪತ್ತಿಯನ್ನು ಹೊಂದಿರುವುದಿಲ್ಲ, ಪ್ರಧಾನದಂತೆ ವಸ್ತುವಾಗಿರುವುದರಿಂದ. ಹೀಗೆ ಪ್ರತಿಯಾದ ಅನುಮಾನದಿಂದಲೇ ನಿಷೇಧಿಸಲ್ಪಡುವ ಪ್ರಧಾನದ ಸ್ವಾತಂತ್ರ್ಯಕ್ಕೆ ಸಾಧಕವಾದ ಅನುಮಾನವು ಯಾವ ಸಾಮರ್ಥ್ಯದಿಂದ ಪ್ರಮಾಣವಾಗುವುದು?

ಹೀಗೆ ಪ್ರಧಾನಕ್ಕೆ ಸ್ವತಂತ್ರ ಪ್ರವೃತ್ತಿಯು ಕೂಡುವುದಿಲ್ಲವೆಂದು ಅನುಮಾನ ವಿರೋಧದಿಂದ ತೋರಿಸಿ, ಆದುದರಿಂದ ಅನುಮಾನವು ಪ್ರಮಾಣವಾಗುವುದಿಲ್ಲ ಎಂಬುದಾಗಿ ಸೂತ್ರದ ತಾತ್ಪರ್ಯವನ್ನು ಹೇಳಿದರು. ಈಗ ಅದನ್ನೇ ವಿವರಿಸುತ್ತ ಬೇರೆ ಪ್ರತಿಪಕ್ಷಾನುಮಾನವನ್ನು ತೋರಿಸುತ್ತಾರೆ –

**ಸ್ವತಂತ್ರವೃತ್ತೀ ರಚನಾ ಸಾ ಚೈವಾಚೇತನೇ ಕುತಃ ।**

**ಅಚೇತನತ್ವಂ ಸ್ವಾತಂತ್ರ್ಯಮಿತಿ ಚಾತ್ಮಪ್ರಮಾಹತಮ್ ॥೧೯॥**

ಸ್ವತಂತ್ರವಾದ ಪ್ರವೃತ್ತಿಯು ರಚನೆಯೆನಿಸುವುದು. ಅಂಥಹ ಪ್ರವೃತ್ತಿಯು ಅಚೇತನದಲ್ಲಿ ಹೇಗೆ ಉಂಟಾದೀತು? ಅಚೇತನವಾಗಿದ್ದು ಸ್ವತಂತ್ರವೂ ಆಗಿದೆ ಎಂದು ಹೇಳುವುದು ಸ್ವವಚನ ವಿರೋಧವೂ ಪ್ರಮಾಣವಿರುದ್ಧವೂ ಆಗುವುದು. ಅಚೇತನತ್ವ ಮತ್ತು ಸ್ವಾತಂತ್ರ್ಯ ಇವೆರಡೂ ಒಂದೇ ಕಡೆಯಲ್ಲಿ ಕೂಡುವುದಿಲ್ಲ.

ಹಾಗಾದರೆ ಅಚೇತನಕ್ಕೆ ಸ್ವಾತಂತ್ರ್ಯವನ್ನು ಹೇಳುವುದರಿಂದ ಸ್ವವ್ಯಾಹತಿಯು ಹೇಗೆ? ಏಕೆಂದರೆ ಸ್ವಾತಂತ್ರ್ಯ ಎಂದರೆ ಚೇತನತ್ವ ಎನಿಸುವುದಿಲ್ಲ. ಅದೇರೀತಿ ಅಚೇತನತ್ವವು ಅಸ್ವಾತಂತ್ರ್ಯ ಎನಿಸುವುದಿಲ್ಲ. ಆದ್ದರಿಂದ ಪ್ರಮಾಣ ವಿರೋಧವು ಹೇಗೆ ಎಂದು ಆಕ್ಷೇಪಿಸಿದರೆ ಸ್ವಾತಂತ್ರ್ಯ ಎಂದರೇನು ಎಂದು ತಿಳಿಸುತ್ತಾರೆ –

**ಸ್ವೇಚ್ಛಾನುಸಾರಿತಾಮೇವ ಸ್ವಾತಂತ್ರ್ಯಂ ಹಿ ವಿದೋ ವಿದುಃ ।**

ತನ್ನ ಇಚ್ಛಾನುಸಾರವಾದ ಪ್ರವೃತ್ತಿಯನ್ನೇ ಸ್ವಾತಂತ್ರ್ಯವೆಂದು ಎಲ್ಲ ಜ್ಞಾನಿಗಳೂ ತಿಳಿಯುತ್ತಾರೆ.

ಹಾಗಾದರೆ ಅಚೇತನತ್ವವೆಂದರೆ ಚೇತನತ್ವವಿಲ್ಲವೆಂದು ಅರ್ಥ, ಇಚ್ಛಾರಹಿತತ್ವ ಎಂದಲ್ಲ. ಆದ್ದರಿಂದ ಸ್ವವ್ಯಾಹತವು ಹೇಗಾಗುವುದು ಎಂದು ಆಶಂಕಿಸಿದರೆ –

**ಕುತ ಇಚ್ಛಾऽಚೇತನಸ್ಯ ಸೇಚ್ಛಂ ಚೇತ್ಕಿಮಚೇತನಮ್ ॥೨೦॥**

ಅಚೇತನಕ್ಕೆ ಇಚ್ಛೆಯು ಹೇಗೆ ಅಂದರೆ ಯಾವ ಕಾರಣದಿಂದ ಬರುತ್ತದೆ? ಇಚ್ಛೆಯು ಇರುವುದಾದರೆ ಅದು ಅಚೇತನವು ಹೇಗಾದೀತು?

ಹೀಗೆ ಅಚೇತನಕ್ಕೆ ಸ್ವಾತಂತ್ರ್ಯವನ್ನು ಅಂಗೀಕರಿಸಿದರೆ ಬರುವ ಸ್ವವ್ಯಾಹತಿಯನ್ನು ತೋರಿಸಿ, ಈಗ ಪ್ರಮಾಣವಿರೋಧವನ್ನು ಉಪಪಾದಿಸುತ್ತಾರೆ –

**ಇಚ್ಛಾಮ್ಯಹಮಿತಿ ಹ್ಯೇವ ನಿಜಾನುಭವರೋಧತಃ ।**

**ಅಚೇತನೇಚ್ಛಾಪಗತಾ.........................॥**

ನಾನು ಇಚ್ಛಿಸುತ್ತೇನೆ ಎಂಬ ಸಾಕ್ಷಿರೂಪ ಅನುಭವವು ಅಚೇತನಕ್ಕೆ ಇರುವುದಿಲ್ಲ. ಈ ಕಾರಣದಿಂದ ಅಚೇತನಕ್ಕೆ ಇಚ್ಛೆಯು ನಿರಾಕೃತವಾಗುವುದು.

ಹಾಗಾದರೆ ನಾನು ಇಚ್ಛಿಸುತ್ತೇನೆ ಎಂಬುದು ಕೇವಲ ವ್ಯವಹಾರವೇ ಹೊರತು ಅನುಭವವಲ್ಲ. ಇದಕ್ಕಾದರೋ ಭೇದದ ಅಜ್ಞಾನವೇ ಕಾರಣ. ಇಚ್ಛಾಕರ್ತೃತ್ವವು ಅಂತಃಕರಣದ ಧರ್ಮ. ಆತ್ಮನು ನಿತ್ಯನೂ ನಿರ್ವಿಕಾರನೂ ಆದುದರಿಂದ ಅದು ಆತ್ಮನ ಧರ್ಮವಲ್ಲ. ಆತ್ಮ ಮತ್ತು ಅಂತಃಕರಣಗಳಿಗಿರುವ ಭೇದವು ತಿಳಿಯದೇ ಇರುವುದರಿಂದ ಆತ್ಮನಲ್ಲಿ ಈ ಧರ್ಮವು ಆರೋಪಿಸಲ್ಪಡುತ್ತದೆ. ಆದ್ದರಿಂದ ಅಚೇತನಕ್ಕೆ ಇಚ್ಛೆಯು ಕೂಡುವುದಿಲ್ಲ ಎಂದು ಹೇಳಿದ್ದು ಯುಕ್ತವಲ್ಲ ಎಂದರೆ –

**.....................ಯದಿ ಭೇದಾಗ್ರಹೋಽತ್ರ ಚ ॥೨೧॥**

**ಕಥಂ ಸ ನ ಘಟಸ್ಯ ಸ್ಯಾತ್........................।**

ಭೇದದ ಜ್ಞಾನವಿಲ್ಲದಿರುವುದೇ ಈ ರೀತಿಯ ವ್ಯವಹಾರಕ್ಕೆ ಕಾರಣ ಎಂದು ಹೇಳುವ ಪಕ್ಷದಲ್ಲಿ, ಆ ಭೇದದ ಅಜ್ಞಾನವು ಘಟದ ವ್ಯವಹಾರಕ್ಕೆ ಹೇಗೆ ಕಾರಣವಾಗಲಾರದು?

ಇನ್ನು ಭೇದದ ಜ್ಞಾನವು ಭೇದದ ಅಜ್ಞಾನಕ್ಕೆ ವಿರೋಧಿಯು. ಆದಕಾರಣ ಭೇದದಿಂದ ತೋರುವ ಘಟದಲ್ಲಿ ಭೇದದ ಅಜ್ಞಾನವಿಲ್ಲವೆಂದು ಹೇಳುವುದಾದರೆ –

**.....................................ಮನೋ ಮ ಇತಿ ಭೇದತಃ ।**

**ಮನಸೋಽಪಿ ಗೃಹೀತತ್ವಾತ್ ಉಭಯಾತ್ಮಕತಾ ಯತಃ॥೨೨॥**

**ಕಾಮಸ್ಯ ತು ಮನಃ ಕಾಮಃ ಪ್ರಿಯಾಪ್ರಿಯವಿಭೇದತಃ ।**

**ದ್ವೈವಿಧ್ಯಂ ದೃಶ್ಯತೇ ಚಾಸ್ಯ ತಸ್ಮಾದಭೇದಾಗ್ರಹಃ ಕುತಃ ॥೨೩॥**

ನನ್ನ ಮನಸ್ಸು ಎಂಬುದಾಗಿ ಮನಸ್ಸಿಗೂ ಆತ್ಮನಿಗೂ ಭೇದಜ್ಞಾನವು ಇರುವುದರಿಂದ, ಭೇದದ ಅಜ್ಞಾನದಿಂದ ವ್ಯವಹಾರವು ಎನ್ನುವುದು ಯುಕ್ತವಲ್ಲ. ಅಂತಃಕರಣ ರೂಪವಾದ ಇಚ್ಛೆಗೆ ಆತ್ಮ ಮತ್ತು ಮನೋಧರ್ಮತ್ವಗಳೆರಡೂ ಇರುವುದರಿಂದ 'ಮನಃ ಕಾಮಃ' ಎನ್ನುವ ಶ್ರುತಿಯು ಯುಕ್ತವಾಗುತ್ತದೆ. ಆತ್ಯಂತಿಕ ಇಷ್ಟ ಹಾಗೂ ತಾತ್ಕಾಲಿಕ ಇಷ್ಟ ಎಂಬ ಪ್ರಭೇದಗಳಿಂದ ಈ ಕಾಮಕ್ಕೆ ದ್ವೈವಿಧ್ಯವು ಕಂಡುಬರುತ್ತದೆ. ಆದುದರಿಂದ ಭೇದ ಜ್ಞಾನವಿಲ್ಲದಿರುವುದು ವ್ಯವಹಾರಕ್ಕೆ ಕಾರಣ

ಎಂಬುದು ಯಾವ ಪ್ರಮಾಣದಿಂದ ಕಲ್ಪಿಸಬೇಕು? ಹೀಗೆ ಅನುಭವವನ್ನು ಅಪಲಾಪ ಮಾಡುವುದು ಯಾವ ಪ್ರಮಾಣದಿಂದಲೂ ಸಿದ್ಧಿಸುವುದಿಲ್ಲ.

'ರಚನಾನುಪಪತ್ತೇಃ' ಸೂತ್ರಾರ್ಥದ ಉಪಸಂಹಾರಮಾಡುತ್ತ 'ನಾನುಮಾನಂ' ಎಂಬುದಕ್ಕೆ ಬೇರೆ ರೀತಿಯಿಂದ ವ್ಯಾಖ್ಯಾನ ಮಾಡುತ್ತಾರೆ –

**ರಚನಾನುಪಪತ್ತೇಸ್ತನ್ನ ಸರ್ವಜ್ಞಾನುಮಾಗತಮ್ ।**

**ಅಚೇತನಂ ಜಗತ್ಕರ್ತೃ ...............................॥೨೪॥**

ಆದುದರಿಂದ ಸವರ್ಜ್ಞತ್ವ ಸಾಧಕವಾದ ಅನುಮಾನದಿಂದ ತಿಳಿಯಲ್ಪಟ್ಟ ಅಚೇನವಾದ ಪ್ರಧಾನಕ್ಕೆ ಸ್ವತಂತ್ರವಾದ ಪ್ರವೃತ್ತಿಯು ಕೂಡುವುದಿಲ್ಲ. ಆದಪ್ರಯುಕ್ತ ಪ್ರಧಾನವು ಜಗತ್ಕರ್ತೃವಾಗಲಾರದು.

ಹಾಗೇ ಆಗಲಿ. ಆದರೆ ಪರಿಮಾಣ ಮುಂತಾದ ಯುಕ್ತಿಗಳಿಂದ ಮಹದಾದಿ ಕಾರ್ಯಗಳಿಗೆಲ್ಲ ಮೂಲಕಾರಣವು ಇರುವುದೆಂದು ತಿಳಿಯುತ್ತದೆ. ಅದೇ ಪ್ರಧಾನ. ಅದಕ್ಕೆ ಬೇರೆ ಕಾರಣವನ್ನು ಕಲ್ಪಿಸುವುದರಲ್ಲಿ ಪ್ರಮಾಣವೂ ಇಲ್ಲ. ಹಾಗೆ ಕಲ್ಪಿಸಿದರೆ ಅನವಸ್ಥೆ ಬರುತ್ತದೆ. ಸ್ವಾತಂತ್ರ್ಯವೆಂದರೆ, ಆ ಪ್ರಧಾನಕ್ಕೆ ಬೇರೆ ಕಾರಣವಿಲ್ಲವೆಂದೇ ಅರ್ಥ, ಸ್ವೇಚ್ಛಾನುಸಾರಿ ಪ್ರವೃತ್ತಿಯೆಂದಲ್ಲ. ಅಚೇತನಕ್ಕೆ ಅಂಥಹ ಸ್ವಾತಂತ್ರ್ಯವು ಅಸಂಭಾವಿತವಲ್ಲ. ಏಕೆಂದರೆ ಅಚೇತನಗಳಾದ ಹಾಲು, ನೀರು ಇತ್ಯಾದಿಗಳಲ್ಲಿ ಸ್ವಾತಂತ್ರ್ಯವು ಕಂಡಿರುತ್ತದೆ. ಹಾಲು ಮತ್ತೊಬ್ಬನಿಂದ ಪ್ರೇರಿತವಾಗದೆ ಇದ್ದರೂ ಕರುಗಳ ವೃದ್ಧಿಗಾಗಿ ಪ್ರವೃತ್ತವಾಗುತ್ತದೆ ಮತ್ತು ತಾನಾಗಿಯೇ ಮೊಸರಿನ ಸ್ವರೂಪವನ್ನು ಹೊಂದುತ್ತದೆ. ಮೋಡಗಳಿಂದ ಸುರಿಸಲ್ಪಟ್ಟ ನೀರು ಜಂಬೀರ, ನಾರಿಕೇಲ ಮುಂತಾದವುಗಳಲ್ಲಿ ನಾನಾರೀತಿಯ ವಿಕಾರವನ್ನು ಹೊಂದುತ್ತದೆ ಮತ್ತು ನದಿಯಾಗಿ ಹರಿಯುತ್ತದೆ. ಹಸುವು ತಿಂದ ಹುಲ್ಲು ಹಾಲಾಗಿ ಪರಿಣಮಿಸುತ್ತದೆ. ಲೋಹವು ಅಯಸ್ಕಾಂತದ ಬಳಿಗೆ ಸೆಳೆಯಲ್ಪಡುತ್ತದೆ. ಆದ್ದರಿಂದ ಅಚೇತನಕ್ಕೆ ಸ್ವತಂತ್ರ ಪ್ರವೃತ್ತಿಯನ್ನು ಅಂಗೀಕರಿಸಿದರೆ ಹಿಂದೆ ಹೇಳಿದ ಸಿದ್ದಸಾಧನ ಇತ್ಯಾದಿ ದೋಷಗಳು ಬರುವುದಿಲ್ಲ. ಈ ಆಶಂಕೆಯನ್ನು ಪರಿಹರಿಸಲು 'ಓಂ ಪಯೋಽಮ್ಬುವಚ್ಚೇತ್ತತ್ರಾಪಿ ಓಂ' ಎಂಬ ಸೂತ್ರವು ಹೊರಟಿದೆ 'ಪಯೋಽಮ್ಬ್ವಾದಿ' ಇತ್ಯಾದಿ ವಚನದಿಂದ ಈ ಸೂತ್ರಕ್ಕೆ ವ್ಯಾಖ್ಯಾನ ಮಾಡುತ್ತಾರೆ –

**...........................ಪಯೋಽಮ್ಬ್ವಾದಿ ಚ ನೋಪಮಾ ।**

**ಏತತ್ಪ್ರಶಾಸ್ತಿವಚನಾಚ್ಚೇತನಾಚೇತನಸ್ಯ ಚ ॥೨೫॥**

ಈ ಚೇತನಾಚೇತನ ಜಗತ್ತಿಗೆ ಪರಮಾತ್ಮನೇ ಪ್ರೇರಕನಾಗಿದ್ದು ಪ್ರವೃತ್ತಿಯನ್ನು ಹೊಂದಿಸುತ್ತಾನೆ ಎಂದು ಪ್ರತಿಪಾದಿಸುವ ಶ್ರುತಿಯು ಇರುವುದರಿಂದ, ಹಾಲು

ನೀರು ಇತ್ಯಾದಿಗಳಲ್ಲಿ ಕಾಣುವ ವಿಕಾರವೇ ಮೊದಲಾದ ಪ್ರವೃತ್ತಿಯು, ಅಚೇತನಕ್ಕೆ ಸ್ವಾತಂತ್ರ್ಯವನ್ನು ಸಮರ್ಥಿಸುವ ವಿಷಯದಲ್ಲಾಗಲೀ, ಅವುಗಳಿಗೆ ಸ್ವಾತಂತ್ರ್ಯವನ್ನು ನಿರಾಕರಿಸುವ ಯುಕ್ತಿಯನ್ನು ಅಲ್ಲಗಳೆಯುವುದಕ್ಕಾಗಲೀ ದೃಷ್ಟಾಂತವಾಗಲಾರದು.

ಇಚ್ಛೆಯನ್ನು ಹೊಂದಿರುವ ಗುಣ ಆತ್ಮನಿಗೇ ಹೊರತು ಜಡಕ್ಕಲ್ಲವೆಂಬ ವಿಷಯದಲ್ಲಿ ಮೊದಲು ಅನುಭವವನ್ನು ಪ್ರಮಾಣವಾಗಿ ಹೇಳಲಾಯಿತು. ಅದಕ್ಕೆ ಶ್ರುತಿವಿರೋಧವನ್ನು ಹೇಳಿದಾಗ ಅಂತಃಕರಣಧರ್ಮ ಮತ್ತು ಆತ್ಮಧರ್ಮ ಎಂದು ಕಾಮವು ಎರಡು ವಿಧವಾಗಿರುವುದರಿಂದ ಶ್ರುತಿಯ ವಿರೋಧವಿಲ್ಲವೆಂದು ಹೇಳಲಾಯಿತು. ಅಂತೂ ಆತ್ಮನಿಗೆ ಇಚ್ಛೆಯುಂಟು ಎಂಬ ವಿಷಯವನ್ನು ಕೈಬಿಟ್ಟಂತಯೇ ಆಯಿತು. ಇದು 'ಘಟ್ಟಕುಟೀ ಪ್ರಭಾತನ್ಯಾಯ' ವನ್ನೇ ಅನುಸರಿಸಿದಂತೆ ಎಂದು ಪೂರ್ವಪಕ್ಷಿಯ ಆಕ್ಷೇಪ (ಘಟ್ಟ ಎಂದರೆ ಸುಂಕದ ಕಟ್ಟೆ. ಅಲ್ಲಿ ಕಾಯುವವರಿಗಾಗಿ ಇರುವ ಚಿಕ್ಕ ಮನೆಗೆ ಕುಟೀ ಎನ್ನುತ್ತಾರೆ. ಸುಂಕವನ್ನು ತಪ್ಪಿಸುವುದಕ್ಕೋಸ್ಕರ ಬೇರೆ ದಾರಿಯಿಂದ ಊರನ್ನು ಸೇರಬೇಕೆಂದು ಕೆಲವು ವರ್ತಕರು ರಾತ್ರಿಯಲ್ಲಿ ಆ ದಾರಿಯನ್ನು ಕಾಣದೆ ಹುಡುಕುತ್ತ ಅಲೆದು ಕೊನೆಗೆ ಸುಂಕದ ಕಟ್ಟೆಯ ಬಳಿ ಬರುವುಷ್ಟರಲ್ಲಿ ಬೆಳಗಾಯಿತು. ಇದೇ ಘಟ್ಟಕುಟೀನ್ಯಾಯ). ಈ ಆಕ್ಷೇಪವನ್ನು ಸಿಂಹಾವಲೋಕನ ನ್ಯಾಯದಿಂದ 'ದ್ವೈವಿಧ್ಯೇಽಪಿ' ಇತ್ಯಾದಿ ವಚನದಿಂದ ಪರಿಹರಿಸುತ್ತಾರೆ –

**ದ್ವೈವಿಧ್ಯೇಽಪಿ ತು ಕಾಮಾದೇಃ ಕುತಃ ಸ್ವಾಮಿತ್ವಮಾತ್ಮನಃ ।**

**ಸಾಕ್ಷಾದನುಭವಾರೂಢಂ ಶಕ್ಯತೇಽಪೋದಿತುಂ ಕ್ವಚಿತ್ ॥೨೬॥**

ಕಾಮಾದಿಗಳಿಗೆ ದ್ವೈವಿಧ್ಯವಿದ್ದರೂ, ಸಾಕ್ಷಾತ್ತಾಗಿ ಅನುಭವಸಿದ್ಧನಾದ ಆತ್ಮನಿಗೆ ಕಾಮಾದಿಗಳ ಮೇಲಿನ ಸ್ವಾಮಿತ್ವವನ್ನು ಯಾವ ಪ್ರಮಾಣದಿಂದ ಎಲ್ಲಿಯಾದರೂ ಅಲ್ಲಗಳೆಯಲು ಶಕ್ಯವೇ? ಯಾವ ರೀತಿಯಿಂದಲೂ ಶಕ್ಯವಿಲ್ಲ ಎಂದು ತಾತ್ಪರ್ಯ.

(ಆತ್ಮಧರ್ಮರೂಪ ಹಾಗೂ ಮನೋವೃತ್ತಿರೂಪ ಎಂಬುದಾಗಿ ಕಾಮವು ಎರಡು ವಿಧವು. ಇವೆರಡರಲ್ಲಿ ಮನೋವೃತ್ತಿರೂಪವಾದ ಕಾಮದ ಮೇಲೆ ಆತ್ಮನಿಗೇ ಸ್ವಾಮಿತ್ವವು, ಹೊರತು ಮನಸ್ಸಿಗಲ್ಲ. ಏಕೆಂದರೆ 'ನಾನು ಇಚ್ಛಿಸುತ್ತೇನೆ' ಎಂಬ ಸಾಕ್ಷಿರೂಪ ಅನುಭವದಿಂದ ಇದು ಸಿದ್ಧವಾಗಿದೆ.)

ಹಾಗಾದರೆ ಆತ್ಮನಿಗೇ ಕಾಮದ ಮೇಲೆ ಸ್ವಾಮಿತ್ವವಿರಲಿ, ಮನಸ್ಸಿಗೆ ಸ್ವಾಮಿತ್ವ ಇಲ್ಲದಿದ್ದರೂ ಚಿಂತೆಯಿಲ್ಲ. ಆದರೂ ವಿರೋಧ ಪರಿಹಾರವಾಗುವುದಿಲ್ಲ. ಏಕೆಂದರೆ ಇಚ್ಛಾಸ್ವಾಮಿತ್ವವು ಇಲ್ಲವಾದರೂ ಯಾವುದೋ ಒಂದು ರೀತಿಯ ಇಚ್ಛೆಯ ಸಂಬಂಧವನ್ನು ಮನಸ್ಸಿಗೆ ಅಂಗೀಕರಿಸಲಾಗಿದೆ. ಈ ಆಶಂಕೆಯನ್ನು 'ಇಚ್ಛಾ' ಇತ್ಯಾದಿ ವಚನದಿಂದ ಪರಿಹರಿಸುತ್ತಾರೆ –

**ಇಚ್ಛಾಸ್ವಾಮಿತ್ವಮೇವೋಕ್ತಮಿಚ್ಛಾವತ್ತ್ವಂ ನ ಚಾಪರಮ್ ।**

'ಅಚೇತನೇಚ್ಛಾಪಗತಾ' ಇತ್ಯಾದಿಗಳಲ್ಲಿ ಇಚ್ಛೆಯ ಮೇಲಿನ ಸ್ವಾಮಿತ್ವವನ್ನೇ ಇಚ್ಛೆಯನ್ನು ಹೊಂದಿರುವಿಕೆ ಎಂಬ ಅರ್ಥದಲ್ಲಿ ಹೇಳಲಾಗಿದೆ. ಹೊರತು ಇಚ್ಛೆಗೆ ಉಪಾದಾನವೆಂದು ಹೇಳಿಲ್ಲ. ಇಚ್ಛಾಸ್ವಾಮಿತ್ವ ರೂಪವಾದ ಇಚ್ಛಾವತ್ತ್ವವು ಕರ್ತೃತ್ವಕ್ಕೆ ಉಪಯುಕ್ತವು, ಹೊರತು ಇಚ್ಛೋಪಾದಾನತ್ವವಲ್ಲ. ಆತ್ಮನಿಗೆ ಇಚ್ಛಾ ಸ್ವಾಮಿತ್ವವಿದ್ದ ಪ್ರಯುಕ್ತ ಅವನು ಇಚ್ಛಾನುಸಾರವಾಗಿ ಪ್ರಯತ್ನಿಸುತ್ತಾನೆ. ಇಚ್ಛೆಗೆ ಉಪಾದಾನವಾದ ಅಚೇತನವಾದ ಮನಸ್ಸೇ ಪ್ರಯತ್ನಿಸುವುದಿಲ್ಲ.

ಹಾಗಾದರೆ ಸಂಪೂರ್ಣವಾಗಿ ಸ್ವಾಧೀನದಲ್ಲಿರುವ ವಸ್ತುವು ಮಾತ್ರ ಯಥೇಷ್ಟ ವಿನಿಯೋಗಕ್ಕೆ ಬರುವುದು. ಯಥೇಷ್ಟವಾಗಿ ವಿನಿಯೋಗಿಸುವವನು ಮಾತ್ರ ಸ್ವಾಮಿಯೆನಿಸುತ್ತಾನೆ. ಆದರೆ ಇಚ್ಛೆಗೆ ಸಂಪೂರ್ಣ ವಿನಿಯೋಗಿತ್ವವೂ, ಇಚ್ಛೆಯನ್ನು ಯಥೇಷ್ಟವಾಗಿ ವಿನಿಯೋಗಿಸುವಂಥಹ ಇಚ್ಛಾಸ್ವಾಮಿತ್ವವೂ ಇರುವುದಿಲ್ಲ. ಹೀಗೆ ಆಕ್ಷೇಪಿಸಿದರೆ ಅದಕ್ಕೆ ಉತ್ತರವನ್ನು **ಕಿಂಚಿತ್** ಇತ್ಯಾದಿ ವಚನದಿಂದ ಹೇಳುತ್ತಾರೆ –

**ಕಿಂಚಿತ್ತದ್ವಶಗತ್ವೇಽಪಿ ಸ್ವಾಮಿತ್ವಂ ಲೋಕವದ್ಭವೇತ್ ॥೨೭॥**

ಪ್ರಬಲವಿರೋಧದ ದೆಶೆಯಿಂದ ಇಚ್ಛೆಯು ಆತ್ಮನಿಗೆ ಅತ್ಯಂತ ವಶವಾಗದೇ ಇದ್ದರೂ, ಸ್ವಲ್ಪಮಟ್ಟಿಗೆ ವಶದಲ್ಲಿರುವುದರಿಂದ ಆತ್ಮನಿಗೆ ಇಚ್ಛಾಸ್ವಾಮಿತ್ವವು ಇದ್ದೇ ಇರುವುದು. ಲೋಕದಲ್ಲಿ ಗೋವಳನಿಗೆ ಗೋವು ವಶವಾಗಿರುವಂತೆ. ಗೋವಳನಿಗೆ ಗೋವು ಅತ್ಯಂತ ವಶವಲ್ಲದಿದ್ದರೂ, ಕಿಂಚಿತ್ ವಶವಾಗಿರುವುದರಿಂದ ಅವನನ್ನು ಗೋವಿನ ಒಡೆಯ ಎಂದೇ ಕರೆಯುವುದು ಲೋಕರೂಢಿ.

ಅಚೇತನದ ಕರ್ತೃತ್ವವನ್ನು ನಿರಾಕರಿಸಲು, ಆತ್ಮನಿಗೇ ಇಚ್ಛೆಯ ಮೇಲಿನ ಸ್ವಾಮಿತ್ವವು, ಮನಸ್ಸಿಗೆ ಅಲ್ಲ ಎಂಬುದನ್ನು ಸಮರ್ಥಿಸಲಾಯಿತು. ಹಾಗಾದರೆ ಈಶ್ವರನಿಗೂ, ಕುಂಬಾರಾದಿಗಳ ಮನೋವೃತ್ತಿರೂಪವಾದ ಇಚ್ಛೆಯ ಸ್ವಾಮಿತ್ವವು ಇಲ್ಲವಾಗುವುದರಿಂದ, ಘಟಾದಿ ಕರ್ತೃತ್ವವು ಇಲ್ಲವಾಗಲಿ ಎಂಬುದಾಗಿ ಆಕ್ಷೇಪ ಬಂದರೆ, ಅದನ್ನು 'ಸರ್ವಾತ್ಮ' ಇತ್ಯಾದಿ ವಚನದಿಂದ ಪರಿಹರಿಸುತ್ತಾರೆ –

**ಸರ್ವಾತ್ಮತಂತ್ರಕಾಮಾದೇಃ ಕಿಮುತೈವ ಪರೇಶಿತುಃ ।**

ಜೀವನಿಗೂ ಕಾಮಾದಿಗಳ ಮೇಲೆ ಸ್ವಾಮಿತ್ವವಿದೆ ಎಂಬುದನ್ನು ಹಿಂದೆ ಸಮರ್ಥಿಸಲಾಗಿದೆ. ಸರ್ವರೀತಿಯಿಂದಲೂ ಎಲ್ಲ ಜೀವರುಗಳ ಎಲ್ಲ ರೀತಿಯ ಪ್ರವೃತ್ತಿಗಳಿಗೆ ಕಾರಣವಾದ ಕಾಮಾದಿಗಳು ಸದಾಕಾಲವೂ ಪರಮಾತ್ಮನ ಅಧೀನವಾಗಿಯೇ ಇರುತ್ತವೆ. ಅಂಥಹ ಸರ್ವೋತ್ತಮನಾದ ಶ್ರೀಹರಿಗೆ ಇಚ್ಛಾಸ್ವಾಮಿತ್ವವಿದೆಯೆಂದು ಬೇರೆ ಹೇಳಬೇಕೇನು?

ಹಾಗಾದರೆ 'ಕಾಮಃ ಸಂಕಲ್ಪಃ' ಎಂಬುದಾಗಿ ಮನಸ್ಸಿಗೆ ಕಾಮಸ್ವಾಮಿತ್ವವನ್ನು ಹೇಳುವ ವೇದವಚನವಿರುವುದರಿಂದ, ಅನುಭವದ ಬಲದಿಂದ ಆತ್ಮನಿಗೇ ಕಾಮಸ್ವಾಮಿತ್ವವೆಂದು ಹೇಳಿದ್ದು ಅಯುಕ್ತ ಎಂದು ಆಕ್ಷೇಪಿಸಿದರೆ –

**ನ ಚಾನುಭವಗಂ ಕಾಮಸ್ವಾಮಿತ್ವಂ ವೇದವಾಗಪಿ ।।೨೮।।**

**ಶಕ್ತಾಪವದಿತುಂ ತಸ್ಮಾತ್ಸಾ ತದನ್ಯಾಭಿಧಾಯಿನೀ ।**

ಅನುಭವದಿಂದ ಸಿದ್ಧಿಸುವ ಆತ್ಮನ ಕಾಮಸ್ವಾಮಿತ್ವವನ್ನು ವೇದವಾಕ್ಯವೂ ಕೂಡ ಅಲ್ಲಗಳೆಯಲು ಸಮರ್ಥವಲ್ಲ. ಪ್ರಬಲವಾದ ಅನುಭವದಿಂದ ಶ್ರುತಿಯು ಬಾಧಿತವಾದುದರಿಂದ, ಆ ಶ್ರುತಿಯು ಸ್ವಾಮಿತ್ವದಿಂದ ಬೇರೆಯಾದ ಕಾಮದ ಉಪಾದಾನತ್ವವನ್ನು ಹೇಳುವುದು ಎಂದು ತಿಳಿಯಬೇಕು.

**ವಿವರಣೆ:** ಜೀವ ಮತ್ತು ಈಶ್ವರ ಇಬ್ಬರೂ ಜೀವನ ಶರೀರದಲ್ಲಿ ಇರುತ್ತಾರೆ. ಆದರಲ್ಲಿ ಈಶ್ವರನು ಅಂತಃಕರಣವನ್ನು ಸ್ಪಷ್ಟವಾಗಿ ನೋಡಿ, ಅದರಲ್ಲಿ ಜ್ಞಾನ ಇಚ್ಛಾ ಪ್ರಯತ್ನರೂಪವಾದ ವೃತ್ತಿಗಳನ್ನು ತನ್ನ ಇಚ್ಛಾದಿಗಳಿಂದ ಹುಟ್ಟಿಸಿ, ಬಾಹ್ಯ ಸಾಧನಗಳನ್ನು ಅಧಿಷ್ಠಾನ ಮಾಡಿ, ಘಟಾದಿಗಳನ್ನು ಉತ್ಪಾದಿಸುತ್ತಾನೆ. ಜೀವನಾದರೋ ಈಶ್ವರನಿಂದ ಕೊಡಲ್ಪಟ್ಟ ಸ್ವಾಮಿತ್ವವನ್ನು ಹೊಂದಿರುತ್ತಾನೆ. ಜೀವನ ಕಾಮ ಮುಂತಾದ ಸಕಲ ವೃತ್ತಿಗಳಿಗೂ ಈಶ್ವರನೇ ಕಾರಣನೆಂಬುದಾಗಿ ಭಗವದ್ಗೀತೆಯ ಹತ್ತನೆಯ ಅಧ್ಯಾಯದಲ್ಲಿ ಶ್ರೀಕೃಷ್ಣನ ವಚನವಿದೆ – "ಬುದ್ಧಿರ್ಜ್ಞಾನಮಸಂಮೋಹಃ ಕ್ಷಮಾ ಸತ್ಯ ದಮಃ ಶಮಃ। ಸುಖಂ ದುಃಖಂ ಭವೋ ಬಾವೋ ಭಯಂ ಚಾಭಯಮೇವ ಚ।। ಅಹಿಂಸಾ ಸಮತಾ ತುಷ್ಟಿಃ ತಪೋ ದಾನಂ ಯಶೋಽಯಶಃ। ಭವಂತಿ ಭಾವಾ ಭೂತಾನಾಂ ಮತ್ತ ಏವ ಪೃಥಗ್ವಿಧಾಃ।।" ಆದ್ದರಿಂದ ಈಶ್ವರನಿಗೇ ಮುಖ್ಯವಾದ ಸ್ವಾಮಿತ್ವ ಹಾಗೂ ಕರ್ತೃತ್ವ. ಜೀವನಿಗಾದರೋ ಅಮುಖ್ಯವಾದ ಸ್ವಾಮಿತ್ವ ಹಾಗೂ ಕರ್ತೃತ್ವ. ಭಾಗವತದ ಪಂಚಮಸ್ಕಂದ ಹತ್ತನೆಯ ಅಧ್ಯಾಯದಲ್ಲಿ ಜಡಭರತನು ರಹೂಗಣ ರಾಜನಿಗೆ ಇದೇ ಪ್ರಮೇಯವನ್ನೇ "ಸ್ವಸ್ವಾಮಿಭಾವೋ ಧ್ರುವ ಏಷ ಯತ್ರ ತರ್ಹ್ಯಚ್ಯುತೇಽಸಾವಿತಿ ಕೃತ್ಯಯೋಗಃ" (ಎಂದಿಗೂ ಅಳಿಯದ ಸ್ವಾಮಿ–ಭೃತ್ಯ ಸಂಬಂಧವು ಅಚ್ಯುತನಲ್ಲಿ ಇರುತ್ತದೆ) ಇತ್ಯಾದಿ ಮಾತುಗಳಲ್ಲಿ ಹೇಳುತ್ತಾನೆ. ಅಚ್ಯುತನಲ್ಲಿಯೇ ಮುಖ್ಯವಾದ ಸ್ವಾಮಿತ್ವವು, ಇತರರಲ್ಲಿ ಸೇವಕತ್ವವೇ ಇರುವುದು. ಈಶ್ವರನಿಂದ ಇತರರಲ್ಲಿ ಸ್ವಾಮಿ–ಭೃತ್ಯ ಭಾವವು ಅಮುಖ್ಯವು. ಆದ್ದರಿಂದಲೇ ಇತರರಲ್ಲಿ ಮುಖ್ಯವಾದ ಕರ್ತೃತ್ವವು ಸಂಭವಿಸುವುದಿಲ್ಲ ಎಂದು ಭಾಗವತದ ಈ ಮಾತಿನಿಂದ ಸಿದ್ಧವಾಗುತ್ತದೆ.

ಇನ್ನು ಕಾಮಾದಿಗಳ ಸ್ವರೂಪವಾದರೋ ಸಾಕ್ಷಿರೂಪ ಅನುಭವದಿಂದಲೇ ಸಿದ್ಧವಾದುದರಿಂದ ಅನುಭವಕ್ಕೆ ಉಪಜೀವ್ಯತ್ವವು ಸಿದ್ಧಿಸುತ್ತದೆ. ಅಲ್ಲದೆ ಆ

ಸಾಕ್ಷಿಯೂ ಆತ್ಮನಿಗೆ ಕಾಮಾದಿಗಳ ಮೇಲೆ ಸ್ವಾಮಿತ್ವವನ್ನೇ ವಿಷಯೀಕರಿಸುತ್ತದೆ. ಉಪಜೀವ್ಯವೇ ಪ್ರಬಲವಾದ್ದರಿಂದ ಉಪಜೀವಕದಿಂದ ಅದು ಬಾಧಿತವಾಗುವುದಿಲ್ಲ. ಅಪೌರುಷೇಯತ್ವದ ನಿಮಿತ್ತ ವೇದಕ್ಕೆ ಪ್ರಾಬಲ್ಯವಿದ್ದರೂ, ಉಪಜೀವ್ಯಕ್ಕಿಂತಲೂ ದುರ್ಬಲವೇ ಆಗುವುದು. 'ಉಪಜೀವ್ಯ ವಿರೋಧೇ ತು ನ ಪ್ರಾಮಾಣ್ಯಮಮುಷ್ಯಚ' ಎಂಬುದಾಗಿ ತತ್ತ್ವನಿರ್ಣಯದಲ್ಲಿನ ಉಕ್ತವಾಗಿರುವ ಬ್ರಹ್ಮತರ್ಕದ ವಚನದ ಪ್ರಕಾರ ಉಪಜೀವ್ಯಕ್ಕೆ ವಿರೋಧವು ಪ್ರಾಮಾಣ್ಯಕ್ಕೆ ಬಾಧಕವು. ಉಪಜೀವ್ಯವಾದ ಕಾರಣ ಪ್ರಬಲವಾದ ಸಾಕ್ಷಿ ಅನುಭವದಿಂದ ಶ್ರುತಿಯು ಬಾಧಿತವಾಗುವುದರಿಂದ 'ಕಾಮಃ ಸಂಕಲ್ಪಃ' ಎನ್ನುವ ಶ್ರುತಿಯು ಮನಸ್ಸಿಗೆ ಕಾಮಸ್ವಾಮಿತ್ವವನ್ನು ಹೇಳುವುದಿಲ್ಲ, ಆದ್ದರಿಂದ ಉಪಾದಾನತ್ವ ವನ್ನು ಹೇಳುತ್ತದೆ ಎಂದು ಅರ್ಥಮಾಡಬೇಕು.

ಕೇವಲ ಉಪಜೀವ್ಯದಿಂದ ಬಾಧ ಬರುವುದೆಂಬ ಕಾರಣದಿಂದಷ್ಟೇ ಹೀಗೆ ಶ್ರುತಿಗೆ ಅನ್ಯಾರ್ಥ ಮಾಡಬೇಕು ಎಂದು ಹೇಳಿಲ್ಲ, ಮತ್ತೆ ಯುಕ್ತಿವಿರೋಧವೂ ಇದೆ ಎಂದು ಹೇಳುತ್ತಾರೆ –

**ಮೋಕ್ಷಕಾಮೋ ಭವೇದನ್ಯೋ ಯದಿ ಮುಕ್ತಾದ್ಭವಿಷ್ಯತಃ ।।೨೯।।**

**ಮೋಕ್ಷಕಾಮಸ್ಯ ಕಿಂ ತೇನ ಸ್ವನಾಶಾರ್ಥಂ ಚ ಕೋ ಯತೇತ್ ।**

ಕಾಮವು ಅಂತಃಕರಣದ ಪ್ರವೃತ್ತಿಯೆಂದು ಒಪ್ಪಿದರೆ, ಮೋಕ್ಷವಿಷಯಕ ಕಾಮವೂ ಅಂತಃಕರಣಕ್ಕೇ ಆಗಬೇಕು ಎಂದಾಗುವುದು. ಆದರೆ ಮೋಕ್ಷವು ಆತ್ಮನಿಗೆ ಎಂದು ಪ್ರಸಿದ್ಧವು. ಇದರಿಂದ ಮೋಕ್ಷವನ್ನು ಅಪೇಕ್ಷಿಸುವವನು ಮುಂದೆ ಮುಕ್ತಿಯನ್ನು ಹೊಂದುವವನಿಂದ ಭಿನ್ನನು ಎಂದು ಹೇಳಿದಂತಾಯಿತು. ಆದ್ದರಿಂದ ಮುಕ್ತಿಯನ್ನು ಇಚ್ಛಿಸುವ ಹಾಗೂ ಅದಕ್ಕಾಗಿ ಸಾಧನೆಯನ್ನು ಮಾಡುವ ಅಧಿಕಾರಿಗೆ ಏನೂ ಪ್ರಯೋಜನವಾಗದು. ಯಾವ ಪ್ರಯೋಜನವೂ ಇಲ್ಲದ ಸಾಧನೆಯನ್ನು ಮಾಡಿ ಯಾರು ತಾನೆ ತನ್ನ ನಾಶಕ್ಕಾಗಿ ಪ್ರಯತ್ನಿಸುತ್ತಾರೆ? ಇದು ಲೋಕದ ವ್ಯವಹಾರಕ್ಕೂ ವಿರುದ್ಧವೇ ಆಗಿದೆ. ಏಕೆಂದರೆ ಫಲದ ಅಪೇಕ್ಷೆ ಮತ್ತು ಸಾಧನದ ಅನುಷ್ಠಾನ ಇವೆರಡೂ ಒಂದೇ ಕಡೆಯಲ್ಲಿರುವುದು ಲೋಕದಲ್ಲಿ ಕಂಡುಬರುವುದು.

ಈ ಪ್ರಕಾರವಾಗಿ ನಿರೀಶ್ವರ ಸಾಂಖ್ಯಮತವನ್ನು ಸಾಧಾರಣ ದೂಷಣಗಳಿಂದ ನಿರಾಕರಿಸಿ, ಪ್ರಕೃತಿಗೆ ಕರ್ತೃತ್ವವು ಆತ್ಮನಿಗೆ ಭೋಕ್ತೃತ್ವವು ಎಂದು ಹೇಳುವವರ ಮತವನ್ನು 'ಕರ್ತೃತ್ವಂ' ಇತ್ಯಾದಿ ಮಾತುಗಳಿಂದ ನಿರಾಕರಿಸುತ್ತಾರೆ –

**ಕರ್ತೃತ್ವಂ ಯಸ್ಯ ತಸ್ಯೈವ ಭೋಕ್ತೃತ್ವಮುಪಲಭ್ಯತೇ ।।೩೦।।**

**ವಿಭಾಗೇ ಚ ತಯೋರ್ಮಾನಂ ನೈವ ಕಿಂಚಿತ್ಕ್ವಚಿದ್ಭವೇತ್ ।**

ಯಾವನಿಗೆ ಕರ್ತೃತ್ವವೋ ಅವನಿಗೇ ಭೋಕ್ತೃತ್ವವೆಂಬುದು ಲೋಕದಲ್ಲಿ

ಕಂಡುಬರುತ್ತದೆ. ಹಾಗಿರುವಾಗ ಕರ್ತೃತ್ವ ಮತ್ತು ಭೋಕ್ತೃತ್ವಗಳು ಒಂದೆಡೆಯಲ್ಲಿ ಕೂಡಿರುವುದಿಲ್ಲವೆಂಬುದಕ್ಕೆ ಎಲ್ಲಿಯೂ ಯಾವ ಪ್ರಮಾಣವೂ ಕಂಡುಬಂದಿಲ್ಲ.

ಆತ್ಮನಿಗೆ ಮೋಕ್ಷವಾಗದಿರಲಿ ಎಂದು ನೀವು ಆಪಾದನೆ ಮಾಡಿದ್ದು ನಮಗೆ ಇಷ್ಟವೇ ಆಗಿದೆ. ಏಕೆಂದರೆ ಪ್ರಕೃತಿಗೇ ಮೋಕ್ಷವೆಂದು ನಮ್ಮಿಂದ ಅಂಗೀಕೃತವಾಗಿದೆ. ಏಕೆಂದರೆ ಬಂಧವೂ ಪ್ರಕೃತಿಯಲ್ಲಿಯೇ ಇರುವುದು. ಹೀಗೆ ಹೇಳಿದರೆ –

**ಸರ್ವಮಾನವಿರೋಧೈಕದುರ್ದೀಕ್ಷಾದೀಕ್ಷಿತಸ್ತ್ವಯಮ್ ।**

**ಮಾಯಾವದ್ಯುಪಮಾಂ ಯಾಯಾತ್ ತಚ್ಚಶಬ್ದಾನ್ನಿರಾಕೃತಃ ।।೩೧।।**

ಈ ಸಾಂಖ್ಯನಿಗೆ ಸರ್ವಪ್ರಮಾಣಗಳ ವಿರೋಧವನ್ನು ಮಾಡುವುದರಲ್ಲಿಯೇ ಮುಖ್ಯವಾದ ದುಷ್ಟದೀಕ್ಷೆಯಿರುವುದು. ಹೀಗೆ ಮಾಯಾವಾದಿಗಳ ಸಾದೃಶ್ಯವಿರುವ ಕಾರಣ 'ರಚನಾನುಪತ್ತೇಶ್ಚ' ಎಂಬಲ್ಲಿ ಚ ಶಬ್ದದಿಂದ ಸಾಂಖ್ಯನು ನಿರಾಕರಿಸಲ್ಪಟ್ಟಿದ್ದಾನೆ.

## ಅನ್ಯತ್ರಾಭಾವಾಧಿಕರಣಮ್

### ಓಂ ಅನ್ಯತ್ರಾಭಾವಾಚ್ಚ ನ ತೃಣಾದಿವತ್ ಓಂ

ಈ ಅಧಿಕರಣದಲ್ಲಿ ಈಶ್ವರಾನುಗ್ರಹೀತ ಜಡಪ್ರಕೃತಿಯು ಜಗತ್ಕರ್ತೃ ಎಂದು ವಾದಿಸುವ ಪತಂಜಲಿ ಮತವನ್ನು ಅಂದರೆ ಸೇಶ್ವರ ಸಾಂಖ್ಯಮತವನ್ನು ನಿರಾಕರಿಸುತ್ತಾರೆ.

ಈ ಸೂತ್ರಕ್ಕೆ ಕೆಲವರು ಹೀಗೆ ವ್ಯಾಖ್ಯಾನ ಮಾಡುತ್ತಾರೆ –

ಗೋವಿನಿಂದ ಭಕ್ಷಿಸಲ್ಪಟ್ಟ ಹುಲ್ಲು ಎಲೆ ಮುಂತಾದವು ತಾವಾಗಿಯೇ ಹಾಲಾಗಿ ಪರಿವರ್ತನೆ ಹೊಂದುತ್ತವೆ. ಹಾಗೆಯೇ ಪ್ರಧಾನವು ತನ್ನಷ್ಟಕ್ಕೇ ಮಹದಾದಿ ರೂಪದಿಂದ ಪರಿಣಾಮ ಹೊಂದುತ್ತದೆ ಎಂಬ ಆಶಂಕೆಯನ್ನು ಇಲ್ಲಿ ನಿರಾಕರಿಸಲಾಗುತ್ತದೆ. ತೃಣಾದಿಗಳಂತೆ ಪ್ರಧಾನಕ್ಕೆ ಸ್ವಯಂಪರಿಣಾಮ ಹೇಳುವುದು ಕೂಡುವುದಿಲ್ಲ. ಏಕೆಂದರೆ ತೃಣಾದಿಗಳಿಗೂ ಸ್ವಯಂ ಪರಿಣಾಮವಿರುವುದಿಲ್ಲ. ಏಕೆಂದರೆ ಭಕ್ಷಿತವಾದ ತೃಣಾದಿಗಳು ಮಾತ್ರ ಕ್ಷೀರವಾಗುತ್ತವೆ. ಬೇರೆ ಕಡೆಯಲ್ಲಿರುವ ತೃಣಾದಿಗಳು ಕ್ಷೀರವಾಗಿ ಪರಿಣಾಮ ಹೊಂದುವುದಿಲ್ಲ.

ಈ ವ್ಯಾಖ್ಯಾನವು ಸರಿಯಲ್ಲ. ಹೇಗೆಂದರೆ ಮೊದಲು ಮಾಡಿದ ಆಶಂಕೆಯೇ ಅಯುಕ್ತ. ಏಕೆಂದರೆ 'ಪಯೋಂಬುವಚ್ಚೇತ್ ತತ್ರಾಪಿ' ಎಂಬ ಸೂತ್ರದಿಂದಲೇ ಈ ಆಶಂಕೆಯನ್ನು ಪರಿಹರಿಸಲಾಗಿದೆ. ಇನ್ನು ಈ ಆಶಂಕೆಗೆ ಸೂಚಿಸಿರುವ ಪರಿಹಾರವೂ ಯುಕ್ತವಾದುದಲ್ಲ. ಗೋವಿನಲ್ಲಿ ತೃಣಾದಿಗಳು ಕ್ಷೀರರೂಪದಿಂದ ಪರಿಣಾಮ

ಹೊಂದುತ್ತವೆ, ಬೇರೆ ಕಡೆಯಲ್ಲಿ ಹಾಗೆ ಆಗುವುದಿಲ್ಲ ಎಂದು ಹೇಳುವುದರಿಂದ, ಪ್ರಕೃತಿಗೆ ಸಹಕಾರಿ ಕಾರಣವೊಂದಿದೆ ಎಂದು ಹೇಳಿದಂತಾಗುತ್ತದೆ. ಹೊರತು ಈಶ್ವರನ ಅಪೇಕ್ಷೆಯಿದೆ ಎಂದು ಹೇಳಿದಂತಾಗುವುದಿಲ್ಲ. ಆದ್ದರಿಂದ ಇದು ಸೂತ್ರದ ಯಥಾರ್ಥವಾದ ವ್ಯಾಖ್ಯಾನವೆನಿಸುವುದಿಲ್ಲ.

ಹಾಗಾದರೆ ಈ ಸೂತ್ರದ ಸರಿಯಾದ ವ್ಯಾಖ್ಯಾನವೇನು ಎಂದು ಕೇಳಿದರೆ, ಈ ಅಧಿಕರಣದಲ್ಲಿ ನಿರಾಕರಿಸಲ್ಪಡುವ ಸೇಶ್ವರಸಾಂಖ್ಯಮತವನ್ನು ಮೊದಲು ಅನುವಾದ ಮಾಡುತ್ತಾರೆ –

**ಸಾಂಖ್ಯಸ್ತು ಸೇಶ್ವರೋ ಬ್ರೂತೇ ಕ್ಷೇತ್ರಾನುಗ್ರಹಶಕ್ತಿಮಾನ್ ।**

**ಅಸ್ತೀಶ್ವರಃ ಸ್ವಯಂ ಭಾತಃ ಕ್ಲೇಶಕರ್ಮಾದಿವರ್ಜಿತಃ ।।೩೨।।**

**ಕ್ಷೇತ್ರಶಕ್ತಿಮತೀ ಚೈವ ಪ್ರಕೃತಿರ್ಬೀಜಶಕ್ತಿಮಾನ್ ।**

**ಜೀವಃ ಪರ್ಜನ್ಯವದ್ದೈವಶಕ್ತಿಮಾನೀಶ್ವರಃ ಸ್ಮೃತಃ ।।೩೩।।**

**ಪೃಥಿವೀವತ್ಪ್ರಧಾನಂ ತಜ್ಜೀವಃ ಸನ್ನಿಧಿಮಾತ್ರತಃ ।**

**ಬೀಜಾವಪನಕರ್ತೈವೇತ್ಯತ್ರ ಪ್ರಾಹ ಸ್ವಯಂ ಪ್ರಭುಃ ।।೩೪।।**

ಈಶ್ವರನನ್ನು ಒಪ್ಪುವ ಸಾಂಖ್ಯನು ಹೀಗೆ ಹೇಳುತ್ತಾನೆ – ಈಶ್ವರನು ಕ್ಷೇತ್ರಕ್ಕೆ ಅಂದರೆ ಉಪಾದಾನವಾದ ಪ್ರಕೃತಿಗೆ ಅನುಗ್ರಹ ಮಾಡುವ ಶಕ್ತಿಯುಳ್ಳವನೇ ಆಗಿರುತ್ತಾನೆ. ಅವನು ಇಂದ್ರಿಯಾದಿಗಳ ಅಪೇಕ್ಷೆಯಿಲ್ಲದೆ ಎಲ್ಲವನ್ನೂ ಸ್ವತಃ ತಿಳಿಯುವವನು ಅಂದರೆ ಸರ್ವಜ್ಞನು. ಕ್ಲೇಶ ಕರ್ಮಾದಿಗಳಿಲ್ಲದವನು. ಪ್ರಕೃತಿಯು ಉಪಾದಾನತ್ವ ಶಕ್ತಿಯುಳ್ಳದ್ದು. ಜೀವನೇ ಬೀಜಶಕ್ತಿಯುಳ್ಳವನು. ಪ್ರಕೃತಿ ಹಾಗೂ ಜೀವನ ಶಕ್ತಿಯು ಈಶ್ವರನ ಅಧೀನವಾದುದುಲ್ಲ. ಈಶ್ವರನು ಮೋಡದಂತೆ ಅದೃಷ್ಟ ಸ್ವರೂಪತ್ವ ಶಕ್ತಿಯುಳ್ಳವನೆಂದು ಶ್ರುತಿಸ್ಮೃತಿಗಳಿಂದ ಸಿದ್ಧನು. ಪೃಥಿವಿಗೆ ಸ್ವಾಧೀನವಾದ ಉಪಾದಾನತ್ವ ಶಕ್ತಿಯು ಇರುವ ಹಾಗೆ ಪ್ರಧಾನವು ಸ್ವಾಧೀನವಾದ ಉಪಾದಾನತ್ವ ಶಕ್ತಿಯನ್ನು ಹೊಂದಿರುವುದು. ವೃಕ್ಷಾದಿಗಳ ಬೀಜಗಳ ಹಾಗೆ ಬೀಜನಾದುದರಿಂದ ಜೀವನೂ ಸ್ವಾಧೀನವಾದ ಬೀಜತ್ವ ಶಕ್ತಿಯುಳ್ಳವನು ಎಂದು ಅನುಮೇಯಿಸತಕ್ಕದ್ದು. ಜೀವನು ಕೇವಲ ಸನ್ನಿಧಿ ಮಾತ್ರದಿಂದಲೇ ಬೀಜವನ್ನು ಬಿತ್ತುವವನು ಎನಿಸುತ್ತಾನೆ. ಈಶ್ವರನು ಕೇವಲ ಕ್ಷೇತ್ರಾನುಗ್ರಾಹಕನಾದ್ದರಿಂದ ಬೀಜವನ್ನು ಬಿತ್ತುವುದರಲ್ಲಿ ಅವನ ಪಾತ್ರವಿಲ್ಲ. ಇನ್ನು ಜೀವನೂ ಸಾಕ್ಷಾತ್ತಾಗಿ ಬೀಜವನ್ನು ಬಿತ್ತುವುದಿಲ್ಲ. ಶರೀರ ಮುಂತಾದ ರೂಪದಲ್ಲಿರುವ ಪ್ರಕೃತಿಯೇ ಜೀವನಲ್ಲಿರುವ ಬೀಜತ್ವಶಕ್ತಿಯನ್ನು ಬಳಸಿಕೊಂಡು ಉತ್ಪತ್ತಿಕ್ರಿಯೆಯನ್ನು ನಡೆಸುತ್ತದೆ. ಸನ್ನಿಧಾನವಾದ ಜೀವನಿಗೂ ಶರೀರಾದಿ ಪ್ರಕೃತಿಗೂ ಇರುವ

ಭೇದವನ್ನು ತಿಳಿಯದೆ ಜೀವನೇ ಕರ್ತೃವೆಂದು ಲೋಕದಲ್ಲಿ ವ್ಯವಹಾರವಿರುತ್ತದೆ.

ಈ ರೀತಿಯ ಸೇಶ್ವರ ಸಾಂಖ್ಯರ ವಾದವನ್ನು ಸ್ವಯಂ ಸಮರ್ಥರಾದ ವೇದವ್ಯಾಸರು 'ಅನ್ಯತ್ರಾಭಾವಾಚ್ಚ ನ ತೃಣಾದಿವತ್' ಎನ್ನುವ ಸೂತ್ರದಲ್ಲಿ ನಿರಾಕರಿಸುತ್ತಾರೆ. ಇದನ್ನೇ 'ಅನ್ಯತ್ರ' ಇತ್ಯಾದಿ ವಚನದಿಂದ ಶ್ರೀಮದಾಚಾರ್ಯರು ವಿವರಿಸುತ್ತಾರೆ –

**ಅನ್ಯತ್ರ ಕಾಽಪಿ ಶಕ್ತಿರ್ನ ಸ್ವಾತಂತ್ರ್ಯೇಣ ಈಶ ಏವ ಹಿ ।**

**ಶಕ್ತೀಸ್ತಾಃ ಪ್ರೇರಯತ್ಯಂಜಸ್ತದಧೀನಾಶ್ಚ ಸರ್ವದಾ ।।೩೫।।**

**ಸತ್ತಾ ಪ್ರಧಾನಪುರುಷಶಕ್ತೀನಾಂ ಚ ಪ್ರತೀತಯಃ ।**

**ಪ್ರವೃತ್ತಯಶ್ಚ ತಾಃ ಸರ್ವಾಃ ನಿತ್ಯಂ ನಿತ್ಯಾತ್ಮನಾ ಯತಃ ।।೩೬।।**

**ತಥಾಽನಿತ್ಯತಯಾ ನಿತ್ಯಂ ನಿತ್ಯಶಕ್ತ್ಯಾ ಸ್ವಯೇಶ್ವರಃ ।**

**ನಿಯಾಮಯತಿ ನಿತ್ಯಂ ಚ ನ ಋತೇ ತ್ವದಿತಿ ಶ್ರುತೇಃ ।।೩೭।।**

ಪ್ರಕೃತಿ, ಪುರುಷ, ಬೀಜ ಹಾಗೂ ಪೃಥಿವ್ಯಾದಿಗಳಲ್ಲಿಯೂ ಸ್ವತಂತ್ರವಾಗಿ ಯಾವುದೇ ರೀತಿಯ ಶಕ್ತಿಯೂ ಇರುವುದಿಲ್ಲ. ಆವಾವ ಶಕ್ತಿಗಳನ್ನು ಈಶ್ವರನೇ ಚೆನ್ನಾಗಿ ಪ್ರೇರಿಸುತ್ತಾನೆ ಎಂಬುದಾಗಿ ಶ್ರುತ್ಯಾದಿಗಳಲ್ಲಿ ಪ್ರಸಿದ್ಧವಾಗಿದೆ. ಆದಕಾರಣ ಈಶ್ವರನನ್ನು ಬಿಟ್ಟು ಬೇರೆ ಕಡೆಗಳಲ್ಲಿ ಯಾವ ಶಕ್ತಿಯೂ ಸ್ವತಂತ್ರವಾಗಿ ಇರುವುದಿಲ್ಲ. ಪ್ರಕೃತಿ ಹಾಗೂ ಪುರುಷರಲ್ಲಿರುವ ಶಕ್ತಿಗಳ ಸ್ವರೂಪ, ಪ್ರಮಾವಿಷಯತ್ವ ಹಾಗೂ ಆವಾವ ಪ್ರವೃತ್ತಿಗಳು, ಇವೆಲ್ಲವೂ ಯಾವಾಗಲೂ ಈಶ್ವರನ ಅಧೀನವೇ ಆಗಿರುತ್ತವೆ. ನಿತ್ಯವಾದ ಪದಾರ್ಥಗಳ ನಿತ್ಯತ್ವವೂ, ಅನಿತ್ಯವಾದವುಗಳ ಅನಿತ್ಯತ್ವವೂ ಸರ್ವದಾ ಶ್ರೀಹರಿಯ ಅಧೀನವಾಗಿಯೇ ಇರುತ್ತವೆ. ಶ್ರೀಹರಿಯು ಪರಾಧೀನವಲ್ಲದ ಸ್ವಕೀಯವಾದ ನಿತ್ಯವಾದ ಶಕ್ತಿಯಿಂದ ಅವುಗಳನ್ನು ಸದಾಕಾಲವೂ ನಿಯಮನ ಮಾಡುತ್ತಾನೆ. ಇದಕ್ಕೆ 'ನ ಋತೇ ತ್ವತ್ ಕ್ರಿಯತೇ ಕಿಂಚನಾರೇ' ಇತ್ಯಾದಿ ಶ್ರುತಿಯು ಪ್ರಮಾಣವಾಗಿದೆ. ಆದ್ದರಿಂದ ಹಿಂದೆ ಹೇಳಿದ ಸಾಂಖ್ಯರ ಮತ ಅಯುಕ್ತವು.

ಇನ್ನು ಪ್ರಧಾನಾದಿಗಳ ಸತ್ತಾ ಪ್ರವೃತ್ತಿ ಪ್ರಮಿತಿಗಳು ಭಗವದಧೀನವೆಂದು ಯಾವುದು ಹೇಳಲ್ಪಟ್ಟಿತೋ ಅದಕ್ಕೆ ಪ್ರಮಾಣವನ್ನು ತೋರಿಸುತ್ತಾರೆ –

**ಸ್ವಭಾವಜೀವಕರ್ಮಾಣಿ ದ್ರವ್ಯಂ ಕಾಲಃ ಶ್ರುತಿಃ ಕ್ರಿಯಾಃ ।**

**ಯತ್ಪ್ರಸಾದಾದಿಮೇ ಸಂತಿ ನ ಸಂತಿ ಯದುಪೇಕ್ಷಯಾ ।।೩೮।।**

**ಇತಿ ಶ್ರುತೇರ್ನ ಸತ್ತಾದ್ಯಾ ಅಪಿ ನಾರಾಯಣಂ ವಿನಾ ।**

ತತ್ಪತಂಜಲಿವಿಂಧ್ಯಾದಿಮತಂ ನ ಪುರುಷಾರ್ಥದಮ್ ।।೩೯।।

ಸ್ವಭಾವ, ಜೀವ, ಧರ್ಮಾಧರ್ಮಗಳ ಅಭಿವ್ಯಕ್ತಿ, ದ್ರವ್ಯ, ಕಾಲ, ವೇದ, ಪರಿಸ್ಪಂದಗಳು ಇವೆಲ್ಲವೂ ಯಾವ ಶ್ರೀಹರಿಯ ಅನುಗ್ರಹದಿಂದ ಇರುತ್ತವೆಯೋ, ಹಾಗೂ ಅನುಗ್ರಹವಿಲ್ಲದೆ ಇರುವುದಿಲ್ಲವೋ ಹೀಗೆ ಶ್ರುತಿಯಿರುವುದರಿಂದ – ಪ್ರಧಾನಾದಿಗಳ ಸತ್ತಾದಿಗಳೂ ಕೂಡ ಶ್ರೀಹರಿಯ ಪ್ರೇರಣೆಯಿಲ್ಲದೆ ಇರುವುದಿಲ್ಲ. ಆದುದರಿಂದ ಪತಂಜಲಿ (ಸೇಶ್ವರ ಸಾಂಖ್ಯ), ವಿಂಧ್ಯ (ನಿರೀಶ್ವರ ಸಾಂಖ್ಯ) ಮುಂತಾದ ಹಾಗೂ ಇವರ ಏಕದೇಶಿಗಳಾದ ಪಂಚಶಿಖ, ಕೃಷ್ಣ ಮುಂತಾದವರ ಮತವು ಪುರುಷಾರ್ಥಪ್ರದವಲ್ಲ. ಆದ್ದರಿಂದ ತ್ಯಾಜ್ಯವೆಂದು ಅರ್ಥ.

## ಅಭ್ಯುಪಗಮಾಧಿಕರಣಮ್

### ಓಂ ಅಭ್ಯುಪಗಮೇಽಪ್ಯರ್ಥಾಭಾವಾತ್ ಓಂ

ಈ ಅಧಿಕರಣದಲ್ಲಿ ಚಾರ್ವಾಕ ಮತವನ್ನು ನಿರಾಕರಿಸುತ್ತಾರೆ. ಪ್ರತ್ಯಕ್ಷವೊಂದೇ ಪ್ರಮಾಣ. ಪ್ರತ್ಯಕ್ಷಕ್ಕೆ ಅಗೋಚರವಾದ ಧರ್ಮ ಅಧರ್ಮ ಈಶ್ವರ ಮುಂತಾದ ಅತೀಂದ್ರಿಯ ವಸ್ತುಗಳು ಇಲ್ಲವೇ ಇಲ್ಲ. ದೇಹವೇ ಆತ್ಮವು. ಅರ್ಥ ಕಾಮಗಳೇ ಪುರುಷಾರ್ಥಗಳು. ಇದೇ ಚಾರ್ವಾಕರ ಮತ.

ಪ್ರಧಾನಕ್ಕೆ ಪ್ರವೃತ್ತಿಯು ಸಂಭವಿಸುವುದಿಲ್ಲ ಎಂಬುದನ್ನು ಹಿಂದಿನ ಅಧಿಕರಣದಲ್ಲಿ ಹೇಳಲಾಗಿತ್ತು. ಈಗ ಪ್ರವೃತ್ತಿಯನ್ನು ಅಂಗೀಕರಿಸಿದರೂ ಅದರ ಪ್ರಯೋಜನವಿಲ್ಲವೆಂದು ಈ ಸೂತ್ರವು ಪ್ರತಿಪಾದಿಸುತ್ತದೆ ಎಂಬುದಾಗಿ ಕೆಲವರು ಈ ಸೂತ್ರಕ್ಕೆ ವ್ಯಾಖ್ಯಾನ ಮಾಡುತ್ತಾರೆ. ಈ ವ್ಯಾಖ್ಯಾನವು ಅಯುಕ್ತವಾದುದು. ಈ ಸೂತ್ರಕ್ಕೆ ಈ ಅರ್ಥವನ್ನು ಹೇಳುವ ಅಭಿಪ್ರಾಯವಿದ್ದ ಪಕ್ಷದಲ್ಲಿ ಅಭ್ಯುಪಗಮೇ ಎಂಬುದು ವ್ಯರ್ಥವಾಗುವುದು. ಅರ್ಥಾಭಾವಾಚ್ಚ ಎಂದು ಹೇಳಿದ್ದರೆ ಸಾಕಾಗಿತ್ತು. ಇಲ್ಲಿ ಅರ್ಥಾಭಾವಾತ್ (ಪ್ರಯೋಜನವಿಲ್ಲವಾದ್ದರಿಂದ) ಎಂಬ ಹೇತುವು ಸಾಂಖ್ಯ ಮತವು ಅಯುಕ್ತವೆಂದು ಸಾಧಿಸುವುದೋ ಅಥವಾ ಪ್ರಕೃತಿಗೆ ಪ್ರವೃತ್ತಿಯು ಕೂಡುವುದಿಲ್ಲವೆಂದು ಸಾಧಿಸುವುದೋ ಎಂದು ಪ್ರಶ್ನೆ. ಮೊದಲನೆಯ ಪಕ್ಷ ಕೂಡುವುದಿಲ್ಲ. ಏಕೆಂದರೆ ಹೇತುಸಾಧ್ಯಗಳಿಗೆ ವೈಯಧಿಕರಣವಿದೆ. ಅಂದರೆ ಹೇತು ಸಾಧ್ಯಗಳು ಒಂದೆಡೆಯಿಲ್ಲ. ಹೇತು ಸಾಧ್ಯಗಳಿಗೆ ಏಕಾಧಿಕರಣದಲ್ಲಿ ಸಮಾವೇಶವನ್ನು ಹೇಳಿದರೆ ತಮ್ಮ ಮತದ ರೀತಿಯಿಂದ ಹೇತುವಿಗೆ ಸಾಧ್ಯದ ವ್ಯಭಿಚಾರ ಬರುವುದು. ಎರಡನೆಯ ಪಕ್ಷವೂ ಸರಿಯಲ್ಲ. ಪ್ರಕೃತಿಗೆ ಪ್ರವೃತ್ತಿಯನ್ನು ಅಂಗೀಕರಿಸಿ ಅನಂತರ ನಿರಾಕರಿಸಿದರೆ ಅಭ್ಯುಪಗಮದಿಂದ (ಅಂಗೀಕಾರದಿಂದ) ವಿರೋಧವು ಬರುವುದು. ಏಕೆಂದರೆ ಅಭ್ಯುಪಗಮವಾದದಲ್ಲಿ ಯಾವುದನ್ನು ಅಂಗೀಕರಿಸುತ್ತಾರೋ ಅದನ್ನೇ ನಿರಾಕರಿಸುವುದಿಲ್ಲ. ಆದಪ್ಯಯುಕ್ತ ಇದು ಸೂತ್ರದ ಅಭಿಪ್ರಾಯವಲ್ಲ.

ಹಾಗಾದರೆ ಅಚೇತನಕ್ಕೆ ಕರ್ತೃತ್ವವು ಇಲ್ಲವೆಂದರೂ, ಶರೀರಕ್ಕೇ ಚೈತನ್ಯವಿರುವುದರಿಂದ ಕರ್ತೃತ್ವವು ಸಂಭವಿಸುತ್ತದೆ. ಆದ್ದರಿಂದ ಈಶ್ವರಾದಿಗಳಿಂದ ಏನೂ ಪ್ರಯೋಜನವಿಲ್ಲ ಎಂದು ಹೇಳುವ ಚಾರ್ವಾಕನ ಮತವನ್ನು ಈ ಅಧಿಕರಣದಲ್ಲಿ ನಿರಾಕರಿಸುತ್ತಾರೆ. ಮೊದಲು 'ಚಾರ್ವಾಕೈಃ' ಇತ್ಯಾದಿ ವಾಕ್ಯದಿಂದ ಚಾರ್ವಾಕಮತವನ್ನು ಅನುವಾದ ಮಾಡುತ್ತಾರೆ –

**ಚಾರ್ವಾಕೈರುಚ್ಯತೇ ಮಾನಮಕ್ಷಜಂ ನಾಪರಂ ಕ್ವಚಿತ್ ।**

**ದೇಹ ಆತ್ಮಾ ಪುಮರ್ಥಶ್ಚ ಕಾಮಾರ್ಥಾಭ್ಯಾಂ ವಿನಾ ನ ಹಿ ।।೪೦।।**

ಚಾರ್ವಾಕರಿಂದ ಪ್ರತ್ಯಕ್ಷವೇ ಪ್ರಮಾಣವೆಂದು ಹೇಳಲ್ಪಡುತ್ತದೆ. ಪ್ರತ್ಯಕ್ಷದಿಂದ ಇತರವಾದ ಅನುಮಾನ ಆಗಮಗಳು ಯಾವುದೇ ವಿಷಯದಲ್ಲಿಯೂ ಪ್ರಮಾಣವೆಂದು ಹೇಳಲ್ಪಡುವುದಿಲ್ಲ. ದೇಹವೇ ಆತ್ಮವು. ಕಾಮ ಅರ್ಥಗಳನ್ನು ಬಿಟ್ಟು ಬೇರೆ ಪುರುಷಾರ್ಥವೇ ಇಲ್ಲ ಎಂದೂ ಅವರಿಂದ ಹೇಳಲ್ಪಡುತ್ತದೆ. (ಚಾರು ಅಂದರೆ ಮನೋಹರವಾದ ಬುದ್ಧಿ. ಇಂಥಹ ಬುದ್ಧಿಯುಳ್ಳ ಬೃಹಸ್ಪತ್ಯಾಚಾರ್ಯರು ಲಕ್ಷಣಾವೃತ್ತಿಯಿಂದ ಚಾರ್ವಿ ಎನಿಸುತ್ತಾರೆ. ಅವರ ಶಿಷ್ಯರೇ ಚಾರ್ವಾಕರು.)

ಈ ಮತದ ನಿರಾಕರಣಕ್ಕಾಗಿ ಸೂತ್ರವನ್ನು ವ್ಯಾಖ್ಯಾನಿಸಲು 'ಯದ್ಯೈವಂ' ಇತ್ಯಾದಿ ವಾಕ್ಯದಿಂದ ಉಪೋದ್ಘಾತವನ್ನು ಹೇಳುತ್ತಾರೆ –

**ಯದ್ಯೈವಂ ದರ್ಶನೇನಾಸ್ಯ ಕೋಽರ್ಥಃ ಪ್ರತ್ಯಕ್ಷಗೋಚರಃ ।**

**ಲಬ್ಧಸ್ತೇನೈವ ಹಿ ನರೈಃ ಶಾಸ್ತ್ರಾತ್ಕಿಂ ಮೋಹನಂ ವಿನಾ ।।೪೧।।**

**ಸ್ವಪರಾರ್ಥವಿಹೀನತ್ವಾತ್ಸ್ವಮತೇನೈವ ನಿಷ್ಫಲಮ್ ।**

**ಕಿಮಿತ್ಯುನ್ಮತ್ತವಚ್ಛಾಸ್ತ್ರಂ ವೃಥಾ ಪ್ರಲಪತಿ ಸ್ವಯಮ್ ।।೪೨।।**

ಹೀಗೆ ಅತೀಂದ್ರಿಯವಾದ ವಸ್ತುವೇ ಇಲ್ಲವೆಂದಾದರೆ, ಆಗ ಈ ಶಾಸ್ತ್ರಕ್ಕೆ ವಿಷಯ ಪ್ರಯೋಜನಗಳು ಇಲ್ಲವಾಗಬೇಕಾದೀತು. ಈ ಶಾಸ್ತ್ರವನ್ನು ನಿರ್ಮಿಸಿದ ಬೃಹಸ್ಪತಿಗೆ ಪ್ರತ್ಯಕ್ಷಕ್ಕೆ ಗೋಚರವಾದ ಯಾವ ವಿಷಯ ಪ್ರಯೋಜನಗಳು ಪ್ರಾಪ್ತವಾಗಿವೆ ಎಂದು ಕೇಳಿದರೆ ಯಾವುದೂ ಇಲ್ಲವೆಂದೇ ಉತ್ತರವಾಗುವುದು. ಶಿಷ್ಯರಿಗೂ ಏನೂ ಪ್ರಾಪ್ತವಾಗಿರುವುದಿಲ್ಲ. ಈ ಶಾಸ್ತ್ರದಿಂದ ಶಿಷ್ಯರಿಗೆ ಮೋಹನವನ್ನು ಬಿಟ್ಟು ಬೇರೆ ಯಾವುದೇ ಪ್ರಯೋಜನವಿಲ್ಲ. ಹೇಗೆಂದರೆ ಅಂತೀಂದ್ರಿಯವಾದ ವಿಷಯಾದಿಗಳು ಅವರಿಗೆ ಲಬ್ಧವಾಗುವುದಿಲ್ಲ. ಏಕೆಂದರೆ ಅವುಗಳು ಇರುವುದೇ ಇಲ್ಲವು. ಪ್ರತ್ಯಕ್ಷಕ್ಕೆ ಗೋಚರವಾಗುವ ವಿಷಯಾದಿಗಳು ಅವು ಪ್ರತ್ಯಕ್ಷಕ್ಕೆ ಗೋಚರವೆಂಬ ಕಾರಣದಿಂದಲೇ ಶಾಸ್ತ್ರಕ್ಕೆ ವಿಷಯವೇ ಆಗುವುದಿಲ್ಲ. ಹೀಗೆ ಅಭಿಪ್ರಾಯ. ತನ್ನ ಶಾಸ್ತ್ರದಿಂದ ತನಗೂ ಉಪಯೋಗವಿಲ್ಲ, ಆದನ್ನೇ ಪಾಲಿಸುವ

ಬೇರೆಯವರಿಗೂ ಉಪಯೋಗವಿಲ್ಲ. ಆದುದರಿಂದ ವಿಷಯ ಪ್ರಯೋಜನಗಳಿಂದ ರಹಿತವಾದ ಈ ಶಾಸ್ತ್ರವನ್ನು ಬುದ್ಧಿಯುಳ್ಳ ಯಾವನು ತಾನೆ ಹುಚ್ಚನಂತೆ ವೃಥಾ ಪ್ರಲಪಿಸುತ್ತಾನೆ?

ಹಾಗಾದರೆ ಪ್ರಮಾಣವನ್ನು ಅನುಸರಿಸಿ ಪ್ರಯೋಜನವಿರುತ್ತದೆ. ಆದರೆ ಪ್ರಯೋಜನವನ್ನನುಸರಿಸಿ ಅಪ್ರಾಮಾಣಿಕವಾದ ಅರ್ಥವನ್ನು ಅಂಗೀಕರಿಸಿದರೆ ಅತಿಪ್ರಸಂಗವು ಬರುವುದು. ಹೇಗೆಂದರೆ ನೀರಡಿಕೆಯಿಂದ ಬಾಯಾರಿದವನಿಗೆ ಮರುಭೂಮಿಯಲ್ಲಿ ನೀರಿನ ಸಿದ್ಧಿಯನ್ನು ಅಂಗೀಕರಿಸುವ ಪ್ರಸಂಗ ಬರುವುದು. ಆದ್ದರಿಂದ ಹಾಗೆ ಮಾಡುವುದು ಉಚಿತವಲ್ಲ. ಪ್ರತ್ಯಕ್ಷವೊಂದೇ ಪ್ರಮಾಣ ಎಂದು ಅಂಗೀಕರಿಸುವುದರಿಂದ ಲೋಕವ್ಯವಹಾರವು ಕೂಡುವುದಿಲ್ಲವೆಂದು ಹೇಳಕೂಡದು. ಸಂಭಾವನೆಯಿಂದಲೇ ಲೋಕವ್ಯವಹಾರವು ಕೂಡುತ್ತದೆ. 'ಗೌರೋऽಹಂ ಜಾನಾಮಿ' (ನಾನು ಗೌರವರ್ಣದವನೆಂದು ತಿಳಿಯುತ್ತೇನೆ) ಎಂಬ ಪ್ರತ್ಯಕ್ಷದಿಂದ ದೇಹವೇ ಆತ್ಮವೆಂದು ತಿಳಿದುಬರುತ್ತದೆ. ಆದುದರಿಂದ ಕಾಲಾಂತರದಲ್ಲಿ ಪ್ರಯೋಜನವನ್ನು ಹೊಂದಬೇಕಾದ ಪುರುಷನೇ ಇಲ್ಲದಿರುವುದರಿಂದ, ಧರ್ಮ ಮೋಕ್ಷಗಳೆಂಬ ಪ್ರಯೋಜನವನ್ನೂ ಅತೀಂದ್ರಿಯವಾದ ವಿಷಯವನ್ನೂ ಅಂಗೀಕರಿಸುವುದು ಶಕ್ಯವಲ್ಲ ಎಂಬ ಆಶಂಕೆಯು ಬಂದರೆ ಅದರ ಪರಿಹಾರವನ್ನು 'ದೇಹಾದನ್ಯೋ' ಇತ್ಯಾದಿ ಮಾತುಗಳಿಂದ ಹೇಳುತ್ತಾರೆ –

**ದೇಹಾದನ್ಯೋऽನುಭವತ ಆತ್ಮಾ ಭಾತಿ ಶರೀರಿಣಾಮ್ ।**

**ಮಮ ದೇಹ ಇತಿ ವ್ಯಕ್ತಂ ಮಮಾರ್ಥ ಇತಿವತ್ಸದಾ ।।೪೩।।**

ದೇಹಾಭಿಮಾನವುಳ್ಳವರಿಗೆ, ಪ್ರಮಾಣವೆಂದು ಪರರು ಒಪ್ಪಿದ ಪ್ರತ್ಯಕ್ಷದಿಂದಲೇ 'ನನ್ನ ಹಣ' ಇತ್ಯಾದಿ ವ್ಯವಹಾರದಲ್ಲಿ ಯಾವಾಗಲೂ ಭೇದದ ಜ್ಞಾನವಿರುವಂತೆ 'ನನ್ನ ದೇಹ' ಎಂದು ಹೇಳುವಾಗಲೂ ಆತ್ಮನು ದೇಹದಿಂದ ಭಿನ್ನನಾಗಿಯೇ ತೋರುತ್ತಾನೆ.

ಹಾಗಾದರೆ ದೇಹಕ್ಕಿಂತ ಭಿನ್ನನಾದ ಆತ್ಮನು ಇರಲಿ. ಆದರೂ ಅರ್ಥಕಾಮಗಳನ್ನು ಬಿಟ್ಟು ಬೇರೆಯಾದ ಪುರುಷಾರ್ಥ ಹಾಗೂ ಅದರ ಸಾಧನ ಮುಂತಾದುದರ ಬಗ್ಗೆ ಏನು ಪ್ರಮಾಣವು ? ಎಂದರೆ, ಅದಕ್ಕೆ ಅನುಮಾನ ಮತ್ತು ವೇದಾದಿ ಆಗಮಗಳು ಎಂಬುದಾಗಿ ಉತ್ತರ ಹೇಳುತ್ತೇವೆ. ಇವುಗಳಿಗಾದರೂ ಪ್ರಾಮಾಣ್ಯವು ಹೇಗೆ ಎಂದರೆ–

**ಪ್ರತ್ಯಕ್ಷಸ್ಯೈವ ಮಾನತ್ವಮಿತಿ ಕೇನಾವಸೀಯತೇ ।**

**ಯದಿ ತತ್ಸಾಧಕಂ ವೇದಪ್ರಾಮಾಣ್ಯೇ ನ ಕಥಂ ಭವೇತ್ ।।೪೪।।**

ಪ್ರತ್ಯಕ್ಷವೊಂದೇ ಪ್ರಮಾಣವೆಂಬುದು ಯಾವುದರಿಂದ ನಿರ್ಣಯಿಸಲ್ಪಡುತ್ತದೆ ಎಂದು ಕೇಳುತ್ತೇವೆ. ಪರರ ವಚನ ಅನುಮಾನಗಳಿಂದ ಪ್ರತ್ಯಕ್ಷಕ್ಕೆ ಪ್ರಾಮಾಣ್ಯವನ್ನು ಅನುಮೇಯಿಸುತ್ತೇವೆ ಎಂದರೆ, ವೇದ ಪ್ರಾಮಾಣ್ಯದ ವಿಷಯದಲ್ಲಿಯೂ ಅವು ಹೇಗೆ ಪ್ರಾಮಾಣ್ಯ ಸಾಧಕವಾಗಲಾರವು? ಆದುದರಿಂದ ಪ್ರತ್ಯಕ್ಷಪ್ರಾಮಾಣ್ಯವು ಗ್ರಹಣವಾಗುವ ರೀತಿಯಲ್ಲಿಯೇ ವೇದವಾಕ್ಯ ಜ್ಞಾನಕ್ಕೂ ಪ್ರಾಮಾಣ್ಯವು ಗೃಹೀತವಾಗುತ್ತದೆ ಎಂದು ತಾತ್ಪರ್ಯ.

ಹಾಗಾದರೆ ಜ್ಞಾನದ ಗ್ರಾಹಕಕ್ಕೆ ಪ್ರಾಮಾಣ್ಯ ಗ್ರಾಹಕತ್ವವು ಸ್ವಾಭಾವಿಕವೇ ಆದರೂ ಅಪವಾದದಿಂದ ಅದು ಅಪ್ರಾಮಾಣ್ಯವನ್ನು ಗ್ರಹಿಸುತ್ತದೆ. ಆದುದರಿಂದ ವೇದಾದಿಗಳ ಪ್ರಾಮಾಣ್ಯವು ಹೇಗೆ ಸಿದ್ಧಿಸುತ್ತದೆ ಎಂದರೆ, ಇದು ಪ್ರತ್ಯಕ್ಷದ ವಿಷಯದಲ್ಲಿಯೂ ಸಮಾನವೇ. ಅಪವಾದವು ಅದೃಷ್ಟವಾದುದರಿಂದ ಪ್ರತ್ಯಕ್ಷಕ್ಕೆ ಪ್ರಾಮಾಣ್ಯವು ಸಿದ್ಧಿಸುತ್ತದೆ ಎಂದರೆ, ಇದು ವೇದಾದಿಗಳಲ್ಲಿಯೂ ಸಮಾನವು ಎಂಬುದಾಗಿ 'ನ ಚ' ಇತ್ಯಾದಿ ವಚನದಿಂದ ಹೇಳುತ್ತಾರೆ –

**ನ ಚಾನ್ಯಾಮಾನತಾ ಕ್ವಾಪಿ ಪ್ರಮಾಣೇನಾವಸೀಯತೇ ।**

**ಸ್ವಮತೇನಾರ್ಥರಹಿತ ಉಪೇಕ್ಷ್ಯಃ ಪಕ್ಷ ಈದೃಶಃ ।।೪೫।।**

ಪ್ರತ್ಯಕ್ಷದಿಂದ ಇತರವಾದ ಅನುಮಾನ ಆಗಮಾದಿಗಳ ಅಪ್ರಾಮಾಣ್ಯವು ಯಾವುದೇ ವಿಷಯದಲ್ಲಿಯೂ ಪ್ರಮಾಣದಿಂದ ನಿರ್ಣೀತವಾಗುವುದಿಲ್ಲ. ತನ್ನ ಸಮ್ಮತಿಯಿಂದಲೇ ವಿಷಯ ಪ್ರಯೋಜನಾದಿಗಳಿಂದ ರಹಿತವಾದ ಈಶ್ವರಾದಿ ಅತೀಂದ್ರಿಯ ಪದಾರ್ಥಗಳನ್ನು ಅಂಗೀಕರಿಸದ ದುಷ್ಟವಾದ ಚಾರ್ವಾಕ ಮತವು ಉಪೇಕ್ಷ ಮಾಡತಕ್ಕದ್ದು.

## ಪುರುಷಾಶ್ಮಾಧಿಕರಣಮ್

### ಓಂ ಪುರುಷಾಶ್ಮವದಿತಿ ಚೇತ್ತಥಾಪಿ ಓಂ

ಈ ಅಧಿಕರಣದಲ್ಲಿ ನಿರೀಶ್ವರ ಸಾಂಖ್ಯರಲ್ಲಿ ಏಕದೇಶಿಗಳಾದ, ಪುರುಷೋಪಸರ್ಜನ ಪ್ರಕೃತಿಯೇ ಕರ್ತೃವೆಂದು ಹೇಳುವವರ ಮತವು ನಿರಾಕರಿಸಲ್ಪಡುತ್ತದೆ. ಅಂದರೆ 'ಕೇವಲ ಅಚೇತನಕ್ಕೆ ಕರ್ತೃತ್ವವು ಕೂಡದಿದ್ದರೂ ಚೇತನದ ಸನ್ನಿಧಾನದಿಂದ ಅಚೇತನಕ್ಕೆ ಕರ್ತೃತ್ವವು ಸಂಭವಿಸುತ್ತದೆ. ಆದ್ದರಿಂದ ಈಶ್ವರನು ಬೇಕಿಲ್ಲ' ಎಂಬ ಆಶಂಕೆಯು ಈ ಅಧಿಕರಣದಲ್ಲಿ ನಿರಾಕರಿಸಲ್ಪಡುತ್ತದೆ.

**ಸೂತ್ರಾರ್ಥ:** ಅಚೇತನವಾದ ಶರೀರವು ಚೇತನನ ಸಂಬಂಧದಿಂದ ಕಲ್ಲು ತೂರುವುದು ಮುಂತಾದ ಪ್ರವೃತ್ತಿಯನ್ನು ಮಾಡುತ್ತದೆ. ಹಾಗೆಯೇ ಪ್ರಧಾನವು ಜೀವನ ಸಂಬಂಧದಿಂದ ಮಹದಾದಿ ಕಾರ್ಯಗಳನ್ನು ಮಾಡುತ್ತದೆ ಎಂದು

ಹೇಳುವುದಾದರೆ, ಶರೀರದ ಪ್ರವೃತ್ತಿಯೂ ಕೂಡ ಈಶ್ವರನ ಅಧೀನವಾಗಿಯೇ ಇರುವುದರಿಂದ ದೃಷ್ಟಾಂತವು ಸಮಂಜಸವಲ್ಲ. ಆದಪ್ರಯುಕ್ತ ಈ ಮತವು ಅಯುಕ್ತವು.

ಈ ಸೂತ್ರಾರ್ಥವನ್ನೇ 'ಸನ್ನಿಧಾನಾತ್' ಇತ್ಯಾದಿ ವಚನದಿಂದ ವಿವರಿಸುತ್ತಾರೆ–

**ಸನ್ನಿಧಾನಾಚ್ಚೇತನಸ್ಯ ವರ್ತತೇ ಯದ್ಯಚೇತನಮ್ ।**

**ತಥಾಪ್ಯಬುದ್ಧಿಪೂರ್ವತ್ವಾದುಕ್ತದೋಷಃ ಸಮೋ ಭವೇತ್ ।।೪೬।।**

ಹೇಗೆ ಅಚೇತನವಾದ ಶರೀರವು ಚೇತನನ ಸನ್ನಿಧಾನದಿಂದಲೇ ಕಲ್ಲು ತರುವುದು ಇತ್ಯಾದಿ ಕಾರ್ಯಗಳನ್ನು ಮಾಡುತ್ತದೋ ಹಾಗೆಯೇ ಅಚೇತನವಾದ ಪ್ರಕೃತಿಯು ಪುರುಷನ ಸನ್ನಿಧಾನದಿಂದಲೇ ಮಹದಾದಿಕಾರ್ಯವನ್ನು ಮಾಡುವುದು. ಹೀಗೆ ಅಧಿಕವಾದ ಶಂಕೆಯು ಬರುವುದು. ಆದರೂ ಅಚೇತನವಾದ ಪ್ರಕೃತಿಗೆ ಜ್ಞಾನ ಇಚ್ಛಾ ಪ್ರಯತ್ನಗಳು ಇಲ್ಲವಾದುದರಿಂದ, ರಚನಾನುಪಪತ್ತೇಃ ಎಂಬಲ್ಲಿ ಹೇಳಿದ ದೋಷವು ಅದೇರೀತಿ ಇಲ್ಲಿಯೂ ಬರುವುದು.

**ವಿವರಣೆ:** ಇಲ್ಲಿನ ಅಧಿಕಾಂಶಕೆಯು ಹೀಗಿದೆ – ಮಹದಾದಿ ಕಾರ್ಯವು ಪುರುಷನನ್ನು ಉಪಸರ್ಜನವಾಗಿವುಳ್ಳ ಅಂದರೆ ಅಪ್ರಧಾನವಾಗಿವುಳ್ಳ ಪ್ರಕೃತಿಯಿಂದ ಮಾಡಲ್ಪಟ್ಟದ್ದು, ಕಾರ್ಯವಾದುದರಿಂದ, ಕಲ್ಲನ್ನು ತರುವುದು ಇತ್ಯಾದಿ ಕಾರ್ಯಗಳಂತೆ. ಆದ್ದರಿಂದ ಈಶ್ವರನಿಂದ ಏನು ಪ್ರಯೋಜನ?

ಇದಕ್ಕೆ ಪರಿಹಾರವು ಹೀಗಿದೆ – ಜ್ಞಾನ ಇಚ್ಛೆ ಪ್ರಯತ್ನಗಳನ್ನು ಹೊಂದಿರುವುದೇ ಕರ್ತೃತ್ವವು. ಪುರುಷನ ಸನ್ನಿಧಾನವಿದ್ದರೂ, ಅಚೇತನವಾದ್ದರಿಂದ, ಪ್ರಕೃತಿಗೆ ಬುದ್ಧಿಮತ್ತೆಯು ಸಂಭವಿಸಲಾರದು. ಬುದ್ಧಿಯು ಇಲ್ಲವಾದರೆ ಬುದ್ಧಿಯ ಕಾರ್ಯಗಳಾದ ಇಚ್ಛಾ ಪ್ರಯತ್ನಗಳು ಕೂಡುವುದಿಲ್ಲ. ಆದುದರಿಂದ ಅಚೇತನದ ಕರ್ತೃತ್ವವೆಂಬ ಪ್ರತಿಜ್ಞೆಯು ವ್ಯಾಹತವೇ ಆಗಿದೆ. ಪ್ರಕೃತಿಗೆ ಕರ್ತೃತ್ವವನ್ನು ಒಪ್ಪಿದರೆ ಅಚೇತನತ್ವವನ್ನು ಅಂಗೀಕರಿಸಿರುವುದಕ್ಕೆ ವಿರುದ್ಧವಾಗುತ್ತದೆ. ಹೀಗೆ ವ್ಯಾಹತವು.

ಹಾಗಾದರೆ ಪುರುಷನೇ ಉಪಸರ್ಜನವಾಗಿರುವ ಶರೀರಕ್ಕೆ ಅಶ್ಮಾನಯನಾದಿ ಕರ್ತೃತ್ವವಿದೆಯೆಂಬ ದೃಷ್ಟಾಂತವನ್ನು ತೋರಿಸಿದುದರಿಂದ ಇದು ಹೇಗೆ ಎಂದು ಶಂಕಿಸಬಾರದು. ಏಕೆಂದರೆ ಹಿಂದೆ ಹೇಳಿದ ರೀತಿಯಿಂದ ಶರೀರಕ್ಕೆ ಕರ್ತೃತ್ವವು ಅಸಮ್ಮತವು. ದೃಷ್ಟಾಂತದಲ್ಲಿ ಇನ್ನೊಂದು ದೂಷಣವನ್ನು ತೋರಿಸಲು 'ಅಂಗಿತ್ವಾನುಪಪತ್ತೇಃ' ಎಂಬ ಸೂತ್ರವು ಹೊರಟಿದೆ. 'ಅಂಗಿತ್ವಂ' ಇತ್ಯಾದಿ ವಚನದಿಂದ ಈ ಸೂತ್ರವನ್ನು ವ್ಯಾಖ್ಯಾನಿಸುತ್ತಾರೆ –

**ಅಂಗಿತ್ವಂ ಪುರುಷಸ್ಯೈವ ಸರ್ವೈರೇವಾನುಭೂಯತೇ ।**

**ತದಂಗತ್ವೋಕ್ತಿತಶ್ಚೈವ ಸ್ಯಾತ್ಸರ್ವಸ್ಯಾಪಲಾಪಕಃ ।।೪೮।।**

**ಕಿಮು ಸರ್ವೇಶ್ವರಸ್ಯಾಸ್ಯ ಹ್ಯಪಲಾಪಾದ್ಯತೋಽಖಿಲಮ್ ।**

ಅಂಗಿತ್ವ ಎಂದರೆ ಪ್ರಧಾನತ್ವವೆಂದೂ, ಅಂಗತ್ವ ಎಂದರೆ ಅಪ್ರಧಾನತ್ವವೆಂದೂ ಅರ್ಥ. ಶರೀರವನ್ನು ಕುರಿತು ಜೀವನಿಗೇ ಪ್ರಧಾನತ್ವವು ಎಂಬುದು ಎಲ್ಲರಿಗೂ ಅನುಭವದಿಂದ ಗೋಚರವಾಗುತ್ತದೆ. ಶರೀರವನ್ನು ಕುರಿತು ಪ್ರಾಧಾನ್ಯವನ್ನು ಪಡೆದಿರುವ ಜೀವನಿಗೆ ಅಪ್ರಾಧಾನ್ಯವನ್ನು ಹೇಳುವ ಸಾಂಖ್ಯನು ಎಲ್ಲವನ್ನೂ ಅಪಲಾಪ ಮಾಡುವ ದೋಷಕ್ಕೆ ಕಾರಣನಾಗುತ್ತಾನೆ. ಯೋಗಿಪ್ರತ್ಯಕ್ಷ, ಅನುಮಾನ ಹಾಗೂ ಆಗಮರೂಪವಾದ ಎಲ್ಲ ಪ್ರಮಾಣವೂ ಈಶ್ವರನನ್ನು ಸರ್ವಕರ್ತೃವೆಂದು ಪ್ರತಿಪಾದಿಸುವುತ್ತವೆ. ಸರ್ವಕರ್ತೃವೆಂದು ಪ್ರತಿಪಾದಿಸಬೇಕಾದ ಸರ್ವೋತ್ತಮನಾದ ಈಶ್ವರನನ್ನು ಅಪಲಾಪ ಮಾಡುವುದರಿಂದ, ಸಾಂಖ್ಯನು ಮಾಡುವ ಈಶ್ವರನಿರಾಸೆ ವಾದವು ಎಲ್ಲ ಪ್ರಮಾಣಗಳಿಗೆ ವಿರುದ್ಧವಾದುದು ಎಂದು ಹೇಳಲೇಬೇಕಾಗುವುದು.

## ಅನ್ಯಥಾನುಮಿತ್ಯಧಿಕರಣಮ್

ಈ ಅಧಿಕರಣದಲ್ಲಿ ಜೀವನೇ ಪ್ರಧಾನಕರ್ತೃವೆನ್ನುವ ನಿರೀಶ್ವರ ಸಾಂಖ್ಯರ ಏಕದೇಶಿಗಳ ಮತವನ್ನು ನಿರಾಕರಿಸುತ್ತಾರೆ. ಹೇಗೆಂದರೆ, ಅಶ್ಮಾನಯನ ಮೊದಲಾದ ಪ್ರವೃತ್ತಿಯಲ್ಲಿ ಪುರುಷನಿಗೆ ಪ್ರಾಧಾನ್ಯವೂ, ಶರೀರಕ್ಕೆ ಉಪಸರ್ಜನತ್ವವೂ ಅನುಭವ ಸಿದ್ಧವಾದುದೆಂದು ಹಿಂದೆ ಸಮರ್ಥಿಸಲಾಯಿತು. ಇದೇ ದೃಷ್ಟಾಂತದಿಂದ ಮಹದಾದಿ ಕಾರ್ಯಕ್ಕೂ ಪ್ರಕೃತಿಯನ್ನು ಉಪಸರ್ಜನವಾಗಿವುಳ್ಳ ಪುರುಷನೇ ಕರ್ತೃವೆಂದು ಅನುಮಾನ ಮಾಡುತ್ತೇವೆ. ಆದ್ದರಿಂದ ಈಶ್ವರನೇಕೆ? ಎಂಬುದಾಗಿ ಪೂರ್ವಪಕ್ಷ.

ಇದನ್ನು ದೂಷಿಸಲು ಹೊರಟಿರುವ ಸೂತ್ರ–

**ಓಂ ಅನ್ಯಥಾಽನುಮಿತೌ ಚ ಜ್ಞಶಕ್ತಿವಿಯೋಗಾತ್ ಓಂ**

'ಅಂಗಿತ್ವಂ' ಇತ್ಯಾದಿ ವಚನದಿಂದ ಈ ಸೂತ್ರಕ್ಕೆ ವ್ಯಾಖ್ಯಾನ ಮಾಡುತ್ತಾರೆ –

**ಅಂಗಿತ್ವಂ ಯದಿ ತಸ್ಯೈವ ಸ್ವಾತಂತ್ರ್ಯಂ ಚೇನ್ನ ಚಾಖಿಲಮ್ ।।೪೯।।**

**ತತ್ಪ್ರೇರಣೇಽಪ್ಯಶಕ್ತತ್ವಾತ್ಸ್ವತಂತ್ರೋಽನ್ಯೋ ಹ್ಯಪೇಕ್ಷಿತಃ ।**

**ನ ಚ ಸ್ವಾತಂತ್ರ್ಯಮಸ್ಯೈವ ಪ್ರತ್ಯಕ್ಷಾದಿವಿರೋಧತಃ ।।೫೦।।**

**ಹಿತಾಕ್ರಿಯಾದಿದೋಷಾಚ್ಚ ಭದ್ರಂ ನಾನೀಶ್ವರಂ ಮತಮ್ ।**

ಒಂದು ಪಕ್ಷ ಜೀವನಿಗೆ ಪ್ರಧಾನತ್ವ ಅಥವಾ ಕರ್ತತ್ವವನ್ನೂ, ಪ್ರಕೃತಿಗೆ ಅಪ್ರಧಾನತ್ವವನ್ನೂ ಒಪ್ಪಿದರೂ, ಆ ಜೀವನಿಗೆ ಅಖಿಲವಾದ ಸ್ವಾತಂತ್ರ್ಯವಿಲ್ಲದಿದ್ದಲ್ಲಿ

ಪ್ರಕೃತಿಯ ಪ್ರೇರಣೆಯಲ್ಲಿಯೂ ಸಮರ್ಥನಾಗುವುದಿಲ್ಲ. ಆದ್ದರಿಂದ ಸ್ವತಂತ್ರನಾದ ಮತ್ತೊಬ್ಬನನ್ನು (ಅಂದರೆ ಪರಮೇಶ್ವರನನ್ನು) ಒಪ್ಪಲೇಬೇಕಾಗುವುದು. ಬೇರೆ ಕಾರ್ಯಗಳಿಗೆ ಈಶ್ವರನ ಅಪೇಕ್ಷೆಯಿಲ್ಲವೆಂದು ಹೇಳಿದರೂ, ಪ್ರಕೃತಿ ಪ್ರೇರಣೆಯಲ್ಲಿ ಈಶ್ವರನ್ನು ಅಪೇಕ್ಷಿಸಲೇಬೇಕು. ಜೀವನಿಗೆ ಸರ್ವಸ್ವಾತಂತ್ರ್ಯವನ್ನು ಅಂಗೀಕರಿಸಿದರೆ ಪ್ರತ್ಯಕ್ಷಾದಿ ಪ್ರಮಾಣವಿರೋಧವು ಬರುವುದು. ಆದ್ದರಿಂದ ಜೀವನಿಗೆ ಸ್ವಾತಂತ್ರ್ಯವು ಇರುವುದೇ ಇಲ್ಲ. ಜೀವನು ತನಗೆ ಸದಾ ಹಿತವನ್ನು ಮಾಡಿಕೊಳ್ಳುವುದಕ್ಕೆ ಮತ್ತು ಅಹಿತವನ್ನು ತಪ್ಪಿಸುವುದಕ್ಕೆ ಅಸಮರ್ಥನು ಎಂಬ ದೋಷವು ಇರುವುದರಿಂದ, ಈಶ್ವರನನ್ನು ಒಪ್ಪದ ಮತವು ಅಮಂಗಲಕರ. ಪಾತಂಜಲಿ ಮತದವರು ಈಶ್ವರನನ್ನು ಒಪ್ಪಿದರೂ, ಅವನಲ್ಲಿ ನಿರವಧಿಕ ಸ್ವಾತಂತ್ರ್ಯವನ್ನು ಅಂಗೀಕರಿಸಿಲ್ಲ. ಆದ್ದರಿಂದ ಅದೂ ನಿರೀಶ್ವರ ಮತವೇ ಆಗುವುದು.

ಹಾಗಾದರೆ ಭಿನ್ನಕ, ಸಂಸಾರಮೋಚಕ ಮುಂತಾದ ನಿರೀಶ್ವರ ಮತಗಳು ಇವೆಯಲ್ಲ, ಅವುಗಳನ್ನೇಕೆ ನಿರಾಕರಿಸುವುದಿಲ್ಲ ಎಂದು ಕೇಳಿದರೆ, ಅವುಗಳೂ ಕೂಡ ಹಿಂದೆ ಹೇಳಿದ ದೂಷಣಗಳಿಂದಲೇ ನಿರಸ್ತವಾಗುತ್ತವೆ ಎಂದು ಉತ್ತರ. ಹಾಗೂ ಅಭ್ಯಧಿಕಾಶಂಕೆಯು ಇರುವುದಿಲ್ಲ ಎಂದು ಹೇಳುತ್ತಾರೆ –

**ಸಂಸಾರಿಣೋಽನ್ಯಂ ಸರ್ವೇಶಂ ಸರ್ವಶಕ್ತಿಮನೌಪಮಮ್ ।।೫೧।।**

**ಚೇತನಾಚೇತನಸ್ಯಾಸ್ಯ ಸತ್ತಾದೇಸ್ತದಧೀನತಾಮ್ ।**

**ನಾಂಗೀಕುರ್ವಂತಿ ಯೇ ತೇಷಾಂ ಸರ್ವೇಷಾಂ ಚ ಸಮಾ ಇಮೇ ।।೫೨।।**

**ತಸ್ಮಾಚ್ಛ್ರುತಿಪ್ರಮಾಣೇನ ಯುಕ್ತಿಭಿಶ್ಚ ಪರೋ ಹರಿಃ ।**

**ಅಂಗೀಕಾರ್ಯತಮೋ ನಿತ್ಯಃ ಸರ್ವೈರಪಿ ಸುನಿಶ್ಚಿತಮ್ ।।೫೩।।**

ಸಮಸ್ತ ಚೇತಾಚೇತನ ಜಗತ್ತಿಗಿಂತ ವಿಲಕ್ಷಣನೂ, ಸರ್ವಶಕ್ತನೂ, ಅಸದೃಶನೂ, ಬ್ರಹ್ಮಾದಿಗಳಿಗೆ ನಿಯಾಮಕನೂ ಆದ ಶ್ರೀಹರಿಯನ್ನು ಹಾಗೂ ಚೇತನಾ-ಚೇತನಾತ್ಮಕ ಪ್ರಪಂಚದ ಸತ್ತಾದಿಗಳಿಗೆ ಅವನ ಅಧೀನತ್ವವನ್ನೂ ಯಾರು ಅಂಗೀಕರಿಸುವುದಿಲ್ಲವೋ, ಅವರೆಲ್ಲರಿಗೂ ಈ ದೋಷಗಳು ಸಮಾನವಾಗಿವೆ. ಆದ್ದರಿಂದ ಶ್ರುತ್ಯಾದಿ ಪ್ರಮಾಣ ದಿಂದಲೂ ಯುಕ್ತಿಗಳಿಂದಲೂ ಸರ್ವೋತ್ತಮನಾದ ಶ್ರೀಹರಿಯು ಯಾವಾಗಲೂ ಎಲ್ಲರಿಂದಲೂ ಅತ್ಯಂತ ನಿಶ್ಚಯವಾಗಿ ಹಾಗೂ ಮುಖ್ಯವಾಗಿ ಅಂಗೀಕರಿಸಲ್ಪಡತಕ್ಕವನು.

## ವೈಶೇಷಿಕಾಧಿಕರಣಮ್

### ಓಂ ಮಹದ್ದೀರ್ಘವದ್ವಾ ಹ್ರಸ್ವಪರಿಮಂಡಲಾಭ್ಯಾಮ್ ಓಂ

ಈ ಅಧಿಕರಣದಲ್ಲಿ ಪರಮಾಣ್ವಾರಂಭವಾದಿಗಳಾದ ವೈಶೇಷಿಕಾದಿ ಮತವನ್ನು ನಿರಾಕರಿಸುತ್ತಾರೆ. ಕಾರ್ಯವಾದರೂ ಪರಮಾಣುಗಳೆಂಬ ಸಮವಾಯಿಕಾರಣದಿಂದ

ಆಗುವುದು ಎಂದು ಹೇಳುವವರೇ ಪರಮಾಣ್ವಾರಂಭವಾದಿಗಳು. ವೈಶೇಷಿಕಾದಿಗಳು ಪರಮೇಶ್ವರನ ಸ್ವರೂಪವನ್ನು ಒಪ್ಪಿದರೂ ಅವನ ಧರ್ಮಗಳಾದ ಸುಖಾದಿಗಳ ಬಗ್ಗೆ ಸಂದೇಹ ಪಡುತ್ತಾರೆ ಹಾಗೂ ಸೃಷ್ಟಿ ಪ್ರಲಯಾದಿಗಳ ಕ್ರಮವನ್ನು ಬೇರೆಯಾಗಿಯೇ ತಿಳಿಯುತ್ತಾರೆ. ಈ ಕಾರಣದಿಂದ ಅವರ ಮತವು ಅಸಮಂಜಸವು. ಆದ್ದರಿಂದ ಅವರ ಮತವನ್ನು ನಿರಾಸೆ ಮಾಡುವುದಕ್ಕಾಗಿ ಈ ಅಧಿಕರಣವನ್ನು ಆರಂಭಿಸಿರುವುದು ಯುಕ್ತವೇ ಆಗಿದೆ. ಈ ಅಭಿಪ್ರಾಯವುಳ್ಳವರಾಗಿ ಶ್ರೀಮದಾಚಾರ್ಯರು ಅವರ ಮತವನ್ನು 'ನಿತ್ಯ' ಇತ್ಯಾದಿ ವಚನದಿಂದ ಮೊದಲು ಅನುವಾದ ಮಾಡುತ್ತಾರೆ –

**ನಿತ್ಯಜ್ಞಾನಪ್ರಯತ್ನೇಚ್ಛಂ ಸಂಖ್ಯಾದ್ಯೈರಪಿ ಪಂಚಭಿಃ ।।೫೩।।**

**ಯುಕ್ತಮೀಶಂ ವದಂತೋಽನ್ಯೇ ತದಿಚ್ಛಾದೃಷ್ಟಚೋದಿತಾಃ ।**

**ಪರಮಾಣವಶ್ಚತುರ್ವರ್ಗಾಃ ಸಂಯುಜ್ಯಂತೇ ದ್ವಿಶೋಽಖಿಲಾಃ ।।೫೪।।**

**ಪರಮಾಣುದ್ವಯೇನೈವ ದ್ವ್ಯಣುಕಂ ನಾಮ ಜಾಯತೇ ।**

**ದ್ವ್ಯಣುಕತ್ರಯೇಣ ತ್ರ್ಯಣುಕಂ ತೈಶ್ಚತುರ್ಭಿಸ್ತದಾತ್ಮಕಮ್ ।।೫೫।।**

**ತತಸ್ತ್ವನಿಯಮೇನೈವ ಖಂಡಾವಯವಿನಾಂ ಭವಃ ।**

**ತತಶ್ಚಾನಿಯಮೇನೈವ ಸರ್ವಾವಯವಿಸಂಭವಃ ।।೫೬।।**

ಈಶ್ವರನನ್ನು ಒಪ್ಪುವ ಇತರರಾದ ವೇಶೇಷಿಕರು ಈಶ್ವರನು ನಿತ್ಯವಾದ ಜ್ಞಾನ, ಪ್ರಯತ್ನ, ಇಚ್ಛೆಗಳುಳ್ಳವನು ಹಾಗೂ ಸಂಖ್ಯಾ, ಪರಿಮಾಣ, ಪೃಥಕ್ತ್ವ, ಸಂಯೋಗ, ವಿಭಾಗ ಎಂಬುದಾಗಿ ಐದು, ಹೀಗೆ ಒಟ್ಟು ಎಂಟೇ ಗುಣಗಳುಳ್ಳವನು ಎಂದು ಹೇಳುತ್ತಾರೆ. ಈಶ್ವರನ ಇಚ್ಛೆಯಿಂದಲೂ, ಅದೃಷ್ಟವುಳ್ಳ ಆತ್ಮಸಂಯೋಗದಿಂದಲೂ ಪ್ರೇರಿಸಲ್ಪಟ್ಟ ಸಮಸ್ತ ಪರಮಾಣುಗಳು ಕ್ರಿಯಾಶೀಲವಾಗುತ್ತವೆ. ಪ್ರಲಯದಲ್ಲಿ ಪೃಥಿವಿ, ಜಲ, ಅಗ್ನಿ, ವಾಯು ಎಂಬ ನಾಲ್ಕು ವರ್ಗಗಳಲ್ಲಿ ವಿಭಕ್ತವಾಗಿದ್ದ ಈ ಪರಮಾಣುಗಳು ಎರಡೆರಡರಂತೆ ಸಂಯೋಗ ಹೊಂದುತ್ತವೆ. (ಸಜಾತೀಯವಾದ ಪರಮಾಣುಗಳೆರಡರ ನಡುವೆ ಸಂಯೋಗದಿಂದಲೇ ದ್ರವ್ಯದ ಆರಂಭವು. ಆದ್ದರಿಂದ ಇಲ್ಲಿ ಸ್ಪರ್ಶ ಗುಣರಹಿತವಾದ ಗಗನದ ಪರಮಾಣುಗಳನ್ನು ತೆಗೆದುಕೊಂಡಿಲ್ಲ). ಸಂಯುಕ್ತ ಸಜಾತೀಯ ಪರಮಾಣುದ್ವಯದಿಂದಲೇ ದ್ವ್ಯಣುಕ ನಾಮಕ ದ್ರವ್ಯದ ಉತ್ಪತ್ತಿ. ಅಂಥಹ ಮೂರು ದ್ವ್ಯಣುಕಗಳ ಸಂಯೊಗದಿಂದ ಒಂದು ತ್ರ್ಯಣುಕವು ಹುಟ್ಟುತ್ತದೆ. ನಾಲ್ಕು ತ್ರ್ಯಣುಕಗಳಿಂದ ಚತುರಣುಕಾತ್ಮಕವಾದ ದ್ರವ್ಯವು ಹುಟ್ಟುತ್ತದೆ. ಆಮೇಲೆ ಆ ಚತುರಣುಕಾದಿಗಳಿಂದ ಸಂಖ್ಯಾನಿಯಮವಿಲ್ಲದೆ ಖಂಡಾವಯವಿಗಳ ಉತ್ಪತ್ತಿಯು. ಈ ಖಂಡಾವಯವಿಗಳಿಂದ ಸಂಖ್ಯಾನಿಯಮವಿಲ್ಲದೆಯೇ ಎಲ್ಲ

ಅಂತ್ಯಾವಯವಿಗಳಾದ ಶರೀರೇಂದ್ರಿಯ ವಿಷಯಗಳ ಉತ್ಪತ್ತಿಯು. ವೈಶೇಷಾದಿಗಳ ಪ್ರಕಾರ ಇದು ದ್ರವ್ಯದ ಉತ್ಪತ್ತಿ ಕ್ರಮವು. ಗುಣಗಳಿಗೂ ಕರ್ಮಗಳಿಗೂ ಅವುಗಳ ಆಶ್ರಯಗಳಲ್ಲಿ ಉತ್ಪತ್ತಿಯು ಎಂಬುದನ್ನು ತಿಳಿಯತಕ್ಕದ್ದು.

ಭಾವರೂಪ ಕಾರ್ಯವೆಲ್ಲವೂ ಸಮವಾಯಿಕಾರಣ, ಅಸಮವಾಯಿಕಾರಣ ಹಾಗೂ ನಿಮಿತ್ತಕಾರಣ ಎನ್ನುವ ಮೂರು ಕಾರಣಗಳಿಂದ ಹುಟ್ಟುತ್ತವೆ. ಇವುಗಳ ಸ್ವರೂಪವನ್ನು 'ಕಾರಣಂ' ಇತ್ಯಾದಿ ವಚನದಿಂದ ಹೇಳುತ್ತಾರೆ –

**ಕಾರಣಂ ಸಮವಾಯ್ಯಾಖ್ಯಂ ಪರಮಾಣ್ವಾದಿರತ್ರ ಹಿ ।**

**ಈಶೇಚ್ಛಾಧೃಷ್ಟಕಾಲಾಸ್ತು ನಿಮತ್ತಂ ಕಾರಣಂ ಮತಮ್ ।।೫೭।।**

ಪರಮಾಣ್ವಾದಿ ದ್ರವ್ಯದಲ್ಲಿ ಸರ್ವಕಾರ್ಯವೂ ಸಮವೇತವಾಗಿಯೇ ಹುಟ್ಟುವುದರಿಂದ, ದ್ವ್ಯಣುಕಾದಿ ಕಾರ್ಯಗಳ ಉತ್ಪತ್ತಿಯಲ್ಲಿ ಪರಮಾಣ್ವಾದಿ ದ್ರವ್ಯವು ಸಮವಾಯಿಕಾರಣವು. ಈಶ್ವರನ ಇಚ್ಛೆ, ಅದೃಷ್ಟ, ಕಾಲ ಇವುಗಳು ನಿಮತ್ತಕಾರಣಗಳು.

**ಸಾಮಾನ್ಯಾನ್ತ್ಯವಿಶೇಷೌ ಚ ಸಮವಾಯಶ್ಚ ತತ್ತ್ರಯಮ್ ।**

**ನಿತ್ಯಂ ಕ್ರಿಯಾ ಅನಿತ್ಯಾಶ್ಚ ಗುಣದ್ರವ್ಯೇ ದ್ವಿರೂಪಕೇ ।।೫೮।।**

ಸಾಮಾನ್ಯ, ಅಂತ್ಯವಿಶೇಷ (ಅತ್ಯಂತ ವ್ಯಾವೃತ್ತಿಗೆ ಕಾರಣವಾದ ವಿಶೇಷ) ಹಾಗೂ ಸಮವಾಯ, ಇವು ಮೂರು ನಿತ್ಯಗಳು. ಎತ್ತುವಿಕೆ, ಇಳಿಸುವಿಕೆ, ಸಂಕುಚನ, ವಿಸ್ತರಣ, ಗಮನಾದಿ ಕ್ರಿಯೆಗಳು ಅನಿತ್ಯಗಳು. ಗುಣ ಹಾಗೂ ದ್ರವ್ಯಗಳು ನಿತ್ಯ–ಅನಿತ್ಯಗಳೆಂದು ಎರಡು ವಿಧವಾಗಿವೆ.

ಹೀಗೆ ಕಾರ್ಯ ಅಕಾರ್ಯಗಳ ವಿಭಾಗವನ್ನು ಹೇಳಿ, ಯಾವುದು ಯಾವುದಕ್ಕೆ ಅಸಮವಾಯಿ ಕಾರಣ ಎನ್ನುವುದನ್ನು 'ಕಾರ್ಯೇ' ಇತ್ಯಾದಿ ವಚನದಿಂದ ಹೇಳುತ್ತಾರೆ –

**ಕಾರ್ಯೇ ಗುಣಕ್ರಿಯಾಣಾಂ ತು ಸಮವಾಯ್ಯನ್ಯಕಾರಣಮ್ ।**

**ಕಾರಣಸ್ಥಾ ಗುಣಾದ್ಯಾಸ್ತು ಸಂಯೋಗೋ ದ್ರವ್ಯಕಾರಣಮ್ ।।೫೯।।**

ಕಾರ್ಯ ಹಾಗೂ ಅಕಾರ್ಯ ದ್ರವ್ಯಗಳಲ್ಲಿ ಹುಟ್ಟುವ ಗುಣಗಳಿಗೆ ಸಮವಾಯಿ ಕಾರಣದಲ್ಲಿರತಕ್ಕ ಗುಣ ಮುಂತಾದವು ಅಸಮವಾಯಿ ಕಾರಣವೆನಿಸುತ್ತವೆ. ಆದರೆ ದ್ರವ್ಯಕ್ಕೆ ಸಮವಾಯಿಕಾರಣದ ಅವಯವಸಂಯೊಗವು ಅಸಮವಾಯಿ ಕಾರಣವು.

**ಏವಂ ಸ್ಥಿತೇಽಪಿ ಸಿದ್ಧಾಂತೇ ವಿಶೇಷಸ್ತತ್ರ ಕಲ್ಪಿತಃ ।**

ದ್ವ್ಯಣುಕೇ ಪರಮಾಣೌ ಚ ಹ್ರಸ್ವತ್ವಂ ಪರಿಮಂಡಲಮ್ ।।೬೦।।

ನ ಕಾರಣಂ ಕಾರ್ಯಗುಣೇ ವೈರೂಪ್ಯಂ ತತ್ರ ಕಾರಣಮ್ ।

ಇತ್ಯಾಹುಃ ..........................................................।।

ಕಾರಣದಲ್ಲಿರತಕ್ಕ ಪರಿಮಾಣವು ಕಾರ್ಯದಲ್ಲಿರತಕ್ಕ ಪರಿಮಾಣಕ್ಕೆ ಅಸಮವಾಯಿ ಕಾರಣವು ಹೀಗೆ ಸಾಮಾನ್ಯವಾಗಿ ಸಿದ್ಧಾಂತವಿದ್ದರೂ, ವೈಶೇಷಿಕರು ಪರಿಮಾಣ ವಿಶೇಷದಲ್ಲಿ ಅನ್ಯಥಾಭಾವವನ್ನು ಅಂದರೆ ವ್ಯತ್ಯಾಸವನ್ನು ಕಲ್ಪಿಸುತ್ತಾರೆ. ದ್ವ್ಯಣುಕದಲ್ಲಿನ ಹ್ರಸ್ವತ್ವ–ಅಣುತ್ವಗಳು ದ್ವ್ಯಣುಕಕಾರ್ಯವಾದ ತ್ರ್ಯಣುಕದಲ್ಲಿರುವ ಮಹತ್ವ–ದೀರ್ಘತ್ವಗಳಿಗೆ ಅಸಮವಾಯಿ ಕಾರಣವಾಗುವುದಿಲ್ಲ. ಪರಮಾಣುವಿನಲ್ಲಿ ಇರುವ ಅಣುತ್ವವು ಪರಮಾಣುವಿನ ಕಾರ್ಯವಾದ ದ್ವ್ಯಣುಕದ ಹ್ರಸ್ವತ್ವ–ಅಣುತ್ವಗಳಿಗೆ ಅಸಮವಾಯಿ ಕಾರಣವಾಗುವುದಿಲ್ಲ. ಏಕೆಂದರೆ ದ್ವ್ಯಣುಕ ತ್ರ್ಯಣುಕದಲ್ಲಿರುವ ಪರಿಮಾಣಗಳಿಗೂ, ಪರಮಾಣು ಹಾಗೂ ದ್ವ್ಯಣುಕದಲ್ಲಿರುವ ಪರಿಮಾಣಗಳಿಗೂ ವೈರೂಪ್ಯ ಅಂದರೆ ವಿಜಾತೀಯತ್ವವಿದೆ. ಸಜಾತೀಯವಾದ ಪರಿಮಾಣಗಳ ನಡುವೆ ಮಾತ್ರ, ತಂತು–ಪಟಗಳಲ್ಲಿರುವಂತೆ, ಕಾರ್ಯ–ಕಾರಣ ಭಾವವು ಕಂಡುಬರುತ್ತದೆ. ಹೀಗೆ ವೈಶೇಷಿಕರು ಹೇಳುತ್ತಾರೆ.

ಈ ರೀತಿಯಾಗಿ ವೈಶೇಷಿಕರ ಮತವನ್ನು ಅನುವಾದ ಮಾಡಿ ಈಗ ಆ ಮತವನ್ನು ನಿರಾಕರಿಸಲು 'ತಾನ್' ಇತ್ಯಾದಿ ವಚನದಿಂದ ಸೂತ್ರಕ್ಕೆ ಪೀಠಿಕೆ ರಚಿಸುತ್ತಾರೆ –

............ತಾನಥೋವಾಚ ವಿದ್ಯಾಧೀಶಃ ಸ್ವಯಂ ಪ್ರಭುಃ ।।೬೧।।

ಸಕಲ ವಿದ್ಯಾಧೀಶರಾದ ಸಮರ್ಥರಾದ ವೇದವ್ಯಾಸರು 'ಮಹದ್ದೀರ್ಘವದ್ವಾ' ಇತ್ಯಾದಿ ಸೂತ್ರಗಳಿಂದ ಆ ವೈಶೇಷಿಕರನ್ನು ಕುರಿತು ಸಾಕ್ಷಾತ್ತಾಗಿ ದೋಷಗಳನ್ನು ಹೇಳಿರುತ್ತಾರೆ.

ದ್ವ್ಯಣುಕ ಮುಂತಾದವುಗಳ ಪರಿಮಾಣವು ತ್ರ್ಯಣುಕಾದಿ ಪರಿಮಾಣಗಳಿಗೆ ಅಸಮವಾಯಿ ಕಾರಣವಲ್ಲವೆಂದು ಹೇಳುವ ವೈಶೇಷಿಕರ ಮತವು ಯುಕ್ತಿವಿರುದ್ಧ ಎಂಬುದನ್ನು 'ಮಹತ್ವಂ ಚ' ಇತ್ಯಾದಿ ವಚನದಿಂದ ತೋರಿಸುವ ಮೂಲಕ 'ಮಹದ್ದೀರ್ಘವದ್ವಾ ಹ್ರಸ್ವಪರಿಮಂಡಲಾಭ್ಯಾಂ' ಎಂಬ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ –

ಮಹತ್ವಂ ಚೈವ ದೀರ್ಘತ್ವಂ ತ್ರ್ಯಣುಕಾದ್ಯೇಷು ಕಲ್ಪಿತಮ್ ।

ತಸ್ಮಾಚ್ಚ ಸದೃಶಂ ಕಾರ್ಯಂ ತತ್ಕಾರ್ಯೇಷೂಪಜಾಯತೇ ।।೬೨।।

**ಯಥಾ ತಥೈವ ಹ್ರಸ್ವತ್ವಾತ್ಪಾರಿಮಾಂಡಿಲ್ಯತೋಽಪಿ ಹಿ ।**

**ಜಾಯೇತ ಸದೃಶಂ ಕಾರ್ಯೇ ಪರಿಮಾಣಂ ಸಮತ್ವತಃ ।।೬೩।।**

ಮಹತ್ವವೂ ದೀರ್ಘತ್ವವೂ ತ್ರ್ಯಣುಕಾದಿಗಳಲ್ಲಿಯೇ ಕಲ್ಪಿಸಲ್ಪಟ್ಟಿದೆ. ತ್ರ್ಯಣುಕ ಮುಂತಾದ ಅವಯವಿಯಿಂದ ಬೇರೆಯಾಗಿರುವ ಕಾರ್ಯದಲ್ಲಿ ಇರುವ ಮಹತ್ವ ದೀರ್ಘತ್ವಗಳಿಂದ ಸದೃಶವಾದ ಪರಿಮಾಣವು ತ್ರ್ಯಣುಕಾದಿ ಕಾರ್ಯವಾದ ಚತುರಣುಕಾದಿಗಳಲ್ಲಿ ಹೇಗೆ ಹುಟ್ಟುತ್ತದೋ, ಹಾಗೆಯೇ ಹ್ರಸ್ವತ್ವವೆಂಬ ಪರಮಾಣು ಪರಿಮಾಣದಿಂದಲೂ ಕಾರ್ಯದಲ್ಲಿ ಪರಿಮಾಣವು ಉಂಟಾಗಬಹುದು, ಕಾರ್ಯ ಪರಿಮಾಣತ್ವವು ಸಮಾನವಾಗಿರುವುದರಿಂದ.

**ನ ಚೇನ್ಮಹತ್ವತಶ್ಚೈವ ದೀರ್ಘತ್ವಾದಪಿ ನೋ ಭವೇತ್ ।**

ಹಾಗೆ ಆಗದಿದ್ದರೆ ತ್ರ್ಯಣುಕಾದಿಗಳಲ್ಲಿನ ಮಹತ್ವದಿಂದಲೂ ದೀರ್ಘತ್ವದಿಂದಲೂ ಚತುರಣುಕ ಮುಂತಾದವುಗಳಲ್ಲಿನ ಪರಿಮಾಣವು ಹುಟ್ಟಲು ಸಾಧ್ಯವೇ ಇಲ್ಲ.

ಪರಮಾಣು ಪರಿಮಾಣದಿಂದ ದ್ವ್ಯಣುಕದ ಉತ್ಪತ್ತಿಯೂ, ದ್ವ್ಯಣುಕದ ಪರಿಮಾಣ ದಿಂದ ತ್ರ್ಯಣುಕದ ಪರಿಮಾಣದ ಉತ್ಪತ್ತಿಯೂ ಸಂಭವಿಸುತ್ತವೆ. ಏಕೆಂದರೆ ಅವುಗಳು ಏಕಜಾತೀಯ. ಹೀಗೆ ವೈಶೇಷಿಕರು ಮಾಡಿದ ಅನುಮಾನವು ಯುಕ್ತವಲ್ಲ. ಏಕೆಂದರೆ ಪ್ರತಿತರ್ಕದಿಂದ ಇವುಗಳನ್ನು ಪರಾಭವ ಮಾಡಲು ಬರುತ್ತದೆ. ಆದಕಾರಣ ವೈಶೇಷಿಕರ ಮತವು ದೋಷದುಷ್ಟವು ಎಂಬುದನ್ನು 'ಸದೃಶಸ್ಯ ಹಿ' ಇತ್ಯಾದಿ ವಚನದಿಂದ ತೋರಿಸುತ್ತಾರೆ –

**ಸದೃಶಸ್ಯ ಹಿ ಕಾರ್ಯಸ್ಯ ನೈವ ಯೋಗಃ ಕಥಂಚನ ।।೬೪।।**

**ಅಪ್ರತ್ಯಕ್ಷತ್ವಮೇವ ಸ್ಯಾದ್ಯತಃ ಕಾರ್ಯೇಷ್ವಣುತ್ವತಃ ।**

**ಇತಿ ಚೇನ್ನ ಮಹತ್ವಂ ಚ ಪರಮಾಣಾವಣಾವಪಿ ।।೬೫।।**

**ಕಥಂ ತ್ರ್ಯಣುಕಪೂರ್ವೇಷು ನಾಣುತ್ವಮಪಿ ಕಥ್ಯತೇ ।**

ವೈಶೇಷಿಕರು ಹೇಳುವ ಯಾವ ಪ್ರಕಾರದಿಂದಲೂ ಸದೃಶವಾದ ಕಾರ್ಯವು ಸಂಭವಿಸುವುದಿಲ್ಲ. ಏಕೆಂದರೆ, ಪರಮಾಣುವಿನ ಅಣುತ್ವವು ಸಜಾತೀಯವಾದ ದ್ವ್ಯಣುಕ ದಲ್ಲಿಯೂ, ಅಂಥಹುದೇ ಅಣುತ್ವವು ತ್ರ್ಯಣುಕ, ಚತುರಣುಕಗಳಲ್ಲೂ ಸಂಭವಿಸುವುದು. ಹೀಗೆ ಎಲ್ಲ ಕಾರ್ಯಗಳಲ್ಲಿಯೂ ಅಣುತ್ವವು ಬರುವುದರಿಂದ ಕಾರ್ಯವು ನಮ್ಮ ಪ್ರತ್ಯಕ್ಷಕ್ಕೆ ವಿಷಯವಾಗದಿರುವ ಪ್ರಸಂಗವು ಬರುವುದು. ದ್ರವ್ಯವು ನಮ್ಮ ಪ್ರತ್ಯಕ್ಷಕ್ಕೆ ವಿಷಯವಾಗಿದೆ. ಮಹತ್ವ–ದೀರ್ಘತ್ವಾದಿಗಳು ಇದ್ದಾಗ ಮಾತ್ರ ದ್ರವ್ಯವು ಪ್ರತ್ಯಕ್ಷಕ್ಕೆ ಗೋಚರವಾಗುವುದು. ಪರಮಾಣುವಿನಲ್ಲಿ

ಮಹತ್ವಾದಿಗಳು ಇರುವುದಿಲ್ಲ ಹಾಗೂ ವೈಶೇಷಿಕರ ಪ್ರಕಾರ ಪರಮಾಣುವು ಪರಂಪರೆಯಿಂದ ದ್ರವ್ಯದ ಉತ್ಪತ್ತಿಗೆ ಕಾರಣವು. ಆದಪ್ರಯುಕ್ತ ಯಾವುದೇ ದ್ರವ್ಯವು ನಮ್ಮ ಪ್ರತ್ಯಕ್ಷಕ್ಕೆ ಗೋಚರವಾಗದೇ ಹೋಗುವ ಪ್ರಸಂಗವು ಬರುವುದು. ಇದು ಪ್ರತ್ಯಕ್ಷಕ್ಕೆ ವಿರುದ್ಧ. ಆದ್ದರಿಂದ ಪರಮಾಣು, ದ್ವ್ಯಣುಕ ತ್ರ್ಯಣುಕಾದಿಗಳಲ್ಲಿ ಮಹತ್ವ ದೀರ್ಘತ್ವವು ಇರುವುದಿಲ್ಲ ಎಂದು ಹೇಳಲು ಹೇಗೆ ಸಾಧ್ಯ? ಅದೇರೀತಿ ದ್ವಣುಕ ಮುಂತಾದವುಗಳಲ್ಲಿಯೂ ಅಣುತ್ವವು ಇರುವುದೆಂದು ಏಕೆ ಹೇಳಬಾರದು? ಆದ್ದರಿಂದ ವೈಶೇಷಿಕರ ಮತವು ದೋಷದುಷ್ಟವಾಗಿದೆ.

ಹಾಗಾದರೆ ಪರಮಾಣುವಿನಲ್ಲಿ ಅಣುತ್ವ ಮಹತ್ವಗಳು ಇರುವುದೆಂದು ಹೇಳಿದರೆ, ಅವು ಪರಸ್ಪರ ವಿರುದ್ಧವಾಗುವುದರಿಂದ ಒಂದೇ ಕಡೆಯಲ್ಲಿ ಅವು ಹೇಗೆ ಕೂಡುತ್ತವೆ? ಪರಿಮಾಣವು ದ್ರವ್ಯವಿರುವವರೆಗೂ ಇರುವ ಗುಣವಾದ ಪ್ರಯುಕ್ತ ಕಾಲಭೇದದಿಂದ ಈ ವಿರೋಧವನ್ನು ಪರಿಹರಿಸಲು ಶಕ್ಯವಿಲ್ಲವೆಂದು ಆಶಂಕಿಸಿ, 'ಪ್ರತ್ಯಕ್ಷತ್ವತದನ್ಯತ್ವೇ' ಇತ್ಯಾದಿ ವಚನದಿಂದ ವ್ಯಾಹತಿಯನ್ನು ಪರಿಹರಿಸುತ್ತಾರೆ –

**ಪ್ರತ್ಯಕ್ಷತ್ವತದನ್ಯತ್ವೇ ಪುರುಷಾಪೇಕ್ಷಯಾಽಖಿಲೇ ।।೬೬।।**

**ಅಣುತ್ವಂ ಚ ಮಹತ್ವಂ ಚ ಯತೋ ವಸ್ತುವ್ಯಪೇಕ್ಷಯಾ ।**

ಪರಮಾಣು ಮೊದಲಾದ ಎಲ್ಲ ದ್ರವ್ಯಗಳಲ್ಲಿಯೂ ಪ್ರತ್ಯಕ್ಷತ್ವ ಅಪ್ರತ್ಯಕ್ಷತ್ವ ಧರ್ಮಗಳೆರಡೂ ಇದ್ದೇ ಇರುತ್ತವೆ. ಪುರುಷರ ಭೇದದಿಂದ ಈ ವ್ಯವಸ್ಥೆಯು ಕೂಡುತ್ತದೆ. ಹಾಗೆಯೇ ಅಣುತ್ವ ಮಹತ್ವಗಳೂ ಎಲ್ಲ ವಸ್ತುಗಳಲ್ಲಿ ಇರುತ್ತವೆ. ಒಂದೇ ವಸ್ತುವಿನಲ್ಲಿ ಇನ್ನೊಂದು ವಸ್ತುವಿನ ಅಪೇಕ್ಷೆಯಿಂದ ಅಣುತ್ವ–ಮಹತ್ವ ಇವೆರಡು ಧರ್ಮಗಳೂ ವಿರೋಧವಿಲ್ಲದೆಯೇ ಹೇಳಲ್ಪಡುತ್ತವೆ.

ಹಾಗಿದ್ದರೂ ಎಲ್ಲ ದ್ರವ್ಯಗಳಲ್ಲಿಯೂ ಮಹತ್ವ ಅಣುತ್ವಗಳೆರಡನ್ನೂ ಒಪ್ಪುವುದು ಯುಕ್ತವಲ್ಲ. ಏಕೆಂದರೆ ಇವೆರಡು ಗುಣಗಳನ್ನೂ ಒಂದು ದ್ರವ್ಯದಲ್ಲಿ ಅಂಗೀಕರಿಸ ಬೇಕಾದರೆ, ಅದಕ್ಕಿಂತ ಚಿಕ್ಕದಾದ ಹಾಗೂ ದೊಡ್ಡದಾದ ಇತರ ಎರಡು ದ್ರವ್ಯಗಳಿದ್ದರೆ ಮಾತ್ರ ಸಾಧ್ಯ. ದ್ವ್ಯಣುಕಾದಿಗಳಲ್ಲಿ ಇದು ಸಂಭವಿಸುತ್ತದೆ. ಆದರೆ ಪರಮಾಣುವಿನಲ್ಲಿ, ಅದಕ್ಕಿಂತ ಚಿಕ್ಕ ವಸ್ತುವು ಇಲ್ಲವಾದ್ದರಿಂದ, ಅಣುತ್ವ ಮಾತ್ರ ಇರಲು ಸಾಧ್ಯ ಎಂದು ಆಶಂಕಿಸಿದರೆ, 'ತಾರತಮ್ಯಸ್ಥಿತಾ' ಇತ್ಯಾದಿ ವಚನದಿಂದ ಅದನ್ನು ಪರಿಹರಿಸುತ್ತಾರೆ –

**ತಾರತಮ್ಯಸ್ಥಿತಾ ಯಸ್ಮಾತ್ಪದಾರ್ಥಾಃ ಸರ್ವ ಏವ ಚ ।।೬೭।।**

**ಯಥಾ ಮಹತ್ವವಿಶ್ರಾಂತಿಸ್ತಥಾಣುತ್ವಸ್ಯ ಚೇಷ್ಯತೇ ।**

**ಪರಿಮಾಣತ್ವತಶ್ಚೇನ್ನ ಮಹತ್ವಸ್ಯಾಪಿ ವಿಶ್ರಮಃ ।।೬೮।।**

ಎಲ್ಲ ಪದಾರ್ಥಗಳೂ ಪರಿಮಾಣ ತಾರತಮ್ಯವುಳ್ಳದ್ದಾಗಿಯೇ ಇರುತ್ತವೆ. ಈ ಕಾರಣದಿಂದ ಪರಮಾಣುವಿಗೂ ಮಹತ್ವವು ಯುಕ್ತವಾಗುತ್ತದೆ. ಹೇಗೆ ಪರಿಮಾಣದ ಮಹತ್ವಕ್ಕೆ (ಪರಿಮಾಣ ಉತ್ಕರ್ಷಕ್ಕೆ) ವಿಶ್ರಾಂತಿಯೋ ಹಾಗೆಯೇ ಪರಿಮಾಣ ತಾರತಮ್ಯದ ಪ್ರಯುಕ್ತ, ಅಣುತ್ವಕ್ಕೂ (ಪರಿಮಾಣಾಪಕರ್ಷಕ್ಕೂ) ವಿಶ್ರಾಂತಿಯು. ಹೀಗೆ ಅಂಗೀಕರಿಸುವುದಾದರೆ ಮಹತ್ವಕ್ಕೂ ಸಹ ವಿಶ್ರಾಂತಿಯಿರುವುದಿಲ್ಲ. ಹೀಗೇಕೆ ಎಂದರೆ–

**ದೃಶ್ಯತೇಽನಂತ ಇತ್ಯೇವ ತಥಾನಂತ್ಯಮಣಾವಪಿ ।**

**ನ ಮಹತ್ತತ್ವಗುಣತ ಏತಾವಾನಿತಿ ಹೀಶ್ವರಃ ॥೯॥**

**ಪರಿಚ್ಛಿನ್ನಸ್ತಥಾಹೋಶ್ಚ ನೈತಾವದ್ಭಾಗತಾ ಕ್ವಚಿತ್ ।**

**ವಿಶ್ರಾಂತೋ ಯದ್ಯನಂತಾಂಶಃ ಕಶ್ಚಿದಸ್ತೀತಿ ಗಮ್ಯತೇ ॥೭೦॥**

**ನಾವಸಾಯಯಿತುಂ ಶಕ್ಯೋ ವಿರೋಧಾದೇವ ಕೇವಲಮ್ ।**

ಪರಿಮಾಣದ ಉತ್ಕರ್ಷದಲ್ಲಿನ ತಾರತಮ್ಯಕ್ಕೆ ಅವಧಿ ಇಲ್ಲದ್ದಾಗಿಯೇ ಸಾಕ್ಷ್ಯಾದಿಗಳಿಂದ ಕಂಡುಬರುತ್ತದೆ. ಹಾಗೆಯೇ ಅಣುವಿನಲ್ಲಿರುವ ಪರಿಮಾಣದ ಅಪಕರ್ಷದಲ್ಲಿನ ತಾರತಮ್ಯವೂ ಅವಧಿರಹಿತವಾಗಿಯೇ ಕಂಡುಬರುತ್ತದೆ. ಮಹತ್ತತ್ವಾದಿ ಪರಿಮಾಣಗಳ ಗಣನೆಯಿಂದ, ಈಶ್ವರನೂ ಸಹ ಇಂತಿಷ್ಟೇ ಗುಣವುಳ್ಳವನು (ಆರೇ ಗುಣವುಳ್ಳವನು, ಎಂಟೇ ಗುಣವುಳ್ಳವನು ಇತ್ಯಾದಿ) ಎಂಬುದಾಗಿ ಗುಣ–ಪರಿಮಾಣಗಳ ಪರಿಮಿತಿಗೆ ಒಳಪಡುವುದಿಲ್ಲ. ಅಂದರೆ ಈಶ್ವರನ ಗುಣ–ಪರಿಮಾಣಗಳು ಅಪರಿಚ್ಛಿನ್ನವಾಗಿವೆ ಎಂದರ್ಥ. ಇದೇ ದೃಷ್ಟಾಂತದ ಆಧಾರದಿಂದ, ಪರಿಮಾಣದ ಅಣುತ್ವಕ್ಕೂ ಇಂತಿಷ್ಟೇ ಭಾಗವಿರುವುವಿಕೆ ಎಂಬುದು ಯಾವ ದ್ರವ್ಯದಲ್ಲಿಯೂ ಸಿದ್ಧಿಸುವುದಿಲ್ಲ. ಇನ್ನು ಅಣುವಿನ ಪರಿಮಾಣದ ಅನಂತಾಂಶವುಳ್ಳ ದ್ರವ್ಯವಿಶೇಷವು ಎಲ್ಲಿಯಾದರೂ ಇರುವುದೆಂಬುದನ್ನು ನಿರ್ಣಯಿಸಲು ಶಕ್ಯವೇ ಇಲ್ಲ. ಏಕೆಂದರೆ ಪರಿಮಾಣದ ಅಪಕರ್ಷದ ತಾರತಮ್ಯಕ್ಕೆ ವಿಶ್ರಾಂತಿಯಿದೆ ಎಂದೂ ಹಾಗೂ ಅದು ಅನಂತಾಂಶವುಳ್ಳದ್ದೆಂದೂ ಹೇಳುವುದು ಪರಸ್ಪರ ವಿರೋಧವಾಗುವುದು.

ಹಾಗಾದರೆ ಪರಿಮಾಣ ಉತ್ಕರ್ಷದ ತಾರತಮ್ಯಕ್ಕೆ ಆನಂತ್ಯವಿದೆ ಎನ್ನುವುದು ಯಾವ ಪ್ರಮಾಣದಿಂದ ತಿಳಿಯಲ್ಪಡುತ್ತದೆ ಎಂದು ಕೇಳಿದರೆ –

**ಕೇವಲಂ ಸಾಕ್ಷಿಮಾನೇನ ಕಾಲೋ ದೇಶೋಽಪಿ ನಾಂತವಾನ್ ॥೭೧॥**

**ಅಪರ್ಯವಸಿತಿಶ್ಚಾಹೋರ್ದೃಶ್ಯತೇ ಸಾಕ್ಷಿಣಾ ದ್ವಯೋಃ ।**

**ಯದಿ ನೋ ಸಾಕ್ಷಿಗಮ್ಯಂ ತನ್ಮಹತ್ವಂ ಕೇನ ಗಮ್ಯತೇ ।।೭೨।।**

**ವಿಶ್ರಾಂತಿಸ್ತಾರತಮ್ಯೇನ ದೃಶ್ಯತೇ ಹ್ಯನುಮಾನತಃ ।**

ಕೇವಲ ಸಾಕ್ಷಿರೂಪ ಪ್ರಮಾಣದಿಂದ ಕಾಲವೂ, ಅವ್ಯಾಕೃತ ಆಕಾಶವೂ (ದೇಶವೂ) ನಿರವಧಿಕ ಉತ್ಕರ್ಷದ ತಾರತಮ್ಯವುಳ್ಳದ್ದಾಗಿ ತಿಳಿದುಬರುತ್ತದೆ. ಕಾಲದೇಶಗಳೆರಡರಲ್ಲೂ ಪರಿಮಾಣ ಅಪಕರ್ಷದ ತಾರತಮ್ಯಕ್ಕೂ ನಿರವಧಿಕತೆಯು ಸಾಕ್ಷಿಯಿಂದಲೇ ತಿಳಿದು ಬರುತ್ತದೆ. ಒಂದು ಪಕ್ಷದಲ್ಲಿ ದೇಶಕಾಲಾದಿಗಳ ಪರಿಮಾಣ ಅಪಕರ್ಷದ ಅನಂತತೆಯು ಸಾಕ್ಷಿಯಿಂದ ತಿಳಿದು ಬರುವುದಿಲ್ಲವಾದರೆ ಪರಿಮಾಣ ಉತ್ಕರ್ಷದ ಅನಂತತೆಯೂ ಸಹ ಯಾವುದರಿಂದ ತಿಳಿದು ಬರುವುದು ಸಾಧ್ಯ? ಏಕೆಂದರೆ ತಾರತಮ್ಯ ರೂಪಯುಕ್ತಿಯಿಂದ ಪರಿಮಾಣೋತ್ಕರ್ಷ ಪರಂಪರೆಯ ವಿಶ್ರಾಂತಿಯು ಕಂಡುಬರುತ್ತದೆ.

ಹಾಗಾದರೆ ಕಾಲಾದಿಗಳಲ್ಲಿ ನಿರವಧಿಕವಾದ ಉತ್ಕರ್ಷವುಳ್ಳ ಪರಿಮಾಣವು ಆಗಮ ದಿಂದ ಸಿದ್ಧಿಸಲಿ ಎಂದು ಆಶಂಕಿಸಿದರೆ –

**ಯದ್ಯಾಗಮಾದನಂತಂ ತನ್ಮಹತ್ವಮವಗಮ್ಯತೇ ।।೭೩।।**

**ಅನಂತಮೇವ ಚಾಣುತ್ವಂ ಕುತೋ ನೈವಾವಸೀಯತೇ ।**

**ಮಹತ್ವಾಣುತ್ವಯೋರ್ನೈವ ವಿಶ್ರಾಂತಿರುಪಲಭ್ಯತೇ ।।೭೪।।**

ಒಂದು ಪಕ್ಷದಲ್ಲಿ ಆಗಮದಿಂದ ಕಾಲಾದಿಗಳ ಮಹತ್ವವು ಅನಂತವೆಂದು ತಿಳಿದುಬರುತ್ತದೆ ಎನ್ನುವುದಾದರೆ, ಅದೇರೀತಿ ಪರಿಮಾಣದ ಅಪಕರ್ಷವೂ ಅವಧಿ ರಹಿತವೆಂದು ಏಕೆ ನಿರ್ಣಯಿಸಲಾಗುವುದಿಲ್ಲ? ಕಾಲಾದಿಗಳಲ್ಲಿನ ಅಣುತ್ವ ಮಹತ್ವಗಳಿಗೆ ವಿಶ್ರಾಂತಿಯಿದೆ ಎಂಬುದಾಗಿ ನಿರ್ಧರಿಸಲು ಯಾವುದೇ ಪ್ರಬಲವಾದ ಪ್ರಮಾಣವು ಇರುವುದಿಲ್ಲ. ಅವುಗಳ ಆನಂತ್ಯಕ್ಕೆ ಯಾವುದೇ ಬಾಧಕವಿಲ್ಲವಾದ ಪ್ರಯುಕ್ತ ಕಾಲಾದಿಗಳ ಪರಿಮಾಣದ ಅಪಕರ್ಷ ಮತ್ತು ಉತ್ಕರ್ಷಗಳು ಸತ್ಯವೆಂದು ಅಂಗೀಕರಿಸಲೇಬೇಕು.

ಹಾಗಾದರೆ ಪರಿಮಾಣಾಪಕರ್ಷದ ಆನಂತ್ಯವನ್ನು ಅಂಗೀಕರಿಸಿದರೆ ಬಾಧಕವಿದ್ದೇ ಇದೆ. ಹೇಗೆಂದರೆ ಅಪಕರ್ಷವೆಂದರೆ ಅಲ್ಪತೆ, ಆನಂತ್ಯವೆಂದರೆ ಅನಲ್ಪತೆ. ವಿಶೇಷಣ– ವಿಶೇಷ್ಯ ಭಾವವು ವಿರುದ್ಧವಾದವುಗಳಲ್ಲಿ ಕೂಡುವುದಿಲ್ಲ. ಹೀಗೆ ಬಾಧಕವು ತೋರುವುದರಿಂದ ಅಪಕರ್ಷದ ಆನಂತ್ಯವು ಅಗ್ರಾಹ್ಯವು ಎಂಬ ಆಶಂಕೆಯನ್ನು 'ಅನ್ಯದೇವ' ಇತ್ಯಾದಿ ವಚನದಿಂದ ಪರಿಹರಿಸುತ್ತಾರೆ –

**ಅನ್ಯದೇವ ಹ್ಯನಂತತ್ವಂ ಮಹತ್ವಾಣುತ್ವಯೋಃ ಸಮಮ್ ।**

**ಬಹುತ್ವಾಲ್ಪತ್ವಯೋರ್ಯದ್ವತ್ಸಂಖ್ಯಾಯಾಮುಪಲಭ್ಯತೇ ॥೭೫॥**

**ಆನಂತ್ಯಮೇಕಭಾಗಾನಾಂ ತಾವತ್ತ್ವಂ ಹ್ಯೇವ ಗಣ್ಯತೇ(ಹ್ಯವಗಮ್ಯತೇ) ।**

ಅನಂತತ್ವವೆಂದರೆ ಅನಲ್ಪತೆಯೆಂದು ಅರ್ಥವಲ್ಲ. ಅನಲ್ಪತೆಗಿಂತ ಭಿನ್ನವೇ ಆದ ಪರಿಚ್ಛೇದರಾಹಿತ್ಯ (ಅಳತೆಯಿಲ್ಲದಿರುವುದು) ಎಂಬುದೇ ಅನಂತತ್ವಕ್ಕೆ ಅರ್ಥ. ಈ ಧರ್ಮವು ಅಣುತ್ವ–ಮಹತ್ವಗಳೆರಡರಲ್ಲಿಯೂ ಸಮಾನವಾಗಿದೆ. ಆದ್ದರಿಂದ ಅಲ್ಪತ್ವದ ಆನಂತ್ಯವೆಂಬುದು ಯುಕ್ತವೇ ಆಗುವುದು. ಸಂಖ್ಯೆಯಲ್ಲಿರುವ ಬಹುತ್ವ–ಅಲ್ಪತ್ವಗಳಿಗೆ ವಿಶೇಷಣವಾಗಿ ಅನಂತತ್ವವು ಕಂಡುಬರುವಂತೆಯೇ ಅಣುತ್ವ–ಮಹತ್ವಗಳಲ್ಲಿಯೂ ಕಂಡುಬರುವುದು. ಸಂಖ್ಯಾಶಾಸ್ತ್ರದಲ್ಲಿ ಸಂಖ್ಯೆಯ ಒಂದೊಂದು ಭಾಗಕ್ಕೂ ನಿರವಧಿಕತೆಯು ಎಣಿಸಲ್ಪಡುತ್ತದೆ. ಹೇಗೆಂದರೆ ಅತ್ಯಂತ ಚಿಕ್ಕ ಸಂಖ್ಯೆಯೆಂದು ಪರಿಗಣಿಸಲ್ಪಡುವ ಒಂದು ಎಂಬ ಸಂಖ್ಯೆಯಲ್ಲಿಯೂ ಅಪರಿಮಿತ ಭಾಗಗಳನ್ನು ಗಣನೆ ಮಾಡಬಹುದು. ಅದಕ್ಕೆ ಮಿತಿಯಿರುವುದಿಲ್ಲ. ಅತ್ಯಂತ ದೊಡ್ಡದಾದ ಸಂಖ್ಯೆಯೆಂದು ಪರಿಗಣಿಸಲಾದ ಪರಾರ್ಧದ ಮೇಲೆಯೂ ಗಣನೆಗೆ ಸಿಗಲಾರದಷ್ಟು ಅನಂತ ಸಂಖ್ಯೆಗಳಿವೆ. ಆದರೆ ಗಣನಕಾರರಿಗೆ ಅದರಿಂದ ಪ್ರಯೋಜನವಿಲ್ಲವೆಂದು ಅವುಗಳಿಗೆ ನಿರ್ದಿಷ್ಟ ಸಂಜ್ಞೆಗಳನ್ನು ಹೇಳಿಲ್ಲ.

ಹೀಗೆ ಕಾಲ ಆಕಾಶಗಳಲ್ಲಿನ ಪರಿಮಾಣದ ಅಣುತ್ವ–ಮಹತ್ವಗಳಿಗೆ ಮಿತಿಯಿಲ್ಲ ಎಂದು ಸಾಕ್ಷಿಪ್ರಮಾಣದಿಂದ ಸಮರ್ಥನೆ ಮಾಡಿ, ಈಶ್ವರನಲ್ಲಿ ಅವುಗಳ ಆನಂತ್ಯವನ್ನು ಅಣೀಯಾಂಶ್ಚ ಇತ್ಯಾದಿ ವಚನದಿಂದ ಸಾಧಿಸುತ್ತಾರೆ –

**ಅಣೀಯಾಂಶ್ಚ ಮಹೀಯಾಂಶ್ಚ ಭಗವಾನಾಗಮೋದಿತಃ ॥೭೬॥**

**ಅನಂತ್ಯವಾಚಕಃ ಶಬ್ದೋ ದ್ವಿಧಾನಂತ್ಯೇಽಪಿ ಮಾನತಾಮ್ ।**

'ಅಣೋರಣೀಯಾನ್ ಮಹತೋ ಮಹೀಯಾನ್' ಎಂಬ ಆಗಮದಿಂದ ಪರಮಾತ್ಮನು ಅಣುವಿಗಿಂತ ಅಣುವೂ ಮಹತ್ತಿಗಿಂತ ಮಹತ್ತರನೂ ಎಂಬುದಾಗಿ ಹೇಳಲ್ಪಟ್ಟಿದ್ದಾನೆ. ಇದರಿಂದ ಈಶ್ವರನಲ್ಲಿನ ಪರಿಮಾಣದ ಉತ್ಕರ್ಷ ಅಪಕರ್ಷಗಳಿಗೆ ಪರಿಮಿತಿಯಿಲ್ಲವೆಂಬುದು ಸಿದ್ಧವಾಗುತ್ತದೆ. 'ಸತ್ಯಂ ಜ್ಞಾನಮನಂತಂ ಬ್ರಹ್ಮ' ಎಂಬ ಶ್ರುತಿಯಲ್ಲಿನ 'ಅನಂತ' ಶಬ್ದವು ಬ್ರಹ್ಮನ ಪರಿಮಾಣದ ಅನಂತತ್ವವನ್ನು ಹೇಳುವುದು. ಆದ್ದರಿಂದ ಇದು ಉತ್ಕರ್ಷ–ಅಪಕರ್ಷಗಳ ಅನಂತ್ಯದ ಬಗ್ಗೆಯೂ ಪ್ರಾಮಾಣ್ಯವನ್ನು ಹೊಂದುತ್ತದೆ.

**ಯಾತಿ ನೈವ ಗುಣಾಲ್ಪತ್ವಂ ಕಾಲಾಲ್ಪತ್ವಂ ಚ ಮಾನಗಮ್ ॥೭೭॥**

**ಸರ್ವಕಾಲಗತಸ್ಯಾಲ್ಪಕಾಲೇಽಪಿ ಸ್ಯಾದವಸ್ಥಿತಿಃ ।**

**ಮಹಾಗುಣಸ್ಯ ಚಾಲ್ಪೋಽಪಿ ಗುಣಃ ಸ್ಯಾದಿತಿ ಚೇದ್ಭವೇತ್ ॥೭೮॥**

ಕಾಲದಿಂದಲೂ ಗುಣದಿಂದಲೂ ಅನಂತತ್ವವನ್ನು ಹೇಳುವ **ಅನಂತಂ ಬ್ರಹ್ಮ** ಎಂಬ ಶ್ರುತಿಯು ಗುಣಾಲ್ಪತ್ವ ಹಾಗೂ ಕಾಲಾಲ್ಪತ್ವಗಳಿಗೆ ಸರ್ವಥಾ ಪ್ರಮಾಣವೇ ಆಗಲಾರದು. ಸರ್ವಕಾಲಗಳಲ್ಲಿ ಇರುವವನಿಗೆ ಅಲ್ಪಕಾಲದಲ್ಲಿಯೂ ಇರುವಿಕೆಯು ಕೂಡುತ್ತದೆ. ಮಹಾಗುಣ ಕ್ರಿಯಾದಿಗಳನ್ನು ಹೊಂದಿರುವವನಿಗೆ ಅಲ್ಪಗುಣಾದಿಗಳು ಆಗುವುದು. ಹೀಗೆ ಆಶಂಕಿಸಿದರೆ, ಅದು ಆಗಿಯೇ ಆಗುತ್ತದೆ ಎಂದು ಉತ್ತರ.

**ತಾವತ್ತ್ವಮೇವ ನೈವ ಸ್ಯಾದ್ದೇಶೇಽಪ್ಯೇತನ್ನ ನೋ ಮತಮ್ ।**

ಹಾಗಾದರೆ 'ನೈವ ಗುಣಾಲ್ಪತ್ವಂ' ಎಂಬುದಾಗಿ ಗುಣಾಲ್ಪತ್ವವನ್ನು ನಿರಾಕರಿಸಿದುದು ಹೇಗೆ ಎಂದು ಕೇಳಿದರೆ, 'ತಾವತ್ತ್ವಮೇವ' ಕೇವಲ ಅಲ್ಪತ್ವವೇ ಎಂಬುದು ಎಂದಿಗೂ ಆಗಲಾರದೆಂದು ಅಭಿಪ್ರಾಯ. ಅವ್ಯಾಕೃತಾಕಾಶ ಮತ್ತು ಪರಿಮಾಣದ ವಿಷಯದಲ್ಲೂ ಈ ಕೇವಲ ಅಲ್ಪತ್ವವೇ ಎಂಬುದನ್ನು ನಾವು ಒಪ್ಪುವುದಿಲ್ಲ.

ಹಾಗಾದರೆ ಈಶ್ವರಾದಿಗಳಿಗೆ ನಿರವಧಿಕವಾದ ಉತ್ಕೃಷ್ಟ ಹಾಗೂ ಅಪಕೃಷ್ಟ ಪರಿಮಾಣಗಳೆರಡನ್ನು ಸಮರ್ಥಿಸುವುದು ಯುಕ್ತವಲ್ಲ. ಏಕೆದರೆ ಸೂತ್ರಕಾರರು ಈ ವಿಷಯವನ್ನು ಎಲ್ಲಿಯೂ ಹೇಳಿಲ್ಲ. ಈ ಆಕ್ಷೇಪವನ್ನು 'ಮಹತಃ' ಇತ್ಯಾದಿ ವಚನದಿಂದ ಪರಿಹರಿಸುತ್ತಾರೆ –

**ಮಹತೋಽಲ್ಪತ್ವಮಪಿ ಹಿ ವ್ಯೋಮವತ್ಪ್ರಾಹ ವೇದವಿತ್ ॥೭೯॥**

ನಿರವಧಿಕವಾದ ಪರಿಮಾಣೋತ್ಕರ್ಷವುಳ್ಳ ಬ್ರಹ್ಮನಿಗೂ ಅಲ್ಪಪರಿಮಾಣತ್ವವನ್ನು ಆಕಾಶದ ದೃಷ್ಟಾಂತದಿಂದ ವೇದವಿದರಾದ ಸೂತ್ರಕಾರರು 'ವ್ಯೋಮವಚ್ಚ' ಎಂಬ ಸೂತ್ರಾಂಶದಿಂದ ಹೇಳಿರುತ್ತಾರೆ.

ಕಾಲ ಹಾಗೂ ಆಕಾಶಗಳಲ್ಲಿಯೂ, ಈಶ್ವರನಲ್ಲಿಯೂ ನಿರವಧಿಕವಾದ ಪರಿಮಾಣ ಉತ್ಕರ್ಷ–ಅಪಕರ್ಷಗಳಿರುವುದು ಎಂಬುದಾಗಿ ಸಾಕ್ಷಿಯಿಂದಲೂ ಆಗಮದಿಂದಲೂ ಸಮರ್ಥಿಸಲಾಯಿತು. ಇನ್ನು ಇದನ್ನು ಒಪ್ಪದಿದ್ದಲ್ಲಿ ಬಾಧಕವನ್ನು 'ಯದಿ' ಇತ್ಯಾದಿ ವಚನದಿಂದ ಹೇಳುತ್ತಾರೆ –

**ಯದ್ಯಲ್ಪದೇಶಸಂಸ್ಥಾನಂ ನ ಸರ್ವತ್ರಾಪಿ ನೋ ಭವೇತ್ ।**

**ಸ್ಥಿತಸ್ಯ ಹ್ಯಲ್ಪದೇಶೇಷು ಸರ್ವಗತ್ವಂ ಭವೇದ್ಧ್ರುವಮ್ ॥೮೦॥**

**ಏಕತ್ರಾಪ್ಯನವಸ್ಥಸ್ಯ ಕುತ ಏವಾಖಿಲಸ್ಥತಾ ।**

**ಶೂನ್ಯತ್ವಮೇವ ತಸ್ಯ ಸ್ಯಾದ್ಯಸ್ಯೈಕತ್ರಾಪಿ ನ ಸ್ಥಿತಿಃ ॥೮೧॥**

**ಅತೋ ನಾಣುತ್ವವಿಶ್ರಾಂತಿರ್ನ ಮಹತ್ವಸ್ಯ ಚ ಕ್ವಚಿತ್ ।**

ಒಂದು ಪಕ್ಷದಲ್ಲಿ ಕಾಲಾದಿಗಳಿಗೆ ಅಲ್ಪದೇಶದಲ್ಲಿ ಸ್ಥಿತಿಯು ಇಲ್ಲವಾದರೆ ಆಗ ಸರ್ವತ್ರದಲ್ಲಿ ಇರುವಿಕೆಯು ಸಿದ್ಧಿಸಲಾರದು. ಏಕೆಂದರೆ ಅಲ್ಪದೇಶಗಳಲ್ಲಿ ಸ್ಥಿತಿಯನ್ನು ಹೊಂದಿರುವವನಿಗೇ ಸರ್ವದೇಶಗಳಲ್ಲಿ ಸ್ಥಿತಿಯು ಎಂಬುದು ಪ್ರಸಿದ್ಧವು. ಒಂದೊಂದು ಪ್ರದೇಶದಲ್ಲಿಯೂ ಇಲ್ಲದಿರುವ ವ್ಯಕ್ತಿಗೆ ಸರ್ವದೇಶಗಳಲ್ಲಿ ಸ್ಥಿತಿಯು ಹೇಗೆ ಆದೀತು? ಯಾವುದಕ್ಕೆ ಏಕದೇಶದಲ್ಲಿಯೂ ಸ್ಥಿತಿಯು ಇರುವುದಿಲ್ಲವೋ ಅದಕ್ಕೆ ಶೂನ್ಯತೆಯೇ ಪ್ರಾಪ್ತವಾಗುವುದು. ಅಂದರೆ ಅದು ಅತ್ಯಂತ ಅಸತ್ವವೇ ಆಗುವುದು. ಆದುದರಿಂದ ಎಲ್ಲಿಯೂ ಪರಿಮಾಣದ ಅಪಕರ್ಷದ ತಾರತಮ್ಯಕ್ಕೂ ಉತ್ಕರ್ಷದ ತಾರತಮ್ಯಕ್ಕೂ ವಿಶ್ರಾಂತಿಯು ಸಂಭವಿಸುವುದಿಲ್ಲ.

ಹೀಗೆ ಕಾಲ ಆಕಾಶ ಈಶ್ವರ ಇವುಗಳಲ್ಲಿರುವ ಪರಿಮಾಣದಲ್ಲಿ ಉತ್ಕರ್ಷ-ಅಪಕರ್ಷಗಳ ಆನಂತ್ಯವಿರುವುದೆಂಬುದಾಗಿ ಹೇಳಿದರು. ಕೇವಲ ಇವುಗಳಲ್ಲಿ ಮಾತ್ರವೇ ಅಲ್ಲ, ಪ್ರಕೃತಿ ಇತ್ಯಾದಿ ಸರ್ವಗತವೂ ಪರಮಮಹತ್ತರವೂ ಆದ ಬೇರೆ ದ್ರವ್ಯದಲ್ಲಿಯೂ ಈ ರೀತಿಯ ಆನಂತ್ಯವು ಇದೆಯೆಂಬ ಸಂಗತಿಯನ್ನು 'ಉಭಯಾನಂತ್ಯಯುಕ್' ಇತ್ಯಾದಿ ವಚನದಿಂದ ಹೇಳುತ್ತಾರೆ –

**ಉಭಯಾನಂತ್ಯಯುಕ್ ತಸ್ಮಾದ್ಯದಿ ಮುಖ್ಯಂ ಮಹದ್ಭವೇತ್ ।।೮೨।।**

**ತಚ್ಚ ಬ್ರಹ್ಮ ಪರಂ ಸಾಕ್ಷಾತ್ಸರ್ವಾನಂತ್ಯಯುತಂ ಸದಾ ।**

ಕಾಲ ಮುಂತಾದವುಗಳ ಆನಂತ್ಯದ ಬಗ್ಗೆ ಹೇಳಿದ ನ್ಯಾಯದಿಂದ, ಪ್ರಕೃತಿ ಮುಂತಾದ ಪರಮಮಹತ್ತಾದ ದ್ರವ್ಯದಲ್ಲಿಯೂ ಉಭಯರೀತಿಯ ಆನಂತ್ಯವು ಇರುತ್ತದೆ. ಕಾಲ ಮುಂತಾದವು ಅನಂತತ್ವವನ್ನು ಹೊಂದಿದ್ದರೂ, ನಿರಪೇಕ್ಷವಾದ ಹಾಗೂ ಮುಖ್ಯವಾದ ಅನಂತತ್ವವು ಪರಬ್ರಹ್ಮನಲ್ಲಿ ಮಾತ್ರವಿರುವುದು. ಏಕೆಂದರೆ ಕಾಲ ಮುಂತಾದವುಗಳ ಅನಂತತ್ವವು ಈಶ್ವರಾಧೀನವಾದುದು ಎಂದರ್ಥ.

ಇನ್ನು ಪರಮಾಣುಗಿಂತ ಕಡಿಮೆ ಪರಿಮಾಣವುಳ್ಳ ದ್ರವ್ಯವು ಇಲ್ಲವೆಂದು ಶಂಕಿಸಬಾರದು. ಏಕೆಂದರೆ ಪರಮಾಣುಗಳಿಗೆ ಭಾಗಗಳಿರುತ್ತವೆ ಮತ್ತು ಆ ಭಾಗಗಳಿಗೂ ಮತ್ತೆ ಭಾಗಗಳಿರುತ್ತವೆ. ಹೀಗೆ ಪರಿಮಾಣ ಅಪಕರ್ಷದ ತಾರತಮ್ಯಕ್ಕೆ ವಿಶ್ರಾಂತಿಯು ಇರುವುದಿಲ್ಲ. ಇದು ಸಾಕ್ಷಿರೂಪ ಪ್ರಮಾಣದಿಂದ ಸಿದ್ಧವಾಗುತ್ತದೆ. ಹೀಗೆ ಸಿದ್ಧಾಂತವು. ಆದರೆ ಸಾಕ್ಷಿ ಎಂಬ ಪ್ರಮಾಣವನ್ನೇ ನಾನು ಒಪ್ಪುವುದಿಲ್ಲ ಎಂದು ಪರವಾದಿಯು ಹೇಳಿದರೆ, ಅದಕ್ಕೆ ಬಾಧಕವನ್ನು 'ಯದಿ ಸಾಕ್ಷೀ' ಇತ್ಯಾದಿ ವಚನದಿಂದ ಹೇಳುತ್ತಾರೆ –

**ಯದಿ ಸಾಕ್ಷೀ ಸ್ವಯಂಭಾತೋ ನ ಮಾನಂ ಕೇನ ಗಮ್ಯತೇ ।।೮೩।।**

**ಅಕ್ಷಜಾದೇಶ್ಚ ಮಾನತ್ವಮನವಸ್ಥಾನ್ಯಥಾ ಭವೇತ್ ।**

**ಅತಃ ಸರ್ವಪದಾರ್ಥಾನಾಂ ಭಾಗಾಃ ಸಂತ್ಯೇವ ಸರ್ವದಾ ।।೮೪।।**

**ಸರ್ವದಿಕ್ಷ್ವಪಿ ಸಂಬಂಧಾದವಿಭಾಗಃ ಪರಾಣುತಾ ।**

ಸ್ವಪ್ರಕಾಶರೂಪ ಸಾಕ್ಷಿಯನ್ನು ಪ್ರಮಾಣವೆಂದು ಅಂಗೀಕರಿಸದಿದ್ದರೆ, ಪ್ರತ್ಯಕ್ಷಾದಿಗಳ ಪ್ರಾಮಾಣ್ಯವೂ, ಆಕಾಶ ಮುಂತಾದ ಬಾಹ್ಯ ಹಾಗೂ ಸುಖ ಮುಂತಾದ ಆಂತರಿಕ ಪದಾರ್ಥಗಳೂ ಹೇಗೆ ತಿಳಿಯಲ್ಪಡುವುದು? ಅವುಗಳು ಸಾಕ್ಷಿಯಿಂದ ಇತರವಾದ ಪ್ರಮಾಣಗಳಿಂದ ತಿಳಿದುಬರುತ್ತವೆ ಎಂದು ಹೇಳಿದರೆ ಅನವಸ್ಥೆಯು ಬರುವುದು. ಆದ್ದರಿಂದ ಸಾಕ್ಷಿರೂಪ ಪ್ರಮಾಣವನ್ನು ಒಪ್ಪಲೇಬೇಕು. ಆ ಸಾಕ್ಷಿಯಿಂದ ಎಲ್ಲ ಪದಾರ್ಥಗಳಿಗೂ ಅವುಗಳ ಭಾಗಗಳಿಗೂ ಯಾವಾಗಲೂ ಭಾಗಗಳು ಇದ್ದೇ ಇರುತ್ತವೆ ಎಂದು ಸಿದ್ಧವಾಗುವುದು. ಹಾಗೂ ಏಕಕಾಲದಲ್ಲಿ ಸರ್ವದಿಕ್ಕುಗಳೊಂದಿಗೂ ಅವುಗಳ ಸಂಯೋಗವಿರುವುದೆಂಬ ಯುಕ್ತಿಯಿಂದಲೂ ಭಾಗಗಳಿವೆಯೆಂದು ತಿಳಿದು ಬರುತ್ತದೆ. ವಿಭಾಗ ಮಾಡಲು ಆಗದಿರುವುದು ಎಂಬುದೇ ಪರಮಾಣು ಶಬ್ದದ ಪ್ರವೃತ್ತಿ ನಿಮಿತ್ತವು. 'ಅವಿಭಾಗಃ ಪರಾಣುತಾ' ಎಂದು ಇಲ್ಲಿ ಹೇಳಿರುವ ಪರಮಾಣುವಿನ ಲಕ್ಷಣಕ್ಕೆ ಶ್ರೀಮನ್ನ್ಯಾಯಸುಧಾದಲ್ಲಿ 'ಯಾವುದಕ್ಕೆ ವಿಭಿನ್ನವಾದ ಅವಯವಗಳಿದ್ದರೂ ಅವುಗಳು ಯಾವತ್ತೂ ವಿಭಾಗ ಹೊಂದುವುದಿಲ್ಲವೋ ಅದೇ ಪರಮಾಣು' ಎಂಬುದಾಗಿ ಶ್ರೀಮಜ್ಜಯತೀರ್ಥರು ವ್ಯಾಖ್ಯಾನ ಮಾಡಿದ್ದಾರೆ.

ಇನ್ನು ಸೂತ್ರಕಾರರು ಪರಿಮಾಣದ ಅಸಮವಾಯಿಕಾರಣಗಳ ವಿಷಯದಲ್ಲಿ ಹೇಳಿರುವ ದೂಷಣವನ್ನು ಇನ್ನಿತರ ಅಸಮವಾಯಿಕಾರಣದ ವಿಷಯಗಳಲ್ಲಿಯೂ ಅನ್ವಯಿಸಿಕೊಳ್ಳಬೇಕು ಎನ್ನುವ ಅಭಿಪ್ರಾಯದಿಂದ, ದ್ರವ್ಯದ ಅಸಮವಾಯಿ ಕಾರಣವಾದ ಸಂಯೋಗವಿಷಯದಲ್ಲಿ ಅನ್ಯಥಾ ಪ್ರತಿಪತ್ತಿಯನ್ನು ನಿರಾಕರಿಸುತ್ತಾರೆ–

**ತತ್ಸಂಯೋಗಾದನಿಯತಾತ್ಪದಾರ್ಥಾನಾಂ ಜನಿರ್ಭವೇತ್ ।।೮೫।।**

**ದ್ವಯೋರೇವ ತು ಸಂಯೋಗ ಇತಿ ಕೇನಾವಸೀಯತೇ ।**

ಅವಯವಗಳ ಸಂಯೋಗವು ದ್ರವ್ಯಗಳಿಗೆ ಅಸಮವಾಯಿಕಾರಣವು ಎಂದು ಹೇಳುವ ವೈಶೇಷಿಕಾದಿಗಳೂ ಸಹ ಪರಮಾಣುವಿನಿಂದ ಕಾರ್ಯೋತ್ಪತ್ತಿಯಾಗಲು ಸಜಾತೀಯವಾದ ಎರಡೇ ಪರಮಾಣುಗಳ ಸಂಯೋಗವೇ ಕಾರಣವೆಂದು ಹೇಳುತ್ತಾರೆ. ಅದು ನಂಬಿಕೆಗೆ ಅರ್ಹವಾದುದಲ್ಲ. ಏಕೆಂದರೆ ಯಾವುದೇ ನಿಯಮಕ್ಕೊಳಪಡದೆ ಆ ಕಾರಣಗಳ (ಪರಮಾಣುಗಳ) ಸಂಯೋಗದಿಂದ ದ್ರವ್ಯಗಳ ಉತ್ಪತ್ತಿಯು ಆಗುವುದು. (ಹೇಗೆಂದರೆ – ಕೆಲವು ಸಂದರ್ಭಗಳಲ್ಲಿ ಎರಡು ಪರಮಾಣುಗಳ ಸಂಯೋಗದಿಂದ ದ್ವ್ಯಣುಕವೆಂಬ ಕಾರ್ಯವು ಹುಟ್ಟುತ್ತದೆ. ಕೆಲವೊಮ್ಮೆ ಮೂರು ಪರಮಾಣುಗಳ ಸಂಯೋಗದಿಂದ ತ್ರ್ಯಣುಕವೆಂಬ

ಕಾರ್ಯವು ಹುಟ್ಟುತ್ತದೆ. ಇದೇರೀತಿ ನಾಲ್ಕು ಪರಮಾಣುಗಳು ಸಂಯೋಗಗೊಂಡು ಚತುರಣುಕವು ಹುಟ್ಟಬಹುದು. ಕೆಲವೊಮ್ಮೆ ಸಜಾತೀಯ ಪರಮಾಣುಗಳು ಸಂಯೊಗಗೊಂಡರೆ, ಇನ್ನೂ ಕೆಲವು ಸಲ ವಿಜಾತೀಯ ಪರಮಾಣುಗಳು ಸಂಯೊಗಗೊಂಡು ಕಾರ್ಯದ ಉತ್ಪತ್ತಿಗೆ ಕಾರಣವಾಗಬಹುದು. ಮತ್ತೊಂದು ಸಂದರ್ಭದಲ್ಲಿ ಪರಮಾಣುವಿಗೂ ದ್ವ್ಯಣುಕಕ್ಕೂ ಸಂಯೋಗವಾಗಬಹುದು. ಹೀಗೆ ಪರಮಾಣುಗಳ ಸಂಯೊಗದಲ್ಲಿ ಯಾವುದೇ ನಿರ್ದಿಷ್ಟ ನಿಯಮವೆಂಬುವುದು ಇರುವುದಿಲ್ಲ.). ಆದ್ದರಿಂದ ಆದಿಕಾರ್ಯಕ್ಕೆ ಎರಡು ಸಜಾತೀಯವಾದ ಪರಮಾಣುಗಳ ಸಂಯೋಗವೇ ಅಸಮವಾಯಿಕಾರಣವು ಎಂಬುದಾಗಿ ಯಾವ ಪ್ರಮಾಣದಿಂದ ನಿರ್ಧಾರವಾಗುತ್ತದೆ?

ಇನ್ನು ಸಜಾತೀಯವೇ ಆದ ಪರಮಾಣುಗಳ ಸಂಯೋಗವೇ ದ್ವ್ಯಣುಕಾದಿ ಕಾರ್ಯದ ಉತ್ಪತ್ತಿಗೆ ಕಾರಣ ಎಂಬ ನಿಯಮವು ಪ್ರಮಾಣರಹಿತವಲ್ಲ. ಏಕೆಂದರೆ ಪರಮಾಣುವಿನ ಕಾರ್ಯವಾದ ದ್ವ್ಯಣುಕಾದಿಗಳಲ್ಲಿ ಗಂಧಾದಿಗಳ ಉತ್ಪತ್ತಿಯೇ ಈ ನಿಯಮದ ಬಗ್ಗೆ ಪ್ರಮಾಣವಾಗುತ್ತದೆ. ಹೇಗೆಂದರೆ ಪರಮಾಣುವಿನ ಕಾರ್ಯವಾದ ದ್ವ್ಯಣುಕಾದಿಗಲ್ಲಿ ಗಂಧಾದಿಗಳು ಕಂಡುಬರುತ್ತವೆ. ಇದು ಸಾಧ್ಯವಾಗಬೇಕಾದರೆ ಸಂಯೋಗವಾಗುವ ಪರಮಾಣುಗಳು ಸಜಾತೀಯವೇ ಆಗಿರಬೇಕು. ಏಕೆಂದರೆ ವಿಜಾತೀಯವಾದ ಪೃಥಿವಿ ಮತ್ತು ಜಲದ ಪರಮಾಣುಗಳ ಸಂಯೋಗದಿಂದ ಒಂದು ಕಾರ್ಯವು ಉತ್ಪತ್ತಿಯಾದ ಪಕ್ಷದಲ್ಲಿ ಆಗ ಆ ಕಾರ್ಯವು ಗಂಧರಹಿತವೂ ಸ್ನೇಹಗುಣರಹಿತವೂ ಆಗಬೇಕಾಗುವುದು. ಹೀಗೆ ಆಕ್ಷೇಪಿಸಿದರೆ, 'ಕಾರಣಸ್ಯ' ಇತ್ಯಾದಿ ವಚನದಿಂದ ಅದನ್ನು ಪರಿಹರಿಸುತ್ತಾರೆ –

**ಕಾರಣಸ್ಯ ಗುಣಾಸ್ತೇನ ಭವೇಯುಃ ಕಾರ್ಯಗಾ ಅಪಿ ।।೮೬।।**

**ತಾರತಮ್ಯೇನ ಸರ್ವೇಽಪಿ ಮಹಾಂತಶ್ಚಾಣವೋ ಯತಃ ।**

'ದ್ವಯೋರೇವ ಸಂಯೋಗಃ' ಎಂಬ ನಿಯಮವಿಲ್ಲದುದರಿಂದ, ಕಾರಣದ ಗಂಧಾದಿ ಗುಣಗಳು ಕಾರ್ಯದಲ್ಲಿರುವ ಗಂಧಾದಿ ಗುಣಗಳ ಉತ್ಪತ್ತಿಗೆ ಕಾರಣವೂ ಆಗುತ್ತವೆ. ಇದರಲ್ಲಿ ದೋಷವೇನು? ತಾರತಮ್ಯದಿಂದ ಸರ್ವಪದಾರ್ಥಗಳೂ ಮಹತ್ತುಗಳೆಂದೂ ಅಣುಗಳೆಂದೂ ಸಮರ್ಥಿಸಿಸಲ್ಪಟ್ಟಿವೆ. ಆದ್ದರಿಂದ ಎರಡೇ ಪರಮಾಣುಗಳಿಗೆ ಸಂಯೋಗ ಎಂಬ ನಿಯಮವು ಯಾವ ಪ್ರಮಾಣದಿಂದ ನಿಶ್ಚಿತವಾಗುತ್ತದೆ?

**ತತ್ಪ್ರೋಕ್ತಸೃಷ್ಟೌ ತು ಮಾನಂ ಕೇವಲಕಲ್ಪನಾ ।।೮೭।।**

**ಕಥಂ ಸಾಕ್ಷಿಮಿತಸ್ಯಾಸ್ಯ ಶಕ್ನುಯಾದ್ವಾರಣೇ ಕ್ವಚಿತ್ ।**

ಇನ್ನು ತಾರ್ಕಿಕರು (ವೈಶೇಷಿಕರು) ಹೇಳಿದ ಸೃಷ್ಟಿ ಪ್ರಕ್ರಿಯೆಯ ವಿಷಯದಲ್ಲಿ

ಪ್ರಮಾಣವು ಇರುವುದಿಲ್ಲ. ಅದು ಕೇವಲ ಕಲ್ಪನೆಯು. ಮೂಲಾಧಾರವಿಲ್ಲದ ಈ ವಾದವು ಸಾಕ್ಷಿಯಿಂದ ಸಿದ್ಧವಾದ ನಿಯಮರಹಿತ ಸೃಷ್ಟಿ ಪ್ರಕಾರವನ್ನು ಎಲ್ಲಿಯೂ ಬಾಧಿಸಲು ಸಮರ್ಥವಾಗುವುದಿಲ್ಲ.

ಹಾಗಾದರೆ ಪರಮಾಣು ದ್ವ್ಯಣುಕಗಳೇ ಮೊದಲು ಸಾಕ್ಷಿಸಿದ್ಧವಾಗಿಲ್ಲ. ಅಂದಮೇಲೆ ಅವುಗಳಿಂದ ಆರಂಭವಾಗುವ ಸೃಷ್ಟಿ ಪ್ರಕ್ರಿಯೆಯೂ ಸಾಕ್ಷಿಯಿಂದ ಸಿದ್ಧವಾಗಲಾರದು. ಆದುದರಿಂದ 'ಸಾಕ್ಷಿಮಿತಸ್ಯ' ಎಂದು ಹೇಳಿದ್ದು ಯುಕ್ತವಾಗದು ಎಂದರೆ –

**ಯದಿ ಸಾಕ್ಷಿಮಿತಂ ನೈತನ್ನಾನುಮಾ ತತ್ರ ವರ್ತತೇ ।।೮೮।।**

**ಪಕ್ಷೀಕರ್ತುಮಶಕ್ಯತ್ವಾತ್ಕುತ ಏವಾನುಮಾ ಭವೇತ್ ।**

**ಯತ್ರ ನಾಸ್ತಿ ಪದನ್ಯಾಸಃ ಕಸ್ತಂ ವಿಷಯಮಾಪ್ನುಯಾತ್ ।।೮೯।।**

ಪರಮಾಣು ಮುಂತಾದವು ಸಾಕ್ಷಿಸಿದ್ಧವಲ್ಲವೆಂದರೆ, ಅದು ಅಪ್ರಮಾಣವೇ ಆಗುವುದು. ಅದರ ವಿಷಯದಲ್ಲಿ ಅನುಮಾನವೂ ಪ್ರವೃತ್ತವಾಗಲಾರದು. ಪಕ್ಷೀಕರಿಸಲು ಶಕ್ಯವಿಲ್ಲವಾದುದರಿಂದ ಅನುಮಾನವು ಯಾವ ಕಾರಣದಿಂದಲೂ ಸಂಭವಿಸಲಾರದು. ಯಾವನು ಯಾವ ದೇಶವನ್ನು ಕುರಿತು ಹೆಜ್ಜೆಯಿಡುವುದನ್ನೇ ಇನ್ನೂ ಪ್ರಾರಂಭಿಸಲ್ಲವೋ, ಅವನು ಆ ದೇಶವನ್ನು ಹೇಗೆತಾನೆ ಹೊಂದುವನು? ಏಕೆಂದರೆ ಚಲ ಮತ್ತು ಅಚಲ ವಸ್ತುಗಳ ಸಂಯೋಗಕ್ಕೆ ಚಲವಸ್ತುವಿನ ಕ್ರಿಯೆಯೇ ಕಾರಣವಾಗುವುದು. ಇದು ಹೇಗೋ ಹಾಗೆ, ಅನುಮಾನದ ಉತ್ಪತ್ತಿ ಎಂಬ ಕ್ರಿಯೆಗೆ ಪಕ್ಷೀಕರಣವೇ ಕಾರಣವು. ಪರ್ವತ, ಬೆಂಕಿ ಮುಂತಾದವು ಅನುಮಾನದ ವಿಷಯವಾಗಲಾರವು. ಪರ್ವತ ಬೆಂಕಿಗಳಲ್ಲಿನ ಸಂಬಂಧವು ಅನುಮಾನದ ವಿಷಯವಾಗುತ್ತದೆ. ಹಾಗೂ ಸಂಬಂಧಿಗಳ ಜ್ಞಾನವಿಲ್ಲದೆ ಸಂಬಂಧದ ಜ್ಞಾನವಾಗಲಾರದು. ಆದ್ದರಿಂದ ಪಕ್ಷೀಕರಣವಿಲ್ಲದಿದ್ದರೆ ಅನುಮಾನದ ಉತ್ಪತ್ತಿಯೇ ಸಂಭವಿಸುವುದಿಲ್ಲ.

ಇನ್ನು ದ್ವ್ಯಣುಕವನ್ನು ಪಕ್ಷೀಕರಿಸಿ ಪರಮಾಣುವಿನ ಬಗ್ಗೆ ಅನುಮಾನ ಮಾಡಬೇಕು. ಏಕೆಂದರೆ ಕಾರ್ಯವೇ ಕಾರಣದ ಬಗ್ಗೆ ಪ್ರಮಾಣವೆಂದು ತಾರ್ಕಿಕರು ಹೇಳಿದ್ದಾರೆ. ಆ ದ್ವ್ಯಣುಕವೆಂಬ ಕಾರ್ಯವು ಇದುವರೆಗೂ ಸಿದ್ಧವಾಗಿಲ್ಲ. ಆದ್ದರಿಂದ ಅದನ್ನು ಪಕ್ಷೀಕರಿಸಲು ಸಾಧ್ಯವಿಲ್ಲ. ಅಂದಮೇಲೆ ದ್ವ್ಯಣುಕದ ಕಾರಣವಾದ ಪರಮಾಣುವಿನ ಬಗ್ಗೆ ಅನುಮಾನವು ಹೇಗೆ ತಾನೆ ಸಾಧ್ಯವಾಗುವುದು?

ಹೀಗೆ ಪರಮಾಣು ದ್ವ್ಯಣುಕಗಳು ಅನುಮಾನದಿಂದ ಸಿದ್ಧಿಸುವುದಿಲ್ಲವೆಂದು ಹೇಳಿ, ಪ್ರಸಂಗವಿರುವುದರಿಂದ, ಆಕಾಶಾದಿಗಳ ಪರಿಮಾಣದ ಉತ್ಕರ್ಷದಲ್ಲಿನ ಅನಂತತ್ವವೂ ಅನುಮಾನದಿಂದ ಸಿದ್ಧವಾಗುವುದಿಲ್ಲ ಎಂದು ಸ್ಪಷ್ಟಪಡಿಸುತ್ತಾರೆ –

**ದೇಶಾಂತರಾದಿಶಬ್ದಾಶ್ಚ ಶಶಶೃಂಗಾದಿಶಬ್ದವತ್ ।**

ದೇಶಾಂತರಾದಿಗಳನ್ನು ಸಾಧಿಸಿಕೊಡುವ ಅನುಮಾನ ಪ್ರಯೋಗಗಳು ಶಶಶೃಂಗಾದಿ ಸಾಧಕ ಅನುಮಾನ ಪ್ರಯೊಗಗಳಿಗೆ ಸಮಾನವಾಗಿಯೇ ಇರುತ್ತವೆ.

ವಿವಾದ ವಿಷಯವಾದ ದೇಶವು ತನಗಿಂತ ಸ್ಥೂಲವೂ ಸದೃಶವೂ ಆದ ದ್ರವ್ಯಾಂತರದಿಂದ ಯುಕ್ತವಾದುದು, ದೇಶವಾಗಿರುವುದರಿಂದ. ಹಸ್ತಾದಿ ದೇಶವು ದೃಷ್ಟಾಂತ. ಆ ದ್ರವ್ಯಾಂತರವೂ ಇದರಂತೆಯೇ. ಹೀಗೆಯೇ ಕಾಲದಲ್ಲಿಯೂ ಅನುಮಾನ ಮಾಡಬಹುದು. ಹೀಗೆ ಶಶಶೃಂಗದ ವಿಷಯದಲ್ಲಿ ಅನುಮಾನವನ್ನು ಮಾಡಲು ಸಾಧ್ಯವಿಲ್ಲ. ಏಕೆಂದರೆ ಅತ್ಯಂತ ಅಸತ್ತಾದ ಎಲ್ಲಿಯೂ ತೋರದಿರುವ ಶಶಶೃಂಗಕ್ಕೆ ಗೋವು ಮುಂತಾದವುಗಳ ಶೃಂಗಗಳಿಂದ ಸಾದೃಶ್ಯವೂ ಸಜಾತೀಯತೆಯೂ ಇರುವುದಿಲ್ಲ. ಹಾಗಾದರೆ ಆಕಾಶಾದಿಗಳೂ ಒಂದೊಂದೇ ಇರುವುದರಿಂದ ಸಾದೃಶ್ಯಾದಿಗಳು ಇಲ್ಲವೆಂದು ಹೇಳಕೂಡದು. ಔಪಾಧಿಕ ಭೇದವಿದ್ದ ಪ್ರಯುಕ್ತ ಕೂಡುವುದು ಎಂದು ಆಶಂಕಿಸಿದರೆ, ಅದನ್ನು 'ಸದೃಶಂ ಚ' ಇತ್ಯಾದಿ ವಚನದಿಂದ ಪರಿಹರಿಸುತ್ತಾರೆ –

**ಸದೃಶಂ ಚ ಸಜಾತೀಯಂ ನಾಸ್ಮತ್ಪಕ್ಷೇ ಕಿಮೇವ ಹಿ ॥೯೦॥**

ಸಂಪ್ರತಿಪನ್ನ ದೇಶವು ಅದಕ್ಕಿಂತ ಸ್ಥೂಲವೂ ಸದೃಶವೂ ಸಜಾತೀಯವೂ ಆದ ವಸ್ತುವಿನಿಂದ (ಅಂದರೆ ಜೀವನಿಂದ ಅಥವಾ ಈಶ್ವರನಿಂದ) ಯುಕ್ತವಾದುದು ನಮ್ಮ ಪಕ್ಷದಲ್ಲಿ ಏಕೆ ಸಿದ್ಧವಾಗದು? ಆಗಿಯೇ ಆಗುವುದು. ಆದ್ದರಿಂದ ನಿಮ್ಮ ಪಕ್ಷಕ್ಕೆ ಸಿದ್ಧಸಾಧನವೆಂಬ ದೋಷವು ಬರುವುದು. ಹಾಗೂ ಆಕಾಶಾದಿಗಳ ಪರಿಮಾಣ ಉತ್ಕರ್ಷದ ಆನಂತ್ಯವು ಸಿದ್ಧಿಸುವುದಿಲ್ಲ. ಆದ್ದರಿಂದ ಅರ್ಥಾಂತರತ್ವವೂ ಬರುವುದು.

ಹೀಗೆ ಪರಮಾಣು ದ್ವ್ಯಣುಕಗಳಿಗೆ ಹಾಗೂ ಆಕಾಶಾದಿಗಳ ಪರಿಮಾಣದಲ್ಲಿನ ಉತ್ಕರ್ಷದ ಆನಂತ್ಯಕ್ಕೆ ಸಾಕ್ಷಿಸಿದ್ಧತ್ವವನ್ನು ಅಂಗೀಕರಿಸದೆ ಕೇವಲ ಅನುಮಾನದಿಂದ ಸಾಧಿಸುವುದು ಅಯುಕ್ತವೆಂದು ಸಮರ್ಥಿಸಲಾಯಿತು.

ಇನ್ನು ಆಗಮವನ್ನು ಅನಾದರಿಸಿ, ಈಶ್ವರ ಧರ್ಮಾದಿಗಳನ್ನು ಸಾಧಿಸಲು ಮಾಡಲ್ಪಡುವ ಅನುಮಾನವೂ ಅಯುಕ್ತವೆಂಬುದನ್ನು ಇಲ್ಲಿ ಪ್ರಸಂಗವಿರುವುದರಿಂದ 'ಯೇನೈವ' ಇತ್ಯಾದಿ ವಾಕ್ಯದಿಂದ ಹೇಳುತ್ತಾರೆ –

**ಯೇನೈವ ಚ ಪ್ರಕಾರೇಣಾತ್ಯಸಿದ್ಧಮನುಮೀಯತೇ ।**

**ತೇನೈವ ಶಶಶೃಂಗಾದೇಃ ಶಕ್ಯಮಸ್ತಿತ್ವಕಲ್ಪನಮ್ ॥೯೧॥**

ಯಾವ ಪ್ರಕಾರದಿಂದ ಆಗಮಾದಿಗಳಿಂದ ಅತ್ಯಂತ ಅಸಿದ್ಧವಾದುದೂ

ಅನುಮಾನದಿಂದ ಕಲ್ಪಿಸಬಹುದೋ, ಅದೇ ಪ್ರಕಾರ ಶಶಶೃಂಗಾದಿ ಅತ್ಯಂತ ಅಸತ್ತಾದ ಪದಾರ್ಥಗಳ ಅಸ್ತಿತ್ವವನ್ನೂ ಕಲ್ಪಿಸಲು ಬರುತ್ತದೆ.

ಅನುಮಾನವು ಯಾವಾಗ ಉಪಯುಕ್ತವಾಗುವುದೆಂದರೆ –

**ಪ್ರತ್ಯಕ್ಷಮಾಗಮೋ ವಾಪಿ ಭವೇದ್ಯತ್ರ ನಿಯಾಮಕಃ ।**

**ಸೈವ ವ್ಯಾಪ್ತಿರ್ಭವೇನ್ಮಾನಂ ನಾನ್ಯಾ ಸಂದಿಗ್ಧಮೂಲತಃ ॥೬೨॥**

ಎಲ್ಲಿ ಪ್ರತ್ಯಕ್ಷ ಆಗಮ ಹಾಗೂ ಅನುಮಾನಗಳಿಂದ ಗೃಹೀತವಾದ ವ್ಯಾಪ್ತಿಯು ಪ್ರಾಮಾಣ್ಯಕ್ಕೆ ನಿಯಾಮಕವಾಗಿದೆಯೋ ಅದೇ ವ್ಯಾಪ್ತಿಯು ಅನುಮಾನದ ಪ್ರಾಮಾಣ್ಯಕ್ಕೆ ಉಪಯುಕ್ತವಾಗುವುದು. ಪ್ರತ್ಯಕ್ಷಾದಿ ಅಗೃಹೀತವಾದ ವ್ಯಾಪ್ತಿಯು ಸಂದೇಹಕ್ಕೆ ಮೂಲವಾದ ಅವ್ಯಭಿಚಾರತ್ವದ ಕಾರಣ ಅನುಮಾನ ಪ್ರಾಮಾಣ್ಯಕ್ಕೆ ಉಪಯುಕ್ತವಾಗಲಾರದು.

ಹಾಗಾದರೆ ಪ್ರತ್ಯಕ್ಷಾದಿಗಳಿಂದ ಸಿದ್ಧವಾದ ವ್ಯಾಪ್ತಿಯು ಧೂಮಾನುಮಾನದಂತೆ ಪರಮಾಣು ಮುಂತಾದವುಗಳ ಅನುಮಾನಗಳಲ್ಲಿಯೂ ಇದ್ದೇ ಇರುತ್ತದೆ. ಏಕೆಂದರೆ ಧೂಮಕ್ಕೆ ಅಗ್ನಿಯೊಡನೆ ಸಾಹಚರ್ಯವು ಇರುವಂತೆ, ಪರಮಾಣು ಮುಂತಾದವು ಮಹದಾದಿ ಪದಾರ್ಥಗಳೊಂದಿಗೆ ಸಾವಯತ್ವಾದಿಗಳಿಂದ ಸಾಹಚರ್ಯವನ್ನು ಹೊಂದಿರುತ್ತವೆ. ಈ ಆಶಂಕೆಯನ್ನು 'ಸಹದರ್ಶನಮಾತ್ರೇಣ' ಇತ್ಯಾದಿ ವಾಕ್ಯದಿಂದ ಪರಿಹರಿಸುತ್ತಾರೆ –

**ಸಹದರ್ಶನಮಾತ್ರೇಣ ನ ವ್ಯಾಪ್ತಿರವಸೀಯತೇ ।**

**ಯದ್ವೈವಾವ್ಯತಿರೇಕೇಸ್ಯ ಹ್ಯಕ್ಷಜಂ ವಾಽಽಗಮೋ ಭವೇತ್ ॥೬೩॥**

**ತನ್ನಿರ್ಧಾರಿತಯುಕ್ತಿರ್ವಾ ವ್ಯಾಪ್ತಿಃ ಸೈವಾಪರಾ ನ ಹಿ ।**

ಧೂಮಾದಿ ಹೇತುವಿಗೆ ಅಗ್ನ್ಯಾದಿ ಸಾಧ್ಯದಿಂದ ಸಾಮಾನಾಧಿಕರಣ್ಯ ದರ್ಶನ ಮಾತ್ರದಿಂದ ವ್ಯಾಪ್ತಿಯು ನಿಶ್ಚಯಿಸಲ್ಪಡುವುದಿಲ್ಲ. ಸಾಧನವೆಂದು ಹೇಳಲ್ಪಡುವ ಯುಕ್ತಿಯು ಸಾಧ್ಯವನ್ನು ಬಿಟ್ಟು ಇಲ್ಲದಿರುವ ಕಡೆಗಳಲ್ಲಿ, ಪ್ರತ್ಯಕ್ಷವಾಗಲೀ ಆಗಮವಾಗಲೀ, ಅಥವಾ ಪ್ರತ್ಯಕ್ಷ ಆಗಮಗಳಿಂದ ನಿರ್ಣಯಿಸಲ್ಪಟ್ಟ ಯುಕ್ತಿಯಾಗಲೀ ಪ್ರಮಾಣವಾಗಿರುವುದೋ, ಅದೇ ವ್ಯಾಪ್ತಿಯು. ಕೇವಲ ಸಾಮಾನಾಧಿಕರಣ್ಯ ದರ್ಶನ ಮೂಲಕವಾದುದು ವ್ಯಾಪ್ತಿಯೇ ಅಲ್ಲ.

ಹಾಗಾದರೆ ಇದೇ ನ್ಯಾಯದಿಂದಲೇ ಮಹದಾದಿ ಆರಂಭಕತ್ವ ಮುಂತಾದವುಗಳಿಗೂ ವ್ಯಾಪ್ತಿನಿಶ್ಚಯವು ಕೂಡುವುದರಿಂದ, ಪರಮಾಣ್ವಾದಿಗಳ ವಿಷಯದಲ್ಲಿ ಅನುಮಾನದ ಪ್ರವೃತ್ತಿಯು ಆಗುವುದಿಲ್ಲವೆಂದು ಹೇಗೆ ಹೇಳುತ್ತೀರಿ

ಎಂದು ಆಶಂಕಿಸಿದರೆ, ಅದು ಯುಕ್ತವಲ್ಲ. ಏಕೆಂದರೆ ಅಲ್ಲಿ ಪಕ್ಷೇತರತ್ವ ರೂಪ ಉಪಾಧಿಯು ಇರುವುದರಿಂದ ವ್ಯಭಿಚಾರವಿಲ್ಲವೆಂದು ನಿಶ್ಚಯವಾಗುವುದಿಲ್ಲ. ಹಾಗಾದರೆ ಪಕ್ಷದಿಂದ ಬೇರೆಯಾಗಿರುವುದು ಉಪಾಧಿಯೆನಿಸಲಾರದೆಂದು ಹೇಳಿದರೆ, ಅದಕ್ಕೆ ಬಾಧಕವನ್ನು ಹೇಳುತ್ತಾರೆ –

**ಅನ್ಯಥಾ ಸಪ್ತಮರಸಭಾವೋಽಪ್ಯನುಮಯಾಪತೇತ್ ।।೯೪।।**

**ಅನಿಷ್ಟಾನಿ ಚ ಸರ್ವಾಣಿ ಹ್ಯನುಮಾ ಕಾಮಚಾರಿಣೀ ।**

ಹಾಗಲ್ಲದೆ ಬೇರೆ ಪ್ರಮಾಣದ ಸಹಕಾರವಿಲ್ಲದಂಥ ಅನುಮಾನದಿಂದ ಪರಮಾಣ್ವಾದಿ ಸಿದ್ಧಿಯನ್ನು ಒಪ್ಪಿದ ಪಕ್ಷದಲ್ಲಿ, ಅಂಥಹ ಅನುಮಾನದಿಂದ ಲೋಕಾನುಭವಕ್ಕೆ ವಿರುದ್ಧವಾದ 'ಏಳನೆಯ ರಸವಿದೆ' 'ಬೆಂಕಿಯು ತಣ್ಣಗಿದೆ' ಇತ್ಯಾದಿ ಅನಿಷ್ಟಗಳೆಲ್ಲವೂ ಸಂಭವಿಸುತ್ತವೆ. ಏಕೆಂದರೆ ಇಂಥಹ ಅನುಮಾನವು ಕಾಮಚಾರಿಯಾದುದು. ಯಾವುದೇ ವಿಷಯದಲ್ಲಿಯೂ ಇಂಥಹ ಅನುಮಾನವನ್ನು ಮಾಡಬಹುದು. ಹೀಗೆ ಬಾಧಕವಿರುವ ಪ್ರಯುಕ್ತ ಪರಮಾಣ್ವಾದಿಗಳಿಗೆ ಸಾಕ್ಷಿವೇದ್ಯತ್ವವನ್ನು ಅಂಗೀಕರಿಸಬೇಕು. ಸಾಕ್ಷಿವೇದ್ಯವಲ್ಲವಾದ್ದರಿಂದ ಸಪ್ತಮ ರಸ, ಅಗ್ನಿಯ ಶೈತ್ಯ ಮುಂತಾದವು ಅಪ್ರಮಾಣವೆಂದೂ, ಸಾಕ್ಷಿವೇದ್ಯವಾದ್ದರಿಂದ ಪರಮಾಣ್ವಾದಿಗಳು ಪ್ರಮಾಣವೆಂದೂ ಸಿದ್ಧವಾಗುತ್ತದೆ.

**ಸೂತ್ರ: ಓಂ ಸಮವಾಯಾಭ್ಯುಪಗಮಾಚ್ಚ ಸಾಮ್ಯಾದನವಸ್ಥಿತೇಃ ಓಂ**

**ಸೂತ್ರಾರ್ಥ:** ಅವಯವ ಅವಯಯಿಗಳಿಗೆ ಭೇದವನ್ನು ಒಪ್ಪಿ ಸಮವಾಯವನ್ನು ಒಪ್ಪಿದುದರಿಂದ, ಹಾಗೂ ಸಮವಾಯಕ್ಕೂ ಸಮವಾಯಿಗಳಿಂದ ಭಿನ್ನತ್ವ ಸಾಮ್ಯವಿರುವುದರಿಂದ, ಅಲ್ಲಿಯೂ ಸಮವಾಯವನ್ನು ಅಂಗೀಕರಿಸಿದರೆ ಅನವಸ್ಥೆಯು ಬರುವುದು. ಆದಕಾರಣ ಸಮವಾಯವು ಅಸಂಭವವಾದ್ದರಿಂದ, ಪರಮಾಣ್ವಾದಿಗಳಿಗೆ ದ್ರವ್ಯಾದಿ ಕಾರಣತ್ವವು ಕೂಡುವುದಿಲ್ಲ.

ಈ ಸೂತ್ರವನ್ನು 'ಕಾರ್ಯಕಾರಣಯೋಶ್ಚೈವ' ಇತ್ಯಾದಿ ವಚನದಿಂದ ವ್ಯಾಖ್ಯಾನಿಸುತ್ತಾರೆ –

**ಕಾರ್ಯಕಾರಣಯೋಶ್ಚೈವ ಗುಣಾದೇಃ ಪಂಚಕಸ್ಯ ಚ ।।೯೫।।**

**ಭಿನ್ನಸ್ಯೈವ ತು ಸಂಬಂಧಃ ಸಮವಾಯೋಽನ್ಯ ಈರ್ಯತೇ ।**

ವೈಶೇಷಿಕಾದಿಗಳು ಕಾರ್ಯಕಾರಣಗಳಿಗೂ ಗುಣಾದಿ ಪಂಚಕಕ್ಕೂ ಅತ್ಯಂತ ಭೇದವನ್ನು ಒಪ್ಪಿ, ಅವುಗಳಿಗೆ ಅತ್ಯಂತ ಭಿನ್ನವಾದ ಸಮವಾಯ ಸಂಬಂಧವನ್ನು ಹೇಳುತ್ತಾರೆ. ಈ ಕಾರಣದಿಂದಲೂ ವೈಶೇಷಿಕಾದಿಗಳ ಮತವು ಅಯುಕ್ತವು.

ಇಲ್ಲಿ ಕಾರ್ಯ-ಕಾರಣ ಶಬ್ದಗಳು ಅವಯವಿ-ಅವಯವ ವಾಚಕಗಳು. ಇವುಗಳು ಗುಣಗುಣಿಗಳಿಂದ ಇತರವಾದ ಪದಾರ್ಥಗಳ ಸಂಗ್ರಾಹಕಗಳೆಂದು ಮೊದಲನೆಯ 'ಚ' ಶಬ್ದವು ಸೂಚಿಸುತ್ತದೆ. ಗುಣ, ಅವಯವ, ಕ್ರಿಯಾ, ಸಾಮಾನ್ಯ ಮತ್ತು ವಿಶೇಷ ಇವುಗಳೇ ಗುಣಪಂಚಕಗಳು. ಎರಡನೆಯ 'ಚ' ಶಬ್ದದಿಂದ ಗುಣಿ, ಅವಯವಿ, ಕ್ರಿಯಾಶ್ರಯ, ಜಾತ್ಯಾಶ್ರಯ, ವಿಶೇಷಾಶ್ರಯ ಎಂಬ ಗುಣ್ಯಾದಿ ಪಂಚಕವನ್ನು ಸೂಚಿಸುತ್ತಾರೆ.

ಇಲ್ಲಿಯ ಅಭಿಪ್ರಾಯವಿದು. ವೈಶೇಷಿಕರೇ ಮುಂತಾದವರು ಅವಯವ-ಅವಯವಿಗಳಲ್ಲಿ, ಗುಣ-ಗುಣಿಗಳಲ್ಲಿ, ಕ್ರಿಯಾ-ಕ್ರಿಯಾಶ್ರಯಗಳಲ್ಲಿ, ಜಾತಿ-ವ್ಯಕ್ತಿಗಳಲ್ಲಿ, ವಿಶೇಷ ಹಾಗೂ ನಿತ್ಯ ದ್ರವ್ಯಗಳಲ್ಲಿ ಅತ್ಯಂತ ಭೇದವನ್ನು ಒಪ್ಪಿ, ಅತ್ಯಂತ ಭಿನ್ನವಾದ ಸಮವಾಯವೆಂಬ ಸಂಬಂಧವನ್ನು ಅಂಗೀಕರಿಸುತ್ತಾರೆ. ಅದು ಶಕ್ಯವಿಲ್ಲ. ಆದ್ದರಿಂದ ಈ ಮತವು ಅಯುಕ್ತವು.

ಹಾಗಾದರೆ 'ಇಹ ತಂತುಷು ಪಟಃ' (ಈ ತಂತುಗಳಲ್ಲಿ ಪಟವಿದೆ), 'ಇಹ ಪಟೇ ರೂಪಂ' (ಈ ಪಟದಲ್ಲಿ ರೂಪವಿದೆ), 'ಇಹ ಗವಿ ಗೋತ್ವಂ' (ಈ ಗೋವಿನಲ್ಲಿ ಗೋತ್ವವಿದೆ) ಇತ್ಯಾದಿ ಅಬಾಧಿತವಾದ ಅನುಭವವಿದೆ. 'ಇಲ್ಲಿ ಈ ವಸ್ತುವಿದೆ' ಎನ್ನುವ ಅನುಭವವು (ಇಹ ಮತ್ತು ಇದಂ ಎನ್ನುವ ಜ್ಞಾನವು) ಬೇರೆಯಾದ ಒಂದು ಸಂಬಂಧವಿಲ್ಲದೆ ಕೂಡಲಾರದು. ಅಭಿನ್ನವಾದ ವಸ್ತುಗಳಲ್ಲಿ ಸಂಯೋಗ ಸಂಬಂಧವಿರುವುದು. ಇಂಥಹ ಸಂಯೋಗವು ದ್ರವ್ಯಗಳಲ್ಲಿ ಮಾತ್ರ ಇರುತ್ತದೆ. 'ಈ ಕುಂಡದಲ್ಲಿ ಬದರಗಳು ಇವೆ' ಎಂಬ ಅನುಭವವು ಕುಂಡ-ಬದರಗಳ ಸಂಯೋಗಪೂರ್ವಕವಾಗಿಯೇ ಕಂಡುಬರುವುದು. ಆದರೆ ಕುಂಡ-ಬದರಗಳಿಗಿರುವ ಭೇದದ ಕಾರಣ ಈ ಸಂಬಂಧವು ಸಂಯೋಗದಿಂದ ಭಿನ್ನವಾಗಿದ್ದು ಸಮವಾಯವೆನಿಸುತ್ತದೆ. ಈ ಸಮವಾಯವು ಗುಣಾದಿಗಳಲ್ಲಿಯೂ ಇರುತ್ತದೆ. ಆದ್ದರಿಂದ ಹೀಗೆ ಪ್ರಮಾಣಸಿದ್ಧವಾದ ಸಮವಾಯವನ್ನು ಅಂಗೀಕರಿಸುವ ವೈಶೇಷಿಕಾದಿಗಳು ಅಯುಕ್ತಭಾಷಿಗಳು ಎನ್ನುವುದು ಹೇಗೆ ಎಂದು ಆಕ್ಷೇಪಿಸಿದರೆ -

**ಭಿನ್ನತ್ವಸಾಮ್ಯತಸ್ತಸ್ಯ ತಾಭ್ಯಾಂ ಯೋಗೋ ಭವೇದ್ಧ್ರುವಮ್ ॥೯೬॥**

ಭಿನ್ನತ್ವ ಸಾಮ್ಯದಿಂದಲೂ, ಇಹ ಪ್ರತ್ಯಯ ಸಾಮ್ಯದಿಂದಲೂ ಸಮವಾಯಕ್ಕೆ ಅವಯವ-ಅವಯವ್ಯಾದಿಗಳ ಸಂಬಂಧವು ನಿಶ್ಚಯವಾಗಿ ಇರಲೇಬೇಕಾಗುವುದು.

ಇಲ್ಲಿನ ಅಭಿಪ್ರಾಯವು ಹೀಗಿದೆ - 'ಇಹ ತಂತುಷು ಪಟಃ' ಇತ್ಯಾದಿ ಅನುಭವವು, ಭಿನ್ನವಾದ ತಂತು-ಪಟಗಳ ಸಂಬಂಧ ಜ್ಞಾನಪೂರ್ವಕವಾದುದು ಮತ್ತು 'ಇಹ ತಂತು ಪಟಯೋಃ ಸಮವಾಯಃ' ಎಂಬ ಅಬಾಧಿತವಾದ ಇಹ ಪ್ರತ್ಯಯವೂ ಇರುವುದು. ಆದ್ದರಿಂದ ತಂತುಪಟಗಳೊಡನೆ ಇರುವ ಸಂಯೋಗಕ್ಕೂ ಆ ತಂತುಪಟಗಳೆರಡರಿಂದ ಸಮವಾಯ ಸಂಬಂಧವನ್ನು ಅಂಗೀಕರಿಸಬೇಕಾಗುತ್ತದೆ.

ಹಾಗೆ ಅಂಗೀಕರಿಸುವುದಿಲ್ಲ ಎಂದು ಹೇಳುವ ವೈಶೇಷಿಕರ ಮತವು ಅಯುಕ್ತವು.

ಇನ್ನು ಸಮವಾಯದಲ್ಲಿಯೂ ಇಹಂ ಇದಂ ಎಂಬ ಜ್ಞಾನವು ಸಮವಾಯದ ಅಧೀನವೇ ಆಗಿರುತ್ತದೆ. ಅಪಸಿದ್ಧಾಂತವಾಗಲೀ ಅನವಸ್ಥೆಯಾಗಲೀ ಸಂಭವಿಸುವುದಿಲ್ಲ. ಏಕೆಂದರೆ ಸಮವಾಯವು ಸ್ವನಿರ್ವಾಹಕವಾಗಿದೆ. ಹೀಗೆ ಆಶಂಕಿಸಿದರೆ –

**ಸ ಸ್ವನಿರ್ವಾಹಕಶ್ಚೇತ್ಸ್ಯಾದ್ದ್ರವ್ಯಮೇವ ತಥಾ ನ ಕಿಮ್ ।**

ಆ ಅವಯವ–ಅವಯವಿ ಸಮವಾಯವು ಸ್ವನಿರ್ವಾಹಕವೆನ್ನುವುದಾದರೆ, ಆಗ ದ್ರವ್ಯವೇ ಏಕೆ ಸ್ವನಿರ್ವಾಹಕವಾಗಬಾರದು?

ಇಲ್ಲಿನ ಅಭಿಪ್ರಾಯವಿದು. ಸಮವಾಯವು ಸಂಬಂಧರೂಪವಾದುದರಿಂದ ಸ್ವನಿರ್ವಾಹಕವು. ಆದರೆ ದ್ರವ್ಯವು ಸ್ವನಿರ್ವಾಹಕವಲ್ಲ ಎನ್ನುವುದು ಸರಿಯಲ್ಲ. ಏಕೆಂದರೆ ಸಮವಾಯ ಅಥವಾ ಸ್ವನಿರ್ವಾಹಕತ್ವವು ಸಿದ್ಧಿಸದಿದ್ದರೆ ಸಂಯೋಗರೂಪ ಸಂಬಂಧವೂ ಸಿದ್ಧಿಸುವುದಿಲ್ಲ. ಸಂಯೋಗಕ್ಕೂ ಸ್ವನಿರ್ವಾಹಕತ್ವವು ಬರುವುದು. ಸಂಯೋಗವು ಅನಿತ್ಯವಾದುದರಿಂದ ಸ್ವನಿರ್ವಾಹಕವಾಗಲಾರದು ಎಂದು ಹೇಳಕೂಡದು. ಏಕೆಂದರೆ ಸಮವಾಯದ ನಿತ್ಯತೆಯು ಸಿದ್ಧವಾಗಿಲ್ಲ.

ಹೀಗೆ ದ್ರವ್ಯದಿಂದ ಗುಣಾದಿಗಳಿಗೆ ಅತ್ಯಂತ ಭೇದವಿದ್ದರೂ ಅವುಗಳಿಗೆ ಸಂಬಂಧವು ಸಮವಾಯರೂಪವಾದುದು ಅಥವಾ ಬೇರೆ ರೀತಿಯದು ಎನ್ನುವುದು ಸಿದ್ಧಿಸಲಿಲ್ಲ. ಸಮವಾಯದಂತೆ ದ್ರವ್ಯಕ್ಕೇ ಸ್ವನಿರ್ವಾಹತಕತ್ವವು ಸಂಭವಿಸುವುದು ಮತ್ತು ಕಲ್ಪನಾಲಾಘವವೂ ಬರುವುದೆಂದು ಪ್ರತಿಪಾದಿಸಿದರು. ಈಗ ಗುಣಾದಿಗಳಿಗೆ ದ್ರವ್ಯದಿಂದ ಅತ್ಯಂತ ಭೇದವಿಲ್ಲದಿರುವುದರಿಂದ ಸಮವಾಯವು ಸಿದ್ಧಿಸುವುದಿಲ್ಲ ಎನ್ನುವ ಅಭಿಪ್ರಾಯದಿಂದ, ಗುಣದ್ರವ್ಯಗಳ ಭೇದದ ವಿಷಯದಲ್ಲಿ ಪರರು ಹೇಳಿದ ಹೇತುಗಳನ್ನು ನಿರಾಕರಿಸಲು 'ವಿಶೇಷಃ' ಇತ್ಯಾದಿ ವಚನಗಳಿಂದ ಉಪೋದ್ಘಾತವನ್ನು ಹೇಳುತ್ತಾರೆ –

**ವಿಶೇಷಸ್ತದ್ಗತ್ವಾದಿರ್ಯದ್ಯಭಿನ್ನೇಽವಸೀಯತೇ ॥೯೭॥**

**ಗುಣಕ್ರಿಯಾದಿರೂಪಸ್ಯ ನಿಷೇಧಃ ಕೇನ ಹೇತುನಾ ।**

ಒಂದು ವೇಳೆ ಅವಯವ ಅವಯವ್ಯಾದಿಗಳಲ್ಲಿರುವ ವಿಶೇಷವು ಅಭಿನ್ನವಾದ ಸಮವಾಯದಲ್ಲಿ ಅಂಗೀಕರಿಸಲ್ಪಟ್ಟರೆ, ಆಗ ಗುಣಕ್ರಿಯಾದಿರೂಪ ವಿಶೇಷಕ್ಕೆ ನಿಷೇಧವು ಯಾವ ಕಾರಣದಿಂದ(ಯುಕ್ತಿಯಿಂದ) ಆಗುವುದು? ಅಂದರೆ ಯಾವ ಕಾರಣದಿಂದಲೂ ಆಗಲಾರದು ಎಂದು ತಾತ್ಪರ್ಯ.

ಇದರಿಂದ ಏನು ಹೇಳಿದಂತಾಯಿತು ಎಂದು ಕೇಳಿದರೆ, ಅದಕ್ಕೆ

ಪರಿಹಾರವನ್ನು 'ದ್ರವ್ಯಮೇವ' ಇತ್ಯಾದಿ ವಚನದಿಂದ ಹೇಳುತ್ತಾರೆ –

**ದ್ರವ್ಯಮೇವ ತತೋऽನಂತವಿಶೇಷಾತ್ಮತಯಾ ಸದಾ ||೯೮||**

**ನಾನಾವ್ಯವಹೃತೇರ್ಹೇತುರನಂತತ್ವಂ ವಿಶೇಷತಃ |**

ಸಮವಾಯದಂತೆ ಗುಣಾದಿಗಳು ದ್ರವ್ಯದ ವಿಶೇಷವಾದುದರಿಂದ, ದ್ರವ್ಯವೇ ಎಲ್ಲ ಕಾಲದಲ್ಲಿಯೂ ಎಷ್ಟೆಷ್ಟು ವ್ಯವಹಾರಗಳಿರುತ್ತವೋ ಅಷ್ಟಷ್ಟು ವಿಶೇಷಗಳನ್ನು ಹೊಂದಿದ್ದು, ವ್ಯಪದೇಶ ಮುಂತಾದ ನಾನಾ ವ್ಯವಹಾರಗಳಿಗೆ ಕಾರಣವಾಗುತ್ತದೆ.

ಇನ್ನು ಅನಂತವಿಶೇಷಾತ್ಮಕವು ಒಂದೇ ದ್ರವ್ಯವು ಎಂಬುದು 'ನನ್ನ ತಾಯಿಯು ಬಂಜೆ' 'ಕೃತಕವಾದುದು ನಿತ್ಯವು' ಎಂಬಂತೆ ಸ್ವವ್ಯಾಹತವಾಗುವುದು ಎಂದು ಹೇಳಿದರೆ, ಈ ಆಶಂಕೆಯನ್ನು 'ಅನಂತತ್ವಂ ವಿಶೇಷತಃ' ಎಂಬ ವಚನದಿಂದ ಪರಿಹರಿಸುತ್ತಾರೆ. ಅನಂತತ್ವವೆಂದರೆ ಸಂಖ್ಯಾವಿಶೇಷವು, ಏಕತ್ವವೆಂದರೆ ಅಭೇದವು. ಎಲ್ಲಿ ಅನೇಕತ್ವವೋ ಅಲ್ಲಿ ನಿಯಮೇನ ಭೇದವು ಎನ್ನುವ ವ್ಯಾಪ್ತಿ ಇರುವುದಿಲ್ಲ. ಭೇದದ ಪ್ರತಿನಿಧಿಯಾದ ವಿಶೇಷದಿಂದಲೇ ಅನೇಕತ್ವವು ಕೂಡುವುದು. ಈಶ್ವರನೆಂಬ ದ್ರವ್ಯದಲ್ಲಿರುವ ಈಶ್ವರಾಭಿನ್ನ ಜ್ಞಾನಾದಿ ಧರ್ಮಗಳಿಗೆ ಅನಂತತ್ವವು, ಈಶ್ವರನಿಂದ ಭಿನ್ನವಾದ ದ್ರವ್ಯಗಳಲ್ಲಿರುವ ವಿಶೇಷಗಳಿಗೆ ಅನೇಕತ್ವವು ಹೀಗೆ ತಿಳಿಯತಕ್ಕದ್ದು.

ಹಾಗಾದರೆ ಈ ವಿಶೇಷವು ದ್ರವ್ಯದ ಸ್ವರೂಪವೇ ಆದ ಪಕ್ಷದಲ್ಲಿ ದ್ರವ್ಯದ ವಿಶೇಷ ಎನ್ನುವುದು ಹೇಗೆ ಕೂಡುವುದು ಹೀಗೆ ಶಂಕಿಸಬಾರದು. ಏಕೆಂದರೆ ವಿಶೇಷಕ್ಕೂ ದ್ರವ್ಯದ ಸ್ವರೂಪಕ್ಕೂ ಭೇದವಿಲ್ಲದಿದ್ದರೂ ಭೇದದ ಪ್ರತಿನಿಧಿಯಾದ ವಿಶೇಷದಿಂದಲೇ ದ್ರವ್ಯದ ವಿಶೇಷವೆಂಬ ಭೇದದ ವ್ಯವಹಾರವು ಕೂಡುವುದು. ಹಾಗಾದರೆ ಆ ವಿಶೇಷಕ್ಕೆ ಕೂಡ ವಿಶೇಷತ್ವ ಧರ್ಮದ ಸಿದ್ಧಿಗಾಗಿ ಮತ್ತೊಂದು ವಿಶೇಷವನ್ನು ಒಪ್ಪಬೇಕಾಗುತ್ತದೆ. ಇದಕ್ಕೆ ಕೊನೆಯಿಲ್ಲ. ಆದ್ದರಿಂದ ಅನವಸ್ಥೆಯು. ಹೀಗೆ ಆಶಂಕಿಸಿದರೆ, ಅದನ್ನು 'ವಿಶೇಷಶ್ಚ' ಇತ್ಯಾದಿ ವಾಕ್ಯದಿಂದ ಪರಿಹರಿಸುತ್ತಾರೆ –

**ವಿಶೇಷಶ್ಚ ವಿಶೇಷೀ ಸ ಸ್ವೇನೈವ ಸಮವಾಯವತ್ ||೯೯|**

ಸಮವಾಯದಂತೆ ದ್ರವ್ಯದಲ್ಲಿರುವ ಆ ವಿಶೇಷವೂ ತನ್ನಿಂದಲೇ ವಿಶೇಷವುಳ್ಳದ್ದು. ಅದಕ್ಕೆ ವಿಶೇಷಾಂತರದ ಅಪೇಕ್ಷೆಯಿಲ್ಲ.

ಈ ವಿಷಯದಲ್ಲಿ ಪೂರ್ವಪಕ್ಷವು ಹೀಗಿದೆ – ಗುಣಗುಣಿ ಮುಂತದವುಗಳಲ್ಲಿ ಭೇದವನ್ನು ಒಪ್ಪಿರುವ ನಾವು (ವೈಶೇಷಿಕರು) 'ಇಲ್ಲಿ ಇದು' ಎಂಬ ವ್ಯವಹಾರದ ನಿರ್ವಹಣೆಗಾಗಿ ಸಮವಾಯವನ್ನು ಒಪ್ಪಿರುತ್ತೇವೆ. ಆ ಸಮವಾಯದ ಅನವಸ್ಥೆ ಪರಿಹಾರಕ್ಕಾಗಿ ಅದಕ್ಕೆ ಸ್ವನಿರ್ವಾಹಕತ್ವವನ್ನು ಅಂಗೀಕರಿಸುತ್ತೇವೆ. ಆದರೆ ಗುಣ

ಗುಣಿಗಳಿಗೆ ಅಭೇದವನ್ನು ಹೇಳುವ ನೀವು (ಸಿದ್ಧಾಂತಿಗಳು) ಭೇದ ವ್ಯವಹಾರಕ್ಕಾಗಿ ವಿಶೇಷವನ್ನು ಅಂಗೀಕರಿಸಿದ್ದೀರಿ. ಅದಕ್ಕೆ ಅನವಸ್ಥೆಯನ್ನು ತಪ್ಪಿಸಲು ಸ್ವನಿರ್ವಾಹಕತ್ವ ವನ್ನು ನೀವೂ ಸಹ ಅಂಗೀಕರಿಸಿದ್ದೀರಿ. ಇವೆರಡೂ ಪಕ್ಷಗಳೂ ಸಮಾನವೇ ಆಗಿರುವಾಗ, ನೀವು ಅಭೇದದ ಪಕ್ಷದಲ್ಲಿ ಹೇಳುವ ಆ ವಿಶೇಷ ಯಾವುದು? ಗುಣಗುಣ್ಯಾದಿ ಭೇದದ ಬಗ್ಗೆ ಪ್ರಮಾಣವಿಲ್ಲದಿರುವುದೇ ವಿಶೇಷವೆಂಬುದು ಸರಿಯಲ್ಲ. ಏಕೆಂದರೆ ಅಭೇದದ ಬಗ್ಗೆಯೂ ಪ್ರಮಾಣವಿಲ್ಲ. ಹೀಗೆ ಆಶಂಕಿಸಿದರೆ ಅದನ್ನು 'ಕಲ್ಪನಾ' ಇತ್ಯಾದಿ ವಾಕ್ಯದಿಂದ ಪರಿಹರಿಸುತ್ತಾರೆ –

**ಕಲ್ಪನಾಗುರುತಾದೋಷಾತ್ಪದಾರ್ಥಾಂತರತಾ ನ ಹಿ ।**

**ಕಲ್ಪಯಿತ್ವಾ ಷಟ್ಪದಾರ್ಥಾನ್ ಸಾಭಾವಾನಪಿ ಕೇವಲಮ್ ॥೧೦೦॥**

**ಏಕಸ್ಮಿನ್ ಸ ವಿಶೇಷಶ್ಚೇತ್ ಕಿಂ ಪೂರ್ವಂ ತಸ್ಯ ವಿಸ್ಮೃತಿಃ ।**

ಕಲ್ಪನಾಗೌರವ ದೋಷವು ಬರುವುದರಿಂದ, ಗುಣ–ಗುಣಿ ಮುಂತಾದವುಗಳಿಗೆ ಪದಾರ್ಥಾಂತರತ್ವವು ಅಂದರೆ ಭೇದವು ಇರುವುದಿಲ್ಲ. ಹಾಗಾದರೆ ಕಲ್ಪನಾಗೌರವದ ಪರಿಹಾರಕ್ಕಾಗಿ, ಅಭಾವವೂ ಸೇರಿದಂತೆ ಕೇವಲ ಆರು ಪದಾರ್ಥಗಳನ್ನೇ ಕಲ್ಪನೆ ಮಾಡಿ, ಒಂದೇ ಸಮವಾಯದಲ್ಲಿಯೇ ವಿಚಿತ್ರ ವ್ಯವಹಾರ ಕಾರಣವಾದ ವಿಶೇಷವನ್ನು ಅಂಗೀಕರಿಸುತ್ತೇವೆ ಎಂದರೆ, ದ್ರವ್ಯದಲ್ಲಿ ಆ ವಿಶೇಷವನ್ನು ಅಂಗೀಕರಿಸಲು ವಿಸ್ಮರಣವೇಕೆ?

ಇನ್ನು ಗುಣ–ಗುಣಿ ಮುಂತಾದವುಗಳಲ್ಲಿ ಅಭೇದಪಕ್ಷವೂ ಅಂಗೀಕರಿಸತಕ್ಕದ್ದಲ್ಲ ಏಕೆಂದರೆ ವಿಶೇಷದ ವಿಷಯದಲ್ಲಿ ಪ್ರಮಾಣವಿಲ್ಲವೆಂದು ಆಶಂಕಿಸಿದರೆ –

**ಯೇನ ಪ್ರತ್ಯಕ್ಷಸಿದ್ಧೇನ ವ್ಯವಹಾರೋಽಖಿಲೋ ಭವೇತ್ ॥೧೦೧॥**

**ಭಾವಾಭಾವವಿಭಾಗೇನ ಯಂ ವಿನಾ ನ ಕಥಂಚನ ।**

**ಏತಾದೃಶೇ ವಿಶೇಷೇಽಸ್ಮಿನ್ ಕೋ ದ್ವೇಷೋ ವಾದಿನಾಂ ಭವೇತ್ ॥೧೦೨॥**

ಪ್ರತ್ಯಕ್ಷಸಿದ್ಧವಾದ ಯಾವುದರಿಂದ ವಿಧಿನಿಷೇಧವೆಂಬ ಎರಡು ವಿಧದ ಎಲ್ಲ ವ್ಯವಹಾರವೂ ಸಂಭವಿಸುವುದೋ ಹಾಗೂ ಯಾವುದು ಇಲ್ಲದಿದ್ದರೆ ಯಾವುದೇ ವ್ಯವಹಾರವು ಸಂಭವಿಸಲಾರದೋ, ಅಂಥಹ ಸರ್ವವ್ಯವಹಾರ ನಿರ್ವಾಹಕವಾದ ವಿಶೇಷವನ್ನು ವಾದಿಗಳು ಯಾವ ದ್ವೇಷದ ಕಾರಣದಿಂದ ಅಂಗೀಕರಿಸುವುದಿಲ್ಲ?

ಇನ್ನು ಅಭೇದದ ವಿಷಯದಲ್ಲಿಯೂ ಪ್ರಮಾಣವಿಲ್ಲವೆಂದು ಹೇಳುವವರಿಗೆ 'ಅಭೇದೇನ' ಇತ್ಯಾದಿ ವಚನದಿಂದ ಉತ್ತರವನ್ನು ನೀಡುತ್ತಾರೆ –

**ಅಭೇದೇನ ಪ್ರತೀತಿಶ್ಚ ಕಾರ್ಯಕಾರಣಪೂರ್ವಕೇ ।**

**ಅಭಾವಾಂತೇ ಪದಾರ್ಥೇಽಸ್ಮಿನ್ ಸವಿಶೇಷಾವಸೀಯತೇ ॥೧೦೩॥**

ಇಲ್ಲಿ 'ಕಾರ್ಯಕಾರಣ' ಶಬ್ದದಿಂದ ಅವಯವ-ಅವಯವಿಗಳೂ, 'ಪೂರ್ವ' ಶಬ್ದದಿಂದ ಗುಣ-ಗುಣಿಗಳೂ, 'ಅಭಾವ' ಶಬ್ದದಿಂದ ಅನ್ಯೋನ್ಯಾಭಾವವೂ ಗ್ರಹಿಸಲ್ಪಡುತ್ತವೆ. ಈ ವಾಕ್ಯದ ಅಭಿಪ್ರಾಯ ಹೀಗಿದೆ. ಅವಯವ-ಅವಯವಿ, ಗುಣ- ಗುಣಿ ಇತ್ಯಾದಿ ಅನ್ಯೋನ್ಯಾಭಾವವೇ ಅಂತ್ಯವಾಗುಳ್ಳ ಎಲ್ಲ ಪದಾರ್ಥಗಳ ಬಗ್ಗೆ ಅಭೇದ ಜ್ಞಾನವಾದರೂ ವಿಶೇಷದಿಂದ ಕೂಡಿರುವುದೆಂದು ಸಾಕ್ಷಿಯಿಂದ ನಿರ್ಣಯಿಸಲ್ಪಡುತ್ತದೆ.

ಈ ಹಿಂದೆ 'ವಿಶೇಷಃ ತದ್ಗತತ್ವಾದಿಃ ಯದ್ಯಭಿನ್ನೇಽವಸೀಯತೇ' ಎಂಬಲ್ಲಿ ಸಮವಾಯದಲ್ಲಿ ವಿಶೇಷವನ್ನು ಅಂಗೀಕರಿಸಬೇಕೆಂದು ಹೇಳಿದ್ದು ಅಷ್ಟೇ ಅಲ್ಲ, ಎಲ್ಲ ಪದಾರ್ಥಗಳಲ್ಲಿಯೂ ಆ ವಿಶೇಷವನ್ನು ಅಂಗೀಕರಿಸತಕ್ಕದ್ದು ಎಂದು 'ಸಾಮಾನ್ಯಾದಿ ಪದಾರ್ಥೇಷು' ಇತ್ಯಾದಿ ವಚನದಿಂದ ಪ್ರತಿಪಾದಿಸುತ್ತಾರೆ –

**ಸಾಮಾನ್ಯಾದಿಪದಾರ್ಥೇಷು ತನ್ನಿಷ್ಠತ್ವಾದಯೋಽಖಿಲಾಃ ।**

**ಕಥಂ ಧರ್ಮಾ ನಿವಾರ್ಯಂತೇ ವಸ್ತ್ವೈಕ್ಯೇಽಪಿ ಹಿ ವಾದಿಭಿಃ ॥೧೦೪॥**

**ಕಾರ್ಯಸ್ಯ ತತ್ತನ್ನಿಷ್ಠತ್ವಂ ಗುಣಾದೇರ್ವ್ಯಾಪಿತಾದಿಕಃ ।**

**ಕಥಂ ವಿಶೇಷೋ ನೈವಾಸ್ತಿ ಸ ಚ ಧರ್ಮೋಽಪರೋ ಯದಿ ॥೧೦೫॥**

**ಷಟ್ ಪದಾರ್ಥಾತಿರೇಕಃ ಸ್ಯಾತ್ ........................ ।**

ಸಾಮಾನ್ಯ ಅಥವಾ ಜಾತಿ ಮುಂತಾದ ಪದಾರ್ಥಗಳಲ್ಲಿ ಆಯಾಯ ವಸ್ತುಗತತ್ವ ಮುಂತಾದ ಎಲ್ಲ ಧರ್ಮಗಳೂ ವಸ್ತುವಿನಿಂದ (ಧರ್ಮಿಯಿಂದ) ಅಭಿನ್ನವಾಗಿಯೇ ಇರುತ್ತವೆ. ಇದನ್ನು ವಾದಿಗಳು ಹೇಗೆ ತಾನೆ ನಿರಾಕರಿಸಲು ಸಾಧ್ಯ? ಅವಯವಿಗೆ ತನ್ನ ಅವಯವಗತತ್ವವು ಹಾಗೂ ಗುಣಾದಿಗಳಿಗೆ ತಮ್ಮ ಆಶ್ರಯವನ್ನು ವ್ಯಾಪಿಸಿರುವುದು ಇವೇ ಮೊದಲಾದ ವಿಶೇಷವು ಇರುವುದಿಲ್ಲವೆಂಬುದು ಹೇಗೆ ಯುಕ್ತವಾಗುತ್ತದೆ? ಆಯಾಯ ವಸ್ತುನಿಷ್ಠತ್ವ ಮುಂತಾದುದು ತನ್ನ ಆಶ್ರಯದಿಂದ ಭಿನ್ನವೆಂದು ಅಂಗೀಕರಿಸುವುದಾದರೆ, ಆ ಧರ್ಮಗಳಿಗೆ ಆರು ಪದಾರ್ಥಗಳಿಂದ ಅತಿರೇಕವು (ಭೇದವು) ಬರಬೇಕಾಗುತ್ತದೆ. ಆದ್ದರಿಂದ ಆರೇ ಪದಾರ್ಥಗಳು ಎಂಬ ನಿಯಮಕ್ಕೆ ಭಂಗ ಬರುತ್ತದೆ.

ಹಾಗಾದರೆ ಧರ್ಮಗಳು ಧರ್ಮಿಯಿಂದ ಭಿನ್ನಗಳೇ ಆಗಿವೆ. ಹಿಂದೆ ಹೇಳಿದ ಷಟ್ ಪದಾರ್ಥನಿಯಮವೆಂಬ ದೋಷವೂ ಬರುವುದಿಲ್ಲ. ಏಕೆಂದರೆ ನೈಯಾಯಿಕರೇ ಮುಂತಾದವರು ಆರೇ ಪದಾರ್ಥಗಳೆಂಬ ನಿಯಮವನ್ನು ಅಂಗೀಕರಿಸಿಲ್ಲ. ತದ್ಗತತ್ವಾದಿ ಧರ್ಮವನ್ನು ಬೇರೆಯೇ ಪದಾರ್ಥವಾಗಿ ಒಪ್ಪಿರುತ್ತಾರೆ.

ಆದ್ದರಿಂದ ಭಿನ್ನವಾದ ಧರ್ಮದ ಸಂಸರ್ಗದ ಮೂಲಕ 'ತಂತುಷುಃ ಪಟಃ' 'ಶುಕ್ಲಃ ಪಟಃ' ಇತ್ಯಾದಿ ಸಕಲ ವ್ಯವಹಾರವೂ ಸಿದ್ಧಿಸುವುದು. ಆದಪ್ರಯುಕ್ತ ವಿಶೇಷದ ಸಿದ್ಧಿಯು ಆಗಲಾರದು ಎಂದು ಆಕ್ಷೇಪ ಬಂದರೆ ಅದನ್ನು 'ಪದಾರ್ಥಾನಿಯಮೇಪಿ' ಇತ್ಯಾದಿ ವಚನದಿಂದ ಪರಿಹರಿಸುತ್ತಾರೆ –

**...............................ಪದಾರ್ಥಾನಿಯಮೇಽಪಿ ಹಿ ।**

**ಧರ್ಮಸ್ಯ ಧರ್ಮಸಂತಾನಾದನವಸ್ಥಾಖನಿರ್ಭವೇತ್ ।।೧೦೭।।**

ಪದಾರ್ಥಗಳು ಆರೇ ಎಂಬ ನಿಯಮವು ಇಲ್ಲವೆಂಬ ಪಕ್ಷದಲ್ಲಿಯೂ ಧರ್ಮಕ್ಕೆ ಧರ್ಮಸಮುದಾಯದ ದೆಶೆಯಿಂದ ಅನವಸ್ಥೆಯು ಆಶ್ರಯವಾಗುವುದು. ಆದ್ದರಿಂದ ಧರ್ಮ–ಧರ್ಮಗಳಿಗೆ ಆಶ್ರಯದ ಅಭೇದವನ್ನೂ, ವ್ಯವಹಾರ ನಿರ್ವಹಣೆಗಾಗಿ ವಿಶೇಷವನ್ನೂ ಅಂಗೀಕರಿಸಬೇಕು.

ಹಾಗಾದರೆ ದ್ರವ್ಯಾದಿ ಧರ್ಮಗಳಾದ ಅಸ್ತಿತ್ವಾದಿಗಳಲ್ಲಿಯೂ ಅಸ್ತಿತ್ವ ಮುಂತಾದುದು ಉಂಟು. ಅದು ಆಶ್ರಯದಿಂದ ಭಿನ್ನವೇ ಆಗಿರುತ್ತದೆ. ಆದರೂ ಅದು ಅನವಸ್ಥೆಗೆ ಕಾರಣವಾಗುವುದಿಲ್ಲ. ಅದು ಉತ್ಪತ್ತಿ ಜ್ಞಪ್ತಿಗಳಿಗೆ ಪ್ರತಿಬಂಧಕವಾಗುವುದಿಲ್ಲವಾದ್ದರಿಂದ ದೋಷವಾಗುವುದಿಲ್ಲ. ಆಶ್ರಯದಿಂದ ಧರ್ಮವು ಭಿನ್ನವಾದ ಕಾರಣದಿಂದ ವ್ಯವಹಾರವು ಸಂಭವಿಸುವುದರಿಂದ ವಿಶೇಷವನ್ನು ಏಕೆ ಒಪ್ಪಬೇಕು ಎಂದು ಆಕ್ಷೇಪಿಸಿದರೆ –

**ಸಾಮಾನ್ಯಸ್ಯಾಪಿ ಸಾಮಾನ್ಯಂ ಗುಣಸ್ಯಾಪಿ ಗುಣೋ ಹ್ಯತಃ ।**

**ನಾಂಗೀಕೃತಃ ಸ ಚ ಯದಿ ನಾನವಸ್ಥಾ ಕ್ವಚಿದ್ಭವೇತ್ ।।೧೦೭।।**

ಗೋತ್ವಾದಿ ಜಾತಿಗೂ ಸತ್ತಾ ಮುಂತಾದ ಜಾತಿಯನ್ನು ಹಾಗೂ ರೂಪ ಮುಂತಾದ ಗುಣಗಳಿಗೂ ಸಂಖ್ಯಾ ಪೃಥಕ್ತ್ವ ಮುಂತಾದ ಗುಣಗಳನ್ನು ಅನವಸ್ಥೆಯ ಭಯದಿಂದ ಅಂಗೀಕರಿಸಿರುವುದಿಲ್ಲ.

ಇನ್ನು ಜಾತಿಗೂ ಜಾತಿಯಿದೆ, ಗುಣಕ್ಕೂ ಗುಣವಿದೆ. ಅಬಾಧಿತ ಪ್ರತೀತಿಯಿಂದ ಇದು ಸಿದ್ಧವಾದುದರಿಂದ ಉತ್ಪತ್ತಿ ಜ್ಞಪ್ತಿಗಳಿಗೆ ಪ್ರತಿಬಂಧಕವಾಗದು. ಆದಕಾರಣ ಅನವಸ್ಥೆಯು ದೋಷವಾಗದು ಎಂದು ಹೇಳುತ್ತೇವೆ ಎಂದರೆ, ಹಾಗಾದರೆ ಜಾತಿಗೆ ಜಾತಿ, ಗುಣಕ್ಕೆ ಗುಣ ಮುಂತಾದವನ್ನು ಅಂಗೀಕರಿಸಿದರೆ ಎಲ್ಲಿಯೂ ಅನವಸ್ಥೆಯು ಉಂಟಾಗದಿರಲಿ ಎಂಬುದೇ ಉತ್ತರವಾಗುವುದು.

ಇನ್ನು ಧರ್ಮ–ಧರ್ಮಿಗಳೆರಡರಲ್ಲಿ ಅಭೇದವನ್ನೂ ವಿಶೇಷವನ್ನೂ ಒಪ್ಪದವನು ಗುಣ ಹಾಗೂ ಜಾತಿಗಳಿಗೆ ಅವುಗಳನ್ನು ವಿಷಯೀಕರಿಸುವ ಪ್ರತೀತಿಯನ್ನೇ ಅಪಲಾಪ ಮಾಡುವ ಹಾಗೂ ಬಾಧಕವಿಲ್ಲದೆ ಭ್ರಾಂತಿಯನ್ನು

ಒಪ್ಪಬೇಕಾದ ಪ್ರಸಂಗ ಬರುವುದು. ಆದರೆ ಧರ್ಮ-ಧರ್ಮಿಗಳಲ್ಲಿ ಪರಸ್ಪರ ಅಭೇದವನ್ನೂ ವಿಶೇಷವನ್ನೂ ಒಪ್ಪುವವರಿಗೆ ಈ ದೋಷಗಳೆರಡೂ ಬರುವುದಿಲ್ಲ. ಆದ್ದರಿಂದ ನಮಗೆ ಅಭೇದ ಪಕ್ಷದಲ್ಲಿಯೇ ಆದರವಿದೆ ಎಂಬ ಅಭಿಪ್ರಾಯದಿಂದ 'ಅಸ್ಮತ್ಪಕ್ಷೇ' ಇತ್ಯಾದಿ ವಚನವನ್ನು ಹೇಳುತ್ತಾರೆ –

**ಅಸ್ಮತ್ಪಕ್ಷೇ ಗುಣಾದ್ಯಾಶ್ಚ ತದ್ವಂತೋ ಹಿ ವಿಶೇಷತಃ ।**

**ಅನನ್ಯತ್ವಾನ್ನಾನವಸ್ಥಾ ಭೇದೋ ನಾಶೇ ಭವೇತ್ತಥಾ ।।೧೦೮।।**

ಧರ್ಮ-ಧರ್ಮಿಗಳಲ್ಲಿ ಅಭೇದವಿದ್ದರೂ ಭೇದಕಾರ್ಯ ನಿರ್ವಾಹಕವಾದ ವಿಶೇಷವನ್ನು ಒಪ್ಪಿರುವ ನಮ್ಮ ಪಕ್ಷದಲ್ಲಿ ಗುಣದಲ್ಲಿ ಗುಣ ಹಾಗೂ ಜಾತಿಯಲ್ಲಿ ಜಾತಿ ಮುಂತಾದ ವ್ಯವಹಾರವು ಕೂಡುವುದು. ಧರ್ಮ-ಧರ್ಮಿಗಳಿಗೆ ಅಭೇದವಿರುವುದರಿಂದ ಧರ್ಮಪರಂಪರೆಗೆ ಅನವಸ್ಥೆಯೂ ಉಂಟಾಗುವುದಿಲ್ಲ. ಅವಯವಾದಿಗಳು ಇರುವಾಗಲೇ ಅವಯವಿ ಮುಂತಾದವು ನಾಶವಾದ ಪಕ್ಷದಲ್ಲಿ, ಅವಯವ-ಅವಯವಿಗಳಲ್ಲಿ ಭೇದಾಭೇದವು ಸಂಭವಿಸುವುದು. ಅವಯವ-ಅವಯವಿಗಳು ಕೂಡಿಯೇ ನಾಶವಾದರೆ ಆಗ ಭೇದಾಭೇದವು ಸಂಭವಿಸುವುದಿಲ್ಲ.

ಹಾಗಾದರೆ ಭೇದಾಭೇದಗಳು ಒಂದೆಡೆಯಲ್ಲಿ ಇರುವುದು ವಿರುದ್ಧವಾಗುವುದು. ಆದ್ದರಿಂದ ಅಯಾವದ್ ದ್ರವ್ಯಭಾವಿಯಾದ (ದ್ರವ್ಯ ಇರುವಾಗಲೇ ನಾಶವಾಗುವ), ಅವಯವಿ, ಗುಣ, ಕರ್ಮ, ಸಾಮಾನ್ಯಗಳಿಗೆ ಅವಯವ ಮುಂತಾದವುಗಳಿಂದ ಭೇದಾಭೇದವನ್ನು ಒಪ್ಪುವುದು ಹೇಗೆ? ಎಂದು ಆಕ್ಷೇಪಿಸಿದರೆ –

**ವಿಶೇಷಮೇವ ಸಂಶ್ರಿತ್ಯ ವಿಶೇಷೋ ಬಲವಾನ್ ಯತಃ ।**

**ದೃಷ್ಟಿಪ್ರಮಾಣತಶ್ಚೈವ ವಿರೋಧೋ ದರ್ಶನೇ ಕಥಮ್ ।।೧೦೯।।**

**ವಿರೋಧೋ ಹ್ಯವಿರೋಧಶ್ಚ ಯತೋ ದರ್ಶನಮಾನಕೌ ।**

**ತತೋ ದೃಷ್ಟೇ ವಿರೋಧಸ್ತು ಸದ್ಭಿರಾಪಾದ್ಯತೇ ಕಥಮ್ ।।೧೧೦।।**

ವಿಶೇಷವು ಭೇದಕಾರ್ಯನಿರ್ವಹಣೆಯಲ್ಲಿ ಬಲಿಷ್ಠವಾದುದರಿಂದ ವಿಶೇಷವನ್ನೇ ಆಶ್ರಯಿಸಿ ಭೇದ-ಅಭೇದಗಳು ಏಕತ್ರ ಸಂಭವಿಸುತ್ತವೆ. ಪ್ರಮಾಣ ಭೂತವಾದ ದೃಷ್ಟಿಗೆ, ಅಂದರೆ ವಿಶೇಷಸಹಿತವಾದ ಪ್ರತ್ಯಕ್ಷಕ್ಕೆ ಭೇದಾಭೇದಗಳು ವಿರುದ್ಧವಲ್ಲ. ಹಾಗಿರುವಾಗ ಭೇದಾಭೇದಗಳು ಏಕತ್ರ ಹಾಗೂ ಏಕಕಾಲದಲ್ಲಿ ತೋರುವುದರಲ್ಲಿ ವಿರೋಧವೆಲ್ಲಿದೆ? ವಿರೋಧ-ಅವಿರೋಧಗಳೆರಡಕ್ಕೂ ಪ್ರತ್ಯಕ್ಷವೇ ಪ್ರಮಾಣವು. ಆದ್ದರಿಂದ ಪ್ರತ್ಯಕ್ಷ ಪ್ರಮಾಣದಿಂದ ತೋರುವ ಭೇದಾಭೇದಗಳ ವಿಷಯದಲ್ಲಿ ಯಾವ ಸಜ್ಜನರು ತಾನೇ ವಿರೋಧವನ್ನು ವ್ಯಕ್ತ ಪಡಿಸಲು ಸಾಧ್ಯ?

ಹಾಗಾದರೆ ಆ ಭೇದಾಭೇದವು ಎಲ್ಲ ದ್ರವ್ಯಗಳಲ್ಲಿಯೂ ಇದೆಯೋ ಅಥವಾ ಕೆಲವೇ ದ್ರವ್ಯಗಳಲ್ಲಿಯೋ? ಎಂಬ ಪ್ರಶ್ನೆ ಬಂದರೆ ಅದನ್ನು 'ಅಭಿನ್ನಃ' ಇತ್ಯಾದಿ ವಚನದಿಂದ ಪರಿಹರಿಸುತ್ತಾರೆ.

**ಅಭಿನ್ನೋ ಭಗವಾನ್ಸ್ವೇನ ತದನ್ಯೇನ ವಿಭೇದವಾನ್ ।**

**ನಿತ್ಯಾ ಧರ್ಮಾಸ್ತದೀಯಾಸ್ತು ಸರ್ವೇಽಸ್ಮಾನ್ನೈವ ಭೇದಿನಃ ॥೧೧೧॥**

**ಸಾಮಸ್ತ್ಯೋಚ್ಛೇದಿನೋಽನ್ಯತ್ರ ಧರ್ಮಾ ಉಭಯರೂಪಿಣಃ ।**

**ಭಾವೇ ತ ಏವ ಚೋಚ್ಛೇದಾತ್ತದನ್ಯೇ ಚ ಸಮಸ್ತಶಃ ॥೧೧೨॥**

ಭಗವಾನ್ ಶ್ರೀಹರಿಯು ತನ್ನ ಅವಯವ ಗುಣ ಕ್ರಿಯಾದಿಗಳಿಂದ ಅಭಿನ್ನನು. ತನ್ನಿಂದ ಭಿನ್ನವಾದ ಪ್ರಕೃತಿ ಜೀವ ಜಡಾತ್ಮಕ ಪ್ರಪಂಚದಿಂದ ಭೇದವುಳ್ಳವನು. ಇಲ್ಲಿ ಭಗವಾನ್ ಎಂಬ ಶಬ್ದದಿಂದ ಉಪಲಕ್ಷಣದಿಂದ ಚೇತನರನ್ನೂ ತೆಗೆದುಕೊಳ್ಳಬೇಕು. ಇನ್ನು ಶ್ರೀಹರಿಯಲ್ಲಿನ ಧರ್ಮಗಳೆಲ್ಲವೂ ನಿತ್ಯವಾದವುಗಳೇ ಅಂದರೆ ಯಾವದ್ ದ್ರವ್ಯಭಾವಿಗಳಾಗಿವೆ. ಶ್ರೀಹರಿಯಿಂದ ಹಾಗೂ ಚೇತನರಿಂದ ಭಿನ್ನವಾದ ಜಡವಸ್ತುಗಳಲ್ಲಿ ಅಯಾವದ್ ದ್ರವ್ಯಭಾವಿ ಧರ್ಮಗಳಿರುತ್ತವೆ.

ಧರ್ಮಿಯು ಇರುವಾಗಲೇ ಸಮಗ್ರವಾಗಿ ಸಮೂಲವಾಗಿ ಯಾವ ಧರ್ಮಗಳು ನಾಶವನ್ನು ಹೊಂದುತ್ತವೋ ಅವು ಉಭಯರೂಪಾತ್ಮಕ ಅಂದರೆ ಭೇದಾ-ಭೇದಾತ್ಮಕಗಳು ಎನಿಸುತ್ತವೆ. ಹಾಗಾದರೆ ಅವು ಕಾಲಭೇದದಿಂದ ಭೇದಾ-ಭೇದವೆನಿಸುತ್ತವೆ ಎಂದು ಭಾವಿಸಬಾರದು. ಅವು ಧರ್ಮಿಯೊಂದಿಗೆ ಇರುವಾಗಲೇ ಭೇದಾಭೇದಗಳಾಗಿರುತ್ತವೆ. ಏಕೆಂದರೆ ವಿನಾಶ ಹೊಂದಿದುದು ಅಸತ್ಯವಾದುದರಿಂದ ಭೇದ ಚಿಂತನೆಗೆ ಅವಕಾಶವಿಲ್ಲ. ವಿನಾಶದ ಪೂರ್ವದಲ್ಲಿ ಅತ್ಯಂತ ಅಭೇದವೆಂದರೆ, ವಿನಾಶವೇ ಸಂಭವಿಸದು. ಆದ್ದರಿಂದ ಎಲ್ಲ ಅಯಾವದ್ ದ್ರವ್ಯಭಾವಿ ಧರ್ಮಗಳೂ ಧರ್ಮಿಯಿಂದ ಭಿನ್ನವೂ ಅಭಿನ್ನವೂ ಆಗಿರುತ್ತವೆ. ಇದಕ್ಕೆ ಪ್ರತ್ಯಕ್ಷವೇ ಪ್ರಮಾಣ.

ಹಾಗಾದರೆ ಹಿಂದೆ 'ಸರ್ವದಿಕ್ಷ್ವಪಿ ಸಂಯೋಗಾತ್' ಎಂಬುದಾಗಿ ಅಂಶಗಳಿಂದ ಸಂಯೋಗವೆಂದು ಹೇಳಿದುದು ಅಯುಕ್ತವಾದುದು. ಏಕೆಂದರೆ ಅನವಸ್ಥೆಯು ಬರುತ್ತದೆ. ಹೇಗೆಂದರೆ ಘಟದ ಸಂಯೋಗವು ಘಟದ ಅಂಶದೊಡನೆ ಸಂಯೋಗವಾದಾಗಲೇ ಆಗುವುದು. ಆ ಘಟಾಂಶದ ಸಂಯೋಗವೂ ಮತ್ತೊಂದು ಘಟಾಂಶದ ಸಂಯೋಗದಿಂದ ಆಗುವುದು. ಈ ಅಂಶದ ಪರಂಪರೆಗೆ ವಿಶ್ರಾಂತಿಯಿಲ್ಲವೆಂದು ಅಂಗೀಕರಿಸಲಾಗಿದೆ. ಆದ್ದರಿಂದ ಅನವಸ್ಥೆಯು. ಹೀಗೆ ಪೂರ್ವಪಕ್ಷ ಬಂದರೆ ಅದನ್ನು 'ಅಂಶಾಂಶಿನೋಃ' ಎಂಬ ವಚನದಿಂದ ಪರಿಹರಿಸುತ್ತಾರೆ –

**ಅಂಶಾಂಶಿನೋರಭೇದೇನ ತ್ವಂಶಸಂಯೋಗ ಏವ ಹಿ ।**

**ಅಂಶಿನೋ ನಾನವಸ್ಥಾಽತೋ ಯದ್ಯಪ್ಯಂಶೇಷ್ವವಿಶ್ರಮಃ ।।೧೧೩।।**

ಅಂಶದಿಂದಲೇ ಸಂಯೋಗ ಹಾಗೂ ಅಂಶಗಳಲ್ಲಿ ಅಂಶಪರಂಪರೆಗೆ ವಿಶ್ರಾಂತಿಯೂ ಇಲ್ಲ ಎಂಬುದೇನೋ ನಿಜವೇ. ಆದರೂ ಅಂಶ–ಅಂಶಿಗಳಿಗೆ ಅಭೇದವಿರುವುದರಿಂದ, ಅಂಶಸಂಯೋಗವೇ ಅಂಶಿಸಂಯೋಗವೆನಿಸುವುದು. ಆದಕಾರಣ ಅನವಸ್ಥೆಯಿಲ್ಲ.

ಇದನ್ನೇ 'ಏಕಸ್ಮಿನ್' ಇತ್ಯಾದಿ ವಾಕ್ಯದಿಂದ ವಿವರಿಸುತ್ತಾರೆ –

**ಏಕಸ್ಮಿನ್ ಜಾತ ಏವಾನ್ಯಃ ಸಂಯೋಗೋ ಜಾಯತೇ ಯದಿ ।**

**ಅನವಸ್ಥಾ ತದೈವ ಸ್ಯಾತ್ಸಂಯೋಗೈಕ್ಯೇ ಭವೇತ್ಕ್ವ ಸಾ ।।೧೧೪।।**

ಒಂದೊಂದು ಅವಯವ ಸಂಯೋಗವು ಉಂಟಾದಮೇಲೆಯೇ ಇನ್ನೊಂದು ಅವಯವ ಸಂಯೋಗವು ಉಂಟಾಗುವುದೆಂದು ಅಂಗೀಕರಿಸಿದಾಗ ಮಾತ್ರ ಅನವಸ್ಥೆಯು ಬಂದೀತು. ಆದರೆ ಅವಯವದಲ್ಲಿನ ಸಂಯೋಗಕ್ಕಿಂತ ಬೇರೆಯಾದ ಅವಯವಿ ಸಂಯೋಗವು ಇಲ್ಲವೆಂಬ ಪಕ್ಷದಲ್ಲಿ ಆ ಅನವಸ್ಥೆಯು ಎಲ್ಲಿಂದ ಆದೀತು?

ಹೀಗೆ ಛಲದ ರೂಪದಿಂದ ಅನವಸ್ಥಾ ಪ್ರಸಂಗವನ್ನು ನಿರಾಕರಿಸಿ, ಈಗ ಬೇರೆ ಪ್ರಕಾರದಿಂದಲೂ ಧರ್ಮ–ಧರ್ಮಿಗಳ ಅಭೇದದಲ್ಲಿ ಬರುವ ಅನವಸ್ಥೆಯನ್ನು 'ಅಂಶೇ' ಇತ್ಯಾದಿ ವಚನದಿಂದ ನಿರಾಕರಿಸುತ್ತಾರೆ. (ಒಂದು ಅರ್ಥದಿಂದ ಪ್ರಯೋಗಿಸಲ್ಪಟ್ಟ ವಾಕ್ಯಕ್ಕೆ ತಮಗೆ ಸಮ್ಮತವಲ್ಲದ ಅರ್ಥವನ್ನು ಆರೋಪಿಸಿ, ಅದನ್ನು ನಿಷೇಧಿಸುವುದು ಛಲದ ಲಕ್ಷಣ.)

**ಅಂಶೇ ಸಂಯೋಗದೃಷ್ಟೇಶ್ಚ ದೃಷ್ಟೇ ಕಾ ಸಾಽನವಸ್ಥಿತಿಃ ।**

**ಯದ್ಯಂಶಗೋ ನ ಸಂಯೋಗಃ ಕಾರ್ಯೇಷು ಪ್ರಥಿಮಾ ಕಥಮ್ ।।೧೧೫।।**

ಅಂಶಿ ಸಂಯೋಗವು ಅಂಶವೃತ್ತಿ ಎಂಬುದಾಗಿ ಕಂಡಿರುವುದರಿಂದ, ಅನವಸ್ಥಾ ದೋಷವಿಲ್ಲ. ಆಪಾದಕವಾದ ಅರ್ಥವು ದೃಷ್ಟವಾಗಿರುವಾಗ ಅನವಸ್ಥೆಯು ಯಾವುದು? ಅದು ದೂಷಣವಾಗುವುದಿಲ್ಲ ಎಂದು ಭಾವ. ಕಾರಣಗಳ ಸಂಯೋಗವು ಅವುಗಳ ಅಂಶದಲ್ಲಿ ಇಲ್ಲವಾದರೆ, ಆಗ ಅವುಗಳಿಂದ ಉತ್ಪನ್ನವಾದ ಕಾರ್ಯಗಳಲ್ಲಿ ಪರಿಮಾಣದ ಉತ್ಕರ್ಷವು ಆಗಲಾರದು.

ಹಾಗಾದರೆ ಬೇರೆ ಕಡೆಯಲ್ಲಿ ಸಂಯೋಗವು ಹೇಗಾದರೂ ಆಗಿರಲಿ, ಪ್ರಸಕ್ತವಾದ ಪರಮಾಣುವಿನಲ್ಲಿ ಸಂಯೋಗವು ಅಂಶವೃತ್ತಿಯಾಗದಿದ್ದರೆ

ಅತಿಪ್ರಸಂಗವಿಲ್ಲ. ಆದ್ದರಿಂದ ಪರಮಾಣುವಿನ ಕಾರ್ಯವಾದ ದ್ವ್ಯಣುಕದಲ್ಲಿ ಪರಮಾಣುವಿಗಿಂತ ಹೆಚ್ಚಿನ ಪರಿಮಾಣವು ಇರುವದಿಲ್ಲ ಎಂದು ಆಕ್ಷೇಪಿಸಿದರೆ –

**ಪರಮಾಣೋರಣೋರ್ನಾಸ್ತಿ ಮಹತ್ತ್ವೇತ್ಯದ್ಭುತಂ ವಚಃ ।**

**ಅಣೂನಾಂ ಪ್ರಥಿಮಾಪೇಕ್ಷಾಂ ವಿನೈವ ತ್ರ್ಯಣುಕೇಽಪಿ ಸಃ ॥೧೧೬॥**

**ಪರಮಾಣೋರ್ಮಹತ್ವಂ ಚ ವಿನೇತ್ಯೇತದ್ವಚಃ ಕಥಮ್ ।**

**ಅಂಶಿನೋಂಽಶೈರಭೇದೋಽಯಮಂಶೇನ ತು ಭಿದಾಭಿದಾ ॥೧೧೭॥**

ದ್ವ್ಯಣುಕದಲ್ಲಿ ಪರಮಾಣುವಿಗಿಂತ ಹೆಚ್ಚಿನ ಪರಿಮಾಣದ ಉತ್ಕರ್ಷವಿಲ್ಲವೆಂದು ಹೇಳುವುದು ಅದ್ಭುತವಾದುದು. ಅಂದರೆ ಸ್ವವಚನವಿರುದ್ಧ ಹಾಗೂ ಪ್ರಮಾಣ ವಿರುದ್ಧ ಎಂದರ್ಥ. ಇನ್ನು ದ್ವ್ಯಣುಕಗಳ ಪರಿಮಾಣೋತ್ಕರ್ಷದ ಅಪೇಕ್ಷೆಯಿಲ್ಲದೆ ತ್ರ್ಯಣುಕಾದಿಗಳಲ್ಲಿಯೂ, ಪರಮಾಣುವಿನ ಪರಿಮಾಣೋತ್ಕರ್ಷದ ಅಪೇಕ್ಷೆಯಿಲ್ಲದೆ ದ್ವ್ಯಣುಕಾದಿಗಳಲ್ಲಿಯೂ ಪರಮಾಣೋತ್ಕರ್ಷವು ಉಂಟಾಗುತ್ತದೆ ಎನ್ನುವುದು ಹೇಗೆ ಯುಕ್ತವಾಗುತ್ತದೆ?

ಪಟಾದಿ ಅಂಶಿಗಳಿಗೆ ತನ್ನ ಎಲ್ಲ ಅಂಶಗಳಿಂದ ಅತ್ಯಂತ ಅಭೇದವು ಹಾಗೂ ಒಂದೊಂದು ಅಂಶದಿಂದಾದರೂ ಭೇದಾಭೇದವು ಎಂದು ತಿಳಿಯಬೇಕು. ಇಲ್ಲಿನ ಅಭಿಪ್ರಾಯ ಹೀಗಿದೆ – ತಂತುಗಳಿಂದ ಪಟವು ನಿರ್ಮಾಣವಾದಾಗ, ತಂತುಗಳ ಪರಸ್ಪರ ಸಂಬಂಧವಿಶೇಷದಿಂದ, ತಂತುಗಳಿಂದ ಅಭಿನ್ನವಾದ ಪಟವು ಕಂಡು ಬರುತ್ತದೆ. ಇಂಥಹ ತಂತುಗಳಿರಲು ಪಟದ ಅಭಾವ ಎಂದಿಗೂ ಉಂಟಾಗುವುದಿಲ್ಲ. ಆದ್ದರಿಂದ ಇಂಥಹ ಎಲ್ಲ ತಂತುಗಳಿಗೂ ಪಟಕ್ಕೂ ಅತ್ಯಂತಾಭೇದವೇ. ಈ ರೀತಿಯ ಸಂಬಂಧವಿವಕ್ಷೆಯು ಇಲ್ಲದಿದ್ದಾಗ, ತಂತುಗಳಿಗೂ ಪಟಕ್ಕೂ ಭೇದಾಭೇದವೇ. ತಂತುಗಳಿಗೂ ಪಟಕ್ಕೂ ಭೇದ ಹಾಗೂ ಅಭೇದಗಳೆರಡೂ ಹೇಗೆ ಕೂಡುತ್ತವೆ ಎಂದು ಕೇಳಿದರೆ ವಿಶೇಷ ಎಂಬ ವಸ್ತುವಿನ ಶಕ್ತಿಯಿಂದಲೇ ಎಂದು ಹೇಳುತ್ತೇವೆ.

ಹಾಗಾದರೆ ಸಂಬಂಧವಿಶೇಷವುಳ್ಳ ಎಲ್ಲ ತಂತುಗಳಿಂದಲೂ ಪಟಕ್ಕೆ ಭೇದವನ್ನೇ ಅಂಗೀಕರಿಸಬೇಕು. ಏಕೆಂದರೆ ತಂತುಗಳ ಸಂಬಂಧವಿಶೇಷವು ಉಂಟಾದ ಮೇಲೆ ಪಟವು ಹುಟ್ಟುತ್ತದೆ. ಇನ್ನು ಒಂದೊಂದು ತಂತುವಿನಲ್ಲಿಯೂ ಅದು ಪಟವೆಂಬ ಬುದ್ಧಿಯು ಬಂದಿಲ್ಲವಾದ್ದರಿಂದ, ಒಂದೊಂದು ತಂತುವಿಗೂ ಪಟದಿಂದ ಅಭೇದವನ್ನು ಹೇಳುವುದು ಕೂಡುವುದಿಲ್ಲ ಎಂದು ಆಶಂಕಿಸಿದರೆ –

**ಸರ್ವಪ್ರತ್ಯಕ್ಷವಿಷಯಃ ಕಥಮೇವ ಹ್ಯಪೋದ್ಯತೇ ।**

ಇವೆಲ್ಲ ವಿಷಯವು ಎಲ್ಲರ ಪ್ರತ್ಯಕ್ಷಕ್ಕೆ ಗೋಚರವಾದುದರಿಂದ ಹೇಗೆ ತಾನೆ

ಅದನ್ನು ಅಲ್ಲಗಳೆಯುವುದು?

**ವಿವರಣೆ:** ಸಂಬಂಧವಿಶೇಷವುಳ್ಳ ಎಲ್ಲ ತಂತುಗಳಿಗೂ ಪಟಕ್ಕೂ ಅಭೇದವಿದೆ ಎಂಬುದಕ್ಕೆ ಪ್ರತ್ಯಕ್ಷವೇ ಪ್ರಮಾಣ. ತಂತುಗಳಿಗೆ ಸಂಬಂಧವಿಶೇಷವಾದ ಮೇಲೆ ಪಟವು ಹುಟ್ಟುವುದೆಂಬುದು ನಿಜವಾದರೂ, ಅಭೇದರೂಪ ಅರ್ಥದಲ್ಲಿ ಹಾನಿಯಿಲ್ಲ. ಏಕೆಂದರೆ ತಂತುಗಳ ಸಂಬಂಧ ವಿಶೇಷವನ್ನು ಪಟವೆನ್ನುವುದಿಲ್ಲ. ಆದರೆ ಸಂಬಂಧವಿಶೇಷವಾದ ನಂತರ ತಂತುಗಳಿಗೆ ಯಾವ ವಿಶಿಷ್ಟವಾದ ಆಕಾರ ಬರುವುದೋ ಅದೇ ಪಟವು. ಒಂದೊಂದು ತಂತುವನ್ನು ಬಿಟ್ಟರೆ ಸರ್ವ ತಂತುಗಳು ಎಂಬುವುದು ಇರುವುದಿಲ್ಲ. ಆದ್ದರಿಂದ ಅಲ್ಲಿಯೂ ಅಭೇದ ಪ್ರತೀತಿಯು ಇದ್ದೇ ಇರುವುದು. ಒಂದೊಂದು ತಂತುವಿನಲ್ಲಿಯೂ ಪಟವೆಂಬ ಭಾವನೆಯಿಲ್ಲದಿರುವುದು ಭೇದವನ್ನು ಆಕ್ಷೇಪದಿಂದ ಹೇಳುತ್ತದೆ. ಆದರೆ ಪ್ರತ್ಯಕ್ಷ ಸಿದ್ಧವಾದ ಅಭೇದವನ್ನು ಅಲ್ಲಗಳೆಯವುದಿಲ್ಲ.

ಹಾಗಾದರೆ ಅವಯವ್ಯಾದಿಗಳಿಗೆ ಅವಯವಾದಿಗಳಿಂದ ಅಭೇದವು ಯುಕ್ತವಲ್ಲ. ಏಕೆಂದರೆ ಅವಯವಿ ಒಂದೇ ಇದ್ದರೂ ಅವಯವಗಳು ಅನೇಕವಿರುತ್ತವೆ. ಒಂದೊಂದು ಅವಯವಕ್ಕೂ ಅವಯವಿಯಿಂದ ಅಭೇದವಿದ್ದರೆ, ಅವಯವಗಳಿಗೂ ಪರಸ್ಪರ ಅಭೇದ ಅಥವಾ ಅವಯವಿಗೆ ಭೇದವು ಬರಬೇಕಾಗುತ್ತದೆ. ಮನುಷ್ಯರು ಅನೇಕರಿದ್ದರೂ ಮನುಷ್ಯತ್ವವು ಒಂದೇ. ಎಲ್ಲ ಮನುಷ್ಯರಿಗೂ ಮನುಷ್ಯತ್ವಕ್ಕೂ ಅಭೇದವಿರುವುದರಿಂದ ಎಲ್ಲ ಮನುಷ್ಯರಿಗೂ ಪರಸ್ಪರ ಅಭೇದವು ಬರಬೇಕಾಗುವುದು. ಆದಪ್ರಯುಕ್ತ ಅವಯವಿ–ಅವಯವಾದಿಗಳಿಗೆ ಅಭೇದವು ಯುಕ್ತವಲ್ಲ. ಹೀಗೆ ಆಕ್ಷೇಪಿಸಿದರೆ –

**ಸಂಯೋಗಶ್ಚ ವಿಭಾಗಶ್ಚ ಭೇದಶ್ಚೈವ ಪೃಥಕ್ ಪೃಥಕ್ ॥೧೧೮॥**

**ಅನ್ಯೋನ್ಯಪ್ರತಿಯೋಗೇನ ಹ್ಯುಭಯೋರಪಿ ದೃಶ್ಯತೇ ।**

ಸಂಯೋಗವೂ, ವಿಭಾಗವೂ ಹಾಗೂ ಪೃಥಕ್ತ್ವವೂ ಬೇರೆ ಬೇರೆಯಾದವುಗಳೇ. ಅಂದರೆ ಏಕೈಕ ದ್ರವ್ಯಾಶ್ರಿತಗಳೇ ಆಗಿವೆ. ಆದ್ದರಿಂದ ಒಂದೇ ಗುಣವು ಅಭಿನ್ನವಾಗಿ ಎರಡು ದ್ರವ್ಯಗಳಲ್ಲಿ ಸಂಯೊಗಗೊಂಡಿದ್ದರೆ, ಅವೆರಡು ದ್ರವ್ಯಗಳಲ್ಲಿ ಅಭೇದವೆಂಬ ಅತಿಪ್ರಸಂಗವು ಬರುವುದಿಲ್ಲ. ಸಂಯೋಗ ಮುಂತಾದವು ಪರಸ್ಪರ ಪ್ರತಿಯೋಗಿತ್ವ ನಿಮಿತ್ತದಿಂದಲೇ ಎರಡು ದ್ರವ್ಯಗಳ ಸಂಬಂಧಿಯಾಗಿ ತೋರುತ್ತದೆ. ಘಟಪ್ರತಿಯೋಗಿ ಸಂಯೋಗಾದಿಗಳು ಪಟದಲ್ಲಿವೆ. ಹಾಗೂ ಪಟಪ್ರತಿಯೋಗಿವುಳ್ಳ ಸಂಯೋಗಾದಿಗಳು ಪಟದಲ್ಲಿ ಇವೆ. ಆದ್ದರಿಂದ ಎರಡು ದ್ರವ್ಯಗಳ ಸಂಬಂಧಿಯಾಗಿ ತೋರುವಿಕೆಯೂ, ಅತಿಪ್ರಸಂಗದ ಅಭಾವವೂ ಯುಕ್ತವೇ ಆಗುವುದು.

ಹಾಗಾದರೆ ಸಂಯೋಗ ವಿಭಾಗಗಳಿಗೆ ಈ ಪರಿಸ್ಥಿತಿಯು ಇರಲಿ. ಪೃಥಕ್ತ್ವದಲ್ಲಿ

ಇದು ಅನ್ವಯಿಸುವುದಿಲ್ಲ ಎಂದು ಆಕ್ಷೇಪಿಸಿದರೆ –

**ಭಿನ್ನಾ ಇತಿ ತು ಭೇದಾನಾಂ ಸಮುದಾಯೋ ಹಿ ದೃಶ್ಯತೇ ।।೧೧೯।।**

**ಯಥೈವ ಚ ಪದಾರ್ಥಾನಾಮನಯೋರ್ಭೇದ ಇತ್ಯಪಿ ।**

**ಇತೋಽಮುಷ್ಯಾಮುತೋಽಮುಷ್ಯ ಭೇದೋದೃಷ್ಟೋ ದ್ವಿಧರ್ಮಿಕಃ ।।೧೨೦।।**

**ತತ್ರೈಕವಚನಂ ಯತ್ತದ್ವಿಪ್ರಾಣಾಂ ಭೋಜನಂ ಯಥಾ ।**

ಇವು ಭಿನ್ನಗಳು ಮುಂತಾದ ಪ್ರತೀತಿಗಳಲ್ಲಾದರೂ ಭೇದಗಳ ಸಮುದಾಯವು ಅಂದರೆ ಅನೇಕತ್ವವು ತೋರುತ್ತದೆ. ಹೇಗೆಂದರೆ 'ಯಥೈವ ಚ ಪದಾರ್ಥಾನಾಂ' ಇತ್ಯಾದಿ ವಚನದಿಂದ ಸ್ಪಷ್ಟಪಡಿಸುತ್ತಾರೆ – ಅನೇಕ ಪದಾರ್ಥಗಳಿಗೆ ಹೇಗೋ ಹಾಗೆ 'ಇವೆರಡು ಪದಾರ್ಥಗಳಿಗೆ ಭೇದವು' ಎನ್ನುವ ಪ್ರತೀತಿಯಲ್ಲಿಯೂ 'ಇದರಿಂದ ಅದಕ್ಕೆ, ಅದರಿಂದ ಇದಕ್ಕೆ ಭೇದವು' ಹೀಗೆ ಭೇದವು ಎರಡು ಧರ್ಮಿಯುಳ್ಳದ್ದಾಗಿ ತೋರುವುದು.

'ಅನಯೋಃ ಭೇದಃ' ಎಂಬಲ್ಲಿರುವ ಏಕವಚನವು 'ವಿಪ್ರಾಣಾಂ ಭೋಜನಂ' ಎಂಬಲ್ಲಿ ಹೇಗೋ ಹಾಗೆ, ಏಕಾರ್ಥ ವಿಷಯಕ ಅಥವಾ ಸಮುದಾಯ ವಿಷಯಕ ಎಂಬರ್ಥದಲ್ಲಿ ಕೂಡುವುದು.

ಈಗ ಸಾಮಾನ್ಯ ಅಥವಾ ಜಾತಿಯು ಒಂದೊಂದನ್ನೇ ಆಶ್ರಯಿಸಿಕೊಂಡಿದೆ, ಎಲ್ಲ ಪದಾರ್ಥಗಳಲ್ಲಿಯೂ ಅನುಗತವಲ್ಲ ಎಂಬ ಸಂಗತಿಯನ್ನು 'ನರತ್ವಾದಿಕಂ' ಇತ್ಯಾದಿ ವಚನದಿಂದ ಹೇಳುತ್ತಾರೆ –

**ನರತ್ವಾದಿಕಮಪ್ಯೇವಂ ತತ್ತದ್ಧರ್ಮತಯೇಯತೇ ।।೧೨೧।।**

**ನ ಸರ್ವಧರ್ಮ ಏಕೋಽಸ್ತಿ ಸಮುದಾಯಸ್ತು ಭಿನ್ನಗಃ ।**

ನರತ್ವ ಮುಂತಾದುದೂ ಸಂಯೋಗಾದಿಗಳ ಹಾಗೆ ಏಕೈಕವೃತ್ತಿಯು ಅಂದರೆ ಒಂದೊಂದರಲ್ಲಿಯೇ ಇರುವಂಥಹದು. ಏಕೆಂದರೆ ಅದು ಆಯಾಯ ವಸ್ತುವಿನ ನಿಯತಧರ್ಮವಾಗಿಯೇ ಕಂಡಿರುತ್ತದ. ಅಂದರೆ, ಬೇರೆ ಬೇರೆ ಮನುಷ್ಯರನ್ನು ನೋಡಿದಾಗ ಅವರ ರೂಪ ಮಂತಾದುದು ಬೇರೆ ಬೇರೆಯಾಗಿಯೇ ಹೇಗೆ ಕಾಣುತ್ತದೋ, ಹಾಗೆಯೇ ನರತ್ವ ಮುಂತಾದುದೂ ಆಯಾಯ ವ್ಯಕ್ತಿಭೇದದಿಂದ ಬೇರೆ ಬೇರೆಯಾದ ಧರ್ಮವಾಗಿಯೇ ತೋರುತ್ತದೆ ಎಂದರ್ಥ. ಒಂದೇ ಧರ್ಮವು ಅನೇಕ ವ್ಯಕ್ತಿಗಳಲ್ಲಿ ಇರುವುದಾಗಿ ಎಲ್ಲಿಯೂ ತೋರುವುದಿಲ್ಲ. ಆದರೆ ಅನೇಕತ್ವವು ಅನೇಕ ವ್ಯಕ್ತಿಗಳಲ್ಲಿ ಇರುವಂಥಹದು.

ಇನ್ನು ಸಾಮಾನ್ಯ ಅಥವಾ ಜಾತಿಯು ಪ್ರತಿಯೋಗಿ ನಿರೂಪ್ಯವಲ್ಲ. ಸಾದೃಶ್ಯವು

ಪ್ರತಿಯೋಗಿ ನಿರೂಪ್ಯವು. ಆದುದರಿಂದ ಸಾದೃಶ್ಯ ಸಾಮಾನ್ಯಗಳಿಗೆ ಭೇದವು ಸ್ಪಷ್ಟವೇ ಆಗಿದೆ. ಹೀಗೆ ಪ್ರಾಭಾಕರರು ಆಶಂಕಿಸುತ್ತಾರೆ. ಈ ಆಶಂಕೆಯನ್ನು 'ಏತಾದೃಶಂ' ಇತ್ಯಾದಿ ವಾಕ್ಯದಿಂದ ಪರಿಹರಿಸುತ್ತಾರೆ –

**ಏತಾದೃಶಂ ಚ ಸಾದೃಶ್ಯಂ ಪದಾರ್ಥೇಷು ಪೃಥಕ್ ಪೃಥಕ್ ||೧೨೨||**

**ಏಕಸ್ಮಿನ್ ಸ ವಿನಷ್ಟೇಽಪಿ ಯತೋಽನ್ಯತ್ರೈವ ದೃಶ್ಯತೇ |**

ಸಾದೃಶ್ಯವು ಸಾಮಾನ್ಯದಿಂದ ಬೇರೆಯಾಗಲಿ, ಆದರೂ ಅದು ಪದಾರ್ಥಗಳಲ್ಲಿ ಬೇರೆ ಬೇರೆಯೇ ಆಗಿರುತ್ತದೆ. ಒಬ್ಬ ಮನುಷ್ಯನು ನಷ್ಟನಾದರೂ ಮನುಷ್ಯತ್ವವೆಂಬ ಧರ್ಮವು ಮತ್ತೊಬ್ಬನಲ್ಲಿ ಇದ್ದೇ ಇರುವುದರಿಂದ, ಮನುಷ್ಯತ್ವಾದಿ ಸಾಮಾನ್ಯವು ವ್ಯಕ್ತಿ–ವ್ಯಕ್ತಿಗಳಲ್ಲಿ ಭಿನ್ನವೇ ಆಗಿರುತ್ತದೆ.

ಇನ್ನು ಮನುಷ್ಯತ್ವವೆಂಬ ಜಾತಿಯು ನಿತ್ಯವಾದುದರಿಂದ ಒಬ್ಬ ಮನುಷ್ಯನು ನಷ್ಟನಾದರೂ ಅವನಲ್ಲಿರುವ ಜಾತಿಯು ನಷ್ಟ ಹೊಂದುವುದಿಲ್ಲ ಎಂದು ಆಕ್ಷೇಪಿಸಿದರೆ ಅದನ್ನು 'ಕುತೋ' ಇತ್ಯಾದಿ ವಾಕ್ಯದಿಂದ ಪರಿಹರಿಸುತ್ತಾರೆ –

**ಕುತೋ ಭಸ್ಮತ್ವಮಾಪ್ತಸ್ಯ ನರತ್ವಂ ಪುನರಿಷ್ಯತೇ ||೧೨೩||**

ಒಬ್ಬ ಮನುಷ್ಯನು ಸುಟ್ಟು ಭಸ್ಮವಾದಮೇಲೆ ಅವನನ್ನೇ ಆಶ್ರಯಿಸಿದ್ದ ನರತ್ವವೂ ನಾಶವಾಗಬೇಕು. ಆದ್ದರಿಂದ ಆಶ್ರಯವು ನಾಶವಾದನಂತರ ನರತ್ವವು ಇರುವುದೆಂದು ಯಾವ ಕಾರಣದಿಂದ ಅಂಗೀಕರಿಸಲ್ಪಡುತ್ತದೆ? "ವಿಮತಂ (ಸಾಮಾನ್ಯಂ) ವಿನಾಶವತ್ ವಿನಾಶವದಾಶ್ರಯ ಸಮವೇತತ್ವಾತ್ ರೂಪಾದಿವತ್" (ಸಾಮಾನ್ಯವು ವಿನಾಶವುಳ್ಳದ್ದು ರೂಪಾದಿಗಳಂತೆ ವಿನಾಶವುಳ್ಳ ಆಶ್ರಯದಲ್ಲಿ ಸಮವೇತವಾಗಿರುವುದರಿಂದ) ಇತ್ಯಾದಿ ಪ್ರಮಾಣಗಳಿಂದ ವಿರುದ್ಧವಾದುದರಿಂದ ಅಪ್ರಾಮಾಣಿಕವಾಗಿದೆ ಎಂದರ್ಥ.

ನಷ್ಟಹೊಂದಿದ ನರನನ್ನು ಆಶ್ರಯಿಸಿರುವ ನರತ್ವದ ಸತ್ವವು ಅಪ್ರಾಮಾಣಿಕವೆಂದು ಹೇಳಿದ್ದು ಯುಕ್ತವಲ್ಲ. ಏಕೆಂದರೆ ಅದೇ ನರತ್ವವು ಬೇರೆ ಕಡೆ ಪ್ರತ್ಯಕ್ಷಸಿದ್ಧವಾಗಿದೆ. ನಷ್ಟವಾದ ಹಾಗೂ ನಷ್ಟವಾಗದ ನರರಲ್ಲಿ ಇರುವ ನರತ್ವವು ಒಂದೇ ಆಗಿರುವುದರಿಂದ ಅದು ವಿನಾಶ ಹೊಂದದ ನರನಲ್ಲಿ ಪುನಃ ಕಂಡುಬರುತ್ತದೆ. ಹೀಗೆ ಆಕ್ಷೇಪಿಸಿದರೆ ಅದನ್ನು 'ಏಕತ್ವೇ' ಇತ್ಯಾದಿ ವಚನದಿಂದ ಪರಿಹರಿಸುತ್ತಾರೆ –

**ಏಕತ್ವೇ ನಾಸ್ತಿ ಮಾನಂ ಚ ಶ್ರುತಿರಪ್ಯಾಹ ಸಾದರಮ್ |**

ನಷ್ಟ ಮತ್ತು ಅನಷ್ಟರನ್ನು ಆಶ್ರಯಿಸಿದ ನರತ್ವವು ಒಂದೇ ಎಂಬಲ್ಲಿ ಪ್ರಮಾಣವಿದ್ದರೆ ಅದನ್ನು ಒಪ್ಪಬಹುದು. ಆದರೆ ಅಂಥಹ ಪ್ರಮಾಣವಿಲ್ಲ. ವ್ಯಕ್ತಿ

ವ್ಯಕ್ತಿಗಳಿಗೂ ಅವರಲ್ಲಿರುವ ಜಾತ್ಯಾದಿಗಳಿಗೂ ಭೇದವಿದೆ ಎಂಬುದಾಗಿ ಶ್ರುತಿಯೂ ಸಾದರವಾಗಿ ಹೇಳುತ್ತದೆ ಎಂಬುದನ್ನು ದೃಢಪಡಿಸಲು ಸಂಬಂಧಪಟ್ಟ ಶ್ರುತಿಯನ್ನು ಉದಾಹರಿಸುತ್ತಾರೆ –

**ಭಿನ್ನಾಶ್ಚ ಭಿನ್ನಧರ್ಮಾಶ್ಚ ಪದಾರ್ಥಾ ನಿಖಿಲಾ ಅಪಿ ।।೧೨೪।।**

**ಸ್ವೈಃ ಸ್ವೈರ್ಧರ್ಮೈರಭಿನ್ನಾಶ್ಚ ಸ್ವರೂಪೈರಪಿ ಸರ್ವಶಃ ।**

**ಅನಿವೃತ್ತವಿನಾಶಾಸ್ತು ಧರ್ಮಾ ಉಭಯರೂಪಕಾಃ ।।೧೨೫।।**

**ನ ಕೇನಚಿದಭಿನ್ನೋಽತೋ ಭಗವಾನ್ ಸ್ವೈರ್ಗುಣೈರ್ವಿನಾ ।।ಇತಿ।।**

ಎಲ್ಲ ಪದಾರ್ಥಗಳೂ ಪರಸ್ಪರ ಭೇದವುಳ್ಳವು ಹಾಗೂ ಪರಸ್ಪರ ಭಿನ್ನಗಳಾದ ಧರ್ಮಗಳನ್ನು ಹೊಂದಿರುವಂಥವು. ತಮ್ಮ ತಮ್ಮ ಸ್ವರೂಪಭೂತ ಧರ್ಮಗಳಿಂದಲೂ, ಎಲ್ಲ ಸ್ವರೂಪಗಳಿಂದಲೂ ಅಭಿನ್ನವಾದಂಥವು. ಆಶ್ರಯವು ನಾಶವಾಗದೆ ಇದ್ದಾಗಲೂ ವಿನಾಶ ಹೊಂದುವ ಧರ್ಮಗಳಾದರೋ ಭಿನ್ನಾಭಿನ್ನಗಳಾಗಿರುತ್ತವೆ. ಆದ್ದರಿಂದ ಶ್ರೀಹರಿಯು ತನ್ನ ಗುಣಾದಿಗಳಿಂದ ಹೊರತು ಯಾರಿಂದಲೂ ಅಭಿನ್ನನಲ್ಲ.

ಹಾಗಾದರೆ ಒಬ್ಬ ವ್ಯಕ್ತಿಯು ನಾಶವಾದರೂ ಇನ್ನೊಬ್ಬ ವ್ಯಕ್ತಿಯಲ್ಲಿ ಆ ಜಾತಿಯು ಕಂಡುಬರುವುದು. ಅನಿತ್ಯವಾದರೆ ಇದು ಸಂಭವಿಸುವುದಿಲ್ಲ. ಆದ್ದರಿಂದ ಜಾತಿಗೆ ನಿತ್ಯತ್ವವನ್ನು ಅಂಗೀಕರಿಸುವುದು ಅನಿವಾರ್ಯವೆಂಬ ಆಕ್ಷೇಪವನ್ನು 'ವ್ಯುತ್ಪತ್ತಿರಪಿ' ಇತ್ಯಾದಿ ವಚನದಿಂದ ಪರಹರಿಸುತ್ತಾರೆ –

**ವ್ಯುತ್ಪತ್ತಿರಪಿ ಹಿ ಸಾದೃಶ್ಯೇನೈವ ಗಮ್ಯತೇ ।।೧೨೬।।**

**ಸರ್ವೇಷು ಯುಗಪಚ್ಛಬ್ದಃ ಸದೃಶೇಷು ಪ್ರವರ್ತತೇ ।**

**ತಥಾಽಪಿ ಪ್ರಾಪ್ತಿತಸ್ತ್ವೇಕವಚನಾಚ್ಚ ವಿಶೇಷತಃ ।।೧೨೭।।**

**ಅಭೀಷ್ಟಾವಗತಿಶ್ಚ ಸ್ಯಾಚ್ಛಕ್ತಿಃ ಸಾದೃಶ್ಯಗಾ ಯತಃ ।**

**ತಾದೃಶೋಽಯಂ ಚ ತಚ್ಛಬ್ದ ಇತಿ ಜ್ಞಾಪಯತಿ ಸ್ಫುಟಮ್ ।।೧೨೮।।**

'ಗೋಸದೃಶವು ಗವಯವು' ಇದೇ ಮೊದಲಾದದು ಪ್ರತ್ಯಕ್ಷದಿಂದ ಸಿದ್ಧವಾಗಿದೆ. ಆದ್ದರಿಂದ ಸಾದೃಶ್ಯದಿಂದಲೇ ಗವಾದಿ ವ್ಯುತ್ಪತ್ತಿಯು ಗ್ರಹಿಸಲ್ಪಡುತ್ತದೆ. ಸದೃಶಗಳಾದ ಎಲ್ಲ ಗೋವುಗಳಲ್ಲಿಯೂ ಏಕಕಾಲದಲ್ಲಿ 'ಅಯಂ ಗೌಃ' ಎಂಬಿತ್ಯಾದಿ ಶಬ್ದವು ಪ್ರವೃತ್ತವಾಗುತ್ತದೆ. ಆದರೂ ಯೋಗ್ಯತೆ ಹಾಗೂ ಏಕವಚನವಿರುವುದರಿಂದ ಮತ್ತು ಶುಕ್ಲ ಶಬಲ ಕಾಲಾಕ್ಷಿ ಮುಂತಾದ ವಿಶೇಷಣವಿರುವುದರಿಂದ, ಗೋಶಬ್ದದಿಂದ

ಅಭೀಷ್ಟವಾದ ಗೋವಿನ ಜ್ಞಾನವಾಗುತ್ತದೆ. ಏಕೆಂದರೆ ಶಬ್ದದ ವಾಚಕತ್ವ ಶಕ್ತಿಯು (ಶಾಬ್ದಬೋಧವು) ಸಾದೃಶ್ಯ ಸಂಬಂಧಿಯಾದುದು. ಆದಕಾರಣ ಈಗ ನಾನು ನೋಡುತ್ತಿರುವ ಪದಾರ್ಥವು ಉಪದೇಶಕಾಲದಲ್ಲಿ ಸನ್ನಿಹಿತವಾದ ಗೋವಿಗೆ ಸದೃಶವಾಗಿರುವುದರಿಂದ ಇದೂ ಸಹ ಗೋಶಬ್ದದಿಂದ ವಾಚ್ಯವು ಎಂಬುದಾಗಿ ಶಬ್ದವಾಚಕ ಶಕ್ತಿಯನ್ನು ಸಾದೃಶ್ಯವು ಸ್ಪಷ್ಟವಾಗಿ ತಿಳಿಸುತ್ತದೆ.

ಹೀಗೆ ಅನುಗತವಾದ ಸಾಮಾನ್ಯ ಅಥವಾ ಜಾತಿ ಮುಂತಾದುದನ್ನು ಅಂಗೀಕರಿಸದೆಯೇ ವ್ಯುತ್ಪತ್ತಿ ಮುಂತಾದವು ಸಂಭವಿಸುತ್ತದೆಂದು ಸಮರ್ಥಿಸಿದರು. ಈಗ ಅನುಗತ ಸಾಮಾನ್ಯದಿಂದಲೇ ವ್ಯುತ್ಪತ್ತಿಯನ್ನು ಹೇಳುವವನಿಗೆ ಬಾಧಕವನ್ನು ತೋರಿಸುತ್ತಾರೆ –

**ಜಾತಿತಶ್ಚೇತ್ಕಥಂ ತಾಸು ತತ್ರ ಚೇದನವಸ್ಥಿತಿಃ ।**

**ತಥೈವ ವ್ಯಕ್ತಿವಿಜ್ಞಾನಂ ವ್ಯಕ್ತಿತ್ವಾಭಾವದೂಷಿತಮ್ ॥೧೨೯॥**

ಅನುಗತವಾದ ಜಾತಿ ನಿಮಿತ್ತಕವೇ ಸರ್ವತ್ರ ವ್ಯುತ್ಪತ್ತಿಯು ಸಂಭವಿಸುವುದಾದರೆ, ಆ ಜಾತ್ಯಾದಿಗಳಲ್ಲಿ ಜಾತ್ಯಾದಿ ಶಬ್ದಗಳ ವ್ಯುತ್ಪತ್ತಿಯು ಹೇಗೆ ಆಗುವುದು? ಜಾತಿಗಳಲ್ಲಿಯೂ ಜಾತಿತ್ವವೆನ್ನುವ ಜಾತಿಯಿದೆ ಎಂದು ಹೇಳಿದರೆ, ಅದರಲ್ಲಿ ಮತ್ತೊಂದು ಜಾತಿತ್ವವು ಹೀಗೆ ಅನವಸ್ಥಿತಿಯು. ಗೋತ್ವ ಮುಂತಾದ ಜಾತಿಗಳು ಜಾತಿಶಬ್ದವಾಚ್ಯಗಳೆಂಬ ಜ್ಞಾನವು (ಜಾತಿವಿಜ್ಞಾನವು) ಜಾತಿತ್ವವೆಂಬುದು ಇಲ್ಲವಾದುದರಿಂದ ಹೇಗೆ ದೂಷಿತವಾಗುವುದೋ ಹಾಗೆಯೇ ವ್ಯಕ್ತಿವಿಜ್ಞಾನವೂ ವ್ಯಕ್ತಿತ್ವದ ಅಭಾವದಿಂದ ದೂಷಿತವಾಗುವುದು.

ಹಾಗಾದರೆ ಯಾವುದೇ ಶಬ್ದಪ್ರವೃತ್ತಿಯು ಜಾತಿನಿಮಿತ್ತಕವಾದುದರಿಂದ ವ್ಯಕ್ತಿತ್ವವು ದ್ರವ್ಯ ಗುಣ ಕರ್ಮಗಳಲ್ಲಿ ಇದ್ದೇ ಇರುವುದು. ಆದ್ದರಿಂದ ಹಿಂದೆ ಹೇಳಿದ ದೋಷವಿಲ್ಲ ಎಂದು ಆಶಂಕಿಸಿದರೆ, ಅದನ್ನು 'ಯದಿ' ಇತ್ಯಾದಿ ವಚನದಿಂದ ಪರಿಹರಿಸುತ್ತಾರೆ –

**ಯದಿ ತಚ್ಚಾಸ್ತಿ ತಸ್ಯಾಪಿ ವಿಶೇಷೇಷ್ವನವಸ್ಥಿತಿಃ ।**

**ಕಥಂ ಸ್ವರೂಪತ್ವಮಪಿ ಜ್ಞಾಯತೇಽನುಗತಂ ಯದಿ ॥೧೩೦॥**

**ಏಕವ್ಯುತ್ಪತ್ತಿಪರ್ಯಂತಮನವಸ್ಥಾದಿದೂಷಿತಮ್ ।**

**ಕಲ್ಪನಾಗೌರವಾತ್ತೇನ ಯುಕ್ತಾ ನಾನುಗಕಲ್ಪನಾ ॥೧೩೧॥**

ಒಂದು ಪಕ್ಷದಲ್ಲಿ ವ್ಯಕ್ತಿತ್ವವೂ ಇರುವುದಾದರೆ, ಆಗ ಆ ವ್ಯಕ್ತಿತ್ವಕ್ಕೆ ಸಹ ವ್ಯಕ್ತಿ ವಿಶೇಷಗಳಲ್ಲಿ ಪ್ರವೇಶವು ಆಗಬೇಕಾಗುವುದು. ಅದುದರಿಂದ ಅನವಸ್ಥೆಯು.

ಇನ್ನು ಅನುಗತವಾದ ಜಾತಿಯಿಂದಲೇ ಸರ್ವತ್ರ ವ್ಯುತ್ಪತ್ತಿಯನ್ನು ಅಂಗೀಕರಿಸುವ ಪಕ್ಷದಲ್ಲಿ ಆಗ ಎಲ್ಲ ಪದಾರ್ಥಗಳ ಸ್ವರೂಪವು ಸ್ವರೂಪಶಬ್ದ ವಾಚ್ಯವೆಂದು ಹೇಗೆ ತಿಳಿಯಲ್ಪಡುವುದು? ಏಕೆಂದರೆ ಅನುಗತ ಸ್ವರೂಪತ್ವವೆಂಬ ಸಾಮಾನ್ಯವು ಇರುವುದಿಲ್ಲ.

ಇನ್ನು ಅನುಗತ ಸಾಮಾನ್ಯವಿಲ್ಲದಿರುವ ಕಡೆಗಳಲ್ಲಿ ವ್ಯುತ್ಪತ್ತಿಯನ್ನು ಅಂಗೀಕರಿಸುವ ತನಕ ಅನವಸ್ಥಾದಿ ದೋಷಗಳು ಬಂದೇ ಬರುತ್ತವೆ.

ಎಲ್ಲ ಕಡೆಗಳಲ್ಲಿಯೂ ಶಬ್ದಪ್ರವೃತ್ತಿಗೆ ನಿಮಿತ್ತಕವಾದುದನ್ನು ಅನುಗತವಲ್ಲವೆಂದೇ ಹೇಳಬೇಕು. ಕೆಲವು ಕಡೆಗಳಲ್ಲಿ ಅನುಗತ ಜಾತಿಯು ಶಬ್ದಪ್ರವೃತ್ತಿ ನಿಮಿತ್ತವು, ಕೆಲವು ಕಡೆಗಳಲ್ಲಿ ಉಪಾಧಿಯೂ ಸ್ವರೂಪವೂ ಪ್ರವೃತ್ತಿ ನಿಮಿತ್ತವೆಂದು ಬಹುವಿಧ ಕಲ್ಪನೆಗಳನ್ನು ಮಾಡಿದರೆ ಕಲ್ಪನಾಗೌರವವೆಂಬ ದೋಷವು ಬರುವುದು. ಆದ್ದರಿಂದ ಅನುಗತ ಜಾತಿಯ ಕಲ್ಪನೆಯು ಯುಕ್ತವಲ್ಲ.

ಹೀಗೆ ಸಮವಾಯವನ್ನು ಸ್ವರೂಪತಃ ನಿರಾಕರಿಸಿದರು. ಸಮವಾಯವು ಸರ್ವತ್ರ ಏಕವೂ ನಿತ್ಯವೂ ಎಂದು 'ತತ್ತ್ವಂ ಭಾವೇನ' ಎಂಬ ಸೂತ್ರದಿಂದ ವ್ಯಾಖ್ಯಾತವಾಗಿದೆ ಎಂದು ಹೇಳಿದ್ದನ್ನು 'ಔಪಾಧಿಕ' ಇತ್ಯಾದಿ ವಾಕ್ಯದಿಂದ ನಿರಾಕರಿಸುತ್ತಾರೆ –

**ಔಪಾಧಿಕವಿಶಿಷ್ಟಾದ್ಯಮಪಿ ತದ್ವಸ್ತು ಕಿಂ ತತಃ ।**

**ಅನ್ಯತ್ತದೇವ ಚೇದಗ್ನಿಮತ್ವಂ ಕಿಂ ತತ್ರ ಭಣ್ಯತೇ ॥೧೩೨॥**

ಔಪಾಧಿಕ ವಿಶಿಷ್ಟತ್ವ ಉಪಲಕ್ಷಿತ ಮುಂತಾದುದೂ ಉಪಾಧಿ ಮುಂತಾದ ಮೂರರ ಸ್ವರೂಪವೋ ಅಥವಾ ಅವುಗಳಿಂದ ಭಿನ್ನವೋ? ಔಪಾಧಿಕಾದಿಗಳು ಉಪಾಧಿ ಮುಂತಾದವುಗಳ ಸ್ವರೂಪವೇ ಎಂದರೆ ಅಗ್ನಿಮತ್ವ ಮುಂತಾದ ವಿಶಿಷ್ಟವು ಈ ಮೂರರಲ್ಲಿ ಯಾವುದೆಂದು ಹೇಳಲ್ಪಡುತ್ತದೆ?

**ಅಗ್ನಿಸಂಯೋಗಮಾತ್ರಂ ಚೇದ್ಭವೇತ್ತದ್ಸಿದ್ಧಸಾಧನಮ್ ।**

**ಭೂಧರಸ್ಯಾಗ್ನಿಸಂಯೋಗೋ ಯದಿ ಷಷ್ಠ್ಯರ್ಥಂ ಏವ ಕಃ ॥೧೩೩॥**

ಅಗ್ನಿಸಂಯೋಗವೇ ಅಗ್ನಿಮತ್ವ ಶಬ್ದಾರ್ಥ ವಿಶಿಷ್ಟವೆಂದರೆ ಆಗ ಧೂಮಾದಿ ಅನುಮಾನಕ್ಕೆ ಸಿದ್ಧಸಾಧನವೆಂಬ ದೋಷ ಬರುವುದು. ಪರ್ವತಕ್ಕೆ ಅಗ್ನಿಸಂಯೋಗವು ಎಂಬುದು ಅಗ್ನಿಮತ್ವ ಶಬ್ದಾರ್ಥವಾದರೆ ಷಷ್ಠ್ಯರ್ಥವಾದ ಸಂಬಂಧವು ಯಾವುದೆಂದು ಪ್ರಶ್ನಿಸುತ್ತೇವೆ. ಏಕೆಂದರೆ ಷಷ್ಠ್ಯರ್ಥವಾದ ಸಂಬಂಧಗಳು ಅನೇಕವೆಂದು ವೈಯಾಕರಣರು ಹೇಳುತ್ತಾರೆ.

**ಸಮವಾಯೋ ಯದಿ ಹ್ಯಸ್ಯ ಚೈಕತ್ವಾತ್ಸಿದ್ಧಸಾಧನಮ್ ।**

**ಯದ್ಯಸ್ಯೌಪಾಧಿಕೋ ಭೇದಃ ಕುತ ಏಕತ್ವಮಿಷ್ಯತೇ ॥೧೩೪॥**

ಗುಣಗುಣಿಗಳಲ್ಲಿ ಪ್ರಸಿದ್ಧವಾದ ಸಮವಾಯ ಸಂಬಂಧವು ಷಷ್ಠ್ಯರ್ಥವೆಂದು ಹೇಳಿದರೆ, ಆಗ ಸಮವಾಯಕ್ಕೂ ಏಕತ್ವವಿರುವುದರಿಂದ ಧೂಮಾದಿ ಅನುಮಾನವು ಸಿದ್ಧಸಾಧನವಾಗುವುದು. ಈ ಸಮವಾಯಕ್ಕೆ ಔಪಾಧಿಕ ಭೇದವಿದೆಯೆಂದರೆ ಅದಕ್ಕೆ ಏಕತ್ವವನ್ನು ಅಂಗೀಕರಿಸುವುದು ಏಕೆ?

**ನಾನಿರ್ವಾಚ್ಯಂ ಹಿ ತೇನೇಷ್ಟಮತ ಔಪಾಧಿಕಾನ್ಯಯೋಃ ।**

**ಸತ್ಯತ್ವಾತ್ಕೋ ವಿಶೇಷಃ ಸ್ಯಾನ್ಮಾಯಾವಾದ್ಯನ್ಯಥಾ ಭವೇತ್ ॥೧೩೫॥**

ವೈಶೇಷಿಕಾದಿಗಳು ಅನಿರ್ವಾಚ್ಯ ವಸ್ತುವನ್ನು ಒಪ್ಪುವುದಿಲ್ಲ. ಆದ್ದರಿಂದ ಔಪಾಧಿಕ ಸ್ವಾಭಾವಿಕಗಳೆರಡಕ್ಕೂ ಸತ್ಯತ್ವವು ಬರುವುದರಿಂದ, ಔಪಾಧಿಕತ್ವಾದಿ ಯುಕ್ತಿಯಿಂದ ಅವರು ಹೇಳುವ ವಿಶೇಷವು ಯಾವುದು? ಅನಿರ್ವಾಚ್ಯವನ್ನು ಅಂಗೀಕರಿಸಿದರೆ ವೈಶೇಷಿಕನೂ ಮಾಯಾವಾದಿಯೇ ಆಗುವನು.

**ಉಪಾಧಿಜನ್ಯಂ ತದ್ಗಮ್ಯಮಿತಿ ಚೌಪಾಧಿಕಂ ಭವೇತ್ ।**

**ಉಭಯತ್ರಾಪ್ಯನಂತಾಃ ಸ್ಯುಃ ಸಮವಾಯಾ ಇತಸ್ತತಃ ॥೧೩೬॥**

ಉಪಾಧಿಯಿಂದ ಹುಟ್ಟಿದ್ದು ಅಥವಾ ತಿಳಿಯಲ್ಪಟ್ಟಿದ್ದು ಔಪಾಧಿಕವೆನಿಸುತ್ತದೆ. ಎರಡೂ ಪಕ್ಷಗಳಲ್ಲಿ, ಅವಯವ–ಅವಯವಿ ಮುಂತಾದ ಉಪಾಧಿಗಳಿಗೆ ಅನಂತತೆ ಇರುವುದರಿಂದ, ಸಮವಾಯಗಳು ಅನಂತವಾಗುವವು.

**ಭಿನ್ನತ್ವಂ ಚೈವ ತೇಷ್ವಸ್ತಿ ಕೋ ವಿಶೇಷ ಉಪಾಧಿಗೇ ।**

**ಅವಿದ್ಯಮಾನ ಏವಾನ್ಯಃ ಸಮವಾಯೋಽಧಿಗಮ್ಯತೇ ॥೧೩೭॥**

**ಉಪಾಧಿನಾ ತದ್ಗಮಕಮನುಮಾನಂ ನ ಮಾ ಭವೇತ್ ।**

ಆ ಸಮವಾಯಗಳಲ್ಲಿಯೇ ಭೇದವಿರುವುದರಿಂದ, ಔಪಾಧಿಕ ಭೇದದಲ್ಲಿರುವ ವಿಶೇಷವು ಯಾವುದು? ಇಲ್ಲದಿರುವ ಭಿನ್ನವಾದ ಸಮವಾಯವು ಉಪಾಧಿಯಿಂದ ತಿಳಿಯಲ್ಪಡುತ್ತದೆ ಎಂದು ಹೇಳಿದರೆ, ಅದು ಯುಕ್ತವಲ್ಲ. ಏಕೆಂದರೆ ಇಲ್ಲದಿರುವ ಸಮವಾಯವನ್ನು ಪ್ರತಿಪಾದಿಸುವ ಅನುಮಾನವು ಪ್ರಮಾಣವಾಗಲಾರದು.

ಈಗ ಸಮವಾಯದ ನಿತ್ಯತ್ವವನ್ನು ನಿರಾಕರಿಸುತ್ತಾರೆ –

**ಏವಮೇವಾಸತಃ ಸತ್ತಾಸಮವಾಯೋ ಜನಿರ್ಮತಾ ॥೧೩೮॥**

**ತತ್ರಾಪಿ ಹ್ಯುಕ್ತದೋಷಾಣಾಂ ನೈವ ಕಿಂಚಿನ್ನಿವಾರಕಮ್ ।**

ಸರ್ವತ್ರ ಸಮವಾಯದ ಏಕತ್ವವನ್ನು ಅಂಗೀಕರಿಸುವುದಾದರೆ ಎಲ್ಲ ಅನುಮಾನಗಳಿಗೂ ಸಿದ್ಧಸಾಧನಾದಿ ದೋಷಗಳು ಬರುವುವೆಂದು ಹೇಳಲಾಗಿದೆ. ಆದರಂತೆಯೇ ಸಮವಾಯದ ನಿತ್ಯತ್ವವನ್ನು ಅಂಗೀಕರಿಸುವುದಾದರೆ, ಅಸತ್ತಿಗೆ ಸತ್ತಾದೊಂದಿಗೆ ಸಮವಾಯದ ಸಂಬಂಧ ಉಂಟಾಗುವುದು ಉತ್ಪತ್ತಿಯು ಎಂಬ ವಚನವು ದೋಷಯುಕ್ತವಾದೀತು. ಅಂದರೆ ಸಮವಾಯವು ನಿತ್ಯವಾದರೆ ಯಾವುದಕ್ಕೂ ಉತ್ಪತ್ತಿ ಸಂಭವಿಸದು ಎಂದರ್ಥ. ಏಕೆಂದರೆ ಸಮವಾಯದ ನಿತ್ಯತ್ವವನ್ನು ಅಂಗೀಕರಿಸುವ ಪಕ್ಷದಲ್ಲಿಯೂ ಸಿದ್ಧಸಾಧನತ್ವಾದಿ ದೋಷಗಳಿಗೆ ನಿವಾರಕವಾವುದೂ ಇರುವುದಿಲ್ಲ.

ಹಾಗಾದರೆ ಲೌಕಿಕ ಹಾಗೂ ವೈದಿಕ ವ್ಯವಹಾರಗಳನ್ನು ನಿರ್ವಹಿಸಲು ನೀವೂ ಸಹ ವಿಶೇಷ ಮುಂತಾದವನ್ನು ಅಂಗೀಕರಿಸಬೇಕಾಗುತ್ತದೆ. ಅಲ್ಲಿಯೂ ಹಿಂದೆ ಹೇಳಿದ ದೋಷಗಳು ಬರುತ್ತವೆ ಎಂದು ಆಕ್ಷೇಪಿಸಿದರೆ –

**ಅಸ್ಮತ್ಪಕ್ಷೇ ವಿಶೇಷಸ್ಯ ಸರ್ವತ್ರಾಂಗೀಕೃತತ್ವತಃ ॥೧೩೯॥**

**ನಾಸ್ತಿ ದೋಷಃ ಕ್ವಚಿತ್..............................।**

ನಮ್ಮ ಪಕ್ಷದಲ್ಲಿ ವಿಶೇಷವನ್ನು ಸರ್ವತ್ರ ಅಂಗೀಕರಿಸುವುದರಿಂದ ಎಲ್ಲಿಯೂ, ಅಂದರೆ ಅತ್ಯಂತಾಭೇದ ಹಾಗೂ ಭೇದಾಭೇದ ಇರುವಲ್ಲಿಯೂ, ಯಾವ ದೋಷವೂ ಇರುವುದಿಲ್ಲ.

ಹಾಗಾದರೆ ಕೆಲವು ಕಡೆಗಳಲ್ಲಿ ವಿಶೇಷ್ಯವು ಭಾವರೂಪವಾಗಿದ್ದು ವಿಶೇಷವು ಅಭಾವ ರೂಪವಾಗಿರುತ್ತದೆ. ಮತ್ತೆ ಕೆಲವು ಕಡೆಗಳಲ್ಲಿ ಇದಕ್ಕೆ ವಿರುದ್ಧವಾಗಿರುತ್ತದೆ. ಇನ್ನು ವಿಧಿನಿಷೇಧ ರೂಪಗಳಾದ ಭಾವಾಭಾವಗಳಿಗೆ ಅಭೇದವು ಯುಕ್ತವಲ್ಲ. ಆದ್ದರಿಂದ ವಿಶೇಷವು ವಿಶೇಷ್ಯದಿಂದ ಅಭಿನ್ನವೆಂಬುದು ಹೇಗೆ ಎಂದರೆ –

**.................ಭಾವೋ ಹ್ಯಭಾವಶ್ಚ ಸ ಏವ ಹಿ ।**

**ಅಭಾವಸ್ಯ ಧರ್ಮಾಃ ಸ್ಯುರ್ಭಾವಾಸ್ತೇಷಾಂ ಚ ತೇಽಖಿಲಾಃ ॥೧೪೦॥**

**ಪ್ರತ್ಯಕ್ಷಮಾನತಃ ಸರ್ವಮೇತನ್ನೋ ವಾರಣಕ್ಷಮಮ್ ।**

**ಸರ್ವೇ ಭಾವಾ ಅಭಾವಾಶ್ಚ ಪದಾರ್ಥಾಸ್ತೇನ ಸರ್ವದಾ ॥೧೪೧॥**

ಕೆಲವು ಕಡೆಗಳಲ್ಲಿ ಭಾವವು ಅಭಾವವಾಗುತ್ತದೆ, ಅಭಾವವೂ ಕೆಲವು ಕಡೆಗಳಲ್ಲಿ ಭಾವವಾಗುತ್ತದೆ ಎಂಬುದು ಪ್ರಸಿದ್ಧವಾಗಿದೆ. ಅಭಾವಕ್ಕೆ ಸಹ ಭಾವರೂಪ ಧರ್ಮಗಳು ಇರುತ್ತವೆ. ಭಾವಪದಾರ್ಥಗಳಿಗೂ ಅಭಾವರೂಪ ಧರ್ಮಗಳು

ಇರುತ್ತವೆ. ಇವೆಲ್ಲವೂ ಪ್ರತ್ಯಕ್ಷಾದಿ ಪ್ರಮಾಣಗಳಿಂದ ಸಿದ್ಧವಾದುದರಿಂದ ನಿವಾರಿಸಲು ಶಕ್ಯವಾಗದು. ಆದಕಾರಣ ಯಾವಾಗಲೂ ಎಲ್ಲ ಭಾವಪದಾರ್ಥಗಳು ಅಭಾವಗಳೂ ಹಾಗೂ ಎಲ್ಲ ಅಭಾವ ಪದಾರ್ಥಗಳು ಭಾವಗಳೂ ಆಗುತ್ತವೆ.

**ತಥಾಪಿ ಪ್ರಥಮಂ ಬುದ್ಧೇರ್ಯೋ ನಿಷೇಧಸ್ಯ ಗೋಚರಃ ।**

**ಸೋಽಭಾವೋ ವಿಧಿಬುದ್ಧೇಸ್ತು ಗೋಚರಃ ಪ್ರಥಮಂ ಪರಃ ॥೧೪೨॥**

ಆದರೂ ಮೊದಲಿಗೇ ನಿಷೇಧರೂಪವಾಗಿ ಬುದ್ಧಿಯಲ್ಲಿ ಗೋಚರಿಸುವ ವಿಷಯವು ಅಭಾವವೆನಿಸಿದರೆ, ಮೊದಲಿಗೇ ವಿಧಿರೂಪವಾಗಿ ಬುದ್ಧಿಯಲ್ಲಿ ಗೋಚರಿಸುವ ವಿಷಯವು ಭಾವವೆನಿಸುತ್ತದೆ.

ಅಭಾವ-ಭಾವಗಳಿಗೆ ಭಾವ-ಅಭಾವರೂಪ ಧರ್ಮಗಳಿರುವುದು ಪ್ರತ್ಯಕ್ಷಾದಿ ಪ್ರಮಾಣದಿಂದ ಸಿದ್ಧವೆಂಬುದಾಗಿ ಹಿಂದೆ ಹೇಳಲಾಯಿತು. ಅದು ಹೇಗೆ ಎಂದರೆ 'ತಸ್ಮಾತ್' ಎಂಬಿತ್ಯಾದಿ ವಾಕ್ಯದಿಂದ ಸಮಾಧಾನ ಹೇಳುತ್ತಾರೆ –

**ತಸ್ಮಾತ್ಪ್ರಧ್ವಸ್ತಭೇದಾದಿ ಸದಿತ್ಯೇವಾವಗಮ್ಯತೇ ।**

**ಅಸ್ತ್ಯಭಾವೋಽಸ್ತಿ ಚ ಧ್ವಂಸೋ ದೇಹಾಭಾವಶ್ಚ ಭಸ್ಮತಾ ॥೧೪೩॥**

**ಇತ್ಯಾದಿ ಯುಜ್ಯತೇ ಸರ್ವಂ ಪ್ರತ್ಯಕ್ಷಾದಿಪ್ರಮಾಣತಃ ।**

ಅಭಾವಕ್ಕೆ ಭಾವರೂಪ ಧರ್ಮವಿರುವುದರಿಂದ ಪ್ರಧ್ವಂಸಾಭಾವ, ಪೃಥಕ್ತ್ವ, ಪ್ರಮೇಯತ್ವ ಮುಂತಾದುದು ಸತ್ಯವೆಂದೇ ತಿಳಿಯುತ್ತದೆ. ಆದುದರಿಂದ ಅಭಾವವು ಇದೆ, ಪ್ರಧ್ವಂಸವು ಇದೆ, ಭಸ್ಮವಾಗುವಿಕೆಯಿಂದಾಗಿ ದೇಹಾಭಾವುಂಟು, ಇತ್ಯಾದಿಗಳು ಯುಕ್ತವಾಗುತ್ತವೆ. ಇವೆಲ್ಲವೂ ಪ್ರತ್ಯಕ್ಷದಿಂದ ಪ್ರಮಾಣಿತವಾಗಿವೆ.

ಹಾಗಾದರೆ ಅನ್ಯೋನ್ಯಾಭಾವಕ್ಕೆ ಭಾವರೂಪ ಧರ್ಮವಿರುವುದಾದರೂ ಅದು ಧರ್ಮಿಸ್ವರೂಪವಲ್ಲ. ಆದುದರಿಂದ ಭಾವಕ್ಕೆ ಅಭಾವವನ್ನು ಹೇಗೆ ಹೇಳುವುದು? ಈ ಆಕ್ಷೇಪವನ್ನು 'ಅನ್ಯೋನ್ಯಾಭಾವ' ಇತ್ಯಾದಿ ವಚನದಿಂದ ಪರಿಹರಿಸುತ್ತಾರೆ –

**ಅನ್ಯೋನ್ಯಾಭಾವಭೇದೌ ಚ ಪೃಥಕ್ತ್ವಂ ಚ ಪೃಥಕ್ ಪೃಥಕ್ ॥೧೪೪॥**

**ಯತ್ಕಲ್ಪಯಂತಿ ತಚ್ಚೈವ ಕಲ್ಪನಾಗೌರವಾದ್ಗತಮ್ ।**

**ಪರ್ಯಾಯತ್ವೇನ ತೇ ಶಬ್ದಾ ಜ್ಞಾಯಂತೇ ಸರ್ವ ಏವ ಹಿ ॥೧೪೫॥**

ಅನ್ಯೋನ್ಯಾಭಾವ, ಭೇದ, ಪೃಥಕ್ತ್ವ ಇವುಗಳನ್ನು ಬೇರೆ ಬೇರೆಯೆಂದು ಯಾರು ಕಲ್ಪಿಸುತ್ತಾರೋ (ವೈಶೇಷಿಕಾದಿಗಳು) ಅವರಿಗೆ ಕಲ್ಪನಾಗೌರವವೆಂಬ ದೋಷವು ಬರುವುದರಿಂದ ಅದು ನಿರಾಸೆ ಹೊಂದುವುದು. ಅನ್ಯೋನ್ಯಾಭಾವ,

ಭೇದ, ಪೃಥಕ್ತ್ವ ಎಂಬ ಸಕಲ ಲೌಕಿಕ ಹಾಗೂ ವೈದಿಕ ಶಬ್ದಗಳೂ ಪರ್ಯಾಯವೆಂದು ತಿಳಿಯಲ್ಪಡುತ್ತದೆ.

ಇನ್ನು ಭೇದಕ್ಕೆ ವಸ್ತುಸ್ವರೂಪತ್ವ ವಿಷಯದಲ್ಲಿ ಮಾಯಾವಾದಿಗಳ ಮತವನ್ನು ದೂಷಿಸುತ್ತಾರೆ.

ಭೇದದ ಸ್ವರೂಪತ್ವ ವಿಷಯದಲ್ಲಿ ಮಾಯಾವಾದಿಗಳು ಹೀಗೆ ಹೇಳುತ್ತಾರೆ – ಭೇದವು ವಸ್ತು ಸ್ವರೂಪವಾಗಲಾರದು. ಏಕೆಂದರೆ ಭೇದ ಶಬ್ದವು ವಿದಾರಣಾರ್ಥಕ ಭಿದ ಧಾತುವಿನಿಂದಾದ ರೂಪವು (ಭಿದಿರ್ವಿದಾರಣೇ). ವಿದಾರಣ ಎಂದರೆ ಭೇದನ ಅಥವಾ ವಿಭಾಗಿಸುವುದು ಎಂದರ್ಥ. ಆದ್ದರಿಂದ ವಿದಾರಣಾರ್ಥಕವಾದ ಭೇದಕ್ಕೆ ಭಾವ ಸ್ವರೂಪವು ಇರುವುದಾದರೆ, ಭೇದಕ್ಕೂ ಭಾವಸ್ವರೂಪಕ್ಕೂ ವಿದಾರಣದ ನಿಮಿತ್ತ ಭೇದವೇ ಉಂಟಾದೀತು. ಈ ವಿದಾರಣವು ವಸ್ತುವಿನ ಏಕದೇಶದಲ್ಲಿಯೂ ಸಂಭವಿಸುವುದರಿಂದ ಕೊನೆಗೆ ಶೂನ್ಯತೆಯೇ ಉಂಟಾದೀತು. ಭೇದವು ವಸ್ತುವಿನ ಸ್ವರೂಪವಾದರೆ ಅದರಲ್ಲಿ ಏಕತ್ವವು ಬರಲಾರದು. ಏಕೆಂದರೆ ಅಭೇದವನ್ನು ಹೇಳುವ ಏಕತ್ವಕ್ಕೆ ಭೇದದಿಂದ ವಿರೋಧವಿದೆ. ಏಕತ್ವಗಳ ಸಮಾಹಾರವೇ ಅನೇಕತ್ವವು. ಆದ್ದರಿಂದ ಅನೇಕತ್ವವೂ ಬರಲಾರದು. ಏಕತ್ವ ಮತ್ತು ಅನೇಕತ್ವವು ಇಲ್ಲದ್ದು ಶೂನ್ಯವೇ ಆಗಬೇಕಾಗುವುದು. ಈ ಮಾಯಾವಾದಿಗಳ ಮತವನ್ನು 'ಭೇದಸ್ಯ' ಇತ್ಯಾದಿ ವಚನದಿಂದ ನಿರಾಕರಿಸುತ್ತಾರೆ –

**ಭೇದಸ್ಯ ತು ಸ್ವರೂಪತ್ವೇ ಯೇ ವದಂತಿ ಚ ಶೂನ್ಯತಾಮ್ ।**

**ಅದ್ಭುತಾಸ್ತೇ ಯತೋಽನ್ಯಸ್ಯ ಪ್ರತಿಯೋಗಿತ್ವಮಿಷ್ಯತೇ ।।೧೪೬।।**

**ಪ್ರತಿಯೋಗಿನೋ ಹಿ ಭೇದೋಽಯಂ ನ ತು ಸ್ವಸ್ಯಾತ್ಮಕಥಂಚನ ।**

ಭೇದವು ಭೇದಹೊಂದುವ ವಸ್ತುವಿನ ಸ್ವರೂಪವಾಗಿದ್ದರೆ ಸರ್ವಕ್ಕೂ ಶೂನ್ಯತೆ ಬರುವುದೆಂದು ಯಾರು ಹೇಳುತ್ತಾರೋ ಅವರು ಅದ್ಭುತರು. ಲೋಕದಲ್ಲಿ ಅಂಥವರು ಕಂಡಿಲ್ಲ. ಏಕೆಂದರೆ ಧರ್ಮಿಯಿಂದ ಬೇರೆಯಾದುದಕ್ಕೇ ಭೇದದ ಪ್ರತಿಯೋಗಿಯೆಂದು ಅಂಗೀಕರಿಸಲಾಗಿದೆ. ಈ ಭೇದವು ತನ್ನ ಧರ್ಮಿಯನ್ನು ಪ್ರತಿಯೋಗಿಯ ಕಡೆಯಿಂದಲೇ ವಿದಾರಣ ಮಾಡುತ್ತದೆ. ತನ್ನ ಸ್ವರೂಪವಾದ ಧರ್ಮಿಯಿಂದ ವಿದಾರಣ ಮಾಡುವುದಿಲ್ಲ. ಇದು ಪ್ರಮಾಣ ಸಿದ್ಧವು. ಘಟಸ್ವರೂಪವಾದ ಭೇದಕ್ಕೆ ಘಟವೇ ಪ್ರತಿಯೋಗಿಯಲ್ಲ, ಘಟದಿಂದ ಬೇರೆಯಾದುದೇ (ಉದಾಹರಣೆಗೆ ಪಟವು) ಪ್ರತಿಯೋಗಿಯಾಗುತ್ತದೆ. ಆದ್ದರಿಂದ ಭೇದಕ್ಕೆ ಧರ್ಮಿಸ್ವರೂಪತ್ವ ಒಪ್ಪಿದರೆ ಶೂನ್ಯತೆಯು ಉಂಟಾಗದು.

ಇನ್ನು ಭೇದವು ಸ್ವರೂಪ ವಿದಾರಣವೆಂದು ಇಟ್ಟುಕೊಂಡರೂ ಶೂನ್ಯತೆಯನ್ನು ಆಪಾದಿಸುವುದು ಅಯುಕ್ತವೆಂದು ಹೇಳುತ್ತಾರೆ –

**ವಿಭಾಗೇನಾಲ್ಪತೈವ ಸ್ಯಾತ್ಕುತ ಏವ ತು ಶೂನ್ಯತಾ ।।೧೪೭।।**

**ನ ಶೂನ್ಯಾನಾಂ ಹಿ ಸಂಯೋಗಾದ್ಭಾವೋ ವಸ್ತುನ ಇಷ್ಯತೇ ।**

**ವಿದಾರಣಾರ್ಥೋ ಧಾತುಶ್ಚ ವಿಭಾಗಗುಣವಾಚಕಃ ।।೧೪೮।।**

ಯಾವುದೇ ವಸ್ತುವನ್ನು ಎಷ್ಟು ವಿಭಾಗ ಮಾಡಿದರೂ ಕೊನೆಯಲ್ಲಿ ಅಲ್ಪ ಪರಿಮಾಣದ ಅವಶೇಷವೇ ಉಳಿಯುವುದು. ಆದ್ದರಿಂದ ವಿಭಾಗದಿಂದ ಅಲ್ಪತೆಯು ಉಂಟಾಗುವುದೇ ಹೊರತು ಶೂನ್ಯತೆಯಲ್ಲ. ಉದಾಹರಣೆಗೆ ತಂತುಗಳ ಸಂಯೋಗದಿಂದ ಉಂಟಾದ ಪಟವು ತಂತುವಿಭಾಗದಿಂದ ನಾಶವಾದಾಗ ತಂತುಗಳು ಉಳಿಯುವುದಾಗಿ ಪ್ರತ್ಯಕ್ಷದಿಂದ ತಿಳಿದುಬರುತ್ತದೆ. ಶೂನ್ಯಗಳ ಸಂಯೋಗದಿಂದ ಪಟವು ಉತ್ಪತ್ತಿಯಾಗಿದ್ದರೆ ವಿದಾರಣದ ನಿಮಿತ್ತ ಕೊನೆಯಲ್ಲಿ ಶೂನ್ಯವೇ ಉಳಿಯಬೇಕಿತ್ತು. ಶೂನ್ಯಗಳ ಸಂಯೋಗದಿಂದ ವಸ್ತುಗಳ ಉತ್ಪತ್ತಿ ಎಂಬುದು ಪ್ರಾಮಾಣಿಕರಿಂದ ಅಂಗೀಕರಿಸಲ್ಪಡುವುದಿಲ್ಲ. ಇನ್ನು 'ಭಿದ' ಧಾತುವಿಗೆ ವಿದಾರಣವೆಂಬ ಅರ್ಥದಲ್ಲಿ ಅಭಿಪ್ರಾಯವಿದ್ದರೆ, ಆಗ ಭೇದ ಶಬ್ದವು ವಿಭಾಗ ಗುಣವಾಚಕವಾಗುವುದೇ ಹೊರತು ಅನ್ಯೋನ್ಯಾಭಾವವೆಂಬ ಭೇದವಾಚಕವಾಗದು. ಉದಾಹರಣೆಗೆ 'ಘಟವು ಭಿನ್ನವಾಯಿತು' ಎಂದು ಹೇಳಿದಾಗ ಒಡೆಯಿತು ಎಂದು ಅರ್ಥವಾಗುತ್ತದೆ. ಆದರೆ 'ಘಟದಿಂದ ಗಗನವು ಭಿನ್ನ' ಎಂಬಲ್ಲಿ ಭೇದವೆಂಬ ಅರ್ಥ ತಿಳಿದುಬರುತ್ತದೆ.

**ಅವಿದಾರಣೇऽಪಿ ಹ್ಯಾಸ್ಯಸ್ಯ ಭಿನ್ನಾವೋಷ್ಠೌ ಚ ತಸ್ಯ ಚ ।**

**ಅತ ಉನ್ಮತ್ತವಾಕ್ಯತ್ವಾನ್ಮಾಯಾವಾದೋ ಹ್ಯುಪೇಕ್ಷಿತಃ ।।೧೪೯।।**

ಮಾಯಾವಾದಿಯು ನಿರುತ್ತರನಾಗಿ ಬಾಯಿಯನ್ನು ಮುಚ್ಚಿಕೊಂಡಾಗ, ತುಟಿಗಳಿಗೆ ವಿದಾರಣ ಅಂದರೆ ವಿಭಾಗ ಕಂಡುಬರದಿದ್ದರೂ, ಆ ತುಟಿಗಳು ಭೇದವುಳ್ಳವುಗಳೇ ಆಗಿರುತ್ತವೆ. ಆದ್ದರಿಂದ ಲೋಕವಿರುದ್ಧವೂ, ಸ್ವಮತ ಹಾಗೂ ಪರಮತಗಳಿಗೆ ವಿರುದ್ಧವೂ ಆದ ಮಾಯಾವಾದವು ಉನ್ಮತ್ತನ ವಾಕ್ಯದಂತೆ ಸೂತ್ರಕಾರರಿಂದ ಉಪೇಕ್ಷಿತವಾಗಿದೆ.

ಹೀಗೆ ಇಲ್ಲಿಯವರೆಗೆ ಸಮವಾಯವನ್ನು ನಿರಾಕರಿಸಿ, ಈಗ ಸಂಬಂಧ ಪ್ರಸಂಗದಿಂದ ಗುಣ ಮುಂತಾದವುಗಳ ಪ್ರಸಕ್ತಿಯು ಬಂದುದರಿಂದ, ಈಶ್ವರನ ಗುಣಗಳ ವಿಷಯದಲ್ಲಿ ಸಂಖ್ಯಾ ವಿಪ್ರತಿಪತ್ತಿಯನ್ನು 'ನ ಚ' ಇತ್ಯಾದಿ ವಾಕ್ಯದಿಂದ ನಿರಾಕರಿಸುತ್ತಾರೆ –

**ನ ಚಾಮಂದಸದಾನಂದಸ್ಯಂದ್ಯನಂತಗುಣಾರ್ಣವಃ ।**

**ಈಶ್ವರೋऽಷ್ಟಗುಣತ್ವೇನ ಪ್ರಮೇಯೋऽಪ್ರಮಿತತ್ವತಃ ।।೧೫೦।।**

ಈಶ್ವರನಲ್ಲಿ ಎಂಟೇ ಗುಣಗಳುಂಟು ಎಂಬುದಾಗಿ ಈಶ್ವರನನ್ನು ತಿಳಿಯಬಾರದು. ಏಕೆಂದರೆ ಈಶ್ವರನಿಗೆ ಎಂಟೇ ಗುಣಗಳು ಎಂಬುದಕ್ಕೆ ಪ್ರಮಾಣವಿಲ್ಲ. ಆದರೆ ಈಶ್ವರನು ಕ್ಷೀರ ಸಮುದ್ರದಂತೆ ನಿರತಿಶಯ ನಿರ್ದುಷ್ಟ ಆನಂದವನ್ನು ಹರಿಸುವವನೂ, ಅನಂತ ಗುಣಗಳುಳ್ಳವನೂ ಎಂದು ತಿಳಿಯತಕ್ಕದ್ದು. ಕ್ಷೀರಸಮುದ್ರವು ಅಮೃತವನ್ನು ಹರಿಸುವಂತೆ ಈಶ್ವರನು ಅಮಿತವೂ ನಿರ್ದೋಷವೂ ಆದ ಆನಂದಾಮೃತವನ್ನು ಹರಿಸುವನು. ಕ್ಷೀರ ಸಮುದ್ರವು ಚಿಂತಾಮಣಿ ಮುಂತಾದ ಶುಭಕರವಾದ ಪದಾರ್ಥಗಳನ್ನು (ಗುಣಗಳನ್ನು) ಹೊಂದಿರುವಂತೆ ಈಶ್ವರನು ಅಪರಿಮಿತವಾದ ಆನಂದಾದಿ ಗುಣಗಳಿಂದ ಕೂಡಿರುವನು. ಎಂದು ತಾತ್ಪರ್ಯ.

**ಮಯ್ಯನಂತಗುಣೇಽನಂತೇ ಗುಣತೋಽನಂತವಿಗ್ರಹೇ ।**

**ಅನಂತಗುಣಮಾಹಾತ್ಮ್ಯಶಕ್ತಿಜ್ಞಾನಮಹಾರ್ಣವಃ ।।೧೫೧।।**

**ನಾರಾಯಣಃ ಪರೋಽಶೇಷಚೇತನೇಭ್ಯಃ ಪರಂ ಪದಮ್ ।**

"ಪ್ರತ್ಯೇಕವಾಗಿ ನಿರವಧಿಕವೂ ಅನಂತವೂ ಆದ ಅಸಂಖ್ಯಾತ ಗುಣವುಳ್ಳ ಹಾಗೂ ಅನಂತ ರೂಪವಿಶೇಷಗಳಿಂದ ಕೂಡಿದ ನನ್ನಲ್ಲಿ" ಎಂಬುದಾಗಿ ಶ್ರೀಮದ್ಭಗವದ್ಗೀತೆಯಲ್ಲಿ ಶ್ರೀಕೃಷ್ಣನೇ ತನ್ನ ಬಗ್ಗೆ ಹೇಳಿದ್ದಾನೆ. ಅದರ ಮುಂದಿನದು ಶ್ರುತಿವಾಕ್ಯ. ಅಪರಿಮಿತ ಪರಿಮಾಣದ ಅಪರಿಮಿತ ಗುಣವಿಶೇಷಗಳಿಂದ ಕೂಡಿರುವ, ಶಕ್ತಿ ಜ್ಞಾನಾದಿಗಳ ಮಹಾ ಸಮುದ್ರನಾದ ಸರ್ವೋತ್ತಮನಾದ ನಾರಾಯಣನು ಎಲ್ಲ ಚೇತನರಿಗಿಂತ ಉತ್ತಮನು.

**ಇತ್ಯಾದಿವೇದತದ್ವಾಕ್ಯೈರನಂತೈಶ್ಚಾವಸೀಯತೇ ।।೧೫೨।।**

**ಅನಂತಾಗುಣತಾ ವಿಷ್ಣೋಃ ಕಥಮೇವ ಹ್ಯಪೋದ್ಯತೇ ।**

ಈ ಪ್ರಕಾರವಾಗಿ ಭಗವದ್ಗೀತೆ, ಭಾಗವತ ಹಾಗೂ ವೇದವಾಕ್ಯಗಳಿಂದ ನಾರಾಯಣನ ಅನಂತಗುಣಪೂರ್ಣತೆಯು ನಿಶ್ಚಯವಾಗುತ್ತದೆ. ಹೀಗೆ ಪ್ರಮಾಣಗಳಿಂದ ನಿರ್ಣೀತವಾದ ವಿಷ್ಣುವಿನ ಅನಂತಗುಣಪೂರ್ಣತೆಯನ್ನು ಅಲ್ಲಗಳೆಯಲು ಹೇಗೆ ಸಾಧ್ಯ?

**ಯದ್ಯನಂತವಿಶೇಷಾಶ್ಚ ತಜ್ಜ್ಞಾನಾದೇವ ನಿವಾರಿತಾಃ ।।೧೫೩।।**

**ಕಥಂ ತತ್ತದ್ವಿಷಯತಾ ಸಾರ್ವಜ್ಞಾರ್ಥಂ ವಿಧೀಯತೇ ।**

ಒಂದು ಪಕ್ಷದಲ್ಲಿ ಈಶ್ವರನ ಜ್ಞಾನಾದಿಗಳಿಗೆ ಅನಂತ ವಿಶೇಷಗಳನ್ನು ನಿರಾಕರಿಸುವುದಾದರೆ, ಆಗ ಈಶ್ವರನ ಸಾರ್ವಜ್ಞತ್ವದ ನಿರ್ಣಯಕ್ಕಾಗಿ ಘಟಪಟಾದಿ

ಸಮಸ್ತವಸ್ತುವಿಷಯಕ ಜ್ಞಾನವು ಈಶ್ವರನಲ್ಲಿ ಇರುವುದೆಂದು ಅಂಗೀಕರಿಸುವುದು ಹೇಗೆ?

ಜ್ಞಪ್ತಿರೂಪವಾದ ಈಶ್ವರನ ಜ್ಞಾನವು ನಿರ್ವಿಶೇಷವೇ. ಆದರೆ ಅದು ಆಯಾಯ ಘಟ ಮುಂತಾದ ಉಪಾಧಿಗಳಿಂದ ಆಯಾಯ ವಿಷಯಕವೆನಿಸುತ್ತದೆ. ಇದರಂತೆಯೇ ಕೃತಿರೂಪ ಪ್ರಯತ್ನವೂ ನಿರ್ವಿಶೇಷವೇ ಆಗಿದ್ದರೂ ಸೃಷ್ಟ್ಯಾದಿ ಉಪಾಧಿ ನಿಮಿತ್ತವಾಗಿ ಆಯಾಯ ವಿಷಯಕವೆನಿಸುತ್ತದೆ. ಆದುದರಿಂದ ಸ್ವತಃ ನಿರ್ವಿಶೇಷನಾಗಿದ್ದರೂ ಔಪಾಧಿಕ ವಿಶೇಷಗಳಿಂದ ಸರ್ವಜ್ಞತ್ವ ಮುಂತಾದುದು ಯುಕ್ತವಾಗುತ್ತದೆ. ಹೀಗೆ ಆಕ್ಷೇಪಿಸಿದರೆ –

**ಔಪಾಧಿಕವಿಶೇಷಸ್ತು ಪೂರ್ವಮೇವ ನಿರಾಕೃತಃ ||೧೫೪||**

ಔಪಾಧಿಕವಾದ ವಿಶೇಷವಾದರೂ ಇದೆಯೋ ಇಲ್ಲವೋ? ಇದ್ದರೆ ನಿರ್ವಿಶೇಷತ್ವವು ಹೇಗೆ? ಇಲ್ಲವಾದರೆ ಮತ್ತೆ ಸರ್ವಜ್ಞತ್ವಾದಿಗಳಿಲ್ಲವೆಂಬ ಪ್ರಸಂಗವು ಬರುತ್ತದೆ. ಹೀಗೆ ಹಿಂದೆ ಹೇಳಿದ ಯುಕ್ತಿಯಿಂದಲೇ ಔಪಾಧಿಕ ವಿಶೇಷವೆಂಬುದು ನಿರಾಕರಿಸಲ್ಪಟ್ಟಿದೆ.

ವೈಶೇಷಿಕಾದಿಗಳೇ ಮೊದಲಾದ ಕೆಲವರು ಈಶ್ವರನ ಜ್ಞಾನವು ಸ್ವಪ್ರಕಾಶವಲ್ಲ ಎಂದು ಹೇಳುತ್ತಾರೆ. ಅದನ್ನು ಮುಂದಿನ ವಚನದಿಂದ ನಿರಾಕರಿಸುತ್ತಾರೆ –

**ಸ್ವಪ್ರಕಾಶತ್ವಮಪಿ ತು ಯೈರ್ಜ್ಞಾನಸ್ಯ ನಿವಾರಿತಮ್ ।**

**ಕಥಂ ಸರ್ವಜ್ಞತಾ ತಸ್ಯ ಸ್ವಜ್ಞಾನಾಧಿಗಮಂ ವಿನಾ ||೧೫೫||**

ಯಾರು ಈಶ್ವರನಿಗೆ ಸ್ವಪ್ರಕಾಶತ್ವವನ್ನು ಒಪ್ಪುವುದಿಲ್ಲವೋ ಅಂಥವರ ಮತದಲ್ಲಿ, ಈಶ್ವರನಿಗೆ ತನ್ನ ಜ್ಞಾನದ ಜ್ಞಾನವು ಇಲ್ಲದಿರುವುದರಿಂದ, ಸರ್ವಜ್ಞತೆಯು ಹೇಗೆ? ಅಂದರೆ ಅವರ ಮತದ ಪ್ರಕಾರ ಈಶ್ವರನಿಗೆ ಸರ್ವಜ್ಞತೆಯು ಇಲ್ಲವೆಂದಾಗುವುದು.

ಇನ್ನು ಈಶ್ವರನಿಗೆ ಸ್ವವಿಷಯಕ ಜ್ಞಾನವಿಲ್ಲದಿದ್ದರೂ ಸರ್ವಜ್ಞತ್ವವು ಸಂಭವಿಸುವುದು ಎಂಬುದಾಗಿ 'ಜ್ಞಾನಂ' ಇತ್ಯಾದಿ ವಾಕ್ಯದಿಂದ ಅವರ ಆಶಂಕೆಯನ್ನು ತಿಳಿಸುತ್ತಾರೆ –

**ಜ್ಞಾನಂ ವಿಶ್ವಾಧಿಗಂ ತ್ವೇಕಂ ತಜ್ಜ್ಞಾನವಿಷಯಂ ಪರಮ್ ।**

**ಇತಿ ಜ್ಞಾನದ್ವಯೇನೈವ ಸರ್ವವಿತ್ಪರಮೇಶ್ವರಃ ||೧೫೬||**

ಈಶ್ವರನಲ್ಲಿ ಎರಡು ಬಗೆಯ ಜ್ಞಾನವಿರುವುದು. ತನ್ನನ್ನು ಹೊರತು ಪಡಿಸಿ ಉಳಿದ ಸಮಸ್ತ ಪ್ರಪಂಚದ ಜ್ಞಾನವು ಒಂದು. ಆ ಜ್ಞಾನವಿಷಯಕವಾದ ಜ್ಞಾನವು

ಇನ್ನೊಂದು. ಈ ರೀತಿಯ ಜ್ಞಾನದ್ವಯದಿಂದ ಪರಮೇಶ್ವರನು ಸರ್ವಜ್ಞನೆನಿಸುವನು.

**ಇತಿ ಚೇದೇಷ ಏವಾರ್ಥಸ್ತಜ್ಜ್ಞಾನಾವಸಿತೋ ಯದಿ ।**

**ಸ್ವಪ್ರಕಾಶತ್ವಮೇವ ಸ್ಯಾಜ್ಞಾನಂ ಹ್ಯೇತದ್ವಿಶೇಷಣಮ್ ॥೧೫೭॥**

**ಜ್ಞಾನಾಂತರೇಣ ಚೇದತ್ರ ಭವೇದೇವಾನವಸ್ಥಿತಿಃ ।**

**ಸ್ವಪ್ರಕಾಶತ್ವಮೇತಸ್ಮಾದ್ದುರ್ನಿವಾರಂ ಸಮಾಪತೇತ್ ॥೧೫೮॥**

ಹೀಗೆ ಆಶಂಕಿಸಿದರೆ, 'ಜ್ಞಾನದ್ವಯವುಳ್ಳವನು ನಾನು' ಮುಂತಾದ ಅರ್ಥವೇ ಇವೆರಡರಲ್ಲಿ ಒಂದು ಜ್ಞಾನದಿಂದ ವಿಷಯೀಕರಿಸಲ್ಪಡುವುದಾದರೆ, ಆಗ ಆ ಜ್ಞಾನಕ್ಕೆ ಸ್ವಪ್ರಕಾಶತ್ವವು ಬಂದೇ ಬರುತ್ತದೆ. ಹೇಗೆಂದರೆ, ಈ ಜ್ಞಾನವು ಜ್ಞಾನವಿಷಯವಾದ ಅರ್ಥಕ್ಕೆ ವಿಶೇಷಣವಾಗುವುದು. ಒಂದು ಪಕ್ಷ ಮೂರನೆಯ ಜ್ಞಾನದಿಂದ ಈ ಅರ್ಥವು ವಿಷಯೀಕರಿಸಲ್ಪಡುವುದೆಂದು ಅಂಗೀಕರಿಸಿದರೆ ಅನವಸ್ಥಾ ದೋಷವು ಬಂದೇ ಬರುತ್ತದೆ. ಈ ಕಾರಣದಿಂದ ಸ್ವಪ್ರಕಾಶತ್ವವು ಅನಿವಾರ್ಯವಾಗಿ ಬಂದೇ ಬರುತ್ತದೆ. ಇನ್ನು ಈಶ್ವರನ ಜ್ಞಾನವನ್ನು ಅನಂತಗಳೆಂದು ಒಪ್ಪುತ್ತೇನೆ, ಆದರಲ್ಲಿ ದೋಷವೇನು ಎಂಬುದು ಸರಿಯಲ್ಲ. ಏಕೆಂದರೆ ಕಲ್ಪನಾಗೌರವವು ಪ್ರಾಪ್ತವಾಗುತ್ತದೆ. ಆದ್ದರಿಂದ ಒಂದೇ ಜ್ಞಾನಕ್ಕೆ ಸ್ವಪ್ರಕಾಶತ್ವವನ್ನು ಒಪ್ಪುವುದು ಉತ್ತಮ ಎಂದು ಅಭಿಪ್ರಾಯ.

ಇನ್ನು ಈಶ್ವರನು ಅನಂತಗುಣವುಳ್ಳವನು ಎನ್ನುವುದು ಯುಕ್ತವಲ್ಲ. ಏಕೆಂದರೆ ಇಪ್ಪತ್ತನಾಲ್ಕು ಗುಣಗಳಿಗಿಂತ ಹೆಚ್ಚಿನ ಗುಣಗಳು ಅಸಂಭವ. ಅವುಗಳಲ್ಲಿಯೂ ಸುಖ ದುಃಖಾದಿ ಕೆಲವು ಗುಣಗಳು ಈಶ್ವರನಲ್ಲಿ ಸಂಭವಿಸುವುದಿಲ್ಲ. ಈಶ್ವರನು ಸುಖವುಳ್ಳವನಾದರೆ ದುಃಖವುಳ್ಳವನೂ ಆಗಬೇಕಾಗುವುದು. ಆದ್ದರಿಂದ ಈಶ್ವರನು ಸುಖರಹಿತನು, ದುಃಖರಹಿತನಾಗಿರುವುದರಿಂದ, ಘಟವು ದೃಷ್ಟಾಂತವು. ಈ ರೀತಿಯ ಅನುಮಾನವನ್ನು 'ಸುಖವಾನ್' ಇತ್ಯಾದಿ ವಚನದಿಂದ ದೂಷಿಸುತ್ತಾರೆ –

**ಸುಖವಾನ್ ದುಃಖವಾಂಶ್ಚ ಸ್ಯಾದಿತಿ ವ್ಯಾಪ್ತಿಶ್ಚ ನೋ ಭವೇತ್ ।**

**ನಿರ್ದುಃಖತ್ವಂ ಮಹಾನಂದಃ ಶ್ರುತ್ಯೈವೇಶಸ್ಯ ಭಣ್ಯತೇ ॥೧೫೯॥**

ಸುಖವುಳ್ಳವನು ದುಃಖವುಳ್ಳವನೂ ಆಗಲಿ ಎಂಬ ವ್ಯಾಪ್ತಿಯು ಇರುವುದಿಲ್ಲ. ಈಶ್ವರನಿಗೆ ನಿರ್ದುಃಖತ್ವವೂ ಪರಿಪೂರ್ಣವಾದ ಆನಂದವತ್ವವೂ ಶ್ರುತಿಯಿಂದಲೇ ವರ್ಣಿತವಾಗಿದೆ. ಆ ಶ್ರುತಿಯು ಯಾವುದೆಂದರೆ –

**ಯೋಽಶನಾಯಾಪಿಪಾಸೇ ಚ ಶೋಕಾದೀಂಶ್ಚಾತಿವರ್ತತೇ ।**

**ಆನಂದಂ ಬ್ರಹ್ಮಣೋ ವಿದ್ವಾನ್ವಿಪಾಪ್ಮೇತ್ಯಾದಿಕಾ ಚ ಸಾ ॥೧೬೦॥**

ಯೋಽಶನಾಯಾ ಎಂಬುದರಿಂದ 'ಯೋಽಶನಾಯಾ ಪಿಪಾಸೇ ಶೋಕಂ ಮೋಹಂ ಜರಾಂ ಮೃತ್ಯುಮತ್ಯೇತಿ' ಎಂಬ ಶ್ರುತಿಯನ್ನು ಸಂಗ್ರಹಿಸಿದ್ದಾರೆ. ಈಶ್ವರನು ಹಸಿವು ನೀರಡಿಕೆ ಶೋಕ ಮುಂತಾದವನ್ನು ಅತಿಕ್ರಮಿಸಿದವನು ಎಂಬುದಾಗಿ ಈ ಶ್ರುತಿಯು ಹೇಳುತ್ತದೆ. 'ಆನಂದಂ ಬ್ರಹ್ಮಣೋ ವಿದ್ವಾನ್' ಎಂಬ ಶ್ರುತಿಯು ಬ್ರಹ್ಮನಿಗೆ ಆನಂದವನ್ನು ಹೇಳುತ್ತದೆ. 'ಯ ಆತ್ಮಾ ಅಪಹತಪಾಪ್ಮಾ' ಎಂಬ ಶ್ರುತಿಯು ಬ್ರಹ್ಮನು ಪಾಪರಹಿತನಾದವನು ಎಂದು ಹೇಳುತ್ತದೆ.

**ಈಶ್ವರಸ್ಯ ತಥೇಷ್ಟತ್ವಂ ದುಃಖಿತ್ವೋಪಾಧಿರಿತ್ಯಪಿ ।**

**ಉಕ್ತೇ ಕಿಮುತ್ತರಂ ಬ್ರೂಯಾತ್ ಶ್ರುತ್ಯನಾದರತತ್ಪರಃ ॥೧೬೧॥**

**ನ ಚಾತ್ಮದುಃಖಿತೇಚ್ಛಾ ಸ್ಯಾದತ ಏತನ್ನಿವಾರ್ಯತೇ ।**

ದುಃಖಿತ್ವವು ಇರಲಿ ಎಂಬ ಇಷ್ಟತ್ವವು, ಅಂದರೆ ಇಚ್ಛಾ ವಿಷಯತ್ವವು, ಈಶ್ವರನಿಗೆ ದುಃಖಿತ್ವ ಪ್ರಯೋಜಕವು. (ಅಪಿ ಶಬ್ದದಿಂದ ಅಧರ್ಮಾದಿಗಳೂ ದುಃಖಿತ್ವ ಪ್ರಯೋಜಕವು ಎಂಬುದನ್ನು ಗ್ರಹಿಸಬೇಕು). ಹೀಗೆ ಹೇಳಿದರೆ ಶ್ರುತಿಯ ಅನಾದರದಲ್ಲಿ ತತ್ಪರನಾದವನು ಏನೆಂದು ಉತ್ತರವನ್ನು ಹೇಳಬೇಕು? (ಬಾಧಕವಿಲ್ಲದೇ ತೋರಿದ ಅರ್ಥವನ್ನು ಪರಿತ್ಯಜಿಸುವುದೇ ಅನಾದರವು.)

ಈಶ್ವರನ ವಿಷಯದಲ್ಲಿ 'ಆನಂದೋ ಬ್ರಹ್ಮಣೋ ವಿದ್ವಾನ್' ಇತ್ಯಾದಿ ಶ್ರುತಿಗಳಿರುವುದರಿಂದ, ಸುಖಿತ್ವವು ಇದ್ದರೂ ಉಪಾಧಿಯು ಇರುವುದಿಲ್ಲ. ಯಾವನಿಗೂ ತನಗೆ ದುಃಖಿತ್ವವು ಬರಲಿ ಎಂಬ ಇಚ್ಛೆಯು ಇಲ್ಲದಿರುವುದರಿಂದ, ದುಃಖಿತ್ವವು ಬರಲಿ ಎಂಬ ಇಚ್ಛಾವಿಷಯತ್ವರೂಪ ಉಪಾಧಿಯೂ ನಿರಾಕೃತವಾಗುತ್ತದೆ.

ಹಾಗಾದರೆ 'ಆನಂದಂ' ಇತ್ಯಾದಿ ಶ್ರುತಿಯು ಈಶ್ವರನಿಗೆ ಸುಖವನ್ನು ಹೇಳುವುದಿಲ್ಲ. ಏಕೆಂದರೆ ಅದು ದುಃಖದ ಅಭಾವರೂಪವಾಗಿದೆ. ಏಕೆಂದರೆ ಈಶ್ವರನು ಸುಖಿಯಾದರೆ ದುಃಖಿಯೂ ಆಗಬೇಕಾದೀತು. ಹೀಗೆ ಆಶಂಕಿಸಿದರೆ –

**ಸಹದರ್ಶನಮಾತ್ರೇಣ ಶ್ರುತೀನಾಮಪಲಾಪಕಃ ॥೧೬೨॥**

**ಯಜ್ಞಾದೇರಪಿ ಪಾಪಸ್ಯ ಹೇತುತ್ವಂ ಹಿಂಸಯಾ ಯುತೇಃ ।**

**ನಾನುಮಾತಿ ಕಥಂ ತತ್ರ ಯದ್ಯುಪಾಧಿರ್ನಿಷಿದ್ಧತಾ ॥೧೬೩॥**

**ಅದುಃಖಿತ್ವೇನ ಚಾನುಕ್ತಿಃ ಕಥಂ ನೋಪಾಧಿತಾಂ ವ್ರಜೇತ್ ।**

ಸಾಧ್ಯದಿಂದ ಸಾಧನಕ್ಕೆ ಸಾಮಾನಾಧಿಕರಣ್ಯ ದರ್ಶನವೇ ಸಹದರ್ಶನ ಎನಿಸುತ್ತದೆ. ಇಂಥಹ ಸಹದರ್ಶನ ಮಾತ್ರದಿಂದಲೇ ಈಶ್ವರನಿಗೆ ಆನಂದವನ್ನು

ಪ್ರತಿಪಾದಿಸುವ ಶ್ರುತಿಗಳಿಗೆ ಸ್ವಾರ್ಥವನ್ನು ಪರಿತ್ಯಾಗ ಮಾಡುವುದು ಸರಿಯಲ್ಲ. ಹೀಗೆ ಅಪಲಾಪ ಮಾಡುವವನು ಹಿಂಸಾದಿ ಪಾಪಯುಕ್ತವಾದುದೆಂಬ ಯುಕ್ತಿಯಿಂದ ಯಜ್ಞಾದಿಗಳಿಗೂ ಪಾಪಸಾಧನತ್ವವನ್ನು ಅನುಮೇಯಿಸುವುದಿಲ್ಲ ಏಕೆ? ಪಾಪಸಾಧನತ್ವದಲ್ಲಿ ನಿಷಿದ್ಧತ್ವವು ಉಪಾಧಿಯಾದರೆ, ಅದುಃಖಿಯೆಂದು ಹೇಳದಿರುವುದು ಅಂದರೆ ದುಃಖಿಯೆಂಬ ಉಕ್ತಿಯು ಕೂಡ ಇಲ್ಲಿ ಉಪಾಧಿಯು ಹೇಗೆ ಆಗಲಾರದು?

ಜೀವರಿಗೆ ದುಃಖಿತ್ವೇನ ಉಕ್ತಿಯು ಯಾವ ಶ್ರುತಿವಾಕ್ಯದಿಂದ ತಿಳಿದುಬರುತ್ತದೆ ಎಂದರೆ ಅದನ್ನು ಹೇಳುತ್ತಾರೆ –

**ಅದುಃಖಮಿತರತ್ಸರ್ವಂ ಜೀವಾ ಏವ ತು ದುಃಖಿನಃ ॥೧೬೪॥**

**ತೇಷಾಂ ದುಃಖಪ್ರಹಾಣಾಯ ಶ್ರುತಿರೇಷಾ ಪ್ರವರ್ತತೇ ।**

**ಇತಿ ಶ್ರುತಿರ್ಹಿ ಪರಮಾ ಶ್ರುತ್ಯುಕ್ತಿರ್ಯದಿ ಕಾರಣಮ್ ॥೧೬೫॥**

**ಕಿಂ ಕಾರ್ಯಮನುಮಾನೇನ ಗಲಸ್ತನಸಮೇನ ಹಿ ।**

ಜೀವವ್ಯತಿರಿಕ್ತವಾದುದೆಲ್ಲವೂ ದುಃಖರಹಿತವು. ಜೀವರೇ ದುಃಖಿಗಳು. ಅವರ ದುಃಖ ಪರಿಹಾರಕ್ಕಾಗಿ ಈ ಶ್ರುತಿಯು ದುಃಖ ಪರಿಹಾರ ಸಾಧನವಾದ ಪರಮಾತ್ಮನನ್ನು ಪ್ರತಿಪಾದಿಸುತ್ತದೆ ಎಂದು ಪರಮಶ್ರುತಿಯು ಹೇಳುತ್ತದೆ.

ಶ್ರುತಿವಚನವು ಯಥಾರ್ಥಜ್ಞಾನಕ್ಕೆ ಕಾರಣವಾದ ಪಕ್ಷದಲ್ಲಿ, ಅಜಾಗಲಸ್ತನಕ್ಕೆ ಸದೃಶವಾದ ಅನುಮಾನದಿಂದ ಪ್ರಯೋಜನವೇನು? (ಆಡಿನ ಕುತ್ತಿಗೆಯಿಂದ ಕೆಳಗೆ ಜೋತುಬಿದ್ದಿರುವ ತೊಗಲಿನಿಂದ ಏನೂ ಪ್ರಯೋಜನವಿಲ್ಲ. ಅದರಂತೆಯೇ ಈ ಅನುಮಾನವು ವ್ಯರ್ಥವೆಂದು ಭಾವ) 'ಈಶ್ವರನು ನಿರ್ದುಃಖನಾದ್ದರಿಂದ ಸುಖಿಯಲ್ಲ, ಘಟದಂತೆ' ಎಂಬ ಅನುಮಾನವು 'ಆನಂದಂ ಬ್ರಹ್ಮಣೋ ವಿದ್ವಾನ್' ಇತ್ಯಾದಿ ಶ್ರುತಿಯಿಂದ ಬಾಧಿತವಾಗುವುದು. ಆದ್ದರಿಂದ ವಿವಕ್ಷಿತಾರ್ಥಕ್ಕೆ ಸಾಧಕವಾಗದ ಅನುಮಾನವು ಉಪೇಕ್ಷಣೀಯವೆಂದು ಭಾವ.

ಇನ್ನು ಶ್ರುತಿಯು ಪ್ರಮಾಣವೇ. ಆದರೆ ಅನುಮಾನಕ್ಕೆ ವಿರುದ್ಧವಾದುದರಿಂದ ತೋರಿದ ಅರ್ಥವನ್ನು ಪರಿತ್ಯಾಗಮಾಡಿ, ದುಃಖಾಭಾವ ಪರವಾಗಿ 'ಆನಂದಂ' ಇತ್ಯಾದಿ ಶ್ರುತಿಯ ವ್ಯಾಖ್ಯಾನವನ್ನು ಮಾಡಬೇಕು ಎಂದು ಆಶಂಕಿಸಿದರೆ –

**ಅನುಮಾನೇನ ಯದ್ಯರ್ಥಃ ಶ್ರುತಿದೃಷ್ಟೋಽಪ್ಯಪೋದ್ಯತೇ ॥೧೬೬॥**

**ಪೂರ್ವೋಕ್ತೇನ ಪ್ರಕಾರೇಣ ನೇಶ್ವರೋ ಧರ್ಮ ಏವ ಚ ।**

**ಸ್ಯಾತ್ತತ್ಫಲಂ ಚ ತೇನಾತ್ರ ಶ್ರುತಿರೇವ ಪ್ರಮಾ ಭವೇತ್ ॥೧೬೭॥**

ಶ್ರುತಿಸಿದ್ಧವಾದ ಅರ್ಥವನ್ನು ಅನುಮಾನದಿಂದ ನಿರಾಕರಿಸುವ ಪಕ್ಷದಲ್ಲಿ, ಹಿಂದೆ ಹೇಳಿದ ಪ್ರಕಾರದಿಂದ (ಶಾಸ್ತ್ರಯೋನಿತ್ವಾಧಿಕರಣದಲ್ಲಿ 'ಪುಂಸ್ಟ್ವಹೇತು ಬಲಾದೇವ' ಎಂದು ಆಚಾರ್ಯರಿಂದ ಹೇಳಲ್ಪಟ್ಟ 'ಈಶ್ವರಃ ನ ಜಗತ್ಕರ್ತಾ ಪುಂಸ್ತ್ವಾತ್ ದೇವದತ್ತವತ್' ಎಂಬ ಅನುಮಾನದಿಂದ) ಈಶ್ವರನೂ, ಧರ್ಮವೂ ಹಾಗೂ ಅದರ ಫಲವೂ ಇಲ್ಲದೇ ಹೋಗಲಿ. ಹೀಗೆ ಅನಿಷ್ಟವು ಬರುವ ಕಾರಣದಿಂದ, ಈಶ್ವರನ ಆನಂದಾದಿ ವಿಷಯದಲ್ಲಿ ಶ್ರುತಿಯೇ ಪ್ರಮಾಣವಾಗುತ್ತದೆ. ಅನುಮಾನವು ಶ್ರುತಿಗೆ ಬಾಧಕವಾದುದು ಎಲ್ಲಿಯೂ ಕಂಡಿಲ್ಲ. ಇನ್ನು ಶ್ರುತಿಯಿಂದಲೇ ಅನುಮಾನವು ಬಾಧಿತವಾಗುವುದು.

ಹಾಗಾದರೆ ಶ್ರುತಿಯು ಅಪ್ರಮಾಣವಾಗದಿರಲಿ ಮತ್ತು ಅದಕ್ಕೆ ಅನುಮಾನದ ಬಾಧದಿಂದ ಅರ್ಥಾಂತರವೂ ಬೇಡ. ಆದರೂ ಅದು ಅನುಮಾನಕ್ಕೆ ಬಾಧಕವೇಕೆ? ಸಮಬಲವಾದ್ದರಿಂದ ಪ್ರತಿರೋಧಕವಾದರೂ ಆಗಬಹುದು. ಹೀಗೆ ಆಶಂಕಿಸಿದರೆ –

**ಈಶಸ್ಯಾನುಮಯಾ ಸಿದ್ಧೇಃ ಶ್ರುತಿರ್ಧರ್ಮಿಪ್ರಮಾ ಭವೇತ್ ।**

ಶ್ರುತಿಯಿಂದ ಬೇರೆಯಾದ ಪ್ರಮಾಣದಿಂದ ಈಶ್ವರನಿಗೆ ಸಿದ್ಧಿಯಿಲ್ಲವು. ಆದ್ದರಿಂದ ಶ್ರುತಿಯು ಧರ್ಮಿಗ್ರಾಹಕ ಪ್ರಮಾಣವಾಗುವುದು. ಅನುಮಾನವು ಪ್ರಮಾಣಾಂತರದಿಂದ ಸಿದ್ಧವಾದ ಧರ್ಮಿಯ ಬಗ್ಗೆ ಪ್ರವೃತ್ತವಾಗುತ್ತದೆ. ಇಲ್ಲದಿದ್ದರೆ ಇಲ್ಲ. ಇಲ್ಲಿ ಈಶ್ವರನು ಧರ್ಮಿಯು. ಅವನು ಅನುಮಾನ ಪ್ರತ್ಯಕ್ಷ ಮುಂತಾದ ಪ್ರಮಾಣಗಳಿಂದ ಸಿದ್ಧಿಸುವುದಿಲ್ಲ. ಈಶ್ವರನ ವಿಷಯದಲ್ಲಿ ಶ್ರುತಿಯೊಂದೇ ಪ್ರಮಾಣವು.

**ತಯಾ ಸರ್ವಗುಣೈಃ ಪೂರ್ಣ ಈಶ ಉಕ್ತೋ ಯತಸ್ತತಃ ॥೧೬೮॥**

**ಅನಾನಂದಾನುಮಾನಸ್ಯ ಧರ್ಮಿಗ್ರಾಹಿವಿರೋಧತಃ ।**

**ನ ಪ್ರಮಾಣಂ ಭವೇತ್ತಸ್ಮಾನ್ನಾನುಮಾತ್ರೋಪಯೋಗಿನೀ ॥೧೬೯॥**

ಆ ಶ್ರುತಿಯು ಶ್ರೀಹರಿಯನ್ನು ಸಮಸ್ತಗುಣಗಳಿಂದ ಪೂರ್ಣನೆಂದು ಹೇಳುತ್ತದೆ. ಆದ್ದರಿಂದ ಈಶ್ವರನಿಗೆ ದುಃಖಿತ್ವಸಾಧಕ ಅನುಮಾನಕ್ಕೆ ಧರ್ಮಿಸ್ವರೂಪ ಗ್ರಾಹಕವಾದ ಶ್ರುತಿಯಿಂದ ವಿರೋಧವು ಬರುವುದರಿಂದ, ಅದು ಪ್ರಮಾಣವಾಗಲಾರದು. ಈಶ್ವರನ ವಿಷಯದಲ್ಲಿ ಪ್ರಯೋಜನವೂ ಆಗಲಾರದು.

ವೈಶೇಷಿಕಾದಿ ದರ್ಶನದಲ್ಲಿ ಮತ್ತೊಂದು ಯುಕ್ತಿವಿರೋಧವೆಂಬ ದೋಷವನ್ನು ತೋರಿಸುತ್ತ 'ನಿತ್ಯಮೇವ ಚ ಭಾವಾತ್' ಎಂಬ ಸೂತ್ರವನ್ನು 'ನಿತ್ಯೇಚ್ಛತ್ವಾತ್' ಇತ್ಯಾದಿ ವಚನದಿಂದ ವ್ಯಾಖ್ಯಾನಿಸುತ್ತಾರೆ –

**ನಿತ್ಯೇಚ್ಛತ್ವಾತ್ಪರೇಶಸ್ಯ ಪರಮಾಣುಸದಾತ್ವತಃ ।**

**ಅದೃಷ್ಟಕಾಲಯೋಶ್ಚೈವ ಭಾವಾತ್ಕಾರ್ಯಂ ಸದಾ ಭವೇತ್ ।।೧೭೦।।**

ಈಶ್ವರನು ನಿತ್ಯವಾದ ಇಚ್ಛೆಯುಳ್ಳವನಾದ್ದರಿಂದ, ಪರಮಾಣುಗಳು ಯಾವಾಗಲೂ ಇರುವಂಥವಾದ್ದರಿಂದ ಹಾಗೂ ಅದೃಷ್ಟ ಕಾಲ ಇವುಗಳಿಗೆ ಪ್ರಲಯದಲ್ಲಿಯೂ ಸ್ಥಿತಿಯು ಇರುವುದರಿಂದ, ವೈಶೇಷಿಕರ ಪ್ರಕಾರ ಕಾರ್ಯವು ಯಾವಾಗಲೂ ಆಗಬೇಕಾಗುವುದು.

ಈಶ್ವರನ ಇಚ್ಛೆಯು ನಿತ್ಯವಾಗಿದ್ದರೂ ಕಾಲಾದಿಗಳು ನಿತ್ಯವೇ ಆಗಿದ್ದರೂ ನಿತ್ಯವೂ ಸೃಷ್ಟ್ಯಾದಿ ಕಾರ್ಯವು ಆಗಬೇಕಿಲ್ಲ ಎಂದು ಹೇಳುತ್ತಾರೆ –

**ನ ಹಿ ಕಾಲವಿಭೇದೋಽಸ್ತಿ ತತ್ಪಕ್ಷೇ ಅಸ್ಮನ್ಮತೇ ಹರೇಃ ।**

**ವಿಶೇಷಕಾಲ ಏವೈತತ್ಸೃಷ್ಟ್ಯಾದೀಚ್ಛಾ ಸದಾತನಾ ।।೧೭೧।।**

ವೈಶೇಷಿಕರ ಮತದಲ್ಲಿ ಕಾಲ ಆಕಾಶ ದಿಕ್ಕುಗಳು ಒಂದೊಂದೇ ಇರುವುದು. ಕಾಲವಿಶೇಷ ಇತ್ಯಾದಿ ಅವಾಂತರ ಪ್ರಭೇದಗಳನ್ನು ಅವರು ಒಪ್ಪುವುದಿಲ್ಲ. ಆದರೆ ನಮ್ಮ ಮತದಲ್ಲಿ ಹರಿಯ ಇಚ್ಛೆಯು ಯಾವಾಗಲೂ ಇರುವಂಥಹದು. ಆದರೂ ವಿಶೇಷ ಕಾಲದಲ್ಲಿಯೇ ಈ ಮಹದಾದಿಗಳು ಸೃಷ್ಟಿಯು ಆಗುವುದು ಎಂಬ ಹರಿಯ ಇಚ್ಛೆಗೆ ಅನುಸಾರವಾಗಿ ಸೃಷ್ಟ್ಯಾದಿ ಕಾರ್ಯಗಳು ಆಗುವುವು.

**ವಿಶೇಷಾಶ್ಚೈವ ಕಾಲಸ್ಯ ಹರೇರಿಚ್ಛಾವಶಾಃ ಸದಾ ।**

**ಸರ್ವೇ ನಿಮೇಷಾ ಇತಿ ಹಿ ಶ್ರುತಿರೇವಾಹ ಸಾದರಮ್ ।।೧೭೨।।**

ಕೇವಲ ಮಹದಾದಿಗಳೇ ಅಲ್ಲ, ಆದರೆ ಕಾಲದ ವಿಶೇಷಗಳಾದ ಕ್ಷಣ ಲವಾದಿಗಳೂ ಸಹ ಯಾವಾಗಲೂ ಶ್ರೀಹರಿಯ ಇಚ್ಛೆಯ ಅಧೀನವಾಗಿಯೇ ಇರುತ್ತವೆ. 'ಸರ್ವೇ ನಿಮೇಷಾ ಜಜ್ಞಿರೇ' ಎಂಬ ಶ್ರುತಿಯೇ ಕಾಲವಿಶೇಷಗಳಿಗೆ ಈಶ್ವರನಿಂದ ಉತ್ಪತ್ತಿಯನ್ನು ಸಾದರದಿಂದ ಹೇಳುತ್ತದೆ. ಈ ಶ್ರುತಿಯು ಕಾಲದ ನಿಮೇಷಾದಿ ಉಪಾಧಿಗಳಿಗೆ ಈಶ್ವರನಿಂದ ಉತ್ಪತ್ತಿಯನ್ನು ಹೇಳುತ್ತದೆಯೇ ಹೊರತು ಕಾಲಕ್ಕೆ ಉತ್ಪತ್ತಿಯನ್ನಲ್ಲ. ಸದಾ ಎನ್ನುವ ಶಬ್ದವು ಏಕಕಾಲದಲ್ಲಿ ಎಲ್ಲ ಕ್ಷಣಗಳ ಉತ್ಪತ್ತಿಯೆಂದು ಹೇಳುವುದಿಲ್ಲ, ನಿರಂತರ ಪ್ರವಾಹರೂಪದಿಂದ ಎಂಬ ಅರ್ಥವು ಹೇಳಲ್ಪಡುತ್ತದೆ.

ಇನ್ನು ನಿಮೇಷ ಮುಂತಾದ ಶಬ್ದಗಳು ಕಣ್ಣು ರೆಪ್ಪೆಗಳ ಸಂಯೋಗಾದಿ ವಾಚಕಗಳು, ಸಾಕ್ಷಾತ್ತಾಗಿ ಕಾಲವಾಚಕಗಳಲ್ಲ. ಆದ್ದರಿಂದ ಈ ಶ್ರುತಿಯು ಸ್ಪಷ್ಟವಾಗಿ ಕಾಲಕ್ಕೇ ಈಶ್ವರನಿಂದ ಜನನವನ್ನು ಪ್ರತಿಪಾದಿಸುವುದರಲ್ಲಿ ಸಮರ್ಥವಲ್ಲ ಎಂದು ಆಶಂಕಿಸಿದರೆ, ಈ ಬಗ್ಗೆ ಸ್ಪಷ್ಟವಾದ ಸ್ಮೃತಿಯನ್ನು ಹೇಳುತ್ತಾರೆ –

**ಉದೀರಯತಿ ಕಾಲಾಖ್ಯಾಂ ಶಕ್ತಿಮಿತ್ಯಸ್ಯ ವಾಗಪಿ ।**

ಉದೀರಯತಿ ಇತ್ಯಾದಿ ವಚನದಿಂದ 'ಸೋಽಂಽತಃ ಶರೀರೇರ್ಪಿತ ಭೂತಸೂಕ್ಷ್ಮಃ ಕಾಲಾತ್ಮಿಕಾಂ ಶಕ್ತಿಮುದೀರಯಾನಃ' ಎಂಬ ಭಾಗವತ ವಚನವನ್ನು ಸ್ಮರಿಸುತ್ತಾರೆ. ಈ ಸ್ಮೃತಿಯು ಕಾಲಕ್ಕೆ ಈಶ್ವರನಿಂದ ಉತ್ಪತ್ತಿಯನ್ನು ಹೇಳುತ್ತದೆ.

ಹಾಗಾದರೆ ಉತ್ಪತ್ತಿಯುಳ್ಳ ಎಲ್ಲ ವಸ್ತುಗಳಿಗೂ ಕಾಲವಂತೂ ನಿಮಿತ್ತವು. ಹಾಗೂ ಕಾಲದ ಉತ್ಪತ್ತಿಯಲ್ಲಿ ನಿಮಿತ್ತವಾದ ಬೇರೆ ಕಾಲವೆಂಬುದಿಲ್ಲ. ಆದ್ದರಿಂದ ಕಾಲದ ಉತ್ಪತ್ತಿಯು ಹೇಗೆ? ಎಂಬ ಆಶಂಕೆಯನ್ನು 'ಕಾಲಸ್ಯ' ಇತ್ಯಾದಿ ವಚನದಿಂದ ಪರಿಹರಿಸುತ್ತಾರೆ –

**ಕಾಲಸ್ಯ ಕಾಲಗತ್ವೇನ ನ ವಿರೋಧೋಽಸ್ತಿ ಕಶ್ಚನ ।।೧೭೩।।**

**ಅಸಂಖ್ಯಾತವಿಶೇಷತ್ವಾದಿಚ್ಛಾಯಾ ಅಪಿ ಸರ್ವದಾ ।**

ಕಾಲಕ್ಕೆ ಕಾಲಗತತ್ವವು ಇರುವುದರಿಂದ ಯಾವುದೇ ವಿರೋಧವು ಇಲ್ಲ. ಸರ್ವದಾ ಇರುತ್ತಿದ್ದರೂ ಈಶ್ವರೇಚ್ಛೆಗೆ ಶಕ್ತಿ ವ್ಯಕ್ತಿಗಳೆಂಬ ರೂಪದಿಂದಿರುವ ಸಿಸೃಕ್ಷಾತ್ವ ಮುಂತಾದ ಅಸಂಖ್ಯ ವಿಶೇಷಗಳಿರುವುದರಿಂದ, ಸೃಷ್ಟ್ಯಾದಿ ಸಮಯ ನಿಯಮವು ಯುಕ್ತವಾಗುತ್ತದೆ.

ಇನ್ನು ಕಾಲವಿಶೇಷದಲ್ಲಿ ಸೃಜಿಸುವೆನು ಇತ್ಯಾದಿ ಪ್ರಕಾರದಲ್ಲಿರುವ ಭಗವದಿಚ್ಛೆಗೆ ವೈಯರ್ಥ್ಯವು ಬರುವುದಿಲ್ಲ. ಆದರೂ ಕಾಲವು ತನ್ನಲ್ಲಿಯೇ ಇರುವುದೋ ಅಥವಾ ಕಾಲಾಂತರದಲ್ಲಿರುವುದೋ ಎಂದು ಆಶಂಕಿಸಿದರೆ, ಇವೆರಡು ಶಂಕೆಯೂ ಸರಿಯಲ್ಲ ಎಂಬುದಾಗಿ ಹೇಳುತ್ತಾರೆ –

**ಈಶೋ ದೇಶಶ್ಚ ಕಾಲಶ್ಚ ಸ್ವಗತಾ ಏವ ಸರ್ವದಾ ।।೧೭೪।।**

**ಈಶಾಧೀನೌ ಚ ತೌ ನಿತ್ಯಂ ತದಾಧಾರೌ ಚ ತದ್ಗತೌ ।**

ಈಶ್ವರ, ದೇಶ (ಅವ್ಯಾಕೃತಾಕಾಶ) ಹಾಗೂ ಕಾಲ ಇವುಗಳು ಯಾವಾಗಲೂ ತಮ್ಮಲ್ಲಿಯೇ ತಾವು ಇರತಕ್ಕವುಗಳು. ಆದರೂ ದೇಶಕಾಲಗಳು ಸರ್ವದಾ ಈಶ್ವರನ ಅಧೀನಗಳೇ. ಅವುಗಳಿಗೆ ಶ್ರೀಹರಿಯೇ ಆಧಾರ. ಅವು ಶ್ರೀಹರಿಯಲ್ಲಿಯೇ ಇರತಕ್ಕವು.

**ಇತಿ ಶ್ರುತಿರಪಿ ಪ್ರಾಹ ಕಾಲೇ ಸ್ವೋದ್ದಿಷ್ಟ ಏವ ತು ।।೧೭೫।।**

**ತತ್ಕಾಲಸೃಷ್ಟಿಮೇವಾತೋ ವಾಂಛತೀಶಃ ಸದೈವ ಹಿ ।**

**ಸ್ಯಾತ್ಕಾಲಃ ಸ ತದೈವೇತಿ ಕಾಲಸ್ಯ ಸ್ವಗತತ್ವತಃ ।।೧೭೬।।**

ಹೀಗೆ ಶ್ರುತಿಯೂ ಕೂಡ ಕಾಲಕ್ಕೆ ಸ್ವಗತತ್ವನ್ನು ಹೇಳುತ್ತದೆ. ಇದು ಸಾಕ್ಷಿಸಿದ್ಧವೂ ಆಗಿದೆ. ಹೀಗೆ ಕಾಲವು ಸ್ವಗತವಾದ್ದರಿಂದ ಆ ಕಾಲವು ಆ ಕಾಲದಲ್ಲಿಯೇ ಆಗಲಿ ಎಂಬುದಾಗಿ ಶ್ರೀಹರಿಯು ಯಾವಾಗಲೂ ತನಗೆ ಇಷ್ಟವಾದ ಕಾಲದಲ್ಲಿಯೇ ಆಯಾಯ ಕಾಲದ ಸೃಷ್ಟಿಯನ್ನು ಮಾಡಲು ಇಚ್ಛಿಸುತ್ತಾನೆ.

**ಸ್ವಭಾವಾದೇವ ಹೀಚ್ಛೈಷಾ ದೇವಸ್ಯೈಷ ಇತಿ ಶ್ರುತೇಃ ।**

**ಸ್ವಭಾವೋऽಪಿ ಪರೇಶೇಚ್ಛಾವಶ ಇತ್ಯುದಿತಃ ಪುರಾ ।।೧೭೭।।**

**ನಿತ್ಯಾ ಅನಿತ್ಯಾಶ್ಚ ತತಸ್ತದಧೀನಾ ಇತಿ ಶ್ರುತಿಃ ।**

ಈಶ್ವರನ ವಿಚಿತ್ರವಾದ ಈ ಇಚ್ಛೆಯು ಸ್ವಭಾವದಿಂದಲೇ. ಅದು ಕಾಲಾಧೀನವಲ್ಲ. ಆದ್ದರಿಂದ ಯಾವುದೇ ದೋಷವಿಲ್ಲ. ಏಕೆಂದರೆ 'ದೇವಸ್ಯೈಷ ಸ್ವಭಾವೋऽಯಂ ಆಪ್ತಕಾಮಸ್ಯ ಕಾ ಸ್ಪೃಹಾ' ಎಂಬ ಶ್ರುತಿಯಿಂದ ಇದು ತಿಳಿದುಬರುತ್ತದೆ. ಪರಮಾತ್ಮನ ಸ್ವಭಾವವಾದರೋ ಅವನ ಇಚ್ಛಾಧೀನವಾದುದೇ ಹೊರತು ಪರಾಧೀನವಲ್ಲ ಎಂದು ಹಿಂದೆಯೇ ('ಚೇತನಾನಾಂ ವಿಶೇಷೋ ಯಃ ಸ್ವಭಾವೋऽಪೀಶ್ವರಾರ್ಪಿತಃ' ಎಂಬ ಲಿಂಗಪಾದೀಯ ಅಂತರಾಧಿಕರಣದ ಅನುವ್ಯಾಖ್ಯಾನದಲ್ಲಿ) ಹೇಳಲ್ಪಟ್ಟಿದೆ. ಹಿಂದೆ ಹೇಳಿದ ಪ್ರಮಾಣವನ್ನಷ್ಟೇ ಸ್ಮರಿಸಬೇಕೆಂದಿಲ್ಲ, ಬೇರೆ ಪ್ರಮಾಣವೂ ಉಂಟು ಎಂದು 'ನಿತ್ಯಾಃ' ಇತ್ಯಾದಿ ವಚನದಿಂದ ಹೇಳುತ್ತಾರೆ. ನಿತ್ಯ ಹಾಗೂ ಅನಿತ್ಯವಾದ ಸಮಸ್ತವೂ ಈಶ್ವರಾಧೀನವು ಎಂಬುದಾಗಿ ಶ್ರುತಿಯು ಎಲ್ಲ ವಸ್ತುಗಳಿಗೂ ಈಶಾಧೀನತ್ವವನ್ನು ಹೇಳುತ್ತದೆ.

ವೈಶೇಷಿಕರ ಮತದಲ್ಲಿ ಇನ್ನೂ ಒಂದು ಅನುಪಪತ್ತಿಯನ್ನು ತೋರಿಸುವ ಎರಡು ಸೂತ್ರಗಳು –

**ಓಂ ರೂಪಾದಿಮತ್ತ್ವಾಚ್ಚ ವಿಪರ್ಯಯೋ ದರ್ಶನಾತ್ ಓಂ**

**ಓಂ ಉಭಯಥಾ ಚ ದೋಷಾತ್ ಓಂ**

ಇವೆರಡು ಸೂತ್ರಗಳನ್ನು 'ರೂಪ' ಇತ್ಯಾದಿ ವಾಕ್ಯದಿಂದ ವ್ಯಾಖ್ಯಾನ ಮಾಡುತ್ತಾರೆ –

**ರೂಪಸ್ಪರ್ಶಾದಿಹೇತುಭ್ಯಃ ಪರಮಾಣೋರನಿತ್ಯತಾ ।।೧೭೮।।**

**ಅನುಮೇಯಾ.................................... ।**

ಪಾರ್ಥಿವ ಮುಂತಾದ ನಾಲ್ಕು ವಿಧ ಪರಮಾಣುಗಳಿಗೆ ನಿತ್ಯತೆಯನ್ನು ವೈಶೇಷಿಕರು ಅಂಗೀಕರಿಸುತ್ತಾರೆ. ಅದು ಸರಿಯಲ್ಲ. ಏಕೆಂದರೆ, ಪಾರ್ಥಿವ–ಜಲೀಯ–ತೈಜಸ ಪರಮಾಣುಗಳು ಅನಿತ್ಯಗಳು, ಅನಿತ್ಯವಾದ ರೂಪ

ರಸ ಗಂಧವುಳ್ಳವಾದ್ದರಿಂದ, ಪಟವು ದೃಷ್ಟಾಂತವು ಎಂಬ ಅನುಮಾನದಿಂದ ವಿರೋಧವು ಬರುವುದು.

ಇನ್ನು 'ಓಂ ಅಪರಿಗ್ರಹಾಚ್ಚಾತ್ಯಂತಮನಪೇಕ್ಷಾ ಓಂ' ಎಂಬ ಸೂತ್ರವನ್ನು ಶ್ರುತೀನಾಂ ಇತ್ಯಾದಿ ವಾಕ್ಯದಿಂದ ವ್ಯಾಖ್ಯಾನ ಮಾಡುತ್ತಾರೆ –

**..................ಶ್ರುತೀನಾಂ ಚ ವಿರುದ್ಧತ್ವಾನ್ನ ತನ್ಮತಮ್ ।**

**ಉಪಾದೇಯಮತಶ್ಚಾಯಮವಿರುದ್ಧಃ ಸಮನ್ವಯಃ ॥೧೭೯॥**

ಪರಮಾಣ್ವಾರಂಭವಾದಕ್ಕೆ 'ಆತ್ಮನಃ ಆಕಾಶಃ ಸಂಭೂತಃ' ಇತ್ಯಾದಿ ಶ್ರುತಿವಿರೋಧ ಪ್ರಾಪ್ತವಾಗುವುದರಿಂದ, ವೈಶೇಷಿಕಾದಿಮತಗಳು ಸ್ವೀಕಾರಾರ್ಹವಲ್ಲ. ಆದ್ದರಿಂದ ಸಕಲಗುಣಪೂರ್ಣನಾದ ಪರಬ್ರಹ್ಮನ ವಿಷಯಕವಾದ ಈ ಸಮನ್ವಯಕ್ಕೆ ವೈಶೇಷಿಕಾದಿ ಮತಗಳಿಂದ, ಅವು ಅಸಮಂಜಸವಾದ್ದರಿಂದ, ವಿರೋಧವಿಲ್ಲ.

## ಸಮುದಾಯಾಧಿಕರಣಮ್

### ಓಂ ಸಮುದಾಯ ಉಭಯಹೇತುಕೇಽಪಿ ತದಪ್ರಾಪ್ತಿಃ ಓಂ

ಯುಕ್ತಿಪ್ರಧಾನವಾದ ಹೈತುಕ ಮತಗಳ ನಿರಾಸದ ಅನಂತರ ಈಗ ಸೌಗತ (ಬೌದ್ಧ) ಮತದ ನಿರಾಸೆ ಮಾಡಲ್ಪಡುತ್ತದೆ. ಆ ಸೌಗತರಲ್ಲಿ ವೈಭಾಷಿಕರು, ಸೌತ್ರಾಂತಿಕರು, ಮಾಧ್ಯಮಿಕರು ಮತ್ತು ಯೋಗಾಚಾರರು ಎಂಬುದಾಗಿ ನಾಲ್ಕು ವಿಧ. ಈ ನಾಲ್ಕರಲ್ಲಿ ವೈಶೇಷಿಕಾದಿಗಳ ಮತಕ್ಕಿಂತ ಹೆಚ್ಚಿನ ವ್ಯತ್ಯಾಸವಿಲ್ಲದ ವೈಭಾಷಿಕ ಹಾಗೂ ಸೌತ್ರಾಂತಿಕಮತಗಳನ್ನು ಮೊದಲು ನಿರಾಕರಿಸುತ್ತಾರೆ. ಇವೆರಡು ಪ್ರಭೇದದವರೂ ಜಗತ್ತು ಸತ್ಯ ಹಾಗೂ ಪರಮಾಣುಮಯ ಎಂದು ಹೇಳುತ್ತಾರೆ.

**ವೈಭಾಷಿಕಾಶ್ಚ ಸೌತ್ರಾಂತಾಃ ಸ್ವರಸಕ್ಷಣಿಕಂ ಜಗತ್ ।**

**ಅಣೂನಾಂ ಸಮುದಾಯಂ ಚ ಕಾಲಕರ್ಮನಿಮಿತ್ತತಃ ॥೧೮೦॥**

**ಉತ್ಪತ್ತಿಕಾಲೇ ಯುಕ್ತಾನಾಮಾತ್ಮಾನಂ ಚ ಕ್ಷಣಸ್ಥಿತಮ್ ।**

**ನಿತ್ಯಂ ಸಂತಾನಮೇತೇಷಾಂ ಪಂಚಸ್ಕಂಧಾತ್ಮನಾ ಸ್ಥಿತಂ ॥೧೮೧॥**

ವೈಭಾಷಿಕರು ಹಾಗೂ ಸೌತ್ರಾಂತಿಕರು ಜಗತ್ತು ಸ್ವಭಾವದಿಂದಲೇ ಕ್ಷಣಿಕವೆಂದು ಹೇಳುತ್ತಾರೆ. ಕಾಲಕರ್ಮಗಳೆಂಬ ನಿಮಿತ್ತದಿಂದ ಉತ್ಪತ್ತಿಕಾಲದಲ್ಲಿ (ಆದಿಸೃಷ್ಟಿಯಲ್ಲಿ) ಒಟ್ಟಾಗಿ ಕೂಡಿಕೊಂಡು ಹುಟ್ಟಿದ ಅಣುಗಳ ಸಮುದಾಯವು ಜಗತ್ತೆಂದು ಹೇಳುತ್ತಾರೆ. ಆತ್ಮನನ್ನು ಕ್ಷಣಿಕನೆಂದೂ ಮತ್ತು ಈ ಅಣುಗಳ ನಿತ್ಯವಾದ ಸಂತಾನವನ್ನು ಪಂಚಸ್ಕಂಧಾತ್ಮಕವಾದ ಜಗದ್ವೃಕ್ಷವೆಂದೂ ಹೇಳುತ್ತಾರೆ.

ಈ ಐದು ಸ್ಕಂಧಗಳು ಯಾವುವೆಂದರೆ –

**ಸಂಸ್ಕಾರರೂಪವಿಜ್ಞಾನಸಂಜ್ಞಾದುಃಖಾತ್ಮನಾ ಸ್ಥಿತಿಃ ।**

**ದುಃಖಾಭಾವಂ ಸುಖಂ ಚಾಹುರರೂಪಜ್ಞಾನಸಂತತಿಮ್ ।।೧೮೨।।**

**ಮೋಕ್ಷಂ.................................................।**

ಸಂಸ್ಕಾರ, ರೂಪ, ವಿಜ್ಞಾನ, ಸಂಜ್ಞಾ ಹಾಗೂ ದುಃಖ – ಹೀಗೆ ಐದು ಸ್ಕಂಧಗಳ ಸ್ಥಿತಿಯು. ದುಃಖಾಭಾವವೇ ಸುಖವು. ಸುಖವು ವೇದನಾಸ್ಕಂಧದಲ್ಲಿ ಅಂತರ್ಭೂತವು. ನಿರ್ವಿಷಯಕವಾದ ಜ್ಞಾನಸಂತಾನವೇ ಮೋಕ್ಷವು. ಹೀಗೆ ಅವರು ಹೇಳುತ್ತಾರೆ.

ಹೀಗೆ ವೈಬಾಷಿಕ ಹಾಗೂ ಸೌತ್ರಾಂತಿಕರ ಮತವನ್ನು ಸಾಧಾರಣವಾಗಿ ಅನುವಾದ ಮಾಡಿ, ಅವಾಂತರ ಪ್ರಭೇದವನ್ನು ನಿರಾಕರಣ ಸಮಯದಲ್ಲಿಯೇ ಹೇಳಲು ಅಪೇಕ್ಷಿಸಿ, ಈಗ 'ಪರಮಾಣು ಸಮುದಾಯವೇ ಗೋವು ಘಟ ಮುಂತಾದ ಪ್ರಪಂಚವು' ಎಂಬ ಅವರ ಮತವನ್ನು ನಿರಾಕರಿಸಲು '**ಸಮುದಾಯ ಉಭಯಹೇತುಕೇಽಪಿ ತದಪ್ರಾಪ್ತಿಃ**' ಎಂಬ ಸೂತ್ರವನ್ನು ವ್ಯಾಖ್ಯಾನಿಸುತ್ತಾರೆ –

**............ಸ ಸಮುದಾಯೋ ಹಿ ನೈಕಸ್ಮಾದೇವ ಯುಜ್ಯತೇ ।**

**ನೋಭಯೋಶ್ಚೋಭಯತ್ವಂ ಯತ್ಸಮುದಾಯವ್ಯಪೇಕ್ಷಯಾ ।।೧೮೩।।**

**ಅತೋಽನ್ಯೋನ್ಯಾಶ್ರಯತ್ವೇನ ಸಮುದಾಯೋ ನ ಯುಜ್ಯತೇ ।**

ಆ ಸಮುದಾಯವಾದರೋ ಒಂದರಿಂದ ಯುಕ್ತವೇ ಆಗುವುದಿಲ್ಲ. ಹಾಗೂ ಎರಡರ ಸಕಾಶದಿಂದಲೂ ಯುಕ್ತವಾಗುವುದಿಲ್ಲ. ಏಕೆಂದರೆ ಉಭಯತ್ವವು ಸಮುದಾಯದ ಅಪೇಕ್ಷೆಯಿಂದ ಹುಟ್ಟುತ್ತದೆ. ಸಮುದಾಯ ಸಾಪೇಕ್ಷದಿಂದ ಉಭಯತ್ವವು, ಉಭಯತ್ವ ಸಾಪೇಕ್ಷದಿಂದ ಸಮುದಾಯವು. ಹೀಗೆ ಅನ್ಯೋನ್ಯಾಶ್ರಯವು. ಆದುದರಿಂದ ಸಮುದಾಯವು ಕೂಡುವುದಿಲ್ಲ. ಸಮುದಾಯದ ಉತ್ಪತ್ತಿಯಾಗದಿದ್ದರೆ ಅಣುಗಳಿಗೆ 'ಮಹಾನ್, ಏಕಃ' ಎಂಬ ಪ್ರತ್ಯಕ್ಷಜ್ಞಾನ ವಿಷಯತ್ವವು ಸಂಭವಿಸುವುದಿಲ್ಲ. ಆದ್ದರಿಂದ ಅವಯವಿಯನ್ನು ಅವಶ್ಯವಾಗಿ ಅಂಗೀಕರಿಸಲೇಬೇಕು ಎಂದು ತಾತ್ಪರ್ಯ.

ಅಣುಗಳಿಗೆ ಮೇಲನವಾದಾಗ ಸಮುದಾಯವು, ಸಮುದಾಯವಾದಾಗ ಮೇಲನವು ಹೀಗೆ ಅನ್ಯೋನ್ಯಾಶ್ರಯವು ಬರುವುದರಿಂದ ಸಮುದಾಯವು ಕೂಡುವುದಿಲ್ಲ. ಹೀಗೆ ಬರುವ ಅನುಪಪತ್ತಿಯನ್ನು ತಪ್ಪಿಸಲು, ಸಮುದಾಯವು ವಿರಳವಾದ ಅನೇಕ ಪರಮಾಣುಗಳಿಂದ ಹುಟ್ಟಿದ್ದು ಎಂದು ಅಂಗೀಕರಿಸುತ್ತೇವೆ

ಎಂದರೆ – ಅಂಥಹ ವಿರಳವಾದ ಅಣುಗಳು ಯಾವಾಗಲೂ ಇರುವುದರಿಂದ ಸಮುದಾಯವೂ ಯಾವಾಗಲೂ ಇರಬೇಕಾಗುವುದು. ಇದರಿಂದ ಪ್ರಲಯವು ಕೂಡದೇ ಹೋಗುವುದು. ಇದನ್ನು ಆಕ್ಷೇಪಿಸಿ ಸಮಾಧಾನ ಹೇಳುವ ಸೂತ್ರ –

**"ಓಂ ಇತರೇತರಪ್ರತ್ಯಯತ್ವಾದಿತಿ ಚೇನ್ನೋತ್ಪತ್ತಿಮಾತ್ರನಿಮಿತ್ತತ್ವಾತ್ ಓಂ"**

**ಅನ್ಯೋನ್ಯಾಪೇಕ್ಷಯಾ ಪುಂಸಃ ಸಮುದಾಯತ್ವವೇದನಮ್ ।।೧೮೪।।**

**ಸ್ಯಾತ್ತತ್ಸದಾತನತ್ವೇಽಪಿ ತಚ್ಚ ಸಾಮೀಪ್ಯಹೇತುಕಮ್ ।**

**ಇತಿ ಚೇತ್ .................................................।।**

ಸಮುದಾಯವು ಯಾವಾಗಲೊಮ್ಮೆ ಆಗುವುದೆಂದಾದರೆ ಅನ್ಯೋನ್ಯಾಶ್ರಯತ್ವ ಬರುವುದು. ಆದರೆ ಹೀಗೆ ಅಲ್ಲ. ಆ ಸಮುದಾಯವನ್ನು ಸದಾತನ ಅಂದರೆ ಯಾವಾಗಲೂ ಇರುವಂಥಹದು ಎಂದು ಅಂಗೀಕರಿಸುತ್ತೇವೆ. ಹಾಗಾದರೆ ಸೃಷ್ಟಿ ಪ್ರಲಯಗಳ ವ್ಯವಸ್ಥೆಯಾಗದಿರಲಿ ಎಂದು ಹೇಳಕೂಡದು. ಏಕೆಂದರೆ, ಸಮುದಾಯಕ್ಕೆ ಸದಾತನತ್ವವಿದ್ದರೂ ಪುರುಷನಿಗೆ ಸಮುದಾಯತ್ವದ ಜ್ಞಾನವು ಯಾವಾಗಾದರೊಮ್ಮೆ ಆಗುವುದು. ಅದನ್ನು ಅಪೇಕ್ಷಿಸಿ ಸೃಷ್ಟ್ಯಾದಿ ವ್ಯವಸ್ಥೆಯು ಯುಕ್ತವಾಗುವುದು. ಆ ಸಮುದಾಯತ್ವ ಜ್ಞಾನವೂ ಪರಮಾಣು ಸಾಮೀಪ್ಯದ ಜ್ಞಾನದಿಂದ ಆಗುವುದು. ಆ ಸಾಮೀಪ್ಯವು ಯಾವಾಗಲೂ ಇರುವುದಿಲ್ಲ. ಆದಕಾರಣ ಅದರ ಜ್ಞಾನವು ಕಾದಾಚಿತ್ಕವೇ ಆದುದು. ಸಾಮೀಪ್ಯದ ಹೊರತು ಅನ್ಯೋನ್ಯಜ್ಞಾನವಾಗುವುದಿಲ್ಲ. ಹೀಗೆ ಪೂರ್ವಪಕ್ಷ ಬಂದರೆ, ಸಮಾಧಾನಾಂಶವನ್ನು ಕಾರ್ಯ ಇತ್ಯಾದಿ ವಾಕ್ಯದಿಂದ ವ್ಯಾಖ್ಯಾನಿಸುತ್ತಾರೆ –

**.............ಕಾರ್ಯಸಂಭೂತಿಮಾತ್ರವ್ಯಾಪೃತಿಕಾರಣಮ್ ।।೧೮೫।।**

**ನ ತು ಕಾರ್ಯವಿಶೇಷೇಷು ವ್ಯಾಪೃತಂ ಕಾರಣಂ ಭವೇತ್ ।**

**ಅತೋಽರ್ಥೇಂದ್ರಿಯಸಂಯೋಗಿರೂಪಕಾರಣತಾತ್ಮನಃ ।।೧೮೬।।**

**ಸಂಯೋಗಿರೂಪರಾಹಿತ್ಯಾನ್ನೈವ ತಜ್ಞ್ಜಾನತಾಪಿ ಹಿ ।**

ಕಾರ್ಯದ ಉತ್ಪತ್ತಿಮಾತ್ರದಲ್ಲಿಯೇ ವ್ಯಾಪಾರವುಳ್ಳದ್ದು ಕಾರಣವು. ಆದರೆ ವಿಶೇಷ ಕಾರ್ಯಗಳಲ್ಲಿ ಕಾರಣಗಳು ವ್ಯಾಪಾರವುಳ್ಳವುಗಳಾಗುವುದಿಲ್ಲ. ಅಂದರೆ ಕಾರಣಗಳು ತಮಗೆ ಸದೃಶವಾದ ಕಾರ್ಯವನ್ನು ಹುಟ್ಟಿಸುವುದರಲ್ಲಿ ವ್ಯಾಪಾರವುಳ್ಳವುಗಳು. ಆದರೆ ಸದೃಶವಾಗದ ಕಾರ್ಯಜನಕತ್ವವನ್ನು ಹೊಂದಿರುವುದಿಲ್ಲ. ಆದ್ದರಿಂದ ಗ್ರಾಹ್ಯ–ಗ್ರಾಹಕರೂಪಗಳಾದ ಅರ್ಥೇಂದ್ರಿಯಗಳು ಯಾವುವೋ ಅವುಗಳಿಗೆ ಆ ಕಾರ್ಯಗಳನ್ನು ಕುರಿತು ಸಂಯೋಗಿರೂಪ ಕಾರಣತ್ವವು. ಅರ್ಥೇಂದ್ರಿಯಗಳಿಗೆ ಗ್ರಾಹ್ಯ–ಗ್ರಾಹಕರೂಪವು ಇಲ್ಲದಿರುವುದರಿಂದ

ಅವುಗಳಿಗೆ ಕಾರಣತ್ವವು ಕೂಡುವುದೇ ಇಲ್ಲ. ಕಾರ್ಯಭೂತನಾದ ಆತ್ಮನಿಗೂ ಸಮುದಾಯ ವಿಷಯಕ ಜ್ಞಾನವತ್ವವು ಕೂಡುವುದೇ ಇಲ್ಲ. ಏಕೆಂದರೆ ಕಾರಣಭೂತನಾದ ಆತ್ಮನಿಗೆ ಆ ಜ್ಞಾನವತ್ವವು ಇಲ್ಲವೇ ಇಲ್ಲ.

ಇನ್ನು ಕಾರಣವು ತನಗೆ ಸದೃಶವಲ್ಲದ ಕಾರ್ಯವನ್ನು ಹುಟ್ಟಿಸುವ ಸ್ವಭಾವವುಳ್ಳದ್ದು ಎನ್ನುವ ಪಕ್ಷವನ್ನು ಆಶಂಕಿಸುತ್ತಾರೆ –

**ವಿಶೇಷಕಾರ್ಯಜನಕಂ ಯದಿಕಾರಣಮಿಷ್ಯತೇ ।।೧೮೭।।**

**ಕುತಃ ಸಮಾನರೂಪತ್ವಂ ಕಾರ್ಯಾಣಾಮಪಿ ಸರ್ವಶಃ ।**

**ಅತೋಽನಿಯತ್ಯಾ ಯತ್ಕಿಂಚಿದ್ಯಸ್ಯ ಕಸ್ಯಾಪಿ ಕಾರಣಮ್ ।।೧೮೮।।**

ಕಾರಣವು ತನಗೆ ಅಸದೃಶವಾದ ವಿಶೇಷಕಾರ್ಯವನ್ನು ಹುಟ್ಟಿಸುತ್ತದೆ ಎಂದು ಒಪ್ಪುವುದಾದರೆ, ಸರ್ವಕಾರ್ಯಗಳಿಗೂ ಸಮಾನರೂಪತ್ವವು ಯಾವುದರಿಂದ? ಹಾಗಾದರೆ ಕಾರ್ಯಜನಕತ್ವ ಮಾತ್ರವೇ ವಸ್ತುವಿನ ಸ್ವಭಾವವೆಂದು ಅಂಗೀಕರಿಸುತ್ತೇವೆ ಎಂದು ಹೇಳಕೂಡದು. ಏಕೆಂದರೆ ಯಾವುದೇ ನಿಯಮವಿಲ್ಲದೆಯೇ ಯಾವುದೋ ಕಾರ್ಯಕ್ಕೆ ಬೇರೆ ಯಾವುದೋ ಕಾರಣವು ಎಂದಾಗುವುದು. ಅಂದರೆ ಘಟದಿಂದ ಆಕಾಶವೂ, ಆಕಾಶದಿಂದ ಪಟವೂ, ಇತ್ಯಾದಿ ಅಸಂಬದ್ಧ ಉತ್ಪತ್ತಿಯು ಆಗುವುದು.

ಕಾರಣವು ಕಾರ್ಯವನ್ನು ಹುಟ್ಟಿಸುವ ಸ್ವಭಾವವುಳ್ಳದ್ದು. ಅದೃಷ್ಟ ಮೊದಲಾದ ಸಹಕಾರಿಗಳ ಸಂಬಂಧದಿಂದ ಕಾರಣಕ್ಕೆ ಸದೃಶವಾದ ಅಥವಾ ಸದೃಶವಲ್ಲದ ಕಾರ್ಯವು ಹುಟ್ಟಬಹುದು ಎಂದು ಆಶಂಕಿಸಿದರೆ –

**ಅದೃಷ್ಟಮಪಿ ತಸ್ಯೈವ ವಿಶೇಷಾಪಾದಕಂ ಕುತಃ ।**

**ಯಸ್ಯ ಕಸ್ಯಾಪಿ ಯತ್ಕಿಂಚಿದ್ವಿಶೇಷಮುಪಪಾದಯೇತ್ ।।೧೮೯।।**

**ಕಾರ್ಯಂ ಚ ಕಾರಣಂ ಚೈವ ಯತ್ಕಿಂಚಿದ್ಯಸ್ಯ ಕಸ್ಯಚಿತ್ ।**

**ಭವೇನ್ನಿಯಾಮಕಾಭಾವಾದಿದಮಸ್ಯೈವ ಕಾರಣಮ್ ।।೧೯೦।।**

**ಇತಿ ನಿತ್ಯವಿನಾಶಿತ್ವೇ ಕೇನ ಮಾನೇನ ಗಮ್ಯತೇ ।**

**ಇದಂ ನ ಜಾಯತೇಽಮುಷ್ಮಾದಿತ್ಯತ್ರಾಪಿ ನ ಕಾರಣಮ್ ।।೧೯೧।।**

ಅದೃಷ್ಟವೂ ವಿಶೇಷಾಪಾದಕವಾದುದು ಯಾವ ಕಾರಣದಿಂದ? ಆ ಕಾರಣಕ್ಕೇ ವಿಶೇಷಾಪಾದಕವಾದುದು ಯಾವ ಕಾರಣದಿಂದ? ಯಾವುದೋ ಒಂದು ಅದೃಷ್ಟವು ಯಾವುದೋ ಒಂದಕ್ಕೆ ವಿಶೇಷವನ್ನು ತಂದುಕೊಡುವುದು. ನೀಲ

ಮುಂತಾದ ಯಾವುದೋ ಒಂದು ಪೀತ ಮುಂತಾದ ಇನ್ನಾವುದೋ ಒಂದಕ್ಕೇ ಕಾರ್ಯವಾಗಲಿ. ಹಾಗೂ ಪೀತ ಮುಂತಾದುದು ಯಾವುದೋ ಒಂದು ನೀಲ ಮುಂತಾದುದಕ್ಕೇ ಕಾರಣವಾಗಲಿ. ಏಕೆಂದರೆ ನೀಲಕ್ಕೆ ನೀಲವೇ ಕಾರಣವು ಪೀತವಲ್ಲ ಎಂಬ ವಿಷಯದಲ್ಲಿ ನಿಯಾಮಕವಿಲ್ಲ.

ಸಮವಾಯ ಪರಿಣಾಮಗಳೆರಡೂ ಇಲ್ಲದಿದ್ದರೂ, ಒಂದು ವಸ್ತುವಿಗೆ ಅದರ ಪೂರ್ವಭಾವಿಯಾದ ವಸ್ತುವೇ ಕಾರಣವು. ಒಂದು ವಸ್ತುವು ಇನ್ನೊಂದರ ಅನಂತರ ಹುಟ್ಟಿದರೆ, ಅನಂತರ ಹುಟ್ಟಿದುದೇ ಪೂರ್ವಭಾವಿಯಾದುದರ ಕಾರ್ಯವು. ಹೀಗೆ ಕಾರ್ಯ–ಕಾರಣ ಭಾವವು ಸಿದ್ಧಿಸುವುದರಿಂದ, ನಿಯಾಮಕವಿಲ್ಲ ಎನ್ನುವುದು ಕೂಡುವುದಿಲ್ಲ ಎಂದು ಆಶಂಕಿಸಿದರೆ – ಅದನ್ನು 'ಇದಮಸ್ಯೈವ' ಇತ್ಯಾದಿ ವಚನದಿಂದ ನಿರಾಕರಿಸುತ್ತಾರೆ.

ಇದು ಇದಕ್ಕೇ ಕಾರಣವು, ಅದಕ್ಕೆ ಅಲ್ಲ ಎಂಬುದು, ನಿರನ್ವಯ ವಿನಾಶೋತ್ಪಾದ ಪಕ್ಷದಲ್ಲಿ (ಕಾರ್ಯ–ಕಾರಣ ಸಂಬಂಧವಿಲ್ಲದೆ ವಿನಾಶ ಮತ್ತು ಉತ್ಪತ್ತಿಗಳನ್ನು ಒಪ್ಪುವ ಪಕ್ಷದಲ್ಲಿ), ಯಾವ ಕಾರಣದಿಂದ ತಿಳಿಯಲ್ಪಡುತ್ತದೆ? ಅಂದರೆ ಯಾವುದರಿಂದಲೂ ತಿಳಿಯಲ್ಪಡುವುದಿಲ್ಲ ಎಂದರ್ಥ. ಹಾಗೂ ಇದು ಇದರಿಂದ ಹುಟ್ಟುವುದಿಲ್ಲ ಎಂಬ ನಿರ್ಣಯಕ್ಕೂ ಪ್ರಮಾಣವು ಇರುವುದಿಲ್ಲ.

ಹೀಗೆ ಸಮುದಾಯವನ್ನು ನಿರಾಕರಿಸಿ, ಈಗ ಸರ್ವವೂ ಕ್ಷಣಿಕವೆಂಬುದನ್ನು ಪ್ರಮಾಣಾಭಾವ ಹಾಗೂ ಪ್ರಮಾಣವಿರೋಧಗಳ ಕಾರಣದಿಂದ ನಿರಾಕರಿಸಲು 'ವಿನಾಶ' ಇತ್ಯಾದಿ ಮುಂದಿನ ವಚನವು –

**ವಿನಾಶೋತ್ಪತ್ತಯಶ್ಚೈವ ನ ದೃಶ್ಯಂತೇ ಸದಾತನಾಃ ।**

**ದೃಶ್ಯತೇ ಪ್ರತ್ಯಭಿಜ್ಞಾತಃ ಸ್ಥಿರತ್ವಂ ಸರ್ವವಸ್ತುಷು ।।೧೯೨।।**

ಪ್ರತಿಕ್ಷಣದಲ್ಲಿ ಉಂಟಾಗುವ ವಿನಾಶ ಉತ್ಪತ್ತಿಗಳು ಕಂಡುಬರುವುದೇ ಇಲ್ಲ. ಅದೇ ಇದು ಎಂಬ ಪ್ರತ್ಯಭಿಜ್ಞೆಯಿಂದ ಸರ್ವ ವಸ್ತುಗಳಲ್ಲಿ ಸ್ಥಿರತ್ವವು (ಒಂದಕ್ಕೇನೆ ಅನೇಕ ಕ್ಷಣ ಸಂಬಂಧಿತ್ವವು) ವಿಷಯೀಕರಿಸಲ್ಪಡುತ್ತದೆ. ಇದರಿಂದ ಕ್ಷಣಿಕತ್ವವು ಪ್ರತ್ಯಕ್ಷದಿಂದ ಸಿದ್ಧಿಸುವುದಿಲ್ಲ ಹಾಗೂ ಸ್ಥಾಯಿತ್ವವೇ ಸಿದ್ಧಿಸುತ್ತದೆ ಎಂಬುದಾಗಿ ಪರಪಕ್ಷಕ್ಕೆ ಪ್ರಮಾಣ ವಿರೋಧವೂ ನಮ್ಮ ಪಕ್ಷಕ್ಕೆ ಪ್ರಮಾಣತ್ವವೂ ಹೇಳಿದಂತಾಯಿತು.

ಹಾಗಾದರೆ ಪ್ರತ್ಯಭಿಜ್ಞೆಯು ಭ್ರಾಂತಿಯು. ಆದ್ದರಿಂದ ಕ್ಷಣಿಕತ್ವಕ್ಕೆ ವಿರೋಧವಿಲ್ಲ ಎಂದು ಹೇಳಿದರೆ ಅದು ಸರಿಯಲ್ಲ. ಏಕೆಂದರೆ ಬಾಧಕವಿರುವುದಿಲ್ಲ. ಬಾಧಕವಿಲ್ಲದೇ ಭ್ರಾಂತಿಯೆಂದು ಒಪ್ಪುವುದಾದರೆ, ನೀಲ ಮುಂತಾದ ಜ್ಞಾನಗಳೂ ಭ್ರಾಂತಿಯೇ ಆಗಬೇಕಾಗುತ್ತವೆ. ಪ್ರತ್ಯಕ್ಷವು ಬಾಧಕವಾಗುವುದಿಲ್ಲವೆಂದು ಹಿಂದೆಯೇ

ಹೇಳಲಾಗಿದೆ. ಇನ್ನು ಪ್ರತ್ಯಕ್ಷವು ಬಾಧಕವಾಗದಿದ್ದರೂ ಅನುಮಾನವು ಬಾಧಕವಾಗುವುದು ಎಂದು ಶಂಕಿಸುತ್ತಾರೆ –

**ಫಲಾದೀನಾಂ ವಿಶೇಷೇಣ ಸರ್ವತ್ರಾಪ್ಯನುಮೀಯತೇ ।**

**ಸತ್ತ್ವೇನ ಕ್ಷಣಿಕತ್ವಂ ಚೇದಾಕಾಶಸ್ಯಾವಿಶೇಷತಃ ॥೧೯೩॥**

**ಅವಿಶೇಷೋಽಖಿಲಸ್ಯಾಪಿ ಸತ್ತ್ವಾತ್ಕಿಂ ನಾನುಮೀಯತೇ ।**

ಫಲಾದಿಗಳಿಗೆ ಪರಿಮಾಣ ಭೇದದಿಂದ ಕ್ಷಣಿಕತ್ವವು ಅನುಮೇಯಿಸಲ್ಪಡುತ್ತದೆ. ಆದರ ದೃಷ್ಟಾಂತದಿಂದ ಫಲಾದಿಗಳನ್ನು ಬಿಟ್ಟು ಸರ್ವ ವಸ್ತುವಿನಲ್ಲಿಯೂ ಕ್ಷಣಿಕತ್ವವನ್ನು ಸತ್ವರೂಪವಾದ ಹೇತುವಿನಿಂದ ಅನುಮೇಯಿಸುವುದು ಯುಕ್ತವಲ್ಲ. ಏಕೆಂದರೆ ಆಕಾಶಕ್ಕೆ ಹಿಂದಿನ ಹಾಗೂ ಮುಂದಿನ ಕ್ಷಣಗಳಿಗೆ ಪರಿಮಾಣ-ಭೇದವಿಲ್ಲವಾದ್ದರಿಂದ ಅಕ್ಷಣಿಕತ್ವವು. ಆಕಾಶದಂತೆ ಉಳಿದೆಲ್ಲವೂ ಸತ್ವವಾಗಿರುವ ಕಾರಣ ಎಲ್ಲ ವಸ್ತುಗಳಿಗೂ ಪರಿಮಾಣಭೇದ ರಾಹಿತ್ಯ ಹಾಗೂ ಅಕ್ಷಣಿಕತ್ವಗಳು ಏಕೆ ಅನಮೇಯಿಸಲ್ಪಡುವುದಿಲ್ಲ?

ಆಕಾಶಕ್ಕೆ ಸತ್ವವಿರುವುದಾದರೆ ಪ್ರತಿಪಕ್ಷಾನುಮಾನ ಮುಂತಾದುದು ಬರಬಹುದು. ಆದರೆ ಆಕಾಶಕ್ಕೆ ಸತ್ವವೇ ಇಲ್ಲ. ಏಕೆಂದರೆ ಆಕಾಶವು ಮೂರ್ತಾಭಾವರೂಪವಾಗಿದೆ. ಇಲ್ಲಿ ಸತ್ವವೆಂದರೆ ಭಾವತ್ವವೆಂಬ ಅಭಿಪ್ರಾಯವಿದೆ. ಸತ್ವವೆಂದರೆ ಸ್ವರೂಪವತ್ವವೆಂದು ಹೇಳಿದರೂ ಅಭಾವವು ನಿಃಸ್ವರೂಪವೆಂದು ಅಂಗೀಕರಿಸುತ್ತೇವೆ. ಹೀಗೆ ಆಶಂಕಿಸಿ, ಅದರ ಮೇಲೆ ದೂಷಣವನ್ನು 'ಯದಿ' ಇತ್ಯಾದಿ ವಚನದಿಂದ ಹೇಳುತ್ತಾರೆ –

**ಯದ್ಯಕಾಶಸ್ಯ ಸತ್ತ್ವಂ ನ ಕುತ ಏವ ನರಾದಿಷು ॥೧೯೪॥**

ಆಕಾಶಕ್ಕೆ ಸತ್ವವು ಇಲ್ಲವಾದರೆ ಮನುಷ್ಯರೇ ಮುಂತಾದವರಲ್ಲಿ ಸತ್ವವು ಹೇಗೆ ತಾನೇ ಸಿದ್ಧಿಸೀತು? ದೇಹಾದಿಗಳಲ್ಲಿ ಭಾವತ್ವವಿರುವುದರಿಂದ ಸತ್ವವು ಕಾಣುವುದು. ಆದರೆ ಆಕಾಶದಲ್ಲಿ ಅಭಾವತ್ವವಿದೆ ಆದ್ದರಿಂದ ಸತ್ವವು ಇಲ್ಲ ಎಂದು ಹೇಳಿದರೆ –

**ಸಧರ್ಮಿಪ್ರತಿಯೋಗಿತ್ವಮಭಾವಸ್ಯ ನಿಯಾಮಕಮ್ ।**

**ತೌ ವಿನಾ ನಹ್ಯಭಾವಶ್ಚ ಕ್ವಚಿದ್ದೃಷ್ಟಃ ಕದಾಚನ ॥೧೯೫॥**

**ಅಧರ್ಮಿಪ್ರತಿಯೋಗಿತ್ವಮಾಕಾಶಸ್ಯಾವಗಮ್ಯತೇ ।**

ಎಲ್ಲಿ ಅಭಾವ ಇದೆಯೋ ಅದು ಧರ್ಮಿಯು, ಯಾವುದರ ಅಭಾವವೋ ಅದು ಅದಕ್ಕೆ ಪ್ರತಿಯೋಗಿಯು. ಹೀಗೆ ಧರ್ಮಿ-ಪ್ರತಿಯೋಗಿತ್ವವು ಅಭಾವಕ್ಕೆ ವ್ಯಾಪಕವು. ಇವೆರಡರ ಜ್ಞಾನವಿಲ್ಲದೆ ಅಭಾವವಾದರೂ ಎಲ್ಲಿಯೂ ಯಾವಾಗಲೂ

ಕಂಡಿರುವುದಿಲ್ಲ. ಇವೆರಡಿದ್ದರೆ ಅಭಾವವು, ಇಲ್ಲದಿದ್ದರೆ ಅಭಾವವಿಲ್ಲ ಎಂಬ ಅನ್ವಯ-ವ್ಯತಿರೇಕಗಳು ಪ್ರಸಿದ್ಧವಾಗಿದೆ. ಆಕಾಶವು ಧರ್ಮಿ-ಪ್ರತಿಯೋಗಿಗಳಿಂದ ರಹಿತವಾಗಿದೆ ಎಂಬುದಾಗಿ ಪ್ರಮಾಣಗಳಿಂದ ತಿಳಿದುಬರುತ್ತದೆ. ಅಂದರೆ ಅಭಾವದ ಪ್ರತೀತಿಯಲ್ಲಿ ವ್ಯಾಪಕವಾದ ಸಧರ್ಮಪ್ರತಿಯೋಗಿತ್ವವು ಭಾವಪದಾರ್ಥವಾದ ಆಕಾಶದಲ್ಲಿ ಇಲ್ಲ. ಏಕೆಂದರೆ ಆಕಾಶವು ತೋರುವಾಗ 'ಇಲ್ಲಿ ಆಕಾಶದ ಅಭಾವವು ಇಲ್ಲ' ಎಂದು ಪ್ರತೀತಿಯು ಆಗುವುದಿಲ್ಲ, 'ಇದು ಆಕಾಶವು' ಎಂದೇ ತಿಳಿಯಲ್ಪಡುತ್ತದೆ.

ಇನ್ನು 'ಆಕಾಶೇ ಚಾವಿಶೇಷಾತ್' ಹಾಗೂ 'ಅನುಸ್ಮೃತೇಶ್ಚ' ಎಂಬ ಎರಡು ಸೂತ್ರಗಳ ಅರ್ಥವನ್ನು 'ಸ್ವೀಕಾರ' ಇತ್ಯಾದಿ ವಚನದಿಂದ ಉಪಸಂಹರಿಸುತ್ತಾರೆ –

**ಸ್ವೀಕಾರತ್ಯಾಗತೋಽದೃಷ್ಟದೃಷ್ಟಯೋಃ ಸರ್ವವಸ್ತುಷು ।।೧೯೬।।**

**ಗುಣಾನುನ್ಮತ್ತ ಏವಾಸೌ ವಿದಧಾತ್ಯಧಿಕಂ ಪುನಃ ।**

ಎಲ್ಲ ವಸ್ತುಗಳಲ್ಲಿಯೂ ಅದೃಷ್ಟವಾದ ಕ್ಷಣಿಕತ್ವಾದಿಗಳ ಸ್ವೀಕಾರದಿಂದಲೂ, ದೃಷ್ಟವಾದ ಸ್ಥಿರತ್ವಾದಿಗಳ ಪರಿತ್ಯಾಗದಿಂದಲೂ ಈ ಸೌಗತನು ಉನ್ಮತ್ತನನ್ನೂ ಸಹ ತನಗಿಂತ ಹೆಚ್ಚಿನ ವಿವೇಕವಂತನೆಂದು ಸ್ಥಾಪಿಸುತ್ತಾನೆ. ಏಕೆಂದರೆ ಉನ್ಮತ್ತನಾದರೂ ಪ್ರಮಿತವಲ್ಲದ್ದನ್ನು ಸ್ವೀಕರಿಸುವುದಿಲ್ಲ ಹಾಗೂ ಪ್ರಮಿತವಾದುದನ್ನು ಬಿಡುವುದಿಲ್ಲ.

ಇನ್ನು ಕಾರಣದ ಕ್ಷಣಗಳು ಕಾರ್ಯದ ಕ್ಷಣಗಳಲ್ಲಿ ಸಂಸ್ಕಾರಗಳನ್ನು ಅರ್ಪಿಸುತ್ತವೆ. ಆದ್ದರಿಂದ ಪೂರ್ವಪೂರ್ವ ಆತ್ಮರಿಂದ ಸಂಸ್ಕಾರವನ್ನು ಪಡೆದ ಉತ್ತರೋತ್ತರ ಆತ್ಮರಿಗೆ ಅನುಮಾನಾದಿ ವ್ಯವಹಾರವು ಯುಕ್ತವಾಗುತ್ತದೆ. ಪರ್ವತ ಮುಂತಾದವುಗಳೂ ಸಹ ಪೂರ್ವಪೂರ್ವ ಕ್ಷಣದಿಂದ ಹುಟ್ಟಿದ ಸಂಸ್ಕಾರವನ್ನು ಹೊಂದಿರುವುದರಿಂದ ಪಕ್ವಾದಿ ಭಾವವನ್ನು ಹೊಂದುತ್ತವೆ. ಹೀಗೆ ಒಂದು ಮತ. ಈ ಮತದ ನಿರಾಕರಣಕ್ಕಾಗಿ 'ಓಂ ಉತ್ತರೋತ್ಪಾದೇ ಚ ಪೂರ್ವನಿರೋಧಾತ್ ಓಂ' ಎಂಬ ಸೂತ್ರವು ಹೊರಟಿದೆ. ಈ ಸೂತ್ರವನ್ನು 'ಉತ್ತರೋತ್ಪತ್ತಿಮಾತ್ರೇಣ' ಇತ್ಯಾದಿ ವಚನದಿಂದ ವ್ಯಾಖ್ಯಾನಿಸುತ್ತಾರೆ –

**ಉತ್ತರೋತ್ಪತ್ತಿಮಾತ್ರೇಣ ವಿನಾಶಾತ್ಪೂರ್ವವಸ್ತುನಃ ।।೧೯೭।।**

**ನ ಸಂಸ್ಕಾರಾರ್ಪಕತ್ವಂ ಚ ಯುಜ್ಯತೇ ಕಸ್ಯಚಿತ್ಕ್ವಚಿತ್ ।**

**ಅತೋ ಜ್ಞಾತಂ ಮಯೇತ್ಯಾದಿ ನ ಜ್ಞೇಯಮನುಮಾ ಕುತಃ ।।೧೯೮।।**

ಮುಂದಿನ ಸದೃಶಕಾರ್ಯದ ಉತ್ಪತ್ತಿಮಾತ್ರದಿಂದಲೇ ಪೂರ್ವವಸ್ತುವಿನ ವಿನಾಶವಾಗುವುದು. ಆದ್ದರಿಂದ ಯಾವುದೇ ಕಾರಣಕ್ಕೆ ಯಾವುದೇ ಕಾರ್ಯದಲ್ಲಿ ಸಂಸ್ಕಾರಾರ್ಪಣವು ಕೂಡುವುದಿಲ್ಲ. ಆತ್ಮನಿಗೆ ಕ್ಷಣಿಕತ್ವವಿರುವುದರಿಂದ ಹಾಗ

ಸಂಸ್ಕಾರದ ಅರ್ಪಣವೂ ಅಸಂಭವವಾದ್ದರಿಂದ, ಯಾವುದು 'ಮಯಾ ಜ್ಞಾತಂ' (ನನ್ನಿಂದ ವ್ಯಾಪ್ತಿಜ್ಞಾನದ ಮೂಲಕ ತಿಳಿಯಲ್ಪಟ್ಟಿತೋ) , ಅದು 'ಅತ್ರ ವಿದ್ಯತೇ' (ಅಲ್ಲಿ ಇದೆ) ಎಂಬುದಾಗಿ ತಿಳಿಯಲು ಶಕ್ಯವಾಗುವುದಿಲ್ಲ. ಆದ್ದರಿಂದ ಅನುಮಾನವು ಎಲ್ಲಿಂದ?

ಹಾಗಾದರೆ ಸರ್ವಲೋಕ ಸಿದ್ಧವಾದ ಸಂಗತಿಯನ್ನು ಅಪಲಾಪ ಮಾಡುವುದು ಯುಕ್ತವಲ್ಲ. ಆದ್ದರಿಂದ ಇಲ್ಲಿ ಅನುಮಾನಾದಿ ವ್ಯವಹಾರವು ಕೂಡುವುದು. ಅದರ ಬಲದಿಂದ ಲೋಕದಲ್ಲಿ ಕಂಡುಬರದಿದ್ದರೂ ಸಂಸ್ಕಾರಾರ್ಪಕತ್ವವನ್ನು ಕಲ್ಪಿಸಬಹುದು. ಹೀಗೆ ಆಶಂಕಿಸಿದರೆ –

**ಏಕತ್ವಮನುಭೂತಿಸ್ಥಂ ತ್ಯಕ್ತ್ವಾ ನಿರ್ಮಾನಿಕಾ ಭಿದಾ ।**

**ಕುತ ಆತ್ಮಾದಿಕೇಷು ಸ್ಯಾದ್ಬಲ್ಯೇವಾನುಭವೋ ಯತಃ ॥೧೯೯॥**

ಪ್ರತ್ಯಭಿಜ್ಞೆಯಿಂದ ವಿಷಯೀಕರಿಸಲ್ಪಟ್ಟ ಏಕತ್ವವನ್ನು ಬಿಟ್ಟು, ಪ್ರಮಾಣರಹಿತವೂ ಪ್ರಮಾಣಬಾಧಿತವೂ ಆದ ಭೇದವು ಆತ್ಮಾದಿಗಳಲ್ಲಿ ಯಾವ ಕಾರಣದಿಂದ ಅಂಗೀಕಾರಕ್ಕೆ ಅರ್ಹವಾದೀತು? ಪ್ರತ್ಯಭಿಜ್ಞಾರೂಪ ಅನುಭವವು ಪ್ರಬಲವಾದುದರಿಂದ ಆತ್ಮಾದಿಗಳಿಗೆ ಏಕತ್ವವು ಸಿದ್ಧಿಸುವುದು.

ಹಾಗಾದರೆ ಕಾರ್ಯದ ಉತ್ಪತ್ತಿಮಾತ್ರದಿಂದಲೇ ಕಾರಣದ ನಾಶವಾಗಲಿ. ಆದರೂ ಕಾರಣಕ್ಕೆ ಕಾರ್ಯದಲ್ಲಿ ಸಂಸ್ಕಾರಾರ್ಪಕತ್ವವು ಏಕೆ ಇರುವುದಿಲ್ಲ ಎಂದು ಆಶಂಕಿಸಿದರೆ–

**ಕಾರ್ಯಕಾರಣಯೋಶ್ಚೈಕಕಾಲೀನತ್ವಂ ವಿನಾ ಕಥಮ್ ।**

**ಪೂರ್ವಸಂಸ್ಕಾರಯೋಗೀ ಸ್ಯಾದುತ್ತರೋ ನಿಯಮೇನ ಚ ॥೨೦೦॥**

ಕಾರ್ಯಕಾರಣಗಳಿಗೆ ಏಕತ್ವವಿಲ್ಲದೆಯೇ ಮುಂದಿನದು ನಿಯಮೇನ ಪೂರ್ವ-ಸಂಸ್ಕಾರಯೋಗಿಯು ಹೇಗೆ ಆಗುವುದು? ಏಕಕಾಲೀನತ್ವವಿದ್ದರೇ ಪೂರ್ವದ ವಸ್ತುವು ಉತ್ತರವಸ್ತುವಿನಲ್ಲಿ ಸಂಸ್ಕಾರವನ್ನು ಉಂಟುಮಾಡುವುದು ಕಂಡಿದೆ. ಭಿನ್ನಕಾಲೀನತ್ವವಿದ್ದರೆ ಸಂಸ್ಕಾರವನ್ನು ಉಂಟುಮಾಡುವುದು ಕಂಡಿಲ್ಲ.

**ಸಂಬದ್ಧಾ ಏವ ಸಂಸ್ಕಾರಮನ್ಯತ್ರಾದಧತೇಽಖಿಲಾಃ ।**

**ಅಸಂಬದ್ಧಃ ಕಥಂ ಪೂರ್ವ ಉತ್ತರೇ ವಾಸನಾಕರಃ ॥೨೦೧॥**

**ಏಕಕಾಲತಯಾ ಯೋಗಂ ವಿನಾ ಸಂಸ್ಕಾರತಃ ಕಥಮ್ ।**

ಚಂಪಕ ಮುಂತಾದ ಸಂಸ್ಕಾರವನ್ನುಂಟುಮಾಡತಕ್ಕ ಪದಾರ್ಥಗಳು

ತೈಲಾದಿಗಳಿಂದ ಸಂಬಂದ್ಧವಾಗಿಯೇ, ಬೇರೆಕಡೆಗಳಲ್ಲಿ ತೈಲಾದಿಗಳಲ್ಲಿ ಸಂಸ್ಕಾರವನ್ನು ಉಂಟುಮಾಡುತ್ತವೆ. ಸಂಬಂಧವಿಲ್ಲದೆ ಸಂಸ್ಕಾರವನ್ನು ಉಂಟುಮಾಡುವುದಿಲ್ಲ. ಹೀಗೆ ನಿಯಮವಿದೆ. ಏಕಕಾಲತ್ವಯೋಗವಿಲ್ಲದ ವಸ್ತುಗಳಿಗೆ ಸಂಬಂಧವು ಯುಕ್ತವಲ್ಲ. ಆದಪ್ರಯುಕ್ತ ಉತ್ತರಪದಾರ್ಥದಿಂದ ಅಸಂಬಂದ್ಧವಾದ ಪೂರ್ವ ಪದಾರ್ಥವು ಆ ಉತ್ತರಪದಾರ್ಥದಲ್ಲಿ ಸಂಸ್ಕಾರವನ್ನು ಹೇಗೆ ಉಂಟು ಮಾಡಬಲ್ಲದು?

ಇನ್ನು ಕಾರ್ಯದ ಉತ್ಪತ್ತಿಯಾದ ಕೂಡಲೇ ಕಾರಣದ ನಾಶವಾಗುವುದಾದರೆ, ಕಾರಣಕ್ಕೆ ಕಾರ್ಯದ ಸಂಬಂಧವಿಲ್ಲವೆನ್ನುವುದು ಕೂಡಬಹುದು. ಆದರೆ ಕಾರ್ಯದ ಉತ್ಪತ್ತಿಯಾದ ಕೂಡಲೇ ಕಾರಣದ ನಾಶವೆಂಬುದಾದರೂ ಏಕೆ? ಎಂಬ ಆಶಂಕೆಯನ್ನು 'ಕ್ಷಣಮಾತ್ರಂ' ಇತ್ಯಾದಿ ವಾಕ್ಯದಿಂದ ಪರಿಹರಿಸುತ್ತಾರೆ –

**ಕ್ಷಣಮಾತ್ರಮವಸ್ಥಾನಂ ಸ್ವೀಕೃತಂ ಸರ್ವವಸ್ತುಷು ।।೨೦೨।।**

**ಪೂರ್ವಮಧ್ಯಾಪರಕಲಾವಿಕಲಃ ಕ್ಷಣ ಇಷ್ಯತೇ ।**

ಪೂರ್ವಕ್ಷಣದಲ್ಲಿರುವ ಕಾರಣವು ಕಾರ್ಯಕ್ಷಣದಲ್ಲಿಯೂ ಇರುವುದೆಂದರೆ, ಸರ್ವವಸ್ತುಗಳಿಗೂ ಅಂಗೀಕರಿಸಲ್ಪಟ್ಟಿರುವ ಕ್ಷಣಮಾತ್ರ ಸ್ಥಿತಿಗೆ ಭಂಗ ಬರುತ್ತದೆ. ಹಾಗಾದರೆ ಕಾರಣವು ಕ್ಷಣದ ಪೂರ್ವಭಾಗದಲ್ಲಿ ಸ್ಥಿತಿಯನ್ನು ಹೊಂದಿದ್ದು, ಕ್ಷಣದ ಮಧ್ಯಭಾಗದಲ್ಲಿ ಕಾರ್ಯವನ್ನು ಹುಟ್ಟಿಸಿ, ಕೊನೆಯ ಭಾಗದಲ್ಲಿ ಕಾರ್ಯದಲ್ಲಿ ಸಂಸ್ಕಾರವನ್ನು ಇಟ್ಟು ನಾಶಹೊಂದುತ್ತದೆ ಎಂದು ಅಂಗೀಕರಿಸಿದರೆ ದೋಷವೇನು? ಎಂಬ ಆಶಂಕೆಯನ್ನು 'ಪೂರ್ವ' ಇತ್ಯಾದಿ ವಚನದಿಂದ ಪರಿಹರಿಸುತ್ತಾರೆ. ಪೂರ್ವಭಾಗ, ಮತ್ತು ಅಪರಭಾಗಗಳು ಇಲ್ಲದಿರುವಾಗ ಅದರಿಂದ ನಿರೂಪಿಸಲ್ಪಡುವ ಮಧ್ಯಭಾಗದ ಅಭಾವವೂ ಸಿದ್ಧವಾಗುತ್ತದೆ. ಪೂರ್ವ, ಮಧ್ಯ ಹಾಗೂ ಅಪರ ಎಂಬ ಭಾಗಗಳಿಲ್ಲದ ಸ್ಥಿತಿಯನ್ನೇ ಕ್ಷಣವೆಂದು ಸೌಗತರು (ಬೌದ್ಧರು) ಅಂಗೀಕರಿಸುತ್ತಾರೆ. ಈ ಕಾರಣದಿಂದ ಬೌದ್ಧರ ಕ್ಷಣಿಕತ್ವ ವಾದವು ನಿರಾಕರಿಸಲ್ಪಡುತ್ತದೆ.

ಹೀಗೆ ಕ್ಷಣಿಕತ್ವ ಸಾಧಕ ಅನುಮಾನಕ್ಕೆ ಅನುಗ್ರಾಹಕವಾದ ತರ್ಕಕ್ಕೆ ಪ್ರತಿತರ್ಕದಿಂದ ಪರಾಭವಗೊಳಿಸಿ, ಈಗ ಸ್ಥಿರವಾದ ವಸ್ತುವಿಗೆ ಅರ್ಥಕ್ರಿಯಾಕಾರಿತ್ವರೂಪ ಸತ್ವವು ಹೇಗೆ ಸಂಭವಿಸುವುದಿಲ್ಲವೋ ಹಾಗೆ ಕ್ಷಣಿಕ ವಸ್ತುವಿಗೂ ಸತ್ವವು ಸಂಭವಿಸುವುದಿಲ್ಲವಾದ್ದರಿಂದ ತರ್ಕದೋಷವು ಬರುತ್ತದೆ ಎಂದು ಪ್ರತಿಪಾದಿಸಲು '**ಓಂ ಅಸತಿ ಪ್ರತಿಜ್ಞೋಪರೋಧೋ ಯೌಗಪದ್ಯಮನ್ಯಥಾ ಓಂ**' ಎಂಬ ಸೂತ್ರವು ಹೊರಟಿದೆ. ಈ ಸೂತ್ರವನ್ನು 'ಪೂರ್ವ' ಇತ್ಯಾದಿ ವಚನದಿಂದ ವ್ಯಾಖ್ಯಾನ ಮಾಡುತ್ತಾರೆ –

**ಪೂರ್ವಭಾವಭವಂ ಕಾರ್ಯಮುತ ತನ್ನಾಶಸಂಭವಮ್ ॥೨೦೩॥**

**ಯೌಗಪದ್ಯಂ ಸತಿ ಭವೇದುತ್ಪಾದ್ಯಾನಾಮಶೇಷತಃ ।**

**ವಿನಾಶೇ ಚೇನ್ನ ತತ್ಕಾರ್ಯಂ ಕಾರ್ಯೋತ್ಪತ್ತೌ ಚ ಕಾ ಪ್ರಮಾ ॥೨೦೪॥**

ಕಾರ್ಯವು ಕಾರಣವಿರುವಾಗ ಆಗುವುದೋ? ಅಥವಾ ಕಾರಣದ ನಾಶವಾದ ಮೇಲೆ ಆಗುವುದೋ? ಕಾರಣವಿದ್ದಾಗಲೇ ಕಾರ್ಯವು ಸಂಭವಿಸುವುದಾದರೆ ಮುಂದಿನ ಎಲ್ಲ ಕಾರ್ಯಗಳಿಗೆ ಏಕಕಾಲದಲ್ಲಿ ಉತ್ಪತ್ತಿಯು ಬರಬೇಕಾದೀತು. ಕಾರಣ ವಿನಾಶವಾದ ಮೇಲೆ ಕಾರ್ಯವು ಉಂಟಾಗುವುದೆಂದರೆ, ಆಗ ಅದು ಆದರ ಕಾರ್ಯವೆನಿಸುವುದಿಲ್ಲ. ಹಾಗೂ ಪ್ರತಿಕ್ಷಣದಲ್ಲಿಯೂ ಕಾರ್ಯೋತ್ಪತ್ತಿಯು ಎಂಬುದಕ್ಕೆ ಯಾವ ಪ್ರಮಾಣವಿದೆ? ಯಾವ ಪ್ರಮಾಣವೂ ಇಲ್ಲವೆಂದು ಅರ್ಥ.

ಹಾಗಾದರೆ ದೇಹಾದಿಗಳಿಗೆ ಪೂರ್ವೋತ್ತರ ಕ್ಷಣಗಳಲ್ಲಿ ಪರಿಮಾಣಭೇದವು ಇರುವುದರಿಂದ ಭೇದದ ಸಿದ್ಧಿಯಾಗುವುದರಿಂದ, ಕ್ಷಣಿಕತ್ವದ ಸಿದ್ಧಿಯೂ ಆಗುವುದೆಂದು ಹೇಳಲಾಗಿದೆ ಎಂದರೆ, ಅದಕ್ಕೆ ಉತ್ತರವನ್ನು 'ಅಭೇದೇಽಪಿ' ಇತ್ಯಾದಿ ವಾಕ್ಯದಿಂದ ಹೇಳುತ್ತಾರೆ –

**ಅಭೇದೇಽಪಿ ವಿಶೇಷೇಣ ದೇಹದೀಪಫಲಾದಿಷು ।**

**ವಿಶೇಷದರ್ಶನಂ ಯುಕ್ತಮಸ್ಮಾಕಮನುಭೂತಿತಃ ॥೨೦೫॥**

**ವಿಶೇಷದರ್ಶನಂ ಮಾನಂ ಯದಿ ನ ಸ್ಥೈರ್ಯದೃಕ್ಕುತಃ ।**

**ದಿಕ್ಸುಖೇ ಚ ಖದೃಷ್ಟಾಂತಾದ್ಭಾವೌ ಸಚ್ಚೇತ್ಕ್ವಚಿದ್ಭವೇತ್ ॥೨೦೬॥**

ಪೂರ್ವೋತ್ತರಕ್ಷಣಗಳಲ್ಲಿ ವಸ್ತುಭೇದವಿಲ್ಲದಿದ್ದರೂ, 'ವಿಶೇಷೇಣ' ಅಂದರೆ ಆರಂಭ ವಾದಕ್ಕಿಂತ ವೈಲಕ್ಷಣ್ಯವಿರುವುದರಿಂದ, ದೇಹ ದೀಪ ಫಲ ಅಂಕುರ ಮುಂತಾದವುಗಳಲ್ಲಿ ಪರಿಮಾಣಭೇದದರ್ಶನವು (ಪರಿಮಾಣವ್ಯತ್ಯಾಸವು) ನಮ್ಮ ಮತದಲ್ಲಿ ಯುಕ್ತವಾಗುತ್ತದೆ. ಆದರೆ ಆರಂಭವಾದಿಗಳು ಪರಿಮಾಣವನ್ನು ದ್ರವ್ಯವಿರುವವರೆಗೂ ಇರುವಂಥಹದು ಎಂದು ಅಂಗೀಕರಿಸುತ್ತಾರೆ. ಅವರ ಮತದಲ್ಲಿ ಪರಿಮಾಣದಲ್ಲಿನ ವ್ಯತ್ಯಾಸವು ದ್ರವ್ಯದ ಭೇದವನ್ನು ತಿಳಿಸುತ್ತದೆ.

'ಇದು ಆ ಹಣ್ಣು' ಎಂಬ ಪ್ರತ್ಯಭಿಜ್ಞೆಯಿಂದ ಪೂರ್ವೋತ್ತರ ಕ್ಷಣಗಳಲ್ಲಿ ವಸ್ತುವಿಗೆ ಅಭೇದವು ಸಿದ್ಧಿಸುವುದರಿಂದ, ಪರರ ಅನುಮಾನವು ಪ್ರಮಾಣಬಾಧಿತ ವಿಷಯವುಳ್ಳದ್ದು. ವಿಶೇಷದರ್ಶನವು ಪ್ರಮಾಣವೆಂಬ ಪಕ್ಷದಲ್ಲಿ, ಸ್ಥಿರತ್ವಸಾಧಕ ಪ್ರತ್ಯಭಿಜ್ಞೆಯು ಏಕೆ ಪ್ರಮಾಣವಾಗಲಾರದು? ಆಕಾಶ ದೃಷ್ಟಾಂತದಿಂದ ಭಾವ ವಸ್ತುವು ಕೆಲವು ಕಡೆಗಳಲ್ಲಿ ಇರುವುದಾದರೆ ದಿಕ್ ಸುಖಗಳೂ ಭಾವಗಳಾಗುವವು.

ಆಕಾಶದ ಭಾಗಗಳೇ ದಿಕ್ಕುಗಳು. ಆದರೂ ಆಕಾಶಕ್ಕೆ ಭಾಗಗಳಿವೆಯೆಂದು ತಿಳಿಸಲು ದಿಕ್ಕುಗಳನ್ನು ಗ್ರಹಿಸುತ್ತೇವೆ. ಆಕಾಶದಲ್ಲಿ ಭಾವತ್ವಸಾಧಕನ್ಯಾಯವು ಸುಖದಲ್ಲಿಯೂ ಸಮಾನವಾದ್ದರಿಂದ ಭಾವತ್ವವು.

ಇನ್ನು ವೈಭಾಷಿಕರು ಪ್ರಮಾಣವು ಪ್ರತ್ಯಕ್ಷ ಅನುಮಾನವೆಂದು ಎರಡೇ ವಿಧವುಳ್ಳದ್ದು. ಇವೆರಡರಲ್ಲಿ ಜ್ಞಾನವನ್ನು ಬಿಟ್ಟು ಉಳಿದ ಪದಾರ್ಥವೆಲ್ಲವೂ ಅನುಮೇಯವು ಅಂದರೆ ಅನುಮಾನದಿಂದ ತಿಳಿಯುವಂಥಹುದು, ಅವು ಪ್ರತ್ಯಕ್ಷಕ್ಕೆ ವಿಷಯವಾಗುವುದಿಲ್ಲ ಎಂದು ಹೇಳುತ್ತಾರೆ. ಇದನ್ನು ಏಕೆ ನಿರಾಕರಿಸಲಿಲ್ಲ? ಎಂದು ಕೇಳಿದರೆ, ಅದನ್ನು 'ವಿಶ್ವಂ' ಇತ್ಯಾದಿ ವಚನದಿಂದ ಉತ್ತರಿಸುತ್ತಾರೆ –

**ವಿಶ್ವಂ ಪ್ರತ್ಯಕ್ಷಗಂ ತ್ಯಕ್ತ್ವಾ ತಯೋರ್ಯೋಽನುಮಿತಂ ವದೇತ್ ।**

**ಮಾಯಾವಾದಿವದೇವಾಸಾವುಪೇಕ್ಷ್ಯೋ ಭೂತಿಮಿಚ್ಛತಾ ॥೨೦೭॥**

ಯಾವನು ವಿಶ್ವವು ಪ್ರತ್ಯಕ್ಷದಿಂದ ವೇದ್ಯವಲ್ಲ, ಅನುಮಾನದಿಂದ ವೇದ್ಯವು ಎಂದು ಹೇಳುತ್ತಾನೋ, ಅವನು ಮಾಯಾವಾದಿಯಂತೆ ಉಪೇಕ್ಷೆಗೆ ಅರ್ಹನು.

ಇನ್ನು ನೀಲ ಮುಂತಾದ ರೂಪವಾದ ವಿಶ್ವವು ಪ್ರತ್ಯಕ್ಷಕ್ಕೆ ಅವೇದ್ಯವೆಂಬ ಸಿದ್ಧಾಂತವನ್ನು ಸೂತ್ರಕಾರರು ನಿರಾಕರಿಸಿಲ್ಲವಾದ್ದರಿಂದ ಅದು ಅವರಿಗೆ ಸಮ್ಮತವು ಎಂದು ಶಂಕಿಸಬಾರದು. ಏಕೆಂದರೆ ಪ್ರಮಾಣಕ್ಕೆ ಅವಿರುದ್ಧವೂ, ಪ್ರಮಾಣಕ್ಕೆ ಅನುಸಾರಿಯಾದುದೂ ಯಾವುದೋ ಅದೇ ಸೂತ್ರಕಾರರ ಅಭಿಪ್ರಾಯವೆಂದು ತಿಳಿಯಬೇಕು. ರೂಪಾದಿ ಪ್ರಪಂಚವು ಪ್ರತ್ಯಕ್ಷಕ್ಕೆ ಅವೇದ್ಯ ಎಂಬುದು ಪ್ರಮಾಣಕ್ಕೆ ವಿರುದ್ಧವಾದ್ದರಿಂದ ಅದು ಸೂತ್ರಕಾರರಿಗೆ ಸಮ್ಮತವಲ್ಲ. ಈ ಅಭಿಪ್ರಾಯವನ್ನೇ 'ಸರ್ವ' ಇತ್ಯಾದಿ ವಚನದಿಂದ ಆಕ್ಷೇಪಪೂರ್ವಕವಾಗಿ ಹೇಳುತ್ತಾರೆ –

**ಸರ್ವಪ್ರಮಾಣಸಿದ್ಧಂ ಯದ್ಬುದ್ಧೇರ್ಭೇದೇನ ಸರ್ವದಾ ।**

**ಕಥಂ ನು ತಸ್ಯ ಬುದ್ಧಿತ್ವಂ ವಿಶ್ವಮನ್ಯಚ್ಚ ಕಿಂ ಪ್ರಮಮ್ ॥೨೦೮॥**

ಯಾವುದು ಬುದ್ಧಿಯಿಂದ ಭಿನ್ನವೆಂದು ಸರ್ವದಾ ಸರ್ವಪ್ರಮಾಣಸಿದ್ಧವೋ ಅಂಥ ಪ್ರತ್ಯಕ್ಷಕ್ಕೆ ಗೋಚರವಾಗುವ ನೀಲ ಮುಂತಾದ ಪದಾರ್ಥ ಸಮೂಹಕ್ಕೆ ಬುದ್ಧಿರೂಪತ್ವವು ಹೇಗೆ? ಜ್ಞಾನಭಿನ್ನ ಜಗತ್ತು ಪ್ರತ್ಯಕ್ಷಕ್ಕೆ ವೇದ್ಯವಲ್ಲವೆಂದರೆ ಬೇರೆ ಯಾವ ಪ್ರಮಾಣವನ್ನು ಹೊಂದಿದೆ?

ಈ ಮತದಲ್ಲಿ ಇನ್ನೂ ಅನೇಕ ಸ್ಪಷ್ಟವಾದ ಮಹಾದೋಷಗಳಿದ್ದು ಅವುಗಳನ್ನು ಶಿಷ್ಯರೇ ಗುರುತಿಸಿ, ಈ ಮತವನ್ನು ಹೇಯವೆಂದು ತಿಳಿಯಲು ಶಕ್ಯವಾದುದರಿಂದ ಅದನ್ನು ದೂಷಿಸಲಿಲ್ಲವೆಂಬುದಾಗಿ ಹೇಳುತ್ತಾರೆ –

**ಸರ್ವಲೋಕೋ ಬಿಭೇತ್ಯಂಜೋ ಯಸ್ಮಾದನುಭವಾತ್ಸದಾ ।**

**ತಸ್ಯಾಪಲಾಪಿನಃ ಕಿಂ ನ ನಿಷ್ಪ್ರಮಾಣಕವಾದಿನಃ ॥೨೦೯॥**

ಯಾವ ಅನುಭವಕ್ಕೆ ಎಲ್ಲ ಜನರೂ ಬಹಳವಾಗಿ ಹೆದರುವರೋ, ಅದನ್ನು ಅಲ್ಲಗಳೆಯುವ ಹಾಗೂ ಅಪ್ರಾಮಾಣಿಕವಾದುದನ್ನು ನುಡಿಯುವ ಸೌತ್ರಾಂತಿಕನಿಗೆ ಯಾವ ದೂಷಣವು ತಾನೆ ಬರಲಾರದು? ಅಂದರೆ ಎಲ್ಲ ದೂಷಣಗಳೂ ಬಂದೇ ಬರುತ್ತವೆ ಎಂದು ತಾತ್ಪರ್ಯ.

ಪರಪಕ್ಷದಲ್ಲಿ ಅನುಭವ ವಿರೋಧವು ಹೇಗೆ ಎಂಬುದನ್ನು ತೋರಿಸುತ್ತಾರೆ –

**ಸೋಽಹಂ ತದಿದಮೇವಾಹಂ ಸುಖೀ ಸದ್ಗಗನಂ ದಿಶಃ ।**

**ಸತ್ಯಾ ಇತ್ಯಾದ್ಯನುಭವಾಃ ಸದಾ ತತ್ಪ್ರತಿಪಕ್ಷಗಾಃ ॥೨೧೦॥**

ಅವನೇ ನಾನು, ಅದು ಇದೇ, ನಾನು ಸುಖಿ, ಆಕಾಶ ಭಾವರೂಪವಾದುದು, ದಿಕ್ಕುಗಳು ಭಾವರೂಪವಾದವುಗಳು ಮುಂತಾದ ಅನುಭವಗಳು ಯಾವಾಗಲೂ ಅವರ ಪಕ್ಷಕ್ಕೆ ಪ್ರತಿಪಕ್ಷಗಳು. ಅಂದರೆ ಅವರು ಒಪ್ಪಿದ ಅರ್ಥಗಳಿಗೆ ವಿರುದ್ಧವಾದ ಅರ್ಥಗಳನ್ನು ವಿಷಯೀಕರಿಸುತ್ತವೆ.

**ಅತೋ ನಿರ್ಮಾನಮಖಿಲಪ್ರಮಾಣಪ್ರತಿಪಕ್ಷಗಮ್ ।**

**ದುರ್ಮತಂ ಕೋ ನು ಗೃಹ್ಣೀಯಾದ್ವಿನಾಽಸುರತತಿಂ ಕ್ವಚಿತ್ ॥೨೧೧॥**

ಆದ್ದರಿಂದ ಪ್ರಮಾಣರಹಿತವಾದ ಹಾಗೂ ಎಲ್ಲ ಪ್ರಮಾಣಗಳಿಗೆ ವಿರುದ್ಧಾರ್ಥ ವಿಷಯಕವಾದ ಆ ದುಷ್ಟಮತವನ್ನು ದುರ್ಜನರ ಸಮುದಾಯವಲ್ಲದೆ ಬೇರೆ ಯಾರು ತಾನೆ ಸ್ವೀಕರಿಸಿಯಾರು?

## ಶೂನ್ಯಾಧಿಕರಣಮ್

ಈ ಅಧಿಕರಣದಲ್ಲಿ ಮಾಧ್ಯಮಿಕರ ಮತವನ್ನು ನಿರಾಕರಿಸುತ್ತಾರೆ. ಮಾಧ್ಯಮಿಕ ಮತವು ಹಿಂದೆ ಹೇಳಿದ ಅರ್ಥಕ್ಕೆ ವಿರುದ್ಧವಾಗಿದೆ ಎಂಬುದನ್ನು ತೋರಿಸಲು, ಆ ಮತವನ್ನು 'ಅಪರಃ' ಇತ್ಯಾದಿ ವಚನದಿಂದ ಉಪನ್ಯಾಸ ಮಾಡುತ್ತಾರೆ –

**ಅಪರಃ ಶೂನ್ಯಮಖಿಲಂ ಮನೋವಾಚಾಮಗೋಚರಮ್ ।**

**ನಿರ್ವಿಶೇಷಂ ಸ್ವಯಂ ಭಾತಂ ನಿರ್ಲೇಪಮಜರಾಮರಮ್ ॥೨೧೨॥**

ಇನ್ನೊಬ್ಬನು (ಮಾಧ್ಯಮಿಕನು) ಪಂಚಸ್ಕಂಧಾತ್ಮಕವಾದ ಸಕಲ ಜಗತ್ತು ಶೂನ್ಯವೇ (ಶೂನ್ಯದಿಂದ ಭಿನ್ನವಲ್ಲ). ಅದು ಮನೋವಚನಗಳಿಗೆ ಅಗೋಚರವು,

ಅಂದರೆ ಅವಿಷಯವು. ನಿರ್ಧರ್ಮಕವಾದುದು. ಪರಪ್ರಕಾಶ್ಯವಲ್ಲ. ಲೇಪರಹಿತ, ಅಂದರೆ ಪುಣ್ಯ– ಪಾಪ ಧರ್ಮಾಧರ್ಮಗಳ ಲೇಪವಿಲ್ಲ. ಮುಪ್ಪು ಮರಣಗಳಿಲ್ಲದ್ದು.

**ಅಶೇಷದೋಷರಹಿತಮನಂತಂ ದೇಶಕಾಲತಃ ।**

**ವಸ್ತುತಶ್ಚ ತದಸ್ಮೀತಿ ನಿತ್ಯೋಪಾಸಾಪರೋಕ್ಷಿತಮ್ ॥೨೧೩॥**

ದುಃಖಾದಿ ಸಕಲದೋಷರಹಿತವು. ದೇಶಕಾಲಗಳಿಂದ ಅನಂತವು. ವಸ್ತುತಃ ಅನಂತವು ಅಂದರೆ ವಸ್ತುವಸ್ತುಗಳಲ್ಲಿ ಭೇದವಿಲ್ಲದಿರುವಿಕೆ. ಆ ಶೂನ್ಯನೇ ನಾನು ಆಗಿದ್ದೇನೆ ಎಂಬ ನಿತ್ಯೋಪಾಸನೆಯಿಂದ ಅಪರೋಕ್ಷೀಕರಿಸಲ್ಪಟ್ಟದ್ದು.

**ರಾಗಾದಿದೋಷರಹಿತಂ ತದ್ಭಾವಂ ಯೋಗಿನಂ ನಯೇತ್ ।**

**ತಸ್ಯೈವಾನಾದಿಸಂವೃತ್ಯಾ ನಾನಾಭೇದಾತ್ಮಕಂ ಜಗತ್ ॥೨೧೪॥**

**ಸದಿವಾಭಾತಿ ಸತ್ಯತ್ವಂ ಸಾಂವೃತಂ ತಸ್ಯ ಚೇಷ್ಯತೇ ।**

**ಪಾರಾಮಾರ್ಥಿಕಸತ್ಯತ್ವಂ ಶೂನ್ಯಾದನ್ಯಸ್ಯ ನ ಕ್ವಚಿತ್ ॥೨೧೫॥**

ಆ ಶೂನ್ಯವು ರಾಗಾದಿ ದೋಷರಹಿತನಾದ ಯೋಗಿಯನ್ನು ಶೂನ್ಯಭಾವರೂಪ ಮೋಕ್ಷಕ್ಕೆ ಒಯ್ಯುತ್ತದೆ. ಶೂನ್ಯದ ಸಂಬಂಧಿಯೇ ಆದ ಅನಾದಿಯಾದ ಅವಿದ್ಯೆಯಿಂದ ನಾನಾ ಭೇದಾತ್ಮಕವಾದ ಜಗತ್ತು ಸತ್ಯವೆಂಬುದಾಗಿ ತೋರುತ್ತದೆ. ಆರೋಪಿತವಾದ ಜಗತ್ತಿಗೆ ಅವಿದ್ಯಾಕಲ್ಪಿತ (ಸಾಂವೃತ) ಸತ್ಯತ್ವವು ಅಂಗೀಕರಿಸಲ್ಪಡುತ್ತದೆ. ಶೂನ್ಯವನ್ನು ಬಿಟ್ಟು ಬೇರೆ ಯಾವುದೂ ಪಾರಮಾರ್ಥಿಕ (ಆತ್ಯಂತಿಕ) ಸತ್ಯತ್ವವು ಇರುವುದಿಲ್ಲ.

**ಸಾಂವೃತೇನೈವ ಸತ್ವೇನ ವ್ಯವಹಾರೋಽಖಿಲೋ ಭವೇತ್ ।**

**ಶೂನ್ಯಾತ್ಸಂವೃತಿಯೋಗೇನ ವಿಶ್ವಮೇತತ್ಪ್ರವರ್ತತೇ ॥೨೧೬॥**

**ಸೃಷ್ಟಿಕಾಲೇ ಪುನಶ್ಶಾಂತೇ ಸ್ತಿಮಿತಂ ಶೂನ್ಯತಾಂ ವ್ರಜೇತ್ ।**

ಎಲ್ಲ ವ್ಯವಹಾರವೂ ಸಾಂವೃತ ಸತ್ಯತೆದಿಂದಲೇ ಆಗುವುದು. ಶೂನ್ಯತತ್ವದ ದೆಶೆಯಿಂದ ಅಜ್ಞಾನದ ಸಂಬಂಧದಿಂದ ಈ ಜಗತ್ತು ಸೃಷ್ಟಿಕಾಲದಲ್ಲಿ ಹುಟ್ಟುತ್ತದೆ ಮತ್ತು ಪ್ರಲಯದಲ್ಲಿ ನಿಷ್ಕ್ರಿಯವಾಗಿ ಶೂನ್ಯತ್ವವನ್ನು ಹೊಂದುತ್ತದೆ.

**ಇತಿ ಬ್ರೂತೇ ತಮುದ್ದಿಶ್ಯ ಜಗಾದ ಜಗತಾಂ ಗುರುಃ ॥೨೧೭॥**

ಹೀಗೆ ಹೇಳುವ ಮಾಧ್ಯಮಿಕನನ್ನು ಉದ್ದೇಶಿಸಿ ಜಗದ್ಗುರುಗಳಾದ ಬಾದರಾಯಣರು ಈ ಅಧಿಕರಣವನ್ನು ಹೇಳಿದರು.

**ಸೂತ್ರ: ಓಂ ನಾಸತೋಽದೃಷ್ಟತ್ವಾತ್ ಓಂ**

ಶೂನ್ಯದಿಂದಲೇ ಜಗತ್ತು ಹುಟ್ಟುತ್ತದೆ ಎಂದು ಯಥಾಶ್ರುತವಾಗಿ ಹೇಳಿರುವುದನ್ನು ನಿರಾಕರಿಸಲು ಈ ಸೂತ್ರವು ಹೊರಟಿದೆ. ಅದನ್ನು 'ನಾಸತೋ' ಇತ್ಯಾದಿ ವಚನದಿಂದ ವ್ಯಾಖ್ಯಾನಿಸುತ್ತಾರೆ –

**ನಾಸತೋ ಜಗತೋ ಭಾವೋ ನ ಹಿ ದೃಷ್ಟಾಸತೋ ಜನಿಃ ।**

**ಸತಃ ಕ್ವಚಿತ್ಪ್ರಮಾಣಂ ಚ ದೃಷ್ಟಿರೇವಾಖಿಲಾದ್ವರಮ್ ।।೨೧೮।।**

ಅಸತ್ ಅಥವಾ ಶೂನ್ಯದಿಂದ ಜಗತ್ತಿನ ಉತ್ಪತ್ತಿಯು ಸಂಭವಿಸುವುದಿಲ್ಲ. ಏಕೆಂದರೆ ಯಾವುದೇ ಉಂಟಾಗತಕ್ಕ ಕಾರ್ಯಕ್ಕೆ ಅಸತ್ತಿನಿಂದ ಜನನವು ಎಲ್ಲಿಯೂ ಕಂಡಿಲ್ಲ. ಪ್ರತ್ಯಕ್ಷವೇ ಎಲ್ಲ ಆಗಮ ಹಾಗೂ ಅನುಮಾನಗಳಿಗಿಂತಲೂ ಶ್ರೇಷ್ಠವಾದ ಪ್ರಮಾಣವು.

ಹಾಗಾದರೆ ಶೂನ್ಯದಿಂದ ಜಗತ್ತಿನ ಉತ್ಪತ್ತಿಯೆಂಬ ವಿಷಯದಲ್ಲಿ ಪ್ರತ್ಯಕ್ಷ ಮತ್ತು ಆಗಮಗಳು ಪ್ರಮಾಣವಾಗದಿರಲಿ. ಆದರೆ ಅನುಮಾನವು ಪ್ರಮಾಣವಾಗುತ್ತದೆ ಎಂದು ಹೇಳಿದರೆ, ಆ ಅನುಮಾನಕ್ಕೆ ತರ್ಕದಿಂದ ಪ್ರತಿಘಾತವನ್ನು ಹೇಳಲು '**ಓಂ ಉದಾಸೀನಾ ನಾಮಪಿ ಚೈವಂ ಸಿದ್ಧಿಃ ಓಂ**' ಎಂಬ ಸೂತ್ರವು. ಅದನ್ನು 'ಯದ್ಯೇವಂ' ಇತ್ಯಾದಿ ವಾಕ್ಯದಿಂದ ವ್ಯಾಖ್ಯಾನ ಮಾಡುತ್ತಾರೆ –

**ಯದ್ಯೇವಂ ಸಪ್ತಮರಸಾನ್ಮಧುರಾದಿವ ಪೀನತಾ ।**

**ಭವೇಜ್ಜನಸ್ಯ ಮಾರ್ಜಾರಶೃಂಗಂ ಗೋರಿವ ಘಾತಕಮ್ ।।೨೧೯।।**

ಹೀಗೆ ಅಸತ್ತಿನಿಂದಲೇ ಕಾರ್ಯವೊಂದು ಹುಟ್ಟುತ್ತದೆ ಎಂದರೆ, ಮಧುರ ರಸದಿಂದ ಹೇಗೋ ಹಾಗೆ ಸಪ್ತಮ ರಸದಿಂದಲೂ ಜನರ ದೇಹಪುಷ್ಟಿಯು ಆಗಲಿ, ಗೋವಿನ ಶೃಂಗದಂತೆ ಬೆಕ್ಕಿನ ಶೃಂಗವೂ ಘಾತಕವಾಗಲಿ.

**ಕಾರ್ಯಾರ್ಥೀ ಕಾರಣಂ ಸಚ್ಚ ನೋಪಾದದ್ಯಾತ್ಕಥಂಚನ ।**

**ನ ಪ್ರವರ್ತೇತ ಚೇಷ್ಟಾಯ ಶೂನ್ಯಾದೇವೇಷ್ಟಸಂಭವಾತ್ ।।೨೨೦।।**

**ದೇಶಕಾಲಾದಿನಿಯಮೋ ನ ಹಿ ಶೂನ್ಯಾತ್ಸತೋ ಭವೇತ್ ।**

ಪಟ ಮುಂತಾದ ಕಾರ್ಯವನ್ನು ಅಪೇಕ್ಷಿಸುವ ನೇಕಾರ ಮುಂತಾದವರು ಸತ್ಯವಾದ ತಂತು ಮುಂತಾದ ಉಪಾದಾನ ಕಾರಣಗಳನ್ನು ಸ್ವೀಕಾರಮಾಡದಿರಲಿ. ಏಕೆಂದರೆ ಅಸತ್ತಿನಿಂದಲೇ ಪಟಾದಿಗಳು ಉತ್ಪತ್ತಿಯಾಗುತ್ತವೆ. ಶೂನ್ಯದಿಂದಲೇ ಇಷ್ಟಕಾರ್ಯವು ಸಂಭವಿಸುವುದರಿಂದ ಯಾರೂ ಕೂಡ ಪಟದ ನಿರ್ಮಾಣ

ಮುಂತಾದ ಕಾರ್ಯದಲ್ಲಿ ತೊಡಗುವುದೇ ಇಲ್ಲ. ಅಸತ್ತಿನಿಂದ ಸತ್ಯ ಪದಾರ್ಥಗಳ ಸೃಷ್ಟಿಯನ್ನು ಒಪ್ಪುವುದಾದರೆ, ತಂತು ಮುಂತಾದ ಉಪಾದಾನ ಪದಾರ್ಥಗಳು ಪುರುಷನ ಇಚ್ಛಾ ಪ್ರಯತ್ನಾದಿಗಳು ಇಲ್ಲದಿದ್ದರೂ ಪಟಾದಿಗಳ ಉತ್ಪತ್ತಿಯು ಆಗಬೇಕಾಗುತ್ತದೆ. ಜೊತೆಗೆ ಶೂನ್ಯದಿಂದಾಗುವ ಕಾರ್ಯಕ್ಕೆ ಯಾವುದೇ ದೇಶಕಾಲಾದಿ ನಿಯಮವು ಇರುವುದಿಲ್ಲ.

ಹಾಗಾದರೆ ಆದಿಸೃಷ್ಟಿಯ ಸಮಯದಲ್ಲಿ ಮಾತ್ರವೇ ಶೂನ್ಯದಿಂದ ಕಾರ್ಯದ ಉತ್ಪತ್ತಿಯು, ಸರ್ವದಾ ಅಲ್ಲವೆಂದು ಹೇಳುತ್ತೇವೆ. ಆದಿಕಾಲವನ್ನು ಹೊರತು ಪಡಿಸಿದ ಕಾಲಗಳಲ್ಲಿಯಾದರೋ ಕರ್ತೃ ಮುಂತಾದ ಕಾರಣಗಳ ಸಮೂಹದಿಂದಲೇ ಕಾರ್ಯದ ಉತ್ಪತ್ತಿಯೆಂದು ಹೇಳುತ್ತೇವೆ. ಆದ್ದರಿಂದ ಅತಿಪ್ರಸಂಗವು ಬರುವುದಿಲ್ಲ. ಈ ಆಕ್ಷೇಪವನ್ನು 'ಪುರುಷೇಚ್ಛಾನುಸಾರೇಣ' ಇತ್ಯಾದಿ ವಾಕ್ಯದಿಂದ ಪರಿಹರಿಸುತ್ತಾರೆ –

**ಪುರುಷೇಚ್ಛಾನುಸಾರೇಣ ಯದಿ ಕಿಂಚಿತ್ಪ್ರಜಾಯತೇ ।।೨೨೧।।**

**ಕಿಂ ನಾನುಮೀಯತೇ ತದ್ವದ್ವಸ್ತುತ್ವಾತ್ಪುರುಷೋದ್ಭವಃ ।**

**ಸರ್ವಸ್ಯಾಪಿ ......................................।।**

ಒಂದು ಪಕ್ಷದಲ್ಲಿ ಪುರುಷನ ಇಚ್ಛೆಗೆ ಅನುಸಾರವಾಗಿ ಯಾವುದೇ ಈಗಿನ ಕಾಲದ ಕಾರ್ಯವು ಹುಟ್ಟುವುದಾದರೆ, ಇದೇ ಕಾರ್ಯತ್ವ ಯುಕ್ತಿಯಿಂದ ಆದಿಕಾಲೀನ ಸರ್ವ ಕಾರ್ಯಕ್ಕೂ ಪುರುಷೇಚ್ಛಾನುಸಾರವಾದ ಉತ್ಪತ್ತಿಯನ್ನು ಏಕೆ ಅನುಮೇಯಿಸಬಾರದು?

ಹೀಗೆ ಅಸತ್ತಿಗೆ ಜಗತ್ಕಾರಣವನ್ನು ಹೇಳುವುದರ ಮೂಲಕ ವಿಶ್ವಕ್ಕೆ ಅಸತ್ವವನ್ನು ಪ್ರತಿಪಾದಿಸುವ ಮತವನ್ನು ನಿರಾಕರಿಸಲು **'ಓಂ ನಾಭಾವ ಉಪಲಬ್ಧೇಃ ಓಂ'** ಎಂಬ ಸೂತ್ರವು ಹೊರಟಿದೆ. ಈ ಸೂತ್ರವನ್ನು 'ನ ಚಾಭಾವೋ' ಇತ್ಯಾದಿ ವಚನದಿಂದ ವ್ಯಾಖ್ಯಾನಿಸುತ್ತಾರೆ –

**................ನ ಚಾಭಾವೋ ವಿಶ್ವಂ ಸದಿತಿ ಗಮ್ಯತೇ ।।೨೨೨।।**

**ಯತೋಽನುಭವವಿರೋಧೇ ತು ವಚನಂ ವಾದಿನಃ ಕುತಃ ।**

'ಭವತೀತಿ ಭಾವಃ। ನ ಭಾವೋಽಭಾವಃ।' ಇರುವುದು ಭಾವ, ಇಲ್ಲದಿರುವುದು ಅಭಾವ. ಹೀಗೆ ಅಭಾವ ಎಂದರೆ ಅಸತ್ ಎಂದರ್ಥ. ಪ್ರತ್ಯಕ್ಷ ಪ್ರಮಾಣದಿಂದ ವಿಶ್ವವು ಸತ್ಯವೆಂದೇ ತಿಳಿಯಲ್ಪಡುವುದರಿಂದ, ಸಮಸ್ತ ವಿಸ್ವವು ಅಸತ್ತು ಎಂಬುದು ಅಸಂಭವ. ಸತ್ಯವೆಂದು ಅನುಭವದಲ್ಲಿ ತೋರುವುದೂ ಅಸತ್ಯವೆಂದಾದರೆ, ವಿಶ್ವವು ಅಸತ್ಯ ಎಂಬ ಶೂನ್ಯವಾದಿಯ ವಚನವೂ ಅಸತ್ಯವೇ ಆಗಬೇಕಾಗುವುದು. ಅಂದರೆ

ವಿಶ್ವವು ಅಸತ್ಯ ಎಂಬ ಅವನ ವಾದವು ಸಿದ್ಧಿಸುವುದಿಲ್ಲ.

**ಸ್ವಪ್ನಭ್ರಾಂತಿವದೇವೇದಂ ಸಂವೃತ್ಯೈವೋಪಲಭ್ಯತೇ ।।೨೨೩।।**

**ಯದಿ ಸತ್ತ್ವೇನ ..................................।**

ಸ್ವಪ್ನ ಭ್ರಾಂತಿಗಳಲ್ಲಿ ಇಲ್ಲದ ಗಜಾದಿಗಳೇ ಸತ್ಯವೆಂಬಂತೆ ತೋರುವ ಹಾಗೆ, ಈ ಜಗತ್ತು ಅವಿದ್ಯೆಯ ಕಾರಣದಿಂದ ಸತ್ಯವೆಂದು ತೋರುತ್ತದೆ. ವಿಶ್ವಕ್ಕೆ ಶೂನ್ಯವು ಕಾರಣ ಎಂದರೆ ಹೀಗೆ ಅರ್ಥ. ಸತ್ಯವೆಂಬ ತೋರಿಕೆಯಿಂದ ವಿಶ್ವದ ಸತ್ಯತೆಯು ಹೇಗೆ ಸಿದ್ಧಿಸುತ್ತದೆ?

ಇಲ್ಲದಿರುವುದನ್ನು ಪ್ರಕಾಶಿಸುವ ಶಕ್ತಿಯುಳ್ಳ ಅವಿದ್ಯೆಯಿಂದಲೇ ಭ್ರಾಂತಿ ವೈಚಿತ್ರ್ಯ ಮುಂತಾದುವೆಲ್ಲವೂ ಸಂಭವಿಸುತ್ತಿರುವಾಗ ಅಧಿಷ್ಠಾನಾದಿಗಳ ಸತ್ಯತೆಯ ಅಂಗೀಕಾರವು ವ್ಯರ್ಥವಾಗುತ್ತದೆ. ಇದರಿಂದ ಶೂನ್ಯವಾದಿಯ ವಚನಕ್ಕೆ ಅಸಿದ್ಧಿಯೂ ಬರುವುದಿಲ್ಲ. ಏಕೆಂದರೆ ಅದು ಪ್ರತ್ಯಕ್ಷದಿಂದಲೇ ಸಿದ್ಧಿಸುತ್ತದೆ. ಹೀಗೆ ಕಲ್ಪಿತ ಸತ್ಯತೆಯ ಮಾತ್ರದಿಂದಲೇ ವ್ಯವಹಾರಗಳು ಸಂಭವವಾಗುತ್ತಿರಲು, ಪಾರಮಾರ್ಥಿಕ ಸತ್ಯತೆಯ ಪ್ರಯೋಜನವು ಇರುವುದಿಲ್ಲ. ಹೀಗೆ ಆಶಂಕೆಯು. ಆದರ ಪರಿಹಾರಕ್ಕಾಗಿ ಹೊರಟ 'ಓಂ ವೈಧರ್ಮ್ಯಾಚ್ಚ ನ ಸ್ವಪ್ನಾದಿವತ್ ಓಂ' ಎಂಬ ಸೂತ್ರವನ್ನು 'ಕಿಂ ಚ' ಇತ್ಯಾದಿ ವಾಕ್ಯದಿಂದ ವ್ಯಾಖ್ಯಾನ ಮಾಡುತ್ತಾರೆ –

**....................ಕಿಂಚಾತ್ರ ಭ್ರಮೋ ನೈವ ನಿವರ್ತತೇ ।**

ಹಗ್ಗದಲ್ಲಿ ತೋರಿದ ಹಾವಿನ ವಿಷಯದಲ್ಲಿ ಹೇಗೋ ಹಾಗೆ ಪ್ರಪಂಚದ ವಿಷಯದಲ್ಲಿ ಸತ್ಯತ್ವದ ಅನುಭವವು ಭ್ರಮರೂಪವಾದರೆ, ಹಿಂದೆ ಹೇಳಿದುದು ಸರಿಯಾಗಬಹುದು. ಆದರೆ ಪ್ರಪಂಚದ ಸತ್ಯತೆಯ ಅನುಭವವು ಭ್ರಮೆಯಲ್ಲ. ಹಾಗೆ ಅದು ಭ್ರಮೆಯಾಗಿದ್ದರೆ, ಈ ಪ್ರಪಂಚದಲ್ಲಿ ಸತ್ಯತೆಯನ್ನು ತೋರಿಸುವ ಭ್ರಮೆಯು ನಿವೃತ್ತಿಯನ್ನೇ ಹೊಂದುವುದಿಲ್ಲವೇಕೆ? ಪ್ರಪಂಚದ ಸತ್ಯತೆಯನ್ನು ತಿಳಿಸುವ ಪ್ರತ್ಯಕ್ಷಜನ್ಯ ಜ್ಞಾನಕ್ಕೆ ಬಾಧಕವನ್ನು ನಾವು ಕಾಣುತ್ತಿಲ್ಲ. ಆದ್ದರಿಂದ ಅದು ಭ್ರಮೆಯಲ್ಲ ಎಂದು ತಾತ್ಪರ್ಯ.

ಹಾಗಾದರೆ ಪ್ರಪಂಚದ ಸತ್ಯತ್ವಕ್ಕೆ ಬಾಧವು ಈಗ ಇಲ್ಲವೆಂದು ಒಪ್ಪಿದರೂ, ಮುಂದಿನ ಕಾಲದಲ್ಲಿ ಅದಕ್ಕೆ ಬಾಧವು ಬರುವುದರಿಂದ ನಿವೃತ್ತಿ ಹೊಂದುವುದು ಎಂದು ಆಶಂಕಿಸಿದರೆ –

**ಅನಾದೇರಸ್ಯ ವಿಶ್ವಸ್ಯ ನಿವೃತ್ತಿರ್ಯದಿ ಚೇಷ್ಯತೇ ।।೨೨೪।।**

**ನಿವೃತ್ತಿಶ್ಚ ನಿವರ್ತೇತ ತಸ್ಯಾ ಭ್ರಾಂತಿತ್ವಸಂಭವಾತ್ ।**

ಅನಾದಿಯಿಂದ ಬಂದಿರುವ ಈ ಜಗತ್ಸತ್ಯತ್ವ ಜ್ಞಾನಕ್ಕೆ ಬಾಧವು ಬರುವುದೆಂದು ಅಂಗೀಕರಿಸುವುದಾದರೆ, ಆ ಬಾಧ ಜ್ಞಾನಕ್ಕೂ ಬಾಧವು ಬರಬೇಕಾಗುವುದು. ಇದರಿಂದ ಪ್ರಪಂಚವು ಸತ್ಯವಲ್ಲ ಎಂಬ ಜ್ಞಾನಕ್ಕೆ ಬಾಧವಿರುವದರಿಂದ ಪ್ರಪಂಚವು ಸತ್ಯವೆಂದೇ ನಿರ್ಣಯವಾಗುವುದು.

ಹಾಗಾದರೆ ಪ್ರಪಂಚದ ನಿವೃತ್ತಿಯೆಂದರೆ ಶೂನ್ಯವೇ. ಅದು ಪಾರಮಾರ್ಥಿಕವು, ಕಲ್ಪಿತವಲ್ಲ. ಏಕೆಂದರೆ, ಅದು ಯಾರಿಂದಲೂ ಕಾಣಲ್ಪಟ್ಟಿಲ್ಲ. ಕಾಣದಿದ್ದ ವಸ್ತುವಿನ ಬಗ್ಗೆ ಸಂಸ್ಕಾರವು ಉಂಟಾಗುವುದು ಅಶಕ್ಯ. ಸಂಸ್ಕಾರವಿದ್ದರೆ ಕಲ್ಪನೆಯು ಸಂಭವ. ಆದ್ದರಿಂದ ಪ್ರಪಂಚದ ನಿವೃತ್ತಿ ಜ್ಞಾನಕ್ಕೆ ಬಾಧವು ಬರುವುದಿಲ್ಲ. ಆದರೆ ಕಣ್ಣಿಗೆ ಗೋಚರವಾಗುವ ಪ್ರಪಂಚ ಸತ್ಯತೆಯ ಜ್ಞಾನಕ್ಕೆ ಕಲ್ಪಿತತ್ವವು ಸಂಭವಿಸುವುದರಿಂದ, ಆ ಜ್ಞಾನವೇ ಬಾಧಕ್ಕೆ ಅರ್ಹವಾದುದು. ಹೀಗೆ ಆಶಂಕಿಸಿದರೆ –

**ದೃಷ್ಟಸ್ಯ ಭ್ರಾಂತಿತೋ ಚೇತ್ಸ್ಯಾದದೃಷ್ಟೇ ನ ಭ್ರಮಃ ಕುತಃ ।।೨೨೫।।**

**ಗವಾಮಶೃಂಗಿಭಾವೇನ ನ ಹಿ ಸ್ಯಾಚ್ಛಶಶೃಂಗಿತಾ ।**

ಕಾಣುವ ಪದಾರ್ಥಕ್ಕೆ ಕಲ್ಪಿತ್ವವಿರುವುದಾದರೆ ಕಾಣದಿರುವುದರಲ್ಲಿ ಕಲ್ಪಿತತ್ವವು ಏಕೆ ಸಂಭವಿಸಲಾರದು? ಇದನ್ನೇ ದೃಷ್ಟಾಂತದಿಂದ ವಿವರಿಸುತ್ತಾರೆ. ಒಬ್ಬನು ಗೋವಿಗೆ ಕೋಡು ಇದೆ ಎಂದು ಹೇಳುತ್ತಾನೆ. ಇನ್ನೊಬ್ಬನು ಮೊಲಕ್ಕೆ ಕೋಡು ಉಂಟೆಂದು ಹೇಳುತ್ತಾನೆ. ಆಗ ಪರರು ಹೇಳಿದ ರೀತಿಯಿಂದ, ಗೋವಿಗೆ ಕೋಡು ಉಂಟೆಂಬುದು ಕಲ್ಪಿತವಾದುದು, ಏಕೆಂದರೆ ಅದು ಕಣ್ಣಿಗೆ ಕಾಣಿಸುತ್ತದೆ. ಆದರೆ ಮೋಲಕ್ಕೆ ಕೋಡು ಉಂಟೆಂಬುದು ಕಲ್ಪಿತವಲ್ಲ, ಏಕೆಂದರೆ ಅದು ಕಣ್ಣಿಗೆ ಕಾಣಿಸುವುದಿಲ್ಲ. ಹೀಗೆ ಹೇಳಬೇಕಾಗುತ್ತದೆ. ಇದು ಅನುಭವಕ್ಕೆ ವಿರುದ್ಧ. ಲೋಕಾನುಭವಕ್ಕೆ ಅವಿರುದ್ಧವಾಗಿಯೇ ಪರಮಾರ್ಥ ತತ್ವವನ್ನು ತಿಳಿಯಬೇಕು.

ಈವರೆಗಿನ ಗ್ರಂಥದಿಂದ ಪ್ರತ್ಯಕ್ಷಬಲದಿಂದ ವಿಶ್ವದ ಸತ್ಯತೆಯು ಸಮರ್ಥಿಸಲ್ಪಟ್ಟಿತು. ಹಾಗೂ ಅದರ ವಿಷಯದಲ್ಲಿ ಬಾಧಕ ಶಂಕೆಯೂ ನಿವಾರಿಸಲ್ಪಟ್ಟಿತು. ಆದರೆ ಅದರಿಂದ ಏನು ಸಿದ್ಧಿಸಿದಂತಾಯಿತು? ಏಕೆಂದರೆ ಸತ್ಯಕ್ಕೂ ಕಾರಣತ್ವವಿದೆ ಎನ್ನುವುದಕ್ಕೆ ಪ್ರಮಾಣವಿಲ್ಲ ಎಂದು ಪೂರ್ವಪಕ್ಷಿಯು ಪ್ರಶ್ನಿಸಿದರೆ, ಅದಕ್ಕೆ ಉತ್ತರವನ್ನು ಹೇಳುತ್ತ ಸಿದ್ಧಾಂತವನ್ನು ತಿಳಿಸುತ್ತಾರೆ –

**ಅಸ್ಮಾಕಂ ತು ಪ್ರಮಾಣೇನ ಪ್ರಸಾದಾದೀಶ್ವರಸ್ಯ ಚ ।।೨೨೬।।**

**ಉಕ್ತಭಂಗ್ಯಾಗಮಾನಾಂ ಚ ಪ್ರಾಮಾಣ್ಯಾದ್ಯುಜ್ಯತೇಽಖಿಲಮ್ ।**

ಸತ್ಕಾರಣತ್ವವಾದಿಗಳಾದ ನಮಗಾದರೆ ಬಾಧರಹಿತ ಪ್ರಮಾಣವಿರುವುದರಿಂದ, ಈಶ್ವರನ ಸಂಕಲ್ಪವಿರುವುದರಿಂದ ಹಾಗೂ ಹಿಂದೆ ಹೇಳಿದ ರೀತಿಯಿಂದ

ಆಗಮಗಳಿಗೆ ಪ್ರಾಮಾಣ್ಯವಿರುವುದರಿಂದ ಪರರು ವಿಶ್ವಸತ್ಯತ್ವ ವಿಷಯದಲ್ಲಿ ಮಾಡಿದ ಆಕ್ಷೇಪವೆಲ್ಲವೂ ಯುಕ್ತವೇ ಆಗುತ್ತದೆ.

ಹೀಗೆ ವಿಶ್ವ ಸತ್ಯತ್ವವನ್ನು ಸಮರ್ಥಿಸಿ, ಈಗ ವಿಶ್ವಮಿಥ್ಯಾತ್ವದ ಬಗ್ಗೆ ಪರರು ಹೇಳಿದ ಅನುಮಾನವನ್ನು ದೂಷಿಸಲು, ಮೊದಲು ಪರರ ಅನುಮಾನವನ್ನು ತೋರಿಸುತ್ತಾರೆ –

**ದೃಶ್ಯತ್ವಾದ್ವಿಮತಂ ಮಿಥ್ಯಾ ಸ್ವಪ್ನವಚ್ಚೇದಿಯಂ ಚ ಮಾ ।।೨೨೭।।**

**ಮಿಥ್ಯಾ ಚೇತ್ಸಾಧ್ಯಸಿದ್ಧಿರ್ನ ವ್ಯಭಿಚಾರೋ ನ ಚೇದ್ಭವೇತ್ ।**

ವಿವಾದ ವಿಷಯವಾದ ವಿಶ್ವವು ದೃಶ್ಯತ್ವವಿದ್ದುದರಿಂದ ಸ್ವಪ್ನದಂತೆ ಸುಳ್ಳು ಎಂಬ ಈ ದೃಶ್ಯತ್ವಾನುಮಾನವೇ ಸುಳ್ಳು ಎಂದಾದರೆ ಸಾಧ್ಯವು ಸಿದ್ಧವಾಗುವುದಿಲ್ಲ. ದೃಶ್ಯತ್ವ ಹೇತುವು ಸುಳ್ಳಲ್ಲ (ಸತ್ಯವು) ಎಂದು ಒಪ್ಪಿದರೆ, ಆಗ ದೃಶ್ಯತ್ವ ಹೇತುವಿನಲ್ಲಿಯೇ ಮಿಥ್ಯಾತ್ವ ಸಾಧ್ಯ ವ್ಯಭಿಚಾರವು ದೃಶ್ಯತ್ವಕ್ಕೆ ಬರುತ್ತದೆ.

ಹಾಗಾದರೆ ಜ್ಞಾನಕ್ಕೆ ವಿಷಯವಾಗುವ ದೃಶ್ಯತ್ವವು ಸುಳ್ಳು ಎಂದೇ ಹೇಳುತ್ತೇವೆ. ಆದರೂ ಸುಳ್ಳಾದುದು ಸಾಧ್ಯದ ಸಾಧಕವಾಗಲಾರದು ಎಂದು ಹೇಳಬಾರದು. ಏಕೆಂದರೆ ವರ್ಣದಲ್ಲಿ ಆರೋಪಿತವಾದ ದೀರ್ಘತ್ವ, ಹ್ರಸ್ವತ್ವ ಮುಂತಾದವು ಮಿಥ್ಯವೇ ಆಗಿದ್ದರೂ, ಅವುಗಳಿಗೆ ಅರ್ಥಭೇದಾದಿ ಸಾಧಕತ್ವವು ಸಿದ್ಧವಾಗಿದೆ. ಹೀಗೆ ಆಶಂಕಿಸಿದರೆ –

**ಸಾಧಕತ್ವಮಸತ್ಯಸ್ಯ ಸಾಧ್ಯಂ ವಿಪ್ರತಿಪತ್ತಿತಃ ।।೨೨೮।।**

**ತಸ್ಯ ಚೇತ್ಯನವಸ್ಥಾ ಸ್ಯಾತ್ಸತ್ತ್ವಂ ಚಾಸ್ಯಾನುಭೂತಿತಃ ।**

**ಅನುಭೂತಿವಿರೋಧೇನ ಮಿಥ್ಯಾತ್ವೇ ಮಾ ನ ಕಾಚನ ।।೨೨೯।।**

ಸಾಧಕದ ಮಿಥ್ಯಾತ್ವವೂ ಅಸತ್ಯದ ಸಾಧಕತ್ವವೂ ವಿಪ್ರತಿಪತ್ತಿಯಿರುವುದರಿಂದ ಸಾಧ್ಯವೇ ಹೊರತು ಸಿದ್ಧವಲ್ಲ. ಅದನ್ನು ಸಾಧನ ಮಾಡುವುದಾದರೆ ಅದರಲ್ಲಿಯೂ ಹೀಗೆಯೇ ವಿಪ್ರತಿಪತ್ತಿಯಿರುವುದರಿಂದ ಅನವಸ್ಥೆಯು. ವಿಶ್ವಸತ್ಯತೆಯು ಅನುಭವಸಿದ್ಧವು. ಅನುಭವಕ್ಕೆ ವಿರುದ್ಧವಾದುದರಿಂದ ವಿಶ್ವಮಿಥ್ಯಾತ್ವದ ಬಗ್ಗೆ ಯಾವುದೇ ಪ್ರಮಾಣವಿಲ್ಲ.

ಹಾಗಾದರೆ ಅನುಮಾನಗಳಿಗೆ ಅನುಭವ ವಿರೋಧವಿದ್ದ ಪಕ್ಷದಲ್ಲಿ ಅಸತ್ವವು ಬರಬಹುದು. ಆದರೆ ಅನುಭವ ವಿರೋಧವು ಇಲ್ಲ. ಏಕೆಂದರೆ ಮಿಥ್ಯಾತ್ವವೆಂಬ ಬಾಧ್ಯತ್ವವು ಅನುಮಾನಸಾಧ್ಯವು. ಆ ಬಾಧ್ಯತ್ವದ ಅಭಾವವು ಪ್ರತ್ಯಕ್ಷದಿಂದ ವೇದ್ಯವಲ್ಲ. ಏಕೆಂದರೆ ಪ್ರತ್ಯಕ್ಷವು ಕೇವಲ ವರ್ತಮಾನವನ್ನು ಮಾತ್ರ ಗ್ರಹಿಸುತ್ತದೆ.

ಕಾಲಾಂತರದಲ್ಲಿನ ಬಾಧದ ಇರುವಿಕೆಯನ್ನು ಪ್ರತ್ಯಕ್ಷದಿಂದ ತಿಳಿಯಲು ಸಾಧ್ಯವಿಲ್ಲ. ಹೀಗೆ ಆಶಂಕಿಸಿದರೆ –

**ಅತೀತಾನಾಗತೌ ಕಾಲಾವಪಿ ನಃ ಸಾಕ್ಷಿಗೋಚರೌ ।**

**ತತ್ಸಂಬಂಧಿತಯಾ ಸತ್ತ್ವಮಪಿ ದೃಷ್ಟಸ್ಯ ಸಾಕ್ಷಿಗಮ್ ॥೨೩೦॥**

ಕೇವಲ ವರ್ತಮಾನ ಕಾಲದಲ್ಲಿನ ಅಬಾಧ್ಯತ್ವವೇ ಸಾಕ್ಷಿರೂಪ ಅನುಭವವೇದ್ಯವು ಎನ್ನುವುದು ಸರಿಯಲ್ಲ. ಕಾಲಾಂತರ ಸಂಬಂಧಿಯಾದ ಅಬಾಧ್ಯತ್ವವೂ ನಮ್ಮ ಮತದಲ್ಲಿ ಸಾಕ್ಷಿವೇದ್ಯವು. ಕಾಲಾಂತರ ಸಂಬಂಧಿಯಾದ ಸತ್ಯತೆಯೇ ಅಬಾಧ್ಯತ್ವವು ಎಂದರ್ಥ. ಪ್ರತ್ಯಕ್ಷಾದಿ ಪ್ರಾಮಾಣ್ಯವೂ ಸಾಕ್ಷಿಯಿಂದಲೇ ಸಿದ್ಧವಾಗುವುದು.

**ದೃಢದೃಷ್ಟಂ ತು ಯದ್ದೃಷ್ಟಂ ದೃಷ್ಟಾಭಾಸಸ್ತತೋಽಪರಮ್ ।**

**ಭ್ರಾಂತೇಃ ಸಂವೃತಿಸತ್ಯಸ್ಯ ವಿಶೇಷೋಽವ್ಯಭಿಚಾರವಾನ್ ॥೨೩೧॥**

**ತೇನಾಪ್ಯಂಗೀಕೃತಃ ಸಮ್ಯಕ್ಸ ನಃ ಸತ್ಯತ್ವಮೇವ ಹಿ ।**

ಯಾವುದು ನಿರ್ದೋಷವಾದ ಜ್ಞಾನದಿಂದ ವಿಷಯೀಕರಿಸಲ್ಪಟ್ಟಿರುವುದೋ ಅದೇ ದೃಷ್ಟವೆಂದು ಹೇಳಲ್ಪಟ್ಟಿದೆ. ಶುಕ್ತಿರಜತಾದಿ ಜ್ಞಾನವು ನಿರ್ದೋಷವೆಂದು ದೃಢವಾಗಿಲ್ಲ, ಪರಂತು ದೋಷಪೂರಿತವೆಂದೇ ತಿಳಿಯಲ್ಪಡುತ್ತದೆ. ಆದ್ದರಿಂದ ಅದು ದೃಷ್ಟಾಭಾಸವು. ದೃಷ್ಟಾಭಾಸಗಳಾದ (ಭ್ರಾಂತಿವಿಷಯಕವಾದ) ಶುಕ್ತಿರಜತಾದಿಗಳಿಗೆ ಅಬಾಧ್ಯತ್ವವು ಸಿದ್ಧಿಸಲಾರದು.

ಭ್ರಾಂತಿವಿಷಯಕವಾದ ಶುಕ್ತಿರಜತಾದಿಗಳಿಂದ ವ್ಯಾವಹಾರಿಕ ಸತ್ಯವೆನಿಸಿದ ವಿಶ್ವಕ್ಕೆ ವೈಲಕ್ಷಣ್ಯವು ಅವ್ಯಭಿಚಾರಿಯಾದುದು. ಅಂದರೆ ಎಂದಿಗಾದರೂ ಎಲ್ಲಿಯೂ ಮಿಥ್ಯಾಭಾವವನ್ನು ಹೊಂದುವುದಿಲ್ಲ. ಹೀಗೆ ಶೂನ್ಯವಾದಿಯಿಂದಲೂ ನಿಸ್ಸಂದೇಹವಾಗಿ ಅಂಗೀಕರಿಸಲ್ಪಟ್ಟಿದೆ. ಅದೇ ವೈಲಕ್ಷಣ್ಯವೇ ನಮ್ಮ ಮತದಲ್ಲಿ ವಿಶ್ವದ ಸತ್ಯತೆಯನ್ನು ಸಾಧನ ಮಾಡುತ್ತದೆ. ಆದುದರಿಂದ ಮಿಥ್ಯಾತ್ವ ಸಾಧಕವಾದ ದೃಶ್ಯತ್ವಾದಿ ಅನುಮಾನಗಳು ಪ್ರತಿಪಕ್ಷವುಳ್ಳವುಗಳು ಎಂದರ್ಥ.

ಹಾಗಾದರೆ ಶುಕ್ತಿ ರಜತಾದಿಗಳಿಗೆ ಶೂನ್ಯದ ತತ್ವಜ್ಞಾನದ ಪೂರ್ವದಲ್ಲಿಯೇ ಶುಕ್ತಿ ಮುಂತಾದುದರ ಜ್ಞಾನದಿಂದಲೇ ಬಾಧೆಯು ಬರುತ್ತದೆ. ಆದರೆ ಪ್ರಪಂಚಕ್ಕೆ ಶೂನ್ಯಜ್ಞಾನದಿಂದ ಯಾವಗಲಾದರೊಮ್ಮೆ ನಿವೃತ್ತಿಯಾಗುವುದು. ಹೀಗೆ ಪ್ರಾತಿಭಾಸಿಕ ಹಾಗೂ ವ್ಯಾವಹಾರಿಕ ಸತ್ಯತ್ವಗಳಲ್ಲಿ ವ್ಯತ್ಯಾಸವಿದೆ ಎಂದು ನಾನು ಒಪ್ಪುತ್ತೇನೆ. ಆದರೆ ಇಂಥಹ ವೈಲಕ್ಷಣ್ಯವನ್ನು ವಿಶ್ವಸತ್ಯತೆಯ ವಿಷಯದಲ್ಲಿ ಯುಕ್ತಿಯಾಗಿ ಹೇಳುವುದು ನಿಮ್ಮಿಂದ ಶಕ್ಯವಿಲ್ಲ. ಏಕೆಂದರೆ ವಿರೋಧವು ಬರುತ್ತದೆ.

ಹೀಗೆ ಆಶಂಕಿಸಿದರೆ –

**ವಿಜ್ಞಾನಾದ್ವ್ಯಭಿಚಾರೋಽಸ್ಯ ಕದಾಚಿತ್ಸ್ಯಾದಿತಿ ಪ್ರಮಾ ।।೨೩೨।।**

**ನೈವ ದೃಷ್ಟಾ ಪ್ರಮಾ ಸಾ ಚ ನ ಭವೇತ್ಸ್ವವಿರೋಧತಃ ।**

ಶೂನ್ಯದ ವಿಜ್ಞಾನದಿಂದ ಈ ವಿಶ್ವದ ನಿವೃತ್ತಿಯು ಕದಾಚಿತ್ ಸಂಭವಿಸುವುದು ಎಂಬಲ್ಲಿ ಪ್ರಮಾಣವು ಕಂಡಿರುವುದೇ ಇಲ್ಲ. ಯಾವುದನ್ನು ಪ್ರಮಾಣವೆಂದು ಭಾವಿಸುತ್ತೀರೋ ಅದು ಸ್ವವಿರೋಧ ಬರುವುದರಿಂದ ಪ್ರಮಾಣವಾಗುವುದಿಲ್ಲ. ಯಾವುದರ ವಿಷಯವು ಅಸತ್ಯವೋ ಹಾಗೂ ಯಾವುದು ಸ್ವಯಂ ಬಾಧ್ಯವೋ ಅಂತಹುದು ಪ್ರಮಾಣವಾಗುವುದು ಅಸಾಧ್ಯ ಎಂದು ಅಭಿಪ್ರಾಯ.

ಹೀಗೆ ಪ್ರಪಂಚ ಮಿಥ್ಯಾತ್ವಸಾಧಕ ಅನುಮಾನಗಳನ್ನು ನಿರಾಕರಿಸಿ, ಈಗ ಆ ಅನುಮಾನಗಳಿಗೆ ಅನುಗ್ರಾಹಕವಾಗಿಯೂ ಸತ್ಯತ್ವ ಹಾಗೂ ಪ್ರತ್ಯಕ್ಷಗಳಿಗೆ ಪ್ರತಿಕೂಲವಾಗಿಯೂ ಪರರು ಉತ್ಪ್ರೇಕ್ಷಿಸಿದ ತರ್ಕವನ್ನು ಆಶಂಕಿಸಿ ನಿರಾಕರಿಸುತ್ತಾರೆ –

**ಭೇದೋ ವಿಶೇಷ್ಯಧರ್ಮ್ಯಾದಿಗ್ರಹಣಾಪೇಕ್ಷಯಾ ಯದಿ ।।೨೩೩।।**

**ಅನ್ಯೋನ್ಯಾಶ್ರಯತಾಹೇತೋರ್ದುರ್ಗ್ರಾಹ್ಯ ಇತಿ ಯನ್ನ ತತ್ ।**

**ಸ್ವರೂಪಂ ವಸ್ತುನೋ ಭೇದಃ ಯನ್ನ ತಸ್ಯ ಗ್ರಹೇಽಗ್ರಹಃ ।।೨೩೪।।**

**ಅನ್ಯಥಾಽಸ್ಯಾಮುನಾ ಭೇದ ಇತಿ ವಕ್ತುಂ ನ ಶಕ್ಯತೇ ।**

**ಅಗೃಹೀತೋ ಯದಾ ಭೇದಸ್ತದಾ ಸ್ವಸ್ಮಾದಿತಿ ಗ್ರಹಃ ।।೨೩೫।।**

**ಸ್ಯಾತ್ಪ್ರತೀತಿವಿರೋಧಾಚ್ಚ ನ ಹಿ ಕಶ್ಚಿತ್ತಥಾ ವದೇತ್ ।**

ವಿಶೇಷ್ಯ, ಧರ್ಮಿ ಮುಂತಾದವುಗಳ ಜ್ಞಾನವನ್ನು ಅಪೇಕ್ಷಿಸಿ ಭೇದವು ತಿಳಿಯಲ್ಪಡುವುದಾದರೆ, ಅನ್ಯೋನ್ಯಾಶ್ರಯತ್ವವೆಂಬ ದೋಷವು ಬರುವ ಕಾರಣದಿಂದ ಆ ಭೇದವನ್ನು ಗ್ರಹಿಸುವದು ಸಾಧ್ಯವಿಲ್ಲ. ಹೀಗೆ ಹೇಳುವುದು ಯುಕ್ತವಲ್ಲ. ಏಕೆಂದರೆ ಭೇದವು ವಸ್ತುವಿನ ಸ್ವರೂಪವಾದುದರಿಂದ, ವಸ್ತುವಿನ ಜ್ಞಾನವಾಗುತ್ತಿದ್ದಂತೆಯೇ ಭೇದದ ಜ್ಞಾನವೂ ಆಗುತ್ತದೆ. ಮೊದಲು ವಸ್ತುವಿನ ಜ್ಞಾನ ಅನಂತರ ಭೇದದ ಜ್ಞಾನ ಎಂಬುದಿಲ್ಲ. ಆದ್ದರಿಂದ ಹಿಂದೆ ಹೇಳಿದ ಅನ್ಯೋನ್ಯಾಶ್ರಯತ್ವ ದೋಷವು ಬರುವುದಿಲ್ಲ.

ಭೇದವು ವಸ್ತುವು ತೋರುವಾಗಲೇ ತೋರದಿದ್ದರೆ, 'ಇದಕ್ಕೆ ಇದರಿಂದ ಭೇದವು' ಎಂಬುದನ್ನು ಹೇಳುವುದಕ್ಕೆ ಶಕ್ಯವಿಲ್ಲ. ಘಟವು ತೋರುವಾಗಲೇ ಅದು

ಘಟದಿಂದ ಇತರವಾದ ಪಟಾದಿಗಳಿಗಿಂತ ಭಿನ್ನವು ಎಂದು ತೋರುವುದು.

ವಸ್ತು ತೋರುವಾಗಲೇ ಭೇದವು ಗೃಹೀತವಾಗದಿದ್ದ ಪಕ್ಷದಲ್ಲಿ, ಆಗ ತನ್ನಿಂದ ತಾನು ಭಿನ್ನ ಎಂಬ ಸವಿಕಲ್ಪಕ ಭೇದಜ್ಞಾನವು ಬರಬೇಕಾಗುತ್ತದೆ. ಯಾವಾಗಾದರೂ ಯಾರಿಗೂ ತನ್ನಿಂದ ತಾನು ಭಿನ್ನನೆಂದು ಅನುಭವವು ಬರುವುದಿಲ್ಲ. ಯಾವನೂ ಹಾಗೆ ಹೇಳುವುದೂ ಇಲ್ಲ. ಆದ್ದರಿಂದ ಇಂಥ ಭೇದಗ್ರಹವು ಅಂಗೀಕಾರಾರ್ಹವಲ್ಲ.

ಹೀಗೆ ಸ್ವಮತದಿಂದ ಭೇದಪ್ರತೀತಿಯಲ್ಲಿ ಅನ್ಯೋನ್ಯಾಶ್ರಯತ್ವ ದೋಷವನ್ನು ಪರಿಹರಿಸಿ, ಭೇದವು ಧರ್ಮಿಯಿಂದ ಭಿನ್ನವೆಂದು ಹೇಳುವವರ ಮತದಲ್ಲಿಯೂ ಹಿಂದೆ ಹೇಳಿದ ದೋಷ ಪರಿಹಾರವನ್ನು 'ಧರ್ಮಿತ್ವ' ಇತ್ಯಾದಿ ವಚನದಿಂದ ಹೇಳುತ್ತಾರೆ –

**ಧರ್ಮಿತ್ವಪ್ರತಿಯೋಗಿತ್ವತದ್ಭೇದಾ ಯುಗಪದ್ಯದಿ ।।೨೩೬।।**

**ವಿಶೇಷಣಂ ವಿಶೇಷ್ಯಂ ಚ ತದ್ಭಾವಶ್ಚೈವ ಗೃಹ್ಯತೇ ।**

ಧರ್ಮಿತ್ವ, ಪ್ರತಿಯೋಗಿತ್ವ ಹಾಗೂ ಅವುಗಳಿಗಿರುವ ಭೇದ, ವಿಶೇಷಣ, ವಿಶೇಷ್ಯ ಹಾಗೂ ಅವುಗಳ ಭಾವಗಳೂ ಏಕಕಾಲದಲ್ಲಿಯೇ ಗ್ರಹಿಸಲ್ಪಡುತ್ತವೆ.

**ಕೋ ವಿರೋಧಃ ಸ್ವರೂಪೇಣ ಗೃಹೀತೋ ಭೇದ ಏವ ತು ।।೨೩೭।।**

**ಅಸ್ಯಾಮುಷ್ಮಾದಿತಿ ಪುನರ್ವಿಶೇಷೇಣೈವ ಗೃಹ್ಯತೇ ।**

ಹೀಗೆ ಒಪ್ಪಿದ ಪಕ್ಷದಲ್ಲಿ ಏನು ವಿರೋಧವಿದೆ? ಏಕೆಂದರೆ, ಸ್ವರೂಪದಿಂದ ಗೃಹೀತವಾದುದೇ ಭೇದವು. ಇದಕ್ಕೆ ಇದರಿಂದ ಭೇದವು ಎಂಬುದಾಗಿ ವಿಶೇಷದಿಂದಲೇ ಗ್ರಹಿಸಲ್ಪಡುತ್ತದೆ.

ಹೀಗೆ ಅನ್ಯೋನ್ಯಾಶ್ರಯತ್ವವನ್ನು ಪರಿಹರಿಸಿ, ಈಗ ದೂಷಣಾಂತರವನ್ನು 'ಕಿಂಚ' ಇತ್ಯಾದಿ ವಾಕ್ಯದಿಂದ ಪ್ರತಿಜ್ಞಾ ರೂಪವಾಗಿ ಹೇಳುತ್ತಾರೆ –

**ಕಿಂಚ ಭೇದಃ ಕಥಂ ಗ್ರಾಹ್ಯ ಇತಿ ಯಃ ಪರಿಪೃಚ್ಛತಿ ।।೨೩೮।।**

**ಧರ್ಮ್ಯಾದಿಭೇದಗ್ರಹಣಾತ್ತೇನೋಕ್ತೋಽನ್ಯೋನ್ಯಸಂಶ್ರಯಃ ।**

**ಅನ್ಯತ್ವಾಗ್ರಹಣೇ ಪ್ರೋಕ್ತಃ ಕಥಮನ್ಯೋನ್ಯಸಂಶ್ರಯಃ ।।೨೩೯।।**

**ಅನ್ಯತ್ವಂ ಯದಿ ಸಿದ್ಧಂ ಸ್ಯಾತ್ಕಥಮನ್ಯೋನ್ಯಸಂಶ್ರಯಃ ।**

ಇನ್ನೊಂದು ದೂಷಣವು ಹೇಗೆಂದರೆ, ಭೇದವು ಹೇಗೆ ತಿಳಿಯಲ್ಪಡುವುದು ಎಂದು ಯಾವನು ಆಕ್ಷೇಪಿಸುವನೋ, ಅವನಿಂದ ಧರ್ಮ್ಯಾದಿ ಸಾಪೇಕ್ಷವಾಗಿಯೇ

ಭೇದದ ಜ್ಞಾನವಾಗುವುದರಿಂದ, ಅನ್ಯೋನ್ಯಾಶ್ರಯವು ಹೇಳಲ್ಪಟ್ಟಿದೆ. ಇದು ಪರಸ್ಪರ ವ್ಯಾಹತವು.

ಇನ್ನು ಭೇದವನ್ನು ತಿಳಿಯದೆ ಅನ್ಯೋನ್ಯಾಶ್ರಯವನ್ನು ಹೇಳುವುದು ಹೇಗೆ ಯುಕ್ತವಾಗುವುದು? ಏಕೆಂದರೆ ಎರಡು ವಸ್ತುಗಳಿಗೆ ಕಾರ್ಯ–ಕಾರಣಭಾವವನ್ನು ಆಶ್ರಯಿಸಿಯೇ ಅನ್ಯೋನ್ಯಾಶ್ರಯವನ್ನು ಆಪಾದಿಸಲು ಸಾಧ್ಯ. ಅಂತೆಯೇ ಭೇದಜ್ಞಾನವು ಸಿದ್ಧವಾಗಿದ್ದರೆ ಅನ್ಯೋನ್ಯಾಶ್ರಯವು ಹೇಗೆ ಬರುವುದು? ಏಕೆಂದರೆ ಅನ್ಯೋನ್ಯಾಶ್ರಯವು ಇದ್ದರೆ ಭೇದ ಜ್ಞಾನವೇ ಆಗುವುದಿಲ್ಲ.

ಹಾಗಾದರೆ ಈ ತರ್ಕದ ಮೇಲೆ ದೂಷಣವು ಯಾವುದೆಂದರೆ –

**ಏತಾದೃಶಸ್ಯ ವಕ್ತಾರಾವುಭೌ ಜಾತ್ಯುತ್ತರಾಕರೌ ।।೨೪೦।।**

**ಮಾಯೀ ಮಾಧ್ಯಮಿಕಶ್ಚೈವ ತದುಪೇಕ್ಷ್ಯೌ ಬುಭೂಷುಭಿಃ ।**

ಇಂಥಹುದನ್ನು ಪ್ರವಚನ ಮಾಡುವ ಮಾಯಾವಾದಿ ಮಾಧ್ಯಮಿಕರಿಬ್ಬರೂ ಸಹ ಜಾತ್ಯುತ್ತರಕ್ಕೆ ಮುಖ್ಯಾಶ್ರಯರು. ಆದ್ದರಿಂದ ಜ್ಞಾನೇಚ್ಛುಗಳಿಂದ ಉಪೇಕ್ಷಣೀಯರೇ ಆಗುವರು. ಅವರು ಪ್ರತಿವಾದಿಗಳಾಗಲು ಯೋಗ್ಯರಲ್ಲ. ಆದ್ದರಿಂದ ಈ ಅನ್ಯೋನ್ಯಾಶ್ರಯ ಮುಂತಾದುದನ್ನು ಸೂತ್ರಕಾರರೇ ನಿರಾಕರಿಸಲಿಲ್ಲ. ಸರ್ವವೂ ಸ್ವವ್ಯಾಹತಿಯಿಂದ ಕೂಡಿರುವುದರಿಂದ ಹಾಗೂ ಭೇದಕ್ಕೂ ಸತ್ತಾಜಾತಿಗೂ ಧರ್ಮಿಸ್ವರೂಪದಿಂದ ಭೇದವು ಅಯುಕ್ತವಾದುದರಿಂದ, ಅದನ್ನೇ ಅಂಗೀಕರಿಸುವುದು ಜಾತ್ಯುತ್ತರವೆಂದು ತಿಳಿಯಬೇಕು.

ಇದು ಇರಲಿ. ಶೂನ್ಯವಾದಿಯು ಶೂನ್ಯವು ಜಗತ್ಕಾರಣವೆಂದು ಹೇಳಿದರೆ, ಮಾಯಾವಾದಿಯು ಬ್ರಹ್ಮವು ಜಗತ್ಕಾರಣವೆಂದು ಹೇಳುತ್ತಾನೆ. ಆದ್ದರಿಂದ 'ನಾಸತೋಽ ದೃಷ್ಟತ್ವಾತ್' ಇತ್ಯಾದಿ ಶೂನ್ಯವಾದದ ನಿರಾಕರಣದ ಅತಿದೇಶವನ್ನು ಮಾಯಾವಾದದಲ್ಲಿ ಮಾಡಿದುದು ಅಯುಕ್ತವು. ಏಕೆಂದರೆ ಮತವೈಷಮ್ಯವಿದ್ದರೆ ಅತಿದೇಶವು ಅಯುಕ್ತವು. ಈ ಆಶಂಕೆಯ ಪರಿಹಾರಕ್ಕಾಗಿ 'ಯತ್' ಎಂಬಿತ್ಯಾದಿ ವ್ಯಾಖ್ಯಾನವು ಹೊರಟಿದೆ –

**ಯಚ್ಛೂನ್ಯವಾದಿನಃ ಶೂನ್ಯಂ ತದೇವ ಬ್ರಹ್ಮ ಮಾಯಿನಃ ।।೨೪೧।।**

**ನ ಹಿ ಲಕ್ಷಣಭೇದೋಽಸ್ತಿ ನಿರ್ವಿಶೇಷತ್ವತಸ್ತಯೋಃ ।**

**ಅನೃತಾದಿವಿರೋಧಿತ್ವಮುಭಯೋಶ್ಚ ಸ್ವಲಕ್ಷಣಮ್ ।।೨೪೨।।**

ಶೂನ್ಯವಾದಿಯು ಹೇಳುವ ಶೂನ್ಯವೇ ಮಾಯಾವಾದಿಯ ಬ್ರಹ್ಮವು. ಎರಡಕ್ಕೂ ನಿರ್ವಿಶೇಷತ್ವವಿರುವುದರಿಂದ ಲಕ್ಷಣಭೇದವಿಲ್ಲ. ಆದ್ದರಿಂದ ಅತಿದೇಶವು

ಯುಕ್ತವು.

ಹಾಗಾದರೆ ಬಾಹ್ಯಲಕ್ಷಣದಿಂದ ಭೇದವು ಇಲ್ಲದಿದ್ದರೂ ಸ್ವರೂಪಲಕ್ಷಣದಿಂದ ಭೇದವಿದೆ. ಏಕೆಂದರೆ ಮಾಯಾವಾದಿಯು ಬ್ರಹ್ಮನಿಗೆ ಸತ್ಯಜ್ಞಾನಾನಂದಾತ್ಮಕತ್ವ ಎಂಬ ಸ್ವರೂಪ ಲಕ್ಷಣವನ್ನು ಅಂಗೀಕರಿಸುತ್ತಾನೆ. ಆದರೆ ಶೂನ್ಯವಾದಿಯು ಅದನ್ನು ಅಂಗೀಕರಿಸಿಲ್ಲ. ಆದ್ದರಿಂದ ಅತಿದೇಶವು ಯುಕ್ತವಲ್ಲ. ಹೀಗೆ ಆಶಂಕಿಸಿದರೆ, 'ಅನೃತಾದಿ' ಇತ್ಯಾದಿ ವಚನದಿಂದ ಅದನ್ನು ಪರಿಹರಿಸುತ್ತಾರೆ –

ಬ್ರಹ್ಮನು ಸತ್ಯಜ್ಞಾನಾನಂದಸ್ವರೂಪನು ಎಂದರೆ ಅನೃತ (ಅಸತ್ಯ) ಜಡಾದಿ ವಿರೋಧಿತ್ವವೆಂಬುದೇ ಮಾಯಾವಾದಿಗೆ ಸಮ್ಮತವಾದುದು. ಏಕೆಂದರೆ ಮತ್ತೊಂದು ಸತ್ಯತ್ವಾದಿ ಧರ್ಮವಿಶಿಷ್ಟವಾದ ವಸ್ತುವನ್ನು ಒಪ್ಪಿದರೆ ಬ್ರಹ್ಮನ ಅಖಂಡತ್ವಕ್ಕೆ ವಿರೋಧ ಬರುವುದು. ಅನೃತಾದಿ ವಿರೋಧಿಯಾಗಿರುವುದೆಂಬ ಲಕ್ಷಣವನ್ನು ಶೂನ್ಯವಾದಿಯೂ ಶೂನ್ಯಕ್ಕೆ ಒಪ್ಪುತ್ತಾನೆ. ಹೀಗೆ ಉಭಯರಿಗೂ ಸಮಾನವಾದ ಸ್ವಲಕ್ಷಣವಿರುವುದರಿಂದ ಅತಿದೇಶವು ಅಯುಕ್ತವಲ್ಲ.

ಇದು ಇರಲಿ. ಇನ್ನು ಪ್ರಪಂಚಮಿಥ್ಯಾತ್ವಸಾಧಕ ಅನುಮಾನದ ನಿರಾಕರಣೆಗೋಸ್ಕರ 'ವೈಧರ್ಮ್ಯಾಚ್ಚ ನ ಸ್ವಪ್ನಾದಿವತ್' ಎಂಬ ಸೂತ್ರವು ಹೊರಟಿದೆ ಎಂಬುದಾಗಿ ವ್ಯಾಖ್ಯಾನ ಮಾಡಲಾಗಿದೆ. ಈ ವ್ಯಾಖ್ಯಾನವು ಹೇಗೆ ಕೂಡುವುದು? ಎಂದು ಆಶಂಕಿಸಿದರೆ –

**ಸ್ವವಾಕ್ಯಾಭಾವಸಂವಾದಾನ್ನ ಕೃತ್ಯಂ ಪ್ರತಿವಾದಿನಃ ।**

**ತತ್ಪಕ್ಷ ಇತಿ ವೈಧರ್ಮ್ಯಾನ್ನ ಸ್ವಪ್ನಾದಿವದಿತ್ಯಜಃ ॥೨೪೩॥**

**ಅಪ್ರಯತ್ನಾನ್ನಿರಾಚಕ್ರೇ ಚೇತಿ ದೃಷ್ಟಿವಿರುದ್ಧತಾಮ್ ।**

**ನಿಷ್ಪ್ರಮಾಣತ್ವಮಪ್ಯಸ್ಯ ಸೂಚಯಾಮಾಸ ವಿಶ್ವಕೃತ್ ॥೨೪೪॥**

ದೃಶ್ಯತ್ವಾಭಾವದ ಸಂವಾದ ದೆಶೆಯಿಂದ ದೃಶ್ಯತ್ವದ ಮಿಥ್ಯಾತ್ವಸಾಧನದ ವಿಷಯದಲ್ಲಿ ಪ್ರತಿವಾದಿಗೆ ಕೃತ್ಯವಿಲ್ಲ. ಈ ಕಾರಣದಿಂದ ವೇದವ್ಯಾಸರು ವೈಧರ್ಮ್ಯಾನ್ನ ಸ್ವಪ್ನಾದಿವತ್ ಎಂಬುದಾಗಿ ಪ್ರಯತ್ನವಿಲ್ಲದೆಯೇ ಜಗನ್ಮಿಥ್ಯಾತ್ವವನ್ನು ನಿರಾಕರಿಸಿದರು. ಚ ಶಬ್ದದಿಂದ ವಿಶ್ವಮಿಥ್ಯಾತ್ವಕ್ಕೆ ಪ್ರತ್ಯಕ್ಷವಿರೋಧವನ್ನೂ, ಪ್ರಮಾಣರಹಿತತ್ವವನ್ನೂ ವಿಶ್ವಕರ್ತೃವಾದ ಸೂತ್ರಕಾರರು ಸೂಚಿಸಿದರು.

## ಅನುಪಲಬ್ಧ್ಯಧಿಕರಣಮ್

### ಓಂ ಭಾವೋಽನುಪಲಬ್ಧೇಃ ಓಂ

ಈ ಅಧಿಕರಣದಲ್ಲಿ ಯೋಗಾಚಾರಗಳ ಮತವು ನಿರಾಕರಿಸಲ್ಪಡುತ್ತದೆ. ಅದರ

ಸಲುವಾಗಿ 'ಜ್ಞಾನಮೇವ' ಇತ್ಯಾದಿ ವಚನದಿಂದ ಅವರ ಮತವನ್ನು ಉಪನ್ಯಾಸ ಮಾಡುತ್ತಾರೆ –

**ಜ್ಞಾನಮೇವೈಕಮಖಿಲಜ್ಞೇಯಾಕಾರಂ ಪ್ರಭಾಸತೇ ।**

ರೂಪ, ವೇದನ, ಸಂಜ್ಞಾ, ಸಂಸ್ಕಾರಗಳೆಂಬ ನಾಲ್ಕು ಸ್ಕಂಧಗಳು ತತ್ವಗಳಲ್ಲ. ವಿಜ್ಞಾನವೇ ತತ್ವವು. ಹೀಗೆ ಯೋಗಾಚಾರರು ತಿಳಿಯುತ್ತಾರೆ. ಆ ವಿಜ್ಞಾನವೊಂದೇ ತತ್ವವು. ಅದಕ್ಕಿಂತ ಬೇರೆ ಎರಡನೆಯ ತತ್ವವಿಲ್ಲ ಎಂದರ್ಥ. ಅದು ಅಖಿಲ ಜ್ಞೇಯಾತ್ಮಕವು. ಏಕೆಂದರೆ ಜ್ಞಾನವೇ ಜ್ಞೇಯವಸ್ತುವಿನ ಆಕಾರವಾಗಿದೆ. ಜ್ಞಾನದಿಂದ ಭಿನ್ನವಾದ ಜ್ಞೇಯವೆಂಬುದು ಇಲ್ಲ. ಹಾಗೂ ಆ ಜ್ಞಾನವೇ ಪ್ರಕಾಶಿಸುತ್ತದೆ.

ಇನ್ನು ಜ್ಞಾನ–ಜ್ಞೇಯಗಳಲ್ಲಿ ಅಭೇದವು ಅಯುಕ್ತವು. ಏಕೆಂದರೆ ಭೇದವು ಬಾಹ್ಯ ಜ್ಞಾನವು ಆಂತರಿಕ. ಏಕತ್ವವೂ ಯುಕ್ತವಲ್ಲ. ಹೀಗೆ ಆಶಂಕಿಸಿದರೆ ಅದಕ್ಕೆ ಯೋಗಾಚಾರರು ಹೇಳುವ ಪರಿಹಾರವನ್ನು 'ತತ್ರ' ಇತ್ಯಾದಿ ವಚನದಿಂದ ತಿಳಿಸುತ್ತಾರೆ –

**ತತ್ರ ಸಂತತಿಭೇದಶ್ಚ ಸ್ವಭೇದೋ ಭೇದ ಏವ ಚ ।।೨೪೫।।**

**ಕಲ್ಪಿತಾಃ ಪ್ರತಿಭಾಸಂತೇ ನಾನಾಸಂವೃತಿಭೂಮಿಷು ।**

ಜ್ಞಾನ–ಜ್ಞೇಯಗಳಿಗೆ ಭೇದವಿದ್ದರೆ, ಸಂತತಿಗಳಿಗೆ ಪರಸ್ಪರ ಭೇದ, ಒಂದೊಂದು ಸಂತತಿಯಲ್ಲಿಯೂ ಪೂರ್ವೋತ್ತರ ಜ್ಞಾನಗಳಲ್ಲಿ ಭೇದವು ಕಲ್ಪಿತಗಳೇ ಆಗಿ ಅನೇಕ ಅಜ್ಞಾನಗಳ ಆಶ್ರಯವಾದ ಅಂತಃಕರಣಗಳಲ್ಲಿ ತೋರುತ್ತವೆ.

ಹೀಗೆ ಯೋಗಾಚಾರರ ಮತವನ್ನು ಅನುವಾದ ಮಾಡಿ, ಅದನ್ನು 'ಇತ್ಯೇತದಪಿ' ಇತ್ಯಾದಿ ವಚನದಿಂದ ನಿರಕಾರಿಸುತ್ತಾರೆ –

**ಇತ್ಯೇತದಪಿ ನೋ ಯುಕ್ತಂ ನ ಹಿ ಜ್ಞಾನತಯಾ ಜಗತ್ ।।೨೪೬।।**

**ಭಾಸತೇಽನುಭವಸ್ಯೈವ ವಿರುದ್ಧತ್ವಾದಪೇಶಲಮ್ ।**

ಈ ಪ್ರಕಾರವಾಗಿ ಪ್ರತಿಪಾದಿಸುವ ಮತವು ಯುಕ್ತವಲ್ಲ. ಏಕೆಂದರೆ ಜಗತ್ತು ಜ್ಞಾನರೂಪವಾಗಿ ತೋರುವುದಿಲ್ಲ. ಇದು ಅನುಭವಕ್ಕೆ ವಿರುದ್ಧವು. ಆದುದರಿಂದಲೇ ಯೋಗಾಚರರಿಗೆ ಅಭಿಮತವಾದ ಅನುಮಾನವು ಅಸಂಮಜಸವಾದುದು.

ಈ ಮತದ ಅನುಮಾನವು ಅನುಭವಕ್ಕೆ ವಿರುದ್ಧವೆಂಬುದು ಹೇಗೆ ಎಂದರೆ, ಅದಕ್ಕೆ ಉತ್ತರವಾಗಿ ಹೊರಟ **'ಓಂ ಕ್ಷಣಿಕತ್ವಾಚ್ಚ ಓಂ' 'ಓಂ ಸರ್ವಥಾಽನುಪಪತ್ತೇಶ್ಚ ಓಂ'** ಎಂಬೆರಡು ಸೂತ್ರಗಳನ್ನು ವ್ಯಾಖ್ಯಾನಿಸುತ್ತಾರೆ –

**ತನ್ಮತಂ ಕ್ಷಣಿಕತ್ವಾಚ್ಚ ಜ್ಞಾನಸ್ಯ ಸ್ಥಿರರೂಪತಃ ।।೨೪೭।।**

**ಜ್ಞೇಯಸ್ಯೋಕ್ತಪ್ರಕಾರೇಣ ಸರ್ವಶ್ರುತಿವಿರೋಧತಃ ।**

**ಅನುಭೂತಿವಿರುದ್ಧತ್ವಾದಪಿ ಪಕ್ಷಾ ಇಮೇಽಶಿವಾಃ ।।೨೪೮।।**

ಜ್ಞಾನಕ್ಕೆ ಕ್ಷಣಿಕತ್ವ ಹಾಗೂ ಜ್ಞೇಯಕ್ಕೆ ಸ್ಥಿರರೂಪತ್ವ ಇರುವುದರಿಂದಲೂ ಹಿಂದೆ ಹೇಳಿದ ಯೋಗಾಚಾರರ ಮತವು ಅಯುಕ್ತವು. ಈ ಮತವು ಸಮಸ್ತ ಶ್ರುತಿಗಳಿಗೆ ವಿರುದ್ಧವಾಗಿದೆ. ಅಲ್ಲದೆ ಅನುಭವಕ್ಕೂ ವಿರುದ್ಧವಾಗಿದೆ. ಆದ್ದರಿಂದ ಈ ಬೌದ್ಧರ ಎಲ್ಲ ಪಕ್ಷಗಳೂ ಅಶುಭಕರವಾದ್ದರಿಂದ ಅಗ್ರಾಹ್ಯವು.

## ನೈಕಸ್ಮಿನ್ನಧಿಕರಣಮ್

### ಓಂ ನೈಕಸ್ಮಿನ್ನಸಂಭವಾತ್ ಓಂ

ಈ ಅಧಿಕರಣದಲ್ಲಿ ಜೈನಮತವು ನಿರಾಕರಿಸಲ್ಪಡುತ್ತದೆ. ಈ ಮತದಲ್ಲಿನ ನಿರಾಕರಣೀಯ ಅಂಶವನ್ನು ಜ್ಞಾಪಿಸುವುದಕ್ಕೋಸ್ಕರ, ಈ ಮತವನ್ನು 'ಆಹ' ಇತ್ಯಾದಿ ವಚನದಿಂದ ಅನುವಾದ ಮಾಡುತ್ತಾರೆ –

**ಆಹ ಕ್ಷಪಣಕೋ ವಿಶ್ವಂ ಸದಸದ್ದ್ವಯಮದ್ವಯಮ್ ।**

**ದ್ವಯಾದ್ವಯಮತತ್ಸರ್ವಂ ಸಪ್ತಭಂಗಿ ಸದಾತನಮ್ ।।೨೪೯।।**

ಈ ವಿಶ್ವವು ಸದ್ರೂಪ, ಅಸದ್ರೂಪ, ಸದಸದ್ರೂಪ, ಸದಸದ್ವಿಲಕ್ಷಣ, ಸತ್ವವಿದ್ದು ಸದ್ವಿಲಕ್ಷಣ, ಅಸತ್ವವಿದ್ದು ಅಸದ್ವಿಲಕ್ಷಣ, ಸದಸದಾತ್ಮಕವಿದ್ದು ಸದಸದ್ವಿಲಕ್ಷಣ – ಹೀಗೆ ಪ್ರತ್ಯೇಕವಾಗಿ ಸದಾಕಾಲವೂ ಸಪ್ತ ಪ್ರಕಾರವುಳ್ಳದ್ದು ಎಂಬುದಾಗಿ ಜೈನರು ಹೇಳುತ್ತಾರೆ.

ಜೈನರ ಈ ಸಪ್ತಭಂಗಿ ವಾದವನ್ನು ನಿರಾಕರಿಸಲು, 'ನೈಕಸ್ಮಿನ್ನಸಂಭವಾತ್' ಎಂಬ ಸೂತ್ರವನ್ನು 'ನೈತತ್' ಇತ್ಯಾದಿ ವಚನದಿಂದ ವ್ಯಾಖ್ಯಾನಿಸುತ್ತಾರೆ –

**ನೈತತ್ಪದಾರ್ಥ ಏಕಸ್ಮಿನ್ಯುಕ್ತಂ ದೃಷ್ಟಿವಿರೋಧತಃ ।**

**ಭಾವಾಭಾವತಯಾ ವಿಶ್ವಂ ಯೇನ ರೂಪೇಣ ಮೀಯತೇ ।।೨೫೦।।**

**ತದ್ರೂಪಮೇವ ತದಿತಿ ನಿಯಮಃ ಕೇನ ವಾರ್ಯತೇ ।**

ಒಂದೇ ವಸ್ತುವಿನಲ್ಲಿ ಈ ಸಪ್ತ ಪ್ರಕಾರಗಳು ಇರುವುದೆಂಬುದು ಪ್ರತ್ಯಕ್ಷಕ್ಕೆ ವಿರುದ್ಧವು. ಆದುದರಿಂದ ಅಯುಕ್ತವು. ಹೇಗೆಂದರೆ, ಎಲ್ಲವೂ ತನ್ನ ಆಶ್ರಯದಲ್ಲಿ ಇರುವುದು ಇನ್ನೊಂದರ ಆಶ್ರಯದಲ್ಲಿ ಇಲ್ಲದಿರುವುದು, ತನ್ನ ಸ್ವರೂಪದಿಂದ

ಇರುವುದು ಇನ್ನೊಂದರ ಸ್ವರೂಪದಿಂದ ಇಲ್ಲದಿರುವುದು, ದ್ರವ್ಯಸ್ವರೂಪದಿಂದ ನಿತ್ಯವು ಕಾರ್ಯ ರೂಪದಿಂದ ಅನಿತ್ಯವು, ಸ್ವರೂಪಾದಿಗಳಿಂದ ಅಭಿನ್ನವು ತನ್ನ ಗುಣಾದಿಗಳಿಂದ ಭಿನ್ನಾಭಿನ್ನವು – ಹೀಗೆಯೇ ತೋರುತ್ತದೆ. ಇದಕ್ಕೆ ಬೇರೆಯಾದ ಪ್ರಕಾರದಿಂದ ವಸ್ತುವು ತೋರುವುದಿಲ್ಲ. ಹೀಗೆ ಈ ಜಗತ್ತು ವ್ಯವಸ್ಥಿತವಾದ ಸ್ವರೂಪವುಳ್ಳದ್ದೇ ಆಗಿರುವುದು ಎಂಬ ನಿಯಮವು ಯಾವ ಪ್ರಮಾಣದಿಂದ ನಿವಾರಿಸಲ್ಪಡುತ್ತದೆ?

**ತತ್ತದ್ದೋಷನಿವೃತ್ತ್ಯರ್ಥಂ ಸ್ವೀಕೃತಾ ತತ್ತದಾತ್ಮತಾ ।।೨೫೧।।**

**ಯದಿ ತೈರಖಿಲೈರ್ದೋಷೈರ್ಲಿಪ್ಯತೇ ಚಲದರ್ಶನಃ ।**

ಆಯಾಯ ಭಂಗಿಯನ್ನು ಅಂಗೀಕರಿಸಿದರೆ ಬರುವ ದೋಷಗಳನ್ನು ಪರಿಹರಿಸಲು ಆಯಾಯ ಪ್ರಕಾರವುಳ್ಳದ್ದೆಂದು ಸ್ವೀಕರಿಸುವುದಾದರೆ, ಚಲದರ್ಶನವುಳ್ಳ ಆ ಜೈನನು ಆ ಎಲ್ಲ ದೋಷಗಳಿಂದ ಲಿಪ್ತನಾಗುತ್ತಾನೆ.

ಇನ್ನು ಇಂಥಹ ಸಪ್ತಭಂಗಿಯನ್ನು ಅಂಗೀಕರಿಸಿದರೆ ಅತಿಪ್ರಸಂಗವೂ ಬರುವುದೆಂದು 'ಅತಿಹಾಯ' ಇತ್ಯಾದಿ ವಾಕ್ಯದಿಂದ ಹೇಳುತ್ತಾರೆ –

**ಅತಿಹಾಯ ಪ್ರಮಾಣಾಪ್ತನಿಯಮಂ ಸದಸತ್ತಯಾ ।।೨೫೨।।**

**ಅಶೇಷಮಾವಿರುದ್ಧಂ ಚ ನಿರ್ಮಾನಂ ವ್ಯಾಹತಂ ಸದಾ ।**

**ಸರ್ವಪ್ರಕಾರಂ ವದತೋ ದೃಷ್ಟಹಾನಿರಮಗ್ರಹಃ ।।೨೫೩।।**

**ಸ್ವವ್ಯಾಹತತ್ವಮಿತ್ಯಾದ್ಯಾ ದೋಷಾಃ ಸರ್ವೇ ಭವಂತಿ ಹಿ ।**

ವ್ಯವಸ್ಥಿತವಾದ ಸತ್ವ ಅಸತ್ವ ಮುಂತಾದ ರೀತಿಯಿಂದ ಪ್ರಮಾಣಪ್ರಮಿತವಾದ ನಿಯಮವನ್ನು ಅತಿಕ್ರಮಿಸಿ, ಎಲ್ಲವೂ ಪರಸ್ಪರ ವಿರುದ್ಧವಾದ ಪ್ರಮಾಣರಹಿತವಾದ ಸರ್ವಪ್ರಕಾರಗಳಿಂದ ಯುಕ್ತವಾಗಿದೆ ಎಂಬುದಾಗಿ ವಾದಿಸುವವನಿಗೆ ದೃಷ್ಟಹಾನಿ, ಅಪ್ರಮಾಣಿಕ ಸ್ವೀಕಾರ, ಸ್ವವಚನವಿರೋಧ ಮುಂತಾದ ಸಮಸ್ತ ದೋಷಗಳೂ ಬರುತ್ತವೆ.

ಹೀಗೆ ಜೈನನು ಹೇಳಿದ ಸರ್ವಪ್ರಕಾರವತ್ವವನ್ನು ನಿರಾಕರಿಸಿ, ಈಗ ಅವನು ಹೇಳಿದ ಇನ್ನೂ ಒಂದು ಸಂಗತಿಯನ್ನು ನಿರಾಕರಿಸಲು 'ವಕ್ತಿ' ಇತ್ಯಾದಿ ವಚನದಿಂದ ಅನುವಾದ ಮಾಡುತ್ತಾರೆ –

**ವಕ್ತಿ ಸ್ವಪ್ರಭಮಾತ್ಮಾನಂ ದೇಹಮಾನಂ..............।।**

ಆತ್ಮನನ್ನು ಸ್ವಪ್ರಕಾಶನು ಹಾಗೂ ದೇಹಪರಿಮಾಣಕ್ಕೆ ಸದೃಶವಾದ

ಪರಿಮಾಣವನ್ನು ಹೊಂದಿರುವನು ಎಂಬುದಾಗಿ ಜೈನನು ಹೇಳುತ್ತಾನೆ.

ಆತ್ಮನಿಗೆ ಶರೀರಪರಿಮಾಣಕ್ಕೆ ಸಮಾನವಾದ ಪರಿಮಾಣವನ್ನು ನಿರಾಕರಿಸಲು ಹೊರಟ **'ಓಂ ಏವಂಚಾತ್ಮಾಕಾರ್ತ್ಸ್ನ್ಯಂ ಓಂ'** ಎಂಬ ಸೂತ್ರದ ಅರ್ಥವನ್ನು 'ತದಪಿ' ಇತ್ಯಾದಿ ವಚನದಿಂದ ಸಂಗ್ರಹಿಸುತ್ತಾರೆ –

**................................................ತದಪ್ಯಲಮ್ ।।೨೫೪।।**

**ದುಷ್ಟಂ ನಾನಾಶರೀರೇಷು ಪ್ರವೇಶಾದನ್ಯಥಾಭವಾತ್ ।**

ಆ ಮತವೂ ಅತ್ಯಂತ ಅಯುಕ್ತವು. ಆತ್ಮನಿಗೆ ದೇಹ ಪರಿಮಾಣವೇಕೆ ಇಲ್ಲ ಎಂದರೆ 'ಅಕಾರ್ತ್ಸ್ನ್ಯಾದಿ ಪ್ರಸಂಗಾತ್' ಎಂದು ಉತ್ತರ. ಇದರ ಅಭಿಪ್ರಾಯ ಹೀಗಿದೆ – ಇರುವೆಯ ದೇಹದಲ್ಲಿರುವ ಆತ್ಮನಿಗೆ ಇರುವೆಯ ಶರೀರದ ಪರಮಾಣವಿರುತ್ತದೆ. ಕರ್ಮವಿಪಾಕದಿಂದ ಅದೇ ಆತ್ಮನಿಗೆ ಆನೆಯ ದೇಹವು ಪ್ರಾಪ್ತಿಯಾದಾಗ ಆ ದೇಹದಲ್ಲಿ ಆಕಾರದ ನ್ಯೂನತೆಯು ಬಂದೀತು. ಆನೆಯ ದೇಹದ ಪರಿಮಾಣವನ್ನು ಹೊಂದಿದ ಆತ್ಮನಿಗೆ ಇರುವೆಯ ದೇಹ ಪ್ರಾಪ್ತಿಯಾದಾಗ ಆ ದೇಹದಲ್ಲಿ ಆಕಾರದ ಅತಿರೇಕವು ಬಂದೀತು. ಹೀಗೆ ಎರಡು ರೀತಿಗಳಿಂದ ದೇಹಪರಿಮಾಣತ್ವವು ಸಂಭವಿಸುವುದೇ ಇಲ್ಲ.

ಹಾಗಾದರೆ ಆತ್ಮನು ಯಾವಾವ ದೇಹವನ್ನು ಹೊಂದುತ್ತಾನೋ ಆವಾವ ದೇಹದ ಪರಿಮಾಣವನ್ನು ಹೊಂದುತ್ತಾನೆ ಎಂದು ಹೇಳುತ್ತೇವೆ. ಆದ್ದರಿಂದ ಆಕಾರ ನ್ಯೂನತೆ ಆಧಿಕ್ಯಾದಿ ದೋಷಗಳು ಬರುವುದಿಲ್ಲ ಎಂದು ಆಶಂಕಿಸಿದರೆ, ಅದನ್ನು ನಿರಾಕರಿಸಲು ಹೊರಟ ಸೂತ್ರ – **'ಓಂ ನ ಚ ಪರ್ಯಾಯಾದಪ್ಯವಿರೋಧೋ ವಿಕಾರಾದಿಭ್ಯಃ ಓಂ'**. ಈ ಸೂತ್ರದ ತಾತ್ಪರ್ಯವನ್ನು 'ತದಪ್ಯಲಂ' ಎಂಬ ಈ ವಾಕ್ಯದಿಂದಲೇ ಹೇಳುತ್ತಾರೆ.

ಪರಿಮಾಣ ಹಾಗೂ ಪರಿಮಾಣವುಳ್ಳದ್ದು ಇವೆರಡಕ್ಕೂ ಅತ್ಯಂತ ಭೇದವನ್ನು ಅಂಗೀಕರಿಸಿಲ್ಲವಾದ್ದರಿಂದ, ಸ್ಥೂಲ ಹಾಗೂ ಸೂಕ್ಷ್ಮ ಶರೀರಗಳಲ್ಲಿ ಪ್ರವೇಶದಿಂದ ಸ್ಥೂಲ ಹಾಗೂ ಸೂಕ್ಷ್ಮ ಪರಿಮಾಣವು ಉಂಟಾದರೆ ಆತ್ಮನಿಗೇ ಅನ್ಯಥಾಭಾವ ಅಂದರೆ ವಿಕಾರವು ಬರಬೇಕಾಗಿರುವುದರಿಂದ ಈ ಪಕ್ಷವೂ ಅಯುಕ್ತವು.

ಆತ್ಮನಿಗೇ ಅನ್ಯಥಾಭಾವವು ಇರಲಿ, ದೋಷವೇನು? ಎಂಬ ಪ್ರಶ್ನೆಯನ್ನು 'ಅನ್ಯಥಾಭಾವಿ' ಇತ್ಯಾದಿ ವಚನದಿಂದ ಪರಿಹರಿಸುತ್ತಾರೆ –

**ಅನ್ಯಥಾಭಾವಿ ಯದ್ವಸ್ತು ತದನಿತ್ಯಮಿತಿ ಸ್ಥಿತಿಃ ।।೨೫೫।।**

**ತನ್ಮತೇ ತದನಿತ್ಯತ್ವಂ ಪುದ್ಗಲಸ್ಯಾನಿವಾರಿತಮ್ ।**

ಯಾವ ವಸ್ತುವು ಅನ್ಯಥಾಭಾವವುಳ್ಳದ್ದೋ ಅದು ಅನಿತ್ಯವೆಂಬ ವ್ಯಾಪ್ತಿಯು ಜೈನಮತದಲ್ಲಿ ಅಂಗೀಕರಿಸಲ್ಪಟ್ಟಿದೆ. ಆದುದರಿಂದ ದೇಹಕ್ಕೆ ಇದ್ದಂತೆಯೇ ಆತ್ಮನಿಗೂ ಅನ್ಯಥಾಭಾವವನ್ನು ಒಪ್ಪುವುದರಿಂದ ಅವರ ಮತದ ಪ್ರಕಾರ ಆತ್ಮನಿಗೆ ಅನಿತ್ಯತ್ವವು ಅನಿವಾರ್ಯವು.

ಹಾಗಾದರೆ ನಮ್ಮ ಮತದಂತೆ ನಿಮ್ಮ ಮತದಲ್ಲಿಯೂ ಸುಖ ದುಃಖಾದಿಗಳ ಮೂಲಕ ಉಚ್ಚತ್ವ ನೀಚತ್ವರೂಪ ವಿಕಾರವನ್ನು ಒಪ್ಪಿರುತ್ತದೆ. ಆದ್ದರಿಂದ ನಿಮ್ಮ ಮತದಲ್ಲಿಯೂ ಆತ್ಮನಿಗೆ ಅನಿತ್ಯತ್ವವು ತಪ್ಪಿದ್ದಲ್ಲ ಎಂದು ಆಶಂಕಿಸಿದರೆ –

**ನಾನಿತ್ಯತಾಸ್ಮತ್ಪಕ್ಷೇ ತು ಚೈತನ್ಯಾದೇರ್ವಿಶೇಷಿಣಃ ॥೨೫೬॥**

**ಲಕ್ಷಣಸ್ಯ ನಿವೃತ್ತೌ ತು ಸ್ಯಾನ್ನ ತಚ್ಚೇತನೇ ಕ್ವಚಿತ್ ।**

ನಮ್ಮ ಪಕ್ಷದಲ್ಲಿಯಾದರೂ ಚೇತನಾದಿಗಳಿಗೆ ಅನಿತ್ಯತ್ವವು ಪ್ರಾಪ್ತವಾಗುವುದೇ ಇಲ್ಲ. ಏಕೆಂದರೆ ಚೇತನತ್ವ ಮೊದಲಾದ ಲಕ್ಷಣಕ್ಕೆ ನಿವೃತ್ತಿಯು ಸಂಭವಿಸಿದರೆ ಮಾತ್ರ ಅಂಥ ಲಕ್ಷಣವುಳ್ಳ ಚೇತನಕ್ಕೆ ನಿವೃತ್ತಿಯು ಪ್ರಸಕ್ತವಾಗುವುದು. ಚೇತನತ್ವವು ಯಾವದ್ ದ್ರವ್ಯಭಾವಿಯಾದ ಲಕ್ಷಣವಾದ್ದರಿಂದ ಅದು ಆತ್ಮನಲ್ಲಿ ಎಂದಿಗೂ ನಿವೃತ್ತಿಯಾಗುವುದಿಲ್ಲ.

ಅದು ಹೇಗೆ ಎಂಬುದನ್ನು ಸ್ಪಷ್ಟಪಡಿಸುತ್ತಾರೆ –

**ಓತಪ್ರೋತಾತ್ಮಕತ್ವಂ ತು ಪಟೇ ದೇಹೇಽಗಸಂಸ್ಥಿತಿಃ ॥೨೫೭॥**

**ಇತ್ಯಾದಿಲಕ್ಷಣಸ್ಯೈವ ನಿವೃತ್ತೌ ಸ್ಯಾದನಿತ್ಯತಾ ।**

ತಂತುಗಳ ಓತಪ್ರೋತವಾಗಿ ಕೂಡಿಕೊಂಡಿರುವುದೆಂಬುದೇ ಪಟದಲ್ಲಿ ಲಕ್ಷಣವು. ಹಾಗೆಯೇ ದೇಹದಲ್ಲಿ ಕರಚರಣಾದಿ ಅಂಗಗಳ ಸನ್ನಿವೇಶವು ಲಕ್ಷಣವು. ಈ ಪ್ರಕಾರವಾದ ಲಕ್ಷಣಗಳ ನಿವೃತ್ತಿಯಾದಾಗ ಮಾತ್ರ ಲಕ್ಷ್ಯಕ್ಕೆ ಅನಿತ್ಯತೆಯು ಬರುವುದು. ಆದರೆ ಆತ್ಮನಲ್ಲಿರತಕ್ಕ ಚೇತನತ್ವಾದಿ ವಿಶೇಷವು ಲಕ್ಷ್ಯವಾದ ಆತ್ಮನು ಇರುವವರೆಗೆ ಇರತಕ್ಕ ಲಕ್ಷಣವು. ಆದ್ದರಿಂದ ಆತ್ಮನಿಗೆ ಅನಿತ್ಯತ್ವವು ಹೇಗೆ ತಾನೆ ಬಂದೀತು?

ಹಾಗಾದರೆ ಆತ್ಮನು ಸ್ವಪ್ರಕಾಶನೆಂಬುದು ಅಯುಕ್ತವು. ಪ್ರಕಾಶವುಳ್ಳ ಪ್ರದೀಪಾದಿಗಳ ಹಾಗೆಯೇ ಆತ್ಮನಿಗೆ ರೂಪ ಸ್ಪರ್ಶ ಮುಂತಾದವು ಬರಬೇಕಾಗುವುದು. ಯಾವುದು ರೂಪಾದಿಗಳನ್ನು ಹೊಂದಿದೆಯೋ ಅದು ಅನಿತ್ಯವು ಎಂದು ವ್ಯಾಪ್ತಿಯಿದೆ. ಆದ್ದರಿಂದ ಆತ್ಮನಿಗೆ ಅನಿತ್ಯತೆಯ ಪರಿಹಾರವು ಹೇಗೆ? ಎಂದು ಆಶಂಕಿಸಿದರೆ –

**ಭೌತಿಕಂ ತ್ವೇವ ರೂಪಾದಿ ವ್ಯಾಪ್ತಂ ನಾಶೇನ ನೋ ಮತೇ ।।೨೫೮।।**

**ನೈವಂ ತಸ್ಯಾನ್ಯಥಾಭಾವೋ ಯಸ್ಯಾನಿತ್ಯತ್ವಮೀರಿತಮ್ ।**

**ರೂಪಾದಿಯುಕ್ತಸ್ಯ ತಥಾ ಜಗನ್ನಾಶಿತ್ವಸಿದ್ಧಯೇ ।।೨೫೯।।**

**ವ್ಯಾಪ್ತ್ಯಾ ತಯಾನ್ಯಥಾಭಾವಾದಾತ್ಮನೋಽನಿತ್ಯತಾ ಭವೇತ್ ।**

ನಮ್ಮ ಮತದಲ್ಲಿ ಭೌತಿಕವಾದ ರೂಪಾದಿಗಳೇ ನಾಶವನ್ನು ಹೊಂದತಕ್ಕದ್ದು ಎಂಬ ವ್ಯಾಪ್ತಿಯಿದೆ. ಆತ್ಮನಲ್ಲಿ ಭೌತಿಕವಾದ ರೂಪಾದಿಗಳು ಇಲ್ಲವಾದ್ದರಿಂದ ಅನಿತ್ಯತ್ವವು ಬರುವುದಿಲ್ಲ ಎಂದು ತಾತ್ಪರ್ಯ. ಜೈನರ ಮತದಲ್ಲಿ ಅನ್ಯಥಾಭಾವವೂ ಹಾಗೂ ರೂಪಾದಿಮತ್ವವೂ ನಮ್ಮ ಮತದಂತೆ ವಿಶೇಷಣ ವಿಶಿಷ್ಟವಾಗಿ ಹೇಳಲ್ಪಟ್ಟಿಲ್ಲ. ಆದ್ದರಿಂದ ಹಿಂದೆ ಹೇಳಿದ ಆತ್ಮ ಅನಿತ್ಯತ್ವರೂಪ ದೋಷವು ಪರಿಹಾರವಾಗುವುದಿಲ್ಲ. ಯಾವುದಕ್ಕೆ ವಿಕಾರವೋ ಅದಕ್ಕೆ ಅನಿತ್ಯತ್ವವು ಎಂಬ ವ್ಯಾಪ್ತಿಯು ಜಗನ್ನಾಶತ್ವದ ಸಿದ್ಧಿಗಾಗಿ ಜೈನನಿಂದ ಹೇಳಲ್ಪಟ್ಟಿದೆ. ಹಾಗೂ ರೂಪಾದಿಗಳಿಂದ ಕೂಡಿರುವ ವಸ್ತುವಿಗೂ ಅನಿತ್ಯತ್ವವು ಹೇಳಲ್ಪಟ್ಟಿದೆ. ಹೀಗೆ ವಿಕಾರವುಳ್ಳದ್ದು ಹಾಗೂ ರೂಪಾದಿವುಳ್ಳದ್ದು ಅನಿತ್ಯವೆಂಬ ವ್ಯಾಪ್ತಿಯ ನಿಮಿತ್ತವಾಗಿ ಜೈನರ ಮತದ ಪ್ರಕಾರ ಆತ್ಮನಿಗೆ ಅನಿತ್ಯತೆಯು ಬರಬೇಕಾಗುವುದು.

ಇನ್ನು ಜೈನನು ಹೇಳಿದ ಸಂತತೋರ್ಧ್ವಗತಿಯೇ ಮೋಕ್ಷ ಎಂಬ ಪ್ರಮೇಯವನ್ನು ನಿರಾಕರಿಸಲು ಹೊರಟಿರುವ ಸೂತ್ರ –

**ಓಂ ಅಂತ್ಯಾವಸ್ಥಿತೇಶ್ಚೋಭಯನಿತ್ಯತ್ವಾದವಿಶೇಷಾತ್ ಓಂ**

ಇದರಲ್ಲಿ 'ಅಂತ್ಯಾವಸ್ಥಿತೇಶ್ಚ' ಎಂಬ ಸೂತ್ರಾಂಶವನ್ನು 'ನಿತ್ಯ' ಇತ್ಯಾದಿ ವಚನದಿಂದ ಮೊದಲು ವ್ಯಾಖ್ಯಾನಿಸುತ್ತಾರೆ–

**ನಿತ್ಯೋರ್ಧ್ವಗತಿರಪ್ಯೇಷಾ ಯಾ ಮುಕ್ತಿರಿತಿ ಕಥ್ಯತೇ ।।೨೬೦।।**

**ಅಲೋಕಾಕಾಶಮಾಪ್ತಸ್ಯ ಕಥಂ ನ ವಿಕೃತಿಶ್ಚ ಸಾ ।**

ಯಾವ ನಿತ್ಯ ಊರ್ಧ್ವಗತಿಯೇ ಮೋಕ್ಷವೆಂದು ಜೈನರಿಂದ ಹೇಳಲ್ಪಟ್ಟಿದೆಯೋ ಅದಾದರೂ ಅಲೋಕಾಕಾಶವನ್ನು ಹೊಂದಿದ ಆತ್ಮನಿಗೆ ಹೇಗೆ ವಿಕಾರವು ಆಗಲಾರದು? ಮೊದಲು ಲೋಕಾಕಾಶದಲ್ಲಿದ್ದ ಆತ್ಮನು ನಿರಂತರವಾದ ಊರ್ಧ್ವಗಮನದಿಂದ ಲೋಕಾಕಾಶವನ್ನು ದಾಟಿ ಅಲೋಕಾಕಾಶವನ್ನು ಹೊಂದುತ್ತಾನೆ. ಇಂಥಹ ವಿಕಾರದ ಕಾರಣ ಆತ್ಮನಿಗೆ ಅನಿತ್ಯತ್ವವು ಬರಬೇಕಾಗುವುದು ಎಂದು ತಾತ್ಪರ್ಯ.

**ಕೀದೃಶಶ್ಚಾನ್ಯಥಾಭಾವೋ ನಾಶಹೇತುತಯೇಷ್ಯತೇ ।।೨೬೧।।**

**ಸಂಸ್ಥಾನಾಪಗಮಶ್ಚೇತ್ಸ ನ ಹಿ ಭೂಸಾಗರಾದಿಷು ।**

**ಯಃ ಕಶ್ಚಿದನ್ಯಥಾಭಾವೋ ಯದಿ ಮುಕ್ತಿಶ್ಚ ತಾದೃಶೀ ॥೨೬೨॥**

ಯಾವರೀತಿಯ ಅನ್ಯಥಾಭಾವವು ನಾಶಕ್ಕೆ ಕಾರಣವೆಂದು ಹೇಳಲ್ಪಡುತ್ತದೆ? ಲಕ್ಷಣದ ಅಪಗಮ ರೂಪವಾದ ಅನ್ಯಥಾಭಾವವು ನಾಶಕ್ಕೆ ಕಾರಣವೆಂದು ಹೇಳಿದರೆ ಅದು ಶಕ್ಯವಲ್ಲ. ಏಕೆಂದರೆ ಭೂಮಿ ಸಮುದ್ರ ಮುಂತಾದ ಪಕ್ಷೈಕ ದೇಶದಲ್ಲಿ ಅದು ಪ್ರಮಿತವಾಗಿಲ್ಲ. ಇನ್ನು ವಿಶೇಷಣರಹಿತವಾದ ಅನ್ಯಥಾಭಾವವು ನಾಶಕ್ಕೆ ಕಾರಣವೆಂದು ಹೇಳಿದರೆ ಮುಕ್ತಿಯೂ ಅಂಥಹ ಅನ್ಯಥಾಭಾವರೂಪವೇ ಆಗಿದೆ. ಇಂಥಹ ಅನ್ಯಥಾ ಭಾವವಿದ್ದರೂ ಆತ್ಮನಿಗೆ ನಿತ್ಯತ್ವವಿದ್ದರೆ ಭೂಮಿ ಸಮುದ್ರಗಳಿಗೂ ನಿತ್ಯತ್ವವು ಬರಲಿ.

ಜೈನನು ಹೇಳಿದ ಪ್ರಮೇಯಾಂತರವನ್ನು ದೂಷಿಸಲು 'ದೇಹಮಾನೇ' ಇತ್ಯಾದಿ ವಾಕ್ಯದಿಂದ ಅನುವಾದ ಮಾಡುತ್ತಾರೆ –

**ದೇಹಮಾನೇ ವಿಕಾರಃ ಸ್ಯಾದಿತಿ ಸ್ಥಾಸ್ನೂನನಾತ್ಮನಃ ।**

**ಆಹ ಹಸ್ತ್ಯಾದಿದೇಹೇಷು ಹ್ಯಪಿ ಸ್ಯಾದನ್ಯಥಾಭವಃ ॥೨೬೩॥**

ದೇಹಪರಿಮಾಣಕ್ಕೆ ಸಮನಾದ ಪರಿಮಾಣವನ್ನು ಒಪ್ಪಿದರೆ ಆತ್ಮನಿಗೆ ವಿಕಾರವು ಬರಬೇಕಾಗುವುದು. ಹೀಗೆ ಆಗಬಾರದು ಎನ್ನುವ ಕಾರಣಕ್ಕಾಗಿ ಜೈನನು ವೃಕ್ಷಾದಿ ಸ್ಥಾವರಗಳನ್ನು ಆತ್ಮರಹಿತಗಳೆಂದು ಹೇಳುತ್ತಾನೆ. ಇರುವೆ ಮುಂತಾದ ದೇಹದಲ್ಲಿ ಆಯಾಯ ಪರಿಮಾಣದಲ್ಲಿರುವ ಜೀವರಿಗೆ ಆನೆ ಮುಂತಾದ ದೊಡ್ಡ ಗಾತ್ರದ ದೇಹದಲ್ಲಿ ಪ್ರವೇಶಿಸಿದಾಗ ವಿಕಾರವು ಬರುತ್ತದೆ. ಆದ್ದರಿಂದ ಗಜಾದಿ ಶರೀರವೂ ಆತ್ಮರಹಿತವಾಗಲಿ.

**ಅಣುದೇಹಸ್ಯ ಜೀವಸ್ಯ ಗಜತ್ವೇ ವಿಕೃತಿರ್ಹಿ ಯಾ ।**

**ದೇಹವ್ಯಾಪ್ತೌ ವಿಶೇಷಃ ಕಸ್ತಸ್ಯಾಃ ಸ್ಥಾಸ್ನುತನೌ ಚ ನುಃ ॥೨೬೪॥**

ಇರುವೆ ಮುಂತಾದ ಚಿಕ್ಕ ದೇಹವುಳ್ಳ ಜೀವನಿಗೆ ಆನೆಯ ಶರೀರ ಬರಲು ಎಂಥ ವಿಕಾರವೋ, ಸ್ಥಾವರ ಶರೀರವು ಬರಲು ಪುರುಷನಿಗೆ ಎಂಥ ವಿಕಾರವೋ, ಇವೆರಡು ಬಗೆಯ ವಿಕಾರಗಳಿಗೂ ಪರಸ್ಪರವಾಗಿ ಏನು ವ್ಯತ್ಯಾಸವಿದೆ?

ಹಾಗಾದರೆ ನಾವು ವಿಕಾರವು ಬರುವುದೆಂಬ ಭಯದಿಂದ ವೃಕ್ಷಾದಿಗಳಿಗೆ ಆತ್ಮನಿಲ್ಲವೆಂದು ಹೇಳುವುದಿಲ್ಲ. ಆದರೆ ವೃಕ್ಷಾದಿಗಳಿಗೆ ಆತ್ಮವಿದೆ ಎನ್ನುವ ವಿಷಯದಲ್ಲಿ ಸಾಧಕ ಪ್ರಮಾಣವಿಲ್ಲದುದರಿಂದ ಹಾಗೂ ಬಾಧಕ ಪ್ರಮಾಣವಿರುವುದರಿಂದ ಹಾಗೆ ಹೇಳುತ್ತೇವೆ. ಏಕೆಂದರೆ ಆತ್ಮನಿಗೆ ಆಶ್ರಯವಾದ

ದೇಹದಲ್ಲಿರುವಂತೆ ವೃಕ್ಷಾದಿಗಳಿಗೆ ಇಂದ್ರಿಯಾದಿಗಳು ಇರುವುದಿಲ್ಲ. ಏಕೆಂದರೆ ಇಂದ್ರಿಯಗಳ ಕಾರ್ಯವಾದ ಶ್ರವಣಾದಿಗಳು ಇರುವುದಿಲ್ಲ. ಹೀಗೆ ಆಕ್ಷೇಪ ಬಂದರೆ ಅದನ್ನು 'ಗೀತಾತ್' ಇತ್ಯಾದಿ ವಾಕ್ಯದಿಂದ ಪರಿಹರಿಸುತ್ತಾರೆ –

**ಗೀತಾತ್ಪುಷ್ಪಫಲಾವಾಪ್ತಿಃ ಸ್ಪರ್ಶಾತ್ಕಾರ್ಶ್ಯಂ ರಸಾತ್ಸ್ಥಿತಿಃ ।**

**ಅಪಿ ವೃಕ್ಷಸ್ಯ ದೃಶ್ಯಂತ ಇತಿ ನಾನಾತ್ಮತಾ ಭವೇತ್ ।।೨೬೫।।**

**ಏವಂ ಚಾತ್ಮಾಕಾರ್ತ್ಸ್ನ್ಯಮಿತಿ ತತ ಏವಾಹ ವೇದವಿತ್ ।**

ಸಂಗೀತದಿಂದ ವೃಕ್ಷಾದಿಗಳಿಗೆ ಪುಷ್ಪ ಫಲಾದಿಗಳು ಉಂಟಾಗುವುದು ಕಂಡಿದೆ (ಶ್ರವಣೇಂದ್ರಿಯಕ್ಕೆ ಪ್ರಮಾಣ). ಹಾಗೆಯೇ ಶೀತೋಷ್ಣ ಸ್ಪರ್ಶ ವಿಶೇಷದಿಂದ ಕೃಶತ್ವವು (ಸ್ಪರ್ಶೇಂದ್ರಿಯಕ್ಕೆ ಪ್ರಮಾಣ), ನೀರು ಮುಂತಾದ ರಸವಿಶೇಷದಿಂದ ಸ್ಥಿತಿಯು (ರಸನೇಂದ್ರಿಯಕ್ಕೆ ಪ್ರಮಾಣ) ಕಂಡುಬರುತ್ತದೆ. ಅಪಿ ಶಬ್ದದಿಂದ ಇತರ ಇಂದ್ರಿಯಗಳ ಕಾರ್ಯವನ್ನೂ ತೆಗೆದುಕೊಳ್ಳಬೇಕು. ಹೇಗೆಂದರೆ, ಸುಂದರ ಕಾಂತೆಯ ದರ್ಶನದಿಂದ ತಿಲಕ ಎಂಬ ವೃಕ್ಷಕ್ಕೆ ಮೊಗ್ಗುಗಳು ಅರಳುವುದು ಕಂಡಿದೆ. ಇದರಿಂದ ಕಣ್ಣು ಮತ್ತು ಮನಸ್ಸುಗಳು ಸಿದ್ಧಿಸುತ್ತವೆ. ಧೂಪ ಹಾಕುವುದರಿಂದ ಅತಿಶಯವು ಕಂಡುಬರುವುದರಿಂದ ಘ್ರಾಣೇಂದ್ರಿಯವು ಸಿದ್ಧಿಸುತ್ತದೆ. ಈ ಪ್ರಕಾರವಾಗಿ ಇಂದ್ರಿಯಗಳಿಗೆ ಸಂಬಂಧಿಸಿದ ನಾನಾ ಕಾರ್ಯಗಳು ವೃಕ್ಷಗಳಲ್ಲೂ ಕಂಡುಬರುತ್ತವೆ. ಆದ್ದರಿಂದ ವೃಕ್ಷಾದಿಗಳಿಗೆ ಅನಾತ್ಮತೆಯು ಸಿದ್ಧಿಸಲಾರದು. ಇದರಿಂದ 'ಅವಿಶೇಷಾತ್' ಎಂಬ ಸೂತ್ರದ ಖಂಡವನ್ನು ಇನ್ನೊಂದು ರೀತಿಯಿಂದ ವ್ಯಾಖ್ಯಾನಿಸಿದಂತಾಗುವುದು.

ಮೇಲೆ ಹೇಳಿದ ಅರ್ಥಗಳನ್ನು ಪ್ರತಿಪಾದಿಸುವುದಕ್ಕಾಗಿಯೇ ವೇದವ್ಯಾಸರು 'ಏವಂ ಚ' ಇತ್ಯಾದಿ ಮೂರು ಸೂತ್ರಗಳನ್ನು ಹೇಳಿದರು. ಆ ಸೂತ್ರಗಳು ಯಾವುವೆಂದರೆ –

**'ಓಂ ಏವಂ ಚಾತ್ಮಾಕಾರ್ತ್ಸ್ನ್ಯಂ ಓಂ**

**ಓಂ ನ ಚ ಪರ್ಯಾಯಾದಪ್ಯವಿರೋಧೋ ವಿಕಾರಾದಿಭ್ಯಃ ಓಂ**

**ಓಂ ಅಂತ್ಯಾವಸ್ಥಿತೇಶ್ಚೋಭಯನಿತ್ಯತ್ವಾದವಿಶೇಷಾತ್ ಓಂ**

## ಪತ್ಯುರಧಿಕರಣಮ್

### ಓಂ ಪತ್ಯುರಸಾಮಂಜಸ್ಯಾತ್ ಓಂ

ಈ ಅಧಿಕರಣದಲ್ಲಿ ಪಶುಪತಿಯನ್ನು(ಮಹಾದೇವನನ್ನು) ಸರ್ವೋತ್ತಮನೆಂದು ಪುರಸ್ಕರಿಸಿ ಹೊರಟವರ ಮತವು ನಿರಾಕರಿಸಲ್ಪಡುತ್ತದೆ. ಅವರಲ್ಲಿ ಶೈವರು,

ಪಾಶುಪತರು, ಕಾಲಾಮುಖರು ಹಾಗೂ ಮಹಾವ್ರತರು ಎಂಬುದಾಗಿ ನಾಲ್ಕುವಿಧ. ಅವರ ಮತಗಳಿಗೆ ಅವಾಂತರ ಭೇದವಿದ್ದರೂ, ಅವೆಲ್ಲವೂ ವೇದವಾದಕ್ಕೆ ಅತ್ಯಂತ ವಿರುದ್ಧವಾದುದರಿಂದ, ಸಾಧಾರಣವೇ ಆದ ಪ್ರಮೇಯವನ್ನು ನಿರಾಕರಿಸಲು 'ಸರ್ವಜ್ಞತ್ವಾದಿಕೈಃ' ಇತ್ಯಾದಿ ವಾಕ್ಯದಿಂದ ಅನುವಾದ ಮಾಡುತ್ತಾರೆ –

**ಸರ್ವಜ್ಞತ್ವಾದಿಕೈಃ ಸರ್ವೈರ್ಗುಣೈರುಕ್ತಂ ಸದಾಶಿವಮ್ ।।೨೬೬।।**

**ಜಗದ್ವಿಚಿತ್ರರಚನಾಕರ್ತಾರಂ ದೋಷವರ್ಜಿತಮ್ ।**

**ಆಹುಃ ಪಾಶುಪತಾಃ ತಚ್ಚ ಬಹುಶ್ರುತಿವಿರೋಧತಃ ।।೨೬೭।**

**ನೋಪಾದೇಯಂ ಮತಂ ಹಿ .........................**

ಪಶುಪತಿಯನ್ನೇ ಸರ್ವೋತ್ತಮನೆಂದು ವಾದಿಸುವ ಆ ನಾಲ್ಕು ಮತದವರೂ ಸದಾಶಿವನು ಸರ್ವಜ್ಞತ್ವಾದಿ ಸರ್ವಗುಣಗಳಿಂದ ಯುಕ್ತನು, ಪ್ರಪಂಚದ ವಿಚಿತ್ರವಾದ ನಿರ್ಮಾಣವನ್ನು ಮಾಡತಕ್ಕವನು ಹಾಗೂ ದೋಷವಿಲ್ಲದವನು ಎಂದು ಹೇಳುತ್ತಾರೆ. ಅವರ ಮತವು, ಬಹುಶ್ರುತಿಗಳಿಗೆ ವಿರುದ್ಧವಾದುದರಿಂದ, ನಿಶ್ಚಯವಾಗಿಯೂ ಸ್ವೀಕಾರಕ್ಕೆ ಅರ್ಹವಲ್ಲ.

ಆ ಶ್ರುತಿಗಳು ಯಾವವು ಎಂದರೆ ಅವುಗಳನ್ನು ಉದಾಹರಿಸುತ್ತಾರೆ –

**.................................ಅಸ್ಯ ದೇವಸ್ಯ ಸ್ತುಹಿಗರ್ತಗಮ್ ।**

**ಉತ್ಪಿಪೇಷ ಶಿರಸ್ತಸ್ಯ ಗೃಣೀಷೇ ಸತ್ಪತಿಂ ಪದಮ್ ।।೨೬೮।।**

**ಯದ್ವಿಷ್ಣೋರುಪಮಂ ಹಂತುಂ ರುದ್ರಮಾಕೃಷ್ಯತೇ ಮಯಾ ।**

**ಧನುರ್ಯಂ ಕಾಮಯೇ ತಂ ತಮುಗ್ರಂ ಮಾ ಶಿಶ್ನದೇವತಾಃ ।।೨೬೯।।**

'ಅಸ್ಯ ದೇವಸ್ಯ' (ಅಸ್ಯ ದೇವಸ್ಯ ಮೀಳ್ಹುಷೋ ವಯಾ ವಿಷ್ಣೋರೇಷಸ್ಯ ಪ್ರಭೃತೇ ಹವಿರ್ಭಿಃ। ವಿದೇ ಹಿ ರುದ್ರೋ ರುದ್ರಿಯಂ ಮಹಿತ್ವಂ ಯಾಸಿಷ್ಟಂ ವರ್ತಿರಾಶ್ವಿನಾ ವಿರಾವತ್), 'ಸ್ತುಹಿ ಗರ್ತಗಂ' (ಸ್ತುಹಿ ಶ್ರುತಂ ಗರ್ತಸದಂ ಯುವಾನಂ ಮೃಗಂ ನ ಭೀಮಮುಪಹಂತುಮುಗ್ರಂ। ಮೃಳಾ ಚರಿತ್ರೇ ರುದ್ರ ಸ್ತವಾನೋಽನ್ಯಂ ತೇ ಅಸ್ಮನ್ನಿವಪಂತು ಸೇನಾ), 'ಉತ್ಪಿಪೇಷ ಶಿರಸ್ತಸ್ಯ' (ರುದ್ರಸ್ಯ ತ್ವೇವ ಧನು ರಾತ್ನಿಃ ಶಿರಃ ಉತ್ಪಿಪೇಷ), 'ಗೃಣೀಷೇ ಸತ್ಪತಿಂ' (ಕುಮಾರಶ್ಚಿತ್ಪಿತರಂ ವಂದಮಾನಂ ಪ್ರತಿ ನಾನಾಮ ರುದ್ರೋ ಪಯಂತಂ। ಭೂರೇರ್ದಾತಾರಂ ಸತ್ಪತಿಂ ಗೃಣೀಷೇ ಸ್ತುತಸ್ತ್ವಂ ಭೇಷಜಾರಾಸ್ಯಸ್ಮ), 'ಪದಂ ಯದ್ವಿಷ್ಣೋರುಪಮಂ' (ತವ ಶ್ರಿಯೇ ಮರುತೋಽಮರ್ಜ ಯಂತ ರುದ್ರ ಯತ್ತೇ ಜನಿಮ ಚಾರುಚಿತ್ರಂ। ಪದಂ ಯದ್ವಿಷ್ಣೋರುಪಮಂ ನಿಧಾಯಿ ತೇನ ಪಾಸಿ ಗುಹ್ಯಂ ನಾಮ ಗೋನಾಂ), 'ಹಂತುಂ

ರುದ್ರಮಾಕೃಷ್ಯತೇ ಮಯಾ ಧನುಃ' (ಅಹಂ ರುದ್ರಾಯ ಧನುರಾತನೋಮಿ ಬ್ರಹ್ಮದ್ವಿಷೇ ಶರವೇ ಹಂತ ವಾ ಉ), 'ಯಂ ಕಾಮಯೇ ತಂ ತಮುಗ್ರಂ' (ಯಂ ಕಾಮಯೇ ತಂ ತಮುಗ್ರಂ ಕೃಣೋಮಿ ತಂ ಬ್ರಹ್ಮಾಣಂ ತಮೃಷಿಂ ತಂ ಸುಮೇಧಾಂ), 'ಮಾ ಶಿಶ್ನದೇವತಾಃ' (ಮಾ ಶಿಶ್ನ ದೇವಾ ಅಪಿ ಗುಃ ಋತಂ ನಃ)

**ಘ್ನಚ್ಛಿಶ್ನದೇವಾನೇಕೋಽಸಾವಾಸೀನ್ನಾರಾಯಣಃ ಪರಃ ।**

**ತಸ್ಮಾದ್ರುದ್ರಃ ಸಂಪ್ರಸಾದಶ್ಚಾಭೂತಾಂ ವೈಷ್ಣವಂ ಮಖಮ್ ॥೨೭೦॥**

**ಯಜ್ಞೇನ ಯಜ್ಞಮಯಜಂತಾಬಧ್ನನ್ ಪುರುಷಂ ಪಶುಮ್ ।**

**ಯೋ ಭೂತಾನಾಮಧಿಪತೀ ರುದ್ರಸ್ತಂತಿಚರೋ ವೃಷಾ ॥೨೭೧॥**

**ಇತ್ಯಾದಿ ಶ್ರುತಿಸಾಮರ್ಥ್ಯಾತ್ಪಾರತಂತ್ರ್ಯಂ ಜನಿರ್ಮೃತಿಃ ।**

**ಪರಾಧೀನಪದಪ್ರಾಪ್ತಿರಜ್ಞತ್ವಂ ಪ್ರಲಯೇಽಭವಃ ॥೨೭೨॥**

**ಪ್ರತೀಯಂತೇ ಸದೋಷತ್ವಾನ್ನೇಶಃ ಪಶುಪತಿಸ್ತತಃ ।**

'ಘ್ನನ್ ಶಿಶ್ನದೇವಾನ್' (ಘ್ನನ್ ಶಿಶ್ನದೇವಾನ್ ಅಭಿವರ್ಪಸಾಭೂತ್), 'ಏಕೋ ಽಸಾವಾಸೀನ್ನಾರಾಯಣಃ ಪರಃ' (ಏಕೋ ನಾರಾಯಣ ಆಸೀನ್ನ ಬ್ರಹ್ಮಾ ನ ಚ ಶಂಕರಃ), 'ತಸ್ಮಾದ್ರುದ್ರಃ ಸಂಪ್ರಸಾದಶ್ಚಾಭೂತಾಂ ವೈಷ್ಣವಂ ಮಖಂ' (ಸ ರುಷ್ಟಃ ಸ ಪ್ರಸನ್ನೋ ಯದ್ರುಷ್ಟೋ ಯತ್ಪ್ರಸನ್ನಃ ತಸ್ಮಾದ್ರುದ್ರ ಸಂಪ್ರಸಾದಾವ ಭೂತಾಂ ತೇಷಾಂ ಮಖಂ ವೈಷ್ಣವಂ ಯಶ ಆರ್ಛತ್), 'ಯಜ್ಞೇನ ಯಜ್ಞಮ ಯಜಂತ' (ಯಜ್ಞೇನ ಯಜ್ಞಮಯಜಂತ ದೇವಾಸ್ತಾನಿ ಧರ್ಮಾಣಿ ಪ್ರಥಮಾ ನ್ಯಾಸನ್), 'ಅಬಧ್ನನ್ ಪುರುಷಂ ಪಶುಂ' (ದೇವಾ ಯದ್ಯಜ್ಞಂ ತನ್ವಾನಾ ಅಬಧ್ನನ್ ಪುರುಷಂ ಪಶುಂ), 'ಯೋ ಭೂತಾನಾಮಧಿಪತೀ ರುದ್ರಸ್ತಂತಿಚರೋ ವೃಷಾ' ಇತ್ಯಾದಿ ಶ್ರುತಿಗಳ ಬಲದಿಂದ ಪಾರತಂತ್ರ್ಯ, ಜನನ, ಮರಣ, ಪರಾಧೀನ ಪದದ ಪ್ರಾಪ್ತಿ, ಅಜ್ಞತೆ, ಪ್ರಲಯದಲ್ಲಿ ಇಲ್ಲದಿರುವಿಕೆ – ಇವುಗಳು ರುದ್ರನಲ್ಲಿ ಕಂಡುಬರುತ್ತವೆ. ಆದ್ದರಿಂದ ಪಶುಪತಿಯು ಸರ್ವೋತ್ತಮನಲ್ಲ ಎಂದು ತಾತ್ಪರ್ಯ.

ಇನ್ನೊಂದು ಯುಕ್ತಿಯಿಂದ ಶಿವನಿಗೆ ಜಗತ್ಕರ್ತೃತ್ವವನ್ನು ನಿರಾಕರಿಸಲು ಹೊರಟ ಸೂತ್ರ – **ಓಂ ಸಂಬಂಧಾನುಪಪತ್ತೇಶ್ಚ ಓಂ.** ಈ ಸೂತ್ರದ ಅರ್ಥವನ್ನು 'ಅಶರೀರತ್ವತಃ' ಎಂಬ ವಾಕ್ಯದಿಂದ ಹೇಳುತ್ತಾರೆ –

**ಅಶರೀರತ್ವತಸ್ತಸ್ಯ ಸಂಬಂಧೋ ಜಗತಾ ಕ್ವಚಿತ್ ॥೨೭೩॥**

**ಕರ್ತೃತ್ವೇನ ನ ಯುಜ್ಯೇತ ದೇಹಿನೋ ಜ್ಞಾನದೃಷ್ಟಿತಃ ।**

ರುದ್ರನಿಗೆ ದೇಹವಿಲ್ಲದಿರುವುದರಿಂದ ಜಗತ್ತಿನೊಡನೆ ಯಾವ ಕಾರ್ಯದಲ್ಲಿಯೂ ಕರ್ತೃತ್ವರೂಪ ಸಂಬಂಧವು ಯುಕ್ತವಾಗುವುದಿಲ್ಲ. ಏಕೆಂದರೆ ದೇಹವುಳ್ಳವನಿಗೇ ಜ್ಞಾನವು ಕಂಡಿರುತ್ತದೆ. ಕರ್ತೃತ್ವಕ್ಕೆ ಪ್ರಯತ್ನವು ಬೇಕು. ಪ್ರಯತ್ನವು ಇಚ್ಛೆಯಿಲ್ಲದೆ ಕೂಡಲಾರದು. ಇಚ್ಛೆಯು ಜ್ಞಾನವಿಲ್ಲದೆ ಕೂಡಲಾರದು. ಜ್ಞಾನವು ಶರೀರವಿಲ್ಲದೆ ಕೂಡಲಾರದು. ಆದ್ದರಿಂದ ದೇಹವಿಲ್ಲದವನಿಗೆ ಕರ್ತೃತ್ವವು ಕೂಡಲಾರದು.

ಹಿಂದೆ ಹೇಳಿದ, ಶರೀರೇಂದ್ರಿಯ ಸಂಬಂಧವಿಲ್ಲವಾದ್ದರಿಂದ ಕರ್ತೃತ್ವವಿಲ್ಲ, ಎಂಬ ದೋಷದ ಪರಿಹಾರವನ್ನು ಆಶಂಕಿಸಿ, ಅದರ ನಿರಾಕರಣಕ್ಕಾಗಿ ಹೊರಟ ಸೂತ್ರ – **ಓಂ ಕರಣವಚ್ಚೇನ್ನ ಭೋಗಾದಿಭ್ಯಃ ಓಂ**

'ನ ಚ' ಇತ್ಯಾದಿ ವಾಕ್ಯದಿಂದ ಈ ಸೂತ್ರಾರ್ಥವನ್ನು ಹೇಳುತ್ತಾರೆ –

**ನ ಚ ದೇಹಾದಿವದ್ವಿಶ್ವಮಸ್ಯ ಸ್ಯಾದ್ಭೋಗಮಸಂಭವಾತ್ ।।೨೭೪।।**

ರುದ್ರನಿಗೆ ವಿಶ್ವವು ದೇಹೇಂದ್ರಿಯಾದಿಗಳಂತೆ ಅಧಿಷ್ಠೇಯವಾಗಲಾರದು, ಭೋಗವು ಬರಬೇಕಾಗುವುದರಿಂದ.

ಇನ್ನೊಂದು ಯುಕ್ತಿಯಿಂದ ಶಿವನ ಜಗತ್ಕರ್ತೃತ್ವವನ್ನು ನಿರಾಕರಿಸುವ 'ಓಂ ಅಧಿಷ್ಠಾನಾನುಪಪತ್ತೇಶ್ಚ ಓಂ' ಎಂಬ ಸೂತ್ರವನ್ನು 'ಅಧಿಷ್ಠಾನೇ' ಇತ್ಯಾದಿ ವಾಕ್ಯದಿಂದ ವ್ಯಾಖ್ಯಾನ ಮಾಡುತ್ತಾರೆ –

**ಅಧಿಷ್ಠಾನೇ ಸ್ಥಿತಃ ಕರ್ತಾ ಕಾರ್ಯಂ ಕುರ್ವನ್ಪ್ರತೀಯತೇ ।**

**ನಾಸ್ಯಾಧಿಷ್ಠಾನಯೋಗೋಽಸ್ತಿ ಭೂತಾನಾಂ ಪ್ರಲಯೇ ತದಾ ।।೨೭೫।।**

ಕುಂಬಾರ ಮುಂತಾದ ಕರ್ತನು ಪೃಥಿವಿ ಮುಂತಾದ ಅಧಿಷ್ಠಾನದಲ್ಲಿ ಸ್ಥಿತನಾಗಿಯೇ ಘಟಾದಿ ಕಾರ್ಯವನ್ನು ಮಾಡುವವನಾಗಿ ಕಂಡಿರುತ್ತಾನೆ. ಪ್ರಲಯದಲ್ಲಿ ಪಂಚ ಮಹಾಭೂತಗಳ ನಾಶವಾಗಿರಲು, ಆದಿ ಸೃಷ್ಟಿಕಾಲದಲ್ಲಿ ಈ ಶಿವನಿಗೆ ಅಧಿಷ್ಠಾನ ಸಂಬಂಧವು ಇರುವುದಿಲ್ಲ.

ಹಾಗಾದರೆ ಕುಂಬಾರಾದಿಗಳಿಗೆ ಶರೀರವಿರುವುದರಿಂದ ಅಧಿಷ್ಠಾನ ಸಾಪೇಕ್ಷತೆಯು ಯುಕ್ತವೆನಿಸುತ್ತದೆ. ಆದರೆ ಶರೀರವಿಲ್ಲದ ಶಿವನಿಗೆ ಅಧಿಷ್ಠಾನದ ಅಪೇಕ್ಷೆಯಿರುವುದಿಲ್ಲ. 'ಇಹ ಇದಂ ಜಾತಂ' 'ಇಲ್ಲಿ ಇದು ಉಂಟಾಯಿತು' ಇತ್ಯಾದಿ ವ್ಯವಹಾರವಾದರೋ ಆಕಾಶ ಮುಂತಾದವನ್ನು ಆಶ್ರಯಿಸಿ ಯುಕ್ತವಾಗುತ್ತದೆ. ಆದ್ದರಿಂದ ಶಿವನಿಗೆ ಭೂಮಿ ಮುಂತಾದ ಅಧಿಷ್ಠಾನವು ಬೇಕಿಲ್ಲ. ಹೀಗೆ ಆಕ್ಷೇಪ ಬಂದರೆ –

**ಅದೇಹಶ್ಚೇದಸರ್ವಜ್ಞಃ ಶಿಲಾಕಾಷ್ಠಾದಿವತ್ಸದಾ ।**

**ದೇಹೀ ಚೇದಂತವಾನೇವ ಯಜ್ಞದತ್ತನಿದರ್ಶನಾತ್ ।।೨೭೬।।**

ಶರೀರವಿಲ್ಲದವನಾದರೆ ಈ ಶಿವನು ಕಲ್ಲುಕಟ್ಟಿಗೆಗಳಂತೆ ಯಾವಾಗಲೂ ಎಲ್ಲವನ್ನೂ ತಿಳಿದವನಲ್ಲ. ದೇಹವುಳ್ಳವನಾದರೆ ಯಜ್ಞದತ್ತನ ದೃಷ್ಟಾಂತದಿಂದ ಮರಣವುಳ್ಳವನೂ ಆಗುವನು.

ಹಾಗಾದರೆ ವಿಷ್ಣುವು ಜಗತ್ಕರ್ತೃ ಎಂದು ಅಂಗೀಕರಿಸಿದರೆ, ಅವನಲ್ಲಿಯೂ ಈ ದೋಷಗಳು ಸಮಾನವಾಗುವುದರಿಂದ ಸ್ವವ್ಯಾಹತಿ ಬರುತ್ತದೆಂದು ಆಶಂಕಿಸಿದರೆ –

**ನ ಚೈತದಖಿಲಂ ವಿಷ್ಣೌ ಶ್ರುತಿಪ್ರಾಮಾಣ್ಯಗೌರವಾತ್ ।**

ಈ ದೋಷಗಳೆಲ್ಲವೂ ವಿಷ್ಣುವಿನಲ್ಲಿಯೂ ಬರುತ್ತವೆ ಎಂದು ಹೇಳಬಾರದು. ಏಕೆಂದರೆ ಪಾಶುಪತಾದಿ ಆಗಮಗಳಿಗಿಂತಲೂ ಶ್ರುತಿಗಳ ಪ್ರಾಮಾಣ್ಯವು ಶ್ರೇಷ್ಠವಾದುದು.

ಹಾಗಾದರೆ ಆ ಶ್ರುತಿಗಳು ಯಾವುವೆಂದರೆ, ಸೂಚ್ಯವಾಗಿ ತಿಳಿಸುತ್ತಾರೆ –

**ಮನೋಬುದ್ಧ್ಯಂಗಿತಾಂ ವಿಷ್ಣೋರ್ಲಕ್ಷ್ಯಯಾಮೋ ಯ ಏವ ಸಃ ।।೨೭೭।।**

**ಸ ಏವ ದೇಹೋ ವಿಜ್ಞಾನಮೈಶ್ವರ್ಯಂ ಶಕ್ತಿರೂರ್ಜಿತಾ ।**

**ದೇಹೋ ವಿಷ್ಣೋರ್ನತೇ ವಿಷ್ಣೋ ವಾಸುದೇವೋಽಗ್ರತೋ ಭವೇತ್।।೨೭೮।।**

ವಿಷ್ಣುವಿಗೆ ಬುದ್ಧಿ ಮನಸ್ಸು ಅಂಗ ಪ್ರತ್ಯಂಗಗಳಿವೆಯೆಂದು ಶ್ರುತಿಯು ತಿಳಿಸುತ್ತದೆ. ಶ್ರೀಹರಿಯು ಯಾವ ರೂಪನೋ ಅವನ ದೇಹವೂ ಅದೇ ರೂಪವೇ. ಶ್ರೀಹರಿಯ ದೇಹವು ವಿಜ್ಞಾನ, ಐಶ್ವರ್ಯ, ಸರ್ವತ್ರ ತಡೆಯಿಲ್ಲದ ಶಕ್ತಿಯಿಂದ ಕೂಡಿದುದು. ಹೇ ವಿಷ್ಣುವೇ, ನಿನ್ನ ಮಹಿಮೆಯ ಕೊನೆಯನ್ನು ಹಿಂದೆ ಹುಟ್ಟಿದವನು, ಮುಂದೆ ಹುಟ್ಟುವವನು, ಈಗ ಹುಟ್ಟಿದವನು ಯಾವನೂ ಸಹ ಹೊಂದುವುದಿಲ್ಲ. ವಾಸುದೇವನೇ ಸೃಷ್ಟಿಯ ಪೂರ್ವದಲ್ಲಿ (ಪ್ರಲಯದಲ್ಲಿ) ಇದ್ದನು.

**ಏಕೋ ನಾರಾಯಣ ಆಸೀನ್ನ ಬ್ರಹ್ಮಾ ನ ಚ ಶಂಕರಃ ।**

**ಅಜಸ್ಯ ನಾಭಾವಧ್ಯೇಕಮರ್ಪಿತಂ ಮಾತ್ರಯಾ ಪರಃ ।।೨೭೯।।**

ನಾರಾಯಣನೊಬ್ಬನೇ ಸ್ವತಂತ್ರವಾಗಿ ಇದ್ದನು. ಬ್ರಹ್ಮನೂ ಇರಲಿಲ್ಲ, ಶಂಕರನೂ ಇರಲಿಲ್ಲ. ಜನನರಹಿತನಾದ ಶ್ರೀಹರಿಯ ನಾಭಿಯಲ್ಲಿ ಶ್ರೇಷ್ಠವಾದ ಒಂದು ಕಮಲವು ಅರ್ಪಿತವಾಗಿದೆ (ಹುಟ್ಟಿದೆ). ನೀನು ಅಳತೆಗೆ ದೂರನಾಗಿ (ನಿಲುಕದವನಾಗಿ) ಇದ್ದೀಯೆ.

**ಸದ್ದೇಹಃ ಸುಖಗಂಧಶ್ಚ ಜ್ಞಾನಭಾಃ ಸತ್ಪರಾಕ್ರಮಃ ।**

**ಜ್ಞಾನಜ್ಞಾನಃ ಸುಖಸುಖಃ ಸ ವಿಷ್ಣುಃ ಪರಮೋಽಕ್ಷರಃ ।।೨೮೦।।**

ಶ್ರೀಹರಿಯು ಜನ್ಮಾದಿ ದೋಷರಹಿತ ದೇಹವುಳ್ಳವನು. ಸುಗಂಧ ಸ್ವರೂಪನು. ಜ್ಞಾನರೂಪ ಪ್ರಕಾಶನು. ಸತ್ಪರಾಕ್ರಮನು. ಅತಿಶಯ ಜ್ಞಾನಸ್ವರೂಪನು, ಅತಿಶಯ ಸುಖಸ್ವರೂಪನು. ಆ ವಿಷ್ಣುವು ಸರ್ವೋತ್ತಮನು. ನಾಶರಹಿತನು.

**ಆನಂದ ಏಕ ಏವಾಗ್ರ ಆಸೀನ್ನಾರಾಯಣಃ ಪ್ರಭುಃ ।**

**ಪ್ರಿಯಂ ತಸ್ಯ ಶಿರೋ ಮೋದಪ್ರಮೋದೌ ಚ ಭುಜೌ ಹರೇಃ ।।೨೮೧।।**

ಆನಂದಸ್ವರೂಪನು. ಸರ್ವಸ್ವಾಮಿಯಾದ ನಾರಾಯಣನೊಬ್ಬನೇ ಪ್ರಲಯಕಾಲದಲ್ಲಿ ಇದ್ದನು. ಆ ನಾರಾಯಣನ ಶಿರಸ್ಸು ಪ್ರಿಯನಾಮಕವು. ಮೋದ ಪ್ರಮೋದಗಳು ಅವನ ಭುಜಗಳು. (ಶ್ರವಣಜನಿತ ಸುಖವು ಪ್ರಿಯ, ದರ್ಶನಜನಿತ ಆನಂದವು ಮೋದ, ಭೋಗಜನಿತ ಸುಖವು ಪ್ರಮೋದ).

**ಆನಂದೋ ಮಧ್ಯತೋ ಬ್ರಹ್ಮ ಪುಚ್ಛಂ ನಾನ್ಯದಭೂತ್ಕ್ವಚಿತ್ ।**

**ಮನಸೋಽಸ್ಯಾಭವಬ್ರಹ್ಮಾ ಲಲಾಟಾದಪಿ ಶಂಕರಃ ।।೨೮೨।।**

**ಪಕ್ಷಯೋರ್ಗರುಡಃ ಶೇಷೋ ಮುಖಾದಾಸೀತ್ಸರಸ್ವತೀ ।**

ಮಧ್ಯದೇಹವು ಸ್ವರೂಪಭೂತ ಆನಂದವು. ಬ್ರಹ್ಮನ ಪಾದಾದಿ ಯಾವ ಅಂಗಗಳೂ ಪ್ರಾಕೃತವಲ್ಲ. ಈ ವಿಷ್ಣುವಿನ ಮನಸ್ಸಿನಿಂದ ಚತುರ್ಮುಖ ಬ್ರಹ್ಮನೂ, ಹಣೆಯಿಂದ ಶಂಕರನೂ, ಭುಜಗಳಿಂದ ಗರುಡ ಶೇಷರೂ, ಮುಖದಿಂದ ಸರಸ್ವತಿಯೂ ಹುಟ್ಟಿದರು.

**ಸಹಸ್ರಶೀರ್ಷಾ ಪುರುಷಃ ಸಹಸ್ರಾಕ್ಷಃ ಸಹಸ್ರಪಾತ್ ।।೨೮೩।।**

**ಇತ್ಯಾದಿಶ್ರುತಿಸಂದರ್ಭಬಲಾನ್ನಿತ್ಯಗುಣಾತ್ಮನಃ ।**

**ವಿಷ್ಣೋರ್ದೇಹಾಜ್ಜಗತ್ಸರ್ವಮಾವಿರಾಸೀದಿತೀಯತೇ ।।೨೮೪।।**

ಪುರುಷರೂಪೀ ಶ್ರೀಹರಿಯು ಅನಂತ ತಲೆಗಳು, ಅನಂತ ಕಣ್ಣುಗಳು ಹಾಗೂ ಅನಂತ ಪಾದಗಳನ್ನು ಹೊಂದಿರುವನು.

*ಇವೇ ಮುಂತಾದ ಶ್ರುತಿಗಳ ಬಲದಿಂದ, ಈ ಸಮಸ್ತ ಪ್ರಪಂಚವೂ ನಿತ್ಯಗುಣ ಸ್ವರೂಪನಾದ ಶ್ರೀಹರಿಯ ದೇಹದಿಂದ ಉತ್ಪನ್ನವಾಯಿತು ಎಂದು ತಿಳಿದುಬರುತ್ತದೆ.*

ಹಾಗಾದರೆ ವಿಷ್ಣುವಿನ ದೇಹವು ಜ್ಞಾನಾಂದಾತ್ಮಕ ಹಾಗೂ ಅನಾದಿ ನಿತ್ಯವೆಂಬ ವಚನವು ಮೊಲವು ಕೋಡುಳ್ಳದ್ದು ಎಂಬಂತೆ ವಿರುದ್ಧವಾಗುವುದು. ಏಕೆಂದರೆ ದೇಹವು ಯಾವುದೋ ಅದು ಭೌತಿಕವಾದದ್ದು ಹಾಗೂ ಜನನಾದಿಗಳುಳ್ಳದ್ದು ಎಂಬ ನಿಯಮವು ಕಂಡಿರುತ್ತದೆ. ಆದ್ದರಿಂದ ವಿಷ್ಣುವಿಗೆ ದೇಹವಿದೆಯೆಂದು ಅಂಗೀಕರಿಸಿ, ಅದು ಅಭೌತಿಕವಾದ ಜ್ಞಾನಾನಂದ ಸ್ವರೂಪವು ಎಂದು ಅಂಗೀಕರಿಸಿದರೆ, ಮೊಲಕ್ಕೆ ಕೋಡುಗಳಿವೆಯೆಂಬುದನ್ನೂ ಅಂಗೀಕರಿಸಬೇಕಾಗುತ್ತದೆ. ಹೀಗೆ ಆಶಂಕೆ ಬಂದರೆ ಅದನ್ನು 'ಮಾನವತ್ವಾತ್' ಎಂಬಿತ್ಯಾದಿ ವಾಕ್ಯದಿಂದ ಪರಿಹರಿಸುತ್ತಾರೆ –

**ಮಾನವತ್ವಾದ್ವಿರೋಧಃ ಕೋ ನಾಮಾನಂ ಕ್ವಚಿದಿಷ್ಯತೇ ।**

**ಅವಿರೋಧೋ ವಿರೋಧಶ್ಚ ಮಾನೇನೈವ ಹಿ ಗಮ್ಯತೇ ॥೨೮೫॥**

**ಅತ ಉಕ್ತಂ ಸಮಸ್ತಂ ಚ ವಾಸುದೇವಸ್ಯ ಯುಜ್ಯತೇ ।**

ಪರಮೇಶ್ವರನ ದೇಹವು ಜ್ಞಾನಾನಂದಾತ್ಮಕವೆಂಬುದು ಪ್ರಮಾಣಗಳಿಗೆ ವಿರುದ್ಧವಲ್ಲ. ಆದ್ದರಿಂದ ಅದನ್ನು ಅಂಗೀಕರಿಸುತ್ತೇವೆ. ಆದರೆ ಮೊಲದ ಕೋಡು ಪ್ರಮಾಣಕ್ಕೆ ವಿರುದ್ಧವು. ಆದ್ದರಿಂದ ಅದನ್ನು ಅಂಗೀಕರಿಸುವುದಿಲ್ಲ. ಅವಿರೋಧ ವಿರೋಧಗಳೆರಡೂ ಪ್ರಮಾಣಗಳಿಂದಲೇ ತಿಳಿಯಲ್ಪಡುತ್ತವೆ. ಆದ್ದರಿಂದ ಮೇಲೆ ಉದಾಹರಿಸಿದ ಶ್ರುತಿಗಳಲ್ಲಿ ಹೇಳಿದ ಸಮಸ್ತವೂ ಶ್ರೀಹರಿಯ ವಿಷಯದಲ್ಲಿ ಯುಕ್ತವಾಗುತ್ತವೆ.

ಹಾಗಾದರೆ ಇದು ನಮಗೂ ಸಮಾನವು. 'ಜ್ಞಾತ್ವಾ ಶಿವಂ ಶಾಂತಿಮತ್ಯಂತಮೇತಿ' 'ಏಕೋ ರುದ್ರೋ ನ ದ್ವಿತೀಯಾಯ ತಸ್ಥೇ' 'ಸ ಇಮಾನ್ ಲೋಕಾನೀಶತ ಈಶನೀಭಿಃ' ಇತ್ಯಾದಿ ಶ್ರುತಿಗಳು ಶಿವನಿಗೆ ಜಗಜ್ಜನ್ಮಾದಿ ಕಾರಣತ್ವವನ್ನು ಹೇಳುತ್ತವೆ. ಆದ್ದರಿಂದ ಶಿವನಿಗೆ ಜಗತ್ಕಾರಣತ್ವವನ್ನು ಹೇಳುವುದು ಅಸಮಂಜಸವಲ್ಲ. ಹೀಗೆ ಆಶಂಕಿಸಿದರೆ –

**ಶಿವಾದಿನಾಮಯುಕ್ತಾಶ್ಚ ಶ್ರುತಯೋ ವಿಷ್ಣುವಾಚಕಾಃ ॥೨೮೬॥**

**ನಾಮಾನಿ ಸರ್ವಾಣಿ ಚ ಯಮೇಕೋ ಯೋ ದೇವನಾಮಧಾಃ ।**

**ವಿಷ್ಣುನಾಮಾನಿ ನಾನ್ಯಸ್ಯ ಸರ್ವನಾಮಾ ಹರಿಃ ಸ್ವಯಮ್ ॥೨೮೭॥**

**ನ ನಾರಾಯಣನಾಮಾನಿ ತದನ್ಯೇಷ್ವಪರೇ ಹರೌ ।**

**ಇತ್ಯಾದಿಶ್ರುತಯಸ್ತತ್ರ ಮಾನಂ ಚೋಕ್ತೋ ಸಮನ್ವಯಃ ॥೨೮೮॥**

ಶಿವ ಮುಂತಾದ ನಾಮಗಳಿಂದ ಕೂಡಿದ ಶ್ರುತಿಗಳೂ ವಿಷ್ಣುವಾಚಕಗಳೇ ಆಗಿವೆ. ಏಕೆಂದರೆ ಎಲ್ಲ ನಾಮಗಳೂ ಮುಖ್ಯವೃತ್ತಿಯಿಂದ ವಿಷ್ಣುವನ್ನೇ ಹೇಳುತ್ತವೆ

ವಿಷ್ಣುವಿನ ನಾಮಗಳು ಅನ್ಯ ದೇವತೆಗಳ ವಾಚಕಗಳಲ್ಲ. ಆದರೆ ವಿಷ್ಣುವು ಸ್ವತಂತ್ರವಾಗಿ ಎಲ್ಲ ನಾಮಗಳಿಂದ ವಾಚ್ಯನು. ನಾರಾಯಣನ ನಾಮಗಳು ರುದ್ರಾದಿಗಳಲ್ಲಿ ವಾಚಕವಾಗಿರುವುದಿಲ್ಲ. ಶಿವಾದಿ ಇತರ ಶಬ್ದಗಳೆಲ್ಲವೂ ನಾರಾಯಣನಲ್ಲಿ ಇರುತ್ತವೆ. 'ನಾಮಾಣಿ ಸರ್ವಾಣಿ ಯಮಾವಿಶಂತಿ ತಂ ವೈ ವಿಷ್ಣುಂ ಪರಮಮುದಾಹರಂತಿ' 'ನಾಮಾನಿ ವಿಶ್ವಾಭಿ ನ ಸಂತಿ ಲೋಕೇ ಯೋ ದೇವಾನಾಂ ನಾಮಧಾ ಏಕ ಏವ' ಇವೇ ಮುಂತಾದ ಶ್ರುತಿಗಳು ಮೇಲೆ ಹೇಳಿದ ವಿಷಯದಲ್ಲಿ ಪ್ರಮಾಣಗಳಾಗಿವೆ. ಇದರೊಂದಿಗೆ ಹಿಂದೆ ಹೇಳಿದ ಸಮನ್ವಯವೂ ಈ ವಿಷಯದಲ್ಲಿ ಪ್ರಮಾಣವಾಗುವುದು.

ಇನ್ನು ಶಿವನಿಗೆ ಜಗತ್ಕಾರಣತ್ವದ ವಿಷಯದಲ್ಲಿ ಶ್ರುತಿಗಳು ಪ್ರಮಾಣವಾಗದಿರಲಿ. ಆದರೆ ಶೈವಾದಿ ಪುರಾಣಗಳು ಪ್ರಮಾಣವಾಗುವುದು. ಅಲ್ಲದೆ ಆ ಶೈವಾದಿ ಪುರಾಣಗಳು ವಿಷ್ಣುಪರವಾಗುವುದಿಲ್ಲ. ಈ ಆಶಂಕೆಯನ್ನು 'ಪುರಾಣಾನಿ' ಇತ್ಯಾದಿ ವಾಕ್ಯದಿಂದ ಪರಿಹರಿಸುತ್ತಾರೆ –

**ಪುರಾಣಾನಿ ಪುರಾಣಾದ್ಯೈರ್ವಿರುದ್ಧತ್ವಾನ್ನ ತತ್ಪ್ರಮಾ ।**

**ತದ್ವಿರುದ್ಧೇಷು ನೋ ಮಾನಂ ಪೂರ್ವಾಪರವಿರೋಧತಃ ।।೨೮೯।।**

**ಸಮಬ್ರಾಹ್ಮವಿರೋಧಾಚ್ಚ ನಿಯಮಾದ್ವೈಷ್ಣವೇಷ್ವಪಿ ।**

ವೈಷ್ಣವಪುರಾಣಗಳಿಂದ ವಿರುದ್ಧವಾದುದರಿಂದ ಶೈವಪುರಾಣವು ಶಿವನ ಜಗತ್ಕಾರಣತ್ವ ವಿಷಯದಲ್ಲಿ ಪ್ರಮಾಣವಾಗುವುದಿಲ್ಲ. ಕೇವಲ ವೈಷ್ಣವ ಪುರಾಣಗಳಿಂದ ವಿರುದ್ಧವೆಂದಷ್ಟೇ ಅಲ್ಲ, ಶೈವ ಪುರಾಣಗಳಲ್ಲಿ ಪೂರ್ವಾಪರ ವಿರೋಧವಿರುವುದರಿಂದಲೂ ಶಿವನಿಗೆ ಜಗತ್ಕಾರಣತ್ವವನ್ನು ಹೇಳುವ ವಿಷಯದಲ್ಲಿ ಶೈವಪುರಾಣವು ಅಪ್ರಮಾಣವು. ನಿಷ್ಪಕ್ಷಪಾತವಾದ ಬ್ರಹ್ಮಪುರಾಣದ ವಿರೋಧವು ಇರುವುದರಿಂದಲೂ ಅಪ್ರಮಾಣವು. ಹಾಗಾದರೆ ವೈಷ್ಣವಪುರಾಣಗಳಿಗೂ ಅಪ್ರಾಮಾಣ್ಯವ ಬರಲಿ. ಏಕೆಂದರೆ ಅವುಗಳಿಗೂ ಶೈವಪುರಾಣಗಳಿಂದ ವಿರೋಧವು ಹಾಗೂ ಪೂರ್ವಾಪರ ವಿರೋಧವು ಬರುವುದು ಎಂದು ಹೇಳುವುದು ಸರಿಯಲ್ಲ. ಏಕೆಂದರೆ ವಿಷ್ಣುಪುರಾಣಗಳಲ್ಲಿ ಏಕರೂಪತ್ವವು ಇರುವುದರಿಂದ ಪೂರ್ವಾಪರ ವಿರೋಧವಿಲ್ಲ. ಜೊತೆಗೆ ವೈಷ್ಣವಪುರಾಣಗಳಿಗೆ ವಿರೋಧವನ್ನು ಉಂಟುಮಾಡುವ ಸಾಮರ್ಥ್ಯ ಶೈವಪುರಾಣಗಳಿಗಿಲ್ಲ.

**ಮೋಹಾರ್ಥಮುಕ್ತಿತಶ್ಚೈವ ವಿಷ್ಣುರೇಕೋ ಗುಣಾರ್ಣವಃ ।।೨೯೦।।**

**ಸ್ಕಂದಸೂರ್ಯಗಣೇಶಾದಿಮತಾನಿ ನ್ಯಾಯತೋಽಮುತಃ ।**

**ನಿರಾಕೃತಾನ್ಯಶೇಷೇಣ ಸಿದ್ಧಾಂತಸ್ಯಾವಿಶೇಷತಃ ।।೨೯೧।।**

ಶಿವಾದಿಗಳ ಜಗತ್ಕಾರಣತ್ವ ವಿಷಯದ ಬಗ್ಗೆ ಅಯೋಗ್ಯ ಜನರ ಮೋಹನಕ್ಕಾಗಿಯೇ ಶಿವಾದಿಗಳಿಗೆ ಜಗತ್ಕಾರಣತ್ವವು ಹೇಳಲ್ಪಟ್ಟಿದೆ. ಈ ಕಾರಣದಿಂದಲೂ ಶಿವಾದಿಗಳಿಗೆ ಜಗತ್ಕಾರಣತ್ವವನ್ನು ಹೇಳುವುದು ಅಪ್ರಮಾಣವು. ಆದ್ದರಿಂದ ಶ್ರೀಹರಿಯೊಬ್ಬನೇ ಗುಣಸಮುದ್ರನು. ಇನ್ನು ಸ್ಕಂದ, ಸೂರ್ಯ, ಗಣೇಶ ಮುಂತಾದವರು ಸರ್ವೋತ್ತಮರು ಎಂದು ಪ್ರತಿಪಾದಿಸುವ ಮತಗಳೆಲ್ಲವೂ, ಸಿದ್ಧಾಂತದಲ್ಲಿ ವಿಶೇಷವಿಲ್ಲದುದರಿಂದ, ಇದೇ ನ್ಯಾಯದಿಂದ ನಿರಾಕೃತವಾಗುತ್ತವೆ.

## ಉತ್ಪತ್ತ್ಯಧಿಕರಣಮ್

### ಓಂ ಉತ್ಪತ್ತ್ಯಸಂಭವಾತ್ ಓಂ

ಈ ಅಧಿಕರಣದಲ್ಲಿ ಶಾಕ್ತಮತವು ನಿರಾಕರಿಸಲ್ಪಡುತ್ತದೆ.

ಹಾಗಾದರೆ ಈ ಅಧಿಕರಣವು ಯುಕ್ತವಲ್ಲ. ಏಕೆಂದರೆ ಸ್ಕಂದಾದಿ ಮತದ ಹಾಗೆ ಈ ಮತವೂ ಹಿಂದಿನ ನ್ಯಾಯದಿಂದಲೇ ನಿರಾಕರಣೆಗೆ ಯೋಗ್ಯವಾಗಿದೆ. ಸ್ಕಂದಾದಿ ಮತಗಳಿಗೆ ಹೇಳಿದ ದೂಷಣಗಳೇ ಇದಕ್ಕೂ ಅನ್ವಯಿಸುತ್ತವೆ. ಹೀಗೆ ಪೂರ್ವಪಕ್ಷವು ಬಂದರೆ, ಈ ಅಧಿಕರಣದ ಯುಕ್ತತೆಯನ್ನು ತೋರಿಸಲು 'ನಿರಾಕೃತೌ' ಇತ್ಯಾದಿ ವಾಕ್ಯವನ್ನು ಯೋಜಿಸುತ್ತಾರೆ –

**ನಿರಾಕೃತೌ ವಿಶೇಷಸ್ಯ ಭಾವಾಚ್ಛಕ್ತಿಮತಂ ಪೃಥಕ್ ।**

**ದೂಷ್ಯತೇ..........................................॥**

ನಿರಾಕರಣದಲ್ಲಿ ವಿಶೇಷವಿರುವುದರಿಂದ, ಶಾಕ್ತಮತವು ಪ್ರತ್ಯೇಕವಾಗಿ ದೂಷಿಸಲ್ಪಡುತ್ತದೆ. ಆದ್ದರಿಂದ ಅಧಿಕರಣದ ಆರಂಭವು ಯುಕ್ತವೇ ಆಗಿದೆ. ಹೀಗೆ ಸಮಾಧಾನ ಹೇಳಿ, ಈಗ ಶಾಕ್ತಮತವನ್ನು 'ಮಹತೀಂ' ಇತ್ಯಾದಿ ವಾಕ್ಯದಿಂದ ಉಪನ್ಯಾಸ ಮಾಡುತ್ತಾರೆ.

**...........ಮಹತೀಂ ದೇವೀ ಹ್ರೀಂಕಾರೀ ಸರ್ವಕಾರಣಮ್ ॥೨೯೨॥**

**ತ್ರಿಪುರಾ ಭೈರವೀತ್ಯಾದಿನಾಮಭಿಃ ಸಾಭಿಧೀಯತೇ ।**

ಶಕ್ತಿಯು ಸರ್ವೋತ್ಕೃಷ್ಟಳು, ಸರ್ವಕಾರಣಳಾದ್ದರಿಂದ ಎಂಬುದು ಶಾಕ್ತಮತವು. ಹ್ರೀಂಕಾರೀ, ತ್ರಿಪುರಾ, ಭೈರವೀ ಇತ್ಯಾದಿ ನಾಮಗಳಿಂದ ಆ ಶಕ್ತಿ ದೇವಿಯೊಬ್ಬಳೇ ಹೇಳಲ್ಪಡುತ್ತಾಳೆ.

ಇನ್ನು ಶಾಕ್ತರಾದರೂ ಮಹಾವಾಮ, ಮಧ್ಯವಾಮ ಹಾಗೂ ಅಣುವಾಮ ಎಂದು ಮೂರು ತರಹದವರಿದ್ದಾರೆ. ಅವರೇ ಕೆಲವೆಡೆಗಳಲ್ಲಿ ಶಾಕ್ತ, ಶಾಂಭವ, ಅಣವ ಎಂಬ ಶಬ್ದಗಳಿಂದ ಹೇಳಲ್ಪಡುತ್ತಾರೆ. ಇವರುಗಳಲ್ಲಿ ಮೊದಲನೆಯ

ಮಹಾವಾಮ ಮತದ ವಿಶೇಷವನ್ನು 'ತಸ್ಯಾಃ' ಇತ್ಯಾದಿ ವಾಕ್ಯದಿಂದ ಹೇಳಿ ಅದು ಅಯುಕ್ತವೆಂದು ಹೇಳುತ್ತಾರೆ–

**ತಸ್ಯಾಃ ಸದಾಶಿವಾದ್ಯಾಶ್ಚ ಜಾಯಂತೇ ದೇವಮಾನವಾಃ ।।೨೯೩।।**

**ಭೂತಭೌತಿಕಮಪ್ಯೇತದಿತಿ ತನ್ನೋಪಪದ್ಯತೇ ।**

ಆ ಕೇವಲ ಶಕ್ತಿದೇವಿಯಿಂದಲೇ ಸದಾಶಿವ ಮುಂತಾದ ದೇವತೆಗಳೂ, ಮಾನವರೂ, ಪಂಚಮಹಾಭೂತಗಳೂ, ಭೌತಿಕ ವಸ್ತುಗಳೂ ಹುಟ್ಟುತ್ತವೆಯೆಂದು ಹೇಳುವ ಮಹಾವಾಮ ಮತವು ಅಯುಕ್ತವು.

ಈ ಮತವು ಅಯುಕ್ತವು ಏಕೆ ಎಂಬ ಆಶಂಕೆ ಬರಲು ಅದನ್ನು ಪರಿಹರಿಸಲು ಹೊರಟಿರುವ ಸೂತ್ರ – **ಓಂ ಉತ್ಪತ್ತ್ಯಸಂಭವಾತ್ ಓಂ.** ಈ ಸೂತ್ರವನ್ನು ವ್ಯಾಖ್ಯಾನಿಸುವುದಕ್ಕೆ ಮೊದಲು ಅದರ ವ್ಯಾಪ್ತಿಯನ್ನು 'ದೃಷ್ಟಾ' ಎಂಬಿತ್ಯಾದಿ ವಚನದಿಂದ ಉಪಪಾದಿಸುತ್ತಾರೆ –

**ದೃಷ್ಟಾ ಪುಂಭ್ಯಃ ಸದಾ ಸೃಷ್ಟಿಃ ಸ್ತ್ರೀಪುಂಭ್ಯೋ ವಾ ವಿಶೇಷತಃ ।।೨೯೪।।**

**ಕೇವಲಾಭ್ಯೋ ನ ಹಿ ಸ್ತ್ರೀಭ್ಯಸ್ತತ ಉತ್ಪತ್ತ್ಯಸಂಭವಾತ್ ।**

**ನಾರ್ಚ್ಯಂ ಮಹಾವಾಮಮತಂ ವಾಮೈರನ್ಯೈರುದೀರ್ಯತೇ ।।೨೯೫।।**

ಪುರುಷರಿಂದ ಸಂತಾನೋತ್ಪತ್ತಿಯು ಕೆಲವೆಡೆಗಳಲ್ಲಿ ಕಂಡಿದೆ. ಪ್ರಚುರವಾಗಿ ಸ್ತ್ರೀಪುರುಷರಿಂದ ಕೂಡಿ ಸಂತಾನೋತ್ಪತ್ತಿಯು ಯಾವಾಗಲೂ ಕಂಡಿದೆ. ಪುರುಷಾನುಗ್ರಹವಿಲ್ಲದೆ ಕೇವಲ ಸ್ತ್ರೀಯಿಂದ ಸಂತಾನೋತ್ಪತ್ತಿಯು ಕಂಡು ಬಂದೇ ಇಲ್ಲ. ಈ ರೀತಿಯಾಗಿ ವ್ಯಾಪ್ತಿಯಿರುವುದರಿಂದ, ಕೇವಲ ಶಕ್ತಿದೇವಿಯಿಂದ ಉತ್ಪತ್ತಿಯು ಅಸಂಭವ. ಆದ್ದರಿಂದ ಮಹಾವಾಮವೆಂಬ ಶಾಕ್ತಮತವು ಅಂಗೀಕಾರಕ್ಕೆ ಯೋಗ್ಯವಲ್ಲ. ಶಾಕ್ತಮತದ ಇನ್ನೊಂದು ಪ್ರಭೇದಕ್ಕೆ ಸೇರಿದ ಮಧ್ಯಮವಾಮರು, ಮಹಾವಾಮರಿಗಿಂತ ವಿಭಿನ್ನವಾದ ಸಿದ್ಧಾಂತವನ್ನು ಹೇಳುತ್ತಾರೆ.

**ಶಿವೋಪಸರ್ಜನಾ ಶಕ್ತಿಃ ಸಸರ್ಜೇದಂ ಸಮಂತತಃ ।**

**ಇತಿ ತಚ್ಚೋಪಪನ್ನಂ ನ ಶಿವಸ್ಯಾಕರಣತ್ವತಃ ।।೨೯೬।।**

**ಅದೇಹತ್ವಾತ್ ಅಪಿ ಹ್ಯನ್ಯೇ ಬ್ರೂಯುಃ ಸರ್ವಜ್ಞಮೀಶ್ವರಮ್ ।**

**ಅಣುವಾಮಾಃ ನ ತದ್ಯುಕ್ತಮೀಶವಾದಪ್ರವೇಶನಾತ್ ।।೨೯೭।।**

ಶಿವನನ್ನು ಅಪ್ರಧಾನವಾಗಿ ಹೊಂದಿರುವ ಶಕ್ತಿಯು ಸರ್ವದೇಶಕಾಲಗತವಾದ ಕಾರ್ಯವನ್ನೆಲ್ಲ ಸೃಷ್ಟಿಸಿತು. ಹೀಗೆ ಹೇಳುವ ಮಹಾವಾಮ ಮತವು ಅಯುಕ್ತವು.

ಅದು ಹೇಗೆ ಎಂದರೆ ಅದಕ್ಕೆ ಉತ್ತರವಾಗಿ **'ಓಂ ನ ಚ ಕರ್ತುಃ ಕರಣಮ್ ಓಂ'** ಎಂಬ ಸೂತ್ರವು ಹೊರಟಿದೆ. ಅದನ್ನು 'ಶಿವಸ್ಯ' ಇತ್ಯಾದಿ ವಾಕ್ಯದಿಂದ ವ್ಯಾಖ್ಯಾನ ಮಾಡುತ್ತಾರೆ –

ಏಕೆಂದರೆ ಶಿವನಿಗೆ ಕರಣಗಳಿಲ್ಲ, ದೇಹವೂ ಇಲ್ಲ. ಇನ್ನು ಇತರರಾದ ಅಣುವಾಮರೆಂಬ ಶಾಕ್ತರು ರುದ್ರನನ್ನು ಸರ್ವಜ್ಞನನ್ನಾಗಿಯೂ, ಜಗತ್ಸೃಷ್ಟಿಗೆ ಅಗತ್ಯವಾದ ಸಕಲ ಸಲಕರಣೆಗಳನ್ನೂ ಉಳ್ಳವನೆಂದೂ ಹೇಳುತ್ತಾರೆ. ಅದೂ ಯುಕ್ತವಲ್ಲ.

ಅವರ ಮತವು ಅಯುಕ್ತವೇಕೆ ಎಂಬ ಪ್ರಶ್ನೆ ಬಂದರೆ ಅದಕ್ಕೆ ಹೊರಟ ಸೂತ್ರ – **ಓಂ ವಿಜ್ಞಾನಾದಿಭಾವೇ ವಾ ತದಪ್ರತಿಷೇಧಃ ಓಂ** – ಶಿವನಿಗೆ ವಿಜ್ಞಾನಾದಿಗಳು ಇರುವುದೆಂದು ಅಂಗೀಕರಿಸಲ್ಪಟ್ಟಮೇಲೆ ಆ ಮತವು ನಿರಾಕರಿಸಲ್ಪಡುವುದಿಲ್ಲ ಎಂದರ್ಥ. 'ಈಶವಾದಪ್ರವೇಶನಾತ್' ಎಂಬ ವಾಕ್ಯವೇ ಈ ಸೂತ್ರಕ್ಕೆ ವ್ಯಾಖ್ಯಾನ. ಏಕೆಂದರೆ 'ಹಾಗೆ ಹೇಳುವುದು ಶೈವಮತದಲ್ಲಿ ಪ್ರವೇಶವಾದಂತಾಗುವುದರಿಂದ' ಎಂದು ತಾತ್ಪರ್ಯ.

ಇನ್ನು ಶೈವರು ಸರ್ವಜ್ಞತ್ವ ಮುಂತಾದ ಗುಣವುಳ್ಳ ಶಿವನೊಬ್ಬನನ್ನೇ ಅಂಗೀಕರಿಸುತ್ತಾರೆ. ಶಾಕ್ತರಾದರೂ ಶಿವನ ಜೊತೆಗೆ ಶಕ್ತಿಯನ್ನೂ ಅಂಗೀಕರಿಸುತ್ತಾರೆ. ಹೀಗೆ ಇವರಿಬ್ಬರಲ್ಲಿ ಸಿದ್ಧಾಂತ ವ್ಯತ್ಯಾಸವಿದೆ. ಆದ್ದರಿಂದ ಶೈವಮತದಲ್ಲಿ ಪ್ರವೇಶ ಹೇಗೆ ಎಂಬ ಆಶಂಕೆ ಬಂದರೆ –

**ಸಾರ್ವಜ್ಞಾದಿಗುಣೈರ್ಯುಕ್ತಂ ಗುರುಕಲ್ಪನಯಾ ದ್ವಯಮ್ ।**

**ನ ಯುಜ್ಯತೇ ತತಸ್ತ್ವೀಶ ಏಕ ಏವ ಪ್ರಯೋಜಕಃ ॥೨೯೮॥**

**ಉಕ್ತದೋಷಶ್ಚ ತತ್ಪಕ್ಷ ಇತಿ ನೈವಾತ್ರ ದೂಷ್ಯತೇ ।**

ಸರ್ವಜ್ಞತ್ವಾದಿ ಗುಣಗಳಿಂದ ಕೂಡಿರುವ ಶಿವ ಶಕ್ತಿಗಳೆಂಬ ಎರಡು ತತ್ತ್ವಗಳು ಕಲ್ಪನಾಗೌರವ ದೋಷದಿಂದಾಗಿ ಅಯುಕ್ತವೆನಿಸುವುದು. ಆದ್ದರಿಂದ ಸಾರ್ವಜ್ಞಾದಿ ಗುಣಯುಕ್ತನಾದ ಶಿವನೊಬ್ಬನನ್ನೇ ಪ್ರಪಂಚ ರಚನೆಯಲ್ಲಿ ಪ್ರಯೋಜಕನೆಂದು ಶಾಕ್ತರೂ ಅಂಗೀಕರಿಸಬೇಕಾಗುತ್ತದೆ. ಆ ಶೈವಮತವಾದರೂ ಹಿಂದೆ ಹೇಳಿದ ದೋಷಗಳಿಂದ ಯುಕ್ತವಾಗಿರುವುದರಿಂದ ಇಲ್ಲಿ ಪುನಃ ಅದು ದೂಷಿಸಲ್ಪಡುವುದಿಲ್ಲ.

ಈ ಪ್ರಕಾರವಾಗಿ ನಿರಾಕರಿಸಲ್ಪಟ್ಟ ಈ ಮೂರೂ ಮತಗಳನ್ನು ಸಾಧಾರಣ ದೂಷಣದಿಂದ ನಿರಾಕರಿಸಲು 'ಓಂ ವಿಪ್ರತಿಷೇಧಾಚ್ಚ ಓಂ' ಎಂಬ ಸೂತ್ರವು ಹೊರಟಿದೆ. ಅದನ್ನು 'ಶ್ರುತಿ' ಇತ್ಯಾದಿ ವಾಕ್ಯದಿಂದ ವ್ಯಾಖ್ಯಾನಿಸುತ್ತಾರೆ –

**ಶ್ರುತಿಸ್ಮೃತೀತಿಹಾಸಾನಾಂ ಸಾಮಸ್ತ್ಯೇನ ವಿರೋಧತಃ ॥೨೯೯॥**

**ಸತಾಂ ಜುಗುಪ್ಸಿತತ್ವಾಚ್ಚ ನಾಂಗೀಕಾರ್ಯಂ ಹಿ ತನ್ಮತಮ್ ।**

ಸಮಸ್ತವಾದ ಶ್ರುತಿ ಸ್ಮೃತಿ ಇತಿಹಾಸಗಳ ವಿರೋಧ ಬರುವುದರಿಂದಲೂ, ಸಜ್ಜನರಿಗೆ ಜುಗುಪ್ಸಿತವಾದುದರಿಂದಲೂ ಶಾಕ್ತಮತವು ಅಂಗೀಕಾರಕ್ಕೆ ಯೋಗ್ಯವಲ್ಲ. ಆ ಶ್ರುತ್ಯಾದಿಗಳು ಪ್ರಸಿದ್ಧವಾದುದೂ ಆಗಿವೆ.

ಇನ್ನು ಮಾಯಾವಾದಿಗಳು ನಾಲ್ಕು ಸೂತ್ರಗಳುಳ್ಳ ಈ ಅಧಿಕರಣವನ್ನು ಭಾಗವತ ಅಥವಾ ಪಾಂಚರಾತ್ರ ಮತದ ನಿರಾಕರಣಪರವಾಗಿ ವ್ಯಾಖ್ಯಾನಿಸುತ್ತಾರೆ. ಹೇಗೆ ಎಂಬುದನ್ನು ಶ್ರೀಮನ್ನ್ಯಾಯಸುಧಾ ಅವಲೋಕನದಿಂದ ತಿಳಿಯಬಹುದು. ಅವರ ಈ ಅಪವ್ಯಾಖ್ಯಾನವನ್ನು 'ಪಂಚರಾತ್ರ' ಇತ್ಯಾದಿ ವಾಕ್ಯದಿಂದ ನಿರಾಕರಿಸುತ್ತಾರೆ –

**ಪಂಚರಾತ್ರನಿಷೇಧಾರ್ಥಮೇತಾನ್ಯಾಚಕ್ಷತೇ ಯದಿ ।।೩೦೦।।**

**ಸೂತ್ರಾಣ್ಯತಿವಿರುದ್ಧಂ ತದ್ಯತ ಆಹ ಸ ಭಾರತೇ ।**

ಪಂಚರಾತ್ರಾಗಮಗಳ ನಿರಾಕರಣಕ್ಕಾಗಿ ಈ ಸೂತ್ರಗಳನ್ನು ಸೂತ್ರಕಾರರು ರಚಿಸಿದ್ದಾರೆಂದು ಹೇಳುವುದು ಸೂತ್ರಕಾರರ ಮತಕ್ಕೆ ಅತಿವಿರುದ್ಧವು. ಏಕೆಂದರೆ ಆ ಸೂತ್ರಕಾರರೇ ಭಾರತದಲ್ಲಿ ಪಂಚರಾತ್ರದ ಪ್ರಾಮಾಣ್ಯವನ್ನು ಹೇಳಿದ್ದಾರೆ.

**ಪಂಚರಾತ್ರಸ್ಯ ಕೃತ್ಸ್ನಸ್ಯ ವಕ್ತಾ ನಾರಾಯಣಃ ಸ್ವಯಮ್ ।।೩೦೧।।**

**ಜ್ಞಾನೇಷ್ವೇತೇಷು ರಾಜೇಂದ್ರ ಸರ್ವೇಷ್ವೇತದ್ವಿಶಿಷ್ಯತೇ ।**

**ಪಂಚರಾತ್ರವಿದೋ ಯೇ ತು ಯಥಾಕ್ರಮಪರಾ ನೃಪ ।।೩೦೨।।**

**ಏಕಾಂತಭಾವೋಪಗತಾ ವಾಸುದೇವಂ ವಿಶಂತಿ ತೇ ।**

**ಇತಿ ಗೀತಾ ಚ ತಚ್ಛಾಸ್ತ್ರಸಂಕ್ಷೇಪ ಇತಿ ಹೀರಿತಮ್ ।।೩೦೩।।**

ಸಮಗ್ರವಾದ ಪಂಚರಾತ್ರದ ವಕ್ತೃವು ನಾರಾಯಣನೇ. ಎಲೈ ರಾಜ ಶ್ರೇಷ್ಠನೇ, ಈ ಎಲ್ಲ ಶಾಸ್ತ್ರಗಳಲ್ಲಿ ಈ ಪಂಚರಾತ್ರವು ಶ್ರೇಷ್ಠವಾಗಿದೆ. ಯಾರು ಪಂಚರಾತ್ರವನ್ನು ತಿಳಿದಿರುವರೋ, ದೇವತಾ ತಾರತಮ್ಯವನ್ನು ತಿಳಿದಿರುವರೋ ಹಾಗೂ ಏಕಾಂತ ಭಕ್ತಿಯನ್ನು ಹೊಂದಿರುವರೋ ಅವರು ವಾಸುದೇವನನ್ನು ಪ್ರವೇಶಿಸುತ್ತಾರೆ. ಹೀಗೆ ಮಹಾಭಾರತದಲ್ಲಿ ಹೇಳಿದೆ. ಭಗವದ್ಗೀತೆಯೂ ಪಂಚರಾತ್ರದ ಸಂಕ್ಷೇಪವೇ ಆಗಿದೆ. 'ಬ್ರಹ್ಮ, ರುದ್ರ, ಇಂದ್ರ, ಸೂರ್ಯರುಗಳಿಗೆ ಪೂರ್ವದಲ್ಲಿ ವಿಷ್ಣುವು ಯಾವ ಪಂಚರಾತ್ರವನ್ನು ಉಪದೇಶಿಸಿದ್ದನೋ ಅದನ್ನೇ ಅವರ ಅವತಾರರಾದ ಪಾಂಡವರುಗಳಿಗೆ ಶ್ರೀ ವೇದವ್ಯಾಸರು ಪ್ರದಾನ ಮಾಡಿದರು. ಸೇನಾ ಮಧ್ಯದಲ್ಲಿದ್ದ ಯುದ್ಧ ಬಯಸದ ಅರ್ಜುನನಿಗೆ ಶ್ರೀಕೃಷ್ಣನು ಉಪದೇಶಿಸಿದನು. ಅದೇ

ಗೀತೆಯೆಂದು ವಿಖ್ಯಾತವಾಯಿತು'. (ಬ್ರಹ್ಮರುದ್ರೇಂದ್ರಸೂರ್ಯಾಣಾಂ ಯದ್ದತ್ತಂ ವಿಷ್ಣುನಾ ಪುರಾ। ಪಂಚರಾತ್ರಾತ್ಮಕಂ ಜ್ಞಾನಂ ವ್ಯಾಸೋಽದಾತ್ಪಾಂಡವೇಷು ತತ್। ತೇಷಾಮೇವಾವತಾರೇಷು ಸೇನಾಮಧ್ಯೇಽರ್ಜುನಾಯ ಚ। ಪ್ರಾದಾದ್ಗೀತೇತಿ ವಿನಿರ್ದಿಷ್ಟಂ ಸಂಕ್ಷೇಪೇಣಾಯುಯುತ್ಸವೇ।) ಇತ್ಯಾದಿ ಪುರಾಣ ವಾಕ್ಯವು ಇದಕ್ಕೆ ಪ್ರಮಾಣವಾಗಿದೆ. ಆದಕಾರಣ ಸೂತ್ರಕಾರರಿಗೆ ಪಂಚರಾತ್ರದ ಪ್ರಾಮಾಣ್ಯವು ಅಂಗೀಕೃತವೇ ಆಗಿದೆ.

**ವೇದೇನ ಪಂಚರಾತ್ರೇಣ ಭಕ್ತ್ಯಾ ಯಜ್ಞೇನ ಚೈವ ಹಿ ।**

**ದೃಶ್ಯೋಽಹಂ ನಾನ್ಯಥಾ ದೃಶ್ಯೋ ವರ್ಷಕೋಟಿಶತೈರಪಿ ॥೩೦೪॥**

**ಇತಿ ವಾರಾಹವಚನಂ ಶ್ಲೋಕಾ ಇತಿ ವಚಃ ಶ್ರುತೌ ।**

ವೇದದಿಂದ, ಪಂಚರಾತ್ರದಿಂದ, ಭಕ್ತಿಯಿಂದ, ಯಜ್ಞದಿಂದಲೇ ನನ್ನನ್ನು ಕಾಣಲು ಸಾಧ್ಯ. ಬೇರೆ ರೀತಿಯಿಂದ ನೂರಾರು ಕೋಟಿ ವರ್ಷ ಪ್ರಯತ್ನ ಮಾಡಿದರೂ ನಾನು ಗೋಚರನಾಗುವುದಿಲ್ಲ. ಹೀಗೆ ವರಾಹಪುರಾಣ ವಚನವಿದೆ.

'ಋಗ್ವೇದೋ ಯಜುರ್ವೇದಃ ಸಾಮವೇದೋಽಥರ್ವಾಂಗಿರಸ ಇತಿಹಾಸ ಪುರಾಣಂ ವಿದ್ಯಾ ಉಪನಿಷದಃ ಶ್ಲೋಕಾಃ ಸೂತ್ರಾಣ್ಯನುವ್ಯಾಖ್ಯಾನಾನಿ ವ್ಯಾಖ್ಯಾನಾನಿ' ಇತ್ಯಾದಿ ಶ್ರುತಿವಾಕ್ಯದಲ್ಲಿ ಋಗ್ವೇದಾದಿ ಪ್ರಮಾಣಗಳನ್ನು ಪ್ರಶಂಸಿಸುವ ಪ್ರಸಂಗದಲ್ಲಿ ಶ್ಲೋಕಾಃ ಎಂಬುದಾಗಿ ಪಂಚರಾತ್ರವನ್ನು ಸಂಗ್ರಹಿಸಲಾಗಿದೆ.

**ವೇದೈಶ್ಚ ಪಂಚರಾತ್ರೈಶ್ಚ ಧ್ಯೇಯೋ ನಾರಾಯಣಃ ಪರಃ ॥೩೦೫॥**

**ಪಂಚರಾತ್ರಂ ಚ ವೇದಾಶ್ಚ ವಿದ್ಯೈಕೈವ ದ್ವಿಧೇಯತೇ ।**

**ಇತ್ಯಾದಿವೇದವಚನೈಃ ಪಂಚರಾತ್ರಮುಪೋದ್ಯತೇ ॥೩೦೬॥**

**ಕಥಮೇವ ಅತ್ರ ದೋಷಃ ಕ ಉತ್ಪತ್ತಿರ್ಜ್ಞೋಽತ ಇತ್ಯಪಿ ।**

**ಇಹೈವೋಕ್ತಾ ನ ಚಾಭೂತಭಾವಸ್ತತ್ರಾಪಿ ಕಥ್ಯತೇ ॥೩೦೭॥**

'ವೇದಗಳಿಂದಲೂ, ಪಂಚರಾತ್ರಗಳಿಂದಲೂ ಸರ್ವೋತ್ತಮನಾದ ನಾರಾಯಣನು ಧ್ಯೇಯನು. ಒಂದೇ ವಿದ್ಯೆಯೇ ಪಂಚರಾತ್ರವೆಂದೂ ವೇದಗಳೆಂದೂ ಎರಡು ವಿಧವಾಗಿ ಹೇಳಲ್ಪಡುತ್ತದೆ' ಇತ್ಯಾದಿ ವೇದವಚನಗಳಿರುವದರಿಂದ ಪಂಚರಾತ್ರವು ಅಪ್ರಮಾಣವೆಂಬ ಹೇಳಿಕೆಯು ತದ್ವಿರುದ್ಧವಾಗಿದೆ. ಆದುದರಿಂದ ಈ ಅಧಿಕರಣದಲ್ಲಿ ಪಂಚರಾತ್ರವು ದೂಷಿಸಲ್ಪಡುತ್ತದೆ ಎಂದು ಹೇಳುವುದು ಹೇಗೆ ಶಕ್ಯವಾಗುತ್ತದೆ? ಈ

ಪಂಚರಾತ್ರದಲ್ಲಿ ದೋಷವು ಯಾವುದು? 'ಜ್ಞೋऽತ ಏವ' ಎಂಬ ಸೂತ್ರದಿಂದ ಈ ಶಾಸ್ತ್ರದಲ್ಲಿಯೇ ಜೀವನಿಗೆ ಕೇವಲ ಉತ್ಪತ್ತಿಯಷ್ಟೇ ಹೇಳಲ್ಪಟ್ಟಿದೆ. ಹಿಂದೆ ಇಲ್ಲದೇ ಇದ್ದ ಜೀವನಿಗೆ ಉತ್ಪತ್ತಿಯು ಶ್ರುತಿ ಸೂತ್ರಗಳಲ್ಲಿ ಹೇಳಲ್ಪಟ್ಟಿಲ್ಲ. ಹಿಂದೆ ಇದ್ದೇ ಇರುವ ಜೀವನಿಗೆ ದೇಹಾದಿ ಉಪಾಧಿ ವಿವಕ್ಷೆಯಿಂದಲೇ ಉತ್ಪತ್ತಿಯು ಉಕ್ತವಾಗಿದೆ. ಹಿಂದೆ ಇಲ್ಲದೇ ಇರುವ ಜೀವನಿಗೆ ಉತ್ಪತ್ತಿಯೆಂಬುದು ಆ ಪಂಚರಾತ್ರದಲ್ಲಿಯೂ ಹೇಳಲ್ಪಟ್ಟಿಲ್ಲ.

**ಅನಾದಿಕರ್ಮಣಾ ಬದ್ಧೋ ಜೀವಃ ಸಂಸಾರಮಂಡಲೇ ।**

**ವಾಸುದೇವೇಚ್ಛಯಾ ನಿತ್ಯಂ ಭ್ರಮತೀತಿ ಹಿ ತದ್ವಚಃ ॥೩೦೮॥**

**ನ ಹಿ ಸಂಸಾರಸಾದಿತ್ವಂ ಪಂಚರಾತ್ರೋದಿತಂ ಕ್ವಚಿತ್ ।**

'ಅನಾದಿ ಕರ್ಮದಿಂದ ಬದ್ಧನಾದ ಜೀವನು ವಾಸುದೇವನ ಇಚ್ಛೆಯಿಂದ ಸಂಸಾರ ಚಕ್ರದಲ್ಲಿ ನಿರಂತರವಾಗಿ ತಿರುಗುತ್ತಾನೆ' ಹೀಗೆ ಆ ಪಂಚರಾತ್ರದ ವಚನವು. ಸಂಸಾರದ ಸಾದಿತ್ವವು ಪಂಚರಾತ್ರದಲ್ಲಿ ಎಲ್ಲಿಯೂ ಹೇಳಲ್ಪಟ್ಟಿಲ್ಲ.

ಹೀಗೆ ಜೀವಾದಿ ಪದಗಳಿಗೆ ಯಥಾಶ್ರುತವಾದ ಅರ್ಥವನ್ನು ಒಪ್ಪಿ, ಎರಡು ಸೂತ್ರಗಳಿಂದ ಪಂಚರಾತ್ರ್ಯಾದಿಗಳಿಗೆ ಪರನು ಆರೋಪಿಸಿದ ಅಪ್ರಾಮಾಣ್ಯವೆಂಬ ದೋಷವನ್ನು ಪರಿಹರಿಸಿಲಾಯಿತು. ಈಗ 'ವಾಸುದೇವನಿಂದ ಸಂಕರ್ಷಣ ನಾಮಕ ಜೀವನು ಜನಿಸುತ್ತಾನೆ' ಮುಂತಾದ ವಾಕ್ಯಕ್ಕೆ ಪರರು ಕಲ್ಪಿಸಿದ ಅರ್ಥಕ್ಕಿಂತ ಬೇರೆಯಾದ ಅರ್ಥವನ್ನು 'ಜೀವಾಭಿಮಾನಿ' ಇತ್ಯಾದಿ ವಾಕ್ಯದಿಂದ ಹೇಳುತ್ತಾರೆ –

**ಜೀವಾಭಿಮಾನಿಶೇಷಸ್ಯ ನಾಮ್ನಾ ಸಂಕರ್ಷಣಸ್ಯ ತು ॥೩೦೯॥**

**ವಾಸುದೇವಾಜ್ಜನಿಃ ಪ್ರೋಕ್ತಾ ಪ್ರದ್ಯುಮ್ನಸ್ಯ ತತಸ್ತಥಾ ।**

**ಮನೋऽಭಿಮಾನಿನಃ ಕಾಮಸ್ಯೈವಂ ಸಾಕ್ಷಾದ್ಧರೇಃ ಕ್ವಚಿತ್ ॥೩೧೦॥**

**ಸಂಕರ್ಷಣಾದಿನಾಮ್ನೈವ ನಿತ್ಯಾಚಿಂತ್ಯೋರುಶಕ್ತಿತಃ ।**

**ವ್ಯೂಹಯುಕ್ತೋऽನ್ಯಥಾನೂದ್ಯ ಕಥಂ ದುಷ್ಟತ್ವಮುಚ್ಯತೇ ॥೩೧೧॥**

ಜೀವಶಬ್ದದ ಪ್ರವೃತ್ತಿ ನಿಮಿತ್ತವನ್ನು ಉಪಪಾದನ ಮಾಡಲು ಜೀವಾಭಿಮಾನಿ ಎಂದು ಹೇಳಿದ್ದಾರೆ. ಸಂಕರ್ಷಣ ನಾಮಕ ಭಗವಂತನಿಗೆ ಜನನವಿಲ್ಲವಾದ್ದರಿಂದ, ಜೀವಾಭಿಮಾನಿ ಶೇಷನೇ ಇಲ್ಲಿ ಸಂಕರ್ಷಣ ಎಂಬ ಹೆಸರಿನಿಂದ ಹೇಳಲ್ಪಟ್ಟಿದ್ದಾನೆ. ವಾಸುದೇವ ನಾಮಕ ಭಗವಂತನಿಂದ ಸಂಕರ್ಷಣ ನಾಮಕನಾದ ಜೀವಾಭಿಮಾನಿ ಶೇಷನ ಉತ್ಪತ್ತಿಯು. ಹಾಗೂ ಆ ಸಂಕರ್ಷಣನಿಂದ ಮನೋಭಿಮಾನಿ ಪ್ರದ್ಯುಮ್ನ ನಾಮಕ ಕಾಮನ ಜನನವು. ಇದರಂತೆಯೇ ಪ್ರದ್ಯುಮ್ನನಿಂದ ಅಹಂಕಾರಕ್ಕೆ

ಅಭಿಮಾನಿಯಾದ ಕಾಮಪುತ್ರ ಅನಿರುದ್ಧನ ಉತ್ಪತ್ತಿಯು ಎಂದು ತಿಳಿಯಬೇಕು.

ಕೆಲವು ಕಾಲವಿಶೇಷಗಳಲ್ಲಿ ಸಾಕ್ಷಾತ್ತಾಗಿ ಶ್ರೀಹರಿಗೇ ಸಂಕರ್ಷಣ ಮುಂತಾದ ನಾಮದಿಂದ ವ್ಯೂಹ ಅಥವಾ ವಿಭಾಗ ಹೇಳಲ್ಪಟ್ಟಿದೆ. ನಿತ್ಯವೂ ಅಚಿಂತ್ಯವೂ ಉತ್ಕೃಷ್ಟವೂ ಆದ ಶಕ್ತಿಯನ್ನು ಹೊಂದಿರುವ ಕಾರಣ ಶ್ರೀಹರಿಗೆ ತನ್ನಿಂದಲೇ ತನಗೆ ವಿಭಾಗವೆಂಬುದು ಯುಕ್ತವಾಗುತ್ತದೆ. ಹೀಗೆ ಶ್ರುತಿಸಿದ್ಧವಾದ ಅರ್ಥವುಳ್ಳ ವಾಕ್ಯಕ್ಕೆ ಬೇರೆ ಅರ್ಥವನ್ನು ಅನುವಾದ ಮಾಡಿ ದೂಷಣವನ್ನು ಹೇಳುವುದು ಸರಿಯಲ್ಲ.

ಇನ್ನು ಶಾಂಡಿಲ್ಯನ ವೃತ್ತಾಂತದ ಕಥನದಲ್ಲಿ ಪಂಚರಾತ್ರಕ್ಕೆ ವೇದ ವಿದ್ವೇಷವು ಕಂಡುಬರುತ್ತದೆ ಎಂದು ಹೇಳಿದ್ದನ್ನು 'ಯದಿ' ಇತ್ಯಾದಿ ವಚನದಿಂದ ನಿರಾಕರಿಸುತ್ತಾರೆ –

**ಯದಿ ವಿದ್ಯಾಚ್ಚತುರ್ವೇದಾನಿತಿವದ್ವೇದಪೂರಣಮ್ ।**

**ಪಂಚರಾತ್ರಾದಿತಿ ಕುತೋ ದ್ವೇಷಃ ಶಾಂಡಿಲ್ಯವರ್ತನೇ ॥೩೧೨॥**

ಯದಿ ವಿದ್ಯಾತ್ ಇತ್ಯಾದಿ ವಾಕ್ಯದಲ್ಲಿ ಇತಿಹಾಸ ಪುರಾಣಗಳಿಂದ ವೇದ ಮಹಾತಾತ್ಪರ್ಯ ವಿಷಯವಾದ ಪರಬ್ರಹ್ಮ ತತ್ವದ ನಿರ್ಣಯವು ಅಭಿಪ್ರೇತವಾಗಿದೆ. ಅದರಂತೆ ಶಾಂಡಿಲ್ಯ ವೃತ್ತಾಂತ ಕಥನದಲ್ಲಿಯೂ ಪಂಚರಾತ್ರದಿಂದ ಆ ವೇದಪೂರಣವು ಅಭಿಪ್ರೇತವಾಗಿದೆ ಎಂದು ವ್ಯಾಖ್ಯಾನ ಮಾಡಲಾಗಿದೆ. ಅಂದಮೇಲೆ ಪಂಚರಾತ್ರದಲ್ಲಿ ವೇದವಿದ್ವೇಷವು ತೋರುವುದೇಕೆ?

**ಅತಃ ಪರಮಶಾಸ್ತ್ರೋರುದ್ವೇಷಾದುದಿತಮಾಸುರೈಃ ।**

**ದೂಷಣಂ ಪಂಚರಾತ್ರಸ್ಯ ವೀಕ್ಷ್ಯಾಯಾಮಪಿ ನ ಕ್ಷಮಮ್ ॥೩೧೩॥**

ಆದ್ದರಿಂದ ಪರಮಶಾಸ್ತ್ರವಾದ ಪಂಚರಾತ್ರದ ಮೇಲಿನ ಅತ್ಯಂತ ದ್ವೇಷದಿಂದ ಅಸುರರಿಂದ ಹೇಳಲ್ಪಟ್ಟ ಪಂಚರಾತ್ರದ ದೂಷಣವು ನೋಡಲಿಕ್ಕೂ ಅರ್ಹವಲ್ಲ. ಹೀಗೆ ಪಂಚರಾತ್ರದ ಪ್ರಾಮಾಣ್ಯದ ನಿರಾಕರಣೆಯನ್ನು ಹೇಳಿದವರು ಅಸುರರಾದ್ದರಿಂದ ಅದು ಸೂತ್ರಾರ್ಥವಾಗಲು ಸಾಧ್ಯವಿಲ್ಲ. ಶಾಕ್ತಮತದ ನಿರಾಕರಣೆಯೇ ಈ ಸೂತ್ರದ ಅರ್ಥವು ಎಂದು ತಾತ್ಪರ್ಯ.

ಈ ಪಾದದ ಅರ್ಥವನ್ನು 'ಅತೋಽಶೇಷ' ಇತ್ಯಾದಿ ವಾಕ್ಯದಿಂದ ಉಪಸಂಹಾರ ಮಾಡುತ್ತಾರೆ –

**ಅತೋಽಶೇಷಜಗದ್ಧಾತಾ ನಿರ್ದೋಷೋರುಗುಣಾರ್ಣವಃ ।**

**ನಾರಾಯಣಃ ಶ್ರುತಿಗಣತಾತ್ಪರ್ಯಾದವಸೀಯತೇ ॥೩೧೪॥**

ಆದ್ದರಿಂದ ನಾರಾಯಣನು ಅಶೇಷ ಜಗತ್ಕರ್ತನು, ಅಶೇಷ ದೋಷರಹಿತನು, ಉತ್ಕೃಷ್ಟಗುಣಸಮುದ್ರನು ಎಂದು ಶ್ರುತಿಗಣತಾತ್ಪರ್ಯದಿಂದ ನಿರ್ಣೀತವಾಗುತ್ತದೆ.

ಹಾಗಾದರೆ ಪರರನ್ನು ನಿಗ್ರಹಿಸಿ ವಾದಕಥೆಯನ್ನು ನಡೆಸಬಾರದು ಎಂಬುದಾಗಿ ಸ್ಮೃತಿಗಳು ಹೇಳಿರುವುದರಿಂದ ಪರಮತ ನಿರಾಕರಣೆಯನ್ನು ಮಾಡತಕ್ಕದ್ದಲ್ಲ ಎಂದು ಆಕ್ಷೇಪಿಸಿದರೆ, ಅವಿದ್ಯಾಗ್ರಸ್ತ ಪರಮತವನ್ನು ನಿರಾಕರಣೆಮಾಡದಿದ್ದರೆ ಅನರ್ಥವು ಎಂಬುದಾಗಿ 'ಅಂಧಂತಮಃ' ಇತ್ಯಾದಿ ಶ್ರುತಿವಾಕ್ಯಗಳ ಮೂಲಕ ತಿಳಿಸುತ್ತಾರೆ –

**ಅಂಧಂತಮಃ ಪ್ರವಿಶಂತಿ ಯೇ ತ್ವವಿದ್ಯಾಮುಪಾಸತೇ ।**

**ತತೋ ಭೂಯ ಇವಾಯಾಂತಿ ಏತಸ್ಯಾ ನೈವ ನಿಂದಕಾಃ ॥೩೧೫॥**

**ತತೋ ವಿದ್ಯಾಮವಿದ್ಯಾಂ ಚ ಯೋ ಜಾನತ್ಯುಭಯಂ ಸಹ ।**

**ದೋಷಜ್ಞಾನಾದತೀತ್ಯೈತಾಂ ವಿದ್ಯಯಾಮೃತಮಶ್ನುತೇ ॥೩೧೬॥**

ಶ್ರುತಿಗೆ ಅಭಿಪ್ರೇತವಲ್ಲದ ಅರ್ಥವನ್ನು ಉಪಾಸಿಸುವರು ಅಂಧಂತಮಸ್ಸನ್ನು ಸೇರುತ್ತಾರೆ. ಈ ಅವಿದ್ಯೆಯನ್ನು ನಿಂದಿಸದೇ ಇದ್ದವರು ಅದಕ್ಕೂ ಸ್ವಲ್ಪ ಹೆಚ್ಚಿನದೇ ಆದ ತಮಸ್ಸನ್ನು ಹೊಂದುತ್ತಾರೆ. ವಿದ್ಯೆ ಮತ್ತು ಅವಿದ್ಯೆ ಇವೆರಡನ್ನೂ ತಿಳಿದವನಿಗೆ ಅವಿದ್ಯೆಯ ದೋಷಗಳ ಜ್ಞಾನವಿರುವುದು. ಇದನ್ನು ಅರಿತವನು ಅನರ್ಥಕರವಾದ ಅವಿದ್ಯೆಯ ಉಪಾಸನೆಯನ್ನು ತ್ಯಜಿಸಿ, ಎಲ್ಲ ದುಃಖಗಳನ್ನೂ ದಾಟಿ, ತತ್ತ್ವಜ್ಞಾನದಿಂದ ಮುಕ್ತಿಯನ್ನು ಹೊಂದುತ್ತಾನೆ.

॥ ಇತಿ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯ ವಿರಚಿತೇ

ಶ್ರೀಮದನುವ್ಯಾಖ್ಯಾನೇ ದ್ವಿತೀಯಾಧ್ಯಾಯಸ್ಯ ದ್ವಿತೀಯಃ ಪಾದಃ ॥

॥ ಇಲ್ಲಿಗೆ ಶ್ರೀಮದನಾಂದತೀರ್ಥಭಗವತ್ಪಾದಾಚಾರ್ಯವಿರಚಿತ ಶ್ರೀಮದನುವ್ಯಾಖ್ಯಾನದ ಎರಡನೆಯ ಅಧ್ಯಾಯದ ಎರಡನೆಯ ಪಾದದ ಕನ್ನಡ ಅನುವಾದವು ಮುಗಿದುದು ॥

* * *

# ಎರಡನೆಯ ಅಧ್ಯಾಯ
# ಮೂರನೆಯ ಪಾದ

ಸೂತ್ರಕಾರರು 'ನ ವಿಯದಶ್ರುತೇಃ' ಇತ್ಯಾದಿಯಾಗಿರುವ ಈ ಮೂರನೆಯ ಪಾದದಿಂದ ವೈದಿಕವಚನಗಳಿಗೆ ಒಂದಕ್ಕೊಂದಕ್ಕೆ ವಿರೋಧವಿಲ್ಲವೆಂಬುದನ್ನು ನಿರ್ಣಯಿಸುತ್ತಾರೆ. ಅನುವ್ಯಾಖ್ಯಾನಕಾರರು ಈ ಪಾದದಲ್ಲಿ ಪ್ರತಿಪಾದಿತವಾಗಿರುವ ಪ್ರಮೇಯವನ್ನು ಹಿಂದಿನ ಪಾದದೊಡನೆ ಸಂಗತಿ ಸಹಿತವಾಗಿ 'ಅಥ' ಇತ್ಯಾದಿ ವಾಕ್ಯದಿಂದ ತೋರಿಸುತ್ತಾರೆ –

**ಅಥಾಶೇಷಸಮಾಮ್ನಾಯವಿರೋಧಾಪಕೃತಿಂ ಪ್ರಭುಃ ।**

**ಕರಿಷ್ಯನ್ ಅಧಿದೈವಾಧಿಭೂತಜೀವಪರಮಾತ್ಮನಾಮ್ ।।೧।।**

**ಸ್ವರೂಪನಿರ್ಣಯಾಯ್ಯೆವ ವಚನಾನಾಂ ಪರಸ್ಪರಮ್ ।**

**ಪಾದೇನಾನೇನಾವಿರೋಧಂ ದರ್ಶಯತ್ಯಮಿತದ್ಯುತಿಃ ।।೨।।**

ಹಿಂದಿನ ಪಾದದಿಂದ ಸಮಯಗಳ ವಿರೋಧ ಪರಿಹಾರವನ್ನು ಸಾಧಿಸಿದ ಅನಂತರ, ಸರ್ವಜ್ಞರಾದ ಸೂತ್ರಕಾರರು ಸಮಗ್ರವಾಗಿ ವೇದವಿರೋಧಗಳ ನಿರಾಕರಣೆಯನ್ನು ಮಾಡುತ್ತ, ಅಧಿದೈವ, ಅಧಿಭೂತ, ಜೀವ, ಪರಮಾತ್ಮ ಇವುಗಳ ಸ್ವರೂಪದ ನಿರ್ಣಯಕ್ಕಾಗಿಯೇ, ಈ ಪಾದದಿಂದ ವೈದಿಕವಚನಗಳಲ್ಲಿ ಪರಸ್ಪರ ಅವಿರೋಧವನ್ನು ತೋರಿಸುತ್ತಾರೆ.

'ಅನುಭೂತಿ' ಇತ್ಯಾದಿ ವಚನದಿಂದ ಈ ಪಾದದಲ್ಲಿನ ಅಧಿಕರಣಗಳ ಪೂರ್ವಪಕ್ಷ ಯುಕ್ತಿಗಳನ್ನು ಸಂಕ್ಷೇಪವಾಗಿ ಹೇಳುತ್ತಾರೆ –

**ಅನುಭೂತಿಯುಕ್ತಿಬಹುವಾಗ್ವೈಲೋಮ್ಯಂ ಚ ತತೋಽಧಿಕಮ್ ।**

**ಏತತ್ಸರ್ವಂ ಸತಃ ಸಾಮ್ಯಂ ದ್ವಾರವೈಯರ್ಥ್ಯಮೇವ ಚ ।।೩।।**

**ದೃಷ್ಟಿಯುಕ್ತ್ಯನುಸಾರಿತ್ವಮುಕ್ತಾನ್ಯಾರ್ಥಾವಿರೋಧತಃ ।**

**ಪ್ರಸಿದ್ಧನಾಮಸ್ವೀಕಾರೋ ಬಹುವಾಕ್ಯಾನುವರ್ತಿತಾ ।।೪।।**

**ಲೋಕದೃಷ್ಟಾನುಸಾರಿತ್ವಂ ಜೀವಸಾಮ್ಯಮನಾದಿತಾ ।**

ತತ್ರ ತತ್ರ ಪರಿಜ್ಞಾನಂ ಗುಣಸಾಮ್ಯಶ್ರುತೀ ತಥಾ ।।೫।।

ಉತ್ಪತ್ತಿಮತ್ತ್ವಂ ಸ್ವಗುಣಾನನುಭೂತ್ಯಲ್ಪಕಲ್ಪನೇ ।

ನಾನಾಶ್ರುತಿಶ್ಚ ವೈಚಿತ್ರ್ಯಂ ಯುಕ್ತಯಃ ಪೂರ್ವಪಕ್ಷಗಾಃ ।।೬।।

ಅನುಭವ–ಯುಕ್ತಿ–ಬಹುವಚನವಿರೋಧ, ಅದಕ್ಕಿಂತಲೂ ಹೆಚ್ಚಿನ ವಿರೋಧ, ಸತ್ ಶಬ್ದವಾಚ್ಯನಾದ ಬ್ರಹ್ಮನಿಗೆ ಆಕಾಶಾದಿ ಸಾಮ್ಯ, ದ್ವಾರವೈಯರ್ಥ್ಯ, ದೃಷ್ಟಿಯುಕ್ತಿ ಅನುಸಾರಿತ್ವ, ಉಕ್ತವಾದ ಅನ್ಯಾರ್ಥ ವಿರೋಧತ್ವ, ಪ್ರಸಿದ್ಧನಾಮ ಸ್ವೀಕಾರದಲ್ಲಿ ಬಹುವಾಕ್ಯದ ಅನುಸಾರಿತ್ವ, ಲೋಕದೃಷ್ಟಾನುಸಾರಿತ್ವ, ಜೀವನಿಂದ ಸಾಮ್ಯ, ಜೀವನ ಅನಾದಿತ್ವ, ಅಲ್ಲಲ್ಲಿ ಸ್ಪರ್ಶಾದಿ ಪರಿಜ್ಞಾನ, ಗುಣಸಾಮ್ಯ ಶ್ರುತಿಗಳು ಹಾಗೆಯೇ ಉತ್ಪತ್ತಿಮತ್ವ, ಸ್ವಗುಣಗಳ ಅನನುಭೂತಿ, ಅಲ್ಪವಾದುದರ ಕಲ್ಪನೆ, ಅನೇಕ ಪ್ರಕಾರ ಶ್ರುತಿ, ವೈಚಿತ್ರ್ಯ – ಇವುಗಳು ಪೂರ್ವಪಕ್ಷದಲ್ಲಿರುವ ಯುಕ್ತಿಗಳು.

ಈಗ 'ವ್ಯವಸ್ಥಾ' ಇತ್ಯಾದಿ ವಚನದಿಂದ ಸಿದ್ಧಾಂತಯುಕ್ತಿಗಳನ್ನು ಹೇಳುತ್ತಾರೆ –

ವ್ಯವಸ್ಥಾನುಪಪತ್ತಿಶ್ಚ ಸ್ವಾತಂತ್ರ್ಯಮನುಸಾರಿತಾ ।

ಮುಖ್ಯತಾ ಶಕ್ತಿಮತ್ತ್ವಂ ಚ ವೈರೂಪ್ಯಂ ಸರ್ವಸಂಗ್ರಹಃ ।।೭।।

ಗತ್ಯಾದಿರೀಶಶಕ್ತಿಶ್ಚ ಸರ್ವಮಾನವಿರೋಧಿತಾ ।

ಅಭೀಷ್ಟಾಸಿದ್ಧಿಸುವ್ಯಕ್ತೀ ಶಾಸ್ತ್ರಸಿದ್ಧಿರ್ವಿಪರ್ಯಯಃ ।।೮।।

ವಿಶೇಷಕಾರಣಂ ಚೇತಿ ಸಿದ್ಧಾಂತಸ್ಯೈವ ಸಾಧಿಕಾಃ ।

ವ್ಯವಸ್ಥೆ, ಅನುಪಪತ್ತಿ, ಸ್ವಾತಂತ್ರ್ಯ, ಅನುಸಾರಿತ್ವ, ಮುಖ್ಯತ್ವ, ಶಕ್ತಿಮತ್ವ, ವೈರೂಪ್ಯ, ಸರ್ವಸಂಗ್ರಹ, ಗತ್ಯಾದಿಗಳು, ಈಶಶಕ್ತಿಯು, ಸರ್ವಪ್ರಮಾಣವಿರೋಧ, ಅಭೀಷ್ಟದ ಅಸಿದ್ಧಿ, ಚೆನ್ನಾಗಿ ಅಭಿವ್ಯಕ್ತಿ, ಶಾಸ್ತ್ರಾರ್ಥಸಿದ್ಧಿ, ವಿಪರ್ಯಯ ಹಾಗೂ ವಿಶೇಷ ಕಾರಣ – ಇವುಗಳೇ ಸಿದ್ಧಾಂತಸಾಧಕ ಯುಕ್ತಿಗಳು.

**ಶ್ರೀಮದಾಚಾರ್ಯರು ಸೂತ್ರರೂಪವಾಗಿ ಮೇಲೆ ಸೂಚಿಸಿರುವ ಈ ಪಾದದ ಎಲ್ಲ ಅಧಿಕರಣಗಳ ಪೂರ್ವಪಕ್ಷ ಹಾಗೂ ಸಿದ್ಧಾಂತ ಯುಕ್ತಿಗಳನ್ನು ನ್ಯಾಯವಿವರಣ ಟೀಕೆಯ ಆಧಾರದ ಮೇಲೆ ಈ ಕೆಳಗೆ ವಿವರಣೆ ನೀಡಲಾಗಿದೆ –**

೧. ವಿಯದಧಿಕರಣ

ಪೂರ್ವಪಕ್ಷಯುಕ್ತಿ (ಅನುಭೂತಿಯುಕ್ತಿಬಹುವಾಗ್ವೈಲೋಮ್ಯಂ) – ಆತ್ಮನಃ ಆಕಾಶಃ ಸಂಭೂತಃ ಎಂದು ಆತ್ಮನಿಂದ ಆಕಾಶಕ್ಕೆ ಉತ್ಪತ್ತಿಯನ್ನು ಹೇಳುವ ಶ್ರುತಿಯು ಅಪ್ರಮಾಣ. ಏಕೆಂದರೆ ಆಕಾಶವು ಸರ್ವತ್ರ ವ್ಯಾಪ್ತವಾದ್ದರಿಂದ

ಉತ್ಪತ್ತಿಯುಳ್ಳದ್ದಲ್ಲ ಎಂಬ ಅನುಮಾನದಿಂದಲೂ, ಆಕಾಶಕ್ಕೆ ಅನಾದಿತ್ವವನ್ನು ಗ್ರಹಿಸುವ ಸಾಕ್ಷಿಯಿಂದಲೂ ಹಾಗೂ ಅನಾದಿರ್ವಾಽಯಮಾಕಾಶಃ ಎಂಬ ಶ್ರುತಿಯಿಂದಲೂ ಆಕಾಶಕ್ಕೆ ಅನಾದಿತ್ವ ಸಿದ್ಧವಾಗುವುದು. ಈ ದೃಷ್ಟಾಂತದಿಂದ ವೇದವಾಕ್ಯವು ಅಪ್ರಮಾಣವೆಂದು ಸಿದ್ಧವಾಗುವುದರಿಂದ ವೇದವಾಕ್ಯಗಳಿಂದ ವಿಷ್ಣುವಿಗೆ ಜಗತ್ಕಾರಣತ್ವವು ಸಿದ್ಧಿಸುವುದಿಲ್ಲ. ಸಾಕ್ಷ್ಯನುಭವ ಅನುಮಾನ ಹಾಗೂ ಶ್ರುತಿಗಳ ವಿರೋಧವೆಂಬುದು ಇಲ್ಲಿನ ಯುಕ್ತಿ.

ಸಿದ್ಧಾಂತಯುಕ್ತಿ (ವ್ಯವಸ್ಥಾ) – ಆಕಾಶಕ್ಕೆ ಉತ್ಪತ್ತಿ ಮತ್ತು ಅನುತ್ಪತ್ತಿಗಳನ್ನು ಹೇಳುವ ಶ್ರುತಿಗಳಿಗೆ ಭೂತಾಕಾಶ, ತದಭಿಮಾನಿ ವಿನಾಯಕ, ಅವ್ಯಾಕೃತಾಕಾಶ ಹಾಗೂ ತದಭಿಮಾನಿ ರಮಾದೇವಿ ಹೀಗೆ ನಾಲ್ಕು ಬೇರೆ ಬೇರೆ ವಿಷಯಗಳಿರುವುದರಿಂದ, ಯುಕ್ತಿ ವ್ಯವಸ್ಥೆಯಿಂದ ಎರಡೂ ರೀತಿಯ ಶ್ರುತಿಗಳಿಗೆ ಪ್ರಾಮಾಣ್ಯವು. ಹೀಗೆ ವೇದವಾಕ್ಯಕ್ಕೆ ಅಪ್ರಾಮಾಣ್ಯ ಬರುವುದಿಲ್ಲವಾದ್ದರಿಂದ ವಿಷ್ಣುವಿಗೆ ಜಗತ್ಕಾರಣತ್ವವು ಸಿದ್ಧಿಸುತ್ತದೆ.

### ೨. ಮಾತರಿಶ್ವಾಧಿಕರಣ

ಪೂರ್ವಪಕ್ಷಯುಕ್ತಿ (ತತೋಽಧಿಕಂ ಏತತ್ಸರ್ವಂ) – ಅನಾದಿರ್ಯೋಽಯಂ ಪವತೇ ಎಂಬ ಶ್ರುತಿಯಿಂದ ವಾಯುವಿಗೆ ಅನಾದಿತ್ವವಿದೆಯೆಂದು ತಿಳಿಯುತ್ತದೆ. ಹಿಂದಿನ ಅಧಿಕರಣದ ನ್ಯಾಯದಂತೆ ಮುಖ್ಯವಾಯುವಿಗೂ ಉತ್ಪತ್ತಿ ಹಾಗೂ ಅನುತ್ಪತ್ತಿಗಳಿವೆಯೆಂದು ಕೂಡಿಸಲು ಬರುವುದಿಲ್ಲ. ಏಕೆಂದರೆ ಬೇರೊಂದು ಶ್ರುತಿಯಲ್ಲಿ ಪೃಥಿವಿ ಅಪ್ ತೇಜಸ್ಸುಗಳು ಅನಿತ್ಯವೆಂದೂ ವಾಯುವು ನಿತ್ಯವೆಂದೂ ಹೇಳಲಾಗಿದೆ. ಅನುಭವ ಹಾಗೂ ಯುಕ್ತಿಗಳಿಂದಲೂ ವಾಯುವಿಗೆ ನಿತ್ಯತ್ವವು ಸಿದ್ಧವಾಗುವುದು. ಹೀಗೆ ಅಧಿಕಾಶಂಕಾಸಹಿತವಾದ ಅನುಭವ ಯುಕ್ತಿ ಶ್ರುತಿಗಳ ವಿರೋಧ ಬರುವುದರಿಂದ ವಾಯುವಿಗೆ ಉತ್ಪತ್ತಿ ಹೇಳುವ ಶ್ರುತಿಯು ಅಪ್ರಮಾಣವು. ಅದರಂತೆಯೇ ವಿಷ್ಣುವಿಗೆ ಜಗತ್ಕಾರಣತ್ವವನ್ನು ಹೇಳುವ ಶ್ರುತಿಯೂ ಅಪ್ರಮಾಣವಾಗುವುದು.

ಸಿದ್ಧಾಂತಯುಕ್ತಿ (ಸ್ವಾತಂತ್ರ್ಯಾನುಪಪತ್ತಿ) – ವಾಯುವಿಗೆ ಉತ್ಪತ್ತಿಯೇ ಇದೆ, ಅನುತ್ಪತ್ತಿಯಿಲ್ಲ. ಉತ್ಪತ್ತಿಯು ಪಾರತಂತ್ರ್ಯದ್ಯೋತಕ. ಉತ್ಪತ್ತಿಯಿಲ್ಲದಿರುವುದು ಸ್ವಾತಂತ್ರ್ಯದ್ಯೋತಕ. ಈಶ್ವರನೇ ಸ್ವತಂತ್ರನೆಂದು ಶ್ರುತಿಗಳು ಹೇಳುತ್ತಿವೆ. ಇಬ್ಬರು ಸ್ವತಂತ್ರರು ಇರಲಾರರು. ವಾಯುವು ಅಸ್ವತಂತ್ರನೇ. ಆದ್ದರಿಂದ ವಾಯುವಿಗೆ ಉತ್ಪತ್ತಿಯು ಕೂಡುತ್ತದೆ. ಸ್ವಾತಂತ್ರ್ಯಾನುಪಪತ್ತಿ ಎಂಬುದೇ ಇಲ್ಲಿ ಸಿದ್ಧಾಂತದ ಯುಕ್ತಿ. ಆದ್ದರಿಂದ ಶ್ರುತಿಗಳಿಂದ ಸಿದ್ಧನಾದ ಸ್ವತಂತ್ರನಾದ ವಿಷ್ಣುವೇ ಜಗತ್ಕಾರಣನು.

### ೩. ಅಸಂಭವಾಧಿಕರಣ

ಪೂರ್ವಪಕ್ಷಯುಕ್ತಿ (ಸತಃ ಸಾಮ್ಯಂ) – ಅಸತಃ ಸದಜಾಯತ ಎಂಬ

ಶ್ರುತಿಯಿಂದ ಬ್ರಹ್ಮನಿಗೂ ಉತ್ಪತ್ತಿಯಿದೆ ಎಂದು ತಿಳಿದುಬರುತ್ತದೆ. ಆದ್ದರಿಂದ ಬ್ರಹ್ಮನಿಗೂ ಆಕಾಶಾದಿಗಳಂತೆ ಪರಾಧೀನವಿಶೇಷಾವಾಪ್ತಿರೂಪ ಉತ್ಪತ್ತಿಯನ್ನು ಅಂಗೀಕರಿಸಬಹುದು. ಆದ್ದರಿಂದ ಬ್ರಹ್ಮನು ಜಗತ್ಕಾರಣನಲ್ಲ. ಉತ್ಪತ್ತಿಸಾಮ್ಯ ಎಂಬುದು ಇಲ್ಲಿನ ಯುಕ್ತಿ.

ಸಿದ್ಧಾಂತಯುಕ್ತಿ (ಸ್ವಾತಂತ್ರ್ಯ) – ಬ್ರಹ್ಮನು ಸ್ವತಂತ್ರನಾದ್ದರಿಂದ ಅವನಿಗೆ ಉತ್ಪತ್ತಿಯು ಇರುವುದಿಲ್ಲ. ಆಕಾಶಾದಿಗಳಿಗೆ ಬ್ರಹ್ಮನೊಂದಿಗೆ ಸ್ವಾತಂತ್ರ್ಯ ಸಾಮ್ಯವಿಲ್ಲ. ಆದ್ದರಿಂದ ಅವುಗಳಿಗೆ ಉತ್ಪತ್ತಿಯುಂಟು. ಸ್ವತಂತ್ರನೂ ಯಾವುದೇ ವಿಧವಾದ ಜನ್ಮವಿಲ್ಲದವನೂ ಆದ ಬ್ರಹ್ಮನೇ ಜಗತ್ಕಾರಣವೆಂಬುದು ಸಿದ್ಧವಾಗುತ್ತದೆ. ಬ್ರಹ್ಮನ ಸ್ವಾತಂತ್ರ್ಯವೆಂಬುದು ಇಲ್ಲಿನ ಯುಕ್ತಿ.

**೪. ತೇಜೋಽಧಿಕರಣ**

ಪೂರ್ವಪಕ್ಷ ಯುಕ್ತಿ (ದ್ವಾರ ವೈಯರ್ಥ್ಯ) – ವಾಯುವಿನಿಂದ ಅಗ್ನಿ ಹುಟ್ಟಿತು ಎಂದು ಹೇಳುವ ವಾಯೋರಗ್ನಿಃ ಎಂಬ ಶ್ರುತಿಯಿಂದ ವಿಷ್ಣುವಿಗೆ ಸರ್ವಕಾರಣತ್ವವಿಲ್ಲವೆಂದು ತಿಳಿದುಬರುತ್ತದೆ. ವಾಯುದ್ವಾರಾ ಈಶ್ವರನಿಂದ ಅಗ್ನಿಯು ಹುಟ್ಟಿತು ಎಂದು ಹೇಳಿದರೆ, ಸ್ವತಂತ್ರವಾಗಿ ಈಶ್ವರನಿಗೆ ಅಗ್ನಿಯನ್ನು ಹುಟ್ಟಿಸುವುದು ಸಾಧ್ಯವಿಲ್ಲವೆಂದಾಗುವುದು. ಆದ್ದರಿಂದ ವಾಯುವನ್ನೂ ಸ್ವತಂತ್ರ ಕಾರಣವೆಂದು ಅಂಗೀಕರಿಸಲು ಅಡ್ಡಿಯಿಲ್ಲ. ಅಂದಮೇಲೆ ವಾಯುವನ್ನು ದ್ವಾರವನ್ನಾಗಿ ಇಟ್ಟುಕೊಳ್ಳುವುದು ವ್ಯರ್ಥವೆಂದಾಗುವುದು.

ಸಿದ್ಧಾಂತಯುಕ್ತಿ (ಅನುಸಾರಿತಾ) – ವಾಯುವಿನ ಸಹಾಯವಿಲ್ಲದೇ ಅಗ್ನಿಯನ್ನು ಸೃಷ್ಟಿಸುವ ಸಾಮರ್ಥ್ಯವು ವಿಷ್ಣುವಿಗೆ ಉಂಟು ಎಂಬುದಾಗಿ ತತ್ತೇಜೋಽಸೃಜತ ಎಂಬ ಶ್ರುತಿಯಿಂದ ತಿಳಿದು ಬರುತ್ತದೆ. ಆದರೂ ಲೀಲೆಯಿಂದ ವಾಯುವನ್ನು ಉಪಯೋಗಿಸಿಕೊಳ್ಳುತ್ತಾನೆ ಎಂದು ತಿಳಿಯಬೇಕು. ಆದ್ದರಿಂದ ವಿಷ್ಣುವೇ ಜಗತ್ಕಾರಣನು. ಅನುಸಾರಿತಾ (ಶ್ರುತಿ ಸ್ಮೃತಿಗಳಿಗೆ ಅನುಸಾರವಾಗಿ) ಎಂಬುದು ಇಲ್ಲಿನ ಯುಕ್ತಿ.

**೫. ಅಬಧಿಕರಣ**

ಪೂರ್ವಪಕ್ಷಯುಕ್ತಿ (ದೃಷ್ಟಿಯುಕ್ತ್ಯನುಸಾರಿತ್ವ) – ಅಗ್ನೇರಾಪಃ (ಅಗ್ನಿಯಿಂದ ನೀರು ಹುಟ್ಟಿತು) ಎಂಬ ಶ್ರುತಿಯು ಲೋಕದೃಷ್ಟಿಯ ಅನುಸಾರವಾಗಿಯೇ ಇದೆ. ಹೇಗೆಂದರೆ ಸೆಖೆಯಾದಾಗ ಬೆವರು ಬರುವುದು ಲೋಕದಲ್ಲಿ ಕಂಡಿದೆ. ಇದೇ ಆದಾರದ ಮೇಲೆ ಬೇರೆ ನೀರಿನ ಉತ್ಪತ್ತಿಯೂ ಅಗ್ನಿಯಿಂದಲೇ ಎಂದು ಅನುಮಾನ ಮಾಡಬಹುದು. ಇದೇ ದೃಷ್ಟಿಯುಕ್ತಿಗಳ ಬಲದಿಂದ ನೀರಿನ ಉತ್ಪತ್ತಿಗೆ ಈಶ್ವರನ ಅನುಗ್ರಹ ಬೇಕಿಲ್ಲವೆಂದು ಸಿದ್ಧವಾಗುತ್ತದೆ. ಆದ್ದರಿಂದ ಈಶ್ವರನು ಜಗತ್ಕಾರಣನಲ್ಲ.

ಸಿದ್ಧಾಂತಯುಕ್ತಿ (ಮುಖ್ಯತಾ) – ತದಪೋಽಸೃಜತ ಎಂಬ ಶ್ರುತಿಯಿಂದ ಆ ಬ್ರಹ್ಮನಿಂದಲೇ ನೀರಿನ ಸೃಷ್ಟಿಯೂ ಸಿದ್ಧವಾಗುತ್ತದೆ. ಆದ್ದರಿಂದ ಅಗ್ನೇರಾಪಃ ಎಂಬುದಕ್ಕೆ ಅಗ್ನಿಯ ದ್ವಾರಾ ಬ್ರಹ್ಮನಿಂದ ನೀರಿನ ಸೃಷ್ಟಿ ಎಂದು ಅರ್ಥವಾಗುತ್ತದೆ. ವಿಷ್ಣುವಿಗೇ ಮುಖ್ಯ ಕರ್ತೃತ್ವವು. ಆದ್ದರಿಂದ ವಿಷ್ಣುವೇ ಜಗತ್ಕರ್ತನು.

೬. ಪೃಥಿವ್ಯಧಿಕರಣ

ಪೂರ್ವಪಕ್ಷಯುಕ್ತಿ (ಉಕ್ತಾನ್ಯಾರ್ಥಾವಿರೋಧತಃ) – ತಾ ಅನ್ನಮಸೃಜಂತ ಎಂಬ ಶ್ರುತಿಯು ನೀರಿನಿಂದ ಅನ್ನ ಹುಟ್ಟಿತು ಎಂದೂ, ಅದ್ಭ್ಯಃ ಪೃಥಿವೀ ಎಂಬ ಶ್ರುತಿಯು ನೀರಿನಿಂದ ಪೃಥಿವೀ ಹುಟ್ಟಿತು ಎಂದು ಹೇಳುತ್ತದೆ. ಅನ್ನ ಮತ್ತು ಪೃಥಿವೀ ಶಬ್ದಗಳು ಲೋಕದಲ್ಲಿ ಪ್ರಸಿದ್ಧವಾದ ಅನ್ನ ಪೃಥಿವೀಗಳನ್ನೇ ಹೇಳುತ್ತವೆ. ಅವೆರಡೂ ಒಂದೇ ಅಲ್ಲವು. ಪರಸ್ಪರ ವಿರುದ್ಧವಾದ ಈ ಶ್ರುತಿಗಳು ಹೇಗೆ ಪ್ರಮಾಣವಾಗಬಲ್ಲವು? ಆದ್ದರಿಂದ ಬ್ರಹ್ಮನಿಗೆ ಜಗತ್ಕಾರಣತ್ವವನ್ನು ಹೇಳುವ ಶ್ರುತಿಗಳೂ ಅಪ್ರಮಾಣವಾಗುತ್ತವೆ.

ಸಿದ್ಧಾಂತಯುಕ್ತಿ (ಶಕ್ತಿಮತ್ವ) – ಇಲ್ಲಿ ಅನ್ನ ಶಬ್ದವು ಪೃಥಿವೀಯನ್ನೇ ಹೇಳುತ್ತದೆ. ಪೃಥಿವೀಯಲ್ಲಿಯೇ ಅನ್ನ ಶಬ್ದವು ಅನೇಕ ಸಲ ಬಳಸಿರುವುದರಿಂದ ಅನ್ನ ಶಬ್ದಕ್ಕೆ ಪೃಥಿವೀ ವಾಚಕತ್ವರೂಪ ಶಕ್ತಿಯಿದೆ. ಆದ್ದರಿಂದ ಮೇಲ್ನೋಟಕ್ಕೆ ಪರಸ್ಪರ ವಿರುದ್ಧವೆಂದು ತೋರುವ ಶ್ರುತಿಗಳಿಗೆ ನಿಜವಾಗಿಯೂ ಯಾವುದೇ ವಿರೋಧವಿಲ್ಲ. ಶ್ರುತಿಪ್ರಾಮಾಣ್ಯಕ್ಕೆ ಯಾವುದೇ ಬಾಧವಿಲ್ಲವಾದ್ದರಿಂದ ವಿಷ್ಣುವಿಗೆ ಜಗತ್ಕಾರಣತ್ವವು ಕೂಡುತ್ತದೆ.

೭. ತದಭಿಧ್ಯಾನಾಧಿಕರಣ

ಪೂರ್ವಪಕ್ಷಯುಕ್ತಿ (ಲೋಕದೃಷ್ಟ್ಯನುಸಾರಿತ್ವಂ) – ಪ್ರಾಣಾನಾಂ ಗ್ರಂಥಿರಸಿ ರುದ್ರೋ ಮಾವಿಶಾಂತಕಃ ತೇನಾನ್ನೇನಾಪ್ಯಾಯಸ್ವ ಎಂಬ ಶ್ರುತಿಯಿಂದ ರುದ್ರನು ಜಗತ್ಸಂಹಾರಕನೆಂದು ತಿಳಿಯುತ್ತದೆ. ಲೋಕದಲ್ಲಿ ಹುಟ್ಟಿಸಿದವನೇ ಕೊಲ್ಲುವುದಿಲ್ಲ. ಅದರಂತೆ ವಿಷ್ಣುವು ಜಗತ್ಕಾರಣನಾದರೂ ಸಂಹಾರಕನಾಗಿರಲು ಸಾಧ್ಯವಿಲ್ಲ. ಆದ್ದರಿಂದ ವಿಷ್ಣುವಿಗೆ ಸರ್ವಕಾರಣತ್ವವು ಯುಕ್ತವಾಗುವುದಿಲ್ಲ.

ಸಿದ್ಧಾಂತ ಯುಕ್ತಿ (ವೈರೂಪ್ಯಂ) – ಇದಂ ಸರ್ವಂ ವಿಲಾಪಯತಿ ನವಿಷ್ಣೋರನ್ಯೋ ವಿಮುಕ್ತಿದಃ ಮುಂತಾದ ಶ್ರುತಿಗಳಿಂದ ವಿಷ್ಣುವೇ ಜಗತ್ಸಂಹಾರಕ, ರುದ್ರನಲ್ಲ ಎಂದು ತಿಳಿಯುತ್ತದೆ. ವಿಷ್ಣುವು ಲೋಕವಿಲಕ್ಷಣವಾದ ಜನಕನಾದ್ದರಿಂದ ಸಂಹಾರಕತ್ವವೂ ಅವನಲ್ಲಿ ಕೂಡುತ್ತದೆ.

೮. ವಿಪರ್ಯಯಾಧಿಕರಣ

ಪೂರ್ವಪಕ್ಷಯುಕ್ತಿ (ಲೋಕದೃಷ್ಟ್ಯನುಸಾರಿತ್ವಂ) – ಪರಮಾತ್ಮನ ಈ ಜಗತ್ತು

ಯಾವ ಕ್ರಮದಲ್ಲಿ ಉತ್ಪತ್ತಿಯಾಗುತ್ತದೋ ಅದೇ ಕ್ರಮದಲ್ಲಿ ಲಯಹೊಂದುತ್ತದೆ ಎಂಬುದಾಗಿ ಒಂದು ಶ್ರುತಿಯು ಕ್ರಮವಾದ ಲಯವನ್ನು ಹೇಳಿದರೆ, ಮತ್ತೊಂದು ಶ್ರುತಿಯು ವಿಪರೀತ ಕ್ರಮದಿಂದ ಲಯವನ್ನು ಹೇಳುತ್ತದೆ. ಉತ್ಪತ್ತಿ ಕ್ರಮದಲ್ಲಿಯೇ ಲಯವು ಲೋಕದಲ್ಲಿ ಕಂಡಿದೆ. ಆದ್ದರಿಂದ ವ್ಯುತ್ಕ್ರಮದಲ್ಲಿ ಲಯವನ್ನು ಹೇಳುವ ಶ್ರುತಿಯು ಅಪ್ರಮಾಣ. ಹೀಗೆ ಉಳಿದ ಶ್ರುತಿಗಳೂ ಅಪ್ರಮಾಣವಾದ್ದರಿಂದ ವಿಷ್ಣುವಿಗೆ ಜಗತ್ಕಾರಣತ್ವವು ಸಿದ್ಧವಾಗುವುದಿಲ್ಲ.

ಸಿದ್ಧಾಂತಯುಕ್ತಿ (ವೈರೂಪ್ಯ) – ವಿಪರೀತ ಕ್ರಮದಿಂದಲೇ ಲಯ ಎಂಬುದೇ ಸಿದ್ಧಾಂತ. ಕ್ರಮವಾಗಿ ಲಯವನ್ನು ಹೇಳುವ ಶ್ರುತಿಗೂ ವಿಪರೀತಕ್ರಮದಿಂದ ಎಂದೇ ಅರ್ಥ ಮಾಡಬೇಕು. ಏಕೆಂದರೆ ದ್ವಿವಿಧಃ ಕ್ರಮ ಉದ್ದಿಷ್ಟೋ ವ್ಯುತ್ಕ್ರಮೋಽನುಕ್ರಮಸ್ತಥಾ ಸೃಷ್ಟಾವನ್ಯೋ ಲಯೇ ಚಾನ್ಯಃ ಎಂಬುದಾಗಿ ಶ್ರುತಿಯು ಸೃಷ್ಟಿ ಮತ್ತು ಲಯಗಳಿಗೆ ವಿಭಿನ್ನ ರೀತಿಯ ಕ್ರಮವನ್ನು ಹೇಳುತ್ತದೆ. ಹೀಗೆ ಶ್ರುತಿಗಳಿಗೆ ಪರಸ್ಪರ ವಿರೋಧವಿಲ್ಲವಾದ್ದರಿಂದ ವಿಷ್ಣುವಿಗೆ ಜಗತ್ಕಾರಣತ್ವವು ಕೂಡುತ್ತದೆ.

೯. ಅಂತರಾಧಿಕರಣ

ಪೂರ್ವಪಕ್ಷಯುಕ್ತಿ (ಲೋಕದೃಷ್ಟ್ಯನುಸಾರಿತ್ವಂ) – ಲೋಕದಲ್ಲಿ ಕೆಲವು ಕಡೆಗಳಲ್ಲಿ ಕ್ರಮವಾಗಿ ಲಯವೂ, ಮತ್ತೆ ಕೆಲವೆಡೆಗಳಲ್ಲಿ ವ್ಯುತ್ಕ್ರಮದಿಂದ ಲಯವೂ ಕಂಡಿದೆ. ಆದ್ದರಿಂದ ಎಲ್ಲಕ್ಕೂ ವ್ಯುತ್ಕ್ರಮದಿಂದ ಲಯವೆಂದು ಅಂಗೀಕರಿಸಬಾರದು.

ಸಿದ್ಧಾಂತಯುಕ್ತಿ(ಸರ್ವಸಂಗ್ರಹಃ)– ಎಲ್ಲ ಪದಾರ್ಥಗಳಿಗೂ ವ್ಯುತ್ಕ್ರಮದಲ್ಲಿಯೇ ಲಯ ಎಂಬುದಾಗಿ ಸರ್ವಂ ವಾ ಎಂಬ ಶ್ರುತಿಯಿಂದ ( ಸರ್ವಂ ವಾ ಏತತ್ ಕ್ರಮಾದುತ್ಪದ್ಯತೇ ವ್ಯುತ್ಕ್ರಮಾಲ್ಲೀಯತೇ) ತಿಳಿದುಬರುತ್ತದೆ. ಆದರೆ ಪ್ರಾಣಾನ್ಮನೋ ಮನಸಶ್ಚ ವಿಜ್ಞಾನಂ ಎಂಬ ಶ್ರುತಿಯು ಮನಸ್ತತ್ವದಿಂದ ವಿಜ್ಞಾನತತ್ವದ ಉತ್ಪತ್ತಿಯನ್ನು ಹೇಳುತ್ತಿಲ್ಲ, ಕೇವಲ ಮನಸ್ಸಿನಿಂದ ವೃತ್ತಿರೂಪ ಜ್ಞಾನವು ಹುಟ್ಟುತ್ತದೆಯೆಂದು ಮಾತ್ರ ಹೇಳುತ್ತಿದೆ. ಆದ್ದರಿಂದ ವಿಜ್ಞಾನತತ್ವದಿಂದ ಮನಸ್ತತ್ವದ ಉತ್ಪತ್ತಿ, ವಿಜ್ಞಾನತತ್ವದಲ್ಲಿಯೇ ಮನಸ್ತತ್ವಕ್ಕೆ ಲಯ ಎಂದು ಹೇಳುವ ಶ್ರುತಿಗೆ ವಿರೋಧವಿಲ್ಲ. ಹೀಗೆ ಶ್ರುತಿಗಳಿಗೆ ಪರಸ್ಪರ ವಿರೋಧವಿಲ್ಲವಾದ್ದರಿಂದ ವಿಷ್ಣುವಿಗೆ ಜಗತ್ಕಾರಣತ್ವವು ಶ್ರುತಿಗಳಿಂದ ಸಿದ್ಧವಾಗುತ್ತದೆ.

೧೦. ನಾತ್ಮಾಧಿಕರಣ

ಪೂರ್ವಪಕ್ಷಯುಕ್ತಿ (ಜೀವಸಾಮ್ಯಂ) – ಎಲ್ಲ ಚೇತನರಿಗೂ ಶರೀರತ್ಯಾಗರೂಪ ಲಯವು ಕಂಡಿದೆ. ಅದರಂತೆಯೇ ಪರಮಾತ್ಮನೂ ಚೇತನನಾದ್ದರಿಂದ ಅವನಿಗೂ ಲಯವಿರಬೇಕು. ಆದ್ದರಿಂದ ಪರಮಾತ್ಮನು ನಿತ್ಯ ಎಂದು ಹೇಳುವ ನಿತ್ಯೋ

ನಿತ್ಯಾನಾಂ ಮುಂತಾದ ಶ್ರುತಿಗಳು ಅಪ್ರಮಾಣವಾಗುತ್ತವೆ. ಉಳಿದ ಶ್ರುತಿಗಳಿಗೂ ಅಪ್ರಾಮಾಣ್ಯ ಶಂಕೆ ಬರುವುದರಿಂದ ವಿಷ್ಣುವಿಗೆ ಜಗತ್ಕಾರಣತ್ವವು ಸಿದ್ಧಿಸುವುದಿಲ್ಲ.

ಸಿದ್ಧಾಂತಯುಕ್ತಿ (ಸರ್ವಸಂಗ್ರಹಃ) – ಸರ್ವೇ ವಾ ಏತೆ ಚಿದಾತ್ಮನೋ ಬ್ರಹ್ಮನ್ ಲ್ಲಯಮನುಪ್ರಾಪ್ಯ ವಿಷ್ಣೋರುದರೇ ಸಂವಿಶಂತಿ ಎಂಬ ಶ್ರುತಿಯು ಪ್ರಲಯಕಾಲದಲ್ಲಿ ಎಲ್ಲ ಜೀವರೂ ಲಯವನ್ನು ಹೊಂದಿ ಪರಮಾತ್ಮನ ಹೊಟ್ಟೆಯಲ್ಲಿ ಪ್ರವೇಶಿಸುತ್ತಾರೆ ಎಂದು ಹೇಳುವುದರಿಂದ ಪರಮಾತ್ಮನ ದೇಹವು ನಿತ್ಯವೆಂದು ತಿಳಿಯುತ್ತದೆ. ಆದ್ದರಿಂದ ಶ್ರುತಿಗಳಿಗೆ ಪರಸ್ಪರ ವಿರೋಧವಿಲ್ಲ. ಅಪ್ರಮಾಣ್ಯಶಂಕೆಗೆ ಅವಕಾಶವಿಲ್ಲ.

### ೧೧. ಜ್ಞಾಧಿಕರಣ

ಪೂರ್ವಪಕ್ಷಯುಕ್ತಿ (ಅನಾದಿತಾ) – ನಿತ್ಯೋನಿತ್ಯಾನಾಂ ಎಂದು ವೇದವು ಪರಮಾತ್ಮನನ್ನು ನಿತ್ಯರಲ್ಲಿ ನಿತ್ಯ ಎಂದು ಹೇಳಬೇಕಾದರೆ ಉಳಿದ ಚೇತನರೆಲ್ಲರೂ ನಿತ್ಯರೇ ಆಗಿರಬೇಕು. ಹೀಗೆ ಜೀವನಿಗೆ ಅನಾದಿತ್ವದ ಕಾರಣ ಉತ್ಪತ್ತಿಯು ಕೂಡುವುದಿಲ್ಲ. ಆದ್ದರಿಂದ ವಿಷ್ಣುವು ಸರ್ವಕರ್ತನಲ್ಲ.

ಸಿದ್ಧಾಂತಯುಕ್ತಿ (ಸರ್ವಸಂಗ್ರಹಃ) – ಇದಂ ಸರ್ವಮಸೃಜತ ಎಂಬ ಶ್ರುತಿಯು ಎಲ್ಲವೂ ಪರಮಾತ್ಮನಿಂದಲೇ ಹುಟ್ಟಿದೆಯೆಂದು ಹೇಳುತ್ತಿದೆ. ಜೀವನು ಸ್ವರೂಪತಃ ಅನಾದಿಯಾದರೂ, ಪರಾಧೀನವಿಶೇಷಾವಾಪ್ತಿರೂಪ ಉತ್ಪತ್ತಿಯು ಅವನಿಗೆ ಕೂಡುತ್ತದೆ. ಆದ್ದರಿಂದ ಜೀವನಿಗೆ ಉತ್ಪತ್ತಿಯನ್ನು ಹೇಳುವ ಶ್ರುತಿಗೆ ಅಪ್ರಮಾಣ್ಯವಿಲ್ಲ. ಹೀಗೆ ವಿಷ್ಣುವು ಸರ್ವಕ್ಕೂ ಕಾರಣನೆಂಬುದು ಸಿದ್ಧವಾಗುತ್ತದೆ.

### ೧೨. ಉತ್ಕ್ರಾಂತ್ಯಧಿಕರಣ

ಪೂರ್ವಪಕ್ಷಯುಕ್ತಿ (ತತ್ರ ತತ್ರ ಪರಿಜ್ಞಾನಂ) – ಎಲ್ಲ ಆತ್ಮರು ಸರ್ವತ್ರ ವ್ಯಾಪ್ತರಾಗಿದ್ದಾರೆ ಮತ್ತು ಚೇತನರೂ ಆಗಿದ್ದಾರೆ ಎಂಬುದಾಗಿ ಶ್ರುತಿಯು ಹೇಳುತ್ತದೆ. ಆದರೆ ಅಣುರ್ಹ್ಯೇಷ ಆತ್ಮಾ ಎಂಬ ಶ್ರುತಿಯು ಜೀವನು ಅಣುವೆಂದು ಹೇಳುತ್ತದೆ. ಜೀವರು ಅಣುಗಳಾಗಿದ್ದರೆ ತಮ್ಮ ತಮ್ಮ ಸಮಗ್ರ ಶರೀರದಲ್ಲಿನ ಸುಖದುಃಖಾದಿಗಳನ್ನು ಆಯಾಯ ಇಂದ್ರಿಯದಲ್ಲಿದ್ದು ಅನುಭವಿಸುವ ಸಾಮರ್ಥ್ಯ ಅವರಿಗಿಲ್ಲದೇ ಹೋಗುವುದು. ಆದ್ದರಿಂದ ಜೀವನು ಅಣುವೆಂದು ಹೇಳುವ ಶ್ರುತಿಯು ಅಪ್ರಮಾಣವು. ಹೀಗೆ ಉಳಿದ ಶ್ರುತಿಗಳೂ ಅಪ್ರಮಾಣವಾಗುವುದರಿಂದ ಈಶ್ವರನಿಗೆ ಜಗತ್ಕಾರಣತ್ವವು ಸಿದ್ಧಿಸುವುದಿಲ್ಲ.

ಸಿದ್ಧಾಂತಯುಕ್ತಿ(ಗತ್ಯಾದಿಃ)– ಸೋಽಸ್ಮಾಚ್ಛರೀರಾದುತ್ಕ್ರಮ್ಯಾಮುಂ ಲೋಕಮ್ ಅಭಿಗಚ್ಛತಿ ಇತ್ಯಾದಿ ಶ್ರುತಿಗಳು ಜೀವರಿಗೆ ಗಮನಾಗಮನಗಳು ಇವೆಯೆಂದು ಹೇಳುತ್ತವೆ. ಆದ್ದರಿಂದ ಜೀವನು ವ್ಯಾಪ್ತನಲ್ಲ, ಅಣುವೇ. ಜೀವನು ಅಣುವಾಗಿದ್ದರೂ,

ಸುಗಂಧವು ಸುತ್ತೆಲ್ಲ ಪಸರಿಸುವಂತೆ, ದೀಪದ ಬೆಳಕು ಸುತ್ತೆಲ್ಲ ವ್ಯಾಪಿಸುವಂತೆ, ಜೀವನಲ್ಲಿ ಸುಖ ದುಃಖಾದಿ ಅನುಭವವು ಕೂಡುತ್ತದೆ. ಈ ದೃಷ್ಟಿಯಿಂದಲೇ ಜೀವನಿಗೆ ವ್ಯಾಪ್ತತ್ವವನ್ನು ಶ್ರುತಿಯು ಹೇಳಿದೆ. ಆದ್ದರಿಂದ ಶ್ರುತಿಗೆ ಅಪ್ರಾಮಾಣ್ಯ ಬರುವುದಿಲ್ಲ.

**೧೩. ವ್ಯತಿರೇಕಾಧಿಕರಣ**

ಪೂರ್ವಪಕ್ಷಯುಕ್ತಿ (ಗುಣಸಾಮ್ಯ) – ಕೆಲವು ಶ್ರುತಿಗಳು ಜೀವನಿಗೆ ಏಕರೂಪತ್ವವನ್ನು ಹೇಳಿದರೆ, ಮತ್ತೆ ಕೆಲವು ಶ್ರುತಿಗಳು ಜೀವನು ಬಹುರೂಪನು ಎಂದು ಹೇಳುತ್ತವೆ. ಪರಮಾತ್ಮನಂತೆ ಜೀವನೂ ಬಹುರೂಪನಾದರೆ, ಪರಮಾತ್ಮನಿಗೂ ಜೀವನಿಗೂ ವ್ಯತ್ಯಾಸವಿರುವುದಿಲ್ಲ. ಆದ್ದರಿಂದ ಜೀವನಿಗೆ ಅನೇಕ ರೂಪಗಳನ್ನು ಪ್ರತಿಪಾದಿಸುವ ಶ್ರುತಿಗಳು ಅಪ್ರಮಾಣ. ಹೀಗೆ ಅಪ್ರಮಾಣವಾದ ವೇದದಿಂದ ವಿಷ್ಣುವಿಗೆ ಜಗತ್ಕಾರಣತ್ವವು ಸಿದ್ಧಿಸುವುದಿಲ್ಲ.

ಸಿದ್ಧಾಂತಯುಕ್ತಿ (ಈಶಶಕ್ತಿ) – ಜೀವನು ಏಕರೂಪನೇ ಆದರೂ ವಿಷ್ಣುವಿನ ಅಚಿಂತ್ಯಶಕ್ತಿಯಿಂದಲೇ ಜೀವನಿಗೆ ನಾನಾರೂಪತ್ವವು ಯುಕ್ತವಾಗುತ್ತದೆ. ಅಥೈಕ ಏವ, ತಂ ಯಥಾ ಯಥಾ ಈಶ್ವರಃ ಪ್ರಕುರುತೇ ತಥಾ ತಥಾ ಭವತಿ ಎಂಬ ಶ್ರುತಿಯೇ ಇದಕ್ಕೆ ಪ್ರಮಾಣ. ಆದ್ದರಿಂದ ಏಕರೂಪತ್ವ ಹೇಳುವ ಶ್ರುತಿಗಳಿಗೂ ಬಹುರೂಪತ್ವ ಹೇಳುವ ಶ್ರುತಿಗಳಿಗೂ ಪರಸ್ಪರ ವಿರೋಧವಿಲ್ಲ. ಹೀಗೆ ವೇದವು ಪ್ರಮಾಣವಾದ್ದರಿಂದ ವಿಷ್ಣುವಿಗೆ ಜಗತ್ಕಾರಣತ್ವವು ಸಿದ್ಧಿಸುತ್ತದೆ.

**೧೪. ಪೃಥಗಧಿಕರಣ**

ಪೂರ್ವಪಕ್ಷಯುಕ್ತಿ (ಶ್ರುತಿ) – ತತ್ತ್ವಮಸಿ ಮುಂತಾದ ಶ್ರುತಿಗಳು ಜೀವ ಬ್ರಹ್ಮರಿಗೆ ಐಕ್ಯವನ್ನು ಪ್ರತಿಪಾದಿಸುತ್ತವೆ. ತದ್ವಿರುದ್ಧವಾಗಿ ಭೇದವನ್ನು ಬೋಧಿಸುವ ವೇದವಾಕ್ಯಗಳು ಅಪ್ರಮಾಣವಾದ್ದರಿಂದ ವಿಷ್ಣುವಿಗೆ ಜಗತ್ಕಾರಣತ್ವ ಸಿದ್ಧಿಸುವುದಿಲ್ಲ.

ಸಿದ್ಧಾಂತಯುಕ್ತಿ (ಸರ್ವಮಾನವಿರೋಧ) – ಜೀವಬ್ರಹ್ಮರಿಗೆ ಅಭೇದವನ್ನು ಅಂಗೀಕರಿಸಿದರೆ ಸರ್ವಪ್ರಮಾಣಗಳ ವಿರೋಧ ಬರುವುದು. ಭೇದವನ್ನು ಪ್ರತಿಪಾದಿಸುವ ಶ್ರುತಿಗಳು ಬಹಳವಿವೆ. ಆದ್ದರಿಂದ ಅಭೇದವನ್ನು ಹೇಳುವಂತೆ ತೋರುವ ಕೆಲವೇ ಶ್ರುತಿಗಳಿಗೆ ಭೇದಪರವಾದ ಅರ್ಥವನ್ನೇ ಮಾಡಬೇಕು. ಆದ್ದರಿಂದ ಶ್ರುತಿಗಳಿಗೆ ಪರಸ್ಪರ ವಿರೋಧವಿಲ್ಲ. ವಿಷ್ಣುವಿಗೆ ಜಗತ್ಕಾರಣತ್ವವು ಶ್ರುತಿಗಳಿಂದ ಸಿದ್ಧವಾಗುತ್ತದೆ.

**೧೫. ಯಾವದಧಿಕರಣ**

ಪೂರ್ವಪಕ್ಷಯುಕ್ತಿ (ಉತ್ಪತ್ತಿಮತ್ತ್ವಂ) – ಬ್ರಹ್ಮತಲ್ಲಯಮಭ್ಯುಪೈತಿ ಎಂಬ

ಶ್ರುತಿಯ ಪ್ರಕಾರ ಜೀವನಿಗೆ ಬ್ರಹ್ಮನಲ್ಲಿ ಲಯವಿದೆಯೆಂದು ತಿಳಿಯುತ್ತದೆ. ಜ್ಞೋತ ಏವ ಎನ್ನುವ ಅಧಿಕರಣದಲ್ಲಿ ಜೀವನು ಉತ್ಪತ್ತಿಯುತನೆಂದು ನಿರ್ಣಯಿಸಲಾಗಿದೆ. ಉತ್ಪತ್ತಿಯನ್ನು ಹೊಂದಿರುವನಿಗೆ ನಾಶವೂ ಇರಲೇಬೇಕು. ಆದ್ದರಿಂದ ಜೀವನು ನಿತ್ಯನು ಎಂದು ಹೇಳುವ ಶ್ರುತಿಗಳು ಅಪ್ರಮಾಣ. ಆದ್ದರಿಂದ ಬ್ರಹ್ಮನಿಗೆ ಜಗತ್ಕಾರಣತ್ವವನ್ನು ಹೇಳುವ ಶ್ರುತಿಗಳೂ ಅಪ್ರಮಾಣವಾಗುತ್ತವೆ.

ಸಿದ್ಧಾಂತಯುಕ್ತಿ (ಅಭೀಷ್ಟಾಸಿದ್ಧಿ) – ಜೀವನು ಅನಿತ್ಯನಾದರೆ ಅವನಿಗೆ ಇಷ್ಟವಾದ ಮೋಕ್ಷವೇ ಸಿದ್ಧಿಸುವುದಿಲ್ಲ. ಉತ್ಪತ್ತಿಯಾದದ್ದು ನಾಶವಾಗಲೇಬೇಕೆಂಬ ವ್ಯಾಪ್ತಿಯಿದ್ದರೂ, ಜೀವನಿಗೆ ಘಟಪಟಾದಿಗಳಂತೆ ಸ್ವರೂಪತಃ ಉತ್ಪತ್ತಿಯೇ ಇಲ್ಲ. ಆದ್ದರಿಂದ ನಾಶವೂ ಇರಬೇಕಿಲ್ಲ. ಶ್ರುತಿಗಳಿಗೆ ಪರಸ್ಪರ ವಿರೋಧವಿಲ್ಲವಾದ್ದರಿಂದ ವಿಷ್ಣುವೇ ಜಗತ್ಕಾರಣನೆಂದು ಹೇಳುವ ಶ್ರುತಿಗಳ ಪ್ರಾಮಾಣ್ಯಕ್ಕೆ ಚ್ಯುತಿಯಿಲ್ಲ.

### ೧೬. ಪುಂಸ್ತ್ವಾಧಿಕರಣ

ಪೂರ್ವಪಕ್ಷಯುಕ್ತಿ (ಸ್ವಗುಣಾನನುಭೂತಿಃ) – ಜೀವನು ದುಃಖಾದಿಗಳಿಂದ ಬಿಡುಗಡೆ ಹೊಂದಿ ಆನಂದರೂಪನಾಗುತ್ತಾನೆ ಎಂಬುದಾಗಿ ಸ ದುಃಖಾದ್ವಿಮುಕ್ತಃ ಆನಂದೀಭವತಿ ಇತ್ಯಾದಿ ಶ್ರುತಿಗಳಿಂದ ತಿಳಿದುಬರುತ್ತದೆ. ಆದ್ದರಿಂದ ಜೀವನು ಕೇವಲ ಜ್ಞಾನಾನಂದಸ್ವರೂಪನಲ್ಲ. ಹಾಗೆ ಇದ್ದಿದ್ದರೆ ಸಂಸಾರದಲ್ಲಿ ಅವನಿಗೆ ತನ್ನ ಸ್ವರೂಪಭೂತ ಜ್ಞಾನಾನಂದಾದಿಗಳ ಅನುಭವವಾಗಬೇಕಿತ್ತು. ಆದ್ದರಿಂದ ಜೀವನು ಜ್ಞಾನಾನಂದ ರೂಪನೆಂದು ಪ್ರತಿಪಾದಿಸುವ ಶ್ರುತಿಗಳು ಪ್ರಮಾಣವಲ್ಲ. ಇಂಥಹ ಶ್ರುತಿಗಳಿಂದ ವಿಷ್ಣುವಿಗೆ ಜಗತ್ಕಾರಣತ್ವವು ಸಿದ್ಧವಾಗುವುದಿಲ್ಲ.

ಸಿದ್ಧಾಂತಯುಕ್ತಿ (ಸುವ್ಯಕ್ತಿ) – ಜೀವನು ಜ್ಞಾನಾನಂದ ಸ್ವರೂಪನೇ. ಆದರೆ ಸಂಸಾರಾವಸ್ಥೆದಲ್ಲಿ ಅಜ್ಞಾನ ಕರ್ಮಾದಿಗಳ ಆವರಣವಿರುವುದರಿಂದ ಅವನಿಗೆ ತನ್ನ ಸ್ವರೂಪಭೂತ ಆನಂದಾದಿಗಳ ಅನುಭವವಾಗುವುದಿಲ್ಲ. ಅಂದರೆ ಸಂಸಾರದಲ್ಲಿ ಪ್ರತಿಬಂಧಕದ ಕಾರಣ ಸ್ವರೂಪದ ಅಭಿವ್ಯಕ್ತಿ ಆಗುವುದಿಲ್ಲ. ಮೋಕ್ಷದಲ್ಲಿ ಯಾವುದೇ ಪ್ರತಿಬಂಧವಿಲ್ಲದಿರುವುದರಿಂದ ಸ್ವರೂಪಭೂತ ಆನಂದಾದಿಗಳು ಅಭಿವ್ಯಕ್ತವಾಗುತ್ತವೆ. ಆದ್ದರಿಂದ ಶ್ರುತಿಗಳಿಗೆ ಪರಸ್ಪರ ವಿರೋಧವಿಲ್ಲ. ಆದ್ದರಿಂದ ವಿಷ್ಣುವೇ ಜಗತ್ಕಾರಣನೆಂದು ಹೇಳುವ ಶ್ರುತಿಗಳು ಪ್ರಮಾಣವೇ ಆಗಿವೆ.

### ೧೭. ಕರ್ತೃತ್ವಾಧಿಕರಣ

ಪೂರ್ವಪಕ್ಷಯುಕ್ತಿ (ಅಲ್ಪಕಲ್ಪನಾ) – ನಾನ್ಯತೋಸ್ತಿ ಕರ್ತಾ ಇತ್ಯಾದಿ ಶ್ರುತಿಗಳಿಂದ ಈಶ್ವರನನ್ನು ಬಿಟ್ಟು ಬೇರೆ ಕರ್ತನು ಯಾರೂ ಇಲ್ಲ ಎಂದು ತಿಳಿದುಬರುತ್ತದೆ. ಆದ್ದರಿಂದ ಜೀವನು ಕರ್ತೃವಲ್ಲ. ಈಶ್ವರನೊಬ್ಬನೇ ಕರ್ತಾ ಎಂದು ಅಂಗೀಕರಿಸಿದರೆ ಕಲ್ಪನಾ ಲಾಘವವಿದೆ. ಆದ್ದರಿಂದ ಜೀವನಿಗೆ ಕರ್ತೃತ್ವವನ್ನು

ಹೇಳುವ ಶ್ರುತಿಗಳು ಅಪ್ರಮಾಣ. ಇಂಥಹ ಅಪ್ರಮಾಣವಾದ ವೇದಗಳಿಂದ ಈಶ್ವರನು ಜಗತ್ಕಾರಣನೆಂಬುದು ಸಿದ್ಧವಾಗುವುದಿಲ್ಲ.

ಸಿದ್ಧಾಂತಯುಕ್ತಿ (ಶಾಸ್ತ್ರಸಿದ್ಧಿ) – ಯತ್ಕರ್ಮ ಕುರುತೇ ತದಭಿಸಂಪದ್ಯತೇ ಇತ್ಯಾದಿ ಶ್ರುತಿಗಳಿಂದ ಜೀವನೂ ಕರ್ತೃವೆಂದು ಸಿದ್ಧಿಸುತ್ತದೆ. ಜೀವನಿಗೆ ಕರ್ತೃತ್ವವಿಲ್ಲದಿದ್ದರೆ ಅವನಿಗೆ ಇಂಥದನ್ನು ಮಾಡು ಇಂಥದನ್ನು ಮಾಡಬೇಡ ಎಂದು ವಿಧಿನಿಷೇಧಗಳನ್ನು ಹೇಳುವ ಶಾಸ್ತ್ರವಾಕ್ಯಗಳಿಗೆ ಅರ್ಥವಿರುವುದಿಲ್ಲ. ಈಶ್ವರನೇ ಸ್ವತಂತ್ರ ಕರ್ತೃ. ಜೀವನಿಗೆ ಈಶ್ವರಾಧೀನ ಕರ್ತೃತ್ವವಿದೆ. ಹೀಗೆ ಶ್ರುತಿಗಳಿಗೆ ಪರಸ್ಪರ ವಿರೋಧ ಬರದಂತೆ ಅರ್ಥಮಾಡುವುದರಿಂದ ಶಾಸ್ತ್ರಕ್ಕೆ ವೈಯರ್ಥ್ಯ ಬರುವುದಿಲ್ಲ. ಆದ್ದರಿಂದ ವಿಷ್ಣುವಿಗೆ ಜಗತ್ಕರ್ತೃತ್ವವನ್ನು ಹೇಳುವ ಶ್ರುತಿಗಳು ಪ್ರಮಾಣವಾಗಿವೆ.

### ೧೮. ಅಂಶಾಧಿಕರಣ

ಪೂರ್ವಪಕ್ಷಯುಕ್ತಿ (ನಾನಾಶ್ರುತಿಃ) – ಕೆಲವು ಶ್ರುತಿಗಳು ಜೀವರೆಲ್ಲರೂ ಈಶ್ವರನ ಅಂಶರು ಎಂದು ಹೇಳಿದರೆ, ಮತ್ತೆ ಕೆಲವು ಶ್ರುತಿಗಳು ಜೀವರು ಈಶ್ವರನ ಅಂಶರಲ್ಲ ಎಂದು ಹೇಳುತ್ತವೆ. ಹೀಗೆ ಪರಸ್ಪರ ವಿರುದ್ಧವಾದ ಶ್ರುತಿಗಳಿಂದ ಜೀವನು ಪರಮಾತ್ಮನ ಅಂಶನೋ ಅನಂಶನೋ ಎಂದು ನಿರ್ಣಯವಾಗುವುದಿಲ್ಲ. ಹೀಗೆ ಶ್ರುತಿಗೆ ಅಪ್ರಮಾಣ್ಯ ಬರುವುದರಿಂದ ವಿಷ್ಣುವೇ ಜಗತ್ಕಾರಣನೆಂದು ಶ್ರುತಿಗಳಿಂದ ಸಿದ್ಧವಾಗುವುದಿಲ್ಲ.

ಸಿದ್ಧಾಂತಯುಕ್ತಿ (ವಿಪರ್ಯಯ) – ವಾಕ್ಯದ ಅಪ್ರಾಮಾಣ್ಯವು ವಕ್ತೃವಿನ ಭ್ರಮೆ ಮೂಲಕವಾದದ್ದು. ವೇದಗಳಿಗೆ ವಕ್ತೃವೇ ಇಲ್ಲವಾದ್ದರಿಂದ ಅವುಗಳಿಗೆ ವಿಪರ್ಯಯ ಅಥವಾ ಭ್ರಾಂತಿಮೂಲತ್ವವಿಲ್ಲ. ಆದ್ದರಿಂದ ಅಪ್ರಮಾಣವಲ್ಲ. ಅವುಗಳನ್ನು ಸರಿಯಾಗಿ ಅರ್ಥಮಾಡಿಕೊಳ್ಳಬೇಕು. ಜೀವೇಶ್ವರರಿಗೆ ಭೇಧವು ಪ್ರತ್ಯಕ್ಷಸಿದ್ಧ. ಆದ್ದರಿಂದ ಜೀವನು ಪರಮಾತ್ಮನ ಅಂಶನೆಂದು ಹೇಳಿದರೆ ಅಭೇದವೆಂದು ಅರ್ಥಮಾಡಬಾರದು. ಪರಮಾತ್ಮನ ಸಂಬಂಧವಿದೆಯೆಂದಷ್ಟೇ ಅರ್ಥ. ಆದ್ದರಿಂದ ಶ್ರುತಿಗಳಿಗೆ ಅಪ್ರಾಮಾಣ್ಯವೂ ಪರಸ್ಪರ ವಿರೋಧವೂ ಇರುವುದಿಲ್ಲ. ಆದ್ದರಿಂದ ವಿಷ್ಣುವೇ ಜಗತ್ಕಾರಣ.

### ೧೯. ಅದೃಷ್ಟಾಧಿಕರಣ

ಪೂರ್ವಪಕ್ಷಯುಕ್ತಿ (ವೈಚಿತ್ರ್ಯಂ) – ಜೀವರೆಲ್ಲರೂ ಈಶ್ವರನ ಪ್ರತಿಬಿಂಬರೆಂದು ಹಿಂದಿನ ಅಧಿಕರಣದಲ್ಲಿ ಆಭಾಸ ಏವ ಚ ಎಂಬ ಸೂತ್ರದಲ್ಲಿ ಹೇಳಲಾಗಿದೆ. ಹೀಗೆ ಎಲ್ಲ ಜೀವರು ಪರಮಾತ್ಮನ ಪ್ರತಿಬಿಂಬರಾದರೆ ಎಲ್ಲರೂ ಒಂದೇ ರೀತಿಯಿರಬೇಕು. ಅವರಲ್ಲಿ ಸುರ ಅಸುರ ತಿರ್ಯಕ್ ಹೀಗೆ ವೈಚಿತ್ರ್ಯವು ಇರಲು ಸಾಧ್ಯವಿಲ್ಲ. ಆದ್ದರಿಂದ ಜೀವರು ಪರಮಾತ್ಮನ ಪ್ರತಿಬಿಂಬರು ಎಂದು ಹೇಳುವ ಶ್ರುತಿಯು

ಅಪ್ರಮಾಣ. ಆದ್ದರಿಂದ ವಿಷ್ಣುವು ಜಗತ್ಕಾರಣವೆಂಬುದು ಶ್ರುತಿಯಿಂದ ಸಿದ್ಧವಾಗುವುದಿಲ್ಲ.

ಸಿದ್ಧಾಂತಯುಕ್ತಿ (ವಿಶೇಷಕಾರಣ) – ಎಲ್ಲ ಜೀವರು ಪರಮಾತ್ಮನ ಪ್ರತಿಬಿಂಬರು ಎಂಬುದು ನಿಜವೇ. ಆದರೂ ಅವರವರ ಅದೃಷ್ಟ ಕರ್ಮಗಳ ಅನುಸಾರವಾಗಿ ಬೇರೆ ಬೇರೆ ರೀತಿಯಿದ್ದಾರೆ. ಆದ್ದರಿಂದ ಶ್ರುತಿಗಳು ಅಪ್ರಮಾಣವಲ್ಲ. ವಿಷ್ಣುವೇ ಜಗತ್ಕಾರಣನು ಎಂಬುದೇ ಸಿದ್ಧಾಂತ.

ಹೀಗೆ ಬೇರೆ ಬೇರೆ ಸಿದ್ಧಾಂತ ನ್ಯಾಯಗಳಿಂದ ಶ್ರುತಿಗಳಿಗೆ ಪರಸ್ಪರ ವಿರೋಧವಿಲ್ಲವೆಂದು ಈ ಮೂರನೆಯ ಪಾದದಲ್ಲಿ ನಿರೂಪಿಸಲಾಗಿದೆ. ಆದ್ದರಿಂದ ವಿಷ್ಣುವಿಗೆ ಜಗತ್ಕಾರಣತ್ವವು ಶ್ರುತಿಗಳಿಂದ ಸಿದ್ಧವಾಗುತ್ತದೆ.

## ವಿಯದಧಿಕರಣಮ್

### ಓಂ ನ ವಿಯದಶ್ರುತೇಃ ಓಂ

ಈ ಅಧಿಕರಣದಲ್ಲಿ 'ಅನಾದಿರ್ವಾಯಮಾಕಾಶಃ' ಇತ್ಯಾದಿ ಶ್ರುತಿಗಳಿಗೆ ಗೌಣಾರ್ಥತ್ವವನ್ನೂ, 'ಆತ್ಮನಃ ಆಕಾಶಃ ಸಂಭೂತಃ' ಇತ್ಯಾದಿ ಶ್ರುತಿಗಳಿಗೆ ಮುಖ್ಯಾರ್ಥತ್ವವನ್ನೂ ಸ್ವೀಕರಿಸಿ, ಆಕಾಶಕ್ಕೆ ಉತ್ಪತ್ತಿಯು ಸಮರ್ಥಿಸಲ್ಪಟ್ಟಿದೆ. ಅಲ್ಲಿ ಬಂದಿರುವ 'ವಿಯತ್' ಪದವು ಕೇವಲ ಆಕಾಶಪರವಲ್ಲ, ಪ್ರಕೃತಿ ಇತ್ಯಾದಿಗಳಿಗೂ ಸಂಗ್ರಾಹಕವಾಗಿ ತಿಳಿಯಬೇಕೆಂದು 'ಪ್ರಕೃತಿಃ' ಇತ್ಯಾದಿ ವಾಕ್ಯದಿಂದ ಹೇಳುತ್ತಾರೆ –

**ಪ್ರಕೃತಿಃ ಪುರುಷಃ ಕಾಲೋ ವೇದಾಸ್ತದಭಿಮಾನಿನಃ ॥೯॥**

**ಮಹದಾದ್ಯಾಶ್ಚ ಜಾಯಂತೇ ಪರಾಧೀನವಿಶೇಷಿತಾ ।**

**ಇದಂ ಸರ್ವಂ ಸಸರ್ಜೇತಿ ಜನಿಮತ್ತ್ವಮಿಹೋದಿತಮ್ ॥೧೦॥**

ಜಡಪ್ರಕೃತಿ, ಜೀವ, ಕಾಲ, ವೇದ ಹಾಗೂ ತದಭಿಮಾನಿಗಳು, ಮಹದಾದಿಗಳು ಹುಟ್ಟುತ್ತವೆ. 'ಆತ್ಮನಃ ಆಕಾಶಃ ಸಂಭೂತಃ' ಇತ್ಯಾದಿ ಶ್ರುತಿಗಳಲ್ಲಿ ಆಕಾಶಕ್ಕೆ ಹೇಳಲ್ಪಟ್ಟಿರುವ ಉತ್ಪತ್ತಿಯು ಪರಾಧೀನವಿಶೇಷಾವಾಪ್ತಿರೂಪವಾದುದು. ಇದನ್ನೆಲ್ಲ ಸೃಜಿಸಿದನು ಎಂದು ಉತ್ಪತ್ತಿಯು ಈ ಶ್ರುತಿಯಲ್ಲಿ ಹೇಳಲ್ಪಟ್ಟಿದೆ.

ಇನ್ನು ಪರರು ಹೇಳಿದ ರೀತಿಯಿಂದ ಘಟಾದಿಗಳ ಹಾಗೆ, ಅಭೂತ್ವಾಭವನ (ಹಿಂದೆ ಇಲ್ಲದ್ದು ಅನಂತರ ಉಂಟಾಗುವುದು) ಎಂಬ ಅರ್ಥದಲ್ಲಿಯೇ ಶ್ರುತಿಗಳು ಹಾಗೂ ಸೂತ್ರಗಳು ಆಕಾಶಕ್ಕೆ ಉತ್ಪತ್ತಿಯನ್ನು ಏಕೆ ಹೇಳಿರಬಾರದು ಎಂದು ಆಶಂಕಿಸಿದರೆ –

**ಅವಕಾಶಮಾತ್ರಮಾಕಾಶಃ ಕಥಮುತ್ಪದ್ಯತೇಽನ್ಯಥಾ ।**

**ಯದ್ಯನಾಕಾಶತಾ ಪೂರ್ವಂ ಕಿಂ ಮೂರ್ತನಿಬಿಡಂ ಜಗತ್ ॥೧೧॥**

ಅವಕಾಶಮಾತ್ರವೇ ಆಕಾಶ ಎಂದಿರುವಾಗ, ಪರಾಧೀನವಿಶೇಷಾವಾಪ್ತಿಯನ್ನು ಬಿಟ್ಟರೆ, ಬೇರೆ ರೀತಿಯಿಂದ ಈ ಆಕಾಶಕ್ಕೆ ಉತ್ಪತ್ತಿಯು ಹೇಗೆ ಕೂಡುವುದು? ಸೃಷ್ಟಿಯ ಪೂರ್ವದಲ್ಲಿ ಮೂರ್ತದ್ರವ್ಯಗಳ ಅಭಾವರೂಪ ಆಕಾಶವು ಇಲ್ಲವೆಂದು ಹೇಳುವುದಾದರೆ, ಆಗ ಪ್ರಲಯದಲ್ಲಿ ಜಗತ್ತು ಮೂರ್ತದ್ರವ್ಯಗಳಿಂದ ನಿಬಿಡವೆಂದು ಅಂಗೀಕರಿಸಲ್ಪಡುವುದೇನು?

ಇದನ್ನೇ 'ಮೂರ್ತ' ಇತ್ಯಾದಿ ವಚನದಿಂದ ವಿವರಿಸುತ್ತಾರೆ –

**ಮೂರ್ತಸಂಪೂರ್ಣತಾ ಚೈವ ಯದ್ಯನಾಕಾಶತಾ ಭವೇತ್ ।**

**ಮೂರ್ತದ್ರವ್ಯಾಣಿ ಚಾಕಾಶೇ ಸ್ಥಿತಾನ್ಯೇವ ಹಿ ಸರ್ವದಾ ॥೧೨॥**

ಎಲ್ಲ ಮೂರ್ತದ್ರವ್ಯಗಳ ಅಭಾವರೂಪ ಆಕಾಶದ ಅಭಾವವು ಪ್ರಲಯದಲ್ಲಿ ಇರುವುದಾದರೆ, ಆಗ ಮೂರ್ತದ್ರವ್ಯಗಳಿಂದ ಪರಿಪೂರ್ಣವಾಗಿರುವಿಕೆ ಎಂಬುದು ಆಗಿಯೇ ಆಗುವುದು. ಇದರಿಂದ ಸ್ಥಿತಿಕಾಲದಲ್ಲಿ ಮೂರ್ತದ್ರವ್ಯಗಳ ಅಭಾವವು ಉಂಟಾಗುವುದು. ಹೀಗಾಗಿ ಸೃಷ್ಟಿಪ್ರಲಯಗಳಲ್ಲಿ ಸೃಷ್ಟಿಯು ಪ್ರಲಯವಾಗಲಿ, ಪ್ರಲಯವು ಸೃಷ್ಟಿಯಾಗಲಿ ಎಂಬ ವ್ಯತ್ಯಾಸವು ಉಂಟಾಗುವುದು. ಯಾವನು ಮೂರ್ತದ್ರವ್ಯಗಳನ್ನೂ ಅವುಗಳ ಅಭಾವವನ್ನೂ ಅಂಗೀಕರಿಸುತ್ತಾನೋ ಅವನು ಮೂರ್ತದ್ರವ್ಯಕ್ಕಿಂತ ಬೇರೆಯಾದ ಆಕಾಶವನ್ನು ಅವಶ್ಯವಾಗಿ ಅಂಗೀಕರಿಸಲೇಬೇಕು. ಏಕೆಂದರೆ ಅವುಗಳು ಯಾವಾಗಲೂ ಆಕಾಶದಲ್ಲಿ ಇರುವವುಗಳೇ ಆಗಿವೆ.

ಹೀಗೆ ಆಕಾಶಕ್ಕೆ ಅಭೂತ್ವಾಭವನ ರೂಪ ಉತ್ಪತ್ತಿಯು ಅಯುಕ್ತವೆಂದು ಸಿದ್ಧವಾಯಿತು. ಹಾಗಾದರೆ ಆಕಾಶ ಶಬ್ದದ ಅರ್ಥವೇನು? ಅದಕ್ಕೆ ಹೇಳುವ ಪರಾಧೀನಾವಾಪ್ತಿರೂಪ ಉತ್ಪತ್ತಿ ಎಂದರೇನು? ಎಂಬ ಪ್ರಶ್ನೆಗಳು ಬಂದರೆ, ಅದಕ್ಕೆ ಪರಿಹಾರವನ್ನು 'ಅತಃ' ಇತ್ಯಾದಿ ವಾಕ್ಯದಿಂದ ಹೇಳುತ್ತಾರೆ –

**ಅತ ಆಕಾಶಶಬ್ದೋಕ್ತಸ್ತದ್ದೇವೋಽತ್ರ ವಿನಾಯಕಃ ।**

**ದೇಹೋತ್ಪತ್ತ್ಯಾ ಸಮುತ್ಪನ್ನ ಇತಿ ಶ್ರುತ್ಯಾಭಿಧೀಯತೇ ॥೧೩॥**

ಪರಕೀಯರ ವ್ಯಾಖ್ಯಾನವು ಅಯುಕ್ತವಾದುದರಿಂದ, ಭೂತಾಕಾಶದ ಅಭಿಮಾನಿ ದೇವತೆಯಾದ ವಿನಾಯಕನು ದೇಹೋತ್ಪತ್ತಿಯನ್ನು ಹೊಂದುವುದರ ಮೂಲಕ ಉತ್ಪನ್ನನಾದನೆಂದು 'ಆಕಾಶಃ ಸಂಭೂತಃ' ಎಂಬ ಶ್ರುತಿಯು ಹೇಳುತ್ತದೆ.

**ಭೂತಮಪ್ಯಸಿತಂ ದಿವ್ಯದೃಷ್ಟಿಗೋಚರಮೇವ ತು ।**

**ಉತ್ಪದ್ಯತೇಽವ್ಯಾಕೃತಂ ಹಿ ಗಗನಂ ಸಾಕ್ಷಿಗೋಚರಮ್ ॥೧೪॥**

**ಪ್ರದೇಶ ಇತಿ ವಿಜ್ಞೇಯಂ ನಿತ್ಯಂ ನೋತ್ಪದ್ಯತೇ ಹಿ ತತ್ ।**

ನೀಲವಾದ ಭೂತಾಕಾಶವೂ ದಿವ್ಯ ದೃಷ್ಟಿಗೆ ಗೋಚರವಾಗಿಯೇ ಹುಟ್ಟುತ್ತದೆ ಎಂಬುದಾಗಿ 'ಆಕಾಶೋ ನೀಲಿಮೋದೇತಿ' ಎಂಬ ಶ್ರುತಿಯಿಂದ ಹೇಳಲ್ಪಡುತ್ತದೆ. ಅವ್ಯಾಕೃತ ಆಕಾಶವು ನಿತ್ಯವು, ಆದ್ದರಿಂದ ಅದು ಹುಟ್ಟುವುದಿಲ್ಲ. ಅದು ಸಾಕ್ಷಿಗೆ ಗೋಚರವಾಗುವ ಪ್ರದೇಶರೂಪವು ಎಂದು ತಿಳಿಯತಕ್ಕದ್ದು.

ಹಾಗಾದರೆ ಅವ್ಯಾಕೃತಾಕಾಶಕ್ಕೆ ಉತ್ಪತ್ತಿಯಿಲ್ಲವೆಂದು ಒಪ್ಪಿದರೂ, 'ಇದಂ ಸರ್ವಮಸೃಜತ' ಇತ್ಯಾದಿ ಶ್ರುತಿ ವಿರೋಧವು ಬರುವುದು ಎಂದು ಆಶಂಕಿಸಿದರೆ – ಅವ್ಯಾಕೃತಾಕಾಶಕ್ಕೆ ಅಭೂತ್ವಾಭವನವೆಂಬ ಉತ್ಪತ್ತಿಯು ಸಂಭವಿಸದಿದ್ದರೂ, ಪರಾಧೀನವಿಶೇಷಾವಾಪ್ತಿಯೆಂಬ ಉತ್ಪತ್ತಿ ಇರುವುದೆಂಬುದಾಗಿ 'ತಥಾಪಿ' ಇತ್ಯಾದಿ ವಾಕ್ಯದಿಂದ ಹೇಳುತ್ತಾರೆ –

**ತಥಾಽಪಿ ಮೂರ್ತಸಂಬಂಧಪರತಂತ್ರವಿಶೇಷಯುಕ್ ॥೧೫॥**

**ಖಮೇವೋತ್ಪತ್ತಿಮನ್ನಾಮ ಶ್ರುತಿಶಬ್ದವಿವಕ್ಷಿತಮ್ ।**

ಹಾಗಿದ್ದರೂ ಮೂರ್ತಸಂಬಂಧರೂಪವಾದ ಪರಾಧೀನವೆಂಬ ವಿಶೇಷದಿಂದ ಕೂಡಿದ, ಅನಾದಿಯೆಂದು ಹೇಳಲ್ಪಟ್ಟ, ಆಕಾಶವೇ ಉತ್ಪತ್ತಿಯುಳ್ಳದ್ದೆಂದು 'ಇದಂ ಸರ್ವಮಸೃಜತ' ಎಂಬ ಶ್ರುತಿಯ ಅಭಿಪ್ರಾಯವು.

ಹೀಗೆ ಶ್ರುತಿಯಲ್ಲಿ ಹೇಳಲ್ಪಟ್ಟ ಆಕಾಶದ ಉತ್ಪತ್ತಿಯನ್ನು ವ್ಯಾಖ್ಯಾನಿಸಿ, ಆಕಾಶ ಪದದಿಂದ ಉಪಲಕ್ಷಿತವಾದ ಪ್ರಕತ್ಯಾದಿಗಳ ಉತ್ಪತ್ತಿಯನ್ನು 'ಪ್ರಕೃತಿಃ' ಇತ್ಯಾದಿ ವಾಕ್ಯದಿಂದ ನಿರೂಪಿಸುತ್ತಾರೆ –

**ಪ್ರಕೃತಿಃ ಪುರುಷಃ ಕಾಲ ಇತ್ಯೇತೇ ಚ ಸಮಸ್ತಶಃ ॥೧೬॥**

**ಈಶಾಧೀನವಿಶೇಷೇಣ ಜನ್ಯಾ ಇತ್ಯೇವ ಶಬ್ದಿತಾಃ ।**

**ಕಾಲಪ್ರವಾಹ ಏವೈಕೋ ನಿತ್ಯೋ ನ ತು ವಿಶೇಷವಾನ್ ॥೧೭॥**

ಪ್ರಕೃತಿ ಪುರುಷ ಕಾಲ ಇವೇ ಮುಂತಾದವುಗಳು ಸಮಸ್ತವಾಗಿ ಈಶ್ವರಾಧೀನ ವಿಶೇಷದಿಂದಲೇ ಹುಟ್ಟಿದವುಗಳೆಂದು ಹೇಳಲ್ಪಟ್ಟಿವೆ. ಕಾಲಪ್ರವಾಹವೊಂದೇ ನಿತ್ಯ ಕ್ಷಣಲವಾದಿ ರೂಪ ಕಾಲವಿಶೇಷವು ನಿತ್ಯವಲ್ಲ.

**ಪುರುಷಾವ್ಯಕ್ತಕಾಲಾನಾಂ ರಮ್ಯೈವೈಕಾಭಿಮಾನಿನೀ ।**

**ಸಿಸೃಕ್ಷುತ್ವವಿಶೇಷಂ ತತ್ಸಾಕ್ಷಾದ್ಭಗವದಿಚ್ಛಯಾ ॥೧೮॥**

**ಪ್ರಾಪ್ಯೈವ ಸೃಷ್ಟೇತ್ಯುದಿತಾ ಪ್ರಧಾನಂ ವಿಕೃತೇರಪಿ ।**

**ಪುಮಾಂಸೋ ದೇಹಸಂಬಂಧಾತ್ಸೃಷ್ಟಿಮಂತ ಇತೀರಿತಾಃ ॥೧೯॥**

ಪುರುಷ ಪ್ರಕೃತಿ ಕಾಲಗಳಿಗೆ ರಮಾದೇವಿಯೊಬ್ಬಳೇ ಅಭಿಮಾನಿನಿಯು. ಆದ್ದರಿಂದ ಸಾಕ್ಷಾತ್ತಾಗಿ ಭಗವದಿಚ್ಛೆಯಿಂದ ಸಿಸೃಕ್ಷತ್ವ (ಸೃಷ್ಟಿ ಮಾಡಬೇಕೆಂಬ ಇಚ್ಛೆ) ಎಂಬ ವಿಶೇಷವನ್ನು ಹೊಂದಿದವಳಾಗಿಯೇ ಸೃಷ್ಟಳು ಎಂದು ಹೇಳಲ್ಪಟ್ಟಿರುತ್ತಾಳೆ. ಹೊರತಾಗಿ ವಿನಾಯಕ ಮುಂತಾದವರ ಹಾಗೆ ದೇಹೋತ್ಪತ್ತಿ ರೂಪ ಉತ್ಪತ್ತಿಯು ಅವಳಿಗಿಲ್ಲ ಎಂದರ್ಥ. ಪ್ರಕೃತಿಗೆ ಈಶ್ವರಾಧೀನವಾದ ವಿಕಾರವನ್ನು ಹೊಂದುವುದೇ ಉತ್ಪತ್ತಿ ಎಂದು ಹೇಳಲ್ಪಡುತ್ತದೆ. ಚೇತನರಿಗೆ ದೇಹಸಂಬಂಧವನ್ನು ಪಡೆಯುವುದೇ ಉತ್ಪತ್ತಿ ಎಂದು ಹೇಳಲ್ಪಡುತ್ತದೆ.

## ಮಾತರಿಶ್ವಾಧಿಕರಣಮ್

### ಓಂ ಏತೇನ ಮಾತರಿಶ್ವಾ ವ್ಯಾಖ್ಯಾತಃ ಓಂ

ಹಿಂದಿನ ಅಧಿಕರಣದಲ್ಲಿ ಆಕಾಶಾದಿಗಳ ಉತ್ಪತ್ತಿ ಹಾಗೂ ಅನುತ್ಪತ್ತಿಗಳನ್ನು ಪ್ರತಿಪಾದಿಸುವ ಶ್ರುತಿಗಳಿಗೆ ಬಂದ ವಿರೋಧವು ಪರಿಹರಿಸಲ್ಪಟ್ಟಿತು. ಈಗ 'ತೇಜೋಽಬನ್ನಾನ್ಯಾಕಾಶ ಇತಿ ತಾನ್ಯನಿತ್ಯಾನಿ ವಾಯುರ್ವಾವ ನಿತ್ಯಃ' ಎಂಬ ಶ್ರುತಿಯಲ್ಲಿ, ವ್ಯವಸ್ಥಿತವಾದ ನಿತ್ಯತೆ ಹಾಗೂ ಅನಿತ್ಯತೆಯುಳ್ಳ ಆಕಾಶವನ್ನು ಅನಿತ್ಯ ವರ್ಗದಲ್ಲಿ ಸೇರಿಸಿ, ವಾಯುವಿನ ನಿತ್ಯತೆಯನ್ನು ಹೇಳಲಾಗಿದೆ. ಈ ವ್ಯವಸ್ಥೆಯು ಯುಕ್ತವಾಗುವುದಿಲ್ಲ ಎಂದು ಆಶಂಕೆ ಬಂದರೆ ಅದಕ್ಕೆ ಪರಿಹಾರವನ್ನು ಈ ಅಧಿಕರಣದಲ್ಲಿ ನೀಡಲಾಗಿದೆ.

**ಏವಂ ಪ್ರಲಯಕಾಲೇಪಿ ಪ್ರತಿಭಾತಪರಾವರಃ ।**

**ಮುಖ್ಯವಾಯುರ್ನಿತ್ಯಸಮಃ ಶರೀರೋತ್ಪತ್ತಿಕಾರಣಾತ್ ॥೨೦॥**

**ಪರಾಧೀನವಿಶೇಷೇಣ ಜನಿಮಾನೇವ ಶಬ್ದಿತಃ ।**

**ನೈವ ಕಿಂಚಿತ್ತತೋ ಜನ್ಮವರ್ಜಿತಂ ಪರಮಾದ್ಯತೇ ॥೨೧॥**

ಆಕಾಶವು ಅನಾದಿಯೂ ಜನ್ಮವುಳ್ಳದ್ದೂ ಹೇಗೋ ಹಾಗೆ, ಪ್ರಲಯದಲ್ಲಿಯೂ ಪ್ರತಿಭಾತಪರಾವರನಾದ ಮುಖ್ಯಪ್ರಾಣನು ನಿತ್ಯಸಮನೆಂದೆನಿಸಿದ್ದಾನೆ. ಶರೀರದ ಉತ್ಪತ್ತಿಯಾಗುವ ಕಾರಣದಿಂದ ಪರಾಧೀನ ವಿಶೇಷ ಪ್ರಾಪ್ತಿರೂಪ ಜನನವುಳ್ಳವನು ಎಂದು ಹೇಳಲ್ಪಟ್ಟಿದ್ದಾನೆ. ಆದ್ದರಿಂದ ಪರಮಾತ್ಮನನ್ನು ಬಿಟ್ಟು ಬೇರೆ ಯಾವುದೂ ಸಹ ಜನ್ಮರಹಿತವೆಂಬುದು ಇಲ್ಲವೇ ಇಲ್ಲ.

**ಪರಾಧೀನವಿಶೇಷತ್ವೇ ಜನ್ಮನಃ ಸ್ಥೂಲತಾಭವಃ ।**

**ಪೂರ್ವಶಬ್ದವಿಲೋಪಶ್ಚ ಯದಿ ಜನ್ಮೇತಿ ಕೀರ್ತ್ಯತೇ ॥೨೨॥**

ರಮಾಯಾ ನೈವ ಜನ್ಮಾಸ್ತಿ ಚೈತನ್ಯಸ್ಯಾಪಿ ಕೇವಲಮ್ ।

ಪ್ರಧಾನಸ್ಯ ಚ ವೇದಸ್ಯ ವೇದಸ್ಯಾಪೀಶ್ವರೇಚ್ಛಯಾ ।।೨೩।।

ವ್ಯಕ್ತಿರ್ನಾಮ ವಿಶೇಷೋಽಸ್ತಿ ತಸ್ಮಾತ್ತದ್ವಶತ್ವೈವ ಹಿ ।

ಉತ್ಪತ್ತಿರತ್ರ ಕಥಿತಾ...........................।।

ಉತ್ಪತ್ತಿಗೆ ಪರಾಧೀನ ವಿಶೇಷಪ್ರಾಪ್ತಿರೂಪತ್ವವನ್ನು ಒಪ್ಪಿದರೆ ಇದು ಸಿದ್ಧಿಸುತ್ತದೆ. ಸ್ಥೂಲತ್ವ ಭಾವ, ಪೂರ್ವಶಬ್ದವಿಲೋಪ ಇವುಗಳಿಗೆ ಜನ್ಮವೆಂದು ಕರೆಯುವುದಾದರೆ ಆಗ ರಮಾದೇವಿಗೂ ಜೀವರಿಗೂ ಪ್ರಕೃತಿಗೂ ವೇದಕ್ಕೂ ಇಂಥಹ ಜನ್ಮವು ಇರುವುದೇ ಇಲ್ಲ. ವೇದಕ್ಕೂ ಈಶ್ವರನ ಇಚ್ಛೆಯಿಂದ ಅಭಿವ್ಯಕ್ತಿ ಎಂಬ ವಿಶೇಷವು ಇರುತ್ತದೆ. ಆದ್ದರಿಂದ ಭಗವದಧೀನತ್ವವೆಂಬ ವಿಶೇಷಪ್ರಾಪ್ತಿಯೇ ಉತ್ಪತ್ತಿಯೆಂದು ಶ್ರುತಿ ಹಾಗೂ ಸೂತ್ರಗಳಲ್ಲಿ ಹೇಳಲ್ಪಟ್ಟಿದೆ.

ಉಪಾದಾನವಾದ ಧರ್ಮಿಯು ತನಗಿಂತ ಬೇರೆಯಾದ ರೂಪದಿಂದ ಪರಿಣಾಮ ಹೊಂದುವುದೇ ಸ್ಥೂಲತ್ವ ಭಾವವು. ಹೀಗೆ ಪರಿವರ್ತನೆ ಹೊಂದುವುದರಿಂದಲೇ, ಆ ವಸ್ತುವು ಪರಿವರ್ತನೆಯಾಗುವ ಮುಂಚೆ ಬಳಸುತ್ತಿದ್ದ ಶಬ್ದವನ್ನು ತ್ಯಜಿಸುವುದು ಹಾಗೂ ಶಬ್ದಾಂತರವನ್ನು ಉಪಯೋಗಿಸುವುದು. ಇದೇ ಪೂರ್ವಶಬ್ದವಿಲೋಪ.

## ಅಸಂಭವಾಧಿಕರಣಮ್

### ಓಂ ಅಸಂಭವಸ್ತು ಸತೋಽನುಪಪತ್ತೇಃ ಓಂ

ಜನ್ಮಸಂಭಾವನಾರಹಿತವಾದ ಆಕಾಶವಾಯುಗಳಿಗೆ ಜನ್ಮವನ್ನು ಹೇಳಿದ ಮೇಲೆ ಪರರು ಹೀಗೆ ಆಶಂಕಿಸುತ್ತಾರೆ. 'ಸದಜಾಯತ' ಇತ್ಯಾದಿ ಶ್ರುತಿಗಳಿರುವುದರಿಂದ ಸತ್ ಶಬ್ದವಾಚ್ಯನಾದ ಬ್ರಹ್ಮನಿಗೂ ಜನ್ಮವಿರುತ್ತದೆ. ಇನ್ನು 'ಸದೇವ ಸೌಮ್ಯೇದಮಗ್ರ ಆಸೀತ್' ಇತ್ಯಾದಿ ಶ್ರುತಿವಿರೋಧ ಬರುವುದು ಎಂದು ಹೇಳಬಾರದು. ಏಕೆಂದರೆ ಆಕಾಶ ವಾಯುಗಳಂತೆ ಬ್ರಹ್ಮನಿಗೂ ಪರಾಧೀನವಿಶೇಷಾವಾಪ್ತಿ ರೂಪ ಉತ್ಪತ್ತಿಯು ಸಂಭವಿಸುವುದು. ಹೀಗೆ ಆಶಂಕಿಸಿದರೆ ಅದರ ನಿವಾರಣೆಗಾಗಿ ಈ ಅಧಿಕರಣವು ಹೊರಟಿದೆ. ಅದನ್ನೇ 'ಸ್ವತಂತ್ರತ್ವಾತ್' ಇತ್ಯಾದಿ ವಚನದಿಂದ ವ್ಯಾಖ್ಯಾನಿಸುತ್ತಾರೆ –

.......................ಸ್ವತಂತ್ರತ್ವಾತ್ಪರಮಾತ್ಮನಃ ।।೨೪।।

ನೈವೋತ್ಪತ್ತಿಃ ಕಥಮಪಿ ನ ಸ್ವತಂತ್ರಂ ತತೋಽಪರಮ್ ।

ಪರಮಾತ್ಮನಿಗೆ ಸ್ವತಂತ್ರತ್ವವಿರುವುದರಿಂದ, ಸ್ವರೂಪದಿಂದಾಗಲೀ ಪರಾಧೀನ ವಿಶೇಷಾವಾಪ್ತಿಯಿಂದಾಗಲೀ ಉತ್ಪತ್ತಿಯು ಇಲ್ಲವೇ ಇಲ್ಲ. ಏಕೆಂದರೆ ಆ ಹರಿಯನ್ನು ಬಿಟ್ಟು ಬೇರೆ ಯಾವುದೂ ಸ್ವತಂತ್ರವಲ್ಲ.

## ವ್ಯತಿರೇಕಾಧಿಕರಣಮ್

**ಓಂ ವ್ಯತಿರೇಕೋ ಗಂಧವತ್ತಥಾ ಚ ದರ್ಶಯತಿ ಓಂ**

ಈ ಅಧಿಕರಣದಲ್ಲಿ ಸೌಭರಿ ಮುಂತಾದ ಯೋಗಿಗಳಿಗೆ ಸ್ವರೂಪದಿಂದಲೇ (ಔಪಾಧಿಕ ಭೇದದಿಂದಲ್ಲ) ಅನೇಕತ್ವವು ಉಪಪಾದಿಸಲ್ಪಡುತ್ತದೆ.

**ಅಚ್ಛೇದ್ಯಸ್ಯಾಪಿ ಜೀವಸ್ಯ ವಿಭಾಗಂ ಬಹುಧಾ ಹರಿಃ ।।೨೫।।**

**ಕೃತ್ವಾ ಭೋಗಾನ್ ಪ್ರದಾಯೈವ ಚೈಕ್ಯಮಾಪಾದಯೇತ್ಪುನಃ ।**

ಶ್ರೀಹರಿಯು ಜೀವನಿಗೆ, ಅಚ್ಛೇದ್ಯನಾಗಿದ್ದರೂ ಅನೇಕ ವಿಧವಾಗಿ ವಿಭಾಗವನ್ನು ಮಾಡಿ ಭೋಗಗಳನ್ನು ಕೊಟ್ಟು, ಪುನಃ ಏಕರೂಪತ್ವವನ್ನೇ ಹೊಂದಿಸಿಕೊಡುತ್ತಾನೆ.

**ಅತ ಈಶವಶಂ ಸರ್ವಂ ಚೇತನಾಚೇತನಂ ಜಗತ್ ।।೨೬।।**

**ಅವಿಭಾಗಂ ವಿಭಾಗಾಯ ಯದಾ ನಯತಿ ಕೇಶವಃ ।**

**ಕಿಮಶಕ್ಯಂ ಪರೇಶಸ್ಯ ತದೇತಿ ಹ್ಯಭಿಧೀಯತೇ ।।೨೭।।**

ಆದ್ದರಿಂದ ಚೇತನಾಚೇತನಾತ್ಮಕವಾದ ಸಮಸ್ತ ವಿಶ್ವವೂ ಈಶಾಧೀನವಾಗಿದೆ. ಅವಿಭಾಗವಾದುದನ್ನೂ ವಿಭಾಗಕ್ಕಾಗಿ ಕೇಶವನು ಒಯ್ಯುತ್ತಾನೆ ಎಂದಮೇಲೆ, ಪರೇಶನಾದ ಆ ಶ್ರೀಹರಿಗೆ ಯಾವುದು ಅಶಕ್ಯವು? ಎಂಬುದಾಗಿ ಶ್ರುತಿಸ್ಮೃತಿಗಳಿಂದ ಹೇಳಲ್ಪಡುತ್ತದೆ. ಆದ್ದರಿಂದ ಸೂತ್ರದಿಂದಲೂ ಇದೇ ಹೇಳಲ್ಪಡುತ್ತದೆ.

ಇಲ್ಲಿ ಉದಾಹರಿಸಿದ ಶ್ರುತಿ ಯಾವುದೆಂದರೆ –

"ತಂ ಯಥಾ ಯಥೇಶ್ವರಃ ಪ್ರಕುರುತೇ ತಥಾ ತಥಾ ಭವತಿ। ಸೋಽಚಿಂತ್ಯಃ ಪರಮೋ ಗರೀಯಾನಚಿಂತ್ಯಯೇಶಶಕ್ತ್ಯೈವ ಹ್ಯೇಕೋಽವಯವವಿವರ್ಜಿತಃ ಆತ್ಮಾನಂ ಬಹುಧಾ ಕೃತ್ವಾ ಕ್ರೀಡತೇ ಯೋಗಸಂಪದಾ।।"

ಈ ಶ್ರುತಿಯ ಅರ್ಥ ಹೀಗಿದೆ –

"ಆ ಜೀವನನ್ನು ಏಕಧಾ ಅನೇಕಧಾ ಎಂಬುದಾಗಿ ಈಶ್ವರನು ಹೇಗೆ ಹೇಗೆ ಮಾಡುತ್ತಾನೋ ಆ ಜೀವನು ಹಾಗೆ ಹಾಗೆ ಏಕರೂಪನೋ ಅನೇಕರೂಪನೋ ಆಗುತ್ತಾನೆ. ಈಶ್ವರನು ಅಚಿಂತ್ಯಶಕ್ತಿಯುಳ್ಳವನು, ಲೋಕೋತ್ತರನು, ಮಹತ್ತಮನು. ಅಚಿಂತ್ಯವಾದ ಈಶ್ವರನ ಶಕ್ತಿಯಿಂದ ಪ್ರಾಪ್ತವಾದ ಯೋಗರೂಪ ಸಂಪತ್ತಿಯಿಂದ, ಸ್ವರೂಪತಃ ಏಕನೇ ಆದ ಹಾಗೂ ಭಿನ್ನಾಂಶರಹಿತನಾದ ಜೀವನು ತಾನು ಬಹುರೂಪವನ್ನು ಹೊಂದಿ ಕ್ರೀಡಿಸುತ್ತಾನೆ."

## ಪೃಥಗಧಿಕರಣಮ್

### ಓಂ ಪೃಥಗುಪದೇಶಾತ್ ಓಂ

ಈ ಅಧಿಕರಣದಲ್ಲಿ ಜೀವಾತ್ಮನಿಗೆ ಪರಮಾತ್ಮನಿಂದ ಆತ್ಯಂತಿಕ ಭೇದವು ಅಂದರೆ ಮುಕ್ತಿಯಲ್ಲಿಯೂ ಭೇದವು ಸಮರ್ಥಿಸಲ್ಪಡುತ್ತದೆ.

ಈ ಅಧಿಕರಣದ ಆರಂಭಣೀಯತ್ವದ ವಿಷಯದಲ್ಲಿ ಮುಂದೆ ತೋರಿಸಿರುವಂತೆ ಅಭ್ಯಂಧಿಕಾಶಂಕೆಯು ಪ್ರಾಪ್ತವಾಗುತ್ತದೆ. ಹೇಗೆಂದರೆ ಪ್ರತ್ಯಕ್ಷಾದಿ ಪ್ರಮಾಣಗಳಿಂದ ಸಿಂಹನಿಗೂ ದೇವದತ್ತನಿಗೂ ಭೇದದ ನಿರ್ಣಯವಿದ್ದವನಿಗೆ 'ಸಿಂಹೋ ದೇವದತ್ತಃ' ಎಂಬ ವಾಕ್ಯವನ್ನು ಶ್ರವಣ ಮಾಡಿದಾಗ, ಸಿಂಹನಿಗೂ ದೇವದತ್ತನಿಗೂ ಐಕ್ಯವೆಂಬ ಪರಿಜ್ಞಾನವಾಗುವುದಿಲ್ಲ. ಅದು ಗೌಣಾರ್ಥದಲ್ಲಿಯೇ ತಿಳಿಯಲ್ಪಡುತ್ತದೆ. ಇದು ಹೇಗೋ ಹಾಗೆಯೇ 'ಅಥಾತೋ ಬ್ರಹ್ಮಜಿಜ್ಞಾಸಾ' ಎಂಬ ಸೂತ್ರದಿಂದ ಆರಂಭಿಸಿ 'ವ್ಯತಿರೇಕೋ ಗಂಧವತ್' ಇತ್ಯಂತವಾದ ಸೂತ್ರಗಳಿಂದ, ಜೀವ ಪರಮಾತ್ಮರಲ್ಲಿನ ಭೇದವು ಪ್ರತ್ಯಕ್ಷಾದಿ ಪ್ರಮಾಣಗಳ ಬಲದಿಂದ ದೃಢವಾಗಿ ನಿಶ್ಚಿತವಾದುದುರಿಂದ, 'ತತ್ವಮಸಿ' ಇತ್ಯಾದಿ ನೂರಾರು ಅಭೇದ ಪ್ರತಿಪಾದಕ ಶ್ರುತಿಗಳಿಂದಲೂ ಅಭೇದ ಜ್ಞಾನವು ಹುಟ್ಟುವುದಿಲ್ಲ. ಬದಲಾಗಿ ಈ ಶ್ರುತಿಗಳು ಗೌಣಾರ್ಥವುಳ್ಳದ್ದೆಂದೇ ಅವನಿಗೆ ನಿಶ್ಚಯವಾಗುತ್ತದೆ. ಆದ್ದರಿಂದ ಪೂರ್ವಪಕ್ಷಪ್ರಾಪಕ ಯುಕ್ತಿಗಳಿಲ್ಲದುದರಿಂದ ಈ ಅಧಿಕರಣವು ಆರಂಭಣೀಯವಲ್ಲ ಎಂಬ ಆಶಂಕೆಯು ಬರುವುದರಿಂದ, ಅಭ್ಯಧಿಕ ಆಶಂಕೆಯನ್ನು ತೋರಿಸುತ್ತ ಪೂರ್ವಪಕ್ಷವನ್ನು 'ಏವಂ ಸ್ಥಿತೇಪಿ' ಇತ್ಯಾದಿ ವಾಕ್ಯದಿಂದ ಅನುವಾದ ಮಾಡುತ್ತಾರೆ –

**ಏವಂ ಸ್ಥಿತೇಽಪಿ ಜೀವೈಕ್ಯಂ ಕೇಚಿದಾಹುಃ ಪರಾತ್ಮನಾ ।**

**ತದ್ಯೋಽಹಮಿತಿ ಪೂರ್ವಾಭಿಃ ಶ್ರುತಿಭಿಶ್ಚಾನುಮಾಬಲಾತ್ ॥೨೮॥**

ಹಿಂದೆ ಹೇಳಿದ ನ್ಯಾಯದಿಂದ ಜೀವ ಈಶ್ವರರಲ್ಲಿ ಭೇದವು ನಿಶ್ಚಿತವಿದ್ದರೂ, ಕೆಲವರು 'ತದ್ಯೋಽಹಂ' ಇತ್ಯಾದಿ ಶ್ರುತಿಸ್ಮೃತಿಗಳಿಂದಲೂ, ಅನುಮಾನದ ಬಲದಿಂದಲೂ ಪರಮಾತ್ಮನಿಗೆ ಜೀವರೊಂದಿಗೆ ಐಕ್ಯವನ್ನು ಹೇಳುತ್ತಾರೆ.

**ನ ತದ್ಯುಕ್ತಂ ಯತೋ ವಿಷ್ಣುಃ ಪೃಥಗೇವಾಭಿಧೀಯತೇ ।**

**ಪ್ರಜ್ಞಾನೇತ್ರೋಽಲೋಕ ಇತಿ ಮುಕ್ತೌ ಭೇದೋಽಭಿಧೀಯತೇ ॥೨೯॥**

ಅದು ಯುಕ್ತವಲ್ಲ. ಏಕೆಂದರೆ 'ಭಿನ್ನೋಽಚಿಂತ್ಯಃ ಪರಮೋ ಜೀವಸಂಘಾತ್' ಮುಂತಾದ ಶ್ರುತಿಗಳಿಂದ ವಿಷ್ಣುವು ಜೀವಸಮುದಾಯದಿಂದ ಭಿನ್ನನೇ ಎಂಬುದಾಗಿ ಹೇಳಲ್ಪಡುತ್ತಾನೆ. 'ಪ್ರಜ್ಞಾನೇತ್ರೋಽಲೋಕಃ' ಎಂಬ ಶ್ರುತಿವಾಕ್ಯವು 'ಮುಕ್ತನಿಗೂ

ಬ್ರಹ್ಮನೇ ಪ್ರೇರಕನು' ಎಂಬುದಾಗಿ ಮುಕ್ತಿಯಲ್ಲಿಯೂ ಜೀವನಿಗೆ ಬ್ರಹ್ಮನಿಂದ ಭೇದವನ್ನು ಹೇಳುತ್ತದೆ.

ಹಾಗಾದರೆ ಮುಕ್ತಿಯಲ್ಲಿ ಜೀವ-ಬ್ರಹ್ಮರಿಗೆ ಅಭೇದವನ್ನು ಪ್ರತಿಪಾದಿಸುವ ಅನೇಕ ಶ್ರುತಿಸ್ಮೃತಿಗಳು ಇರುತ್ತವೆ. ಆದ್ದರಿಂದ ಒಂದೇ ಆದ ಈ ಶ್ರುತಿಯ ವಾಕ್ಯದಿಂದ ಮುಕ್ತಿಯಲ್ಲಿನ ಅಭೇದವನ್ನು ಅಲ್ಲಗಳೆಯುವುದು ಯುಕ್ತವಲ್ಲ ಎಂಬ ಆಕ್ಷೇಪವನ್ನು ಪರಿಹರಿಸಲು ಮತ್ತು ಭೇದವನ್ನು ಸಮರ್ಥಿಸಲು 'ಏತಂ' ಇತ್ಯಾದಿ ಅನೇಕ ಶ್ರುತಿಸ್ಮೃತಿಗಳನ್ನು ಉದಾಹರಿಸುತ್ತಾರೆ –

**ಏತಮಾನಂದಮಿತ್ಯನ್ಯಾ ಪರಮಂ ಸಾಮ್ಯಮಿತ್ಯಪಿ ।**

'ಏತಮಾನಂದಮಯಮಾತ್ಮಾನಮುಪಸಂಕ್ರಮ್ಯ' (ಈ ಪೂರ್ಣಾನಂದನಾದ ಪರಮಾತ್ಮನನ್ನು ಸಮೀಪದಿಂದ ಹೊಂದಿ) ಎಂಬ ಬೇರೊಂದು ಶ್ರುತಿಯು ಮುಕ್ತನಿಗೆ ಪರಮಾತ್ಮನಿಂದ ಭೇದವನ್ನು ಹೇಳುತ್ತದೆ. 'ತದಾ ವಿದ್ವಾನ್ ಪುಣ್ಯಪಾಪೇ ವಿಧೂಯ ನಿರಂಜನಃ ಪರಮಂ ಸಾಮ್ಯಮುಪೈತಿ' (ಅಪರೋಕ್ಷಜ್ಞಾನಿಯು ಎಲ್ಲ ಪುಣ್ಯಪಾಪಗಳನ್ನು ಕಳೆದುಕೊಂಡು ದೋಷರಹಿತನಾಗಿ ಪರಮಾತ್ಮನೊಂದಿಗೆ ಸಾಮ್ಯವನ್ನು ಹೊಂದುತ್ತಾನೆ) ಎಂಬ ಶ್ರುತಿಯು ಮುಕ್ತನಿಗೆ ಪರಮಾತ್ಮನೊಂದಿಗೆ ಸಾಮ್ಯವನ್ನು ಹೇಳುತ್ತದೆ. ಭೇದವಿದ್ದರೆ ಮಾತ್ರ ಸಾಮ್ಯವು ಕೂಡುತ್ತದೆ.

**ಇದಂ ಜ್ಞಾನಮುಪಾಶ್ರಿತ್ಯ ಮಮ ಸಾಧರ್ಮ್ಯಮಾಗತಾಃ ।।೩೦।।**

**ಸರ್ಗೇಽಪಿ ನೋಪಜಾಯಂತೇ ಪ್ರಲಯೇ ನ ವ್ಯಥಂತಿ ಚ ।**

'ಈ ಜ್ಞಾನವನ್ನು ಆಶ್ರಯಿಸಿ ನನ್ನ ಸಾಧರ್ಮ್ಯವನ್ನು ಹೊಂದುತ್ತಾರೆ. ಸೃಷ್ಟಿಕಾಲದಲ್ಲಿ ಜನಿಸುವುದಿಲ್ಲ. ಪ್ರಲಯದಲ್ಲಿ ವ್ಯಥೆ ಹೊಂದುವುದಿಲ್ಲ' ಎಂಬ ಗೀತಾ ವಾಕ್ಯದಿಂದಲೂ ಭೇದವು ತಿಳಿದುಬರುತ್ತದೆ.

**ಉಪಸಂಪದ್ಯತೇ ಜ್ಯೋತಿಃ ಸ್ವರೂಪೇಣಾಭಿಪದ್ಯತೇ ।।೩೧।।**

**ತತ್ರ ಪರ್ಯೇತಿ ಜಕ್ಷಂಶ್ಚ ಕ್ರೀಡನ್ನಪಿ ಸದಾ ಸುಖೀ ।**

'ಪರಂಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ ಸ ತತ್ರ ಪರ್ಯೇತಿ ಜಕ್ಷನ್ ಕ್ರೀಡನ್ ರಮಮಾಣಃ' ಎಂಬ ಶ್ರುತಿಯು 'ಮುಕ್ತನು ಪರಂಜ್ಯೋತಿಯಾದ ಆ ಹರಿಯನ್ನು ಹೊಂದಿ ತನ್ನ ಚಿದಾನಂದಾತ್ಮಕಸ್ವರೂಪದಿಂದ ಅಭಿವ್ಯಕ್ತನಾಗುತ್ತಾನೆ. ಹಾಗೂ ಮುಕ್ತಿಯಲ್ಲಿ ಭಕ್ಷಿಸುತ್ತ ಕ್ರೀಡಿಸುತ್ತ ಸರ್ವದಾ ಸುಖಿಯಾಗಿರುತ್ತಾನೆ' ಎಂದು ಹೇಳುವುದರ ಮೂಲಕ ಮುಕ್ತಿಯಲ್ಲಿಯೂ ಭೇದವನ್ನೇ ಸಮರ್ಥಿಸುತ್ತದೆ.

**ಆಚಕ್ಷ್ವ ಮೇ ಪರಂ ಮೋಕ್ಷಂ ಧೀರಾ ಯಂ ಪ್ರವದಂತಿ ತಮ್ ।।೩೨।।**

**ಇತ್ಯುಕ್ತ ಆಹ ವಾಗ್ದೇವೀ ಪರಂ ಮೋಕ್ಷಂ ಪ್ರಜಾಪತೇಃ ।**

ಜ್ಞಾನಿಗಳು ಯಾವುದನ್ನು ಹೇಳುತ್ತಾರೋ ಅಂಥಹ ಪರಮ ಮೋಕ್ಷವನ್ನು ನನಗೆ ಹೇಳು ಎಂಬುದಾಗಿ ಪ್ರಜಾಪತಿಯು ಪ್ರಾರ್ಥಿಸಿದಾಗ ಲಕ್ಷ್ಮೀದೇವಿಯು ಆ ಪ್ರಜಾಪತಿಗೆ 'ಶಾಖಾಂ ಶಾಖಾಂ' ಇತ್ಯಾದಿಯಾಗಿ ಪರಮಮೋಕ್ಷದ ಸ್ವರೂಪವನ್ನು ಹೇಳಿದಳು ಎಂದು ಮಹಾಭಾರತದಲ್ಲಿ ಹೇಳಲ್ಪಟ್ಟ ಸಂಗತಿಯನ್ನು ಸಂಗ್ರಹಿಸುತ್ತಾರೆ.

**ಶಾಖಾಂ ಶಾಖಾಂ ಮಹಾನದ್ಯಃ ಸಂಯಾಂತಿ ಪರಿತಃ ಸ್ರವಾಃ ॥೩೩॥**

**ಧಾನಾಪೂಪಾ ಮಾಂಸಕಾಮಾಃ ಸದಾ ಪಾಯಸಕರ್ದಮಾಃ ।**

ಆ ಭಗವಲ್ಲೋಕದ ಮಧ್ಯೆ ವೇತಸವೆಂಬ ಹೆಸರಿನ ಜಂಬೂವೃಕ್ಷವು ಪುಣ್ಯಗಂಧವುಳ್ಳದ್ದು ವಿಮಲವಾದುದು ಪ್ರಕಾಶಿಸುತ್ತದೆ. ಇಂಥಹ ವೃಕ್ಷದ ಪ್ರತಿಯೊಂದು ಶಾಖೆಯನ್ನೂ ಆಶ್ರಯಿಸಿ ಧಾನ್ಯ ವಿಶೇಷದ ಅಪೂಪಗಳುಳ್ಳ, ಕಾಮ್ಯಮಾನ ಮಾಂಸವುಳ್ಳ, ಕರ್ದಮಸ್ಥಾನೀಯ ಪಾಯಸವುಳ್ಳ ಸುತ್ತಮುತ್ತಲೂ ಸುರಿಸತಕ್ಕ ಮಹಾನದಿಗಳು ಹರಿಯುತ್ತವೆ.

**ಯಸ್ಮಿನ್ನಗ್ನಿಮುಖಾ ದೇವಾಃ ಸೇಂದ್ರಾಃ ಸಹಮರುದ್ಗಣಾಃ ॥೩೪॥**

**ಈಜಿರೇ ಋತುಭಿಃ ಶ್ರೇಷ್ಠೈಸ್ತದಕ್ಷರಮುಪಾಸತೇ ।**

ಯಾವ ಲೋಕದಲ್ಲಿ ಇಂದ್ರ ಹಾಗೂ ಮರುದ್ಗಣರಿಂದ ಕೂಡಿದ ಅಗ್ನಿ ಮುಂತಾದ ದೇವತೆಗಳು ಶ್ರೇಷ್ಠವಾದ ಯಾಗಗಳಿಂದ ಯಜ್ಞಮಾಡಿದರೋ, ಅದೇ ಅಕ್ಷರನಾದ ಪರಬ್ರಹ್ಮನ ಸ್ಥಾನ. ಅಲ್ಲಿ ಆ ದೇವತೆಗಳು ಪರಬ್ರಹ್ಮನನ್ನು ಉಪಾಸನೆ ಮಾಡುತ್ತಾರೆ.

**ಪ್ರವಿಶಂತಿ ಪರಂ ದೇವಂ ಮುಕ್ತಾಸ್ತತ್ರೈವ ಭೋಗಿನಃ ॥೩೫॥**

**ನಿರ್ಗಚ್ಛಂತಿ ಯಥಾಕಾಮಂ ಪರೇಶೇನೈವ ಚೋದಿತಾಃ ।**

ಮುಕ್ತರು ಪರಮೇಶ್ವರನ ಅಂತರದಲ್ಲಿಯೇ ಭೋಗವುಳ್ಳವರಾಗಿ ಅವನನ್ನೇ ಪ್ರವೇಶಿಸುತ್ತಾರೆ. ಆ ಪರಮೇಶ್ವರನಿಂದಲೇ ಪ್ರೇರಿತರಾಗಿ ಇಚ್ಛಾನುಸಾರವಾಗಿ ಹೊರಗೆ ಬರುತ್ತಾರೆ. ಇಲ್ಲಿಯೂ ಭೇದವೇ ಉಕ್ತವಾಗಿದೆ.

**ಭೇದದೃಷ್ಟ್ಯಾಭಿಮಾನೇನ ನಿಃಸಂಗೇನಾಪಿ ಕರ್ಮಣಾ ॥೩೬॥**

**ಕರ್ತೃತ್ವಾತ್ಸಗುಣಂ ಬ್ರಹ್ಮ ಪುರುಷಂ ಪುರುಷರ್ಷಭಮ್ ।**

**ಸ ಸಂಗತ್ಯ ಪುನಃಕಾಲೇ ಕಾಲೇನೇಶ್ವರಮೂರ್ತಿನಾ ॥೩೭॥**

**ಜಾತೇ ಗುಣವ್ಯತಿಕರೇ ಯಥಾಪೂರ್ವಂ ಪ್ರಜಾಯತೇ ।**

'ಭೇದದೃಷ್ಟ್ಯಾಭಿಮಾನೇನ' ಇತ್ಯಾದಿ ವಚನವು ಭಾಗವತ ವಾಕ್ಯದ ಸಂಗ್ರಹವು. ಇದರ ಅರ್ಥ ಹೀಗಿದೆ. ಚತುರ್ಮುಖ ಬ್ರಹ್ಮನು ಜೀವೇಶ್ವರಾದಿ ಭೇದಜ್ಞಾನದಿಂದ, ಭಕ್ತಿಯಿಂದಲೂ, ನಿವೃತ್ತಕರ್ಮದಿಂದಲೂ ಹಾಗೂ ಜಗತ್ಕರ್ತೃವಾದುದರಿಂದಲೂ ಸಗುಣನಾದ ಪರಮಪುರುಷನೂ ಸರ್ವೋತ್ಕೃಷ್ಟನೂ ಆದ ಶ್ರೀಹರಿಯನ್ನು ಮುಕ್ತನಾಗಿ ಪ್ರವೇಶಿಸಿ, ಕಾಲನಾಮಕ ಪರಮೇಶ್ವರಮೂರ್ತಿಯಿಂದ ಸೃಷ್ಟಿಕಾಲವು ಪುನಃ ಪ್ರಾಪ್ತವಾಗಲು, ಗುಣವಿಕಾರವಿಲ್ಲದ ವಿಷ್ಣುಲೋಕದಲ್ಲಿ ಹಿಂದಿನಂತೆಯೇ ಮುಕ್ತಾಧಿಪತಿಯಾಗುತ್ತಾನೆ. ಇಲ್ಲಿಯೂ ಭೇದವು ಸ್ಪಷ್ಟವಾಗಿಯೇ ಹೇಳಿದೆ.

**ಋಚಾಂ ತ್ವಃ ಪೋಷಮಾಸ್ತೇ ಚ ಪರೇಣ ಪ್ರೇರಿತಾಃ ಸದಾ ॥೩೮॥**

**ಯತ್ಕಾಮಸ್ತತ್ಸೃಜತ್ಯದ್ಧ್ಯೈವಾತ್ಮನಾ ತತ್ಸೃಜತ್ಯಪಿ ।**

**ಸಹೈವ ಬ್ರಹ್ಮಣಾ ಕಾಮಾನ್ ಭುಂಕ್ತೇ ನಿಸ್ತೀರ್ಣತದ್ಗುಣಃ ॥೩೯॥**

'ಋಚಾಂ ತ್ವಃ ಪೋಷಮಾಸ್ತೇ' ಎಂಬ ವಚನದಿಂದ 'ಋಚಾಂ ತ್ವಃ ಪೋಷಮಾಸ್ತೇ ಪುಪುಷ್ವಾನ್ ಗಾಯತ್ರಂ ತ್ವೋ ಗಾಯತಿ ಶಕ್ವರೀಷು। ಬ್ರಹ್ಮ ತ್ವೋ ವದತಿ ಜಾತವಿದ್ಯಾಂ ಯಜ್ಞಸ್ಯ ಮಾತ್ರಾಂ ವಿಮಮೀತ ಉತ್ವ॥' ಎಂಬ ಮಂತ್ರವನ್ನು ಉದಾಹರಿಸುತ್ತಾರೆ. ಈ ಮಂತ್ರದ ಅರ್ಥ ಹೀಗಿದೆ "ಮುಕ್ತಿಸ್ಥಾನದಲ್ಲಿ ಒಬ್ಬ ಬ್ರಹ್ಮನು ಋಕ್ಕುಗಳನ್ನು ಪೋಷಣ ಮಾಡುತ್ತ ಇರುತ್ತಾನೆ. ಇನ್ನೊಬ್ಬ ಬ್ರಹ್ಮನು ಶಕ್ವರೀಛಂದಸ್ಸಿನ ಋಕ್ಕುಗಳಲ್ಲಿ ಆರೂಢವಾದ ಗಾಯತ್ರ ಸಾಮವನ್ನು ಗಾನ ಮಾಡುತ್ತಾನೆ. ಮತ್ತೊಬ್ಬ ಬ್ರಹ್ಮನು ಪೌರುಷೇಯ ವಿದ್ಯೆಯನ್ನು ಹೇಳುತ್ತಿರುತ್ತಾನೆ. ಇನ್ನೊಬ್ಬ ಬ್ರಹ್ಮನು ವಿಷ್ಣುವಿನ ಅಂಶರೂಪವನ್ನೇ ಧ್ಯಾನ ಮಾಡುತ್ತಾನೆ." ಹೀಗೆ ಅನೇಕ ಬ್ರಹ್ಮರುಗಳ ಬಗ್ಗೆ ಶ್ರುತಿಯಿರುವುದರಿಂದ ಇಲ್ಲಿಯೂ ಭೇದವು ಸ್ಪಷ್ಟವಾಗಿಯೇ ತೋರುತ್ತದೆ.

'ಪರೇಣ ಪ್ರೇರಿತಾಃ ಸದಾ' (ಪರಮಾತ್ಮನಿಂದ ಸದಾ ಪ್ರೇರಿತರಾಗುತ್ತಾರೆ) ಎಂಬ ವಾಕ್ಯದಿಂದ, "ಸ ವಾ ಏಷ ಬ್ರಹ್ಮನಿಷ್ಠ ಇದಂ ಶರೀರಂ ಮರ್ತ್ಯಮತಿಸೃಜ್ಯ ಬ್ರಹ್ಮಾಭಿಸಂಪದ್ಯ ಬ್ರಹ್ಮಣಾ ಪಶ್ಯತಿ" (ಬ್ರಹ್ಮನಿಷ್ಠನಾದ ಉಪಾಸಕನು ಈ ಮರ್ತ್ಯಶರೀರವನ್ನು ತ್ಯಜಿಸಿ ಬ್ರಹ್ಮನನ್ನು ಅಂದರೆ ವಿಷ್ಣುವನ್ನು ಹೊಂದಿ ಅವನೊಡನೆ ನೋಡುತ್ತಾನೆ), "ಯಥೇಷ್ಟಂ ಪರಿವರ್ತಂತೇ ತಸ್ಯೈವಾನುಗ್ರಹೇರಿತಾಃ" (ಅವನ ಅನುಗ್ರಹದಿಂದ ಪ್ರೇರಿತರಾಗಿ ಯಥೇಷ್ಟವಾಗಿ ಸಂಚರಿಸುತ್ತಾರೆ) ಮುಂತಾದ ಶ್ರುತಿಗಳು ಉಲ್ಲೇಖಿಸಲ್ಪಟ್ಟಿವೆ.

'ಯತ್ಕಾಮ' ಎಂಬ ವಾಕ್ಯದಿಂದ "ನ ಹಾಸ್ಯ ಕರ್ಮ ಕ್ಷೀಯತೇಽಸ್ಮಾದ್ಧ್ಯೇವಾ ತ್ಮನೋ ಯದ್ಯತ್ಕಾಮಯತೇ ತತ್ತತ್ಸೃಜತೇ" ಎಂಬ ಶ್ರುತಿಯನ್ನು ಸಂಗ್ರಹಿಸಿದ್ದಾರೆ.

"ಈ ಮುಕ್ತನ ಕರ್ಮವು ಕ್ಷಯಹೊಂದುವುದಿಲ್ಲ. ಅವನು ಯಾವ ಯಾವುದನ್ನು ಅಪೇಕ್ಷಿಸುತ್ತಾನೋ ಆಯಾಯ ವಸ್ತುವನ್ನೂ ಕರ್ಮವನ್ನೂ ಆ ಪರಬ್ರಹ್ಮನ ಅನುಗ್ರಹದ ಮೂಲಕವೇ ಸೃಜಿಸುತ್ತಾನೆ" ಎಂಬುದು ಈ ಶ್ರುತಿಯ ಅರ್ಥ.

'ಸಹೈವ' ಎಂಬೀ ವಾಕ್ಯದಿಂದ "ಸೋಽಶ್ನುತೇ ಸರ್ವಾನ್ ಕಾಮಾನ್ ಸಹ ಬ್ರಹ್ಮಣಾ ವಿಪಶ್ಚಿತಾ" ಎಂಬ ಶ್ರುತಿಯನ್ನು ಸಂಗ್ರಹಿಸಿದ್ದಾರೆ. "ಆ ಮುಕ್ತನು ಬ್ರಹ್ಮನ ಸಹಿತನಾಗಿಯೇ ಸರ್ವಕಾಮಗಳನ್ನೂ ಬ್ರಹ್ಮನ ಅನುಗ್ರಹದಿಂದಲೇ ಭುಂಜಿಸುತ್ತಾನೆ" ಎಂದು ಈ ಶ್ರುತಿಯ ಅರ್ಥ.

'ನಿಸ್ತೀರ್ಣ ತದ್ಗುಣಃ' ಎಂಬುದರಿಂದ "ನಿಸ್ತೀರ್ಣೋಽಹಿ ತದಾ ಸರ್ವಾನ್ ಶೋಕಾನ್ ಹೃದಯಸ್ಯ ಭವತಿ" (ಆಗ ಸಕಲ ಶೋಕಗಳನ್ನು ದಾಟಿದವನಾಗಿ ಅಂದರೆ ಮುಕ್ತನಾಗಿ ಹೃದಯನಾಮಕನಾದ ಪರಬ್ರಹ್ಮನ ದಾಸನಾಗುತ್ತಾನೆ) ಎಂಬ ಶ್ರುತಿಯನ್ನು ಸಂಗ್ರಹಿಸಲಾಗಿದೆ. 'ತದ್ಗುಣಃ' ಎಂದರೆ ಹೃದಯದ ಗುಣಗಳಾದ ದುಃಖ ಮುಂತಾದವುಗಳು.

**ದುಃಖಾದೀಂಶ್ಚ ಪರಿತಜ್ಯ ಜಗದ್ವ್ಯಾಪಾರವರ್ಜಿತಃ ।**

**ಭುಂಕ್ತೇ ಭೋಗಾನ್ಸದೈವೋಚ್ಚಾನಿತ್ಯಾದ್ಯಾಗಮಮಾನತಃ ॥೪೦॥**

**ಮುಕ್ತಸ್ಯ ಭೇದಾವಗತೇಃ ಕಥಮೇವ ಹ್ಯಭಿನ್ನತಾ ।**

'ದುಃಖಾದೀಂಶ್ಚ ಪರಿತ್ಯಜ್ಯ' ಎನ್ನುವ ವಚನದಿಂದ "ಜ್ಯೋತಿರ್ಮಯೇಷು ದೇಹೇಷು ಸ್ವೇಚ್ಛಯಾ ವಿಶ್ವಮೋಕ್ಷಿಣಃ। ಭುಂಜತೇ ಸುಸುಖಾನ್ಯೇವ ನ ದುಃಖಾದೀನ್ ಕದಾಚನ॥" (ಮುಕ್ತರು ಜ್ಯೋತಿರ್ಮಯ ದೇಹಗಳಲ್ಲಿ ಸ್ವೇಚ್ಛೆಯಿಂದ ಸುಖಗಳನ್ನೇ ಭೋಗಿಸುತ್ತಾರೆ, ದುಃಖಾದಿಗಳನ್ನು ಎಂದಿಗೂ ಭೋಗಿಸುವುದಿಲ್ಲ) ಎಂಬ ಬ್ರಹ್ಮವೈವರ್ತಪುರಾಣದ ವಾಕ್ಯವು ಸಂಗ್ರಹಿಸಲ್ಪಟ್ಟಿದೆ.

ಸ್ವಾಧಿಕ ಆನಂದದ ಪ್ರಾಪ್ತಿಯ ಬಗ್ಗೆಯೂ ಸೃಷ್ಟ್ಯಾದಿ ವ್ಯಾಪಾರದಲ್ಲಿಯೂ ಮುಕ್ತರಿಗೆ ಕಾಮನೆಯು ಇರುವುದೇ ಇಲ್ಲ. ಯಾವಾಗಲೂ ಉತ್ತಮವಾದ ಭೋಗಗಳನ್ನೇ ಅನುಭವಿಸುತ್ತಾರೆ. ಇವೇ ಮುಂತಾದ ಆಗಮ ಪ್ರಮಾಣಗಳಿಂದ ಮುಕ್ತನಿಗೆ ಈಶನಿಂದ ಭೇದವು ತಿಳಿದುಬರುತ್ತಿರಲು, ಜೀವೇಶ್ವರರಲ್ಲಿ ಅಭೇದವು ಹೇಗೆ ತಾನೆ ಸಾಧ್ಯ?

**ಜೀವೇಶಯೋಃ ನಾನುಮಾ ಚ ತದಭೇದಂ ಪ್ರಮಾಪಯೇತ್ ॥೪೧॥**

**ಮಿಥ್ಯೈವ ಭೇದೋ ವಿಮತೋ ಭೇದತ್ವಾಚ್ಚಂದ್ರಭೇದವತ್ ।**

**ಇತಿ ಚೇತ್ಸಾಧ್ಯಧರ್ಮೋಽಯಂ ಸನ್ನಸನ್ವಾ ನ ವೋಭಯಮ್ ॥೪೨॥**

ಅನುಮಾನವೂ ಜೀವೇಶ್ವರರ ಅಭೇದವನ್ನು ಯಥಾರ್ಥವಾಗಿ ತಿಳಿಸಲಾರದು. ಜೀವಬ್ರಹ್ಮರ ಭೇದವು ಮಿಥ್ಯೆಯು ಚಂದ್ರಭೇದದಂತೆ ಎಂದು ಹೇಳಿದರೆ, ಸಾಧ್ಯ ಧರ್ಮವಾದ ಈ ಭೇದಮಿಥ್ಯಾತ್ವವು ಸತ್ಯವೋ? ಅಸತ್ಯವೋ? ಅಥವಾ ಸದಸದ್ವಿಲಕ್ಷಣವೋ?

**ಯದಿ ಸನ್ನಪಸಿದ್ಧಾಂತಃ ಸ ಏವಾಸನ್ನಿತೀರಿತೇ ।**

**ನೋಭಯಂ ಚೇನ್ನ ಸಿದ್ಧಂ ತತ್ ಇತಿ ಮಾನಸ್ಯ ದೂಷಣಮ್ ॥೪೩॥**

ಸತ್ಯವೆಂಬ ಪಕ್ಷದಲ್ಲಿ ಅಪಸಿದ್ಧಾಂತವು. ಅಸತ್ಯವೆಂದು ಹೇಳಿದರೂ ಅದೇ ಅಪಸಿದ್ಧಾಂತವೇ. ಸತ್ಯವೂ ಅಲ್ಲ ಅಸತ್ಯವೂ ಅಲ್ಲ, ಸದಸದ್ವಿಲಕ್ಷಣ ಎಂಬ ಪಕ್ಷದಲ್ಲಿ ಆ ಸದಸದ್ವಿಲಕ್ಷಣವೆಂಬುದು ಸಿದ್ಧವೇ ಆಗಿಲ್ಲ. ಹೀಗೆ ಮಿಥ್ಯಾ ಶಬ್ದಾರ್ಥವನ್ನು ವಿಕಲ್ಪಿಸಿ ದೂಷಣವನ್ನು ಹೇಳತಕ್ಕದ್ದು.

ಹಾಗಾದರೆ 'ನ ಸಿದ್ಧಂ ತತ್' ಎಂದು ಹೇಳಿದ್ದು ಅಯುಕ್ತವು. ಏಕೆಂದರೆ ಪಕ್ಷೀಕರಿಸಲ್ಪಟ್ಟ ಭೇದದಲ್ಲಿಯೋ ಪ್ರಪಂಚದಲ್ಲಿಯೋ ಇಲ್ಲವೇ ಅವಿದ್ಯೆಯಲ್ಲಿಯೋ ಅಥವಾ ಶುಕ್ತಿರಜತಾದಿಗಳಲ್ಲಿಯೋ ಅನಿರ್ವಚನೀಯತ್ವವನ್ನು ಪ್ರಮಾಣದಿಂದ ಸಾಧನ ಮಾಡುವುದು ಶಕ್ಯವಾಗುವುದು ಎಂದು ಆಶಂಕಿಸಿದರೆ, ಅದನ್ನು 'ನ ಚ' ಇತ್ಯಾದಿ ವಚನದಿಂದ ಪರಿಹರಿಸುತ್ತಾರೆ –

**ನ ಚ ಮಾನಾಂತರೇಣೈತಚ್ಛಕ್ಯಂ ಸಾಧಯಿತುಂ ಕ್ವಚಿತ್ ।**

**ಅನುಮಾನ್ಯೈವ ಚೇತ್ಸ್ಯೈವ ಹ್ಯನವಸ್ಥಾ ಭವಿಷ್ಯತಿ ॥೪೪॥**

ಬೇರೆ ಪ್ರಮಾಣದಿಂದ ಈ ಅನಿರ್ವಚನೀಯತ್ವವನ್ನು ಎಲ್ಲಿಯೂ ಸಾಧಿಸುವುದು ಶಕ್ಯವಲ್ಲ. ಅನುಮಾನದಿಂದ ಸಾಧಿಸುವುದಾದರೆ ಅದೇ ಅನವಸ್ಥೆಯು ಆಗುವುದು.

**ನ ಚಾಗಮಸ್ತದರ್ಥೋಽಸ್ತಿ ನಾಸದಾಸೀನ್ನ ತದ್ವದೇತ್ ।**

**ಪರಿಶೇಷಾದನಿರ್ವಾಚ್ಯಂ ಯದಿ ಸಿದ್ಧ್ಯೇತ್ಪರಾತ್ಮನಃ ॥೪೫॥**

**ಅನಿರ್ವಾಚ್ಯತ್ವಮೇವ ಸ್ಯಾತ್ಪರಿಶಿಷ್ಟೋ ಹ್ಯಸೌ ಸದಾ ।**

ಅನಿರ್ವಾಚ್ಯಾರ್ಥಕವಾದ ಆಗಮವೂ ಇರುವುದಿಲ್ಲ. 'ನಾಸದಾಸೀತ್' ಇತ್ಯಾದಿ ಆಗಮವು ಅದನ್ನು ಹೇಳುವುದಿಲ್ಲ. ಪರಿಶೇಷದಿಂದ ಅನಿರ್ವಾಚ್ಯವು ಸಿದ್ಧಿಸುವುದು ಎಂದು ಹೇಳಿದರೆ, ಪರಮಾತ್ಮನಿಗೇ ಅನಿರ್ವಾಚ್ಯವು ಬರುತ್ತದೆ. ಏಕೆಂದರೆ ಪ್ರಲಯದಲ್ಲಿ ಅವನು ಅವಶಿಷ್ಟನಾಗಿರುತ್ತಾನೆ.

**ನ ಚಾನ್ಯ ಆಗಮಸ್ತತ್ರ ಸದಸತ್ಪ್ರತಿಯೋಗಿನಿ ॥೪೬॥**

**ನ ಚ ಪ್ರತ್ಯಕ್ಷಮತ್ರಾಸ್ತಿ ನ ಚಾರ್ಥಾಪತ್ತಿರಿಷ್ಯತೇ ।**

ಸತ್ಯ ಅಸತ್ಯ ಪ್ರತಿಯೋಗಿಯುಳ್ಳ ಅನಿರ್ವಾಚ್ಯತ್ವದ ಬಗ್ಗೆ ಬೇರೆ ಆಗಮ ಪ್ರಮಾಣವೂ ಇಲ್ಲ. ಈ ವಿಷಯದಲ್ಲಿ ಪ್ರತ್ಯಕ್ಷವೂ ಪ್ರಮಾಣವಾಗುವುದಿಲ್ಲ. ಹಾಗೂ ಅರ್ಥಾಪತ್ತಿಯು ಅನುಮಾನದಿಂದ ಬೇರೆಯಾದ ಪ್ರಮಾಣವೆಂದು ಅಂಗೀಕೃತವಲ್ಲ.

**ಬಾಧಾಯೋಗಾತ್ಸತ ಇತಿ ಬಾಧಾಭಾವತ ಏವ ಹಿ ॥೪೭॥**

**ಇಷ್ಟಾಪತ್ತಿರ್ನ ಹಿ ಭ್ರಾಂತಾವಪಿ ಬಾಧೋವಗಮ್ಯತೇ ।**

**ವಿಷಯಸ್ಯ ಕುತೋ ಬಾಧೋ ವಿದ್ಯಮಾನಂ ಹಿ ಬಾಧ್ಯತೇ ॥೪೮॥**

**ನ ಹಿ ವಂಧ್ಯಾಸುತೋ ಬಾಧ್ಯೋ ಯಜ್ಞದತ್ತೋ ಹಿ ಬಾಧ್ಯತೇ ।**

ಸತ್ಯಕ್ಕೆ ಬಾಧವಿಲ್ಲವಾದ್ದರಿಂದ ಇತ್ಯಾದಿಯಾಗಿ ಹೇಳಿದ ಅರ್ಥಾಪತ್ತಿಯು ಅನಿರ್ವಾಚ್ಯವನ್ನು ತಿಳಿಸಲು ಶಕ್ತವಲ್ಲ. ಏಕೆಂದರೆ ವಿಯದಾದಿ ಪ್ರಪಂಚಕ್ಕೆ ಬಾಧವು ಸಂಭವಿಸದು. ಆದ್ದರಿಂದಲೇ ಸತ್ಯಕ್ಕೆ ಬಾಧವಿಲ್ಲದಾಗಲೆಂಬುದು ಇಷ್ಟಾಪತ್ತಿಯು. ಭ್ರಾಂತಿಯಲ್ಲಿಯೂ ಬಾಧವು ಯಾವುದರಿಂದ ತಿಳಿಯಲ್ಪಡುವುದು? ಪೂರ್ವದಲ್ಲಿ ಇರುವಂಥಹುದೇ ಬಾಧ ಹೊಂದಲು ಅರ್ಹವು. ಬಂಜೆಯ ಮಗನು ಬಾಧಿಸಲ್ಪಡುವುದಿಲ್ಲ. ಏಕೆಂದರೆ ಅವನು ಇರುವುದೇ ಇಲ್ಲ. ಆದರೆ ಯಜ್ಞದತ್ತನೆಂಬ ಮನುಷ್ಯನು ಬಾಧ್ಯನು.

**ಬಾಧಾಯೋಗಾತ್ಸತ ಇತಿ ವ್ಯಾಪ್ತಿರೇಷಾ ಕ್ವ ದೃಶ್ಯತೇ ॥೪೯॥**

ಸತ್ತಿಗೆ ಬಾಧವು ಕೂಡದಿರುವುದರಿಂದ ಬಾಧ್ಯಮಾನವಾದ ಈ ಜಗತ್ತು ಸತ್ತಲ್ಲ ಎನ್ನುವ ಅನುಮಾನದಲ್ಲಿ 'ಯತ್ಸತ್ತನ್ನ ಬಾಧ್ಯತೇ' (ಯಾವುದು ಸತ್ತೋ ಅದು ಬಾಧಿಸಲ್ಪಡುವುದಿಲ್ಲ) ಎಂಬ ವ್ಯಾಪ್ತಿಯು ಎಲ್ಲಿ ಕಂಡುಬರುತ್ತದೆ?

ಹೀಗೆ ವಿನಾಶರೂಪ ಬಾಧವನ್ನು ಸಿದ್ಧೀಕರಿಸಿ, ಶುಕ್ತಿರಜತಾದಿಗಳಲ್ಲಿಯೂ ವಿಯದಾದಿಗಳಲ್ಲಿಯೂ ಬಾಧಕ್ಕೆ ಅಸಿದ್ಧಿಯನ್ನು ಹೇಳಲಾಯಿತು. ಈಗ ಆ ಅಸಿದ್ಧಿಯನ್ನೇ ವಿವರಿಸಲು ಬಾಧಸ್ವರೂಪವನ್ನು ಕುರಿತು ಪರನನ್ನು ಪ್ರಶ್ನಿಸುತ್ತಾರೆ –

**ಕಶ್ಚಾಯಂ ಬಾಧ ಉದ್ದಿಷ್ಟೋ ನ ಹಿ ನಾಶೋ ಸತೋ ಭವೇತ್ ।**

**ನಿವೃತ್ತಿಶ್ಚಾಪ್ರವೃತ್ತಸ್ಯ ಕಥಮೇವೋಪಪದ್ಯತೇ ॥೫೦॥**

ವಿಯದಾದಿಗಳಿಗೂ ಶುಕ್ತಿರಜತಾದಿಗಳಿಗೂ ಸತ್ವಾಭಾವದ ಸಿದ್ಧಿಗೋಸ್ಕರ ನೀನು ಹೇಳುವ ಈ ಬಾಧವು ಯಾವುದು? ಅದು ಜ್ಞಾನದಿಂದ ನಾಶವೋ, ನಿವೃತ್ತಿಯೋ ಅಥವಾ ಕಾಲತ್ರಯದಲ್ಲಿಯೂ ಸತ್ತಿನ ನಿಷೇಧವೋ? ಅಸತ್ತಿಗೆ ನಾಶವು ಆಗುವುದೇ

ಇಲ್ಲ. ಏಕೆಂದರೆ ಸ್ವರೂಪದ ಇಲ್ಲದಿರುವಿಕೆಯಾಗುವುದೇ ವಿನಾಶ. ಆದರೆ ಅಸತ್ತಿಗೆ ಸ್ವರೂಪವೇ ಇರುವುದಿಲ್ಲ. ಇಲ್ಲದಿರುವುದಕ್ಕೆ ವಿನಾಶವೆಂಬುದರಲ್ಲಿ ಅರ್ಥವೇ ಇಲ್ಲ. ಇನ್ನು ಪ್ರವೃತ್ತಿ ಇರುವುದಕ್ಕೆ ಮಾತ್ರ ನಿವೃತ್ತಿ ಎಂಬುದು ಕೂಡುವುದು. ಪ್ರವೃತ್ತಿಯೇ ಇಲ್ಲದಿರುವ ಅಸತ್ತಿಗೆ ನಿವೃತ್ತಿಯಾದರೂ ಹೇಗೆ ಕೂಡುವುದು?

**ನಾಸೀದಸ್ತಿ ಭವಿಷ್ಯಚ್ಚ ತದಿತಿ ಜ್ಞಾನಮೇಯತಾ ।**

**ಯದಿ ಬಾಧಸ್ತದಾ ಸತ್ತ್ವಂ ತೇನೈವಾಂಗೀಕೃತಂ ಪುನಃ ॥೫೧॥**

ಇಷ್ಟು ಹೊತ್ತಿನವರೆಗೆ ಯಾವುದು ತೋರಿತೋ ಅದು ಈ ಹಿಂದೆ ಇದ್ದಿರಲಿಲ್ಲ, ಈಗ ಇಲ್ಲ, ಮುಂದೆಯೂ ಇರುವುದಿಲ್ಲ ಎಂಬ ತ್ರೈಕಾಲಿಕ ಸತ್ವನಿಷೇಧರೂಪ ಜ್ಞಾನಕ್ಕೆ ವಿಷಯವಾಗುವುದು ಬಾಧವೆಂಬ ಪಕ್ಷದಲ್ಲಿ, ಆಗ ಅಸದ್ವೈಲಕ್ಷಣ್ಯವನ್ನು ಅಂಗೀಕರಿಸುವ ಅವನಿಂದಲೇ ಅಸತ್ಯವು ಪುನಃ ಅಂಗೀಕರಿಸಿದಂತಾಗುವುದು. ಅಲ್ಲದೆ ಸತ್ತಾಭಾವವನ್ನು ಬಿಟ್ಟು ಬೇರೆಯಾದ ಅಸತ್ವವೆಂಬುದು ಸಿದ್ಧವಾಗಿಲ್ಲ.

**ಪ್ರತೀತಿರ್ನಾಸತ ಇತಿ ವದನ್ನಂಗೀಕರೋತಿ ತಾಮ್ ।**

**ನಿಷೇಧೋ ಹ್ಯಪ್ರತೀತಸ್ಯ ಕಥಂಚಿನ್ನೋಪಪದ್ಯತೇ ॥೫೨॥**

ಅಸತ್ತಿಗೆ ಪ್ರತೀತಿಯಿಲ್ಲವೆಂದು ಹೇಳುವವನೇ ಅಸತ್ಯಕ್ಕೆ ಪ್ರತೀತಿಯನ್ನು ಅಂಗೀಕರಿಸಿರುತ್ತಾನೆ. ಏಕೆಂದರೆ ಭೂತಲವಾಗಲೀ ಘಟವಾಗಲೀ ಪ್ರತೀತವೇ ಆಗದಿದ್ದರೆ, ಭೂತಲದಲ್ಲಿ ಘಟವು ಇಲ್ಲ ಎಂಬುದಾಗಿ ನಿಷೇಧವು ಎಲ್ಲಿಯೂ ಕಂಡುಬರುವುದಿಲ್ಲ. ಹೀಗೆ ಮನಸ್ಸಿನಲ್ಲಿ ಅಸತ್ತಿಗೆ ಪ್ರತೀತಿಯನ್ನು ಒಪ್ಪುವುದು, ವಚನದಲ್ಲಿ ಅಸತ್ಪ್ರತೀತಿಯ ನಿಷೇಧವು, 'ಮೂಕೋಽಹಂ' ಎಂಬಂತೆ ಸ್ವಕ್ರಿಯಾ ವಿರೋಧವೆನಿಸುವುದು.

ಹೀಗೆ ಅರ್ಥಾಪತ್ತಿಯನ್ನು ನಿರಾಕರಿಸಿ ಉಪಮಾನವನ್ನೂ ನಿರಾಕರಿಸುತ್ತಾರೆ –

**ನ ಚೋಪಮಾ ಭವೇದತ್ರ ಪ್ರತ್ಯಕ್ಷಾತ್ಸತ್ತ್ವಮೇವ ಚ ।**

**ಶಾಸ್ತ್ರಗಮ್ಯಪರೇಶಾನಾದ್ಭೇದಃ ಸ್ವಾತ್ಮನ ಈಯತೇ ॥೫೩॥**

ಈ ವಿಷಯದಲ್ಲಿ ಉಪಮಾನವೂ ಪ್ರಮಾಣವಾಗಲಾರದು. ವಿಯದಾದಿಗಳಿಗೆ ಸತ್ವವೇ ಹಾಗೂ ಶುಕ್ತಿರಜತಾದಿಗಳಿಗೆ ಅಸತ್ವವೇ ಪ್ರತ್ಯಕ್ಷದಿಂದ ನಿಶ್ಚಿತವಾಗುತ್ತದೆ. ಶಾಸ್ತ್ರದಿಂದಲೇ ಗಮ್ಯನಾದ ಪರಮೇಶ್ವರನಿಂದ ತನಗೆ ಭೇದವೆಂಬುದು ಪ್ರತ್ಯಕ್ಷದಿಂದ ತಿಳಿಯಲ್ಪಡುತ್ತದೆ.

ಆದರೂ ಭೇದಮಿಥ್ಯಾತ್ವಾನುಮಾನಕ್ಕೆ ಬಾಧವು ಹೇಗೆ? ಏಕೆಂದರೆ ಭೇದವನ್ನು ಗ್ರಹಿಸುವ ಪ್ರತ್ಯಕ್ಷಕ್ಕೆ ಪ್ರಾಬಲ್ಯವನ್ನು ನಿರೂಪಿಸಿಲ್ಲವೆಂದು ಆಕ್ಷೇಪಿಸಿದರೆ –

**ಅನುಭೂತಿವಿರೋಧೇನ ಕಥಮೇಕತ್ವಮುಚ್ಯತೇ ।**

**ಕಿಂಚಿತ್ಕರ್ತಾ ಚ ದುಃಖೀತಿ ಸರ್ವೈರೇವಾನುಭೂಯತೇ ।।೫೪।।**

**ಸರ್ವಜ್ಞೋ ಭಗವಾನ್ವಿಷ್ಣುಃ ಸರ್ವಶಕ್ತಿರಿತಿ ಶ್ರುತಃ ।**

**ಅನುಭೂತಾದ್ಧಿ ಭೇದೇನ ಶ್ರುತಿರೇಷಾ ವದತ್ಯಮುಮ್ ।।೫೫।।**

ಸಾಕ್ಷಿರೂಪ ಅನುಭವ ವಿರೋಧವಿರುವುದರಿಂದ ಜೀವೇಶ್ವರ ಐಕ್ಯವು ಹೇಗೆ ಹೇಳಲ್ಪಡುತ್ತದೆ? ನಾನು ಕಿಂಚಿತ್ ಕರ್ತನು, ದುಃಖಿಯು, ಅಲ್ಪಜ್ಞನು ಹಾಗೂ ಅಲ್ಪಶಕ್ತನು ಹೀಗೆ ಎಲ್ಲರಿಗೂ ಅನುಭವಕ್ಕೆ ಗೋಚರವಾಗಿದೆ. ಭಗವಾನ್ ವಿಷ್ಣುವು ಸರ್ವಜ್ಞನು, ಸರ್ವಶಕ್ತನು ಎಂಬುದಾಗಿ 'ಯಃ ಸರ್ವಜ್ಞಃ, ಪರಾಸ್ಯ ಶಕ್ತಿಃ, ಸ ಹಿ ಸರ್ವಸ್ಯ ಕರ್ತಾ, ನಿರವಿಷ್ಟಃ' ಇತ್ಯಾದಿ ಶ್ರುತಿಗಳಲ್ಲಿ ಹೇಳಲ್ಪಟ್ಟಿದ್ದಾನೆ. ಹೀಗೆ ಶ್ರುತಿಯು ಈ ಪರಮಾತ್ಮನನ್ನು ಅಲ್ಪಜ್ಞತ್ವಾದಿ ಅನುಭೂತಿಯುಳ್ಳ ಜೀವನಿಂದ ಭಿನ್ನವಾಗಿಯೇ ಪ್ರತಿಪಾದಿಸುತ್ತದೆ.

ಹೀಗೆ ಅನುಮಾನವನ್ನು ನಿರಾಕರಿಸಿ, ಈಗ 'ತದ್ಯೋಹಂ' ಇತ್ಯಾದಿ ಶ್ರುತಿಯನ್ನು 'ಉಪಜೀವ್ಯ' ಎಂಬ ವಾಕ್ಯದಿಂದ ನಿರಾಕರಿಸುತ್ತಾರೆ –

**ಉಪಜೀವ್ಯವಿರುದ್ಧಂ ತು ಕಥಮೈಕ್ಯಂ ಶ್ರುತಿರ್ವದೇತ್ ।**

**ಅಪ್ರಾಮಾಣ್ಯಂ ಯದಾ ಭೇದವಾಚಕಸ್ಯ ಭವಿಷ್ಯತಿ ।।೫೬।।**

**ಸ ಏವ ಧರ್ಮಿಣೋ ಗ್ರಾಹೀ ತದಭೇದಃ ಕಥಂ ಭವೇತ್ ।**

ಉಪಜೀವ್ಯ ಪ್ರಮಾಣ ವಿರುದ್ಧವಾದ ಜೀವಬ್ರಹ್ಮರ ಐಕ್ಯವನ್ನು ಶ್ರುತಿಯು ಹೇಗೆ ಹೇಳೀತು? ಭೇದಪ್ರತಿಪಾದಕ ಆಗಮ ಪ್ರತ್ಯಕ್ಷಗಳಿಗೆ ಯಾವಾಗ ಅಪ್ರಾಮಾಣ್ಯವು ಬರುವುದೋ ಆಗ ಭೇದವನ್ನು ಬೋಧಿಸುವ ಆ ಆಗಮವಾಗಲೀ ಪ್ರತ್ಯಕ್ಷವಾಗಲೀ ಧರ್ಮಿಸ್ವರೂಪರಾದ ಜೀವನನ್ನೂ ಈಶ್ವರನನ್ನೂ ಗ್ರಹಿಸಬೇಕಾಗುವುದು. ಆದ್ದರಿಂದ ಜೀವೇಶ್ವರ ಐಕ್ಯವನ್ನು ಹೇಗೆ ತಾನೆ ಬೋಧಿಸಲು ಅರ್ಹವಾಗುವುದು?

**ಯತ್ಸ್ವರೂಪಗ್ರಹೇ ಮಾನಂ ತದ್ಧರ್ಮೇ ನ ಕಥಂ ಭವೇತ್ ।।೫೭।।**

ಯಾವ ಶ್ರುತಿವಾಕ್ಯವು ಧರ್ಮಿಸ್ವರೂಪವನ್ನು ಗ್ರಹಿಸುವುದರಲ್ಲಿ ಪ್ರಮಾಣವಾಗಿ ಅಂಗೀಕರಿಸಲ್ಪಡುವುದೋ ಅದು ಆ ಧರ್ಮಿಯ(ಬ್ರಹ್ಮನ) ಸಾರ್ವಜ್ಞಾದಿ ಧರ್ಮದ ಬಗ್ಗೆ ಹೇಗೆ ಪ್ರಮಾಣವಾಗಲಾರದು?

**ಏಕವಿಜ್ಞಾನವಿಜ್ಞಪ್ತ್ಯಾ ದ್ವಯಂ ಮಾನಂ ಭವಿಷ್ಯತಿ ।**

**ನ ಚೇದೇಕಂ ಪ್ರಮಾಣಂ ತದ್ದ್ವಯಮಪ್ಯತ್ರ ನೋ ಭವೇತ್ ।।೫೮।।**

'ಯಃ ಸರ್ವಜ್ಞಃ' ಇತ್ಯಾದಿ ಶ್ರುತಿಗಳಿಂದುಂಟಾದ ವಿಜ್ಞಾನವು ಏಕವಿಧವೇ ಆಗಿದೆ. ಶುಕ್ತಿರಜತಜ್ಞಾನದಂತೆ ಸ್ವರೂಪಮಾತ್ರದಲ್ಲಿ ಪ್ರಮಾಣವೂ ವಿಶಿಷ್ಟಾಕಾರದಲ್ಲಿ ಅಪ್ರಮಾಣವೂ ಎಂದು ಅನೇಕ ವಿಧವಲ್ಲ. ಸಾಕ್ಷಿಸಹಕೃತವಾದ ಈ ಜ್ಞಾನವು ಧರ್ಮ–ಧರ್ಮಿರೂಪವಾದ ವಿಶಿಷ್ಟಾಕಾರದ ಬಗ್ಗೆಯೂ ಪ್ರಮಾಣವಾಗುವುದು. ಆ ಶ್ರುತಿಜನ್ಯ ಜ್ಞಾನವು ವಿಶಿಷ್ಟಾಕಾರವನ್ನು ಕುರಿತು ಪ್ರಮಾಣವಾಗದಿದ್ದರೆ ಸ್ವರೂಪದ ಬಗ್ಗೆಯೂ ಪ್ರಮಾಣವಾಗಲಾರದು.

**ಧರ್ಮಿಗ್ರಾಹಿವಿರೋಧಸ್ತು ತಸ್ಮಾನ್ಮಾನಸ್ಯ ದೂಷಣಮ್ ।**

**ನೋಪಜೀವ್ಯೋ ಹ್ಯಭೇದೋಽತ್ರ ಕ್ವಚಿದ್ಭೇದಶ್ರುತೇರ್ಬಲಾತ್ ॥೫೯॥**

ಆದ್ದರಿಂದ ಅಭೇದಗ್ರಾಹಕ ಅನುಮಾನ ಆಗಮಗಳಿಗೆ ಧರ್ಮಿಗ್ರಾಹಕ ಶ್ರುತಿ ವಿರೋಧವು ಬಂದೇ ಬರುತ್ತದೆ. ಅಭೇದಗ್ರಾಹಕ ಆಗಮವು ಧರ್ಮಿತ್ವಾದಿ ವಿಷಯದಲ್ಲಿ ಯಾವ ವಿಧದಿಂದಲೂ ಭೇದಶ್ರುತಿಗೆ ಉಪಜೀವ್ಯವಾಗುವುದಿಲ್ಲ. ಭೇದಗ್ರಾಹಕ ಶ್ರುತಿಗೆ ನಿರಪೇಕ್ಷತ್ವರೂಪ ಬಲದಿಂದಲೇ ಅಭೇದ ಪ್ರಮಾಣ ಬಾಧಕತ್ವವು ಕೂಡುತ್ತದೆ.

ಆದರೂ 'ಯಃ ಸರ್ವಜ್ಞಃ' ಇತ್ಯಾದಿ ಶ್ರುತಿಯು ಜೀವಭೇದಕ ಧರ್ಮದಿಂದ ವಿಶಿಷ್ಟನಾದ ಈಶ್ವರನನ್ನು ಪ್ರತಿಪಾದಿಸುವುದಿಲ್ಲ. ಕೇವಲ ಅನುವಾದ ಮಾಡುತ್ತದೆ. ಆದ್ದರಿಂದ ಅಭೇದಸಾಧಕ ಅನುಮಾನಗಳಿಗೆ ಬಾಧವಿಲ್ಲವೆಂಬ ಆಕ್ಷೇಪ ಬಂದರೆ ಅದನ್ನು 'ನ ಚ' ಇತ್ಯಾದಿ ವಾಕ್ಯದಿಂದ ನಿರಾಕರಿಸುತ್ತಾರೆ –

**ನ ಚ ಮಾನಾಂತರೋಪೇಯಂ ಬ್ರಹ್ಮ ತದ್ಭವತಿ ಕ್ವಚಿತ್ ।**

**ಯೇನ ಮಾನೇನ ಚೋಪೇಯಂ ಭೇದಸ್ತೇನಾವಗಮ್ಯತೇ ॥೬೦॥**

**ಸರ್ವಜ್ಞಾನುಮಯೈವೇಶೋ ಯದ್ಯುಪೇಯಃ ಕಥಂಚನ ।**

**ಸರ್ವಜ್ಞತ್ವಗುಣೇನೈವ ತಯಾ ಭೇದೋಽವಗಮ್ಯತೇ ॥೬೧॥**

ಸರ್ವಜ್ಞತ್ವಾದಿಗಳಿಂದ ಕೂಡಿದ ಬ್ರಹ್ಮನು ಎಲ್ಲಿಯೂ ಪ್ರಮಾಣಾಂತರದಿಂದ ವೇದ್ಯನಾಗುವುದಿಲ್ಲ. ಬ್ರಹ್ಮನು ಯಾವ ಪ್ರಮಾಣದಿಂದ ತಿಳಿಯಲ್ಪಡುತ್ತಾನೋ ಅದೇ ಪ್ರಮಾಣದಿಂದ ಭೇದವೂ ತಿಳಿದುಬರುತ್ತದೆ. ಸರ್ವಜ್ಞತ್ವ ಸಾಧಕ ಅನುಮಾನದಿಂದಲೇ ಈಶ್ವರನು ಕಥಂಚಿತ್ತಾಗಿ ವೇದ್ಯನೆಂದು ಹೇಳುವ ಪಕ್ಷದಲ್ಲಿ, ಅದೇ ಅನುಮಾನದಿಂದಲೇ ಸರ್ವಜ್ಞತ್ವಾದಿ ಗುಣಗಳಿಂದ ಭೇದವು ತಿಳಿದು ಬರುತ್ತದೆ.

ಹೀಗೆ ಈಶ್ವರನನ್ನು ಪ್ರತಿಪಾದಿಸುವ ಶ್ರುತಿಗೆ ಸರ್ವಜ್ಞತ್ವಾದಿ ಭೇದಕ ಧರ್ಮ

ಸಹಿತವಾದ ಈಶ್ವರನ ಬಗ್ಗೆ ಪ್ರಾಮಾಣ್ಯವನ್ನು ಉಪಪಾದಿಸಲಾಯಿತು. ಈಗ ಜೀವನನ್ನು ಗ್ರಹಿಸುವ ಪ್ರತ್ಯಕ್ಷಕ್ಕೆ ಈಶ್ವರನಿಂದ ಭೇದವನ್ನು ತಿಳಿಸುವ ಅಲ್ಪಜ್ಞತ್ವಾದಿ ಧರ್ಮವುಳ್ಳ ಜೀವನ ವಿಷಯದಲ್ಲಿ ಪ್ರಾಮಾಣ್ಯವನ್ನು ಸಮರ್ಥಿಸುತ್ತಾರೆ.

**ನ ದುಃಖಾನುಭವಃ ಕ್ವಾಪಿ ಮಿಥ್ಯಾನುಭವತಾಂ ವ್ರಜೇತ್ ।**

**ನ ಹಿ ಬಾಧಃ ಕ್ವಚಿದ್ದೃಷ್ಟೋ ದುಃಖಾದ್ಯನುಭವಸ್ಯ ತು ।।೬೨।।**

**ಯದಿ ದುಃಖಾನುಭೂತಿಶ್ಚ ಭ್ರಾಂತಿರಿತ್ಯವಸೀಯತೇ ।**

**ಅದುಃಖಿತಾಶ್ರುತಿಃ ಕೇನ ನ ಭ್ರಾಂತಿರಿತಿ ಗಮ್ಯತೇ ।।೬೩।।**

ಜೀವನ ದುಃಖಾನುಭವಾದಿಗಳು ಎಂದಿಗೂ ಮಿಥ್ಯಾನುಭವರೂಪತ್ವವನ್ನು ಹೊಂದುವುದೇ ಇಲ್ಲ. ಏಕೆಂದರೆ ಅದಕ್ಕೆ ಎಲ್ಲಿಯೂ ಯಾವುದೇ ರೀತಿಯಿಂದಲೂ ಬಾಧವು ಕಂಡಿರುವುದೇ ಇಲ್ಲ. ಒಂದು ಪಕ್ಷ ದುಃಖಾದ್ಯನುಭವವು ಭ್ರಾಂತಿಯೆಂದು ಶ್ರುತಿಬಲದಿಂದ ನಿಶ್ಚಯವಾಗುವುದಾದರೆ, ದುಃಖಾಭಾವವನ್ನು ಹೇಳುವ ಶ್ರುತಿಯು ಕೂಡ ಭ್ರಾಂತಿಯಲ್ಲವೆಂದು ಹೇಗೆ ನಿರ್ಣಯಿಸಲ್ಪಡುತ್ತದೆ?

**ಶ್ರುತಿಸ್ವರೂಪಮರ್ಥಶ್ಚ ಮಾನೇನೈವಾವಸೀಯತೇ ।**

**ತಚ್ಚೇನ್ಮಾನಂ ಗೃಹೀತಂ ತೇ ಕಿಂ ದುಃಖಾನುಭವೇ ಭ್ರಮಃ ।।೬೪।।**

ಶ್ರುತಿಯ ಸ್ವರೂಪವೂ ಅರ್ಥವೂ ಸಾಕ್ಷಿರೂಪ ಪ್ರಮಾಣದಿಂದಲೇ ನಿರ್ಣಯ ಮಾಡಲ್ಪಡುತ್ತದೆ. ಆ ಪ್ರಮಾಣವು ನಿನ್ನಿಂದ ಅಂಗೀಕರಿಸಲ್ಪಡುವುದಾದರೆ, ದುಃಖಾನುಭವವು ಸಾಕ್ಷಿಯಿಂದಲೇ ತಿಳಿದುಬರುವುದರಿಂದ ಅದು ಭ್ರಮೆಯಾಗಲು ಹೇಗೆ ಸಾಧ್ಯ?

**ನ ಚ ಬಾಧವಿಶೇಷೋಽಸ್ತಿ ಯದಬಾಧಿತಮೇವ ತತ್ ।**

**ಬಾಧೋ ಯದ್ಯನುಭೂತೇಽರ್ಥೇ ಕಥಂ ನಿರ್ಣಯ ಈಯತೇ ।।೬೫।।**

ದುಃಖಾನುಭವಕ್ಕೆ ಬಾಧರೂಪ ವಿಶೇಷವಿಲ್ಲ. ಯಾವುದು ಅಬಾಧಿತವೋ ಅದು ಸತ್ಯವೇ ಎಂದು ಅಂಗೀಕರಿಸತಕ್ಕದ್ದು. ಸಾಕ್ಷಿಪ್ರತೀತ ಅರ್ಥದಲ್ಲಿ ಬಾಧವು ಬರುವುದಾದರೆ, ಆಗ ಪದಾರ್ಥಗಳ ನಿರ್ಣಯವು ಹೇಗೆ ಅಂಗೀಕರಿಸಲ್ಪಡುತ್ತದೆ?

**ಕೋಽಪಿ ಹ್ಯರ್ಥೋ ನ ನಿಶ್ಚೇತುಂ ಶಕ್ಯತೇ ಭ್ರಮವಾದಿನಾ ।**

**ಭ್ರಮತ್ವಮಭ್ರಮತ್ವಂ ಚ ಯದ್ಯೈವಾನುಭವೋಪಗಮ್ ।।೬೬।।**

**ಏಕಸ್ಯ ಭ್ರಮತಾ ತತ್ರ ಪರಸ್ಯಾಭ್ರಮತಾ ಕುತಃ ।**

**ಭ್ರಮತ್ವಮಭ್ರಮತ್ವಂ ಚ ಸರ್ವಂ ವೇದ್ಯಂ ಹಿ ಸಾಕ್ಷಿಣಾ ॥೬೭॥**

ಕೆಲವು ಸಂದರ್ಭದಲ್ಲಿ ಸಾಕ್ಷಿಗೂ ಭ್ರಾಂತಿ ಸ್ವರೂಪತ್ವವನ್ನು ಹೇಳುವ ಪಕ್ಷದಲ್ಲಿ ಯಾವುದೇ ಪದಾರ್ಥವೂ ನಿರ್ಣಯಿಸಲಿಕ್ಕೆ ಶಕ್ಯವಾಗುವುದಿಲ್ಲ. ವಸ್ತುನಿರ್ಣಯವು ಜ್ಞಾನಗಳಲ್ಲಿನ ಭ್ರಮತ್ವ ಅಭ್ರಮತ್ವಗಳ ನಿರ್ಣಯದ ಅಧೀನವು. ಈ ಭ್ರಮತ್ವ ಅಭ್ರಮತ್ವಗಳ ನಿರ್ಣಯವು ಸಾಕ್ಷಿರೂಪ ಅನುಭವದ ಅಧೀನವು. ಆದ್ದರಿಂದ ಆ ಜ್ಞಾನಗಳಲ್ಲಿ ಒಂದು ಜ್ಞಾನಕ್ಕೆ ಭ್ರಮತ್ವವು, ಇನ್ನೊಂದು ಜ್ಞಾನಕ್ಕೆ ಅಭ್ರಮತ್ವವು ಯಾವುದರಿಂದ ನಿರ್ಣಯಿಸಲ್ಪಡತಕ್ಕದ್ದು? ಏಕೆಂದರೆ ಜ್ಞಾನಗಳ ಭ್ರಮತ್ವ ಅಭ್ರಮತ್ವಗಳು ಹಾಗೂ ಅವುಗಳ ನಿಶ್ಚಯಕ್ಕೆ ಉಪಯುಕ್ತವಾದ ಕರಣದೋಷ ಮುಂತಾದವವೂ ಕೂಡ ಸಾಕ್ಷಿಯಿಂದಲೇ ನಿಶ್ಚಯವಾಗತಕ್ಕವು.

**ಸ ಚೇತ್ಸಾಕ್ಷೀ ಕ್ವಚಿದ್ದುಷ್ಟಃ ಕಥಂ ನಿರ್ಣಯ ಈಯತೇ ।**

**ವಿಶೇಷಾಃ ಸರ್ವ ಏವೈತೇ ಸಾಕ್ಷಿಪ್ರತ್ಯಕ್ಷಗೋಚರಾಃ ॥೬೮॥**

ಆ ಸಾಕ್ಷಿಯು ಕೆಲವು ದುಃಖಾದಿ ವಿಷಯಗಳಲ್ಲಿ ಅಯಥಾರ್ಥವಾದರೆ, ಹೇಗೆ ತಾನೆ ವಸ್ತುನಿರ್ಣಯವು ಅಂಗೀಕರಿಸಲ್ಪಡುತ್ತದೆ? ಏಕೆಂದರೆ ಭ್ರಮತ್ವ ಅಭ್ರಮತ್ವ ಅಥವಾ ಕರಣದೋಷಾದಿ ವಿಶೇಷಗಳೆಲ್ಲವೂ ಸಾಕ್ಷಿಪ್ರತ್ಯಕ್ಷಕ್ಕೆ ಗೋಚರವಾಗುವ ವಿಷಯಗಳು.

**ಊರೀಕೃತ್ಯ ಚ ತಾನ್ಸರ್ವಾನ್ ವ್ಯವಹಾರಃ ಪ್ರವರ್ತತೇ ।**

**ಸಾಕ್ಷಿಣೋ ವ್ಯವಸಾಯೀ ತು ವ್ಯವಹಾರೋಽಭಿಧೀಯತೇ ॥೬೯॥**

ಕರಣದೋಷ ಮುಂತಾದ ಎಲ್ಲ ವಿಶೇಷಗಳನ್ನು ನಿಶ್ಚಯಿಸಿಯೇ ಎಲ್ಲ ವ್ಯವಹಾರವೂ ನಡೆಯುತ್ತದೆ. ಯಾವ ಸಂಶಯ ವಿಸಂವಾದಗಳಿಗೂ ಕಾರಣವಾಗದ ವ್ಯವಹಾರವು ಸಾಕ್ಷಿಯ ಕಾರ್ಯವೆಂದೇ ಹೇಳಲ್ಪಡುತ್ತದೆ.

**ತಸ್ಮಾತ್ಸರ್ವಪ್ರಸಿದ್ಧಸ್ಯ ವ್ಯವಹಾರಸ್ಯ ಸಿದ್ಧಯೇ ।**

**ಸಾಕ್ಷೀ ನಿರ್ದೋಷ ಏವೈಕಃ ಸದಾಽಂಗೀಕಾರ್ಯ ಏವ ನಃ ॥೭೦॥**

ಆದ್ದರಿಂದ ಸರ್ವಪ್ರಸಿದ್ಧವಾದ ವ್ಯವಹಾರದ ಸಿದ್ಧಿಗಾಗಿ ಸಾಕ್ಷಿಯೊಂದೇ ಸದಾ ನಿರ್ದೋಷವೆಂದು ನಾವು ಅಂಗೀಕರಿಸಲೇ ಬೇಕು.

**ಶುದ್ಧಃ ಸಾಕ್ಷೀ ಯದಾ ಸಿದ್ಧೋ ದುಃಖಿತ್ವಂ ವಾರ್ಯತೇ ಕಥಮ್ ।**

**ಉಪಜೀವ್ಯಪ್ರಮಾಣಂ ತದ್ಭೇದಗ್ರಾಹಕಮೇವ ಹಿ ॥೭೧॥**

**ಅತೋ ಜೀವೇಶಯೋರ್ಭೇದಃ ಶ್ರುತಿಸಾಮರ್ಥ್ಯಸುಸ್ಥಿರಃ ।**

ನಿರ್ದುಷ್ಟವಾದ ಸಾಕ್ಷಿಯು ಸಿದ್ಧವಾದ ಮೇಲೆ ಸಾಕ್ಷಿಪ್ರತೀತ ದುಃಖಿತ್ವವು ಹೇಗೆ ನಿವಾರಿಸಲ್ಪಡುವುದು? ಶ್ರುತ್ಯನುಮಾನಗಳ ಉಪಜೀವ್ಯ ಪ್ರಮಾಣವಾದ ಸಾಕ್ಷಿಯು ಭೇದಗ್ರಾಹಕ ಪ್ರಮಾಣವೇ ಆಗಿದೆ. ಆದ್ದರಿಂದ ಶ್ರುತಿಸಾಮರ್ಥ್ಯದಿಂದ (ಭೇದಶ್ರುತಿಗೆ ವಿರುದ್ಧಾರ್ಥವನ್ನು ಪ್ರತಿಪಾದಿಸುವ ಪ್ರಮಾಣಗಳ ಅಭಾವದಿಂದ ಪಡೆದ ಸಾಮರ್ಥ್ಯದಿಂದ) ಜೀವೇಶ್ವರರ ಭೇದವು ಸುದೃಢವಾದುದು.

ಹೀಗೆ ಜೀವೇಶ್ವರರಲ್ಲಿ ಭೇದವೇ ಪಾರಮಾರ್ಥಿಕವೆಂದು ವ್ಯವಸ್ಥಿತವಾದರೆ 'ತತ್ವಮಸಿ' ಇತ್ಯಾದಿ ಅಭೇದ ಶ್ರುತಿಗಳಿಗೂ, 'ಅಹಂ ಹರಿಃ' ಇತ್ಯಾದಿ ಸ್ಮೃತಿಗಳಿಗೂ ಗತಿ ಯಾವುದು? ಆ ಶ್ರುತಿಸ್ಮೃತಿಗಳಿಗೆ ಸರ್ವಥಾ ಅಪ್ರಾಮಾಣ್ಯವು ಯುಕ್ತವಾಗದು. ಏಕೆಂದರೆ ಶ್ರುತಿಯು ಅಪೌರುಷೇಯವು, ಸ್ಮೃತಿಯು ಆಪ್ತೋಕ್ತವು. ಹೀಗಿರುವಾಗ ಅವುಗಳಿಗೆ ಅಪ್ರಾಮಾಣ್ಯಕ್ಕೆ ಕಾರಣವಾಗುವ ಪುರುಷದೋಷಗಳು ಇರುವುದಿಲ್ಲ. ಈ ಆಶಂಕೆಯನ್ನು ಪರಿಹರಿಸಲು ಹೊರಟ ಸೂತ್ರ 'ಓಂ ತದ್ಗುಣಸಾರತ್ವಾತ್ತು ತದ್ವ್ಯಪದೇಶಃ ಪ್ರಾಜ್ಞವತ್ ಓಂ' – ಈ ಸೂತ್ರವನ್ನು 'ತಥಾऽಪಿ' ಇತ್ಯಾದಿ ವಾಕ್ಯದಿಂದ ವ್ಯಾಖ್ಯಾನಿಸುತ್ತಾರೆ –

**ತಥಾऽಪಿ ತು ಚಿದಾನಂದಪೂರ್ವಾಸ್ತತ್ಸದೃಶಾ ಗುಣಾಃ ।।೭೨।।**

**ಸಾರಃ ಸ್ವರೂಪಮಸ್ಯಾಪಿ ಮುಕ್ತಾವಪ್ಯವಶಿಷ್ಯತೇ ।**

ಜೀವಬ್ರಹ್ಮರಲ್ಲಿ ಭೇದವೇ ವಿವಕ್ಷಿತವಾಗಿದ್ದರೂ, ಜ್ಞಾನ ಆನಂದ ಮುಂತಾದ ಪರಮಾತ್ಮನ ಗುಣಗಳಿಗೆ ಸದೃಶವಾದ ಗುಣಗಳು, ಜೀವನ ಸ್ವರೂಪವೂ ಕೂಡ ಮುಕ್ತಿಯಲ್ಲಿಯೂ ಉಳಿಯುತ್ತವೆ.

**ಅತೋऽಭೇದವದೇವೈತಾಃ ಶ್ರುತಯಃ ಪ್ರವದಂತಿ ಹಿ ।।೭೩।।**

**ಪೌರಾಣಾನಿ ಚ ವಾಕ್ಯಾನಿ ಸಾದೃಶ್ಯಾಭೇದಸಂಶ್ರಯಾತ್ ।**

ಆದುದರಿಂದಲೇ ಮೇಲ್ನೋಟಕ್ಕೆ ಅಭೇದವನ್ನು ಹೇಳುವಂತೆ ತೋರುವ ಈ ಶ್ರುತಿಗಳೂ ಪುರಾಣವಾಕ್ಯಗಳೂ ಸಾದೃಶ್ಯರೂಪ ಅಭೇದವನ್ನು ಆಶ್ರಯಿಸಿ ಹೇಳುತ್ತವೆ.

**ಸಾದೃಶ್ಯಾಚ್ಚ ಪ್ರಧಾನತ್ವಾತ್ಸ್ವಾತಂತ್ರ್ಯಾದಪಿ ಚಾಭಿದಾಮ್ ।।೭೪।।**

**ಆಹುರೀಶೇನ ಜೀವಸ್ಯ ನ ಸ್ವರೂಪಾಭಿದಾಂ ಕ್ವಚಿತ್ ।**

ಸಾದೃಶ್ಯ, ಪ್ರಾಧಾನ್ಯ ಹಾಗೂ ಸ್ವಾತಂತ್ರ್ಯಗಳ ನಿಮತ್ತದಿಂದ ಶ್ರುತಿ ಪುರಾಣ ವಾಕ್ಯಗಳು ಈಶ್ವರನಿಂದ ಜೀವನಿಗೆ ಗೌಣವಾದ ಅಭೇದವನ್ನು ಹೇಳುತ್ತವೆ. ಆದರೆ ಸ್ವರೂಪಾಭೇದವನ್ನು ಎಲ್ಲಿಯೂ ಹೇಳುವುದಿಲ್ಲ.

ಹಾಗಾದರೆ ಹಿಂದೆ ಹೇಳಿದ ರೀತಿಯಿಂದ ಜೀವನಿಗೆ ಬ್ರಹ್ಮನೊಂದಿಗೆ ಐಕ್ಯವನ್ನು ಹೇಳುವ ವಾಕ್ಯವು ಸಾದೃಶ್ಯಾದಿ ಅರ್ಥದಲ್ಲಿರಲಿ, ಆದರೆ ಮುಕ್ತನಿಗೆ ಅದನ್ನು ಹೇಗೆ ವ್ಯಾಖ್ಯಾನಿಸುವುದು? ಅದನ್ನೂ ಹಿಂದೆ ಹೇಳಿದ ನ್ಯಾಯದಿಂದ ವ್ಯಾಖ್ಯಾನ ಮಾಡುವುದು ಸರಿಯಲ್ಲ. ಏಕೆಂದರೆ 'ಯತ್ರ ತ್ವಸ್ಯ ಸರ್ವಮಾತ್ಮೈವಾಭೂತ್ ತತ್ಕೇನ ಕಂ ಪಶ್ಯೇತ್' ಇತ್ಯಾದಿ ವಾಕ್ಯಗಳಿಂದ ವಿಶೇಷವಾಗಿ ಮುಕ್ತನಿಂದ ಈಶ್ವರನಿಗೆ ಅಭೇದವನ್ನು ಹೇಳುವುದು ಯುಕ್ತವೆನಿಸಲಾರದು. ಈ ಆಶಂಕೆಯನ್ನು 'ಸ್ಥಾನೈಕ್ಯಂ' ಇತ್ಯಾದಿ ವಾಕ್ಯದಿಂದ ಪರಿಹರಿಸುತ್ತಾರೆ –

**ಸ್ಥಾನೈಕ್ಯಮೈಕ್ಯಮತ್ಯಂ ಚ ಮುಕ್ತಸ್ಯ ತು ವಿಶಿಷ್ಯತೇ ।।೭೫।।**

**ಸಾದೃಶ್ಯಂ ಚ ವಿಶೇಷೇಣ ಜಡಾನಾಂ ದ್ವಯಮೇವ ತು ।**

**ಭವೇತ್ಸಾದೃಶ್ಯಮತ್ಯಲ್ಪಂ ತೃತೀಯಂ ಪರಮಾತ್ಮನಾ ।।೭೬।।**

ಮುಕ್ತನಿಗೆ ಈಶ್ವರನೊಂದಿಗೆ ಸ್ಥಾನೈಕ್ಯವೂ ಮತ್ಯೈಕ್ಯವೂ ವಿಶೇಷವಾಗಿದೆ. ಮುಕ್ತನಿಗೆ ಈಶನಿಂದ ಅಭಿವ್ಯಕ್ತವಾದ ಸಾದೃಶ್ಯವಿದೆ. ಈ ವಿಶೇಷದಿಂದ ಅಭೇದೋಕ್ತಿಯು ಕೂಡುತ್ತದೆ. ಆದರೆ ಜಡಗಳಿಗೆ ಈಶಪ್ರಧಾನಕತ್ವ ಹಾಗೂ ಈಶಾಧೀನತ್ವ ಇವೆರಡೇ ಧರ್ಮಗಳು. ಮೂರನೆಯದಾದ ಈಶನಿಂದ ಸಾದೃಶ್ಯವು ಜಡಗಳಿಗೆ ಅತ್ಯಲ್ಪವೇ ಇರುವುದು.

**ಈಶರೂಪಕ್ರಿಯಾಣಾಂ ಚ ಗುಣಾನಾಮಪಿ ಸರ್ವಶಃ ।**

**ತಥೈವಾವಯವಾನಾಂ ತತ್ಸ್ವರೂಪೈಕ್ಯಂ ತು ಮುಖ್ಯತಃ ।।೭೭।।**

ಈಶ್ವರನ ಮತ್ಸ್ಯಾದಿ ರೂಪಗಳಿಗೂ, ಸೃಷ್ಟ್ಯಾದಿ ಕ್ರಿಯೆಗಳಿಗೂ ಎಲ್ಲ ಜ್ಞಾನಾನಂದಾದಿ ಗುಣಗಳಿಗೂ, ಹಸ್ತಾದಿ ಅವಯವಗಳಿಗೂ ಈಶಸ್ವರೂಪದಿಂದ ಐಕ್ಯವನ್ನು ಪ್ರತಿಪಾದಿಸುವ 'ವಿಜ್ಞಾನಮಾನಂದಂ ಬ್ರಹ್ಮ' ಇತ್ಯಾದಿ ವಾಕ್ಯಗಳು ಮುಖ್ಯಾಭೇದಪರವೆಂದೇ ವ್ಯಾಖ್ಯಾನ ಮಾಡತಕ್ಕವು. ಜಡಜಗತ್ತಿನಿಂದ ಈಶ್ವರನಿಗೆ ಅಭೇದವನ್ನು ಪ್ರತಿಪಾದಿಸುವ 'ಸರ್ವಂ ಖಲ್ವಿದಂ ಬ್ರಹ್ಮ' ಇತ್ಯಾದಿ ವಾಕ್ಯಗಳಂತೆ ಅಮುಖ್ಯವಾದ ಅಭೇದಪರವಲ್ಲ ಎಂದು ತಾತ್ಪರ್ಯ.

ಇನ್ನು ಈಶ್ವರನ ಗುಣರೂಪಾದಿಗಳಲ್ಲಿ ಭೇದವನ್ನು ತಿಳಿದರೆ ಪ್ರತ್ಯವಾಯವಿದೆ ಎಂದು ಹೇಳುತ್ತಾರೆ –

**ಯಥೋದಕಂ ದುರ್ಗೇ ವೃಷ್ಟಂ ಪರ್ವತೇಷು ವಿಧಾವತಿ ।**

**ಏವಂ ಧರ್ಮಾನ್ಪೃಥಕ್ಪಶ್ಯಂಸ್ತಾನೇವಾನುವಿಧಾವತಿ ।।೭೮।।**

ಪರ್ವತಗಳ ಶಿಖರಗಳಲ್ಲಿ ಸುರಿಸಲ್ಪಟ್ಟ ನೀರು ಹೇಗೆ ಕೆಳಕ್ಕೆ ಧಾವಿಸುತ್ತದೋ

ಹಾಗೆ ಪರಮೇಶ್ವರನ ಧರ್ಮಗಳನ್ನು ಅವನಿಂದ ಭಿನ್ನವಾಗಿಯೇ ನೋಡತಕ್ಕವನು, ದರ್ಶನಾನಂತರದಲ್ಲಿಯೇ ನರಕವನ್ನು ಕುರಿತು ಧಾವಿಸುತ್ತಾನೆ.

**ಇತಿ ಶ್ರುತೇಃ ನೋಭಯಂ ಚ ಭೇದಾಭೇದಾಖ್ಯಮಿಷ್ಯತೇ ।**

**ಏಕಮೇವಾದ್ವಿತೀಯಂ ತನ್ನೇಹ ನಾನಾಸ್ತಿ ಕಿಂಚನ ।।೭೯।।**

ಹೀಗೆ ಶ್ರುತಿಯಿರುವುದರಿಂದ ಭೇದಾಭೇದಗಳೆರಡೂ ಸೂತ್ರಕಾರರಿಂದ ಅಂಗೀಕರಿಸಲ್ಪಡುವುದಿಲ್ಲ. ಏಕೆಂದರೆ, ಬ್ರಹ್ಮವು ಅಭಿನ್ನವೂ, ಸಮಾಧಿಕರಹಿತವೂ ಆದುದು. ಬ್ರಹ್ಮನಲ್ಲಿರುವ ಗುಣಾದಿಗಳೂ ಕೂಡ ಅವನಿಂದ ಭಿನ್ನವಾದವುಗಳಲ್ಲ.

**ಮೃತ್ಯೋಃ ಸ ಮೃತ್ಯುಮಾಪ್ನೋತಿ ಯ ಇಹ ನಾನೇವ ಪಶ್ಯತಿ ।**

**ಇತಿ ಶ್ರುತಾವಿವೇತ್ಯಸ್ಮಾದ್ಭೇದಾಭೇದನಿರಾಕೃತಿಃ ।।೮೦।।**

**ಇವೋಭಯೇ ಚ ಸಾದೃಶ್ಯ ಇತಿ ವಾಕ್ ಶಬ್ದನಿರ್ಣಯೇ ।**

ಯಾವನು ಬ್ರಹ್ಮನಲ್ಲಿರುವ ಗುಣಗಳನ್ನು ಬ್ರಹ್ಮನಿಂದ ಭಿನ್ನ ಅಥವಾ ಭಿನ್ನಾಭಿನ್ನವೆಂದು ಕಾಣುತ್ತಾನೋ, ಅವನು ಮರಣಾನಂತರದಲ್ಲಿ ನರಕವನ್ನು ಹೊಂದುತ್ತಾನೆ. ಈ ಶ್ರುತಿಯಲ್ಲಿ 'ಇವ' ಎಂಬ ಶಬ್ದದಿಂದ ಭೇದಾಭೇದವು ನಿರಾಕರಿಸಲ್ಪಡುತ್ತದೆ. 'ಇವ' ಶಬ್ದವು ಭೇದಾಭೇದಗಳಲ್ಲಿಯೂ ಸಾದೃಶ್ಯದಲ್ಲಿಯೂ ಇದೆ. ಹೀಗೆ ಶಬ್ದನಿರ್ಣಯವೆಂಬ ಗ್ರಂಥದಲ್ಲಿ ವಚನವಿದೆ.

## ಅಂಶಾಧಿಕರಣಮ್

### ಓಂ ಅಂಶೋ ನಾನಾವ್ಯಪದೇಶಾದನ್ಯಥಾ ಚಾಪಿ ದಾಶಕಿತವಾದಿತ್ವಮಧೀಯತ ಏಕೇ ಓಂ

ಈ ಸೂತ್ರವನ್ನು ಕೆಲವರು ಹೀಗೆ ವ್ಯಾಖ್ಯಾನಿಸುತ್ತಾರೆ – ಜೀವನು ಪರಮಾತ್ಮನ ಅಂಶನು. ಅಂಶವೆಂದರೆ ಈಶ್ವರನಿಂದ ಭಿನ್ನಾಭಿನ್ನವಾಗಿರುವುದು. ಇವೆರಡರಲ್ಲಿ ಭೇದವು ಔಪಾಧಿಕ, ಅಭೇದವು ಸ್ವಾಭಾವಿಕ ಹಾಗೂ ಅನಾದಿ ಅನಿರ್ವಾಚ್ಯವಾದ ಅವಿದ್ಯೆಯೇ ಉಪಾಧಿ. ಇನ್ನಿತರರು, ಭಾಸ್ಕರಾದಿಗಳು, ಸತ್ಯವೇ ಆದ ಅಂತಃಕರಣಾದಿಗಳೇ ಉಪಾಧಿಯೆಂದು ಹೇಳುತ್ತಾರೆ. ಜೀವನಿಗೆ ಪರಮಾತ್ಮನಿಂದ ಈ ಭೇದಾಭೇದ ಕಲ್ಪನೆ ಏಕೆಂದರೆ, 'ದ್ವಾಸುಪರ್ಣಾ' 'ನಿತ್ಯೋ ನಿತ್ಯಾನಾಂ' ಇತ್ಯಾದಿ ಶ್ರುತಿಗಳಲ್ಲಿ ಭೇದವ್ಯಪದೇಶವಿದೆ. ಹಾಗೂ 'ತತ್ತ್ವಮಸಿ' 'ಅಹಂ ಬ್ರಹ್ಮಾಸ್ಮಿ' ಇತ್ಯಾದಿಗಳಲ್ಲಿ ಅಭೇದ ವ್ಯಪದೇಶವಿದೆಯೆಂದು ಹೇಳುತ್ತಾರೆ. ಅಯುಕ್ತವಾದ ಈ ವ್ಯಾಖ್ಯಾನವನ್ನು 'ಭೇದಸ್ಯ' ಇತ್ಯಾದಿ ವಾಕ್ಯದಿಂದ ನಿರಾಕರಿಸುತ್ತಾರೆ –

**ಭೇದಸ್ಯ ಮುಕ್ತೌ ವಚನಾದಪಿ ತತ್ಪಕ್ಷನಿಗ್ರಹಃ ।।೮೧।।**

**ಚೇತನತ್ವಾದಿ ಸಾದೃಶ್ಯಂ ಯದ್ಯಭೇದ ಇತೀಷ್ಯತೇ ।**

**ಅಂಗೀಕೃತಂ ತದಸ್ಮಾಭಿರ್ನ ಸ್ವರೂಪೈಕತಾ ಕ್ವಚಿತ್ ।।೮೨।।**

ಮುಕ್ತಿಯಲ್ಲಿಯೂ ಭೇದವಿದೆ ಎಂದು ಹೇಳುವ ವಚನವಿರುವುದರಿಂದ ಮುಖ್ಯ ಅಭೇದವೆಂಬುದು ನಿರಾಕೃತವಾಗುತ್ತದೆ. ಚೇತನತ್ವಾದಿ ಧರ್ಮಗಳಿಂದ ಸಾದೃಶ್ಯವು ಅಭೇದವೆಂದು ಅಂಗೀಕರಿಸುವುದಾದರೆ, ಅದು ನಮ್ಮಿಂದಲೂ ಅಂಗೀಕರಿಸಲ್ಪಟ್ಟಿದೆ. ಎಲ್ಲಿಯೂ ಜೀವೇಶ್ವರರಿಗೆ ಸ್ವರೂಪಾಭೇದವು, ಅಂದರೆ ಮುಖ್ಯವಾದ ಅಭೇದವು, ಇಲ್ಲವೇ ಇಲ್ಲ.

**ನ ಕೇನಚಿದಭೇದೋಽಸ್ತಿ ಭೇದಾಭೇದೋಽಪಿ ವಾ ಕ್ವಚಿತ್ ।**

**ಸಮುದಾಯಮೃತೇ ವಿಷ್ಣೋಃ ಸ್ವಗುಣಾದೀನ್ವಿನಾಪಿ ವಾ ।।೮೩।।**

**ಇತಿ ಶ್ರುತೇರ್ನ ತಸ್ಯಾಸ್ತಿ ಭೇದಾಭೇದೋಽಪಿ ಕೇನಚಿತ್ ।**

ದ್ವಿತ್ವಾದಿ ಸಮುದಾಯ ಧರ್ಮವನ್ನು ಹೊರತುಪಡಿಸಿ ಯಾವುದರಿಂದಲೂ ಶ್ರೀಹರಿಗೆ ಅಭೇದವಾಗಲೀ, ಭೇದಾಭೇದವಾಗಲೀ ಎಲ್ಲಿಯೂ ಇಲ್ಲ. ಹಾಗೂ ತನ್ನ ಗುಣಾದಿಗಳನ್ನು ಹೊರತುಪಡಿಸಿ ಯಾವುದರಿಂದಲೂ ಅಭೇದವೂ ಇಲ್ಲ.

ಹೀಗೆ ಜೀವಬ್ರಹ್ಮರಲ್ಲಿ ಭೇದಾಭೇದಗಳಿಲ್ಲದಿದ್ದರೆ ಸೂತ್ರದಲ್ಲಿ ಭೇದಾಭೇದ ಶ್ರುತ್ಯುದಾಹರಣವು ಹೇಗೆ ಎಂದರೆ –

**ಅಭೇದಶ್ರುತಯೋಽಂಶತ್ವಾತ್ಸಾದೃಶ್ಯಂ ಚಾಂಶತಾಸ್ಯ ತು ।।೮೪।।**

ಅಭೇದಶ್ರುತಿಗಳೂ ಹಾಗೂ ಭೇದಶ್ರುತಿಗಳೂ ಜೀವರು ಪರಮಾತ್ಮನ ಅಂಶರಾದುದರಿಂದಲೇ ಯುಕ್ತವಾಗುತ್ತವೆ. ಈ ಅಂಶತ್ವವಾದರೂ ಜೀವನಿಗೆ ಪರಮಾತ್ಮನಿಂದ ಸಾದೃಶ್ಯವನ್ನೇ ಹೇಳುತ್ತದೆ.

ಅಂಶ ಶಬ್ದಕ್ಕೆ ಅನೇಕಾರ್ಥಗಳಿರುವಾಗ, ಮತ್ಸ್ಯಾದಿಗಳಿಗೆ ಸ್ವರೂಪಾಂಶತೆಯೂ, ಜೀವರಿಗೆ ಬೇರೆಯದಾದ ಅಂಶತೆಯೂ ಎನ್ನುವುದು ಹೇಗೆ ಸಿದ್ದವಾಗುತ್ತದೆ ಎಂದು ಕೇಳಿದರೆ, ಈ ವಿಷಯದಲ್ಲಿ ಆಗಮ ವಾಕ್ಯವನ್ನು ಪ್ರಮಾಣವನ್ನಾಗಿ ಹೇಳುತ್ತಾರೆ –

**ಅಂಶಸ್ತು ದ್ವಿವಿಧೋ ಜ್ಞೇಯಃ ಸ್ವರೂಪಾಂಶೋಽನ್ಯ ಏವ ಚ ।**

**ವಿಭಿನ್ನಾಂಶೋಽಲ್ಪಶಕ್ತಿಃ ಸ್ಯಾತ್ಕಿಂಚಿತ್ಸಾದೃಶ್ಯಮಾತ್ರಯುಕ್ ।।೮೫।।**

ಅಂಶವಾದರೂ ಸ್ವರೂಪಾಂಶ ಹಾಗೂ ವಿಭಿನ್ನಾಂಶ ಎಂಬುದಾಗಿ ಎರಡೇ ವಿಧವೆಂದು ತಿಳಿಯತಕ್ಕದ್ದು. ವಿಭಿನ್ನಾಂಶವು ಅಲ್ಪಶಕ್ತಿಯುಳ್ಳದ್ದು. ಅದು ಸ್ವಲ್ಪ ಸಾದೃಶ್ಯದಿಂದ ಮಾತ್ರ ಯುಕ್ತವಾದುದು.

**ಅಂಶಿನೋ ಯತ್ತು ಸಾಮರ್ಥ್ಯಂ ಯತ್ಸ್ವರೂಪಂ ಯಥಾ ಸ್ಥಿತಿಃ ।**

**ಸ ಏವ ಚೇತ್ಸ್ವರೂಪಾಂಶಃ ಪ್ರಾದುರ್ಭಾವೋ ಹರೇರ್ಯಥಾ ॥೮೬॥**

ಅಂಶಿಗೆ ಯಾವ ಸಾಮರ್ಥ್ಯವೋ ಯಾವ ಸ್ವರೂಪವೋ ಎಂಥಹ ಸ್ಥಿತಿಯೋ ಅಂಥಹುದೇ ಸಾಮರ್ಥ್ಯ, ಸ್ವರೂಪ ಹಾಗೂ ಸ್ಥಿತಿಗಳನ್ನು ಅಂಶವು ಹೊಂದಿದ್ದರೆ, ಅದು ಸ್ವರೂಪಾಂಶವೆಂದು ತಿಳಿಯಬೇಕು. ಶ್ರೀಹರಿಯ ಮತ್ಸ್ಯಾದಿರೂಪಗಳು ಹೇಗೋ ಹಾಗೆ.

ಮತ್ಸ್ಯಾದಿಗಳು ಸ್ವರೂಪಾಂಶಗಳೇ, ಜೀವರು ಭಿನ್ನಾಂಶಗಳೇ ಎಂಬುದನ್ನು ದೃಢಪಡಿಸಲು 'ಪ್ರಕಾಶಾದಿವತ್' ಎಂಬುದಾಗಿ ಸೂತ್ರಕಾರರು ದೃಷ್ಟಾಂತಗಳನ್ನು ಹೇಳಿದ್ದಾರೆ. ಅನುವ್ಯಾಖ್ಯಾನಕಾರರು ಆ ದೃಷ್ಟಾಂತಗಳನ್ನು ಇಲ್ಲಿ ಸ್ಪಷ್ಟಪಡಿಸುತ್ತಾರೆ –

**ಸೂರ್ಯಮಂಡಲಮಾನ್ಯೇಕಸ್ತತ್ಪ್ರಕಾಶಾಭಿಮಾನವಾನ್ ।**

**ಸೂರ್ಯೋಽಥ ಸಪ್ತಮಾಬ್ಧೇಶ್ಚ ಬಾಹ್ಯೋದಸ್ಯ ಚ ವಾರಿಪಃ ॥೮೭॥**

**ಕಠಿನತ್ವೇನ ಮೇರ್ವಾದೇಃ ಪೃಥಿವ್ಯಾ ಅಪಿ ದೇವತಾ ।**

**ಧರಾದೇವ್ಯೇವಮೇವೈಕೋ ಭಗವಾನ್ವಿಷ್ಣುರವ್ಯಯಃ ॥೮೮॥**

**ನಾನಾವತಾರರೂಪೇಣ ಸ್ಥಿತಃ ಪೂರ್ಣಗುಣಃ ಸದಾ ।**

**ವಿಣ್ಮೂತ್ರಾದ್ಯಭಿಮಾನಿನ್ಯೋ ಯಥಾಪಭ್ರಷ್ಟದೇವತಾಃ ॥೮೯॥**

**ಸೂರ್ಯಾದಿಭ್ಯಸ್ತಥೈವಾಯಂ ಸಂಸಾರೀ ಪರಮಾತ್ಪೃಥಕ್ ।**

ಹೇಗೆ ಸೂರ್ಯಮಂಡಲದ ಅಭಿಮಾನಿಯಾದ ಅಂಶಿಯಾದ ಸೂರ್ಯನು ಸೂರ್ಯಪ್ರಕಾಶಕ್ಕೆ ಅಭಿಮಾನಿಯಾದ ಸೂರ್ಯನ ಅಂಶನೂ ಅಭಿನ್ನರೋ, ಬಾಹ್ಯ ಜಲಾಭಿಮಾನಿಯಾದ ಅಂಶಿ ವರುಣನೂ ಸಪ್ತಮ ಸಮುದ್ರಕ್ಕೆ ಅಭಿಮಾನಿಯಾದ ವರುಣನ ಅಂಶನೂ ಹೇಗೆ ಅಭಿನ್ನರೋ ಮತ್ತು ಕಠಿಣತೆಯಿರುವುದರಿಂದ ಹೇಗೆ ಮೇರುಪರ್ವತವೇ ಮೊದಲಾದುದಕ್ಕೆ ಅಭಿಮಾನಿಯಾದ ಧರಾದೇವಿಯ ಅಂಶವೂ ಐವತ್ತು ಕೋಟಿ ವಿಸ್ತೀರ್ಣದ ಪೃಥಿವಿಗೆ ಅಭಿಮಾನಿಯಾದ ಅಂಶಿಯಾದ ಧರಾದೇವಿಯೂ ಅಭಿನ್ನರೋ, ಹಾಗೆಯೇ ನಾಶರಹಿತನೂ ಪೂರ್ಣಗುಣನೂ ಆದ ಅಂಶಿಯಾದ ಭಗವಾನ್ ನಾರಾಯಣನು ಅನೇಕ ಅವತಾರರೂಪಗಳಿಂದ ಇರುವ ಅವನ ಅಂಶವೂ ಯಾವಾಗಲೂ ಅಭಿನ್ನವೇ ಆದುದು. ಮಲಮೂತ್ರಾದಿ ಅಭಿಮಾನಿಗಳಾದ ಅಪಭ್ರಷ್ಟ ದೇವತೆಗಳೆಂಬ ಅಂಶಗಳು ಸೂರ್ಯ ಪೃಥಿವಿ ವರುಣ ಇತ್ಯಾದಿಗಳಿಂದ ಹೇಗೆ ಭಿನ್ನರೋ, ಅದರಂತೆಯೇ ಈ ಸಂಸಾರಿರೂಪ ಜೀವನು ಪರಮಾತ್ಮನಿಂದ ಭಿನ್ನನು.

ಇನ್ನು ಅಂಶಗಳಾದ ಜೀವರಿಗೆ ಅಂಶಿಯಾದ ಪರಮಾತ್ಮನಿಂದ ಭೇದವನ್ನು ಯುಕ್ತಿಯಿಂದ ಸಮರ್ಥನ ಮಾಡಲು 'ಅನುಜ್ಞಾಪರಿಹಾರೌ ದೇಹಸಂಬಂಧಾತ್ ಜ್ಯೋತಿರಾದಿವತ್' ಎಂಬ ಸೂತ್ರವು ಹೊರಟಿದೆ. ಇಲ್ಲಿಯೂ ದೃಷ್ಟಾಂತಗಳ ಅಸಂಗತಿಯನ್ನು ಆಶಂಕಿಸಿ, ಅಭಿಮಾನಿ ವಿಷಯಕವಾದ ಅವುಗಳನ್ನು 'ದೇಹ' ಇತ್ಯಾದಿ ವಚನದಿಂದ ವ್ಯಾಖ್ಯಾನಿಸುತ್ತಾರೆ –

**ದೇಹದೋಷೈಶ್ಚ ದುಷ್ಟತ್ವಾದಪಭ್ರಷ್ಟಾಖ್ಯದೇವತಾಃ ॥೯೦॥**

**ಅನ್ಯಾಃ ಸೂರ್ಯಾದಿದೇವೇಭ್ಯೋ ಹ್ಯನುಗ್ರಾಹ್ಯಾಶ್ಚ ತೈಃ ಸದಾ ।**

**ಏವಮೇವ ಪರಾದ್ವಿಷ್ಣೋಃ ಪೃಥಕ್ಸಂಸಾರಿಣೋ ಮತಾಃ ॥೯೧॥**

**ಅನುಗ್ರಾಹ್ಯಾಶ್ಚ ತೇನೈವ ತತ್ಪ್ರಸಾದಾಚ್ಚ ಮೋಕ್ಷಿಣಃ ।**

**ನ ತು ಮತ್ಸ್ಯಾದಿರೂಪಾಣಾಮನುಗ್ರಾಹ್ಯತ್ವಮಿಷ್ಯತೇ ॥೯೨॥**

ಪರದೇಹಗತ ದೋಷಗಳಿಂದ ದುಷ್ಟತ್ವವಿರುವುದರಿಂದ ಅಪಭ್ರಷ್ಟನಾಮಕ ದೇವತೆಗಳು ಸೂರ್ಯ ಮೊದಲಾದ ದೇವತೆಗಳಿಂದ ಭಿನ್ನರು. ಅವರು ಸೂರ್ಯಾದಿಗಳಿಂದ ಯಾವಾಗಲೂ ಅನುಗ್ರಾಹ್ಯರೇ. ಇದರಂತೆಯೇ ಸಂಸಾರಿ ಜೀವರು ಸರ್ವೋತ್ತಮನಾದ ಶ್ರೀಹರಿಯಿಂದ ಭಿನ್ನರೂ, ಅವನಿಂದಲೇ ಸದಾ ಅನುಗ್ರಹ ಪಡೆಯತಕ್ಕವರೂ ಹಾಗೂ ಅವನ ಪ್ರಸಾದದಿಂದಲೇ ಮೋಕ್ಷವುಳ್ಳವರು ಎಂದು ಸಂಮತವು. ಮತ್ಸ್ಯಾದಿ ರೂಪಗಳಿಗೆ ಶ್ರೀಹರಿಯಿಂದ ಅನುಗ್ರಾಹ್ಯತ್ವವು, 'ನೈವ ತೇ ಜಾಯಂತೇ' ಇತ್ಯಾದಿ ಶ್ರುತಿಬಲದಿಂದ, ಅಂಗೀಕರಿಸಲ್ಪಡುವುದೇ ಇಲ್ಲ.

ಇನ್ನು 'ಓಂ ಅಸಂತತೇಶ್ಚಾವ್ಯತಿಕರಃ ಓಂ' ಎಂಬ ಸೂತ್ರವು ಜೀವರಿಗೆ ಪರಮಾತ್ಮನಿಂದ ಭೇದವನ್ನಷ್ಟೇ ಸಾಧನ ಮಾಡುವುದಾಗಿ ತೋರುತ್ತದೆ. ಆದರೆ ಮತ್ಸ್ಯಾದಿಗಳಿಗೆ ಪರಮಾತ್ಮನಿಂದ ಅಭೇದವನ್ನೂ ಸಾಧನ ಮಾಡುವುದಾಗಿ ತೋರುವುದಿಲ್ಲ ಎಂದು ಆಶಂಕಿಸಿದರೆ – ಈ ಸೂತ್ರವು ಉಪಲಕ್ಷಣದಿಂದ ಸ್ವರೂಪಾಂಶದೊಂದಿಗೆ ಅಭೇದವನ್ನೂ ಹೇಳುವುದೆಂದು 'ಗುಣೈಃ' ಇತ್ಯಾದಿ ವಾಕ್ಯದಿಂದ ವಿವರಿಸುತ್ತಾರೆ –

**ಗುಣೈರಶೇಷೈಃ ಪೂರ್ಣತ್ವಾನ್ಮುಖ್ಯಾಭೇದೋ ಪರೈರ್ನ ಚ ।**

ಮತ್ಸ್ಯಾದಿ ಅಂಶರೂಪಗಳಿಗೆ ಎಲ್ಲ ಗುಣಗಳಿಂದ ಪರಿಪೂರ್ಣತ್ವವಿರುವುದರಿಂದ ಅಂಶಿಯಿಂದ ಅವುಗಳಿಗೆ ಮುಖ್ಯವಾದ ಅಭೇದವೇ ಇರುವುದು. ಆದರೆ ಇನ್ನುಳಿದ ಜೀವರು ಅಪೂರ್ಣಗುಣರಾದ್ದರಿಂದ ಅವರಿಗೆ ಪರಮಾತ್ಮನೊಂದಿಗೆ ಅಭೇದವಿಲ್ಲ.

ಹೀಗೆ ಅಂಶನಾದರೂ ಜೀವನಿಗೆ ಈಶ್ವರನಿಂದ ಭೇದವು ಸಮರ್ಥಿಸಲ್ಪಟ್ಟಿತು.

ಜೀವನಿಗೆ ಪರಮಾತ್ಮನ ಮುಖ್ಯಾಂಶತ್ವವಿಲ್ಲ ಎಂಬುದನ್ನು ಪ್ರತಿಪಾದಿಸುವ ಸೂತ್ರ –

**ಓಂ ಆಭಾಸ ಏವ ಚ ಓಂ**

ಜೀವನು ಈಶ್ವರನ ಪ್ರತಿಬಿಂಬನೇ, ಮತ್ಸ್ಯಾದಿಗಳು ಈಶನ ಪ್ರತಿಬಿಂಬರಲ್ಲ.

'ಅಂಶ' ಇತ್ಯಾದಿ ವಾಕ್ಯದಿಂದ ಈ ಸೂತ್ರವನ್ನು ವ್ಯಾಖ್ಯಾನಿಸುತ್ತಾರೆ –

**ಅಂಶಾಭಾಸಾಶ್ಚ ಸರ್ವೇಽಪಿ ಪರಸ್ಯಾಂಶಾ ನ ಮುಖ್ಯತಃ ।।೯೩।।**

**ಯಥೈಷಾ ಪುರುಷೇ ಛಾಯಾ ಏತಸ್ಮಿನ್ನೇತದಾತತಮ್ ।**

ಸರ್ವಜೀವರೂ ಅಂಶಾಭಾಸರು. ಪರಮಾತ್ಮನ ಮುಖ್ಯವಾದ ಅಂಶರಲ್ಲ. ಜೀವರಿಗೆ ಅಂಶಾಭಾಸತ್ವವನ್ನು ಶ್ರುತ್ಯಂತರದಿಂದ 'ಯಥಾ' ಇತ್ಯಾದಿ ವಾಕ್ಯದಿಂದ ದೃಢಪಡಿಸುತ್ತಾರೆ – ಹೇಗೆ ಈ ನೆರಳು ಪುರುಷನಲ್ಲಿ ಅಧೀನವೋ ಹಾಗೆಯೇ ಈ ಜೀವ ಸಮುದಾಯವು ಈ ಪರಮಾತ್ಮನಲ್ಲಿ ಅಧೀನವು. ಇದೇ ಅಂಶತ್ವವು.

ಹಾಗಾದರೆ ಜೀವರಿಗೆ ಮುಖ್ಯಾಂಶತ್ವವಿಲ್ಲವೆಂಬುದು ಶ್ರುತಿವಿರುದ್ಧವು. ಏಕೆಂದರೆ 'ಪಾದೋಸ್ಯ ವಿಶ್ವಾಭೂತಾನಿ ತ್ರಿಪಾದಸ್ಯಾಮೃತಂ ದಿವಿ' ಎನ್ನುವ ಮಂತ್ರವರ್ಣದಲ್ಲಿ ಅನಂತಾಸನ ಶ್ವೇತದ್ವೀಪ ವೈಕುಂಠಗಳೆಂಬ ದ್ಯು ಎಂಬ ಮೂರು ಲೋಕಗಳಲ್ಲಿ ಇರುವ ಪರಮಾತ್ಮನ ರೂಪತ್ರಯದಂತೆ, ಭೂತ ಶಬ್ದವಾಚ್ಯರಾದ ಜೀವರಿಗೂ ಪರಮಪುರುಷನ ಪಾದರೂಪತ್ವವು (ಅಂಶತ್ವವು) ಹೇಳಲ್ಪಟ್ಟಿರುತ್ತದೆ. ಹೀಗೆ ಆಶಂಕಿಸಿದರೆ, ವಿಶೇಷಶ್ರುತಿಬಲದಿಂದ ಪಾದ ಎಂಬ ಶಬ್ದಕ್ಕೆ ಅನೇಕಾರ್ಥವನ್ನು ಕಲ್ಪಿಸುವುದು ಯುಕ್ತಿಯುಕ್ತವು ಎನ್ನುತ್ತಾರೆ –

**ನ ತು ಪುಂಪಾದತ್ವಾತ್ಪಾದಾ ಜೀವಾ ಏತೇ ಪರಮಾತ್ಮನಃ ।।೯೪।।**

**ಪೂರ್ಣಾಸ್ತಸ್ಯ ಗುಣಾ ಏವ ಪ್ರಾದುರ್ಭಾವತಯಾ ಸ್ಥಿತಾಃ ।**

**ಏವಂ ಜಗಾದ ಪರಮಾ ಶ್ರುತಿರ್ನಾರಾಯಣಂ ಪರಮ್ ।।೯೫।।**

ಈ ಜೀವರು ಪರಮಪುರುಷನ ಅಮೃತಾಖ್ಯ ಪಾದತ್ರಯದಂತೆ ಪರಮಾತ್ಮನ ಸ್ವರೂಪಾಂಶರಲ್ಲ. ಏಕೆಂದರೆ, ಪರಮಪುರುಷನ ಪೂರ್ಣವಾದ ಗುಣಗಳೇ ಪ್ರಾದುರ್ಭಾವ ರೂಪದಿಂದ ಇರತಕ್ಕ ಮತ್ಸ್ಯಾದಿರೂಪಗಳು. ಹೀಗೆ ಪರಮ ಶ್ರುತಿಯು ನಾರಾಯಣನನ್ನು ಜೀವಾಂಶಗಳಿಂದ ಭಿನ್ನನೆಂದು ಹೇಳಿದೆ.

ಅಧಿದೈವಾದಿ ಸ್ವರೂಪಗಳ ನಿರ್ಣಯಕ್ಕೋಸ್ಕರ ಈ ಪಾದದ ಆರಂಭವು ಎಂಬುದಾಗಿ ಈ ಪಾದದ ಆರಂಭಣೀಯತ್ವ ಸಮರ್ಥನೆಯ ಪ್ರಸಂಗದಲ್ಲಿ ಉಕ್ತವಾಗಿದೆ. ಹೀಗಿರುವಾಗ ಎಂಥಹ ನಿರ್ಣಯವು ಉಂಟಾಯಿತು ಎಂಬ ಆಶಂಕೆ

ಬಂದರೆ, ಆ ನಿರ್ಣಯವನ್ನು ಬುದ್ಧಿಯಲ್ಲಿ ಆರೂಢ ಮಾಡುವುದಕ್ಕಾಗಿ ಸಂಗ್ರಹಿಸಿ, 'ಅಕ್ಷಯೋ' ಇತ್ಯಾದಿ ವಚನದಿಂದ ಹೇಳುತ್ತಾರೆ –

**ಅಕ್ಷಯೋ ಭಗವಾನ್ವಿಷ್ಣುರ್ಲಕ್ಷ್ಮ್ಯಾವಾಸೋ ಲಯೇ ಸ್ಥಿತಃ ।**

**ಮುಕ್ತೈಃ ಸದಾ ಚಿಂತ್ಯಮಾನೋ ಬ್ರಹ್ಮಾದ್ಯೈಸ್ತಾರತಮ್ಯಗೈಃ ॥೯೬॥**

ಲಕ್ಷ್ಮಿಯ ಆವಾಸನಾದ ಭಗವಾನ್ ವಿಷ್ಣುವು ನಾಶರಹಿತನಾಗಿಯೇ ಪ್ರಲಯ ಕಾಲದಲ್ಲಿ ಇರುವನು. ತರತಮಭಾವವನ್ನು ಹೊಂದಿರುವ ಬ್ರಹ್ಮಾದಿ ಮುಕ್ತರಿಂದ ಸದಾ ಧ್ಯಾನಿಸಲ್ಪಡುತ್ತಾನೆ.

**ಪ್ರಕೃತಿಃ ಪುರುಷಃ ಕಾಲೋ ವೇದಾಶ್ಚೇತಿ ಚತುಷ್ಟಯಮ್ ।**

**ನಿತ್ಯಂ ಸ್ವರೂಪತೋ ವಿಷ್ಣೋರ್ವಿಶೇಷಾವಾಪ್ತಿಮಾತ್ರತಃ ॥೯೭॥**

**ಉತ್ಪತ್ತಿಮದಿತಿ ಪ್ರೋಕ್ತಂ ಲಕ್ಷ್ಮೀಸ್ತದಭಿಮಾನಿನೀ ।**

**ತತೋ ಜಾತಃ ಪುಮಾನ್ನಾಮ ಬ್ರಹ್ಮಾಸ್ಯಾಂ ವಾಸುದೇವತಃ ॥೯೮॥**

ಪ್ರಕೃತಿ, ಜೀವ, ಕಾಲ, ವೇದ ಈ ನಾಲ್ಕು ಸ್ವರೂಪದಿಂದ ನಿತ್ಯವು. ವಿಷ್ಣುವಿನಿಂದ ಪರಾಧೀನವಿಶೇಷಾವಾಪ್ತಿಯಿಂದಲೇ ಇವುಗಳು ಉತ್ಪತ್ತಿಯುಳ್ಳವೆಂದು ಹೇಳಲ್ಪಡುತ್ತವೆ. ಪ್ರಕೃತ್ಯಭಿಮಾನಿಯಾದ ಮಹಾಲಕ್ಷ್ಮಿಯೂ ಕೂಡ ಇಂಥಹ ಉತ್ಪತ್ತಿಯುಳ್ಳವಳೇ. ಅನಂತರ ಇವಳಲ್ಲಿ ವಾಸುದೇವರೂಪದಿಂದ ಪುರುಷನಾಮಕ ಚತುರ್ಮುಖನು ಹುಟ್ಟಿದನು.

**ಸೂತ್ರಾತ್ಮಾ ಪ್ರಾಣನಾಮಾ ಚ ದೇವ್ಯೌ ಪ್ರಕೃತಿಮಾನಿನೀ ।**

**ತತೋ ರೂಪಂ ಮಹನ್ನಾಮ ಬ್ರಹ್ಮಣೋಽಹಂಕೃತಿಃ ಶಿವಃ ॥೯೯॥**

ಸೂತ್ರರೂಪನಾದ ಪ್ರಾಣನಾಮಕ ವಾಯುವು ಸಂಕರ್ಷಣನಿಂದ ಜಯಾ ನಾಮಕ ಲಕ್ಷ್ಮಿಯಲ್ಲಿ ಹುಟ್ಟಿದನು. ಜಡಪ್ರಕೃತಿಗೆ ಅವಾಂತರ ಅಭಿಮಾನಿಗಳಾದ ಸರಸ್ವತೀ ಭಾರತೀದೇವಿಯರು ಪ್ರದ್ಯುಮ್ನನ ದೆಶೆಯಿಂದ ಕೃತಿನಾಮಕಳಾದ ಮಹಾಲಕ್ಷ್ಮಿಯಲ್ಲಿ ಹುಟ್ಟಿದರು. ಅನಂತರ ವಾಸುದೇವನ ದೆಶೆಯಿಂದಲೇ ಮಹತ್ ತತ್ವಾಭಿಮಾನಿಯಾದ ಚತುರ್ಮುಖ ರೂಪವು ಹುಟ್ಟಿತು. ಈ ಮಹತ್ತತ್ವಾಭಿಮಾನಿ ಚತುರ್ಮುಖನಿಂದ ಅಹಂಕಾರ ತತ್ವಾಭಿಮಾನಿ ರುದ್ರನು ಹುಟ್ಟಿದನು.

**ಬ್ರಹ್ಮಣೋ ಬುದ್ಧಿನಾಮ್ನೋಮಾ ತತ ಇಂದ್ರೋ ಮನೋಽಭಿಧಃ ।**

**ಸ್ಕಂದಶ್ಚ ತತ ಏವಾನ್ಯೇ ಸರ್ವೇ ದೇವಾಃ ಪ್ರಜಜ್ಞಿರೇ ॥೧೦೦॥**

ಆ ಮಹತ್ತತ್ತ್ವಾಭಿಮಾನಿಯಿಂದಲೇ ಬುದ್ಧಿತತ್ವಾಭಿಮಾನಿ ಉಮಾದೇವಿಯು ಹುಟ್ಟಿದಳು. ಅಹಂಕಾರಾಭಿಮಾನಿ ರುದ್ರನಿಂದ ಉಮೆಯಲ್ಲಿ ಮನಸ್ತತ್ವಾಭಿಮಾನಿ ಇಂದ್ರ ಸ್ಕಂದರು ಹುಟ್ಟಿದರು. ಆ ಇಂದ್ರಾದಿ ದೇವತೆಗಳಿಂದಲೇ ಇತರರಾದ ಎಲ್ಲ ತತ್ವಾಭಿಮಾನಿ ದೇವತೆಗಳು ಹುಟ್ಟಿದರು.

**ತತ್ರ ಪೂರ್ವತನಃ ಶ್ರೇಯಾನ್ ಗುಣೈಃ ಸರ್ವೈಃ ಸಮಸ್ತಶಃ ।**

**ತೇಭ್ಯಶ್ಚ ಭಗವಾನ್ವಿಷ್ಣುಸ್ತದಧೀನಾ ಇಮೇ ಸದಾ ॥೧೦೧॥**

ಅವರೆಲ್ಲರಲ್ಲಿ ಎಲ್ಲಕ್ಕೂ ಮೊದಲಿನವನು ಎಲ್ಲರಿಗಿಂತ ಶ್ರೇಷ್ಠನು. ಇವರೆಲ್ಲರಿಗಿಂತ ಭಗವಾನ್ ವಿಷ್ಣುವು ಶ್ರೇಷ್ಠನು. ಎಲ್ಲ ದೇವತೆಗಳೂ ಸದಾ ಅವನ ಅಧೀನರು.

**ಜನ್ಮಸ್ಥಿತಿಲಯಾಜ್ಞಾನನಿಯತಿಜ್ಞಾನಸಂಸೃತಿಃ ।**

**ಮೋಕ್ಷಶ್ಚ ತದಧೀನತ್ವಮೇತೇಷಾಂ ನೈವ ಹೀಯತೇ ॥೧೦೨॥**

ಸೃಷ್ಟಿ, ಸ್ಥಿತಿ, ಲಯ, ಅಜ್ಞಾನ, ನಿಯಮನ, ಜ್ಞಾನ, ಸಂಸಾರ ಹಾಗೂ ಮುಕ್ತಿಯೂ ಕೂಡ ಸದಾ ಆ ಶ್ರೀಹರಿಯ ಅಧೀನಗಳು. ಈ ಬ್ರಹ್ಮಾದಿಗಳಿಗೆ ಅವನ ಅಧೀನತ್ವವು ಎಂದಿಗೂ ಅಳಿಯುವುದಿಲ್ಲ.

**ಮುಕ್ತಾವಪಿ ಸ ಏವೈಕಃ ಸ್ವತಂತ್ರಃ ಪೂರ್ಣಸದ್ಗುಣಃ ।**
**ಇತಿ ಶ್ರುತ್ಯುಪಪತ್ತಿಭ್ಯಾಂ ಪಾದೇಽಸ್ಮಿನ್ಪ್ರಭುಣೋದಿತಮ್ ॥೧೦೩॥**

ಮೋಕ್ಷದಲ್ಲಿಯೂ ಅವನೊಬ್ಬನೇ ಸ್ವತಂತ್ರನು, ನಿರ್ದೋಷ ಅಶೇಷ ಗುಣಪೂರ್ಣನು. ಹೀಗೆ ಶ್ರುತಿಯುಕ್ತಿಗಳಿಂದ ಈ ಪಾದದಲ್ಲಿ ಪ್ರಭುವಾದ ಶ್ರೀಹರಿಯಿಂದ ವೇದವ್ಯಾಸರೂಪದಿಂದ ಹೇಳಲ್ಪಟ್ಟಿದೆ.

**॥ ಇತಿ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯ ವಿರಚಿತೇ**

**ಶ್ರೀಮದನುವ್ಯಾಖ್ಯಾನೇ ದ್ವಿತೀಯಾಧ್ಯಾಯಸ್ಯ ತೃತೀಯಃ ಪಾದಃ ॥**

**॥ ಇಲ್ಲಿಗೆ ಶ್ರೀಮದನಾಂದತೀರ್ಥಭಗವತ್ಪಾದಾಚಾರ್ಯವಿರಚಿತ ಶ್ರೀಮದನುವ್ಯಾಖ್ಯಾನದ ಎರಡನೆಯ ಅಧ್ಯಾಯದ ಮೂರನೆಯ ಪಾದದ ಕನ್ನಡ ಅನುವಾದವು ಮುಗಿದುದು ॥**

* * *

# ಎರಡನೆಯ ಅಧ್ಯಾಯ
# ನಾಲ್ಕನೆಯ ಪಾದ

ನಾಲ್ಕನೆಯ ಪಾದದಲ್ಲಿಯೂ ಶ್ರುತಿವಚನಗಳಲ್ಲಿನ ಪರಸ್ಪರ ವಿರೋಧವೇ ಪರಿಹರಿಸಲ್ಪಡುವುದಾದರೂ, ಅಧ್ಯಾತ್ಮ ವಿಷಯತ್ವವಿರುವುದರಿಂದ ಈ ಪಾದಕ್ಕೆ ಭೇದವು ಸಿದ್ಧಿಸುತ್ತದೆಯೆಂದು ಮೂರನೆಯ ಪಾದದ ಉಪಕ್ರಮದಲ್ಲಿಯೇ ಸೂಚಿಸಲಾಗಿದೆ. ಹಾಗಿದ್ದರೂ ಪ್ರಕಾರಾಂತರದಿಂದ ಪಾದಭೇದವನ್ನು ತೋರಿಸಲು 'ಶ್ರುತ್ಯರ್ಥಃ' ಇತ್ಯಾದಿ ವಾಕ್ಯವನ್ನು ಇಲ್ಲಿ ಹೇಳುತ್ತಾರೆ –

**ಶ್ರುತ್ಯರ್ಥಃ ಶ್ರುತಿಯುಕ್ತಿಭ್ಯಾಂ ವಿರುದ್ಧ ಇವ ದೃಶ್ಯತೇ ।**

**ಯತ್ರ ತನ್ನಿರ್ಣಯಂ ದೇವಃ ಸುವಿಶಿಷ್ಟೋಪಪತ್ತಿಭಿಃ ॥೧॥**

**ಕರೋತ್ಯನೇನ ಪಾದೇನ ................................ ।**

ಯಾವ ಪ್ರಾಣಾದಿಗಳ ವಿಷಯದಲ್ಲಿ ಜನ್ಮ ಮುಂತಾದ ಶ್ರುತಿಯ ಅರ್ಥವು ಯುಕ್ತಿ ಸಹಿತವಾದ ಶ್ರುತಿಗಳಿಂದ ವಿರುದ್ಧವಾದಂತೆ ತೋರುವುದೋ, ಅಂಥಹ ಶ್ರುತಿಯ ಅರ್ಥನಿರ್ಣಯವನ್ನು ಸುವಿಶಿಷ್ಟವಾದ ಯುಕ್ತಿಗಳಿಂದ ಶ್ರೀವೇದವ್ಯಾಸರು ಈ ಪಾದದಿಂದ ಮಾಡುತ್ತಾರೆ.

'ತಥಾ ಪ್ರಾಣಾಃ' ಇತ್ಯಾದಿ ಸೂತ್ರಗಳ ಅರ್ಥವು ಭಾಷ್ಯದಲ್ಲಿಯೇ ಸ್ಪಷ್ಟವಾಗಿ ಹೇಳಿರುವುದರಿಂದ, ಪೂರ್ವಪಕ್ಷ–ಉತ್ತರಪಕ್ಷಗಳ ಯುಕ್ತಿಗಳನ್ನು 'ತತ್ರ' ಇತ್ಯಾದಿ ವಾಕ್ಯದಿಂದ ಇಲ್ಲಿ ಸಂಗ್ರಹಿಸುತ್ತಾರೆ –

**.................................. ತತ್ರ ಸ್ಪಷ್ಟಾರ್ಥವಚ್ಛ್ರುತಿಃ ।**

**ವಿಶೇಷಶ್ರುತಿವೈರೂಪ್ಯಂ ಮಾಹಾತ್ಮ್ಯಂ ವ್ಯಕ್ತಸದ್ಗುಣಃ ॥೨॥**

**ದೃಷ್ಟಾಯುಕ್ತಿಃ ಸಮಾನತ್ವಂ ಕರ್ತೃಶಕ್ತಿರ್ವಿಮಿಶ್ರಿತಾ ।**

**ಯುಕ್ತಯಃ ಪೂರ್ವಪಕ್ಷೇಷು ಸುನಿರ್ಣೀತಾಸ್ತು ತಾದೃಶಾಃ ॥**

**ಯುಕ್ತಯೋ ನಿರ್ಣಯಸ್ಯೈವ ಸ್ವಯಂ ಭಗವತೋದಿತಾಃ ॥೩॥**

ಈ ನಾಲ್ಕನೆಯ ಪಾದದಲ್ಲಿ ಸ್ಪಷ್ಟಾರ್ಥವುಳ್ಳ ಶ್ರುತಿ, ವಿಶೇಷ ಶ್ರುತಿವಿರೋಧ, ಪ್ರಾಣನಿಗಿಂತ ಅಧಿಕವಾದ ವಿಷ್ಣುವಿನ ಮಹಿಮೆ, ಅಭಿವ್ಯಕ್ತಸದ್ಗುಣತ್ವ, ದೃಷ್ಟ

ಶ್ರುತ್ಯುಕ್ತಾರ್ಥದ ಅಯುಕ್ತತೆ, ಸಮಾನತೆ, ವಿಷ್ಣುವಿನ ಕರ್ತೃತ್ವ ಶಕ್ತಿ, ವಿಮಿಶ್ರಿತಾ – ಇವು ಪೂರ್ವಪಕ್ಷಗಳ ಯುಕ್ತಿಗಳು. ಚೆನ್ನಾಗಿ ನಿರ್ಣಯಿಸಲ್ಪಟ್ಟ ಹಿಂದೆ ಹೇಳಿದಂತೆ ಹೆಸರುಳ್ಳ ಯುಕ್ತಿಗಳೇ ಸಿದ್ಧಾಂತ ಯುಕ್ತಿಗಳು. ಹೀಗೆ ಸಿದ್ಧಾಂತ ನಿರ್ಣಯಕ್ಕಾಗಿ ಸ್ವಯಂ ಶ್ರೀವೇದವ್ಯಾಸರಿಂದಲೇ ಹೇಳಲ್ಪಟ್ಟಿವೆ.

**ಶ್ರೀಮದಾಚಾರ್ಯರು ಸೂತ್ರರೂಪವಾಗಿ ಮೇಲೆ ಸೂಚಿಸಿರುವ ಈ ಪಾದದ ಎಲ್ಲ ಅಧಿಕರಣಗಳ ಪೂರ್ವಪಕ್ಷ ಹಾಗೂ ಸಿದ್ಧಾಂತ ಯುಕ್ತಿಗಳನ್ನು ನ್ಯಾಯವಿವರಣ ಟೀಕೆಯ ಆದಾರದ ಮೇಲೆ ಈ ಕೆಳಗೆ ವಿವರಣೆ ನೀಡಲಾಗಿದೆ –**

**೧. ಪ್ರಾಣೋತ್ಪತ್ತಿ ಅಧಿಕರಣ** (ಸ್ಪಷ್ಟಾರ್ಥವತ್ ಶ್ರುತಿಃ ಎಂಬ ಯುಕ್ತಿ)

ಪೂರ್ವಪಕ್ಷ–'ಅಥ ಪ್ರಾಣಾ ಏವಾನಾದಯಃ' (ಪ್ರಾಣಗಳು ಅನಾದಿಯಾಗಿವೆ) ಮುಂತಾದ ಶ್ರುತಿಗಳು ಸ್ಪಷ್ಟವಾಗಿ ಪ್ರಾಣಗಳಿಗೆ ಉತ್ಪತ್ತಿಯ ಅಭಾವವನ್ನು ಬೋಧಿಸುತ್ತವೆ. 'ಏತಸ್ಮಾಜ್ಜಾಯತೇ ಪ್ರಾಣಃ' ಇತ್ಯಾದಿ ಶ್ರುತಿಗಳು ಪ್ರಾಣಗಳಿಗೆ ಉತ್ಪತ್ತಿಯನ್ನು ಹೇಳುತ್ತವೆ. ಹೀಗೆ ಸ್ಪಷ್ಟಾರ್ಥವಾದ ಶ್ರುತಿಗಳಿಗೆ (ಪ್ರಾಣಗಳಿಗೆ ಅನಾದಿತ್ವವನ್ನು ಹೇಳುವ ಶ್ರುತಿಗಳಿಗೆ) ವಿರುದ್ಧವಾದುದರಿಂದ ಪ್ರಾಣನಿಗೆ ಉತ್ಪತ್ತಿಯನ್ನು ಹೇಳುವ ಶ್ರುತಿಗಳು ಅಪ್ರಮಾಣ. ಆದ್ದರಿಂದ ಪರಮಾತ್ಮನಿಗೆ ಸರ್ವಕರ್ತೃತ್ವವು ಕೂಡುವುದಿಲ್ಲ.

ಸಿದ್ಧಾಂತ – 'ಆತ್ಮೈವೇದಮಗ್ರ ಆಸೀತ್', 'ಸ ಪ್ರಾಣಮಸೃಜತ ಸ ಪ್ರಾಣಾನ್' ಇತ್ಯಾದಿ ಶ್ರುತಿಗಳು ಸ್ಪಷ್ಟವಾಗಿ ಪ್ರಾಣನಿಗೆ ಉತ್ಪತ್ತಿಯನ್ನು ಹೇಳುವುದರಿಂದ, ಪ್ರಾಣಗಳು ಅನಾದಿಯಲ್ಲ. ಪ್ರಾಣಗಳಿಗೆ ಅನಾದಿತ್ವವನ್ನು ಹೇಳುವ ಶ್ರುತಿಗಳು ಸೂಕ್ಷ್ಮರೂಪದಿಂದ ಅನಾದಿತ್ವವನ್ನು ಹೇಳುತ್ತವೆ. 'ಇದಂ ಸರ್ವಮಸೃಜತ' (ಕಣ್ಣಿಗೆ ಕಾಣುವ ಇವೆಲ್ಲವನ್ನೂ ಪರಮಾತ್ಮನು ಸೃಷ್ಟಿಸಿದನು) ಎಂದು ಶ್ರುತಿಯು ಎಲ್ಲ ಪದಾರ್ಥಗಳಿಗೂ ಪರಮಾತ್ಮನಿಂದ ಉತ್ಪತ್ತಿಯನ್ನು ಹೇಳುವುದರಿಂದ, ಪ್ರಾಣಗಳಿಗೆ ಪರಮಾತ್ಮನಿಂದ ಉತ್ಪತ್ತಿಯನ್ನು ಅಂಗೀಕರಿಸಲೇಬೇಕು. ಆದ್ದರಿಂದ ವಿಷ್ಣುವೇ ಸರ್ವಜಗತ್ಕಾರಣನು.

**೨. ತತ್ಪ್ರಾಗಧಿಕರಣ** (ವಿಶೇಷ ಶ್ರುತಿ ವೈರೂಪ್ಯಂ ಎಂಬ ಯುಕ್ತಿ)

ಪೂರ್ವಪಕ್ಷ – 'ನಿತ್ಯಂ ಮನೋಽನಾದಿತ್ವಾತ್' ಎಂಬ ಶ್ರುತಿಯು ಮನಸ್ಸು ಅನಾದಿಯಾದ್ದರಿಂದ ಅದಕ್ಕೆ ಉತ್ಪತ್ತಿಯಾಗಲೀ ನಾಶವಾಗಲೀ ಇಲ್ಲವೆಂದು ಹೇಳುತ್ತದೆ. ಆದ್ದರಿಂದ ಪರಮಾತ್ಮನಿಗೆ ಸರ್ವಕರ್ತೃತ್ವವು ಕೂಡುವುದಿಲ್ಲ.

ಸಿದ್ಧಾಂತ – 'ಏತಸ್ಮಾಜ್ಜಾಯತೇ ಪ್ರಾಣೋ ಮನಸ್ಸರ್ವೇಂದ್ರಿಯಾಣಿ ಚ' ಇತ್ಯಾದಿ ಶ್ರುತಿಯು ಮನಸ್ಸು ಮತ್ತು ಎಲ್ಲ ಇಂದ್ರಿಯಗಳೂ ಪರಮಾತ್ಮನಿಂದಲೇ ಹುಟ್ಟುತ್ತವೆ ಎಂದು ಹೇಳುತ್ತವೆ. ಮನಸ್ಸಿಗೆ ಸೃಷ್ಟಿಕಾಲದಲ್ಲಿ ಭೂತೋಪಚಯರೂಪ

ಉತ್ಪತ್ತಿಯು ಆಗುವುದು. ಭೂತೋಪಚಯವು ಬಹಳ ಕಡಿಮೆ ಪ್ರಮಾಣದಲ್ಲಿ ಇರುವುದರಿಂದ ಮನಸ್ಸು ಅನಾದಿಯೆಂದು ಶ್ರುತಿಗಳು ಹೇಳುತ್ತವೆಯೇ ಹೊರತು ಸಂಪೂರ್ಣವಾಗಿ ಅನಾದಿತ್ವವನ್ನಲ್ಲ. ಆದ್ದರಿಂದ ವಿಷ್ಣುವಿಗೆ ಸರ್ವಜಗತ್ಕಾರಣತ್ವವು ಕೂಡುತ್ತದೆ.

**೩. ವಾಗಧಿಕರಣ** (ವಿಶೇಷ ಶ್ರುತಿ ವೈರೂಪ್ಯಂ ಎಂಬ ಯುಕ್ತಿ)

ಪೂರ್ವಪಕ್ಷ – ವಾಕ್ ನಿತ್ಯವೇ ಎಂದು 'ವಾಗ್ವಾವ ನಿತ್ಯಾ' ಎಂಬ ಶ್ರುತಿಯು ಹೇಳುತ್ತದೆ. ಇಲ್ಲಿ ವಾಕ್ ಎಂದರೆ ವಾಗಿಂದ್ರಿಯ ಎಂದರ್ಥ. ಶ್ರುತಿಯೆಂದು ಅರ್ಥ ಮಾಡಿದರೆ 'ಅಸ್ಯಾಂ ಹಿ ಶ್ರುತಿರವತಿಷ್ಠತೇ' ಎಂದು ಹೇಳುವ ಶ್ರುತಿಗೆ ವಿರೋಧ ಬರುತ್ತದೆ (ಏಕೆಂದರೆ ಶ್ರುತಿಯಲ್ಲಿ ಶ್ರುತಿಯಿರುವುದು ಸಾಧ್ಯವಿಲ್ಲ). ಹೀಗೆ ವಾಗಿಂದ್ರಿಯವು ಅನಾದಿಯಾದ್ದರಿಂದ ಪರಮಾತ್ಮನು ಸರ್ವಕರ್ತನಲ್ಲ.

ಸಿದ್ಧಾಂತ – 'ಮನಸೋ ವಾವ ವಾಕ್' ಎಂಬ ಶ್ರುತಿಯು ಮನಸ್ಸಿನಿಂದ ವಾಗಿಂದ್ರಿಯಕ್ಕೆ ಉತ್ಪತ್ತಿಯನ್ನು ಹೇಳುತ್ತದೆ. ಆದ್ದರಿಂದ ಮನಸ್ಸು ಅನಾದಿಯಲ್ಲ. ಅನಾದಿ ನಿತ್ಯವಾದ ವೇದದ ಸನ್ನಿಧಿಯು ವಾಗಿಂದ್ರಿಯದಲ್ಲಿರುವುದರಿಂದ ವಾಕ್ಕನ್ನು ಅನಾದಿಯೆಂದು ಶ್ರುತಿಯು ಹೇಳುತ್ತದೆ. ಹೀಗೆ ವಾಗಿಂದ್ರಿಯಕ್ಕೆ ಉತ್ಪತ್ತಿಯು ಶ್ರುತವಾಗಿರುವುದರಿಂದ ಪರಮಾತ್ಮನಿಗೆ ಸರ್ವಕರ್ತೃತ್ವವು ಕೂಡುತ್ತದೆ.

**೪. ಸಪ್ತಗತ್ಯಧಿಕರಣ** (ವಿಶೇಷ ಶ್ರುತಿ ವೈರೂಪ್ಯಂ ಎಂಬ ಯುಕ್ತಿ)

ಪೂರ್ವಪಕ್ಷ– ಪುರುಷನಲ್ಲಿ ಹತ್ತು ಪ್ರಾಣಗಳಿವೆ, ಹನ್ನೊಂದನೆಯವನು ಆತ್ಮ (ದಶಮೇ ಪುರುಷೇ ಪ್ರಾಣಾಃ ಆತ್ಮೈಕಾದಶಃ) ಎಂದು ಒಂದು ಶ್ರುತಿಯೂ, ಏಳು ಪ್ರಾಣಗಳು ಈ ಪರಮಾತ್ಮನಿಂದ ಉತ್ಪತ್ತಿಯಾಗುತ್ತವೆ (ಸಪ್ತಪ್ರಾಣಾಃ ಪ್ರಭವಂತಿ ತಸ್ಮಾತ್) ಎಂಬುದಾಗಿ ಇನ್ನೊಂದು ಶ್ರುತಿಯೂ ಹೇಳುತ್ತದೆ. ಹೀಗೆ ಶ್ರುತಿಗಳಿಗೆ ಪರಸ್ಪರ ವಿರೋಧವಿರುವುದರಿಂದ ಇದಮಿತ್ಥಂ ಎಂದು ನಿರ್ಣಯಿಸಲು ಆಗುವುದಿಲ್ಲ. ಆದ್ದರಿಂದ ವಿಷ್ಣುವಿಗೆ ಜಗತ್ಕಾರಣತ್ವವು ಸಿದ್ಧಿಸುವುದಿಲ್ಲ.

ಸಿದ್ಧಾಂತ – ಐದು ಜ್ಞಾನೇಂದ್ರಿಯಗಳು ಹಾಗೂ ಐದು ಕರ್ಮೇಂದ್ರಿಯಗಳು ಸೇರಿ ಒಟ್ಟು ಪ್ರಾಣಗಳು ಹತ್ತೇ. ಆದರೆ ಐದು ಕರ್ಮೇಂದ್ರಿಯಗಳೊಂದಿಗೆ ಮನಸ್ಸು ಮತ್ತು ಬುದ್ಧಿಗಳು ಸೇರಿ ಏಳು ಇಂದ್ರಿಯಗಳಾಗುತ್ತವೆ. ಈ ವಿವಕ್ಷೆಯಿಂದ ಇಂದ್ರಿಯಗಳು ಏಳು ಎಂದು ಇನ್ನೊಂದು ಶ್ರುತಿ ಹೇಳುತ್ತದೆ. ಇದೇ ವಿಷಯವನ್ನು ಸ್ಪಷ್ಟೀಕರಿಸುವ ಇನ್ನೂ ಕೆಲವು ವಿಶೇಷ ಶ್ರುತಿಗಳಿವೆ. ಶ್ರುತಿಗಳು ವಿವಕ್ಷಾ ಭೇದದಿಂದ ಬೇರೆ ಬೇರೆಯಾಗಿ ಹೇಳುವುದರಿಂದ ಶ್ರುತಿಗಳಿಗೆ ಪರಸ್ಪರ ವಿರೋಧವಿಲ್ಲ. ಆದ್ದರಿಂದ ವಿಷ್ಣುವಿಗೆ ಸರ್ವಜಗತ್ಕಾರಣತ್ವವು ಕೂಡುತ್ತದೆ.

**೫. ಅಣ್ವಧಿಕರಣ** (ವಿಶೇಷ ಶ್ರುತಿ ವೈರೂಪ್ಯಂ ಎಂಬ ಯುಕ್ತಿ)

ಪೂರ್ವಪಕ್ಷ – 'ದಿವೀವ ಚಕ್ಷುರಾತತಂ' ಇತ್ಯಾದಿ ಶ್ರುತಿಗಳು ಚಕ್ಷುಸ್ಸು

ಮುಂತಾದ ಇಂದ್ರಿಯಗಳು ವ್ಯಾಪ್ತವೆಂದು ಹೇಳುತ್ತವೆ. ಆದ್ದರಿಂದ ಇಂದ್ರಿಯಗಳು ಅಣುವೆಂದು ಹೇಳುವ ಶ್ರುತಿಗಳು ಅಪ್ರಮಾಣ. ಅಪ್ರಮಾಣವಾದ ವೇದ ವಾಕ್ಯಗಳಿಂದ ವಿಷ್ಣುವಿನ ಜಗತ್ಕಾರಣತ್ವವು ಸಿದ್ಧವಾಗುವುದಿಲ್ಲ.

ಸಿದ್ಧಾಂತ – 'ಅಣೂನಿ ವಾ ಇಂದ್ರಿಯಾಣಿ, ತೇಷಾಂ ಪ್ರಕಾಶೋ ವ್ಯಾತತಃ' ಎಂಬ ಶ್ರುತಿಯು ಇಂದ್ರಿಯಗಳು ಅಣುವಾಗಿವೆ, ಅವುಗಳ ಪ್ರಕಾಶವು ಸರ್ವತ್ರ ವ್ಯಾಪ್ತವಾಗಿದೆ ಎಂದು ಇಂದ್ರಿಯಗಳಿಗೆ ಅಣುತ್ವವನ್ನು ಪ್ರತಿಪಾದಿಸುತ್ತವೆ. ಹೀಗೆ ವಿಶೇಷ ಶ್ರುತಿ ಇರುವುದರಿಂದ, ಇಂದ್ರಿಯಗಳು ಅಣುವೆಂದು ಹೇಳುವ ಶ್ರುತಿಗೂ, ವ್ಯಾಪ್ತವೆಂದು ಹೇಳುವ ಶ್ರುತಿಗೂ ಪರಸ್ಪರ ವಿರೋಧವಿರುವುದಿಲ್ಲ. ಆದ್ದರಿಂದ ವೇದಗಳಿಂದ ವಿಷ್ಣುವಿಗೆ ಜಗತ್ಕಾರಣತ್ವವು ಸಿದ್ಧವಾಗುತ್ತದೆ.

**೬. ಮುಖ್ಯಪ್ರಾಣಾಧಿಕರಣ** (ಮಾಹಾತ್ಮ್ಯಂ ಎಂಬ ಯುಕ್ತಿ)

ಪೂರ್ವಪಕ್ಷ – 'ನೈಷ ಪ್ರಾಣ ಉದೇತಿ' ಎಂಬ ಶ್ರುತಿಯು ಮುಖ್ಯಪ್ರಾಣನಿಗೆ ಉತ್ಪತ್ತಿಯಿಲ್ಲವೆಂದು ಹೇಳುತ್ತದೆ. 'ಯತ್ ಪ್ರಾಪ್ತಿರ್ಯತ್ಪರಿತ್ಯಾಗ ಉತ್ಪತ್ತಿರ್ಮರಣಂ ತಥಾ। ತಸ್ಯೋತ್ಪತ್ತಿರ್ಮೃತಿಶ್ಚೈವ ಕಥಂ ಪ್ರಾಣಸ್ಯ ಯುಜ್ಯತೇ' ಎಂಬುದಾಗಿ ಸಕಲ ಜಗತ್ತಿಗೆ ಮುಖ್ಯಪ್ರಾಣನಿಂದ ಜೀವನಪ್ರದತ್ವವೆಂಬ ಮಹಿಮೆಯನ್ನು ಹೇಳುವ ಶ್ರುತಿಯಿಂದಲೂ ಪ್ರಾಣನಿಗೆ ಉತ್ಪತ್ತಿಯಿಲ್ಲವೆಂದು ತಿಳಿಯುತ್ತದೆ. ಆದ್ದರಿಂದ ಮುಖ್ಯ ಪ್ರಾಣನಿಗೆ ಉತ್ಪತ್ತಿಯಿದೆಯೆಂದು ಹೇಳುವ ಶ್ರುತಿಗಳು ಅಪ್ರಮಾಣ. ಆದ್ದರಿಂದ ವಿಷ್ಣುವಿನ ಜಗತ್ಕಾರಣತ್ವವು ಶ್ರುತಿಗಳಿಂದ ಸಿದ್ಧವಾಗುವುದಿಲ್ಲ.

ಸಿದ್ಧಾಂತ – 'ಮಹತ್ವಾನ್ಮಹತಾಂ ವಿಷ್ಣುಃ ಕರ್ತಾ ಪ್ರಾಣಸ್ಯ ಚೈಕರಾಟ್। ಕಿಂ ನಾಮ ನ ಸೃಜೇದೇಷಃ ಯೇನ ಶಕ್ತ್ಯೇದಮಾವೃತಂ' (ವಿಷ್ಣುವು ಮಹಾತ್ಮರಿಗಿಂತ ಮಹಾತ್ಮನು, ಪ್ರಾಣನಿಗೂ ಸೃಷ್ಟಿಕರ್ತ, ಇಡೀ ಜಗತ್ತು ಅವನ ಶಕ್ತಿಯಿಂದ ಆವೃತವಾಗಿದೆ, ಇಂಥಹ ವಿಷ್ಣುವು ಏನನ್ನು ತಾನೇ ಸೃಷ್ಟಿಸಲಾರನು?) ಎಂಬ ಶ್ರುತಿಯು ಮುಖ್ಯಪ್ರಾಣನಿಗೆ ಪರಮಾತ್ಮನಿಂದ ಉತ್ಪತ್ತಿಯನ್ನು ಹೇಳುತ್ತದೆ. ಆದ್ದರಿಂದ ಪ್ರಾಣನ ಮಹಾತ್ಮೆಗಿಂತ ಅಧಿಕವಾದ ಮಹಾತ್ಮೆವುಳ್ಳ ವಿಷ್ಣುವಿಗೆ ಜಗತ್ಕಾರಣತ್ವವನ್ನು ಹೇಳುವ ಶ್ರುತಿಗಳಿಗೆ ಯಾವುದೇ ವಿರೋಧವಿಲ್ಲ.

**೭. ಚಕ್ಷುರಧಿಕರಣ** (ಮಾಹಾತ್ಮ್ಯಂ ಎಂಬ ಯುಕ್ತಿ)

ಪೂರ್ವಪಕ್ಷ – ಮುಖ್ಯಪ್ರಾಣನು ಸ್ವತಂತ್ರನು. ಏಕೆಂದರೆ 'ನ ಪ್ರಾಣಃ ಕಿಂಚಿದ್ ಆಶ್ರಿತಃ' 'ಯದಾಶ್ರಯಾದಸ್ಯ ಚೇಷ್ಟಾ ಸೋಽನ್ಯಂ ಕಥಮುಪಾಶ್ರಯೇತ್' ಮುಂತಾದ ಶ್ರುತಿಗಳು ಮುಖ್ಯಪ್ರಾಣನು ಯಾರನ್ನೂ ಆಶ್ರಯಿಸಿಲ್ಲ, ಈ ಜಗತ್ತಿನ ಎಲ್ಲ ವ್ಯಾಪಾರಗಳು ಮುಖ್ಯಪ್ರಾಣನನ್ನೇ ಆಶ್ರಯಿಸಿ ನಡೆಯುತ್ತವೆ ಇತ್ಯಾದಿಯಾಗಿ ಮುಖ್ಯಪ್ರಾಣನ ಮಹಾತ್ಮೆಯನ್ನು ಹೇಳುತ್ತವೆ. ಆದ್ದರಿಂದ ಮುಖ್ಯಪ್ರಾಣನು

ಪರಮಾತ್ಮನನ್ನು ಆಶ್ರಯಿಸಿದ್ದಾನೆ ಎಂದು ಹೇಳುವ ಶ್ರುತಿಗಳು ಅಪ್ರಮಾಣ. ಆದ್ದರಿಂದ ವಿಷ್ಣುವಿಗೆ ಜಗತ್ಕಾರಣತ್ವವು ಕೂಡುವುದಿಲ್ಲ.

ಸಿದ್ಧಾಂತ – 'ಸರ್ವಕರ್ತಾऽಪಿ ಸನ್ ಪ್ರಾಣಃ ಪರಮಾಧಾರತಃ ಸ್ಥಿತಃ' ಇತ್ಯಾದಿ ಶ್ರುತಿಗಳು ಸರ್ವಕರ್ತನೇ ಆಗಿದ್ದರೂ ಪ್ರಾಣನು ಪರಮಾತ್ಮನನ್ನೇ ಆಶ್ರಯಿಸಿದ್ದಾನೆ ಎಂದು ಹೇಳುವುದರಿಂದ ವಿಷ್ಣುವಿಗೆ ಪ್ರಾಣನಿಗಿಂತ ಅಧಿಕವಾದ ಮಹಾತ್ಮೆಯನ್ನು ಹೇಳುವ ಶ್ರುತಿಗಳು ಅಪ್ರಮಾಣವಲ್ಲ. ಆದ್ದರಿಂದ ವಿಷ್ಣುವೇ ಸರ್ವಜಗತ್ಕಾರಣನು.

**೮. ಪಂಚವೃತ್ತ್ಯಧಿಕರಣ** (ವ್ಯಕ್ತ ಸದ್ಗುಣತ್ವ ಎಂಬ ಯುಕ್ತಿ)

ಪೂರ್ವಪಕ್ಷ – ಪ್ರಾಣ ಅಪಾನ ವ್ಯಾನ ಉದಾನ ಮತ್ತು ಸಮಾನ ಎಂಬ ಐದು ಪ್ರಾಣಗಳು ಮುಖ್ಯಪ್ರಾಣನ ದಾಸರು ಎಂದು ಒಂದು ಶ್ರುತಿ ಹೇಳಿದರೆ, ಗುದ ಶಿಶ್ನಗಳಲ್ಲಿ ಅಪಾನ, ಮುಖ ಕಣ್ಣು ಮೂಗುಗಳಲ್ಲಿ ಪ್ರಾಣ, ನಾಭಿಯಲ್ಲಿ ಸಮಾನ, ನಾಡಿಗಳಲ್ಲಿ ವ್ಯಾನ, ಗಂಟಲಲ್ಲಿ ಮೇಲೆ ಉದಾನ ಹೀಗೆ ಬೇರೆ ಬೇರೆ ಪ್ರಾಣಗಳು ತಮ್ಮ ಸ್ಥಾನಗಳಲ್ಲಿ ಕಾರ್ಯ ನಿರ್ವಹಿಸುತ್ತವೆ ಎಂಬುದಾಗಿ ಇನ್ನೊಂದು ಶ್ರುತಿಯು ಪ್ರಾಣಾದಿಗಳಿಗೆ ವ್ಯಕ್ತಸದ್ಗುಣತ್ವವನ್ನು ಹೇಳುತ್ತದೆ. ಮುಖ್ಯಪ್ರಾಣನ ದಾಸರಿಗೆ ವ್ಯಕ್ತ ಸದ್ಗುಣತ್ವವು ಹೇಳಲ್ಪಟ್ಟಿರುವುದರಿಂದ ಸ್ವಾಮಿಯಾದ ಮುಖ್ಯಪ್ರಾಣನಿಗೆ ಈ ರೀತಿಯ ವಕ್ತಸದ್ಗುಣತ್ವವಿಲ್ಲವೆಂದಾಗುವುದು. ಇದು ಅಯುಕ್ತವು. ಆದ್ದರಿಂದ ಮುಖ್ಯಪ್ರಾಣನೇ ಇತರ ಪ್ರಾಣಾದಿಗಳು ಎಂದು ಅರ್ಥಮಾಡಬೇಕಾಗುತ್ತದೆ. ಹೀಗೆ ಶ್ರುತಿಗಳಿಗೆ ಪರಸ್ಪರ ವಿರೋಧವು. ಆದ್ದರಿಂದ ವಿಷ್ಣುವಿನ ಜಗತ್ಕರ್ತೃತ್ವವನ್ನು ಶ್ರುತಿಗಳಿಂದ ನಿರ್ಣಯಿಸಲು ಶಕ್ಯವಿಲ್ಲ. ಆದ್ದರಿಂದ ವಿಷ್ಣುವು ಸರ್ವಜಗತ್ಕಾರಣನಲ್ಲ.

ಸಿದ್ಧಾಂತ – 'ಅಶೇಷ ಗುಣಪೂರ್ಣಾನಿ ಮುಖ್ಯಪ್ರಾಣಾನಿ ಪಂಚ ಚ। ತದ್ದಾಸಾಃ ಪಂಚ ಚಾನ್ಯೇಪಿ ಪ್ರಾಣಾದ್ಯಾಃ ಸದ್ಗುಣೈರ್ಯುತಾಃ' ಎಂಬ ಶ್ರುತಿಯು ಮುಖ್ಯಪ್ರಾಣ ಸ್ವರೂಪರಾದ ಐದು ಪ್ರಾಣಗಳಿಗೆ ಅಶೇಷ ಸದ್ಗುಣತ್ವವಿದೆ. ಮುಖ್ಯಪ್ರಾಣನ ದಾಸರಾದ ಬೇರೆ ಐದು ವ್ಯಕ್ತಸದ್ಗುಣ ಪ್ರಾಣಾದಿಗಳೂ ಇವೆ ಎಂದು ಹೇಳುತ್ತದೆ. ಶ್ರುತಿಗಳಿಗೆ ಪರಸ್ಪರ ವಿರೋಧವಿಲ್ಲವಾದ್ದರಿಂದ ವಿಷ್ಣುವಿಗೆ ಜಗತ್ಕಾರಣತ್ವವನ್ನು ಹೇಳುವ ಶ್ರುತಿಗಳು ಪ್ರಮಾಣವೇ ಆಗಿವೆ.

**೯. ಪ್ರಾಣಾಣುತ್ವಾಧಿಕರಣ** (ದೃಷ್ಟಾಯುಕ್ತಿ ಎಂಬ ಯುಕ್ತಿ)

ಪೂರ್ವಪಕ್ಷ – 'ಪ್ರಾಣ ಏವಾಧಸ್ತಾತ್ ಪ್ರಾಣ ಉಪರಿಷ್ಟಾತ್' 'ಮಹಾನ್ವೈ ಮುಖ್ಯಪ್ರಾಣೋ ಯೇನ ವ್ಯಾಪ್ತಂ ಚರಾಚರಂ' ಇತ್ಯಾದಿ ಶ್ರುತಿಗಳು ಪ್ರಾಣನು ವ್ಯಾಪ್ತನೆಂದು ಹೇಳುತ್ತವೆ. 'ಅಣುರ್ವೈ ಮುಖ್ಯಪ್ರಾಣೋ' ಎಂಬಿತ್ಯಾದಿ ಶ್ರುತಿಯು ಪ್ರಾಣನನ್ನು ಅಣುವೆಂದು ಹೇಳುತ್ತದೆ. ಆದ್ದರಿಂದ ಪ್ರಾಣನ್ನು ಅಣುವೆಂದು ಅಂಗೀಕರಿಸಿದರೆ ದೃಷ್ಟವಾದ ವ್ಯಾಪ್ತತ್ವವನ್ನು ಹೇಳುವ ಶ್ರುತಿಗಳಿಗೆ ವಿರೋಧ

ಬರುತ್ತದೆ. ಆದ್ದರಿಂದ ಶ್ರುತಿಗಳಿಂದ ವಿಷ್ಣುವಿಗೆ ಜಗತ್ಕಾರಣತ್ವವು ಸಿದ್ಧಿಸುವುದಿಲ್ಲ.

ಸಿದ್ಧಾಂತ – ಮುಖ್ಯಪ್ರಾಣನು ಅಣುವೆಂದು ಹೇಳುವ 'ಅಣುರ್ವೈ ಮುಖ್ಯ ಪ್ರಾಣೋ ಯ ಉತ್ಕ್ರಾಮತಿ ನಾಡೀಭಿಃ' ಇತ್ಯಾದಿ ಶ್ರುತಿಗಳು ಪ್ರಮಾಣವೇ. ಮುಖ್ಯಪ್ರಾಣನು ಸ್ವರೂಪತಃ ಅಣುವಾಗಿದ್ದರೂ, ತನ್ನ ದೇಹದ ಹೊರಗಿರುವ ಮತ್ತೊಂದು ರೂಪದಿಂದ ಸರ್ವತ್ರ ವ್ಯಾಪ್ತನಾಗಿದ್ದಾನೆ ಎಂದು ಅರ್ಥ. ಹಾಗಿಲ್ಲದಿದ್ದರೆ ದೃಷ್ಟವಾದ ಪ್ರಾಣನ ನಾಡೀ ಸಂಚಾರಾದಿಗಳು ಅಯುಕ್ತವಾಗುತ್ತವೆ. ಆದ್ದರಿಂದ ಅಣುತ್ವ ಹಾಗೂ ವ್ಯಾಪ್ತತ್ವ ಪ್ರತಿಪಾದಕ ಶ್ರುತಿಗಳಿಗೆ ಪರಸ್ಪರ ವಿರೋಧವಿಲ್ಲ. ಆದ್ದರಿಂದ ವಿಷ್ಣುವಿಗೆ ಸರ್ವಜಗತ್ಕಾರಣತ್ವವು ಕೂಡುತ್ತದೆ.

**೧೦. ಜ್ಯೋತಿರಧಿಕರಣ** (ದೃಷ್ಟಾಯುಕ್ತಿ ಎಂಬ ಯುಕ್ತಿ)

ಪೂರ್ವಪಕ್ಷ – ಪ್ರಾಣಗಳು ಜೀವನಿಗೆ ಕರಣಗಳು (ಜೀವಸ್ಯ ಕರಣಾನ್ಯಾಹುಃ ಪ್ರಾಣಾನ್) ಎಂದು ಒಂದು ಶ್ರುತಿಯೂ, ಈ ಪ್ರಾಣಗಳು ಬ್ರಹ್ಮನಿಗೆ ಕರಣಗಳು (ಬ್ರಹ್ಮಣೋ ವಾ ಏತಾನಿ ಕರಣಾನಿ) ಎಂದು ಇನ್ನೊಂದು ಶ್ರುತಿಯೂ ಹೇಳುತ್ತದೆ. ಪ್ರಾಣಗಳು ಬ್ರಹ್ಮನ ಕರಣಗಳೆಂದು ಒಪ್ಪಿದರೆ, ದೃಷ್ಟವಾದ ಜೀವಕರಣತ್ವವು ಅಯುಕ್ತವಾಗುತ್ತದೆ. ಬ್ರಹ್ಮನ ಕರಣತ್ವವನ್ನು ಹೇಳುವ ಶ್ರುತಿಯು ಅಪ್ರಮಾಣವು. ಅಪ್ರಮಾಣವಾದ ಶ್ರುತಿಯಿಂದ ವಿಷ್ಣುವಿನ ಜಗತ್ಕಾರಣತ್ವವು ಸಿದ್ಧಿಸುವುದಿಲ್ಲ.

ಸಿದ್ಧಾಂತ–'ಯಶ್ಚಕ್ಷುಷಿ ತಿಷ್ಠನ್' (ಯಾವನು ಕಣ್ಣಿನಲ್ಲಿದ್ದು ಅದನ್ನು ನಿಯಮನ ಮಾಡುತ್ತಾನೋ ಅವನು ಬ್ರಹ್ಮ) ಇತ್ಯಾದಿ ಶ್ರುತಿಗಳು ಚಕ್ಷುರಾದಿ ಪ್ರಾಣಗಳು (ಇಂದ್ರಿಯಗಳು) ಪರಮಾತ್ಮನ ಅಧೀನವೆಂದು ಹೇಳುತ್ತವೆ. ದೃಷ್ಟವಾದ ಜೀವವ ಅಧೀನವೆಂಬುದು ಅಯುಕ್ತವು. ಕೆಲವು ಸಲ ಜೀವನ ಅಧೀನವೆಂಬುದಾಗಿ ಕಂಡರೂ ಅದೂ ಈಶ್ವರನ ಇಚ್ಛೆಯಿಂದಲೇ. ಆದ್ದರಿಂದ ಕೆಲವು ಶ್ರುತಿಗಳು ಪ್ರಾಣಗಳು ಜೀವನ ಕರಣಗಳೆಂದು ಹೇಳುತ್ತವೆ. ಇದರಿಂದ ಪ್ರಾಣಗಳು ಈಶ್ವರನ ಕರಣಗಳೆಂದು ಹೇಳುವ ಶ್ರುತಿಗಳಿಗೆ ವಿರೋಧ ಬರುವುದಿಲ್ಲ. ಆದ್ದರಿಂದ ವಿಷ್ಣುವಿಗೆ ಜಗತ್ಕಾರಣತ್ವವು ಕೂಡುವುದು.

**೧೧. ಇಂದ್ರಿಯಾಧಿಕರಣ** (ಸಮಾನತ್ವಂ ಎಂಬ ಯುಕ್ತಿ)

ಪೂರ್ವಪಕ್ಷ – 'ಪ್ರಾಣಾ ವಾ ಇಂದ್ರಿಯಾಣಿ' (ಪ್ರಾಣಗಳೆಲ್ಲ ಇಂದ್ರಿಯಗಳು) ಎಂಬ ಶ್ರುತಿಯಿಂದ ಮುಖ್ಯಪ್ರಾಣನೂ ಕೂಡಿ ಎಲ್ಲ ಪ್ರಾಣಗಳೂ ಇಂದ್ರಿಯಗಳೇ ಎಂದು ತಿಳಿಯುತ್ತದೆ. ಆದ್ದರಿಂದ ಚಕ್ಷುರಾದಿ ಇಂದ್ರಿಯಗಳಂತೆ ಮುಖ್ಯಪ್ರಾಣನೂ ಈಶ್ವರನ ಅಧೀನನು. ಹೀಗೆ ಯುಕ್ತಿ ಮತ್ತು ಶ್ರುತಿಗಳಿಂದ ಮುಖ್ಯಪ್ರಾಣ ಹಾಗೂ ಇಂದ್ರಿಯಗಳಿಗೆ ಸಮಾನತ್ವವು. ಆದ್ದರಿಂದ ಮುಖ್ಯಪ್ರಾಣನು ಇಂದ್ರಿಯನಲ್ಲ ಎಂದು ಹೇಳುವ ಶ್ರುತಿಗಳು ಅಪ್ರಮಾಣವಾಗುತ್ತವೆ. ಆದ್ದರಿಂದ ವಿಷ್ಣುವು ಜಗತ್ಕಾರಣನಲ್ಲ.

ಸಿದ್ಧಾಂತ – ಮನಸ್ಸು ಮತ್ತು ಬುದ್ಧಿಗಳು ಕೂಡಿ ಒಟ್ಟು ಹನ್ನೆರಡೇ ಇಂದ್ರಿಯಗಳು ಎಂಬುದಾಗಿ ಶ್ರುತಿಗಳು ಹೇಳುತ್ತಿವೆ. ಹಾಗೂ 'ಪ್ರಾಣಸ್ಯೈತದ್ವಶೇ ಸರ್ವಂ' ಎಂಬ ಶ್ರುತಿಯಿಂದ ಮುಖ್ಯಪ್ರಾಣನಲ್ಲಿ ವಿಷ್ಣುವಿನಲ್ಲಿರುವಂತೆ ಸರ್ವಾಧಿಪತ್ಯವಿದೆಯೆಂದು ತಿಳಿಯುತ್ತದೆ. ಮುಖ್ಯಪ್ರಾಣನಿಗೆ ಇಂದ್ರಿಯತ್ವವನ್ನು ಅಂಗೀಕರಿಸಿದರೆ, ಅವನಿಗೆ ಸರ್ವಾಧಿಪತ್ಯವನ್ನು ಹೇಳುವ ಶ್ರುತಿಗೆ ಅಪ್ರಮಾಣ ಬರುವುದು. ಆದ್ದರಿಂದ ಶ್ರುತಿಯು ಮುಖ್ಯಪ್ರಾಣನನ್ನು ಬಿಟ್ಟು ಉಳಿದವುಗಳಿಗೆ ಮಾತ್ರ ಇಂದ್ರಿಯತ್ವವನ್ನು ಹೇಳುತ್ತದೆ. ಮುಖ್ಯಪ್ರಾಣನ ಸರ್ವಾಧಿಪತ್ಯವೂ ಪರಮಾತ್ಮನ ಅಧೀನವೇ ಆದುದು. ಆದ್ದರಿಂದ ಶ್ರುತಿಗಳಿಗೆ ಪರಸ್ಪರ ವಿರೋಧವಿಲ್ಲ. ಆದ್ದರಿಂದ ವಿಷ್ಣುವೇ ಜಗತ್ಕಾರಣ.

**೧೨. ಸಂಜ್ಞಾಧಿಕರಣ** (ಕರ್ತೃಶಕ್ತಿ ಎಂಬ ಯುಕ್ತಿ)

ಪೂರ್ವಪಕ್ಷ – 'ವಿರಿಂಚೋ ವಾ ಇದಂ ಸರ್ವಂ ವಿರೇಚಯತಿ ವಿದಧಾತಿ' ಎಂಬ ಶ್ರುತಿಯಿಂದ ಚತುರ್ಮುಖ ಬ್ರಹ್ಮನೇ ಈ ಎಲ್ಲ ಜಗತ್ತನ್ನೂ ಸೃಷ್ಟಿಸುತ್ತಾನೆ ಎಂದು ತಿಳಿಯುತ್ತದೆ. ಆದ್ದರಿಂದ ಪರಬ್ರಹ್ಮನೇ ಸರ್ವಕರ್ತೃವೆಂದು ಹೇಳುವ ಶ್ರುತಿಗಳು ಅಪ್ರಮಾಣ. ಆದ್ದರಿಂದ ವಿಷ್ಣುವಿಗೆ ಜಗತ್ಕಾರಣತ್ವವು ಸಿದ್ಧವಾಗುವುದಿಲ್ಲ.

ಸಿದ್ಧಾಂತ – 'ಅಥ ಕಸ್ಮಾದುಚ್ಯತೇ ಪರಮ ಇತಿ, ಪರಮಾದ್ಧ್ಯೇತೇ ನಾಮ ರೂಪೇ ವ್ಯಾಕ್ರಿಯತೇ' (ಈ ವಿಷ್ಣುವಿನಿಂದಲೇ ನಾಮರೂಪಾತ್ಮಕವಾದ ಪ್ರಪಂಚದ ಸೃಷ್ಟಿ) ಎಂಬ ಶ್ರುತಿಯು ಪರಬ್ರಹ್ಮನಿಗೇ ಸರ್ವಕರ್ತೃತ್ವವನ್ನು ಹೇಳುತ್ತದೆ. ವಿರಿಂಚಾದಿಗಳು ಅವಾಂತರ ಸೃಷ್ಟಿಕರ್ತರಷ್ಟೆ. ಆದ್ದರಿಂದ ವಿಷ್ಣುವಿಗೆ ಜಗತ್ಕಾರಣತ್ವವನ್ನು ಹೇಳುವ ಶ್ರುತಿಗಳು ಅಪ್ರಮಾಣವಲ್ಲ.

**೧೩. ಮಾಂಸಾಧಿಕರಣ** (ವಿಮಿಶ್ರಿತಾ ಎಂಬ ಯುಕ್ತಿ)

ಪೂರ್ವಪಕ್ಷ – 'ನೀರಿನಿಂದಲೇ ಈ ದೇಹ ಹುಟ್ಟುತ್ತದೆ, ನೀರಿನಿಂದಲೇ ಈ ಮಾಂಸ ಹುಟ್ಟುತ್ತದೆ' (ಅದ್ಭ್ಯೋ ಹೀದಮುತ್ಪದ್ಯತೇ, ಆಪೋ ವಾ ಮಾಂಸಂ) ಎಂದು ಒಂದು ಶ್ರುತಿಯು ಹೇಳಿದರೆ, 'ಪೃಥಿವೀಮಯವಾದುದು ಶರೀರ' (ಪೃಥಿವೀ ಶರೀರಂ) ಎಂದು ಇನ್ನೊಂದು ಶ್ರುತಿಯ ಹೇಳುತ್ತದೆ. 'ಅಗ್ನಿಗೆ ಹಾಕಿದ ಆಹುತಿಗಳಿಂದ ಹುಟ್ಟಿದ ಹಿರಣ್ಯಮಯವಾದ ಶರೀರ' (ಸೋಽಗ್ನೇರ್ದೇವ ಯೋಽನ್ಯಾ ಆಹುತಿಭ್ಯಃ ಸಂಭೂಯ ಹಿರಣ್ಯಶರೀರ) ಎಂದು ಮತ್ತೊಂದು ಶ್ರುತಿಯು ಹೇಳುತ್ತದೆ. 'ಪೃಥಿವೀ ಅಪ್ ತೇಜಸ್ಸು ಎಂಬ ಮೂರು ದೇವತೆಗಳು ಈ ಪುರುಷನನ್ನು ಆಶ್ರಯಿಸಿದ್ದಾರೆ' (ಇಮಾಸ್ತಿಸ್ರೋ ದೇವತಾಃ ಪುರುಷಂ ಪ್ರಾಪ್ಯ) ಎಂದು ಮತ್ತೊಂದು ಶ್ರುತಿಯು ಹೇಳುತ್ತದೆ. ಹೀಗೆ ಮೂರು ಭೂತಗಳ ಮಿಶ್ರಣದಿಂದ ಶರೀರದ ಉತ್ಪತ್ತಿಯನ್ನು ಹೇಳುವ ಶ್ರುತಿಗಳು ಪರಸ್ಪರ ವಿರೋಧವಾದುದರಿಂದ ಅಪ್ರಾಮಾಣ್ಯವು. ಆದ್ದರಿಂದ ವಿಷ್ಣುವು ಜದಗತ್ಕಾರಣನಲ್ಲ.

ಸಿದ್ಧಾಂತ – ಈ ದೇಹವು ಪೃಥಿವೀ ಮುಂತಾದ ಭೂತಗಳ ಮಿಶ್ರಣದಿಂದ ಉತ್ಪತ್ತಿಯಾಗಿದ್ದರೂ, ಅದರಲ್ಲಿ ವಿಶೇಷವಿರುವುದರಿಂದ, 'ಇದು ಪೃಥಿವೀಮಯ' ಇತ್ಯಾದಿ ವಿಭಿನ್ನವಾಗಿ ಪ್ರತಿಪಾದಿಸುವ ಶ್ರುತಿಗಳಿಗೆ ವಿರೋಧ ಬರುವುದಿಲ್ಲ. ಆದ್ದರಿಂದ ವಿಷ್ಣುವಿಗೆ ಜಗತ್ಕಾರಣತ್ವವನ್ನು ಪ್ರತಿಪಾದಿಸುವ ಶ್ರುತಿಗಳು ಪ್ರಮಾಣವೇ.

• ಈ ಪ್ರಕಾರವಾಗಿ ಎರಡನೆಯ ಅಧ್ಯಾಯದ ನಾಲ್ಕನೆಯ ಪಾದದಲ್ಲಿ ಶ್ರುತಿಗಳಿಗೆ ನ್ಯಾಯೋಪೇತ ಶ್ರುತಿಗಳ ವಿರೋಧವಿಲ್ಲವೆಂದು ಸಮರ್ಥನೆ ಮಾಡಲಾಗಿದೆ. ಆದ್ದರಿಂದ ವೇದಗಳಲ್ಲಿ ಉಕ್ತವಾಗಿರುವ ವಿಷ್ಣುವಿನ ಸಕಲಗುಣಪೂರ್ಣತ್ವ ಹಾಗೂ ಅಶೇಷದೋಷರಾಹಿತ್ಯಗಳಿಗೆ ಯಾವುದೇ ರೀತಿಯಲ್ಲಿ ವಿರೋಧವಿಲ್ಲವಾದ್ದರಿಂದ ಪರಮಪುರುಷಾರ್ಥವಾದ ಮೋಕ್ಷವನ್ನು ಅನುಗ್ರಹಿಸುವ ಭಗವಾನ್ ವಿಷ್ಣುವನ್ನು ಎಲ್ಲ ಅಧಿಕಾರಿಗಳೂ ಅವಶ್ಯವಾಗಿ ಜಿಜ್ಞಾಸೆ ಮಾಡತಕ್ಕದ್ದು ಎಂಬುದಾಗಿ ಈ ಅನುವ್ಯಾಖ್ಯಾನದ ಎರಡನೆಯ ಅಧ್ಯಾಯದಿಂದ ನಿರ್ಣೀತವಾಗುವುದು.

॥ ಇತಿ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯ ವಿರಚಿತೇ
ಶ್ರೀಮದನುವ್ಯಾಖ್ಯಾನೇ ದ್ವಿತೀಯಾಧ್ಯಾಯಸ್ಯ ಚತುರ್ಥಃ ಪಾದಃ ಸಂಪೂರ್ಣಃ ॥
॥ ಸಮಾಪ್ತೋಽಯಮಧ್ಯಾಯಃ ॥

*

॥ ಇಲ್ಲಿಗೆ ಶ್ರೀಮದನಾಂದತೀರ್ಥಭಗವತ್ಪಾದಾಚಾರ್ಯವಿರಚಿತ ಶ್ರೀಮದನುವ್ಯಾಖ್ಯಾನದ ಎರಡನೆಯ ಅಧ್ಯಾಯದ ನಾಲ್ಕನೆಯ ಪಾದದ ಕನ್ನಡ ಅನುವಾದವು ಮುಗಿದುದು ॥

*

॥ ಇಲ್ಲಿಗೆ ಅಂಗಾರಕುಲೋತ್ಪನ್ನ ಶ್ರೀನಿವಾಸಮೂರ್ತಿಯ ಸುಪುತ್ರ
ವೆಂಕಟೇಶಮೂರ್ತಿಯಿಂದ ಶ್ರೀಮನ್ನ್ಯಾಯಸುಧಾ ಟೀಕಾನುಸಾರಿ ವಿವರಣೆ ಸಹಿತ
ರಚಿತವಾದ ಶ್ರೀಮದನುವ್ಯಾಖ್ಯಾನದ ಎರಡನೆಯ ಅಧ್ಯಾಯದ
ಕನ್ನಡಾನುವಾದವು ಮುಕ್ತಾಯವಾಯಿತು ॥
॥ ಶ್ರೀಕೃಷ್ಣಾರ್ಪಣಮಸ್ತು ॥

* * *

# ನಮ್ಮ ಇತ್ತೀಚಿನ ಪ್ರಕಟಣೆಗಳು

## ೧. ಶ್ರೀಮದನುವ್ಯಾಖ್ಯಾನಮ್ : ಸಂಪುಟ ೧

## ಮೊದಲನೆಯ ಅಧ್ಯಾಯ

ಶ್ರೀಮಜ್ಜಯತೀರ್ಥರ ಶ್ರೀಮನ್ನ್ಯಾಯಸುಧಾನುಸಾರಿ

ಕನ್ನಡಾನುವಾದ ವಿವರಣೆ ಸಹಿತ ಮೊದಲನೆಯ ಅಧ್ಯಾಯದ ಪೂರ್ಣಪಾಠ

**ಪ್ರಥಮ ಮುದ್ರಣ: ೨೦೦೨ ಬೆಲೆ: ರೂ. ೬೦/-**

## ೨. ಗಾಯತ್ರೀ ಸಾರಸರ್ವಸ್ವ

ಗಾಯತ್ರೀ ಮಹಿಮೆ, ಸ್ವರೂಪ, ಮಂತ್ರಾರ್ಥ, ಜಪಕ್ರಮ
ಹಾಗೂ ಗಾಯತ್ರೀ ವಿಸ್ತಾರಗಳ ಬಗ್ಗೆ ಸುಂದರ ಸುಲಲಿತ ನಿರೂಪಣೆ

**ಮೂರನೆಯ ಪರಿಷ್ಕೃತ ಮುದ್ರಣ ಬೆಲೆ: ರೂ. ೨೫/-**

## ೩. ವೈಷ್ಣವ ದೇವಪೂಜಾ ಪದ್ಧತಿಃ

ತಂತ್ರಸಾರ ಹಾಗೂ ಪದ್ಯಮಲಾ ಆಧಾರಿತ ಸಂಪೂರ್ಣ ಪೂಜಾ ವಿಧಾನ

**ಪೂಜೆಗೆ ಪೂರ್ವದಲ್ಲಿ ಸಾಧಕನು ತಿಳಿದಿರಲೇಬೇಕಾದ ಅಗತ್ಯ ವಿಷಯಗಳು
ಪೂಜೆಗೆ ಪೂರ್ವ ಸಿದ್ಧತೆ, ಅವಶ್ಯ ಪೂಜಾ ಸಾಮಗ್ರಿಗಳ ಮಾಹಿತಿ, ಪೂಜಾ
ಸಮಯದಲ್ಲಿ ಹೇಳಲೇಬೇಕಾದ ಎಲ್ಲ ಮಂತ್ರಗಳ ಹಾಗೂ ಸೂಕ್ತಗಳ
ಪೂರ್ಣಪಾಠ, ವೈಶ್ವದೇವ ಬಲಿಹರಣ ಹಾಗೂ ಬ್ರಹ್ಮಯಜ್ಞಗಳ ವಿಧಾನ ಇತ್ಯಾದಿ
ಅನೇಕ ಉಪಯುಕ್ತ ಮಾಹಿತಿಗಳನ್ನು ಒಳಗೊಂಡಿರುವ ಅಪೂರ್ವ ಗ್ರಂಥ**

**ಸಂಪೂರ್ಣ ಪರಿಷ್ಕೃತ ದ್ವಿತೀಯ ಮುದ್ರಣ ಬೆಲೆ: ರೂ. ೨೫/-**

ಮೇಲಿನ ಎಲ್ಲ ಪುಸ್ತಕಗಳ ಲೇಖಕರು ಹಾಗೂ ಸಂಪಾದಕರು

**ಪ್ರೊ ।। ಎಸ್. ವೆಂಕಟೇಶ ಮೂರ್ತಿ**

**ಪುಸ್ತಕಗಳ ಪ್ರಾಪ್ತಿ ಸ್ಥಾನ**

**೧. ಪವನಜ ಪ್ರಕಾಶನ, ನಂ. ೧೬೨೫, ೫ನೇ ಬಿ ಕ್ರಾಸ್, ಎರಡನೆಯ ಬ್ಲಾಕ್,
ಬನಶಂಕರಿ ಮೊದಲನೆಯ ಸ್ಟೇಜ್, ಬೆಂಗಳೂರು – ೫೬೦೦೫೦
೨. ಪುಸ್ತಕ ಮಾರಾಟ ಮಳಿಗೆ, ಪೂರ್ಣಪ್ರಜ್ಞ ವಿದ್ಯಾಪೀಠ,
ಕತ್ತರಿಗುಪ್ಪೆ ರಸ್ತೆ, ಬೆಂಗಳೂರು – ೫೬೦೦೨೮**




ಪ್ರಕಾಶಕರು :

**ಪವನಜ ಪ್ರಕಾಶನ**

ನಂ. 1625, 5ನೇ 'ಬಿ' ಕ್ರಾಸ್, ಎರಡನೆಯ ಬ್ಲಾಕ್
ಬನಶಂಕರಿ 1ನೇ ಸ್ಟೇಜ್, ಬೆಂಗಳೂರು-560 050
ದೂರವಾಣಿ : 6600932

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತಮ್

# ಶ್ರೀಮದನುವ್ಯಾಖ್ಯಾನಮ್

ಸಂಪುಟ-೩

## ಮೂರನೆಯ ಅಧ್ಯಾಯ
## ಸಾಧನಾಧ್ಯಾಯ



ಪ್ರೊ|| ಎಸ್. ವೆಂಕಟೇಶಮೂರ್ತಿ

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತಮ್

# ಶ್ರೀಮದನುವ್ಯಾಖ್ಯಾನಮ್

## ಸಂಪುಟ - 3

## ಮೂರನೆಯ ಅಧ್ಯಾಯ (ಸಾಧನಾಧ್ಯಾಯ)

ಶ್ರೀಮಜ್ಜಯತೀರ್ಥರ ಶ್ರೀಮನ್ನ್ಯಾಯಸುಧಾನುಸಾರಿ

ಕನ್ನಡದಲ್ಲಿ ಅರ್ಥ ಮತ್ತು ವಿವರಣೆ ಸಹಿತ



*ಲೇಖಕರು*

ಪ್ರೊ॥ ಎಸ್. ವೆಂಕಟೇಶ ಮೂರ್ತಿ, ಎಂ. ಎಸ್‌ಸಿ

*ಪ್ರಕಾಶಕರು*

ಪವನಜ ಪ್ರಕಾಶನ

ನಂ. 1625, 5 ನೇ 'ಬಿ' ಕ್ರಾಸ್, 17 ನೇ ಮುಖ್ಯ ರಸ್ತೆ,

ಎರಡನೆಯ ಬ್ಲಾಕ್,ಬನಶಂಕರಿ ಮೊದಲನೆಯ ಸ್ಟೇಜ್, ಬೆಂಗಳೂರು 560050

# Sri Madhvacharya's
# *Śrīmadanuvyākhyānam*
# Part - 3

**Rendered in Kannada by:**
**Prof. S. Venkatesha Murthy, M. Sc.**
**Published by:**
**Pavanaja Prakashana,**
**#1625, 5th 'B' Cross,17th Main, Second Block,**
**Banashankari First Stage, Bangalore 560050**
**Phone: 6600932**

**First Edition: 2003**
**Pages:14 + 266**

**Price : Rs. 90/-**

ಶ್ರೀಮನ್ಮಧ್ವಾಚಾರ್ಯ ವಿರಚಿತ

ಶ್ರೀಮದನುವ್ಯಾಖ್ಯಾನಮ್: ಸಂಪುಟ - 3

ಮೊದಲನೆಯ ಮುದ್ರಣ : 2003

ಪುಟಗಳು : 14 + 266

ಬೆಲೆ : ರೂ. 90/-

ಮುದ್ರಕರು :
ಪರಿಮಳ ಮುದ್ರಣಾಲಯ,
ಹನುಮಂತನಗರ, ಬೆಂಗಳೂರು 560019

# ಉಪೋದ್ಘಾತ

ಶ್ರೀಮದಾಚಾರ್ಯರು, ಟೀಕಾಚಾರ್ಯರು ಹಾಗೂ ಪರಿಮಳಾಚಾರ್ಯರ ಅನಗ್ರಹದಿಂದ ಶ್ರೀಮದುನುವ್ಯಾಖ್ಯಾನದ ಮೂರನೆಯ ಸಾಧನಾಧ್ಯಾಯದ ಅರ್ಥ ಹಾಗೂ ವಿವರಣೆಗಳಿಂದ ಕೂಡಿದ ಮೂರನೆಯ ಸಂಪುಟವು ಈಗ ಜಿಜ್ಞಾಸುಗಳ ಮುಂದಿದೆ. ಮೊದಲೆರಡು ಅಧ್ಯಾಯಗಳಿಗೆ ಸಹೃದಯ ಜಿಜ್ಞಾಸುಗಳಿಂದ ಹಾಗೂ ಪಂಡಿತರಿಂದ ಉತ್ತಮ ಅಭಿಪ್ರಾಯ ವ್ಯಕ್ತವಾಗಿರುವುದಲ್ಲದೆ ಒಳ್ಳೆಯ ಪ್ರೋತ್ಸಾಹ ಲಭಿಸಿದೆ. ಇದು ನನಗೆ ಹೆಚ್ಚಿನ ಉತ್ಸಾಹ ನೀಡಿದೆ. ಪ್ರಸ್ತುತ ಮೂರನೆಯ ಸಂಪುಟ ವನ್ನೂ ಸಹೃದಯರು ವಿಶ್ವಾಸದಿಂದ ಸ್ವೀಕರಿಸಿ ಪ್ರೋತ್ಸಾಹಿಸುವರೆಂದು ನಂಬಿದ್ದೇನೆ. ಶ್ರೀಮದನುವ್ಯಾಖ್ಯಾನದ ಮೂರನೇ ಅಧ್ಯಾಯದಲ್ಲಿ ಪ್ರಸ್ತಾಪಿತವಾದ ವಿಷಯಗಳ ಒಂದು ಸ್ಥೂಲ ಪರಿಚಯವನ್ನು ಈ ಉಪೋದ್ಘಾತದಲ್ಲಿ ಮಾಡಿಕೊಡಲಾಗಿದೆ. ಸಾಧನಾಧ್ಯಾಯದ ಬಗ್ಗೆ ಸಂಪೂರ್ಣ ಮಾಹಿತಿಯನ್ನು ಮುಂದಿನ ಪುಟಗಳಲ್ಲಿ ಪ್ರಸ್ತಾಪಿತವಾಗಿರುವ ಕನ್ನಡಾನುವಾದಸಹಿತ ಮೂಲ ಗ್ರಂಥದ ಅವಲೋಕನದಿಂದ ಪಡೆದುಕೊಳ್ಳಬಹುದು.

ಪರಬ್ರಹ್ಮನ ಗುಣಪೂರ್ಣತ್ವವನ್ನು ನಿರ್ಣಯಿಸುವುದಕ್ಕಾಗಿ ಸಕಲ ಶಬ್ದಗಳ ಸಮನ್ವಯವನ್ನು ಸಾಧಿಸಿ, ಶ್ರುತಿ ಸ್ಮತಿ ಯುಕ್ತ್ಯಾದಿಗಳಿಂದ ಅದಕ್ಕೆ ಬರಬಹುದಾದ ಎಲ್ಲ ವಿರೋಧಗಳನ್ನು ಪರಿಹರಿಸಿ, ಅವನಲ್ಲಿ ಯಾವ ದೋಷಗಳೂ ಇಲ್ಲವೆಂದು ದೃಢಪಡಿಸಿ, ಗುಣಪೂರ್ಣನೂ ನಿರ್ದೋಷನೂ ಆದ ಭಗವಂತನ ಸ್ವರೂಪವನ್ನು ಮೊದಲ ಎರಡು ಅಧ್ಯಾಯಗಳಿಂದ ನಿರ್ಣಯಿಸಿದರು. ಇಂಥಹ ಪರಬ್ರಹ್ಮನ ಅನುಗ್ರಹದಿಂದ ನಮ್ಮ ಎಲ್ಲ ದೋಷಗಳನ್ನೂ ಕಳೆದುಕೊಂಡು ಕೊನೆಯಲ್ಲಿ ಅವನನ್ನೇ ಹೊಂದಿ ಚಿದಾನಂದಸ್ವರೂಪವನ್ನು ಗಳಿಸಿ ಸ್ವರೂಪಾನಂದವನ್ನು ಅವರವರ ಯೋಗ್ಯತೆಗೆ ಅನುಗುಣವಾಗಿ ಸಂಪೂರ್ಣವಾಗಿ ಅನುಭವಿಸುವಂಥ ಮೋಕ್ಷದ ಗಳಿಕೆಯೇ ಎಲ್ಲ ಜಿಜ್ಞಾಸು ಸಾಧಕರ ಪರಮ ಗುರಿ. ಈ ಗುರಿಯನ್ನು ಮುಟ್ಟಲು ಮಾಡಬೇಕಾದ ಸಾಧನೆಯ ಸ್ವರೂಪವೇನು ಎಂದು ತಿಳಿಸುವುದೇ ಸಾಧನಾಧ್ಯಾಯದ ಉದ್ದೇಶ. ಈ ಸಾಧನೆಯಲ್ಲಿ ನಾಲ್ಕು ಹಂತಗಳಿವೆ. ವೈರಾಗ್ಯ ಭಕ್ತಿ, ಉಪಾಸನೆ ಮತ್ತು ಸಾಕ್ಷಾತ್ಕಾರವೇ ಈ ನಾಲ್ಕು ಹಂತಗಳು. ಬ್ರಹ್ಮಸೂತ್ರದ ಮೂರನೆಯ ಅಧ್ಯಾಯದಲ್ಲಿ ಸಾಧನೆಯ ಈ ನಾಲ್ಕು ಹಂತಗಳ ನಿರೂಪಣೆ ಮಾಡಲಾಗಿದೆ. ಇವುಗಳನ್ನು ಕ್ರಮವಾಗಿ ನಾಲ್ಕು ಪಾದಗಳಲ್ಲಿ ಪರಿಚಯ ಮಾಡಿಕೊಡಲಾಗಿದೆ.

ಮೊದಲನೆಯ ಪಾದದಲ್ಲಿ ವೈರಾಗ್ಯವು ಹುಟ್ಟಲು ಅನುಕೂಲವಾಗುವಂತೆ ಮರಣಾನಂತರ ಜೀವನ ಗತಿಯ ನಿರೂಪಣೆಯಿದೆ. ಮರಣವೇ ಮೋಕ್ಷವಲ್ಲ.

ಭೂತಸಂಬಂಧ ಕಡಿದುಕೊಳ್ಳುವುದು ಮೋಕ್ಷ. ಮರಣದ ನಂತರ ಜೀವರುಗಳ ಪರ ಲೋಕ ಗಮನ, ಮತ್ತೆ ಅಲ್ಲಿಂದ ತಿರುಗಿ ಭೂಲೋಕಕ್ಕೆ ಆಗಮನವಾಗುವ ಕಾಲದಲ್ಲಿ ಅನುಭವಿಸುವ ಸಂಕಟ, ನರಕವಾಸ ಮುಂತಾದುವನ್ನು ಚಿತ್ರಿಸಿ, ಮರಳಿ ಸಂಸಾರಕ್ಕೆ ಬರುವುದು ಬೇಡ ಎಂದು ಅವರಲ್ಲಿ ಸಂಸಾರದ ಬಗ್ಗೆ ವೈರಾಗ್ಯ ಹುಟ್ಟಿಸುವುದಕ್ಕಾಗಿ ಮೊದಲನೆಯ ವೈರಾಗ್ಯ ಪಾದವು ಹೊರಟಿದೆ. ಶ್ರೀಮದಾಚಾರ್ಯರು ಸೂತ್ರಭಾಷ್ಯ ದಲ್ಲಿ ಇದರ ನಿರೂಪಣೆಯನ್ನು ಸ್ಪಷ್ಟವಾಗಿಯೇ ನೀಡಿರುವುದರಿಂದ, ಇಲ್ಲಿ ಅನು ವ್ಯಾಖ್ಯಾನದಲ್ಲಿ ಅದನ್ನು ಮತ್ತೆ ವಿವರಿಸುವುದಕ್ಕೆ ಹೊರಟಿಲ್ಲ. ಈ ಪಾದದ ಎಲ್ಲ ಅಧಿಕರಣಗಳ ಪೂರ್ವಪಕ್ಷ ಹಾಗೂ ಸಿದ್ಧಾಂತಯುಕ್ತಿಗಳನ್ನು ಮಾತ್ರ ಸಂಗ್ರಹವಾಗಿ ತಿಳಿಸುತ್ತಾರೆ. ಕೊನೆಯದಾದ ಯೋನ್ಯಧಿಕರಣಕ್ಕೆ ಮಾತ್ರ ಸ್ವಲ್ಪ ವಿವರಣೆಯ ಅಗತ್ಯವಿದ್ದುದರಿಂದ ಅದನ್ನು ಇಲ್ಲಿ ಪ್ರಸ್ತಾಪಿಸಿದ್ದಾರೆ.

ಎರಡನೆಯ ಪಾದದಲ್ಲಿ ಸಾಧನೆಯ ಎರಡನೆಯ ಹಂತವೆನಿಸಿದ ಭಕ್ತಿಯ ಪ್ರಾಪ್ತಿಗಾಗಿ ಭಗವನ್ಮಹಿಮೆಯನ್ನು ನಿರೂಪಿಸಿದ್ದಾರೆ. ಮಹಿಮೆಯ ಜ್ಞಾನದಿಂದ ಭಗವಂತನಲ್ಲಿ ಮೂಡುವ ಪ್ರೇಮಾತಿಶಯವೇ ಭಕ್ತಿಯೆನಿಸುತ್ತದೆ. ಮಹಿಮೆಯ ಬಗ್ಗೆ ಹೆಚ್ಚುಹೆಚ್ಚು ತಿಳಿದಂತೆ ಭಕ್ತಿಯೂ ಹೆಚ್ಚುತ್ತ ಹೋಗುತ್ತದೆ. ನಿಖಿಲ ಜೀವರುಗಳ ಎಲ್ಲ ಕಾಲದಲ್ಲಿಯ ಸ್ವಪ್ನಾದಿ ಎಲ್ಲ ಅವಸ್ಥೆಗಳೂ ಪರಮಾತ್ಮನ ಅಧೀನವಾಗಿದೆ. ಜೀವರ ವಾಸನೆಗಳನ್ನು ಉಪಾದಾನ ಮಾಡಿಕೊಂಡು ಸ್ವಪ್ನವನ್ನು ಸೃಷ್ಟಿಸುವುದು ಪರಮಾತ್ಮನೇ. ಆದುದರಿಂದ ಸ್ವಪ್ನವು ಸತ್ಯ. ಸ್ವಪ್ನ ತಿರೋಧಾನವೂ ಪರಮಾತ್ಮನ ಅಧೀನ. ಜಾಗ್ರತನಾದವನು ಸುಪ್ತನಾಗುವುದೂ, ಮತ್ತೆ ಸುಪ್ತಾವಸ್ಥೆಯಿಂದ ಎಚ್ಚರ ಗೊಳ್ಳುವುದೂ ಪರಮಾತ್ಮನಿಂದಲೇ. ಪರಮಾತ್ಮನು ಜೀವರ ಕಣ್ಣು, ಕಂಠ ಮುಂತಾದ ವಿಭಿನ್ನಸ್ಥಾನಗಳಲ್ಲಿದ್ದರೂ ಅವನ ರೂಪರೂಪಗಳಿಗೆ ಭೇದವಿಲ್ಲ. ಎಲ್ಲವೂ ನಿರ್ದೋಷ ಹಾಗೂ ಗುಣಪೂರ್ಣವಾದವುಗಳೇ. ಅವನ ರೂಪಗಳು ಅಪ್ರಾಕೃತವೂ ಜ್ಞಾನಾನಂದಾತ್ಮಕವೂ ಆಗಿವೆ. ಜೀವನಿಗೂ ಪರಮಾತ್ಮನಿಗೂ ಅಭೇದವಾಗಲೀ ಭೇದಾಭೇದವಾಗಲೀ ಎಂದಿಗೂ ಇಲ್ಲ. ಜೀವರುಗಳು ಪರಮಾತ್ಮನಿಂದ ಸದಾ ಭಿನ್ನರೇ ಆಗಿರುವರು. ಜೀವರು ಪರಮಾತ್ಮನ ಪ್ರತಿಬಿಂಬ ಸ್ವರೂಪರು. ಜೀವರು ಚೇತನತ್ವ ಆನಂದಾದಿಗಳಿಂದ ಪರಮಾತ್ಮನಿಗೆ ಕಿಂಚಿತ್ ಸದೃಶರು ಹಾಗೂ ಸದಾ ಅವನ ಅಧೀನರು. ಬಿಂಬನಾದ ಪರಮಾತ್ಮನಿಗೂ ಪ್ರತಿಬಿಂಬರಾದ ಜೀವರಿಗೂ ಅಭೇದವು ಯಾವರೀತಿಯಿಂದಲೂ ಕೂಡುವುದಿಲ್ಲ. ಪ್ರಾಕೃತ ರೂಪರಹಿತನಾದ ಪರಮಾತ್ಮನು ಅವ್ಯಕ್ತನಾಗಿದ್ದರೂ ಭಕ್ತಿಯಿಂದ ಅಭಿವ್ಯಕ್ತನಾಗುವನು. ಎಲ್ಲರ ಭಕ್ತಿಯೂ ಏಕಪ್ರಕಾರವಿರುವುದಿಲ್ಲ. ಭಕ್ತಿಯ ತಾರತಮ್ಯದಿಂದ ಆನಂದಾದಿ ಫಲ ದಲ್ಲಿಯೂ ತಾರತಮ್ಯವಿರುವುದು. ಭಂಗವಂತನ ಎಲ್ಲ ಗುಣಗಳೂ ಅವನಿಂದ ಬೇರೆಯಲ್ಲ. ಆದರೂ ವಿಶೇಷದಿಂದ ಭಗವಂತನಲ್ಲಿ ಗುಣಗಳು ಇವೆಯೆಂಬುದಾಗಿ ಭೇದವತ್ ವ್ಯವಹಾರವು. ಹೀಗೆ ಭಗವಂತನ ಮಹಾಮಹಿಮೆಯನ್ನು ಅರಿತರೆ ಅವನಲ್ಲಿ ಭಕ್ತಿಯು ಉದಯಿಸುವುದು ಮತ್ತು ದೃಢವಾಗುವುದು. ಈ ಪ್ರಕಾರವಾಗಿ

ಎರಡನೆಯ ಪಾದವು ಸಾಧಕನಲ್ಲಿ ಭಕ್ತಿಯ ಜಾಗೃತಿಯನ್ನು ಉಂಟುಮಾಡುವುದು.

ಮೊದಲ ಎರಡು ಪಾದಗಳ ಮನನದಿಂದ ಸಂಸಾರದ ಬಗ್ಗೆ ವೈರಾಗ್ಯ ಮೂಡಿ, ಭಗವಂತನಲ್ಲಿ ಭಕ್ತಿಯು ಉದಯಿಸಿತು. ಮುಂದೇನು ಎಂದರೆ ಅದಕ್ಕೆ ಮೂರನೆಯ ಪಾದವು ಹೊರಟಿದೆ. ಭಕ್ತಿಯ ಮುಂದಿನ ಹಂತವೇ ಭಗವದುಪಾಸನೆ. ಮೂರನೆಯ ಪಾದವು ಉಪಾಸನಾ ಕ್ರಮವನ್ನು ನಿರೂಪಿಸುತ್ತದೆ. ಭಕ್ತಿವೈರಾಗ್ಯ ಸಂಪನ್ನನೇ ಉಪಾಸನೆಗೆ ಅರ್ಹತೆ ಗಳಿಸುವನು. ಶಾಸ್ತ್ರವಿಮರ್ಶೆ ಮತ್ತು ಧ್ಯಾನ ಇವು ಉಪಾಸನೆಯ ಎರಡು ಪ್ರಕಾರಗಳು. ಸಕಲ ವೇದಗಳೂ ಪರಮಾತ್ಮನ ಮಹಿಮೆಗಳನ್ನು ಪ್ರತಿಪಾದಿಸುತ್ತವೆ ಎಂದು ಅರಿಯಬೇಕು. ವೇದಕ್ಕೆ ವಿರೋಧವಾದ ಯುಕ್ತಿ ಮತ್ತು ದರ್ಶನಗಳನ್ನು ವಿಮರ್ಶಿಸಿ, ಅವುಗಳ ದೋಷಗಳನ್ನು ಗುರುತಿಸಿ ವೇದಪ್ರತಿಪಾದ್ಯತ್ವವನ್ನು ತಿಳಿದುಕೊಳ್ಳಬೇಕು. ವೇದವಾಕ್ಯಗಳಲ್ಲಿ ಪರಸ್ಪರ ವಿರೋಧ ಕಂಡುಬಂದರೆ ಅದನ್ನು ಪರಿಹರಿಸಿಕೊಳ್ಳಬೇಕು. ಸಾಧಕರು ಅವರವರ ಯೋಗ್ಯತಾನುಸಾರ ಎಲ್ಲ ಗುಣಗಳನ್ನು ಉಪಸಂಹಾರಮಾಡಿಕೊಂಡು ಉಪಾಸನೆ ಮಾಡಬೇಕು. ಸರ್ವಗುಣೋಪಸಂಹಾರವು ಎಲ್ಲರಿಗೂ ಇಲ್ಲ. ಎಲ್ಲ ಮುಮುಕ್ಷುಗಳೂ ಆನಂದ, ಜ್ಞಾನ, ನಿರ್ದೋಷತ್ವ ಮತ್ತು ಸ್ವಾಮಿತ್ವ ಎಂಬ ನಾಲ್ಕು ಗುಣಗಳನ್ನು ಉಪಸಂಹಾರ ಮಾಡಬೇಕು. ದೇವತೆಗಳು ಇನ್ನೂ ಹೆಚ್ಚಿನ ಗುಣಗಳನ್ನು ಅವರವರ ಯೋಗ್ಯತಾನುಸಾರವಾಗಿ ಉಪಸಂಹಾರ ಮಾಡಬೇಕು. ಅಧಿಕಾರಿಗಳ ಯೋಗ್ಯತಾನುಸಾರ ಗುಣೋಪಸಂಹಾರದಲ್ಲಿ ತಾರತಮ್ಯವಿರುವುದು. ಉಪಾಸನೆಗೆ ತಕ್ಕಂತೆ ಫಲದಲ್ಲಿಯೂ ತಾರತಮ್ಯವುಂಟು. ಮುಖ್ಯಪ್ರಾಣನೇ ಅಧಿಕಾರಿಗಳಿಗೆ ಅವಧಿ. ಲಕ್ಷ್ಮೀದೇವಿಯು ನಿತ್ಯಮುಕ್ತಳಾದ್ದರಿಂದ ಅಧಿಕಾರಿ ವರ್ಗದಲ್ಲಿ ಸೇರುವುದಿಲ್ಲ. ತಾರತಮ್ಯ ಜ್ಞಾನದ ಮಹತ್ವವನ್ನು ಸಾಧಕನಿಗೆ ಮನದಟ್ಟು ಮಾಡಲು ಶ್ರೀಮದಾಚಾರ್ಯರು ಇಲ್ಲಿ ಅಧಿಕಾರಿಗಳ ತಾರತಮ್ಯದ ಬಗ್ಗೆ ಶ್ರುತಿ ಸ್ಮೃತಿಗಳ ಆಧಾರದಿಂದ ಬಹಳ ವಿವರವಾಗಿ ತಿಳಿಸುತ್ತಾರೆ. ಸಮ್ಯಕ್ ಗುರುಪ್ರಸಾದವಿಲ್ಲದೆ ಮೋಕ್ಷಸಾಧಕ ಜ್ಞಾನದ ಪ್ರಾಪ್ತಿಯಿಲ್ಲ. ಇದನ್ನು ತಿಳಿಸುವುದಕ್ಕಾಗಿ ಗುರು ಸ್ವೀಕಾರ ಕ್ರಮ ಹಾಗೂ ಗುರು ಸ್ವರೂಪಾದಿಗಳ ನಿರೂಪಣೆ ಮಾಡಲಾಗಿದೆ. ಸ್ವೋತ್ತಮರೆಲ್ಲರೂ ಗುರುಗಳೇ ಎಂದು ತಿಳಿದು ಅವರಲ್ಲಿ ತಾರತಮ್ಯಾನುಸಾರ ಭಕ್ತಿಯನ್ನು ಮಾಡಬೇಕು. ಭಗವಂತನ ದ್ವೇಷಿಗಳಿಗೆ ಎಂದಿಗೂ ಮುಕ್ತಿಯಿಲ್ಲ. ಮೋಕ್ಷಸಾಧನವಾದ ಜ್ಞಾನಾದಿಗಳಲ್ಲಿ ಭಕ್ತಿಗೇ ಪ್ರಾಧಾನ್ಯವೆಂಬುದನ್ನು ಮೂರನೆಯ ಪಾದದಲ್ಲಿ ಬಹಳ ಚೆನ್ನಾಗಿ ನಿರೂಪಿಸಲಾಗಿದೆ.

ನಾಲ್ಕನೆಯ ಪಾದದಲ್ಲಿ ಜ್ಞಾನದ ಮಹಿಮೆಯನ್ನು ವರ್ಣಿಸಲಾಗಿದೆ. ಜ್ಞಾನವು ಎಲ್ಲ ಪುರುಷಾರ್ಥಗಳಿಗೂ ಸಾಧನವು. ಕರ್ಮದಿಂದ ಫಲದಲ್ಲಿ ಅತಿಶಯವು. ಜ್ಞಾನಾಧಿಕಾರದಲ್ಲಿಯೂ ತಾರತಮ್ಯವಿದೆ. ಎಲ್ಲರಿಗೂ ಏಕಪ್ರಕಾರದ ಅಧಿಕಾರವಿಲ್ಲ. ಅಪರೋಕ್ಷಜ್ಞಾನಿಗಳಿಗೆ ದೋಷಗಳ ಲೇಪವಿಲ್ಲ. ದೇವತಾ ಪದಗಳ ಪ್ರಾಪ್ತಿಯು ಆಯಾ ಪದಗಳಿಗೆ ಯೋಗ್ಯರಾದವರಿಗೆ ಮಾತ್ರ. ವಿದ್ಯೋಪದೇಶವು ಅಯೋಗ್ಯರಿಗೆ

ದೊರೆಯದಂತೆ ಅನಾವಿಷ್ಕೃತವಾಗಿ ಮಾಡಬೇಕು. ಪ್ರಾರಬ್ಧದ ಪ್ರತಿಬಂಧವಿಲ್ಲದಿದ್ದರೆ ಜ್ಞಾನ ಬಂದ ಜನ್ಮದಲ್ಲೇ ಮುಕ್ತಿ. ಮುಕ್ತರಲ್ಲಿ ದೋಷವಿಲ್ಲದ ಕಾರಣ ತಾರತಮ್ಯ ವಿದ್ದರೂ ಮುಕ್ತಿಯಲ್ಲಿ ದ್ವೇಷಾಸೂಯಾದಿಗಳಿಲ್ಲ. ಹೀಗೆ ವೈರಾಗ್ಯ ಭಕ್ತಿ ಉಪಾಸನೆ ಜ್ಞಾನಗಳ ವಿಷಯವಾಗಿ ವಿಶೇಷವಾಗಿ ತಿಳಿವಳಿಕೆ ನೀಡುವ ನಾಲ್ಕನೇ ಅಧ್ಯಾಯವು ಸಾಧಕನನ್ನು ಮುಕ್ತಿಮಾರ್ಗದಲ್ಲಿ ಪ್ರಚೋದಿಸುತ್ತದೆ.

ಶ್ರೀಹರಿವಾಯುಗುರುಗಳು ನನ್ನ ಮೇಲೆ ಪರಮಾನುಗ್ರಹ ಮಾಡಿ ನನ್ನನ್ನು ಉಪಕರಣ ಮಾಡಿಕೊಂಡು ಪ್ರಕಾಶಿಸಿದ ಮಹದ್ಗ್ರಂಥವಾದ ಶ್ರೀಮದನು ವ್ಯಾಖ್ಯಾನದ ಮೂರನೆಯ ಅಧ್ಯಾಯದ ಅರ್ಥ ವಿವರಣೆಗಳನ್ನೊಳಗೊಂಡ ಈ **ಸಂಪುಟವು** ಜಿಜ್ಞಾಸುಗಳಿಗೆ ಸಾಧನೆಯ ಬಗ್ಗೆ ಯಥಾರ್ಥವಾದ ಅರಿವನ್ನು **ಮೂಡಿಸಿದಲ್ಲಿ** ನನ್ನ ಈ ಪ್ರಯತ್ನ ಹರಿವಾಯುಗಳ ಪ್ರೀತಿಗೆ ಕಾರಣವಾಗುವುದೆಂದು ನಂಬುತ್ತೇನೆ. ಸಜ್ಜನರ ಯೋಗ್ಯವಾದ ಸಲಹೆಗಳಿಗೆ ಸದಾ ಸ್ವಾಗತ. ಈ ಗ್ರಂಥವನ್ನು ಬಹಳ ಮುತುವರ್ಜಿಯಿಂದ ಸಕಾಲದಲ್ಲಿ ಸುಂದರವಾಗಿ ಮುದ್ರಿಸಿಕೊಟ್ಟ ಪರಿಮಳ ಮುದ್ರಣಾಲಯದ ಶ್ರೀಯುತ ಪ್ರಭಾಕರ್ ಅವರಿಗೆ ಕೃತಜ್ಞತೆಗಳು. ಯಾವಾಗಲೂ ನಮ್ಮ ಪ್ರಕಾಶನ ಕಾರ್ಯದಲ್ಲಿ ಎಲ್ಲ ರೀತಿಯಿಂದಲೂ ಸಹಕರಿಸುತ್ತ ಬಂದಿರುವ ನಮ್ಮ ಕುಟುಂಬದವರಿಗೂ ಹಾಗೂ ನನ್ನ ಎಲ್ಲ ಹಿತೈಷಿಗಳಿಗೂ ಶ್ರೀಹರಿವಾಯು ಗಳು ಉತ್ತರೋತ್ತರ ಅಭಿವೃದ್ಧಿಯನ್ನು ಕರುಣಿಸಲಿ ಎಂದು ಪ್ರಾರ್ಥಿಸುತ್ತೇನೆ. ಈ ಪ್ರಕಟಣೆಯ ಸಮರ್ಪಣೆಯಿಂದ ಅಸ್ಮದ್ಗುರ್ವಂತರ್ಗತ ಶ್ರೀಭಾರತೀರಮಣಮುಖ್ಯ ಪ್ರಾಣಾಂತರ್ಗತ ಶ್ರೀಲಕ್ಷ್ಮೀವೆಂಕಟೇಶನು ಪ್ರೀತನಾಗಲಿ.

ಇಂತಿ ಸಜ್ಜನವಿಧೇಯ

ಎಸ್. ವೆಂಕಟೇಶಮೂರ್ತಿ

॥ ಶ್ರೀಕೃಷ್ಣಾರ್ಪಣಮಸ್ತು ॥

## ವಿಷಯಾನುಕ್ರಮಣಿಕೆ


**ಮೊದಲನೆಯ ಪಾದ** ೧ – ೧೧

ಪೂರ್ವಪಕ್ಷ ಮತ್ತು ಸಿದ್ಧಾಂತಯುಕ್ತಿಗಳ ಸಂಗ್ರಹ ೨

ಪೂರ್ವಪಕ್ಷ ಮತ್ತು ಸಿದ್ಧಾಂತಯುಕ್ತಿಗಳ ವಿವರಣೆ ೩

**ಯೋನ್ಯಧಿಕರಣ** ೧೦

**ಎರಡನೆಯ ಪಾದ** ೧೨ – ೧೦೦

ಪೂರ್ವಪಕ್ಷ ಮತ್ತು ಸಿದ್ಧಾಂತಯುಕ್ತಿಗಳ ಸಂಗ್ರಹ ೧೨

ಪೂರ್ವಪಕ್ಷ ಮತ್ತು ಸಿದ್ಧಾಂತಯುಕ್ತಿಗಳ ವಿವರಣೆ ೧೩

**ಸಂಧ್ಯಾಧಿಕರಣ** ೨೦

ಭಗವಂತನ ಸ್ವಪ್ನಾವಸ್ಥಾದಿ ಪ್ರೇರಕತ್ವ ಮಹಿಮೆ ೨೧

ಸ್ವಾಪ್ನ ಪದಾರ್ಥಗಳಿಗೆ ವಾಸನೋಪಾದಾನಕತ್ವ ಸಮರ್ಥನೆ ೨೩

ಸ್ವಪ್ನವು ಅನಿರ್ವಚನೀಯವಲ್ಲ ೨೪

ತತ್ವನಿರ್ಣಯಕ್ಕೆ ವಿರೋಧಿಯಾದ ಪ್ರಶ್ನದೋಷಗಳು ೨೪

ನೈಯಾಯಿಕ ಮತದಲ್ಲಿ ಆಶ್ರಯಾಸಿದ್ಧ್ಯಾದಿಗಳಿಗೆ ದೋಷತ್ವ ೨೫

ನ್ಯಾಯಗಳಿಗೆ ಪ್ರತ್ಯಕ್ಷಾಗಮ ಮೂಲಕತ್ವ ೨೬

ಸ್ವತಂತ್ರನ್ಯಾಯವು ನ್ಯಾಯಾಭಾಸವು ೨೭

ಪ್ರಮಾಣಬಾಧವಿದ್ದರೆ ಅದೃಷ್ಟವ್ಯಭಿಚಾರವು ಕೂಡುವುದಿಲ್ಲ ೨೭

ಎಲ್ಲ ಜ್ಞಾನಗಳಿಗೆ ಸಾಕ್ಷಿಯಿಂದಲೇ ಪ್ರಮಾಣತ್ವ ೨೭

ಸೋಪಾಧಿಕ ವ್ಯಭಿಚಾರಕ್ಕೆ ಪ್ರಾಮಾಣ್ಯ ೨೮

ವ್ಯಾಪ್ತಿಯಿದ್ದರೆ ವ್ಯಧಿಕರಣಾಸಿದ್ಧಿಯು ಹೇತು ದೂಷಣವಾಗದು ೨೯

ಅಪ್ರಸಿದ್ಧವಿಶೇಷಣತ್ವವೂ ದೂಷಣವಲ್ಲ ೨೯

ಅನುಮಾನದ ಪ್ರಾಮಾಣ್ಯಕ್ಕೆ ಪಂಚಾವಯವತ್ವ ನಿಯಮವಿಲ್ಲ ೩೧

ವಾದಕಥೆಯಲ್ಲಿ ಸಿದ್ಧಸಾಧನಕ್ಕೆ ನಿಗ್ರಹಸ್ಥಾನ ೩೨

ಅವ್ಯಾಪ್ತಿ ಮತ್ತು ಹೇತ್ವಸಿದ್ಧಿಗಳು ದೂಷಣವೇ ಆಗಿವೆ ೩೨

ದೃಷ್ಟಾಂತದೋಷಗಳಿಗೆ ಹೇತುದೋಷಗಳಲ್ಲಿಯೇ ಅಂತರ್ಭಾವ ೩೨

ಅರ್ಥಾಪತ್ತಿ ಉಪಮಾನಗಳು ಅನುಮಾನದಲ್ಲಿಯೇ ಅಂತರ್ಭಾವ ೩೩

ಉಪಕ್ರಮಾದಿಗಳು ಅನುಮಾನದ ಪ್ರಭೇದಗಳೇ ಆಗಿವೆ ೩೪

ತರ್ಕಕ್ಕೆ ದೂಷಣಾನುಮಾನದಲ್ಲಿ ಅಂತರ್ಭಾವ ೩೪
ಛಲ ಜಾತಿಗಳ ಲಕ್ಷಣ ೩೬
ಸ್ವಪ್ನವು ಅನಿರ್ವಾಚ್ಯವಲ್ಲ ೩೬
ಬ್ರಹ್ಮನು ನಿರ್ಧರ್ಮಕನಲ್ಲ ೩೭
ವಿಶ್ವಮಿಥ್ಯಾತ್ವ ಸಾಧಕಾನುಮಾನಕ್ಕೆ ಅಪ್ರಮಾಣ್ಯವು ೩೯
ಜಗತ್ಸತ್ಯತ್ವವು ಭ್ರಾಂತಿಮೂಲವಲ್ಲ ೪೦
ಎಲ್ಲ ಪ್ರಮಾಣಗಳ ಪ್ರಾಮಾಣ್ಯವು ಸಾಕ್ಷಿವೇದ್ಯವು ೪೨
ಸಾಕ್ಷಿಯು ಸ್ವಪ್ರಕಾಶವಾದ್ದರಿಂದ ಅನವಸ್ಥೆಯಿಲ್ಲ ೪೨
ಐಕ್ಯಾಗಮವು ಪ್ರತ್ಯಕ್ಷದಿಂದ ಬಾಧ್ಯವು ೪೨
ಪ್ರತ್ಯಕ್ಷಕ್ಕೆ ಪ್ರಾಮಾಣ್ಯವು ತಾತ್ಕಾಲಿಕವೆಂದರೆ ಸ್ವವ್ಯಾಹತಿ ೪೩
ಅದ್ವೈತ ಮೋಕ್ಷವೆಂಬುದು ಸರ್ವಥಾ ಕೂಡುವುದಿಲ್ಲ ೪೪
ಪ್ರತ್ಯಕ್ಷಸಿದ್ಧವಾದುದಕ್ಕೆ ಅನುಮಾನಾಗಮಗಳಿಂದ ಬಾಧವಿಲ್ಲ ೪೫
ಜೀವನಿಗೆ ದೇಹ ಆತ್ಮಗಳು ಭಿನ್ನವೆಂಬ ಪ್ರತೀತಿಯುಂಟು ೪೬
ದೇಹ ಆತ್ಮಗಳಿಗೆ ಭೇದವಿದ್ದರೂ ಅಭಿನ್ನದೃಷ್ಟಿ ವ್ಯವಹಾರ ೪೮
ಪ್ರತ್ಯಕ್ಷಸಿದ್ಧವಾದುದಕ್ಕೆ ಯಾವುದರಿಂದಲೂ ಬಾಧವಿಲ್ಲ ೪೮
ಸಾಕ್ಷಿಪ್ರತ್ಯಕ್ಷಕ್ಕೆ ಕಾಲತ್ರಯಗಳಲ್ಲಿ ಅಬಾಧ್ಯತ್ವವು ೪೯
ಮೀಮಾಂಸಕ ಮತ ನಿರಾಸೆ ೫೦
ಪದಾರ್ಥಗಳಲ್ಲಿ ಪರಸ್ಪರ ಏಕಧರ್ಮತ್ವವಿಲ್ಲ ೫೨
ಮಾನಸಪ್ರತ್ಯಕ್ಷಕ್ಕೆ ಅತೀತಾರ್ಥಗೋಚರತ್ವ ೫೩
ಸ್ಮೃತಿಪ್ರಾಮಾಣ್ಯಕ್ಕೆ ಬಾಧವಿಲ್ಲ ೫೩
ಪ್ರತ್ಯಭಿಜ್ಞೆಯೂ ಪ್ರಮಾಣ ೫೩
ಸ್ವಾಪ್ನಪದಾರ್ಥಕ್ಕೆ ಬಾಧವಿಲ್ಲ ೫೫
ಸ್ವಪ್ನವು ಮಿಥ್ಯೆಯಲ್ಲ, ಜಾಗ್ರತತ್ವ ಪ್ರತೀತಿಯೇ ಭ್ರಾಂತಿಯು ೫೫
ಮಾಯಿಗಳ ಮತವು ಅಶೇಷದೋಷದುಷ್ಟವಾದ್ದರಿಂದ ಹೇಯವು ೫೭
ಮಾಯಾಮಾತ್ರ ಶಬ್ದಾರ್ಥ ವಿವರಣೆ ೫೮
ಪರಾಭಿಧ್ಯಾನಾಧಿಕರಣ ೫೯
ತದಭಾವಾಧಿಕರಣ ೬೦

**ಕರ್ಮಾನುಸ್ಮೃತ್ಯಧಿಕರಣ** ೬೦
**ನ ಸ್ಥಾನತೋಽಪ್ಯಧಿಕರಣ** ೬೧
ಸ್ವಪ್ನಾದಿಗಳಿಗೆ ಈಶ್ವರನೇ ಕರ್ತನು, ಬೇರೊಬ್ಬನಿಲ್ಲ ೬೧
ಸ್ಥಾನಭೇದವಿದ್ದರೂ ಪರಮಾತ್ಮನ ರೂಪರೂಪಗಳಿಗೆ ಭೇದವಿಲ್ಲ ೬೧
ಶಾಸ್ತ್ರಗಳ ಮಹಾತಾತ್ಪರ್ಯಕ್ಕೆ ವಿರುದ್ಧವಾದುದು ಪ್ರಮಾಣವೇ ಅಲ್ಲ ೬೨
ಗುಣೋತ್ಕರ್ಷಜ್ಞಾನದಿಂದಲೇ ಭಗವತ್ಪ್ರಸಾದರೂಪವಾದ ಮೋಕ್ಷ ೬೨
ಭಗವತ್ಪ್ರಸಾದದಿಂದ ಮೋಕ್ಷ ಎಂಬುದಕ್ಕೆ ಆಗಮ ಪ್ರಮಾಣ ೬೩
ಉಕ್ತಾರ್ಥದಲ್ಲಿ ಅನುಮಾನದಿಂದ ಸಮರ್ಥನೆ ೬೩
ಗುಣೋತ್ಕರ್ಷವೇ ಸಕಲ ಶಾಸ್ತ್ರಗಳ ಮಹಾತಾತ್ಪರ್ಯ ೬೪
**ಉಪಮಾಧಿಕರಣ** ೬೪
ಭೇದಾಭೇದ ಮತ ನಿರಾಸೆ ೬೪
ಜೀವನಿಗೆ ಪರಮಾತ್ಮನ ಪ್ರತಿಬಿಂಬತ್ವ ಸಮರ್ಥನೆ ೬೫
ಪರಂಪರೆಯಿಂದ ಪ್ರತಿಬಿಂಬತ್ವವು, ಸಾಕ್ಷಾತ್ತಾಗಿ ಅಲ್ಲ ೬೬
ಸಮುದಾಯ ಐಕ್ಯ ಹೇಳುವ ಮತದ ನಿರಾಕರಣೆ ೬೭
ಶ್ರೀಹರಿಗೆ ಉಪಾಧಿನಿಮಿತ್ತಕ ದೋಷವಿಲ್ಲ ೭೧
ಪರಮಾತ್ಮನ ಸರ್ವಜ್ಞತ್ವಕ್ಕೆ ಹಾನಿಯಿಲ್ಲ ೭೩
ಪರಮಾತ್ಮನ ರೂಪರೂಪಗಳಿಗೆ ಭೇದವಿಲ್ಲ ೭೩
ಇಂದ್ರ ಅರ್ಜುನಾದಿ ಅಂಶಗಳಲ್ಲಿ ಅನುಸಂಧಾನ ಪ್ರಕಾರ ೭೪
ಪರಮಾತ್ಮನಿಗೆ ಅಘಟಿತಘಟನಾಶಕ್ತಿಯ ಸಮರ್ಥನೆ ೭೫
ಅನೀಶನಿಗೆ ಈಶತ್ವ ಹೇಳುವುದು ಪ್ರಮಾಣವಿರುದ್ಧ ೭೬
**ಅರೂಪಾಧಿಕರಣ** ೭೭
ಪರಮಾತ್ಮನು ಅಪ್ರಾಕೃತರೂಪನಾದ್ದರಿಂದ ಅರೂಪನು ೭೮
**ವೃದ್ಧಿಹ್ರಾಸಾಧಿಕರಣ** ೭೮
ಭಕ್ತಿಯಲ್ಲಿ ತಾರತಮ್ಯವನ್ನು ಅಂಗೀಕರಿಸಲೇ ಬೇಕು ೭೯
**ಸ್ಥಾನವಿಶೇಷಾಧಿಕರಣ** ೭೯
ಪ್ರತಿಬಿಂಬಗಳಾದ ಬ್ರಹ್ಮಾದಿಗಳಲ್ಲಿ ವೈಚಿತ್ರವಿದೆ ೭೯
**ಪ್ರಕೃತೈತಾವತ್ವಾಧಿಕರಣ** ೮೦

ಪರಮಾತ್ಮನಿಗೆ ಸ್ಥಿತಿಕರ್ತೃತ್ವ ಸಮರ್ಥನೆ ೮೦
**ಅವ್ಯಕ್ತಾಧಿಕರಣ** ೮೧
ಪರಮಾತ್ಮನು ಅವ್ಯಕ್ತನಾದರೂ ವ್ಯಕ್ತತ್ವವು ಕೂಡುವುದು ೮೧
**ಅಹಿಕುಂಡಲಾಧಿಕರಣ** ೮೧
ಬ್ರಹ್ಮನಿಗೂ ಅವನ ಧರ್ಮಗಳಿಗೂ ಸವಿಶೇಷಾತ್ಯಂತಾಭೇದ ೮೨
ಬ್ರಹ್ಮನಿಂದ ಅಭಿನ್ನವಾದ ವಿಶೇಷವು ಸ್ವನಿರ್ವಾಹಕ ೮೨
ಸವಿಶೇಷಾಭೇದದ ಸಮರ್ಥನೆ ೮೩
**ಅಭೇದವಾದಿಯೂ ವಿಶೇಷವನ್ನು ಒಪ್ಪಲೇಬೇಕು** ೮೭
**ಭೇದಾಭೇದವಾದಿಯಿಂದಲೂ ವಿಶೇಷವು ಅಂಗೀಕಾರ್ಯವು** ೮೯
**ಅಭಿಹಿತಾನ್ವಯ** ವಾದದ ನಿರಾಸೆ ೯೦
ಅನ್ವಿತಾಭಿಧಾನ ವಾದದ ಸಮರ್ಥನೆ ೯೦
ಅಭಿಹಿತಾನ್ವಯವು ಅನುಭವವಿರುದ್ಧವು ೯೧
ಸ್ಫೋಟದಿಂದ ಅನ್ವಯವೆಂಬುದು ಅಪ್ರಮಾಣಿಕ ೯೩
**ಪರಮತಾಧಿಕರಣ** ೯೬
ಭಗವಂತನ ಆನಂದಾದಿಗಳು ಲೌಕಿಕದಿಂದ ವಿಲಕ್ಷಣ ೯೬
ಉಕ್ತಾರ್ಥದಲ್ಲಿ ಶ್ರುತಿ ಪ್ರಮಾಣ ೯೭
**ಫಲಾಧಿಕರಣ** ೯೮
ಸ್ವತಂತ್ರನಾದ ಈಶ್ವರನೇ ಫಲದಾತೃವು ೯೯
ಭಗವಂತನ ಮಾಹಾತ್ಮ್ಯಜ್ಞಾನಕ್ಕಾಗಿ ಕರ್ಮಸ್ವರೂಪ ವಿವರಣೆ ೯೯
**ಮೂರನೆಯ ಪಾದ** ೧೦೧ – ೧೮೩
ತೃತೀಯಾಧ್ಯಾಯದಲ್ಲಿನ ಪಾದಗಳ ಸಂಗತಿ ನಿರೂಪಣೆ ೧೦೧
ಪ್ರಥಮ ಸೂತ್ರಾರ್ಥ ಅನುವಾದ ೧೦೧
ದ್ವಿತೀಯ ಸೂತ್ರಕ್ಕೆ ಸಂಗತಿ ಸಹಿತ ವ್ಯಾಖ್ಯಾನ ೧೦೩
ತೃತೀಯ ಸೂತ್ರಕ್ಕೆ ಸಂಗತಿ ಸಹಿತ ವ್ಯಾಖ್ಯಾನ ೧೦೪
ಸಮನ್ವಯ ಸೂತ್ರಾರ್ಥ ೧೦೫
ಗತಿಸಾಮಾನ್ಯ ಸೂತ್ರಕ್ಕೆ ಸಂಗತಿ ೧೦೭
ಪ್ರಥಮ ಪಾದಗತ ವಿಷಯಗಳ ಸಂಗ್ರಹ ೧೧೦

ದ್ವಿತೀಯ ಪಾದಕ್ಕೆ ಸಂಗತಿ ನಿರೂಪಣೆ ೧೧೨
ತೃತೀಯ ಪಾದಕ್ಕೆ ಸಂಗತಿ ನಿರೂಪಣೆ ೧೧೨
ನಾಲ್ಕನೆಯ ಪಾದಕ್ಕೆ ಸಂಗತಿ ನಿರೂಪಣೆ ೧೧೪
ದ್ವಿತೀಯಾಧ್ಯಾಯಕ್ಕೆ ಸಂಗತಿ ನಿರೂಪಣೆ ೧೧೫
ತೃತೀಯಾಧ್ಯಾಯಕ್ಕೆ ಸಂಗತಿ ನಿರೂಪಣೆ ೧೧೬
ಪೂರ್ವಪಕ್ಷ ಮತ್ತು ಸಿದ್ಧಾಂತ ಯುಕ್ತಿಗಳ ಸಂಗ್ರಹ ೧೧೮
ಪೂರ್ವಪಕ್ಷ ಮತ್ತು ಸಿದ್ಧಾಂತ ಯುಕ್ತಿಗಳ ವಿವರಣೆ ೧೨೦
**ಸರ್ವವೇದಾಧಿಕರಣ** **೧೩೫**
ಯಥಾಶಕ್ತಿ ವೇದಜ್ಞಾನವೇ ಉಪಾಸನೆಗೆ ಅಂಗವು ೧೩೫
ಸ್ವಾಧ್ಯಾಯಸ್ಯ ತಥಾತ್ವೇನ ಎಂಬ ಸೂತ್ರದ ತಾತ್ಪರ್ಯ ೧೩೭
ವಾಚನಿಕ ಪರ ಸತ್ಸಿದ್ಧಾಂತದ ನಿರೂಪಣೆ ೧೪೦
ಆನುಷಂಗಿಕ ಪರ ಸತ್ಸಿದ್ಧಾಂತದ ನಿರೂಪಣೆ ೧೪೦
ಅಪರ ಸತ್ಸಿದ್ಧಾಂತದ ನಿರೂಪಣೆ ೧೪೨
ಸತ್ಸಿದ್ಧಾಂತದ ಪರಿತ್ಯಾಗದಿಂದ ಅಂಧಂತಮಸ್ಸು ೧೪೨
ಸತ್ಸಿದ್ಧಾಂತಕ್ಕೆ ಪ್ರಾಮಾಣಿಕತ್ವ ಸಮರ್ಥನೆ ೧೪೨
ಸಮ್ಯಕ್ ಜ್ಞಾನದಿಂದ ಸುಖ, ವಿಷಮಜ್ಞಾನದಿಂದ ದುಃಖ ೧೪೪
**ಉಪಸಂಹಾರಾಧಿಕರಣ** **೧೪೪**
ಯಥಾಶಕ್ತಿ ಗುಣೋಪಸಂಹಾರದಿಂದಲೇ ಉಪಾಸನೆ ೧೪೪
**ಅನುಬಂಧಾದ್ಯಧಿಕರಣ** **೧೪೫**
ಯಮನಿಯಮಾದಿಗಳಿಗೆ ಉಪಾಸನಾಂಗತ್ವ ೧೪೬
ವಿಷ್ಣುವಿನಲ್ಲಿ ನಿರತಿಶಯ ಹಾಗೂ ಸ್ವೋತ್ತಮರಲ್ಲಿ ಕ್ರಮದಿಂದ ಭಕ್ತಿ ೧೪೭
ಸ್ವಸಮರಲ್ಲಿ ಸ್ನೇಹ ಹಾಗೂ ಅಧಮರಲ್ಲಿ ದಯೆ ೧೪೮
ವಿಪರೀತಜ್ಞಾನದಿಂದ ಅನರ್ಥ ೧೪೮
ಭಗವಂತನ ದ್ವೇಷಿಗಳಿಗೆ ಮುಕ್ತಿಯಿಲ್ಲ ೧೪೯
**ವಿದ್ಯಾಧಿಕರಣ** **೧೫೨**
ಚಾರ್ವಾಕ ಮತ ನಿರಾಸೆ ೧೫೨
ಜೈನೋಕ್ತ ಮೋಕ್ಷಸಾಧನತ್ವ ನಿರಾಸೆ ೧೫೭

ಶೂನ್ಯವಾದಿಗಳ ಮತ (ಬೌದ್ಧ ಮತ) ನಿರಾಸೆ ೧೬೪
ವಿಜ್ಞಾನವಾದಿಗಳ ಮತ ನಿರಾಸೆ ೧೬೫
ವೈಭಾಷಿಕ ಸೌತ್ರಾಂತಿಕ ಮತ ನಿರಾಸೆ ೧೬೬
ಸಾಂಖ್ಯಮತ ನಿರಾಸೆ ೧೬೬
ವೈಶೇಷಿಕಾದಿಗಳ ಮತ ನಿರಾಸೆ ೧೬೭
ಈಶ್ವರನ ಪ್ರಸಾದದಿಂದಲೇ ಮೋಕ್ಷ ೧೬೮
ಪಾಶುಪತಾದಿ ಮತಗಳ ನಿರಾಸೆ ೧೬೮
ಪುರುಷಸೂಕ್ತಾರ್ಥ ನಿರೂಪಣೆ ೧೭೦
ಭಾಟ್ಟೋಕ್ತ ಮೋಕ್ಷಸಾಧನತ್ವ ನಿರಾಸೆ ೧೭೨
ಸಮುಚ್ಚಯ ವಾದ ನಿರಾಸೆ ೧೭೩
ಏಕತ್ವ ವಿಜ್ಞಾನದಿಂದ ಮೋಕ್ಷವಿಲ್ಲ ೧೭೩
ಅನ್ಯಥೋಪಾಸನೆಯಿಂದ ಅನರ್ಥ ೧೭೩
ಅಧಿಕರಣಾರ್ಥ ಉಪಸಂಹಾರ ೧೭೪
ಯಾವದಧಿಕಾರಾಧಿಕರಣ ೧೭೪
ಸಂಸಾರ ಮೋಕ್ಷಗಳಲ್ಲಿ ಭಕ್ತಿಜ್ಞಾನಾದಿ ವಿಶೇಷ ೧೭೫
ತಾರತಮ್ಯವಿದ್ದರೂ ಮುಕ್ತರಲ್ಲಿ ಪರಸ್ಪರ ದ್ವೇಷವಿಲ್ಲ ೧೭೫
ಮಾಯಾವಾದಿ ವ್ಯಾಖ್ಯಾನದ ನಿರಾಸೆ ೧೭೬
ಇಯದಾಮನನಾಧಿಕರಣ ೧೭೬
ಅಧಿಕಾರಿ ತಾರತಮ್ಯ ನಿರೂಪಣೆ ೧೭೭
ರಮಾದೇವಿಯು ಅಧಿಕಾರಿ ವರ್ಗದಲ್ಲಿ ಸೇರಿಲ್ಲ ೧೭೯
ಶ್ರೀಹರಿಯೇ ಸರ್ವೋತ್ತಮನು ೧೭೯
ಪ್ರಜ್ಞಾಂತರಾಧಿಕರಣ ೧೮೦
ಯೋಗ್ಯತಾನುಸಾರ ಅಪರೋಕ್ಷಜ್ಞಾನ ೧೮೦
ಪ್ರದಾನಾಧಿಕರಣ ೧೮೦
ಲಿಂಗಭೂಯಸ್ತ್ವಾಧಿಕರಣ ೧೮೦
ಪ್ರಸಾದಪೂರ್ವಕ ವಿದ್ಯಾದಾನದಿಂದ ಅಪರೋಕ್ಷಜ್ಞಾನ ೧೮೦
ಪೂರ್ವವಿಕಲ್ಪಾಧಿಕರಣ ೧೮೧

ಗುರು ಸ್ವೀಕಾರಕ್ರಮ, ಗುರುಸ್ವರೂಪಾದಿ ನಿರೂಪಣೆ ೧೮೨

**ಪರೇಣಾಧಿಕರಣ** **೧೮೩**

ಮೋಕ್ಷಸಾಧನವಾದ ಜ್ಞಾನಾದಿಗಳಲ್ಲಿ ಭಕ್ತಿಗೇ ಪ್ರಾಧಾನ್ಯವು ೧೮೩

ಪಾದಾರ್ಥ ಉಪಸಂಹಾರ ೧೮೩

**ನಾಲ್ಕನೆಯ ಪಾದ** **೧೮೪ – ೨೬೬**

**ಪುರುಷಾರ್ಥಾಧಿಕರಣ** **೧೮೪**

ದೇವತೆಗಳಿಗೆ ಯೋಗ್ಯತಾನುಸಾರ ಫಲ ೧೮೪

**ಸ್ತುತ್ಯಧಿಕರಣ** **೧೮೫**

ಜ್ಞಾನಿಗಳ ಸದಸತ್ ಪ್ರವೃತ್ತಿಗಳಲ್ಲಿ ವಿಶೇಷ ೧೮೫

ಪುನರುಕ್ತಿದೋಷ ಪರಿಹಾರ ೧೮೭

ಉಕ್ತಾರ್ಥದಲ್ಲಿ ಸ್ಮೃತಿ ಶ್ರುತಿಗಳು ೧೮೯

ಮುಕ್ತಿಯಲ್ಲಿ ಆನಂದತಾರತಮ್ಯ ಸಮರ್ಥನೆಗೆ ಯುಕ್ತಿಯು ೧೯೭

ಉಕ್ತಾರ್ಥದಲ್ಲಿ ಶ್ರುತಿ ಸ್ಮೃತಿಗಳು ೧೯೯

ಸಾಧನ ತಾರತಮ್ಯಕ್ಕೆ ಪ್ರಾಮಾಣ್ಯ ನಿರೂಪಣೆ ೨೦೧

ಸಾಧನಕ್ಕೆ ತಕ್ಕಂತೆ ಸಾಧ್ಯ ವೈಚಿತ್ರ್ಯ ೨೧೦

ಸಾಧ್ಯಸಾಧನಗಳಿಗೆ ವೈರೂಪ್ಯ ಕಲ್ಪಿಸಿದರೆ ದೋಷ ೨೧೨

ಮುಕ್ತರಲ್ಲಿ ತಾರತಮ್ಯವಿದ್ದರೂ ದ್ವೇಷಾದಿಗಳಿಲ್ಲ ೨೧೨

ಮುಕ್ತರಲ್ಲಿ ಸಾಮ್ಯವಿಲ್ಲ ೨೧೫

ಚೇತನತ್ವ ಹೇತುವಿನಿಂದ ಮುಕ್ತರಲ್ಲಿ ತಾರತಮ್ಯಸಾಧನೆ ೨೧೫

ಮುಕ್ತನಿಗೆ ನಿರ್ದುಃಖತ್ವಾದಿ ಪ್ರತಿಪಾದಕ ಶ್ರುತಿಗಳು ೨೧೫

**ಉಭಯಲಿಂಗಾಧಿಕರಣ** **೨೧೭**

**ಆಧಿಕಾರಿಕಾಧಿಕರಣ** **೨೧೭**

ಯೋಗ್ಯತೆಗೆ ಅನಾದಿತ್ವ ಅವಧಿತ್ವ ಸಮರ್ಥನೆ ೨೧೭

ಭಗವಂತನಿಗೆ ನಿರ್ದೋಷತ್ವ ಸಮರ್ಥನೆ ೨೨೬

ಪರೀಕ್ಷಿತವಾದುದಕ್ಕೇ ಪ್ರಾಮಾಣ್ಯ ೨೨೯

ಪ್ರತ್ಯಕ್ಷಾಗಮಗಳಿಂದ ಉಪಜೀವ್ಯತ್ವ ವಿವೇಕ ೨೩೩

ವೇದಕ್ಕೆ ವಿರುದ್ಧವಾದುದು ಪ್ರಮಾಣವಲ್ಲ ೨೩೫

| | |
|---|---|
| ಅಪರೀಕ್ಷಿತವಾದುದು ಅಪ್ರಮಾಣ | ೨೩೫ |
| ಉಪಜೀವ್ಯವಿರೋಧವು ಉಪಜೀವಕಕ್ಕೆ ಬಾಧಕ | ೨೩೫ |
| ಚಿನ್ಮಾತ್ರತ್ವಾದಿಗಳಿಂದ ಬ್ರಹ್ಮನಿಗೆ ಉಪಜೀವ್ಯತ್ವವಿಲ್ಲ | ೨೩೯ |
| ಸ್ವರೂಪಮಾತ್ರವು ಉಪಜೀವ್ಯವಲ್ಲ | ೨೩೯ |
| ಜ್ಞಾತೃ ಜ್ಞೇಯ ವಿಹೀನವಾದ ಜ್ಞಾನವಿಲ್ಲ | ೨೪೧ |
| ಪ್ರಪಂಚಮಿಥ್ಯಾತ್ವವು ಅಪ್ರಾಮಾಣಿಕ | ೨೪೨ |
| ಉಪಕ್ರಮಾದಿಗಳಲ್ಲಿ ಉಪಪತ್ತಿಗೇ ಪ್ರಾಬಲ್ಯ | ೨೪೩ |
| ಸರ್ವಮಿಥ್ಯಾತ್ವ ಕಲ್ಪನೆಯು ಅಯುಕ್ತ | ೨೪೪ |
| ಮುಕ್ತರಲ್ಲಿ ತಾರತಮ್ಯ ಸಮರ್ಥನೆ | ೨೪೫ |
| ದ್ವೇಷಕ್ಕೆ ಮುಕ್ತಿಸಾಧನತ್ವವಿಲ್ಲ | ೨೫೦ |
| ಭಕ್ತಿಯಿಂದಲೇ ಪರಮಪುರುಷಾರ್ಥ | ೨೫೪ |
| ದ್ವೇಷದಿಂದ ಭಗವತ್ಪ್ರಸಾದ ಸಾಧ್ಯವಿಲ್ಲ | ೨೫೬ |
| ರಮಾದಿಗಳಲ್ಲಿ ಕ್ರಮದಿಂದಲೇ ಭಕ್ತಿ ಮಾಡತಕ್ಕದ್ದು | ೨೫೭ |
| ರಮಾದಿಗಳಲ್ಲಿ ಮಾಡುವ ಭಕ್ತಿಯೂ ಭಗವದ್ಭಕ್ತಿಯೇ | ೨೫೭ |
| ಉಕ್ತಾರ್ಥದಲ್ಲಿ ಆಗಮ ಪ್ರಮಾಣ | ೨೫೮ |
| ಉಕ್ತಾರ್ಥದಲ್ಲಿ ಯುಕ್ತಿಯು | ೨೫೯ |
| **ಫಲಶ್ರುತ್ಯಧಿಕರಣ** | **೨೬೦** |
| ಶುಭಕರ್ಮಗಳ ಫಲವು ದೇವತೆಗಳಿಗೆ | ೨೬೦ |
| ಅಶುಭಕರ್ಮಗಳ ಫಲವು ಅಸುರರಿಗೆ | ೨೬೩ |
| ಜೀವನಿಗೆ ಶುಭಾಶುಭಕರ್ಮಗಳ ಫಲ | ೨೬೩ |
| **ಅನಾವಿಷ್ಕಾರಾಧಿಕರಣ** | **೨೬೪** |
| ಗುರುಗಳಿಗೆ ತಾರತಮ್ಯಾನುಸಾರ ಫಲ | ೨೬೪ |
| **ಐಹಿಕಾಧಿಕರಣ** | **೨೬೬** |
| **ಮುಕ್ತಿಫಲಾಧಿಕರಣ** | **೨೬೬** |
| ಪ್ರತಿಬಂಧವಿಲ್ಲದಿದ್ದರೆ ಜ್ಞಾನಪ್ರಾಪ್ತವಾದ ಜನ್ಮದಲ್ಲೇ ಮುಕ್ತಿ | ೨೬೬ |
| ಮೂರನೆಯ ಅಧ್ಯಾಯದ ಮುಕ್ತಾಯ | ೨೬೬ |


* * *

ಶ್ರೀಮದ್ಧನುಮಭೀಮಮಧ್ವಾಂತರ್ಗತ ಶ್ರೀರಾಮಕೃಷ್ಣವೇದವ್ಯಾಸಾತ್ಮಕ ಶ್ರೀಲಕ್ಷ್ಮೀಹಯಗ್ರೀವಾಯ ನಮಃ

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತಮ್

# ಶ್ರೀಮದನುವ್ಯಾಖ್ಯಾನಮ್

# ಮೂರನೆಯ ಅಧ್ಯಾಯ (ಸಾಧನಾಧ್ಯಾಯ)

## ಮೊದಲನೆಯ ಪಾದ

ಕುಪಿತಾಹಿಫಣಚ್ಛಾಯಾಸಮೀಕ್ಷ್ಯತ್ಯಾಪರಂ ಸುಖಮ್ ।

ಸೇವಂತೇ ಯತ್ಪದಂ ಧೀರಾಸ್ತಂ ಭಜೇ ವಲ್ಲಭಂ ಶ್ರಿಯಃ ॥

ಜ್ಞಾನಿಗಳು ವಿಷಯಜನ್ಯವಾದ ಸುಖವನ್ನು ಕೋಪಗೊಂಡ ಹಾವಿನ ಹೆಡೆಯ ನೆರಳಿಗೆ ಸಮವೆಂದು ತಿಳಿದು ಅದನ್ನು ತುಚ್ಛೀಕರಿಸಿ, ಯಾವ ಶ್ರೀಹರಿಯ ಸ್ವರೂಪವನ್ನು ಭಕ್ತಿಜ್ಞಾನಾದಿಗಳಿಂದ ಸೇವಿಸುವರೋ, ಅಂಥ ಲಕ್ಷ್ಮೀಪತಿಯಾದ ಶ್ರೀಹರಿಯನ್ನು ನಾನು ಸೇವಿಸುತ್ತೇನೆ.

ಈ ಅಧ್ಯಾಯದಲ್ಲಿ ಸಾಧನ ವಿಚಾರವು ಮಾಡಲ್ಪಡುತ್ತದೆ. ಸಾಧಕನಲ್ಲಿ ವೈರಾಗ್ಯವನ್ನು ಹುಟ್ಟಿಸುವುದಕ್ಕಾಗಿ ಮೂರನೆಯ ಅಧ್ಯಾಯದ ಮೊದಲನೆಯ ಪಾದದಲ್ಲಿ ಗತ್ಯಾದಿಗಳ ನಿರೂಪಣೆಯು ಮಾಡಲ್ಪಟ್ಟಿದೆ ಎಂಬ ವಿಷಯವು ಭಾಷ್ಯದಿಂದಲೇ ಸ್ಪಷ್ಟವಾಗಿ ತಿಳಿದುಬರುವುದು. ಈ ವ್ಯಾಖ್ಯಾನದಲ್ಲಿ ಮೊದಲಿಗೆ ಈ ಪಾದದ ಅಧಿಕರಣಗಳ ಪೂರ್ವಪಕ್ಷ ಹಾಗೂ ಸಿದ್ಧಾಂತ ಯುಕ್ತಿಗಳನ್ನು ಸಂಗ್ರಹವಾಗಿ ಹೇಳುತ್ತಾರೆ.

ಸ್ವಾಭಾವಿಕಾನ್ಯಥಾನಾಮಸಹಭಾವಾನ್ಯಥೋಕ್ತಯಃ ।

ಅವಿಶೇಷವಿಶೇಷೌ ಚ ಸಹಭಾವೋ ವಿಮಿಶ್ರಿತಾ ॥೧॥

ವಿರುದ್ಧೋಕ್ತಿಃ ಸಹಸ್ಥಾನಂ ವೈಯರ್ಥ್ಯಂ ಚಾನ್ಯಥಾಗತಿಃ ।

ಯುಕ್ತಯಃ ಪೂರ್ವಪಕ್ಷಸ್ಯ ಗುಣಾಧಿಕ್ಯಾರ್ಥತೋ ಭವೌ ॥೨॥

ಉಪಪತ್ತಿರ್ದ್ವಿರೂಪತ್ವಮಾಧಿಕ್ಯಮನುರೂಪತಾ ।

ಯೋಗ್ಯತಾ ಬಲವತ್ತ್ವಂ ಚ ವಿಭಾಗಃ ಕಾರಣಾಭವಃ ॥

ಕ್ಲೃಪ್ತಿರನ್ಯಾಗತಿಶ್ಚೈವ ಸಿದ್ಧಾಂತಸ್ಯೈವ ಸಾಧಕಾಃ ॥೩॥

## ಪೂರ್ವಪಕ್ಷ ಹಾಗೂ ಸಿದ್ಧಾಂತ ಯುಕ್ತಿಗಳ ಸಂಗ್ರಹ

| ಅಧಿಕರಣ | ಪೂರ್ವಪಕ್ಷಯುಕ್ತಿ | ಸಿದ್ಧಾಂತಯುಕ್ತಿ |
|---|---|---|
| ೧. ಅಂತರಾಧಿಕರಣ | ಸ್ವಾಭಾವಿಕತ್ವ | ಗುಣಾಧಿಕ್ಯ |
| ೨. ತ್ರ್ಯಾತ್ಮಕತ್ವಾಧಿಕರಣ | ಅನ್ಯಥಾನಾಮ | ಅರ್ಥತಃ ಪ್ರಾಪ್ತಿ |
| ೩. ಪ್ರಾಣಗತ್ಯಧಿಕರಣ | ಸಹಭಾವ | ಉಪಪತ್ತಿ |
| ೪. ಅಗ್ನ್ಯಾದ್ಯಧಿಕರಣ | ಅನ್ಯಥೋಕ್ತಿ | ದ್ವಿರೂಪತ್ವ |
| ೫. ಪ್ರಥಮಶ್ರವಣಾಧಿಕರಣ | ಅವಿಶೇಷ | ಆಧಿಕ್ಯ |
| ೬. ಅಶ್ರುತತ್ವಾಧಿಕರಣ | ಅವಿಶೇಷ | ಅನುರೂಪತಾ |
| ೭. ಭಾಕ್ತಾಧಿಕರಣ | ವಿಶೇಷ | ಯೋಗ್ಯತಾ |
| ೮. ಕೃತಾತ್ಯಯಾಧಿಕರಣ | ಸಹಭಾವ | ಯೋಗ್ಯತಾ |
| ೯. ಯಥೇತಾಧಿಕರಣ | ಸಹಭಾವ | ಯೋಗ್ಯತಾ |
| ೧೦. ಚರಣಾಧಿಕರಣ | ಸಹಭಾವ | ಯೋಗ್ಯತಾ |
| ೧೧. ಅನಿಷ್ಟಾಧಿಕರಣ | ವಿಮಿಶ್ರಿತಾ | ಬಲವತ್ತ್ವ |
| ೧೨. ಅಪಿಸಪ್ತಾಧಿಕರಣ | ವಿರುದ್ಧೋಕ್ತಿ | ವಿಭಾಗ |
| ೧೩. ತತ್ರಾಪ್ಯಧಿಕರಣ | ಸಹಸ್ಥಾನ | ಕಾರಣಾಭವ |
| ೧೪. ವಿದ್ಯಾಧಿಕರಣ | ಸಹಸ್ಥಾನ | ಕಾರಣಾಭವ |
| ೧೫. ನತೃತೀಯಾಧಿಕರಣ | ಸಹಸ್ಥಾನ | ಕಾರಣಾಭಾವ |
| ೧೬. ತತ್ಸ್ವಾಭಾವ್ಯಾಧಿಕರಣ | ಸಹಸ್ಥಾನ | ಕಾರಣಾಭಾವ |
| ೧೭. ನಾತಿಚಿರೇಣಾಧಿಕರಣ | ಸಹಸ್ಥಾನ | ಕಾರಣಾಭಾವ |
| ೧೮. ಅನ್ಯಾಧಿಕರಣ | ಸಹಸ್ಥಾನ | ಕಾರಣಾಭಾವ |
| ೧೯. ರೇತೋಧಿಕರಣ | ವೈಯರ್ಥ್ಯ | ಈಶಕ್ಲೃಪ್ತಿ |
| ೨೦. ಯೋನ್ಯಧಿಕರಣ | ಅನ್ಯಥಾಗತಿ | ಅನ್ಯಾಗತಿ |

### ಪೂರ್ವಪಕ್ಷ ಹಾಗೂ ಸಿದ್ಧಾಂತ ಯುಕ್ತಿಗಳ ವಿವರಣೆ

**೧. ತದಂತರಾಧಿಕರಣ: ಓಂ ತದಂತರಪ್ರತಿಪತ್ತೌ ರಂಹತಿ ಸಂಪರಿಷ್ವಕ್ತಃ ಪ್ರಶ್ನ ನಿರೂಪಣಾಭ್ಯಾಂ ಓಂ**

ಸ್ವಾಭಾವಿಕ ಎನ್ನುವುದು ಪೂರ್ವಪಕ್ಷಯುಕ್ತಿ. "ಭೂತಬಂಧಸ್ತು ಸಂಸಾರೋ ಮುಕ್ತಿಸ್ತೇಭ್ಯೋ ವಿಮೋಚನಂ" ಎಂಬ ವಚನದ ಪ್ರಕಾರ ಸ್ವಾಭಾವಿಕ ಮರಣವೇ ಮುಕ್ತಿಯು. ಆದಕಾರಣ ಅದಕ್ಕಾಗಿ ವೈರಾಗ್ಯಾದಿ ಸಾಧನೆ ಬೇಕಾಗಿಲ್ಲ ಎಂದು ಪೂರ್ವಪಕ್ಷ.

ಗುಣಾಧಿಕ್ಯ ಎನ್ನುವುದು ಸಿದ್ಧಾಂತಯುಕ್ತಿ. "ತಮೇವ ವಿದ್ವಾನ್ ಅಮೃತ ಇಹ ಭವತಿ" ಎಂಬ ಶ್ರುತಿಯ ಪ್ರಕಾರ ಜ್ಞಾನವೆಂಬ ಗುಣವೇ ಮೋಕ್ಷ ಸಾಧನಗಳಲ್ಲಿ ಅಧಿಕ ಅಂದರೆ ಶ್ರೇಷ್ಠವೆಂದು ತಿಳಿದುಬರುವುದು. ಸ್ವಾಭಾವಿಕ ಮರಣದಲ್ಲಿ ಭೂತ ವಿಯೋಗವು ಸಂಪೂರ್ಣವಾಗಿ ಆಗುವುದಿಲ್ಲ. ಜ್ಞಾನವಿಲ್ಲದೇ ಮೋಕ್ಷವಿಲ್ಲ. ಆದ್ದರಿಂದ ಜ್ಞಾನ ವೈರಾಗ್ಯಾದಿಗಳನ್ನು ಸಂಪಾದಿಸಲೇಬೇಕು ಎಂದು ಸಿದ್ಧಾಂತ.

## ೨. ತ್ರ್ಯಾತ್ಮಕತ್ವಾಧಿಕರಣ: ಓಂ ತ್ರ್ಯಾತ್ಮಕತ್ವಾತ್ತು ಭೂಯಸ್ತ್ವಾತ್ ಓಂ

ಅನ್ಯಥಾ ನಾಮ ಎನ್ನುವುದು ಪೂರ್ವಪಕ್ಷಯುಕ್ತಿ. "ಇತಿ ತು ಪಂಚಮ್ಯಾ ಮಾಹು ತಾವಾಪಃ ಪುರುಷವಚಸೋ ಭವಂತಿ" ಎಂಬ ಶ್ರುತಿಯಲ್ಲಿ ಜೀವನಿಗೆ ಸ್ತ್ರೀಗರ್ಭಪ್ರವೇಶವನ್ನು ಹೇಳುವಾಗ ಪಂಚಭೂತಗಳ ನಾಮವನ್ನು ಹೇಳದೆ ಅನ್ಯಥಾ ನಾಮ ಅಂದರೆ ಆಪಃ ಎಂದು ಜಲದ ನಾಮವನ್ನು ಮಾತ್ರ ಹೇಳಿದ್ದಾರೆ. ಆದಕಾರಣ ಮರಣ ಹೊಂದಿದ ಜೀವನಿಗೆ ಪಂಚಭೂತಗಳೊಂದಿಗೆ ಸಹಗಮನವಿಲ್ಲ ಎಂದು ಪೂರ್ವಪಕ್ಷ.

ಅರ್ಥತೋ ಭವಃ ಎನ್ನುವುದು ಸಿದ್ಧಾಂತಯುಕ್ತಿ. ಶ್ರುತಿಯಲ್ಲಿ ಜಲವನ್ನು ಮಾತ್ರ ಹೇಳಿದ್ದರೂ ಅದರಲ್ಲಿಯೇ ಇತರ ಭೂತಗಳೂ ಸೇರಿವೆ. ಆದಕಾರಣ ಜಲ ಎಂಬ ನಾಮದಿಂದ ಲಕ್ಷಣಾವೃತ್ತಿಯಿಂದ ಎಲ್ಲ ಭೂತಗಳು ಎಂದು ಅರ್ಥ ಮಾಡಬೇಕು. ಆದ್ದರಿಂದ ಜೀವನು ಪಂಚಭೂತಗಳ ಜೊತೆಗೇ ಗರ್ಭಪ್ರವೇಶ ಮಾಡುತ್ತಾನೆ ಎಂದು ಸಿದ್ಧಾಂತ.

## ೩. ಪ್ರಾಣಗತ್ಯಧಿಕರಣ: ಓಂ ಪ್ರಾಣಗತೇಶ್ಚ ಓಂ

ಸಹಭಾವ ಎನ್ನುವುದು ಪೂರ್ವಪಕ್ಷಯುಕ್ತಿ. ಜೀವನಿಗೆ ಭೂತಸಂಬಂಧದ ವಿಷಯದಲ್ಲಿ ವಿಶೇಷ ಪ್ರಮಾಣವಿಲ್ಲ. 'ಭೂತಾನಿ ಗಚ್ಛಂತಿ' ಎಂದು ಸಹಭಾವವನ್ನೂ ಹೇಳಿಲ್ಲ. ಆದಪ್ರಯುಕ್ತ ಮರಣದ ನಂತರ ಜೀವನೊಂದಿಗೆ ಸಕಲ ಭೂತಗಳ ಸಹಗಮನವಿಲ್ಲ ಎಂದು ಪೂರ್ವಪಕ್ಷ.

ಉಪಪತ್ತಿ ಎನ್ನುವುದು ಸಿದ್ಧಾಂತಯುಕ್ತಿ. ಮರಣದ ನಂತರ ಜೀವನೊಂದಿಗೆ ಇಂದ್ರಿಯಗಳೂ ಹೋಗುತ್ತವೆ. 'ಯತ್ರ ವಾವ ಭೂತಾನಿ ತತ್ರ ಕರಣಾನಿ' ಎನ್ನುವ ಶ್ರುತಿಯಿಂದ ಇಂದ್ರಿಯಗಳಿಗೂ ಭೂತಗಳಿಗೂ ಅವಿನಾಭಾವರೂಪ ಸಂಬಂಧವಿದೆ ಯೆಂದು ತಿಳಿದುಬರುವುದು. ಆದಕಾರಣ ಇಂದ್ರಿಯಗಳೊಂದಿಗೆ ಭೂತಗಳಿಗೂ ಸಹಗಮನ ಕೂಡುವುದು ಎಂದು ಸಿದ್ಧಾಂತ.

**೪. ಅಗ್ನ್ಯಧಿಕರಣ: ಓಂ ಅಗ್ನ್ಯಾದಿಗತಿಶ್ರುತೇರಿತಿ ಚೇನ್ನ ಭಾಕ್ತತ್ವಾತ್ ಓಂ**

ಅನ್ಯಥೋಕ್ತಿ ಎನ್ನುವುದು ಪೂರ್ವಪಕ್ಷಯುಕ್ತಿ. "ಅಗ್ನಿಂ ವಾಗಪ್ಯೇತಿ" ಇತ್ಯಾದಿ ಶ್ರುತಿಯಲ್ಲಿ ವಾಗಿಂದ್ರಿಯವು ಅಗ್ನಿಯಲ್ಲಿ ಹೋಗಿ ಸೇರುತ್ತದೆ ಎಂದು ಜೀವನೊಂದಿಗೆ ಗಮನಕ್ಕಿಂತ ಬೇರೆಯಾಗಿ ಹೇಳಿರುವುದರಿಂದ, ಇಂದ್ರಿಯಗಳಿಗೆ ಜೀವನೊಂದಿಗೆ ಗಮನವಿಲ್ಲ ಎಂದು ಪೂರ್ವಪಕ್ಷ.

ದ್ವಿರೂಪತ್ವ ಎನ್ನುವುದು ಸಿದ್ಧಾಂತಯುಕ್ತಿ. "ಪುರುಷಸ್ಯ ಮೃತೌ ಬ್ರಹ್ಮನ್ ಪ್ರಾಣಾ ಭಾಗತ ಏವ ತು ಅಧಿದೈವಂ ಪ್ರಾಪ್ನುವಂತಿ ಭಾಗತೋ ಅನುವ್ರಜಂತಿ ತಂ" ಎನ್ನುವ ಪ್ರಮಾಣವು ಇಂದ್ರಿಯಗಳಿಗೆ ದ್ವಿರೂಪತ್ವ ವನ್ನು ಹೇಳುತ್ತದೆ. ಆದಕಾರಣ ಇಂದ್ರಿಯಗಳು ಒಂದು ರೂಪದಿಂದ ಜೀವನ ಜೊತೆ ಹೋಗುವುದಲ್ಲದೆ ಮತ್ತೊಂದು ರೂಪದಿಂದ ಅಗ್ನ್ಯಾದಿಗಳಲ್ಲಿ ಸೇರುತ್ತವೆ ಎಂದು ಸಿದ್ಧಾಂತ.

**೫. ಪ್ರಥಮೇಶ್ರವಣಾಧಿಕರಣ: ಓಂ ಪ್ರಥಮೇ ಶ್ರವಣಾದಿತಿ ಚೇನ್ನ ತಾ ಏವ ಹ್ಯುಪಪತ್ತೇಃ ಓಂ**

ಅವಿಶೇಷ ಎನ್ನುವುದು ಪೂರ್ವಪಕ್ಷಯುಕ್ತಿ. "ಅಗ್ನೌ ದೇವಾಃ ಶ್ರದ್ಧಾಂ ಜುಹ್ವತಿ" ಎಂದು ಉಪಕ್ರಮ ವಾಕ್ಯದಲ್ಲಿ "ಭೂತಾನಿ ಜುಹ್ವತಿ" ಎಂಬ ವಿಶೇಷ ವಚನದ ಅಭಾವ (ಅವಿಶೇಷ) ದಿಂದ ಜೀವನಿಗೆ ಭೂತಸಂಬಂಧವಿಲ್ಲ ಎಂದು ಪೂರ್ವಪಕ್ಷ.

ಆಧಿಕ್ಯವು ಸಿದ್ಧಾಂತಯುಕ್ತಿ. "ಇತಿ ತು ಪಂಚಮ್ಯಾಮಾಹುತಾವಾಪಃ ಪುರುಷ ವಚಸೋ ಭವಂತಿ" ಎನ್ನುವ ಉಪಸಂಹಾರ ವಾಕ್ಯವು ಉಪಕ್ರಮಕ್ಕಿಂತ ಪ್ರಬಲವು. ಆದುದರಿಂದ (ಆಧಿಕ್ಯದ ನಿಮಿತ್ತದಿಂದ) ಉಪಕ್ರಮದಲ್ಲಿನ ಶ್ರದ್ಧಾ ಪದದಿಂದ ಎಲ್ಲ ಭೂತಗಳನ್ನೂ ಗ್ರಹಿಸಬೇಕು. ಆದಕಾರಣ ಜೀವನೊಂದಿಗೆ ಭೂತ ಸಂಬಂಧವು ಸಿದ್ಧವಾಗುವುದು ಎಂದು ಸಿದ್ಧಾಂತ.

**೬. ಅಶ್ರುತತ್ವಾಧಿಕರಣ: ಓಂ ಅಶ್ರುತತ್ವಾದಿತಿ ಚೇನ್ನೇಷ್ಟಾಧಿಕಾರಿಣಾಂ ಪ್ರತೀತೇಃ ಓಂ**

ಅವಿಶೇಷ ಎನ್ನುವುದು ಪೂರ್ವಪಕ್ಷಯುಕ್ತಿ. ಛಾಂದೋಗ್ಯದಲ್ಲಿರುವ ಜೀವ ಪ್ರಕರಣದಲ್ಲಿ ಒಂದು ಕಡೆಯಲ್ಲಿಯೂ 'ಭೂತಾನಿ ಗಚ್ಛಂತಿ' ಎಂದು ವಿಶೇಷ ವಚನವು ಶ್ರುತವಾಗಿಲ್ಲವಾದ್ದರಿಂದ ಜೀವನೊಂದಿಗೆ ಭೂತಗಳ ಗಮನವಿಲ್ಲ ಎಂದು ಪೂರ್ವಪಕ್ಷ.

ಅನುರೂಪತಾ ಎನ್ನುವುದು ಸಿದ್ಧಾಂತಯುಕ್ತಿ. 'ಅಥೈನಂ ಯಜಮಾನಂ ಕಿಂ ನ ಜಹಾತಿ ಭೂತಾನ್ಯೇವ ಭೂತ್ಯೈಃ ಸಹ ಗಚ್ಛತಿ' ಎಂದು ಕೌಂತರವ್ಯಶ್ರುತಿಯಲ್ಲಿ ಸ್ಪಷ್ಟವಾಗಿ ಭೂತಗಳಿಗೆ ಜೀವನೊಂದಿಗೆ ಗಮನವನ್ನು ಹೇಳಿದೆ. ಅದು ಇಲ್ಲಿಯ ಪ್ರಸಂಗಕ್ಕೆ ಅನುರೂಪವಾಗಿದ್ದು ಸಮಾಖ್ಯಾ ರೂಪದಿಂದ ಪ್ರಕರಣದ ಅರ್ಥಕ್ಕೆ

ನಿರ್ಣಾಯಕವಾಗಿದೆ. ಆದಕಾರಣ ಭೂತಗಳಿಗೆ ಸಹಗಮನವಿದೆ ಎಂದು ಸಿದ್ಧಾಂತ.

**೭. ಭಾಕ್ತಾಧಿಕರಣ: ಓಂ ಭಾಕ್ತಂ ವಾ ಅನಾತ್ಮವಿತ್ವಾತ್ ತಥಾ ಹಿ ದರ್ಶಯತಿ ಓಂ**

ವಿಶೇಷವು ಪೂರ್ವಪಕ್ಷಯುಕ್ತಿ. "ಅಪಾಮ ಸೋಮಮಮೃತಾ ಅಭೂಮ" ಎಂದು ಸೋಮರಸ ಪಾನವೆಂಬ ಕರ್ಮದಿಂದ ಮುಕ್ತಿಯನ್ನು ಹೇಳುವ ವಿಶೇಷ ವಚನವಿರುವುದರಿಂದ ಕರ್ಮದಿಂದಲೇ ಮೋಕ್ಷ ಎಂದು ಪೂರ್ವಪಕ್ಷ.

ಯೋಗ್ಯತಾ ಎನ್ನುವುದು ಸಿದ್ಧಾಂತ ಯುಕ್ತಿ. "ನಾನ್ಯಃ ಪಂಥಾ ಅಯನಾಯ ವಿದ್ಯತೇ" ಎಂಬ ಶ್ರುತಿಯು ಮುಕ್ತಿಗೆ ಜ್ಞಾನಾತಿರಿಕ್ತ ಸಾಧನವನ್ನು ನಿರಾಕರಿಸಿದೆ. "ಯಾವದ್ ಇಂದ್ರೋ ಯಾವನ್ಮನುಃ" ಇತ್ಯಾದಿ ಶ್ರುತಿಯು ಕರ್ಮದಿಂದ ಬರುವ ಅಮೃತತ್ವಕ್ಕೆ ಕಾಲದ ಮಿತಿಯನ್ನೂ ಹೇಳುತ್ತದೆ. ಆದ್ದರಿಂದ ಇಲ್ಲಿ ಅಮೃತತ್ವ ಎನ್ನುವುದರಿಂದ ಕರ್ಮಕ್ಕೆ ಯೋಗ್ಯವಾದ ಬಹುಕಾಲ ಇರುವ ಸ್ಥಾಯಿತ್ವವನ್ನೇ ಗ್ರಹಿಸಬೇಕು ಹೊರತು ಮುಖ್ಯಮುಕ್ತಿಯನ್ನಲ್ಲ ಎಂದು ಸಿದ್ಧಾಂತ.

**೮.ಕೃತಾತ್ಯಯಾಧಿಕರಣ: ಓಂ ಕೃತಾತ್ಯಯೇಽನುಶಯವಾನ್ ದೃಷ್ಟಸ್ಮೃತಿಭ್ಯಾಂ ಓಂ**

ಸಹಭಾವವು ಪೂರ್ವಪಕ್ಷಯುಕ್ತಿ. ಜೀವನು ಸ್ವರ್ಗಕ್ಕೆ ಹೋಗುವಾಗ ಕರ್ಮಶೇಷವೂ ಜೊತೆಯಲ್ಲಿಯೇ ಇದ್ದು ಅಲ್ಲಿ ಅದರ ಫಲವನ್ನು ಭೋಗಿಸುವುದರಿಂದ ಕರ್ಮಕ್ಷಯವು ಆಗುವುದು. ಅಲ್ಲಿ ಕರ್ಮಕ್ಕೆ ಬೀಜವಾದ ಸಂಸಾರವು ಇಲ್ಲದಿರುವ ಪ್ರಯುಕ್ತ ಮಕ್ತಿಯು ತನ್ನಷ್ಟಕ್ಕೇ ಆಗುತ್ತದೆ ಎಂದು ಪೂರ್ವಪಕ್ಷ.

ಯೋಗ್ಯತಾ ಎನ್ನುವುದು ಸಿದ್ಧಾಂತಯುಕ್ತಿ. "ಭುಕ್ತಶೇಷಾನುಶಯವಾನ್ ಇಮಂ ಪ್ರಾಪ್ಯ ಭುವಂ" ಎಂಬ ಸ್ಮೃತಿಯಲ್ಲಿ ಜೀವನು ಕರ್ಮಫಲವನ್ನು ಅನುಭವಿಸಿ ಕರ್ಮಶೇಷದೊಂದಿಗೆ ಭೂಮಿಗೆ ಬರುತ್ತಾನೆ ಎಂದು ಹೇಳಿರುವುದರಿಂದ ಯಥಾಯೋಗ್ಯವಾಗಿ ಕರ್ಮಕ್ಷಯವು. ಎಲ್ಲ ಕರ್ಮಗಳೂ ತನ್ನಷ್ಟಕ್ಕೇ ಕ್ಷಯಿಸುವುದಿಲ್ಲ ಎಂದು ಸಿದ್ಧಾಂತ.

**೯. ಯಥೇತಾಧಿಕರಣ: ಓಂ ಯಥೇತಮನೇವಂ ಚ ಓಂ**

ಸಹಭಾವವು ಪೂರ್ವಪಕ್ಷಯುಕ್ತಿ. ಸ್ವರ್ಗದಿಂದ ಮರಳಿ ಭೂಮಿಗೆ ಬರುವ ಜೀವನು ಹೋದ ಮಾರ್ಗದಲ್ಲಿಯೇ ಬರುತ್ತಾನೆ. ಆ ಮಾರ್ಗದ ಸಂಸ್ಕಾರವು ಮನಸ್ಸಿನಲ್ಲಿಯೇ ಇರುವುದರಿಂದ ತತ್ಸಂಬಂಧಿಯಾದ ಕ್ಲೇಶವು ಆಗುವುದಿಲ್ಲ. ಆದಕಾರಣ ಸ್ವರ್ಗಸಾಧನವಾದ ಕರ್ಮದಲ್ಲಿ ವೈರಾಗ್ಯಾದಿಗಳು ಏಕೆ ಎಂದು ಪೂರ್ವಪಕ್ಷ.

ಯೋಗ್ಯತಾವು ಸಿದ್ಧಾಂತಯುಕ್ತಿ. 'ಧೂಮಾದಭ್ರಂ' ಎನ್ನುವ ಶ್ರುತಿಯು ಆಕಾಶದವರೆಗೆ ಮಾತ್ರ ಹೋದ ಮಾರ್ಗದಲ್ಲಿ ಆಗಮನವನ್ನು ಹೇಳುತ್ತದೆ. ಅಲ್ಲಿಂದ ಕೆಳಗೆ ಬರುವಾಗ ಮಾರ್ಗವು ಯಥಾಯೋಗ್ಯವಾಗಿ ಬೇರೆಯಾಗುವದರಿಂದ ಕ್ಲೇಶವು

ಇದ್ದೇ ಇರುವುದು. ಆದ್ದರಿಂದ ವೈರಾಗ್ಯಾದಿ ಸಾಧನವು ಅವಶ್ಯಕವೆಂದು ಸಿದ್ಧಾಂತ.

**೧೦. ಚರಣಾಧಿಕರಣ: ಓಂ ಚರಣಾದಿತಿ ಚೇನ್ನ ತದುಪಲಕ್ಷಣಾರ್ಥೇತಿ ಕಾರ್ಷ್ಣಾಜಿನಿಃ ಓಂ**

ಸಹಭಾವವು ಪೂರ್ವಪಕ್ಷಯುಕ್ತಿ. "ರಮಣೀಯ ಚರಣಾಃ ರಮಣೀಯ ಯೋನಿಮಾಪದ್ಯಂತೇ" ಎಂಬ ಶ್ರುತಿಯ ಪ್ರಕಾರ ಗಮನಾಗಮನವು ಆಚಾರದ ಫಲವೇ ಹೊರತು ಯಜ್ಞಾದಿ ಕರ್ಮಫಲವಲ್ಲ. ಕರ್ಮಕ್ಕೂ ಆಚಾರಕ್ಕೂ ಸಹಭಾವ ವಿರುವುದರಿಂದ ಆಚಾರದ ಫಲವೇ ಆದ ಗಮನಾಗಮನವು ಕರ್ಮದ ಫಲವೆಂದು ಭ್ರಮಿಸಲ್ಪಟ್ಟಿದೆ ಎಂದು ಪೂರ್ವಪಕ್ಷ.

ಯೋಗ್ಯತಾ ಎನ್ನುವುದು ಸಿದ್ಧಾಂತಯುಕ್ತಿ. 'ನಾನ್ಯ ಪಂಥಾಃ' ಎಂದು ಶ್ರುತಿಯು ಮೋಕ್ಷಕ್ಕೆ ಜ್ಞಾನಾತಿರಿಕ್ತ ಮಾರ್ಗವನ್ನು ನಿರಾಕರಿಸುವುದರಿಂದ, ರಮಣೀಯ ಚರಣಾಃ ಎನ್ನುವಲ್ಲಿ ಚರಣ ಎಂಬ ಪದದಿಂದ ಆಚಾರ ಮತ್ತು ಕರ್ಮ ಎರಡನ್ನೂ ಗ್ರಹಿಸುವುದೇ ಯೋಗ್ಯವು. ಆಚಾರ-ಕರ್ಮಗಳೆರಡೂ ಪುನರಾವೃತ್ತಿರೂಪ ಫಲಕ್ಕೆ ಕಾರಣವಾದ್ದರಿಂದ, ಕರ್ಮದಲ್ಲಿ ವೈರಾಗ್ಯವನ್ನು ಹೊಂದಬೇಕೆಂದು ಸಿದ್ಧಾಂತ.

**೧೧. ಅನಿಷ್ಟಾಧಿಕರಣ: ಓಂ ಅನಿಷ್ಟಾಧಿಕಾರಿಣಾಮಪಿ ಚ ಶ್ರುತಮ್ ಓಂ**

ವಿಮಿಶ್ರತಾ ಎನ್ನುವುದು ಪೂರ್ವಪಕ್ಷಯುಕ್ತಿ. ಯಾಗಾದಿ ಪುಣ್ಯಕರ್ಮವನ್ನು ಮಾಡುವವರ ಬುದ್ಧಿಯು ದೋಷಾದಿಗಳ ಭಯ, ಫಲೇಚ್ಛೆ ಇವುಗಳಿಂದ ವಿಮಿಶ್ರಿತವಾಗಿರುತ್ತದೆ. "ಬಿಭ್ಯತ್ ಪತತಿ ಪಾದಪಾತ್" ಎಂಬ ಯುಕ್ತಿಯಂತೆ ಭಯಾದಿಗಳು ಸಂಸಾರಕ್ಕೆ ಕಾರಣವಾಗುತ್ತವೆ. ಆದರೆ ಪಾಪಕರ್ಮವನ್ನು ಮಾಡುವ ಅಜ್ಞಾನಿಗಳಿಗೆ ಪಾಪದ ಭಯ, ಪಾಪಫಲವನ್ನು ಭೋಗಿಸಬೇಕೆಂಬ ಇಚ್ಛೆ ಇತ್ಯಾದಿ ವಿಮಿಶ್ರವಾದ ಬುದ್ಧಿಯ ಅಭಾವದಿಂದಾಗಿ ಅವರಿಗೆ ಸಂಸಾರವಿಲ್ಲ. ಆದಕಾರಣ ವೈರಾಗ್ಯಾದಿ ಸಾಧನೆ ಅವಶ್ಯವಿಲ್ಲ ಎಂದು ಪೂರ್ವಪಕ್ಷ.

ಬಲವತ್ವವು ಸಿದ್ಧಾಂತಯುಕ್ತಿ. ಪಾಪಮಾಡಿದವನಿಗೆ "ಸರ್ವೇ ವಾ ಏತೇ ಅಶುಭ ಕೃತಃ ಸಂಯಮನೇ ಪ್ರಪತಂತಿ" ಎಂಬ ಶ್ರುತಿಯಲ್ಲಿ ಪಾಪಿಗಳು ನರಕದಲ್ಲಿ ಬೀಳುತ್ತಾರೆ ಎಂಬ ಪ್ರಬಲವಾದ ಅನರ್ಥವು ಹೇಳಿರುವುದರಿಂದ ವೈರಾಗ್ಯಾದಿಗಳು ಅವಶ್ಯಕ ಎಂದು ಸಿದ್ಧಾಂತ.

**೧೨. ಅಪಿ ಸಪ್ತಾಧಿಕರಣ: ಓಂ ಅಪಿ ಸಪ್ತ ಓಂ**

ವಿರುದ್ಧೋಕ್ತಿಯು ಪೂರ್ವಪಕ್ಷ. "ಯಾವದಿಂದ್ರಾಶ್ಚತುರ್ದಶ ಚಕಾರ ನರಕಂ ಶೂನ್ಯಂ" ಇತ್ಯಾದಿ ಶ್ರುತಿಯಲ್ಲಿ ನರಕಕ್ಕೆ ಅನಿತ್ಯತ್ವವು ಉಕ್ತವಾಗಿದೆ. "ತಾಮಿಸ್ರಶ್ಚ ಅಂಧತಾಮಿಸ್ರಃ ದ್ವೌ ನಿತ್ಯೌ" ಎಂಬುದು ವಿರುದ್ಧೋಕ್ತಿಯು. ನಿತ್ಯನರಕವೇ ಇಲ್ಲವಾದ್ದರಿಂದ ವೈರಾಗ್ಯಾದಿ ಸಾಧನೆ ಅವಶ್ಯವಿಲ್ಲ ಎಂದು ಪೂರ್ವಪಕ್ಷ.

ವಿಭಾಗಃ ಎನ್ನುವುದು ಸಿದ್ಧಾಂತಯುಕ್ತಿ. "ರೌರವೋಽಥ ಮಹಾಂಶ್ಚೈವ ವಹ್ನಿ

ವೈತರಣೀ ತಥಾ। ಕುಂಭೀಪಾಕ ಇತಿ ಪ್ರೋಕ್ತಾನ್ಯನಿತ್ಯ ನರಕಾಣಿ ತು। ತಾಮಿಸ್ರ ಶ್ಚಾಂಧತಾಮಿಸ್ರಃ ದ್ವೌ ನಿತ್ಯೌ ಸಂಪ್ರಕೀರ್ತಿತೌ'' ಎಂಬ ಶ್ರುತಿಯಲ್ಲಿ ನರಕಗಳನ್ನು ನಿತ್ಯ ಅನಿತ್ಯಗಳೆಂದು ವಿಭಾಗ ಮಾಡಿರುವುದರಿಂದ ನಿತ್ಯನರಕವನ್ನು ಒಪ್ಪಲು ವಿರೋಧವಿಲ್ಲ. ಆದ್ದರಿಂದ ನಿತ್ಯನರಕದಿಂದ ತಪ್ಪಿಸಿಕೊಳ್ಳಲು ವೈರಾಗ್ಯಾದಿ ಸಾಧನೆ ಅವಶ್ಯಕ ಎಂದು ಸಿದ್ಧಾಂತ.

## ೧೩. ತತ್ರಾಪ್ಯಧಿಕರಣ: ಓಂ ತತ್ರಾಪಿ ಚ ತದ್ವ್ಯಾಪಾರಾದವಿರೋಧಃ ಓಂ

ಸಹಸ್ಥಾನವು ಪೂರ್ವಪಕ್ಷಯುಕ್ತಿ. "ಸರ್ವಂ ನಿಯಮಯತಿ" ಎಂಬ ಶ್ರುತಿಯ ಬಲದಿಂದ ನರಕದಲ್ಲಿನ ಜೀವರನ್ನು ನಿಯಮನ ಮಾಡುವುದಕ್ಕಾಗಿ ಈಶ್ವರನೂ ನರಕದಲ್ಲಿ ಇರಬೇಕಾಗುವುದು. ಆದಕಾರಣ ಅವನಿಗೂ ನರಕದಲ್ಲಿನ ದುಃಖಾದಿ ಭೋಗವು ಆಗಬೇಕಾಗುವುದು. ಆದ್ದರಿಂದ ನರಕದಲ್ಲಿ ಕೇವಲ ದುಃಖದ ಸಾಕ್ಷಾತ್ಕಾರವೇ ಹೊರತು ತತ್ಪರಿಣಾಮ ನೀಚತ್ವಾದಿಗಳ ಪ್ರಾಪ್ತಿಯಿರುವುದಿಲ್ಲ. ಆದ್ದರಿಂದ ಪಾಪಕರ್ಮಗಳಲ್ಲಿ ವೈರಾಗ್ಯವನ್ನು ಹೊಂದಬೇಕಿಲ್ಲ ಎಂದು ಪೂರ್ವಪಕ್ಷ.

ಕಾರಣಾಭವವು ಸಿದ್ಧಾಂತಯುಕ್ತಿ. ನರಕದಲ್ಲಿ ಜೀವನೊಂದಿಗೇ ಈಶ್ವರನು ಇದ್ದರೂ, ಅವನು ಸ್ವತಂತ್ರನಾದ ಪ್ರಯುಕ್ತ ನೀಚತ್ವಾದಿಗಳಿಗೆ ಕಾರಣವಾದ ಪಾಪಾದಿಗಳು ಅವನಲ್ಲಿ ಇಲ್ಲವೇ ಇಲ್ಲ. ಆದ್ದರಿಂದ ಅವನಿಗೆ ನೀಚತ್ವ ರೂಪವಾದ ದುಃಖಾದಿ ಭೋಗವು ಇಲ್ಲ. ಜೀವನು ಅಸ್ವತಂತ್ರನಾದ ಪ್ರಯುಕ್ತ ಪಾಪಕರ್ಮ ನಿಮಿತ್ತಕವಾದ ನೀಚತ್ವರೂಪವಾದ ಭೋಗವು ಇರುವುದು. ಆದಕಾರಣ ವೈರಾಗ್ಯಾದಿಗಳು ಅವಶ್ಯಕ ಎಂದು ಸಿದ್ಧಾಂತ.

## ೧೪. ವಿದ್ಯಾಧಿಕರಣ: ಓಂ ವಿದ್ಯಾಕರ್ಮಣೋರಿತಿ ತು ಪ್ರಕೃತತ್ವಾತ್ ಓಂ

ಸಹಸ್ಥಾನವು ಪೂರ್ವಪಕ್ಷಯುಕ್ತಿ. 'ತದ್ಯ ಇತ್ಥಂ ವಿದುಃ........ ತೇಽರ್ಚಿಷಮಭಿ ಸಂಭವಂತಿ। ಅಥ ಯ ಇಮೇ ಗ್ರಾಮೇ ಇಷ್ಟಾಪೂರ್ತೇ ದತ್ತಮಿತ್ಯುಪಾಸತೇ ತೇ ಧೂಮಮಭಿಸಂಭವಂತಿ........। ಅಥ ಏತಯೋಃ ಪಥೋರ್ನ ಕತರೇಣ ಚ ತಾನೀಮಾನಿ ಕ್ಷುದ್ರಮಿಶ್ರಾಣಿ ಅಸಕೃದಾವರ್ತೀನಿ ಭೂತಾನಿ ಭವಂತಿ' ಇತ್ಯಾದಿ ಶ್ರುತಿಯಲ್ಲಿ ಯಾರು ವಿದ್ಯಾರೂಪ ಸಾಧನದಲ್ಲಿ ತೊಡಗುತ್ತಾರೋ ಅವರು ಅರ್ಚಿರಾದಿ ಮಾರ್ಗದಿಂದ ಮುಕ್ತಿಯನ್ನು ಹೊಂದುತ್ತಾರೆ. ಯಾರು ಯಜ್ಞ ಯಾಗಾದಿ ಕಾಮ್ಯಕರ್ಮದಲ್ಲಿ ತೊಡಗುತ್ತಾರೋ ಅವರು ಚಂದ್ರಲೋಕಕ್ಕೆ ಹೋಗಿ ಹಿಂದಿರುಗುತ್ತಾರೆ. ಯಾರು ಈ ಎರಡು ಮಾರ್ಗದಲ್ಲಿಯೂ ಹೋಗುವುದಿಲ್ಲವೋ ಅವರು ದುಃಖಿಗಳಾಗಿ ಮತ್ತೆ ಮತ್ತೆ ಹುಟ್ಟುಸಾವುಗಳನ್ನು ಪಡೆಯುತ್ತಾರೆ. ಹೀಗೆ ಶ್ರುತಿಯಲ್ಲಿ ಸಾಧನದ ಜೊತೆಯಲ್ಲಿಯೇ ಫಲವನ್ನು ನಿರ್ದೇಶ ಮಾಡಿರುವುದರಿಂದ ಸಾಧನದಲ್ಲಿದ್ದಂತೆಯೇ ಫಲದಲ್ಲಿಯೂ ಸ್ವಾತಂತ್ರ್ಯವನ್ನು ಒಪ್ಪಬೇಕು. ಆದಕಾರಣ ಕಾಮ್ಯಕರ್ಮದಲ್ಲಿ ವೈರಾಗ್ಯರೂಪ ಸಾಧನದ ಅವಶ್ಯಕತೆಯಿಲ್ಲ ಎಂದು ಪೂರ್ವಪಕ್ಷ.

ಕಾರಣಾಭವವು ಸಿದ್ಧಾಂತಯುಕ್ತಿ. ವಿದ್ಯಾ ಮತ್ತು ಕರ್ಮಗಳಲ್ಲಿ 'ಆತ್ಮಾನಮುಪಾಸೀತ' 'ಜ್ಯೋತಿಷ್ಟೋಮೇನ ಯಜೇತ' ಇತ್ಯಾದಿ ವಿಧಿರೂಪವಾದ ಕಾರಣವು ಇರುವುದರಿಂದ ವಿದ್ಯಾ ಕರ್ಮರೂಪವಾದ ಸಾಧನದಲ್ಲಿ ಭಗವದ್ದತ್ತವಾದ ಸ್ವಾತಂತ್ರ್ಯವಿದೆ. ಆದರೆ ಫಲದಲ್ಲಿ ವಿಧಿರೂಪವಾದ ಕಾರಣವಿಲ್ಲವಾದ್ದರಿಂದ ಸ್ವಾತಂತ್ರ್ಯವಿಲ್ಲ. ಆದ್ದರಿಂದ ಕಾಮ್ಯಕರ್ಮಗಳಲ್ಲಿ ವೈರಾಗ್ಯವು ಅವಶ್ಯಕವೆಂದು ಸಿದ್ಧಾಂತ.

### ೧೫. ನ ತೃತೀಯಾಧಿಕರಣ: ಓಂ ನ ತೃತೀಯೇ ತಥೋಪಲಬ್ಧೇಃ ಓಂ

ಸಹಸ್ಥಾನವು ಪೂರ್ವಪಕ್ಷಯುಕ್ತಿ. "ಯತ್ರ ದುಃಖಂ ಸುಖಂ ತತ್ರ" ಎಂಬ ಸ್ಮೃತಿಯ ಪ್ರಕಾರ ಸುಖದುಃಖಗಳಿಗೆ ಸಹಭಾವವಿರುವುದರಿಂದ ಅಂಧಂತಮಸ್ಸಿನಲ್ಲಿಯೂ ಸುಖವು ಕೂಡುವುದು. ಆದ್ದರಿಂದ ವೈರಾಗ್ಯವು ಬೇಕಾಗಿಲ್ಲ ಎಂದು ಪೂರ್ವಪಕ್ಷ.

ಕಾರಣಾಭಾವವು ಸಿದ್ಧಾಂತಯುಕ್ತಿ. ಅಂಧಂತಮಸ್ಸಿನಲ್ಲಿ ಬಿದ್ದವನು ಭಗವಂತನಿಗೆ ಸರ್ವಥಾ ಅಪ್ರಿಯನಾದ್ದರಿಂದ ಅವನಿಗೆ ಭಗವಂತನು ಸುಖವನ್ನು ನೀಡುವುದಿಲ್ಲ. ಆದ್ದರಿಂದ ತಮಸ್ಸಿಗೆ ಸಾಧನವಾದ ದ್ವೇಷಾದಿಗಳಲ್ಲಿ ವೈರಾಗ್ಯವು ಅವಶ್ಯಕ ಎಂದು ಸಿದ್ಧಾಂತ.

### ೧೬. ತತ್ಸ್ವಾಭಾವ್ಯಾಧಿಕರಣ: ಓಂ ತತ್ಸ್ವಾಭಾವ್ಯಾಪತ್ತಿರುಪಪತ್ತೇಃ ಓಂ

ಸಹಸ್ಥಾನವು ಪೂರ್ವಪಕ್ಷಯುಕ್ತಿ. "ಧೂಮೋ ಭೂತ್ವಾ" ಇತ್ಯಾದಿ ಶ್ರುತಿಯು ಚಂದ್ರಲೋಕದಿಂದ ವಾಪಸ್ಸು ಬಂದ ಕಾಮ್ಯಕರ್ಮಿಯಾದ ಜೀವನಿಗೂ ಧೂಮಾದಿ ದೇವತೆಗಳಿಗೂ ಸಹಾವಸ್ಥಾನ ಹೇಳಿರುವುದರಿಂದ, ಆ ದೇವತೆಗಳು ಸ್ನೇಹದಿಂದ ತಮ್ಮ ಪದವನ್ನು ಅವನಿಗೆ ನೀಡುತ್ತಾರೆ. ಹೀಗೆ ಕಾಮ್ಯಕರ್ಮಿಗೂ ದೇವತಾಪದ ಪ್ರಾಪ್ತಿಯು ಇರುವುದು. ಅದು ಸುಖಹೇತುವಾದ್ದರಿಂದ ವೈರಾಗ್ಯದ ಅವಶ್ಯಕತೆಯಿಲ್ಲ ಎಂದು ಪೂರ್ವಪಕ್ಷ.

ಕಾರಣಾಭಾವವು ಸಿದ್ಧಾಂತಯುಕ್ತಿ. ದೇವತಾಪದ ಪ್ರಾಪ್ತಿಯು ನಿಯತವಾದ ಅಧಿಕಾರಿಗಳಿಗೆ ಮಾತ್ರ. ಅದಕ್ಕೆ ಅವರ ವಿದ್ಯೆಯೇ ಕಾರಣ. ಯೋಗ್ಯವಾದ ವಿದ್ಯೆ ಇಲ್ಲದವರಿಗೆ ದೇವತಾಪದದ ಪ್ರಾಪ್ತಿಯಿಲ್ಲ. ಧೂಮೋ ಭೂತ್ವಾ ಇತ್ಯಾದಿಗಳಿಗೆ ದೇವತೆಗಳೊಂದಿಗೆ ಗಮನಾಗಮನವೆಂದಷ್ಟೇ ಅರ್ಥವು, ಪದಪ್ರಾಪ್ತಿಯೆಂದಲ್ಲ. ಆದ್ದರಿಂದ ಕಾಮ್ಯಕರ್ಮಗಳಲ್ಲಿ ವೈರಾಗ್ಯವು ಅವಶ್ಯಕ ಎಂದು ಸಿದ್ಧಾಂತ.

### ೧೭. ನಾತಿಚಿರೇಣಾಧಿಕರಣ: ಓಂ ನಾತಿಚಿರೇಣ ವಿಶೇಷಾತ್ ಓಂ

ಸಹಸ್ಥಾನವು ಪೂರ್ವಪಕ್ಷಯುಕ್ತಿ. ಕಾಮ್ಯಕರ್ಮಿಯು ಭುವಿಗೆ ಹಿಂತಿರುಗುವಾಗ ಮಾರ್ಗಮಧ್ಯದಲ್ಲಿ ಬೇರೆ ಬೇರೆ ದೇವತೆಗಳೊಂದಿಗೆ ಚಿರಕಾಲ ನೆಲೆಸುವುದರಿಂದ,

ಅವನಿಗೆ ಸುಖಪ್ರಾಪ್ತಿಯಿರುವುದು. ಅಂದಮೇಲೆ ಕಾಮ್ಯಕರ್ಮದಲ್ಲಿ ವೈರಾಗ್ಯವೇಕೆ ಎಂದು ಪೂರ್ವಪಕ್ಷ.

ಕಾರಣಾಭಾವವು ಸಿದ್ಧಾಂತಯುಕ್ತಿ. "ವತ್ಸರಾತ್ ಪೂರ್ವಮೇವ ತು" ಎಂದು ಪ್ರಮಾಣವಿರುವುದರಿಂದ ಕ್ಲೃಪ್ತವಾದ ಸಮಯಕ್ಕಿಂತ ಹೆಚ್ಚು ಕಾಲ ಮಾರ್ಗ ಮಧ್ಯದಲ್ಲಿರಲು ಕಾರಣವಿಲ್ಲ. ಆದ್ದರಿಂದ ಚಿರಕಾಲದ ಸುಖಪ್ರಾಪ್ತಿಯೂ ಇಲ್ಲ. ಆದಕಾರಣ ಕಾಮ್ಯಕರ್ಮದಲ್ಲಿ ವೈರಾಗ್ಯವು ಅವಶ್ಯಕವೆಂದು ಸಿದ್ಧಾಂತ.

**೧೮. ಅನ್ಯಾಧಿಕರಣ: ಓಂ ಅನ್ಯಾಧಿಷ್ಠಿತೇ ಪೂರ್ವವದಭಿಲಾಪಾತ್ ಓಂ**

ಸಹಸ್ಥಾನವು ಪೂರ್ವಪಕ್ಷಯುಕ್ತಿ. "ತ ಇಹ ವ್ರೀಹಿಯವಾಃ ಓಷಧಿ ವನಸ್ಪತಯೋ ಜಾಯಂತೇ" ಇತ್ಯಾದಿ ಶ್ರುತಿಗಳಿಂದ ಕಾಮ್ಯಕರ್ಮಿಗಳಿಗೆ ಧಾನ್ಯಾದಿ ಗಳೊಂದಿಗೆ ಸಹಸ್ಥಾನವು ಕಂಡಿದೆ. ಆದ್ದರಿಂದ ಧಾನ್ಯಾದಿಗಳ ಛೇದನಾದಿಗಳಿಂದ ಅವುಗಳಲ್ಲಿರುವ ಜೀವನಿಗೂ ದುಃಖವು ಉಂಟಾಗುವುದು. ವೇದೋಕ್ತವಾದ ಯಾಗಾದಿಗಳ ಫಲವು ಗಮನಾಗಮನಾದಿಗಳು ಎಂದು ಸಿದ್ಧವಾಗಿದೆ. ಹೀಗೆ ವೇದೋಕ್ತವಾದ ಕರ್ಮಗಳಿಂದ ದುಃಖ ಬರುವುದಾದರೆ ವೇದೋಕ್ತವಾದ ವೈರಾಗ್ಯಾದಿಗಳಿಂದಲೂ ದುಃಖವು ಏಕೆ ಆಗಬಾರದು. ಆದ್ದರಿಂದ ವೈರಾಗ್ಯವು ಅವಶ್ಯಕವಲ್ಲ ಎಂದು ಪೂರ್ವಪಕ್ಷ.

ಕಾರಣಾಭಾವವು ಸಿದ್ಧಾಂತಯುಕ್ತಿ. ಕಾಮ್ಯಕರ್ಮಿಯು ಧಾನ್ಯಾದಿಗಳಲ್ಲಿ ಇದ್ದರೂ ದುಃಖಕ್ಕೆ ಕಾರಣವಾದ ಪಾಪವು ಇಲ್ಲದಿರುವುದರಿಂದ ಛೇದನಾದಿಗಳಿಂದ ಕಾಮ್ಯಕರ್ಮಿಗೆ ದುಃಖ ಭೋಗವಾಗುವುದಿಲ್ಲ. ಸ್ವರ್ಗಸುಖಕ್ಕಾಗಿ ಯಾಗಾದಿಗಳನ್ನು ವಿಧಿಸಿದ ವೇದದ ಬಗ್ಗೆ ಅವಿಶ್ವಾಸ ಮೂಡುವುದಿಲ್ಲ. ಆದ್ದರಿಂದ ವೈರಾಗ್ಯ ವಿಧಾಯಕ ವೇದವಾಕ್ಯವು ವಿಶ್ವಾಸಾರ್ಹವೇ ಆಗಿದೆ. ಆದಕಾರಣ ಕಾಮ್ಯಕರ್ಮದಲ್ಲಿ ವೈರಾಗ್ಯವು ಅವಶ್ಯಕವೆಂದು ಸಿದ್ಧಾಂತ.

**೧೯. ರೇತೋಧಿಕರಣ : ಓಂ ರೇತಸ್ಸಿಗ್ಯೋಗೋಽಥ ಓಂ**

ವೈಯರ್ಥ್ಯವು ಪೂರ್ವಪಕ್ಷಯುಕ್ತಿ. ಕರ್ಮಿಯು ತಂದೆಯೊಳಗೆ ಪ್ರವೇಶಿಸದೆ ನೇರವಾಗಿ ತಾಯಿಯ ಉದರವನ್ನು ಪ್ರವೇಶಿಸುವ ಸಂಭವವಿರುವಾಗ ಪಿತೃಪ್ರವೇಶ ವ್ಯರ್ಥ. ಆದಕಾರಣ ಮಹಾ ಆಯಾಸವೇನೂ ಇಲ್ಲವಾದ್ದರಿಂದ ಕರ್ಮದಲ್ಲಿ ವೈರಾಗ್ಯ ಬೇಕಾಗಿಲ್ಲ ಎಂದು ಪೂರ್ವಪಕ್ಷ.

ಕ್ಲೃಪ್ತಿಯು ಸಿದ್ಧಾಂತಯುಕ್ತಿ. "ಈಶಕ್ಲೃಪ್ತ್ಯೈವ ಪಿತರಂ ಪ್ರವಿಶ್ಯಾಯಾತಿ ಮಾತರಂ" ಎಂಬ ಪ್ರಮಾಣದಂತೆ ಭಗವಂತನ ಸಂಕಲ್ಪಕ್ಕೆ ಅನುಗುಣವಾಗಿ ಜೀವನು ಪಿತೃಪ್ರವೇಶ ಮಾಡಿಯೇ ತಾಯಿಯ ಉದರವನ್ನು ಪ್ರವೇಶಿಸುತ್ತಾನೆ. ಆದಕಾರಣ ಆಯಾಸವಿದ್ದೇ ಇರುವುದು. ಆದ್ದರಿಂದ ಪುನಃ ಪುನಃ ಜನ್ಮಕ್ಕೆ ಕಾರಣವಾಗುವ ಕಾಮ್ಯಕರ್ಮದಲ್ಲಿ ವೈರಾಗ್ಯವನ್ನು ತಾಳಬೇಕು ಎಂದು ಸಿದ್ಧಾಂತ.

## ೨೦. ಯೋನ್ಯಧಿಕರಣ: ಓಂ ಯೋನೇಃ ಶರೀರಂ ಓಂ

ಅನ್ಯಥಾಗತಿಯು ಪೂರ್ವಪಕ್ಷಯುಕ್ತಿ. ಪಿತೃದ್ವಾರಾ ಮಾತೃಯೋನಿಯನ್ನು ಪ್ರವೇಶ ಮಾಡಿಯೇ ಜೀವನು ಶರೀರ ಹೊಂದುತ್ತಾನೆ ಎಂಬ ನಿಯಮವಿಲ್ಲ. ಆಹಾರ ದ್ವಾರಾ ಬೇರೆ ರೀತಿಯಲ್ಲಿಯೂ ಮಾತೃಗರ್ಭಕ್ಕೆ ಪ್ರವೇಶವು ಸಂಭವವಿರುವ ಪ್ರಯುಕ್ತ ಯೋನಿಪ್ರವೇಶವು ವ್ಯರ್ಥವಾದ್ದರಿಂದ ಮಹಾ ಆಯಾಸವಿಲ್ಲ. ಆದ್ದರಿಂದ ಕಾಮ್ಯಕರ್ಮದಲ್ಲಿ ವೈರಾಗ್ಯಕ್ಕೆ ಕಾರಣವಿಲ್ಲ ಎಂದು ಪೂರ್ವಪಕ್ಷ.

ಅನ್ಯಾಗತಿಯು ಸಿದ್ಧಾಂತಯುಕ್ತಿ. ಯೋನಿ ಪ್ರವೇಶದ ಹೊರತು ಬೇರೆ ರೀತಿಯಿಂದ ಮಾತೃಗರ್ಭಕ್ಕೆ ಪ್ರವೇಶವೇ ಇಲ್ಲ. 'ಯೋನಿ ದ್ವಾರೇಣ ದೇಹಂ ಚ ಪ್ರಾಪ್ನೋತಿ ಪ್ರಾಯಶೋ ನರಃ' ಎಂದು ಪ್ರಮಾಣವಿದೆ. ಯೋನಿಪ್ರವೇಶವಿಲ್ಲದೆ ಜನ್ಮವು ಕೇವಲ ಮಹಾತ್ಮರಿಗೆ ಹೊರತು ಸಾಮಾನ್ಯರಿಗಲ್ಲ. ಆದ್ದರಿಂದ ಕಾಮ್ಯಕರ್ಮದಲ್ಲಿ ವೈರಾಗ್ಯವು ಅವಶ್ಯಕ ಎಂದು ಸಿದ್ಧಾಂತ.

### ಯೋನ್ಯಧಿಕರಣಮ್

#### ಓಂ ಯೋನೇಃ ಶರೀರಂ ಓಂ

ಈ ಸೂತ್ರವನ್ನು ಭಾಷ್ಯದಲ್ಲಿ ಹೀಗೆ ವ್ಯಾಖ್ಯಾನಿಸಲಾಗಿದೆ – ಸ್ವರ್ಗದಿಂದ ಕೆಳಗಿಳಿದ ಜೀವನು ಮಳೆಯ ನೀರಿನ ಮೂಲಕ ಧಾನ್ಯಾದಿಗಳ ಬೀಜಗಳಲ್ಲಿ ಸೇರಿಕೊಂಡು ಅಲ್ಲಿಂದ ಪುರುಷನ ರೇತಸ್ಸನ್ನು ಪ್ರವೇಶಿಸುತ್ತಾನೆ. ಈ ರೇತಸ್ಸಿನ ಮೂಲಕ ಮಾತೃಯೋನಿ ದ್ವಾರಾ ಗರ್ಭವನ್ನು ಪ್ರವೇಶಿಸಿ, ಕಲಲ ಬುದ್ಬುದಾದಿ ಕ್ರಮದಲ್ಲಿ ಉತ್ಪನ್ನವಾದ ಶರೀರವನ್ನು ಹೊಂದುತ್ತಾನೆಂಬುದು ಪ್ರಸಿದ್ಧವು. ಇದು ಸತ್ಯವಲ್ಲ ಎಂದು ಪೂರ್ವಪಕ್ಷ. ಏಕೆಂದರೆ ಮಾಂಧಾತೃ, ದ್ರೋಣ, ದ್ರುಪದ, ಕೃಪ, ಶುಕಾದಿಗಳಲ್ಲಿ ಬೀಜಾದಿ ಸಂಬಂಧವಿಲ್ಲದೆಯೇ ಜನನವು ಕಂಡಿದೆ. ಆದ್ದರಿಂದ ಜೀವನು ಪಿತೃದ್ವಾರಾ ಮಾತೃಯೋನಿಯನ್ನು ಪ್ರವೇಶಿಸಿ ಶರೀರವನ್ನು ಹೊಂದುತ್ತಾನೆಂದು ಹೇಳುವುದು ಯುಕ್ತವಲ್ಲ ಎಂದು ಪೂರ್ವಪಕ್ಷ. ಹಾಗೆ ಹೇಳಕೂಡದು. ಹಿಂದೆ ಹೇಳಿದ್ದೇ ಯುಕ್ತವೆಂದು ಸಿದ್ಧಾಂತ. "ಮೇಘೋ ಭೂತ್ವಾ ವರ್ಷತಿ। ತ ಇಹ ವ್ರೀಹಿಯವಾ ಓಷಧಯಸ್ತಿಲಾಮಾಷಾ ಇತಿ ಜಾಯಂತೇ। ಯೋ ಯೋ ಹ್ಯನ್ನಮತ್ತಿ। ಯೋ ವಾ ರೇತಃ ಸಿಂಚತಿ ತದ್ರೂಪಾದ್ ಭೂಯ ಏವ ಭವತಿ।" ಇತ್ಯಾದಿ ಶ್ರುತಿಗಳಿರುವುದರಿಂದ ಹಿಂದೆ ಹೇಳಿದ ರೀತಿಯಿಂದಲೇ ದೇಹೋತ್ಪತ್ತಿಯು ಸಾಮಾನ್ಯವಾಗಿ ಜೀವನಿಗೆ ಕಂಡುಬರುತ್ತದೆ. ಮಾಂಧಾತೃವೇ ಮುಂತಾದವರಲ್ಲಿ ಇದಕ್ಕೆ ವ್ಯತ್ಯಾಸವಾಗಿಯೂ ಜನನವು ಹೇಳಲ್ಪಟ್ಟಿದ್ದರೂ ಹಿಂದೆ ಹೇಳಿದ ಬೀಜಾದಿಗಳ ಸಂಬಂಧದಿಂದ ಜೀವನಿಗೆ ದೇಹೋತ್ಪತ್ತಿಯು ಅಯುಕ್ತವೆಂದು ಹೇಳಕೂಡದು. ಹೀಗೆ ಭಾಷ್ಯದಲ್ಲಿ ಮಾಡಿರುವ ವ್ಯಾಖ್ಯಾನವು ಸರಿಯಲ್ಲ. ಏಕೆಂದರೆ ಜೀವನ ಉತ್ಪತ್ತಿಗೆ ಬೀಜಾದಿ ಸಂಬಂಧವು ಸೂತ್ರದಲ್ಲಿ ಹೇಳಿಯೇ ಇಲ್ಲ.

ಹೀಗೆ ಆಶಂಕಿಸಿದರೆ ಅದನ್ನು 'ಬೀಜ' ಇತ್ಯಾದಿ ವಚನದಿಂದ ಪರಿಹರಿಸುತ್ತಾರೆ –

**ಬೀಜರೂಪಯೋನೀನಾಂ ಸಂಗಾತಿನಿಯಮೋಜ್ಝಿತಂ ।**

**ಅಥಶಬ್ದೇನ ಭಗವಾನಾಹ ಕಾರಣತಶ್ಚ ತಾಮ್ ॥೪॥**

ಧಾನ್ಯಾದಿಗಳು, ರೇತಸ್ಸು, ಪುರುಷ, ಯೋನಿ ಇವುಗಳ ಸಂಬಂಧದಿಂದ ಜೀವನಿಗೆ ದೇಹೋತ್ಪತ್ತಿ ಎಂಬ ನಿಯಮಕ್ಕೆ ಕಲವು ವಿಶೇಷ ಸಂದರ್ಭಗಳಲ್ಲಿ ಅಭಾವವನ್ನು ಭಗವಾನ್ ವೇದವ್ಯಾಸರು 'ಓಂ ರೇತಸ್ಸಿಗ್ಯೋಗೋಽಥ ಓಂ' ಎಂಬ ಪೂರ್ವಸೂತ್ರದಲ್ಲಿನ ಅಥ ಶಬ್ದದಿಂದ ಹೇಳಿದರು. ಜ್ಞಾನ ತಪಸ್ಸು ಯೋಗಾದಿ ಕಾರಣ ವಿಶೇಷದಿಂದ ಬೀಜಾದಿ ಸಂಬಂಧವಿಲ್ಲದೆಯೇ ಶುಕಾದಿಗಳಲ್ಲಿ ಶರೀರದ ಉತ್ಪತ್ತಿಯು ಕೂಡುತ್ತದೆ ಎಂಬುದಾಗಿ ಕಾರಣವನ್ನೂ ಹೇಳಿದರು.

॥ ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತೇ ಶ್ರೀಮದನುವ್ಯಾಖ್ಯಾನೇ ತೃತೀಯಾಧ್ಯಾಯಸ್ಯ ಪ್ರಥಮಃ ಪಾದಃ ॥

॥ಇಲ್ಲಿಗೆ ಶ್ರೀಮದನುವ್ಯಾಖ್ಯಾನದ ಮೂರನೆಯ ಅಧ್ಯಾಯ ಮೊದಲನೆಯ ಪಾದದ ಶ್ರೀಮನ್ನ್ಯಾಯಸುಧಾನುಸಾರಿ ವಿವರಣೆ ಸಹಿತ ಕನ್ನಡಾನುವಾದವು ಮುಕ್ತಾಯವಾಯಿತು॥

* * *

# ಮೂರನೆಯ ಅಧ್ಯಾಯ ಎರಡನೆಯ ಪಾದ

ಈ ಪಾದದಲ್ಲಿ ಭಕ್ತಿಯ ವಿಚಾರವು ಮಾಡಲ್ಪಡುತ್ತದೆ. ಭಾಷ್ಯದಲ್ಲಿ ಹೇಳಿರುವ ಪ್ರಕಾರ ಭಗವನ್ಮಹಿಮೋಕ್ತಿಯ ದ್ವಾರಾ ಸಾಧಕನಲ್ಲಿ ಭಕ್ತಿಯನ್ನು ಹುಟ್ಟಿಸುವುದಕ್ಕಾಗಿ ಈ ಪಾದವು ಪ್ರವೃತ್ತವಾಗಿದೆ. ಸಂಗತಿಯನ್ನು ಮುಂದೆ ಹೇಳುತ್ತೇವೆ ಎಂಬ ಆಶಯದಿಂದ ಮೊದಲು ಈ ಪಾದದ ಅಧಿಕರಣಗಳಲ್ಲಿನ ಪೂರ್ವಪಕ್ಷ ಹಾಗೂ ಸಿದ್ಧಾಂತಯುಕ್ತಿಗಳನ್ನು ಸಂಗ್ರಹವಾಗಿ ಹೇಳುತ್ತಾರೆ –

**ಪೂರ್ವಪಕ್ಷ ಹಾಗೂ ಸಿದ್ಧಾಂತಯುಕ್ತಿಗಳ ಸಂಗ್ರಹ**

**ಪಶ್ಚಾದದೃಷ್ಟ್ಯವಿಜ್ಞಾನಕಾಲದುಃಖಪೃಥಗ್ಭವಾಃ ।**
**ಸ್ಥಾನಭೇದೋ ವಿರುದ್ಧತ್ವಂ ನ್ಯಾಯಸಾಮ್ಯಂ ಸ್ವತೋ ಭವಃ ॥೧॥**
**ಗುಣಸಾಮ್ಯಮಯೋಗಶ್ಚ ತರ್ಕಭಾದೋ ವಿಲೋಮತಾ ।**
**ನಾನಾಭಾವಃ ಪ್ರಲೋಭಶ್ಚ ಯುಕ್ತಯಃ ಪೂರ್ವಪಕ್ಷಗಾಃ ॥೨॥**
**ಅಶಕ್ಯಕರ್ತೃತಾಶಕ್ತಿಃ ಸ್ವತೋಽಬೋಧಸ್ತಥೈವ ಚ ।**
**ಅಮಾನಕ್ಲೃಪ್ತಿಸನ್ಮಾನವ್ಯವಸ್ಥಾತ್ಯಲ್ಪತಾಭವಾಃ ॥೩॥**
**ವಿಶೇಷದೃಷ್ಟಿವಾಕ್ಯೇ ಚ ಪುಂಶಕ್ತಿಃ ಸುನಿದರ್ಶನಮ್ ।**
**ಅಲೌಕಿಕತ್ವಮಾಧಿಕ್ಯಂ ಸ್ವಾತಂತ್ರ್ಯಂ ನಿರ್ಣಯಪ್ರಮಾಃ ॥೪॥**

'ಯುಕ್ತಯಃ ಪೂರ್ವಪಕ್ಷಗಾಃ' ಎಂದರೆ ಪೂರ್ವಪಕ್ಷಕ್ಕೆ ಸಂಬಂಧಿಸಿದ ಯುಕ್ತಿಗಳು, 'ನಿರ್ಣಯಪ್ರಮಾಃ' ಎಂದರೆ ನಿಶ್ಚಯ ವಾದ ಜ್ಞಾನವನ್ನು ಹುಟ್ಟಿಸುವ ಪ್ರಮಾಣಗಳು ಅಥವಾ ಸಿದ್ಧಾಂತಯುಕ್ತಿಗಳು.

| ಅಧಿಕರಣ | ಪೂರ್ವಪಕ್ಷಯುಕ್ತಿ | ಸಿದ್ಧಾಂತಯುಕ್ತಿ |
|---|---|---|
| ೧. ಸಂಧ್ಯಾಧಿಕರಣ | ಪಶ್ಚಾದದೃಷ್ಟಿಃ | ಅಶಕ್ಯಕರ್ತೃತಾಶಕ್ತಿಃ |
| ೨. ಪರಾಭಿಧ್ಯಾನಾಧಿಕರಣ | ಅವಿಜ್ಞಾನಮ್ | ಸ್ವತೋಽಬೋಧಃ |
| ೩. ದೇಹಯೋಗಾಧಿಕರಣ | ಕಾಲಃ | ತಥೈವ ಚ |
| ೪. ತದಭಾವಾಧಿಕರಣ | ದುಃಖಮ್ | ಅಮಾನಕ್ಲೃಪ್ತಿಃ |
| ೫. ಪ್ರಬೋಧಾಧಿಕರಣ | ಪೃಥಗ್ಭವಃ | ಸನ್ಮಾನಂ |

| | | |
|---|---|---|
| ೬. ಕರ್ಮಾನುಸ್ಮೃತ್ಯಧಿಕರಣ | ಪೃಥಗ್ಭವಃ | ಸನ್ಮಾನಂ |
| ೭. ಸಂಪತ್ತ್ಯಧಿಕರಣ | ಪೃಥಗ್ಭವಃ | ಸನ್ಮಾನಂ |
| ೮. ನ ಸ್ಥಾನತೋಧಿಕರಣ | ಸ್ಥಾನಭೇದಃ | ವ್ಯವಸ್ಥಾ |
| ೯. ಅರೂಪಾಧಿಕರಣ | ವಿರುದ್ಧತ್ವಂ | ವ್ಯವಸ್ಥಾ |
| ೧೦. ಉಪಮಾಧಿಕರಣ | ನ್ಯಾಯಸಾಮ್ಯಂ | ಅತ್ಯಲ್ಪತಾ |
| ೧೧. ಅಂಬುವದಧಿಕರಣ | ಸ್ವತೋ ಭವಃ | ಭವಃ |
| ೧೨. ವೃದ್ಧಿಹ್ರಾಸಾಧಿಕರಣ | ಗುಣಸಾಮ್ಯಂ | ವಿಶೇಷದೃಷ್ಟಿಃ |
| ೧೩. ಪ್ರಕೃತ್ಯೈತಾವತ್ವಾಧಿಕರಣ | ಅಯೋಗಃ | ವಿಶೇಷವಾಕ್ಯಂ ಚ |
| ೧೪. ತದವ್ಯಕ್ತಾಧಿಕರಣ | ತರ್ಕಬಾಧಃ | ಪುಂಶಕ್ತಿಃ |
| ೧೫. ಉಭಯವ್ಯಪದೇಶಾಧಿಕರಣ | ವಿಲೋಮತಾ | ಸುನಿದರ್ಶನಂ |
| ೧೬. ಪರಮತೋಧಿಕರಣ | ವಿಲೋಮತಾ | ಅಲೌಕಿಕತ್ವಂ |
| ೧೭. ಸ್ಥಾನವಿಶೇಷಾಧಿಕರಣ | ನಾನಾಭಾವಃ | ಆಧಿಕ್ಯಂ |
| ೧೮. ತಥಾನ್ಯತ್ವಾಧಿಕರಣ | ನಾನಾಭಾವಃ | ಆಧಿಕ್ಯಂ |
| ೧೯. ಅನೇನಸರ್ವಗತತ್ವಾಧಿಕರಣ | ನಾನಾಭಾವಃ | ಸ್ವಾತಂತ್ರ್ಯಂ |
| ೨೦. ಫಲಾಧಿಕರಣ | ಪ್ರಲೋಭಃ | ಸ್ವಾತಂತ್ರ್ಯಂ |

**ಪೂರ್ವಪಕ್ಷ ಹಾಗೂ ಸಿದ್ಧಾಂತಯುಕ್ತಿಗಳ ವಿವರಣೆ**

**೧. ಸಂಧ್ಯಾಧಿಕರಣ: ಓಂ ಸಧ್ಯೇ ಸೃಷ್ಟಿರಾಹ ಹಿ ಓಂ**

ಪಶ್ಚಾದದೃಷ್ಟಿಯು ಪೂರ್ವಪಕ್ಷಯುಕ್ತಿ. ಸ್ವಾಪ್ನ ಪದಾರ್ಥಗಳು ಸ್ವಪ್ನಾನಂತರ ಕಾಣದಿರುವ ಪ್ರಯುಕ್ತ ಅಸತ್ತಾಗಿರುವುದರಿಂದ ಅವು ಭಗವಂತನ ಅಧೀನವಲ್ಲ. ಆದಕಾರಣ ಭಗವಂತನ ಸ್ವಪ್ನಾದಿ ಪ್ರೇರಕತ್ವ ಮುಂತಾದ ಮಹಿಮೆಗೆ ಚ್ಯುತಿ ಬರುವುದು ಎಂದು ಪೂರ್ವಪಕ್ಷ.

ಅಶಕ್ಯಕರ್ತೃತಾಶಕ್ತಿ ಎನ್ನುವುದು ಸಿದ್ಧಾಂತಯುಕ್ತಿ. ಇತರರಿಗೆ ಸಾಧ್ಯವಿಲ್ಲದ್ದನ್ನೂ ಸೃಷ್ಟಿ ಮಾಡುವ ಶಕ್ತಿಯು ಪರಮಾತ್ಮನಿಗೆ ಇರುವ ಕಾರಣ ಸ್ವಪ್ನಕಾಲದಲ್ಲಿ ಜೀವರ ಸಂಸ್ಕಾರದಿಂದ ಪದಾರ್ಥಗಳನ್ನು ಸೃಷ್ಟಿಮಾಡಿ ಜೀವರಿಗೆ ತೋರಿಸುವುದರಿಂದ ಪರಮಾತ್ಮನ ಸ್ವಪ್ನಪ್ರೇರಕತ್ವಕ್ಕೆ ಚ್ಯುತಿಯಿಲ್ಲ ಎಂದು ಸಿದ್ಧಾಂತ.

**೨. ಪರಾಭಿಧ್ಯಾನಾಧಿಕರಣ: ಓಂ ಪರಾಭಿಧ್ಯಾನಾತ್ತು ತಿರೋಹಿತಂ ತತೋ ಹ್ಯಸ್ಯ ಬಂಧವಿಪರ್ಯಯೌ ಓಂ**

ಅವಿಜ್ಞಾನವು ಪೂರ್ವಪಕ್ಷಯುಕ್ತಿ. ಸ್ವಾಪ್ನ ಪದಾರ್ಥಗಳ ಪ್ರತೀತಿ ಮತ್ತು ತಿರೋಧಾನಗಳು ಬಾಹ್ಯಪದಾರ್ಥಗಳ ಅಜ್ಞಾನ ಮತ್ತು ಜ್ಞಾನಾಧೀನವೇ ಹೊರತು ಭಗವದಧೀನವಲ್ಲ ಎಂದು ಪೂರ್ವಪಕ್ಷ.

ಸ್ವತೋಽಬೋಧವು ಸಿದ್ಧಾಂತಯುಕ್ತಿ. ಜ್ಞಾನಾಜ್ಞಾನಗಳು ಈಶಾಧೀನವು. ಜೀವನಿಗೆ ಅದರಲ್ಲಿ ಸ್ವಾತಂತ್ರ್ಯವಿಲ್ಲ. ಆದ್ದರಿಂದ ಸ್ವಪ್ನ ಮತ್ತು ತಿರೋಧಾನಗಳೂ ಈಶಾಧೀನವೇ ಎಂದು ಸಿದ್ಧಾಂತ.

**೩. ದೇಹಯೋಗಾಧಿಕರಣ: ಓಂ ದೇಹಯೋಗಾದ್ವಾಸೋಽಪಿ ಓಂ**

ಕಾಲವು ಪೂರ್ವಪಕ್ಷಯುಕ್ತಿ. ಜಾಗ್ರದವಸ್ಥೆಯು ಕಾಲದ ಅಧೀನವಾದ್ದರಿಂದ ಈಶಾಧೀನವಲ್ಲ. ಆದಕಾರಣ ಈಶ್ವರನಿಗೆ ಜಾಗ್ರದವಸ್ಥೆಯ ಪ್ರೇರಕತ್ವವಿಲ್ಲವೆಂದು ಪೂರ್ವಪಕ್ಷ.

ತಥೈವ ಚ ಎನ್ನುವುದು ಸಿದ್ಧಾಂತಯುಕ್ತಿ. ಕಾಲವು ಅಚೇತನ ಹಾಗೂ ಅಸ್ವತಂತ್ರವೂ ಆದುದರಿಂದ ಅದಕ್ಕೆ ಪ್ರೇರಕತ್ವವಿಲ್ಲ. ಆದಕಾರಣ ಭಗವಂತನೇ ಜಾಗ್ರದವಸ್ಥೆಗೆ ಪ್ರೇರಕ ಎಂದು ಸಿದ್ಧಾಂತ.

**೪. ತದಭಾವಾಧಿಕರಣ: ಓಂ ತದಭಾವೋ ನಾಡೀಷು ತಚ್ಛ್ರುತೇರಾತ್ಮನಿ ಹ ಓಂ**

ದುಃಖವು ಪೂರ್ವಪಕ್ಷಯುಕ್ತಿ. ಜೀವನು ಸುಪ್ತಿಯಲ್ಲಿ ಭಗವಂತನನ್ನು ಪ್ರವೇಶಿಸದೆ ಬೇರೆ ಕಡೆಯಿದ್ದರೆ ಸುಪ್ತಿಯಲ್ಲೂ ದುಃಖಾನುಭವ ಬರಬೇಕಾಗುತ್ತದೆ. ಆದಕಾರಣ ಸುಪ್ತಿಯಲ್ಲಿ ಜೀವನಿಗೆ ಭಗವಂತನಲ್ಲಿ ಪ್ರವೇಶವನ್ನು ಹೇಳಬೇಕು. ಆಗ ಸುಷುಮ್ನಾನಾಡಿಯಲ್ಲಿರುತ್ತಾನೆ ಎಂಬ ವೇದವಾಕ್ಯಕ್ಕೆ ಅಪ್ರಾಮಾಣ್ಯ ಬರುವುದು. ಇದರಿಂದ ಇತರ ವೇದವಾಕ್ಯಗಳಲ್ಲಿಯೂ ಅವಿಶ್ವಾಸವು ಉಂಟಾಗುವುದು. ಆಗ ಭಗವಂತನ ಮಹಿಮೆಯಲ್ಲೂ ಅವಿಶ್ವಾಸ ಬರುವುದು. ಆದಕಾರಣ ಪರಮಾತ್ಮನಲ್ಲಿ ಭಕ್ತಿಯು ಕೂಡುವುದಿಲ್ಲ ಎಂದು ಪೂರ್ವಪಕ್ಷ.

ಅಮಾನಕ್ಲೃಪ್ತಿ ಎನ್ನುವುದು ಸಿದ್ಧಾಂತಯುಕ್ತಿ. ನಾಡಿಯಲ್ಲಿರುವ ಪರಮಾತ್ಮನಲ್ಲಿ ಸುಪ್ತಿಯನ್ನು ಅಂಗೀಕರಿಸಿರುವುದರಿಂದ ಜೀವನಿಗೆ ನಾಡಿಯಲ್ಲೂ ಪರಮಾತ್ಮನಲ್ಲೂ ಸುಪ್ತಿಯೆಂದು ಎರಡನ್ನೂ ಪ್ರಮಾಣವೆಂದು ಸ್ವೀಕರಿಸಬೇಕು. ನಾಡಿಯಲ್ಲಿ ಪ್ರವೇಶ ಹೇಳುವ ಶ್ರುತಿಗೆ ಸಂಭಾವಿತ ಅರ್ಥವನ್ನು ಕಲ್ಪಿಸದೆ ಅಪ್ರಾಮಾಣ್ಯವನ್ನು ಹೇಳಿದರೆ, ಬೇರೆ ಕಡೆಯಲ್ಲೂ ಅಪ್ರಾಮಾಣ್ಯವು ಬರುವುದು. ಆದ್ದರಿಂದ ಯಾವ ಶ್ರುತಿಯೂ ಅಪ್ರಮಾಣ್ಯವಲ್ಲವೆಂದು ಸಿದ್ಧಾಂತ.

**೫. ಪ್ರಬೋಧಾಧಿಕರಣ: ಓಂ ಅತಃ ಪ್ರಬೋಧೋಽಸ್ಮಾತ್ ಓಂ**

ಪೃಥಗ್ಭವ ಎನ್ನುವುದು ಪೂರ್ವಪಕ್ಷಯುಕ್ತಿ. ನಿದ್ರೆಯಿಂದ ಎಚ್ಚರವಾಗಲಿಕ್ಕೆ ಭೇರಿತಾಡನಾದಿ ಅನ್ಯಕಾರಣವಿರುವುದರಿಂದ ಈಶಾಧೀನವಲ್ಲವೆಂದು ಪೂರ್ವಪಕ್ಷ.

ಸನ್ಮಾನ ಎನ್ನುವುದು ಸಿದ್ಧಾಂತಯುಕ್ತಿ. ಭಗವಂತನಿಲ್ಲದೆ ಯಾವ ವ್ಯಾಪಾರವೂ ನಡೆಯಲಾರದು ಎಂದು ಹೇಳುವ 'ನ ಋತೇ ತ್ವತ್ಕ್ರಿಯತೇ ಕಿಂಚನ' ಎಂಬ ಸಮೀಚೀನವಾದ ಪ್ರಮಾಣವಿರುವುದರಿಂದ ಎಚ್ಚರವೂ ಈಶಾಧೀನವೇ ಎಂದು ಸಿದ್ಧಾಂತ.

**೬.ಕರ್ಮಾನುಸ್ಮೃತ್ಯಧಿಕರಣ: ಓಂ ಸ ಏವ ಚ ಕರ್ಮಾನುಸ್ಮೃತಿ ಶಬ್ದವಿಧಿಭ್ಯಃ ಓಂ**

ಪೃಥಗ್ಭವವು ಪೂರ್ವಪಕ್ಷಯುಕ್ತಿ. ಲೋಕದಲ್ಲಿ ಬೇರ ಬೇರೆ ದೇಶ ಕಾಲಗಳಲ್ಲಿ ಬೇರೆ ಬೇರೆ ರಾಜರು ಇರುವಂತೆ ಬೇರೆ ಬೇರೆ ನಿಯಾಮಕರಿರಬಹುದು. ಆದ್ದರಿಂದ ಪರಮಾತ್ಮನಿಗೆ ಸರ್ವಾವಸ್ಥಾ ಪ್ರೇರಕತ್ವವು ಕೂಡುವುದಿಲ್ಲ ಎಂದು ಪೂರ್ವಪಕ್ಷ.

ಸನ್ಮಾನವು ಸಿದ್ಧಾಂತಯುಕ್ತಿ. 'ದೇಶಕಾಲವಿಶೇಷೇಽಪಿ ಸ್ವಪ್ನಾದೀನಾಂ ಸ ಏವ ಹಿ। ತಿರಸ್ಕರ್ತಾ ಚ ಕರ್ತಾ ಚ ನ ಖಂಡೇಶಃ ಸ ರಾಜವತ್' ಪರಮಾತ್ಮನೇ ಎಲ್ಲ ದೇಶಕಾಲವಿಶೇಷಗಳಲ್ಲಿ ಸರ್ವರಿಗೂ ಸ್ವಪ್ನಾದಿಗಳ ತಿರೋಧಾನ ಪ್ರತೀತಿಗಳನ್ನು ಉಂಟುಮಾಡುತ್ತಾನೆ ಎಂದು ಸಮೀಚೀನ ಪ್ರಮಾಣವಿರುವುದರಿಂದ ವಿಷ್ಣುವೇ ಸರ್ವಾವಸ್ಥಾಪ್ರೇರಕ ಎಂದು ಸಿದ್ಧಾಂತ.

**೭. ಸಂಪತ್ತ್ಯಧಿಕರಣ: ಓಂ ಮುಗ್ಧೇಽರ್ಧಸಂಪತ್ತಿಃ ಪರಿಶೇಷಾತ್ ಓಂ**

ಪೃಥಗ್ಭವವು ಪೂರ್ವಪಕ್ಷಯುಕ್ತಿ. ಮೋಹಾವಸ್ಥೆಯು ಜಾಗ್ರದ್ ಸ್ವಪ್ನಗಳಿಗಿಂತ ಬೇರೆಯಾಗಿದ್ದು ಸುಪ್ತಿಯಲ್ಲಿ ಅಂತರ್ಗತವಾಗಿದೆ. ಆದಕಾರಣ ಶ್ರೀಹರಿಯು ಮೋಹಾವಸ್ಥೆಯನ್ನು ಪ್ರೇರಿಸಲಾರನು ಎಂದು ಪೂರ್ವಪಕ್ಷ.

ಸನ್ಮಾನವು ಸಿದ್ಧಾಂತ ಯುಕ್ತಿ. ಸುಪ್ತಿಯಲ್ಲಿ ಕೇವಲ ಸುಖವಿದ್ದರೆ ಮೋಹದಲ್ಲಿ ದುಃಖವೇ ಇರುವುದು. ಆದಕಾರಣ ಅದು ಸುಪ್ತಿಯಲ್ಲಿ ಅಂತರ್ಗತವಲ್ಲ. ಆದ್ದರಿಂದ ಜೀವರಲ್ಲಿ ಸಂಭಾವಿತವಾದ ಭಗವಂತನಿಂದ ದೂರಸ್ಥತ್ವರೂಪವಾದ ಜಾಗ್ರದವಸ್ಥೆ, ಸಮೀಪಸ್ಥತ್ವ ರೂಪವಾದ ಸ್ವಪ್ನಾವಸ್ಥೆ, ಪ್ರವೇಶರೂಪವಾದ ಸುಪ್ತಿ ಇವುಗಳಿಂದ ಬೇರೆಯಾದ ಮೋಹಾವಸ್ಥೆಯು ಪರಿಶೇಷ ಪ್ರಮಾಣದಿಂದ ಭಗವಂತನಲ್ಲಿ ಅರ್ಧ ಪ್ರವೇಶರೂಪವೆಂದು ಸಿದ್ಧವಾಗುತ್ತದೆ. ಆದ್ದರಿಂದ ಭಗವಂತನಲ್ಲಿ ಮೋಹಾವಸ್ಥಾ ಪ್ರೇರಕತ್ವವೆಂಬ ಅಧಿಕ ಮಹಾತ್ಮೆಯು ಯುಕ್ತವೇ ಆಗಿದೆ ಎಂದು ಸಿದ್ಧಾಂತ.

**೮. ನ ಸ್ಥಾನತೋಧಿಕರಣ: ಓಂ ನ ಸ್ಥಾನತೋಪಿ ಪರಸ್ಯೋಭಯಲಿಂಗಂ ಸರ್ವತ್ರ ಹಿ ಓಂ**

ಸ್ಥಾನಭೇದವು ಪೂರ್ವಪಕ್ಷಯುಕ್ತಿ. ಪ್ರತಿ ಶರೀರದಲ್ಲಿ ಕಣ್ಣು ಕಂಠ ಮುಂತಾದ ಜಾಗ್ರದಾದಿ ಸ್ಥಾನಗಳಲ್ಲಿರತಕ್ಕ ಈಶ್ವರನ ರೂಪಗಳು ಸ್ಥಾನಭೇದದಿಂದಾಗಿ ಪರಸ್ಪರ ಭಿನ್ನವು ಎಂದು ಪೂರ್ವಪಕ್ಷ.

ವ್ಯವಸ್ಥಾ ಎನ್ನುವುದು ಸಿದ್ಧಾಂತಯುಕ್ತಿ. 'ಅಯಮೇವ ಸಃ' 'ನೇಹ ನಾನಾಸ್ತಿ

ಕಿಂಚನ' ಇತ್ಯಾದಿ ಶ್ರುತಿಗಳ ಬಲದಿಂದ ಸ್ಥಾನಗಳು ವಿಭಿನ್ನವೇ ಆಗಿದ್ದರೂ ಅಲ್ಲಿರತಕ್ಕ ಭಗವಂತನ ರೂಪಗಳು ಮಾತ್ರ ಪರಸ್ಪರ ಅಭಿನ್ನವು ಎಂದು ವ್ಯವಸ್ಥೆ ಮಾಡಲಿಕ್ಕೆ ಬರುವುದು ಎಂದು ಸಿದ್ಧಾಂತ.

**೯. ಅರೂಪಾಧಿಕರಣ: ಓಂ ಅರೂಪವದೇವ ಹಿ ತತ್ಪ್ರಧಾನತ್ವಾತ್ ಓಂ**

ವಿರುದ್ಧತ್ವವು ಪೂರ್ವಪಕ್ಷಯುಕ್ತಿ. ಭಗವಂತನಿಗೆ ರೂಪವಿಲ್ಲ ಎಂದು ಹೇಳುವ 'ತದರೂಪಮನಾಮಯಂ' ಎನ್ನುವ ಶ್ರುತಿಗೂ, ರೂಪವಿದೆಯೆಂದು ಹೇಳುವ 'ರುಗ್ಮ ವರ್ಣಂ ಆದಿತ್ಯವರ್ಣಂ' ಎನ್ನುವ ಶ್ರುತಿಗೂ ಪರಸ್ಪರ ವಿರೋಧವಿರುವುದರಿಂದ ಆ ಶ್ರುತಿಗಳಿಗೆ ಅಪ್ರಾಮಾಣ್ಯ ಬರುವುದು. ರೂಪವಿಲ್ಲವೆಂದರೆ ಸೌಂದರ್ಯಾದಿಗಳೂ ಇಲ್ಲವೆಂದಾಗುವುದು. ಆದ್ದರಿಂದ ಪರಮಾತ್ಮನಲ್ಲಿ ಭಕ್ತಿಯು ಕೂಡುವುದಿಲ್ಲ ಎಂದು ಪೂರ್ವಪಕ್ಷ.

ವ್ಯವಸ್ಥಾ ಎನ್ನುವುದು ಸಿದ್ಧಾಂತಯುಕ್ತಿ. ಪರಮಾತ್ಮನು ಅರೂಪನು ಎಂದು ಹೇಳುವ ಶ್ರುತಿಗೆ ಪರಮಾತ್ಮನು ಪ್ರಾಕೃತರೂಪರಹಿತನೆಂದೂ, ಅಪ್ರಾಕೃತ ರೂಪವುಳ್ಳವನೆಂದೂ ಪ್ರಮಾಣಗಳಿಗೆ ಅವಿರೋಧವಾಗಿ ಅರ್ಥವ್ಯವಸ್ಥೆ ಮಾಡಲಿಕ್ಕೆ ಬರುವುದು. ಆದ್ದರಿಂದ ಪರಮಾತ್ಮನಲ್ಲಿ ಭಕ್ತಿಯು ಅವಶ್ಯಕ ಎಂದು ಸಿದ್ಧಾಂತ.

**೧೦. ಉಪಮಾಧಿಕರಣ: ಓಂ ಅತ ಏವ ಚೋಪಮಾ ಸೂರ್ಯಕಾದಿವತ್ ಓಂ**

ನ್ಯಾಯಸಾಮ್ಯವು ಪೂರ್ವಪಕ್ಷಯುಕ್ತಿ. ಪರಮಾತ್ಮನಿಗೂ ಜೀವನಿಗೂ ಚೇತನತ್ವ ಹಾಗೂ ಅಂಶತ್ವಗಳಲ್ಲಿ ಸಾಮ್ಯವಿರುವುದರಿಂದ ಜೀವನೂ ಮತ್ಸ್ಯಾದಿ ರೂಪಗಳಂತೆ ಪರಮಾತ್ಮನಿಂದ ಅಭಿನ್ನನು. ಆದಕಾರಣ ಈಶ್ವರನಲ್ಲಿ ಭಕ್ತಿಯು ಕೂಡುವುದಿಲ್ಲ ಎಂದು ಪೂರ್ವಪಕ್ಷ.

ಅತ್ಯಲ್ಪತಾ ಎನ್ನುವುದು ಸಿದ್ಧಾಂತಯುಕ್ತಿ. ಈಶ್ವರನಿಗೆ ಹೋಲಿಸಿದರೆ ಜೀವನಲ್ಲಿ ಅಲ್ಪಗುಣತ್ವ ರೂಪವಾದ ವಿರುದ್ಧಧರ್ಮವಿರುವ ಕಾರಣ ಜೀವನಿಗೆ ಈಶನೊಂದಿಗೆ ಅಭೇದವು ಕೂಡುವುದಿಲ್ಲ. ಆದ್ದರಿಂದ ಭಕ್ತಿಯು ಅವಶ್ಯಕವೆಂದು ಸಿದ್ಧಾಂತ.

**೧೧. ಅಂಬುವದಧಿಕರಣ: ಓಂ ಅಂಬುವದಗ್ರಹಣಾತ್ತು ನ ತಥಾತ್ವಂ ಓಂ**

ಸತೋ ಭವಃ ಎನ್ನುವುದು ಪೂರ್ವಪಕ್ಷಯುಕ್ತಿ. ಜೀವನಲ್ಲಿ ನಿತ್ಯದಲ್ಲಿಯೂ ಜ್ಞಾನಾನಂದಾದಿ ಸಾದೃಶ್ಯವಿರುವುದರಿಂದ ಸಾಧನವಿಲ್ಲದೆಯೇ ಅದರ ಅಭಿವ್ಯಕ್ತಿಯು ಆಗುವುದು. ಆದ್ದರಿಂದ ಸ್ವರೂಪಾನಂದಾಭಿವ್ಯಕ್ತಿಗಾಗಿ ಭಕ್ತಿಯನ್ನು ಮಾಡಬೇಕಿಲ್ಲ ಎಂದು ಪೂರ್ವಪಕ್ಷ.

ಭವಃ ಎನ್ನುವುದು ಸಿದ್ಧಾಂತಯುಕ್ತಿ. ಅನಾದಿಕಾಲದಿಂದ ಸಂಸಾರದ ನಿವೃತ್ತಿಯು ಆಗದೇ ಇರುವುದು. ಭಕ್ತ್ಯಾದಿ ಸಾಧನವಿಲ್ಲದೆ ಅದು ನಿವೃತ್ತಿಯಾಗದು. ಆದಕಾರಣ ಸಂಸಾರದ ನಿವೃತ್ತಿಗಾಗಿ ಭಕ್ತ್ಯಾದಿಗಳು ಅವಶ್ಯಕವೆಂದು ಸಿದ್ಧಾಂತ.

**೧೨. ವೃದ್ಧಿಹ್ರಾಸಾಧಿಕರಣ: ಓಂ ವೃದ್ಧಿಹ್ರಾಸಭಾಕ್ತ್ವಮಂತರ್ಭಾವಾದುಭಯ ಸಾಮಂಜಸ್ಯಾದೇವಂ ಓಂ**

ಗುಣಸಾಮ್ಯವು ಪೂರ್ವಪಕ್ಷಯುಕ್ತಿ. ಬ್ರಹ್ಮಾದಿ ಎಲ್ಲ ಜೀವರಲ್ಲಿ ಮುಕ್ತತ್ವ ರೂಪ ಸಾಮ್ಯವಿರುವುದರಿಂದ ಭಕ್ತ್ಯಾದಿ ಗುಣಗಳೂ ಅವರಲ್ಲಿ ಸಮಾನವಾಗಿರುತ್ತವೆ ಎಂದು ಪೂರ್ವಪಕ್ಷ.

ವಿಶೇಷದೃಷ್ಟಿಯು ಸಿದ್ಧಾಂತಯುಕ್ತಿ. 'ಯಥಾ ಯಥಾ ಅಧಿಕಾರೋ ವಿಶಿಷ್ಯತೇ' ಎಂಬ ಶ್ರುತಿಯು ಸಾಧನದಲ್ಲಿ ವಿಶೇಷವನ್ನು ಹೇಳುತ್ತದೆ.. 'ಸೈಷಾಽಽನಂದಸ್ಯ ಮೀಮಾಂಸಾ ಭವತಿ' ಎಂಬ ಶ್ರುತಿಯಲ್ಲಿ ಫಲತಾರತಮ್ಯವು ಉಕ್ತವಾಗಿದೆ. ಸಾಧನದಲ್ಲಿ ವಿಶೇಷವಿಲ್ಲದಿದ್ದರೆ ಫಲತಾರತಮ್ಯವನ್ನು ಕೂಡಿಸಲು ಬರುವುದಿಲ್ಲ. ಆದಕಾರಣ ಜೀವರ ಸಾಧನದಲ್ಲಿ ತಾರತಮ್ಯವಿದೆ ಎಂದು ಸಿದ್ಧಾಂತ.

**೧೩. ಪ್ರಕೃತೈತಾವತ್ತ್ವಾಧಿಕರಣ: ಓಂ ಪ್ರಕೃತೈತಾವತ್ತ್ವಂ ಹಿ ಪ್ರತಿಷೇಧತಿ ತತೋ ಬ್ರವೀತಿ ಚ ಭೂಯಃ ಓಂ**

ಅಯೋಗವು ಪೂರ್ವಪಕ್ಷಯುಕ್ತಿ. ಜಗತ್ತಿನ ಸಂಹಾರವಾಗದಿರುವಿಕೆಯೇ ಅದರ ರಕ್ಷಣೆ. ಆದ್ದರಿಂದ ಭಗವಂತನಲ್ಲಿ ಸಂಹಾರ ಮಾಡದೇ ಇರುವುದಕ್ಕಿಂತ ಭಿನ್ನವಾದ ಪಾಲನ ರೂಪವಾದ ವ್ಯಾಪಾರವು ಯುಕ್ತವಾಗುವುದಿಲ್ಲ. ಅಂದರೆ ಅವನಲ್ಲಿ ಪ್ರತ್ಯೇಕವಾದ ಪಾಲಕತ್ವ ಎಂಬ ಗುಣವಿಲ್ಲವೆಂದು ಪೂರ್ವಪಕ್ಷ.

ವಿಶೇಷವಾಕ್ಯ ಎನ್ನುವುದು ಸಿದ್ಧಾಂತಯುಕ್ತಿ. "ಸ ಸೃಜತಿ ಸ ಪಾಲಯತಿ ಸ ವಿನಾಶಯತಿ" ಎಂಬ ವಿಶೇಷ ವಾಕ್ಯವಿರುವುದರಿಂದ ಭಗವಂತನು ಪಾಲಕನೂ ಆಗಿರುವನೆಂದು ಸಿದ್ಧಾಂತ.

**೧೪. ತದವ್ಯಕ್ತಾಧಿಕರಣ: ಓಂ ತದವ್ಯಕ್ತಮಾಹ ಹಿ ಓಂ**

ತರ್ಕಬಾಧವು ಪೂರ್ವಪಕ್ಷಯುಕ್ತಿ. ಪರಮಾತ್ಮನು ಅವ್ಯಕ್ತನು. ಸಾಧಕರಿಗೆ ಅವನ ಸಾಕ್ಷಾತ್ಕಾರವಾಗುವುದು ಅಂದರೆ ಅವನು ವ್ಯಕ್ತನಾಗುವನೆಂದು ಹೇಳಿದರೆ ಅವ್ಯಕ್ತತ್ವಕ್ಕೆ ಭಂಗ ಬರುವುದು. ಆದ್ದರಿಂದ ಅವನ ಸಾಕ್ಷಾತ್ಕಾರವೇ ಶಕ್ಯವಿಲ್ಲವಾದ ಕಾರಣ ಭಕ್ತಿಯು ವ್ಯರ್ಥ ಎಂದು ಪೂರ್ವಪಕ್ಷ.

ಪುಂಶಕ್ತಿ ಎನ್ನುವುದು ಸಿದ್ಧಾಂತಯುಕ್ತಿ. ಪರಮಾತ್ಮನು ಅವ್ಯಕ್ತನಾಗಿದ್ದರೂ ತನ್ನ ಅಚಿಂತ್ಯ ಶಕ್ತಿಯಿಂದ ವ್ಯಕ್ತನಾಗುವನು. ಆದಕಾರಣ ಪರಮಾತ್ಮನ ಸಾಕ್ಷಾತ್ಕಾರಕ್ಕಾಗಿ ಭಕ್ತಿಯು ಅವಶ್ಯಕವೆಂದು ಸಿದ್ಧಾಂತ.

**೧೫. ಉಭಯವ್ಯಪದೇಶಾಧಿಕರಣ: ಓಂ ಉಭಯವ್ಯಪದೇಶಾತ್ತ್ವಹಿ ಕುಂಡಲವತ್ ಓಂ**

ವಿಲೋಮತಾ ಎಂದು ಪೂರ್ವಪಕ್ಷಯುಕ್ತಿ. ವಿಲೋಮತಾ ಎಂದರೆ ವಿರುದ್ಧತ್ವ. ಗುಣಸ್ವರೂಪನಾದ ಪರಮಾತ್ಮನಿಗೆ ಗುಣವತ್ತ್ವವು ವಿರುದ್ಧವು. ಗುಣಸ್ವರೂಪನೇ

ಆಗಿದ್ದರೂ ಗುಣವುಳ್ಳವನಲ್ಲವಾದ್ದರಿಂದ ಪರಮಾತ್ಮನಲ್ಲಿ ಭಕ್ತಿಯ ಕೂಡುವುದಿಲ್ಲ ಎಂದು ಪೂರ್ವಪಕ್ಷ.

ಸುನಿದರ್ಶನ ಎನ್ನುವುದು ಸಿದ್ಧಾಂತಯುಕ್ತಿ. ಪೂರ್ವಃ ಕಾಲಃ (ಮೊದಲಿನ ಕಾಲ) ಎಂಬಲ್ಲಿ ಪೂರ್ವಃ ಎಂದರೂ ಕಾಲವೇ, ಕಾಲಃ ಎಂದರೂ ಕಾಲವೇ. ಮೊದಲಿನ ಕಾಲವೆನ್ನುವುದು ವಿಶೇಷಣ ವಿಶೇಷ್ಯಭಾವದಿಂದ ಉಕ್ತವಾಗಿದೆ. ಹಾಗೆಯೇ ಗುಣಸ್ವರೂಪನಾದ ಪರಮಾತ್ಮನಿಗೂ ಅವನ ಗುಣಗಳಿಗೂ ವಿಶೇಷಣ ವಿಶೇಷ್ಯಭಾವದಿಂದ ವ್ಯವಹಾರವಿದೆ. ಹೀಗೆ ಗುಣಸ್ವರೂಪನಾದ ಭಗವಂತನು ಗುಣಗಳನ್ನು ಹೊಂದಿರುವನು ಎನ್ನುವುದು ಕೂಡುವುದರಿಂದ ಅವನಲ್ಲಿ ಭಕ್ತಿಯು ಯುಕ್ತವಾಗುವುದೆಂದು ಸಿದ್ಧಾಂತ.

**೧೬. ಪರಮತೋಧಿಕರಣ: ಓಂ ಪರಮತಃ ಸೇತೂನ್ಮಾನಸಂಬಂಧಭೇದವ್ಯಪದೇಶೇಭ್ಯಃ ಓಂ**

ವಿಲೋಮತಾ ಎನ್ನುವುದು ಪೂರ್ವಪಕ್ಷಯುಕ್ತಿ. ಆನಂದಾದಿ ಪದಗಳು ಲೌಕಿಕ ಆನಂದಾದಿ ವಾಚಕವಾದ್ದರಿಂದ, ಆನಂದ ಪದವಾಚ್ಯತ್ವವು ಲೋಕವಿಲಕ್ಷಣವಾದ ಬ್ರಹ್ಮಾನಂದಕ್ಕಿಲ್ಲ. ಆನಂದ ಪದವಾಚ್ಯತ್ವವನ್ನು ಕೂಡಿಸಲು ಬ್ರಹ್ಮಾನಂದವು ಲೌಕಿಕಾನಂದಕ್ಕೆ ಸದೃಶವೆಂದು ಹೇಳಿದರೆ, ಅಂಥಹ ಆನಂದವುಳ್ಳ ಪರಮಾತ್ಮನಲ್ಲಿ ಭಕ್ತಿಯು ಯುಕ್ತವಾಗಲಾರದು ಎಂದು ಪೂರ್ವಪಕ್ಷ.

ಅಲೌಕಿಕತ್ವ ಎನ್ನುವುದು ಸಿದ್ಧಾಂತಯುಕ್ತಿ. ಭಗವಂತನ ಆನಂದಾದಿ ಗುಣಗಳೂ ಅದನ್ನು ತಿಳಿಸುವ ಶಬ್ದಗಳೂ ಅವನೂ ಎಲ್ಲವೂ ಲೋಕವಿಲಕ್ಷಣವೇ ಎನ್ನುವುದು ನಿಜವೇ. ಆದರೂ ಘಟವೆಂಬ ಒಂದೇ ಶಬ್ದವು ಮಣ್ಣಿನ ಮಡಕೆಗೂ ಸುವರ್ಣದ ಮಡಕೆಗೂ ವಾಚಕವಾಗಿರುವಂತೆ ಲೌಕಿಕ ಶಬ್ದಗಳೂ ಕೂಡ ಅಲೌಕಿಕವಾದ ಆನಂದಾದಿಗಳನ್ನು ತಿಳಿಸುತ್ತವೆ ಎಂದು ಶ್ರುತಿಯು ಪ್ರತಿಪಾದಿಸುತ್ತದೆ. ಆದ್ದರಿಂದ ಅಲೌಕಿಕವಾದ ಆನಂದಾದಿಗಳನ್ನು ಹೊಂದಿರುವ ಪರಮಾತ್ಮನಲ್ಲಿ ಭಕ್ತಿಯು ಯುಕ್ತವೇ ಆಗುವುದೆಂದು ಸಿದ್ಧಾಂತ.

**೧೭. ಸ್ಥಾನವಿಶೇಷಾಧಿಕರಣ: ಓಂ ಸ್ಥಾನವಿಶೇಷಾತ್ ಪ್ರಕಾಶಾದಿವತ್ ಓಂ**

ನಾನಾಭಾವ ಎನ್ನುವುದು ಪೂರ್ವಪಕ್ಷಯುಕ್ತಿ. ಬ್ರಹ್ಮಾದಿ ಜೀವರ ಆನಂದಾದಿ ಗಳಲ್ಲಿ ವೈಚಿತ್ರ್ಯವಿರುವುದರಿಂದ ಅವುಗಳಿಗೆ ಬಿಂಬನಾದ ಪರಮಾತ್ಮನಲ್ಲಿಯೂ ವೈಚಿತ್ರ್ಯವಿರಬೇಕು. ಆದರೆ ವೈಚಿತ್ರ್ಯವಿಲ್ಲವೆಂದು ಪ್ರಮಾಣವಿದೆ. ಆದಕಾರಣ ಪರಮಾತ್ಮನ ಆನಂದವು ಬಿಂಬವಲ್ಲವೆಂದಾಗುವುದು. ಆದ್ದರಿಂದ ಭಕ್ತಿಯು ಯುಕ್ತವಲ್ಲವೆಂದು ಪೂರ್ವಪಕ್ಷ.

ಆಧಿಕ್ಯವೆನ್ನುವುದು ಸಿದ್ಧಾಂತ. ಪರಮಾತ್ಮನಲ್ಲಿ, ಅವನ ಆನಂದಾದಿಗಳಲ್ಲಿ ವೈಚಿತ್ರ್ಯವಿಲ್ಲದಿದ್ದರೂ ಪ್ರತಿಬಿಂಬಗಳಲ್ಲಿ ವೈಚಿತ್ರ್ಯವನ್ನುಂಟುಮಾಡುವ ಶಕ್ತಿವಿಶೇಷವು

(ಸಾಮರ್ಥ್ಯಾಧಿಕ್ಯವು) ಅವನಲ್ಲಿದೆ. ಆದಕಾರಣ ಭಕ್ತಿಯು ಯುಕ್ತವೇ ಆಗಿದೆ ಎಂದು ಸಿದ್ಧಾಂತ.

**೧೮. ತಥಾನ್ಯತ್ವಾಧಿಕರಣ: ಓಂ ತಥಾನ್ಯತ್ ಪ್ರತಿಷೇಧಾತ್ ಓಂ**

ನಾನಾಭಾವ ಎನ್ನುವುದು ಪೂರ್ವಪಕ್ಷಯುಕ್ತಿ. ಭಗವಂತನಿಗೆ ಮತ್ಸ್ಯಾದಿ ನಾನಾ ರೂಪಗಳಿರುವೆ. ಅದರಂತೆಯೇ ಸಾಧಕರ ಧ್ಯಾನಕಾಲದಲ್ಲಿ ಗೋಚರಿಸುವ ಮಾನಸ ವಾಸನಾ ರೂಪವಾದ ಪ್ರತಿಮೆಯೂ ಅವನದ್ದೇ ಒಂದು ರೂಪ. ಭಕ್ತಿಯಿಲ್ಲದೇ ಧ್ಯಾನ ಮಾಡಿದಾಗಲೂ ಆ ರೂಪವು ಪ್ರಕಟವಾಗುತ್ತದೆ ಹಾಗೂ ಫಲವನ್ನೂ ಕೊಡುತ್ತದೆ. ಆದಕಾರಣ ಭಕ್ತಿಯು ಅವಶ್ಯಕವಲ್ಲವೆಂದು ಪೂರ್ವಪಕ್ಷ.

ಆಧಿಕ್ಯವೆನ್ನುವುದು ಸಿದ್ಧಾಂತಯುಕ್ತಿ. ಭಗವಂತನಲ್ಲಿ ಗುಣಪೂರ್ಣತ್ವ ರೂಪವಾದ ಆಧಿಕ್ಯವಿರುವುದು. ಅವನು ದೋಷಯುಕ್ತವಾದ ಮಾನಸ ಪ್ರತಿಮಾ ರೂಪನಲ್ಲ. 'ನೇದಂ ಯದಿದಮುಪಾಸತೇ' ಧ್ಯಾನದಲ್ಲಿ ಗೋಚರವಾಗುವ ಮಾನಸ ರೂಪವಾದ ಪ್ರತಿಮೆಯು ಪರಮಾತ್ಮನಲ್ಲ ಎಂಬ ಶ್ರುತಿಯೂ ಇದೆ. ಅದಕ್ಕಿಂತ ಭಿನ್ನವಾದ ಭಗವಂತನ ಸಾಕ್ಷಾತ್ಕಾರಕ್ಕಾಗಿ ಭಕ್ತಿಯು ಅವಶ್ಯಕವೆಂದು ಸಿದ್ಧಾಂತ.

**೧೯. ಅನೇನಸರ್ವಗತತ್ವಾಧಿಕರಣ: ಓಂ ಅನೇನ ಸರ್ವಗತತ್ವ ಮಾಯಾಮಯ ಶಬ್ದಾದಿಭ್ಯಃ ಓಂ**

ನಾನಾಭಾವವೆನ್ನುವುದು ಪೂರ್ವಪಕ್ಷಯುಕ್ತಿ. ಭಗವಂತನ ನಾನಾವಿಧವಾದ ಅವತಾರಗಳಲ್ಲಿ ನಾನಾವಿಧವಾದ ಕೌತುಕಗಳು ಕಂಡಿವೆ. ಅದರಂತೆಯೇ ಕೌತುಕದಿಂದ ಭಗವಂತನು ಎಂದಾದರೂ ತನ್ನ ಸೃಷ್ಟ್ಯಾದಿ ಕರ್ತೃತ್ವವನ್ನು ಕೊಡಬಹುದು. ಆಗ ಅವನಲ್ಲಿ ಆ ಮಹಿಮೆಯು ಕಾಣದಾಗುವುದು. ಆದ್ದರಿಂದ ಅವನಲ್ಲಿ ಭಕ್ತಿಯು ಯುಕ್ತವಲ್ಲವೆಂದು ಪೂರ್ವಪಕ್ಷ.

ಸ್ವಾತಂತ್ರ್ಯವು ಸಿದ್ಧಾಂತಯುಕ್ತಿ. ಭಗವಂತನು ಸಂಪೂರ್ಣವಾಗಿ ಸ್ವತಂತ್ರನು. ಆದ್ದರಿಂದ ಅವನು ಯಾವಕಾಲಕ್ಕೂ ಯಾರಿಗೂ ತನ್ನ ಉತ್ಕರ್ಷವನ್ನು ಬಿಟ್ಟು ಕೊಡುವುದಿಲ್ಲ. ಪರಮಾತ್ಮನ ಉತ್ಕೃಷ್ಟತ್ವಕ್ಕೆ ಎಂದಿಗೂ ಚ್ಯುತಿಯಿಲ್ಲವಾದ್ದರಿಂದ ಭಕ್ತಿಯು ಯುಕ್ತವೇ ಆಗುವುದೆಂದು ಸಿದ್ಧಾಂತ.

**೨೦. ಫಲಾಧಿಕರಣ: ಓಂ ಫಲಮತ ಉಪಪತ್ತೇಃ ಓಂ**

ಪ್ರಲೋಭವು ಪೂರ್ವಪಕ್ಷಯುಕ್ತಿ. ಕರ್ಮ ಮಾಡಿದರೆ ಫಲ, ಇಲ್ಲದಿದ್ದರೆ ಇಲ್ಲ. ಆದಕಾರಣ ಕರ್ಮವೇ ಫಲಪ್ರದ. ವಿಷ್ಣುವು ಫಲಪ್ರದನೆಂಬುದು ಪ್ರಲೋಭನೆ ಮಾತ್ರ ಎಂದು ಪೂರ್ವಪಕ್ಷ.

ಸ್ವಾತಂತ್ರ್ಯವು ಸಿದ್ಧಾಂತಯುಕ್ತಿ. ಭಗವಂತನು ಸ್ವತಂತ್ರನಾದ್ದರಿಂದ ಕರ್ಮ ಮಾಡಿಸುವವನೂ ಅವನೇ, ಫಲವನ್ನು ಕೊಡುವವನೂ ಅವನೇ. ಕೆಲವು

ಕ್ರಮಗಳಿಗೂ ಫಲಕೊಡುವುದೂ, ಕೆಲವಕ್ಕೆ ಕೊಡದಿರುವುದೂ ಕಂಡಿದೆ. ಎಷ್ಟೋ ಕರ್ಮಗಳು ಭೋಗಿಸಲ್ಪಡದೆಯೇ ಭಗವಂತನ ಇಚ್ಛೆಯಿಂದಲೇ ನಾಶಹೊಂದುತ್ತವೆ. ಆದಕಾರಣ ಭಗವಂತನೇ ಫಲಪ್ರದನೆಂದು ಸಿದ್ಧಾಂತ.

## ಸಂಧ್ಯಾಧಿಕರಣಮ್

**ಓಂ ಸಂಧ್ಯೇ ಸೃಷ್ಟಿರಾಹ ಹಿ ಓಂ**

**ಓಂ ನಿರ್ಮಾತಾರಂ ಚೈಕೇ ಪುತ್ರಾದಯಶ್ಚ ಓಂ**

**ಓಂ ಮಾಯಾಮಾತ್ರಂ ತು ಕಾರ್ತ್ಸ್ನ್ಯೇನಾನಭಿವ್ಯಕ್ತಸ್ವರೂಪತ್ವಾತ್ ಓಂ**

**ಓಂ ಸೂಚಕಶ್ಚ ಹಿ ಶ್ರುತೇರಾಚಕ್ಷತೇ ಚ ತದ್ವಿದಃ ಓಂ**

ಹಿಂದಿನ ಪಾದದಲ್ಲಿ 'ಯೋನೇಃ ಶರೀರಂ' ಎನ್ನುವ ಪರ್ಯಂತ ಇರುವ ಸೂತ್ರಗಳಿಂದ ಜೀವನಿಗೆ ಜನನವು ಇದೆ ಎಂದು ನಿಶ್ಚಿತವಾಗುತ್ತದೆ. ಹುಟ್ಟಿದವನಿಗೆ ಸ್ವಪ್ನಾದಿ ಅವಸ್ಥೆಗಳ ಸಂಬಂಧವು ಪ್ರಸಿದ್ಧವಾಗಿದೆ. ಅದರಲ್ಲಿ ಭಗವಂತನಿಗೆ ಸ್ವಪ್ನಾವಸ್ಥೆಯನ್ನು ಪ್ರವರ್ತಿಸುವ ಲಕ್ಷಣರೂಪವಾದ ಮಹಿಮೆಯನ್ನು ಈ ಸಂಧ್ಯಾಧಿಕರಣದಲ್ಲಿ ನಿರ್ಣಯಿಸುತ್ತಾರೆ. ಈ ವಿಷಯದಲ್ಲಿ ಪೂರ್ವಪಕ್ಷ ಹೀಗಿದೆ – ಸ್ವಪ್ನವು ಅರ್ಥಜ್ಞಾನರೂಪವಾದುದು. ಸ್ವಪ್ನದಲ್ಲಿ ಕಾಣತಕ್ಕ ಆನೆ ಕುದುರೆ ಇತ್ಯಾದಿಗಳು ಅಸತ್ಯವು. ಏಕೆಂದರೆ ಅವು ಅನಾದಿನಿತ್ಯಗಳಲ್ಲ. ಅವು ಅನಾದಿ ನಿತ್ಯಗಳಾಗಿದ್ದರೆ ಸ್ವಪ್ನಾವಸ್ಥೆಗೆ ಮೊದಲೂ, ಸ್ವಪ್ನ ಕಳೆದ ಮೇಲೂ ತೋರಬೇಕಿತ್ತು. ಆದರೆ ಅವು ಸ್ವಪ್ನಕಾಲದಲ್ಲಷ್ಟೇ ತೋರುತ್ತವೆ. ಅವು ಘಟಾದಿಗಳಂತೆ ಉತ್ಪತ್ತಿ ನಾಶವುಳ್ಳವುಗಳು ಎಂದೂ ಹೇಳಲು ಬರುವುದಿಲ್ಲ. ಹಾಗಿದ್ದರೆ ಘಟಾದಿಗಳಂತೆ ಉತ್ಪತ್ತಿಗೆ ಮುನ್ನವೂ ನಾಶದ ನಂತರವೂ (ಮೃದಾದಿ ರೂಪದಲ್ಲಿ ತೋರುವಂತೆ) ತೋರಬೇಕಾಗಿತ್ತು. ಮಿಂಚಿನಂತೆ ಆ ಕಾಲದಲ್ಲಿಯೇ ಹುಟ್ಟಿ ನಾಶವಾಗುತ್ತವೆ ಎನ್ನುವುದಕ್ಕೆ ಪ್ರಮಾಣವಿಲ್ಲ. ಅವುಗಳಿಗೆ ಉಪಾದಾನಕಾರಣವೂ ನಿಮಿತ್ತಕಾರಣವೂ ಕಾಣುವುದಿಲ್ಲ. ಆದ್ದರಿಂದ ಸ್ವಾಪ್ನ ಪದಾರ್ಥಗಳಿಗೆ ಭ್ರಾಂತಿತ್ವವನ್ನು ಹೇಳಬೇಕು. 'ಸ್ವಪ್ನಮಾಯಾಸರೂಪಾ' 'ಸ್ವಪ್ನ ಮನೋ ರಥೋ ಯಥಾ' ಇತ್ಯಾದಿ ಶ್ರುತಿಸ್ಮೃತಿಗಳಿಂದ ಸ್ವಪ್ನಕ್ಕೆ ಭ್ರಾಂತಿತ್ವವು ವೇದ್ಯವಾಗುವುದು. ಆದ್ದರಿಂದ ಅರ್ಥಜ್ಞಾನರೂಪವಾದ ಸ್ವಪ್ನಾವಸ್ಥೆಯು ಪರಮೇಶ್ವರನ ಅಧೀನವಲ್ಲ. ಹೀಗೆ ಪೂರ್ವಪಕ್ಷ ಬಂದರೆ, ಅದನ್ನು ನಿರಾಕರಿಸಿ ಉಪಾದಾನಾದಿಗಳ ಮೂಲಕ ಸ್ವಾಪ್ನ ಪದಾರ್ಥಗಳಿಗೆ ಸತ್ಯತ್ವವನ್ನು ಸಮರ್ಥಿಸಲು 'ವಾಸನಾ' ಇತ್ಯಾದಿ ವಚನದಿಂದ ಉಪೋದ್ಘಾತವನ್ನು ಹೇಳುತ್ತಾರೆ –

**ವಾಸನಾಃ ಸರ್ವವಸ್ತೂನಾಮನಾದ್ಯನುಭವಗತಾಃ ।**
**ಸಂತ್ಯೈವಾಶೇಷಜೀವಾನಾಮನಾದಿಮನಸಿ ಸ್ಥಿತಾಃ ।।೫।।**

ಎಲ್ಲ ಜೀವರಿಗೂ ಅನಾದಿಯಾದ ಮನಸ್ಸಿನಲ್ಲಿ ಅನಾದಿಯಾದ ಅನುಭವದಿಂದ

ಹುಟ್ಟಿರುವ ಎಲ್ಲ ವಸ್ತುಗಳ ವಾಸನೆಗಳು (ಸಂಸ್ಕಾರಗಳು) ಯಾವಾಗಲೂ ಇರುತ್ತವೆ.

**ತ್ರಿಗುಣಾತ್ಮಕಂ ಮನೋಽಸ್ತ್ಯೇವ ಯಾವನ್ಮುಕ್ತಿಃ ಸದಾತನಮ್ ।**

**ತತ್ರೈವಾಶೇಷಸಂಸ್ಕಾರಾಃ ಸಂಚೀಯಂತೇ ಸದೈವ ಚ ॥೬॥**

ಮುಕ್ತಿಯಾಗುವ ಪರ್ಯಂತ ನಿತ್ಯವಾದ ತ್ರಿಗುಣಾತ್ಮಕವಾದ ಮನಸ್ಸು ಇದ್ದೇ ಇರುತ್ತದೆ. ಆ ಮನಸ್ಸಿನಲ್ಲಿಯೇ ಎಲ್ಲ ವಸ್ತುಗಳ ಸಂಸ್ಕಾರವೂ ಯಾವಾಗಲೂ ಸಂಚಯವಾಗಿರುತ್ತವೆ.

'ಏತಸ್ಮಾಜ್ಜಾಯತೇ ಪ್ರಾಣೋ ಮನಃ ಸರ್ವೇಂದ್ರಿಯಾಣಿ ಚ' ಎಂದು ಮನಸ್ಸಿಗೆ ಜನ್ಮವು ಶ್ರುತವಾಗಿರುವುದರಿಂದ ಅನಾದಿತ್ವವು ಹೇಗೆ ಕೂಡುತ್ತದೆ ಎಂದು ಆಶಂಕಿಸಿದರೆ –

**ಸೂಕ್ಷ್ಮತ್ವೇನ ಲಯೇ ಸಚ್ಚ ಪ್ರಾಕೃತೈರುಪಚೀಯತೇ ।**

**ಸೃಷ್ಟಿಕಾಲೇ ಯದಾ ತನ್ನ ಕುತಃ ಸಂಸಾರಸಂಸ್ಥಿತಿಃ ॥೭॥**

ಮನಸ್ಸು ಸೂಕ್ಷ್ಮರೂಪದಿಂದ ಪ್ರಲಯಕಾಲದಲ್ಲಿ ಇದ್ದೇ ಇರುತ್ತದೆ. ಸೃಷ್ಟಿಕಾಲ ದಲ್ಲಿ ಅಹಂಕಾರಾದಿಗಳಿಂದ ಸ್ಥೂಲರೂಪದಲ್ಲಿ ಉತ್ಪತ್ತಿಯಾಗುತ್ತದೆ. ಸೃಷ್ಟಿಕಾಲದಲ್ಲಿ ಮನಸ್ಸು ಎಂಬುದು ಇಲ್ಲದೇ ಇದ್ದರೆ, ಪುನಃ ಸಂಸಾರಾವಸ್ಥೆಯು ಯಾವುದರಿಂದ ಆಗುವುದು?

**ಸಂಸ್ಕಾರೈರ್ಭಗವಾನೇವ ಸೃಷ್ಟ್ವಾ ನಾನಾವಿಧಂ ಜಗತ್ ।**

**ಸ್ವಪ್ನಕಾಲೇ ದರ್ಶಯತಿ ಭ್ರಾಂತಿಜಾಗ್ರತ್ತ್ವಮೇವ ಹಿ ॥೮॥**

ಎಲ್ಲ ವಸ್ತುಗಳ ವಾಸನೆಗಳೂ ಪ್ರವಾಹತಃ ಅನಾದಿನಿತ್ಯವಾಗಿ ಮನಸ್ಸಿನಲ್ಲಿರುತ್ತವೆ. ಶ್ರೀಹರಿಯೇ ಸ್ವಪ್ನಕಾಲದಲ್ಲಿ ಸಂಸ್ಕಾರರೂಪವಾದ ಉಪಾದಾನ ದ್ರವ್ಯಗಳಿಂದ ನಾನಾ ವಿಧವಾದ ಜಗತ್ತನ್ನು ಸೃಷ್ಟಿಮಾಡಿ ಜೀವನಿಗೆ ತೋರಿಸುತ್ತಾನೆ. ಹಾಗಾದರೆ ಶ್ರುತಿಸ್ಮೃತಿಗಳಲ್ಲಿ ಸ್ವಾಪ್ನಪದಾರ್ಥಗಳಿಗೆ ಭ್ರಾಂತಿತ್ವವನ್ನು ಹೇಳಿದ್ದು ಹೇಗೆ ಕೂಡುವುದು ಎಂದರೆ, ಸ್ವಪ್ನದಲ್ಲಿ ಕಾಣುವ ಪದಾರ್ಥಗಳಿಗೂ ಜಾಗ್ರದವಸ್ಥೆಯಲ್ಲಿ ಕಾಣುವ ಪದಾರ್ಥಗಳಿಗೂ ಅಭೇದವನ್ನು ತಿಳಿಯುವುದೇ ಭ್ರಾಂತಿಯು.

ಹಾಗಾದರೆ ಸ್ವಾಪ್ನ ಪದಾರ್ಥಕ್ಕೆ ಜಾಗ್ರತ್ತ್ವ ಪ್ರತೀತಿಯೇ ಭ್ರಾಂತಿಯೆನ್ನುವುದು ಅಯುಕ್ತ. ಏಕೆಂದರೆ ಸ್ವಪ್ನದಲ್ಲಿ ತೋರುವ ಸ್ವಶಿರಚ್ಛೇದನಾದಿ ಕೆಲವು ಸಂಗತಿಗಳು ಅಸತ್ತಾದ್ದರಿಂದ ಅವುಗಳ ಪ್ರತೀತಿಯೂ ಭ್ರಾಂತಿಯೇ. ಸ್ವಪ್ನದಲ್ಲಿ ಅಂಥವುಗಳು ಉತ್ಪತ್ತಿಯಾಗುವುದಕ್ಕೆ ಯಾವ ಉಪಾದಾನಕಾರಣವೂ ಇರುವುದಿಲ್ಲ. ಸ್ವಶಿರ ಚ್ಛೇದನ ಇತ್ಯಾದಿಗಳ ಅನುಭವದ ಅಭಾವದ ಕಾರಣ ಅವುಗಳ ಸಂಸ್ಕಾರವು ಹುಟ್ಟುವುದು ಅಸಾಧ್ಯ. ಅನುಭವಕ್ಕೆ ಬಾರದೆ ಇದ್ದದೂ ಸಂಸ್ಕಾರವನ್ನು ಹುಟ್ಟಿಸುತ್ತದೆ

ಎಂದು ಹೇಳುವುದಾದರೆ 'ಅದೃಷ್ಟೇ ಚಾಶ್ರುತೇ ಭಾವೇ' ಇತ್ಯಾದಿ ಶ್ರುತಿಸ್ಮೃತಿಗಳ ವಿರೋಧ ಬರುವುದು. ಸ್ವಪ್ನದಲ್ಲಿ ತೋರುವ ಸ್ವಶಿರಚ್ಛೇದನಾದಿಗಳು ಅಸತ್ಯವು. ಆದ್ದರಿಂದ ಸ್ವಪ್ನದಲ್ಲಿ ತೋರುವ ಎಲ್ಲ ಪದಾರ್ಥಗಳೂ ಸತ್ಯಗಳೆಂದು ಹೇಳುವುದು ಅಯುಕ್ತ ಎಂದು ಆಶಂಕಿಸಿದರೆ –

**ಅದೃಷ್ಟೇ ಚಾಶ್ರುತೇ ಭಾವೇ ನ ಭಾವ ಉಪಜಾಯತೇ ।**

**ಅದೃಷ್ಟಾದಶ್ರುತಾದ್ಭಾವಾನ್ನ ಭಾವ ಉಪಜಾಯತೇ ॥೯॥**

**ಇತಿ ಶ್ರುತಿಪುರಾಣೋಕ್ತಿರನಾದಿತ್ವಾತ್ತು ಯುಜ್ಯತೇ ।**

'ಅದೃಷ್ಟೇ ಚ.....' ಎನ್ನುವುದು ಶ್ರುತಿವಾಕ್ಯ 'ಅದೃಷ್ಟಾತ್....' ಎನ್ನುವುದು ಸ್ಮೃತಿವಾಕ್ಯ ಎರಡು ವಾಕ್ಯಗಳ ತಾತ್ಪರ್ಯವೂ ಒಂದೇ ಆಗಿದೆ. ಅದೇನೆಂದರೆ, ಕಾಣಲ್ಪಡದೇ ಇರುವ ಹಾಗೂ ಕೇಳಲ್ಪಡದೇ ಇರುವ ಪದಾರ್ಥದ ವಿಷಯದಲ್ಲಿ ಸಂಸ್ಕಾರ ಹುಟ್ಟುವುದಿಲ್ಲ. ಸಂಸಾರಕ್ಕೆ ಅನಾದಿತ್ವವಿರುವ ಪ್ರಯುಕ್ತ ಒಂದಾನೊಂದು ಜನ್ಮದಲ್ಲಿ ಸ್ವಶಿರಚ್ಛೇದನಾದಿಗಳ ಅನುಭವವು ಸಂಭವವಿರುವುದರಿಂದ ಸಂಸ್ಕಾರವು ಕೂಡುತ್ತದೆ. ಅನುಭವವಿಲ್ಲದೇ ಸಂಸ್ಕಾರದ ಉತ್ಪತ್ತಿಯನ್ನು ಹೇಳಿದರೆ, ಅದು ಮೇಲಿನ ಶ್ರುತಿಸ್ಮೃತಿಗಳಿಗೆ ವಿರುದ್ಧವಾಗುವುದು. ಆದ್ದರಿಂದ ಸ್ವಪ್ನದಲ್ಲಿ ತೋರುವ ಸ್ವಶಿರಚ್ಛೇದನಾದಿಗಳಿಗೆ ಸತ್ಯತ್ವವನ್ನು ಹೇಳಿದರೆ ಯಾವ ಅನುಪಪತ್ತಿಯೂ ಇರದು.

ಹಾಗಾದರೆ ಸ್ವಪ್ನದಲ್ಲಿ ಶಶವಿಷಾಣಾದಿಗಳು ತೋರುವುದು ಹೇಗೆ ಸಾಧ್ಯ? ಏಕೆಂದರೆ ಅತ್ಯಂತಾಸತ್ತಾಗಿರುವ ಅವು ಜನ್ಮಾಂತರದಲ್ಲಿಯೂ ಅನುಭವಕ್ಕೆ ಬರುವುದು ಸಾಧ್ಯವಿಲ್ಲ. ಅನುಭವವಿಲ್ಲದೆ ಅವುಗಳ ಸಂಸ್ಕಾರವು ಹುಟ್ಟುವುದು ಅಸಂಭವ. ಹೀಗೆ ಆಶಂಕಿಸಿದರೆ –

**ಕದಾಚಿದ್ದರ್ಶನಾಯೋಗ್ಯಂ ಯತ್ತತ್ರಾಪಿ ವಿಭಾಗತಃ ॥೧೦॥**

**ದೃಷ್ಟಂ ಸಮಾಧಿಕರಣಂ ದೃಶ್ಯತೇಽತ್ರ ಸ ಚ ಭ್ರಮಃ ।**

**ವಾಸನಾಮಾತ್ರಮೂಲತ್ವಾಜ್ಜಾಗ್ರದ್ವತ್ ಸ್ಪಷ್ಟತಾ ನ ಚ ॥೧೧॥**

ಯಾವತ್ತೂ ನೋಡುವುದಕ್ಕೆ ಅಯೋಗ್ಯವಾದ ಯಾವ ಶಶವಿಷಾಣವು ಸ್ವಪ್ನದಲ್ಲಿ ಕಾಣಲ್ಪಡುವುದೋ ಅದು ಸತ್ಯವೇ ಆಗಿದೆ. ಮೊಲ ಮತ್ತು ಕೋಡುಗಳು ಜಾಗ್ರದಾವಸ್ಥೆಯಲ್ಲಿ ಪ್ರತ್ಯೇಕವಾಗಿಯೇ ಕಾಣಲ್ಪಟ್ಟಿರುತ್ತವೆ. ಆದ್ದರಿಂದ ಅವುಗಳ ಸಂಸ್ಕಾರವು ಉಪಾದಾನಕಾರಣವೆಂಬುದು ಕೂಡುವುದರಿಂದ ಸ್ವಪ್ನದಲ್ಲಿ ಕಾಣುವ ಶಶವಿಷಾಣಾದಿಗಳ ಸಾಮಾನಾಧಿಕರಣ್ಯವು (ಅಂದರೆ ಒಂದೇ ಕಡೆಯಲ್ಲಿರುವುದು) ಯಥಾರ್ಥವೇ. ಆದರೆ ಜಾಗ್ರದವಸ್ಥೆಯಲ್ಲಿಯೂ ಹಾಗೆಯೇ ತಿಳಿಯುವುದು ಮಾತ್ರ ಭ್ರಾಂತಿಯು. ಸ್ವಾಪ್ನಪದಾರ್ಥಗಳಿಗೆ ಸಂಸ್ಕಾರ ಮಾತ್ರವೇ ಉಪಾದಾನಕಾರಣವು. ಆದಪ್ರಯುಕ್ತ ಅವು ಜಾಗ್ರದವಸ್ಥೆಯಲ್ಲಿ ತೋರುವ ಪದಾರ್ಥಗಳಂತೆ ಸ್ಪಷ್ಟವಲ್ಲ,

ಅಂದರೆ ಬಾಹ್ಯಾರ್ಥ ಕ್ರಿಯಾಸಾಮರ್ಥ್ಯವನ್ನು ಹೊಂದಿರುವುದಿಲ್ಲ.

ಇದುವರೆಗಿನ ವ್ಯಾಖ್ಯಾನದ ಒಟ್ಟು ಅಭಿಪ್ರಾಯವಿಷ್ಟು. ಸ್ವಾಪ್ನ ಪದಾರ್ಥಗಳಾದ ಘಟಾದಿಗಳಿಗೆ ಬಾಧವಿಲ್ಲದಿರುವುದರಿಂದ ಅವು ಅಸತ್ತಲ್ಲ. ಸ್ವಪ್ನಕ್ಕೆ ಮೊದಲೂ ಆಮೇಲೂ ತೋರದಿರುವುದರಿಂದ ಅವು ಅನಾದಿನಿತ್ಯಗಳೂ ಅಲ್ಲ. ಉಪಾದಾನ ಕಾರಣವಿಲ್ಲದೆ ಉತ್ಪತ್ತಿಯು ಕೂಡಲಾರದು. ಆದ್ದರಿಂದ ಅವಶ್ಯವಾಗಿ ಉಪಾದಾನ ವನ್ನು ಅಂಗೀಕರಿಸಬೇಕು. ಸ್ವಾಪ್ನ ಘಟಾದಿಗಳ ಉತ್ಪತ್ತಿಗೆ ಬಾಹ್ಯ ಮೃದಾದಿಗಳು ಕಾರಣವಾಗಲಾರವು. ಏಕೆಂದರೆ ಅವು ಬಾಹ್ಯ ಮೃದಾದಿಗಳಿಂದ ಮಾಡಲ್ಪಟ್ಟ ಘಟಾದಿಗಳಂತೆ ಅರ್ಥಕ್ರಿಯಾಕಾರಿಯಲ್ಲ. ಬೇರೆ ಯಾವ ಉಪಾದಾನಕಾರಣವೂ ಇಲ್ಲ. ಆದಪ್ರಯುಕ್ತ ಪರಿಶೇಷಾನುಮಾನದಿಂದ ಸಂಸ್ಕಾರವನ್ನೇ ಉಪಾದಾನವನ್ನಾಗಿ ಹೇಳಬೇಕು. ಅವುಗಳನ್ನು ಜೀವನೇ ಸೃಷ್ಟಿ ಮಾಡುವನು ಎನ್ನಲಿಕ್ಕೆ ಪ್ರಮಾಣವಿಲ್ಲ. ಆದ್ದರಿಂದ ಭಗವಂತನೇ ಜೀವನ ಸಂಸ್ಕಾರವನ್ನು ಉಪಾದಾನಕಾರಣವನ್ನಾಗಿಸಿ ಸ್ವಾಪ್ನ ಪದಾರ್ಥಗಳನ್ನು ಸೃಷ್ಟಿ ಮಾಡಿ ಜೀವನಿಗೆ ತೋರಿಸುತ್ತಾನೆ ಹಾಗೂ ಅವುಗಳು ತತ್ಕಾಲದಲ್ಲಿಯೇ ಉತ್ಪತ್ತಿನಾಶಗಳನ್ನು ಹೊಂದುತ್ತವೆ ಎಂಬುದಕ್ಕೆ ಪರಿಶೇಷಾನು–ಮಾನವೇ ಪ್ರಮಾಣವು. 'ಯ ಏಷ ಸುಪ್ತೇಷು ಜಾಗರ್ತಿ' 'ಏತಸ್ಮಾದ್ಧ್ಯೇವ ಪುತ್ರೋ ಜಾಯತೇ' 'ನ ತತ್ರ ರಥಾಃ' ಇತ್ಯಾದಿ ಶ್ರುತಿಗಳೂ ಸ್ವಪ್ನಸತ್ಯತ್ವ ವಿಷಯದಲ್ಲಿ ಪ್ರಮಾಣವು.

ಇಲ್ಲಿಯವರೆಗಿನ ಗ್ರಂಥದಿಂದ 'ಸಂಧ್ಯೇ ಸೃಷ್ಟಿರಾಹ ಹಿ' 'ನಿರ್ಮಾತಾರಂ ಚೈಕೇ ಪುತ್ರಾದಯಶ್ಚ' 'ಮಾಯಾಮಾತ್ರಂ ತು ಕಾರ್ತ್ಸ್ನ್ಯೇನಾನಭಿವ್ಯಕ್ತಸ್ವರೂಪತ್ವಾತ್' ಎಂಬ ಮೂರು ಸೂತ್ರಗಳು ವ್ಯಾಖ್ಯಾನ ಮಾಡಲ್ಪಟ್ಟವು.

ಮಾಯಾವಾದಿಗಳು ಈ ಸೂತ್ರಗಳಿಗೆ ಅನ್ಯಥಾ ವ್ಯಾಖ್ಯಾನ ಮಾಡುತ್ತಾರೆ. ಸ್ವಪ್ನದಲ್ಲಿ ರಥ, ಬೀದಿ ಪುತ್ರಾದಿಗಳು ಯಾವುವೂ ಇರುವುದಿಲ್ಲ. ಜೀವನ ಕಾಮನೆಗಳೇ ಸ್ವಪ್ನದಲ್ಲಿ ಆಯಾ ರೂಪಗಳನ್ನು ಪಡೆಯುತ್ತವೆ. ಜೀವನೇ ಅವುಗಳ ನಿರ್ಮಾತೃ. ಹೀಗೆ ಕೆಲವರು ವ್ಯಾಖ್ಯಾನ ಮಾಡುತ್ತಾರೆ ಎಂಬುದಾಗಿ ಸೂತ್ರಕಾರರು ಮೊದಲ ಎರಡು ಸೂತ್ರಗಳಲ್ಲಿ ಪೂರ್ವಪಕ್ಷ ಮಾಡಿಕೊಂಡು ಮಾಯಾಮಾತ್ರಂ ಎಂಬ ಸೂತ್ರದಿಂದ ಅದನ್ನು ನಿರಾಕರಿಸುತ್ತಾರೆ. 'ನ ತತ್ರ ರಥಾ ನ ರಥಯೋಗಾ ನ ಪಂಥಾನೋ ಭವಂತ್ಯಥ ರಥಾನ್ರಥಯೋಗಾನ್ಪಂಥಃ ಸೃಜತೇ' ಇತ್ಯಾದಿ ಶ್ರುತಿಗಳಿಂದ ಸ್ವಪ್ನದಲ್ಲಿ ರಥಾದಿಗಳ ಅಭಾವವು ಶ್ರುತವಾಗಿದೆ. ಸ್ವಪ್ನದಲ್ಲಿ ರಥಾದಿಗಳ ದರ್ಶನವು ಕೇವಲ ಮಾಯಾಮಾತ್ರ ಸೃಷ್ಟಿಯು. ಸ್ವಪ್ನದ ಸೃಷ್ಟಿಯಲ್ಲಿ ಪಾರಮಾರ್ಥಿಕ ಲೇಶವೂ ಇಲ್ಲ. ಅದು ಅನಿರ್ವಚನೀಯ. ಏಕೆಂದರೆ ಸ್ವಪ್ನದಲ್ಲಿ ರಥಾದಿಗಳಿಗೆ ಉಚಿತವಾದ ದೇಶವಾಗಲೀ ಅವಕಾಶವಾಗಲೀ ಅಸಂಭವ. ಸ್ವಪ್ನದಲ್ಲಿ ದೇಶ ಕಾಲ ವ್ಯತ್ಯಾಸಗಳು ಕಂಡುಬರುತ್ತವೆ. ಸ್ವಪ್ನದಿಂದ ಎಚ್ಚೆತ್ತ ಮೇಲೆ ಸ್ವಪ್ನದಲ್ಲಿ ಕಂಡ ಪದಾರ್ಥಗಳಿಗೆ ಬಾಧ ಉಂಟಾಗುತ್ತದೆ. ಸ್ವಪ್ನದಲ್ಲಿ ಕಾಣುವ ಸಂಗತಿಗಳಿಗೆ ಆದ್ಯಂತಗಳ ವ್ಯಭಿಚಾರ

ಕಂಡುಬರುವುದರಿಂದ ಅಲ್ಲಿಯೇ ಅವುಗಳಿಗೆ ಬಾಧವೂ ಸಂಭವಿಸುತ್ತದೆ. ಒಂದು ಕ್ಷಣದಲ್ಲಿ ರಥವೆಂದು ಕಂಡಿದ್ದು ಮರುಕ್ಷಣದಲ್ಲಿಯೇ ಮನುಷ್ಯನಾಗಿ ಕಾಣಬಹುದು. ಮುಂದಿನ ಕ್ಷಣದಲ್ಲಿ ಅದೇ ವಸ್ತುವು ವೃಕ್ಷವಾಗಿ ತೋರಬಹುದು. ಆದ್ದರಿಂದ ಸ್ವಾಪ್ನ ಪದಾರ್ಥಗಳಿಗೆ ಪಾರಮಾರ್ಥಿಕತ್ವವಿಲ್ಲ. ಕಾರ್ತ್ಸ್ನ್ಯೇನಾಭಿವ್ಯಕ್ತಸ್ವರೂಪತ್ವಾತ್ ಎಂದರೆ ನೋಡುವವನ ದೃಷ್ಟಿಯಿಂದ ಸ್ವಪ್ನವು ಭಿನ್ನವೋ ಅಭಿನ್ನವೋ ಭಿನ್ನಾ-ಭಿನ್ನವೋ ಎಂಬುದನ್ನು ನಿರ್ವಚನ ಮಾಡಲು ಶಕ್ಯವಿಲ್ಲ. ಆದ್ದರಿಂದ ಅದು ಮಾಯಾಮಾತ್ರ ಅಥವಾ ಅನಿರ್ವಚನೀಯ ಎಂದು ಅದ್ವೈತಿಗಳು ಈ ಸೂತ್ರಕ್ಕೆ ವ್ಯಾಖ್ಯಾನ ಮಾಡುತ್ತಾರೆ.

ಈ ಪ್ರಕಾರವಾಗಿ ಸ್ವಪ್ನಕ್ಕೆ ಅನಿರ್ವಚನೀಯತ್ವವನ್ನು ಪ್ರತಿಪಾದಿಸುವುದಕ್ಕಾಗಿ ಮಾಯಾವಾದಿಯು ಭೇದಾದಿ ವಿಕಲ್ಪ ಪ್ರಶ್ನೆಯಿಂದ ಯಾವ ದೂಷಣವನ್ನು ಮಾಡಿದ್ದಾನೋ ಅದು ಸರ್ವಥಾ ಕೂಡುವುದಿಲ್ಲ. ಏಕೆಂದರೆ ಮೊದಲಿಗೆ ವಿಕಲ್ಪ ಪ್ರಶ್ನೆಯೇ ಕೂಡುವುದಿಲ್ಲ ಎಂದು ಹೇಳುತ್ತ ಮಾಯಾವಾದಿಯ ಮತವನ್ನು ನಿರಾಕರಿಸುತ್ತಾರೆ –

**ಭೇದೋಽಭೇದೋಽಥವಾ ದ್ವಂದ್ವಮಿತಿ ಪ್ರಶ್ನೋ ನ ಯುಜ್ಯತೇ ।**

**ದ್ರಷ್ಟುಃ ಸ್ವಪ್ನಸ್ಯ ದೃಷ್ಟತ್ವಾದ್ಭೇದಸ್ಯೈವಾಖಿಲೈರ್ಜನೈಃ ॥೧೨॥**

ಸ್ವಪ್ನವನ್ನು ನೋಡತಕ್ಕ ಪುರುಷನ ದೆಶೆಯಿಂದ ಸ್ವಪ್ನವು ಭೇದವೋ ಅಭೇದವೋ ಅಥವಾ ಭೇದಾಭೇದವೋ ಎಂಬ ವಿಕಲ್ಪ ಪ್ರಶ್ನೆಯೇ ಕೂಡುವುದಿಲ್ಲ. ಸ್ವಪ್ನ, ಸ್ವಪ್ನದ್ರಷ್ಟ್ರುಗಳಿಗೆ ಭೇದವಿರುವುದಾಗಿಯೇ ಎಲ್ಲ ಜನರ ಅನುಭವದಿಂದ ನಿಶ್ಚಿತವಾಗಿದೆ. ನಿಶ್ಚಿತವಾದ ಅರ್ಥದಲ್ಲಿ ಸಂಶಯವು ಕೂಡುವುದಿಲ್ಲ. ಪ್ರಶ್ನೆಯೇ ದೋಷಯುಕ್ತ. ಆದ್ದರಿಂದ ಸ್ವಪ್ನಸತ್ಯತ್ವದ ಬಗ್ಗೆ ಮಯಾವಾದಿಯು ಮಾಡಿರುವ ದೂಷಣವು ಕೂಡುವುದಿಲ್ಲ ಎಂದು ಪ್ರತಿಪಾದಿಸಿ, ಪ್ರಶ್ನದೋಷಗಳು ಯಾವುವು ಎಂಬುದನ್ನು ಹೇಳುತ್ತಾರೆ –

**ಪ್ರಶ್ನದೋಷಾ ಹಿ ಚತ್ವಾರಃ ಸ್ವವ್ಯಾಹತಿರಸಂಗತಿಃ ।**

**ಸಿದ್ಧಾರ್ಥತಾ ಚ ವೈಫಲ್ಯಂ ನ ತೈಃ ಸ್ಯಾತ್ತತ್ತ್ವನಿರ್ಣಯಃ ॥೧೩॥**

ಪ್ರಶ್ನದೋಷಗಳು ಸ್ವವ್ಯಾಹತಿ, ಅಸಂಗತಿ, ಸಿದ್ಧಸಾಧನತ್ವ ಹಾಗೂ ವೈಫಲ್ಯ ಅಥವಾ ನಿಷ್ಪ್ರಯೋಜನತ್ವ ಎಂದು ನಾಲ್ಕು ವಿಧ. ಇದು ಪ್ರಮಾಣಸಿದ್ಧವು. ಸ್ವವ್ಯಾಹತಾದಿ ಪ್ರಶ್ನೆಗಳಿಂದ ತತ್ತ್ವನಿಶ್ಚಯವು ಸಾಧ್ಯವಿಲ್ಲ.

ಬಂಜೆಯು ಮಕ್ಕಳುಳ್ಳವಳೋ ಅಲ್ಲವೋ ಎಂಬ ಪ್ರಶ್ನೆಯು ಸ್ವವ್ಯಾಹತಿ. ಈಶ್ವರನು ಸುಖಪೂರ್ಣ ಎಂದು ಹೇಳಿದಾಗ ಪ್ರಪಂಚವು ಕ್ಷಣಿಕ ಎಂಬುದಕ್ಕೆ ಪ್ರಮಾಣವೇನು ಎಂದು ಕೇಳುವುದು ಅಸಂಗತಿ. ಎದುರಿಗೇ ಸ್ಪಷ್ಟವಾಗಿ ಘಟವು

ಕಾಣುತ್ತಿರಲು, ಇಲ್ಲಿ ಘಟವು ಇದೆಯೋ ಇಲ್ಲವೋ ಎಂದು ಕೇಳುವುದು ಸಿದ್ಧಸಾಧನತ್ವವು. ಕಾಗೆಗೆ ಎಷ್ಟು ಹಲ್ಲು ಎಂದು ಕೇಳುವುದು ನಿಷ್ಪ್ರಯೋಜಕತ್ವ. ಪ್ರಕೃತದಲ್ಲಿ ಸ್ವಪ್ನ, ಸ್ವಪ್ನದ್ರಷ್ಟೃಗಳಿಗೆ ಭೇದವೆಂಬುದು ಸರ್ವರಿಗೂ ಸಿದ್ಧವಿಷಯಕ ವಾಗಿರುವುದರಿಂದ ವಿಕಲ್ಪಪ್ರಶ್ನೆಯೇ ಅಯುಕ್ತವೆಂದು ಅಭಿಪ್ರಾಯ.

ಇದರಿಂದ ಏನಾಗುವುದೆಂದರೆ, 'ತತ್ತ್ವ' ಇತ್ಯಾದಿ ವಚನದಿಂದ ಉತ್ತರಿಸುತ್ತಾರೆ–

**ತತ್ತ್ವನಿರ್ಣಯವೈಲೋಮ್ಯಂ ಸ್ಯಾದ್ವಾದೇಽಪಿ ಹಿ ನಿಗ್ರಹಃ ।**

**ಉದ್ಭಾವನೀಯಮೇವ ಸ್ಯಾನ್ನ ಕಥಾವಸಿತಿರ್ಭವೇತ್ ॥೧೪॥**

**ವಿಜಿಗೀಷುಕಥಾಯಾಂ ತು ಕಥಾವಸಿತಿಕಾರಣಮ್ ।**

**ಪರಿಹಾರೇಽಪಿ ಸಿದ್ಧತ್ವಂ ದೂಷಣಂ ಪ್ರತಿವಾದಿನಃ ॥೧೫॥**

**ಪ್ರತಿಜ್ಞಾಯಾಂ ತದನ್ಯಸ್ಯ ಸಿದ್ಧತೈವ ಹಿ ಸಾಧಿಕಾ ।**

ಕೇವಲ ಜಲ್ಪವಿತಂಡಗಳಲ್ಲಿ ಮಾತ್ರವಲ್ಲ, ವಾದಕಥೆಯಲ್ಲಿಯೂ ತತ್ತ್ವನಿರ್ಣಯ ವಿರೋಧವು ನಿಗ್ರಹಸ್ಥಾನವಾಗಿಯೇ ಆಗುವುದು. ತತ್ತ್ವನಿರ್ಣಯವೈಲೋಮ್ಯವು ವಾದದಲ್ಲಿ ಉದ್ಭಾವನೀಯವೇ ಆಗುವುದಾದರೂ ಕಥಾಸಮಾಪ್ತಿಗೆ ಕಾರಣವಾಗದು. ಜಲ್ಪವಿತಂಡಗಳಲ್ಲಾದರೂ ನಿಗ್ರಹಸ್ಥಾನವು ಕಥಾಸಮಾಪ್ತಿಗೆ ಕಾರಣವಾಗುವುದು. ಸಿದ್ಧಸಾಧನತ್ವವು ಕೇವಲ ಪ್ರಶ್ನೆಯಲ್ಲಿ ಮಾತ್ರವಲ್ಲ, ಪ್ರತಿವಾದಿಯು ಪ್ರಶ್ನೆಗೆ ಉತ್ತರ ಕೊಡುವ ವಾಕ್ಯದಲ್ಲಿಯೂ ದೂಷಣವಾಗುವುದು. ಪ್ರತಿಜ್ಞಾರ್ಥಕ್ಕೆ ಪ್ರತಿವಾದಿಯನ್ನು ಕುರಿತು ಸಿದ್ಧತ್ವವು ದೂಷಣವೇ. ಪ್ರತಿಜ್ಞಾರ್ಥವೆಂದರೆ ವ್ಯಾಪಕಧರ್ಮಕ್ಕೂ ಸಾಧ್ಯಧರ್ಮಿಗೂ ಇರುವ ಅವ್ಯಾಹತ ಸಂಬಂಧ. ಪ್ರತಿಜ್ಞಾರ್ಥದಿಂದ ಇತರವಾದ ಹೇತ್ವಾದಿ ವಾಕ್ಯಗಳ ಅರ್ಥಕ್ಕೆ ಸಿದ್ಧತ್ವವೇ ಸಾಧ್ಯಸಾಧಕವಾಗುತ್ತದೆ.

ಪ್ರತಿಜ್ಞಾರ್ಥವ್ಯತಿರಿಕ್ತವಾದ ಹೇತ್ವಾದಿ ಅರ್ಥಕ್ಕೆ ಸಿದ್ಧತ್ವವೇ ಸಾಧಕವು ಎಂದು ಹೇಳಿದ್ದರಿಂದ ಅಸಿದ್ಧಿಯು ದೂಷಣವೆಂದಾಗುವುದು. ಆ ಅಸಿದ್ಧಿಯು ಆಶ್ರಯಾಸಿದ್ಧಿ, ಅಪ್ರಸಿದ್ಧವಿಶೇಷಣತ್ವ, ಲಿಂಗಾಸಿದ್ಧಿ, ಪಕ್ಷಧರ್ಮತಾಸಿದ್ಧಿ, ವ್ಯಧಿಕರಣಾಸಿದ್ಧಿ, ವ್ಯಾಪ್ತ್ಯ–ಸಿದ್ಧಿ ಇವೇ ಮೊದಲಾಗಿ ಅನೇಕ ವಿಧವು. ಸಾಮಾನ್ಯವಾಗಿ ಎಲ್ಲ ಅಸಿದ್ಧಿಗಳಿಗೂ ದೂಷಣತ್ವ ಪ್ರಾಪ್ತವಾದರೂ ಅದರಲ್ಲಿ ಅಪವಾದವುಂಟು ಎಂದು ಹೇಳುತ್ತಾರೆ –

**ಆಶ್ರಯವ್ಯಾಶ್ರಯಾಸಿದ್ಧೀ ಸಾಧ್ಯಾಸಿದ್ಧಿಶ್ಚ ದೂಷಣಮ್ ॥೧೬॥**

**ಕೇಷಾಂಚಿನ್ನ ಚ ತೇ ದೋಷಾ ವ್ಯಾಪ್ತೌ ಸತ್ಯಾಂ ಕಥಂಚನ ।**

ಆಶ್ರಯಾಸಿದ್ಧಿ, ವ್ಯಧಿಕರಣಾಸಿದ್ಧಿ, ಸಾಧ್ಯಾಸಿದ್ಧಿಯೂ ಕೂಡ ನೈಯಾಯಿಕಾದಿ ಮತದಲ್ಲಿ ದೂಷಣವು. ಹಾಗಿದ್ದರೂ ವ್ಯಾಪ್ತಿಯಿದ್ದರೆ ಅವುಗಳು ಯಾವುದೇ ರೀತಿಯಿಂದಲೂ ದೋಷಗಳು ಆಗುವುದೇ ಇಲ್ಲ.

ಆಶ್ರಯಾಸಿದ್ಧಿಯಲ್ಲಿ ಅಸದಾಶ್ರಯತ್ವ, ಅಭಾವಾಶ್ರಯತ್ವ, ಅಪ್ರತೀತಾಶ್ರಯತ್ವ, ಪಕ್ಷೀಕೃತ ಆಕಾರದಿಂದ ಅಸತ್ವ ಹಾಗೂ ಸಿದ್ಧಸಾಧನತ್ವ ಎಂಬುದಾಗಿ ಅನೇಕ ವಿಧ. ವ್ಯಾಪ್ತಿಯಿದ್ದರೆ ಅಸದಾಶ್ರಯತ್ವ, ಅಭಾವಾಶ್ರಯತ್ವ, ವ್ಯಧಿಕರಣಾಸಿದ್ಧಿ, ಸಾಧ್ಯಾಸಿದ್ಧಿಗಳು ದೋಷಗಳಾಗುವುದಿಲ್ಲ. ಅಪ್ರತೀತಾಶ್ರಯತ್ವಾದಿಗಳು ದೋಷಗಳೇ ಆಗಿವೆ.

ಹಾಗಾದರೆ ಗೋವಿಗೆ ಕೋಡಿನಂತೆ, ಶೃಂಗತ್ವವಿರುವ ಪ್ರಯುಕ್ತ, ಮನುಷ್ಯನಿಗೂ ಕೋಡಿದೆ ಎನ್ನುವ ಅನುಮಾನದಲ್ಲಿ ಆಶ್ರಯಾಸಿದ್ಧಿಯು ಹೇತುದೂಷಣವೆಂದು ಕಂಡಿದೆ. ಅಂದಮೇಲೆ ಅಸದಾಶ್ರಯತ್ವವು ದೋಷವಲ್ಲ ಎಂದು ಹೇಗೆ ಹೇಳುತ್ತೀರಿ ಎಂದು ಕೇಳಿದರೆ –

**ದೋಷೋ ವ್ಯಾಹತಿರೇವಾಸ್ತಿ ನೃಶೃಂಗಾಸ್ತಿತ್ವಸಾಧನೇ ||೧೭||**

**ಯತ್ರ ವ್ಯಾಹತತಾ ನಾಸ್ತಿ ಕೋऽತಿಸಂಗೋऽಸ್ಯ ಸಾಧನೇ |**

ಮನುಷ್ಯನಿಗೆ ಕೋಡು ಇದೆ ಎಂದು ಸಾಧಿಸಹೊರಟರೆ ಅದಕ್ಕೆ ಪ್ರತ್ಯಕ್ಷದಿಂದ ಬಾಧ ಬರುತ್ತದೆ. ಆದ್ದರಿಂದ ನೃಶಂಗತ್ವಕ್ಕೆ ಪ್ರಮಾಣವಿರೋಧವೇ ದೂಷಣವು, ಅಸದಾಶ್ರಯತ್ವವಲ್ಲ. ಯಾವ ಸಾಧ್ಯದಲ್ಲಿ ಪ್ರಮಾಣಬಾಧವೂ ವ್ಯಭಿಚಾರಾದಿಗಳೂ ಇಲ್ಲವೋ ಅದನ್ನು ಅಸದಾಶ್ರಯತ್ವ ಹೇತುವಿನಿಂದ ಸಾಧಿಸಿದರೂ ಯಾವ ದೋಷವೂ ಇಲ್ಲ.

ಪ್ರಮಾಣವಿರೋಧದಿಂದ ನೃಶೃಂಗತ್ವ ಹೇತುವು ದುಷ್ಟವೆಂದು ಹೇಳಿದರು. ವ್ಯಾಪ್ತ್ಯಾದಿ ಅಂಗಗಳು ಪೂರ್ಣವಾಗಿದ್ದರೆ ಸಾಧ್ಯದ ಸಿದ್ಧಿಯು ಆಗಲೇಬೇಕು. ವ್ಯಾಪ್ತ್ಯಾದಿಗಳು ಇಲ್ಲವಾದರೆ ಅದರಿಂದಲೇ ದೂಷಣತ್ವವು. ಪ್ರಮಾಣಬಾಧದಿಂದ ಆಗುವುದೇನು? ಎಂದು ಆಶಂಕಿಸಿದರೆ –

**ಪ್ರತ್ಯಕ್ಷಾಗಮಮೂಲಾಸ್ತು ನ್ಯಾಯಾಃ ಸರ್ವೇ ಭವಂತಿ ಹಿ ||೧೮||**

**ನ್ಯಾಯಾಭಾಸಾ ಅಮೂಲಾಃ ಸ್ಯುಃ ನ್ಯಾಯಸ್ಯಾನ್ಯಸ್ಯ ತೌ ಪುನಃ |**

ಎಲ್ಲ ನ್ಯಾಯಗಳೂ ಪ್ರತ್ಯಕ್ಷ ಆಗಮಗಳನ್ನೇ ಮೂಲವನ್ನಾಗಿ ಹೊಂದಿವೆ. ಇದು ಪ್ರಸಿದ್ಧ. ಆದ್ದರಿಂದ ಅಮೂಲಗಳಾದ (ಪ್ರತ್ಯಕ್ಷಾಗಮಗಳಿಗೆ ವಿರುದ್ಧವಾದ) ನ್ಯಾಯಗಳು ನ್ಯಾಯಾಭಾಸಗಳೇ ಆಗಿರುತ್ತವೆ.

ಹಾಗಾದರೆ ಅನುಮಾನಮೂಲವಾದ ನ್ಯಾಯವೂ ಇರುವುದರಿಂದ ಎಲ್ಲ ನ್ಯಾಯವೂ ಪ್ರತ್ಯಕ್ಷಾಗಮಮೂಲವು ಎನ್ನುವ ಉಕ್ತಿ ಹೇಗೆ ಕೂಡುತ್ತದೆ ಎಂದರೆ –

ಪ್ರತ್ಯಕ್ಷಾಗಮಮೂಲವಾದ ನ್ಯಾಯದ ದೆಶೆಯಿಂದ ಇತರವಾದ ನ್ಯಾಯಕ್ಕೂ ಪ್ರತ್ಯಕ್ಷಾಗಮಗಳೇ ಮೂಲವು. ಹೀಗೆ ನ್ಯಾಯವು ಸರ್ವಥಾ ಪ್ರತ್ಯಕ್ಷ ಆಗಮಗಳನ್ನು ಅತಿಕ್ರಮಿಸದೇ ಇರುವುದರಿಂದ ಹಾಗೆ ಹೇಳಿದ್ದು.

ಆಗಮವೂ ಕೂಡ ಪ್ರತ್ಯಕ್ಷವೇ ಮೂಲವನ್ನಾಗಿ ಹೊಂದಿದ್ದರೂ ಕೆಲವುಕಡೆ ಪ್ರತ್ಯಕ್ಷಕ್ಕೂ ಮೂಲವಾಗುತ್ತದೆ. ಉದಾಹರಣೆಗೆ ರಾಮಕೃಷ್ಣಾದಿ ಅವತಾರಗಳಲ್ಲಿ ವಿಷ್ಣುತ್ವ ಪ್ರತ್ಯಕ್ಷದ ವಿಷಯಕ್ಕೆ ಆಗಮವೇ ಮೂಲವು. ಆದ್ದರಿಂದ ಎರಡನ್ನೂ ಸ್ವೀಕರಿಸಿದ್ದು. ಅನುಮಾನಕ್ಕೂ ಕೂಡ ಪ್ರತ್ಯಕ್ಷಾಗಮಮೂಲತ್ವವನ್ನು ಹೊಂದಿರುವ ನ್ಯಾಯವೇ ಮೂಲವು, ಸ್ವತಂತ್ರನ್ಯಾಯವಲ್ಲ. ಸ್ವತಂತ್ರನ್ಯಾಯವು ನ್ಯಾಯಾಭಾಸವು. ಆದಕಾರಣ ಅದನ್ನು ಪರಿತ್ಯಾಗ ಮಾಡಬೇಕು.

ಹಾಗಾದರೆ ಪ್ರತ್ಯಕ್ಷವೂ ಕೂಡ ಕೆಲವುಕಡೆ ಆಭಾಸವಾಗಿ ಕಂಡುಬರುವ ಕಾರಣ ಪ್ರಾಮಾಣ್ಯ ನಿರ್ಣಯವು ಹೇಗೆ ಆಗುವುದು ಎಂದು ಆಶಂಕಿಸಿದರೆ –

**ಅದೃಷ್ಟೇ ವ್ಯಭಿಚಾರೇ ತು ಸಾಧಕಂ ತದಿತಿ ಸ್ಫುಟಮ್ ।।೧೯।।**

**ಜ್ಞಾಯತೇ ಸಾಕ್ಷಿಣೈವಾದ್ಧಾ ಮಾನಬಾಧೇ ನ ತದ್ಭವೇತ್ ।**

**ಯತ್ಸಾಕ್ಷಿಣೈವ ಮಾನತ್ವಂ ಮಾನಾನಾಮವಸೀಯತೇ ।।೨೦।।**

ಧೂಮಾದಿ ಲಿಂಗವು ಅಗ್ನಿ ಮೊದಲಾದ ಸಾಧ್ಯವು ಇಲ್ಲದಿರುವ ಸ್ಥಳದಲ್ಲಿ ಕಾಣದೇ ಇದ್ದರೆ ಸಾಧ್ಯವನ್ನು ಸಾಧಿಸಿಕೊಡುವುದು. ಆದರೆ ವ್ಯಭಿಚಾರ ತೋರಿದರೆ ಸಾಧಕವಾಗಲಾರದು. ಹೀಗೆ ಸಾಕ್ಷಿಯಿಂದಲೇ ಸ್ಪಷ್ಟವಾಗಿ ತಿಳಿಯುತ್ತದೆ. ಪ್ರಮಾಣ ಬಾಧವಿದ್ದರೆ ಅದೃಷ್ಟ ವ್ಯಭಿಚಾರಿತ್ವವು ಕೂಡುವುದಿಲ್ಲ.

ಬಾಧಕವಿಲ್ಲದಿದ್ದರೆ ಸಾಧನವು ಸಾಧ್ಯದಲ್ಲಿ ಪ್ರಮಾಣವಾಗುತ್ತದೆ, ಬಾಧಕವಿದ್ದರೆ ಪ್ರಮಾಣವಾಗುವುದಿಲ್ಲ. ಹೀಗೆ ಎಲ್ಲ ಪ್ರಮಾಣಗಳ ಪ್ರಾಮಾಣ್ಯವು ಪ್ರಾಮಾಣ್ಯ ಗ್ರಾಹಕವಾದ ಸಾಕ್ಷಿಯಿಂದಲೇ ನಿಶ್ಚಿತವಾಗುತ್ತದೆ. ಹಾಗಿಲ್ಲದಿದ್ದರೆ ಅನವಸ್ಥೆಯ ಪ್ರಸಂಗ ಬರುವುದು. ಆದ್ದರಿಂದ ಅನುಮಾನಕ್ಕೂ ಪ್ರಾಮಾಣ್ಯವು ಸಾಕ್ಷಿಯಿಂದಲೇ ತಿಳಿಯಲ್ಪಡುತ್ತದೆ.

ಹಾಗಾದರೆ ಪ್ರಾಮಾಣ್ಯವು ಸಾಕ್ಷಿವೇದ್ಯವಾದರೆ, ಸಾಕ್ಷಿಗೆ ಹಿಂದೆ ಹೇಳಿದ ಯಾಥಾರ್ಥ್ಯ ನಿಯಮಕ್ಕೆ ಭಂಗ ಬರುವುದು. ಏಕೆಂದರೆ ಕೆಲವು ವೇಳೆ ಭ್ರಾಂತಿ ಮೊದಲಾದ ಪ್ರಮಾಣವಿಲ್ಲದಿರುವ ಕಡೆಗಳಲ್ಲಿಯೂ ಸಾಕ್ಷಿಯು ಪ್ರಾಮಾಣ್ಯವನ್ನು ಗ್ರಹಿಸಬಹುದು. ಸಾಕ್ಷಿಯು ಭ್ರಮೆಯನ್ನೂ ಪ್ರಮಾಣವೆಂದು ಗ್ರಹಿಸಿದರೆ ನಿಶ್ಶಂಕ ಪ್ರವೃತ್ತಿಯು ಆಗದೇ ಹೋಗುವುದು. ಹೀಗೆ ಆಶಂಕಿಸಿದರೆ –

**ಅಮಾನಸ್ಯ ತು ಮಾನತ್ವಂ ಮಾನಸತ್ವಾಚ್ಚಲಂ ಭವೇತ್ ।**

ಶುಕ್ತಿರಜತಾದಿ ಭ್ರಮಕ್ಕೆ ಪ್ರಾಮಾಣ್ಯವಾದರೂ ಮನೋಜನ್ಯವಾದ್ದರಿಂದ ಅದು ಬಾಧಿತವಾಗುವುದು. ಸಾಕ್ಷಿಜ್ಞಾನವು ಸರ್ವಥಾ ಅಬಾಧಿತವಾದ್ದರಿಂದ ಅದಕ್ಕೇ ಪ್ರಾಮಾಣ್ಯವು. ಆದ್ದರಿಂದ ಸಾಕ್ಷಿಯಾಥಾರ್ಥ್ಯ ನಿಯಮಕ್ಕೆ ಭಂಗವಿರುವುದಿಲ್ಲ.

ಸಾಧ್ಯವ್ಯಭಿಚಾರಿಯಾದ ಲಿಂಗವು ಅಪ್ರಮಾಣವು ಎಂದು ಹೇಳಲಾಯಿತು.

ಆದರಲ್ಲಿ ವಿಶೇಷವನ್ನು ಹೇಳುತ್ತಾರೆ –

**ಉತ್ಸರ್ಗತೋಽಪಿ ಯತ್ರಾಪ್ಯಮಪವಾದವಿವರ್ಜಿತಮ್ ॥೨೧॥**

**ವ್ಯಭಿಚಾರ್ಯಪವಾದೇನ ಮಾನಮೇವ ಭವಿಷ್ಯತಿ ।**

ಯಾವ ಲಿಂಗವು ಸ್ವಾಭಾವಿಕವಾಗಿಯೇ ಅಪವಾದರಹಿತವೆಂದು ನಿಶ್ಚಿತವೇ ಆಗಿದ್ದರೂ ಕಾರಣವಿಶೇಷದಿಂದ ಸಾಧ್ಯವಿಲ್ಲದಿರುವ ಸ್ಥಳದಲ್ಲಿರುತ್ತದೋ ಅದು ಪ್ರಮಾಣವೇ ಆಗುವುದು. ಅದು ಹೇಗೆಂದರೆ –

**ಅತೋ ಹಿ ಭೋಜನಾದೀನಾಮಿಷ್ಟಸಾಧನತಾನುಮಾ ॥೨೨॥**

**ಮಾನಂ ವ್ಯವಹೃತೌ ನಿತ್ಯಂ ವ್ಯಭಿಚಾರೋ ಹಿ ತತ್ರ ಚ ।**

ಉಪಾಧಿ ನಿಮಿತ್ತಕವಾದ ವ್ಯಭಿಚಾರಕ್ಕೆ ಅಪ್ರಮಾಣ್ಯ ಕಾರಣತ್ವವಿಲ್ಲ. ಆದ್ದರಿಂದ ಮುಂದೆ ಆಗತಕ್ಕ ಭೋಜನಾದಿಗಳಿಗೆ ಇಷ್ಟಸಾಧನತ್ವಾನುಮಾನವು ಪ್ರಮಾಣ ವಾಗುವುದು. ಸೋಪಾಧಿಕ ವ್ಯಭಿಚಾರವೂ ಅಪ್ರಾಮಾಣ್ಯಕ್ಕೆ ಕಾರಣವಾಗಿದ್ದರೆ ಆಗ 'ಮುಂದೆ ಆಗಲಿರುವ ಭೋಜನವು ಇಷ್ಟಕ್ಕೆ ಸಾಧನವು ಭೋಜನವಾಗಿರುವುದರಿಂದ ನಿನ್ನೆ ಮಾಡಿದ ಭೋಜನದಂತೆ' ಎನ್ನುವ ಅನುಮಾನವು ಅಪ್ರಮಾಣವೇ ಆಗಬೇಕಾಗುವುದು. ಅಪ್ರಮಾಣವೇ ಆಗಿದ್ದರೆ ವಿವೇಕಿಗಳಿಗೆ ಭೋಜನದಲ್ಲಿ ಪ್ರವೃತ್ತಿ ಕಾಣುತ್ತಿರಲಿಲ್ಲ. ಆದರೆ ಭೋಜನಾದಿಗಳಲ್ಲಿ ನಿತ್ಯವಾದ ನಿಶ್ಶಂಕವಾದ ಪ್ರವೃತ್ತಿ ಕಂಡಿರುವುದರಿಂದ ಸೋಪಾಧಿಕ ವ್ಯಭಿಚಾರವು ಪ್ರಮಾಣವೇ ಆಗುವುದು. ಭೋಜನಾದಿಗಳಲ್ಲಿ ವ್ಯಭಿಚಾರವಿಲ್ಲವಾದ್ದರಿಂದ ಪ್ರಮಾಣವೆಂದು ಏಕೆ ಹೇಳಬಾರದು ಎಂದರೆ ಅದು ಯುಕ್ತವಲ್ಲ. ಭೋಜನತ್ವ ಮುಂತಾದ ಅನುಮಾನದಲ್ಲಿ ಸಾಧ್ಯವಾದ ಇಷ್ಟಸಾಧನತ್ವದಿಂದ ವ್ಯಭಿಚಾರವು ಸ್ಪಷ್ಟವೇ ಆಗಿದೆ. ಏಕೆಂದರೆ ಕೆಲವುಕಡೆ ಅಪಥ್ಯ ಭೋಜನಾದಿಗಳಲ್ಲಿ ಅನಿಷ್ಟಸಾಧನತ್ವವೂ ಕಂಡಿದೆ. ಅಪಥ್ಯತ್ವ ಮುಂತಾದ ಉಪಾಧಿ ನಿಮಿತ್ತಕವಾದ ವ್ಯಭಿಚಾರವು ಅನಿಷ್ಟಸಾಧನತ್ವಕ್ಕೆ ಕಾರಣವಾಗುವುದು.

ಇದರ ಅಭಿಪ್ರಾಯವಿಷ್ಟು. 'ಯದ್ಯತ್ ಭೋಜನಂ ತತ್ತದಿಷ್ಟಸಾಧನಂ' ಎಂದು ವ್ಯಾಪ್ತಿಯಿದ್ದರೂ ಕೇಲವು ವೇಳೆ ಅಪಥ್ಯ ಭೋಜನವು ಅನಿಷ್ಟಸಾಧನವಾದ್ದರಿಂದ ವ್ಯಭಿಚಾರವೇ. ಹಾಗಿದ್ದರೂ ನಿತ್ಯ ಭೋಜನಾದಿ ವ್ಯವಹಾರಕ್ಕೆ ಭಂಗವಿಲ್ಲ. ಆದ್ದರಿಂದ ನಿತ್ಯವಾದ ವ್ಯವಹಾರವು ಬೇರೆ ರೀತಿಯಿಂದ ಕೂಡದಿರುವುದರಿಂದ ಪ್ರಮಾಣಗಳಿಗೆ ಪ್ರಾಮಾಣ್ಯವನ್ನು ಗ್ರಹಿಸತಕ್ಕ ಸಾಕ್ಷಿಯನ್ನು ಅಂಗೀಕರಿಸಬೇಕು.

ಹೀಗೆ ಅಸದಾಶ್ರಯತ್ವಕ್ಕೆ ಹೇತುದೂಷಣವನ್ನು ನಿರಾಕರಿಸಿ ಈಗ ವ್ಯಧಿಕರಣಾ–ಸಿದ್ಧಿಯೂ ಹೇತುದೂಷಣವಲ್ಲವೆಂದು ಹೇಳುತ್ತಾರೆ. ವ್ಯಧಿಕರಣ ಎಂದರೆ ಹೇತು ಮತ್ತು ಸಾಧ್ಯಗಳು ಬೇರೇ ಬೇರೆ ಕಡೆ ಇರುವುದು.

**ವ್ಯಾಪ್ತತ್ವೇ ವ್ಯಾಶ್ರಯತ್ವಂ ತು ಕಥಮೇವ ಹಿ ದೂಷಣಮ್ ॥೨೩॥**

ಹೇತುವಿಗೆ ಸಾಧ್ಯದಿಂದ ವ್ಯಾಪ್ತಿಯಿದ್ದರೆ ಆಗ ವಿಭಿನ್ನಾಶ್ರಯತ್ವರೂಪವಾದ ವ್ಯಧಿಕರಣಾಸಿದ್ಧಿಯು ಹೇಗೆ ತಾನೆ ದೂಷಣವಾದೀತು. ಅಂದರೆ ಹೇಗೂ ದೂಷಣ ವಾಗುವುದಿಲ್ಲ. ಏಕೆಂದರೆ ವ್ಯಾಪ್ತ್ಯಾದಿ ಅಂಗಗಳು ಪೂರ್ಣವಿರುವಾಗ ವ್ಯಧಿಕರಣತ್ವ ಮಾತ್ರದಿಂದ ಹೇತುವಿಗೆ ಅಸಾಧಕತ್ವವು ಎಲ್ಲಿಯೂ ಕಂಡುಬಂದಿಲ್ಲ.

ಇಷ್ಟೇ ಅಲ್ಲದೆ ವ್ಯಧಿಕರಣಕ್ಕೂ ವ್ಯಾಪ್ತ್ಯಾದಿಗಳು ಇರುವುದರಿಂದ ಸಾಧಕತ್ವವು ದೃಷ್ಟವಾಗಿದೆ ಎನ್ನುತ್ತಾರೆ –

**ರೋಹಿಣ್ಯುದಯ ಆಸನ್ನಃ ಕೃತ್ತಿಕಾಭ್ಯುದಿತಾ ಯತಃ ।**

**ಇತ್ಯುಕ್ತೇ ಸಾಧನಂ ನೋ ಕಿಂ ನ ಹ್ಯಾಜ್ಞೈವಾತ್ರ ಸಾಧಿಕಾ ॥೨೪॥**

ಕೃತ್ತಿಕಾನಕ್ಷತ್ರದ ಉದಯವನ್ನು ಕಂಡು ರೋಹಿಣಿಯ ಉದಯ ಸಮೀಪಿಸಿತು ಎಂದು ಹೇಳಿದರೆ, ಅದು ವ್ಯಧಿಕರಣವಾಗಿದ್ದರೂ, ಸಾಧ್ಯಸಿದ್ಧಿಗೆ ಅಂಗವಾಗುವುದಿಲ್ಲ ಎಂದು ಹೇಳುವ ಹಾಗಿಲ್ಲ. ಅದು ಆಗಿಯೇ ಆಗುತ್ತದೆ ಎಂದು ಅಭಿಪ್ರಾಯ.

ಕಾಲಾದಿರೂಪವಾದ ಅಧಿಕರಣವನ್ನು ಇಟ್ಟುಕೊಂಡು ಪ್ರಯೋಗ ವಿಪರಿಣಾಮ ವನ್ನು ಮಾಡಬೇಕೆನ್ನುವ ನೈಯಾಯಿಕರ ವಾದವನ್ನು 'ನ ಹಿ' ಇತ್ಯಾದಿ ವಚನದಿಂದ ನಿರಾಕರಿಸುತ್ತಾರೆ. 'ಅತ್ರ' ಉಪಪತ್ತಿಸಿದ್ಧವಾದ ಅರ್ಥದಲ್ಲಿ, 'ಆಜ್ಞೈವ' ಸಮಯ ಮಾತ್ರವೇ, 'ನ ಸಾಧಿಕಾ ಹಿ' ಸಾಧಕವಾಗುವುದಿಲ್ಲ. ಇದು ಪ್ರಸಿದ್ಧವು.

ಹೀಗೆ ವ್ಯಧಿಕರಣಾಸಿದ್ಧಿಯು ದೂಷಣವಲ್ಲವೆಂದು ನಿರೂಪಿಸಿದರು. ಹಾಗೆಯೇ ಸಾಧ್ಯವಿಶೇಷಣದ ಅಪ್ರಸಿದ್ಧಿಯೂ ದೂಷಣವಾಗದೆಂದು ಹೇಳುತ್ತಾರೆ. ಹಾಗಾದರೆ ಜಗತ್ತು ಸದಸದ್ವಿಲಕ್ಷಣವೆನ್ನುವ ಪಕ್ಷವನ್ನು ಅಪ್ರಸಿದ್ಧಸಾಧ್ಯವಿಶೇಷಣವೆಂಬ ಹೇತುವಿ ನಿಂದಲೇ ದೂಷಿಸಬೇಕಾಗುತ್ತದೆ. ಆದ್ದರಿಂದ ಅಪ್ರಸಿದ್ಧಸಾಧ್ಯವಿಶೇಷಣವು ದೂಷಣ ವಲ್ಲವೆಂದು ಹೇಗೆ ಹೇಳುತ್ತೀರಿ ಎಂದು ಆಶಂಕಿಸಿದರೆ –

**ಅನ್ಯತ್ಸದಸತೋರ್ವಿಶ್ವಮಿತಿ ಚ ವ್ಯಾಹತೇರಮಾ ।**

**ಅಸಿದ್ಧಸಾಧನೇ ದೋಷಃ ಕೋ ವ್ಯಾಪ್ತಿರ್ಯದಿ ವಿದ್ಯತೇ ॥೨೫॥**

ವಿಶ್ವವು ಸತ್ತೂ ಅಲ್ಲ ಅಸತ್ತೂ ಅಲ್ಲ, ಇವೆರಡಕ್ಕಿಂತ ವಿಲಕ್ಷಣ ಎನ್ನುವ ಪ್ರತಿಜ್ಞೆಯು ಸ್ವವಚನವಿರೋಧ ಬರುವುದರಿಂದ ಅಪ್ರಮಾಣ. ವ್ಯಾಪ್ತಿ ಮುಂತಾದವು ಎಲ್ಲಿ ಇರುತ್ತದೋ ಅಲ್ಲಿ ಅಪ್ರಸಿದ್ಧವಾದುದನ್ನು ಸಾಧಿಸಿದರೆ ಯಾವ ದೋಷವೂ ಇರುವುದಿಲ್ಲ.

**ವ್ಯಾಪ್ತಿಶ್ಚ ವ್ಯತಿರೇಕೇಣ ತತ್ರ ತೈಶ್ಚಾವಗಮ್ಯತೇ ।**

ಕೇವಲ ವ್ಯತಿರೇಕೀ ಸಾಧನಗಳ ಸಮೂಹದಲ್ಲಿ, ಅಪ್ರಸಿದ್ಧಗಳಾದ ಸಾತ್ಮಕತ್ವಾದಿ ಸಾಧ್ಯಗಳಿಂದ ವ್ಯಾಪ್ತಿಯೂ ಕೂಡ ಇದೆ. ಪಕ್ಷಧರ್ಮತ್ವವು ಮಾತ್ರ ಇರುವುದಿಲ್ಲ.

ವ್ಯತಿರೇಕವಾದ, ಅಂದರೆ ಸಾಧ್ಯಾಭಾವಕ್ಕೆ ಸಾಧನಾಭಾವ ವ್ಯಾಪ್ತವಾದ, ಲಿಂಗದಿಂದ ವ್ಯಾಪ್ತಿಯು ತಿಳಿಯಲ್ಪಡುತ್ತದೆ.

ಅಭಾವದ ಸಾಧನೆಯಲ್ಲಿ ಅಪ್ರಸಿದ್ಧ ವಿಶೇಷಣತ್ವವು ದೂಷಣವಾಗುವುದಿಲ್ಲ. ಅಭಾವದ ಅಭಾವವು ಭಾವರೂಪವಾದುದರಿಂದ ಪ್ರತಿಯೋಗಿಜ್ಞಾನದ ಅಪೇಕ್ಷೆ ಇರುವುದಿಲ್ಲ. ಆದರೆ ವ್ಯಾಪ್ತ್ಯಾದಿಗಳನ್ನು ಹೇಳಲಿಕ್ಕೆ ಬಾರದ ಸ್ಥಳಗಳಲ್ಲಿ ಅಪ್ರಸಿದ್ಧ ವಿಶೇಷಣತ್ವವು ದೂಷಣವೇ ಆಗುವುದು. ಆದಪ್ರಯುಕ್ತ ಕೇವಲ ವ್ಯತಿರೇಕಿಯ ಪ್ರಾಮಾಣ್ಯವನ್ನವಲಂಬಿಸಿ, ಅಪ್ರಸಿದ್ಧವಿಶೇಷಣತ್ವಕ್ಕೆ ದೂಷಣತ್ವವನ್ನು ನಿರಾಕರಿಸ ಕೂಡದು ಎಂದು ಆಶಂಕಿಸಿದರೆ –

**ಅಪ್ರಸಿದ್ಧಸ್ಯ ಸಾಧ್ಯಸ್ಯ ಸಾಧಕತ್ವಂ ಯದೇಷ್ಯತೇ ||೨೬||**

**ಲಿಂಗಸ್ಯೋಕ್ತೌ ವಿಶೇಷೋಽಯಂ ಕೇನ ಮಾನೇನ ಗಮ್ಯತೇ |**

ಹೇತುವಿಗೆ ಅಪ್ರಸಿದ್ಧವಾದ ಸಾಧ್ಯದ ಸಾಧಕತ್ವವು ಅಂಗೀಕೃತವಾದ ಪಕ್ಷದಲ್ಲಿ ಆಗ ಈ ವಚನದಲ್ಲಿ ವಿಶೇಷವು ಯಾವ ಪ್ರಮಾಣದಿಂದ ತಿಳಿಯಲ್ಪಡುತ್ತದೆ ? ಯಾವುದರಿಂದಲೂ ತಿಳಿಯಲ್ಪಡುವುದಿಲ್ಲ ಎಂದರ್ಥ. ಅಪ್ರಸಿದ್ಧವಿಶೇಷಣತ್ವವು ಕೇವಲವ್ಯತಿರೇಕಿಸಾಧಕವಾದ್ದರಿಂದ ಅದಕ್ಕೆ ದೂಷಣತ್ವವಿರುವುದಿಲ್ಲ.

ವ್ಯತಿರೇಕವ್ಯಾಪ್ತಿಯೇ ಸಾಧ್ಯದ ಸಿದ್ಧಿಗೆ ಅಂಗವೆಂದು ಹೇಳಿದರೂ, ವ್ಯತಿರೇಕ ವ್ಯಾಪ್ತಿಯ ಜ್ಞಾನವು ಅವಶ್ಯಕ. ವ್ಯತಿರೇಕವಾದರೋ ಪ್ರತಿಯೋಗಿಜ್ಞಾನಾಧೀನವಾದ ಜ್ಞಾನವುಳ್ಳದ್ದೇ ಆಗಿದೆ. ಆದಕಾರಣ ಪ್ರತಿಯೋಗಿಯಿಲ್ಲದಿರುವ ಅಭಾವಗಳಿಗೂ ವ್ಯತಿರೇಕಿಯು ವ್ಯಾಪ್ತಿಯನ್ನು ಹೇಗೆ ಗ್ರಹಿಸೀತು? ಈ ಹಿಂದೆ ಹೇಳಿದ ಉಕ್ತಿ ವಿಶೇಷಗಳಿಂದಲೇ ಸ್ವಲ್ಪಮಟ್ಟಿಗೆ ಪ್ರತಿಯೋಗಿಯ ಜ್ಞಾನವಾಗುತ್ತಿರಲು, ವ್ಯಾಪ್ತಿಯು ಸುಲಭ ಗ್ರಾಹ್ಯವಾಗುವುದು. ಹೀಗಿರುವಾಗ ಪ್ರತಿಜ್ಞಾವಾಕ್ಯವು ತಿಳಿಯದ ಪದಾರ್ಥ ಜ್ಞಾನವುಳ್ಳದ್ದಾಗುವ ಸಂಭವವಿಲ್ಲ ಎಂದು ಆಶಂಕಿಸಿದರೆ –

**ಸಾಧನಂ ಪರಮಾಣ್ವಾದೇರ್ಯದ್ಯಸಿದ್ಧಸ್ಯ ಚೇಷ್ಯತೇ ||೨೭||**

**ಯಥಾನುಭವಮೇವೈತನ್ನಾಂಗೀಕಾರ್ಯಂ ಕುತಸ್ತದಾ |**

ಅಪ್ರಸಿದ್ಧವಾದ ಪರಮಾಣು ಮುಂತಾದವುಗಳಿಗೆ ಅನುಭವಾನುಸಾರವಾಗಿಯೇ ಸಾಧನವು ಅಂಗೀಕರಿಸಲ್ಪಡುವುದಾದರೆ, ಅದೇ ಮಾರ್ಗವನ್ನನುಸರಿಸಿ ವ್ಯತಿರೇಕಿ ಸಾಧ್ಯಸಾಧನವನ್ನೂ ಕೂಡ ಏಕೆ ಅಂಗೀಕರಿಸಬಾರದು?

'ಯತ್ರ' ಇತ್ಯಾದಿ ವಚನದಿಂದ ಉಪಸಂಹಾರ ಮಾಡುತ್ತಾರೆ –

**ಯತ್ರ ನಾತಿಪ್ರಸಂಗೋಽಸ್ತಿ ಮಾನಂ ನ ಚ ವಿಪರ್ಯಯೇ ||೨೮||**

**ಕ್ಲಿಷ್ಟಕಲ್ಪನಯೈವಾತ್ರ ಸಾಧ್ಯಮಿತ್ಯತಿದುರ್ವಚಃ |**

ಎಲ್ಲಿ ಅನ್ವಯವ್ಯಾಪ್ತ್ಯಾದಿಗಳನ್ನು ಹೇಳಿ ಸಾಧಿಸಬೇಕೆಂದು ನಿಯಾಮಕವಾದ ಪ್ರಮಾಣವೂ ಇಲ್ಲವೋ, ಹಾಗೆ ಸಾಧಿಸದಿದ್ದರೆ ಅತಿಪ್ರಸಂಗವೂ ಇಲ್ಲವೋ, ಅಂಥಹ ಕೇವಲವ್ಯತಿರೇಕೀ ವಿಷಯದಲ್ಲಿ ಕ್ಲಿಷ್ಟವಾದ ಕಲ್ಪನೆಯಿಂದಲೇ ಸಾಧಿಸಬೇಕೆಂದು ಹೇಳುವುದು ಅತಿದುಷ್ಟವಾದ ವಚನವು.

ಕೇವಲವ್ಯತಿರೇಕಿಗೆ ಸಪಕ್ಷವಿಲ್ಲದಿರುವುದರಿಂದ 'ಸಪಕ್ಷೇ ಸತ್ವ' ಎನ್ನುವ ಅವಯವವು ಕಡಿಮೆಯಾದ್ದರಿಂದ, ನ್ಯೂನವಾದ ಅವಯವವುಳ್ಳ ಅನುಮಾನವು ಅಪ್ರಸಿದ್ಧವಾದ ಸಾಧ್ಯವನ್ನು ಸಾಧಿಸುವಲ್ಲಿ ಪ್ರಮಾಣವಲ್ಲ ಎನ್ನುವ ಪಕ್ಷವನ್ನು ಈಗ ನಿರಾಕರಿಸುತ್ತಾರೆ –

**ಪರಿಶೇಷೋ ಮಿಥಃಸಿದ್ಧಿಶ್ಚಕ್ರಕಸ್ವಾಶ್ರಯಾದಯಃ ।।೨೯।।**

**ಅಸಿದ್ಧಸಾಧಕತ್ವೇನ ಪಂಚಾವಯವತಾಂ ವಿನಾ ।**

**ಅಂಗೀಕಾರ್ಯಾಃ ಸಮಸ್ತೈಸ್ತನ್ನಿಯಮಃ ಕಿಂ ನಿಬಂಧನಃ ।।೩೦।।**

ಪರಿಶೇಷ, ಮಿಥಸ್ಸಿದ್ಧಿ, ಚಕ್ರಕ, ಸ್ವಾಶ್ರಯ, ಅನವಸ್ಥಾ ಇವೇ ಮುಂತಾದವು ಅಸಿದ್ಧವಾದುದನ್ನು ಸಾಧಿಸಿಕೊಡುವುದರಿಂದ, ಪಂಚಾವಯವತ್ವವನ್ನು ಹೊರತು ಪಡಿಸಿ (ಅಂದರೆ ಅನುಮಾನದಲ್ಲಿ ಪಕ್ಷಧರ್ಮತಾ ಮೊದಲಾದ ಐದು ಅವಯವಗಳು ಇರಲೇಬೇಕೆಂಬ ನಿಯಮವನ್ನು ಬಿಟ್ಟು), ಪರಿಶೇಷಾದಿಗಳನ್ನು ಎಲ್ಲ ವಾದಿಗಳೂ ಅನುಮಾನಗಳೆಂದು ಅಂಗೀಕರಿಸಬೇಕು. ಪಂಚಾವಯವತ್ವವು ಅವಶ್ಯಕ ಎನ್ನುವ ನಿಯಮಕ್ಕೆ ಯಾವ ನಿಯಾಮಕವಿದೆ? ಅಂದರೆ ಈ ನಿಯಮಕ್ಕೆ ಕಾರಣವೇ ಇಲ್ಲ ಎಂದರ್ಥ. ಪಂಚಾವಯವತ್ವವಿಲ್ಲದಿದ್ದರೂ ಅನುಮಾನತ್ವವಿದ್ದರೆ ಪ್ರಾಮಾಣ್ಯ ಸಾಧನೆಗೆ ಯಾವ ಬಾಧಕವೂ ಇಲ್ಲ. ಆದ್ದರಿಂದ ನ್ಯೂನಾವಯವತ್ವವುಳ್ಳ ಅನುಮಾನವು ಪ್ರಮಾಣವಲ್ಲ ಎನ್ನುವ ಈ ದೂಷಣವು ಯುಕ್ತವಲ್ಲ.

ಪ್ರಸಕ್ತವಾದ ಎರಡು ವಸ್ತುಗಳಲ್ಲಿ ಒಂದನ್ನು ಪ್ರತಿಷೇಧ ಮಾಡಿದರೆ ಉಳಿಯುವ ವಸ್ತುವಿಗೆ ಸಂಬಂಧಿಸಿದ ಬುದ್ಧಿಯು ಪರಿಶೇಷ. ಎರಡು ವಸ್ತುಗಳಿಗೆ ಪರಸ್ಪರ ಅಪೇಕ್ಷೆಯಿಂದ ಉತ್ಪತ್ತಿಯಾಗಲೀ ಜ್ಞಪ್ತಿಯಾಗಲೀ ಅಂಗೀಕರಿಸುವುದು ಮಿಥಸ್ಸಿದ್ಧಿ. ಅನೇಕ ವಸ್ತುಗಳಿಗೆ ಚಕ್ರದಂತೆ ಪರಸ್ಪರ ಅಪೇಕ್ಷೆಯಿಂದ ಉತ್ಪತ್ತಿ, ಜ್ಞಪ್ತಿಗಳನ್ನು ಹೇಳುವುದು ಚಕ್ರಕ. ತನ್ನನ್ನು ಅಪೇಕ್ಷಿಸಿಯೇ ತನಗೆ ಉತ್ಪತ್ತ್ಯಾದಿಗಳನ್ನು ಹೇಳುವುದು ಸ್ವಾಶ್ರಯ. ಮೊದಲನೆಯದನ್ನು ಸಾಧಿಸಲು ಎರಡನೆಯ ವಸ್ತುವಿನ ಅಪೇಕ್ಷೆ, ಅದನ್ನು ಸಾಧಿಸಲು ಮೂರನೆಯ ವಸ್ತುವಿನ ಅಪೇಕ್ಷೆ, ಅದಕ್ಕೆ ಮತ್ತೊಂದರ ಅಪೇಕ್ಷೆ ಹೀಗೆ ಮುಗಿಯದ ಪರಂಪರೆಯೇ ಅನವಸ್ಥೆ.

ಹೀಗೆ ಆಶ್ರಯಾಸಿದ್ಧಿ ಮೊದಲಾದವುಗಳು ದೂಷಣವಲ್ಲವೆಂದು ಉಪಪಾದಿಸಿ, 'ಪರಿಹಾರರೂಪವಾದ ವಾಕ್ಯದಲ್ಲಿಯೂ ಸಿದ್ಧತ್ವವು ದೂಷಣವು' ಎಂದು ಯಾವುದು ಹೇಳಲ್ಪಟ್ಟಿದೋ ಅದು ಯುಕ್ತವಲ್ಲ. ವಾದದಲ್ಲಿ ನಿಗ್ರಹಸ್ಥಾನದ ಅಭಾವವು

ಹೇಳಲ್ಪಟ್ಟಿದೆ ಎನ್ನುವ ಆಶಂಕೆಯನ್ನು 'ಸಿದ್ಧಸಾಧನತಾಯಾಂ' ಎಂಬ ವಚನದಿಂದ ಪರಿಹರಿಸುತ್ತಾರೆ –

**ಸಿದ್ಧಸಾಧನತಾಯಾಂ ಚ ನ ಕಥಾವಸಿತಿರ್ಭವೇತ್ ।**

ಹೇಗೆ ಸಿದ್ಧಪ್ರಶ್ನಾದಿಗಳನ್ನು ಮಾಡಿದರೂ ವಾದಕಥೆಯು ಮುಕ್ತಾಯವಾಗದೋ ಹಾಗೆಯೇ ಸಿದ್ಧಾರ್ಥವನ್ನು ಸಾಧಿಸಿದರೂ ಕಥಾಸಮಾಪ್ತಿಯು ಆಗಲಾರದು.

'ತದನ್ಯಸ್ಯ ಸಿದ್ಧತೈವ ಹಿ ಸಾಧಿಕಾ' ಎನ್ನುವುದರಿಂದ ಹೇತುವಿಗೆ ವ್ಯಾಪ್ತಿಯ ಅಸಿದ್ಧಿಯೂ, ಸ್ವರೂಪದ ಅಸಿದ್ಧಿಯೂ ದೂಷಣವೆಂದು ಸೂಚಿತವಾಗುವುದು. ಈ ವಿಷಯದಲ್ಲಿ ಕೆಲವರು ಹೀಗೆ ಹೇಳುತ್ತಾರೆ. ವಾದಿ ಪ್ರತಿವಾದಿಗಳ ಮಧ್ಯದಲ್ಲಿ ಒಬ್ಬರ ಮತದಿಂದ ಅಥವಾ ಇಬ್ಬರ ಮತದಿಂದಲೂ ಎಂಬುದಾಗಿ ವ್ಯಾಪ್ತ್ಯಭಾವಾದಿಗಳಲ್ಲಿ ಎರಡು ವಿಧ. ಇನ್ನು ಕೆಲವರು, ವಸ್ತುವಿನಲ್ಲಿ ವಿಕಲ್ಪವು ಅಸಂಭವವಾದ್ದರಿಂದ ಅನ್ಯತರ ಅವ್ಯಾಪ್ತ್ಯಾದಿಯೆಂಬುದು ಇಲ್ಲವೇ ಇಲ್ಲವೆನ್ನುತ್ತಾರೆ. ಇದರಲ್ಲಿ ತತ್ತ್ವವು ಯಾವುದೆಂದು ಆಕಾಂಕ್ಷೆ ಬಂದರೆ ಅದನ್ನು ಹೇಳುತ್ತಾರೆ –

**ವ್ಯಭಿಚಾರೋ ಹೇತ್ವಸಿದ್ಧಿರೇಕಪಕ್ಷೇಽಪಿ ದೂಷಣಮ್ ॥೩೧॥**

ಇಲ್ಲಿ ವ್ಯಭಿಚಾರ ಪದದಿಂದ ಅವ್ಯಾಪ್ತಿಯನ್ನು ಮಾತ್ರ ತೆಗೆದುಕೊಳ್ಳಬೇಕು. ವಾದಿಪ್ರತಿವಾದಿಗಳಲ್ಲಿ ಉಭಯಪಕ್ಷಗಳಲ್ಲಿ ಮಾತ್ರವಲ್ಲದೆ ಕೇವಲ ಒಂದು ಪಕ್ಷದಲ್ಲಿಯೂ ಕೂಡ ಅವ್ಯಾಪ್ತಿ ಮತ್ತು ಹೇತ್ವಸಿದ್ಧಿಗಳು ದೂಷಣವೇ.

ದೋಷಗಳಲ್ಲಿ ಪ್ರತ್ಯೇಕವಾಗಿ ದೃಷ್ಟಾಂತದೋಷಗಳು ಎಂಬುದಾಗಿ ಇರುವುದಿಲ್ಲ. ಅವು ಯಥಾಯೋಗ್ಯವಾಗಿ ಹೇತು ದೋಷಗಳಲ್ಲಿಯೇ ಅಂತರ್ಭಾವವಾಗುತ್ತವೆ ಎಂದು ಕೇಲವರು ಹೇಳುತ್ತಾರೆ. ಅವರನ್ನು ಕುರಿತು ಹೇಳುತ್ತಾರೆ –

**ಸಾಧ್ಯಸಾಧನವೈಕಲ್ಯಂ ದೃಷ್ಟಾಂತಸ್ಯ ವಿಶೇಷಣೇ ।**

**ವೈಯರ್ಥ್ಯಮೇಕಾಸಿದ್ಧೌ ಚ ವಿಶಿಷ್ಟಾಸಿದ್ಧಿರೇವ ಹಿ ॥೩೨॥**

ಸಾಧ್ಯ ಮತ್ತು ಸಾಧನವೈಕಲ್ಯಗಳು ಹೇತ್ವಾಭಾಸದಲ್ಲಿ ಸೇರಿದರೂ ಅವು ದೃಷ್ಟಾಂತವನ್ನು ಆಶ್ರಯಿಸಿರುವುದರಿಂದ ದೃಷ್ಟಾಂತದ ದೋಷಗಳೇ ಎನಿಸುತ್ತವೆ. ಸಾಧ್ಯ ವೈಕಲ್ಯ, ಸಾಧನವೈಕಲ್ಯ, ಉಭಯವೈಕಲ್ಯ ಮತ್ತು ಆಶ್ರಯಹೀನತ್ವ ಎಂದು ನಾಲ್ಕು ಸಾಧರ್ಮ್ಯ ದೋಷಗಳು ಹಾಗೂ ಸಾಧ್ಯಾವ್ಯಾವೃತ್ತಿ, ಸಾಧನಾವ್ಯಾವೃತ್ತಿ, ಉಭಯಾವ್ಯಾವೃತ್ತಿ ಮತ್ತು ಆಶ್ರಯಹೀನತ್ವ ಎಂದು ನಾಲ್ಕು ವೈಧರ್ಮ್ಯ ದೋಷಗಳು, ಹೀಗೆ ಒಟ್ಟು ಎಂಟು ಪ್ರಕಾರದ ದೃಷ್ಟಾಂತದೋಷಗಳನ್ನು ಕೆಲವರು ಹೇಳುತ್ತಾರೆ. ಅದು ಸರಿಯಲ್ಲ. ದೃಷ್ಟಾಂತದಲ್ಲಿ ಸಾಧ್ಯವೈಕಲ್ಯ ಹಾಗೂ ಸಾಧನ ವೈಕಲ್ಯಗಳು ದೂಷಣಗಳು. ಹಾಗೆಯೇ ಸವಿಶೇಷಣಕ್ಕೂ ವಿಶೇಷಣವೈಯರ್ಥ್ಯವು ದೂಷಣವು. ವಿಶೇಷಣ ವಿಶೇಷ್ಯಗಳಲ್ಲಿ ಒಂದಕ್ಕೆ ವೈಯರ್ಥ್ಯದಿಂದ ಅಸಿದ್ಧಿಯಿದ್ದರೆ

ವಿಶಿಷ್ಟಾಸಿದ್ಧಿಯೂ ತಪ್ಪಿದ್ದಲ್ಲ.

ಹಾಗಾದರೆ ಪ್ರಶ್ನದೋಷಗಳಲ್ಲಿ ನಾಲ್ಕು ವಿಧವೆಂದು ಹೇಳಿ ಅದರಲ್ಲಿ ವೈಫಲ್ಯ ಮತ್ತು ಅಸಂಗತಿಗಳಿಗೆ ದೋಷತ್ವವನ್ನು ಹೇಳಿದ್ದು ಸರಿಯಲ್ಲ. ಏಕೆಂದರೆ ಅವುಗಳಲ್ಲಿ ದೋಷಗಳು ಹುಟ್ಟುವುದೇ ಅಶಕ್ಯ ಎಂದು ಆಶಂಕಿಸಿದರೆ –

**ಅಪ್ರಯೋಜನತಾ ತತ್ರ ಪ್ರಥಮಪ್ರಶ್ನದೂಷಣಮ್ ।**

ಪ್ರಶ್ನದೋಷಗಳಲ್ಲಿ ಅಪ್ರಯೋಜನತ್ವವೆನ್ನುವುದು ಪ್ರಥಮಪ್ರಶ್ನದಲ್ಲಿ ಕಂಡು ಬರುವುದು. ಉತ್ತರೋತ್ತರ ಪ್ರಶ್ನಗಳಲ್ಲಿ ಅದನ್ನು ನಿಶ್ಚಯಿಸುವುದು ಅಶಕ್ಯವಾದರೂ, ಪ್ರಥಮಪ್ರಶ್ನದಲ್ಲಿ ಅಪ್ರಯೋಜನತ್ವಕ್ಕೆ ದೂಷಣತ್ವದ ಶಂಕೆಯು ಶಕ್ಯವೇ ಆಗಿದೆ.

ಹೀಗಾದರೆ ಆರೇ ನಿಗ್ರಹಸ್ಥಾನಗಳು ಎನ್ನುವ ನಿಯಮಕ್ಕೆ ಭಂಗ ಬರುವುದು ಎಂದು ಆಶಂಕಿಸಿದರೆ –

**ಸಿದ್ಧಪ್ರಶ್ನಾದಿಕಂ ಯತ್ತದಾಧಿಕ್ಯಾಂತರ್ಗತಂ ಭವೇತ್ ॥೩೩॥**

ಸಿದ್ಧಪ್ರಶ್ನ, ಸಿದ್ಧಸಾಧನ, ಪ್ರಶ್ನವೈಯರ್ಥ್ಯಗಳು ನಿಗ್ರಹಸ್ಥಾನದಲ್ಲಿಯೇ ಒಂದಾದ ಆಧಿಕ್ಯದಲ್ಲಿಯೇ ಅಂತರ್ಭಾವ ಹೊಂದುತ್ತವೆ. ಆದ್ದರಿಂದ ಆರೇ ನಿಗ್ರಹಸ್ಥಾನಗಳು ಎನ್ನುವ ನಿಯಮಕ್ಕೆ ಭಂಗವಿಲ್ಲ.

ಕೆಲವರು ಅರ್ಥಾಪತ್ತ್ಯಾದಿಗಳನ್ನು ಅನುಮಾನಾದಿಗಳಿಂದ ಪ್ರತ್ಯೇಕವಾದ ಪ್ರಮಾಣ ಎಂದು ಹೇಳುತ್ತಾರೆ. ಅದನ್ನು ನಿರಾಕರಿಸುತ್ತಾರೆ –

**ಅರ್ಥಾಪತ್ತ್ಯುಪಮಾಭಾವಾ ಅನುಮಾಂತರ್ಗತಾಃ ಕ್ವಚಿತ್ ।**

**ಪ್ರತ್ಯಕ್ಷಾಂತರ್ಗತೋಽಭಾವಃ ಸುಖಾದೇರ್ನಿಯಮೇನ ಚ ॥೩೪॥**

ಅರ್ಥಾಪತ್ತಿ, ಉಪಮಾನ, ಅಭಾವಗಳು ಕೆಲವು ಕಡೆ ಅನುಮಾನದಲ್ಲಿಯೇ ಸೇರುತ್ತವೆ. ಕೆಲವು ಕಡೆ ಅಭಾವವು ಪ್ರತ್ಯಕ್ಷದಲ್ಲಿಯೇ ಸೇರುತ್ತದೆ. ಆದರೆ ಸುಖ ಮುಂತಾದವು ಸಾಕ್ಷಿಗೆ ಮಾತ್ರ ವೇದ್ಯವಾಗುವ ಪ್ರಯುಕ್ತ ಅವುಗಳ ಅಭಾವವು ನಿಯಮೇನ ಸಾಕ್ಷಿಪ್ರತ್ಯಕ್ಷದಿಂದಲೇ ಗ್ರಾಹ್ಯವಾಗುವುದು.

**ಅನ್ಯತ್ರ ಝಟಿತಿ ಪ್ರಾಪ್ತಃ .............. ।**

ಸುಖಾದಿಗಳಿಂದ ಇತರವಾದ ಘಟಾದಿಗಳು ಪ್ರತಿಯೋಗಿಯಾಗಿರುವಾಗ ಯಾವ ಅಭಾವಪ್ರಮಾಣವು ಬಹುಬೇಗನೆ ಪ್ರಾಪ್ತವಾಗುವುದೋ ಅದು ಪ್ರತ್ಯಕ್ಷವೇ ಆಗಿರುತ್ತದೆ. ಸ್ವಲ್ಪ ತಡವಾಗಿ ಪ್ರಾಪ್ತವಾಗುವುದು ಅನುಮಾನವೆನಿಸುತ್ತದೆ.

ಹಾಗಾದರೆ ಉಪಕ್ರಮ, ಉಪಸಂಹಾರ, ಅಭ್ಯಾಸ, ಅಪೂರ್ವತಾ, ಫಲ, ಅರ್ಥವಾದಗಳು ಪ್ರಮಾಣಗಳೆಂದು ಪರಿಗಣಿಸಲ್ಪಟ್ಟಿರುವಾಗ ಪ್ರಮಾಣಗಳಲ್ಲಿ

ಮೂರೇ ವಿಧ ಎನ್ನುವುದು ಹೇಗೆ ಕೂಡುತ್ತದೆ ಎಂದು ಆಶಂಕಿಸಿದರೆ ಅದನ್ನು ಪರಿಹರಿಸುತ್ತಾರೆ –

.................................ಪ್ರಾರಂಭಾದ್ಯಾಶ್ಚ ಯುಕ್ತಯಃ ।

ಆಗಮಾರ್ಥಾವಸಿತ್ಯರ್ಥಾ ನಿಯತವ್ಯಾಪ್ತಯೋಽಖಿಲಾಃ ॥೩೫॥

ಉಪಕ್ರಮಾದಿಗಳು ಅನುಮಾನದ ಪ್ರಭೇದಗಳೇ ಆಗಿವೆ. ಏಕೆಂದರೆ ಅವೆಲ್ಲವೂ ಆಗಮಾರ್ಥನಿರ್ಣಯಕ್ಕಾಗಿ ನಿಯತವಾಗಿ ವ್ಯಾಪ್ತಿಯ ಅಪೇಕ್ಷೆಯನ್ನು ಹೊಂದಿವೆ.

ಇನ್ನು ವಾಕ್ಯ ಪ್ರಕರಣ ಮುಂತಾದವೂ ಕೂಡ ಅನುಮಾನ ಪ್ರಮಾಣದಲ್ಲಿಯೇ ಸೇರುತ್ತವೆ ಎಂದು ಹೇಳುತ್ತಾರೆ –

ವಾಕ್ಯಂ ಪ್ರಕರಣಂ ಸ್ಥಾನಂ ಸಮಾಖ್ಯಾ ಚ ತಥಾವಿಧಾಃ ।

ಕುರುಪಾಂಡವವತ್ತೇಷಾಮುಪಪತ್ತೇಃ ಪೃಥಗ್ವಚಃ ॥೩೬॥

ವಾಕ್ಯ, ಪ್ರಕರಣ, ಸ್ಥಾನ, ಸಮಾಖ್ಯೆಗಳೂ ಕೂಡ ವ್ಯಾಪ್ತಿಯನ್ನು ಅನುಸರಿಸಿಯೇ ಆಗಮಾರ್ಥನಿರ್ಣಾಯಕ್ಕೆ ಉಪಯುಕ್ತವಾಗುವುದರಿಂದ ಅವುಗಳೂ ಯುಕ್ತಿಗಳೇ. ಉಪಕ್ರಮಾದಿಗಳಲ್ಲಿ ಉತ್ತರೋತ್ತರ ಪ್ರಾಬಲ್ಯ, ವಾಕ್ಯಾದಿಗಳಲ್ಲಿ ಪೂರ್ವ ಪೂರ್ವ ಪ್ರಾಬಲ್ಯ ಎಂಬ ಭೇದವಿರುವುದರಿಂದ ಅವುಗಳನ್ನು ಪ್ರತ್ಯೇಕವಾಗಿ ಹೇಳಲಾಗಿದೆ. ಪಾಂಡವರೂ ಕುರುವಂಶದವರಾಗಿದ್ದರೂ 'ಸಂತಾನಬೀಜಂ ಕುರುಪಾಂಡವಾನಾಂ' ಇತ್ಯಾದಿ ವಾಕ್ಯಗಳಲ್ಲಿ ಪಾಂಡವರನ್ನು ಪ್ರತ್ಯೇಕವಾಗಿ ಪರಿಗಣಿಸಿರುತ್ತಾರೆ. ಹಾಗೆಯೇ ಉಪಕ್ರಮಾದಿಗಳೂ, ವಾಕ್ಯಾದಿಗಳೂ ಅನುಮಾನದ ಪ್ರಭೇದಗಳೇ ಆಗಿದ್ದರೂ, ಉಪಪತ್ತಿ ಹಾಗೂ ಲಿಂಗಗಳ ನಿಮಿತ್ತದಿಂದ ಪ್ರತ್ಯೇಕವಾಗಿ ಹೇಳುವುದು ಯುಕ್ತವೇ ಆಗುವುದು.

ಹಾಗಿದ್ದರೂ ಜೈನರು ತರ್ಕವನ್ನು ಪ್ರತ್ಯೇಕ ಪ್ರಮಾಣವೆನ್ನುವರು. ಆದರೆ ಮಿಥಸ್ಸಿದ್ಧಿ ಇತ್ಯಾದಿಗಳಿಂದ ತರ್ಕವೂ ಅನುಮಾನದಲ್ಲಿಯೇ ಸೇರುವುದು. ಹಾಗಾದರೆ ತರ್ಕವು ಪ್ರಮಾಣವೇ ಆಗುವುದಿಲ್ಲ. ಅಂದಮೇಲೆ ಅನುಮಾನ ವಾದರೂ ಹೇಗೆ ಆಗುವುದು? ಅನಿಷ್ಟ ಪ್ರಸಂಜನವೇ ತರ್ಕ. ಪ್ರಾಮಾಣಿಕಪರಿತ್ಯಾಗ ಅಪ್ರಮಾಣಿಕಸ್ವೀಕಾರ ಎಂಬುದಾಗಿ ಅನಿಷ್ಟದಲ್ಲಿ ಎರಡು ವಿಧ. ಆ ತರ್ಕವು ಆತ್ಮಾಶ್ರಯ, ಅನ್ಯೋನ್ಯಾಶ್ರಯ, ಚಕ್ರಕ, ಅನವಸ್ಥಾ, ಪ್ರಸಂಗ ಎಂಬುದಾಗಿ ಐದು ವಿಧ. ತರ್ಕವು ಪ್ರಮಾಣಗಳಿಗೆ ಅನುಗ್ರಾಹಕ ಮಾತ್ರ. ಆದ್ದರಿಂದ ಅಪ್ರಮಾಣವೇ ಆದ ತರ್ಕಕ್ಕೆ ಅನುಮಾನದಲ್ಲಿ ಅಂತರ್ಭಾವ ಹೇಗೆ ಎಂದರೆ –

ಸ್ವನ್ಯಾಯೈಃ ಸಾಧನಂ ಕಾರ್ಯಂ ಪರನ್ಯಾಯೈಸ್ತು ದೂಷಣಮ್ ।

ಸ್ವನ್ಯಾಯೈರ್ದೂಷಣಂ ಚ ಸ್ಯಾತ್ಸಾಧಿತ್ಯೈಃ ಪ್ರತಿವಾದಿನಃ ॥೩೭॥

ತನಗೆ ಸಿದ್ಧವಾದ ನ್ಯಾಯಗಳಿಂದ (ಧರ್ಮಿ, ಲಿಂಗ, ವ್ಯಾಪ್ತಿ, ದೃಷ್ಟಾಂತಗಳನ್ನು ನ್ಯಾಯ ಶಬ್ದದಿಂದ ತೆಗೆದುಕೊಳ್ಳಬೇಕು) ಸಾಧನವನ್ನು ಹಾಗೂ ದೂಷಣವನ್ನು ಮಾಡತಕ್ಕದ್ದು. ಪರರಿಗಾಗಿಯೇ ಸಿದ್ಧಗಳಾದ ನ್ಯಾಯಗಳಿಂದಲಾದರೂ ದೂಷಣವು ಆಗುವುದು. ಪ್ರತಿವಾದಿಗಳನ್ನು ಕುರಿತು ಸಾಧಿತಗಳಾದ ತನಗೇನೆ ಸಿದ್ಧವಾದ ನ್ಯಾಯಗಳಿಂದ ದೂಷಣವೂ ಹಾಗೂ ಸಾಧನವೂ ಕೂಡ ಆಗುವುದು.

ಇದರ ಅಭಿಪ್ರಾಯವಿಷ್ಟು. ವಾದ ಮತ್ತು ಜಲ್ಪಗಳಲ್ಲಿ ವಾದಿಯು ಸ್ವಪಕ್ಷಸಾಧನ ಹಾಗೂ ಪರಪಕ್ಷದೂಷಣ ಎರಡನ್ನೂ ಮಾಡತಕ್ಕದ್ದು. ವಾದಿ–ಪ್ರತಿವಾದಿ ಪಕ್ಷಗಳೆರಡಕ್ಕೂ ಸಮ್ಮತವಾದ ನ್ಯಾಯಗಳಿಂದಲೇ ಸಾಧನವನ್ನು ಮಾಡಬೇಕು, ಕೇವಲ ಒಂದು ಪಕ್ಷಕ್ಕೆ ಮಾತ್ರ ಸಿದ್ಧವಾದ ನ್ಯಾಯಗಳಿಂದಲ್ಲ. ಉದಾಹರಣೆಗೆ – ಪರ್ವತವು ಬೆಂಕಿಯುಳ್ಳದ್ದು ಹೊಗೆಯಿರುವುದರಿಂದ. ಯಾವುದು ಹೊಗೆ ಯುಳ್ಳದ್ದೋ ಆದು ಬೆಂಕಿಯುಳ್ಳದ್ದು, ಅಡಿಗೆ ಮನೆಯಲ್ಲಿದ್ದಂತೆ. ಹೀಗೆ ತನಗೂ ಪರರಿಗೂ ಸಮ್ಮತವಾದ ಧೂಮರೂಪವಾದ ಹೇತುವಿನಿಂದಲೇ ಬೆಂಕಿಯನ್ನು ಸಾಧನೆ ಮಾಡಬೇಕು. ದೂಷಣವನ್ನಾದರೋ ಪರರಿಗೆ ಸಿದ್ಧವಾದ ನ್ಯಾಯದಿಂದಲೇ ಮಾಡಬೇಕು.

ಹಾಗಾದರೆ ಆಶ್ರಯಾಸಿದ್ಧಿ, ಅನ್ಯತರಾಸಿದ್ಧಿಗಳು ತರ್ಕದಲ್ಲಿ ದೂಷಣವಾಗುವುದು ಬೇಡ. ಹಾಗಿದ್ದರೂ ಬಾಧ ಅಪಸಿದ್ಧಾಂತಗಳಿದ್ದ ಪ್ರಯುಕ್ತ ತರ್ಕಕ್ಕೆ ಅನುಮಾನತ್ವವು ಕೂಡುವುದಿಲ್ಲ ಎಂದರೆ –

**ಪ್ರಸಂಗಾರ್ಥತಯಾ ಪ್ರೋಕ್ತಾ ನ ಸಿದ್ಧಾಂತಸ್ಯ ದೂಷಕಾಃ ।**

ಅನಿಷ್ಟಾಪಾದನಕ್ಕೆ ವಿಷಯವಾಗಿ ಹೇಳಲ್ಪಟ್ಟ ನಿರ್ಧೂಮತ್ವ ಮೊದಲಾದ ಅರ್ಥಗಳು ಸಿದ್ಧಾಂತಕ್ಕೆ ದೂಷಕಗಳಾಗುವುದಿಲ್ಲ. ಅಂದರೆ ಬಾಧಿತವೂ ಆಗುವುದಿಲ್ಲ ಎಂದರ್ಥ.

ಅದಿರಲಿ. ಸಾಧನ ಮತ್ತು ದೂಷಣ ಎಂಬುದಾಗಿ ಅನುಮಾನವು ಎರಡು ವಿಧ. ಅದರಲ್ಲಿ ತರ್ಕವು ಸಾಧನವಲ್ಲ, ದೂಷಣವೂ ಅಲ್ಲ ಎಂಬುದು ನಿಮಗೂ ಸಮ್ಮತವೇ ಆಗಿದೆ. ದೋಷಯುಕ್ತ ಜ್ಞಾನವನ್ನು ಹುಟ್ಟಿಸುವುದಕ್ಕೆ ದೂಷಣವೆಂದು ಹೆಸರು. ತರ್ಕದಲ್ಲಿ ಅದು ಸಂಭವಿಸುವುದಿಲ್ಲ. ಪರಸಿದ್ಧವಾದ ನ್ಯಾಯದಿಂದಲೇ ಅವನ ನ್ಯಾಯವು ದೋಷಯುಕ್ತವೆಂದು ತೋರಿಸಿಕೊಡಬೇಕು. ಅದು ಸಾಧುವಲ್ಲ. ಅಸಾಧುವಾದ ತರ್ಕದಿಂದ ದೋಷವನ್ನು ನಿರೂಪಿಸಿದರೆ ಅದು ದೋಷಾಭಾಸ ಎನಿಸುತ್ತದೆ. ಆದ್ದರಿಂದ ತರ್ಕಕ್ಕೆ ಅನುಮಾನತ್ವವು ಹೇಗೆ ಕೂಡುವುದು ಎಂದರೆ, ದೋಷಯುಕ್ತವಾದ ಜ್ಞಾನಕ್ಕೆ ಮೂಲಬೀಜದಂತಿರುವ ಛಲ ಮತ್ತು ಜಾತಿಗಳ ಸ್ವರೂಪವನ್ನು ನಿರೂಪಿಸುತ್ತಾರೆ –

**ಛಲಂ ಜಾತಿರಿತಿ ದ್ವೇಧಾ ವ್ಯಾಹತ್ಯಂತರಮಿಷ್ಯತೇ ॥೩೮॥**

**ಜಾತಿಃ ಸ್ವವ್ಯಾಹತಿರ್ಜ್ಞೇಯಾ ಛಲಮರ್ಥಾಂತರೋತ್ತರಮ್ ।**

ಛಲೋತ್ತರ ಮತ್ತು ಜಾತ್ಯುತ್ತರಗಳು ಎಂಬುದಾಗಿ ಎರಡು ವಿಧದ ವ್ಯಾಹತಿ ಪ್ರಭೇದವು ಪ್ರಾಮಾಣಿಕರಿಂದ ಅಂಗೀಕರಿಸಲ್ಪಡುತ್ತದೆ. ಅಥವಾ ವಿರೋಧ ಮತ್ತು ಅಸಂಗತಿಗಳೂ ಕೂಡ ವ್ಯಾಹತಿಪ್ರಭೇದಗಳೆಂದು ಅಂಗೀಕರಿಸಲ್ಪಡುತ್ತವೆ. ಇದರಲ್ಲಿ ಛಲವು ಅಸಂಗತವು, ಜಾತಿಯು ವಿರೋಧವು. ಜಾತಿಯು ಸ್ವವ್ಯಾಹತಿಯೆಂದು ತಿಳಿಯತಕ್ಕದ್ದು. ಛಲವು ಅರ್ಥಾಂತರೋತ್ತರವು. ಅಂದರೆ ಪರನು ಹೇಳಿದ್ದಕ್ಕೆ ಬೇರೆಯ ಅರ್ಥವನ್ನು ಪರಿಕಲ್ಪಿಸಿ, ಆ ಅರ್ಥಾಂತರಕ್ಕೆ ಉತ್ತರವನ್ನು ಹೇಳುವುದು ಛಲದ ಲಕ್ಷಣ.

ಹಿಂದೆ ಹೇಳಿದ ಅರ್ಥಕ್ಕೆ ಈಗ ಉಪಯೋಗವನ್ನು ತೋರಿಸುತ್ತ ಅಪವ್ಯಾಖ್ಯಾನಕ್ಕೆ ದೂಷಣಾಂತರವನ್ನು ಹೇಳುತ್ತಾರೆ –

**ಏವಂ ಸಂಶೋಧಿತನ್ಯಾಯಸದಾಗಮವಿರೋಧತಃ ।।೩೮।।**

**ನಾನಿರ್ವಾಚ್ಯಮಿಹ ಪ್ರೋಕ್ತಂ ಮಾಯಾಮಾತ್ರಪದೇನ ಹಿ ।**

ಈ ಪ್ರಕಾರವಾಗಿ ಸಂಶೋಧಿತವಾದ, ಅಂದರೆ ಆಭಾಸದ ದೆಶೆಯಿಂದ ಚೆನ್ನಾಗಿ ವಿವೇಚಿಸಲ್ಪಟ್ಟ ಅನುಮಾನಕ್ಕೆ ನಿರವಕಾಶವಾದ ಹಾಗೂ ನಿರ್ದೋಷವಾದ ಆಗಮಗಳ ವಿರೋಧ ಬರುವುದರಿಂದ, ಈ ಸೂತ್ರದಲ್ಲಿ ಸ್ವಪ್ನವು ಸದಸದ್ವಿಲಕ್ಷಣ ಎಂಬ ಅರ್ಥದಲ್ಲಿ ಮಾಯಾಮಾತ್ರ ಪದದಿಂದ ಹೇಳಲ್ಪಟ್ಟಿಲ್ಲ. ಸ್ವಪ್ನದ ಸತ್ಯತ್ವವು ಸದಾಗಮಗಳಿಂದ ಪ್ರಸಿದ್ಧವಾಗಿದೆ ಎಂಬುದನ್ನು ಇಲ್ಲಿ 'ಹಿ 'ಶಬ್ದದಿಂದ ಸೂಚಿಸಿದ್ದಾರೆ. ಕೇವಲ ಪ್ರಮಾಣಾಭಾವವಲ್ಲ, ಪ್ರಮಾಣವಿರೋಧವೂ ಬರುವುದರಿಂದ ಸ್ವಪ್ನಕ್ಕೆ ಅನಿರ್ವಾಚ್ಯತ್ವವು ಕೂಡುವುದಿಲ್ಲ.

ಸ್ವಪ್ನಕ್ಕೆ ಅನಿರ್ವಾಚ್ಯತ್ವ ಹೇಳುವುದು ಸ್ವವ್ಯಾಹತವೂ ಆಗಿದೆ ಎನ್ನುತ್ತಾರೆ –

**ವಿಲಕ್ಷಣಂ ಸದಸತೋರಿತಿ ಹಿ ವ್ಯಾಹತಂ ಸ್ವತಃ ।।೩೯।।**

ಸ್ವಾಪ್ನ ಪದಾರ್ಥವು ಸತ್ತು ಮತ್ತು ಅಸತ್ತುಗಳಿಂದ ವಿಲಕ್ಷಣ ಎನ್ನುವ ಪ್ರತಿಜ್ಞೆಯು ಸ್ವವ್ಯಾಹತವೇ ಆಗಿದೆ ಎಂಬುದು ಪ್ರಸಿದ್ಧವು. ಸ್ವವ್ಯಾಹತಿ ಹೇಗೆಂದರೆ, ಸ್ವಪ್ನವು ಸತ್ ಅಲ್ಲ ಎಂದು ಹೇಳಿದರೆ ಅಸತ್ವವೇ ಉಕ್ತವಾಯಿತು. ಪುನಃ ಅಸತ್ತಲ್ಲ ಎಂದು ಹೇಳಿದರೆ ಸತ್ ಶಬ್ದ ವಾಚ್ಯತ್ವ ಬರುವುದು. ಹೀಗೆ ಸ್ವವಚನವಿರೋಧ.

ಇನ್ನು ಸದಸದ್ವಿಲಕ್ಷಣ ಎಂಬುದರಲ್ಲಿ ಸತ್ ಶಬ್ದದಿಂದ ಅಬಾಧ್ಯತ್ವವು ಹೇಳಲ್ಪಡುತ್ತದೋ ಅಥವಾ ಬ್ರಹ್ಮಸ್ವರೂಪವೋ? ವೈಲಕ್ಷಣ್ಯವೂ ಕೂಡ ಆ ಧರ್ಮಕ್ಕೆ ವಿರೋಧಿಧರ್ಮತ್ವವನ್ನು ಹೇಳುತ್ತದೋ ಅಥವಾ ಪ್ರತಿಯೋಗಿಯಾದ ಅನ್ಯೋನ್ಯಾಭಾವವನ್ನು ಹೇಳುತ್ತದೋ? ಯಾವುದೇ ರೀತಿಯಿಂದ ಹೇಳಿದರೂ ಅವು ದೂಷಣಗಳೇ ಆಗುತ್ತವೆ ಎಂದು ಹೇಳುತ್ತಾರೆ –

ಪ್ರತಿಯೋಗಿತ್ವಮಪ್ಯಸ್ಯ ಬ್ರಹ್ಮಣೋಽಂಗೀಕೃತಂ ಭವೇತ್ ।

ಮಿಥ್ಯಾ ಚೇತ್ಪ್ರತಿಯೋಗಿತ್ವಂ ವೈಲಕ್ಷಣ್ಯಂ ತತೋ ನ ಹಿ ॥೪೦॥

ಸ್ವಾಪ್ನಪದಾರ್ಥವು ಸದಸದ್ವಿಲಕ್ಷಣವೆಂದು ಪ್ರತಿಪಾದಿಸಿದರೆ, ಸ್ವಾಪ್ನಪ್ರಪಂಚ ವನ್ನು ಕುರಿತು ಬ್ರಹ್ಮನಿಗೆ ಪ್ರತಿಯೋಗಿತ್ವವೂ ಕೂಡ ಅಂಗೀಕರಿಸಿದಂತೆ ಆಗುವುದು. ಅಂದರೆ ನಿರ್ಧರ್ಮಕನಾದ ಬ್ರಹ್ಮನಲ್ಲಿ ಪ್ರತಿಯೋಗಿತ್ವಧರ್ಮವನ್ನು ಅಂಗೀಕರಿಸಿದರೆ ಅಪಸಿದ್ಧಾಂತವೆಂದು ತಾತ್ಪರ್ಯ. ನಾವು ಮಿಥ್ಯಾಭೂತವಾದ ಪ್ರತಿಯೋಗಿತ್ವಧರ್ಮ ವನ್ನು ಬ್ರಹ್ಮನಲ್ಲಿ ಹೇಳುತ್ತೇವೆ, ಆದ್ದರಿಂದ ಅಪಸಿದ್ಧಾಂತವಾಗುವುದಿಲ್ಲ ಎಂದರೆ, ಆಗ ಬ್ರಹ್ಮನ ದೆಶೆಯಿಂದ ಸ್ವಾಪ್ನಪದಾರ್ಥಕ್ಕೆ ವೈಲಕ್ಷಣ್ಯವೂ ಕೂಡದೇ ಹೋಗುವುದು.

ಅವಿಲಕ್ಷಣತ್ವಂ ಸತ್ಯಂ ಸ್ಯಾನ್ಮಿಥ್ಯಾತ್ವಂ ಬ್ರಹ್ಮಣಸ್ತತಃ ।

ಅನಿರ್ವಾಚ್ಯಸ್ಯ ಸತ್ತ್ವಂ ವಾ................. ॥

ವೈಲಕ್ಷಣ್ಯಕ್ಕೂ ಮಿಥ್ಯಾತ್ವವನ್ನು ಅಂಗೀಕರಿಸುತ್ತೇವೆ ಎಂದರೆ, ಸ್ವಾಪ್ನಪದಾರ್ಥಕ್ಕೆ ಬ್ರಹ್ಮನಿಂದ ವೈಲಕ್ಷಣ್ಯವಿಲ್ಲ ಎನ್ನುವುದು ಸತ್ಯವಾಗುವುದು. ಆಗ ಪಾರಮಾರ್ಥಿಕ ಸತ್ಯನೆಂದು ನೀವು ಅಂಗೀಕರಿಸಿರುವ ಬ್ರಹ್ಮನಿಗೂ ಸ್ವಾಪ್ನಪ್ರಪಂಚದಂತೆ ಮಿಥ್ಯಾತ್ವವು ಅಥವಾ ಅನಿರ್ವಾಚ್ಯವೆಂದು ಹೇಳಲ್ಪಟ್ಟ ಸ್ವಾಪ್ನಪ್ರಪಂಚಕ್ಕೆ ಬ್ರಹ್ಮನಂತೆ ಸತ್ಯತ್ವವು ಬರಬೇಕಾಗುವುದು.

.................ಯದಿ ಧರ್ಮಾ ನ ಕೇಚನ ॥೪೧॥

ಬ್ರಹ್ಮಣೋ ನೈವ ಜಿಜ್ಞಾಸ್ಯಂ ಜಿಜ್ಞಾಸಾ ಧರ್ಮನಿರ್ಣಯಃ ।

ಇದಮಿತ್ಥಮಿತಿ ಜ್ಞಾನಂ ಜಿಜ್ಞಾಸಾಯಾಃ ಪ್ರಯೋಜನಮ್ ॥೪೨॥

ಬ್ರಹ್ಮನಲ್ಲಿ ಯಾವುದೇ ಧರ್ಮವಿಲ್ಲವೆಂದು ಹೇಳುವುದಾದರೆ, ಅಂಥಾ ಬ್ರಹ್ಮನು ಜಿಜ್ಞಾಸ್ಯನೇ ಆಗಲಾರನು. ಬ್ರಹ್ಮಮೀಮಾಂಸಾಶಾಸ್ತ್ರವು ಅಥಾತೋ ಬ್ರಹ್ಮ ಜಿಜ್ಞಾಸಾ ಎಂದು ಬ್ರಹ್ಮನಿಗೆ ಜಿಜ್ಞಾಸ್ಯತ್ವವನ್ನು ಹೇಳುವುದರಿಂದ, ಬ್ರಹ್ಮನು ನಿರ್ಧರ್ಮಕನಲ್ಲ. ಜಿಜ್ಞಾಸೆ ಏಕೆ ಕೂಡುವುದಿಲ್ಲ ಎಂದರೆ ಧರ್ಮದ ನಿಶ್ಚಯವೇ ಜಿಜ್ಞಾಸೆಯು. ಇಲ್ಲದ ಮೊಲನ ಕೋಡಿನ ಬಗ್ಗೆ ಯಾರೂ ವಿಚಾರ ಮಾಡುವುದಿಲ್ಲ. ಇದಮಿತ್ಥಂ (ಇದು ಹೀಗೇ ಇದೆ) ಎಂಬ ಜ್ಞಾನವೇ ಜಿಜ್ಞಾಸೆಯ ಪ್ರಯೋಜನವು.

ಇತ್ಥಂಭಾವೋ ಹಿ ಧರ್ಮೋಽಸ್ಯ ನ ಚೇನ್ನ ಪ್ರತಿಯೋಗಿತಾ ।

ಇತ್ಥಂಭಾವಾತ್ಮಕಾನ್ ಧರ್ಮಾನಾಹುಶ್ಚ ಶ್ರುತಯೋಽಖಿಲಾಃ ॥೪೩॥

ಅದೃಶ್ಯತ್ವಾದಯೋಽಪ್ಯಸ್ಯ ಗುಣಾ ಹಿ ಪ್ರಭುಣೋದಿತಾಃ ।

ಈ ಬ್ರಹ್ಮನ ಧರ್ಮವು ಇತ್ಥಂಭಾವವೇ. ಬ್ರಹ್ಮನಲ್ಲಿ ಯಾವ ಧರ್ಮವೂ

ಇಲ್ಲವೆಂದಾದರೆ ಪ್ರತಿಯೋಗಿತ್ವವು (ಪ್ರಪಂಚಧರ್ಮ ವ್ಯಾವತ್ತಿಯು) ಆಗಲಾರದು. ಎಲ್ಲ ಶ್ರುತಿಗಳೂ ಬ್ರಹ್ಮನಲ್ಲಿ ನಿಶ್ಚಯವಾಗಿ ಇರುವ ಧರ್ಮಗಳನ್ನೇ ಹೇಳುತ್ತವೆ. ಈ ಬ್ರಹ್ಮನಿಗೆ ಸರ್ವಸಮರ್ಥರಾದ ವೇದವ್ಯಾಸರಿಂದಲೂ ಅದೃಶ್ಯತ್ವಾದಿ ಗುಣಗಳು ಹೇಳಲ್ಪಟ್ಟಿವೆ.

ಹಾಗಾದರೆ ನಾವು ಬ್ರಹ್ಮನಲ್ಲಿ ಭಾವರೂಪಧರ್ಮಗಳನ್ನೇ ಅಂಗೀಕರಿಸುವುದಿಲ್ಲ. ಅಭಾವರೂಪವಾದ ಧರ್ಮಗಳನ್ನಾದರೋ ಸ್ವೀಕರಿಸುತ್ತೇವೆ. ಆದ್ದರಿಂದ ಸೂತ್ರಕ್ಕೆ ವಿರೋಧವಿಲ್ಲ ಎಂದು ಹೇಳಿದರೆ –

**ಯದಿ ಸ್ಯುಸ್ತಾದೃಶಾ ಧರ್ಮಾಃ ಸರ್ವಜ್ಞತ್ವಾದಯೋ ನ ಕಿಮ್ ॥೪೪॥**

ಬ್ರಹ್ಮನಲ್ಲಿ ಅಭಾವಾತ್ಮಕಗಳಾದ ಅದೃಶ್ಯತ್ವಾದಿ ಧರ್ಮಗಳು ಇವೆ ಎಂದು ಹೇಳುವುದಾದರೆ, ಪ್ರಮಾಣಗಳಿಂದಲೇ ಸಿದ್ಧವಾಗುವ ಸರ್ವಜ್ಞತ್ವಾದಿ ಭಾವರೂಪ ಧರ್ಮಗಳನ್ನೂ ಬ್ರಹ್ಮನಲ್ಲಿ ಏಕೆ ಒಪ್ಪಬಾರದು? ಬ್ರಹ್ಮನಲ್ಲಿ ಸರ್ವಜ್ಞತ್ವಾದಿಗಳನ್ನು ಸ್ವೀಕರಿಸುವುದಿಲ್ಲವಾದರೆ ಅದೃಶ್ಯತ್ವಾದಿ ಅಭಾವರೂಪ ಧರ್ಮಗಳನ್ನೂ ಕೈಬಿಡಬೇಕು ಎಂದು ತಾತ್ಪರ್ಯ.

ಮಿಥ್ಯಾಭೂತವಾದ ಸರ್ವಪದಾರ್ಥಗಳ ಅಪೇಕ್ಷೆಯಿಂದ ಸರ್ವಜ್ಞತ್ವಾದಿಗಳು ಇರುವ ಪ್ರಯುಕ್ತ ಆ ಧರ್ಮಗಳೂ ಮಿಥ್ಯಾಭೂತವೇ ಆಗುತ್ತವೆ. ಆದ್ದರಿಂದ ಪಾರಮಾರ್ಥಿಕವಾದ ಬ್ರಹ್ಮನಲ್ಲಿ ಆ ಧರ್ಮಗಳನ್ನು ಒಪ್ಪುವುದು ಹೇಗೆ ಸಾಧ್ಯ ಎಂದರು ಆಶಂಕಿಸಿದರೆ –

**ಅನ್ಯಾಪೇಕ್ಷಾ ಯದಿ ಸ್ಯುಷ್ಟೇ ಸತ್ತೈವಂ ದೇಶಕಾಲಗಾ ।**

**ದೇಶಕಾಲಾನಪೇಕ್ಷಾ ಹಿ ನ ಸತ್ತಾ ಕ್ವಾಪಿ ದೃಶ್ಯತೇ ॥೪೫॥**

ಸರ್ವಜ್ಞತ್ವಾದಿ ಭಾವರೂಪವಾದ ಧರ್ಮಗಳು ಮಿಥ್ಯಾಭೂತವಾದ ಇತರ ಪದಾರ್ಥಗಳ ಅಪೇಕ್ಷೆಯನ್ನು ಹೊಂದಿವೆ ಎಂಬ ಕಾರಣದಿಂದ ಬ್ರಹ್ಮನಲ್ಲಿ ಒಪ್ಪಲು ಶಕ್ಯವಿಲ್ಲವಾದರೆ, ಅದೃಶ್ಯತ್ವಾದಿ ಅಭಾವರೂಪ ಧರ್ಮಗಳಿಗೂ ಅನ್ಯಾಪೇಕ್ಷೆಯು ಇರುವುದರಿಂದ ಆ ಧರ್ಮಗಳೂ ಬ್ರಹ್ಮನಲ್ಲಿ ಕೂಡಲಾರವು. ಪರಾಪೇಕ್ಷಿತವಾದ ಸರ್ವಜ್ಞತ್ವಾದಿಗಳನ್ನು ಬ್ರಹ್ಮನಲ್ಲಿ ಅಂಗೀಕರಿಸುವುದಿಲ್ಲವಾದರೆ, ಸತ್ತಾರೂಪವಾದ ಧರ್ಮವೂ ಕೂಡ ಪರಾಪೇಕ್ಷಿತವೇ ಆಗಿರುವುದರಿಂದ ಅಂಗೀಕಾರಾರ್ಹವಲ್ಲ. ದೇಶ–ಕಾಲಗಳ ಪ್ರತೀತಿಯನ್ನು ಅಪೇಕ್ಷಿಸದೇ ಇರುವ ಸತ್ತಾರೂಪವಾದ ಧರ್ಮವು ಎಲ್ಲಿಯೂ ಕಾಣಲ್ಪಡುವುದಿಲ್ಲ.

ಬ್ರಹ್ಮನಿಗೆ ನಿರ್ಧಮಕತ್ವವನ್ನು ಅಂಗೀಕರಿಸಿದರೆ ಜಿಜ್ಞಾಸ್ಯತ್ವವೇ ಕೂಡುವುದಿಲ್ಲ. ಅಷ್ಟೇ ಅಲ್ಲ ಶಾಸ್ತ್ರಯೋನಿತ್ವಾತ್ ಎಂಬ ಸೂತ್ರದಲ್ಲಿ ಹೇಳಲ್ಪಟ್ಟ ಶಾಸ್ತ್ರವಿಷಯತ್ವವೂ ಕೂಡುವುದಿಲ್ಲ ಎಂದು ಹೇಳುತ್ತಾರೆ –

**ಸರ್ವಧರ್ಮೋಜ್ಝಿತಸ್ಯಾಸ್ಯ ಕಿಂ ಶಾಸ್ತ್ರೇಣಾಧಿಗಮ್ಯತೇ ।**

**ಮಿಥ್ಯಾಧರ್ಮವಿಧಾತುಶ್ಚ ವೇದಸ್ಯೈವಾಪ್ರಮಾಣತಾ ॥೪೬॥**

ಸರ್ವ ಧರ್ಮಗಳಿಂದ ವಿರಹಿತನಾದ ಬ್ರಹ್ಮನ ಬಗ್ಗೆ ಶಾಸ್ತ್ರದಿಂದ ಏನು ತಿಳಿಯಲ್ಪಡುತ್ತದೆ? ಬ್ರಹ್ಮನ ಸ್ವರೂಪವು ಸ್ವಪ್ರಕಾಶವಾಗಿರುವುದರಿಂದ ಅದನ್ನು ತಿಳಿಯಲಿಕ್ಕೆ ಶಾಸ್ತ್ರದ ಅಗತ್ಯವಿಲ್ಲವಾದ್ದರಿಂದ ಬ್ರಹ್ಮನಿಗೆ ಶಾಸ್ತ್ರಗಮ್ಯತ್ವವೇ ಕೂಡದೇ ಹೋಗುವುದು ಎಂದು ಭಾವ. ಹಾಗಾದರೆ ಬ್ರಹನಲ್ಲಿ ಪಾರಮಾರ್ಥಿಕ ಧರ್ಮಗಳು ಇಲ್ಲದಿದ್ದರೂ ಮಿಥ್ಯಾಭೂತವಾದ ಧರ್ಮಗಳು ಶಾಸ್ತ್ರಗಳಿಂದ ತಿಳಿಯಲ್ಪಡುತ್ತವೆ ಎಂದು ಹೇಳುವುದಾದರೆ, ಮಿಥ್ಯಾಭೂತ ಧರ್ಮವನ್ನು ವಿಧಿಸಿತಕ್ಕ ವೇದಕ್ಕಾದರೂ ಅಪ್ರಾಮಾಣ್ಯವೇ ಬರುವುದು.

ವೇದವು ಮಿಥ್ಯಾಭೂತವಾದ ಧರ್ಮಗಳನ್ನು ಪ್ರತಿಪಾದಿಸಿ ಅಷ್ಟಕ್ಕೇ ಸುಮ್ಮನಾಗಿದ್ದರೆ ಅದಕ್ಕೆ ಅಪ್ರಮಾಣ್ಯವು ಬರುತ್ತಿತ್ತು. ಆದರೆ ನೇಹ ನಾನಾಸ್ತಿ ಕಿಂಚನ ಇತ್ಯಾದಿ ವಾಕ್ಯಗಳಿಂದ ವೇದವು ಬ್ರಹ್ಮನಲ್ಲಿ ಧರ್ಮಗಳನ್ನು ನಿಷೇಧಿಸುತ್ತದೆ. ಆದಪ್ರಯುಕ್ತ ವೇದಕ್ಕೆ ಅಪ್ರಾಮಾಣ್ಯವಿಲ್ಲ ಎಂದರೆ –

**ಅಪ್ರಾಪ್ತಾಂ ಭ್ರಾಂತಿಮಾಪಾದ್ಯ ಕಿಂ ವೇದೋ ಮಾನತಾಂ ವ್ರಜೇತ್ ।**

**ನ ಹಿ ವೇದಂ ವಿನಾ ಬ್ರಹ್ಮ ವೇದ್ಯಂ ಧರ್ಮಾಶ್ಚ ತದ್ಗತಾಃ ॥೪೭॥**

'ಯಃ ಸರ್ವಜ್ಞಃ ಸರ್ವವಿತ್' 'ಯ ಆತ್ಮಾಪಹತ ಪಾಪ್ಮಾ' ಇತ್ಯಾದಿ ವೇದವು ಪ್ರಮಾಣಾಂತರದಿಂದ ಪ್ರಾಪ್ತವಾಗದಿರುವ ಮಿಥ್ಯಾಭೂತವಾದ ಸರ್ವಜ್ಞತ್ವಾದಿ ಧರ್ಮಗಳ ಪ್ರತೀತಿಯನ್ನು ಬ್ರಹ್ಮನಲ್ಲಿ ಹುಟ್ಟಿಸಿ, ತಾನೇ ನೇಹ ನಾನಾಸ್ತಿ ಇತ್ಯಾದಿ ವಚನಗಳಿಂದ ಅವುಗಳನ್ನು ನಿಷೇಧ ಮಾಡುವುದಾದರೆ, ವೇದವು ಪ್ರಾಮಾಣ್ಯವನ್ನು ಹೊಂದುವುದು ಹೇಗೆ? ಪರಸ್ಪರ ವಿರುದ್ಧವಾಗಿರುವುದರಿಂದ ಹುಚ್ಚನ ಮಾತಿನಂತೆ ಅಪ್ರಮಾಣವೇ ಆಗುವುದು. ವೇದವನ್ನು ಬಿಟ್ಟು ಬೇರೆ ಯಾವುದರಿಂದಲೂ ಬ್ರಹ್ಮನಾಗಲೀ ಅವನಲ್ಲಿರುವ ಧರ್ಮಗಳಾಗಲೀ ತಿಳಿಯಲಿಕ್ಕೆ ಸಾಧ್ಯವಿಲ್ಲವಷ್ಟೆ.

ಹಾಗಾದರೆ ಮಿಥ್ಯಾಧರ್ಮಗಳನ್ನು ವಿಧಿಸತಕ್ಕ ವೇದಕ್ಕೆ ಅಪ್ರಾಮಾಣ್ಯವನ್ನು ಹೇಳಿದರೆ ಅದು ನಮಗೆ ಅನಿಷ್ಟವಲ್ಲ. ಏಕೆಂದರೆ ತತ್ತ್ವಾವೇದಕ ಹಾಗೂ ಅತತ್ತ್ವಾ ವೇದಕ ಎಂದು ವೇದದಲ್ಲಿ ಎರಡು ವಿಭಾಗ. ಅದರಲ್ಲಿ ಜೀವೇಶ್ವರರಿಗೆ ಐಕ್ಯವನ್ನು ಪ್ರತಿಪಾದಿಸುವ ವೇದದ ಒಂದು ಭಾಗ ತತ್ತ್ವಾವೇದಕ. ಮತ್ತೊಂದು ಭಾಗ ಅತತ್ತ್ವಾ ವೇದಕ ಎಂದು ನಮ್ಮಿಂದ ಅಂಗೀಕರಿಸಲ್ಪಟ್ಟಿದೆ ಎಂದರೆ –

**ವೇದವೇದ್ಯಸ್ಯ ಮಿಥ್ಯಾತ್ವಂ ಯದಿ ನೈಕ್ಯಸ್ಯ ತತ್ಕಥಮ್ ।**

ವೇದವೇದ್ಯವಾಧ ಬ್ರಹ್ಮನ ಧರ್ಮಗಳಿಗೆ ಮಿಥ್ಯಾತ್ವವು ಹೇಳಲ್ಪಡುವುದಾದರೆ, ಜೀವೇಶ್ವರ ಐಕ್ಯವನ್ನು ಹೇಳುವ ವೇದಭಾಗಕ್ಕೂ ಮಿಥ್ಯಾತ್ವವು ಹೇಗೆ ಆಗಲಾರದು?

ಹಾಗಾದರೆ ಬ್ರಹ್ಮನಲ್ಲಿ ಧರ್ಮಗಳಿಗೆ ಪ್ರಾಪ್ತಿ ಇಲ್ಲವೆಂದು ಹೇಳಿದುದು ಅಯುಕ್ತ. ಪ್ರಮಾಣದಿಂದ ಬ್ರಹ್ಮನಲ್ಲಿ ಧರ್ಮಪ್ರಾಪ್ತಿಯು ಕೂಡುವುದಿಲ್ಲವಾದರೂ, ಧರ್ಮದ ಆರೋಪವು ಅಯುಕ್ತವಲ್ಲ. ವೇದವು ಬ್ರಹ್ಮನಲ್ಲಿ ಆರೋಪಿತವಾದ ಧರ್ಮಗಳನ್ನು ಅನುವಾದ ಮಾಡಿ ಅನಂತರ ನಿಷೇಧ ಮಾಡುವುದು ಯುಕ್ತವೇ ಆಗಿದೆ ಎಂದರೆ –

**ಧರ್ಮಾರೋಪೋಽಪಿ ಸಾಮಾನ್ಯಧರ್ಮಾದೀನಾಂ ಹಿ ದರ್ಶನೇ ॥೪೮॥**

ಬ್ರಹ್ಮನಲ್ಲಿ ಧರ್ಮಾರೋಪವು ಕೂಡಿದ್ದರೆ ಹೀಗೆ ಒಪ್ಪಬಹುದಿತ್ತು. ಹೀಗೆ ಇಲ್ಲ. ಸಾಮಾನ್ಯ ಧರ್ಮ, ಪ್ರಧಾನ ಮುಂತಾದ ಧರ್ಮಗಳು (ಭ್ರಮಕ್ಕೆ ಕಾರಣವಾಗುವ ಅನುಭವಜನ್ಯ ಸಂಸ್ಕಾರವೇ ಪ್ರಧಾನ) ದೃಷ್ಟವಾಗುತ್ತಿರಲು ಧರ್ಮಾರೋಪವೂ ದೃಷ್ಟವಾಗುವುದು. ನಿಮ್ಮ ಪ್ರಕಾರ ಬ್ರಹ್ಮನು ಸರ್ವಧರ್ಮಗಳಿಂದ ವಿರಹಿತನು. ನಿರ್ಧರ್ಮಕ ವಸ್ತುವಿನಲ್ಲಿ ಧರ್ಮಾರೋಪವೂ ಕೂಡುವುದಿಲ್ಲ.

ಇದೇ ವಿಷಯವನ್ನೇ ವಿಸ್ತರಿಸಿ ಹೇಳುತ್ತಾರೆ –

**ಇದಂತದಾದಿಧರ್ಮಿತ್ವೇ ಧರ್ಮೋಽನ್ಯಃ ಕಲ್ಪ್ಯತೇಽತ್ರ ಹಿ ।**

**ಸರ್ವಧರ್ಮವಿಹೀನಸ್ಯ ಧರ್ಮಾರೋಪಃ ಕ್ವ ದೃಶ್ಯತೇ ॥೪೯॥**

**ತದರ್ಥಂ ಯದಿ ಧರ್ಮಾಣಾಮಾರೋಪಃ ಸಾನವಸ್ಥಿತಿಃ ।**

ಇದು ಅದು ಮುಂತಾದ ಸಾಧಾರಣ ಧರ್ಮಗಳನ್ನು ಕುರಿತು ಧರ್ಮಿತ್ವವು ದೃಷ್ಟವಾದರೆ ಹಾಗೂ ಪ್ರಧಾನ ಜ್ಞಾನವೂ ಕೂಡ ಇದ್ದರೆ ಇತರವಾದ ಧರ್ಮವು ಆರೋಪಿಸಲ್ಪಡುವುದು ಲೋಕದಲ್ಲಿ ಕಂಡಿದೆ. ಸರ್ವಧರ್ಮಗಳಿಂದ ವಿರಹಿತವಾದ ವಸ್ತುವಿಗೆ ಧರ್ಮಾರೋಪವು ಎಲ್ಲಿ ಕಾಣಲ್ಪಡುತ್ತದೆ? ಸಾಧಾರಣ ಪ್ರಧಾನ ಇತ್ಯಾದಿ ಯಾವುದೇ ಧರ್ಮಗಳಿಲ್ಲದ ಬ್ರಹ್ಮನಲ್ಲಿ ಧರ್ಮಾರೋಪವನ್ನು ಸಿದ್ಧಿಸಲಿಕ್ಕೆ ಮತ್ತೊಂದು ಧರ್ಮಾರೋಪವನ್ನು ಕಲ್ಪಿಸಬೇಕು. ಅದರ ಸಿದ್ಧಿಗಾಗಿ ಬೇರೊಂದು ಆರೋಪವನ್ನು ಕಲ್ಪಿಸಬೇಕು. ಹೀಗೆ ಅನವಸ್ಥೆಯು ಬರುವುದು.

ಸಾರ್ವಜ್ಞಾದಿಗಳಿಗೆ ಮಿಥ್ಯಾತ್ವವನ್ನು ಸಿದ್ಧಿಸಲಿಕ್ಕೆ ಜಗತ್ತಿಗೆ ಯಾವ ಭ್ರಾಂತಿ ಕಲ್ಪಿತತ್ವವನ್ನು ಹೇಳಿದರೋ ಅದನ್ನು 'ಈಶ' ಇತ್ಯಾದಿ ವಚನದಿಂದ ದೂಷಿಸುತ್ತಾರೆ. ಜಗತ್ತು ಭ್ರಾಂತಿಕಲ್ಪಿತವು ಎಂದು ಹೇಳುವವನು ಆ ವಿಷಯದಲ್ಲಿ ಪ್ರಮಾಣವನ್ನು ಹೇಳಬೇಕು. ಜಗತ್ಸತ್ಯತ್ವವು ಪ್ರತ್ಯಕ್ಷಗ್ರಾಹಿಯಾದುದರಿಂದ, ಜಗತ್ತು ಭ್ರಾಂತಿಕಲ್ಪಿತ ಎಂಬ ವಿಷಯದಲ್ಲಿ ಪ್ರತ್ಯಕ್ಷವು ಪ್ರಮಾಣವಲ್ಲ. ಈ ವಿಷಯದಲ್ಲಿ ಅನುಮಾನವೂ ಪ್ರಮಾಣವಲ್ಲ ಎಂಬುದನ್ನು ಶೂನ್ಯವಾದಿ ಮತವನ್ನು ನಿರಾಕರಣೆ ಮಾಡುವಾಗಲೇ ಸಮರ್ಥಿಸಲಾಗಿದೆ. ಈ ವಿಷಯದಲ್ಲಿ ಇನ್ನೂ ಹೆಚ್ಚಿನ ದೂಷಣವನ್ನು ಹೇಳುತ್ತಾರೆ–

**ಈಶತಜ್ಜ್ಞಾನವೇದಾಕ್ಷಜಾನುಮಾಮಾತೃಪೂರ್ವಿಣಃ ॥೫೦॥**

**ಭ್ರಾಂತಿರ್ವಿಶ್ವಸ್ಯ ಯೇನೈವ ಮಾನಾಭಾಸೇನ ಕಲ್ಪ್ಯತೇ ।**

**ತನ್ಮಾತ್ರಸ್ಯಾನ್ಯಥಾಭಾವೇ ಕಿಂ ನ ಸ್ಯಾದ್ವಿಶ್ವಸತ್ಯತಾ ||೫೧||**

ಈಶವಾಕ್ಯ, ಈಶಾದಿ ಜ್ಞಾನ, ಅಪೌರುಷೇಯ ಆಗಮ, ಪ್ರತ್ಯಕ್ಷ, ಅನುಮಾನ, ಜ್ಞಾನವುಳ್ಳ ಜೀವ ಇತ್ಯಾದಿ ಸರ್ವಪ್ರಮಾಣಗಳಿಂದ ಸಿದ್ಧವಾದ ಜಗತ್ತನ್ನು ಭ್ರಾಂತಿ ಕಲ್ಪಿತ ಎಂದು ಸಾಧಿಸಲು ಇರುವ ಪ್ರಮಾಣ ಒಂದೇ ಒಂದು. ಅದೂ ಕೂಡ ಪ್ರಮಾಣದಂತೆ ತೋರುವ ದುರ್ಬಲವಾದ ಅನುಮಾನ. ಅದೂ ಅಪ್ರಮಾಣವಾದ ಪಕ್ಷದಲ್ಲಿ ಬಹುಪ್ರಮಾಣಗಳನ್ನು ಹೊಂದಿರುವ ಜಗತ್ಸತ್ಯತ್ವವು ಏಕೆ ಸಿದ್ಧಿಸಲಾರದು?

ಇನ್ನು ಜಗತ್ತು ಭ್ರಾಂತಿಸಿದ್ಧವು ಎನ್ನುವ ವಿಷಯದಲ್ಲಿ ಆಗಮವೂ ಪ್ರಮಾಣವಲ್ಲ ಎಂದು ಹೇಳುತ್ತಾರೆ –

**ಯೇನೇದಂ ಕಲ್ಪ್ಯತೇ ಭ್ರಾಂತಂ ಭ್ರಾಂತಿಸ್ತಸ್ಯೈವ ಕಿಂ ನ ಸಾ |**

**ಭ್ರಾಂತತ್ವೇ ತಸ್ಯ ವಿಶ್ವಾರೇರೀಶಾದ್ಯಭ್ರಾಂತಮೇವ ಹಿ ||೫೨||**

ಈ ವಿಶ್ವವು ಭ್ರಾಂತಿಕಲ್ಪಿತವೆಂದು ಹೇಳುವ ಗೌಡಪಾದಾದಿಗಳ ಕಲ್ಪನೆಯೂ ಭ್ರಾಂತಿಯಲ್ಲವೆಂದು ಹೇಗೆ ಹೇಳುತ್ತೀರಿ? ಈಶವಾಕ್ಯಾದಿಗಳಿಂದ ವಿಶ್ವದ ಸತ್ಯತ್ವವು ತಿಳಿಯಲ್ಪಟ್ಟಿದೆ. ಇದಕ್ಕೆ ವಿರುದ್ಧವಾಗಿ ವಿಶ್ವಮಿಥ್ಯಾತ್ವವನ್ನು ಹೇಳುವ ಗೌಡಪಾದ ಮುಂತಾದವರ ಪ್ರತೀತಿಯು ಭಾಂತಿಯೇ. ಇದರಿಂದ ವಿಶ್ವಸತ್ಯತ್ವವು ಭ್ರಾಂತಿಯಲ್ಲ, ಸತ್ಯವೇ ಎಂದು ಸಿದ್ಧವಾಗುವುದು.

ಹಾಗಾದರೆ ಗೌಡಪಾದಾದಿಗಳ ಪ್ರತೀತಿಗೆ ವಿರುದ್ಧವಾಗಿ ವಿಶ್ವಸತ್ಯತ್ವವನ್ನು ಹೇಳುವ ಈಶಾದಿ ವಾಕ್ಯಗಳಿಗೇ ಭ್ರಾಂತಿತ್ವವನ್ನು ಹೇಳುತ್ತೇವೆ ಎಂದರೆ –

**ಭವೇಯುರ್ಭ್ರಾಂತಯೋ ನೃಣಾಂ ನೈವೇಶಾದೇಃ ಕಥಂಚನ |**

ಮನುಷ್ಯರಿಗೆ ಇಂದ್ರಿಯದೋಷ ಅಜ್ಞಾನ ಮುಂತಾದ ಬಾಹ್ಯ ಹಾಗೂ ಆಂತರಿಕ ಕಾರಣಗಳಿಂದ ಭ್ರಾಂತಿಗಳು ಸಂಭವಿಸುತ್ತವೆ. ಈಶಾದಿಗಳಿಗೆ ಯಾವ ವಿಧದಿಂದಲೂ ಭ್ರಾಂತಿಗಳು ಆಗಲಾರವು. ಏಕೆಂದರೆ ಈಶಾದಿಗಳಿಗೆ ಮನುಷ್ಯರಂತೆ ಇಂದ್ರಿಯದೋಷವಾಗಲೀ, ಅಜ್ಞಾನ, ವಿಪ್ರಲಂಭಗಳಾಗಲೀ ಇರುವುದಿಲ್ಲ.

ಜಗತ್ಸತ್ಯತ್ವವನ್ನು ಗ್ರಹಿಸುವ ಪ್ರತ್ಯಕ್ಷವು 'ನೇಹ ನಾನಾ' ಇತ್ಯಾದಿ ವಾಕ್ಯಗಳಿಂದ ಬಾಧಿತವಾಗುವುದರಿಂದ ಜಗತ್ಸತ್ಯತ್ವವು ಭ್ರಾಂತಿಮೂಲಕವೆಂದೇ ಹೇಳುತ್ತೇವೆ ಎಂದರೆ –

**ಸತ್ಯತ್ವಮಕ್ಷಜಪ್ರಾಪ್ತಂ ಯದಿ ಭ್ರಾಂತಮಿತೀಷ್ಯತೇ ||೫೩||**

**ಪ್ರಾಮಾಣ್ಯಮಾಗಮಸ್ಯಾಪಿ ಪ್ರತ್ಯಕ್ಷಾದನ್ಯತಃ ಕುತಃ |**

**ಸಾಕ್ಷಿಪ್ರತ್ಯಕ್ಷತೋ ಹ್ಯೇವ ಮಾನಾನಾಂ ಮಾನತೇಯತೇ ||೫೪||**

**ಸಾಕ್ಷಿಣಃ ಸ್ವಪ್ರಕಾಶತ್ವಮನವಸ್ಥಾ ತತೋ ನ ಹಿ ।**

ಪ್ರತ್ಯಕ್ಷದಿಂದ ಪ್ರಾಪ್ತವಾದ ಜಗತ್ಸತ್ಯತ್ವವು ಭ್ರಾಂತಿ ಎನ್ನುವುದಾದರೆ ಅದು ಕೂಡುವುದಿಲ್ಲ. ಆಗಮದ ಪ್ರಾಮಾಣ್ಯವೂ ಕೂಡ ಪ್ರತ್ಯಕ್ಷದಿಂದಲೇ ತಿಳಿಯಬೇಕು. ಪ್ರತ್ಯಕ್ಷದ ಹೊರತು ಬೇರೆ ಯಾವುದರಿಂದಲೂ ಆಗಮದ ಪ್ರಾಮಾಣ್ಯವು ಸಿದ್ಧವಾಗುವುದಿಲ್ಲ. ಏಕೆಂದರೆ ಎಲ್ಲ ಪ್ರಮಾಣಗಳ ಪ್ರಾಮಾಣ್ಯವೂ ಸಾಕ್ಷಿಪ್ರತ್ಯಕ್ಷ ದಿಂದಲೇ ವೇದ್ಯವಾಗುವುದು. ಸಾಕ್ಷಿಗೆ ಸ್ವಪ್ರಕಾಶತ್ವವಿರುವುದರಿಂದ ಅನವಸ್ಥೆಯು ಬರುವುದಿಲ್ಲ. ಇದು ಪ್ರಸಿದ್ಧವು.

ಹಾಗಾದರೆ ಪ್ರತ್ಯಕ್ಷ ಮತ್ತು ಆಗಮಗಳ ಪ್ರಾಮಾಣ್ಯವು ಸಾಕ್ಷಿವೇದ್ಯವೆಂದು ಒಪ್ಪೋಣ. ಹಾಗಿದ್ದರೂ ಹಿಂದೆ ಹೇಳಿದ ಪ್ರಕಾರ ಪ್ರಬಲವಾದ ಜಗತ್ಮಿಥ್ಯಾತ್ವ ಸಾಧಕ ಆಗಮದಿಂದ ದುರ್ಬಲವಾದ ಜಗತ್ಸತ್ಯತ್ವ ಸಾಧಕ ಪ್ರತ್ಯಕ್ಷಕ್ಕೆ ಬಾಧ ಬರುವುದರಿಂದ ಜಗತ್ತು ಮಿಥ್ಯೆಯೆಂದೇ ಸಿದ್ಧವಾಗುವುದು ಎಂದರೆ, ಎರಡರ ಪ್ರಾಮಾಣ್ಯವೂ ಸಾಕ್ಷಿವೇದ್ಯವೇ ಆಗಿರುವುದರಿಂದ ಆ ಪ್ರಾಬಲ್ಯ-ದೌರ್ಬಲ್ಯಗಳು ಕೂಡಲಾರವು ಎಂದು ಸಿದ್ಧಾಂತ. ಹಾಗಾದರೆ ಪ್ರತ್ಯಕ್ಷವು ತಾತ್ಕಾಲಿಕ ಪ್ರಮಾಣ, ಆಗಮವಾದರೋ ಆತ್ಯಂತಿಕ ಪ್ರಮಾಣ. ಆದ್ದರಿಂದ ಮಿಥ್ಯಾಸಾಧಕ ಆಗಮದ ಪ್ರಾಮಾಣ್ಯಕ್ಕೆ ಬಾಧವಿಲ್ಲ ಎಂದು ಹೇಳಿದರೆ, ಈ ರೀತಿಯ ಪ್ರಾಮಾಣ್ಯದ ವಿಭಾಗವನ್ನು 'ತಾತ್ಕಾಲಿಕಂ' ಇತ್ಯಾದಿ ವಚನದಿಂದ ನಿರಾಕರಿಸುತ್ತಾರೆ –

**ತಾತ್ಕಾಲಿಕಂ ಪ್ರಮಾಣತ್ವಮಕ್ಷಜಸ್ಯ ಯದಾ ಭವೇತ್ ॥೫೫॥**

**ಐಕ್ಯಾಗಮಸ್ಯ ಕಿಂ ನ ಸ್ಯಾತ್ ತಸ್ಯಾಪ್ಯೇತಾದೃಶಂ ಯದಿ ।**

**ಐಕ್ಯಪ್ರಮಾಣಮಿಥ್ಯಾತ್ವಂ ಯದಾ ವಿಶ್ವಸ್ಯ ಸತ್ಯತಾ ॥೫೬॥**

**ಐಕ್ಯವಾಕ್ಯಸ್ಯ ಮಾನತ್ವಂ ಯದ್ಯಬಾಧ್ಯಮಿತೀಷ್ಯತೇ ।**

**ಅಕ್ಷಜಸ್ಯಾಪಿ ಮಾನತ್ವಂ ನಾಬಾಧ್ಯಂ ಕಿಮಿತೀಷ್ಯತೇ ॥೫೭॥**

ಜಗತ್ಸತ್ಯತ್ವವನ್ನು ಗ್ರಹಿಸುವ ಪ್ರತ್ಯಕ್ಷದ ಪ್ರಾಮಾಣ್ಯವು ಸಾಕ್ಷಿಗೃಹೀತವಾಗಿದ್ದರೂ ತಾತ್ಕಾಲಿಕವೇ ಆಗುವುದಾದರೆ ಐಕ್ಯಾಗಮದ ಪ್ರಾಮಾಣ್ಯವೂ ಸಾಕ್ಷಿಗೃಹೀತವೇ ಆಗಿರುವುದರಿಂದ ಅದೂ ಕೂಡ ತಾತ್ಕಾಲಿಕವೇ ಏಕೆ ಆಗಬಾರದು? ಐಕ್ಯಾಗಮದ ಪ್ರಾಮಾಣ್ಯವೂ ತಾತ್ಕಾಲಿಕವೆಂದು ಒಪ್ಪಿದರೆ, ಅದಕ್ಕೆ ಸತ್ಯತ್ವಸಾಧಕ ಪ್ರತ್ಯಕ್ಷದಿಂದ ಬಾಧ ಬಂದಾಗ ಜಗನ್ಮಿಥ್ಯಾತ್ವಕ್ಕೇ ಮಿಥ್ಯಾತ್ವ ಬರುವುದು. ಅಂದರೆ ಜಗತ್ಸತ್ಯತ್ವವು ಸಿದ್ಧಿಸುವುದು. ಹಾಗೆ ಹೇಳಕೂಡದು. ನಾವು ಐಕ್ಯಾಗಮಕ್ಕೆ ಅಬಾಧ್ಯತ್ವವನ್ನು ಅಂಗೀಕರಿಸಿದ್ದೇವೆ ಎಂದರೆ, ಸಮಾನನ್ಯಾಯದಿಂದ ಪ್ರತ್ಯಕ್ಷದ ಪ್ರಾಮಾಣ್ಯವೂ ಅಬಾಧ್ಯವೆಂದು ಏಕೆ ಅಂಗೀಕರಿಸಬಾರದು?

ಹಾಗಾದರೆ ಅದ್ವಿತೀಯ ಬ್ರಹ್ಮನನ್ನು ಹೊಂದುವುದೇ ಮೋಕ್ಷವು. ಅದಾದರೋ

ಜಗತ್ಸತ್ಯತ್ವ ಗ್ರಾಹಕ ಪ್ರತ್ಯಕ್ಷಕ್ಕೆ ಅಬಾಧ್ಯತ್ವವಿದ್ದರೆ ಕೂಡಲಾರದು. ಪ್ರಪಂಚವು ಸತ್ಯವೆಂದು ಸಿದ್ಧವಾದರೆ, ಬ್ರಹ್ಮ ಮತ್ತು ಪ್ರಪಂಚ ಹೀಗೆ ಎರಡು ಸತ್ಯ ಪದಾರ್ಥಗಳು ಸಿದ್ಧವಾಗುವುದರಿಂದ, ಅದ್ವೈತಕ್ಕೆ ಹಾನಿ ಬರುವುದು. ಈ ವಿಶೇಷ ಬಾಧಕದಿಂದ ಸಾಕ್ಷಿಯು ಪ್ರತ್ಯಕ್ಷ ಪ್ರಾಮಾಣ್ಯವನ್ನು ತಾತ್ಕಾಲಿಕವೆಂದೇ ಗ್ರಹಿಸುವುದು ಎಂದು ಆಶಂಕಿಸಿದರೆ –

**ಅದ್ವೈತಹಾನಿಸಾಮಾನ್ಯಾನ್ನ ವಿಶೇಷಶ್ಚ ಕಶ್ಚನ ।**

**ಯದಿ ಸ್ವತಸ್ತ್ವಂ ಪ್ರಾಮಾಣ್ಯೇ ವಿಶ್ವಸತ್ತಾ ಕಥಂ ನ ತೇ ।।೫೮।।**

ಪ್ರತ್ಯಕ್ಷಕ್ಕಾಗಲೀ, ಐಕ್ಯಾಗಮಕ್ಕಾಗಲೀ ಅಬಾಧ್ಯತ್ವವನ್ನು ಅಂಗೀಕರಿಸಿದರೂ ಅಬಾಧ್ಯವಾದ ಪ್ರಾಮಾಣ್ಯವೆಂಬ ಎರಡನೆಯ ವಸ್ತುವು ಪ್ರಸಕ್ತವಾಗುವುದರಿಂದ ಎರಡು ಪಕ್ಷದಲ್ಲಿಯೂ ಅದ್ವೈತ ಹಾನಿಯು ಸಮಾನವು. ಆದ್ದರಿಂದ ಯಾವ ವಿಶೇಷವೂ ಇಲ್ಲವೇ ಇಲ್ಲ. ಅದ್ವೈತಾಗಮಕ್ಕೆ ಪ್ರಾಬಲ್ಯವನ್ನು ಸಮರ್ಥಿಸಲಿಕ್ಕೆ ಆಗಮಕ್ಕೆ ಸ್ವತಃ ಪ್ರಾಮಾಣ್ಯವನ್ನು ಹೇಳುವುದಾದರೆ, ಪ್ರತ್ಯಕ್ಷ ಪ್ರಮಾಣಕ್ಕೂ ಸ್ವತಸ್ತ್ವವನ್ನು ಏಕೆ ಅಂಗೀಕರಿಸಬಾರದು? ಆಗ ವಿಶ್ವಸತ್ಯತ್ವವನ್ನೂ ಪ್ರಮಾಣವೆಂದು ನೀನು ಅಂಗೀಕರಿಸಬೇಕಾಗುತ್ತದೆ.

ಹಾಗೆಯೇ ಆಗಲಿ. ಪ್ರತ್ಯಕ್ಷ ಆಗಮಗಳೆರಡಕ್ಕೂ ಸ್ವತಃ ಪ್ರಾಮಾಣ್ಯವಿದ್ದರೂ ಅದರಲ್ಲಿ ವಿಶೇಷವಿದೆ. ಪ್ರತ್ಯಕ್ಷವು ತತ್ಕಾಲದಲ್ಲಿಯೇ ಜ್ಞಾನಕ್ಕೆ ಪ್ರಾಮಾಣ್ಯವನ್ನು ಹುಟ್ಟಿಸುತ್ತದೆ. ವಾಕ್ಯವಾದರೋ ಆತ್ಯಂತಿಕ ಪ್ರಾಮಾಣ್ಯವನ್ನು ಹುಟ್ಟಿಸುತ್ತದೆ. ಹಾಗೆಯೇ ಜ್ಞಾನಗ್ರಾಹಕವಾದ ಸಾಕ್ಷಿಯು ಪ್ರತ್ಯಕ್ಷಜ್ಞಾನಕ್ಕೆ ತಾತ್ಕಾಲಿಕವೇ ಆದ ಪ್ರಾಮಾಣ್ಯವನ್ನು ಗ್ರಹಿಸುತ್ತದೆ, ವಾಕ್ಯಜನ್ಯಜ್ಞಾನಕ್ಕೆ ಆತ್ಯಂತಿಕ ಪ್ರಮಾಣ್ಯವನ್ನೇ ಗ್ರಹಿಸುತ್ತದೆ ಎಂದರೆ, ಹಾಗೆ ಹೇಳಕೂಡದು. ಈ ವ್ಯವಸ್ಥೆಗೆ ನಿಯಾಮಕವಿಲ್ಲವೆಂದು ಹಿಂದೆಯೇ ಹೇಳಲಾಗಿದೆ. ಈಗ ದೋಷಾಂತರವನ್ನು ಹೇಳುತ್ತಾರೆ –

**ಪ್ರಾಮಾಣ್ಯಸ್ಯ ಮರ್ಯಾದಾ ಕಾಲತೋ ವ್ಯಾಹತಾ ಭವೇತ್ ।**

**ಕಾಲಾಂತರೇಽಪ್ಯಮಾನಂ ಚೇದಿದಾನೀಂ ಮಾನತಾ ಕುತಃ ।।೫೯।।**

ಪ್ರಾಮಾಣ್ಯಕ್ಕೆ ಕಾಲದ ಪರಿಮಿತಿಯನ್ನು ಅಂದರೆ ತಾತ್ಕಾಲಿಕತ್ವವನ್ನು ಹೇಳುವುದು ಸ್ವವಚನ ವಿರುದ್ಧವಾಗುವುದು. ಪ್ರತ್ಯಕ್ಷದ ಪ್ರಾಮಾಣ್ಯವು ಈಗ ಅಬಾಧಿತವಾದರೂ ಕಾಲಾಂತರದಲ್ಲಿ ಬಾಧಿತ ಪ್ರಾಮಾಣ್ಯವುಳ್ಳದ್ದಾಗುವುದು ಎಂದು ನೀನು ಹೇಳುವುದಾದರೆ, ಈಗಾದರೂ ಅದರ ಪ್ರಾಮಾಣ್ಯವು ಹೇಗೆ ಸಿದ್ಧಿಸುವುದು?

ಅದ್ವಿತೀಯಬ್ರಹ್ಮನಲ್ಲಿ ಒಂದಾಗಿ ಸೇರುವುದೇ ಮೋಕ್ಷವೆಂದು ಅಂಗೀಕರಿಸಿ, ಪ್ರತ್ಯಕ್ಷ ಆಗಮಗಳ ಪ್ರಾಮಾಣ್ಯಕ್ಕೆ ಅಬಾಧ್ಯತ್ವವು ಸಮಾನವಾದ್ದರಿಂದ ಅದ್ವೈತ ಮೋಕ್ಷಕ್ಕೆ ಹಾನಿಯೂ ಸಮಾನವೆಂದು ಹೇಳಲಾಯಿತು. ಈಗ ಆ ಮೋಕ್ಷವೇ

ಕೂಡುವುದಿಲ್ಲ ಎಂಬ ಆಶಯದಿಂದ ಪ್ರಶ್ನಿಸುತ್ತಾರೆ –

**ಮಿಥ್ಯಾತ್ವಮಾನಂ ಮೋಕ್ಷೇಽಪಿ ಮಾನಂ ಕಿಂ ನೇತಿ ಭಣ್ಯತಾಮ್ ।**

**ಮಾನತ್ವೇಽದ್ವೈತಹಾನಿಃ ಸ್ಯಾದಮಾನತ್ವೇಽಪ್ಯಮೋಕ್ಷತಾ ।।೬೦।।**

ಮಿಥ್ಯಾತ್ವಸಾಧಕ ಆಗಮರೂಪ ಪ್ರಮಾಣವೂ ಅನುಮಾನರೂಪ ಪ್ರಮಾಣವೂ ಮೋಕ್ಷ ಸಮಯದಲ್ಲಿಯೂ ಕೂಡ ಅಬಾಧಿತವಾದ ಪ್ರಾಮಾಣ್ಯವುಳ್ಳದ್ದೋ ಅಥವಾ ಬಾಧಿತಸ್ವರೂಪ ಪ್ರಾಮಾಣ್ಯವುಳ್ಳದ್ದೋ ಎಂದು ಪ್ರಶ್ನಿಸಿದರೆ ಉತ್ತರವು ಹೇಳಲ್ಪಡಲಿ. ಅಬಾಧಿತಸ್ವರೂಪ ಪ್ರಮಾಣವೆಂದು ಹೇಳಿದರೆ ಬ್ರಹ್ಮನ ಅದ್ವಿತೀಯತ್ವಕ್ಕೆ ಭಂಗ ಬರುವುದರಿಂದ ಅದ್ವೈತ ಹಾನಿಯು. ಪ್ರಮಾಣವಲ್ಲವೆಂದರೆ ಮೋಕ್ಷವೇ ಸಿದ್ಧಿಸದು. ಅದು ಹೇಗೆಂದರೆ –

**ವಿಶ್ವಸ್ಯ ಪುನರಾಪತ್ತಿರ್ಮಿಥ್ಯಾಮಾನಂ ಯದಾ ನ ಮಾ ।**

**ಅಸ್ತಿ ಚೇನ್ಮುಕ್ತ್ಯವಸ್ಥಾ ಚ ದ್ವೈತಾಪತ್ತಿರತೋಽನ್ಯಥಾ ।।೬೧।।**

**ಅಮುಕ್ತತ್ವಂ ತಥಾ ಕಾಲೇ ಕಾಲಾಧೀನಾ ಹಿ ಮುಕ್ತತಾ ।**

ವಿಶ್ವಮಿಥ್ಯಾತ್ವ ಸಾಧಕ ಪ್ರಮಾಣಕ್ಕೆ ಪ್ರಾಮಾಣ್ಯವೇ ಇಲ್ಲದೇ ಹೋದರೆ ಆಗ ಜಗತ್ತಿಗೆ ಪುನಃ ಪ್ರಾಪ್ತಿಯು ಆಗಬೇಕಾಗುವುದು. ಅಂದರೆ ಜಗತ್ತು ಇದ್ದರೆ ಮೋಕ್ಷವು ಹೇಗೆ ಕೂಡುವುದು? ಮೋಕ್ಷಕ್ಕೆ ಅಸ್ತಿತ್ವವನ್ನು ಒಪ್ಪಿದರೆ ಆಗ ಎರಡನೆಯ ಪದಾರ್ಥವನ್ನು ಒಪ್ಪಬೇಕಾಗುವುದು. ಮೋಕ್ಷವು ಅಸತ್ತಾದರೆ ಆಗ ಆತ್ಮನಿಗೆ ಅಮುಕ್ತತ್ವವು ಬರಬೇಕಾಗುವುದು. ಹಾಗೆಯೇ ಮೋಕ್ಷಾವಸ್ಥೆಯಲ್ಲಿ ಕಾಲವು ಇದೆಯೋ ಇಲ್ಲವೋ ಎಂದು ವಿಕಲ್ಪಿಸಿ ದೋಷವನ್ನು ಹೇಳಬೇಕು. ಕಾಲವು ಇದ್ದರೆ ದ್ವೈತಾಪತ್ತಿಯು. ಕಾಲವವೇ ಇಲ್ಲದಿದ್ದರೆ ಘುಕ್ತತ್ವವೇ ಇಲ್ಲ. ಏಕೆಂದರೆ ಮುಕ್ತತ್ವವು ನಿಯಮೇನ ಕಾಲವನ್ನೇ ಅಧಿಕರಣವಾಗುಳ್ಳದ್ದು. 'ಯದ್ವಸ್ತು ತತ್ಕಾಲಸಂಬಂಧ್ಯೇವ' ಎಂದು ವ್ಯಾಪ್ತಿಯು ಪ್ರಸಿದ್ಧವು.

ಮುಕ್ತಿಗೆ ಕಾಲಾಧಿಕರಣತ್ವ ನಿಯಮವು ಕೇವಲ ಅನುಮಾನದಿಂದ ಮಾತ್ರವಲ್ಲ ಆಗಮದಿಂದಲೂ ಸಿದ್ಧವಾಗಿದೆ ಎನ್ನುತ್ತಾರೆ –

**ಕಾಲ ಏವಾಗಮೋಽಪ್ಯಾಹ ಮುಕ್ತಿಂ ಕಾಲನಿವರ್ತನೇ ।।೬೨।।**

**ಮುಕ್ತೇರಪಿ ನಿವೃತ್ತಿಃ ಸ್ಯಾತ್................................ ।**

'ತದಾ ವಿದ್ವಾನ್ ಪುಣ್ಯಪಾಪೇ ವಿಧೂಯ' 'ದೃಷ್ಟ್ವೈವ ತಂ ಮುಚ್ಯತೇ' ಇತ್ಯಾದಿ ಆಗಮವೂ ಕಾಲದಲ್ಲಿಯೇ ಮುಕ್ತಿಯು ಎಂದು ಹೇಳುತ್ತದೆ. ಕಾಲವು ಅಸತ್ವವೆಂದಾದರೆ ಮೋಕ್ಷವೂ ಅಸತ್ವವೇ ಆಗುವುದು. ಅಂದರೆ ವ್ಯಾಪಕವಾದ ಕಾಲವು ನಿವೃತ್ತವಾದರೆ ವ್ಯಾಪ್ಯವಾದ ಮೋಕ್ಷವೂ ನಿವೃತ್ತವಾಗಬೇಕಾಗುವುದು.

ಮೋಕ್ಷವು ಕಾಲಸಂಬಂಧಿಯಲ್ಲದೇ ಹೋದರೆ ಆಗ ಅದು ಮೊಲದ ಕೋಡಿನಂತೆ ಅಸತ್ತೇ ಆಗುವುದು ಎಂದು ತಾತ್ಪರ್ಯ.

ಹಾಗಾದರೆ ಮುಕ್ತಿಯು ಅಸತ್ತೆಂಬುದು ನಮಗೆ ಅನಿಷ್ಟವಲ್ಲವೆಂದು ಮಾಯಾವಾದಿಯು ಆಶಂಕಿಸಿದರೆ –

**.............................. ಸಂಸಾರಿತ್ವಮತೋ ಭವೇತ್ ।**

ಸತ್ತಾದ ಚೈತನ್ಯಕ್ಕೆ ಬಂದಾಭಾವರೂಪವಾದ ಮೋಕ್ಷವು ಅಸತ್ತಾದರೆ, ದೇವದತ್ತನಂತೆ ಮೋಕ್ಷಾಪೇಕ್ಷಿಗೂ ಸಂಸಾರಿತ್ವವು ಬರಬೇಕಾಗುವುದು.

ಹಾಗಾದರೆ ಬಂಧವು ಮಿಥ್ಯೆಯಾದ್ದರಿಂದ ಸಂಸಾರವೂ ಇಲ್ಲ, ಮೋಕ್ಷವೂ ಇಲ್ಲ. ಆದ್ದರಿಂದ ನಮಗೆ ಅನಿಷ್ಟವಲ್ಲ ಎಂದು ಮಾಯಾವಾದಿಯು ಆಶಂಕಿಸಿದರೆ, ಹಾಗೆ ಹೇಳಕೂಡದು. ಏಕೆಂದರೆ ಬಂಧಮಿಥ್ಯಾತ್ವವನ್ನು ಅಪ್ರಮಾಣಿಕವೆಂದು ದೃಢೀಕರಿಸುವ ಮೂಲಕ ಈ ಹಿಂದೆಯೇ ನಿರಾಕರಿಸಲಾಗಿದೆ.

ಇನ್ನು ಪ್ರಬಲವಾದ ಪ್ರತ್ಯಕ್ಷದಿಂದ ಸಿದ್ಧವಾದುದಕ್ಕೆ ಅನುಮಾನದಿಂದಾಗಲೀ ಆಗಮದಿಂದಾಗಲೀ ಎಲ್ಲಿಯೂ ಬಾಧವು ಕಂಡಿಲ್ಲ ಎಂದು ಹೇಳುತ್ತಾರೆ –

**ಕ್ವ ಚ ಪ್ರತ್ಯಕ್ಷತಃ ಪ್ರಾಪ್ತಮನುಮಾಗಮಬಾಧಿತಮ್ ।।೬೩।।**

ಸಾಕ್ಷಾತ್ಕಾರದಿಂದ ಸಿದ್ಧವಾದುದು ಅನುಮಾಗಮಗಳಿಂದ ಬಾಧಿತವೆಂಬುದು ಎಲ್ಲಿ ಕಂಡಿದೆ?

ಹಾಗಾದರೆ ದೇಹಾತ್ಮತ್ವವು ಪ್ರತ್ಯಕ್ಷದಿಂದ ಪ್ರಾಪ್ತವಾಗಿದ್ದರೂ, 'ದೇಹೋ ನ ಆತ್ಮಾ ಭೂತತ್ವಾತ್ ಕಾರ್ಯತ್ವಾತ್ ಘಟವತ್' (ದೇಹವು ಆತ್ಮವಲ್ಲ ಭೂತವಾಗಿರುವುದರಿಂದ ಕಾರ್ಯವಾಗಿರುವುದರಿಂದ ಘಟದಂತೆಯೇ) ಇತ್ಯಾದಿ ಅನುಮಾನದಿಂದಲೂ, 'ತಂ ಸ್ವಾಚ್ಛರೀರಾತ್ಪ್ರವೃಹೇತ್' (ಜೀವನನ್ನು ತನ್ನ ಶರೀರದಿಂದ ಭಿನ್ನವಾಗಿ ತಿಳಿಯಬೇಕು) ಇತ್ಯಾದಿ ಆಗಮಗಳಿಂದಲೂ ದೇಹವೇ ಆತ್ಮವೆಂಬ ಪ್ರತ್ಯಕ್ಷಕ್ಕೆ ಬಾಧ ಕಂಡುಬಂದಿದೆ ಎಂದು ಆಶಂಕಿಸಿದರೆ –

**ದೇಹಾತ್ಮತ್ವಂ ಯದಿ ನ ತತ್ಪ್ರಾಪ್ತಂ ಪ್ರತ್ಯಕ್ಷತಃ ಕ್ವಚಿತ್ ।**
**ಮಮ ದೇಹ ಇತಿ ಹ್ಯೇವ ನ ದೇಹೋಽಹಮಿತಿ ಪ್ರಮಾ ।।೬೪।।**
**ಉಪಚಾರಶ್ಚ ಕೃಷ್ಣೋಽಹಮಿತಿ ಕರ್ದಮಲೇಪನೇ ।**
**ವಸ್ತ್ರಸ್ಯ ಯದ್ವದೇವಂ ಸ್ಯಾತ್ ಯದ್ಯುಪಾಧಿಕೃತಂ ತದಾ ।।೬೫।।**
**ಸ್ವತಃ ಶುಕ್ಲತ್ವವತ್ ಕಾರ್ಷ್ಣ್ಯಂ ನ ಮಮೇತಿ ಪ್ರತೀಯತೇ ।**

ಪ್ರತ್ಯಕ್ಷದಿಂದ ಪ್ರಾಪ್ತವಾದ ದೇಹವೇ ಆತ್ಮವು ಎಂಬ ಪ್ರತೀತಿಯು ಅನುಮಾನ

ಆಗಮಗಳಿಂದ ಬಾಧಿತವು ಎಂದು ಹೇಳಕೂಡದು. ಏಕೆಂದರೆ ಪಂಡಿತರಲ್ಲಾಗಲೀ ಪಾಮರರಲ್ಲಾಗಲೀ ದೇಹವೇ ಆತ್ಮವು ಎಂಬುದಾಗಿ ಎಂದಿಗೂ ಸಾಕ್ಷಾತ್ಕಾರವಾಗಿಲ್ಲ. ಎಲ್ಲ ಪ್ರಾಣಿಗಳಿಗೂ 'ನನ್ನ ದೇಹ' ಎಂಬ ಪ್ರತೀತಿಯುಂಟೇ ಹೊರತು 'ನಾನೇ ದೇಹ' ಎಂಬುದಾಗಿ ಯಾವತ್ತೂ ಪ್ರತೀತಿಯಿರುವುದಿಲ್ಲ. 'ಕೃಷ್ಣೋಽಹಂ' ಎನ್ನುವ ವ್ಯವಹಾರದಲ್ಲಿಯೂ ಆತ್ಮನಿಗೆ ದೇಹವಿದ್ದ ಪ್ರಯುಕ್ತ ಉಪಚಾರದಿಂದ ಹೇಳಿದ್ದೇ ಹೊರತು ಆತ್ಮನೇ ಕಪ್ಪು ಎಂಬ ಮುಖ್ಯಾರ್ಥದಿಂದಲ್ಲ. ಬಿಳಿ ಬಟ್ಟೆಗೆ ಕೆಸರಿನ ಲೇಪವಾದಾಗ ಅದನ್ನು ಕಪ್ಪು ಬಟ್ಟೆ ಎಂದು ಹೇಗೆ ಹೇಳುತ್ತೇವೋ ಹಾಗೆಯೇ ನಾನು ಕಪ್ಪು ಎಂಬ ವ್ಯವಹಾರವು. ವಸ್ತ್ರದಲ್ಲಿ ಕಪ್ಪು ಬಣ್ಣವಿಲ್ಲದಿದ್ದರೂ ಕಪ್ಪು ಬಣ್ಣದ ಕೆಸರಿನ ಸಂಬಂಧದಿಂದ ವಸ್ತ್ರವು ಕಪ್ಪು ಎಂಬ ವ್ಯವಹಾರವು ಹೇಗೋ ಹಾಗೆಯೇ ಕಪ್ಪು ಬಣ್ಣದ ದೇಹದ ಸಂಬಂಧದಿಂದ 'ಕೃಷ್ಣೋಽಹಂ' ಎನ್ನುವ ವ್ಯವಹಾರವು ಕೂಡುವುದು. ಕಪ್ಪು ಬಟ್ಟೆಯನ್ನು ನೋಡಿದಾಗ, ಈ ಬಟ್ಟೆಯು ಬಿಳಿಯೇ, ಕಪ್ಪಲ್ಲ. ಕಪ್ಪು ಬಣ್ಣವಾದರೋ ಉಪಾಧಿಕೃತವು ಎಂದು ತಿಳಿಯುತ್ತೇವೆ. ಹಾಗೆಯೇ ನಾನು ಕಪ್ಪು ಎಂದು ಹೇಳುವಾಗಲೂ ನಾನು ಸ್ವತಃ ರೂಪವಿಲ್ಲದವನು, ಕಪ್ಪು ಬಣ್ಣವಾದರೋ ನನ್ನ ಸ್ವಭಾವವಲ್ಲ. ಆದರೆ ದೇಹವೆಂಬ ಉಪಾಧಿಯಿಂದಾಗಿ ನನಗೆ ಕಪ್ಪು ಬಣ್ಣವಿದೆ ಎಂದು ತಿಳಿಯುತ್ತೇವೆ. ಈ ಪ್ರತೀತಿಯು ಯಥಾರ್ಥವೇ ಆಗಿರುವುದರಿಂದ ಇದಕ್ಕೆ ಅನುಮಾನಾದಿಗಳಿಂದ ಬಾಧವಿಲ್ಲ.

ಹಾಗಾದರೆ ಬಟ್ಟೆಗೂ ಕೆಸರಿಗೂ ಭೇದವಿದೆಯೆಂಬ ಜ್ಞಾನವು ನಮಗಿರುವ ಕಾರಣ ಅಲ್ಲಿ ತೋರಿದ ಕಪ್ಪು ಕೆಸರಿನಿಂದಾದದ್ದು ಎಂದು ತಿಳಿಯಲು ಶಕ್ಯವಾಗುತ್ತದೆ. ಆದರೆ ದೇಹ ಆತ್ಮರಿಗೆ ಭೇದದ ಪ್ರತೀತಿಯಿಲ್ಲದಿರುವುದರಿಂದ ಆತ್ಮನಲ್ಲಿ ತೋರುವ ಕಾರ್ಷ್ಣ್ಯವು (ಕಪ್ಪು ಬಣ್ಣವು) ದೇಹೋಪಾಧಿ ನಿಮತ್ತಕ ಎಂದು ಹೇಳಲಾಗದು ಎಂದು ಆಶಂಕಿಸಿದರೆ –

**ಕಥಂ ಚ ಭೇದಾ ದೇಹಾದೇರಾತ್ಮನೋ ನ ಪ್ರತೀಯತೇ ॥೬೬॥**

ದೇಹ ಮತ್ತು ಅದರ ಧರ್ಮಗಳ ದೆಶೆಯಿಂದ ಜೀವನಿಗೆ ಭೇದವು ಹೇಗೆ ತಾನೆ ತೋರುವುದಿಲ್ಲ? ಅಂದರೆ ದೇಹಾದಿಗಳ ಸಂಘಾತಕ್ಕೂ ಆತ್ಮನಿಗೂ ಪರಸ್ಪರ ಭೇದವೂ, ಅದರ ಧರ್ಮಗಳಿಗೆ ಪರಸ್ಪರ ಅಸಂಸರ್ಗವೂ ಪ್ರತೀತವೇ ಆಗುತ್ತದೆ ಎಂದರ್ಥ. ಅದು ಹೇಗೆಂದರೆ –

**ಜಾತಮಾತ್ರಾ ಮೃಗಾ ಗಾವೋ ಹಸ್ತಿನಃ ಪಕ್ಷಿಣೋ ಝುಷಾಃ ।**

**ಭಯಾಭಯಸ್ವಭೋಗಾದೌ ಕಾರಣಾನಿ ವಿಜಾನತೇ ॥೬೭॥**

ಮೃಗಗಳು, ಗೋವುಗಳು, ಆನೆಗಳು, ಪಕ್ಷಿಗಳು, ಮತ್ಸ್ಯಗಳು ಮುಂತಾದವು ಹುಟ್ಟುತ್ತಿದ್ದಂತೆಯೇ ಭಯ, ಭಯವಿಲ್ಲದಿರುವಿಕೆ ಹಾಗೂ ತನ್ನ ಸುಖದುಃಖಾದಿಗಳ ಅನುಭವದಲ್ಲಿ ಕಾರಣಗಳನ್ನು ಅರಿತಿರುತ್ತವೆ.

ಹೇಗೆಂದರೆ, ಸಿಂಹ ಹುಲಿ ಮುಂತಾದವು ಭಯಕಾರಣಗಳು, ತಾಯಿ ಮುಂತಾದವು ಅಭಯಕಾರಣಗಳು, ಸ್ತನ್ಯಪಾನ ಮುಂತಾದವು ಸುಖಕಾರಣಗಳು, ಶಂಕ್ವಾದಿಗಳಿಂದ ಕಣ್ಣಿನಲ್ಲಿ ತುರಿಸುವಿಕೆ ಮುಂತಾದವು ದುಃಖಕ್ಕೆ ಕಾರಣಗಳು ಇತ್ಯಾದಿ ಸಂಗತಿಗಳು ಪ್ರಾಣಿಪಕ್ಷಿಗಳಿಗೆ ಮೊದಲೇ ತಿಳಿದಿರುತ್ತವೆ. ಆದ್ದರಿಂದಲೇ ಸಿಂಹ ಹುಲಿ ಮೊದಲಾದವುಗಳ ಧ್ವನಿ ಮಾತ್ರದಿಂದ ಸಾಧು ಪ್ರಾಣಿಗಳು ಹೆದರಿ ಪಲಾಯನ ಮಾಡುತ್ತವೆ. ತಾಯಿಯ ಬಳಿ ಓಡಿ ಬರುತ್ತವೆ. ಸ್ತನ್ಯಪಾನಾದಿಗಳಲ್ಲಿ ತೊಡಗುತ್ತವೆ. ಕಣ್ಣಿನಲ್ಲಿ ಸೇರುವ ಹುಳಗಳನ್ನು ದೂರಸರಿಸುತ್ತವೆ.

ಹಾಗಾದರೆ ಇದರಿಂದ ಏನು ತಿಳಿಯುವುದು ಎಂದರೆ –

**ಅಸ್ಮೃತೌ ಪೂರ್ವದೇಹಸ್ಯ ವಿಜ್ಞಾನಂ ತತ್ಕಥಂ ಭವೇತ್ ।**

**ಅನ್ವಯವ್ಯತಿರೇಕಾದೇರನುಸಂಧಾನವಿಸ್ಮೃತೌ ।।೬೮।।**

ಪೂರ್ವದೇಹದ ಸ್ಮರಣೆಯಿಲ್ಲದಿದ್ದಲ್ಲಿ ಇವುಗಳು ಭಯಾದಿ ಕಾರಣಗಳು ಎಂಬ ಜ್ಞಾನವು ಹೇಗೆ ಆಗುವುದು? ಇವು ಇಷ್ಟಸಾಧನ, ಅವು ಅನಿಷ್ಟಸಾಧನ, ಇದಿದ್ದರೆ ಸುಖ, ಇದಿಲ್ಲದಿದ್ದರೆ ದುಃಖ, ಹೀಗೆ ಅನ್ವಯ--ವ್ಯತಿರೇಕಗಳಿಂದ ರಾಗದ್ವೇಷಗಳೇ ಪ್ರವೃತ್ತಿ–ನಿವೃತ್ತಿಗಳಿಗೆ ಕಾರಣವು ಎಂದು ನಮ್ಮಲ್ಲಿ ನಿಶ್ಚಿತವಾಗಿದೆ. ಪಶುಪಕ್ಷಿಗಳಿಗೆ ಹುಟ್ಟುವಾಗಲೇ ಇಷ್ಟಾನಿಷ್ಟಸಾಧನತ್ವಗಳ ಜ್ಞಾನವಿರುವುದರಿಂದ ಅದು ಪ್ರತ್ಯಕ್ಷದಿಂದ ಉಂಟಾಗಿದೆ ಎಂದು ಹೇಳುವ ಹಾಗಿಲ್ಲ. ಅನುಮಾನ ಉಪದೇಶಾದಿಗಳಿಂದಲೂ ಸಾಧ್ಯವಿಲ್ಲ. ಏಕೆಂದರೆ ಪಶುಪಕ್ಷಿಗಳಿಗೆ ವಿಶೇಷವಾದ ಬುದ್ಧ್ಯಾದಿಗಳು ಇರುವುದಿಲ್ಲ. ಆದ್ದರಿಂದ ಜನ್ಮಾಂತರ ಅನುಭವದ ಸ್ಮೃತಿಯನ್ನು ಒಪ್ಪಲೇಬೇಕು. ಪಶುಪಕ್ಷಿಗಳಿಗೆ ಪೂರ್ವದೇಹದ ಸ್ಮರಣೆಯು ಇದ್ದೇ ಇರುವುದೆಂದು ನಿಶ್ಚಿತವಾಗುವುದು. ಹಾಗೆಯೇ ಮನುಷ್ಯರಲ್ಲಿಯೂ ಪೂರ್ವದೇಹದ ಸ್ಮರಣೆ ಯನ್ನು ಒಪ್ಪಲೇಬೇಕು.

ಮನುಷ್ಯರಲ್ಲಿಯೂ ಪೂರ್ವದೇಹದ ಸ್ಮರಣೆ ಇರುವುದೆಂದು ಒಪ್ಪೋಣ. ಮುಂದೇನು ಎಂದರೆ –

**ಯದಾ ದೇಹಾಂತರಜ್ಞಾನಂ ದೇಹೈಕ್ಯಾವಸಿತಿಃ ಕುತಃ ।**

ಈಗ ಈ ದೇಹದಲ್ಲಿರತಕ್ಕ ನನಗೆ ಕೇವಲ ಇದೇ ದೇಹವಲ್ಲದೇ ಇದಕ್ಕಿಂತ ಮೊದಲು ಬೇರೊಂದು ದೇಹವಿತ್ತು ಎಂಬುದಾಗಿ ದೇಹಾಂತರ ಸ್ಮರಣವು ಯಾವಾಗ ನಿಶ್ಚಿತವಾಗುವುದೋ, ಆಗ ದೇಹಕ್ಕೂ ನನಗೂ ಅಭೇದವು ಎಂಬ ಐಕ್ಯ ಜ್ಞಾನವು ಬರುವುದಾದರೂ ಹೇಗೆ? ಆದುದರಿಂದ ಮಮ ದೇಹಃ ಎಂದು ಆತ್ಮ ಬೇರೆ ದೇಹ ಬೇರೆ ಎಂಬ ಭೇದ ಜ್ಞಾನವು ಯಥಾರ್ಥವೇ ಆಗುವುದು. ಕೃಷ್ಣೋऽಹಂ ಎಂದು ಆತ್ಮನಲ್ಲಿ ದೇಹಧರ್ಮವಾದ ಕಾರ್ಷ್ಣ್ಯಾದಿಗಳ ಆರೋಪವು ಔಪಚಾರಿಕವೆಂದೇ ಅಂಗೀಕರಿಸಬೇಕು.

ಹಾಗಾದರೆ ನನ್ನ ಮನೆ ಇತ್ಯಾದಿಗಳಂತೆ ನನ್ನ ದೇಹ ಎಂದು ಆತ್ಮನಿಗೂ ದೇಹಕ್ಕೂ ಭೇದ ಜ್ಞಾನವೇ ಇದ್ದ ಪಕ್ಷದಲ್ಲಿ, ನನ್ನ ದೇಹ ಕಪ್ಪು ನಾನು ಕಪ್ಪಲ್ಲ ಎಂದು ಜನರು ಏಕೆ ವ್ಯವಹರಿಸುವುದಿಲ್ಲ ಎಂದು ಆಶಂಕಿಸಿದರೆ –

**ವ್ಯಾಪ್ತತ್ವಾದಾತ್ಮನೋ ದೇಹೇ ವ್ಯವಹಾರೇಷ್ವಪಾಟವಾತ್ ॥೬೯॥**

**ಭೇದಜ್ಞಾನೇಽಪಿ ಚಾಂಗಾರವಹ್ನಿವತ್ ಸ್ವಾವಿವಿಕ್ತವತ್ ।**

**ಭವಂತಿ ವ್ಯವಹಾರಾಶ್ಚ ...................... ॥**

ದೀಪ ಪ್ರಕಾಶದಂತೆ ಆತ್ಮನಿಗೆ ದೇಹದಲ್ಲಿ ವ್ಯಾಪ್ತತ್ವವಿರುವುದರಿಂದ, ಕೆಂಡದಲ್ಲಿ ವ್ಯಾಪ್ತವಾದ ಬೆಂಕಿಯಲ್ಲಿ ಅದೇ ಬೆಂಕಿ ಎಂಬ ವ್ಯವಹಾರವಿದ್ದಂತೆಯೇ, ಜನರಿಗೆ ವ್ಯವಹಾರದಲ್ಲಿ ಸ್ಪಷ್ಟವಾಗಿ ಭೇದದ ಅರಿವು ಇಲ್ಲದಿರುವ ಕಾರಣ, ಕೃಷ್ಣೋಽಹಂ ಇತ್ಯಾದಿ ಅಭೇದವತ್ ವ್ಯವಹಾರಗಳು ಆಗುತ್ತವೆ.

ಜ್ಞಾನವೇ ವ್ಯವಹಾರಕ್ಕೆ ಸಾಧನವು. ಹಾಗಿದ್ದರೂ ಯಥಾರ್ಥವಾದ ಭೇದ ಜ್ಞಾನವಿದ್ದರೂ ಅಭೇದ ವ್ಯವಹಾರವು ಹೇಗೆ ಕೂಡುವುದು ಎಂದರೆ –

**......................... ನ ಹಿ ಪ್ರತ್ಯಕ್ಷಗಾನಪಿ ॥೭೦॥**

**ಅರ್ಥಾನ್ಯಥಾಽನುಭವತಃ ಪ್ರತಿಪಾದಯಿತುಂ ಕ್ಷಮಾಃ ।**

**ಲೋಕಾಃ ತತೋ ಹಿ ಪ್ರತ್ಯಕ್ಷಸಿದ್ಧಂ ನಾನ್ಯೇನ ಕೇನಚಿತ್ ॥೭೧॥**

**ಶಕ್ಯಂ ವಾರಯಿತುಂ ಕ್ವಾಪಿ .............................. ।**

ಸ್ವಾನುಭವದಿಂದ ಪ್ರತ್ಯಕ್ಷಕ್ಕೆ ಪ್ರತೀತವಾದ ವಿಷಯಗಳನ್ನೂ ಕೂಡ ಪರರ ಮುಂದೆ ಯಥಾರ್ಥರೂಪದಿಂದ ಪ್ರತಿಪಾದಿಸಲಿಕ್ಕೆ ಜನರು ಸಮರ್ಥರಾಗುವುದಿಲ್ಲ ಎಂಬುದು ಲೋಕದಲ್ಲಿ ಅನುಭವಸಿದ್ಧವು. ಅವಳಿ ಮಕ್ಕಳಿಗೆ ಅತ್ಯಂತ ಭೇದವನ್ನು ಅರಿತಿರುವ ತಾಯಿಯನ್ನು ಈ ಮಕ್ಕಳನ್ನು ಬೇರೆ ಬೇರೆ ಎಂದು ಗುರುತಿಸುವುದು ಹೇಗೆ ಎಂದು ಕೇಳಿದರೆ ತನಗೆ ಗೊತ್ತಿದ್ದರೂ ಅದನ್ನು ಅವಳು ಸಮರ್ಪಕವಾಗಿ ಪ್ರತಿಪಾದಸಲಿಕ್ಕೆ ಸಮರ್ಥಳಾಗುವುದಿಲ್ಲ. ಆದರೂ ಆ ಮಕ್ಕಳು ಬೇರೆ ಬೇರೆ ಎನ್ನುವುದು ಪ್ರತ್ಯಕ್ಷಸಿದ್ಧವೇ ಆಗಿರುವುದರಿಂದ ಅದನ್ನು ಅಪಲಾಪ ಮಾಡುವುದು ಶಕ್ಯವಿಲ್ಲ. ಕೆಲವು ಕಡೆ ಪ್ರತ್ಯಕ್ಷವು ಅಯಥಾರ್ಥವಾಗಿದ್ದರೆ ಅದಕ್ಕೆ ಪ್ರಬಲವಾದ ಪ್ರತ್ಯಕ್ಷದಿಂದಲೇ ಬಾಧವು, ಬೇರೆ ರೀತಿಯಿಂದಲ್ಲ. ಪ್ರತ್ಯಕ್ಷದಿಂದ ಸಿದ್ಧವಾದುದನ್ನು ಬೇರೆ ಯಾವುದರಿಂದಲೂ ನಿರಾಕರಿಸುವುದು ಅಶಕ್ಯವು. ಪ್ರತ್ಯಕ್ಷಕ್ಕೆ ಅದಕ್ಕಿಂತ ಪ್ರಬಲವಾದ ಪ್ರತ್ಯಕ್ಷದಿಂದಲೇ ಬಾಧವು. ಸ್ವಬಾವತಃ ಪ್ರಬಲವಾದ ಪ್ರತ್ಯಕ್ಷಕ್ಕೆ ವಿರುದ್ಧಗಳಾದ ಅನುಮಾನ ಆಗಮಗಳು ಆಭಾಸಗಳೇ.

ಪ್ರತ್ಯಕ್ಷವು ವರ್ತಮಾನಾರ್ಥವನ್ನು ಮಾತ್ರ ಗ್ರಹಿಸುವುದಾದರೂ, ಜಗತ್ತಿಗೆ

ಕಾಲತ್ರಯಬಾಧ್ಯತ್ವವನ್ನು ಪ್ರತಿಪಾದಿಸುತ್ತವೆ ಎಂದು ಪರಕೀಯರು ಉದಾಹರಿಸುವ 'ನೇಹ ನಾನಾಸ್ತಿ' ಇತ್ಯಾದಿ ಆಗಮಗಳಿಗೆ ಪ್ರತ್ಯಕ್ಷ ವಿರೋಧವು ಬಂದೇ ಬರುವುದು. ಹಾಗಿದ್ದರೂ ಪ್ರಸಕ್ತಿ ಇರುವಾಗ ವಸ್ತುಸ್ಥಿತಿಯನ್ನು ಹೇಳಬೇಕು ಎನ್ನುವ ಆಶಯದಿಂದ ಪ್ರತ್ಯಕ್ಷಕ್ಕೆ ವರ್ತಮಾನಗ್ರಾಹಿತ್ವ ಎಂಬ ನಿಯಮವನ್ನು ತಿರಸ್ಕರಿಸಲು ಮುಂದಿನ ಪ್ರಕರಣವನ್ನು ಆರಂಭಿಸುತ್ತ ಸಾಕ್ಷಿಪ್ರತ್ಯಕ್ಷಕ್ಕೆ ಕಾಲತ್ರಯ ಅಬಾಧ್ಯತ್ವವನ್ನು ನಿರೂಪಿಸುತ್ತಾರೆ –

**.................................. ತಚ್ಚೇನ್ನೋತ್ತರಗೋಚರಮ್ ।**

**ಕಥಮೇವೋತ್ತರಃ ಕಾಲಸ್ತದ್ಗೋ ಮೋಕ್ಷಶ್ಚ ಗಮ್ಯತೇ ॥೭೨॥**

ಪ್ರತ್ಯಕ್ಷವಿಶೇಷವಾದ ಸಾಕ್ಷಿಯು ಉತ್ತರಕಾಲವನ್ನೂ ಅತೀತಕಾಲವನ್ನೂ ವಿಷಯೀಕರಿಸದೇ ಹೋದರೆ, ಅಂದರೆ ವರ್ತಮಾನಕಾಲವನ್ನು ಮಾತ್ರ ಗ್ರಹಿಸಿದರೆ, ಉತ್ತರಕಾಲವೂ, ಹಾಗೆಯೇ ಉತ್ತರಕಾಲದಲ್ಲಿರತಕ್ಕ ಮೋಕ್ಷವೂ ಹೇಗೆ ತಾನೆ ತಿಳಿಯಲ್ಪಡುವುದು?

ಶುಕವಾಮದೇವಾದಿಗಳು ಜ್ಞಾನದಿಂದಲೇ ಮುಕ್ತಾರಾಗಿರುವರು. ನಾನೂ ಕೂಡ ಮುಕ್ತನಾಗುವೆನು. ಇತ್ಯಾದಿ ಜ್ಞಾನವು ಆಗಮದಿಂದಲೇ ಆಗುವುದು. ಹಾಗಿರುವಾಗ ಸಾಕ್ಷಿಯು ಅತೀತ ಹಾಗೂ ಅನಾಗತವಾದ ವಿಷಯಗಳನ್ನು ವಿಷಯೀಕರಿಸುವುದು ಎನ್ನುವುದರಿಂದ ಏನು ಪ್ರಯೋಜನವೆಂದು ಆಶಂಕಿಸಿದರೆ –

**ಆಗಮೋಽಪಿ ಹಿ ಸಾಮಾನ್ಯೇ ಸಿದ್ಧೇ ಪ್ರತ್ಯಕ್ಷತಃ ಪುನಃ ।**

**ವಿಶೇಷಂ ಗಮಯೇದೇವ ಕಥಂ ಶಕ್ತಿಗ್ರಹೋಽನ್ಯಥಾ ॥೭೩॥**

ಸಾಮಾನ್ಯವಾದ ಅನ್ವಯವುಳ್ಳ ಪದಾರ್ಥಸಮೂಹವು ಪ್ರಮಾಣಾಂತರದಿಂದ ಸಿದ್ಧವಾಗಿರಲು, ಮತ್ತೆ ವಿಶೇಷ ಸಮನ್ವಯದಿಂದ ಆಯಾ ಪದಾರ್ಥಸಮೂಹವನ್ನೇ ಆಗಮವೂ ಕೂಡ ತಿಳಿಸಿಕೊಡುವುದು. ಪುನಃ ಸಾಮಾನ್ಯತಃ ತಿಳಿಸಿಕೊಡುವುದಿಲ್ಲ. ಪದಾರ್ಥಗಳು ಮೊದಲು ಸಿದ್ಧಗಳಾಗಿಲ್ಲ ಎಂದು ಹೇಳುವ ಪಕ್ಷದಲ್ಲಿ, ಪದಗಳಿಗೆ ಪದಾರ್ಥಗಳಲ್ಲಿ ವಾಚಕತ್ವ ಶಕ್ತಿಜ್ಞಾನವು ಬಾರದೇ ಹೋಗುವುದು. ಕಟ್ಟಿಗೆಯನ್ನೇ ಅರಿಯದವನಿಗೆ ಕೊಡಲಿಯಿಂದ ಕಟ್ಟಿಗೆಯನ್ನು ಸೀಳಲು ಬರುತ್ತದೆಂಬ ವಿಷಯ ವನ್ನು ತಿಳಿಸಲಿಕ್ಕೆ ಆಗುವುದಿಲ್ಲವಷ್ಟೆ.

ಪದಗಳಿಗೆ ವಾಚಕತ್ವ ಬರಬೇಕಾದರೆ ಪದಾರ್ಥಜ್ಞಾನವು ಅವಶ್ಯಕವೆಂದಾಗಲಿ, ಪದಗಳಿಗೂ ಪದಾರ್ಥಗಳಿಗೂ ವಾಚ್ಯವಾಚಕ ಸಂಬಂಧ ಜ್ಞಾನವೇ ಏಕೆ ಬೇಕು? ಎಂದು ಕೇಳಿದರೆ –

**ಅತೀತಾನಾಗತಾರ್ಥೇಷು ಜಾತೇ ಶಕ್ತಿಗ್ರಹೇಽಖಿಲಮ್ ।**

**ವಿಶೇಷಂ ಗಮಯೇದ್ವಾಕ್ಯಂ ನ ತದಜ್ಞಾತಶಕ್ತಿಕೇ ॥೭೪॥**

ಪದಾರ್ಥಗಳಲ್ಲಿ ವಾಚ್ಯವಾಚಕತ್ವ ಜ್ಞಾನ ಉಂಟಾದಾಗ ಮಾತ್ರ ಎಲ್ಲ ವಾಕ್ಯವೂ **ಅತೀತ** ಅನಾಗತ ವಸ್ತುಗಳಲ್ಲಿ ಅನ್ವಯವಿಶೇಷವನ್ನು ತಿಳಿಸಿಕೊಡುವುದು. ಪದಗಳಲ್ಲಿ ಶಕ್ತಿಜ್ಞಾನವಿಲ್ಲದಿದ್ದರೆ ಆ ವಾಕ್ಯವು ವಿಶೇಷವನ್ನು ತಿಳಿಸಿಕೊಡಲಾರದು.

ಹಾಗಾದರೆ ಶಕ್ತಿಜ್ಞಾನವು ವರ್ತಮಾನ ಪದಾರ್ಥಗಳಲ್ಲಿಯೇ ಅವಶ್ಯಕವಾಗಲಿ, ಅತೀತ ಅನಾಗತ ವಿಷಯಗಳಲ್ಲಿ ಬೇಡ ಎಂದು ಹೇಳಿದರೆ –

**ಶಕ್ತಿಶ್ಚೇದ್ವರ್ತಮಾನೇ ಸ್ಯಾನ್ನಾತೀತಾನಾಗತಂ ವದೇತ್ ।**

ವರ್ತಮಾನಾರ್ಥದಲ್ಲಿ ಮಾತ್ರ ಪದಗಳಿಗೆ ಪದಾರ್ಥಗಳಲ್ಲಿ ವಾಚಕತ್ವ ಶಕ್ತಿಯು ಗ್ರಹಿಸಲ್ಪಡುವುದಾದರೆ, ಆ ವಾಕ್ಯವು ಅತೀತ ಅನಾಗತ ಪದಾರ್ಥಗಳನ್ನು ಗ್ರಹಿಸದೇ ಹೋಗಬೇಕಾಗುವುದು. ಹಾಗಾದರೆ ಅತೀತ ಅನಾಗತವಾದ ಅರ್ಥಗಳಲ್ಲಿಯೂ ಪದಗಳಿಗೆ ಶಕ್ತಿಗ್ರಹಣವು ಇರಲಿ. ಅದರಿಂದ ಏನಾಯಿತು ಎಂದು ಕೇಳಿದರೆ –

**ಯದಿ ಶಕ್ತಿಗ್ರಹೋಽನ್ಯತ್ರ ಕಥಂ ಸ ಸ್ಯಾತ್ತದಗ್ರಹೇ ॥೭೫॥**

ಅತೀತಾನಾಗತ ಪದಾರ್ಥಗಳ ವಿಷಯದಲ್ಲಿಯೂ ಪದಗಳಿಗೆ ಶಕ್ತಿಜ್ಞಾನವು ಅಂಗೀಕೃತವಾದ ಪಕ್ಷದಲ್ಲಿ, ಆ ಅತೀತಾನಾಗತಾರ್ಥಗಳಲ್ಲಿ ಪದಗಳಿಗೆ ಶಕ್ತಿಜ್ಞಾನವು ಆ ಪದಾರ್ಥಗಳನ್ನು ತಿಳಿಯದಿದ್ದರೆ ಹೇಗೆ ಆಗುವುದು? ಅಂದರೆ ಪದಾರ್ಥವನ್ನು ತಿಳಿಯದೆ ಪದಗಳಲ್ಲಿ ವಾಚ್ಯವಾಚಕ ಸಂಬಂಧವು ತಿಳಿಯಲಾರದು. ಅಂದರೆ ವಿಷಯಗಳ ಅರಿವಿಲ್ಲದೆ ಶಕ್ತಿಯನ್ನು ತಿಳಿಯಲು ಸಾಧ್ಯವಿಲ್ಲ. ಆದ್ದರಿಂದ ಸಾಕ್ಷಿಯು ಕೇವಲ ವರ್ತಮಾನ ಪದಾರ್ಥಗಳನ್ನು ಮಾತ್ರವಲ್ಲ ಭೂತ ಹಾಗೂ ಭವಿಷ್ಯತ್ ಪದಾರ್ಥಗಳನ್ನೂ ವಿಷಯೀಕರಿಸುತ್ತದೆ ಎಂದು ಅಂಗೀಕರಿಸಲೇಬೇಕು.

ಈಗ ಮೀಮಾಂಸಮತಾನುಸಾರ ಶಂಕಿಸುತ್ತಾರೆ –

**ಸಾಮಾನ್ಯಂ ದೃಷ್ಟಮೇವಾಸಾವನ್ಯತ್ರ ಗಮಯೇದ್ಯದಿ ।**

**ಸಾಮಾನ್ಯವರ್ಜಿತಂ ವಸ್ತು ಸ್ವರೂಪಂ ಗಮಯೇತ್ಕಥಮ್ ॥೭೬॥**

ಪ್ರಕೃತ ವಾಕ್ಯದ ಏಕದೇಶವಾದ ಶಬ್ದವು ವರ್ತಮಾನದಲ್ಲಿ ಚಕ್ಷುರಾದಿಗಳಿಂದ ಶಬ್ದಶಕ್ತಿವಿಷಯವಾಗಿ ತಿಳಿಯಲ್ಪಟ್ಟದ್ದೇ ಆದ ಸಾಮಾನ್ಯವನ್ನು ಕಾಲಾಂತರದಲ್ಲಿಯೂ ಬೋಧಿಸುತ್ತದೆ. ಸಾಮಾನ್ಯಕ್ಕೆ ಎಲ್ಲ ವಸ್ತುಗಳ ಸ್ವರೂಪತ್ವವನ್ನು ನಾವು ಅಂಗೀಕರಿಸಿದ್ದೇವೆ. ಆದ್ದರಿಂದ ಸಾಮಾನ್ಯ ವಿರಹಿತವಾದ ವಸ್ತುಸ್ವರೂಪವನ್ನು ಶಬ್ದವು ತಿಳಿಸಿಕೊಡಲಾರದು ಎಂದು ಮೀಮಾಂಸಕರ ವಾದ.

ಸಾಮಾನ್ಯವು ಎಲ್ಲ ವಸ್ತುಗಳ ಸ್ವರೂಪದಲ್ಲಿಯೇ ಇದೆ ಎಂಬುದನ್ನು ತಿರಸ್ಕರಿಸುತ್ತಾರೆ –

**ನ ಸ್ವರೂಪತ್ವಸಾಮಾನ್ಯಂ ಕೇನಾಪ್ಯಂಗೀಕೃತಂ ಕ್ವಚಿತ್ ।**

**ಸ್ವರೂಪಂ ಚೇದನುಗತಂ ವ್ಯಾವೃತ್ತಂ ತತ್ರ ಕಿಂ ಭವೇತ್ ॥೭೭॥**

ಸ್ವರೂಪತ್ವಸಾಮಾನ್ಯವು ಯಾರಿಂದಲೂ ಅಂಗೀಕೃತವಾಗಿಲ್ಲ. ಸ್ವರೂಪವು ಅನುಗತವಾದರೆ (ಅಂದರೆ ಸಾಮಾನ್ಯವಾದರೆ) ಆ ವಸ್ತುವಿನಲ್ಲಿ ವ್ಯಾವೃತ್ತವಾದುದು (ಅಂದರೆ ಆ ವಸ್ತುವಿನಿಂದ ಬೇರೆಯಾದುದು) ಯಾವುದಿರುವುದು?

ಅದು ಹೇಗೆಂದರೆ –

**ಸರ್ವಾನುಗತಧರ್ಮಾಣಾಮಂತೇ ಹಿ ಸ್ವತ್ವಮಿಷ್ಯತೇ ।**

**ಕಿಂ ವ್ಯಾವೃತ್ತಮಿತಿ ಪ್ರಶ್ನೇ ಸ್ವರೂಪಮಿತಿ ಕೇವಲಮ್ ॥೭೮॥**

**ಸ್ಯಾದುತ್ತರಂ ತತೋಽನ್ಯಚ್ಚೇತ್ತದೇವ ಸ್ವಯಮೇವ ನಃ ।**

ಎಲ್ಲ ಅನುಗತ ಧರ್ಮಗಳಿಗೆ ಕೊನೆಯಲ್ಲಿ ಸ್ವರೂಪತ್ವವು ಒಪ್ಪುವುದಾದರೆ (ಮೀಮಾಂಸಕರ ಪ್ರಕಾರ), ಅಲ್ಲಿ ವ್ಯಾವೃತ್ತವಾದುದು ಯಾವುದಿದೆ ಎಂದು ಪ್ರಶ್ನಿಸುತ್ತೇವೆ. ಅದಕ್ಕೆ ಕೇವಲ ಸ್ವರೂಪತ್ವವೆಂದೇ ಉತ್ತರ ಹೇಳಬೇಕಾಗುವುದು. ಸ್ವರೂಪತ್ವದಿಂದ ಭೇದರೂಪವಾದುದು ವ್ಯಾವೃತ್ತವು ಎಂದು ಅಂಗೀಕರಿಸಲ್ಪಟ್ಟರೆ ಅದು ನಮಗೆ ಪದಾರ್ಥಸ್ವರೂಪವೇ ಆಗಿದೆ. ಯಾವುದಕ್ಕಾಗಿ ಸ್ವಸ್ವರೂಪತ್ವವು ಉದಾಹೃತವಾಗಿದೆಯೋ ಅಲ್ಲಿ ಭೇದವೇ ಉದಾಹರಣವಾಗುವುದು.

ಅದರಿಂದ ಪ್ರಕೃತಕ್ಕೆ ಏನಾಯಿತೆಂದರೆ –

**ಏವಂ ವ್ಯಾವೃತ್ತರೂಪೇಽಪಿ ಯದಾ ಶಕ್ತಿಗ್ರಹೋ ಭವೇತ್ ॥೭೯॥**

**ತಸ್ಯ ಸಾಮಾನ್ಯತೋ ಜ್ಞಾನಂ ವಿನಾ ಸ ಚ ಭವೇತ್ಕುತಃ ।**

ಹಿಂದೆ ಹೇಳಿದ ಪ್ರಕಾರ ವ್ಯಾವೃತ್ತದಲ್ಲಿಯೂ, ಸ್ವರೂಪದಲ್ಲಿಯೂ ಅಥವಾ ಭೇದದಲ್ಲಿಯೂ ಸ್ವರೂಪಭೇದಾದಿ ಶಬ್ದಗಳಿಗೆ ವಾಚಕತ್ವ ಶಕ್ತಿಜ್ಞಾನವು ಯಾವಾಗ ಅಂಗೀಕೃತವಾಗುವುದೋ, ಆಗ ಆ ಶಕ್ತಿಜ್ಞಾನವು ಸ್ವರೂಪಾದಿಗಳ ಸಾಮಾನ್ಯವಾದ ಜ್ಞಾನವಿಲ್ಲದೆ ಹೇಗೆ ಆಗುವುದು?

**ಅತೋ ವಿಶೇಷಸಾಮಾನ್ಯರೂಪಂ ಸರ್ವಮಪೀಷ್ಯತೇ ॥೮೦॥**

ಆದ್ದರಿಂದ ಎಲ್ಲ ವಸ್ತುವೂ ವಿಶೇಷರೂಪವೂ (ವ್ಯಾವೃತ್ತರೂಪವೂ) ಸಾಮಾನ್ಯ ರೂಪವೂ ಎಂಬುದಾಗಿ ನಮ್ಮಿಂದ ಅಂಗೀಕರಿಸಲ್ಪಡುತ್ತದೆ.

ಹಾಗಾದರೆ ಇದು ಹಿಂದೆ ಹೇಳಿದ್ದಕ್ಕೆ ವಿರುದ್ಧವು. ಮೊದಲು ಸ್ವರೂಪಾದಿಗಳು ಸಾಮಾನ್ಯವಿರಹಿತವು ಎಂದು ಸಾಧಿಸಿ, ಈಗ ಎಲ್ಲ ವಸ್ತುವೂ ಸಾಮಾನ್ಯ ಹಾಗೂ ವಿಶೇಷರೂಪವು ಎಂದು ಅಂಗೀಕರಿಸುವುದು ಅಯುಕ್ತವು ಎಂದು ಆಶಂಕಿಸಿದರೆ –

**ವ್ಯಾವೃತ್ತಂ ಯಚ್ಚ ಸಾಮಾನ್ಯಂ ತದೇವ ಸ್ಯಾದ್ವಿಶೇಷತಃ ।**

ಪದಾರ್ಥಗಳಲ್ಲಿ ವಾಚ್ಯವಾಚಕತ್ವ ಜ್ಞಾನ ಉಂಟಾದಾಗ ಮಾತ್ರ ಎಲ್ಲ ವಾಕ್ಯವೂ ಅತೀತ ಅನಾಗತ ವಸ್ತುಗಳಲ್ಲಿ ಅನ್ವಯವಿಶೇಷವನ್ನು ತಿಳಿಸಿಕೊಡುವುದು. ಪದಗಳಲ್ಲಿ ಶಕ್ತಿಜ್ಞಾನವಿಲ್ಲದಿದ್ದರೆ ಆ ವಾಕ್ಯವು ವಿಶೇಷವನ್ನು ತಿಳಿಸಿಕೊಡಲಾರದು.

ಹಾಗಾದರೆ ಶಕ್ತಿಜ್ಞಾನವು ವರ್ತಮಾನ ಪದಾರ್ಥಗಳಲ್ಲಿಯೇ ಅವಶ್ಯಕವಾಗಲಿ, ಅತೀತ ಅನಾಗತ ವಿಷಯಗಳಲ್ಲಿ ಬೇಡ ಎಂದು ಹೇಳಿದರೆ –

**ಶಕ್ತಿಶ್ಚೇದ್ವರ್ತಮಾನೇ ಸ್ಯಾನ್ನಾತೀತಾನಾಗತಂ ವದೇತ್ ।**

ವರ್ತಮಾನಾರ್ಥದಲ್ಲಿ ಮಾತ್ರ ಪದಗಳಿಗೆ ಪದಾರ್ಥಗಳಲ್ಲಿ ವಾಚಕತ್ವ ಶಕ್ತಿಯು ಗ್ರಹಿಸಲ್ಪಡುವುದಾದರೆ, ಆ ವಾಕ್ಯವು ಅತೀತ ಅನಾಗತ ಪದಾರ್ಥಗಳನ್ನು ಗ್ರಹಿಸದೇ ಹೋಗಬೇಕಾಗುವುದು. ಹಾಗಾದರೆ ಅತೀತ ಅನಾಗತವಾದ ಅರ್ಥಗಳಲ್ಲಿಯೂ ಪದಗಳಿಗೆ ಶಕ್ತಿಗ್ರಹಣವು ಇರಲಿ. ಅದರಿಂದ ಏನಾಯಿತು ಎಂದು ಕೇಳಿದರೆ –

**ಯದಿ ಶಕ್ತಿಗ್ರಹೋಽನ್ಯತ್ರ ಕಥಂ ಸ ಸ್ಯಾತ್ತದಗ್ರಹೇ ॥೭೫॥**

ಅತೀತಾನಾಗತ ಪದಾರ್ಥಗಳ ವಿಷಯದಲ್ಲಿಯೂ ಪದಗಳಿಗೆ ಶಕ್ತಿಜ್ಞಾನವು ಅಂಗೀಕೃತವಾದ ಪಕ್ಷದಲ್ಲಿ, ಆ ಅತೀತಾನಾಗತಾರ್ಥಗಳಲ್ಲಿ ಪದಗಳಿಗೆ ಶಕ್ತಿಜ್ಞಾನವು ಆ ಪದಾರ್ಥಗಳನ್ನು ತಿಳಿಯದಿದ್ದರೆ ಹೇಗೆ ಆಗುವುದು? ಅಂದರೆ ಪದಾರ್ಥವನ್ನು ತಿಳಿಯದೆ ಪದಗಳಲ್ಲಿ ವಾಚ್ಯವಾಚಕ ಸಂಬಂಧವು ತಿಳಿಯಲಾರದು. ಅಂದರೆ ವಿಷಯಗಳ ಅರಿವಿಲ್ಲದೆ ಶಕ್ತಿಯನ್ನು ತಿಳಿಯಲು ಸಾಧ್ಯವಿಲ್ಲ. ಆದ್ದರಿಂದ ಸಾಕ್ಷಿಯು ಕೇವಲ ವರ್ತಮಾನ ಪದಾರ್ಥಗಳನ್ನು ಮಾತ್ರವಲ್ಲ ಭೂತ ಹಾಗೂ ಭವಿಷ್ಯತ್ ಪದಾರ್ಥಗಳನ್ನೂ ವಿಷಯೀಕರಿಸುತ್ತದೆ ಎಂದು ಅಂಗೀಕರಿಸಲೇಬೇಕು.

ಈಗ ಮೀಮಾಂಸಮತಾನುಸಾರ ಶಂಕಿಸುತ್ತಾರೆ –

**ಸಾಮಾನ್ಯಂ ದೃಷ್ಟಮೇವಾಸಾವನ್ಯತ್ರ ಗಮಯೇದ್ಯದಿ ।**

**ಸಾಮಾನ್ಯವರ್ಜಿತಂ ವಸ್ತು ಸ್ವರೂಪಂ ಗಮಯೇತ್ಕಥಮ್ ॥೭೬॥**

ಪ್ರಕೃತ ವಾಕ್ಯದ ಏಕದೇಶವಾದ ಶಬ್ದವು ವರ್ತಮಾನದಲ್ಲಿ ಚಕ್ಷುರಾದಿಗಳಿಂದ ಶಬ್ದಶಕ್ತಿವಿಷಯವಾಗಿ ತಿಳಿಯಲ್ಪಟ್ಟದ್ದೇ ಆದ ಸಾಮಾನ್ಯವನ್ನು ಕಾಲಾಂತರದಲ್ಲಿಯೂ ಬೋಧಿಸುತ್ತದೆ. ಸಾಮಾನ್ಯಕ್ಕೆ ಎಲ್ಲ ವಸ್ತುಗಳ ಸ್ವರೂಪತ್ವವನ್ನು ನಾವು ಅಂಗೀಕರಿಸಿದ್ದೇವೆ. ಆದ್ದರಿಂದ ಸಾಮಾನ್ಯ ವಿರಹಿತವಾದ ವಸ್ತುಸ್ವರೂಪವನ್ನು ಶಬ್ದವು ತಿಳಿಸಿಕೊಡಲಾರದು ಎಂದು ಮೀಮಾಂಸಕರ ವಾದ.

ಸಾಮಾನ್ಯವು ಎಲ್ಲ ವಸ್ತುಗಳ ಸ್ವರೂಪದಲ್ಲಿಯೇ ಇದೆ ಎಂಬುದನ್ನು ತಿರಸ್ಕರಿಸುತ್ತಾರೆ –

**ನ ಸ್ವರೂಪತ್ವಸಾಮಾನ್ಯಂ ಕೇನಾಪ್ಯಂಗೀಕೃತಂ ಕ್ವಚಿತ್ ।**

**ಸ್ವರೂಪಂ ಚೇದನುಗತಂ ವ್ಯಾವೃತ್ತಂ ತತ್ರ ಕಿಂ ಭವೇತ್ ॥೨೭॥**

ಸ್ವರೂಪತ್ವಸಾಮಾನ್ಯವು ಯಾರಿಂದಲೂ ಅಂಗೀಕೃತವಾಗಿಲ್ಲ. ಸ್ವರೂಪವು ಅನುಗತವಾದರೆ (ಅಂದರೆ ಸಾಮಾನ್ಯವಾದರೆ) ಆ ವಸ್ತುವಿನಲ್ಲಿ ವ್ಯಾವೃತ್ತವಾದುದು (ಅಂದರೆ ಆ ವಸ್ತುವಿನಿಂದ ಬೇರೆಯಾದುದು) ಯಾವುದಿರುವುದು?

ಅದು ಹೇಗೆಂದರೆ –

**ಸರ್ವಾನುಗತಧರ್ಮಾಣಾಮಂತೇ ಹಿ ಸ್ವತ್ವಮಿಷ್ಯತೇ ।**

**ಕಿಂ ವ್ಯಾವೃತ್ತಮಿತಿ ಪ್ರಶ್ನೇ ಸ್ವರೂಪಮಿತಿ ಕೇವಲಮ್ ॥೨೮॥**

**ಸ್ಯಾದುತ್ತರಂ ತತೋಽನ್ಯಚ್ಚೇತ್ತದೇವ ಸ್ವಯಮೇವ ನಃ ।**

ಎಲ್ಲ ಅನುಗತ ಧರ್ಮಗಳಿಗೆ ಕೊನೆಯಲ್ಲಿ ಸ್ವರೂಪತ್ವವು ಒಪ್ಪುವುದಾದರೆ (ಮೀಮಾಂಸಕರ ಪ್ರಕಾರ), ಅಲ್ಲಿ ವ್ಯಾವೃತ್ತವಾದುದು ಯಾವುದಿದೆ ಎಂದು ಪ್ರಶ್ನಿಸುತ್ತೇವೆ. ಅದಕ್ಕೆ ಕೇವಲ ಸ್ವರೂಪತ್ವವೆಂದೇ ಉತ್ತರ ಹೇಳಬೇಕಾಗುವುದು. ಸ್ವರೂಪತ್ವದಿಂದ ಭೇದರೂಪವಾದುದು ವ್ಯಾವೃತ್ತವು ಎಂದು ಅಂಗೀಕರಿಸಲ್ಪಟ್ಟರೆ ಅದು ನಮಗೆ ಪದಾರ್ಥಸ್ವರೂಪವೇ ಆಗಿದೆ. ಯಾವುದಕ್ಕಾಗಿ ಸ್ವಸ್ವರೂಪತ್ವವು ಉದಾಹೃತವಾಗಿದೆಯೋ ಅಲ್ಲಿ ಭೇದವೇ ಉದಾಹರಣವಾಗುವುದು.

ಅದರಿಂದ ಪ್ರಕೃತಕ್ಕೆ ಏನಾಯಿತೆಂದರೆ –

**ಏವಂ ವ್ಯಾವೃತ್ತರೂಪೇಽಪಿ ಯದಾ ಶಕ್ತಿಗ್ರಹೋ ಭವೇತ್ ॥೨೯॥**

**ತಸ್ಯ ಸಾಮಾನ್ಯತೋ ಜ್ಞಾನಂ ವಿನಾ ಸ ಚ ಭವೇತ್ಕುತಃ ।**

ಹಿಂದೆ ಹೇಳಿದ ಪ್ರಕಾರ ವ್ಯಾವೃತ್ತದಲ್ಲಿಯೂ, ಸ್ವರೂಪದಲ್ಲಿಯೂ ಅಥವಾ ಭೇದದಲ್ಲಿಯೂ ಸ್ವರೂಪಭೇದಾದಿ ಶಬ್ದಗಳಿಗೆ ವಾಚಕತ್ವ ಶಕ್ತಿಜ್ಞಾನವು ಯಾವಾಗ ಅಂಗೀಕೃತವಾಗುವುದೋ, ಆಗ ಆ ಶಕ್ತಿಜ್ಞಾನವು ಸ್ವರೂಪಾದಿಗಳ ಸಾಮಾನ್ಯವಾದ ಜ್ಞಾನವಿಲ್ಲದೆ ಹೇಗೆ ಆಗುವುದು?

**ಅತೋ ವಿಶೇಷಸಾಮಾನ್ಯರೂಪಂ ಸರ್ವಮಪೀಷ್ಯತೇ ॥೩೦॥**

ಆದ್ದರಿಂದ ಎಲ್ಲ ವಸ್ತುವೂ ವಿಶೇಷರೂಪವೂ (ವ್ಯಾವೃತ್ತರೂಪವೂ) ಸಾಮಾನ್ಯ ರೂಪವೂ ಎಂಬುದಾಗಿ ನಮ್ಮಿಂದ ಅಂಗೀಕರಿಸಲ್ಪಡುತ್ತದೆ.

ಹಾಗಾದರೆ ಇದು ಹಿಂದೆ ಹೇಳಿದ್ದಕ್ಕೆ ವಿರುದ್ಧವು. ಮೊದಲು ಸ್ವರೂಪಾದಿಗಳು ಸಾಮಾನ್ಯವಿರಹಿತವು ಎಂದು ಸಾಧಿಸಿ, ಈಗ ಎಲ್ಲ ವಸ್ತುವೂ ಸಾಮಾನ್ಯ ಹಾಗೂ ವಿಶೇಷರೂಪವು ಎಂದು ಅಂಗೀಕರಿಸುವುದು ಅಯುಕ್ತವು ಎಂದು ಆಶಂಕಿಸಿದರೆ –

**ವ್ಯಾವೃತ್ತಂ ಯಚ್ಚ ಸಾಮಾನ್ಯಂ ತದೇವ ಸ್ಯಾದ್ವಿಶೇಷತಃ ।**

**ನ ಚೈಕಧರ್ಮತಾ ತೇನ ಪದಾರ್ಥಾನಾಂ ಪರಸ್ಪರಮ್ ।।೮೧।।**

ಯಾವುದು ವ್ಯಾವೃತ್ತಸ್ವರೂಪವೋ ಅದುವೇ ವಿಶೇಷಬಲದಿಂದ ಸಾಮಾನ್ಯವೂ ಕೂಡ ಆಗುವುದು. ಆದಪ್ರಯುಕ್ತ ಪದಾರ್ಥಗಳಿಗೆ ಪರಸ್ಪರವಾಗಿ ಏಕಧರ್ಮತ್ವವು ಇಲ್ಲವೇ ಇಲ್ಲ. ಒಟ್ಟು ಅಭಿಪ್ರಾಯವೇನಂದರೆ– ಈ ಹಿಂದೆ ಸ್ವರೂಪಭೇದಾದಿಗಳಲ್ಲಿ ಸಾಮಾನ್ಯವಿಲ್ಲವೆಂದು ಹೇಳಿದ್ದು ಪದಾರ್ಥಸ್ವರೂಪಗಳಲ್ಲಿ ಪರಸ್ಪರ ಅನುಗತವಾದ ಏಕಧರ್ಮತ್ವವಿಲ್ಲ ಎನ್ನುವ ಅಭಿಪ್ರಾಯದಿಂದ. ಈಗ ಏಕಧರ್ಮತ್ವವಿಲ್ಲದಿದ್ದರೂ ವ್ಯಾವೃತ್ತವಾದ ಪದಾರ್ಥಸ್ವರೂಪದಿಂದ ಅಭಿನ್ನವಾದ ಆಯಾ ಪದಾರ್ಥಗಳಲ್ಲಿಯೇ ಇರತಕ್ಕ ಸಾಮಾನ್ಯಕಾರವನ್ನು ಅಂಗೀಕರಿಸಿ, ಸರ್ವವೂ ವಿಶೇಷಸಾಮಾನ್ಯರೂಪ ವೆಂದು ಹೇಳಿರುವುದರಿಂದ ಪೂರ್ವೋತ್ತರ ವಿರೋಧವಿಲ್ಲ.

ಹೀಗೆ ಗೋತ್ವಾದಿ ಸಾಮಾನ್ಯಕ್ಕೆ ಅನನುಗತತ್ವವನ್ನು ಅಂಗೀಕರಿಸಿ, ಸ್ವರೂಪತ್ವ ಮೊದಲಾದ ಸಾಮಾನ್ಯವಿಲ್ಲದಿರುವುದರಿಂದ, ಅದರಲ್ಲಿ ಶಬ್ದಶಕ್ತಿಜ್ಞಾನಕ್ಕಾಗಿ ಸ್ವರೂಪ ಜ್ಞಾನವು ಅಪೇಕ್ಷಿತ ಎಂದು ಉಕ್ತವಾಗಿದೆ. ಈಗ ಗೋತ್ವಾದಿ ಸಾಮಾನ್ಯವೂ ಕೂಡ ಅನುಗತವಲ್ಲ ಎಂದು ಹೇಳುತ್ತಾರೆ –

**ಧರ್ಮಾಣಾಂ ಭೇದದೃಷ್ಟ್ಯೈವ ತತ್ಸಾದೃಶ್ಯಸ್ಯ ದರ್ಶನಾತ್ ।**

**ಅತಃ ಸರ್ವೇ ಪದಾರ್ಥಾಶ್ಚ ಸಾಮಾನ್ಯಾತ್ಸಾಕ್ಷಿಗೋಚರಾಃ ।।೮೨।।**

ದ್ವಿತ್ವ ಬಹುತ್ವ ಮುಂತಾದ ಸಮುದಾಯವ್ಯತಿರಿಕ್ತವಾದ ಶೌಕ್ಲ್ಯಾದಿ ಧರ್ಮಗಳ ಭೇದಜ್ಞಾನದಿಂದ ಅವುಗಳಿಗೆ ಸಾದೃಶ್ಯವು ತೋರುವುದು. ಆದ್ದರಿಂದ(ಅನುಗತವಾದ ಸಾಮಾನ್ಯವು ಇಲ್ಲದಿರುವುದರಿಂದ) ಎಲ್ಲ ವರ್ತಮಾನ, ಅತೀತ ಹಾಗೂ ಅನಾಗತ ಪದಾರ್ಥಗಳೂ ಕೂಡ ಸಾಮಾನ್ಯಾಕಾರವಾಗಿ ಸಾಕ್ಷಿವಿಷಯಕಗಳು.

ಶಕ್ತಿಜ್ಞಾನಕ್ಕೆ ಅತೀತಾದಿ ವಿಷಯಕ ಜ್ಞಾನವಾದರೂ ಸಾಕ್ಷಿಯಿಂದ ಆಗುವುದು ಎಂದು ಹೇಗೆ ಸಿದ್ಧವಾಗುತ್ತದೆ ಎಂದರೆ –

**ಸರ್ವಮಿತ್ಯೇವ ವಿಜ್ಞಾನಂ ಸರ್ವೇಷಾಂ ಕಥಮನ್ಯಥಾ ।**

ಸಾಕ್ಷಿಗೆ ಅತೀತಾದಿ ವಿಷಯಕತ್ವವಿಲ್ಲವಾದರೆ, ಅತೀತಾದಿ ವಿಷಯಕವಾದ ಎಲ್ಲ ಪದಗಳಿಗೂ ಪದಾರ್ಥಗಳಿಗೂ ವಾಚ್ಯವಾಚಕ ಸಂಬಂಧ ಜ್ಞಾನವು ಎಲ್ಲರಿಗೂ ಹೇಗೆ ಆಗುವುದು?

ಹಾಗಾದರೆ ಅನುಗತವಾದ ಸಾಮಾನ್ಯವೇ ಇಲ್ಲವಾದರೆ ಶಬ್ದಶಕ್ತಿಜ್ಞಾನವೇ ಕೂಡುವುದಿಲ್ಲ. ಬೇರೆ ಮಾರ್ಗವೇ ಇಲ್ಲದಿರುವುದರಿಂದ ಸಾಕ್ಷಿಗೆ ಅತೀತಾದಿ ವಿಷಯಕತ್ವವು ಹೇಗೆ ಸಿದ್ಧಿಸುವುದು ಎಂದರೆ –

**ಕಿಂಚಿತ್ಸಾದೃಶ್ಯವಿಜ್ಞಾನಾದಖಿಲಸ್ಯಾಪಿ ವಸ್ತುನಃ ।।೮೩।।**

**ಶಬ್ದಶಕ್ತಿಗ್ರಹಶ್ಚ ಸ್ಯಾತ್ತತ್ತತ್ಸಾದೃಶ್ಯಮಾನತಃ ।**

ಕಿಂಚಿತ್ ಸಾದೃಶ್ಯಜ್ಞಾನದಿಂದ ಎಲ್ಲ ವಸ್ತುಗಳಿಗೂ ಶಬ್ದಶಕ್ತಿಜ್ಞಾನವೂ ಕೂಡ ಆಗುವುದು. ಹಾಗಾದರೆ ಸಾದೃಶ್ಯವಿರುವುದರಿಂದ ಗೋಶಬ್ದಕ್ಕೆ ಗವಯದಲ್ಲಿಯೂ ಶಕ್ತಿಜ್ಞಾನವು ಬರಬೇಕಾದೀತು ಎಂದರೆ – ಕಿಂಚಿತ್ ಸಾದೃಶ್ಯ ಜ್ಞಾನವು ಶಬ್ದಶಕ್ತಿ ಜ್ಞಾನಕ್ಕೆ ಕಾರಣವಲ್ಲ. ಮತ್ತೆ ಅತಿವ್ಯಾಪ್ತಿರಹಿತವಾದುದೇ ಕಾರಣವು. ಗೋಶಬ್ದದಲ್ಲಿ ಸಾಸ್ನಾದಿಮತ್ತ್ವವು, ಬೇರೆ ಕಡೆ ಬೇರೆ ಎಂದು ತಿಳಿಯಬೇಕು.

ಹೀಗೆ ಸಾಕ್ಷಿಪ್ರತ್ಯಕ್ಷಕ್ಕೆ ಕೇವಲ ವರ್ತಮಾನಗ್ರಾಹಿತ್ವ ಎಂಬುದನ್ನು ನಿರಾಕರಿಸಿ ಈಗ ಮಾನಸ ಪ್ರತ್ಯಕ್ಷಕ್ಕೂ ಕೇವಲ ವರ್ತಮಾನಗ್ರಾಹಿತ್ವವನ್ನು ನಿರಾಕರಿಸುತ್ತಾರೆ –

**ಪ್ರತ್ಯಕ್ಷಂ ಮಾನಸಂ ಚೈವ ಯದಾತೀತಾರ್ಥಗೋಚರಮ್ ।।೮೪।।**

**ತದಾ ಸ್ಮೃತಿಪ್ರಮಾಣತ್ವಮತೀತತತ್ವವಿಶೇಷಿತಮ್ ।**

ಸ್ಮೃತಿಗೆ ಕಾರಣವಾದ ಮಾನಸ ಪ್ರತ್ಯಕ್ಷವೂ ಕೂಡ ಅತೀತಾರ್ಥ ಗೋಚರವೇ. ಇನ್ನು ಪೂರ್ವಾನುಭವಕ್ಕಿಂತ ಅಧಿಕವಾದುದನ್ನು ವಿಷಯೀಕರಿಸದೆ ಇರುವ ಸ್ಮೃತಿಗೆ ಪ್ರಾಮಾಣ್ಯವೇ ದುರ್ಲಭವು. ಹಾಗಿದ್ದಾಗ ಮಾನಸಪ್ರತ್ಯಕ್ಷತ್ವವು ಹೇಗೆ ಸಿದ್ಧಿಸುವುದು ಎಂದರೆ – ಸ್ಮೃತಿಯು ಅತೀತತ್ವವಿಶೇಷಿತವಾದ ಅರ್ಥವನ್ನು ವಿಷಯೀಕರಿಸುವ ಕಾರಣದಿಂದ ಸ್ಮೃತಿಪ್ರಾಮಾಣ್ಯವು ಸಿದ್ಧವಾಗುವುದು.

**ಆಧಿಕ್ಯಮನುಭೂತಾತ್ತು ಯದಾತೀತತ್ವಮಿಷ್ಯತೇ ।।೮೫।।**

**ಮಾನತಾ ಚ ಕಥಂ ನ ಸ್ಯಾತ್ಸ್ಮೃತೇರ್ಬಾಧಶ್ಚ ನಾತ್ರ ಹಿ ।**

ಅತೀತ್ವವನ್ನು ವಿಷಯೀಕರಿಸುವ ಸ್ಮೃತಿಗೆ ವರ್ತಮಾನತ್ವ ಅನುಭೂತಿಯ ದೆಶೆಯಿಂದ ಆಧಿಕ್ಯವು ಎಲ್ಲರಿಂದಲೂ ಅಂಗೀಕರಿಸಲ್ಪಟ್ಟಿದೆ. ಅಂದಮೇಲೆ ಸ್ಮೃತಿಗೆ ಪ್ರಾಮಾಣ್ಯವು ಹೇಗೆ ಬರಲಾರದು? ಹೀಗೆ ಸ್ಮೃತಿಪ್ರಾಮಾಣ್ಯವು ಸಿದ್ಧವಾದುದರಿಂದ ಮಾನಸ ಪ್ರತ್ಯಕ್ಷತ್ವವನ್ನೂ ಅಂಗೀಕರಿಸತಕ್ಕದ್ದು. ಯಾಥಾರ್ಥತ್ವವೇ ಪ್ರಮಾಣದ ಲಕ್ಷಣ. ಅದಾದರೂ ಸ್ಮೃತಿಗೆ ಅನುಭವದಿಂದ ಸಿದ್ಧವಾಗಿದೆ. ಆದ್ದರಿಂದ ಸ್ಮೃತಿ ಪ್ರಾಮಾಣ್ಯಕ್ಕೆ ಯಾವ ಬಾಧವೂ ಇಲ್ಲ.

**ಮಾನತ್ವಂ ಪ್ರತ್ಯಭಿಜ್ಞಾಯಾ ಅಪಿ ಸರ್ವಾನುಭೂತಿಗಮ್ ।।೮೬।।**

**ಅತೀತವರ್ತಮಾನತ್ವಧರ್ಮಿಣೀ ಸಾ ಚ ದೃಶ್ಯತೇ ।**

ಪ್ರತ್ಯಭಿಜ್ಞೆಗೂ ಕೂಡ ಪ್ರಾಮಾಣ್ಯವು ಎಲ್ಲರ ಅನುಭೂತಿಗೆ ಸಿದ್ಧವಾದುದು. ಹಿಂದೆ ನೋಡಿದ್ದ ವ್ಯಕ್ತಿಯನ್ನು ಇಂದು ಮತ್ತೆ ನೋಡಿದಾಗ ಅವನೇ ಇವನು ಎಂಬ ಜ್ಞಾನ ಉಂಟಾಗುವುದೆ ಪ್ರತ್ಯಭಿಜ್ಞೆ. ಸ್ಮೃತಿಗೆ ಪ್ರಾಮಾಣ್ಯವನ್ನು ಅಂಗೀಕರಿಸದಿದ್ದರೆ ಇದು ಕೂಡುವುದಿಲ್ಲ. ಪ್ರತ್ಯಭಿಜ್ಞೆಯು ಸಾಕ್ಷಿಯಿಂದಲೇ ತಿಳಿಯಲ್ಪಡುತ್ತದೆ.

ಸೋಽಯಂ ಎನ್ನುವಲ್ಲಿ ಸಃ ಎನ್ನುವ ಅಂಶವು ಸ್ಮೃತಿಯಾಗಿರುವುದರಿಂದ ಚಾಕ್ಷುಷಾದಿ ಪ್ರತ್ಯಕ್ಷಕ್ಕೆ ಅತೀತವಿಷಯತ್ವವು ಇಲ್ಲ ಎಂದು ಆಶಂಕಿಸಿದರೆ –

**ನ ಚ ಸಾ ಸ್ಮೃತಿಮಾತ್ರಾರ್ಧಾ ತದಿದಂತ್ವಗ್ರಹೈಕತಃ ।।೮೭।।**

ಆ ಪ್ರತ್ಯಭಿಜ್ಞೆಯು ಸ್ಮೃತ್ಯನುಭವ ಏಕದೇಶರೂಪವಾದುದು ಹಾಗೂ ಏಕಜ್ಞಾನ ರೂಪವಾದುದು ಅಲ್ಲ. ಏಕೆಂದರೆ ಆ ಪ್ರತ್ಯಭಿಜ್ಞೆಯು ತದತ್ವ ಇದತ್ವ ಇವೆರಡರ ಏಕತ್ವ ಅನುಭವರೂಪವಾದುದು.

'ತಚ್ಚೇನ್ನೋತ್ತರಗೋಚರಂ' ಇತ್ಯಾದಿಗಳಿಂದ ಹೇಳಲ್ಪಟ್ಟ ಅರ್ಥವನ್ನು 'ಅತೋ' ಎಂಬಿತ್ಯಾದಿ ವಚನದಿಂದ ಉಪಸಂಹಾರ ಮಾಡುತ್ತಾರೆ –

**ಅತೋ ನ ವರ್ತಮಾನೈಕನಿಯಮಃ ಸ್ಯಾದ್ಗ್ರಹೇಽಕ್ಷಜೇ ।**

ಆದ್ದರಿಂದ ಪ್ರತ್ಯಕ್ಷ ಜ್ಞಾನದಲ್ಲಿ ವರ್ತಮಾನವೊಂದನ್ನೇ ವಿಷಯೀಕರಿಸುತ್ತದೆ ಎನ್ನುವ ನಿಯಮವು ಆಗಲಾರದು.

ಪ್ರಮಾಣ ಪ್ರಮೇಯ ಪ್ರಮಾತೃ ಇವುಗಳಿಂದ ಭಿನ್ನವಾದ ವಿಶ್ವವು ಅಬಾಧ್ಯ ವೆಂದು ಹೇಳಿದ್ದನ್ನು ಉಪಸಂಹಾರ ಮಾಡುತ್ತ, ಅರ್ಥದಲ್ಲಿರತಕ್ಕ ಜ್ಞಾತತಾ ರೂಪವಾದ ನಾಲ್ಕನೆಯ ಪ್ರಮಿತಿಯು ಇರುವುದರಿಂದ ಜಗತ್ತು ಮೂರು ಪ್ರಕಾರ ಎನ್ನುವುದು ಹೇಗೆ ಕೂಡುತ್ತದೆ ಎಂಬ ಆಶಂಕೆಯನ್ನು 'ನ ಚ' ಇತ್ಯಾದಿ ವಚನದಿಂದ ಪರಿಹರಿಸುತ್ತಾರೆ –

**ನ ಚ ಪ್ರಮಾಣತೋಽನ್ಯಾ ಸ್ಯಾತ್ಪ್ರಮಿತಿರ್ನಾಮ ಕುತ್ರಚಿತ್ ।।೮೮।।**

**ಮಾನಾಭಾವಾದ್ಗೌರವಾಚ್ಚ ಕಲ್ಪನಾಯಾಃ ಕಿಮೇತಯಾ ।**

ಕರಣರೂಪವಾದ ಪ್ರಮಾಣದಿಂದ ಬೇರೆಯಾದ ಪ್ರಮಿತಿ ಅಥವಾ ಜ್ಞಾತತಾ ಎಂಬ ವಸ್ತುವು ಎಲ್ಲಿಯೂ ಇಲ್ಲವೇ ಇಲ್ಲ. ಏಕೆಂದರೆ ಹಾಗೆ ಹೇಳಲು ಪ್ರಮಾಣವೇ ಇಲ್ಲ. ಹಾಗೆ ಅಂಗೀಕರಿಸಿದರೆ ಕಲ್ಪನಾಗೌರವವೂ ಬರುವುದು. ಆದ್ದರಿಂದ ಈ ಜ್ಞಾತತೆಯಿಂದ ಏನು ಪ್ರಯೋಜನವಿದೆ?

ಹಾಗಾದರೆ ಘಟವು ಜ್ಞಾತವಾಯಿತು, ಘಟವು ಪ್ರಕಟವಾಯಿತು ಎನ್ನುವ ಅರ್ಥದಲ್ಲಿ ವಿಶೇಷಣವಾಗಿ ಜ್ಞಾತತಾ ಪ್ರತ್ಯಕ್ಷವು ಕಂಡಿದೆ ಎಂದರೆ –

**ಮಯ್ಯೆತಜ್ಜ್ಞಾತಮಿತಿ ತು ಸಾಕ್ಷಿಗಂ ಜ್ಞಾನಗೋಚರಮ್ ।।೮೯।।**

**ಜ್ಞಾನಮೇವ ತತೋಽನ್ಯಾ ನ ಪ್ರಮಿತಿರ್ನಾಮ ದೃಶ್ಯತೇ ।**

ಇದು ನನ್ನಿಂದ ತಿಳಿಯಲ್ಪಟ್ಟಿತು ಎಂಬ ಜ್ಞಾನಕ್ಕೆ ವಿಷಯಕವಾದುದು ಸಾಕ್ಷಿಯಲ್ಲಿರತಕ್ಕ ಜ್ಞಾನವೇ ಹೊರತು ಜ್ಞಾತತೆಯಲ್ಲ. ಸಾಕ್ಷಿಯು ಸ್ವಪ್ರಕಾಶವು.

ಅದರಿಂದ ಬೇರೆಯಾದ ಪ್ರಮಿತಿಯೆನ್ನುವುದು ಗೋಚರಿಸುವುದೇ ಇಲ್ಲ.

ಮೇಲಿನ ಮಾತಿನ ಅಭಿಪ್ರಾಯವೇನೆಂದರೆ, ಪ್ರಥಮ ಜ್ಞಾನದಲ್ಲಿ ಶುದ್ಧವಾದ ಅರ್ಥವೇ ತಿಳಿಯಲ್ಪಡುತ್ತದೆ ಹೊರತು ಜ್ಞಾತತಾ ವಿಶಿಷ್ಟವಾದುದಲ್ಲ. ಆಗ ಜ್ಞಾತತೆಯೇ ಹುಟ್ಟಿರುವುದಿಲ್ಲ. ಆ ಜ್ಞಾತತೆಯನ್ನು ಹುಟ್ಟಿಸಿ ಪುನಃ ಜ್ಞಾತತಾ ವಿಶಿಷ್ಟವಾದ ಅರ್ಥವನ್ನು ಸಾಕ್ಷಿಯು ವಿಷಯೀಕರಿಸುವುದು ಎನ್ನುವ ಪಕ್ಷದಲ್ಲಿ ವಿರಮ್ಯ ವ್ಯಾಪಾರವು ಬರಬೇಕಾಗುವುದು. ಅಲ್ಲದೆ ಆಮೇಲಿನ ಜ್ಞಾನಗಳಲ್ಲಿ ಪ್ರಥಮ ಜ್ಞಾನದಲ್ಲಿ ವಿಷಯೀಕೃತವಾದ ಅರ್ಥಕ್ಕಿಂತ ಹೆಚ್ಚಿನದೇನೂ ಇರುವುದಿಲ್ಲ.

ಈಗ 'ಈಶ ತಜ್ಜ್ಞಾನ' ಇತ್ಯಾದಿಗಳಿಂದ ಹೇಳಲ್ಪಟ್ಟ ಅರ್ಥವನ್ನು 'ಮಾನ' ಇತ್ಯಾದಿ ವಚನದಿಂದ ಉಪಸಂಹಾರ ಮಾಡುತ್ತಾರೆ –

**ಮಾನಮಾತೃಪ್ರಮೇಯಾಣಾಂ ತದುಚ್ಛಿತ್ತಿರ್ನ ಹಿ ಕ್ವಚಿತ್ ॥೯೦॥**

**ಸ್ವಾಪ್ನಾನಾಮಪಿ ಚೈತೇಷಾಂ ನ ಬಾಧೋ ದೃಶ್ಯತೇ ಕ್ವಚಿತ್ ।**

ಆದ್ದರಿಂದ ಪ್ರಮಾಣ ಪ್ರಮಾತೃ ಪ್ರಮೇಯ ಇವುಗಳಿಂದ ಕೂಡಿದ ಮೂರು ವಿಧವಾದ ಜಗತ್ತಿಗೂ ಯಾವ ಕಾಲದಲ್ಲಿಯೂ ಬಾಧವು ಇರುವುದೇ ಇಲ್ಲ. ಬಾಧವಿಲ್ಲವೆನ್ನುವುದು ಕೇವಲ ಬಾಹ್ಯ ಪ್ರಪಂಚಕ್ಕೆ ಮಾತ್ರ ಸೀಮಿತವಲ್ಲ. ಸ್ವಪ್ನದಲ್ಲಿ ತೋರುವ ಮೂರು ವಿಧವಾದ ಪ್ರಪಂಚಕ್ಕೂ ಯಾವ ಕಾಲದಲ್ಲಿಯೂ ಬಾಧವು ಕಂಡುಬರುವುದಿಲ್ಲ.

**ಜಾಗ್ರತ್ಸ್ವಮಾತ್ರಮತ್ರೈಕಮನ್ಯಥಾ ದೃಶ್ಯತೇ ಸ್ಫುಟಮ್ ॥೯೧॥**

**ಅತೋ ಮಿಥ್ಯಾ ನ ಚ ಸ್ವಪ್ನೋ ಜಾಗ್ರದ್ವಜ್ಜಾಗ್ರದೇವ ಚ ।**

**ಆತ್ಮವತ್ಕ್ವಚಿದಾತ್ಮಾ ಚ ಸ್ಯಾದೇವ ಭ್ರಮಗೋಚರಃ ॥೯೨॥**

**ಏತಾವತಾ ನ ಮಿಥ್ಯಾಸೌ ಸ್ವಪ್ನೇ ಜಾಗರಿತೇ ತಥಾ ।**

ಸ್ವಪ್ನದಲ್ಲಿ ತೋರುವ ಪದಾರ್ಥಗಳು ಜಾಗ್ರತ್ಕಾಲದಲ್ಲಿ ಕಾಣುವ ಪದಾರ್ಥಗಳೇ ಅಲ್ಲ, ಅವುಗಳಿಗಿಂತ ಭಿನ್ನವಾದುದು ಎಂದು ಸ್ಪಷ್ಟವಾಗಿಯೇ ಕಾಣಲ್ಪಡುತ್ತದೆ. ಆದಕಾರಣ ಸ್ವಪ್ನವು ಮಿಥ್ಯೆಯಲ್ಲ. ಜಾಗ್ರತ್ಕಾಲದಲ್ಲಿ ಕಾಣಲ್ಪಡುವ ಶುಕ್ತ್ಯಾದಿಗಳು ಹೇಗೋ ಹಾಗೆಯೇ ಸ್ವಾಪ್ನದೃಷ್ಟ ಪದಾರ್ಥಗಳಿಗೂ ಮಿಥ್ಯಾತ್ವವಿಲ್ಲ. ಭ್ರಮೆಗೆ ಅಧಿಷ್ಠಾನವಾದ ಆತ್ಮನು ಹೇಗೆ ಮಿಥ್ಯೆಯಾಗಲಾರನೋ ಹಾಗೆಯೇ ಸ್ವಪ್ನವೂ ಕೂಡ ಮಿಥ್ಯೆಯಾಗಲಾರದು. ಆತ್ಮನೂ ಕೂಡ ನಾನು ಕ್ಷಣಿಕನು ಇತ್ಯಾದಿ ಭ್ರಮೆಗೆ ಅದಿಷ್ಠಾನನು ಆಗಿಯೇ ಆಗುವನು. ಆತ್ಮನು ಭ್ರಮಾಧಿಷ್ಠಾನನಾಗಿದ್ದರೂ ಹೇಗೆ ಮಿಥ್ಯೆಯಾಗುವುದಿಲ್ಲವೋ ಹಾಗೆಯೇ ಸ್ವಪ್ನದಲ್ಲಿಯೂ, ಜಾಗ್ರದವಸ್ಥೆಯಲ್ಲಿಯೂ ಗೋಚರವಾದ ವಸ್ತುವು ಭ್ರಮಾಧಿಷ್ಠಾನಮಾತ್ರದಿಂದಲೇ ಮಿಥ್ಯೆಯಾಗಲಾರದು.

ಹಾಗಾದರೆ ಆತ್ಮನಲ್ಲಿ ಆರೋಪಿತವಾದ ಕ್ಷಣಿಕತ್ವಾದಿಗಳು ಮಿಥ್ಯಾಭೂತವೇ ಆದುದರಿಂದ ಆತ್ಮನು ಮಿಥ್ಯಾಭೂತನು ಎಂದು ಹೇಳುತ್ತೇವೆ ಎಂದರೆ ಅದನ್ನು ದೂಷಿಸುತ್ತಾರೆ–

**ಯದ್ಯಾತ್ಮನ್ಯನ್ಯಥಾ ದೃಶ್ಯಂ ಭ್ರಾಂತಮತ್ರಾಪಿ ತದ್ಭವೇತ್ ||೯೩||**

**ಅಬಾಧಿತಾನುವೃತ್ತೇಸ್ತು ಸ್ವಪ್ನಾದೇರ್ಭ್ರಾಂತತಾ ಕುತಃ |**

ಆತ್ಮನಲ್ಲಿ ಬೇರೆ ರೀತಿಯಿಂದ ಕಾಣಲ್ಪಟ್ಟದ್ದು ಭ್ರಾಂತಿ ಅಥವಾ ಆರೋಪಿತವು ಎನ್ನುವುದಾದರೆ ಆ ಆರೋಪಿತತ್ವವು ಸ್ವಪ್ನದಲ್ಲಿ ತೋರುವ ಜಾಗ್ರತ್ವಾದಿಗಳಲ್ಲಿಯೂ ಆಗುವುದು. ಅಬಾಧಿತವಾದ ಜ್ಞಾನವಿದ್ದ ಪ್ರಯುಕ್ತ ಸ್ವಪ್ನಾದಿಗಳಿಗೆ ಭ್ರಾಂತತ್ವವು ಅಥವಾ ಬಾಧ್ಯತ್ವವು ಯಾವುದರಿಂದ ಆಗುವುದು? ಅಂದರೆ ಬಾಧೋತ್ತರ ಕಾಲದಲ್ಲಿಯೂ ಆ ಜ್ಞಾನವು ಇರುವುದಾದ್ದರಿಂದ (ಸ್ವಪ್ನದಲ್ಲಿ ಕಂಡ ಪದಾರ್ಥಗಳ ಜ್ಞಾನವು ಸ್ವಪ್ನಾವಸ್ಥೆ ಕಳೆದ ಮೇಲೂ ಇರುವುದು) ಸ್ವಾಪ್ನ ಹಾಗೂ ಜಾಗ್ರತ್ ಪದಾರ್ಥಗಳು ಆರೋಪ್ಯಗಳೂ ಅಲ್ಲ ಬಾಧ್ಯಗಳೂ ಅಲ್ಲ ಎಂದು ತಾತ್ಪರ್ಯ.

ಭ್ರಾಂತಿವಿಷಯತ್ವ ಸಾಧಕ ಹೇತುವಿಗೆ ಅನುಕೂಲ ಪ್ರಮಾಣವು ಇರುವುದಿಲ್ಲ. ಆದರೆ ಪ್ರತಿಕೂಲಪ್ರಮಾಣವಿರುವುದು. ಆದಪ್ರಯುಕ್ತ ಈ ಹೇತುವಿನಿಂದ ಜಾಗ್ರತ್ ಹಾಗೂ ಸ್ವಪ್ನಗಳಿಗೆ ಮಿಥ್ಯಾತ್ವ ಸಾಧನವು ಕೂಡುವುದಿಲ್ಲ ಎನ್ನುತ್ತಾರೆ –

**ನ ಚ ಕಾಚಿತ್ಪ್ರಮಾ ವಿಶ್ವಭ್ರಾಂತತ್ವೇ ಸರ್ವಮೇವ ಚ ||೯೪||**

**ಅಭ್ರಾಂತತ್ವೇ ಪ್ರಮಾಣಂ ತು ಕಥಂ ತದ್ಭ್ರಾಂತತಾ ಭವೇತ್ |**

ಸ್ವಪ್ನ ಹಾಗೂ ಜಾಗ್ರದ್ ಪ್ರಪಂಚಗಳಿಗೆ ಮಿಥ್ಯಾತ್ವ ವಿಷಯದಲ್ಲಿ ಯಾವ ಪ್ರಮಾಣವೂ ಇಲ್ಲ. ಪ್ರತ್ಯಕ್ಷ ಮುಂತಾದ ಎಲ್ಲವೂ ಜಗತ್ತು ಭ್ರಾಂತಿಕಲ್ಪಿತವಲ್ಲ ಎನ್ನುವ ವಿಷಯದಲ್ಲಿ, ಅಂದರೆ ಜಗತ್ಸತ್ಯತ್ವ ವಿಷಯದಲ್ಲಿ, ಪ್ರಮಾಣವೇ ಆಗಿವೆ. ಹಾಗಿರುವಾಗ ಜಗತ್ತಿಗೆ ಭ್ರಾಂತಿವಿಷಯತ್ವವು ಹೇಗೆ ತಾನೆ ಸಂಭವಿಸುವುದು?

ದೃಶ್ಯತ್ವಾದಿ ಹೇತುಗಳಿಂದ ಸ್ವಪ್ನ ಹಾಗೂ ಜಾಗ್ರದ್ರೂಪ ಜಗತ್ತಿಗೆ ಮಿಥ್ಯಾತ್ವವನ್ನು ಸಾಧಿಸಿರುವುದರಿಂದ ಪ್ರಮಾಣವಿಲ್ಲವೆಂದು ಹೇಗೆ ಹೇಳುತ್ತೀರಿ ಎಂದು ಆಶಂಕಿಸಿದರೆ ಭ್ರಾಂತಿವಿಷಯತ್ವವನ್ನು ಪ್ರಕಾರಾಂತರದಿಂದ ದೂಷಿಸುತ್ತಾರೆ –

**ಕಿಂಚ ಭ್ರಾಂತತ್ವವಾದೀ ಸ ಭ್ರಾಂತತ್ವಂ ಸ್ವಮತಸ್ಯ ಚ ||೯೫||**

**ಅಂಗೀಕರೋತಿ ನಿಯತಂ ತತ್ರ ಸಂಪ್ರತಿಪನ್ನತಾ |**

**ವಾದಿನೋಽಸ್ತೇನ ಚಾಭ್ರಾಂತಂ ವಿಶ್ವಮೇವ ಭವಿಷ್ಯತಿ ||೯೬||**

**ಭ್ರಾಂತತ್ವಭ್ರಾಂತತಾ ಚೇತ್ಸ್ಯಾತ್ ಕಥಂ ನಾಭ್ರಾಂತಿಸತ್ಯತಾ |**

ದೃಶ್ಯತ್ವಾದಿ ಹೇತುಗಳಿಂದ ಸ್ವಪ್ನ ಹಾಗೂ ಜಾಗ್ರದ್ರೂಪ ಎರಡು ವಿಧ ಜಗತ್ತಿಗೂ ಭ್ರಾಂತತ್ವವನ್ನು ಸಾಧಿಸುವ ಅದ್ವೈತಿಯು ತಾನು ಪ್ರತಿಜ್ಞಾ ಮಾಡಿದ ವಿಶ್ವಮಿಥ್ಯಾತ್ವ ರೂಪ ಅರ್ಥಕ್ಕೂ ಮಿಥ್ಯಾತ್ವವನ್ನು ನಿಯಮವಾಗಿ ಅಂಗೀಕರಿಸುತ್ತಾನೆ. ಪರರು ಪ್ರತಿಜ್ಞಾ ಮಾಡಿದ ಅರ್ಥವು ಭ್ರಾಂತಿವಿಷಯಕವು ಎಂಬ ವಿಷಯದಲ್ಲಿ ವಾದಿ ಪ್ರತಿ ವಾದಿಗಳಿಬ್ಬರಿಗೂ ಸಮ್ಮತವಿದೆ. ಆದಕಾರಣ ವಿಶ್ವವು ಭ್ರಾಂತಿವಿಷಯಕವಲ್ಲ ಎಂದೇ ಆಗುವುದು. ಭ್ರಾಂತಿವಿಷಯತ್ವಕ್ಕೂ ಭ್ರಾಂತಿವಿಷಯತ್ವವಿದ್ದರೆ ಸತ್ಯತ್ವವೇ ಬರುವುದು. ಅಬಾಧ್ಯವಾದ ವಿಶ್ವವು ಸತ್ಯವೆಂದೇ ಸಿದ್ಧವಾಗುವುದು.

ಅಪವ್ಯಾಖ್ಯಾನ ದೂಷಣಕ್ಕೆ ಪ್ರಯೋಜನವನ್ನು ಹೇಳುತ್ತಾರೆ –

**ಅಶೇಷದೋಷದುಷ್ಟಂ ತನ್ಮತಂ ಹೇಯಂ ಬುಭೂಷುಭಿಃ ॥೯೭॥**

ಸ್ವಾಪ್ನ ಜಾಗ್ರತ ಪ್ರಪಂಚಕ್ಕೆ ಮಿಥ್ಯಾತ್ವವನ್ನು ಪ್ರತಿಪಾದಿಸುವ ಅದ್ವೈತ ಮತವು ಪ್ರಮಾಣವಿರೋಧಾದಿ ಎಲ್ಲ ದೋಷಗಳಿಂದ ಭೂಯಿಷ್ಠವಾದುದರಿಂದ ಉದ್ಧಾರ ಹೊಂದಲು ಬಯಸುವ ಎಲ್ಲ ಜ್ಞಾನಿಗಳಿಂದ ಬಿಡತಕ್ಕದ್ದೇ ಆಗಿದೆ.

ವಿಶ್ವಮಿಥ್ಯಾತ್ವವನ್ನು ಹೇಳುವ ಈ ಮತವು ಜ್ಞಾನಿಗಳಿಂದ ಸ್ವೀಕಾರಕ್ಕೆ ಅನರ್ಹ ಎಂಬುದನ್ನೇ ಮತ್ತೊಂದು ರೀತಿಯಿಂದ ಸಮರ್ಥಿಸುತ್ತಾರೆ –

**ಯೇನ ಸ್ವಮತಹೇಯತ್ವಂ ಸ್ವಯಮಂಗೀಕೃತಂ ಸದಾ ।**

**ಭ್ರಾಂತಿತ್ವಾದ್ದುರ್ಘಟತ್ವಸ್ಯ ಭೂಷಣತ್ವಾಚ್ಚ ಕೇವಲಮ್ ॥೯೮॥**

**ಉನ್ಮತ್ತೋಽಪಿ ಕಥಂ ತಸ್ಯ ಮತಂ ಸ್ವೀಕರ್ತುಮಿಚ್ಛತಿ ।**

ಸ್ವಯಂ ಮಾಯಾವಾದಿಯಿಂದಲೇ ತನ್ನ ಮತವು ಹೇಯವೆಂದೂ, ಸರ್ವವೂ ಭ್ರಾಂತಿವಿಷಯವೆಂದೂ, ದುರ್ಘಟತ್ವವು ತನಗೆ ಭೂಷಣವೆಂದೂ ಯಾವಾಗಲೂ ಅಂಗೀಕರಿಸಲ್ಪಟ್ಟಿದೆ. ಆದಕಾರಣ ಸಾಕ್ಷಾತ್ ಉನ್ಮತ್ತನೂ ಕೂಡ ಅಂದರೆ ಸಹಜವಾಗಿ ಹುಚ್ಚನಾಗಿರುವನೂ ಮಾಯಾವಾದಿಯ ಮತವನ್ನು ಸ್ವೀಕರಿಸಲಿಕ್ಕೆ ಇಚ್ಛಿಸುವುದಿಲ್ಲ. ಅವನೂ ಕೂಡ ತಾನಾಗಿಯೇ ತನ್ನ ಮತವನ್ನು ಭ್ರಾಂತವೆಂದೂ ದುರ್ಘಟವೆಂದೂ ಒಪ್ಪುವುದಿಲ್ಲ.

ಹಾಗಾದರೆ ಲೋಕದಲ್ಲಿ ಈ ಮತವು ಹೇಗೆ ಪ್ರವೃತ್ತವಾಯಿತು ಎಂದರೆ –

**ಈಶಶಕ್ತೇರಚಿಂತ್ಯತ್ವಾನ್ಮಹೋನ್ಮತ್ತೈಃ ಪ್ರವರ್ತಿತಮ್ ॥೯೯॥**

ಪರಮೇಶ್ವರನ ಅಂಚಿತ್ಯಾದ್ಭುತ ಸಾಮರ್ಥ್ಯದಿಂದಾಗಿ ಮಹಾಮದೋನ್ಮತ್ತರಿಂದ ಈ ದುರ್ಮತವು ಪ್ರವರ್ತಿತವಾಯಿತು.

ಹಾಗಾದರೆ ಸೂತ್ರಕ್ಕೆ ವ್ಯಾಖ್ಯಾನವನ್ನು ಮಾಡುವುದಕ್ಕೆಂದು ಉಪಕ್ರಮಿಸಿ ಅಪವ್ಯಾಖ್ಯಾನವು ಹೇಯವು ಎಂದು ಪ್ರತಿಪಾದಿಸಿದ್ದು ಅಸಂಗತವು ಎಂದರೆ, ತಮ್ಮ

ವ್ಯಾಖ್ಯಾನದಲ್ಲಿ ಶಿಷ್ಯರಿಗೆ ದಾರ್ಢ್ಯ ಬರಲಿಕ್ಕಾಗಿ ಅಪವ್ಯಾಖ್ಯಾನದ ಹೇಯತ್ವವನ್ನು ನಿರೂಪಿಸುವುದು ಅವಶ್ಯಕವೇ ಆಗಿದೆ ಎಂದು ಹೇಳುತ್ತಾರೆ. ಸೂತ್ರಾರ್ಥವನ್ನು ವಿವರಿಸುತ್ತ ಮಾಯಾಮಾತ್ರಂ ಶಬ್ದಾರ್ಥವನ್ನು ಹೇಳುತ್ತಾರೆ –

**ಅತಃ ಪ್ರಜ್ಞಾತ್ರ ಮಾಯೋಕ್ತಾ ಜೈವ್ಯುಪಾದಾನಮೇವ ಸಾ ।**

**ನಿಮಿತ್ತಮೈಶ್ವರೀ ಮುಖ್ಯಾ ನಿರ್ಮಿತಂ ತ್ರಾತಮೇವ ಚ ।।೧೦೦।।**

**ತಾಭ್ಯಾಂ ಸಹ ಪೃಥಕ್ ಚೈವ ಮಾಯಾಮಾತ್ರಮಿತೀರ್ಯತೇ ।**

**ಉಭಾಭ್ಯಾಂ ಮಾತಮೈಶ್ವರ್ಯಾ ತ್ರಾತಂ ಸಹ ಪೃಥಕ್ ತತಃ ।।೧೦೧।।**

ಮಾಯಾವಾದಿಯ ವ್ಯಾಖ್ಯಾನವು ದುಷ್ಟವಾಗಿರುವುದರಿಂದ, ಮಾಯಾಮಾತ್ರ ಎಂಬುದಕ್ಕೆ ನಿರ್ದುಷ್ಟವಾದ ಅರ್ಥವೇನೆಂದರೆ, ಇಲ್ಲಿ ಜೀವಸಂಬಂಧಿ ಪ್ರಜ್ಞೆಯೇ ಮಾಯಾ ಎಂದು ಹೇಳಲ್ಪಟ್ಟಿದೆ. ಸ್ವಪ್ನಕ್ಕೆ ಆ ಜೀವ ಪ್ರಜ್ಞೆಯು ಉಪಾದಾನಕಾರಣ, ಈಶ್ವರಪ್ರಜ್ಞೆಯೇ ನಿಮತ್ತಕಾರಣ. ಅದೇ ಮುಖ್ಯವಾದುದು. ಜೀವಪ್ರಜ್ಞೆಯಾದರೋ ಅಮುಖ್ಯವು. 'ಮಯಾಮಾತ್ರಂ ತು ಕಾರ್ತ್ಸ್ನ್ಯೇನಾನಭಿವ್ಯಕ್ತ ಸ್ವರೂಪತ್ವಾತ್' ಎಂಬ ಸೂತ್ರದಲ್ಲಿನ 'ಮಾಯಾಮಾತ್ರಂ' ಎನ್ನುವ ಪದವನ್ನು 'ನಿರ್ಮಿತಂ' ಇತ್ಯಾದಿ ವಚನದಿಂದ ವ್ಯಾಖ್ಯಾನ ಮಾಡುತ್ತಾರೆ. ಜೀವ ಮತ್ತು ಈಶ್ವರ ಪ್ರಜ್ಞೆಗಳೆರಡೂ ಕೂಡಿ ಸ್ವಪ್ನವು 'ಮಾತಂ' ನಿರ್ಮಿಸಲ್ಪಟ್ಟಿದೆ. ಪ್ರತ್ಯೇಕವಾಗಿಯೂ ಈಶ್ವರಪ್ರಜ್ಞೆಯಿಂದ 'ತ್ರಾತಮೇವ' ರಕ್ಷಿಸಲ್ಪಟ್ಟಿದೆ. ಆದ್ದರಿಂದ ಮಾಯಾಮಾತ್ರವೆಂದು ಹೇಳಲ್ಪಡುತ್ತದೆ.

ಹಾಗಾದರೆ ಇದು ಪೂರ್ವಾಪರ ವಿರುದ್ಧವಾಗಿದೆ. ಈ ಮೊದಲು ಸ್ವಪ್ನಕ್ಕೆ ಜೀವನ ವಾಸನಾ ಅಥವಾ ಸಂಸ್ಕಾರವೇ ಉಪಾದಾನಕಾರಣವೆಂದು ಹೇಳಲ್ಪಟ್ಟಿದೆ. ಈಗ ಜೀವಪ್ರಜ್ಞೆಯು ಉಪಾದಾನವೆಂದು ಹೇಳಲಾಗಿದೆ ಎಂದರೆ, ಅದು ಸರಿಯಲ್ಲ. ಪ್ರಜ್ಞಾಶಬ್ದದಿಂದ ಉಪಲಕ್ಷಣದಿಂದ ವಾಸನಾವನ್ನು ಇಟ್ಟುಕೊಳ್ಳಬೇಕು ಎನ್ನುತ್ತಾರೆ–

**ಪ್ರಜ್ಞಾತ್ಮಕಂ ಮನೋ ಯೇನ ಮನೋರೂಪಾಶ್ಚ ವಾಸನಾಃ ।**

**ಧೀರ್ಭೀರಿತಿ ಮನಸ್ಯೇವೇತ್ಯಾಹ ಚ ಶ್ರುತಿರಂಜಸಾ ।।೧೦೨।।**

ಪ್ರಜ್ಞೆ, ಸಂಸ್ಕಾರಗಳೆರಡಕ್ಕೂ ಮನಸ್ಸೇ ಉಪಾದಾನಕಾರಣವು. ಆದ್ದರಿಂದ ಏಕ ಕಾರಣತ್ವರೂಪವಾದ ಸಂಬಂಧದಿಂದ ಇವುಗಳಿಗೆ ಲಕ್ಷಣಾವೃತ್ತಿಯು ಕೂಡುತ್ತದೆ. ಪ್ರಜ್ಞೆ ವಾಸನಾದಿಗಳಿಗೆ ಮನಸ್ಸೇ ಕಾರಣವು ಎಂದು ಹೇಗೆ ಹೇಳುತ್ತೀರಿ ಎಂದರೆ, 'ಧೀಃಭೀಃ ಹ್ರೀಃ ಇತ್ಯೇತತ್ಸರ್ವಂ ಮನ ಏವ' ಎಂಬ ಶ್ರುತಿಯನ್ನು ಉದಾಹರಿಸುತ್ತಾರೆ. ಎಲ್ಲಕ್ಕೂ ಮನಸ್ಸೇ ಉಪಾದಾನಕಾರಣವೆಂದು ಈ ಶ್ರುತಿಯಲ್ಲಿ ಸ್ಪಷ್ಟವಾಗಿ ಹೇಳಿದೆ.

ಹಾಗಾದರೆ ಪ್ರಜ್ಞೆ ಮತ್ತು ಸಂಸ್ಕಾರಗಳಿಗೆ ಕಾರ್ಯಕಾರಣಭಾವ ಸಂಬಂಧವಿದ್ದ ಪ್ರಯುಕ್ತ ಲಕ್ಷಣಾವೃತ್ತಿಗೆ ಅದೇ ಕಾರಣವಾಗಲಿ, ಮನಸ್ಸಿನ ಸಂಬಂಧವೇಕೆಂದರೆ –

**ಚಿದಚಿನ್ಮಿಶ್ರಮೇವೈತನ್ಮನೋ ಯಾವಚ್ಚ ಸಂಸೃತಿಃ ।**

**ತೇನಾವಸ್ಥಾ ಇಮಾಃ ಸರ್ವಾ ಜೀವಃ ಪಶ್ಯತಿ ಸರ್ವದಾ ॥೧೦೩॥**

ಕೇವಲ ಸ್ವಪ್ನವೊಂದೇ ಅಲ್ಲ, ಈ ಸಂಸಾರದಲ್ಲಿರತಕ್ಕ ಎಲ್ಲ ಅವಸ್ಥೆಗಳನ್ನೂ ಜೀವನು ಮನಸ್ಸಿನಿಂದಲೇ ಸರ್ವದಾ ನೋಡುತ್ತಾನೆ. ಮನಸ್ಸಿಗೆ ಪ್ರಾಧಾನ್ಯವಿರುವ ಪ್ರಯುಕ್ತ, ಮನಸ್ಸೇ ದ್ವಾರವಾಗುಳ್ಳ ಸಂಬಂಧವನ್ನೇ ಇಲ್ಲಿ ಹೇಳಿದ್ದು. ಕೆಲವರು ಮನಸ್ಸು ಜಡವೆಂದೂ, ಮತ್ತೆ ಕೆಲವರು ಅಚೇತನವಾದರೂ ಆರೋಪಿತ ಚೈತನ್ಯವುಳ್ಳದ್ದು ಎಂದೂ ಹೇಳುತ್ತಾರೆ. ಅದನ್ನು ನಿರಾಕರಿಸುತ್ತ 'ಚಿದಚಿತ್' ಇತ್ಯಾದಿ ವಚನದಿಂದ ಮನಸ್ಸಿನ ಸ್ವರೂಪವನ್ನು ಹೇಳುತ್ತಾರೆ. ಈ ಮನಸ್ಸು ಚೇತನಾಚೇತನ ಮಿಶ್ರಿತವೇ ಆಗಿದ್ದು ಸಂಸಾರವಿರುವ ತನಕ ಹೀಗೆಯೇ ಇರುವುದು.

'ಕಾರ್ತ್ಸ್ನ್ಯೇನಾನಭಿವ್ಯಕ್ತಸ್ವರೂಪತ್ವಾತ್' ಎಂಬ ಸೂತ್ರಖಂಡವನ್ನು ವ್ಯಾಖ್ಯಾನ ಮಾಡುತ್ತಾರೆ –

**ಮನೋವಿಕಾರಾ ವಿಷಯಾಃ ಸ್ವಾಪ್ನಾ ಯದ್ಬಾಹ್ಯವನ್ನ ತೇ ।**

**ಸ್ಥೂಲಾ ಭವಂತ್ಯತಸ್ತೇಷಾಂ ಸ್ಪಷ್ಟತಾ ನ ತಥಾ ಕ್ವಚಿತ್ ॥೧೦೪॥**

**ಕ್ವಚಿತ್ಸ್ಪಷ್ಟಾ ಅಪಿ ಸ್ಯುಷ್ಟೇ ವಾಸನಾ ಮಾನಸೀ ಚ ಸಾ ।**

ಸ್ವಾಪ್ನ ಪದಾರ್ಥಗಳು ಮನೋಜನ್ಯ ವಾಸನಾ ವಿಕಾರಗಳಾಗಿರುವುದರಿಂದಲೇ ಅವು ಸ್ಥೂಲಗಳು ಅಂದರೆ ಅಲ್ಪ ಪ್ರದೇಶದಲ್ಲಿ ಸಂಭವಿಸಲು ಅನರ್ಹಗಳಾಗುವುದಿಲ್ಲ. ಅಲ್ಲದೆ ಅವುಗಳಿಗೆ ಬಾಹ್ಯ ವಸ್ತುಗಳಂತೆ ಕೆಲವು ಕಡೆ ಸ್ಪಷ್ಟತೆ ಇರುವುದಿಲ್ಲ. ಬಾಹ್ಯ ವಸ್ತುಗಳಂತೆ ಕಾರ್ಯಾರ್ಥ ಪ್ರಯೋಜನವೂ ಇರುವುದಿಲ್ಲ. ಆ ಸ್ವಾಪ್ನ ವಿಷಯಗಳು ಕೆಲವು ಕಡೆ ಸ್ಪಷ್ಟಗಳೂ ಹಾಗೂ ಬಾಹ್ಯಾರ್ಥಕ್ರಿಯೆಯನ್ನು ಹುಟ್ಟಿಸುವತಕ್ಕವುಗಳೂ ಆಗಿದ್ದರೂ, ಅದೂ ಕೂಡ ಮನೋಜನ್ಯವಾದ ಸಂಸ್ಕಾರದಿಂದಲೇ ಆದುದು.

## ಪರಾಭಿಧ್ಯಾನಾಧಿಕರಣಮ್

**ಓಂ ಪರಾಭಿಧ್ಯಾನಾತ್ತು ತಿರೋಹಿತಂ ತತೋ ಹ್ಯಸ್ಯ ಬಂಧವಿಪರ್ಯಯೌ ಓಂ**

ಈ ಸೂತ್ರಕ್ಕೆ ಪರರು ಮಾಡಿದ ಅಪವ್ಯಾಖ್ಯಾನವನ್ನು ನಿರಾಕರಿಸಿ ಸೂತ್ರದ ಅಭಿಪ್ರಾಯವನ್ನು 'ಈಶ' ಇತ್ಯಾದಿ ವಚನದಿಂದ ಸ್ಪಷ್ಟಪಡಿಸುತ್ತಾರೆ –

**ಈಶೇಚ್ಛಯಾಂತರ್ದಧಾತಿ ವ್ಯಜ್ಯತೇ ಚ ಪುನಸ್ತಯಾ ॥೧೦೫॥**

ಸ್ವಪ್ನವು ಈಶ್ವರನ ಇಚ್ಛೆಯಿಂದಲೇ ಅಂತರ್ಧಾನವನ್ನು ಹೊಂದುತ್ತದೆ. ಪುನಃ ಈಶ್ವರನ ಇಚ್ಛೆಯಿಂದಲೇ ವ್ಯಕ್ತವೂ ಆಗುತ್ತದೆ.

ಎರಡು ಅಧಿಕರಣಗಳ ಅರ್ಥವನ್ನು ಉಪಸಂಹಾರ ಮಾಡುತ್ತಾರೆ –

ಸೃಷ್ಟ್ವೈವ ವಾಸನಾಭಿಶ್ಚ ಪ್ರಪಂಚಂ ಸ್ವಾಪ್ನಮೀಶ್ವರಃ ।

ವಾಸನಾಮಾತ್ರತಾಂ ತಸ್ಯ ನೀತ್ವಾಂತರ್ಧಾಪಯತ್ಯಜಃ ॥೧೦೬॥

ಉತ್ಪತ್ತಿರಹಿತನಾದ ಈಶ್ವರನು ಜೀವನ ಸಂಸ್ಕಾರಗಳಿಂದ ಸ್ವಾಪ್ನ ಪ್ರಪಂಚವನ್ನು ಸೃಷ್ಟಿಮಾಡಿ ತೋರಿಸುವ ಮೂಲಕ ಸ್ವಪ್ನಕ್ಕೆ ಸಂಸ್ಕಾರಮಾತ್ರತ್ವವನ್ನು ತಂದುಕೊಟ್ಟು, ಅನಂತರ ಜೀವನಿಗೆ ಸ್ವಾಪ್ನ ಪ್ರಪಂಚದ ಅದರ್ಶನವನ್ನೂ ಹೊಂದಿಸುತ್ತಾನೆ.

## ತದಭಾವಾಧಿಕರಣಮ್

ಓಂ ತದಭಾವೋ ನಾಡೀಷು ತಚ್ಛ್ರುತೇರಾತ್ಮನಿ ಹ ಓಂ

## ಪ್ರಬೋಧಾಧಿಕರಣಮ್

ಓಂ ಅತಃ ಪ್ರಬೋಧೋऽಸ್ಮಾತ್ ಓಂ

## ಸಂಪತ್ತ್ಯಧಿಕರಣಮ್

ಓಂ ಮುಗ್ಧೇऽರ್ಧಸಂಪತ್ತಿಃ ಪರಿಶೇಷಾತ್ ಓಂ

ಇಲ್ಲಿ ಜೀವಬ್ರಹ್ಮರಿಗೆ ಯಾವ ಐಕ್ಯವನ್ನು ಪರಕೀಯರು ವರ್ಣಿಸಿರುವರೋ ಅದು ಸೂತ್ರಾಕ್ಷರಗಳಿಂದ ತೋರುವುದಿಲ್ಲ ಹಾಗೂ ಅದಕ್ಕೆ ವಿರುದ್ಧವೂ ಆಗಿದೆ. ಆದಪ್ರಯುಕ್ತ ಜೀವಬ್ರಹ್ಮೈಕ್ಯವು ಉಪೇಕ್ಷಣೀಯವೇ ಆಗಿರುವುದು ಎನ್ನುವುದನ್ನು ತಿಳಿಸುವುದಕ್ಕಾಗಿ ಮೇಲೆ ಸೂಚಿತವಾದ ಮೂರು ಅಧಿಕರಣಗಳ ತಾತ್ಪರ್ಯವನ್ನು ಹೇಳುತ್ತಾರೆ –

ಸುಷುಪ್ತಿಬೋಧಮೋಹಾಂಶ್ಚ ಸ್ವವಶಸ್ತದ್ವಶಂ ಸದಾ ।

ಜೀವಂ ನಯತಿ ಜೀವೇಶಃ......................... ॥

ಸ್ವತಂತ್ರನಾಗಿದ್ದರೂ ಈಶ್ವರನು ಕೇವಲ ಲೀಲೆಯಿಂದ ಆ ಕಾರಣಗಳನ್ನು ಬಳಸಿಕೊಂಡು ಜೀವನನ್ನು ಸುಷುಪ್ತ್ಯಾದಿಗಳ ಅಧೀನನನ್ನಾಗಿ ಮಾಡಿ ಯಾವಾಗಲೂ ಸುಷುಪ್ತಿ, ಪ್ರಬೋಧ, ಮೂರ್ಛಾವಸ್ಥೆಗಳನ್ನು ಹೊಂದಿಸಿಕೊಡುತ್ತಾನೆ.

## ಕರ್ಮಾನುಸ್ಮೃತ್ಯಧಿಕರಣಮ್

ಓಂ ಸ ಏವ ಚ ಕರ್ಮಾನುಸ್ಮೃತಿಶಬ್ದವಿಧಿಭ್ಯಃ ಓಂ

ಈ ಸೂತ್ರಕ್ಕೆ ಕೆಲವರು ಹೀಗೆ ವ್ಯಾಖ್ಯಾನ ಮಾಡುತ್ತಾರೆ – ಸುಷುಪ್ತಿಯಲ್ಲಿ ಯಾವ ಜೀವನು ಬ್ರಹ್ಮನನ್ನು ಹೊಂದಿರುವನೋ ಅವನೇ ಏಳುತ್ತಾನೋ ಅಥವಾ ಮತ್ತೊಬ್ಬನೋ ಎಂದು ಸಂಶಯಬಂದರೆ, ಯಾರು ಸುಪ್ತನೋ ಅವನೇ ಏಳುತ್ತಾನೆ ಏಕೆಂದರೆ ಸುಪ್ತನು ಮುಕ್ತನೆಂದರೆ ವಿಧಿಗಳು ಕೂಡುವುದಿಲ್ಲ. ಇದು ಅಪವ್ಯಾಖ್ಯಾನ ಎಂದು ತಿಳಿಸಲು ಅಧಿಕರಣದ ತಾತ್ಪರ್ಯವನ್ನು ಹೇಳುತ್ತಾರೆ –

...................... ನಾನ್ಯಃ ಕರ್ತಾಸ್ಯ ಕಶ್ಚನ ॥೧೦೭॥

ಈ ಸ್ವಪ್ನ ಮುಂತಾದವುಗಳಿಗೆ ಈಶ್ವರನನ್ನು ಬಿಟ್ಟು ಮತ್ತೊಬ್ಬ ಕರ್ತನು ಯಾವನೂ ಯಾವಕಾಲದಲ್ಲಿಯೂ ಇರುವುದಿಲ್ಲ. ಬೇರೆ ಬೇರೆ ದೇಶ ಕಾಲಗಳಲ್ಲಿ ಬೇರೆ ಬೇರೆ ರಾಜರು ನಿಯಾಮಕರಾಗಿರುವುದು ಲೋಕದಲ್ಲಿ ಕಂಡಿದೆ. ಆದರೆ ಈಶ್ವರನು ಲೋಕದ ರಾಜರುಗಳಂತೆ ಅಲ್ಲ. ಎಲ್ಲ ಕಾಲ, ದೇಶಗಳಲ್ಲಿಯೂ ಎಲ್ಲ ಜೀವರಿಗೂ ಒಬ್ಬನೇ ಈಶ್ವರನು ನಿಯಾಮಕನು. ಆದ್ದರಿಂದ ಒಬ್ಬನೇ ಈಶ್ವರನು ಸ್ವಪ್ನಾದಿಗಳನ್ನು ಮಾಡತಕ್ಕವನು, ಬೇರೊಬ್ಬನಿಲ್ಲ ಎಂದೇ ಸೂತ್ರದ ಅಭಿಪ್ರಾಯ. ಆದ್ದರಿಂದ ಈ ಸೂತ್ರಕ್ಕೆ ಅದ್ವೈತಿಗಳ ವ್ಯಾಖ್ಯಾನವು ಕೂಡುವುದಿಲ್ಲ.

## ನ ಸ್ಥಾನತೋಽಪ್ಯಧಿಕರಣಮ್

**ಓಂ ನ ಸ್ಥಾನತೋಽಪಿ ಪರಸ್ಯೋಭಯಲಿಂಗಂ ಸರ್ವತ್ರ ಹಿ ಓಂ**

ಪರಮಪುರುಷನು ಪ್ರತಿಶರೀರದಲ್ಲಿಯೂ ಬಲಗಣ್ಣು ಇತ್ಯಾದಿ ಸ್ಥಾನಗಳಲ್ಲಿ ಇರುತ್ತ ಎಲ್ಲ ಶರೀರಗಳಲ್ಲಿಯೂ ಸ್ವಪ್ನಾದಿ ಅವಸ್ಥೆಗಳನ್ನು ಪ್ರವರ್ತಿಸುತ್ತಾನೆ ಎಂದು ಹೇಳಿದೆ. ಹಾಗಾದರೆ ಒಬ್ಬನೇ ಈಶ್ವರನಿಗೆ ಸ್ಥಾನಭೇದದಿಂದ ಜ್ಞಾನಶಕ್ತ್ಯಾದಿಗಳಲ್ಲಿ ಜೀವನಂತೆ ತಾರತಮ್ಯವು ಏಕೆ ಆಗಲಾರದು ಎನ್ನುವ ಆಶಂಕೆ ಬಂದರೆ ಅದನ್ನು ಪರಿಹರಿಸುವುದಕ್ಕಾಗಿ ಈ ಸೂತ್ರವು ಹೊರಟಿದೆ ಎಂದು ತಿಳಿಸಲು 'ನ ಸ್ಥಾನತೋ' ಇತ್ಯಾದಿ ವಚನದಿಂದ ಸೂತ್ರಾರ್ಥವನ್ನು ವಿವರಿಸುತ್ತಾರೆ –

ನ ಸ್ಥಾನಭೇದತೋಽಪ್ಯಸ್ಯ ಭೇದಃ ಕಶ್ಚಿತ್ಪರೇಶಿತುಃ ।

ಸರ್ವತ್ರಾಶೇಷದೋಷೋಜ್ಝಪೂರ್ಣಕಲ್ಯಾಣಚಿದ್ಗುಣಃ ॥೧೦೮॥

ನಾನಾವಿಧ ಶರೀರಗಳಲ್ಲಿ ದಕ್ಷಿಣಾಕ್ಷಿ ಇತ್ಯಾದಿಗಳಿಗೆ ಭೇದವಿದ್ದರೂ ಹಾಗೂ ಸುರನರಾದಿ ಶರೀರಗಳಲ್ಲಿ ವಿವಿಧ ಅಂಗಗಳಿಗೆ ಉಚ್ಚನೀಚಾದಿ ಭೇದವಿದ್ದರೂ, ಅಲ್ಲಲ್ಲಿರತಕ್ಕ ಈಶ್ವರನಿಗೆ ಉಚ್ಚತ್ವ–ನೀಚತ್ವ, ಅನುಗ್ರಾಹ್ಯ–ಅನುಗ್ರಾಹಕ ಇತ್ಯಾದಿ ಯಾವುದೇ ರೀತಿಯ ಭೇದವು ಇರುವುದಿಲ್ಲ. ಏಕೆಂದರೆ ಎಲ್ಲ ಸ್ಥಾನಗಳಲ್ಲಿರುವ ಒಬ್ಬನೇ ಪರಮಾತ್ಮನು ಅಶೇಷದೋಷರಹಿತನೂ, ಪರಿಪೂರ್ಣಗಳಾದ ಮಂಗಲ ಕರವೂ ಜ್ಞಾನಾತ್ಮಕವೂ ಆದ ಅನಂತಗುಣಗಳಿಂದ ಕೂಡಿರುವನು.

ಮೇಲೆ ಹೇಳಿದ ಅರ್ಥವನ್ನು ಆಕ್ಷೇಪಿಸಿಕೊಂಡು ಸಮಾಧಾನ ಹೇಳುವುದಕ್ಕಾಗಿ ಮುಂದಿನ ಸೂತ್ರವು –

**ಓಂ ನ ಭೇದಾದಿತಿ ಚೇನ್ನ ಪ್ರತ್ಯೇಕಮತದ್ವಚನಾತ್ ಓಂ**

ಬ್ರಹ್ಮನ ರೂಪರೂಪಗಳಲ್ಲಿ ಭೇದವಿಲ್ಲ. ಅವನು ಸರ್ವತ್ರ ಸರ್ವದೋಷಗಳಿಂದ ದೂರನು, ಸಕಲಗುಣಪರಿಪೂರ್ಣನು ಎನ್ನುವುದು ಕೂಡುವುದಿಲ್ಲ. ಏಕೆಂದರೆ ಕಾರ್ಯಕಾರಣ ಬದ್ಧೌ ತೌ ಇತ್ಯಾದಿ ಶ್ರುತಿ ಪುರಾಣಾದಿ ವಾಕ್ಯಗಳಿಂದ ಭಿನ್ನತ್ವ

ದೋಷಿತ್ವ, ಅಲ್ಪಗುಣತ್ವ ಇತ್ಯಾದಿಗಳು ಶ್ರೀಹರಿಯಲ್ಲಿ ಉಕ್ತವಾಗಿದೆ ಎಂಬ ಆಕ್ಷೇಪ ಬಂದರೆ, ಅದನ್ನು ಪರಿಹರಿಸತಕ್ಕ ಸೂತ್ರಾಂಶವನ್ನು ವ್ಯಾಖ್ಯಾನ ಮಾಡುತ್ತಾರೆ –

**ತದ್ವಿರುದ್ಧಂ ತು ಯತ್ತತ್ರ ಮಾನಂ ನೈವ ಕ್ವಚಿದ್ಭವೇತ್ ।**

**ಮಹಾತಾತ್ಪರ್ಯರೋಧೇನ ಕಥಂ ತನ್ಮಾನಮತ್ರ ತು ॥೧೦೯॥**

ಯಾವ ವಾಕ್ಯವು ಹಿಂದೆ ಹೇಳಿದ ಗುಣಪೂರ್ಣತ್ವಾದಿ ರೂಪವಾದ ಅರ್ಥಕ್ಕೆ ಮೇಲ್ನೋಟಕ್ಕೆ ವಿರುದ್ಧವಾಗಿ ತೋರುವುದೋ ಆ ವಾಕ್ಯವು ಅಂಥಹ ವಿರುದ್ಧವಾದ ಅರ್ಥದಲ್ಲಿ ಪ್ರಮಾಣವು ಆಗುವುದೇ ಇಲ್ಲ. ಏಕೆಂದರೆ ಎಲ್ಲ ಸ್ಮೃತಿ ಇತಿಹಾಸ ಪುರಾಣಗಳು ಭಗವಂತನ ಅಶೇಷದೋಷದೂರತ್ವ ಹಾಗೂ ಸಮಸ್ತಗುಣಪರಿಪೂರ್ಣತ್ವದ ವಿಷಯದಲ್ಲಿ ಮಹಾತಾತ್ಪರ್ಯವನ್ನು ಹೊಂದಿವೆ. ಅದಕ್ಕೆ ವಿರುದ್ಧವಾಗಿ ಭಗವಂತನಲ್ಲಿ ದೋಷಿತ್ವಾದಿಗಳನ್ನು ಪ್ರತಿಪಾದಿಸುವ ವಾಕ್ಯವು ಆ ವಿಷಯದಲ್ಲಿ ಹೇಗೆ ತಾನೆ ಪ್ರಮಾಣವಾದೀತು?

ಪರಮೇಶ್ವರನು ಸಕಲಗುಣಪರಿಪೂರ್ಣನು ಅಶೇಷದೋಷದೂರನು ಎನ್ನುವ ಅರ್ಥದಲ್ಲಿ ವೇದಾದಿಗಳಿಗೆ ಮಹಾತಾತ್ಪರ್ಯವಿದೆ ಎನ್ನುವಲ್ಲಿ ಪ್ರಮಾಣವಿರುವ ಪಕ್ಷದಲ್ಲಿ ಅದನ್ನು ಅಂಗೀಕರಿಸಬಹುದಿತ್ತು. ಆ ವಿಷಯದಲ್ಲಿ ನಮಗೆ ಪ್ರಮಾಣವೇ ಕಂಡುಬಂದಿಲ್ಲ ಎಂದು ಆಶಂಕಿಸಿದರೆ –

**ದುಃಖಾಪ್ಯಯ ಸುಖಾವಾಪ್ತಿಹೇತುತ್ವೇನೈವ ವೇದವಾಕ್ ।**

**ಭವೇನ್ಮಾನಂ ತದೀಶಾನಾತ್ಪ್ರಸನ್ನಾದೇವ ನಾನ್ಯಥಾ ॥೧೧೦॥**

ಆತ್ಯಂತಿಕದುಃಖನಿವೃತ್ತಿ, ನಿರತಿಶಯಸುಖಾಭಿವ್ಯಕ್ತಿರೂಪವಾದ ಮುಕ್ತಿ ಇವುಗಳ ಕಾರಣತ್ವವನ್ನು ಪ್ರತಿಪಾದಿಸುವುದರಿಂದಲೇ ವೇದವಾಕ್ಯವು (ಉಪಲಕ್ಷಣದಿಂದ ಸ್ಮೃತ್ಯಾದಿಗಳನ್ನೂ ಗ್ರಹಿಸಬೇಕು) ಪ್ರಮಾಣವಾಗುವುದು. ದುಃಖನಿವೃತ್ತಿರೂಪವಾದ ಮೋಕ್ಷವು ಸಂತುಷ್ಟನಾದ ವಿಷ್ಣುವಿನಿಂದಲೇ ಆಗುವುದು. ಬೇರೆಯವರಿಂದಾಗಲೀ ಕೇವಲಜ್ಞಾನದಿಂದಾಗಲೀ ಆಗುವುದಿಲ್ಲ. ವಿಷ್ಣುವೊಬ್ಬನೇ ಮೋಕ್ಷದಾತನು. ಅನ್ಯರು ಮೋಕ್ಷವನ್ನು ಕೊಡಲಿಕ್ಕೆ ಸಮರ್ಥರಲ್ಲ.

**ಪ್ರಸನ್ನತಾ ಗುಣೋತ್ಕರ್ಷಜ್ಞಾನಾದೇವ ಹಿ ಕೇವಲಮ್ ।**

**ನಿರ್ದೋಷತಾಪರಿಜ್ಞಾನಾದಪಿ ನಾನ್ಯೇನ ಕೇನಚಿತ್ ॥೧೧೧॥**

ಆ ವಿಷ್ಣುವಿನ ಪ್ರಸಾದವು ನಿಶ್ಚಯವಾಗಿಯೂ ಗುಣೋತ್ಕರ್ಷಜ್ಞಾನದಿಂದಲೇ ಆಗುವುದು. ನಿರ್ದೋಷತ್ವ ಪರಿಜ್ಞಾನದಿಂದಲೂ ಕೂಡ ಆಗುವುದು. ಅಲ್ಪಗುಣತ್ವ ಇತ್ಯಾದಿ ಜ್ಞಾನದಿಂದಾಗಲೀ ಅಥವಾ ಕರ್ಮಾದಿಗಳಿಂದಾಗಲೀ ಆಗಲಾರದು.

ಸಂತುಷ್ಟನಾದ ಶ್ರೀಹರಿಯೇ ಮೋಕ್ಷಾದಿ ಪುರುಷಾರ್ಥವನ್ನು ಕೊಡತಕ್ಕವನು

ಎಂಬ ವಿಷಯದಲ್ಲಿ ಪ್ರಮಾಣವಾಗಿ ಆಗಮವಾಕ್ಯಗಳನ್ನು ಉದಾಹರಿಸುತ್ತಾರೆ –

**ಯೋ ಮಾಮಶೇಷದೋಷೋಜ್ಝಂ ಗುಣಸರ್ವಸ್ವಬೃಂಹಿತಮ್ ।**

**ಜಾನಾತ್ಯಸ್ಮೈ ಪ್ರಸನ್ನೋಽಹಂ ದದ್ಯಾಂ ಮುಕ್ತಿಂ ನ ಚಾನ್ಯಥಾ ॥೧೧೩॥**

**ಯೋ ಮಾಮಶೇಷಾಭ್ಯಧಿಕಂ ವಿಜಾನಾತಿ ಸ ಏವ ಮಾಮ್ ।**

**ವಿಜಾನಾತ್ಯಖಿಲಾಂಸ್ತಸ್ಯ ದದ್ಯಾಂ ಕಾಮಾನ್ ಪರಂ ಪದಮ್ ॥೧೧೪॥**

**ಯೋ ಮಾಮೇವಮಸಂಮೂಢಃ ಕಿಂ ಮಾಂ ನಿಂದಂತಿ ಶತ್ರವಃ ।**

**ಇತ್ಯಾದಿ ವೇದಸ್ಮೃತಿಗವಾಕ್ಯೈರೇವಾವಸೀಯತೇ ॥೧೧೫॥**

ಯಾರು ನನ್ನನ್ನು ಸಮಸ್ತದೋಷರಹಿತನೆಂದೂ, ಸರ್ವಗುಣಪೂರ್ಣನೆಂದೂ (ಪ್ರತ್ಯೇಕವಾಗಿ ಪ್ರತಿಯೊಂದು ಗುಣದಿಂದಲೂ ಪೂರ್ಣನೆಂದೂ), ತಿಳಿಯುತ್ತಾನೋ ಅವನೇ ನನ್ನನ್ನು ಸರಿಯಾಗಿ ತಿಳಿದವನು. ಅವನೇ ಜ್ಞಾನಿಯು. ಅಂಥಹ ಜ್ಞಾನಿಗೆ ನಾನು ಸಂತುಷ್ಟನಾಗಿ ಮೋಕ್ಷವನ್ನು ಕೊಡುತ್ತೇನೆ. ಅನ್ಯಥಾಜ್ಞಾನವು ನನ್ನ ಪ್ರಸಾದಕ್ಕೆ ಕಾರಣವಾಗುವುದಿಲ್ಲ. ಯಾವನು ನನ್ನನ್ನು ಸರ್ವೋತ್ತಮನೆಂದು ತಿಳಿಯುತ್ತಾನೋ ಅವನೇ ನಿಜವಾಗಿ ನನ್ನನ್ನು ತಿಳಿದವನು. ಅಂಥಹ ಜ್ಞಾನಿಗೆ ನಾನು ಸಮಸ್ತ ಅಭೀಷ್ಟಗಳನ್ನೂ ಮೋಕ್ಷವನ್ನೂ ಕೊಡುತ್ತೇನೆ. ಯಾವನು ಅಜ್ಞಾನ, ಅನ್ಯಥಾ ಜ್ಞಾನಗಳಿಂದ ರಹಿತನಾಗಿ ನನ್ನನ್ನು ಸಕಲ ಕ್ಷರಾಕ್ಷರ ಪುರುಷರಿಂದ ಉತ್ತಮನನ್ನಾಗಿ ತಿಳಿಯುತ್ತಾನೋ ಅವನು ನನ್ನನ್ನು ಹೊಂದುತ್ತಾನೆ, ಮುಕ್ತನೂ ಆಗುತ್ತಾನೆ. ಶತ್ರುಗಳು ನನ್ನನ್ನು ಏನೆಂದು ನಿಂದಿಸುತ್ತಾರೆ. ಇವೇ ಮೊದಲಾದ ವೇದಗಳು ಹಾಗೂ ಸ್ಮೃತಿಗಳಲ್ಲಿನ ವಾಕ್ಯಗಳಿಂದಲೇ ಈ ವಿಷಯವು (ಭಗವಂತನ ಪ್ರಸಾದದಿಂದಲೇ ಮುಕ್ತಿಯು, ಅದು ಭಗವಂತನ ಗುಣೋತ್ಕರ್ಷ ಜ್ಞಾನದಿಂದಲೇ ಸಾಧ್ಯವಾಗುವುದು) ನಿಶ್ಚಿತವಾಗುತ್ತದೆ. 'ಯೋ ಮಾಮೇವ' ಎನ್ನುವುದರಿಂದ 'ಕೃತಕೃತ್ಯಶ್ಚ ಭಾರತ' ಎನ್ನುವವರೆಗಿನ ಭಗವಂತನ ವಾಕ್ಯವನ್ನು (ಭಗವದ್ಗೀತೆಯ ಹದಿನೈದನೆಯ ಅಧ್ಯಾಯ) ಇಲ್ಲಿ ಸಂಗ್ರಹಿಸಿದ್ದಾರೆ. 'ಕಿಂ ಮಾಂ ನಿಂದಂತಿ' ಎನ್ನುವ ವಾಕ್ಯದಿಂದ 'ಅಭೀ ಇದಮೇಕಮೇಕೋ ಅಸ್ಮಿ ನಿಷ್ಷಾಳಭೀ ದ್ವಾ ಕಿಮು ತ್ರಯಃ ಕರಂತಿ । ಖಲೇ ನ ಪರ್ಷಾನ್ಪ್ರತಿ ಹನ್ಮಿ ಭೂರಿಕಿಮ್ಮಾ ನಿಂದಂತಿ ಶತ್ರವೋಽನಿಂದ್ರಾ' ಎನ್ನುವ ಋಗ್ವೇದ ವಾಕ್ಯವನ್ನು ಇಲ್ಲಿ ಸಂಗ್ರಹಿಸಿದ್ದಾರೆ.

ಈ ವಿಷಯದಲ್ಲಿ 'ಲೋಕತಶ್ಚ' ಇತ್ಯಾದಿ ವಚನದಿಂದ ಅನುಮಾನವನ್ನು ಹೇಳುತ್ತಾರೆ –

**ಲೋಕತಶ್ಚ ಪ್ರಸಾದೇನ ಮುಕ್ತಿಃ ಸಗುಣವೇದನಾತ್ ।**

ಭಗವಂತನ ಪ್ರಸಾದದಿಂದ ಮುಕ್ತಿಯು ಆಗುವುದು. ಆ ಪ್ರಸಾದವು ಭಗವಂತನ ಗುಣೋತ್ಕರ್ಷಜ್ಞಾನದಿಂದ ಆಗುವುದು ಎನ್ನುವ ಅರ್ಥವು ಲೋಕದೃಷ್ಟಾಂತದಿಂದ

ಕೂಡಿದ ಅನುಮಾನದಿಂದಲೂ ನಿಶ್ಚಿತವಾಗುತ್ತದೆ.

ಮಹಾತಾತ್ಪರ್ಯವಿರೋಧೇನ ಇತ್ಯಾದಿಗಳಿಂದ ಹೇಳಿದ್ದನ್ನು ಉಪಸಂಹಾರ ಮಾಡುತ್ತ, ಪರಕೀಯ ಕೃತ ಅಪವ್ಯಾಖ್ಯಾನವನ್ನು ನಿರಾಕರಿಸಲಿಕ್ಕೆ ಹೇಳಲ್ಪಟ್ಟ ಯುಕ್ತಿಯನ್ನು ವಿಸ್ತರಿಸುತ್ತಾರೆ –

**ಮಹಾತಾತ್ಪರ್ಯಮುಖ್ಯಸ್ಯ ವಿರೋಧಾದತ ಏವ ಹಿ ॥೧೧೫॥**

**ದೋಷಿತ್ವನಿರ್ಗುಣತ್ವಾಲ್ಪಗುಣತ್ವಾದಿ ಕಥಂಚನ ।**

**ನಾರ್ಥಃ ಶ್ರುತಿಪುರಾಣಾದೇಃ ತದ್ವಿರುದ್ಧೋऽಖಿಲಸ್ಯ ಚ ॥೧೧೬॥**

**ಅರ್ಥಃ ಸ್ವಯಂ ವಿನಿರ್ಣೀತೋ ವಾಸುದೇವೇನ ಸಾದರಮ್ ।**

ಆದ್ದರಿಂದ ಪರಮಮಹಾತಾತ್ಪರ್ಯದ ವಿರೋಧವಿರುವ ಪ್ರಯುಕ್ತ ಯಾವ ಪ್ರಕಾರದಿಂದಲೂ ದೋಷಿತ್ವ, ನಿರ್ಗುಣತ್ವ, ಅಲ್ಪಗುಣತ್ವಾದಿಗಳು ಶ್ರುತಿಪುರಾಣಾದಿ ವಾಕ್ಯಗಳ ಅರ್ಥವಲ್ಲ. ದೋಷಿತ್ವಾದಿಗಳಿಗೆ ವಿರುದ್ಧವಾದ ಅರ್ಥವು ಎಲ್ಲ ಶಾಸ್ತ್ರಕ್ಕೂ ಸ್ವಯಂ ಶ್ರೀಕೃಷ್ಣನಿಂದಲೇ ಸಾದರಪೂರ್ವಕವಾಗಿ ನಿರ್ಣಯಿಸಲ್ಪಟ್ಟಿದೆ.

ಈ ವಿಷಯದಲ್ಲಿ ಭಗವದ್ಗೀತಾ ವಾಕ್ಯವನ್ನು ಉದಾಹರಿಸುತ್ತಾರೆ –

**ಇತಿ ಗುಹ್ಯತಮಂ ಶಾಸ್ತ್ರಮಿದಮುಕ್ತಂ ಮಯಾನಘ ॥೧೧೭॥**

**ಏತದ್ಬುದ್ಧ್ವಾ ಬುದ್ಧಿಮಾನ್ಸ್ಯಾತ್ ಕೃತಕೃತ್ಯಶ್ಚ ಭಾರತ ।**

**ಇತಿ ಅತೋऽಖಿಲಸಚ್ಛಾಸ್ತ್ರವಿರುದ್ಧತ್ವೇನ ನಾನುಮಾ ॥೧೧೮॥**

**ವರ್ತತೇ ತತ್ರ ತೇನೇಶೋ ನಿರ್ಣೀತೋऽಖಿಲಸದ್ಗುಣಃ ।**

"ಎಲೈ ಅರ್ಜುನನೇ ನಿನಗೆ ನನ್ನಿಂದ ನನ್ನ ಪುರುಷೋತ್ತಮಾದಿಗಳು ಏನು ಹೇಳಲ್ಪಟ್ಟಿತೋ ಇದು ಅತ್ಯಂತ ಗೋಪ್ಯವಾದ ಶಾಸ್ತ್ರ. ಸರ್ವಶಾಸ್ತ್ರಗಳ ತಾತ್ಪರ್ಯ. ಇದನ್ನು ತಿಳಿದವನು ಅಪರೋಕ್ಷಜ್ಞಾನಿಯೂ, ಮುಕ್ತನೂ ಕೂಡ ಆಗುವನು." ಈ ಕಾರಣದಿಂದ ಎಲ್ಲ ಸಚ್ಛಾಸ್ತ್ರಗಳಿಂದ ವಿರುದ್ಧವಾಗಿರುವುದರಿಂದ, ಅಕ್ಷ್ಯಾದಿ ಬೇರೆ ಬೇರೆ ಸ್ಥಾನಗಳಲ್ಲಿರುವ ಭಗವಂತನ ರೂಪಗಳಿಗೆ ತಾರತಮ್ಯವಿದೆ ಎಂದು ಸಾಧಿಸಲು ನೀನು ಹೇಳಿದ ಅನುಮಾನವು ಭಗವಂತನ ವಿಷಯದಲ್ಲಿ ಕೂಡುವುದಿಲ್ಲ. ಅದರಿಂದ ಪರಮೇಶ್ವರನು ಸಮಸ್ತ ಸದ್ಗುಣಗಳಿಂದ ಪರಿಪೂರ್ಣನೆಂದು ನಿರ್ಣೀತವಾಗುವುದು.

## ಉಪಮಾಧಿಕರಣಮ್

### ಓಂ ಅತ ಏವ ಚೋಪಮಾ ಸೂರ್ಯಕಾದಿವತ್ ಓಂ

ಈ ಪರಮೇಶ್ವರನಲ್ಲಿ ಜೀವನಿಗೆ ಆತ್ಯಂತಿಕವಾದ ಭಕ್ತಿಯು ಸಿದ್ಧಿಸುವುದಕ್ಕಾಗಿ ಭೇದಾಭೇದವನ್ನು ಹೇಳುವ ಮತವನ್ನು ನಿರಾಕರಿಸುತ್ತಾರೆ. ಅದು ಹೇಗೆಂದರೆ –

ಜೀವಬ್ರಹ್ಮರಿಗೆ ಭೇದವಾದರೂ ಸಿದ್ಧಾಂತಿಗಳಿಂದ ಅಂಗೀಕೃತವೇ ಆಗಿದೆ. ಅಭೇದವಾದರೋ "ಜೀವನು ಬ್ರಹ್ಮಾಭಿನ್ನನು, ಬ್ರಹ್ಮನಂತೆ ಚೇತನನೂ ಹಾಗೂ ಬ್ರಹ್ಮನ ಅಂಶನೂ ಆಗಿರುವುರಿಂದ" ಎಂಬ ಅನುಮಾನದಿಂದ ಸಿದ್ಧವಾಗುವುದು. ಆದಪ್ರಯುಕ್ತ ಜೀವನು ಬ್ರಹ್ಮನಿಂದ ಭಿನ್ನಾಭಿನ್ನನು ಎಂದು ಪೂರ್ವಪಕ್ಷವು ಪ್ರಾಪ್ತವಾದರೆ, ಸೂತ್ರಕಾರರು ಸೂರ್ಯಕಾದಿವತ್ ಎನ್ನುವ ಸೂತ್ರಖಂಡದಿಂದ ಅದನ್ನು ತಿರಸ್ಕರಿಸಿರುತ್ತಾರೆ. ಇಲ್ಲಿ ನೀಡಿರುವ ದೃಷ್ಟಾಂತವಚನದಿಂದ ಯಾವ ಅರ್ಥವನ್ನೂ ಸಾಧಿಸಲಿಕ್ಕೂ ಅಥವಾ ಬಾಧಿಸಲಿಕ್ಕೂ ಬರುವುದಿಲ್ಲ ಎಂದು ಹೇಳಿದರೆ, ಪೂರ್ವಪಕ್ಷ ನಿಷೇಧವನ್ನು ಮಾಡುತ್ತ ಪ್ರತಿಜ್ಞಾ ಹೇತುಗಳನ್ನು ತೋರಿಸುತ್ತಾರೆ –

**ನ ಚ ಚಿತ್ತ್ವಾದಭಿನ್ನತ್ವಂ ಜೀವಸ್ಯೇಶವದಾಪ್ಯತೇ ॥೧೧೯॥**

**ಯತ ಆಭಾಸತಾಮೇವ ಶ್ರುತಿರಸ್ಯ ವದತ್ಯಲಮ್ ।**

ಚೇತನತ್ವ ಹಾಗೂ ಅಂಶತ್ವವಿದ್ದರೂ ಜೀವನಿಗೆ ಬ್ರಹ್ಮನೊಂದಿಗೆ ಅಭೇದವು ಈಶ್ವರನಂತೆ ಅಥವಾ ಈಶ್ವರನ ಅವತಾರಗಳಂತೆ ಕೂಡುವುದಿಲ್ಲ. ಏಕೆಂದರೆ ಈ ಜೀವನಿಗೆ ಬ್ರಹ್ಮನ ಪ್ರತಿಬಿಂಬತ್ವವನ್ನೇ ಶ್ರುತಿಯು ಸ್ಪಷ್ಟವಾಗಿ ಹೇಳುತ್ತಿದೆ.

ಜೀವನಿಗೆ ಪರಮಾತ್ಮನ ಪ್ರತಿಬಿಂಬತ್ವವನ್ನು ಪ್ರತಿಪಾದಿಸುವ ಶ್ರುತಿಗಳನ್ನು ಉದಾಹರಿಸುತ್ತಾರೆ –

**ಯಥೈಷಾ ಪುರುಷೇ ಛಾಯಾ ಏತಸ್ಮಿನ್ನೇತದಾತತಮ್ ॥೧೨೦॥**

**ಛಾಯಾ ಯಥಾ ಪುಂಸದೃಶೀ ಪುಮಧೀನಾ ಚ ದೃಶ್ಯತೇ ।**

**ಏವಮೇವಾತ್ಮಕಾಃ ಸರ್ವೇ ಬ್ರಹ್ಮಾದ್ಯಾಃ ಪರಮಾತ್ಮನಃ ॥೧೨೧॥**

**ಸತ್ತಾಪ್ರತೀತಿಕಾರ್ಯೇಷು ಪುಮಧೀನೋ ಯಥೇಯತೇ ।**

**ಆಭಾಸ ಏವಂ ಪುರುಷಾ ಮುಕ್ತಾಶ್ಚ ಪರಮಾತ್ಮನಃ ॥೧೨೨॥**

ಹೇಗೆ ಈ ನೆರಳು ಪುರುಷಾಧೀನವೂ, ಪುರುಷನಿಗೆ ಸದೃಶವೂ ಆಗಿದೆಯೋ ಹಾಗೆಯೇ ಬ್ರಹ್ಮಾದಿ ಎಲ್ಲ ಜೀವಸಮುದಾಯವು ಪರಮಾತ್ಮನ ಅಧೀನವೂ, ಸದೃಶವೂ ಆಗಿದೆ. ಸತ್ತಾ ಪ್ರತೀತಿ ಕಾರ್ಯಗಳಲ್ಲಿ ಈ ನೆರಳು ಪುರುಷಾಧೀನವೆಂದು ಹೇಗೆ ತಿಳಿಯಲ್ಪಡುವುದೋ, ಹಾಗೆಯೇ ಸಂಸಾರಿಗಳೂ ಮುಕ್ತರೂ ಕೂಡ ಪರಮಾತ್ಮನಿಗೆ ಆಭಾಸಭೂತರೇ ಅಂದರೆ ಪ್ರತಿಬಿಂಬರೇ ಆಗಿರುವರು.

ಪರಮೇಶ್ವರ ಆಭಾಸತ್ವವಾದರೂ ಎಲ್ಲ ಜೀವರಿಗೂ ಸಾಕ್ಷಾತ್ತಾಗಿ ಇರುವುದಿಲ್ಲ, ಮತ್ತೆ ಪರಂಪರೆಯಿಂದ ಎಂಬುದಾಗಿ ಆಭಾಸ ಸ್ವರೂಪವನ್ನು ಎರಡು ಶ್ರುತಿಗಳ ಉದಾಹರಣೆಯಿಂದ ಹೇಳುತ್ತಾರೆ –

**ಛಾಯಾ ವಿಷ್ಣೋ ರಮಾ ತಸ್ಯಾಶ್ಛಾಯಾ ಧಾತಾ ವಿಶೇಷಕೌ ।**

**ತಸ್ಯೇಂದ್ರಕಾಮೌ ಚ ತಯೋಸ್ತಯೋರನ್ಯೇಽಖಿಲಾ ಅಪಿ ॥೧೨೩॥**

**ಹರೇರ್ಬ್ರಹ್ಮಾಸ್ಯ ಗೀಸ್ತಸ್ಯಾ ವಿಶೇಷಾವಿಂದ್ರ ಏತಯೋಃ ।**

**ಮಾರಶ್ಚಾಭಾಸಕಾಃ ಸರ್ವ ಏತಯೋಸ್ತದಧೀನತಃ ॥೧೨೪॥**

**ಸರ್ವೇಽಲ್ಪಶಕ್ತಯಶ್ಚೈವ ಪೂರ್ಣಶಕ್ತಿಃ ಪರೋ ಹರಿಃ ।**

**ಚೇತನತ್ವೇಽಪಿ ಭಿನ್ನಾಸ್ತೇ ತಸ್ಮಾದೇತೇನ ಸರ್ವದಾ ॥೧೨೫॥**

**ಇತ್ಯಾದಿ ಶ್ರುತಿವಾಕ್ಯೇಭ್ಯೋ ಜ್ಞಾಯತೇ ಭೇದ ಏವ ಹಿ ।**

ವಿಷ್ಣುವಿಗೆ ಲಕ್ಷ್ಮೀದೇವಿಯು ಛಾಯಾಸದೃಶಳು ಅಥವಾ ಆಭಾಸಭೂತಳು (ಅಂದರೆ ಪ್ರತಿಬಿಂಬಸ್ವರೂಪಳು). ಲಕ್ಷ್ಮೀದೇವಿಗೆ ಚತುರ್ಮುಖ ಬ್ರಹ್ಮನು ಛಾಯಾ ಸದೃಶನು. ಆ ಬ್ರಹ್ಮನಿಗೆ ಗರುಡಶೇಷರು ಹಾಗೂ ಅವರಿಗೆ ಇಂದ್ರಕಾಮರು ಛಾಯಾ ಸದೃಶರು, ಇತರವಾದ ಎಲ್ಲರೂ ಕೂಡ ಇಂದ್ರಕಾಮರಿಗೆ ಛಾಯಾಸದೃಶರು. ಶ್ರೀಹರಿಗೆ ಚತುರ್ಮುಖ ಬ್ರಹ್ಮನೂ, ಆ ಬ್ರಹ್ಮನಿಗೆ ಸರಸ್ವತಿಯೂ, ಅವಳಿಗೆ ಗರುಡ ಶೇಷರೂ, ಆ ಗರುಡಶೇಷರಿಗೆ ಇಂದ್ರನೂ ಮನ್ಮಥನೂ ಕೂಡ ಆಭಾಸಕರು. ಇಂದ್ರಕಾಮರಿಗೆ ಎಲ್ಲ ದೇವತೆಗಳೂ ಅಧೀನರಾದುದರಿಂದ ಆಭಾಸಕರಾಗಿರುವರು. ಎಲ್ಲರೂ ಅಲ್ಪಶಕ್ತಿಯುಳ್ಳವರೇ ಆಗಿರುವರು. ಸರ್ವೋತ್ತಮನಾದ ಶ್ರೀಹರಿಯು ಮಾತ್ರ ಪರಿಪೂರ್ಣವಾದ ಶಕ್ತಿವುಳ್ಳವನು. ಚೇತನತ್ವವಿದ್ದರೂ, ಅಂಶತ್ವವಿದ್ದರೂ ಆಭಾಸಕತ್ವವಿರುವ ಪ್ರಯುಕ್ತ ಜೀವರು ಆ ಶ್ರೀಹರಿಯಿಂದ ಯಾವಾಗಲೂ ಭಿನ್ನರೇ ಆಗಿರುವರು. ಇವೇ ಮುಂತಾದ ಶ್ರುತಿವಾಕ್ಯಗಳಿಂದ ಜೀವರಿಗೂ ಬ್ರಹ್ಮನಿಗೂ ಭೇದವೇ ತಿಳಿಯಲ್ಪಡುತ್ತದೆ.

ಈಗ 'ಅತ ಏವ ಚೋಪಮಾ' ಎನ್ನುವ ಸೂತ್ರಖಂಡವನ್ನು ವ್ಯಾಖ್ಯಾನ ಮಾಡುತ್ತ ಆ ಸಂದರ್ಭದಲ್ಲಿ ಬರುವ ಆಶಂಕೆಯನ್ನು ಪರಿಹರಿಸುವ ಮೂಲಕ ಸೂತ್ರಾರ್ಥವನ್ನು ಪ್ರತಿಪಾದಿಸುತ್ತಾರೆ –

**ಆಭಾಸತ್ವಂ ಹಿ ನಿರ್ಣೀತಂ ಜೀವಸ್ಯ ಪರಮಾತ್ಮನಃ ॥೧೨೬॥**

**ತನ್ನ ಯುಕ್ತಂ ಯದಾಭಾಸ ಉಪಾಧ್ಯಾಯಾತ್ತ ಈಯತೇ ।**

ಜೀವನಿಗೆ ಪರಮಾತ್ಮನ ಅಧೀನತ್ವರೂಪವಾದ ಆಭಾಸತ್ವವು ಶ್ರುತಿಗಳಿಂದ ಏನು ನಿರೂಪಿಸಲ್ಪಟ್ಟಿತೋ ಅದು ಯುಕ್ತಿಸಿದ್ಧವಾದುದಲ್ಲ. ಏಕೆಂದರೆ ಆಭಾಸತ್ವವು ಉಪಾಧಿಯ ಅಧೀನವಾದುದು. ಹೇಗೆ ಸೂರ್ಯನ ಪ್ರತಿಬಿಂಬವು ನೀರು ಮೊದಲಾದ ಉಪಾಧಿಯ ಅಧೀನವಾಗಿರುವುದೋ ಹಾಗೆ.

**ಉಪಾಧ್ಯಾಯಾತ್ತತಾಭಾವಾದಾಭಾಸತ್ವವಿರೋಧತಃ ॥೧೨೭॥**

ಜೀವರಲ್ಲಿ ಆಭಾಸತ್ವ ವ್ಯಾಪಕವಾದ ಉಪಾಧ್ಯಧೀನತ್ವವು ಇಲ್ಲದಿರುವ ಕಾರಣ ಆಭಾಸತ್ವವು ಕೂಡುವುದಿಲ್ಲ (ಉಪಾಧ್ಯಧೀನತ್ವವು ವ್ಯಾಪಕ, ಆಭಾಸತ್ವವು ವ್ಯಾಪ್ಯ. ವ್ಯಾಪಕವಿಲ್ಲದೆ ವ್ಯಾಪ್ಯವು ಕೂಡುವುದಿಲ್ಲ). ಲೋಕದಲ್ಲಿ ಪ್ರತಿಬಿಂಬಕ್ಕೆ ಬಿಂಬದೊಂದಿಗೆ ಐಕ್ಯವೇ ಕಂಡಿರುವುದರಿಂದ, ಪ್ರತಿಬಿಂಬ ರೂಪನಾದ ಜೀವನಿಗೂ ಬಿಂಬರೂಪನಾದ ಪರಮಾತ್ಮನಿಗೂ ಭೇದಸಾಧನವು ಅಯುಕ್ತವು.

ಹೀಗೆ ಆಭಾಸತ್ವ ಅನುಮಾನದಿಂದ ಐಕ್ಯವೇ ಸಿದ್ಧವಾಗುವುದು ಎಂದು ಹೇಳುತ್ತಾರೆ –

**ಚೇತನತ್ವೇನ ಚಾಂಶತ್ವಾತ್ಸಮುದಾಯೈಕ್ಯಮಾಪತೇತ್ ।**

ಚೇತನತ್ವ ಹಾಗೂ ಅಂಶತ್ವಗಳ ನಿಮಿತ್ತದಿಂದ ಸಮುದಾಯಕ್ಕೆ ಐಕ್ಯವು ಪ್ರಾಪ್ತವಾಗುವುದು.

ಮಾಯಾವಾದಿಗಳು ಜೀವರಿಗೆ ಪ್ರತ್ಯೇಕವಾಗಿಯೂ, ಬ್ರಹ್ಮನಿಂದಲೂ ಅತ್ಯಂತಾ ಭೇದವನ್ನು ಅಂಗೀಕರಿಸುತ್ತಾರೆ. ಆದರೆ ಭೇದಾಭೇದ ವಾದಿಗಳ ಮತವು ಹಾಗಲ್ಲ. ಸಮುದಾಯಕ್ಕೆ ಐಕ್ಯವಿದ್ದರೂ ಬೇಧವು ಕೂಡುವುದು. ಅತ್ಯಂತಾಭೇದವನ್ನು ಬಿಟ್ಟು ಸಮುದಾಯಕ್ಕೆ ಐಕ್ಯವನ್ನು ಅಂಗೀಕರಿಸುವುದೇಕೆ ಎಂದರೆ –

**ಅತಃ ಪೃಥಕ್ಸಮುದಿತಂ ಸಮುದಾಯಾಂಶಯೋರ್ಭವೇತ್ ॥೧೨೪॥**

**ಈಶಾಖ್ಯಾ ಸಮುದಾಯೇ ಸ್ಯಾದೀಶರೂಪೇಷ್ವಿವೋದಿತಾ ।**

ಸಮುದಾಯಕ್ಕೆ ಐಕ್ಯವನ್ನು ಅಂಗೀಕರಿಸಿದ್ದರಿಂದ ಶ್ರುತ್ಯಾದಿಗಳಲ್ಲಿ ಹೇಳಲ್ಪಟ್ಟ ಭೇದವು, ಚೇತನ ಸಮುದಾಯರೂಪನಾದ ಬ್ರಹ್ಮನಿಗೂ ಬ್ರಹ್ಮನ ಅಂಶರೂಪನಾದ ಜೀವನಿಗೂ, ಪ್ರಾಪ್ತವಾಗುವುದು. ಆದರೆ ಮಾಯಾವಾದಿಗಳಂತೆ ಬ್ರಹ್ಮನಿಗೂ ಜೀವರಿಗೂ ಅತ್ಯಂತಾಭೇದವನ್ನು ಅಂಗೀಕರಿಸಿದರೆ ಭೇದಪ್ರತಿಪಾದಕ ಶ್ರುತಿಗಳು ಕೂಡದೇ ಹೋಗುವವು. ಸಮುದಾಯಕ್ಕೆ ಐಕ್ಯವಿರುವುದರಿಂದಲೇ ಚೇತನಗಳ ಸಮುದಾಯಕ್ಕೆ ಬ್ರಹ್ಮ ಎಂಬ ಹೆಸರು ಕೂಡುವುದು. ಹೇಗೆ ಮತ್ಸ್ಯಾದಿ ಭಗವದ್ ರೂಪಗಳ ಸಮುದಾಯದಲ್ಲಿ ಭಗವಾನ್ ಎನ್ನುವ ಹೆಸರು ನ ಸ್ಥಾನತೋಪಿ ಇತ್ಯಾದಿಗಳಲ್ಲಿ ಸಿದ್ಧಾಂತಿಗಳಿಂದ ಹೇಳಲ್ಪಟ್ಟಿದೋ ಹಾಗೆಯೇ ಬ್ರಹ್ಮವೆನ್ನುವ ಹೆಸರು ಚೇತನ ಸಮುದಾಯದಲ್ಲಿದೆ.

ಹಾಗಾದರೆ ಜೀವನಿಗೆ ಬ್ರಹ್ಮನೊಂದಿಗೆ ಅಭೇದವೂ ಪರಮಾರ್ಥವಾಗಿದ್ದರೆ ಆಗ ಬ್ರಹ್ಮೈವ ಭವತಿ ಎಂದು ಹೇಳಿದ ಮುಕ್ತಿಯು ಅಯುಕ್ತವಾಗುವುದು ಎಂದರೆ –

**ಅತೋ ದೇಹಾದ್ಯುಪಾಧೀನಾಮಪಾಯೇ ಸಮತಾ ಭವೇತ್ ॥೧೨೫॥**

**ಈಶರೂಪೈಃ ಅಥಾಭಾಸಾ ಮುಖ್ಯತಃ ಸೂರ್ಯಕಾದಿವತ್ ।**

**ಯದಾ ತದೋಪಾಧ್ಯಾಯತ್ತರೂಪಾಣಾಂ ನಾಶಿತಾ ಭವೇತ್ ||೧೩೦||**

ಆದಕಾರಣ ಜ್ಞಾನಕರ್ಮಗಳಿಂದ ಶರೀರಾದಿ ಉಪಾಧಿಗಳಿಗೆ ಸಂಪೂರ್ಣ ನಾಶವು ಪ್ರಾಪ್ತವಾಗುತ್ತಿರಲು ಜೀವರಿಗೆ ಶ್ರೀಹರಿಯ ರೂಪಗಳಿಂದ ಸಾಮ್ಯವು ಪ್ರಾಪ್ತವಾಗುವುದು. ಹಾಗೆಯೇ ಯಾವಾಗ ಜೀವರು ಮುಖ್ಯವಾಗಿ ಸೂರ್ಯನ ಪ್ರತಿಬಿಂಬಗಳಂತೆ ಆಭಾಸಭೂತರೋ, ಆಗ ಉಪಾಧ್ಯಧೀನವಾದ ಆ ರೂಪಗಳಿಗೆ ನಾಶವು ಆಗುವುದು.

ಉಪಾಧಿನಾಶವಾದರೆ ಉಪಾಧ್ಯಧೀನತ್ವವುಳ್ಳ ಜೀವರಿಗೂ ನಾಶ ಬರುವುದು. ಉಪಾಧಿಗೆ ನಾಶವಿಲ್ಲವೆಂದರೆ, ಪ್ರತ್ಯಕ್ಷಾದಿಗಳಿಗೆ ವಿರೋಧ ಬರುವುದು ಹಾಗೂ ಸಂಸಾರಿತ್ವವು ಸ್ಥಿರವಾಗುವುದು. ಏವಂ ಚ ಎರಡು ಪ್ರಕಾರದಿಂದಲೂ ಮೋಕ್ಷ ಪ್ರತಿಪಾದಕ ಶಾಸ್ತ್ರಕ್ಕೆ ವೈಯರ್ಥ್ಯ ಬರುವುದು. ಹೀಗೆ ಆಶಂಕೆ ಬಂದರೆ, ಈ ಆಶಂಕೆಯನ್ನು ನಿರಾಕರಿಸುತ್ತ ಸೂತ್ರಾಂಶವನ್ನು ವ್ಯಾಖ್ಯಾನ ಮಾಡುತ್ತಾರೆ –

**ಇತ್ಯಾಶಂಕಾನಿವೃತ್ತ್ಯರ್ಥಮಾಹ ವೇದಾಧಿಪಃ ಪ್ರಭುಃ ।**

**ಅತ ಏವೋಪಮೇತ್ಯೇವ ಚ ಅನ್ಯಾಭಾಸವಿಶೇಷಿತಾಮ್ ||೧೩೧||**

ಪೂರ್ವೋಕ್ತ ಪ್ರಕಾರ ಆಶಂಕೆಯನ್ನು ಪರಿಹರಿಸುವುದಕ್ಕಾಗಿ ವೇದಾಧೀಶರಾದ ಸರ್ವಸಮರ್ಥರಾದ ವೇದವ್ಯಾಸರು ಅತ ಏವೋಪಮಾ ಎಂಬುದಾಗಿಯೇ ಹೇಳಿರುವರು. ಅನ್ಯಾಭಾಸವಿಶೇಷಿತಾಂ ಎಂದು ಸೂತ್ರಖಂಡದ ತಾತ್ಪರ್ಯವನ್ನು ಹೇಳುತ್ತಾರೆ. ಅದೇನೆಂದರೆ ಇತರವಾದ ಸೂರ್ಯಪ್ರತಿಬಿಂಬ ಮುಂತಾದ ಆಭಾಸದ ದೆಶೆಯಿಂದ ಜೀವರಿಗೆ ವೈಲಕ್ಷಣ್ಯವನ್ನು ಸೂತ್ರಕಾರರು ಈ ಸೂತ್ರಖಂಡದಿಂದ ಹೇಳಿರುವರು.

ಹಾಗಾದರೆ ಈ ಸೂತ್ರಾಕ್ಷರಗಳಿಂದ ಈ ತಾತ್ಪರ್ಯವು ಹೇಗೆ ಸಿದ್ಧಿಸುತ್ತದೆ ಎಂದು ಕೇಳಿದರೆ, 'ಅತ ಏವ' ಎನ್ನುವ ಶಬ್ದದಿಂದ ಪರಾಮರ್ಶಿತವಾದ ಅರ್ಥವನ್ನು ತೋರಿಸುತ್ತಾರೆ –

**ಯದುಕ್ತಂ ತದಧೀನತ್ವಂ ಸರ್ವಾವಸ್ಥಾಸ್ವಶೇಷತಃ ।**

**ಜೀವಸ್ಯ ಸದೃಶತ್ವಂ ಚ ಚಿತ್ತ್ವಮಾತ್ರಂ ನ ಚಾಪರಮ್ ||೧೩೨||**

'ಸಂಧ್ಯೇ ಸೃಷ್ಟಿರಾಹ ಹಿ' ಇತ್ಯಾದಿಗಳಲ್ಲಿ ಜೀವನಿಗೆ ಎಲ್ಲ ವ್ಯಾಪಾರಗಳಲ್ಲಿ ಯಾವ ಪರಮಾತ್ಮನ ಅಧೀನತ್ವವೂ ಹಾಗೂ 'ಪುಂಸ್ತ್ವಾದಿವತ್' ಇತ್ಯಾದಿಗಳಲ್ಲಿ ಸಾದೃಶ್ಯವು ಹೇಳಲ್ಪಟ್ಟಿದೆಯೋ ಅದು ಕೇವಲ ಚೇತನತ್ವ ಸಾದೃಶ್ಯವೇ ಹೊರತು, ಸ್ವಾತಂತ್ರ್ಯಾದಿ ರೂಪವಾದುದು ಅಲ್ಲ.

ಈಗ 'ಅತ ಏವ ಚೋಪಮಾ' ಎಂಬ ವಾಕ್ಯವನ್ನು ಸಂಯೋಜಿಸಿ ಹೇಳುತ್ತಾರೆ.

**ತಾವನ್ಮಾತ್ರೇಣ ಚಾಭಾಸೋ ರೂಪಮೇಷಾಂ ಚಿದಾತ್ಮನಾಮ್ ।**

**ನೋಪಾಧ್ಯಧೀನತಾದ್ಯೈಶ್ಚ ನಾತಿಸಾಮ್ಯಂ ನಿದರ್ಶನೇ ॥೧೩॥**

ಕೇವಲ ತದಧೀನತ್ವ ಹಾಗೂ ತದ್ಸದೃಶತ್ವ ಮಾತ್ರದಿಂದ ಈ ಚಿದಾತ್ಮರಾದ ಜೀವರಿಗೆ ಸೂರ್ಯಪ್ರತಿಬಿಂಬಾದಿ ಉಪಮಾನವು ಕೂಡುತ್ತದೆ. ಮತ್ತೆ ಉಪಾಧಿಯ ಅಧೀನತ್ವ, ಉಪಾಧಿನಾಶತ್ವ, ಜಡತ್ವ ಮುಂತಾದ ಹೇತುಗಳಿಂದಲೂ ಅಲ್ಲ. ಹಾಗಾದರೆ ದೃಷ್ಟಾಂತ–ದಾರ್ಷ್ಟಾಂತಿಕಭಾವವು ಕೂಡದೇ ಹೋಗುವುದು. ಅದು ಅತ್ಯಂತ ಸಾಮ್ಯವಿದ್ದರೇನೆ ಕೂಡುವುದು. ಇಲ್ಲದಿದ್ದರೆ ವಸ್ತುತ್ವಮಾತ್ರ ಸಾಮ್ಯವು ಸರ್ವತ್ರ ಕೂಡುವುದರಿಂದ ಒಂದು ನೋಣವೂ ಕೂಡ ಆನೆಗೆ ದೃಷ್ಟಾಂತವೆಂದು ಆಗುವುದು. ಹಾಗೆ ಹೇಳಕೂಡದು. ಏಕೆಂದರೆ "ನಿದರ್ಶ್ಯತೇ ಸಾಧ್ಯೇನ ಸಾಧನಸ್ಯ ವ್ಯಾಪ್ತಿರತ್ರೇತೆ ಹಿ ನಿದರ್ಶನಮ್". ಅಂದರೆ ಸಾಧ್ಯದಿಂದ ಹೇತುವಿಗೆ ವ್ಯಾಪ್ತಿಯನ್ನು ತೋರಿಸುವುದಕ್ಕೇನೆ ನಿದರ್ಶನ ಅಥವಾ ದೃಷ್ಟಾಂತ ಎಂದು ಹೆಸರು. ಆದ್ದರಿಂದ ದೃಷ್ಟಾಂತ ಸ್ಥಳದಲ್ಲಿ ಸಾಧ್ಯಸಾಧನ ಧರ್ಮದಿಂದ ಸಾಮ್ಯವನ್ನೇ ದಾರ್ಷ್ಟಾಂತಿಕದಿಂದ ಅನ್ವೇಷಿಸತಕ್ಕದ್ದು. ಅತ್ಯಂತ ಸಾಮ್ಯದ ಅಗತ್ಯವಿಲ್ಲ.

ಜೀವನಿಗೆ ಪರಮಾತ್ಮನೊಂದಿಗೆ ಚೇತನತ್ವ ಮಾತ್ರ ಸಾದೃಶ್ಯವನ್ನು ಹೇಳಿದ್ದು ಕೂಡುವುದಿಲ್ಲ. ಮುಕ್ತಿಯಲ್ಲಿ ಸುಖಾದಿಗಳನ್ನು ಅಂಗೀಕರಿಸಿರುವುದರಿಂದ ವಿರೋಧ ಬರುವುದು ಎಂದರೆ –

**ಕಿಂಚಿತ್ಸುಖಾದಿಸಾದೃಶ್ಯಮಪೀಶೇನಾಸುರಾನ್ಯತೇ ।**

ಅಸುರರನ್ನು ಬಿಟ್ಟು ಇತರ ಜೀವರಿಗೆ ಈಶ್ವರನೊಂದಿಗೆ ಕಿಂಚಿತ್ ಸುಖಾದಿ ಸಾದೃಶ್ಯವು ಇದ್ದೇ ಇರುವುದು.

ಸುಖಾದಿ ಸಾದೃಶ್ಯವು ಎಲ್ಲರಿಗೂ ಇಲ್ಲವಾದರೂ, ಚೇತನತ್ವ ಸಾದೃಶ್ಯವು ಅಸುರಾದಿ ಸಮಸ್ತ ಜೀವರಿಗೂ ಇರುವುದು. ಸುಖಾದಿ ಸಾದೃಶ್ಯ ಹೇಳುವುದರಿಂದ ಹೇತುವಿರೋಧ ಬರುವುದು. ಆದ್ದರಿಂದ ಚೇತನತ್ವ ಸಾದೃಶ್ಯವನ್ನೇ ಇಲ್ಲಿ ಹೇಳಿದ್ದಾರೆ. ಬ್ರಹ್ಮಾಭಾಸತ್ವಾತ್ ಎಂಬ ಹೇತುವಿಗೆ ಬ್ರಹ್ಮಾಧೀನತ್ವ ಹಾಗೂ ಸಾದೃಶ್ಯವಿದ್ದ ಪ್ರಯುಕ್ತ ಎಂಬ ಅರ್ಥವು ಕೂಡುವುದು. ಸೂರ್ಯಕಾದಿಗಳಂತೆ ಪ್ರತಿಬಿಂಬತ್ವವಿದ್ದ ಪ್ರಯುಕ್ತ ಎಂಬ ಅರ್ಥ ಕೂಡುವುದಿಲ್ಲ. ಆದ್ದರಿಂದ ಅಧೀನತ್ವ ಸಾದೃಶ್ಯಾರ್ಥಗಳಲ್ಲಿ ಹೇಳಲಾದ ಆಭಾಸತ್ವ ಅನುಮಾನವು ನಿರ್ದೋಷವೇ ಆಗಿದೆ.

ಬ್ರಹ್ಮಾಭಾಸ ಎಂಬ ಶಬ್ದವು ಜೀವನಿಗೆ ಬ್ರಹ್ಮಾಧೀನತ್ವ ಹಾಗೂ ಸದೃಶತ್ವಗಳನ್ನು ಯೋಗವೃತ್ತಿಯಿಂದ ಹೇಳುತ್ತದೆ ಎಂದು ಹೇಳುತ್ತಾರೆ –

**ತತ ಆಭಾಸತೇ ನಿತ್ಯಂ ತದ್ವದಾಭಾಸತೇಽಪಿ ಚ ॥೧೪॥**

**ಭಾನಮಸ್ತಿತ್ವಮಪಿ ಚೈವಾ ಸಮಂತಾದ್ಯತಸ್ತತಃ ।**

**ಜೀವ ಆಭಾಸ ಉದ್ದಿಷ್ಟಃ ಸದೈವ ಪರಮಾತ್ಮನಃ ।।೧೩೫।।**

**ನ ಜಲಾಯತ್ತಸೂರ್ಯಾದಿಪ್ರತಿಬಿಂಬೋಪಮತ್ವತಃ ।**

ಜೀವನು ಬ್ರಹ್ಮನಿಂದ ನಿತ್ಯದಲ್ಲಿಯೂ ಪ್ರತೀತನಾಗುತ್ತಾನೆ ಎನ್ನುವುದರಿಂದ ತದಧೀನತ್ವವೂ ಹಾಗೂ ಬ್ರಹ್ಮನಂತೆ ತೋರುತ್ತಾನೆ ಎನ್ನುವುದರಿಂದ ಸಾದೃಶ್ಯವೂ ಹೇಳಲ್ಪಡುತ್ತದೆ. ಯಾವ ಕಾರಣದಿಂದ ಜೀವನಿಗೆ ಜ್ಞಾನ ಮತ್ತು ಸತ್ವವೂ ಕೂಡ ಪರಮಾತ್ಮನಿಂದಲೇ ಚೆನ್ನಾಗಿ ಆಗುವುದೋ ಆದ್ದರಿಂದಲೇ ಜೀವನು ಯಾವಾಗಲೂ ಪರಮಾತ್ಮನ ಪ್ರತಿಬಿಂಬನೆಂದು ಹೇಳಲ್ಪಟ್ಟಿದ್ದಾನೆ. ( 'ಭಾ ಚ ಆಸಾ ಚ ಭಾಽಽಸೇ। ಆ ಸರ್ವಕಾಲವರ್ತಿನ್ಯೌ ಭಾಽಽಸೇ ಆಭಾಸೇ। ಪರಮಾತ್ಮಾಧೀನೇ ಆಭಾಸೇ ಯಸ್ಯಾಸೌ ಪರಮಾತ್ಮಾಭಾಸಃ।' ಭಾ– ಜ್ಞಾನ, ಸ– ಅಸ್ತಿತ್ವ, ಆ– ಸದಾಕಾಲವೂ ಪರಮಾತ್ಮನ ಅಧೀನದಲ್ಲಿಯೇ ಇರುವುದಕ್ಕೆ ಪರಮಾತ್ಮಾಭಾಸ ಎಂದು ಹೆಸರು). ಮತ್ತೆ ಜಲಾಧೀನಗಳಾದ ಸೂರ್ಯಾದಿ ಪ್ರತಿಬಿಂಬಗಳ ಸಾದೃಶ್ಯವಿದ್ದ ಪ್ರಯುಕ್ತ ಜೀವನು ಪರಮಾತ್ಮನ ಪ್ರತಿಬಿಂಬನು ಎಂದು ತಿಳಿಯಬಾರದು.

**ತದಧೀನತ್ವಮೇವೇತಿ ಕಿಂಚಿತ್ಸಾದೃಶ್ಯಮೇವ ಚಃ ।।೧೩೬।।**

**ಸಂಪ್ರಕಾಶಯತಃ ಸೂತ್ರಗತೌ ಅಖಿಲಮಾನತಃ ।**

**ಜೀವೇಶಭೇದದೃಷ್ಟ್ಯೈವ ಸಮುದಾಯೈಕತಾ ಕುತಃ ।।೧೩೭।।**

ಸೂತ್ರಗತವಾದ ಏವ ಎನ್ನುವ ಶಬ್ದವು ಪರಮಾತ್ಮನ ಅಧೀನತ್ವವೇ ಎಂದು ಅವಧಾರಣಾರ್ಥವನ್ನೂ, ಚ ಶಬ್ದವು ಕಿಂಚಿತ್ಸಾದೃಶ್ಯ ಮಾತ್ರ ಎಂಬ ಅರ್ಥವನ್ನೂ, ಎಲ್ಲ ಪ್ರಮಾಣಗಳಿಂದಲೂ ಚೆನ್ನಾಗಿ ತೋರಿಸಿಕೊಡುತ್ತವೆ. ಜೀವರಿಗೂ ಈಶ್ವರನಿಗೂ ಭೇದವು ದೃಷ್ಟವಾಗಿರುವ ಪ್ರಯುಕ್ತ , ಸಮುದಾಯೈಕತ್ವವು ಯಾವ ಪ್ರಮಾಣದಿಂದ ಸಿದ್ಧವಾಗುತ್ತದೆ?

ಈ ವಿಷಯದಲ್ಲಿ ಮತ್ತೊಂದು ಅನುಮಾನವನ್ನು ಹೇಳುತ್ತಾರೆ. –

**ಅಶೇಷದೋಷರಾಹಿತ್ಯಂ ಸರ್ವಶಕ್ತಿತ್ವತೋ ಹರೇಃ ।**

**ಸರ್ವೋಪೇತೇತಿ ಕಥಿತಮತ ಐಕ್ಯಂ ಕ್ವ ದೋಷಿಣಾ ।।೧೩೮।।**

'ಸರ್ವೋಪೇತಾ ಚ ತದ್ದರ್ಶನಾತ್' ಎನ್ನುವುದರಿಂದ ಸರ್ವಶಕ್ತಿಮತ್ವವೆಂಬ ಹೇತುವಿನಿಂದ ಶ್ರೀಹರಿಗೆ ಸರ್ವದೋಷಗಳ ಅಭಾವವು ಸಮರ್ಥಿಸಲ್ಪಟ್ಟಿದೆ. ಜೀವರಲ್ಲಿ ದುಃಖಾದಿ ದೋಷಗಳು ಅನುಭವಸಿದ್ಧ. ಹೀಗೆ ವಿರುದ್ಧ ಧರ್ಮಗಳನ್ನು ಹೊಂದಿರುವ ಜೀವಬ್ರಹ್ಮರಿಗೆ ಐಕ್ಯವನ್ನು ಹೇಳುವುದಾದರೆ ಸ್ತಂಭ ಕುಂಭಗಳಿಗೂ ಐಕ್ಯವು ಬರಬೇಕಾಗುವುದು. ಆದ್ದರಿಂದ ಜೀವ ಬ್ರಹ್ಮರಿಗೆ ಐಕ್ಯವು ಕೂಡುವುದಿಲ್ಲ.

ಹಾಗಾದರೆ ಶ್ರೀಹರಿಗೆ ಸರ್ವಶಕ್ತಿಮತ್ವ ಹಾಗೂ ಅಶೇಷದೋಷರಾಹಿತ್ಯವಿರಲಿ.

ಹಾಗಿದ್ದರೂ ಉಪಾಧಿನಿಮಿತ್ತದಿಂದ ಭಿನ್ನನಾದ ಜೀವನು ಶ್ರೀಹರಿಯ ಅಂಶನೇ ಆಗಿರುವ ಪ್ರಯುಕ್ತ ಶ್ರೀಹರಿಯೂ ಆ ಉಪಾಧಿನಿಮಿತ್ತಕ ದೋಷವುಳ್ಳವನಾಗಲಿ, ವಿರೋಧವೇನು? ಎಂದರೆ –

**ಅಶೇಷಶಕ್ತಿಯುಕ್ತಶ್ಚೇತ್ಸ್ವಾತಂತ್ರ್ಯಾದ್ದೋಷವಾನ್ ಕಥಮ್ ।**

**ಅನುಸಂಧಾನರಹಿತಮೈಕ್ಯಂ ಚೇದೇಕತಾ ನ ತತ್ ॥೧೩೯॥**

ಶ್ರೀಹರಿಯು ಎಲ್ಲ ಶಕ್ತಿಗಳಿಂದ ಕೂಡಿರುವನು ಎಂದು ಅಂಗೀಕರಿಸುವುದಾದರೆ ಸರ್ವಸ್ವಾತಂತ್ರ್ಯವಿರುವ ಪ್ರಯುಕ್ತ ಶ್ರೀಹರಿಗೆ ಉಪಾಧಿ ನಿಮಿತ್ತಕ ದೋಷವಾದರೂ ಹೇಗೆ ಸಂಭವಿಸುವುದು? ಅಂದರೆ ಶ್ರೀಹರಿಗೆ ಯಾವ ವಿಧದಿಂದಲೂ ದೋಷ ಸಂಸರ್ಗವು ಕೂಡಲಾರದು ಎಂದು ತಾತ್ಪರ್ಯ. ಒಂದು ಪಕ್ಷ ಜೀವಬ್ರಹ್ಮರಲ್ಲಿ ಐಕ್ಯವನ್ನು ಒಪ್ಪಿದರೂ ಬ್ರಹ್ಮನಿಗೆ ಜೀವಗತ ದುಃಖಾದಿ ಅನುಸಂಧಾನರಾಹಿತ್ಯದಿಂದ ಆ ಐಕ್ಯವು ಕೂಡುವುದಿಲ್ಲ. ಜೀವನಲ್ಲಿ ಬ್ರಹ್ಮಸ್ವರೂಪವಾದ ನಿರ್ದುಃಖತ್ವಾದಿಗಳ ಅನುಸಂಧಾನವಿರುವುದಿಲ್ಲ ಎನ್ನುವುದು ಅನುಭವಸಿದ್ಧವಾಗಿದೆ. ಇದರಿಂದ ಜೀವ ಬ್ರಹ್ಮರಿಗೆ ಐಕ್ಯವು ಇಲ್ಲವೆಂದೇ ಹೇಳಿದಂತಾಯಿತು.

**ಚೇತನೈಕ್ಯೇಽನುಸಂಧಾನಂ ಪ್ರಮಾಣಂ ನೈವ ಚಾಪರಮ್ ।**

**ಅನುಸಂಧಾನರಹಿತಂ ಸಮುದಾಯೈಕ್ಯಮೇವ ಚೇತ್ ॥೧೪೦॥**

**ಚೇತನೇಷ್ವಸ್ತು ತನ್ನಾಮಮಾತ್ರಮೇವ ಯತಸ್ತತಃ ।**

ಚೇತನಗಳಿಗೆ ಐಕ್ಯವಿಷಯದಲ್ಲಿ ಅನುಸಂಧಾನವೊಂದೇ ಪ್ರಮಾಣ. ಬೇರೆ ಯಾವುದೇ ಪ್ರಮಾಣವಿಲ್ಲ. ಯಾವ ಚೇತನನು ಯಾವಾಗ ಬ್ರಹ್ಮಸ್ವರೂಪವನ್ನು ಅನುಸಂಧಾನ ಮಾಡುತ್ತಾನೋ ಆಗ ಆ ಚೇತನನಿಗೆ ಬ್ರಹ್ಮನೊಂದಿಗೆ ಐಕ್ಯವು ಬರುವುದು. ಅನುಸಂಧಾನವಿಲ್ಲದಾಗ ಭೇದವು ಕೂಡುವುದು. ಸಮುದಾಯಕ್ಕೆ ಐಕ್ಯವೇ ನನ್ನಿಂದ ಹೇಳಲ್ಪಡುತ್ತದೆಯೇ ಹೊರತು ಆತ್ಯಂತಿಕ ಐಕ್ಯವಲ್ಲ. ಆದಕಾರಣ ಜೀವರಲ್ಲಿ ಅನುಸಂಧಾನರಹಿತವಾದ ಸಮುದಾಯೈಕ್ಯವು ಯುಕ್ತವಾಗಲಿ. ನಾನು ಹೇಳುವ ಆ ಸಮುದಾಯೈಕ್ಯವಾದರೂ ಕೇವಲ ನಾಮಮಾತ್ರವು, ವಾಸ್ತವವಲ್ಲ. ಆದ್ದರಿಂದ ಅದನ್ನು ಅಂಗೀಕರಿಸುವುದು ದೋಷವಲ್ಲ.

ಮುಕ್ತಿಯಲ್ಲಿ ಅನುಸಂಧಾನವಿದೆ. ಆದ್ದರಿಂದ ಐಕ್ಯವು ಸಿದ್ಧಿಸುತ್ತದೆ. ಮುಕ್ತರ ಸ್ವರೂಪವು ದುಃಖಾದಿ ದೋಷಗಳಿಂದ ದೂರವಾದ ಪ್ರಯುಕ್ತ ಹಿಂದೆ ಹೇಳಿದ ದೋಷವೂ ಬರುವುದಿಲ್ಲ ಎಂದು ಆಶಂಕಿಸಿದರೆ –

ಮುಕ್ತೌಸ್ಯಾದನುಸಂಧಾನಮಿತ್ಯಪಿ ಸ್ಯಾತ್ಸುದುಷ್ಕರಮ್ ॥೧೪೧॥

ಮುಕ್ತಿಯಲ್ಲಿ ಅನುಸಂಧಾನವು ಆಗುವುದು ಎಂಬ ವಚನವೂ ಕೂಡ ಬಹಳ ದುಷ್ಕರವಾದುದು. ಪ್ರಮಾಣವಿಲ್ಲವಾದ್ದರಿಂದ ಅದು ಕೂಡುವುದಿಲ್ಲ.

ಹಾಗೇನಾದರೂ ನೀನು ಹೇಳುವಂತೆ ಮುಕ್ತಿಯಲ್ಲಿ ಅನುಸಂಧಾನವು ಇರುವುದಾದರೆ ಈಗ ಸಂಸಾರದಲ್ಲಿ ಏಕೆ ಇರುವುದಿಲ್ಲ ಎಂದು ಕೇಳುತ್ತೇವೆ. ಆದಕ್ಕೆ ಉತ್ತರವಾಗಿ, ಅವಿದ್ಯೆ, ಕಾಮ, ಕರ್ಮಗಳ ಬಂಧವಿರುವುದರಿಂದ ಎಂದು ಹೇಳಿದರೆ, ಹಾಗೆ ಹೇಳುವವನನ್ನು ಅಜ್ಞಾನಾದಿ ಪ್ರತಿಬಂಧಕವು ಇರುವುದರಿಂದಲೇ ಅನುಸಂಧಾನವು ಇಲ್ಲವೆಂದು ನಿನಗೆ ಹೇಗೆ ನಿಶ್ಚಯವಾಗಿದೆ ಎಂದು ಕೇಳಬೇಕು. ಅನುಸಂಧಾನದ ಅಭಾವಕ್ಕೆ ಅವಿದ್ಯೆಯು ಕಾರಣವಲ್ಲ, ಮತ್ತೆ ಐಕ್ಯಾಭಾವವೇ ಕಾರಣ ಎಂದು ನಾವು ಹೇಳುತ್ತೇವೆ. ಆದಾದರೂ ನಿಮಗೆ ಹೇಗೆ ನಿಶ್ಚಯವಾಯಿತು ಎಂದು ಅವನು ನಮ್ಮನ್ನು ಕೇಳಿದರೆ –

**ಸರ್ವಜ್ಞ ಏಕತಾಂ ನಾನುಸಂಧತ್ತೇ ನೈವ ಸಾ ಯತಃ ।**

ಅನುಸಂಧಾನಾಭಾವವು ಅಜ್ಞಾನಾದಿ ನಿಮಿತ್ತಕ ಎನ್ನುವುದು ಸರ್ವಜ್ಞನಾದ ಈಶ್ವರನಿಗೆ ಸರ್ವಥಾ ಕೂಡುವುದಿಲ್ಲ. ಅಜ್ಞಾನಾದಿ ಸಂಬಂಧವುಳ್ಳ ಜೀವರಿಗೇನೆ ಅಜ್ಞಾನ ನಿಮಿತ್ತಕವಾದ ಅನುಸಂಧಾನಾಭಾವವು ಆಗುವುದು. ಶ್ರೀಹರಿಯು ಸರ್ವಜ್ಞನಾದ್ದರಿಂದ ಅವನಿಗೆ ಐಕ್ಯಾಭಾವದ ಅನುಸಂಧಾನವು ಇದ್ದೇ ಇರುವುದು. ಅವನು ಐಕ್ಯವನ್ನು ಎಂದೂ ಅನುಸಂಧಾನ ಮಾಡುವುದೇ ಇಲ್ಲ.

ಹಾಗಿದ್ದರೂ ಪರಮಾತ್ಮನಿಗೆ ಐಕ್ಯಾನುಸಂಧಾನದ ಅಭಾವವು ಸಿದ್ಧಿಸುವುದಿಲ್ಲ. ಏಕೆಂದರೆ ಈಗ ಅನುಸಂಧಾನ ಮಾಡದೇ ಇದ್ದರೂ ಮುಂದೊಂದು ಸಮಯದಲ್ಲಿ ಐಕ್ಯಾನುಸಂಧಾನವು ಇರುವುದಿಲ್ಲ ಎಂದು ಹೇಳಲಾಗುವುದಿಲ್ಲ. ಸಾರ್ವಕಾಲಿಕ ಅನುಸಂಧಾನವು ಐಕ್ಯವ್ಯಾಪಕವಲ್ಲ ಎಂದು ಆಶಂಕಿಸಿದರೆ –

**ಪಶ್ಚಾತ್ಸ್ಯಾದನುಸಂಧಾನಂ ಚೇನ್ಮಿಥ್ಯಾಜ್ಞಾನಿತಾ ಭವೇತ್ ।।೧೪೨।।**

ಪರಮಾತ್ಮನಿಗೆ ಐಕ್ಯಾನುಸಂಧಾನವು ಮುಂದಕ್ಕೆ ಆಗುವುದಾದರೆ ಆಗ ಸರ್ವಜ್ಞತ್ವವೇ ಕೂಡುವುದಿಲ್ಲವಾದ್ದರಿಂದ ಪರಮಾತ್ಮನಿಗೆ ಮಿಥ್ಯಾಜ್ಞಾನಿತ್ವವು ಬರಬೇಕಾಗುವುದು.

ಇಲ್ಲದಿರುವುದನ್ನು ಇದೆ ಎಂದು ಅನುಸಂಧಾನ ಮಾಡಿದರೆ ಮಿಥ್ಯಾಜ್ಞಾನಿತ್ವವು ಬರುವುದು. ಆದರೆ ಐಕ್ಯವು ಇಲ್ಲದಿರುವುದಲ್ಲ. ಆದ್ದರಿಂದ ಮಿಥ್ಯಾಜ್ಞಾನಿತ್ವವು ಬರುವುದಿಲ್ಲ ಎಂದು ಹೇಳಿದರೆ –

**ವಿದ್ಯಮಾನಾನುಸಂಧಾನಂ ನ ಚೇದಜ್ಞತ್ವಮಾಪತೇತ್ ।**

ಇದತಕ್ಕ ವಸ್ತುವಿನ ಅನುಸಂಧಾಸವು ಇಲ್ಲವೆಂದು ಹೇಳಿದರೆ ಆಗ ಅಜ್ಞತ್ವವು ಪ್ರಾಪ್ತವಾಗುವುದು. ಈ ಪ್ರಕಾರವಾಗಿ ಜೀವೇಶ್ವರ ಐಕ್ಯವು ನಿರಾಕರಿಸಲ್ಪಡುತ್ತದೆ.

ಐಕ್ಯವು ಇಲ್ಲವೆನ್ನುವುದೇ ವಾಸ್ತವವಾಗಿದ್ದರೆ ಹಿಂದೆ ಹೇಳಿದ ದೋಷಗಳು ಬರುವುವು. ಆದರೆ ಹೀಗೆ ಇರುವುದಿಲ್ಲ. ಈಗ ಐಕ್ಯವಿಲ್ಲದಿದ್ದರೂ ಜ್ಞಾನೋತ್ತರ

ಕಾಲದಲ್ಲಿ ಐಕ್ಯವು ಬರುವುದು. ಆದಪ್ರಯುಕ್ತ ಪರಮಾತ್ಮನ ಸರ್ವಜ್ಞತ್ವಕ್ಕೆ ಹಾನಿ ಬರುವುದಿಲ್ಲ ಎಂದು ಆಶಂಕಿಸಿದರೆ –

**ಅಸದೈಕ್ಯಂ ಭವೇತ್ಪಶ್ಚಾದ್ಯದಿ ಸ್ಯಾತ್ಸಪ್ತಮೋ ರಸಃ ।।೧೪೩।।**

**ಸಮುದಾಯ್ಯೈಕ್ಯಮೇತಸ್ಮಾದ್ದೂರತೋऽಪಾಕೃತಂ ಸದಾ ।**

ಈಗ ಅಸತ್ತಾದ ಐಕ್ಯವು ಆಮೇಲೆ ಉಂಟಾಗುವುದು ಎನ್ನುವುದಾದರೆ ಅಸತ್ತಾದ ಸಪ್ತಮ ರಸವೂ ಮುಂದೆ ಉಂಟಾಗಬೇಕಾಗುವುದು. ಆದ್ದರಿಂದ ಈಗ ಇಲ್ಲದಿರುವ ಅಭೇದವು ಮುಂದೆ ಬರುವುದು ಎಂದು ಹೇಳುವುದು ಅಯುಕ್ತವೆಂದು ತಾತ್ಪರ್ಯ. 'ಸಮುದಾಯ್ಯೈಕ್ಯ' ಎಂಬ ವಚನದಿಂದ ಭೇದಾಭೇದ ಮತವನ್ನು ತಿರಸ್ಕರಿಸುತ್ತಾರೆ – ಯಾವಾಗಲೂ ಸಮುದಾಯಕ್ಕೆ ಐಕ್ಯತೆಯು ಪ್ರಮಾಣವಿಲ್ಲದಿರುವುದರಿಂದಲೂ, ಆಭಾಸತ್ವ ಮುಂತಾದ ಪ್ರಮಾಣಗಳಿಗೆ ವಿರುದ್ಧವಾದುದರಿಂದಲೂ ದೂರದಿಂದಲೇ ನಿರಾಕೃತವಾಗುವುದು.

**ಅತೋऽಶೇಷಗುಣೋನ್ನದ್ಧಂ ನಿರ್ದೋಷಂ ಯಾವದೇವ ಹಿ ।।೧೪೪।।**

**ತಾವದೇವೇಶ್ವರೋ ನಾಮ ತತ್ರ ಭೇದೋऽಪಿ ನ ಕ್ವಚಿತ್ ।**

ಮೇಲೆ ಹೇಳಿದ ಕಾರಣಗಳಿಂದ ಪರಮಾತ್ಮನು ಸಕಲ ಚೇತನ ಸಮುದಾಯ ರೂಪನು ಎನ್ನುವುದು ಅಯುಕ್ತವು ಎಂದು ಸಿದ್ಧವಾಗುವುದು. ಆದಪ್ರಯುಕ್ತ ಸಮಸ್ತ ಗುಣಗಳಿಂದ ಪೂರ್ಣವಾದುದು ಹಾಗೂ ಸಮಸ್ತ ದೋಷಗಳಿಂದ ದೂರವಾದುದು ಎಷ್ಟು ರೂಪಸಮುದಾಯವಿದೆಯೋ ಅವೆಲ್ಲಕ್ಕೂ ಈಶ್ವರ ಎಂದು ಹೆಸರು. ಈ ವಿಧವಾದ ಪರಮಾತ್ಮನ ರೂಪಸಮುದಾಯಗಳಲ್ಲಿ ಯಾವುದಕ್ಕೂ ಪರಸ್ಪರವಾಗಿ ಎಳ್ಳಷ್ಟೂ ಭೇದವಿರುವುದಿಲ್ಲ.

**ನೇಹ ನಾನಾಸ್ತಿ ಕಿಮಪಿ ಹರಯೋऽಯಮಯಂ ಹಿ ಸಃ ।।೧೪೫।।**

**ಇತ್ಯಾದಿಶ್ರುತಿಮಾನೇನ ಜೀವಾಂಶಾಃ ಸರ್ವ ಏವ ಚ ।**

**ನಿಯಮೇನಾನುಸಂಧಾನವಂತೋ ಯದ್ಯೇಕತಾ ಸ್ವತಃ ।।೧೪೬।।**

'ನೇಹ ನಾನಾಸ್ತಿ ಕಿಂಚನ' 'ಅಯಂ ವೈ ಹರಯಃ' 'ಅಯಮೇವ ಸ ಯೋऽಯಮಾತ್ಮಾ' ಇತ್ಯಾದಿ ಶ್ರುತಿಪ್ರಮಾಣದಿಂದ ಪರಮಾತ್ಮನ ರೂಪರೂಪಗಳಲ್ಲಿ ಕಿಂಚಿತ್ತೂ ಭೇದವಿಲ್ಲವೆನ್ನುವುದು ನಿಶ್ಚಿತವಾಗುತ್ತದೆ. ಇಂದ್ರಾದಿಗಳ ಅಂಶಭೂತರಾದ ಅರ್ಜುನಾದಿಗಳು ನಿಯಮೇನ ಪರಸ್ಪರ ಸುಖದುಃಖಾದಿ ಅನುಸಂಧಾನವುಳ್ಳವರು. ಆದುದರಿಂದ ಅನುಸಂಧಾನವು ಐಕ್ಯಕ್ಕೆ ವ್ಯಾಪಕವಾದುದು ಎಂದು ತಾತ್ಪರ್ಯ. ಮತ್ತೆ 'ಆತ್ಮಾ ವೈ ಪುತ್ರನಾಮಾಸೀತ್' ಇತ್ಯಾದಿ ವಚನದಿಂದ ತಂದೆ ಮಕ್ಕಳಿಗೆ ಐಕ್ಯವು ಉಕ್ತವಾಗಿದ್ದರೂ, ಐಕ್ಯಾನುಸಂಧಾನವು ಏಕೆ ಬರುವುದಿಲ್ಲ ಎಂದು ಆಶಂಕಿಸಿದರೆ – ತಂದೆಗೂ ಮಗನಿಗೂ ಇರತಕ್ಕ ಅಂಶಾಂಶಿಭಾವವು ಏಕದೇಶತ್ವ

ರೂಪವಾದುದಲ್ಲ. ಆದ್ದರಿಂದ ಐಕ್ಯತಾನುಸಂಧಾನವಿರುವುದಿಲ್ಲ. ಸ್ವಾಭಾವಿಕ ಅಥವಾ ಏಕದೇಶತ್ವರೂಪವಾದ ಐಕ್ಯವಿದ್ದಾಗ ಮಾತ್ರ ಅನುಸಂಧಾನವು ಕೂಡುವುದು.

ಹಾಗಾದರೆ ಇಂದ್ರಾದಿಗಳಿಗೆ ಅನುಸಂಧಾನವಿದ್ದರೆ ಅರ್ಜುನನು ಇಂದ್ರನಿಗೆ ಅಸಮ್ಮತವಾದ ಖಾಂಡವ ದಹನಾದಿಗಳನ್ನು ಹೇಗೆ ಮಾಡಿದನು ? ಹಾಗೆಯೇ ಇಂದ್ರನು ಅರ್ಜುನನಿಗೆ ಅನಭಿಮತವಾದ ದಹನಶಮನಾದಿಗಳನ್ನು ಹೇಗೆ ಮಾಡಿದನು ? ಎಂದು ಕೇಳಿದರೆ –

**ಅಂಶಿನೋಽಶೇಷಸಂಧಾನಮತ್ಯಲ್ಪಸ್ಯಾಪಿ ವಿದ್ಯತೇ ।**

**ಭುವಿ ಜಾತೇನ ಚಾಂಶೇನ ಸುಖದುಃಖಾದಿ ತದ್ಗತಮ್ ॥೧೪೭॥**

**ಅನುಭೂಯತೇ ವಿಶೇಷಸ್ತು ಕಶ್ಚಿದೀಶಕೃತೋ ಭವೇತ್ ।**

ಅತ್ಯಲ್ಪನಾದ ಅಂಶಿಗೆ ಅಂಶಗತವಾದ ಅಶೇಷ ಅನುಸಂಧಾನವು ಇದ್ದೇ ಇರುವುದಾದರೂ ಅಂಶಕ್ಕೆ ಅನಭಿಮತವಾದ ಕೆಲವು ವಿಶೇಷ ಕಾರ್ಯಗಳು ಈಶನ ಪ್ರೇರಣೆಯಿಂದ ಅಂಶಿಯಿಂದ ಮಾಡಲ್ಪಡುತ್ತವೆ. ಹಾಗೆಯೇ ಭೂಮಿಯಲ್ಲಿ ಹುಟ್ಟಿದ ಅಂಶದಿಂದ ಅಂಶಿಗತವಾದ ಸುಖದುಃಖಾದಿಗಳು ಅನುಭವಿಸಲ್ಪಡುತ್ತವೆ (ಸರ್ವವೂ ಅಲ್ಲ). ಅಂಶ–ಅಂಶಿಗಳಿಗೆ ಐಕ್ಯವಿದ್ದರೂ ಅನುಸಂಧಾನವಿಲ್ಲದ ಕೆಲವು ವಿಶೇಷ ಅನುಭವವಾದರೂ ಈಶ್ವರನಿಂದ ಮಾಡಲ್ಪಡುತ್ತದೆ.

ಹಾಗಾದರೆ ಈಶ್ವರನೂ ಕೂಡ ಅಂಶಾಂಶಿಗಳಿಗೆ ಅಭೇದವಿದ್ದರೂ, ಅಸಮ್ಮತ ವಾದ ಕಾರ್ಯಗಳನ್ನು ಹೇಗೆ ಮಾಡಿಸುತ್ತಾನೆ? ಮತ್ತೆ ಕೆಲವು ಅನುಸಂಧಾನವನ್ನು ಹೇಗೆ ಪ್ರತಿಬಂಧಿಸುತ್ತಾನೆ? ಎಂದು ಆಶಂಕಿಸಿದರೆ –

**ಈಶಸ್ಯಾಚಿಂತ್ಯಶಕ್ತಿತ್ವಾನ್ನಾಶಕ್ಯಂ ಕ್ವಾಪಿ ವಿದ್ಯತೇ ॥೧೪೮॥**

ಅಂಚಿತ್ಯಾದ್ಭುತ ಶಕ್ತಿಯನ್ನು ಹೊಂದಿರುವ ಈಶ್ವರನಿಗೆ ಶಕ್ಯವಾಗದಿರುವುದು ಎಲ್ಲಿಯೂ ಎಂದಿಗೂ ಇರುವುದಿಲ್ಲ. ಆದುದರಿಂದ ಈಶ್ವರನು ಅಘಟಿತವಾದುದನ್ನು ಮಾಡಿಸುತ್ತಾನೆ.

ಅಂಶಅಂಶಿಗಳಿಗೆ ಅಭೇದವಿದ್ದರೂ ಅಂಶಿಯಲ್ಲಿರತಕ್ಕ ಅಶೇಷ ಅನುಸಂಧಾನವು ಈಶ್ವರನ ಅಚಿಂತ್ಯಶಕ್ತಿಯಿಂದ ಪ್ರತಿಬದ್ಧವಾಗಿದೆಯೆಂದು ಅಂಗೀಕರಿಸುವುದಾದರೆ, ಅದೇಪ್ರಕಾರವಾಗಿ ಜೀವೇಶ್ವರರಿಗೆ ಅಭೇದವಿದ್ದರೂ ಈಶ್ವರನ ಶಕ್ತಿಯಿಂದಲೇ ಐಕ್ಯಾನುಸಂಧಾನಕ್ಕೆ ಪ್ರತಿಬಂಧಕವಾಗುವುದು ಎಂದು ಅಂಗೀಕರಿಸಬೇಕಾಗುವುದು. ಆದಕಾರಣ ಅನುಸಂಧಾನರಾಹಿತ್ಯದಿಂದ ಐಕ್ಯವನ್ನು ನಿರಾಕರಿಸುವುದು ಅಯುಕ್ತವು ಎಂದು ಆಶಂಕಿಸಿದರೆ –

**ನೈಶತಾನುಪಪನ್ನೈವ ಯದಿ ಜೀವೈಕತಾಸ್ಯ ಹಿ ।**

**ಅನೀಶಸ್ಯೇಶತೇತ್ಯೇವ ವಿರುದ್ಧಂ ಸರ್ವಮಾನತಃ ।।೧೪೯।।**

ಪರಮಾತ್ಮನಿಗೆ ಜೀವನೊಂದಿಗೆ ಐಕ್ಯವಿರುವ ಪಕ್ಷದಲ್ಲಿ ಅಘಟಿತ ಘಟನಾ ರೂಪವಾದ ಈಶತ್ವವು ಕೂಡುವುದೇ ಇಲ್ಲ. ಜೀವನಾದರೋ ಈಶ್ವರನಲ್ಲ ಎನ್ನುವುದು ಅನುಭವಸಿದ್ಧವು. ಅನೀಶನಾದ ಜೀವನೊಂದಿಗೆ ಅಭೇದವಿದ್ದರೆ ಪರಮಾತ್ಮನೂ ಕೂಡ ಅನೀಶನೆಂದೇ ಹೇಳಿದಂತೆ ಆಗುವುದು. ಅನೀಶನಾದ ಜೀವನಿಗೆ ಈಶತ್ವವಿದೆ ಎಂದು ಹೇಳುವುದು ಎಲ್ಲ ಪ್ರಮಾಣಗಳಿಗೆ ವಿರುದ್ಧವಾಗಿದೆ.

ಜೀವೇಶ್ವರರಿಗೆ ಐಕ್ಯವನ್ನು ಹೇಳುವುದರಲ್ಲಿ ಶ್ರುತಿಗಳಿಗೆ ತಾತ್ಪರ್ಯವಿಲ್ಲ ಎಂದು ಹೇಳುತ್ತಾರೆ –

**ಈಶತ್ವೇನೈವ ವಿಜ್ಞಾತಮನೀಶತ್ವೇನ ಚೇತ್ ಶ್ರುತಿಃ ।**

**ಅನೀಶತ್ವೇನ ವಿಜ್ಞಾತಮೀಶತ್ವೇನಾಥವಾದಿಶೇತ್ ।।೧೫೦।।**

ಪ್ರಮಾಣಾಂತರದಿಂದ ಈಶತ್ವದಿಂದಲೇ ಪ್ರಮಿತನಾದ ಪರಮಾತ್ಮನನ್ನು ಕೆಲವು ಶ್ರುತಿಯು ಅನೀಶನೆಂದೂ ಅಥವಾ ಈಶ್ವರತ್ವವಿಲ್ಲದ ಜೀವನನ್ನು ಕೆಲವು ಶ್ರುತಿಯು ಈಶತ್ವದಿಂದಲೂ ಉಪದೇಶಿಸಿರಬಹುದು. ಕೆಲವು ಶ್ರುತಿಗಳಲ್ಲಿ ಜೀವೇಶ್ವರಿಬ್ಬರೂ ಈಶತ್ವದಿಂದಲೇ ಪ್ರಮಿತರಾಗಿರುವರೆಂದು ಉಕ್ತವಾಗಿರಬಹುದು.

**ಉಪಜೀವ್ಯವಿರೋಧೇನ ನೈವ ಮಾನತ್ವಮೇಷ್ಯತಿ ।**

**ಅತ ಏವೇಶತಾಸಿದ್ಧೇರ್ನ ಕಿಂಚಿತ್ ಶಕ್ಯಮಸ್ಯ ಚ ।।೧೫೧।।**

ಹೀಗೆ ಯಾವುದೇ ರೀತಿಯಿಂದ ಉಪದೇಶಿಸಿದ್ದರೂ ಉಪಜೀವ್ಯಪ್ರಮಾಣಕ್ಕೆ ವಿರುದ್ಧವಾದುದರಿಂದ ಆ ವಾಕ್ಯಗಳಿಗೆ ಪ್ರಾಮಾಣ್ಯವು ಬರುವುದೇ ಇಲ್ಲ. ಒಟ್ಟಿನಲ್ಲಿ ಐಕ್ಯವನ್ನು ಪ್ರತಿಪಾದಿಸುವ ಯಾವ ಶ್ರುತಿಯೂ ಪ್ರಮಾಣವಾಗಲಾರದು ಎಂದು ತಾತ್ಪರ್ಯ. ಜೀವೈಕ್ಯವಿದ್ದ ಕಾರಣದಿಂದಲೇ ಈಶ್ವರನಿಗೆ ಅಘಟಿತಘಟನಾಶಕ್ತಿಯು ಸಿದ್ಧಿಸುವುದಿಲ್ಲ. ಆದುದರಿಂದ ಸ್ವಲ್ಪವೂ ಕೂಡ ಈಶತ್ವ ಅನೀಶತ್ವಗಳಿಗೆ ಏಕತ್ರ ಅವಸ್ಥಿತಿಯನ್ನು ಹೊಂದಿಸುವುದು ಆ ಪರಮಾತ್ಮನಿಗೂ ಕೂಡ ಶಕ್ಯವಲ್ಲ.

ಜೀವೈಕ್ಯವಿದ್ದರೂ ಭೇದವಿದ್ದ ಪ್ರಯುಕ್ತ ಈಶತ್ವವು ಉಪಪನ್ನವಾಗುತ್ತದೆ ಎಂಬ ಆಶಂಕೆಯನ್ನು ಪರಿಹರಿಸುತ್ತ, ಪರಮಾತ್ಮನ ಅಂಚಿತ್ಯಾದ್ಭುತಶಕ್ತಿಯ ವಿಷಯದಲ್ಲಿ ಮಂದರಿಗೆ ಇರಬಹುದಾದ ಶಂಕೆಯನ್ನು ಪರಿಹರಿಸುತ್ತಾರೆ –

**ಈಶತ್ವೇಽನೀಶಭೇದೇನ ಶ್ರುತ್ಯಾ ಸಮ್ಯಕ್ಪ್ರಕಾಶಿತೇ ।**

**ಅಯುಕ್ತಮಪಿ ಚಾನ್ಯತ್ರ ಯುಕ್ತಂ ಭವತಿ ತದ್ಬಲಾತ್ ।।೧೫೨।।**

**ಅತೋಽನ್ಯತ್ರಾಪಿ ಯದ್ದೃಷ್ಟಂ ತದೀಶೇನೈವ ಕಲ್ಪ್ಯತೇ ।**

**ಶ್ರುತ್ಯಾಭಾಸಾಪ್ತಮಪಿ ನ ಹೀಶತ್ವಪರಿಪಂಥಿ ಯತ್ ॥೧೫೩॥**

ಅನೀಶನಾದ ಜೀವನ ಭೇದದಿಂದ ಈಶತ್ವವು ಶ್ರುತಿಯಿಂದ ಚೆನ್ನಾಗಿ ಪ್ರಕಾಶಿಸಲ್ಪಡುತ್ತಿರಲು, ಈಶ್ವರನಿಂದ ಇತರರಲ್ಲಿ ಈಶತ್ವವು ಅಯುಕ್ತವಾಗಿದ್ದರೂ, ಈಶ್ವರನಲ್ಲಿ ಯುಕ್ತವೇ ಆಗುವುದು. ಈಶ್ವರನಿಂದ ಇತರ ಕಡೆಗಳಲ್ಲಿ ಯಾವುದು ಕಾಣಲ್ಪಡುವುದೋ ಅದು ಈಶ್ವರನಿಂದಲೇ ಎನ್ನುವುದು ಈಶತ್ವಬಲದಿಂದಲೇ ಯುಕ್ತವೆಂದು ಕಲ್ಪಿಸಲ್ಪಡುತ್ತದೆ. ಯಾವುದು ಶ್ರುತ್ಯಾಭಾಸದಿಂದ ಈಶತ್ವಕ್ಕೆ ಕಿಂಚಿತ್ ವಿರುದ್ಧವೆಂದು ತೋರುವುದೋ ಅದೂ ಕೂಡ ಪ್ರಮಾಣಸಿದ್ಧವಾದ ಈಶತ್ವಕ್ಕೆ ವಿರೋಧಿಯಾಗಲಾರದು. ಉದಾಹರಣೆ – ಅಣುತ್ವಮಹತ್ವಾದಿಗಳು ಏಕಕಾಲದಲ್ಲಿ ಏಕತ್ರ ಯುಕ್ತವಾಗಿರುವುದು, ಅರ್ಜುನಾದಿಗಳಿಗೆ ಅಶೇಷ ಅನುಸಂಧಾನದ ಅಭಾವ, ಇವೆಲ್ಲವೂ ಈಶ್ವರನ ಐಶ್ವರ್ಯಬಲದಿಂದ ಕೂಡುತ್ತವೆಯೆಂದು ಅಂಗೀಕರಿಸಬೇಕು. ಅದನ್ನು ನಿರಾಕರಿಸಲು ಶಕ್ಯವಿಲ್ಲ. ಮತ್ತೆ ಪ್ರಮಾಣವಿರುದ್ಧವಾದುದನ್ನು ಅದು ಈಶ್ವರನ ಐಶ್ವರ್ಯಕ್ಕೆ ಅವಿರುದ್ಧವಾಗಿದ್ದರೂ (ಉದಾಹರಣೆಗೆ ಶಶವಿಷಾಣಾದಿಗಳು) ಅಂಥಹುದನ್ನು ಕಲ್ಪಿಸಲೇ ಕೂಡದು. ಹಾಗೆಯೇ ಪ್ರಮಾಣಪ್ರಮಿತವಾಗಿದ್ದರೂ ಯಾವುದು ಈಶ್ವರನ ಐಶ್ವರ್ಯಕ್ಕೆ ವಿರೋಧಿಯಾಗಿದೆಯೋ ಅಂಥಹದನ್ನೂ ಕೂಡ ಕಲ್ಪಿಸಲೇ ಕೂಡದು. ಮತ್ತೆ ಆ ಪ್ರಮಾಣಕ್ಕೆ ಯಥಾಯೋಗ್ಯವಾಗಿ ಆಭಾಸತ್ವವನ್ನು ವರ್ಣಿಸಬೇಕು. ಅಂದರೆ ಶ್ರುತಿಗೆ ಪ್ರತೀತಾರ್ಥವನ್ನು ಬಿಟ್ಟು ಇತರ ಪ್ರಮಾಣಗಳಿಗೆ ವಿರೋಧ ಬಾರದಂತೆ ಅರ್ಥೈಸಬೇಕು ಎಂದು ತಾತ್ಪರ್ಯ.

ಈ ಪ್ರಕಾರವಾಗಿ ಅನೀಶನಿಗೆ ಈಶತ್ವವನ್ನು ಹೇಳುವುದು ಎಲ್ಲ ಪ್ರಮಾಣಗಳಿಗೆ ವಿರುದ್ಧವು ಎಂದು ಹೇಳಲಾಯಿತು. ಅದನ್ನು ಸ್ಮೃತಿಯಿಂದ ಸಮರ್ಥಿಸುತ್ತಾರೆ –

**ಈಶೋಽನೀಶೋ ಜಗನ್ಮಿಥ್ಯಾ ದುಃಖೀ ಮುಕ್ತೋ ಭಿದಾ ನ ಹಿ ।**

**ಇತಿ ಪ್ರತಿಜ್ಞಾವ್ಯಾಘಾತಃ ಸರ್ವದೋಷಾಧಿಕಾಧಿಕಃ ॥೧೫೪॥**

**ಇತಿ ಹಿ ಬ್ರಹ್ಮತರ್ಕೋಕ್ತಿರತಿಹೇಯಮತೋಽಖಿಲೈಃ ।**

**ಬುಭೂಷಿಭಿರ್ಮತಮಿದಂ ಜೀವೇಶಾಭೇದವಾದಿನಃ ॥೧೫೫॥**

ಈಶ್ವರನು ಸರ್ವಸಮರ್ಥನಲ್ಲ, ಜಗತ್ತು ಮಿಥ್ಯೆಯು, ಮುಕ್ತನು ದುಃಖಿಯು, ಭೇದವಿಲ್ಲ ಇತ್ಯಾದಿ ಸ್ವವಚನವಿರುದ್ಧವೂ ಪ್ರಮಾಣವಿರುದ್ಧವೂ ಆದುದನ್ನು ಹೇಳುವುದು ಎಲ್ಲ ದೋಷಗಳಿಗಿಂತಲೂ ಅತ್ಯಂತ ಅಧಿಕವಾದುದು. ಹೀಗೆ ಬ್ರಹ್ಮತರ್ಕದ ವಚನವಿದೆ. ಆದಕಾರಣ ಜೀವೇಶ್ವರರಿಗೆ ಅಭೇದವನ್ನು ಹೇಳುವ, ಅಂದರೆ ಈಶನಿಗೆ ಅನೀಶತ್ವವನ್ನು ಆಪಾದಿಸುವ ಈ ಮತವು ಎಲ್ಲ ಜಿಜ್ಞಾಸುಗಳಿಂದ ಅತ್ಯಂತವಾಗಿ ಬಿಡತಕ್ಕದ್ದು.

ಈಶತ್ವೇಽನೀಶಭೇದೇನ ಇತ್ಯಾದಿಗಳಿಂದ ಹೇಳಲ್ಪಟ್ಟ ಅರ್ಥದಲ್ಲಿ ಸ್ಮೃತಿಯನ್ನು

ಕೂಡ ಹೇಳುತ್ತಾರೆ –

ನಾಯುಕ್ತಮೀಶಿತುಃ ಕಿಂಚಿದೀಶತ್ವಸ್ಯಾವಿರೋಧಿ ಯತ್ ।
ಯದೀಶತ್ವವಿರೋಧಿ ಸ್ಯಾತ್ತದೇವಾಯುಕ್ತಮಂಜಸಾ ॥೧೫೬॥
ಈಶತ್ವಸ್ಯಾವಿರೋಧೇನ ಯೋಜಯಿತ್ವಾಖಿಲಾಃ ಪ್ರಮಾಃ ।
ಸಿದ್ಧೇಶತ್ವೇನ ಚಾಯುಕ್ತಮಪಿ ಹೀಶೇನ ಯೋಜಯೇತ್ ॥೧೫೭॥
ಮಾನತಃ ಪ್ರಾಪ್ತಮಖಿಲಂ ನಾಮಾನಂ ಯೋಜಯೇತ್ಕ್ವಚಿತ್ ।
ಇತಿ ಹಿ ಬ್ರಹ್ಮತರ್ಕೋಕ್ತಿರತೋ ಯುಕ್ತಮಿಹೋದಿತಮ್ ॥೧೫೮॥

ಅಣುತ್ವ ಮಹತ್ವಾದಿಗಳು ಈಶ್ವರತ್ವಕ್ಕೆ ಅವಿರೋಧಿಯಾದುದರಿಂದ ಸರ್ವ ಸ್ವಾಮಿಯಾದ ಶ್ರೀಹರಿಗೆ ಅಯುಕ್ತವಾದುದಲ್ಲ. ಆದರೆ ಜೀವೇಶ್ವರ ಐಕ್ಯವು ಈಶತ್ವಕ್ಕೆ ವಿರೋಧಿಯಾದುದರಿಂದ ಅದೇ ಸ್ಪಷ್ಟವಾಗಿ ಅಯುಕ್ತವು. ಈಶತ್ವಕ್ಕೆ ಅವಿರೋಧವಾಗಿಯೇ ಎಲ್ಲ ಪ್ರಮಾಣಗಳನ್ನೂ ಸಿದ್ದವಾದ ಈಶತ್ವ ನಿಮಿತ್ತದಿಂದ ಕೂಡಿಸತಕ್ಕದ್ದು. ಲೋಕದೃಷ್ಟಿಯಿಂದ ಅಯುಕ್ತವೆಂದು ಕಂಡರೂ ಪ್ರಮಾಣ ಪ್ರಾಪ್ತ ವಾದ ಎಲ್ಲವನ್ನೂ ಈಶತ್ವಕ್ಕೆ ಅವಿರೋಧವಾಗಿಯೇ ಯೋಜಿಸಬೇಕು. ಅಪ್ರಮಾಣ ವಾದ ಐಕ್ಯಾದಿಗಳನ್ನು ಎಲ್ಲಿಯೂ ಕೂಡಿಸತಕ್ಕದ್ದಲ್ಲ. ಹೀಗೆ ಬ್ರಹ್ಮತರ್ಕವಚನವು ಪ್ರಸಿದ್ಧವು. ಆದ್ದರಿಂದ ಜೀವನು ಬ್ರಹ್ಮನಿಂದ ಅತ್ಯಂತ ಭಿನ್ನನೇ ಎಂದು ಸಿದ್ಧವಾಯಿತು.

## ಅರೂಪಾಧಿಕರಣಮ್

### ಓಂ ಅರೂಪವದೇವ ಹಿ ತತ್ಪ್ರಧಾನತ್ವಾತ್ ಓಂ

**ಸೂತ್ರಾರ್ಥ**– ಬ್ರಹ್ಮನಿಗೆ ಪ್ರಕೃತ್ಯಾದಿಗಳಿಂದ ಉತ್ತಮತ್ವವಿದ್ದ ಪ್ರಯುಕ್ತ ಬ್ರಹ್ಮನು ಪ್ರಾಕೃತಾದಿ ದೋಷರಹಿತನೇ ಆಗಿರುವನು.

ಈ ಅಧಿಕರಣದಲ್ಲಿ ಪ್ರಥಮ ಸೂತ್ರದಿಂದ ಬ್ರಹ್ಮನಿಗೆ ರೂಪವಿಲ್ಲವೆಂದು ಉಪಪಾದಿಸಿ, ಪ್ರಕಾಶವಚ್ಚಾವೈಯರ್ಥ್ಯಂ ಎಂಬ ದ್ವಿತೀಯ ಸೂತ್ರದಿಂದ ಬ್ರಹ್ಮನಿಗೆ ವಿಲಕ್ಷಣವಾದ ರೂಪವಿದೆಯೆಂದು ನಿರೂಪಿಸುವ ಮೂಲಕ ರೂಪವತ್ವ ವಿಷಯಕ ಶ್ರುತಿಗಳಿಗೆ ವೈಯರ್ಥ್ಯವನ್ನು ಪರಿಹರಿಸಿದರು. ವಿಲಕ್ಷಣರೂಪವತ್ವವಾದರೂ 'ಆಹ ಚ ತನ್ಮಾತ್ರಂ' 'ದರ್ಶಯತಿ ಚಾಥೋಽಪಿ ಸ್ಮರ್ಯತೇ' ಎನ್ನುವ ಸೂತ್ರಗಳಿಂದ ಸಮರ್ಥಿಸಿದರೆಂದು ಭಾಷ್ಯದಿಂದ ತೋರುತ್ತದೆ. ಅದು ಯುಕ್ತವಲ್ಲ. ರೂಪವತ್ವವನ್ನು ಅಂಗೀಕರಿಸಿದರೆ 'ಅರೂಪವದೇವ ಹಿ ತತ್' ಎಂಬ ಸೂತ್ರಕ್ಕೆ ಅಪ್ರಯೋಜನತ್ವಾ ಶಂಕೆಯು ಬರುವುದರಿಂದ ಅದನ್ನು ಹೇಳುವ ಅಗತ್ಯವಿರಲಿಲ್ಲ ಎಂದರೆ, ಈ ನಾಲ್ಕು ಸೂತ್ರಗಳ ತಾತ್ಪರ್ಯವನ್ನು ಹೇಳುತ್ತಾರೆ –

**ಸ ಚಾಪ್ರಾಕೃತರೂಪತ್ವಾದರೂಪಃ ಸ್ವಗುಣಾತ್ಮಕಮ್ ।**

**ರೂಪಮಸ್ಯ ಶಿರಃಪಾಣಿಪಾದಾದ್ಯಾತ್ಮಕಮಿಷ್ಯತೇ ॥೧೫೯॥**

**ಅತೋ ನಾನಿತ್ಯತಾ ನೈವ ಶ್ರುತಿದ್ವಯವಿರೋಧಿತಾ ।**

ಆ ಪರಮಾತ್ಮನಾದರೋ ಅಪ್ರಾಕೃತರೂಪನು. ಅಂದರೆ ಪ್ರಾಕೃತರೂಪವಿಲ್ಲ. ಈ ತತ್ವವನ್ನು ನಿರೂಪಿಸುವ ಸಲುವಾಗಿ ಅವನನ್ನು ಅರೂಪನೆಂದು ಹೇಳುತ್ತಾರೆ. ಪರಮಾತ್ಮನು ಸ್ವಗುಣಾತ್ಮಕ ಸ್ವರೂಪನು. ಪರಮಾತ್ಮನ ಆನಂದಾದಿ ಗುಣಗಳೂ, ಶಿರಸ್ಸು ಹಸ್ತ ಪಾದಾದಿ ಅವಯಗಳೂ ಅವನ ಸ್ವರೂಪಭೂತವಾದವು. ಆದಕಾರಣ ಅವನು ಅಪ್ರಾಕೃತರೂಪವುಳ್ಳವನು ಎಂದು ಅಂಗೀಕರಿಸತಕ್ಕದ್ದು. ಆದಕಾರಣ ಜನ್ಮ ಮರಣರೂಪವಾದ ಅನಿತ್ಯತೆಯು ಇಲ್ಲ. ರೂಪವತ್ವ ಅರೂಪವತ್ವಗಳನ್ನು ಹೇಳುವ ಶ್ರುತಿಗಳಿಗೆ ವಿರೋಧವು ಇಲ್ಲವೇ ಇಲ್ಲ.

ಪರಮಾತ್ಮನಿಗೆ ರೂಪವಿದ್ದರೆ ಅರೂಪತ್ವ ವ್ಯವಹಾರವು ಹೇಗೆ ಕೂಡುತ್ತದೆ ಎಂಬ ಆಶಂಕೆಯನ್ನು ಪರಹರಿಸಲಿಕ್ಕೆ 'ಪ್ರಕಾಶವತ್' ಎನ್ನುವ ಸೂತ್ರಾವಯವವನ್ನು ಭಾಷ್ಯದಲ್ಲಿ ವ್ಯಾಖ್ಯಾನ ಮಾಡಿದರು. ಈಶ್ವರ ರೂಪವು ಲೋಕವಿಲಕ್ಷಣವಾದರೆ ಆಗ ಅಲ್ಲಿ ರೂಪಶಬ್ದದ ಪ್ರವೃತ್ತಿಯು ಕೂಡದೇ ಹೋಗುವುದು. ಹಾಗೂ ರೂಪವತ್ವ ಪ್ರತಿಪಾದಕ ಶ್ರುತಿಗಳಿಗೆ ವೈಯರ್ಥ್ಯವನ್ನು ಪರಿಹರಿಸಲಿಕ್ಕೆ ಅಶಕ್ಯವಾಗುವುದು ಎನ್ನುವ ಆಶಂಕೆಯನ್ನು ಪರಿಹರಿಸುವುದಕ್ಕಾಗಿ ಇಲ್ಲಿ ವ್ಯಾಖ್ಯಾನ ಮಾಡುತ್ತಾರೆ –

**ಯಥಾ ಹಿ ತೈಜಸಸ್ಯೈವ ಪ್ರಕಾಶಸ್ಯೋಜ್ಝಿತಾವಪಿ ॥೧೬೦॥**

**ಆತ್ಮೈವ ಜ್ಯೋತಿರಿತ್ಯಾಹ ಜೀವಸ್ಯೇಶಂ ಶ್ರುತಿಸ್ತಥಾ ।**

ಹೇಗೆ ಸೂರ್ಯಾದಿ ತೇಜೋರೂಪವಾದ ವಸ್ತುಗಳ ಪ್ರಕಾಶಕ್ಕೆ ಪರಮೇಶ್ವರನು ಕಾರಣನು ಎಂಬ ಪ್ರಸಿದ್ಧಿಯಿಲ್ಲದಿದ್ದರೂ, ಪರಬ್ರಹ್ಮನೇ ಅವುಗಳಿಗೆ ಜ್ಯೋತಿಯು ಅಂದರೆ ಪ್ರಕಾಶಕನು ಎಂಬುದಾಗಿ ಶ್ರುತಿಯು ಹೇಳುತ್ತದೆಯೋ ಹಾಗೆಯೇ ಲೋಕ ವಿಲಕ್ಷಣವಾಗಿದ್ದರೂ ಭಗವದ್ರೂಪದಲ್ಲಿ ರೂಪಶಬ್ದಪ್ರವೃತ್ತಿಯು ಯುಕ್ತವೇ ಆಗಿದೆ.

## ವೃದ್ಧಿಹ್ರಾಸಾಧಿಕರಣಮ್

**ಓಂ ವೃದ್ಧಿಹ್ರಾಸಭಾಕ್ತ್ವಮಂತರ್ಭಾವಾದುಭಯಸಾಮಂಜಸ್ಯಾದೇವಮ್ ಓಂ**

**ಸೂತ್ರಾರ್ಥ:** ಭಕ್ತಿಯಲ್ಲಿ ಹೆಚ್ಚು ಕಡಿಮೆ ಎಂಬುದಾಗಿ ತಾರತಮ್ಯವಿದೆ. ಹೆಚ್ಚಿನ ಭಕ್ತಿಯುಳ್ಳ ಬ್ರಹ್ಮಾದಿಗಳಿಗೆ ಮಹಾಫಲ, ಕಡಿಮೆ ಭಕ್ತಿಯುಳ್ಳ ಮನುಷ್ಯರಿಗೆ ಅಲ್ಪ ಫಲ. ಹೀಗೆ ಭಕ್ತಿಯಲ್ಲಿ ತಾರತಮ್ಯವನ್ನು ಅಂಗೀಕರಿಸಿದರೆ ಮಾತ್ರ ಶ್ರೀಹರಿಗೆ ಬ್ರಹ್ಮಾದಿಗಳು ಹಾಗೂ ಅಸ್ಮದಾದಿಗಳ ವಿಷಯದಲ್ಲಿ ಸಾಮಂಜಸ್ಯವು ಕೂಡುವುದು.

ಯಾವುದಕ್ಕಾಗಿ ಭಗಮನ್ಮಹಿಮೆಯು ಇಲ್ಲಿ ಹೇಳಲಾಗುವುದೋ ಆ ಭಕ್ತಿಯು

ಪುರುಷರಲ್ಲಿ ತಾರತಮ್ಯದಿಂದ ಇರುವುದು ಎಂದು ಇಲ್ಲಿ ಉಪಪಾದಿಸಲ್ಪಡುತ್ತದೆ. ಭಕ್ತಿಯಲ್ಲಿ ವೃದ್ಧಿಹ್ರಾಸಗಳು ಇವೆ ಎಂದು ಅಂಗೀಕರಿಸಿದರೆ ಮಾತ್ರ ಭಕ್ತಿಗೆ ತಕ್ಕಂತೆ ಹೆಚ್ಚು ಕಡಿಮೆ ಫಲವನ್ನು ಕೊಡುವ ಈಶ್ವರನಲ್ಲಿ ವೈಷಮ್ಯವಿಲ್ಲ ಎನ್ನುವುದು ಕೂಡುವುದು ಎಂದು ಹೇಳುತ್ತಾರೆ –

**ತದ್ಭಕ್ತಿತಾರತಮ್ಯೇನ ತಾರತಮ್ಯಂ ವಿಮುಕ್ತಿಗಮ್ ॥೧೬೧॥**

**ಬ್ರಹ್ಮಾದೀನಾಂ ಚ ಸರ್ವೇಷಾಮಾನಂದಾದೇರ್ಯಥಾಕ್ರಮಮ್ ।**

ಬ್ರಹ್ಮಾದಿ ಎಲ್ಲ ದೇವತೆಗಳಿಗೂ ಹಾಗೂ ನಮ್ಮೆಲ್ಲರಿಗೂ, ಶ್ರುತಿಯಲ್ಲಿ ಹೇಳಿರುವ ಕ್ರಮದಂತೆ, ಮೋಕ್ಷದಲ್ಲಿರತಕ್ಕ ಆನಂದಾದಿಗಳ ತಾರತಮ್ಯವು ನಾವು ಭಗವಂತನಲ್ಲಿ ಮಾಡುವ ಭಕ್ತಿಯಲ್ಲಿನ ತಾರತಮ್ಯಕ್ಕೆ ಅನುಗುಣವಾಗಿಯೇ ಇರುವುದು. 'ಅಥಾತ ಆನಂದಸ್ಯ ಮೀಮಾಂಸಾ ಭವತಿ' ಇತ್ಯಾದಿ ಶ್ರುತಿಯಿಂದ ತಾರತಮ್ಯವು ತಿಳಿದು ಬರುತ್ತದೆ. ಸಾಧ್ಯವೆನಿಸಿದ ಫಲದ ತಾರತಮ್ಯದಲ್ಲಿ ಸಾಧನೀಭೂತವಾದ ಭಕ್ತಿಯಲ್ಲಿ ತಾರತಮ್ಯವನ್ನು ಅವಶ್ಯವಾಗಿ ಒಪ್ಪಲೇಬೇಕು. ಇಲ್ಲದಿದ್ದರೆ ನಿರ್ದೋಷನಾದ ಭಗವಂತನಲ್ಲಿ ಇಲ್ಲದ ಅಸಾಮಂಜಸ್ಯ ದೋಷವನ್ನು ಆಪಾದಿಸಿದಂತಾಗುವುದು.

## ಸ್ಥಾನವಿಶೇಷಾಧಿಕರಣಮ್

**ಓಂ ಸ್ಥಾನವಿಶೇಷಾತ್ಪ್ರಕಾಶಾದಿವತ್ ಓಂ**

**ಓಂ ಉಪಪತ್ತೇಶ್ಚ ಓಂ**

ಬಿಂಬನಾದ ಭಗವಂತನಲ್ಲಿ ತಾರತಮ್ಯವಿಲ್ಲದಿರುವ ಪ್ರಯುಕ್ತ ಪ್ರತಿಬಿಂಬಗಳಾದ ಬ್ರಹ್ಮಾದಿಗಳ ಆನಂದದಲ್ಲಿ ತಾರತಮ್ಯವು ಕೂಡುವುದಿಲ್ಲ. ತಾರತಮ್ಯ ಒಪ್ಪುವುದೇ ಆದರೆ ಆಗ ಬ್ರಹ್ಮಾದಿಗಳ ಆನಂದವು ಭಗವದಾನಂದಕ್ಕೆ ಪ್ರತಿಬಿಂಬವಾಗುವುದಿಲ್ಲ. ಆದ್ದರಿಂದ ಭಕ್ತಿಯಲ್ಲಿ ತಾರತಮ್ಯವೂ ಕೂಡುವುದಿಲ್ಲ ಎಂದು ಆಶಂಕಿಸಿದರೆ –

**ಪ್ರತಿಬಿಂಬವದಪ್ಯೇಷಾಮಾನಂದೋಽನ್ಯಗುಣಾ ಯಥಾ ॥೧೬೨॥**

ಬ್ರಹ್ಮಾದಿಗಳ ಆನಂದವು ಪ್ರಸಿದ್ಧ ಸೂರ್ಯಾದಿ ಪ್ರತಿಬಿಂಬಗಳಂತೆ ಇರುತ್ತದೆ. ಅಂದರೆ ಅವರ ಆನಂದವು ಭಗವದಾನಂದ ಪ್ರತಿಬಿಂಬವೇ ಆಗಿದ್ದರೂ ಕೂಡ, ಸ್ವರೂಪೋಪಾಧಿ ಗುಣಗಳಲ್ಲಿ ವೈಚಿತ್ರ್ಯವಿರುವ ಪ್ರಯುಕ್ತ ಆನಂದದಲ್ಲಿಯೂ ವೈಚಿತ್ರ್ಯವಿರುವುದು. ಹೇಗೆಂದರೆ – ಜಲ, ಸೂರ್ಯಕಾಂತ ಮುಂತಾದವುಗಳಲ್ಲಿ ಇರತಕ್ಕ ಪ್ರತಿಬಿಂಬಗಳಿಗೆ ಸೂರ್ಯಾದಿ ಬಿಂಬದಲ್ಲಿ ವೈಚಿತ್ರ್ಯವಿಲ್ಲದಿದ್ದರೂ, ಸೂರ್ಯಕಾಂತಾದಿ ಸ್ಥಾನಗುಣ ವೈಚಿತ್ರ್ಯದಿಂದ ವೈಚಿತ್ರ್ಯವು ಕೂಡುವುದು.

ವೈಚಿತ್ರ್ಯದಲ್ಲಿ ಇನ್ನೊಂದು ಹೇತುವನ್ನು ಹೇಳುತ್ತಾರೆ –

**ನಾರಾಯಣಗುಣಾಧೀನಶ್ಚ ಅತ್ಯಲ್ಪಸ್ತದಪೇಕ್ಷಯಾ ।**

**ತಸ್ಮಾದ್ಭಿನ್ನಶ್ಚ ಸತತಂ ಅನ್ಯಜ್ಞ್ಞಾನಂ ಪರಸ್ಯ ಚ ॥೧೬೩॥**

**ಅನ್ಯಜ್ಞ್ಞಾನಂ ತು ಜೀವಾನಾಮನ್ಯ ಆನಂದ ಈಶತಾ ।**

**ಮುಖ್ಯೇಶತಾ ಪರೇಶಸ್ಯ ಗೌಣೀ ಜೀವಸ್ಯ ಸಾ ಯತಃ ॥೧೬೪॥**

**ಇತಿ ಶ್ರುತೇಃ .............................. ।**

ಬ್ರಹ್ಮಾದಿಗಳ ಆನಂದವು ಭಗವಂತನ ಆನಂದದ ಅಧೀನವೂ, ತತ್ಸದೃಶವೂ ಆಗಿದೆ. ಆ ಆನಂದವು ಭಗವಂತನ ಆನಂದಕ್ಕಿಂತ ಅತ್ಯಂತ ಅಲ್ಪವೇ ಆದುದರಿಂದ ಯಾವಾಗಲೂ ಭಿನ್ನವೇ ಆಗಿರುವುದು.

ಈಶ್ವರನ ಆನಂದಕ್ಕಿಂತ ಜೀವರ ಆನಂದವು ಅತ್ಯಲ್ಪವೇಕೆ ಎಂದರೆ ಅದಕ್ಕೆ ಪ್ರಮಾಣವನ್ನು ಹೇಳುತ್ತಾರೆ –

ಶ್ರೀಹರಿಯ ಜ್ಞಾನವು ವಿಲಕ್ಷಣವು. ಜೀವರ ಜ್ಞಾನವಾದರೂ ವಿಲಕ್ಷಣವು. ಆನಂದವು ವಿಲಕ್ಷಣವಾದುದು, ಈಶತ್ವವೂ (ನಿಯಾಮಕತ್ವ) ವಿಲಕ್ಷಣವಾದುದು. ಶ್ರೀಹರಿಗೆ ಮುಖ್ಯವಾದ ಈಶತ್ವವು, ಜೀವರಿಗೆ ಅಮುಖ್ಯ ಈಶತ್ವವು. ಹೀಗೆ ಶ್ರುತಿ ಇರುವ ಪ್ರಯುಕ್ತ ಬ್ರಹ್ಮಾದಿಗಳ ಆನಂದವು ಈಶ್ವರನ ಆನಂದಕ್ಕಿಂತ ವಿಲಕ್ಷಣ ಹಾಗೂ ಅತ್ಯಲ್ಪ ಎನ್ನುವುದು ಯುಕ್ತವಾಗುತ್ತದೆ.

## ಪ್ರಕೃತ್ಯೈತಾವತ್ತ್ವಾಧಿಕರಣಮ್

**ಓಂ ಪ್ರಕೃತ್ಯೈತಾವತ್ತ್ವಂ ಹಿ ಪ್ರತಿಷೇಧತಿ ತತೋ ಬ್ರವೀತಿ ಚ ಭೂಯಃ ಓಂ**

ಶ್ರೀಹರಿಗೆ ಸೃಷ್ಟಿ ಸಂಹಾರಗಳ ಕರ್ತೃತ್ವ ಮಾತ್ರವಿರುವುದು, ಪಾಲಕತ್ವವಲ್ಲ. ಅದು ಸ್ವತಃ ಸಿದ್ಧವಾಗಿದೆ ಎಂದು ಭಾಷ್ಯದಲ್ಲಿ ಮಾಡಿದ ಪೂರ್ವಪಕ್ಷವು ಯುಕ್ತವಲ್ಲ. ಸ್ವಭಾವವನ್ನು ಆಶ್ರಯಿಸಿ ಪಾಲಕತ್ವವನ್ನು ಅಪಲಾಪ ಮಾಡಿದರೆ, ಸಮಾನ ನ್ಯಾಯದಿಂದ ಸೃಷ್ಟಿ ಸಂಹಾರಗಳ ಕರ್ತೃತ್ವವೂ ಕೂಡದೇ ಹೋಗುವುದು ಎಂದರೆ, ಪೂರ್ವಪಕ್ಷವನ್ನು ವಿವರಿಸುತ್ತಾರೆ –

**.............. ಸೃಷ್ಟಿನಾಶೌ ತದಧೀನಾವಿತೀರಿತೇ ।**

**ಸ್ವಭಾವತ್ವಾತ್ಸ್ಥಿತೇರ್ನೈತದಪೇಕ್ಷೇತಿ ನ ಯುಜ್ಯತೇ ॥೧೬೫॥**

**ಯತಃ ಸ್ವಭಾವೋಽಪ್ಯಖಿಲ ಈಶಾಯತ್ತೋಽಖಿಲಸ್ಯ ಚ ।**

ಸೃಷ್ಟಿನಾಶಗಳು ಈಶ್ವರನ ಅಧೀನವೆಂದು ಸಿದ್ಧಾಂತಿಗಳು ಒಪ್ಪಿರುವಾಗ, ಸ್ಥಿತಿಗೆ ಸ್ವಭಾವಸಿದ್ಧತ್ವ ಪ್ರಯುಕ್ತ ಈಶ್ವರನ ಅಪೇಕ್ಷೆಯು ಇಲ್ಲ ಎನ್ನುವ ಆಶಂಕೆಯು ಕೂಡುವುದಿಲ್ಲ. ಏಕೆಂದರೆ ಎಲ್ಲ ಪದಾರ್ಥಗಳ ಎಲ್ಲ ಸ್ವಭಾವವೂ ಕೂಡ ಈಶ್ವರನ ಅಧೀನವು. ಹೀಗೆ ಒಪ್ಪದಿದ್ದರೆ ಅವುಗಳಿಗೇ ಸ್ವಾತಂತ್ರ್ಯವು ಬರಬೇಕಾಗುವುದು,

ಶ್ರೀಹರಿಗೆ ಈಶ್ವರತ್ವವು ಕೂಡದೇ ಹೋಗುವುದು. 'ಸರ್ವಂ ಖಲ್ವಿದಂ' ಇತ್ಯಾದಿ ಸರ್ವಕ್ಕೂ ಪರಮಾತ್ಮನ ಅಧೀನತ್ವವನ್ನು ಪ್ರತಿಪಾದಿಸುವ ಶ್ರುತಿಗೆ ವಿರೋಧವೂ ಬರುವುದು. ಸೃಷ್ಟಿ ಹಾಗೂ ಸಂಹಾರಗಳನ್ನು ಮಾಡುವವರೂ ಅನ್ನದಾನಾದಿಗಳನ್ನು ನೀಡುವುದರ ಮೂಲಕ ಪಾಲನ ರೂಪವಾದ ಸ್ಥಿತಿಕರ್ತೃತ್ವವನ್ನು ಹೊಂದಿರುವುದು ಲೋಕದಲ್ಲಿ ಕಂಡಿದೆ. ಆದುದರಿಂದ ಶ್ರೀಹರಿಗೆ ಸೃಷ್ಟಿಸಂಹಾರ ಮಾತ್ರವಲ್ಲ, ಪಾಲಕತ್ವವೂ ಇದ್ದೇ ಇರುವುದು.

## ಅವ್ಯಕ್ತಾಧಿಕರಣಮ್

### ಓಂ ತದವ್ಯಕ್ತಮಾಹ ಹಿ ಓಂ

ಪರಮಾತ್ಮನಿಗೆ ಅವ್ಯಕ್ತತ್ವವನ್ನು ಈ ಅಧಿಕರಣದ ಆದಿಯಲ್ಲಿ ವಿಸ್ತಾರವಾಗಿ ಸಮರ್ಥಿಸಿರುವರು. ಹಾಗಾದರೆ ಭಕ್ತ್ಯಾದಿ ಸಾಧನಗಳಿಗೆ ನಿಷ್ಪ್ರಯೋಜಕತ್ವವೆಂದು ಆಶಂಕಿಸಿ, 'ಪ್ರಕಾಶಶ್ಚ ಕರ್ಮಣ್ಯಭ್ಯಾಸಾತ್' ಎಂಬುದಾಗಿ ದೃಶ್ಯತ್ವವನ್ನೂ ಹೇಳಿದರು. ಅವೆರಡು ಪರಸ್ಪರ ವಿರುದ್ಧವೆಂದು ಆಶಂಕಿಸಿ, 'ಅತೋಽನಂತೇನ ತಥಾ ಹಿ ಲಿಂಗಂ' ಎನ್ನುವ ಸೂತ್ರದಿಂದ ವಿರೋಧವನ್ನು ಪರಿಹರಿಸಿದರು. ಆ ವಿರೋಧ ಪರಿಹಾರವು ಸ್ಫುಟವಾಗಿ ತೋರುವುದಿಲ್ಲ ಎಂದರೆ ಆದರ ತಾತ್ಪರ್ಯವನ್ನು ಇಲ್ಲಿ ಹೇಳುತ್ತಾರೆ –

**ಅವ್ಯಕ್ತೋಽಪಿ ಸ್ವಶಕ್ತ್ಯೈವ ಭಕ್ತಾನಾಂ ದೃಶ್ಯತೇ ಹರಿಃ ।।೧೬೬।।**

ಶ್ರೀಹರಿಯು ಭಕ್ತರಾದ ಜೀವರ ಶಕ್ತಿಯ ಅಪೇಕ್ಷೆಯಿಂದ ಅವ್ಯಕ್ತನಾಗಿದ್ದರೂ, ಭಕ್ತರಿಗೆ ಅನುಗ್ರಹಿಸಲಿಕ್ಕೆ ತನ್ನ ಶಕ್ತಿಯಿಂದಲೇ ಕಾಣಿಸಿಕೊಳ್ಳುತ್ತಾನೆ. ಶ್ರೀಹರಿಯು ಅವ್ಯಕ್ತನಾಗಿದ್ದರೂ, ಅಚಿಂತ್ಯಾದ್ಭುತ ಶಕ್ತಿಯ ನಿಮಿತ್ತದಿಂದ ವ್ಯಕ್ತತ್ವವೂ ಕೂಡುವುದು.

## ಅಹಿಕುಂಡಲಾಧಿಕರಣಮ್

## (ಉಭಯವ್ಯಪದೇಶಾಧಿಕರಣಮ್)

### ಓಂ ಉಭಯವ್ಯಪದೇಶಾತ್ತ್ವಹಿಕುಂಡಲವತ್ ಓಂ

ಈಶ್ವರನ ಗುಣಕ್ರಿಯಾದಿ ಧರ್ಮಗಳು ಅವನಿಂದ ಭಿನ್ನಗಳಾದರೆ ಆಗ ಸಮವಾಯವು ನಿರಾಕೃತವಾಗುವುದರಿಂದ ಗುಣಾದಿಮತ್ತ್ವವು ಅಯುಕ್ತವಾಗುವುದು. ಅಭಿನ್ನವೆಂದು ಹೇಳಿದರೆ ಆಗ ಜ್ಞಾನಾದಿಮತ್ತ್ವ ಆನಂದಾದಿ ಭೋಕ್ತೃತ್ವ ಇತ್ಯಾದಿಗಳು ಕೂಡದೇ ಹೋಗುವುದು. ಈ ಪ್ರಕಾರವಾಗಿ ಎರಡು ವಿಧದಿಂದಲೂ ಭಕ್ತಿಯು ಕೂಡಲಾರದು. ಹೀಗೆ ಪೂರ್ವಪಕ್ಷ ಬಂದರೆ ಇಲ್ಲಿ ಹೇತು ದೃಷ್ಟಾಂತಗಳು ಮಾತ್ರ ಸೂಚಿತವಾಗಿವೆ, ಪಕ್ಷಪರಿಗ್ರಹರೂಪವಾದ ಪ್ರತಿಜ್ಞೆಯಲ್ಲ. ಆದ್ದರಿಂದ 'ತದಭಿನ್ನಾ' ಇತ್ಯಾದಿ ವಚನದಿಂದ ಪ್ರತಿಜ್ಞೆಯನ್ನು ತೋರಿಸುತ್ತಾರೆ –

**ತದಭಿನ್ನಾ ಗುಣಾ ನಿತ್ಯಮಪಿ ಸರ್ವೇ ವಿಶೇಷತಃ ।**

**ಗುಣತ್ವೇನ ಗುಣಿತ್ವೇನ ಭೋಕ್ತೃಭೋಗ್ಯತಯಾ ಸ್ಥಿತಾಃ ।।೧೬೭।।**

ಪರಮೇಶ್ವರನ ಎಲ್ಲ ಗುಣಗಳೂ ನಿತ್ಯ ಅಂದರೆ ನಿಯಮೇನ ಅವನಿಂದ ಅತ್ಯಂತಾಭಿನ್ನಗಳು. ಹಾಗಿದ್ದರೂ ವಿಶೇಷದ ಬಲದಿಂದ ಗುಣಗುಣಿ ಭಾವದಿಂದಲೂ, ಭೋಕ್ತೃಭೋಗ್ಯ ಭಾವದಿಂದಲೂ ಇರುತ್ತವೆ.

ಹಾಗಾದರೆ ಯಾವದ್ದ್ರವ್ಯಭಾವಿಯಾದ ಪರಿಮಾಣಾದಿಗಳಿಗೆ ಪರಮಾತ್ಮನಿಂದ ಅತ್ಯಂತಾಭೇದವು ಇರಲಿ. ಆದರೆ ಅನಿತ್ಯಗಳೆಂದು ತಿಳಿಯಲ್ಪಟ್ಟಿರುವ ಸೃಷ್ಟ್ಯಾದಿ ಕ್ರಿಯೆಗಳು, ಜ್ಞಾನ–ಆನಂದಾದಿ ಗುಣಗಳು ಇತ್ಯಾದಿಗಳಿಗೆ ಪರಮಾತ್ಮನೊಂದಿಗೆ ಅತ್ಯಂತಾಭೇದವು ಕೂಡುವುದಿಲ್ಲ ಎಂದರೆ –

**ವಿಶೇಷಾತ್ಮತಯಾ ತೇಷಾಂ ನಿತ್ಯಶಕ್ತ್ಯಾತ್ಮನಾ ತಥಾ ।**

**ನಿತ್ಯಂ ಸ್ಥಿತೇರ್ನ ಧರ್ಮಾಣಾಂ ಕ್ರಿಯಾದೀನಾಮನಿತ್ಯತಾ ।।೧೬೮।।**

ಪರಮೇಶ್ವರನ ಸಂಬಂಧಿಗಳಾದ ಕ್ರಿಯಾದಿ ಧರ್ಮಗಳು ನಿತ್ಯವು. ಏಕೆಂದರೆ ಅವು ನಿತ್ಯಶಕ್ತಿರೂಪದಿಂದ ನಿತ್ಯದಲ್ಲಿಯೂ ಇರುತ್ತವೆ. ಹಾಗಿದ್ದರೂ ವ್ಯಕ್ತರೂಪದಿಂದ ವ್ಯವಹಾರ ವಿಷಯತ್ವವು ಕೂಡುವುದು. ಆದ್ದರಿಂದ ಅನಿತ್ಯತ್ವವು ಕೂಡುವುದಿಲ್ಲ.

ಹಾಗಾದರೆ ಕ್ರಿಯಾದಿಗಳಿಗೆ ಯಾವ ವ್ಯಕ್ತತ್ವವು ಹೇಳಲ್ಪಟಿದೆಯೋ ಅದು ಅನಿತ್ಯವೇ. ಇಲ್ಲವಾದರೆ ನಿತ್ಯದ ವ್ಯವಹಾರಕ್ಕೆ ನಿರಾಧಾರತ್ವ ಬರುತ್ತದೆ. ಆದ್ದರಿಂದ ಆ ವ್ಯಕ್ತತ್ವವು ಭಗವದ್ಧರ್ಮರೂಪವಾಗಿದ್ದರೂ ಅದಕ್ಕೆ ಅತ್ಯಂತಾಭೇದವು ಕೂಡದೇ ಹೋಗುವುದು ಎಂದರೆ –

**ನ ವಿಶೇಷಾತ್ಮತಾ ಚೇಯಮನಿತ್ಯಾ ಶಕ್ತಿರೂಪತಾ ।**

**ಸೈವ ಯತ್ಸವಿಶೇಷಾ ಸ್ಯಾದ್..................।।**

ವ್ಯವಹಾರಕ್ಕೆ ವಿಷಯವಾಗಿ ಹೇಳಲ್ಪಟ್ಟ ವ್ಯಕ್ತತ್ವವು ಅನಿತ್ಯವಾದುದಲ್ಲ. ಆ ವಿಶೇಷ ಸ್ವರೂಪತ್ವವು ಶಕ್ತಿರೂಪತ್ವವೇ ಆಗಿದೆ. ಆ ಶಕ್ತಿಯಾದರೋ ನಿತ್ಯವೆಂದು ಹೇಳಲ್ಪಟ್ಟಿದೆ. ಆದ್ದರಿಂದ ಅನಿತ್ಯವಲ್ಲ. ಹಾಗಾದರೆ ಶಕ್ತಿ ವ್ಯಕ್ತಿ ಎಂಬ ವ್ಯವಹಾರಕ್ಕೆ ವಿಶೇಷವೇ ಇರುವುದಿಲ್ಲ ಎಂದು ಹೇಳಕೂಡದು. ಏಕೆಂದರೆ ಆ ವ್ಯಕ್ತಿಯು ಶಕ್ತಿಯಿಂದ ಸವಿಶೇಷಾಭಿನ್ನವೇ ಆಗಿದೆ.

**.............ವಿಶೇಷೋಽನ್ಯೋ ನ ಚಾಪ್ಯಯಮ್ ।।೧೬೯।।**

**ಸ್ವನಿರ್ವಾಹಕತಾಹೇತೋಸ್ತಥಾಪಿ ಸ್ಯಾದ್ವಿಶೇಷತಾ ।**

ಹಾಗಾದರೆ ಸರ್ವ ನಿರ್ವಾಹಕ ಹೇತುವಾದ ವಿಶೇಷವು ಭಗವಂತನಿಂದ ಭಿನ್ನವಾದರೆ ಆಗ ಎಲ್ಲ ಭಗವದ್ಧರ್ಮಗಳಿಗೆ ಭಗವಂತನಿಂದ ಅತ್ಯಂತಾಭೇದವೆಂಬ ಪ್ರತಿಜ್ಞೆಗೆ ಭಂಗ ಬರುವುದು. ಅಭಿನ್ನವೆಂದರೆ ವಿಶೇಷತ್ವವೇ ಕೂಡುವುದಿಲ್ಲ ಎಂದರೆ,

ಈ ವಿಶೇಷವಾದರೂ ಭಗವಂತನಿಂದ ಭಿನ್ನವಾದುದು ಅಲ್ಲವೇ ಅಲ್ಲ. ಆದ್ದರಿಂದ ಪ್ರತಿಜ್ಞಾಹಾನಿಯಿಲ್ಲ. ಹಾಗಿದ್ದರೂ ಸ್ವನಿರ್ವಾಹಕತ್ವರೂಪ ಹೇತುವಿನ ಬಲದಿಂದ ಆ ವಿಶೇಷಕ್ಕೂ ವಿಶೇಷತ್ವವು ಬರುವುದರಿಂದ ಅನವಸ್ಥೆಯು ಉಂಟಾಗದು.

ಪ್ರಮಾಣವಿದ್ದಿದ್ದರೆ ಮೇಲೆ ಹೇಳಿದ ಅರ್ಥಗಳನ್ನು ಅಂಗೀಕರಿಸಬಹುದಿತ್ತು. ನಮಗಾದರೂ ಪ್ರಮಾಣವೇ ಕಾಣುತ್ತಿಲ್ಲ ಎಂದರೆ ಸೂತ್ರದಲ್ಲಿರತಕ್ಕ 'ಉಭಯ ವ್ಯಪದೇಶಾತ್' ಎಂಬ ಹೇತುವನ್ನು ವ್ಯಾಖ್ಯಾನ ಮಾಡುತ್ತಾರೆ –

**ವಿಶೇಷತ್ವೇನ ವಿಜ್ಞಾತೇಃ ಪ್ರಮಾಣೈರಖಿಲೈರಪಿ ।।೧೭೦।।**

ಉಭಯವಿಧಗಳಾದ ವೇದವಾಕ್ಯಗಳಿಂದ ಜ್ಞಾನಾದಿ ಧರ್ಮಗಳು ಭಗವದ್ ವಿಶೇಷತ್ವದಿಂದಲೂ ಅಭಿನ್ನತ್ವದಿಂದಲೂ ತಿಳಿಯಲ್ಪಡುತ್ತವೆ. ಅದು ಹೇಗೆಂದರೆ –

**ಸಸರ್ಜ ಸಂಜಹಾರೇತಿ ವಿಶೇಷೋ ಹ್ಯವಗಮ್ಯತೇ ।**

**ಶ್ರುತ್ಯೈವ ಸ ಸ ಯೇವೇತಿ ತದಭೇದಶ್ಚ ಗಮ್ಯತೇ ।।೧೭೧।।**

ಶ್ರೀಹರಿಯು ಇವೆಲ್ಲವನ್ನೂ ಸೃಷ್ಟಿ ಮಾಡಿದನು (ಸ ಇದಂ ಸರ್ವಮಸೃಜತ), ಸಂಹರಿಸಿದನು (ತತ್ತದತ್ತುಮಧ್ರಿಯತ ಸ ಐಕ್ಷತ) ಇತ್ಯಾದಿ ವಿಶೇಷವು ಶ್ರುತಿ ಯಿಂದಲೇ ತಿಳಿಯಲ್ಪಡುತ್ತದೆ. 'ಆನಂದೋ ಬ್ರಹ್ಮ' ಇತ್ಯಾದಿ ಶ್ರುತಿಯಿಂದ ಆನಂದಾದಿಯು ಆ ಪರಮಾತ್ಮನೇ ಎಂದು ಅಭೇದವೂ ಕೂಡ ತಿಳಿಯಲ್ಪಡುತ್ತದೆ.

ಇದರ ಅಭಿಪ್ರಾಯವೇನೆಂದರೆ, ಭೇದ ಹಾಗೂ ಅಭೇದ ಪರವಾದ ಉಪದೇಶವು ಅನ್ಯಥಾ ಕೂಡದಿರುವುದರಿಂದ ಬ್ರಹ್ಮನ ಎಲ್ಲ ಧರ್ಮಗಳಿಗೂ ಬ್ರಹ್ಮನೊಂದಿಗೆ ಸವಿಶೇಷ ಅತ್ಯಂತಾಭೇದ, ಕ್ರಿಯಾದಿಗಳಿಗೆ ನಿತ್ಯತ್ವ, ಶಕ್ತಿವ್ಯಕ್ತಿರೂಪತ್ವ ವ್ಯಕ್ತಿರೂಪಕ್ಕೆ ನಿತ್ಯತ್ವ, ಶಕ್ತಿರೂಪದಿಂದ ಅಭಿನ್ನತ್ವ, ಸವಿಶೇಷತ್ವ, ವಿಶೇಷಕ್ಕೆ ಅಭಿನ್ನತ್ವ ಹಾಗೂ ಸ್ವನಿರ್ವಾಹಕತ್ವ ಹೀಗೆ ಎಲ್ಲವೂ ಕಲ್ಪಿಸಲ್ಪಡುತ್ತದೆ.

ಹಾಗಾದರೆ ಬ್ರಹ್ಮನಿಗೂ ಅವನ ಧರ್ಮಗಳಿಗೂ ಭೇದವೇ ಇರಲಿ. ಆದರೂ ಅಭೇದಕ್ಕೆ ಔಪಚಾರಿಕತ್ವವು ಕೂಡುವುದರಿಂದ ಅಭೇದಶ್ರುತಿಗೆ ವಿರೋಧ ಬರುವುದಿಲ್ಲ. ಆದ್ದರಿಂದ ವಿಶೇಷಾಭೇದವನ್ನು ಅಂಗೀಕರಿಸುವ ಅಗತ್ಯವಿಲ್ಲವೆಂದು ಭೇದವಾದಿಯು ಹೇಳುತ್ತಾನೆ. ಅಭೇದವಾದಿಯ ಮತದಂತೆ ಬ್ರಹ್ಮನು ಅಖಂಡನೇ. ಅವನಲ್ಲಿ ಯಾವ ವಿಶೇಷವೂ ಇಲ್ಲ. ಕ್ರಿಯಾದಿಗಳನ್ನು ಪ್ರತಿಪಾದಿಸುವ ಶ್ರುತಿಗಳು ಸಗುಣಬ್ರಹ್ಮನಿಗೆ ಸಂಬಂಧಿಸಿವೆ. ಆದ್ದರಿಂದ ಶ್ರುತಿವಿರೋಧವು ಬರುವುದಿಲ್ಲ. ಇನ್ನೊಬ್ಬನ ಮತದಂತೆ ಭೇದಾಭೇದಗಳಿಂದಲೇ ಉಭಯ ವ್ಯಪದೇಶವು ಸಮಂಜಸ ವಾಗುವುದರಿಂದ ಸವಿಶೇಷಾಭೇದ ಕಲ್ಪನೆಯಿಂದ ಏನೂ ಪ್ರಯೋಜನವಿರುವುದಿಲ್ಲ. ಎಂದರೆ – ಹೀಗೆ ಹೇಳಕೂಡದು. ಈ ಮೂರು ವಾದಿಗಳೂ ಕೊನೆಗೆ ಅಭೇದದಲ್ಲಿ ವಿಶೇಷವನ್ನು ಅಂಗೀಕರಿಸಲೇ ಬೇಕಾಗುವುದು. ಆದಪ್ರಯುಕ್ತ ಮೊದಲಿಗೇ ಅದನ್ನು

ಅಂಗೀಕರಿಸುವುದು ಉತ್ತಮ ಎಂಬ ಅಭಿಪ್ರಾಯದಿಂದ ಭೇದವಾದಿಯನ್ನು ಕುರಿತು 'ಭೇದ' ಇತ್ಯಾದಿಯಾಗಿ ಹೇಳುತ್ತಾರೆ –

**ಭೇದೋ ಯದಿ ವಿಶೇಷಸ್ಯ ಸ ಭೇದೋ ಭೇದಿನಾ ಕಥಮ್ ।**

**ಭಿನ್ನಶ್ಚೇದನವಸ್ಥಾ ಸ್ಯಾದಭಿನ್ನಶ್ಚೇತ್ ಪುರಾ ನ ಕಿಮ್ ॥೧೭೨॥**

ಜ್ಞಾನಾದಿ ಬ್ರಹ್ಮನ ಧರ್ಮಗಳಿಗೆ ಬ್ರಹ್ಮನಿಂದ ಭೇದವನ್ನು ಅಂಗೀಕರಿಸುವ ಭೇದವಾದಿಯನ್ನು ನಾವು ಕೇಳುತ್ತೇವೆ – ಆ ಭೇದವು ಭೇದವುಳ್ಳ ಬ್ರಹ್ಮನಿಂದಲೂ ಜ್ಞಾನಾದಿಗಳಿಂದಲೂ ಕೂಡಿಕೊಂಡು ಯಾವ ಪ್ರಕಾರದಿಂದ ತಿಳಿಯತಕ್ಕದ್ದು? ಭೇದವು ಭೇದಿಗಳಿಂದ ಭಿನ್ನ ಎಂದರೆ ಆಗ ಅನವಸ್ಥೆಯು ಬರುವುದು.

ಅಭಿನ್ನವೆಂದು ಹೇಳಿದರೆ ಅದು ಸವಿಶೇಷಾಭಿನ್ನವೋ ಅಥವಾ ನಿರ್ವಿಶೇಷಾಭಿನ್ನವೋ ಎಂದು ಕೇಳಬೇಕು. ಸವಿಶೇಷಾಭಿನ್ನವೆಂದು ಹೇಳಿದರೆ, ಅದು ಮೊದಲು ಇತ್ತೋ ಇಲ್ಲವೋ ಎಂದು ಕೇಳುತ್ತೇವೆ. ಧರ್ಮಗಳಿಗೆ ಧರ್ಮಿಯಿಂದ ಸವಿಶೇಷಾಭೇದವು ಏಕೆ ಅಂಗೀಕರಿಸಲ್ಪಡುವುದಿಲ್ಲ? ಭೇದವಿಲ್ಲದಿದ್ದರೂ ಭೇದವಿರುವಂತೆ ವಿಶೇಷದಿಂದಲೇ ಕೂಡುವಾಗ ವ್ಯರ್ಥವಾಗಿ ಪರಂಪರೆಯನ್ನು ಕಲ್ಪಿಸುವುದರಿಂದ ಕಲ್ಪನಾಗೌರವ ಬರುವುದು. ಆದ್ದರಿಂದ ಧರ್ಮಗಳಿಗೇನೆ ಸವಿಶೇಷಾಭೇದವನ್ನು ಅಂಗೀಕರಿಸುವುದು ಯೋಗ್ಯವು.

ಹೀಗೆಯೇ ಆಗಲಿ ಎಂದರೆ –

**ವಿಶೇಷೋಽಭಿನ್ನ ಏವೇತಿ ತೇನ ನಾಭ್ಯುಪಗಮ್ಯತೇ ।**

ಭೇದವಾದಿಯು ವಿಶೇಷ ಅಥವಾ ಧರ್ಮವನ್ನು ಅಭಿನ್ನವೆಂಬುದಾಗಿಯೇ ಅಂಗೀಕರಿಸುವುದಿಲ್ಲ. ಆದ್ದರಿಂದ ಸವಿಶೇಷತ್ವದ ಅಂಗೀಕಾರವು ಕೂಡುವುದೇ ಇಲ್ಲ. ಅಪಸಿದ್ಧಾಂತವು ಬರಬೇಕಾಗುವುದು. ಇಷ್ಟಸಿದ್ಧಿಯೂ ಆಗದೇ ಹೋಗುವುದು.

ನಿರ್ವಿಶೇಷಾಭಿನ್ನವೆಂದರೆ ಅದನ್ನು ದೂಷಿಸುತ್ತಾರೆ –

**ಅಭಿನ್ನೋ ನಿರ್ವಿಶೇಷಶ್ಚೇದ್ಭೇದಸ್ತದ್ಭೇದತಾ ಕುತಃ ॥೧೭೩॥**

ಭೇದವು ಭೇದಗಳಿಂದ ಅಭಿನ್ನವೂ ನಿರ್ವಿಶೇಷವೂ ಆಗುವುದಾದರೆ, ಅವುಗಳಿಗೆ ಇದು ಭೇದವು ಎನ್ನುವ ಭಾವವು ಯಾವುದರಿಂದ ತಿಳಿಯಲ್ಪಡುತ್ತದೆ? ಭೇದವಾಗಲೀ ವಿಶೇಷವಾಗಲೀ ಇಲ್ಲದೇ ಹೋದರೆ ಆಗ ಧರ್ಮ–ಧರ್ಮಿ ಎಂಬ ವ್ಯವಹಾರವೇ ಕೂಡುವುದಿಲ್ಲ. ಆಗ ಭೇದವೂ ಕೂಡ ಇಲ್ಲದೇ ಹೋಗುವುದು.

ಭೇದಕ್ಕೆ ಭೇದಿಸ್ವರೂಪತ್ವವನ್ನು ಒಪ್ಪಿದರೂ ವಿಶೇಷವನ್ನು ಒಪ್ಪದಿರುವ ವಾದಿಯನ್ನು ಉದ್ದೇಶಿಸಿ ದೂಷಣಾಂತರವನ್ನು ಹೇಳುತ್ತಾರೆ –

**ಅನೇನಾನೇನ ಭಿನ್ನೋಽಯಮಿತಿ ಯತ್ಸವಿಶೇಷತಃ ।**

**ಭೇದ ಏವೈಷ ಬಹುಧಾ ದೃಶ್ಯತೇ ತತ್ಕಿಮುತ್ತರಮ್ ।।೧೭೪।।**

ಇತರ ವಸ್ತುಗಳಿಂದ ಭಿನ್ನವಾದುದು ಈ ಘಟವು ಎಂದು ಆ ಭೇದವೇ ವಿಶೇಷಣವಾಗಿ ಕಾಣಲ್ಪಡುತ್ತದೆ. ಘಟವು ವಿಶೇಷ್ಯವಾಗಿಯೇ ಕಾಣಲ್ಪಡುತ್ತದೆ. ಘಟವು ಪಟದಿಂದ ಭಿನ್ನವು, ಸ್ತಂಭದಿಂದ ಭಿನ್ನವು ಇತ್ಯಾದಿ ಅನೇಕ ಪ್ರಕಾರದಿಂದ ಭೇದವೇ ವಿಶೇಷತಃ ಕಾಣಲ್ಪಡುತ್ತದೆ. ಘಟವಾದರೂ ಏಕರೀತಿ ಕಾಣಲ್ಪಡುತ್ತದೆ. ಆದಕಾರಣ ಭೇದವು ಘಟಸ್ವರೂಪವಲ್ಲ ಎಂಬುದಾಗಿ ಸ್ವರೂಪಭೇದಕ್ಕೆ ಪರರಿಂದ ದೂಷಣವು ಹೇಳಲ್ಪಟ್ಟರೆ, ವಿಶೇಷವನ್ನು ಅಂಗೀಕರಿಸದ ನಿನ್ನಿಂದ ಏನು ಉತ್ತರವು ಹೇಳಲ್ಪಡುತ್ತದೆ? ವಿಶೇಷವನ್ನು ಅಂಗೀಕರಿಸದಿದ್ದರೆ ಆಗ ಭೇದವು ಭೇದಿಯಿಂದ ಅಭಿನ್ನ ಎಂದು ಅಂಗೀಕರಿಸಲಿಕ್ಕೂ ಶಕ್ಯವಾಗದು. ಏಕೆಂದರೆ ಭೇದಸಾಧಕಗಳು ಅನೇಕವಿರುತ್ತವೆ.

**ಅಭೇದಭೇದಯೋಶ್ಚೈವ ಸ್ವರೂಪತ್ವಂ ಹಿ ಭೇದಿನಃ ।**

**ತಯೋರಪ್ಯವಿಶೇಷತ್ವೇ ಪರ್ಯಾಯತ್ವಂ ಹಿ ಶಬ್ದಯೋಃ ।।೧೭೫।।**

ಕೇವಲ್ಲ ಭೇದಕ್ಕೆ ಮಾತ್ರವಲ್ಲ, ಅಭೇದಕ್ಕೂ ಕೂಡ ಭೇದಿಯ ಸ್ವರೂಪತ್ವವೇ (ಅಂದರೆ ಭೇದಿಯೊಂದಿಗೆ ಅಭೇದವೇ) ಪ್ರಸಿದ್ಧ. ಹಾಗೆಯೇ ಭೇದಭೇದಗಳಿಗೂ ಕೂಡ ಭೇದಿಯೊಂದಿಗೆ ಅಭೇದವನ್ನು ಅಂಗೀಕರಿಸಬೇಕು. ಅಭೇದ ಭೇದಗಳಿಗೆ ಭೇದವೂ ವಿಶೇಷವೂ ಇಲ್ಲವೆಂದರೆ, ಆ ಶಬ್ದಗಳಿಗೆ ಏಕಾರ್ಥತ್ವವು ಬರುವುದು. ಹಾಗೇ ಆಗಲಿ ಎಂದರೆ –

**ಅಭೇದಭೇದಶಬ್ದೌ ಚ ಪರ್ಯಾಯಾವಿತಿ ಕೋ ವದೇತ್ ।**

**ಭೇದೋಽನ್ಯೋನ್ಯಮಭೇದಶ್ಚ ಭೇದಿನಾ ಚೇದ್ವಿಶೇಷಿತಾ ।।೧೭೬।।**

ಭೇದ ಮತ್ತು ಅಭೇದ ಶಬ್ದಗಳನ್ನು ಪರ್ಯಾಯಶಬ್ದಗಳು ಎಂದು ಯಾರೂ ಹೇಳುವುದಿಲ್ಲ. ಹಾಗೆ ಹೇಳುವುದು ಅಪ್ರಾಮಾಣಿಕವೂ ಪ್ರಮಾಣವಿರುದ್ಧವೂ ಆಗಿದೆ. ಭೇದಾಭೇದಗಳಿಗೆ ಭೇದಿಯಿಂದ (ಘಟದಿಂದ) ಅಭೇದವಿರಲಿ. ಹಾಗಿದ್ದರೂ ಭೇದ ಮತ್ತು ಅಭೇದ ಶಬ್ದಗಳಿಗೆ ಪರಸ್ಪರವಾಗಿ ಭೇದವಿರುವಪ್ರಯುಕ್ತ ಪರ್ಯಾಯತ್ವವು ಬರುವುದಿಲ್ಲ. ಹೀಗೆ ಅಂಗೀಕರಿಸುವವನೂ ಕೂಡ ಅಭಿನ್ನವಾದ ವಸ್ತುವಿನಲ್ಲಿ ವಿಶೇಷಿತ್ವವನ್ನು ಅಂಗೀಕರಿಸಲೇಬೇಕು. ಅದು ಹೇಗೆಂದರೆ –

**ಅವಿಶೇಷೇ ಕಥಂ ಭೇದೋ ಭೇದಿನ್ಯೈಕಸ್ತಥಾ ಭಿದಾ ।**

**ಪುನಸ್ತಯೋರ್ವಿಭೇದಶ್ಚ ಭೇದಿಮಾತ್ರತ್ವತೋ ಭವೇತ್ ।।೧೭೭।।**

ವಿಶೇಷವಿಲ್ಲವಾದರೆ ಭೇದವು ಭೇದಿಯಿಂದ ಅಭಿನ್ನವೆಂದೂ, ಹಾಗೆಯೇ ಅಭೇದವು ಭೇದಿಯಿಂದ ಅಭಿನ್ನವೆಂದೂ, ಪುನಃ ಆ ಭೇದಾಭೇದಗಳಿಗೆ ಪರಸ್ಪರ ಭೇದವೆಂದೂ ಹೇಳುವುದು ಅವುಗಳಿಗೆ ಭೇದಿಮಾತ್ರಸ್ವರೂಪತ್ವವಿದ್ದ ಪ್ರಯುಕ್ತ

ಕೂಡುವುದಿಲ್ಲ. ಆದ್ದರಿಂದ ಘಟದಿಂದ ಅಭಿನ್ನಗಳಾದ ಭೇದಾಭೇದಗಳಿಗೆ ಪರಸ್ಪರ ಭೇದ ನಿರ್ವಾಹಕ್ಕಾಗಿ ಘಟದಿಂದ ಸವಿಶೇಷಾಭೇದವನ್ನೇ ಅಂಗೀಕರಿಸಬೇಕು. ವಿಶೇಷವನ್ನು ಅಂಗೀಕರಿಸದೇ ಇದ್ದರೆ ಪರ್ಯಾಯತ್ವವನ್ನು ಪರಿಹರಿಸಲು ಸಾಧ್ಯವೇ ಆಗುವುದಿಲ್ಲ.

ಮತ್ತೊಂದು ರೀತಿಯಲ್ಲಿ ಆಶಂಕಿಸುತ್ತಾರೆ –

**ಭೇದಿನಶ್ಚೈವ ಭೇದಸ್ಯ ವಿಶೇಷೋ ಯದಿ ಗಮ್ಯತೇ ।**

**ಅಭೇದಾಭೇದಿನೋಶ್ಚೈವ ಕಿಂ ಭೇದೋಽಭೇದಭೇದಯೋಃ ॥೧೭೮॥**

ಭೇದಿ–ಭೇದಗಳಿಗೆ ಅಭೇದವೂ ವಿಶೇಷವೂ ನನ್ನಿಂದ ಅಂಗೀಕರಿಸಲ್ಪಡುವುದು. ಹಾಗೆಯೇ ಅಭೇದ–ಅಭೇದಿಗಳಿಗೂ ಸವಿಶೇಷಾಭೇದವು ಅಂಗೀಕರಿಸಲ್ಪಡುವುದು. ಹಾಗಿದ್ದರೂ ಭೇದಾಭೇದಗಳಿಗೆ ಘಟತನ್ಮಾತ್ರತ್ವವು ಇಲ್ಲದಿರುವ ಪ್ರಯುಕ್ತ, ಪರಸ್ಪರ ಭೇದವು ಕೂಡುವುದರಿಂದ, ಶಬ್ದಗಳಿಗೆ ಪರ್ಯಾಯತ್ವವಿಲ್ಲ. ಆದ್ದರಿಂದ ಭೇದಾ–ಭೇದಗಳಿಗೆ ಪರಸ್ಪರ ಅಭೇದವನ್ನೂ ವಿಶೇಷವನ್ನೂ ಅಂಗೀಕರಿಸಬೇಕೆಂಬುದು ಅಯುಕ್ತವೆಂದು ಭಾವ. ಹೀಗಾದರೆ ಅಭೇದಕ್ಕೂ ಭೇದಕ್ಕೂ ಭೇದವನ್ನು ಯಾವುದರಿಂದ ಕಲ್ಪಿಸಬೇಕು? ಅವುಗಳಿಗೂ ಸವಿಶೇಷಾಭೇದವನ್ನೇ ಅಂಗೀಕರಿಸ ಬೇಕು ಎಂದು ಅಭಿಪ್ರಾಯ. ಈ ವಿಷಯದಲ್ಲಿ ಯುಕ್ತಿಯನ್ನೂ ಹೇಳುತ್ತಾರೆ –

**ವಿಶೇಷೇಣೈವ ಸರ್ವತ್ರ ಯದಿ ವ್ಯವಹೃತಿರ್ಭವೇತ್ ।**

**ಕಲ್ಪನಾಗೌರವಾಯೈವ ಕಿಂ ಭೇದಃ ಕಲ್ಪ್ಯತೇ ತದಾ ॥೧೭೯॥**

ಭೇದ–ಭೇದಿಗಳಿಗೂ, ಅಭೇದ–ಅಭೇದಿಗಳಿಗೂ ಅಭೇದವಿದ್ದರೂ ವಿಶೇಷದ ಬಲದಿಂದಲೇ ಭೇದವ್ಯವಹಾರವು ಆಗುವುದೆಂದು ಅಂಗೀಕರಿಸುವುದಾದರೆ, ಆಗ ಭೇದಾಭೇದಗಳಿಗೆ ಭೇದವು ಕಲ್ಪನಾಗೌರವಕ್ಕಾಗಿಯೇ ಕಲ್ಪಿಸಲ್ಪಡುವುದೇನು? ಎಂದು ಅಪಹಾಸ ಮಾಡುತ್ತಾರೆ.

ಹಾಗಾದರೆ ಕಲ್ಪನಾಗೌರವ ಭಯದಿಂದ ಧರ್ಮ–ಧರ್ಮಿಗಳಿಗೆ ಅಭೇದವನ್ನು ಅಂಗೀಕರಿಸಿ, ವ್ಯವಹಾರ ಸಿದ್ಧಿಗಾಗಿ ವಿಶೇಷವನ್ನು ಅಂಗೀಕರಿಸುತ್ತೇವೆ ಎಂದರೆ, ಹಸು ಮತ್ತು ಕುದುರೆಗಳಲ್ಲಿಯೂ ವಿಶೇಷವಿಲ್ಲದಿರುವುದರಿಂದ ಹಾಗೆಯೇ ಕಲ್ಪಿಸಬಹುದು ಎಂದು ಹೇಳುತ್ತೇವೆ. ಹಾಗಾದರೆ ಜಗತ್ತಿನಲ್ಲಿ ಭೇದವೇ ಇಲ್ಲವಾಗುತ್ತದೆ ಎಂದರೆ –

**ಐಕ್ಯಪ್ರತೀತ್ಯಭಾವೇನ ಭೇದ ಏವ ಗವಾಶ್ವಯೋಃ ।**

**ಸ ಏವೇತಿ ಪ್ರತೀತೌ ಹಿ ವಿಶೇಷೋ ನಾಮ ಭಣ್ಯತೇ ॥೧೮೦॥**

ಹಸು ಕುದುರೆಗಳಿಗೆ ಅಭೇದ ಪ್ರತೀತಿಯ ಅಭಾವದಿಂದ ಭೇದವೇ ಸ್ವೀಕರಿಸಲ್ಪಡುತ್ತದೆ, ವಿಶೇಷವಲ್ಲ. ಅದು ಅದೇ ಎನ್ನುವ ಅಭೇದ ಪ್ರತೀತಿಯಿದ್ದಲ್ಲಿ

ಮಾತ್ರ ವಿಶೇಷವೆನ್ನುವುದು ಹೇಳಲ್ಪಡುತ್ತದೆ.

ಈಗ ಅಭೇದವಾದಿಯಿಂದಲೂ ಕೂಡ ವಿಶೇಷವು ಅಂಗೀಕೃತವಾಗಲೇಬೇಕು ಎಂದು ಹೇಳುತ್ತಾರೆ –

**ಸಚ್ಚಿದಾದೇರಪರ್ಯಾಯಸಿದ್ಧ್ಯರ್ಥಂ ಮಾಯಿನಾಪಿ ಹಿ ।**

**ಅಂಗೀಕಾರ್ಯೋ ವಿಶೇಷೋಽಯಂ ................. ॥**

ಸತ್ ಚಿತ್ ಮುಂತಾದ ಪದಸಮೂಹಕ್ಕೆ ಅಪರ್ಯಾಯತ್ವ ಸಿದ್ಧಿಸುವುದಕ್ಕಾಗಿ, ಕ್ರಿಯಾದಿ ವಿಷಯಕವಾದ ವಾಕ್ಯಗಳಿಗೆ ಮಾಯಿಕ ವಿಷಯತ್ವವನ್ನು ಅಂಗೀಕರಿಸುವ ಮಾಯಾವಾದಿಯೂ ಕೂಡ, ಅಪರ್ಯಾಯ ಶಬ್ದಪ್ರವೃತ್ತಿಗೆ ಕಾರಣವಾದ ಈ ವಿಶೇಷವನ್ನು ಅಂಗೀಕರಿಸಲಿಕ್ಕೇ ಬೇಕು.

ಈಗ ಅಪೋಹವಾದವನ್ನು ಆಶ್ರಯಿಸಿ ಶಂಕಿಸುತ್ತಾರೆ – (ಪಟ ಮುಂತಾದ ಪದಗಳು ಪಟಾದಿ ವಾಚಕತ್ವವನ್ನು ಹೊಂದಿಲ್ಲ ಮತ್ತೆ ಘಟಾದಿಗಳ ವ್ಯಾವೃತ್ತಿಯನ್ನು ಹೇಳುತ್ತವೆ ಎನ್ನುವ ವಾದವೇ ಅಪೋಹವಾದ) –

**............... ಯದ್ಯಸತ್ಯವಿಶೇಷಣಮ್ ॥೧೮೧॥**

**ಪೃಥಕ್ಪೃಥಗ್ವಾರಯಿತುಂ ಶಬ್ದಾಂತರಮಿತೀಷ್ಯತೇ ।**

ಸತ್ಯಾದಿ ಪದಗಳು ಸತ್ಯತ್ವಾದಿ ವಾಚಕವಾದರೆ, ಸತ್ಯತ್ವಾದಿ ವಿಶೇಷಣಾಭಾವ ಹಾಗೂ ಸ್ವರೂಪೈಕ್ಯತೆಯ ಕಾರಣದಿಂದ, ಅವುಗಳಿಗೆ ಬ್ರಹ್ಮನಲ್ಲಿ ಪರ್ಯಾಯತ್ವವು ಬರಬೇಕಾಗುವುದು. ಆದ್ದರಿಂದ ಸತ್ಯಾದಿ ಪದಗಳು ಸತ್ಯತ್ವಾದಿಗಳನ್ನು ಹೇಳುವುದಿಲ್ಲ. ಬ್ರಹ್ಮನಲ್ಲಿ ಆರೋಪಿತವಾದ ಅಸತ್ಯತ್ವಾದಿ ವಿಶೇಷಣವನ್ನು ಬೇರೆ ಬೇರೆಯಾಗಿ ನಿವಾರಿಸುವುದಕ್ಕಾಗಿ ಸತ್ಯಾದಿ ಶಬ್ದಾಂತರವು ಅಂಗೀಕರಿಸಲ್ಪಡುತ್ತದೆ. ಈ ರೀತಿಯ ಅಪೋಹವಾದವನ್ನು 'ಮಾಯಾ' ಇತ್ಯಾದಿ ವಚನದಿಂದ ಪರಿಹರಿಸುತ್ತಾರೆ –

**ಮಾಯಾವಿಶೇಷರಾಹಿತ್ಯವಿಶೇಷಣವಿಶೇಷಿತಾ ॥೧೮೨॥**

**ಸತ್ಯಸ್ಯಾಪಿ ಭವೇತ್ಸಾ ಚ ತಥಾ ಚೇದನವಸ್ಥಿತಿಃ ।**

ಇಲ್ಲಿ ಮಾಯಾ ಎಂದರೆ ಆರೋಪಿತ ಅಥವಾ ಕಲ್ಪಿತ ಎಂದರ್ಥ. ಕಲ್ಪಿತವಾದ ಅಸತ್ಯತ್ವಾದಿ ವಿಶೇಷರಾಹಿತ್ಯರೂಪವಾದ ವಿಶೇಷದಿಂದ ಸತ್ಯವಾದ್ದಕ್ಕೂ ವಿಶೇಷಿತ್ವವು ಆಗುವುದು. ಮತ್ತೆ ಆ ವಿಶೇಷಿತ್ವವೂ ಕೂಡ ಅಸತ್ಯತ್ವಾದಿಗಳಂತೆ ಆರೋಪಿತವೇ ಆಗುವುದು ಎಂದು ಶಂಕಿಸಿಕೂಡದು. ಹಾಗಾದರೆ ಅನವಸ್ಥಿತಿ ಉಂಟಾಗುವದು. ಅಂದರೆ ಯಾವ ವಾಕ್ಯಾರ್ಥಕ್ಕೂ ವ್ಯವಸ್ಥೆಯು ಆಗದೇ ಹೋಗುವುದು.

ಬ್ರಹ್ಮನಿಗೆ ನಿರ್ವಿಶೇಷತ್ವವನ್ನು ಹೇಳುವುದರಿಂದ ಪದಗಳಿಗೆ ಪೌನರುಕ್ತ್ಯಾದಿ ದೋಷವು ಬರುವುದಷ್ಟೇ ಅಲ್ಲ, ಯಾವುದೊಂದು ಪದಕ್ಕೂ ಬ್ರಹ್ಮನಲ್ಲಿ ಪ್ರವೃತ್ತಿಯೇ

ಆಗುವುದಿಲ್ಲ ಎಂದು ಹೇಳುತ್ತಾರೆ –

**ಯದಿ ಸತ್ಯೇ ವಿಶೇಷೋ ನ ನ ತದುಕ್ತಿರ್ಭವೇತ್ತದಾ ।।೧೮೩।।**

**ಲಕ್ಷ್ಯತೇ ಚೇತ್ತೇನ ಲಕ್ಷ್ಯಮಿತ್ಯಪಿ ಸ್ಯಾದ್ವಿಶೇಷಿತಾ ।**

ಸತ್ಯ ಪದದಲ್ಲಿ ವಿಶೇಷವು ಇಲ್ಲವೆಂದಾದರೆ ಆಗ ವಿಶೇಷದ ಉಕ್ತಿಯೂ ಆಗಲಾರದು. ಏಕೆಂದರೆ ಗುಣಕರ್ಮಾದಿ ನಿಮಿತ್ತವನ್ನು ಅವಲಂಬಿಸದೆ ಯಾವ ಶಬ್ದಕ್ಕೂ ಪ್ರವೃತ್ತಿಯಿರುವುದಿಲ್ಲ. ಬ್ರಹ್ಮನು ಶಬ್ದದಿಂದ ವಾಚ್ಯನೆಂದಾಗಿದ್ದರೆ ಈ ಹಿಂದೆ ಹೇಳಿದ ದೋಷವು ಬರುತ್ತಿತ್ತು. ಆದರೆ ಬ್ರಹ್ಮನು ಶಬ್ದದಿಂದ ವಾಚ್ಯನೇ ಅಲ್ಲ, ಮತ್ತೆ ಲಕ್ಷ್ಯನೇ ಎಂದರೆ, ಅದೂ ಕೂಡ ಲಕ್ಷ್ಯತ್ವರೂಪ ವಿಶೇಷತ್ವವೇ ಆಗುವುದು.

ಹಾಗಾದರೆ ಬ್ರಹ್ಮನಿಗೆ ಲಕ್ಷ್ಯತ್ವವೂ ಕೂಡ ಇರುವುದೇ ಇಲ್ಲ. ಲಕ್ಷ್ಯಂ ಎನ್ನುವುದೂ ಕೂಡ ಲಕ್ಷಣಾವೃತ್ತಿಯಿಂದಲೇ ಹೇಳಲ್ಪಡುತ್ತದೆ, ಶಕ್ತಿವೃತ್ತಿಯಿಂದಲ್ಲ ಎಂದರೆ ಹಾಗೆ ಹೇಳಕೂಡದು. ಈ ವಾಕ್ಯದಲ್ಲಿಯೂ ಲಕ್ಷ್ಯ ಶಬ್ದದಿಂದ ಲಕ್ಷ್ಯತ್ವ ರೂಪ ವಿಶೇಷವು ಪ್ರಾಪ್ತವಾಗುತ್ತದೆ. ಆದ್ದರಿಂದ ಲಕ್ಷ್ಯವೇ ಎಂದರೆ –

**ಪುನಃ ಪುನರ್ಲಕ್ಷಣಾಯಾಮಪಿ ಸ್ಯಾದನವಸ್ಥಿತಿಃ ।।೧೮೪।।**

**ಯದ್ಯಭಾವವಿಶೇಷಿತ್ವಂ ಸ್ಯಾದಂಗೀಕೃತಮೇವ ತೇ ।**

**ಅಸಾರ್ವಜ್ಞಾದಿರಾಹಿತ್ಯಮಪ್ಯೇವಂ ತೇ ಭವಿಷ್ಯತಿ ।।೧೮೫।।**

ಮತ್ತೆ ಮತ್ತೆ ಲಕ್ಷಣಾವೃತ್ತಿಯನ್ನು ಆಶ್ರಯಿಸುವುದರಿಂದ ಅನವಸ್ಥೆ ಬರುವುದು. ನಿನ್ನ ಮತದಲ್ಲಿ ಅಭಾವರೂಪ ವಿಶೇಷತ್ವಕ್ಕೆ ಅಂಗೀಕಾರವಿದೆ ಎಂದರೆ ಬ್ರಹ್ಮನಿಗೆ ಅಸರ್ವಜ್ಞತ್ವಾದಿಗಳ ಅಭಾವವೂ ಕೂಡ ನಿನ್ನಿಂದ ಅಂಗೀಕಾರ್ಯವೇ ಆಗಬೇಕು.

ಈ ವಿಭಾಗವು ಬೇಡ. ಬ್ರಹ್ಮನಲ್ಲಿ ಅಸರ್ವಜ್ಞತ್ವಾದಿಗಳ ಅಭಾವವನ್ನು ಅಂಗೀಕರಿಸುತ್ತೇವೆ ಎಂದರೆ –

**ತದಾ ಸಾರ್ವಜ್ಞಮೇವ ಸ್ಯಾದ್ಭಾವಾರ್ಥತ್ವಾನ್ನಞೋರ್ದ್ವಯೋಃ ।**

**ಯದಿ ನೈತಾದೃಶಂ ಗ್ರಾಹ್ಯಮಸುಖತ್ವಾನಿವರ್ತನಾತ್ ।।೧೮೬।।**

**ಅಸತ್ವಾಜ್ಞಾನತಾದೇಶ್ಚ ಸ್ಯಾದಸತ್ವಾದಿಕಂ ತದಾ ।**

ಎರಡು 'ನಞ್'ಗಳನ್ನು ಪ್ರಯೋಗಿಸಿದಾಗ ಭಾವರೂಪವಾದ ಅರ್ಥವು ಬರುವ ಪ್ರಯುಕ್ತ, ಬ್ರಹ್ಮನಲ್ಲಿ ಅಸರ್ವಜ್ಞತ್ವಾಭಾವವನ್ನು ಹೇಳುವುದರಿಂದ ಭಾವರೂಪವಾದ ಸರ್ವಜ್ಞತ್ವವನ್ನೇ ಹೇಳಿದಂತೆ ಆಗುವುದು. ಹೀಗೆ ಅಂಗೀಕರಿಸದೇ ಇದ್ದರೆ ಬಾಧಕವನ್ನು ಹೇಳುತ್ತಾರೆ – ಬ್ರಹ್ಮನಲ್ಲಿ ಶ್ರುತವಾದ ಸರ್ವಜ್ಞತ್ವಾದಿ ಪದವು ಅಸರ್ವಜ್ಞತ್ವಾದಿಗಳ ನಿವೃತ್ತಿಯನ್ನು ಬೋಧಿಸುತ್ತದೆ ಎನ್ನುವ ಪ್ರಮೇಯವನ್ನು

ಅಂಗೀಕರಿಸದಿದ್ದರೆ, ಆಗ ಆನಂದಾದಿ ಪದಗಳೂ ಅಸುಖತ್ವಾದಿಗಳನ್ನು ನಿವರ್ತನೆ ಮಾಡಲಾರವು. ಆನಂದಾದಿ ಪದಗಳಿಂದ ಅಸುಖತ್ವಾದಿಗಳ ನಿವರ್ತನೆಯಾಗದಿದ್ದರೆ ಅಡ್ಡಿಯಿಲ್ಲ. ಆದರಿಂದ ದೋಷವೇನು ಎಂದರೆ – ಬ್ರಹ್ಮನಲ್ಲಿ ಅಸತ್ವಾದಿಗಳು ಪ್ರಸಕ್ತವಾಗಿವೆ. ಅವುಗಳನ್ನು ಹೋಗಲಾಡಿಸುವುದಕ್ಕಾಗಿ ಸತ್ಯಜ್ಞಾನಾದಿ ವಾಕ್ಯಗಳು ಪ್ರವೃತ್ತವಾಗಿವೆ. ಅವುಗಳೂ ಕೂಡ ಅಸತ್ವಾದಿಗಳನ್ನು ನಿವರ್ತನೆ ಮಾಡದಿದ್ದರೆ, ಆಗ ಬ್ರಹ್ಮನಲ್ಲಿ ಪ್ರಸಕ್ತವಾದ ಅಸತ್ವಾದಿಗಳು ತಾತ್ವಿಕವೇ ಎಂದಾಗುವುದು.

**ಅನೃತಾದಿವಿರೋಧಿತ್ವಂ ಯದ್ಯಸ್ಯಾಭ್ಯುಪಗಮ್ಯತೇ ।।೧೮೭।।**

**ಅನೈಶ್ವರ್ಯವಿರೋಧಿತ್ವಮಪ್ಯೇವಂ ಕಿಂ ನಿವಾರ್ಯತೇ ।**

ಸತ್ಯತ್ವಾದಿ ಪದಗಳಿಗೆ ಅಸತ್ಯತ್ವಾದಿಗಳಿಂದ ವಿರೋಧಿತ್ವವು ಅಂಗೀಕರಿಸಲ್ಪಡುವ ಪಕ್ಷದಲ್ಲಿ , ಅದೇ ರೀತಿ ಸರ್ವೈಶ್ವರ್ಯಾದಿ ಪ್ರತಿಪಾದಕ ಪದಗಳಿಗೆ ಅನೈಶ್ವರ್ಯಾದಿ ವಿರೋಧಿತ್ವವೂ ಕೂಡ ಏಕೆ ನಿವಾರಿಸಲ್ಪಡುತ್ತದೆ?

ಉಪಸಂಹಾರ ಮಾಡುತ್ತಾರೆ –

**ಅಖಂಡಖಂಡನಾದೇವಂ ವಿಶೇಷೋಽಖಂಡವಾದಿನಾ ।।೧೮೮।।**

**ಖಂಡಿತೇನಾಪಿ ಮನಸಾ ಸ್ವೀಕಾರ್ಯೋಽನನ್ಯಥಾಗತೇಃ ।**

ಹೀಗೆ ಅಖಂಡವಾದವನ್ನು ಅಂದರೆ ಐಕ್ಯವಾದವನ್ನು ಖಂಡಿಸಿದ್ದರಿಂದ ಅಖಂಡವಾದಿಯೂ ಕೂಡ, ಬೇರೆ ಗತಿಯಿಲ್ಲದಿರುವುದರಿಂದ, ಉತ್ಪ್ರೇಕ್ಷೆಯಿಲ್ಲದ ಮನಸ್ಸಿನಿಂದ ವಿಶೇಷವನ್ನು ಸ್ವೀಕರಿಸಲೇಬೇಕು.

ಈಗ ಭೇದಾಭೇದವಾದಿಯೂ ಕೂಡ ವಿಶೇಷವನ್ನು ಅಂಗೀಕರಿಸಲೇಬೇಕು ಎನ್ನುತ್ತಾರೆ –

**ಅಖಂಡಖಂಡವಾದಿಭ್ಯಾಂ ಖಂಡಾಖಂಡೇನ ಚೈವ ತತ್ ।।೧೮೯।।**

**ಮಹಾದರೇಣ ಶಿರಸಿ ವಿಶೇಷೋ ಧಾರ್ಯ ಏವ ಹಿ ।**

ಯಾವ ಕಾರಣದಿಂದ ಐಕ್ಯವಾದಿ ಹಾಗೂ ಭೇದವಾದಿ ಇಬ್ಬರಿಂದಲೂ ವಿಶೇಷವು ಅಂಗೀಕಾರ್ಯವಾದುದೋ, ಅದೇ ಕಾರಣದಿಂದಲೇ ಭೇದಾಭೇದವಾದಿಯಿಂದಲೂ ಕೂಡ ವಿಶೇಷವು ಪರಮಾದರದಿಂದ ಶಿರಸ್ಸಿನಲ್ಲಿ ಧಾರ್ಯವೇ ಆಗಿದೆ.

ಮೇಲೆ ಹೇಳಿದ ಪ್ರಕಾರವಾಗಿ ಉಭಯವ್ಯಪದೇಶವು ಬೇರೆ ರೀತಿಯಿಂದ ಕೂಡುವುದಿಲ್ಲವಾದ್ದರಿಂದ, ಭಗವಂತನಿಗೂ ಅವನ ಧರ್ಮಗಳಿಗೂ ಸವಿಶೇಷವಾದ ಅತ್ಯಂತ ಅಭೇದವೇ ಇರುವುದೆಂದು ಸಿದ್ಧವಾಗುವುದು.

ಹಾಗಾದರೆ ಇದು ಸೂತ್ರಕಾರರ ಅಭಿಪ್ರಾಯವಾಗಲು ಸಾಧ್ಯವಿಲ್ಲ. ಏಕೆಂದರೆ

ಸೂತ್ರಕಾರರು ಇಲ್ಲಿ ನೀಡಲಾಗಿರುವ ಅಹಿಕುಂಡಲಾದಿ ಮೂರು ದೃಷ್ಟಾಂತಗಳು ಈ ಅಭಿಪ್ರಾಯಕ್ಕೆ ಅನುಗುಣವಾಗಿರುವುದಿಲ್ಲ, ಎಂದು ಆಶಂಕಿಸಿದರೆ –

**ನಿದರ್ಶನತ್ರಯೇಣಾತೋ ಭಗವಾನತ್ಯಭಿನ್ನತಾಮ್ ॥೯೯೦॥**

**ಗುಣಾನಾಮಾದರೇಣಾಹ ...................... ।**

ಹೀಗೆ ಉಭಯವ್ಯಪದೇಶವು ಬೇರೆ ರೀತಿಯಿಂದ ಕೂಡುವುದಿಲ್ಲ ಎನ್ನುವ ಅರ್ಥಾಪತ್ತಿ ರೂಪವಾದ ಅನುಮಾನದಿಂದ ಭಗವಂತನಿಗೂ ಅವನ ಗುಣಗಳಿಗೂ ಸವಿಶೇಷವಾದ ಅತ್ಯಂತಾಭೇದವು ಸಿದ್ಧವಾದುದರಿಂದ, ಭಗವಾನ್ ವೇದವ್ಯಾಸರು ಉಭಯವ್ಯಪದೇಶಾತ್ತ್ವಹಿಕುಂಡಲವತ್, ಪ್ರಕಾಶಾಶ್ರಯವದ್ವಾ ತೇಜಸ್ತ್ವಾತ್, ಪೂರ್ವವದ್ವಾ, ಈ ಪ್ರಕಾರವಾಗಿ ಮೂರು ದೃಷ್ಟಾಂತಗಳಿಂದ ಭಗವದ್ಗುಣಗಳಿಗೆ ಸವಿಶೇಷವಾದ ಅತ್ಯಂತಾಭೇದವನ್ನು ವಿಶ್ವಾಸದಿಂದ ಹೇಳಿದರು.

ಹೀಗೆ ಸಾಕ್ಷಾತ್ತಾಗಿ ಅಧಿಕರಣಾರ್ಥವನ್ನು ವ್ಯಾಖ್ಯಾನ ಮಾಡಿ, ಈಗ ಅನುಷಂಗ ಸಿದ್ಧವಾದ (ಉಕ್ತಾರ್ಥವನ್ನು ಅನುಸರಿಸಿ ಸಿದ್ಧವಾದ ಅರ್ಥವನ್ನು) ತೋರಿಸುತ್ತಾರೆ –

**............................ ತಚ್ಚ ನಾಭಿಹಿತಾನ್ವಯಃ ।**

ಭಗವಂತನ ಧರ್ಮಗಳಿಗೆ ಸವಿಶೇಷಾಭೇದವನ್ನು ಸಮರ್ಥಿಸಿರುವುದರಿಂದಲೇ ಅಭಿಹಿತಾನ್ವಯವಾದವು (ಪದಗಳಿಂದ ಹೇಳಲ್ಪಟ್ಟ ಪದಾರ್ಥಗಳಿಂದ ಅನ್ವಯಜ್ಞಾನ ವಾಗುವುದು ಎನ್ನುವ ವಾದ) ಕೂಡುವುದಿಲ್ಲ.

ಅಭಿಹಿತಾನ್ವಯವಾದವು ಅಯುಕ್ತವೆಂದಾದರೆ ಸೂತ್ರಕಾರರಿಗೆ ಅಭಿಮತವಾದ ಅರ್ಥವು ಯಾವುದು? ಉಪಾಯವಿಲ್ಲದೆ ಅನ್ವಯಜ್ಞಾನವು ಸಂಭವಿಸುವುದಿಲ್ಲ. ಅನ್ವಿತಾಭಿಧಾನವೆಂದು ಹೇಳುತ್ತೇವೆ ಎಂದರೆ, ಅಲ್ಲಿಯೂ ವಿಶೇಷವಿದೆ ಎಂಬ ಅಭಿಪ್ರಾಯದಿಂದ ಹೇಳುತ್ತಾರೆ –

**ಯದಾಶೇಷವಿಶೇಷಾಣಾಮುಕ್ತಿಃ ಸಾಮಾನ್ಯತೋ ಭವೇತ್ ॥೯೯೧॥**

**ಪದೈಕೇನಾಪ್ಯುತ್ತರೇಣ ವಿಶೇಷಾವಗತಿರ್ಭವೇತ್ ।**

ಎಲ್ಲ ವಿಶೇಷಣಗಳಿಂದ ಅನ್ವಿತವಾದ ಪದಾರ್ಥಕ್ಕೆ ಉಕ್ತಿಯು ಸಾಮಾನ್ಯವಾಗಿ ಪದಗಳಲ್ಲಿ ಮುಖ್ಯವಾದ ಮೊದಲನೆಯ ಪದದಿಂದ ಆಗುವುದಾದರೂ, ಆಮೇಲಿನ ಪದಗಳಿಂದ ವಿಶೇಷವಾದ ಅನ್ವಯಜ್ಞಾನವು ಆಗುವುದು.

ಹಿಂದೆ ಉಕ್ತವಾದ 'ತಚ್ಚ ನಾಭಿಹಿತಾನ್ವಯಃ' ಎನ್ನುವಲ್ಲಿ 'ತತ್' ಶಬ್ದದಿಂದ ಪರಾಮರ್ಶಿತವಾದ ಹೇತುವನ್ನು ಹೇಳುತ್ತಾರೆ –

**ಯತೋಽಶೇಷವಿಶೇಷಾಣಾಂ ವಸ್ತುನಾಸ್ತ್ಯೇವ ಚೈಕತಾ ॥೯೯೨॥**

**ಅತಃ ಸಾಮಾನ್ಯತೋ ಜ್ಞಾತಃ ಪದಾಂತರಬಲಾತ್ಪುನಃ ।**

**ಭವೇದ್ವಿಶೇಷತೋ ಜ್ಞಾತಸ್ತೇನ ಸ್ಯಾದನ್ವಿತೋಕ್ತಿತಾ ॥೯೩॥**

ಯಾವ ಕಾರಣದಿಂದ ಎಲ್ಲ ವಿಶೇಷಣಗಳಿಗೆ ಬ್ರಹ್ಮನಿಂದ ಏಕತ್ವವೂ ವಿಶೇಷವೂ ಇದ್ದೇ ಇರುವುದೋ, ಆದಕಾರಣ ಒಂದೊಂದು ಪದದಿಂದಲೂ ಸಾಮಾನ್ಯವಾದ ಅನ್ವಿತದಿಂದ ತಿಳಿಯಲ್ಪಟ್ಟ ಅರ್ಥವು ಮತ್ತೆ ಇತರ ಪದಗಳ ಸನ್ನಿಧಾನ ಬಲದಿಂದ ವಿಶೇಷವಾದ ಅನ್ವಯದಿಂದ ತಿಳಿಯಲ್ಪಡುವುದು. ಆದ್ದರಿಂದ ಪದಗಳಿಗೆ ಅನ್ವಿತಾಭಿಧಾಯಿತ್ವವು ಉಪಪನ್ನವಾಗುವುದು.

ಉಭಯವ್ಯಪದೇಶಾತ್ ಎಂಬ ಅಧಿಕರಣದಲ್ಲಿ ಧರ್ಮಗಳಿಗೆ ಬ್ರಹ್ಮನೊಂದಿಗೆ ಸವಿಶೇಷಾಭೇದವು ಹೇಳಲ್ಪಡುವುದು ಎಂದಾದ ಪಕ್ಷದಲ್ಲಿ, ಅನ್ವಿತಾಭಿಧಾನದ ಸಂಭವನೀಯತೆಯನ್ನು ಹೇಳುವುದು ಈ ಅಧಿಕರಣದ ಸಿದ್ಧಾಂತವಲ್ಲ. ಏಕೆಂದರೆ ಸಂಭವನೀಯತೆಯು ಸಿದ್ಧಿಯೆನಿಸದು, ಹೀಗೆ ಆಶಂಕಿಸಿದರೆ ಅನುಭವದಿಂದಲೂ ಈ ಅರ್ಥವು ನಿಶ್ಚಿತವಾಗಿದೆ ಎನ್ನುತ್ತಾರೆ –

**ಸ್ವಾರ್ಥ ಏವಾನ್ವಿತೋ ಯಸ್ಮಾತ್ಕೇನಚಿತ್ತದ್ವಿಶೇಷತಃ ।**

**ಅನೇನೇತಿ ತದುಕ್ತ್ಯೈವ ಜ್ಞಾಯತೇಽನುಭವೇನ ಹಿ ॥೯೪॥**

ಸಾಮಾನ್ಯವಾಗಿ ಪದಗಳು ಪ್ರತ್ಯೇಕವಾಗಿ ಅನ್ವಿತಾಭಿಧಾಯಿಗಳೇ ಆಗಿರುತ್ತವೆ. ಅಂದರೆ ಯಾವುದರಿಂದಲಾದರೂ ಸಂಬದ್ಧವಾಗಿಯೇ ಸ್ವಾರ್ಥವನ್ನು ತಿಳಿಸಿ ಕೊಡುತ್ತವೆ. ವಿಶೇಷವಾಗಿ ಅನ್ವಿತಾರ್ಥ ಪ್ರತೀತಿಯು ಪರಸ್ಪರ ಸನ್ನಿಧಾನರೂಪವಾದ ಪದಗಳ ಶಕ್ತಿಯಿಂದ ಆಗುತ್ತದೆ ಎನ್ನುವುದು ಅನುಭವದಿಂದ ಸಿದ್ಧವಾಗಿದೆ.

ಅಭೇದದಿಂದ ವಿಶೇಷಾಭಿಧಾನವು ಪ್ರಾಪ್ತವಾಗುವುದು ಎನ್ನುವುದು ಅನುಭವಕ್ಕೆ ವಿರುದ್ಧವಾದುದರಿಂದ ಅಯುಕ್ತವು. ಆದ್ದರಿಂದ ವಿಶೇಷವನ್ನು ಕಲ್ಪನೆ ಮಾಡಬೇಕು ಎಂದು ಭಾವ. ಅನುಭವವು ಹೇಗಿದೆಯೋ ಹಾಗೆಯೇ ಸ್ವೀಕಾರ ಮಾಡಬೇಕು ಎಂದಿರುವುದರಿಂದ, ಇದರಲ್ಲಿ ಯಾವುದೇ ಅತಿಪ್ರಸಂಗವೂ ಇರುವುದಿಲ್ಲ.

ಅನ್ವಿತಾಭಿಧಾನವನ್ನು ಅಂಗೀಕರಿಸದಿದ್ದರೆ ಬಾಧಕವೇನು ಎಂದು ಹೇಳುತ್ತಾರೆ –

**ಯದ್ಯನನ್ವಿತಮೇವೈತತ್ಪದಂ ಸ್ವಾರ್ಥಂ ವದೇದಿಹ ।**

**ತಥಾನ್ಯಾನ್ಯಪಿ ಸರ್ವಾಣಿ ಕಃ ಕುರ್ಯಾದನ್ವಯಂ ಪುನಃ ॥೯೫॥**

ಸತ್ಯ ಜ್ಞಾನಾದಿ ವಾಕ್ಯಗಳಲ್ಲಿ ಬ್ರಹ್ಮನೇ ಮುಂತಾದ ಮೊದಲನೆಯ ಪದವು ಅನ್ವಿತವಾಗದೆಯೇ ಸ್ವಾರ್ಥವನ್ನು ಹೇಳುವಂತೆಯೇ, ಆಮೇಲಿನ ಎಲ್ಲ ಪದಗಳೂ ಹಾಗೆಯೇ ಅನನ್ವಿತವಾಗಿಯೇ ಸ್ವಾರ್ಥಗಳನ್ನು ಹೇಳಿದರೆ, ಮತ್ತೆ ಅವುಗಳಿಗೆ ಸಮನ್ವಯವನ್ನು ಯಾವನು ಮಾಡಿಯಾನು? ಆದ್ದರಿಂದ ಉತ್ತರೋತ್ತರ ಪದಗಳು ಪ್ರಥಮ ಪದದಿಂದ ಲಬ್ಧವಾದ ಅನ್ವಯದ ಸಹಾಯದಿಂದ ವಿಶೇಷವಾಗಿಯೇ

ಅನ್ವಿತಾರ್ಥವನ್ನು ತಿಳಿಸಿಕೊಡುತ್ತವೆ. ಹೀಗೆ ಅಂಗೀಕರಿಸದಿದ್ದರೆ ಅನ್ವಯಜ್ಞಾನವೇ ಆಗಲಾರದು.

ಮೇಲೆ ಹೇಳಿದ ವಿಷಯವನ್ನೇ ವಿಸ್ತರಿಸುತ್ತಾರೆ –

**ವ್ಯಾಪಾರೋ ನ ಹಿ ಶಬ್ದಸ್ಯ ಪರಃ ಸ್ವಾರ್ಥಪ್ರಕಾಶನಾತ್ ।**

**ಪುಮಾನಪ್ಯೇಕವಾರೋಕ್ತ್ಯಾ ಕೃತಕೃತ್ಯೋ ಯದಾ ಭವೇತ್ ।।೧೯೬।।**

**ಅನ್ವಯಸ್ಯ ಕಥಂ ಜ್ಞಾನಂ ಶಬ್ದಾರ್ಥತ್ವಂ ಯದಾಸ್ಯ ನ ।**

ಈ ಅನ್ವಯಕ್ಕೆ ಪದಾಭಿಧೇಯತ್ವವು ಇಲ್ಲದಿದ್ದರೆ ಅನ್ವಯದ ಜ್ಞಾನವಾದರೂ ಹೇಗೆ ಆದೀತು? ಬೇರೆ ಉಪಾಯವಿಲ್ಲವಾದ್ದರಿಂದ, ಬೇರೆ ಯಾವ ರೀತಿಯಿಂದಲೂ ಆಗಲಾರದು ಎಂದರ್ಥ. ಪದಕ್ಕೆ ಸ್ವಾರ್ಥವನ್ನು ಪ್ರಕಾಶಿಸುವದರ ಹೊರತು ಇತರ ವ್ಯಾಪಾರವು ಇಲ್ಲವೆಂದು ಪ್ರಸಿದ್ಧಿ. ಅಂದರೆ ಪದವು ಅನ್ವಯವನ್ನು ಹೇಳುವುದಿಲ್ಲ. ಆದ್ದರಿಂದ ಪದವು ಅನ್ವಯಜ್ಞಾನಕ್ಕೆ ಉಪಾಯವಾಗಲಾರದು ಎಂದರ್ಥ. ಒಂದು ಸಲ ಹೇಳುವುದರಿಂದಲೇ ಕೃತಾರ್ಥನಾಗುವುದರಿಂದ ವಕ್ತೃವಾದ ಪುರುಷನೂ ಕೂಡ ಅನ್ವಯಜ್ಞಾನಕ್ಕೆ ಉಪಾಯನಾಗಲಾರನು.

ಪದಗಳಿಂದ ಹೇಳಲ್ಪಟ್ಟ ಪದಾರ್ಥಗಳಿಗೆ ಅನ್ವಯಬೋಧಕತ್ವವಿದೆ ಎನ್ನುವ ಪಕ್ಷದಲ್ಲಿ ದೋಷವನ್ನು ಹೇಳುತ್ತಾರೆ –

**ಯದ್ವೈವಾನನ್ವಿತಾರ್ಥಸ್ಯ ವಚನಂ ತ್ಯೈಃ ಪದೈರ್ಭವೇತ್ ।।೧೯೭।।**

**ಅನನ್ವಿತಃ ಸ್ಯಾಚ್ಛಬ್ದಾರ್ಥೋ ನ ತದರ್ಥೋ ಹಿ ಸೋಽನ್ವಯಃ ।**

ಪದಗಳು ಅನನ್ವಿತವೇ ಆದ ಸ್ವಾರ್ಥಗಳನ್ನು ಮಾತ್ರ ಪ್ರತಿಪಾದಿಸಿ ನಿವೃತ್ತಿಯನ್ನು ಹೊಂದುತ್ತವೆ. ಅನಂತರದಲ್ಲಿ ಪದಾರ್ಥಗಳೇ ಆಕಾಂಕ್ಷಾದಿಗಳನ್ನು ಹೊಂದಿ ಅನ್ವಯವನ್ನು ತಿಳಿಸಿ ಕೊಡುತ್ತವೆ ಎಂದು ಹೇಳುವುದಾದರೆ, ಆಗ ಶಬ್ದಾರ್ಥವು ಅನನ್ವಿತವೇ ಆಗುವುದು. ಏಕೆಂದರೆ ಪದಾರ್ಥಗಳಿಂದ ಹೇಳಲ್ಪಟ್ಟ ಆ ಅನ್ವಯವು ಆ ಪದಗಳ ಅರ್ಥವಲ್ಲ. ಹಾಗಿದ್ದರೆ ಪ್ರತ್ಯಕ್ಷಕ್ಕೆ ಕಂಡ ಧೂಮದಿಂದ ಅನುಮಿತವಾದ ಅಗ್ನಿಗೆ ಪ್ರತ್ಯಕ್ಷ ವಿಷಯತ್ವವು ಬರಬೇಕಾದೀತು.

ಹಾಗಾದರೆ ವಾಕ್ಯಕ್ಕೆ ಅನ್ವಯಬೋಧಕತ್ವ ಶಕ್ತಿಯಿರಲಿ ಎಂದರೆ –

**ನಿರಾಕಾಂಕ್ಷ್ಯಪದಾನ್ಯೇವ ವಾಕ್ಯಮಿತ್ಯುಚ್ಯತೇ ಬುಧೈಃ ।।೧೯೮।।**

**ತತ್ತದರ್ಥಾಭಿಧಾನೇನ ಸ್ಯಾನ್ನಿರಾಕಾಂಕ್ಷತಾ ಚ ಸಾ ।**

**ಅಪೂರ್ತೇಸ್ತಾವದರ್ಥಾನಾಮಾಕಾಂಕ್ಷಾ ಪೂರ್ವಮಿಷ್ಯತೇ ।।೧೯೯।।**

ಆಕಾಂಕ್ಷಾರಹಿತವಾದ ಪದಗಳೇ ವಾಕ್ಯವೆಂಬುದಾಗಿ ಜ್ಞಾನಿಗಳು ಹೇಳುತ್ತಾರೆ.

ಪದಗಳನ್ನು ಬಿಟ್ಟು ವಾಕ್ಯವಿಲ್ಲ ಎಂದರ್ಥ. ಪದಗಳು ಜಿಜ್ಞಾಸಿತವಾದ ಅರ್ಥಗಳನ್ನು ಬೋಧಿಸುತ್ತಿದ್ದಂತೆಯೇ ಜಿಜ್ಞಾಸೆಯಿಂದ ನಿವೃತ್ತವಾಗುತ್ತವೆ. (ಜಿಜ್ಞಾಸಾ ಎಂದರೆ ಆಕಾಂಕ್ಷೆ, ನಿರಾಕಾಂಕ್ಷತಾ ಎಂದರೆ ನಿವೃತ್ತವಾದ ಜಿಜ್ಞಾಸಾ). ಅದು ಪದಗಳ ಸ್ವಭಾವವೇ ಆಗಿದೆ. ಗವಾದಿ ಪದಗಳನ್ನು ಹೇಳುವುದಕ್ಕೆ ಮುಂಚೆ ಆನಯ ಎಂದು ಹೇಳಿದಾಗ, ಯಾವುದನ್ನು ತರುವುದು ಇತ್ಯಾದಿಯಾಗಿ ಯಾವ ಜಿಜ್ಞಾಸೆಯು ಇರುವುದೋ ಅದು, ಗವಾದಿ ಪದಗಳನ್ನು ಹೇಳುವವರೆಗೆ ನಿವೃತ್ತಿಯನ್ನು ಹೊಂದುವುದಿಲ್ಲ. ಆನಂತರವೇ ಆ ಜಿಜ್ಞಾಸೆಯು ನಿವೃತ್ತವಾಗುವುದು.

ಇನ್ನು ವಾಕ್ಯಾಂತ್ಯವಾದ ವರ್ಣವೂ, ವರ್ಣಮಾಲೆಯೂ ಇವೆರಡೂ ಅನ್ವಯ ಬೋಧಕಗಳು ಎನ್ನುವ ಪಕ್ಷವು ಅತಿ ದುರ್ಬಲವಾದ್ದರಿಂದ ಅದನ್ನು ದೂಷಿಸಲಿಲ್ಲ. ಜಿಜ್ಞಾಸಾಧಿಕರಣ ವ್ಯಾಖ್ಯಾನದ 'ಶಕ್ತಿಶ್ಚೈವಾನ್ವಿತೇ ಸ್ವಾರ್ಥೇ' ಎನ್ನುವ ಶ್ಲೋಕದಲ್ಲಿ 'ಗೌರವಂ ಕಲ್ಪನೇಽನ್ಯಥಾ' ಎನ್ನುವ ಪದವ್ಯಾಖ್ಯಾನದ ಸಂದರ್ಭದಲ್ಲಿ ಇವೆರಡು ಪಕ್ಷಗಳ ಅತಿಮಂದತ್ವವನ್ನು ನಿರೂಪಿಸಲಾಗಿದೆ.

ಹಾಗಾದರೆ ವರ್ಣಪದ ವಿಭಾಗವಿಲ್ಲದಿರುವ ಸ್ಫೋಟಾಖ್ಯವಾದ ವಾಕ್ಯವೇ ಅನ್ವಯವನ್ನು ಪ್ರತಿಪಾದಿಸುತ್ತದೆ. ಪದಗಳಾದರೋ ಅದಕ್ಕೆ ಅಭಿವ್ಯಂಜಕಗಳಾಗಿ ಉಪಯುಕ್ತವಾಗುತ್ತವೆ ಎಂದು ಹೇಳಿದರೆ –

**ಕರ್ಮಕರ್ತೃಕ್ರಿಯಾಣಾಂ ತು ಪೂರ್ತೌ ಕೋಽನ್ಯೋಽನ್ವಯೋ ಭವೇತ್ ।**

ಕರ್ಮ–ಕರ್ತೃ–ಕ್ರಿಯೆಗಳನ್ನು, ಅಂದರೆ ಪರಸ್ಪರ ಸಂಸೃಷ್ಟಗಳಾದ ಜಿಜ್ಞಾಸಿತ ಪದಾರ್ಥಗಳನ್ನು ಪದಗಳಿಂದ ಪೂರ್ತಿಗೋಳಿಸುತ್ತಿರಲು, ಬೇರೆ ಯಾವ ಅನ್ವಯವು ಪ್ರತಿಪಾದಿಸಲು ಯೋಗ್ಯವಾಗುವುದು?

ಇದರ ಅಭಿಪ್ರಾಯವೇನೆಂದರೆ – ಸ್ಫೋಟವು ಅನ್ವಯವನ್ನು ಪ್ರತಿಪಾದಿಸುತ್ತದೆ ಎಂದು ಹೇಳುವವನು ಸ್ಫೋಟವಿದೆ ಎನ್ನಲು ಪ್ರಮಾಣವನ್ನು ಹೇಳಬೇಕು. ಅನ್ವಯ ಜ್ಞಾನವು ಬೇರೆ ರೀತಿಯಿಂದ ಕೂಡುವುದಿಲ್ಲ ಎಂದು ಹೇಳುವುದು ಸರಿಯಲ್ಲ. ಪದಗಳಿಗೇನೆ ಸಂಸೃಷ್ಟಾರ್ಥ ಪ್ರತಿಪಾದಕತ್ವವು ಕೂಡುತ್ತದೆ. ಅದಕ್ಕಿಂತ ಬೇರೆಯಾದ ಅನ್ವಯವನ್ನು ಹೇಳಬೇಕಾಗಿಲ್ಲವಾದ್ದರಿಂದ ಸ್ಫೋಟಾನ್ವೇಷಣೆಯನ್ನು ಏತಕ್ಕಾಗಿ ಮಾಡಬೇಕು?

ಹೀಗೆ ಅಂಗೀಕರಿಸದೇ ಇದ್ದರೆ ಬಾಧಕವನ್ನು ಹೇಳುತ್ತಾರೆ –

**ಅಪೂರ್ತಿಶ್ಚೇತ್ಪದೈರುಕ್ತಃ ಕಿಂ ನೃಶೃಂಗೇಣ ಪೂರ್ಯತೇ ॥೨೦೦॥**

ಪ್ರಮಿತವಾದ ಪದಗಳಿಂದ ಅನ್ವಯವನ್ನು ಹೇಳದೇ ಇದ್ದರೆ, ಮನುಷ್ಯನ ಕೋಡಿಗೆ ಸದೃಶವಾದ, ಅಂದರೆ ಅಪ್ರಾಮಾಣಿಕವಾದ, ಸ್ಫೋಟದಿಂದ ಅನ್ವಯವು ಹೇಳಲ್ಪಡುವುದೇನು?

ಹಾಗಾದರೆ ಪದಗಳೇ ಪದಾರ್ಥಗಳ ಪ್ರತಿಪಾದನೆಗೆ ಸಹಕಾರಿಯಾದ ಅವಾಂತರ ವ್ಯಾಪಾರವುಳ್ಳವುಗಳಾಗಿ ಅನ್ವಯವನ್ನು ತಿಳಿಸಿಕೊಡುತ್ತವೆ ಎಂದರೆ ಅದು ಸರಿಯಲ್ಲ. ಏಕೆಂದರೆ ಹಾಗೆ ಒಪ್ಪಿದರೆ ಪದಗಳಿಗೆ ವಿರಮ್ಯ ವ್ಯಾಪಾರವು ಬರಬೇಕಾಗುವುದು. ಆಗಲಿ, ಅದರಿಂದ ದೋಷವೇನು ಎಂದು ಕೇಳಿದರೆ –

**ವ್ಯಾಪಾರಶ್ಚೇತ್ತ್ವನಸ್ತೇಷಾಮನುಕ್ತಾವಪಿ ಕಿಂ ನ ಸಃ ।**

**ಉಕ್ತೇ ಬುದ್ಧಿಸ್ಥತಾಹೇತೋರ್ಯದಿ ವ್ಯಾಪಾರ ಇಷ್ಯತೇ ॥೨೦೧॥**

ಚೇತನಗಳಲ್ಲಿ ಮಾತ್ರ ಕಂಡುಬರುವ ವಿರಮ್ಯ ವ್ಯಾಪಾರವನ್ನು ಅಚೇತನವಾದ ಪದಗಳಿಗೂ ಅಂಗೀಕರಿಸುವುದಾದರೆ, ಆಗ ನಾವು ಕೇಳುತ್ತೇವೆ – ಆ ಪದಗಳನ್ನು ಹೇಳದೇ ಇದ್ದರೂ ಪದಾರ್ಥಗಳನ್ನು ಪ್ರತಿಪಾದಿಸುವ ವಿಷಯದಲ್ಲಿ ವ್ಯಾಪಾರವು ಏಕೆ ಆಗುವುದಿಲ್ಲ? ಪದಗಳು ಬುದ್ಧಿಸ್ಥತ್ವ ಹೇತುವಿನಿಂದಲೇ (ಜ್ಞಾತಗಳಾಗಿಯೇ) ಜ್ಞಾನವನ್ನು ಹುಟ್ಟಿಸುತ್ತವೆ. ಅದಕ್ಕೆ ವಚನವು ಅವಶ್ಯಕ. ಹೇಳದೇ ಇದ್ದರೆ ಜ್ಞಾತವೇ ಆಗುವುದಿಲ್ಲವಾದ್ದರಿಂದ ವ್ಯಾಪಾರವೂ ಇರುವುದಿಲ್ಲ. ಹೀಗೆ ಅವನು ಉತ್ತರಿಸಿದರೆ ಆಗ ಮತ್ತೆ ಸಿದ್ಧಾಂತಿಯು ಪ್ರಶ್ನಿಸುತ್ತಾನೆ –

**ಬುದ್ಧಿಸ್ಥತ್ವಾಯ ಯತ್ನಂ ನ ಕಥಂ ಕುರ್ಯುಃ ಪುರೈವ ಚ ।**

**ಪುರುಷಾಧೀನತಾ ತೇಷಾಂ ಯದಿ ಪಶ್ಚಾಚ್ಚ ಸಾ ಸಮಾ ॥೨೦೨॥**

ಬುದ್ಧಿವಿಷಯತ್ವಕ್ಕಾಗಿ ಯಾವ ಪದಗಳ ಉಚ್ಚಾರಣೆಯು ಅವಶ್ಯಕವಾಗಿದೆಯೋ ಆ ಪದಗಳು ಹೇಳುವುದಕ್ಕಿಂತ ಮೊದಲೇ ಪ್ರಯತ್ನವನ್ನು ಹೇಗೆ ಮಾಡಲಾರವು ? ಅಂದರೆ ಸುಮ್ಮನೆ ಕುಳಿತಿರುವವನನ್ನು ಉಚ್ಚಾರಣೆಗಾಗಿ ಆ ಪದಗಳು ಏಕೆ ಪ್ರೇರಿಸುವುದಿಲ್ಲ? 'ಪುರಷಾಧೀನತಾ' ಇತ್ಯಾದಿ ವಚನದಿಂದ ಅದಕ್ಕೆ ಉತ್ತರವನ್ನು ಶಂಕಿಸುತ್ತಾರೆ – ಆ ಪದಗಳು ಚೇತನಗಳಾಗಿದ್ದರೆ ಹಾಗೆ ಹೇಳಬಹುದಿತ್ತು. ಆದರೆ ಅವುಗಳು ಚೇತನನಾದ ಪುರುಷನ ಅಧೀನವಾಗಿವೆ. ವಕ್ತೃ ಪುರುಷನು ಯಾವಾಗ ಪದಗಳನ್ನು ಉಚ್ಚಾರಣೆಯಿಂದ ಹೊರಹಾಕುವನೋ ಆಗ ಅವುಗಳು ಶ್ರೋತೃವಿನ ಬುದ್ಧಿಯ ವಿಷಯವಾಗಿ ಪದಾರ್ಥ ಪ್ರತಿಪಾದನಾದಿ ವ್ಯಾಪಾರಕ್ಕೆ ಕಾರಣವಾಗುತ್ತವೆ. ಆಮೇಲೆ ಅನ್ವಯವನ್ನು ತಿಳಿಸಿಕೊಡುವುದರಲ್ಲಿ ಪದಗಳಿಗೆ ಪುರುಷಾಧೀನತ್ವವು ಸಮಾನವಾದುದು. ಪದಗಳು ತಾವು ಏನೂ ಮಾಡುವುದಿಲ್ಲ. ಪುರಷಾಧೀನವಾಗಿ ಅವುಗಳಿಗೆ ವಿರಮ್ಯ ವ್ಯಾಪಾರವು ಕೂಡುವುದು ಎಂದರ್ಥ.

ಹಾಗಾದರೆ ಅನ್ವಯ ಜ್ಞಾನಕ್ಕೆ ಶ್ರೋತೃ ಪುರುಷನು ಕರ್ತನೇ. ಅನನ್ವಿತವಾದ ಅರ್ಥವನ್ನು ಹೇಳುವ ಪದಗಳೇ ಕರಣಗಳು. ಅವುಗಳಿಂದ ತಿಳಿಯತಕ್ಕ ಅರ್ಥಗಳ ಅನ್ವಯಜ್ಞಾನಕ್ಕಾಗಿ ಶ್ರೋತೃ ಪುರುಷನು ಪ್ರಯತ್ನ ಮಾಡುತ್ತಾನೆ ಎಂದರೆ –

**ಪುಮಾನೇವಾನ್ವಯಾಯೈಷಾಂ ಯದಿ ಪಶ್ಚಾದ್ವಿಚೇಷ್ಟತೇ ।**

**ಅನನ್ವಿತಾಭಿಧಾನಾನಾಂ ಸ ಏವಾರ್ಥಾಂತರೋಕ್ತಿಷು ।।೨೦೩।।**

**ಯತತಾಂ ಶಬ್ದಶಕ್ತಿಶ್ಚೇತ್ತತ್ರ ನೈವಾನ್ವಯೇ ಕಥಮ್ ।**

ಅನ್ವಯಜ್ಞಾನಕ್ಕಾಗಿಯೇ ಪದಗಳಿಂದ ಪದಾರ್ಥಸ್ಮರಣೆಯಾದ ಮೇಲೆ ಅನನ್ವಿತ ವಾದುದನ್ನೂ ಹೇಳುವ ಈ ಪದಗಳ ಸಹಾಯದಿಂದ ಆ ಪುರುಷನೇ ವ್ಯಾಪಾರ ಮಾಡುತ್ತಾನೆ ಎಂದಾದರೆ, ಆ ಪುರುಷನೇ ಅರ್ಥಾಂತರ ವಿಷಯಕವಾದ ಉಕ್ತಿಗೆ ಸಂಬಂಧಿಸಿದ ಕಾರ್ಯಜ್ಞಾನಗಳಲ್ಲಿ ಪ್ರಯತ್ನಿಸಲಿ. ಅಂದರೆ ಅನ್ವಯವನ್ನು ಹೇಳದೇ ಇದ್ದ ಪದಗಳಿಂದಲೂ ಅನ್ವಯಜ್ಞಾನವು ಆಗುವುದಾದರೆ ಯಾವದೋ ಪದದಿಂದ ಬೇರೆ ಯಾವುದೋ ಪದಾರ್ಥದ ಜ್ಞಾನವು ಆಗಬೇಕಾಗುವುದು ಎಂದರ್ಥ. ಅಂದರೆ ಗವಾದಿ ಪದಗಳಿಂದ ಅಶ್ವಾದಿಗಳು ಪ್ರತಿಪಾದಿಸಲ್ಪಡಲಿ ಎಂದು ಭಾವ. ಹಾಗೆ ಹೇಳಕೂಡದು. ಏಕೆಂದರೆ ಗವಾದಿ ಪದಗಳಿಗೆ ಅಶ್ವಾದಿಗಳಲ್ಲಿ ಶಕ್ತಿಯೇ ಇಲ್ಲ ಎಂದರೆ , ಅನ್ವಯಜ್ಞಾನದ ವಿಷಯದಲ್ಲಿಯೂ ಹಾಗೆಯೇ. ಅಂದರೆ ಅನ್ವಯದಲ್ಲಿ ಶಕ್ತಿಯಿಲ್ಲದಿರುವ ಈ ಪದಗಳಿಂದ ಅನ್ವಯಜ್ಞಾನಕ್ಕಾಗಿ ಯಾರಾದರೂ ಹೇಗೆ ಪ್ರಯತ್ನ ಮಾಡುವರು?

'ಯದ್ಯನನ್ವಿತಂ' ಇತ್ಯಾದಿಗಳಿಂದ ಹೇಳಲ್ಪಟ್ಟ ಅರ್ಥವನ್ನು ಉಪಸಂಹಾರ ಮಾಡುತ್ತಾರೆ –

**ತತ್ಕಲ್ಪನಾಗುರುತ್ವಾದಿದೋಷತೋಽಭಿಹಿತಾನ್ವಯಃ ।।೨೦೪।।**

**ಅನುಭೂತಿವಿರುದ್ಧಶ್ಚ ತ್ಯಾಜ್ಯ ಏವ ಮನೀಷಿಭಿಃ ।**

ಈ ಪ್ರಕಾರವಾಗಿ ಕಲ್ಪನಾಗೌರವಾದಿ ದೋಷದಿಂದ ಕೂಡಿದ ಅಭಿಹಿತಾನ್ವಯ ಮೊದಲಾದ ಪಕ್ಷಗಳೆಲ್ಲವೂ ಅನುಭವಕ್ಕೆ ವಿರುದ್ಧವಾದುದರಿಂದ ಜ್ಞಾನಿಗಳಿಂದ ಬಿಡಲಿಕ್ಕೆ ಅರ್ಹವೇ ಆಗಿವೆ.

ಅನುಭವ ವಿರೋಧವು ಹೇಗೆ ಎಂದರೆ –

**ಕರ್ತೃಶಬ್ದೇ ಹ್ಯಭಿಹಿತೇ ಧರ್ಮಸಾಮಾನ್ಯವೇದನಾತ್ ।।೨೦೫।।**

**ವಿಶೇಷಧರ್ಮಮನ್ವಿಚ್ಛನ್ ಕಿಮಿತ್ಯೇವ ಹಿ ಪೃಚ್ಛತಿ ।**

ಕರ್ತೃವಾಚಕ ಶಬ್ದವನ್ನು ಪ್ರಯೋಗಿಸುತ್ತಿರಲು ಅದನ್ನು ಕೇಳಿದ ಪುರುಷನು ಯಾವುದನ್ನು ಎಂದು ಪಚನಾದಿ ವಿಶೇಷ ಧರ್ಮಜ್ಞಾನವನ್ನು ಅಪೇಕ್ಷಿಸಿಯೇ ಪ್ರಶ್ನೆ ಮಾಡುತ್ತಾನೆ. ಸಾಮಾನ್ಯ ಧರ್ಮಜ್ಞಾನದಿಂದಲೇ ವಿಶೇಷ ಜಿಜ್ಞಾಸೆಯು ಹುಟ್ಟುತ್ತದೆ. ಆದ್ದರಿಂದ ಪದದಿಂದ ಧರ್ಮಸಾಮಾನ್ಯಗಳಿಂದ ಕೂಡಿದ ವಸ್ತುವೇ ಹೇಳಲ್ಪಡುತ್ತದೆ ಎಂದು ತಿಳಿಯುತ್ತದೆ.

ಕಿಂ ಎಂಬ ಪ್ರಶ್ನೆಯು ವಿಶೇಷ ಜಿಜ್ಞಾಸೆಯಿಂದ ಎನ್ನುವುದು ಹೇಗೆ ಎಂದರೆ –

**ಗುಣಕ್ರಿಯಾದಿಧರ್ಮಾಣಾಂ ವಿಶೇಷೇ ಕಥಿತೇ ಪುನಃ ।।೨೦೬।।**

**ನಿರಾಕಾಂಕ್ಷೋ ಭವೇದ್ಯಸ್ಮಾಚ್ಛಬ್ದಾ ಅನ್ವಿತವಾಚಕಾಃ ।**

**ಅತೋಽನಂತಗುಣಾತ್ಮೈಕೋ ಭಗವಾನೇಕ ಏವ ತು ।।೨೦೭।।**

**ಉಚ್ಯತೇ ಸರ್ವವೇದೈಶ್ಚ ............................ ।**

ಗುಣ ಕ್ರಿಯಾದಿ ಧರ್ಮಗಳಿಗೆ ವಿಶೇಷವನ್ನು ಹೇಳಿದ ಮೇಲೆಯೇ ಜಿಜ್ಞಾಸಾ ಪುರುಷನ ಆಕಾಂಕ್ಷೆಯು ಪೂರ್ಣವಾಗುವುದು. ಆದ್ದರಿಂದ ವಿಶೇಷ ಧರ್ಮವನ್ನು ಇಚ್ಛಿಸುವವನು ಕಿಂ ಇತ್ಯಾದಿ ಪ್ರಶ್ನೆ ಮಾಡುತ್ತಾನೆ. ವಿಶೇಷಜ್ಞಾನವು ಸಾಮಾನ್ಯ ಜ್ಞಾನಪೂರ್ವಕವಾದುದು. ಎಲ್ಲ ಶಬ್ದಗಳೂ ಸಾಮಾನ್ಯವಾಗಿ ಅನ್ವಿತವಾಚಕಗಳೇ ಆಗಿರುತ್ತವೆ ಎಂಬ ಪಕ್ಷವೇ ಗ್ರಾಹ್ಯವು. ಆದ್ದರಿಂದ ಶ್ರೀಹರಿಯೊಬ್ಬನೇ ಅನಂತಗುಣ ಸ್ವರೂಪನು. ಅವನೊಬ್ಬನೇ ವಿಶೇಷವಾಗಿ ಎಲ್ಲ ವೇದಗಳಿಂದಲೂ ಹೇಳಲ್ಪಡುತ್ತಾನೆ ಹಾಗೂ ಸಕಲ ಧರ್ಮಗಳಿಂದಲೂ ಯುಕ್ತನಾಗಿದ್ದಾನೆ.

## ಪರಮತಾಧಿಕರಣಮ್

**ಓಂ ಪರಮತಃ ಸೇತೂನ್ಮಾನಸಂಬಂಧಭೇದವ್ಯಪದೇಶೇಭ್ಯಃ ಓಂ**

ಪರಮೇಶ್ವರನ ಆನಂದಾದಿ ಗುಣಗಳು ಲೌಕಿಕಾನಂದಾದಿಗಳಿಗೆ ಸಲಕ್ಷಣಗಳೋ ಅಥವಾ ವಿಲಕ್ಷಣಗಳೋ ಎಂದು ವಿಕಲ್ಪ ಪ್ರಾಪ್ತವಾದರೆ, ಮೊದಲನೇ ಕಲ್ಪದಲ್ಲಿ ಆನಂದಾದಿ ಗುಣಗಳಿಗೆ ಆದರ ಹುಟ್ಟದು. ಪ್ರಮಾಣವಿಲ್ಲವಾದ್ದರಿಂದ ಎರಡನೇದು ಕೂಡುವುದಿಲ್ಲ. ಆನಂದಾದಿ ವಾಚ್ಯತ್ವವಿದ್ದ ಪ್ರಯುಕ್ತ ಈಶ್ವರನ ಆನಂದಾದಿಗಳು ಲೌಕಿಕ ಆನಂದಾದಿಗಳಿಗೆ ಸಮಾನವೇ. ಇಲ್ಲದಿದ್ದರೆ ಅಲ್ಲಿ ಆನಂದಾದಿ ಶಬ್ದಗಳ ಪ್ರವೃತ್ತಿಯೇ ಕೂಡುವುದಿಲ್ಲ. ಅತೀಂದ್ರಿಯವಾದುದರಿಂದ ಅಲ್ಲಿ ಉಪದೇಶಾದಿಗಳ ಅಭಾವವಿದ್ದ ಪ್ರಯುಕ್ತ ಸಾದೃಶ್ಯಾನುಮಾನವನ್ನೇ ಅನುಸರಿಸಬೇಕು. ಅದಾದರೋ ಅಸಿದ್ಧವು. ಆದಪ್ರಯುಕ್ತ ಪರಮೇಶ್ವರನ ಆನಂದಾದಿಗಳಿಗೆ ವೇದವೇದ್ಯತ್ವವೇ ಕೂಡುವುದಿಲ್ಲ. ಹೀಗೆ ಆಶಂಕೆ ಬಂದರೆ, ಅದಕ್ಕೆ ಸಮಾಧಾನ ಹೇಳುವುದಕ್ಕಾಗಿ ಈ ಅಧಿಕರಣವು ಪ್ರಸಕ್ತವಾಗಿದೆ. ಅಲ್ಲಿ ಆಶಂಕಿಸಿದ ಸಕಲ ದೋಷಗಳ ಪರಿಹಾರವು ಸ್ಪಷ್ಟವಾಗಿ ತೋರುವುದಿಲ್ಲ ಎಂದರೆ –

**.............................. ತೇ ಚಾಖಿಲವಿಲಕ್ಷಣಾಃ ।**

**ಸರ್ವೇ ಸರ್ವಗುಣಾತ್ಮಾನಃ ಸರ್ವಕರ್ತಾರ ಏವ ತು ।।೨೦೮।।**

**ತಥಾಽಪಿ ಸವಿಶೇಷಾಶ್ಚ .................।**

ಆ ಗುಣಗಳಾದರೂ ಕೇವಲ ಗುಣಿಯಿಂದ ಅಭಿನ್ನಗಳು ಮಾತ್ರವಲ್ಲ, ಮತ್ತೆ ಎಲ್ಲ ಲೌಕಿಕಾನಂದಾದಿಗಳಿಂದಲೂ ವಿಲಕ್ಷಣಗಳಾಗಿವೆ. ಹೇಗೆ ವಿಲಕ್ಷಣವೆಂದರೆ –

ಎಲ್ಲ ಗುಣಗಳೂ ಸಕಲಗುಣಸ್ವರೂಪಗಳು (ಅಂದರೆ ಆನಂದವು ಜ್ಞಾನಾತ್ಮಕವು, ಜ್ಞಾನವು ಆನಂದಾತ್ಮಕವು ಇತ್ಯಾದಿ), ಜಗತ್ಸೃಷ್ಟ್ಯಾದಿಗಳನ್ನು ಮಾಡತಕ್ಕವುಗಳು. ಹಾಗೂ ಪರಸ್ಪರ ಅಭಿನ್ನಗಳಾಗಿದ್ದರೂ ಸವಿಶೇಷಗಳೂ ಆಗಿವೆ. ಇದರಿಂದ ವೈಲಕ್ಷಣ್ಯ ಪ್ರಕಾರವು ಸೂಚಿತವಾಯಿತು. ಹಾಗೂ ಈ ಅಧಿಕರಣದ ಮೊದಲೆರಡು ಸೂತ್ರಗಳು ವ್ಯಾಖ್ಯಾತವಾಯಿತು.

ಬಾಧಕ ಪರಿಹಾರಕ್ಕಾಗಿ ಪ್ರವೃತ್ತವಾಗಿರುವ ಸೂತ್ರ –

**ಓಂ ಬುದ್ಧ್ಯರ್ಥಃ ಪಾದವತ್ ಓಂ**

ಈ ಸೂತ್ರವನ್ನು ವ್ಯಾಖ್ಯಾನ ಮಾಡುತ್ತಾರೆ –

**............................ ವಿದ್ವದ್ವ್ಯುತ್ಪತ್ತಿತೋಽಪಿ ಚ ।**

**ತೈಸ್ತೈಃ ಶಬ್ದೈಶ್ಚ ಭಣ್ಯತೇ ಯುಜ್ಯತೇ ಚೋಪದೇಶತಃ ॥೨೦೯॥**

**ಅನ್ಯಾನಂದಾದಿಸಾದೃಶ್ಯಮಾನುಕೂಲ್ಯಾದಿ ನಾಪರಮ್ ।**

ಹಾಗಿದ್ದರೂ ವಿದ್ವಾಂಸರ ವ್ಯುತ್ಪತ್ತಿಯಿಂದ ಆಯಾಯ ಶಬ್ದಗಳಿಂದಲೂ ಕೂಡ ಹೇಳಲ್ಪಡುತ್ತವೆ. ವಿದ್ವಾಂಸರಲ್ಲದವರಿಗೆ ವಿದ್ವಾಂಸರ ಉಪದೇಶದಿಂದ ಕೂಡುತ್ತದೆ. ಆನುಕೂಲ್ಯದ ದೃಷ್ಟಿಯಿಂದ ಲೌಕಿಕಾನಂದಾದಿ ಸಾದೃಶ್ಯವು(ಅನಂದಕ್ಕೆ ನಿರುಪಾಧಿಕ ಪ್ರಿಯತ್ವ, ಜ್ಞಾನಕ್ಕೆ ಬೋಧಸ್ವರೂಪತ್ವ ಇವೇ ಮುಂತಾದ ರೂಪದಲ್ಲಿ ಸಾದೃಶ್ಯವು) ಕೂಡುತ್ತದೆ. ಆದರೆ ಲೌಕಿಕಾನಂದಾದಿಗಳಂತೆ ಅಲ್ಪತ್ವ, ಅಸ್ಥಿರತ್ವ ಇತ್ಯಾದಿ ದೋಷ ರೂಪವಾದ ಸಾದೃಶ್ಯವು ಇರುವುದಿಲ್ಲ.

ಹಾಗಾದರೆ ವಿಲಕ್ಷಣವಾದ ಆನಂದಾದಿಗಳನ್ನು ಪ್ರತಿಪಾದಿಸಲು ವಿಲಕ್ಷಣವಾದ ಶಬ್ದಗಳನ್ನೇ ಏಕೆ ಪ್ರಯೋಗಿಸುವುದಿಲ್ಲವೆಂದರೆ, ಹಾಗೆ ಮಾಡಿದರೆ ಅಸ್ಮದಾದಿಗಳ ಬುದ್ಧಿಗೆ ಅವು ನಿಲುಕುವುದಿಲ್ಲ. ಅಲ್ಪತ್ವಾದಿ ಸಾದೃಶ್ಯವು ಏಕೆ ಇಲ್ಲವೆಂದರೆ –

**ಪೂರ್ಣತ್ವಾದಿ ಮಹತ್ತೇಷಾಂ ವೈಲಕ್ಷಣ್ಯಂ ಶ್ರುತೌ ಶ್ರುತಮ್ ॥೨೧೦॥**

**ಪೂರ್ಣೋಽಶೇಷನಿಯಂತಾ ಚ ಸುಖಾದುತ್ತಮ ಏಕಲಃ ।**

**ಗುಣೋರುಸಮುದಾಯೋಽಯಂ ವಾಸುದೇವಃ ಸುನಿಷ್ಕಲಃ ॥೨೧೧॥**

**ವಾಸುದೇವಶ್ರುತಿಶ್ಚೈಷಾ ಗುಣಾನ್ವಕ್ತಿ ಹರೇಃ ಪರಾನ್ ।**

ಭಗವಂತನ ಗುಣಗಳಿಗೆ ಪೂರ್ಣತ್ವಾದಿ ರೂಪವಾದ ಮಹತ್ತಾದ ವೈಲಕ್ಷಣ್ಯವು ಶ್ರುತಿಗಳಲ್ಲಿ ಹೇಳಲ್ಪಟ್ಟಿದೆ. ಈ ವಾಸುದೇವನು ಗುಣಪೂರ್ಣನು, ಸರ್ವಪ್ರೇರಕನು ಸರ್ವನಿಯಾಮಕನು, ಉತ್ತಮಸುಖಸ್ವರೂಪನು, ಸ್ವತಂತ್ರನು, ಶ್ರೇಷ್ಠವಾದ ಗುಣಗಳ ಸಮುದಾಯರೂಪನು, ಸರ್ವಥಾ ನಿಷ್ಕಲನು (ಷೋಡಶಕಲಾರಹಿತನು). ಇವೇ

ಮೊದಲಾದ ಶ್ರೀಹರಿಯ ಉತ್ಕೃಷ್ಟವಾದ ಅನೇಕ ಗುಣಗಳನ್ನು ವಾಸುದೇವ ಶ್ರುತಿಯು ಹೇಳುತ್ತದೆ.

## ಫಲಾಧಿಕರಣಮ್

### ಓಂ ಫಲಮತ ಉಪಪತ್ತೇಃ ಓಂ

ಈ ಅಧಿಕರಣದಲ್ಲಿ ಪ್ರಾಣಿಗಳಿಗೆ ಸ್ವರ್ಗನರಕಾದಿ ರೂಪವಾದ ಫಲವು ಈಶ್ವರನಿಂದಲೇ ಆಗುವುದು, ಕರ್ಮದಿಂದ ಅಲ್ಲ. ಕರ್ಮವು ಅಚೇತನವಾದ್ದರಿಂದ ಅದಕ್ಕೆ ಫಲದಾತೃತ್ವವು ಕೂಡುವುದಿಲ್ಲ. 'ವಿಜ್ಞಾನಮಾನಂದಂ ಬ್ರಹ್ಮ ರಾತಿರ್ದಾತುಃ' ಇತ್ಯಾದಿ ಶ್ರುತಿಯಿಂದ ಈಶ್ವರನಿಗೇ ಫಲದಾತೃತ್ವವೆಂದು ಸಿದ್ಧವಾಗುತ್ತದೆ. ಆದರೆ ಜೈಮಿನ್ಯಾಚಾರ್ಯರು 'ಏಷ ಹ್ಯೇವ ಸಾಧು ಕರ್ಮ ಕಾರಯತಿ' ಇತ್ಯಾದಿ ಶ್ರುತಿಯಿಂದಲೇ ಪುಣ್ಯ-ಪಾಪರೂಪವಾದ ಧರ್ಮಾಧರ್ಮಗಳು ಈಶ್ವರನಿಂದಲೇ ಮಾಡಿಸಲ್ಪಡುತ್ತವೆ ಎಂದೂ, ಫಲವು ಕರ್ಮದಿಂದಲೇ ಆಗುತ್ತದೆ ಎಂದೂ ಹೇಳುತ್ತಾರೆ. ಇದರಿಂದ ಈಶ್ವರನೇ ಫಲದಾತೃವೆನ್ನುವ ವಿಷಯದಲ್ಲಿ ಜೈಮಿನಿಗಳ ವಿರೋಧವಿದೆಯೆಂದು ಸಂಶಯ ಬರುವ ಸಂಭವವಿದೆ. ಈ ಸಂಶಯವನ್ನು ಹೋಗಲಾಡಿಸಿ ಸರಿಯಾದ ಸಿದ್ಧಾಂತವನ್ನು ತಿಳಿಸುವುದಕ್ಕಾಗಿ 'ಓಂ ಪೂರ್ವಂ ತು ಬಾದರಾಯಣೋ ಹೇತು ವ್ಯಪದೇಶಾತ್ ಓಂ' ಎನ್ನುವ ಸೂತ್ರವು ಹೊರಟಿದೆ. ಈಶ್ವರನು ಧರ್ಮಾಧರ್ಮಗಳನ್ನು ಅಪೇಕ್ಷಿಸುತ್ತಾನೆ ಎನ್ನುವುದು ನಿಜವೇ. ಆದರೆ ಅಷ್ಟರಿಂದಲೇ ಧರ್ಮಾಧರ್ಮಗಳಿಗೇನೆ ಫಲಕಾರಣತ್ವವು ಎನ್ನುವುದು ಯುಕ್ತವಲ್ಲ. ಧರ್ಮಾದಿಗಳಂತೆ ಈಶ್ವರನೂ ಫಲಕ್ಕೆ ಕಾರಣನು ಎಂದು ಶ್ರುತಿಸಿದ್ಧವಾದುದರಿಂದ ಅದನ್ನು ಬಿಡುವ ಹಾಗಿಲ್ಲ. ಬಾಧಕವಿಲ್ಲದ ಪ್ರಯುಕ್ತ ಶ್ರುತಿಗೆ ಅಮುಖ್ಯಾರ್ಥವೆಂದು ಹೇಳಕೂಡದು. ಸರ್ವೋತ್ತಮನಾದ ಈಶ್ವರನೂ ಕರ್ಮವೂ ಎರಡೂ ಫಲಕ್ಕೆ ಕಾರಣವೆಂದು ಒಪ್ಪಿದರೆ ಸಾಮ್ಯವು ಬರಬೇಕಾಗುವುದು ಎಂದೂ ಹೇಳಕೂಡದು. ಏಕೆಂದರೆ ಫಲವನ್ನು ಕೊಡುವುದರಲ್ಲಿ ಪರಮೇಶ್ವರನು ಕರ್ತನೆಂದೂ, ಕರ್ಮವು ಕರಣವೆಂದೂ, 'ಪುಣ್ಯೇನ ಪುಣ್ಯಂ ಲೋಕಂ ನಯತಿ' ಇತ್ಯಾದಿ ಶ್ರುತಿಗಳು ಹೇಳುತ್ತವೆ. ಕರಣವು ಕರ್ತೃಪ್ರಯೋಜ್ಯವು ಎನ್ನುವುದೂ ಪ್ರಸಿದ್ಧವೇ ಆಗಿದೆ. ಹಾಗಾದರೆ ಕರ್ಮವನ್ನು ಅಪೇಕ್ಷಿಸಿಯೇ ಫಲವನ್ನು ಕೊಡುವುದಾದರೆ, ಈಶ್ವರನ ಅನುಪಚರಿತ ಸ್ವಾತಂತ್ರ್ಯವು ಸಿದ್ಧಿಸುವುದಿಲ್ಲ. ಹಾಗಾಗಿ ಈಶ್ವರನಲ್ಲಿ ಅತಿಶಯವಾದ ಭಕ್ತಿಯು ಸಿದ್ಧಿಸುವುದಿಲ್ಲ. ಹೀಗೆ ಆಶಂಕಿಸಿದರೆ, ಅದನ್ನು ಪರಿಹರಿಸುವುದಕ್ಕಾಗಿ ಸೂತ್ರದಲ್ಲಿನ 'ಪೂರ್ವಂ' ಪದವನ್ನು ವ್ಯಾಖ್ಯಾನ ಮಾಡುತ್ತಾರೆ –

**ಸ ಏವಾಶೇಷಜೀವಸ್ಥ ನಿಃಸಂಖ್ಯಾನಾದಿಕಾಲಿಕಾನ್ ॥೨೧೨॥**

**ಧರ್ಮಾಧರ್ಮಾನ್ ಸದಾ ಪಶ್ಯನ್ ಸ್ವೇಚ್ಛಯಾ ಬೋಧಯತ್ಯಜಃ ।**

**ಕಾಂಕ್ಷಿತ್ತೇಷಾಂ ಫಲಂ ಚೈವ ದದಾತಿ ಸ್ವಯಮಚ್ಯುತಃ ॥೨೧೩॥**

ಉತ್ಪತ್ತಿರಹಿತನಾದ ಆ ಪರಮೇಶ್ವರನೇ ಪ್ರವಾಹತಃ ಅನಾದಿಕಾಲದಿಂದ ಸಮಸ್ತ ಜೀವರಲ್ಲಿರತಕ್ಕ ಅಸಂಖ್ಯವಾದ ಧರ್ಮಾಧರ್ಮಗಳನ್ನು ಸದಾ ನೋಡುವವನಾಗಿ, ತನ್ನ ಇಚ್ಛೆಯಿಂದಲೇ ಕೆಲವರನ್ನು ತಾನಾಗಿಯೇ ಚೇಷ್ಟೆಯಲ್ಲಿ ತೊಡಗಿಸುತ್ತಾನೆ. ಚತುರ್ವಿಧ ನಾಶರಹಿತನಾದ ಆ ಶ್ರೀಹರಿಯೇ ಅವರಿಗೆ ಕರ್ಮಕ್ಕೆ ತಕ್ಕ ಫಲವನ್ನೂ ಕೂಡ ಕೊಡುತ್ತಾನೆ. ಅಂದರೆ ಕರ್ಮದ ಅಪೇಕ್ಷೆಯಿಲ್ಲದೇ ಫಲವನ್ನು ಕೊಡಲು ಶಕ್ತನಾಗಿದ್ದರೂ, ಕೇವಲ ಲೀಲೆಯಿಂದ ಕರ್ಮವನ್ನೂ ಕರಣವನ್ನಾಗಿ ಮಾಡುತ್ತಾನೆ ಎಂದು ತಾತ್ಪರ್ಯ.

**ನ ತೇ ವಿಶೇಷಂ ಕಮಪಿ ಪ್ರೇರಣಾದಿಕಮಚ್ಯುತೇ ।**

**ಕುರ್ಯುಃ ಕದಾಪಿ ತೇನಾಯಂ ಸ್ವತಂತ್ರೋಽನುಪಚಾರತಃ ॥೨೧೪॥**

ಜೀವರು ಶ್ರೀಹರಿಯಲ್ಲಿ ಪ್ರೇರಣೆ ಮುಂತಾದ ಯಾವ ವಿಶೇಷವನ್ನೂ ಯಾವ ಕಾಲಕ್ಕೂ ಮಾಡಲಾರರು. ಆದ್ದರಿಂದ ಈ ಶ್ರೀಹರಿಯೇ ಮುಖ್ಯವಾಗಿ ಸ್ವತಂತ್ರನು.

ಶ್ರೀಹರಿಯು ಜೀವರ ಧರ್ಮಾಧರ್ಮಗಳನ್ನು ನೋಡಿ ಅದಕ್ಕೆ ತಕ್ಕಂತೆ ಫಲವನ್ನು ಕೊಡುವುದು ಮಾತ್ರವಲ್ಲದೆ ಆ ಧರ್ಮಾಧರ್ಮಗಳಿಗೆ ಪ್ರೇರಕನೂ ಆಗಿದ್ದಾನೆ ಎಂದ ಇಲ್ಲಿಯವರೆಗೆ ಹೇಳಲ್ಪಟ್ಟಿತು. ಈ ಜ್ಞಾನದಿಂದ ಶ್ರೀಹರಿಯಲ್ಲಿ ಮಹತ್ತರವಾದ ಆದರವು ಹುಟ್ಟುವುದು. ಇನ್ನು ಸಮಸ್ತ ಪದಾರ್ಥಗಳನ್ನೂ ಅವುಗಳ ಕರ್ತೃತ್ವವನ್ನು ವಿಚಾರ ಮಾಡಿದಾಗ ಶ್ರೀಹರಿಯಲ್ಲಿ ಆದರವು ಹುಟ್ಟುವುದಿಲ್ಲವೇನು? ಎನ್ನುವ ಅಭಿಪ್ರಾಯದಿಂದ ಕರ್ಮಗಳ ಸ್ವರೂಪವನ್ನು ವಿವರಿಸುತ್ತಾರೆ –

**ಕರ್ಮಾಣಿ ತಾನಿ ಚ ಪೃಥಕ್ ಚೇತನಾನ್ಯೇವ ಸರ್ವಶಃ ।**

**ಅಚೇತನಶರೀರಾಣಿ ಸ್ವಕರ್ಮಫಲಭಾಂಜಿ ಚ ॥೨೧೫॥**

**ಪ್ರತ್ಯೇಕಂ ತೇಷು ಚಾನಂತಕರ್ಮಾಣ್ಯೇವಂವಿಧಾನಿ ಚ ।**

**ತಾನಿ ಚೈವಮಿತೀಶಸ್ಯ ನಿಸ್ಸೀಮಾ ಶಕ್ತಿರುತ್ತಮಾ ॥೨೧೬॥**

ಅನಾದಿಕಾಲದಿಂದ ಸಮಸ್ತ ಜೀವರಲ್ಲಿರತಕ್ಕ ಅವಧಿರಹಿತಗಳಾದ ಎಲ್ಲ ಕರ್ಮಗಳೂ ಒಂದೊಂದು ದರ್ಮಾಧರ್ಮ ಅಧಿಷ್ಠಾನಭೂತಗಳು, ಹಾಗೂ ಜಡವಾದ ಶರೀರವುಳ್ಳವುಗಳು. ಆದ್ದರಿಂದಲೇ ತಮ್ಮ ಕರ್ಮಗಳ ಫಲಗಳನ್ನು ಹೊಂದುವವು. ಹಿಂದೆ ಹೇಳಿದ ಚೇತನತ್ವ ಮೊದಲಾದ ಧರ್ಮಗಳುಳ್ಳ ಆ ಕರ್ಮಾಭಿಮಾನಿಗಳಲ್ಲಿಯೂ ಪ್ರತ್ಯೇಕವಾಗಿ ಅನಂತ ಕರ್ಮಗಳು ಇರುತ್ತವೆ. ಈ ಪ್ರಕಾರವಾಗಿ ಕರ್ಮಗಳ ದರ್ಶನವುಳ್ಳ ಶ್ರೀಹರಿಗೆ ಯಾವುದೇ ಪ್ರತಿಬಂಧವಿಲ್ಲದ ನಿಸ್ಸೀಮವಾದ ಶಕ್ತಿಯು ಇರುವುದು.

ಕರ್ಮಗಳ ಸ್ವರೂಪವು ಹೀಗೆಯೇ ಎಂದು ಹೇಗೆ ಸಿದ್ಧವಾಗುತ್ತದೆ ಎಂದರೆ –

ಏಕೈವ ಬ್ರಹ್ಮಹತ್ಯಾ ಹಿ ವರಾಹಹರಿಣೋದಿತಾ ।

ಬ್ರಹ್ಮಪಾರಸ್ತವೇನೈವ ನಿಷ್ಕ್ರಾಂತಾ ರಾಜದೇಹತಃ ॥೨೧೭॥

ವಾರಾಹ ಪುರಾಣದಲ್ಲಿ ವರಾಹರೂಪಿಯಾದ ಹರಿಯಿಂದ ಬ್ರಹ್ಮಹತ್ಯೆಯು ಚೇತನತ್ವ ರೂಪದಿಂದ ಹೇಳಲ್ಪಟ್ಟಿದೆ. ಅದೇನೆಂದರೆ, ಬ್ರಹ್ಮಪಾರ ಸ್ತೋತ್ರದಿಂದಲೇ ಬ್ರಹ್ಮಹತ್ಯೆಯು ರಾಜನ ದೇಹದಿಂದ ಹೊರಟುಹೋಯಿತು.

ಸ್ತೋತ್ರಸ್ಯ ತಸ್ಯ ಮಾಹಾತ್ಮ್ಯಾದ್ವ್ಯಾಧತ್ವಂ ಗಮಿತಾ ಪುನಃ ।

ಪ್ರಾಪ್ಯ ಜ್ಞಾನಂ ಪರಂ ಚಾಪ ತಥಾನ್ಯಾನ್ಯಪಿ ಸರ್ವಶಃ ॥೨೧೮॥

ಅನಂತಾನ್ಯುದಿತಾನ್ಯೇವಂ ಪ್ರಭುಣಾ ಕಪಿಲೇನ ಹಿ ।

ಸಂಸಾರೇ ಪಚ್ಯಮಾನಾನಿ ಕರ್ಮಾಣ್ಯಪಿ ಪೃಥಕ್ಪೃಥಕ್ ॥೨೧೯॥

ಆ ಸ್ತೋತ್ರದ ಮಹಿಮೆಯಿಂದ ಮತ್ತೆ ವ್ಯಾಧತ್ವವನ್ನು (ಚೇತನತ್ವದ ದ್ಯೋತಕ) ಗಳಿಸಿ, ಜ್ಞಾನವನ್ನು ಹೊಂದಿ ಸರ್ವೋತ್ತಮನಾದ ಶ್ರೀಹರಿಯನ್ನು ಹೊಂದಿತು. ಹಾಗೆಯೇ ಬ್ರಹ್ಮಹತ್ಯೆಯಿಂದ ಇತರವಾದ ಎಲ್ಲ ಅಪರಿಮಿತಗಳಾದ ಕರ್ಮಗಳೂ ಪ್ರತ್ಯೇಕ ಪ್ರತ್ಯೇಕವಾಗಿ ಹೀಗೆ ಚೇತನತ್ವಾದಿಗಳನ್ನು ಹೊಂದಿದವುಗಳಾಗಿ ಸರ್ವ ಸಮರ್ಥನಾದ ಕಪಿಲರೂಪಿಯಾದ ಶ್ರೀಹರಿಯಿಂದ ಹೇಳಲ್ಪಟ್ಟಿದೆ. ಸಂಸಾರದಲ್ಲಿ ಮಾಡಲ್ಪಡುವ ಕರ್ಮಗಳೂ ಕೂಡ ಪ್ರತ್ಯೇಕ ಪ್ರತ್ಯೇಕವಾಗಿಯೇ ಇರುತ್ತವೆ.

ಪಾದಾರ್ಥವನ್ನು ಉಪಸಂಹಾರ ಮಾಡುತ್ತಾರೆ –

ತಸ್ಮಾದನಂತಮಾಹಾತ್ಮ್ಯಗುಣಪೂರ್ಣೋ ಜನಾರ್ದನಃ ।

ಭಕ್ತ್ಯಾ ಪರಮಯಾರಾಧ್ಯ ಇತಿ ಪಾದಾರ್ಥ ಈಯತೇ ॥೨೨೦॥

ಆದ್ದರಿಂದ ಅನಂತ ಮಹಿಮೆಗಳಿಂದ ಕೂಡಿದ ಗುಣಗಳಿಂದ ಪರಿಪೂರ್ಣನಾದ ಶ್ರೀಹರಿಯು ಪರಮಭಕ್ತಿಯಿಂದ ಆರಾಧ್ಯನು ಎಂದು ಮೂರನೆಯ ಅಧ್ಯಾಯದ ಎರಡನೆಯ ಪಾದದ ಅರ್ಥವು ಹೇಳಲ್ಪಡುತ್ತದೆ.

॥ ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತೇ ಶ್ರೀಮದನುವ್ಯಾಖ್ಯಾನೇ ತೃತೀಯಾಧ್ಯಾಯಸ್ಯ ದ್ವಿತೀಯಃ ಪಾದಃ ॥

॥ಇಲ್ಲಿಗೆ ಶ್ರೀಮದನುವ್ಯಾಖ್ಯಾನದ ಮೂರನೆಯ ಅಧ್ಯಾಯ ಎರಡನೆಯ ಪಾದದ ಶ್ರೀಮನ್ನ್ಯಾಯಸುಧಾನುಸಾರಿ ವಿವರಣೆ ಸಹಿತ ಕನ್ನಡಾನುವಾದವು ಮುಕ್ತಾಯವಾಯಿತು॥

* * *

# ಮೂರನೆಯ ಅಧ್ಯಾಯ ಮೂರನೆಯ ಪಾದ

ಈ ಪಾದದಲ್ಲಿ ಉಪಾಸನೆಯು ಹೇಳಲ್ಪಡುತ್ತದೆ ಎಂದು ಭಾಷ್ಯದಲ್ಲಿ ಉಕ್ತವಾಗಿದೆ. ಅದರಲ್ಲಿ ಉಪಾಸನೆಗೋಸ್ಕರವಾಗಿ ಪ್ರವೃತ್ತವಾದ ಈ ಪಾದವು ಪೂರ್ವ ಮತ್ತು ಉತ್ತರ ಪಾದಗಳೊಂದಿಗೆ ಹೇಗೆ ಸಂಗತಿಯನ್ನು ಹೊಂದಿದೆ ಎಂದು ಹೇಳಿದರು. ಇಲ್ಲಿ ಪ್ರಸಂಗವಿರುವುದರಿಂದ ಈ ಅಧ್ಯಾಯದಲ್ಲಿರತಕ್ಕ ನಾಲ್ಕು ಪಾದಗಳಿಗೂ ಸಂಗತಿಯನ್ನು 'ವೈರಾಗ್ಯತೋ' ಇತ್ಯಾದಿ ವಚನದಿಂದ ಹೇಳುತ್ತಾರೆ –

**ವೈರಾಗ್ಯತೋ ಭಕ್ತಿದಾರ್ಢ್ಯಂ ತೇನೋಪಾಸಾ ಯದಾ ಭವೇತ್ ।**

**ಅಪರೋಕ್ಷ್ಯಂ ಭವೇದ್ವಿಷ್ಣೋರಿತಿ ಪಾದಕ್ರಮೋ ಭವೇತ್ ॥ ೧ ॥**

ವೈರಾಗ್ಯದ ದೆಶೆಯಿಂದ ಭಕ್ತಿದಾರ್ಢ್ಯವು ಆಗುವುದು. (ವಿಚಾರಸಾಧ್ಯವಾದ ವೈರಾಗ್ಯಕ್ಕಿಂತ ಮುಂಚೆಯೇ ಭಕ್ತಿಯು ಅವಶ್ಯಕವಾದುದರಿಂದ ಭಕ್ತಿದಾರ್ಢ್ಯವೆಂದು ಹೇಳಿದರು.) ಯಾವಕಾರಣದಿಂದ ಆ ಭಕ್ತಿದಾರ್ಢ್ಯದಿಂದ ಉಪಾಸನೆಯೂ, ಆ ಉಪಾಸನೆಯಿಂದ ಶ್ರೀಹರಿಯ ಅಪರೋಕ್ಷವೂ (ಸಾಕ್ಷಾತ್ಕಾರವೂ) ಆಗುವುದೋ ಆ ಕಾರಣದಿಂದ ನಾಲ್ಕು ಪಾದಗಳ ಪೌರ್ವಾಪರ್ಯ ಕ್ರಮವು ಕೂಡುವುದು.

ಹೀಗೆ ಈ ಅಧ್ಯಾಯಗತ ನಾಲ್ಕು ಪಾದಗಳಿಗೂ ಪೌರ್ವಾಪರ್ಯರೂಪವಾದ ಸಂಗತಿಯನ್ನು ಹೇಳಿ, ಆ ಪ್ರಸಂಗದಿಂದ 'ಅಥಾತೋ ಬ್ರಹ್ಮ ಜಿಜ್ಞಾಸಾ' ಎಂಬ ಪ್ರಥಮ ಸೂತ್ರದಿಂದ ಆರಂಭಿಸಿ ಹಿಂದಿನ ಎರಡು ಅಧ್ಯಾಯಗಳ ಎಲ್ಲ ಸೂತ್ರಗಳಿಗೂ ಪರಸ್ಪರ ಸಂಗತಿಯನ್ನು ಹೇಳುವ ಅಪೇಕ್ಷೆಯಿಂದ 'ಯುಕ್ತಿತೋ' ಎಂದು ಪ್ರಾರಂಭಿಸಿ 'ಆಚಾರ್ಯಸಂಪದಾ' ಎನ್ನುವವರೆಗೆ ಮೊದಲನೆಯ ಸೂತ್ರದ ಅರ್ಥವನ್ನು ಅನುವಾದ ಮಾಡುತ್ತಾರೆ –

**ಯುಕ್ತಿತೋ ಜ್ಞಾತವೇದಾರ್ಥೋ ನಿರಸ್ಯ ಸಮಯಾನ್ ಪರಾನ್ ।**

**ಪರಸ್ಪರವಿರೋಧಂ ಚ ಪ್ರಣುದ್ಯಾಶೇಷವಾಕ್ಯಗಮ್ ॥ ೨ ॥**

ಸಾಮಾನ್ಯವಾದ ಯುಕ್ತಿವಿರೋಧವನ್ನು ಪ್ರಬಲ ಯುಕ್ತಿಯಿಂದ ಪರಿಹರಿಸಿ, ಎಲ್ಲ ವೇದಗಳಿಗೆ ಭಗವಂತನೇ ಮುಖ್ಯಾರ್ಥನೆಂದು ತಿಳಿದವನಾಗಿ ಸಾಂಖ್ಯಾದಿ ದುಶ್ಶಾಸ್ತ್ರಗಳನ್ನು ನಿರಾಕರಿಸಿ, ಎಲ್ಲ ವೇದವಾಕ್ಯಗಳಲ್ಲಿನ ಪರಸ್ಪರ ವಿರೋಧವನ್ನು ಪರಿಹರಿಸಬೇಕು.

**ಅಧ್ಯಾತ್ಮಪ್ರವಣೋ ಭೂತ್ವಾ ತಸ್ಯ ಸನ್ನಿಹಿತತ್ವತಃ ।**

**ಬಹುಯುಕ್ತಿವಿರೋಧಾನಾಂ ಭಾನಾತ್ತತ್ಸಹಿತಶ್ರುತೇಃ ॥ ೩ ॥**

**ವಿರೋಧಂ ಚ ನಿರಾಕೃತ್ಯ ಶ್ರುತೀನಾಂ ಪ್ರಾಣತತ್ವಗಾನ್ ।**

**ಪರಿಹೃತ್ಯ ವಿರೋಧಾಂಶ್ಚ ತತ್ಪ್ರಸಾದಾನುರಂಜಿತಃ ॥ ೪ ॥**

ಅಧ್ಯಾತ್ಮದಲ್ಲಿ, ಅಂದರೆ ಜೀವ-ಪರಮಾತ್ಮರಿಗೆ ಅಧಿಷ್ಠಾನಭೂತವಾದ ದೇಹ ಮತ್ತು ಇಂದ್ರಿಯಗಳಲ್ಲಿ ಆಸಕ್ತನಾಗಿ, ಜಿಜ್ಞಾಸೆಯು ಅಲ್ಲಿ ಕೂಡುವುದರಿಂದಲೂ ಹಾಗೂ ಬಹುಯುಕ್ತಿಗಳ ವಿರೋಧದ ಪ್ರತೀತಿ ಇರುವುದರಿಂದಲೂ, ಅವುಗಳನ್ನು ಪ್ರತಿಪಾದಿಸತಕ್ಕ ಶ್ರುತಿಗಳಿಗೆ ಯುಕ್ತಿಸಹಿತಶ್ರುತಿಯ ದೆಶೆಯಿಂದ ವಿರೋಧವನ್ನೂ ಪರಿಹರಿಸಬೇಕು. ಅದರಿಂದ ಇಂದ್ರಿಯಗಳ ಸ್ವರೂಪದಲ್ಲಿರತಕ್ಕ ವಿರೋಧವನ್ನೂ ಪರಿಹರಿಸಿ, ಇಂದ್ರಿಯಾಭಿಮಾನಿ ದೇವತೆಗಳ ಪ್ರಸಾದವನ್ನು ಸಂಪಾದಿಸಬೇಕು.

**ದೇಹಕರ್ತೃತ್ವಮೀಶಸ್ಯ ಜ್ಞಾತ್ವಾ ತತ್ಪಿತೃತಾಸ್ಮೃತೇಃ ।**

**ವಿಶೇಷಸ್ನೇಹಮಾಪಾದ್ಯ ಸರ್ವಕರ್ತೃತ್ವತೋಽಧಿಕಮ್ ॥ ೫ ॥**

**ನಿಷ್ಪಾದ್ಯ ಬಹುಮಾನಂ ಚ ತದನ್ಯತ್ರಾತಿದುಃಖತಃ ।**

**ಉತ್ಪಾದ್ಯಾಧಿಕವೈರಾಗ್ಯಂ ತದ್ಗುಣಾಧಿಕ್ಯವೇದನಾತ್ ॥ ೬ ॥**

**ಸರ್ವಸ್ಯ ತದ್ವಶತ್ವಾಚ್ಚ ದಾರ್ಢ್ಯಂ ಭಕ್ತೇರವಾಪ್ಯ ಚ ।**

**ಯತೇತೋಪಾಸನಾಯೈವ ವಿಶಿಷ್ಟಾಚಾರ್ಯಸಂಪದಾ ॥ ೭ ॥**

ಅಸ್ಮದಾದಿಗಳ ಶರೀರಾದಿಗಳ ಕರ್ತೃವು ಶ್ರೀಹರಿಯೆಂದು ತಿಳಿದು, ಅವನು ನಮ್ಮ ತಂದೆಯೆಂಬ ಸ್ಮರಣೆಯಿಂದ ವಿಶೇಷ ಪ್ರೀತಿಯನ್ನು ಹೊಂದಬೇಕು. ಅವನು ಸರ್ವಕರ್ತೃವೆಂದು ತಿಳಿದು ಅದಕ್ಕಿಂತ ಹೆಚ್ಚಿನದಾದ ಆದರವನ್ನು ಮಾಡಬೇಕು. ಆ ಶ್ರೀಹರಿಯಿಂದ ಇತರವಾದ ಮಹಾದುಃಖಕ್ಕೆ ಕಾರಣವಾದ ಸಂಸಾರಾದಿಗಳಲ್ಲಿ ಅಧಿಕವಾದ ವೈರಾಗ್ಯವನ್ನು ಹೊಂದಬೇಕು. ಶ್ರೀಹರಿಯ ಸಕಲಗುಣಪೂರ್ಣತ್ವ, ಸರ್ವವಶತ್ವಾದಿಗಳನ್ನು ತಿಳಿದು ಭಕ್ತಿದಾರ್ಢ್ಯವನ್ನು ಹೊಂದಿ, ಉತ್ತಮ ಗುರುಗಳ ಉಪದೇಶವನ್ನು ಸಂಪಾದಿಸಿ, ಉಪಾಸನೆಗಾಗಿಯೇ ಪ್ರಯತ್ನ ಮಾಡಬೇಕು.

ಯತತೋಪಾಸನಾಯೈವ (ಉಪಾಸನೆಗಾಗಿಯೇ ಪ್ರಯತ್ನ ಮಾಡಬೇಕು) ಎನ್ನುವುದರಿಂದ ಬ್ರಹ್ಮಜಿಜ್ಞಾಸೆಯು ಕರ್ತವ್ಯ ಎನ್ನುವುದು ವ್ಯಾಖ್ಯಾನವಾಯಿತು. ಉಳಿದೆಲ್ಲವೂ ಅಥ ಶಬ್ದದ ವ್ಯಾಖ್ಯಾನವು. ಜ್ಞಾತವೇದಾರ್ಥೋ (ಸರ್ವವೇದಗಳ ಮುಖ್ಯಾರ್ಥವು ಭಗವಂತನೇ ಎಂದು ತಿಳಿದವನಾಗಿ) ಎನ್ನುವುದರಿಂದ ಪ್ರಥಮಾ-ಧ್ಯಾಯದ ಪ್ರಮೇಯವು ಉಕ್ತವಾಯಿತು. ಯುಕ್ತಿತೋ ನಿರಸ್ಯ (ವೇದಾರ್ಥವಿರುದ್ಧ ಯುಕ್ತಿಗಳನ್ನು ಸಾಮಾನ್ಯತಃ ನಿರಾಕರಿಸಿ) ಎನ್ನುವುದರಿಂದ ದ್ವಿತೀಯಾಧ್ಯಾಯದ ಪ್ರಥಮ ಪಾದದ ಸಂಗತಿಯನ್ನೂ, ಪರಾನ್ ಸಮಯಾನ್ (ವೈಷ್ಣವ ಸಮಯಗಳಿಗೆ ಇತರವಾದ ಸಾಂಖ್ಯಾದಿ ಸಮಯಗಳನ್ನು ನಿರಾಕರಿಸಿ) ಎನ್ನುವುದರಿಂದ ದ್ವಿತೀಯ ಪಾದದ ಸಂಗತಿಯನ್ನೂ, ಪರಸ್ಪರ ವಿರೋಧಶ್ಚ ಎನ್ನುವುದರಿಂದ ತೃತೀಯ ಹಾಗೂ

ಚತುರ್ಥ ಪಾದಗಳ ಸಂಗತಿಯನ್ನೂ ಸೂಚಿಸಿದರು. ಹಾಗಾದರೆ ಪಾದಭೇದವು ಹೇಗೆ ಎಂದರೆ, ಬಹುಯುಕ್ತಿವಿರೋಧಾನಾಂ ಶ್ರುತೀನಾಂ ಯುಕ್ತಿಸಹಿತಶ್ರುತೇಃ ವಿರೋಧಂ ಚ ನಿರಾಕೃತ್ಯ (ಬಹುಯುಕ್ತಿವಿರೋಧವುಳ್ಳ ಶ್ರುತಿಗಳಿಗೆ ಯುಕ್ತಿಸಹಿತ ಶ್ರುತಿಯಿಂದ ವಿರೋಧವನ್ನು ನಿರಾಕರಿಸಿ) ಎನ್ನುವುದರಿಂದ ಚತುರ್ಥ ಪಾದದ ವಿಶೇಷವು ತೋರಿಸಲ್ಪಟ್ಟಿತು.

ಹೀಗೆ ಬ್ರಹ್ಮಜಿಜ್ಞಾಸೆಯು ಕರ್ತವ್ಯ ಎನ್ನುವ ಪ್ರಥಮ ಸೂತ್ರದ ಅರ್ಥವನ್ನು ಹೇಳಿದರು. ಈಗ ಎರಡನೆಯ ಸೂತ್ರಕ್ಕೆ ಸಂಗತಿಯನ್ನು ಹೇಳುತ್ತಾರೆ –

**ಕರ್ತವ್ಯಾ ಬ್ರಹ್ಮಜಿಜ್ಞಾಸೇತ್ಯುಕ್ತೇ ಕಿಮಿತಿ ಸಂಶಯೇ ।**

**ಅತ ಇತ್ಯುದಿತೇಽಪ್ಯಸ್ಯ ವಿಶೇಷಾನುಕ್ತಿತಃ ಪುನಃ ॥ ೮ ॥**

**ಸೃಷ್ಟಿಬಂಧನಮೋಕ್ಷಾದಿಕರ್ತೃತ್ವಸ್ಯ ಶ್ರುತತ್ವತಃ ।**

**ಯತೋ ಮೋಕ್ಷಾದಿದಾತಾಸಾವತೋ ಜಿಜ್ಞಾಸ್ಯ ಏವ ಯಃ ॥ ೯ ॥**

**ಇತ್ಯಾಹ ತತ್ಪರಂ ಬ್ರಹ್ಮ ವ್ಯಾಸಾಖ್ಯಂ ಜ್ಞಾನರಶ್ಮಿಮತ್ ।**

ಬ್ರಹ್ಮನ ವಿಚಾರವನ್ನು ಮಾಡತಕ್ಕದ್ದು ಎಂದು ಹೇಳಿದಾಗ, ಅದರಿಂದ ಪ್ರಯೋಜನವಿದೆಯೋ ಇಲ್ಲವೋ ತಿಳಿಯದಾದ್ದರಿಂದ ಜಿಜ್ಞಾಸೆಯು ಅವಶ್ಯವೋ ಇಲ್ಲವೋ ಎಂಬ ಸಂಶಯ ಬಂದರೆ, ಅದನ್ನು ನಿವಾರಿಸಲು ಅತಃ ಎನ್ನುವುದರಿಂದ ಮೋಕ್ಷಾಖ್ಯ ಪ್ರಯೋಜನವನ್ನು ಹೇಳಿದರು. ಜಿಜ್ಞಾಸೆಗೆ ಮೋಕ್ಷಸಾಧನತ್ವವಿದೆ ಎನ್ನುವುದನ್ನು ವಿಶೇಷವಾದ ಪ್ರಮಾಣಗಳಿಂದ ಉಪಪಾದಿಸದೇ ಇರುವುದರಿಂದ ಆ ವಿಷಯದಲ್ಲಿ ಪುನಃ ಸಂಶಯ ಹುಟ್ಟಲು, ಸೃಷ್ಟಿ ಬಂಧನ ಮೋಕ್ಷಾದಿ ಕರ್ತೃತ್ವವು ಶ್ರೀಹರಿಗೆ ಇದೆ ಎನ್ನುವ ವಿಷಯದಲ್ಲಿ ಶ್ರುತಿಸಿದ್ಧತ್ವವಿರುವ ಪ್ರಯುಕ್ತ, ಶ್ರೀಹರಿಯೇ ಮೋಕ್ಷದಾತೃವು ಎಂದು ನಿಶ್ಚಯವಾಗುತ್ತದೆ. ಆದಪ್ರಯುಕ್ತ ಶ್ರೀಹರಿಯು ನಮಗೆ ಜಿಜ್ಞಾಸ್ಯನೇ ಆಗಿರುತ್ತಾನೆ ಎಂದು ಜ್ಞಾನವೆಂಬ ಕಿರಣಗಳಿಂದ ಪ್ರಕಾಶಿತನಾದ ವ್ಯಾಸನೆಂದು ಖ್ಯಾತನಾದ ಆ ಪರಬ್ರಹ್ಮನು ಹೇಳಿರುವನು. (ಜ್ಞಾನವೇ ರಶ್ಮಿಗಳಂತೆ ಆದ್ದರಿಂದ ಜ್ಞಾನರಶ್ಮಿಗಳು, ಅಂದರೆ ವ್ಯಾಪ್ತವಾದ ಜ್ಞಾನವನ್ನು ಹೊಂದಿದವರು ಎಂದರ್ಥ.)

ಜಿಜ್ಞಾಸೆಗೆ ಮೋಕ್ಷಸಾಧನತ್ವವು ಎನ್ನುವ ವಿಷಯದಲ್ಲಿ ಪ್ರಮಾಣವಿಲ್ಲದಿರುವ ಕಾರಣ ಆಕ್ಷೇಪವು ಪ್ರಾಪ್ತವಾಗಲು ಅದನ್ನು ನಿರಾಕರಿಸದೆ ಶ್ರೀಹರಿಗೆ ಮೋಕ್ಷ ಸಾಧನತ್ವವನ್ನು ಸಮರ್ಥನೆ ಮಾಡುವುದು ಅಯುಕ್ತವು ಎಂದರೆ –

**ಯೇನೈವ ಬಂಧಮೋಕ್ಷಃಸ್ಯಾತ್ ಸ ಚ ಜಿಜ್ಞಾಸಯಾ ಗತಃ ॥ ೧೦ ॥**

**ಸುಪ್ರಸನ್ನೋ ಭವೇದೀಶೋ ಜಿಜ್ಞಾಸಾತೋಽಸ್ಯ ಮುಕ್ತಿದಾ ।**

ಸಂತುಷ್ಟನಾದ ಶ್ರೀಹರಿಯಿಂದಲೇ ಸಂಸಾರಬಂಧದಿಂದ ಬಿಡುಗಡೆಯು ಆಗುವುದು. ಅವನಾದರೂ ಜಿಜ್ಞಾಸೆಯಿಂದಲೇ ಸಂತುಷ್ಟನಾಗುವನು. ಆದ್ದರಿಂದ ಮೋಕ್ಷವನ್ನು ಕೊಡತಕ್ಕ ಆ ಶ್ರೀಹರಿಯ ಜಿಜ್ಞಾಸೆ ಮಾಡಬೇಕು.

**ಮೋಕ್ಷಾದಿದತ್ವಮೀಶಸ್ಯ ಕಥಮೇವಾವಗಮ್ಯತೇ ।। ೧೧ ।।**

**ಇತಿ ಚೇಚ್ಛಾಸ್ತ್ರಯೋನಿತ್ವಾತ್ ಶಾಸ್ತ್ರಗಮ್ಯೋ ಹಿ ಮೋಕ್ಷದಃ ।**

ಪರಮೇಶ್ವರನ ಮೋಕ್ಷದಾತೃತ್ವವು ಹೇಗೆ ತಿಳಿಯಲ್ಪಡುವುದು ಎಂದರೆ ಶಾಸ್ತ್ರಯೋನಿತ್ವಾತ್ ಎಂಬ ಸೂತ್ರದಿಂದ ಅದಕ್ಕೆ ಸಮಾಧಾನ ಹೇಳಲ್ಪಟ್ಟಿದೆ. ಅಂದರೆ ಮೋಕ್ಷವನ್ನು ಕೊಡತಕ್ಕವನು ಶಾಸ್ತ್ರೈಕಗಮ್ಯನಾದವನು ಎಂದರ್ಥ. ಯಾವ ಶ್ರೀಹರಿಯನ್ನು ಮೋಕ್ಷವದಾತೃವೆಂದು ಶಾಸ್ತ್ರಗಳು ಪ್ರತಿಪಾದಿಸುವುದೋ ಅವನನ್ನು ಶಾಸ್ತ್ರದಿಂದಲೇ ತಿಳಿಯತಕ್ಕದ್ದು, ಅನುಮಾನಾದಿಗಳಿಂದ ಯಾವನೋ ಒಬ್ಬನನ್ನು ಹಾಗೆ ಕಲ್ಪಿಸಬಾರದು.

ಪ್ರತ್ಯಕ್ಷಾದಿಗಳಿಂದ ವೇದ್ಯನಾದವನೂ ಮೋಕ್ಷದಾತೃವು ಎನ್ನುವುದು ಏಕೆ ಕೂಡುವುದಿಲ್ಲ ಎಂದರೆ –

**ಪ್ರತ್ಯಕ್ಷಾವಸಿತೇಭ್ಯಃ ಸ್ಯಾದ್ಯದಿ ಮೋಕ್ಷಃ ಕಥಂಚನ ।। ೧೨ ।।**

**ಕಿಮಿತ್ಯನಾದಿಸಂಸಾರಮಗ್ನಾಃ ಸರ್ವಾ ಇಮಾಃ ಪ್ರಜಾಃ ।**

**ಯಸ್ಮಾನ್ನಿಯಮತೋ ದುಃಖಹಾನಿಃ ಪ್ರತ್ಯಕ್ಷತೋ ಭವೇತ್ ।।೧೩ ।।**

**ಧಾವಂತ್ಯೇವ ತಮುದ್ದಿಶ್ಯ ರಾಜಾದ್ಯಮಖಿಲಾಃ ಪ್ರಜಾಃ ।**

ಪ್ರತ್ಯಕ್ಷಗಮ್ಯನಾದವನ ಸೇವಾದಿಗಳಿಂದಲೇ ಮೋಕ್ಷವು ಆಗುವುದಾದರೆ, ಹಾಗೆ ಮಾಡುವುದು ಎಲ್ಲರಿಗೂ ಸಾಧ್ಯವಿರಲು ಅನಾದಿಯಾದ ಸಂಸಾರದಲ್ಲಿ ಮಗ್ನರಾದ ಈ ಎಲ್ಲ ಪ್ರಜೆಗಳೂ ಏಕೆ ಮುಕ್ತರಾಗಲಿಲ್ಲ. ಪ್ರತ್ಯಕ್ಷಗಮ್ಯನಾದ ಯಾವನೋ ಒಬ್ಬ ಪುರುಷನಿಂದ ನಿಯಮೇನ ಆತ್ಯಂತಿಕ ದುಃಖವು ನಿವಾರಣೆಯಾಗುವ ಪಕ್ಷದಲ್ಲಿ ಎಲ್ಲ ಪ್ರಜೆಗಳೂ, ದಾರಿದ್ರ್ಯಾದಿ ದುಃಖವನ್ನು ಕಳೆದುಕೊಳ್ಳಲಿಕ್ಕೆ ಇಚ್ಛಿಸುವ ಜನರು ರಾಜನನ್ನು ಕುರಿತು ಧಾವಿಸುವಂತೆ, ಅಂಥಹ ಪುರುಷನೆಡೆಗೆ ಓಡಿಹೋಗುತ್ತಿದ್ದರು.

ಮೋಕ್ಷದಾತೃವಿಗೆ ಅನುಮಾನಗಮ್ಯತ್ವವನ್ನು ದೂಷಿಸುತ್ತಾರೆ –

**ಅನುಮಾಗಮ್ಯತೋ ಮೋಕ್ಷೋ ಯದಿ ಸ್ಯಾದನುಮೈವ ಹಿ ।। ೧೪ ।।**

**ದೃಷ್ಟಪೂರುಷವನ್ಮೋಕ್ಷದಾತೃತಾಂ ವಿನಿವಾರಯೇತ್ ।**

**ತಚ್ಛಾಸ್ತ್ರಗಮ್ಯ ಏವೈಕೋ ಮೋಕ್ಷದೋ ಭವತಿ ಧ್ರುವಮ್ ।। ೧೫ ।।**

'ಅವನು ಮೋಕ್ಷವನ್ನು ಕೊಡುತ್ತಾನೆ ಸಮರ್ಥನಾದ್ದರಿಂದ ಈಶ್ವರನಂತೆ'

ಇತ್ಯಾದಿ ಅನುಮಾನದಿಂದ ಯಾವನೊಬ್ಬ ಪುರುಷನಿಂದ ಮೋಕ್ಷವು ಆಗುವುದೆಂದು ಹೇಳುವುದಾದರೆ, ಅವನು ಮೋಕ್ಷ ಕೊಡಲು ಸಮರ್ಥನಲ್ಲ ಪುರುಷನಾದ್ದರಿಂದ ಇತ್ಯಾದಿ ಅನುಮಾನವೇ ಅವನಿಗೆ ಮೋಕ್ಷದಾತೃತ್ವವನ್ನು ತಡೆಯುವುದು. ಆದ್ದರಿಂದ ಶಾಸ್ತ್ರೈಕಗಮ್ಯನಾದ ಶ್ರೀಹರಿಯೊಬ್ಬನೇ ಮೋಕ್ಷದಾತೃವೆಂದು ನಿಶ್ಚಯವಾಗುತ್ತದೆ.

ಹಾಗೆಯೇ ಆಗಲಿ. ಶಾಸ್ತ್ರೈಕಗಮ್ಯನಿಗೇ ಮೋಕ್ಷದಾತೃತ್ವವು ಇರಲಿ. ಆದರೆ ಶಿವಾದಿ ಇತರರಿಗೂ ಮೋಕ್ಷದಾತೃತ್ವವು ಶಾಸ್ತ್ರಗಳಲ್ಲಿ ಹೇಳಲ್ಪಟ್ಟಿದೆ ಎಂದರೆ, ತತ್ತು ಸಮನ್ವಯಾತ್ ಎಂಬ ನಾಲ್ಕನೆಯ ಸೂತ್ರಕ್ಕೆ ಸಂಗತಿಯನ್ನು ಸೂಚಿಸುತ್ತ ತತ್ ತು ಎನ್ನುವ ಪದದ್ವಯಗಳಿಗೆ ವ್ಯಾಖ್ಯಾನ ಮಾಡುತ್ತಾರೆ --

**ಶಾಸ್ತ್ರಗಮ್ಯಶ್ಚ ನಾನ್ಯೋಽಸ್ತಿ ಮೋಕ್ಷದತ್ವೇನ ಕೇಶವಾತ್ ।**

**ಮೋಕ್ಷದೋ ಹಿ ಸ್ವತಂತ್ರಃ ಸ್ಯಾತ್ ಪರತಂತ್ರಃ ಸ್ವಯಂ ಸೃತೌ ॥ ೧೬ ॥**

**ವರ್ತಮಾನಃ ಕಥಂ ಶಕ್ತಃ ಪರಮೋಕ್ಷಾಯ ಕೇವಲಮ್ ।**

ಮೋಕ್ಷವನ್ನು ಕೊಡತಕ್ಕವನು ಶಾಸ್ತ್ರೈಕಗಮ್ಯನಾದ ಶ್ರೀಹರಿಯನ್ನು ಬಿಟ್ಟು ಮತ್ತೊಬ್ಬನಿಲ್ಲ. ಏಕೆಂದರೆ ಸ್ವತಂತ್ರನೇ ಮೋಕ್ಷದಾತೃವಾಗಲು ಸಾಧ್ಯ. ಪರತಂತ್ರನು ತಾನೇ ಸಂಸಾರದಲ್ಲಿರುವಾಗ, ಪರರ ಅಪೇಕ್ಷೆಯಿಲ್ಲದೆ ಮತ್ತೊಬ್ಬರಿಗೆ ಮೋಕ್ಷವನ್ನು ಕೊಡಲು ಹೇಗೆ ಸಮರ್ಥನಾದಾನು?

ಹಾಗಾದರೆ ಸ್ವತಂತ್ರನಾದ ಮತ್ತೊಬ್ಬನನ್ನು ಆಶ್ರಯಿಸಿ ಮುಕ್ತಿಯನ್ನು ಕೊಡುತ್ತಾನೆ ಎಂದರೆ -

**ಅನ್ಯಾಶ್ರಯೇಣ ಯದ್ಯೇಷ ದದ್ಯಾನ್ಮೋಕ್ಷಂ ಸ ಏವ ಹಿ ॥ ೧೭ ॥**

**ತೇನ ನಾನುಸೃತೋ ಮೋಕ್ಷಂ ನ ದದ್ಯಾದನ್ಯವಾಕ್ಯತಃ ।**

**ಅತಸ್ತದರ್ಥಮಪಿ ಸ ಜ್ಞೇಯೋ ವಿಷ್ಣುರ್ಮುಮುಕ್ಷುಭಿಃ ॥ ೧೮ ॥**

ಈ ಅವಾಂತರೇಶ್ವರನು ಮತ್ತೊಬ್ಬನ (ಸ್ವತಂತ್ರನಾದ ವಿಷ್ಣುವಿನ) ಆಶ್ರಯದಿಂದ ಮುಕ್ತಿಯನ್ನು ಕೊಡುವುದಾದರೆ, ಆಗ ಆ ಸ್ವತಂತ್ರನು ಮೋಕ್ಷೇಚ್ಛುವಿನಿಂದ ಸೇವಿತನೇ ಆಗದಿದ್ದರೆ ಕೇವಲ ಮತ್ತೊಬ್ಬನ ಪ್ರಾರ್ಥನೆಯಿಂದಲೇ ಮೋಕ್ಷವನ್ನು ಕೊಡುತ್ತಾನೆ ಎನ್ನುವುದು ಸಾಧ್ಯವೇ ಇಲ್ಲ. ಆದ್ದರಿಂದ ಆ ಅವಾಂತರೇಶ್ವರನಿಂದ ಮೋಕ್ಷವನ್ನು ಪಡೆಯುವುದಕ್ಕಾದರೂ, ಸ್ವತಂತ್ರನಾದ ವಿಷ್ಣುವು ಮುಮುಕ್ಷುಗಳಿಂದ ತಿಳಿಯತಕ್ಕವನು. ಸ್ವತಂತ್ರನಾದ ವಿಷ್ಣುವೇ ಜಿಜ್ಞಾಸೆಗೆ ಮುಖ್ಯವಿಷಯನೆಂದು ಭಾವ.

ಬ್ರಹ್ಮ ಶಿವ ಮುಂತಾದವರನ್ನು ಸೇವಿಸಿದರೂ ಅವರೂ ಕೂಡ ವಿಷ್ಣುವನ್ನೇ ಆಶ್ರಯಿಸಿರುವುದರಿಂದ ಮೋಕ್ಷವನ್ನು ಕೊಡಲಾರರು. ತಮ್ಮನ್ನು ಆರಾಧಿಸುವ ಮುಕ್ತಿಯೋಗ್ಯರಿಗೆ ಮುಕ್ತಿಯನ್ನು ಕೊಡು ಎಂದು ವಿಷ್ಣುವನ್ನು ಪ್ರಾರ್ಥಿಸಬಹುದಷ್ಟೆ.

ಆ ವಿಷ್ಣುವು ಸ್ವತಂತ್ರನಾದ್ದರಿಂದ ತನ್ನನ್ನು ಜ್ಞಾನಭಕ್ತಿಗಳಿಂದ ಉಪಾಸನೆ ಮಾಡುವ ಭಕ್ತರಿಗೆ ಆ ಸೇವೆಯಿಂದ ಸಂತುಷ್ಟನಾಗಿ ಮುಕ್ತಿಯನ್ನು ಕೊಡುವನು. ವಿಷ್ಣುವು ತನ್ನನ್ನು ಸೇವಿಸದೇ ಇದ್ದವರಿಗೆ ಮೋಕ್ಷವನ್ನು ಸರ್ವಥಾ ಕೊಡಲಾರನು ಎನ್ನುವುದು ಶ್ರುತಿಯಿಂದಲೂ ಸಿದ್ದವಾಗಿದೆ ಎಂದು ತೋರಿಸುತ್ತಾರೆ –

**ಯಮ್ಯೈವೇಷ ಇತಿ ಶ್ರುತ್ಯಾ ತಮೇವೇತಿ ಚ ಸಾದರಮ್ ।**

**ಶಾಸ್ತ್ರಯೋನಿತ್ವಮಸ್ಯೈವ ಜ್ಞಾಯತೇ ವೇದವಾದಿಭಿಃ ॥ ೧೯ ॥**

'ಯಮೇವೈಷ ವೃಣುತೇ ತೇನ ಲಭ್ಯಃ' 'ತಮೇವಂ ವಿದಿತ್ವಾಽತಿಮೃತ್ಯುಮೇತಿ' 'ನಾನ್ಯಃ ಪಂಥಾ ವಿದ್ಯತೇ ಅಯನಾಯ' 'ತಂ ವಿದಿತ್ವೈವ ಮೃತ್ಯುಮತ್ಯೇತಿ' ಇತ್ಯಾದಿ ಶ್ರುತಿಗಳಿಂದ, ಆ ವಿಷ್ಣುವನ್ನು ತಿಳಿಯುವುದರಿಂದಲೇ ಮೋಕ್ಷವು ಎಂಬುದಾಗಿ ಆದರಪೂರ್ವಕವಾಗಿ ತಿಳಿದುಬರುವುದು. ಆದ್ದರಿಂದ ಶಾಸ್ತ್ರೈಕಗಮ್ಯತ್ವವು ವಿಷ್ಣುವಿಗೇ ಎಂದು ವೇದಪ್ರಾಮಾಣ್ಯವಾದಿಗಳಿಂದ ತಿಳಿಯಲ್ಪಡುತ್ತದೆ.

**ಯ ಏನಂ ವಿದುರಮೃತಾ ಇತ್ಯುಕ್ತಸ್ತು ಸಮುದ್ರಗಃ ।**

**ತದೇವ ಬ್ರಹ್ಮ ಪರಮಮಿತಿ ಶ್ರುತ್ಯಾವಧಾರಿತಃ ॥ ೨೦ ॥**

'ಯ ಏನಂ ವಿದುರಮೃತಾಸ್ತೇ ಭವಂತಿ' ಎಂಬ ಶ್ರುತಿಯಿಂದಲೂ ಜ್ಞಾನಕ್ಕೆ ಮೋಕ್ಷಹೇತುತ್ವವು ತಿಳಿದುಬರುತ್ತದೆ. ಈ ಶ್ರುತಿಯಲ್ಲಿನ ಏನಂ ಎಂಬುದಕ್ಕೆ ಸಮುದ್ರಗಃ ಎಂದು ವಿವರಣೆ. ಸಮುದ್ರಂತಸ್ಥತ್ವವು ಶ್ರೀಹರಿಯ ಲಿಂಗ. 'ತದೇವ ಬ್ರಹ್ಮ ಪರಮಂ ಕವೀನಾಂ' ಎಂಬ ಶ್ರುತಿಯು ಸಮುದ್ರಂತಸ್ಥನು ಪರಬ್ರಹ್ಮನೆಂದು ನಿಶ್ಚಯ ಮಾಡುತ್ತದೆ.

**ಯತಃ ಪ್ರಸೂತೇತಿ ತತಃ ಸೃಷ್ಟಿಮಾಹ ತತೋ ಹರಿಃ ।**

**ಶಾಸ್ತ್ರಯೋನಿರ್ನ ಚಾನ್ಯೋಽಸ್ತಿ ಮುಖ್ಯತಸ್ತ್ವಿತಿ ಗಮ್ಯತೇ ॥ ೨೧ ॥**

'ಯತಃ ಪ್ರಸೂತಾ ಜಗತಃ ಪ್ರಸೂತೀ' ಎನ್ನುವ ಶ್ರುತಿಯು ಜಗತ್ತಿಗೆ ಕಾರಣ ವಾದ ಮೂಲಪ್ರಕೃತಿಗೆ ಶ್ರೀಹರಿಯಿಂದ ಸೃಷ್ಟಿಯನ್ನು ಹೇಳುತ್ತದೆ. ಶ್ರೀಹರಿಯಿಂದ ಇತರರಿಗೆ ಮೂಲಪ್ರಕೃತಿಯನ್ನು ಕುರಿತು ಕಾರಣತ್ವವು ಕೂಡಲಾರದು. ಆದ್ದರಿಂದ ಶ್ರೀಹರಿಯೇ ಮುಖ್ಯವಾಗಿ ಮೋಕ್ಷವನ್ನು ಕೊಡತಕ್ಕವನಾಗಿ ಶಾಸ್ತ್ರೈಕಗಮ್ಯನು, ಮತ್ತೊಬ್ಬನು ಶಾಸ್ತ್ರೈಕಗಮ್ಯನಾದ ಮೋಕ್ಷದಾತೃವು ಇರುವುದಿಲ್ಲ.

ಈ ಸೂತ್ರದಲ್ಲಿರತಕ್ಕ 'ಸಮನ್ವಯಾತ್' ಎನ್ನುವ ಹೇತುವನ್ನು ವ್ಯಾಖ್ಯಾನ ಮಾಡುತ್ತಾರೆ –

**ಶಾಸ್ತ್ರಯೋನಿತ್ವಮೇತಸ್ಯ ಜ್ಞಾಯತೇ ಹಿ ಸಮನ್ವಯಾತ್ ।**

**ಸಮಿತಿ ಹ್ಯುಪಸರ್ಗೇಣ ಪರಮಮುಖ್ಯಾರ್ಥತೋಚ್ಯತೇ ॥ ೨೨ ॥**

ಈ ಪರಬ್ರಹ್ಮನಿಗೆ ಉಪಕ್ರಮಾದಿ ಲಿಂಗಗಳಿಂದ ಶಾಸ್ತ್ರಯೋನಿತ್ವವು ಪರಮ ಮುಖ್ಯವೃತ್ತಿಯಿಂದ ತಿಳಿಯಲ್ಪಡುತ್ತದೆ. ಸಮ್ ಎನ್ನುವ ಉಪಸರ್ಗದಿಂದ ಪರಮ ಮುಖ್ಯಾರ್ಥತ್ವವು ಹೇಳಲ್ಪಡುತ್ತದೆ.

**ಏವಂ ಪರಮಮುಖ್ಯಾರ್ಥೋ ನಾರಾಯಣ ಇತಿ ಶ್ರುತೇಃ ।**

**ನಿರ್ಧಾರಣಾಯ ನಾಶಬ್ದಮಿತಿ ವೇದಪತಿರ್ಜಗೌ ॥ ೨೩ ॥**

ಹೀಗೆ ಮೋಕ್ಷಾದಿಗಳನ್ನು ಕೊಡುವವನಾಗಿ ನಾರಾಯಣನು ಎಲ್ಲ ಶ್ರುತಿಗಳಿಗೆ ಪರಮಮುಖ್ಯಾರ್ಥನು ಎನ್ನುವುದನ್ನು ನಿಶ್ಚಯಿಸುವುದಕ್ಕಾಗಿ 'ಬ್ರಹ್ಮನು ಶಬ್ದಗಳಿಂದ ಅವಾಚ್ಯನಲ್ಲ' ಎಂದು ವೇದವ್ಯಾಸರು ಹೇಳಿದರು.

ಗತಿ ಸಾಮಾನ್ಯಾತ್ ಎನ್ನುವ ಸೂತ್ರಕ್ಕೆ ಸಂಗತಿಯನ್ನು ಹೇಳುತ್ತಾರೆ –

**ಕಥಂ ಸಮನ್ವಯೋ ಜ್ಞೇಯಃ ಸ್ವಲ್ಪಶಾಖಾವಿದಾಂ ನೃಣಾಮ್ ।**

**ವೇದಾ ಹ್ಯನಂತಾ ಇತಿ ಹಿ ಶ್ರುತಿರಾಹಾಪ್ಯನಂತತಾಮ್ ॥ ೨೪ ॥**

ಸಂ ಶಬ್ದಕ್ಕೆ ಮುಖ್ಯವೃತ್ತಿಯಿಂದ ಹಾಗೂ ಸರ್ವವೇದಗಳಿಂದ ಸಮನ್ವಯ ಎಂಬುದಾಗಿ ಎರಡು ರೀತಿಯ ಅರ್ಥವಿದೆ. ಎರಡನೆಯ ಅರ್ಥವನ್ನು ಇಲ್ಲಿ ಹೇಳುತ್ತಾರೆ. ವೇದಗಳು ಅನಂತವಾಗಿವೆ. ಅನಂತಾ ವೈ ವೇದಾಃ ಎನ್ನುವ ಶ್ರುತಿಯೂ ವೇದಗಳಿಗೆ ಅನಂತತ್ವವನ್ನು ಹೇಳುತ್ತದೆ. ಹೀಗಿರುವಾಗ ಅಲ್ಪ ಪ್ರಜ್ಞೆಯುಳ್ಳ ಅಲ್ಪ ಶಾಖಾವೇದಿಗಳಿಗೆ ಸಕಲವೇದ ಸಮನ್ವಯವು ಹೇಗೆ ತಿಳಿಯುವುದು ಸಾಧ್ಯ?

ಪುರುಷರು ಅಲ್ಪಜ್ಞರೇ ಆಗಿರಲಿ, ವೇದಗಳು ಅನಂತಗಳೇ ಇರಲಿ, ಹಾಗಿದ್ದರೂ ಸಮನ್ವಯ ಜ್ಞಾನವು ಅಶಕ್ಯವೆಂಬುದು ಹೇಗೆ ಎಂದರೆ –

**ಅನಂತವೇದನಿರ್ಣೀತಿರ್ಮಹಾಪ್ರಲಯವಾರಿಧೇಃ ।**

**ಉತ್ತಾರಣೋಪಮೇತ್ಯಸ್ಮಾನ್ನ ಜ್ಞೇಯೋಽತ್ರ ಸಮನ್ವಯಃ ॥ ೨೫ ॥**

**ಇತ್ಯಾಶಂಕಾಪನೋದಾರ್ಥಂ ಸ ಆಹ ಕರುಣಾಕರಃ ।**

ಮಹಾಪ್ರಲಯ ಸಮುದ್ರವನ್ನು ಹೇಗೆ ದಾಟುವುದು ಅಸಾಧ್ಯವೋ ಹಾಗೆಯೇ ಅಲ್ಪ ವೇದಜ್ಞರಿಗೆ ಅನಂತವೇದಗಳ ನಿರ್ಣಯವು ಅಶಕ್ಯವು. ಈ ಕಾರಣದಿಂದ ವಿಷ್ಣುವಿನಲ್ಲಿ ಸಕಲ ವೇದಗಳ ಸಮನ್ವಯವನ್ನು ತಿಳಿಯುವುದು ಸಾಧ್ಯವಿಲ್ಲ. ಹೀಗೆ ಆಶಂಕೆ ಬಂದರೆ ಅದನ್ನು ಪರಿಹರಿಸುವುದಕ್ಕಾಗಿ ಕರುಣಾಳುಗಳಾದ ವೇದವ್ಯಾಸರು 'ಗತಿ ಸಾಮಾನ್ಯಾತ್' ಎನ್ನುವ ಸೂತ್ರವನ್ನು ಹೇಳಿದರು.

ಈಗ ಸೂತ್ರದ ಅಭಿಪ್ರಾಯವನ್ನು ಹೇಳುತ್ತಾರೆ –

**ಅಶಕ್ಯೋತ್ತಾರಣತ್ವೇಽಪಿ ಹ್ಯಾಗಮಾಪಾರವಾರಿಧೇಃ ॥ ೨೬ ॥**

**ನಿರ್ಣೀಯತೇ ಮಯ್ಯೈವಾಯಂ ರೋಮಕೂಪಲಯೋದಿನಾ ।**

ನನ್ನಿಂದ ಬೇರೆಯವರಿಗೆ ಮಹಾಪ್ರಲಯೋದಕ ಸಮುದ್ರದಂತೆ ಅಪಾರವಾದ ಆಗಮವಾರಿಧಿಯ ಪಾರವನ್ನು ಅರಿಯಲು ಅಶಕ್ಯವಾಗಿದ್ದರೂ, ರೋಮಕೂಪದಲ್ಲಿ ಲೀನವಾದ ಪ್ರಲಯ ಸಮುದ್ರವನ್ನುಳ್ಳ ನನ್ನಿಂದಲೇ ಸಕಲವೇದಗಳ ನಿರ್ಣಯವು ಮಾಡಲ್ಪಟ್ಟಿದೆ. ಅಂದರೆ ವೇದವು ಪ್ರಲಯಸಮುದ್ರಕ್ಕೆ ಸದೃಶವಾದ ಆನಂತ್ಯವನ್ನು ಹೊಂದಿದ್ದರೂ ಅಪರಿಮಿತವಾದ ನನ್ನ ಜ್ಞಾನವೆಂಬ ಸಮುದ್ರದಲ್ಲಿ ಲೀನವಾಗುತ್ತದೆ ಎಂದು ಭಾವ.

ಇದನ್ನೇ ವಿವರಿಸುತ್ತಾರೆ –

**ಯದ್ಯಪ್ಯಶೇಷವೇದಾರ್ಥೋ ದುರ್ಗಮೋऽಖಿಲಮಾನವೈಃ ॥ ೨೭ ॥**

**ಮಜ್ಜ್ಞಾನಾವ್ಯಾಕೃತಾಕಾಶೇ ಪ್ರಾಪ್ನೋತಿ ಪರಮಾಣುತಾಮ್ ।**

ಎಲ್ಲ ಮನುಷ್ಯರಿಂದ ಸಕಲ ವೇದಾರ್ಥವು ತಿಳಿಯಲು ಅಶಕ್ಯವೇ ಆಗಿದ್ದರೂ, ಅದು ನನ್ನ ಜ್ಞಾನವೆಂಬ ಅವ್ಯಾಕೃತಾಕಾಶದಲ್ಲಿ ಪರಮಾಣುತ್ವವನ್ನು ಹೊಂದುತ್ತದೆ.

ಸೂತ್ರದ ಅಭಿಪ್ರಾಯವನ್ನು ಉಪಸಂಹಾರ ಮಾಡುತ್ತಾರೆ –

**ಇತಿ ಪ್ರಕಾಶಯನ್ ವಿಶ್ವಪತಿರಾಹ ಪ್ರಮೇಯತಾಮ್ ॥ ೨೮ ॥**

**ನಿಖಿಲಸ್ಯಾಪಿ ವೇದಸ್ಯ ಗತಿಸಾಮಾನ್ಯಮಂಜಸಾ ।**

ಹಿಂದೆ ಹೇಳಿದ ಪ್ರಕಾರ ಎಲ್ಲ ವೇದಕ್ಕೂ ತನ್ನಿಂದ ಪ್ರಮೇಯತ್ವವನ್ನು ಅಂದರೆ ಜ್ಞಾನವಿಷಯತ್ವವನ್ನು ಚೆನ್ನಾಗಿ ಸೂಚಿಸಲು ವಿಶ್ವಪತಿಯಾದ ವೇದವ್ಯಾಸರು ಸಕಲ ವೇದಾರ್ಥ ನಿರ್ಣಯಕ್ಕೆ ಸಾಮ್ಯವನ್ನು ಹೇಳಿರುತ್ತಾರೆ. ವೇದವ್ಯಾಸರಿಗೆ ಎಲ್ಲ ವೇದಗಳ ಜ್ಞಾನವಿದೆ ಎನ್ನುವುದನ್ನು ಸೂಚಿಸಲು ವಿಶ್ವಪತಿ ಎಂದು ಹೇಳಿದ್ದಾರೆ. ಎಲ್ಲ ವೇದಗಳೂ ವಿಶ್ವದಲ್ಲಿಯೇ ಸೇರಿವೆ. ಸ್ವಾಮಿತ್ವವಿದೆಯೆಂದರೆ ಅವುಗಳ ಪೂರ್ಣ ಜ್ಞಾನವೂ ಇದೆ ಎಂದರ್ಥ. ಸರ್ವಜ್ಞತ್ವವು ಸರ್ವಸ್ವಾಮಿತ್ವಕ್ಕೆ ಗಮಕ.

ವೇದವ್ಯಾಸರು ಹೇಳಿದಂತೆಯೇ ಮತ್ತೊಬ್ಬರು ರುದ್ರಾದಿ ಇತರರನ್ನು ಕುರಿತು ಸಕಲ ವೇದಗಳ ಗತಿಸಾಮ್ಯವನ್ನು ಹೇಳಿದರೆ, ಶ್ರೀಹರಿಯಲ್ಲಿಯೇ ಸಕಲವೇದಗಳ ಗತಿಸಾಮಾನ್ಯವು ಎನ್ನುವುದು ನಿರ್ಣಯವಾಗಲಾರದು ಎಂದರೆ –

**ಕೋ ನಾಮ ಗತಿಸಾಮಾನ್ಯಮನಂತಾಗಮಸಂಪದಃ ॥ ೨೯ ॥**

**ಜ್ಞಾನಸೂರ್ಯಮೃತೇ ಬ್ರೂಯಾತ್ತಮೇಕಂ ಬಾದರಾಯಣಮ್ ।**

ಜ್ಞಾನಸೂರ್ಯರಾದ ಆ ವೇದವ್ಯಾಸರೊಬ್ಬರನ್ನು ಬಿಟ್ಟು ಅಪರಿಮಿತವಾದ ಆಗಮವೆಂಬ ಸಂಪತ್ತಿನ ಜ್ಞಾನಸಾಮ್ಯವನ್ನು ಬೇರೆ ಯಾರು ತಾನೇ ಹೇಳಿಯಾನು?

ಜ್ಞಾನದಿಂದ ಸೂರ್ಯ – ಜ್ಞಾನಸೂರ್ಯ. ಅಂದರೆ ಹೇಗೆ ಸೂರ್ಯನು ತನ್ನ ತೇಜಸ್ಸಿನಿಂದ ವಿಶ್ವವನ್ನು ಪ್ರಕಾಶಿಸುತ್ತಾನೋ ಹಾಗೆಯೇ ಜ್ಞಾನಸೂರ್ಯರಾದ ವೇದ ವ್ಯಾಸರು ಸಜ್ಜನರೆಂಬ ವಿಶ್ವವನ್ನು ಜ್ಞಾನದಿಂದ ಪ್ರಕಾಶಪಡಿಸುತ್ತಾರೆ ಎಂದು ಭಾವ.

ಹಾಗಾದರೆ ವೇದವ್ಯಾಸರು ಸರ್ವಜ್ಞರಾದುದರಿಂದ ಅವರಿಗೆ ಗತಿಸಾಮಾನ್ಯ ಜ್ಞಾನವಿರಲಿ. ಆದರೆ ಶಾಸ್ತ್ರವನ್ನು ಓದುವವರಿಗೆ ಸರ್ವಜ್ಞತ್ವವಿಲ್ಲವಾದ್ದರಿಂದ ಗತಿ ಸಾಮಾನ್ಯದಿಂದ ಏನು ಪ್ರಯೋಜನ ಎಂದು ಆಶಂಕಿಸಿದರೆ, ಸೂತ್ರಕ್ಕೆ ಮತ್ತೊಂದು ಅರ್ಥವನ್ನು ಹೇಳುತ್ತಾರೆ –

**ಅನ್ಯೋಽಪ್ಯಲ್ಪಮತಿಃ ಶಾಖಾಚತುಷ್ಪಂಚಗತಂ ವಸು ।। ೩೦ ।।**

**ಜಾನನ್ನನುಮಿತತ್ವೇನ ಬ್ರೂಯಾತ್ತಸ್ಯ ಪ್ರಸಾದತಃ ।**

ಅನ್ಯನು ಅಲ್ಪಮತಿಯಾಗಿದ್ದರೂ, ಆ ವೇದವ್ಯಾಸರ ಅನುಗ್ರಹದಿಂದ ನಾಲ್ಕೈದು ಶಾಖೆಗಳಲ್ಲಿರತಕ್ಕ ಆಗಮಾರ್ಥವನ್ನು ತಿಳಿದವನಾಗಿ, ಆ ಜ್ಞಾನದಿಂದ ಅಪರಿಮಿತ ಆಗಮಸಂಪತ್ತಿಗೆ ಗತಿಸಾಮ್ಯವನ್ನು ಹೇಳಿಯಾನು.

ಹಾಗಾದರೆ ಇದೇ ಸೂತ್ರದ ವ್ಯಾಖ್ಯಾನವಾಗಲಿ. ಹಿಂದೆ ಹೇಳಿದ್ದು ಸೂತ್ರಕ್ಕೆ ವ್ಯಾಖ್ಯಾನವಾಗದೇ ಹೋಗಲಿ. ಸೂತ್ರಕಾರರು ಸರ್ವಜ್ಞರಾದ್ದರಿಂದ ಸಕಲ ವೇದಗಳ ಗತಿಸಾಮ್ಯವನ್ನು ತಿಳಿಯುತ್ತಾರೆ ಎಂದು ಅಂಗೀಕರಿಸೋಣ. ಇದರಿಂದ ಇತರರ ಸಂಶಯವು ನಿವಾರಣೆಯಾಗುವುದು ಹೇಗೆ ಎಂದು ಆಶಂಕಿಸಿದರೆ –

**ಇತಿ ಮುಖ್ಯತಯಾಶೇಷಗತಿಸಾಮಾನ್ಯವಿತ್ಪ್ರಭುಃ ।। ೩೧ ।।**

**ಪ್ರತಿಜಜ್ಞೇ ದೃಢಂ ಯಸ್ಮಾದ್ದೇವಾನಾಮಪಿ ಪೂರ್ಯತೇ ।**

ಮುಖ್ಯವೃತ್ತಿಯಿಂದ ಎಲ್ಲ ವೇದಗಳಿಗೆ ಗತಿಸಾಮ್ಯವನ್ನು ತಿಳಿದ ವೇದವ್ಯಾಸರು, ಉತ್ತಮಾಧಿಕಾರಿಗಳಿಗೆ ಯಾವ ರೀತಿಯಿಂದ ಸಂಶಯ ನಿವಾರಣೆಯಾಗಿ ದೃಢವಾದ ನಿಶ್ಚಯವು ಆಗುವುದೋ ಹಾಗೆ ಪ್ರತಿಜ್ಞೆ ಮಾಡಿರುತ್ತಾರೆ. ಅಂದರೆ ಸೂತ್ರಕಾರರಲ್ಲಿ ಪರಮಾಪ್ತತ್ವವನ್ನು ಹೊಂದಿರುವ ಉತ್ತಮಾಧಿಕಾರಿಗಳಿಗೆ ಪ್ರತಿಜ್ಞಾಮಾತ್ರದಿಂದಲೇ ಶಂಕಾನಿವಾರಣೆಯಾಗುವ ಪ್ರಯುಕ್ತ ಅವರಿಗೆ ಪ್ರತಿಜ್ಞೆಯಷ್ಟೇ ಸಾಕು. ಇತರರನ್ನು ಕುರಿತು ಅನುಮಾನದಿಂದ ಗತಿಸಾಮಾನ್ಯವು. ಹೀಗೆ ಅಧಿಕಾರಿಭೇದದಿಂದ ಸೂತ್ರಕ್ಕೆ ಎರಡು ರೀತಿಯ ವ್ಯಾಖ್ಯಾನವೂ ಕೂಡುವುದು ಎಂದು ಭಾವ.

ಹಾಗಾದರೆ ಈ ಐದು ಅಧಿಕರಣಗಳಿಂದ ಹೇಳಬೇಕಾದ ಎಲ್ಲ ಅಂಶವನ್ನೂ ಹೇಳಿರುವುದರಿಂದ ಈ ಅಧ್ಯಾಯದ ಉಳಿದ ಅಧಿಕರಣಗಳು ಯಾವುದಕ್ಕಾಗಿ ಎಂದು ಆಶಂಕಿಸಿದರೆ –

**ಅತೋ ನಿಖಿಲವೇದಾನಾಂ ಸಿದ್ಧ ಏವ ಸಮನ್ವಯಃ ।। ೩೨ ।।**

**ಇತಿಃ ಸುಜ್ಞಾಪಿತಾರ್ಥೋಽಪಿ ಪೃಥಕ್ ಚಾಹ ಸಮನ್ವಯಮ್ ।**

ಹಿಂದೆ ಹೇಳಿದ ಪ್ರಕಾರ ಐದು ಅಧಿಕರಣಗಳಿಂದಲೇ ಎಲ್ಲ ವೇದಗಳಿಗೆ ಸಮನ್ವಯವು ಸಿದ್ಧವಾಗಿದೆ. ಈ ಪ್ರಕಾರ ಚೆನ್ನಾಗಿಯೇ ಅರ್ಥವನ್ನು ತಿಳಿಸಿದ್ದರೂ ಪುನಃ ಪರಿಶಿಷ್ಟವಾದ ಅಧ್ಯಾಯದಿಂದ ಸಮನ್ವಯವನ್ನು ವಿಸ್ತಾರವಾಗಿ ಹೇಳಿದ್ದಾರೆ. ಹಿಂದೆ ಹೇಳಿದ್ದನ್ನೇ ಪುನಃ ವಿಸ್ತರಿಸಿ ಹೇಳುವುದು ವಿಶೇಷವಾದ ಜ್ಞಾನಕ್ಕೆ ಕಾರಣವು.

ಪ್ರಥಮಾಧ್ಯಾಯದಲ್ಲಿ ನಾಲ್ಕು ಪಾದಗಳಲ್ಲಿ ಕ್ರಮವಾಗಿ ಪ್ರತಿಪಾದಿತವಾಗಿರುವ ವಿಷಯಗಳನ್ನು ಸಂಗ್ರಹವಾಗಿ ತಿಳಿಸುತ್ತಾರೆ –

**ತತ್ರ ಪ್ರಥಮತೋಽನ್ಯತ್ರ ಪ್ರಸಿದ್ಧಾನಾಂ ಸಮನ್ವಯಃ ।। ೩೩ ।।**

**ಶಬ್ದಾನಾಂ ವಾಚ್ಯ ಏವಾತ್ರ ಮಹಾಮಲ್ಲೇಶಭಂಗವತ್ ।**

ಮೊದಲನೇ ಅಧ್ಯಾಯದಲ್ಲಿ ಮೊದಲನೇ ಪಾದದಲ್ಲಿ ಬೇರೆ ಕಡೆಗಳಲ್ಲಿಯೂ ಪ್ರಸಿದ್ಧವಾದ ನಾಮಾತ್ಮಕ ಶಬ್ದಗಳಿಗೆ ವಿಷ್ಣುವಿನಲ್ಲಿ ಮಹಾಮಲ್ಲೇಶಭಂಗನ್ಯಾಯದಂತೆ ಸಮನ್ವಯವು ಹೇಳಲ್ಪಟ್ಟಿದೆ.

ಹಾಗಾದರೆ ನಾಲ್ಕನೇ ಪಾದದಲ್ಲಿ ಹೇಳಿದ ಬೇರೆ ಕಡೆಗಳಲ್ಲಿಯೇ ಪ್ರಸಿದ್ಧವಾದ ಶಬ್ದಗಳ ಸಮನ್ವಯವು ಪ್ರಧಾನವಾದ್ದರಿಂದ ಅದನ್ನೇ ಮೊದಲು ಹೇಳಬೇಕಿತ್ತು. ಏಕೆಂದರೆ ಅನ್ಯತ್ರ ಪ್ರಸಿದ್ಧಿಯಿಂದ ಅನ್ಯತ್ರೈವ ಪ್ರಸಿದ್ಧಿಯು ಪ್ರಬಲವು ಎಂದರೆ –

**ಇತೋಽಪ್ಯಭ್ಯಧಿಕತ್ವೇಽಪಿ ತುರ್ಯಪಾದೋದಿತಸ್ಯ ತು ।। ೩೪ ।।**

**ಮಹಾಸಮನ್ವಯೇ ತಸ್ಮಿನ್ನಾಧಿಕಾರೋಽಖಿಲಸ್ಯ ಹಿ ।**

**ಬ್ರಹ್ಮೈವಾಧಿಕೃತಸ್ತತ್ರ ಮುಖ್ಯತೋಽನ್ಯೇ ಯಥಾಕ್ರಮಮ್ ।। ೩೫ ।।**

**ದುರ್ಗಮತ್ವಾಚ್ಚ ನೈವಾತ್ರ ಪ್ರಾಥಮ್ಯೇನೋದಿತೋಂಽಜಸಾ ।**

ನಾಲ್ಕನೆಯ ಪಾದದಲ್ಲಿ ಹೇಳಲ್ಪಟ್ಟ ಅನ್ಯತ್ರೈವ ಪ್ರಸಿದ್ಧ ಶಬ್ದಗಳ ಸಮನ್ವಯಕ್ಕೆ ಅನ್ಯತ್ರ ಪ್ರಸಿದ್ಧ ಶಬ್ದಗಳ ಸಮನ್ವಯಕ್ಕಿಂತ ಅತ್ಯಂತ ಆಧಿಕ್ಯವಿದ್ದರೂ ಈ ಅಧ್ಯಾಯದಲ್ಲಿ ಪ್ರಾಥಮ್ಯದಿಂದ ಹೇಳಲೇ ಇಲ್ಲ. ಏಕೆಂದರೆ ಅಧಿಕವಾದ ಗ್ರಹಣ ಶಕ್ತಿಯನ್ನು ಅಪೇಕ್ಷಿಸುವ ಅನ್ಯತ್ರೈವ ಪ್ರಸಿದ್ಧವಾದ ಸಮನ್ವಯದಲ್ಲಿ ಎಲ್ಲರಿಗೆ ಅಧಿಕಾರವು ಇರುವುದಿಲ್ಲ. ಆ ಮಹಾಸಮನ್ವಯದಲ್ಲಿ ಮುಖ್ಯವಾಗಿ ಚತುರ್ಮುಖ ಬ್ರಹ್ಮನೇ ಅಧಿಕಾರವುಳ್ಳವನು. ಇತರರು ಅವರವರ ಯೋಗ್ಯತಾನುಕ್ರಮಕ್ಕೆ ತಕ್ಕಂತೆ ಅಧಿಕಾರಿಗಳು. ಅನ್ಯತ್ರೈವ ಪ್ರಸಿದ್ಧವಾದ ಶಬ್ದಗಳ ಸಮನ್ವಯವು ಮಂದಾಧಿಕಾರಿಗಳಿಗೆ ಮೊದಲಿಗೇ ಬುದ್ಧಿಯಲ್ಲಿ ಆರೋಢವಾಗುವುದಿಲ್ಲ. ಆದ್ದರಿಂದಲೇ ಈ ಸಮನ್ವಯವು ಮೊದಲನೆಯ ಅಧ್ಯಾಯದ ಮೊದಲಲ್ಲಿ ಚೆನ್ನಾಗಿ ಹೇಳಲ್ಪಡಲೇ ಇಲ್ಲ. ಸಾಧಾರಣ ಸಮನ್ವಯ ಜ್ಞಾನದಿಂದ ಮಂದಾಧಿಕಾರಿಗಳ ಬುದ್ಧಿಯು ವೈದಿಕ ವ್ಯುತ್ಪತ್ತಿಯಲ್ಲಿ

ಆಸಕ್ತವಾಗಿ ಕ್ರಮೇಣ ವಿಶೇಷ ಸಮನ್ವಯದಲ್ಲಿ ಗ್ರಹಣ ಶಕ್ತಿಯನ್ನು ಪಡೆಯುತ್ತದೆ.

**ಅತೋऽನ್ಯತ್ರಪ್ರಸಿದ್ಧಾನಾಂ ಶಬ್ದಾನಾಂ ನಿರ್ಣಯಾಯ ತು ॥ ೩೬ ॥**

**ಪ್ರವೃತ್ತಃ ಪ್ರಥಮಂ ದೇವಃ ........................ ।**

ಆದ್ದರಿಂದ (ಪ್ರಾಧಾನ್ಯದ ನಂತರ ಅತಿಪ್ರಾಧಾನ್ಯವು ಹೇಳಲ್ಪಡಬೇಕು ಎಂಬ ಕ್ರಮವಿರುವುದರಿಂದ) ಅನ್ಯತ್ರ ಪ್ರಸಿದ್ಧ ಶಬ್ದಗಳ ನಿರ್ಣಯಕ್ಕಾಗಿಯೇ ಪ್ರಥಮದಲ್ಲಿ ವೇದವ್ಯಾಸರು ಪ್ರವೃತ್ತರಾಗಿರುತ್ತಾರೆ.

ಅದರಲ್ಲಿ ಆನಂದಮಯಾಧಿಕರಣಕ್ಕೆ ಪ್ರಾಥಮ್ಯವೇಕೆಂದರೆ ಅದಕ್ಕೆ ಹೇತುವನ್ನು ಸೂಚಿಸುತ್ತಾರೆ –

**...................... ತತ್ರಾನಂದಾದಯೋ ಗುಣಾಃ ।**

**ಈಶಸ್ಯೈವೇತಿ ನಿರ್ಣೀತಾಃ ಶ್ರುತಿಯುಕ್ತಿಸಮಾಶ್ರಯಾತ್ ॥ ೩೭ ॥**

ಸಮನ್ವಯವನ್ನು ವಿಸ್ತರಿಸುವುದರಲ್ಲಿ ಆನಂದಾದಿ ಗುಣಗಳಿಗೇ ಪ್ರಾಥಮ್ಯವು. ಏಕೆಂದರೆ ಶ್ರುತಿ ಹಾಗೂ ಯುಕ್ತಿಗಳನ್ನು ಚೆನ್ನಾಗಿ ಆಶ್ರಯಿಸಿಕೊಂಡು ಆನಂದಾದಿ ಗುಣಗಳು ಶ್ರೀಹರಿಗೇನೆ ಎಂದು ನಿರ್ಣಯಿಸಲ್ಪಡುತ್ತವೆ. ಆನಂದ ವಿಜ್ಞಾನಾದಿಗಳು ಎಲ್ಲ ಶೋಭನವಾದ ಗುಣಗಳಿಗೆ ಮೂರ್ಧನ್ಯ ಪ್ರಾಯವು. ಆದಪ್ರಯುಕ್ತ ಮಂಗಲ ಸ್ವರೂಪರಾದ ಶ್ರೀಮದಾಚಾರ್ಯರು ಆನಂದ ಶಬ್ದದ ಸಮನ್ವಯವನ್ನೇ ಮೊದಲು ಹೇಳಿರುತ್ತಾರೆ.

ಅಂತರಾಧಿಕರಣಕ್ಕೂ ಆಕಾಶಾಧಿಕರಣಕ್ಕೂ ಆನಂದಮಯಾಧಿಕರಣದ ಸಾಂಗತ್ಯವು ಸಮಾನವಾಗಿದ್ದರೂ, ಮೊದಲಿಗೆ ಅಂತರಾಧಿಕರಣ ಎನ್ನುವ ಕ್ರಮಕ್ಕೆ ಕಾರಣವೇನು ಎಂದರೆ –

**ದೇವತಾಂತರಗಾಃ ಸರ್ವೇ ಶಬ್ದವೃತ್ತಿನಿಮಿತ್ತತಃ ।**

**ವಿಷ್ಣುಮೇವ ವದಂತ್ಯದ್ಧಾ .................. ॥**

ಬೇರೆ ದೇವತೆಗಳಲ್ಲಿ ಪ್ರಸಿದ್ಧವಾಗಿರತಕ್ಕ ಇಂದ್ರ ಮೊದಲಾದ ಎಲ್ಲ ಶಬ್ದಗಳೂ ಪರಮಮುಖ್ಯವಾದ ಶಬ್ದವೃತ್ತಿಯಿಂದಲೇ ವಿಷ್ಣುವಿನಲ್ಲಿ ಪ್ರಸಿದ್ಧವಾಗಿವೆ, ಕೇವಲ ಅಮುಖ್ಯವೃತ್ತಿಯಿಂದಲ್ಲ. ಹೇಗೆಂದರೆ ಶಬ್ದವೃತ್ತಿಗಳಾದ ಯೋಗರೂಢಿಗಳಿಗೆ ನಿಮಿತ್ತ ಗಳಾದ ಬಹುಲ ಪ್ರಯೋಗಾದಿಗಳು ವಿಷ್ಣುವಿನಲ್ಲಿಯೇ ಇರುತ್ತವೆ. ಆದ್ದರಿಂದ ಎಲ್ಲ ಶಬ್ದಗಳೂ ಮುಖ್ಯವಾಗಿ ವಿಷ್ಣುವನ್ನೇ ಹೇಳುತ್ತವೆ.

ಹಾಗಾದರೆ ಇಂದ್ರಾದಿಗಳಲ್ಲಿ ಆ ಶಬ್ದಗಳಿಗೆ ಪ್ರವೃತ್ತಿಯೇ ಇಲ್ಲವೇ ಎಂದರೆ –

**........................... ತತ್ಸಂಗಾದುಪಚಾರತಃ ॥ ೩೮ ॥**

**ಅನ್ಯದೇವಾನ್ ವದಂತೀಹ ವಿಶೇಷಗುಣವತ್ತ್ವತಃ ।**

**ವಿಷ್ಣುಮೇವ ಪರಂ ಬ್ರೂಯುರೇವಮನ್ಯೇಽಪ್ಯಶೇಷತಃ ॥ ೩೯ ॥**

ವಿಷ್ಣುವಿನ ಸಂಬಂಧದಿಂದ ಇಂದ್ರಾದಿ ಶಬ್ದಗಳು ಆ ದೇವತೆಗಳನ್ನು ಅಮುಖ್ಯ ವೃತ್ತಿಯಿಂದ ಹೇಳುತ್ತವೆ. ಪೂರ್ಣತ್ವ ಸ್ವಾತಂತ್ರ್ಯ ಮೊದಲಾದ ವಿಶೇಷ ಗುಣಗಳ ನಿಮಿತ್ತದಿಂದ ಇಂದ್ರಾದಿ ಎಲ್ಲ ಶಬ್ದಗಳೂ ವಿಷ್ಣುವನ್ನೇ ಸರ್ವೋತ್ತಮತ್ವೇನ ಹೇಳುತ್ತವೆ. ಹೀಗೆಯೇ ಬೇರೆ ಎಲ್ಲ ಶಬ್ದಗಳೂ ವಿಷ್ಣುವನ್ನೇ ಪರಮಮುಖ್ಯಾರ್ಥದಲ್ಲಿ ಹೇಳುತ್ತವೆ. ಹೀಗೆಯೇ ಮುಂದಿನ ಅಧಿಕರಣಗಳಲ್ಲಿಯೂ ಕ್ರಮ ನಿಮಿತ್ತಾದಿಗಳನ್ನು ತಾವೇ ಊಹಿಸಿಕೊಳ್ಳಬೇಕು ಎಂದು ಭಾವ.

ಹಾಗಾದರೆ ಅನ್ಯತ್ರ ಪ್ರಸಿದ್ಧವಾದ ನಾಮಾತ್ಮಕ ಶಬ್ದಗಳು ಅನಂತವಾಗಿರುವ ಪ್ರಯುಕ್ತ ಪಾದಸಮಾಪ್ತಿಯು ಹೇಗೆ ಎಂದು ಆಶಂಕಿಸಿದರೆ, ಅದನ್ನು ಪರಿಹರಿಸುತ್ತ ಪ್ರಥಮ ಪಾದಾರ್ಥವನ್ನು ಅನುವಾದ ಮಾಡಿ, ದ್ವಿತೀಯ ಪಾದಕ್ಕೆ ಸಂಗತಿಯನ್ನು ಹೇಳುತ್ತಾರೆ –

**ಇತ್ಯನ್ಯತ್ರ ಪ್ರಸಿದ್ಧೋರುಶಬ್ದರಾಶೇರಶೇಷತಃ ।**

**ಜ್ಞಾತೇ ಸಮನ್ವಯೇ ವಿಷ್ಣೌ ಲಿಂಗೈರ್ಹ್ಯೇಷ ಸಮನ್ವಯಃ ॥ ೪೦ ॥**

**ತೇಷಾಮನ್ಯಗತತ್ವೇ ತು ನ ಸ್ಯಾತ್ಸಮ್ಯಕ್ ಸಮನ್ವಯಃ ।**

**ಇತ್ಯೇವಾಶೇಷಲಿಂಗಾನಾಂ ಬ್ರಹ್ಮಣ್ಯೇವ ಸಮನ್ವಯಮ್ ॥ ೪೧ ॥**

**ಆಹ............................... ।**

ಹೀಗೆ ಪ್ರಥಮಪಾದದಿಂದ ಅನ್ಯತ್ರ ಪ್ರಸಿದ್ಧವಾದ ಉತ್ಕೃಷ್ಟವಾದ ಶಬ್ದ ಸಮೂಹಕ್ಕೆ ನಿಶ್ಶೇಷವಾಗಿ ಸಮನ್ವಯವು ತಿಳಿಯಲ್ಪಡಲು, ಶಂಕೆಯು ಹುಟ್ಟುತ್ತದೆ. ಪ್ರಾಯಶಃ ಲಿಂಗಬಲದಿದಂಲೇ ನಾಮಾತ್ಮಕ ಶಬ್ದ ಸಮನ್ವಯವು ಹೇಳಲ್ಪಡುತ್ತದೆ. ಆ ಲಿಂಗಗಳಿಗಾದರೂ ಅನ್ಯಗತತ್ವವು ಪ್ರತೀತವಾದರೆ, ನಾಮ ಸಮನ್ವಯವು ಚೆನ್ನಾಗಿ ಆಗಲಾರದು. ಹೀಗೆ ಆಶಂಕಿಸಿದರೆ – ಎಲ್ಲ ಲಿಂಗಗಳಿಗೆ ವಿಷ್ಣುವಿನಲ್ಲಿಯೇ ಸಮನ್ವಯವನ್ನು ಎರಡನೆಯ ಪಾದದಲ್ಲಿ ಹೇಳಿರುತ್ತಾರೆ.

ಈಗ ಮೂರನೆಯ ಪಾದಕ್ಕೆ ಮೊದಲನೆಯ ಮತ್ತು ಎರಡನೆಯ ಪಾದ ಗಳಿಂದ ಸಂಗತಿಯನ್ನು ಹೇಳುತ್ತಾರೆ –

**ಉಭಯಗತತ್ವಂ ಚ ಸ್ಯಾದತೋ ಲಿಂಗಶಬ್ದಯೋಃ ।**

**ಇತಿ ಸಂಶಯನುತ್ತ್ಯರ್ಥಂ ...................... ॥**

ಅನ್ಯತ್ರ ಪ್ರಸಿದ್ಧವಾದುದಕ್ಕೆ ಭಗವತ್ಪರತ್ವವನ್ನು ಸಮರ್ಥಿಸಿದ್ದರಿಂದ ಲಿಂಗಾತ್ಮಕ

ಶಬ್ದಗಳಿಗೂ, ನಾಮಾತ್ಮಕ ಶಬ್ದಗಳಿಗೂ ಉಭಯವಿಷಯತ್ವವು (ಭಗವಂತನಿಗೂ, ಇತರರಾದ ರುದ್ರಾದಿಗಳಿಗೂ ಹೀಗೆ ಉಭಯ ವಿಷಯತ್ವವು) ಆಗುವುದು. ಹೀಗೆ ಬರುವ ಆಶಂಕೆಯ ನಿವಾರಿಸುವುದಕ್ಕಾಗಿ ಮೂರನೆಯ ಪಾದವನ್ನು ಆರಂಭಿಸಿದರು ಎಂದು ಹೇಳಿದರು.

ಈ ಆಶಂಕೆಯು ಮೂರನೆಯ ಪಾದದಲ್ಲಿ ಹೇಗೆ ಪರಿಹೃತವಾಗಿದೆ ಎಂದರೆ ತಾತ್ಪರ್ಯವನ್ನು ಹೇಳುತ್ತಾರೆ –

**........................ ಉಭಯತ್ರ ಪ್ರತೀತಿತಃ ॥ ೪೨ ॥**

**ಶಬ್ದಾನಾಂ ವರ್ತಮಾನಾನಾಂ ಸಲಿಂಗಾನಾಂ ವಿಶೇಷತಃ ।**

**ಸಮನ್ವಯೋ ಹರಾವೇವ ಯನ್ನೈವಾನ್ಯತ್ರ ಮುಖ್ಯತಃ ॥ ೪೩ ॥**

**ಶಬ್ದಾ ಲಿಂಗಾನಿ ಚ ಯತೋ ನೈವಾನ್ಯತ್ರ ಸ್ವತಂತ್ರತಾ ।**

ಶ್ರೀಹರಿಯಲ್ಲಿಯೂ ಇತರರಲ್ಲಿಯೂ ಪ್ರತೀತಿಯಿದ್ದ ಪ್ರಯುಕ್ತ, ಇರತಕ್ಕ ಲಿಂಗಸಹಿತವಾದ ನಾಮಾತ್ಮಕ ಶಬ್ದಗಳಿಗೂ, ಲಿಂಗಾತ್ಮಕ ಶಬ್ದಗಳಿಗೂ ಶ್ರೀಹರಿಯಲ್ಲಿಯೇ ಪರಮಮುಖ್ಯವೃತ್ತಿಯಿಂದಲೂ ತಾತ್ಪರ್ಯದಿಂದಲೂ ಸಮನ್ವಯವು. ಏಕೆಂದರೆ, ಶ್ರೀಹರಿಯಿಂದ ಇತರರಲ್ಲಿ (ಅಂದರೆ ರುದ್ರಾದಿಗಳಲ್ಲಿ) ಶಬ್ದಗಳಿಗೂ ಲಿಂಗಗಳಿಗೂ ಪರಮ ಮುಖ್ಯಾರ್ಥದಿಂದ ಪ್ರವೃತ್ತಿಯು ಇರುವುದಿಲ್ಲ. ಏಕೆಂದರೆ ರುದ್ರಾದಿಗಳಲ್ಲಿ ಸ್ವಾತಂತ್ರ್ಯವು ಇರುವುದಿಲ್ಲ.

ಸ್ವಾತಂತ್ರ್ಯವಿಲ್ಲದಿದ್ದರೂ ಇತರರಲ್ಲಿ ಶಬ್ದಗಳಿಗೆ ಮುಖ್ಯವೃತ್ತಿಯು ಏಕೆ ಇರುವುದಿಲ್ಲವೆಂದರೆ –

**ಅಸ್ವತಂತ್ರೇಷು ಶಬ್ದಸ್ಯ ವೃತ್ತಿಹೇತುರ್ನ ಮುಖ್ಯತಃ ॥ ೪೪ ॥**

**ಯತೋಽತೋ.......................................... ।**

ಶಬ್ದ ಪ್ರವೃತ್ತಿಗೆ ಕಾರಣವಾದ ಗುಣಾದಿಗಳ ಅಭಾವದಿಂದ ಅಸ್ವತಂತ್ರರಾದ ರುದ್ರಾದಿಗಳಲ್ಲಿ ಶಬ್ದಕ್ಕೆ ಮುಖ್ಯವೃತ್ತಿಯು ಇರುವುದು ಬೇಡ. ಹಾಗಿದ್ದರೂ ಶ್ರೀಹರಿಯಲ್ಲಿಯೇ ವಿಶೇಷವಾದ ಸಮನ್ವಯವು ಹೇಗೆ ಎಂದರೆ – ಇತರರಲ್ಲಿ ಶಬ್ದಗಳಿಗೆ ಮುಖ್ಯಾರ್ಥತ್ವವು ಇರುವುದಿಲ್ಲವೆಂದು ತಾತ್ಪರ್ಯ. ಅಂದರೆ ಶಬ್ದಗಳಿಗೆ ಮುಖ್ಯಾರ್ಥ, ಅಮುಖ್ಯಾರ್ಥ ಎರಡನ್ನೂ ಅಂಗೀಕರಿಸಲೇಬೇಕು. ಪ್ರಸಕ್ತವಾದ ಎರಡು ವಸ್ತುಗಳಲ್ಲಿ ಒಂದಕ್ಕೆ ಮುಖ್ಯಾರ್ಥವು ಕೂಡದಿದ್ದರೆ ಇನ್ನೊಂದಕ್ಕೆ ಮುಖ್ಯಾರ್ಥವು ಆಗಲೇಬೇಕು. ಇಲ್ಲದಿದ್ದರೆ ಮುಖ್ಯಾರ್ಥವನ್ನು ಅಪೇಕ್ಷೆಯನ್ನು ಹೊಂದಿರುವ ಅಮುಖ್ಯಾರ್ಥವೂ ಕೂಡುವುದಿಲ್ಲ.

'ಯದಧೀನಾ' ಇತ್ಯಾದಿ ವಚನದಿಂದ ಯುಕ್ತ್ಯಂತರವನ್ನು ಹೇಳುತ್ತಾರೆ –

.................. ಯದಧೀನಾಸ್ತೇ ಶಬ್ದಾರ್ಥತ್ವಮುಪಾಗತಾಃ ।

ಅತ್ಯಲ್ಪೇನೈವ ಶಬ್ದಸ್ಯ ವೃತ್ತಿಹೇತುಗುಣೇನ ತು ।। ೪೫ ।।

ಅಯೋ ಯಥಾ ದಾಹಕತ್ವಂ ಸ ಏವೇಶಃ ಸ್ವತಂತ್ರತಃ ।

ಮುಖ್ಯಶಬ್ದಾರ್ಥ ಇತಿ ಹಿ ಸ್ವೀಕರ್ತವ್ಯೋ ಮನೀಷಿಭಿಃ ।। ೪೬ ।।

ಇತ್ಯಾಹ ।

ಭಗವದಿತರವಾದ ಪದಾರ್ಥಗಳಲ್ಲಿರುವ ಗುಣಗಳು ಅತ್ಯಲ್ಪವಾದ ಶಬ್ದಪ್ರವೃತ್ತಿಗೆ ಕಾರಣವಾಗಿರುತ್ತವೆ. ಮತ್ತೂ ಶ್ರೀಹರಿಯಲ್ಲಿಯೇ ಅಧೀನಗಳಾಗಿ ಶಬ್ದಾರ್ಥತ್ವವನ್ನು ಹೊಂದಿರುತ್ತವೆ. ಅನ್ಯಾಧೀನವಾದ ಶಬ್ದಾರ್ಥವು ಅಮುಖ್ಯವು. ಅನ್ಯಾಧೀನವಲ್ಲದ ಶಬ್ದಾರ್ಥವು ಮುಖ್ಯವು. ಅನನ್ಯಾಧೀನವಾದ ಶಬ್ದಾರ್ಥವು ಶ್ರೀಹರಿಯಲ್ಲಿಯೇ. ಆದಕಾರಣ ಎಲ್ಲ ಶಬ್ದಗಳಿಗೂ ಶ್ರೀಹರಿಯಲ್ಲಿಯೇ ಮುಖ್ಯಾರ್ಥವು ಎಂದು ಭಾವ. ಅಗ್ನಿಯ ಸಂಪರ್ಕದಿಂದ ಸುಡುವ ಗುಣವನ್ನು ಪಡೆದ ಕಬ್ಬಿಣವು ದಾಹಕ ಶಬ್ದಾರ್ಥತ್ವವನ್ನು ಹೊಂದಿದ್ದರೂ, ದಾಹಕ ಗುಣವು ಅಗ್ನಿಯ ಅಧೀನವಾದುದರಿಂದ ಸುಡುತ್ತದೆ ಎನ್ನುವ ಶಬ್ದವು ಅಗ್ನಿಯಲ್ಲಿ ಮುಖ್ಯವು, ಕಬ್ಬಿಣದಲ್ಲಿ ಅಮುಖ್ಯವು ಹೇಗೋ ಹಾಗೆ. ಸ್ವತಂತ್ರನಾದ ಶ್ರೀಹರಿಯೇ, ನಿರವಧಿಕವಾದ ಶಬ್ದಪ್ರವೃತ್ತಿಯನ್ನು ಹೊಂದಿರುವುದರಿಂದ, ಶಬ್ದಗಳಿಗೆ ಮುಖ್ಯಾರ್ಥನೆಂದು ಶ್ರುತ್ಯಾದಿಗಳ ಜ್ಞಾನವುಳ್ಳವರು ಸ್ವೀಕರಿಸತಕ್ಕದ್ದು. ಹೀಗೆ ತೃತೀಯ ಪಾದದಿಂದ ಹೇಳುತ್ತಾರೆ.

'ಏವಂ ಚ' ಇತ್ಯಾದಿ ವಚನದಿಂದ ನಾಲ್ಕನೆಯ ಪಾದಕ್ಕೆ ಸಂಗತಿಯನ್ನು ಹೇಳುತ್ತಾರೆ –

.......... ಏವಂ ಚ ಶಬ್ದಾನಾಂ ನಾರಾಯಣಸಮನ್ವಯೇ ।

ಸಿದ್ಧೇಽಪ್ಯಶೇಷಶಬ್ದಾನಾಂ ನ ಕಥಂಚನ ಯುಜ್ಯತೇ ।। ೪೭ ।।

ವಿರೋಧಾದವರತ್ವಾದೇರಪಿ ಪ್ರಾಪ್ತಿರ್ಯತೋ ಭವೇತ್ ।

ಇತಿ ಚೇತ್ ।।

ಹೀಗೆ ಹಿಂದಿನ ಮೂರು ಪಾದಗಳಿಂದ ಕೆಲವು ಶಬ್ದಗಳಿಗೆ ನಾರಾಯಣನಲ್ಲಿ ಸಮನ್ವಯವು ಸಿದ್ಧವಾಯಿತು. ಹಾಗಿದ್ದರೂ ಎಲ್ಲ ಶಬ್ದಗಳಿಗೂ (ಅಂದರೆ ದುಃಖಿ ಬದ್ಧ ಅವರ ಇತ್ಯಾದಿ ಶಬ್ದಗಳಿಗೂ, ಕರ್ಮವಿಷಯಕವಾದ ಜ್ಯೋತಿಷ್ಟೋಮಾದಿ ಶಬ್ದಗಳಿಗೂ) ನಾರಾಯಣನಲ್ಲಿ, ಯೋಗದಿಂದಾಗಲೀ ರೂಢಿಯಿಂದಾಗಲೀ ಶಬ್ದ ವೃತ್ತಿಯು ಕೂಡದಿರುವುದರಿಂದ, ಸೂತ್ರದಲ್ಲಿ ಪ್ರತಿಜ್ಞಾತವಾದ ಸಮನ್ವಯವು ಕೂಡುವುದಿಲ್ಲ. ಶ್ರೀಹರಿಯಲ್ಲಿ ದುಃಖಿತ್ವ ಅವರತ್ವ ಇತ್ಯಾದಿಗಳ ಪ್ರಾಪ್ತಿಯನ್ನು ಹೇಳಿದರೆ ಸರ್ವಪ್ರಮಾಣಗಳಿಂದ ವಿರೋಧ ಬರುವುದು ಹೀಗೆಂದು ಶಂಕಿಸಿದರೆ –

**............ ಅವರತ್ವಾದಿ ದ್ವಿವಿಧಂ ಹ್ಯುಪಲಭ್ಯತೇ ।। ೪೮ ।।**

**ಪರಸ್ಯಾವರತಾಹೇತುರ್ಯಃ ಸ್ವಯಂ ಪರ ಏವ ಸನ್ ।**

**ಸೋಽಪಿ ಹ್ಯವರಶಬ್ದಾರ್ಥೋ ಯಥಾ ರಾಜಾ ಜಯೀ ಭವೇತ್ ।। ೪೯ ।।**

**ಅನ್ಯೋಽವರತ್ವಾನುಭವೀ ತಯೋಃ ಪೂರ್ವೋಽಸ್ತಿ ಕೇಶವೇ ।**

ಅವರಾದಿ ಶಬ್ದಪ್ರವೃತ್ತಿ ನಿಮಿತ್ತವು ಎರಡು ವಿಧವೆಂದು ಪ್ರಮಾಣಗಳಿಂದ ತಿಳಿದುಬರುತ್ತದೆ. ಹೇಗೆಂದರೆ – ಯಾರು ತಾನು ಸರ್ವೋತ್ತಮನಾದ್ದರಿಂದ ಅವರತ್ವ ವಿಲ್ಲದಿದ್ದರೂ, ಇತರರ ಅವರತ್ವಕ್ಕೆ ಕಾರಣನೋ ಅವನೂ ಅವರ ಶಬ್ದಾರ್ಥನು. ರಾಜನು ತನ್ನ ಭಟರು ಜಯಗಳಿಸಿದ್ದರೂ ತಾನು, ಅವರ ಜಯಕ್ಕೆ ಸ್ವಾಮಿಯಾದ ಪ್ರಯುಕ್ತ, ಜಯವುಳ್ಳವನು ಎನಿಸಿಕೊಳ್ಳುವನು ಹೇಗೋ ಹಾಗೆ. ಅವರತ್ವದ ಅನುಭವತ್ವವು ಮತ್ತೊಂದು ಅವರ ಶಬ್ದಾರ್ಥ. ಹೀಗೆ ಎರಡು ಪ್ರವೃತ್ತಿ ಹೇತುಗಳಲ್ಲಿ ಮೊದಲನೆಯದು (ನಿಯಾಮಕನೆಂಬ ಅರ್ಥದಲ್ಲಿ) ಶ್ರೀಹರಿಯಲ್ಲಿ ಅವರಾದಿ ಶಬ್ದವಾಚ್ಯತ್ವವಿದೆ.

**ದ್ವಿತೀಯೋ ಜೀವ ಏವಾಸ್ತಿ ಸ್ವಾತಂತ್ರ್ಯಾನ್ನೈವ ದೂಷಣಮ್ ।। ೫೦ ।।**

**ಹರೇಃ ।**

ಎರಡನೆಯದು (ಅವರತ್ವಾದಿ ಅನುಭವತ್ವವು) ಜೀವ ಹಾಗೂ ಜಡಗಳಲ್ಲಿದೆ. ಎರಡನೆಯದು ಈಶ್ವರನಲ್ಲಿಯೂ ಇದ್ದರೆ ಈಶ್ವರತ್ವಕ್ಕೇ ಹಾನಿಯು. ಅಧಿಕರಣದ ಫಲವನ್ನು ಹೇಳುತ್ತಾರೆ. ಸ್ವಾತಂತ್ರ್ಯಾತ್ ಅಂದರೆ ಪರರಲ್ಲಿರತಕ್ಕ ಅವರತ್ವಾದಿಗಳಲ್ಲಿ ಶ್ರೀಹರಿಗೆ ಸ್ವಾತಂತ್ರ್ಯವಿರುವ ಪ್ರಯುಕ್ತ ಅವರತ್ವಾದಿಗಳು ಅವನಿಗೆ ದೂಷಣವಾಗಿ ಪರಿಣಮಿಸುವುದಿಲ್ಲ. ಹೀಗೆಯೇ ಮುಂದಿನ ಅಧಿಕರಣದ ತಾತ್ಪರ್ಯವನ್ನೂ ಹೇಳತಕ್ಕದ್ದು.

ಪ್ರಥಮಾಧ್ಯಾಯದ ಅರ್ಥಾನುವಾದ ಮಾಡಿಕೊಂಡು ದ್ವಿತೀಯಾಧ್ಯಾಯದ ಸಂಗತಿಯನ್ನು ಹೇಳುತ್ತಾರೆ –

**.......... ಏವಮಶೇಷೇಣ ಸರ್ವಶಬ್ದಸಮನ್ವಯೇ ।**

**ಉಕ್ತೇ ವಿರೋಧಹೀನಸ್ಯ ಸ್ಯಾತ್ಸಮನ್ವಯತಾ ಯತಃ ।। ೫೧ ।।**

**ಅತೋಽಶೇಷವಿರೋಧಾನಾಂ ಕೃತೇಶೇನ ನಿರಾಕೃತಿಃ ।**

ಹೀಗೆ ಪ್ರಥಮಾಧ್ಯಾಯದಲ್ಲಿ ಅಶೇಷವಾಗಿ ಎಲ್ಲ ಶಬ್ದಗಳ ಸಮನ್ವಯವು ಉಕ್ತವಾಯಿತು. ವಿರೋಧವಿಲ್ಲದಿದ್ದಾಗಲೇ ಸಮನ್ವಯವು ಕೂಡುವುದು. ಆದ್ದರಿಂದ ದ್ವಿತೀಯಾಧ್ಯಾಯದಲ್ಲಿ ಎಲ್ಲ ವಿರೋಧಗಳ ನಿರಾಕರಣೆಯು ಶ್ರೀಹರಿಯಿಂದ ಮಾಡಲ್ಪಟ್ಟಿತು.

ತೃತೀಯಾಧ್ಯಾಯಕ್ಕೆ ಸಂಗತಿಯನ್ನು ಹೇಳುತ್ತಾರೆ –

**ಸಮನ್ವಯಾವಿರೋಧಾಭ್ಯಾಂ ಸಂಜಾತೇ ವಸ್ತುನಿರ್ಣಯೇ ॥ ೫೨ ॥**

**ಕಿಂ ಮಯಾ ಕಾರ್ಯಮಿತ್ಯೇವ ಸ್ಯಾದ್ಬುದ್ಧಿರಧಿಕಾರಿಣಃ ।**

ಸಮನ್ವಯ, ಅವಿರೋಧಗಳಿಂದ (ಅಂದರೆ ಮೊದಲೆರಡು ಅಧ್ಯಾಯಗಳಿಂದ) ಪರಬ್ರಹ್ಮ ವಸ್ತುವಿಗೆ ಗುಣಪೂರ್ಣತ್ವ ದೋಷದೂರತ್ವಾದಿ ನಿರ್ಣಯವಾಗುತ್ತಿರಲು, ಅಧಿಕಾರಿಗಳಿಗೆ ನನ್ನಿಂದ ಯಾವ ಸಾಧನೆಯು ಮಾಡಲ್ಪಡಬೇಕು, ಅದು ಹೇಗೆ ಇತ್ಯಾದಿ ಬುದ್ಧಿಯು ಉಂಟಾಗುವುದು.

**ತತ್ರ ಭಕ್ತಿವಿಧಾನಾರ್ಥಮಭಕ್ತಾನರ್ಥಸಂತತೌ ॥ ೫೩ ॥**

**ಉಕ್ತಾಯಾಂ ಭಕ್ತಿದಾರ್ಢ್ಯಾಯ ಪ್ರೋಕ್ತೇಽಶೇಷಗುಣೋಚ್ಚಯೇ ।**

**ವಕ್ತವ್ಯೋಪಾಸನಾ ನಿತ್ಯಂ ಕರ್ತವ್ಯೇತ್ಯಾದರೇಣ ಹಿ ॥ ೫೪ ॥**

ಮೂರನೆಯ ಅಧ್ಯಾಯಲ್ಲಿ ಭಕ್ತಿಯನ್ನು ಹುಟ್ಟಿಸುವುದಕ್ಕಾಗಿ, ಅಂದರೆ ವೈರಾಗ್ಯಕ್ಕಾಗಿ ಭಕ್ತಿಯನ್ನು ವಿಧಿಸುವುದಕ್ಕಾಗಿ, ಪ್ರಥಮ ಪಾದದಲ್ಲಿ ಅಭಕ್ತರಿಗೆ ಅನರ್ಥಗಳ ಸಂತತಿಯು ಹೇಳಲ್ಪಟ್ಟಿವೆ. ದೃಢವಾದ ಭಕ್ತಿಯನ್ನು ಹುಟ್ಟಿಸಲು ಎರಡನೆಯ ಪಾದದಲ್ಲಿ ಶ್ರೀಹರಿಯ ಅಶೇಷವಾದ ಗುಣಸಮೂಹವು ಉಕ್ತವಾಗಿದೆ. ಇದರಿಂದಾಗಿ ಈ ಪಾದದಲ್ಲಿ ಉಪಾಸನೆಯನ್ನು ಕುರಿತು ಹೇಳಲಿಕ್ಕೆ ಅವಸರ ಪ್ರಾಪ್ತವಾಯಿತು. ಉಪಾಸನೆಯು ನಿರಂತರವೂ ಆದರದಿಂದ ಮಾಡತಕ್ಕದ್ದು. ಆದಕಾರಣ ಈಗ ಉಪಾಸನೆಯು ಹೇಳತಕ್ಕದ್ದೇ ಆಗಿದೆ.

ಹಾಗಾದರೆ ಉಪಾಸನೆಯೇ ವಿಚಾರಣೀಯವು. ಆದರೆ ಪ್ರಥಮಾಧಿಕರಣದಲ್ಲಿ ಸರ್ವಶಾಸ್ತ್ರ ಪರಿಜ್ಞಾನವು ವಿಚಾರ ಮಾಡಲ್ಪಡಲು ಕಾರಣವೇನು ಎಂದರೆ –

**ಸೋಪಾಸನಾ ಚ ದ್ವಿವಿಧಾ ಶಾಸ್ತ್ರಾಭ್ಯಾಸಸ್ವರೂಪಿಣೀ ।**

**ಧ್ಯಾನರೂಪಾ ಪರಾ ಚೈವ ತದಂಗಂ ಧಾರಣಾದಿಕಮ್ ॥ ೫೫ ॥**

**ತಥೋಭಯಾತ್ಮಕಂ ಚೈವ ಪಾದೇಽಸ್ಮಿನ್ ಬಾದರಾಯಣಃ ।**

**ಆಹೋಪಾಸನಮದ್ಧೈವ ವಿಸ್ತರಾತ್ ಶ್ರುತಿಪೂರ್ವಕಮ್ ॥ ೫೬ ॥**

ಆ ಉಪಾಸನೆಯು ಎರಡು ವಿಧ. ಒಂದು ಶಾಸ್ತ್ರಾಭ್ಯಾಸ ಸ್ವರೂಪವುಳ್ಳದ್ದು, ಮತ್ತೊಂದು ಧ್ಯಾನರೂಪವಾದುದು. ಶಾಸ್ತ್ರಾಭ್ಯಾಸವೂ ಉಪಾಸನೆಯ ಪ್ರಕಾರವೇ ಆದುದರಿಂದ ಅದನ್ನು ಪ್ರತಿಪಾದಿಸತಕ್ಕ ಪ್ರಥಮಾಧಿಕರಣಕ್ಕೆ ಈ ಪಾದದಲ್ಲಿ ಅಂತರ್ಭಾವವು ಯುಕ್ತವು. ಧಾರಣಾದಿಗಳು ಧ್ಯಾನದ ಅಂಗವೇ ಹೊರತು ಸ್ವತಂತ್ರ ಉಪಾಸನೆಯಲ್ಲ. ಆದರೆ ಶಾಸ್ತ್ರಾಭ್ಯಾಸವು ಧ್ಯಾನಕ್ಕೆ ಅಂಗವಾಗಿದ್ದರೂ, ಸ್ವತಂತ್ರವಾದ

ಉಪಾಸನೆಯೂ ಆಗಿದೆ. ಹೀಗೆ ಉಭಯಾತ್ಮಕವಾದ ಉಪಾಸನೆಯನ್ನು ಇದೇ ಪಾದದಲ್ಲಿಯೇ ವೇದವ್ಯಾಸರು, ಉಪಯುಕ್ತ ಪ್ರಮೇಯದೊಂದಿಗೆ ವಿಸ್ತಾರವಾಗಿ ಶ್ರುತಿಗಳನ್ನು ಉದಾಹರಿಸುವುದರ ಮೂಲಕ ಹೇಳಿದರು.

ಈ ಪ್ರಕಾರವಾಗಿ ಮೂರು ಅಧ್ಯಾಯಗಳ ಎಲ್ಲ ಪಾದಗಳ ಸಂಗತಿಗಳನ್ನು ಹೇಳಿ ಪ್ರಸ್ತುತ ಈ ಪಾದದ ಅಧಿಕರಣಗಳಲ್ಲಿನ ಪೂರ್ವಪಕ್ಷಯುಕ್ತಿಗಳನ್ನೂ, ಸಿದ್ಧಾಂತ ಯುಕ್ತಿಗಳನ್ನೂ ಸಂಗ್ರಹವಾಗಿ ಹೇಳುತ್ತಾರೆ –

**ಪೂರ್ವಪಕ್ಷ ಹಾಗೂ ಸಿದ್ಧಾಂತ ಯುಕ್ತಿಗಳ ಸಂಗ್ರಹ**

ಪೃಥಗ್ದೃಷ್ಟಿರಶಕ್ಯತ್ವಮನಿರ್ಣೀತಿಃ ಸಮುಚ್ಚಯಃ ।
ವಿಶೇಷದರ್ಶನಂ ಕಾರ್ಯಲೋಪೋ ನಾನೋಕ್ತಿರಾಶುತಾ ॥ ೫೭ ॥
ವಿಭ್ರಮೋಽಪಾಕೃತಿರ್ಲಿಂಗಮನವಸ್ಥಾ ವಿಶೇಷಿತಾ ।
ಅಪ್ರಯೋಜನತಾ ಚಾತಿಪ್ರಸಂಗೋ ದೂರಸಂಶ್ರಯಃ ॥ ೫೮ ॥
ವಿಶಿಷ್ಟಕಾರಣಂ ಚೇಷ್ಟಾ ದೃಷ್ಟವೈರೂಪ್ಯಮುನ್ನತಿಃ ।
ಅನುಕ್ತಿರಪ್ರಯತ್ನತ್ವಂ ದೃಢಬಂಧಪರಾಭವೌ ॥ ೫೯ ॥
ಪುಂಸಾಮ್ಯಂ ಪ್ರಾಪ್ತಸಂತ್ಯಾಗಃ ಕಾರಣಾನಿರ್ಣಯೋ ಭ್ರಮಃ ।
ವಿಶೇಷದರ್ಶಿತಾಲಾಪೌ ಗುಣಸಾಮ್ಯಂ ಪೃಥಗ್ದೃಶಿಃ ॥ ೬೦ ॥
ಅಗಮ್ಯವರ್ತ್ಮ ಸಂಧಾನಮಿಷ್ಟಂ ಫಲಮಕಲ್ಪನಾ ।
ಶುದ್ಧವೈರೂಪ್ಯಮಂಗತ್ವಮವಿಶೇಷದೃಶಿಃ ಕ್ರಿಯಾ ॥ ೬೧ ॥
ಯುಕ್ತಯಃ ಪೂರ್ವಪಕ್ಷಸ್ಥಾಃ ಸುಜ್ಞೇಯತ್ವಂ ವಿಧಿಕ್ರಿಯಾ ।
ಮಾಹಾತ್ಮ್ಯಮಲ್ಪಶಕ್ತಿತ್ವಂ ಯಥಾಯೋಗ್ಯಫಲಂ ಭವಃ ॥ ೬೨ ॥
ಫಲಸಾಮ್ಯಂ ವಿಶೇಷಶ್ಚ ಗುಣಾಧಿಕ್ಯಂ ಪ್ರಧಾನತಾ ।
ಯಥಾಶಕ್ತಿ ಕ್ರಿಯಾ ಸಂಧಿಃ ಪ್ರಮಾಣಬಲಮಾನತಿಃ ॥ ೬೩ ॥
ಕಾರಣಂ ಕಾರ್ಯವೈಶೇಷ್ಯಂ ಸ್ವಭಾವೋ ವಸ್ತುದೂಷಣಮ್ ।
ಪ್ರತಿಕ್ರಿಯಾವಿರೋಧಶ್ಚ ಪ್ರತಿಸಂಧಿರನೂನತಾ ॥ ೬೪ ॥
ಸಂಸ್ಕಾರಪಾಟವಂ ಸ್ವೇಚ್ಛಾನಿಯತಿರ್ವಸ್ತುವೈಭವಮ್ ।
ವಿಶೇಷೋಕ್ತಿರಮಾನತ್ವಂ ಪ್ರಾಧಾನ್ಯಂ ಪ್ರೀತಿರಾಗಮಃ ॥ ೬೫ ॥
ಸುಸ್ಥಿರತ್ವಂ ಕೃತಪ್ರಾಪ್ತಿರನಾದಿಗುಣವಿಸ್ತರಃ ।

ಸಾಧನೋತ್ತಮತಾ ನಾನಾದೃಷ್ಟಿಶಿಷ್ಟಿರನೂನತಾ ॥ ೬೬ ॥

ಅವಿಘ್ನತ್ವಾವಿರೋಧೌ ಚ ಗುಣವೈಶೇಷ್ಯಮಾಗಮಃ ।

ಸಿದ್ಧಾಂತನಿರ್ಣಯಾ ಹ್ಯೇತಾ ಯುಕ್ತಯೋಽವ್ಯಾಹೃತಾಃ ಸದಾ ॥ ೬೭ ॥

'ಪೃಥಗ್ದೃಷ್ಟಿಃ' ಯಿಂದ 'ಕ್ರಿಯಾ' ವರೆಗೆ ಪೂರ್ವಪಕ್ಷಕ್ಕೆ ಸಂಬಂಧಿಸಿದ ಯುಕ್ತಿಗಳು, 'ಸುಜ್ಞೇಯತ್ವಂ' ಯಿಂದ 'ಆಗಮಃ' ವರೆಗೆ ಸಿದ್ಧಾಂತಕ್ಕೆ ಸಂಬಂಧಿಸಿದ ಯುಕ್ತಿಗಳು ಎಂದು ತಿಳಿಯಬೇಕು.

| ಅಧಿಕರಣ | ಪೂರ್ವಪಕ್ಷಯುಕ್ತಿ | ಸಿದ್ಧಾಂತಯುಕ್ತಿ |
|---|---|---|
| ೧. ಸರ್ವವೇದಾಧಿಕರಣ | ಪೃಥಗ್ದೃಷ್ಟಿಃ | ಸುಜ್ಞೇಯತ್ವಂ |
| ೨. ಉಪಸಂಹಾರಾಧಿಕರಣ | ಅಶಕ್ಯತ್ವಂ | ವಿಧಿಕ್ರಿಯಾ |
| ೩. ಪ್ರಾಪ್ತ್ಯಧಿಕರಣ | ಅನಿರ್ಣೀತಿಃ | ಮಾಹಾತ್ಮ್ಯಮ್ |
| ೪. ಸರ್ವಾಭೇದಾಧಿಕರಣ | ಅನಿರ್ಣೀತಿಃ | ಮಾಹಾತ್ಮ್ಯಮ್ |
| ೫. ಆನಂದಾಧಿಕರಣ | ಸಮುಚ್ಚಯಃ | ಅಲ್ಪಶಕ್ತಿತ್ವಂ |
| ೬. ಪ್ರಿಯಶಿರಸ್ತ್ವಾದ್ಯಧಿಕರಣ | ವಿಶೇಷದರ್ಶನಂ | ಯಥಾಯೋಗ್ಯಫಲಂ |
| ೭. ಇತರಾಧಿಕರಣ | ಕಾರ್ಯಲೋಪಃ | ಭವಃ |
| ೮. ಆಧ್ಯಾನಾಧಿಕರಣ | ನಾನೋಕ್ತಿಃ | ಫಲಸಾಮ್ಯಂ |
| ೯. ಆತ್ಮಗೃಹೀತ್ಯಧಿಕರಣ | ಆಶುತಾ | ವಿಶೇಷಃ |
| ೧೦. ಅನ್ವಯಾಧಿಕರಣ | ವಿಭ್ರಮಃ | ಗುಣಾಧಿಕ್ಯಂ |
| ೧೧. ಕಾರ್ಯಾಧಿಕರಣ | ಅಪಾಕೃತಿಃ | ಪ್ರಧಾನತಾ |
| ೧೨. ಸಮಾನಾಧಿಕರಣ | ಲಿಂಗಂ | ಯಥಾಶಕ್ತಿಕ್ರಿಯಾ |
| ೧೩. ನವಾಽವಿಶೇಷಾಧಿಕರಣ | ಅನವಸ್ಥಾ | ಸಂಧಿಃ |
| ೧೪. ಸಂಭೃತ್ಯಧಿಕರಣ | ಅವಿಶೇಷಿತಾ | ಪ್ರಮಾಣಬಲಮ್ |
| ೧೫. ಪುರುಷವಿದ್ಯಾಧಿಕರಣ | ಅಪ್ರಯೋಜನತಾ | ಆನತಿಃ |
| ೧೬. ವೇಧಾದ್ಯಧಿಕರಣ | ಅಪ್ರಯೋಜನತಾ | ಆನತಿಃ |
| ೧೭. ಹಾನ್ಯಧಿಕರಣ | ಅತಿಪ್ರಸಂಗಃ | ಕಾರಣಮ್ |
| ೧೮. ಛಂದಾಧಿಕರಣ | ಅದೂರಸಂಶ್ರಯಃ | ಕಾರ್ಯವೈಶೇಷ್ಯಂ |

| | | |
|---|---|---|
| ೧೯. ಅನಿಯಮಾಧಿಕರಣ | ವಿಶಿಷ್ಟಕಾರಣಂ | ಸ್ವಭಾವಃ |
| ೨೦. ಯಾವದಧಿಕರಣ | ಚೇಷ್ಟಾ | ವಸ್ತುದೂಷಣಮ್ |
| ೨೧. ಇಯದಾಮನನಾಧಿಕರಣ | ದೃಷ್ಟವೈರೂಪ್ಯಂ | ಪ್ರತಿಕ್ರಿಯಾವಿರೋಧಃ |
| ೨೨. ವ್ಯತಿಹಾರಾಧಿಕರಣ | ಉನ್ನತಿಃ | ಪ್ರತಿಸಂಧಿಃ |
| ೨೩. ಸತ್ಯಾಧಿಕರಣ | ಅನುಕ್ತಿಃ | ಅನೂನತಾ |
| ೨೪. ಕಾಮಾಧಿಕರಣ | ಅಪ್ರಯತ್ನತ್ವಂ | ಸಂಸ್ಕಾರಪಾಟವಂ |
| ೨೫. ತನ್ನಿರ್ಧಾರಣಾಧಿಕರಣ | ದೃಢಬಂಧಃ | ಸ್ವೇಚ್ಛಾನಿಯತಿಃ |
| ೨೬. ಪ್ರದಾನಾಧಿಕರಣ | ಪರಾಭವಃ | ವಸ್ತುವೈಭವಂ |
| ೨೭. ಲಿಂಗಭೂಯಸ್ತ್ವಾಧಿಕರಣ | ಪುಂಸಾಮ್ಯಂ | ವಿಶೇಷೋಕ್ತಿಃ |
| ೨೮. ಪೂರ್ವವಿಕಲ್ಪಾಧಿಕರಣ | ಪ್ರಾಪ್ತಸಂತ್ಯಾಗಃ | ಅಮಾನತ್ವಂ |
| ೨೯. ವಿದ್ಯಾಧಿಕರಣ | ಕಾರಣಾನಿರ್ಣಯಃ | ಪ್ರಾಧಾನ್ಯಂ |
| ೩೦. ಶ್ರುತ್ಯಧಿಕರಣ | ಭ್ರಮಃ | ಪ್ರೀತಿಃ |
| ೩೧. ಅನುಬಂಧಾಧಿಕರಣ | ವಿಶೇಷದರ್ಶಿತಾ | ಆಗಮಃ |
| ೩೨. ಪ್ರಜ್ಞಾಂತರಾಧಿಕರಣ | ಆಲಾಪಃ | ಸುಸ್ಥಿರತ್ವಂ |
| ೩೩. ನ ಸಾಮಾನ್ಯಾಧಿಕರಣ | ಗುಣಸಾಮ್ಯಂ | ಕೃತಪ್ರಾಪ್ತಿಃ |
| ೩೪. ಪರೇಣಾಧಿಕರಣ | ಪೃಥಗ್ವೃತ್ತಿಃ | ಅನಾದಿಗುಣವಿಸ್ತರಃ |
| ೩೫. ಏಕಾಧಿಕರಣ | ಅಗಮ್ಯವರ್ತ್ಮ | ಸಾಧನೋತ್ತಮತಾ |
| ೩೬. ಅಂಗಾವಬದ್ಧಾಧಿಕರಣ | ಸಂಧಾನಂ | ನಾನಾದೃಷ್ಟಿಃ |
| ೩೭. ಭೂಮ್ನ ಕ್ರತ್ವಧಿಕರಣ | ಇಷ್ಟಂ ಫಲಂ | ಶಿಷ್ಟಿಃ |
| ೩೮. ನಾನಾಶಬ್ದಾಧಿಕರಣ | ಅಕಲ್ಪನಾ | ಅನೂನತಾ |
| ೩೯. ವಿಕಲ್ಪಾಧಿಕರಣ | ಶುದ್ಧವೈರೂಪ್ಯಂ | ಅವಿಘ್ನತ್ವಂ |
| ೪೦. ಕಾಮ್ಯಾಧಿಕರಣ | ಅಂಗತ್ವಂ | ಅವಿರೋಧಃ |
| ೪೧. ಅಂಗಾಧಿಕರಣ | ಅವಿಶೇಷದೃಷ್ಟಿಃ | ಗುಣವೈಶೇಷ್ಯಂ |
| ೪೨. ನ ವಾಧಿಕರಣ | ಕ್ರಿಯಾ | ಆಗಮಃ |

## ಪೂರ್ವಪಕ್ಷ ಹಾಗೂ ಸಿದ್ಧಾಂತಯುಕ್ತಿಗಳ ವಿವರಣೆ

### ೧. ಸರ್ವವೇದಾಧಿಕರಣ: ಓಂ ಸರ್ವವೇದಾಂತ ಪ್ರತ್ಯಯಂ ಚೋದನಾದ್ಯ ವಿಶೇಷಾತ್ ಓಂ

ಪೃಥಗ್ದೃಷ್ಟಿಯು ಪೂರ್ವಪಕ್ಷಯುಕ್ತಿ. ವೇದಗಳಲ್ಲಿ ನಾನಾ ಶಾಖೆಗಳಿವೆ. ಅದರಲ್ಲಿ ಒಂದೊಂದು ಶಾಖೆಯಲ್ಲಿ ಪ್ರತಿಪಾದಿತವಾದ ವಿಷಯವೂ ಬೇರೆ ಬೇರೆ. ಆದಕಾರಣ ಆಯಾ ಶಾಖೆಗಳವರು ಮಾತ್ರ ತಮ್ಮ ತಮ್ಮ ಶಾಖೆಗಳನ್ನು ಅಧ್ಯಯನ ಮಾಡಬೇಕು. ಇಲ್ಲದಿದ್ದರೆ ಶಾಖಾಭೇದವು ಅಯುಕ್ತವೆಂದು ಪೂರ್ವಪಕ್ಷ.

ಸುಜ್ಞೇಯತ್ವವು ಸಿದ್ಧಾಂತಯುಕ್ತಿ. 'ನಾನಾ ವೇದೈರಿತಿಹಾಸೈಃ ಪುರಾಣೈಃ ಸುಜ್ಞೇಯ ಏಕೋ ಭಗವಾನ್ ಯುಕ್ತಿಭಿಶ್ಚ' ಎಂದು ಶ್ರುತಿಯಿರುವುದರಿಂದ ಎಲ್ಲ ವೇದಶಾಖೆಗಳನ್ನೂ ಅಧ್ಯಯನ ಮಾಡಬೇಕು. ಅಶಕ್ತರ ದೃಷ್ಟಿಯಿಂದ ಶಾಖಾಭೇದ ಮಾಡಲಾಗಿದೆ. ಯಥಾಶಕ್ತಿ ಸಮಗ್ರವೇದವನ್ನು ಅಧ್ಯಯನ ಮಾಡಬೇಕು ಎಂದು ಸಿದ್ಧಾಂತ.

### ೨. ಉಪಸಂಹಾರಾಧಿಕರಣ: ಓಂ ಉಪಸಂಹಾರೋಽರ್ಥಾಭೇದಾತ್ ವಿಧಿಶೇಷ ವತ್ ಸಮಾನೇ ಚ ಓಂ

ಅಶಕ್ಯತ್ವವು ಪೂರ್ವಪಕ್ಷಯುಕ್ತಿ. ಸಕಲ ವೇದೋಕ್ತ ಗುಣಗಳನ್ನು ಬುದ್ಧಿಯಲ್ಲಿ ವಿಷಯೀಕರಿಸಿ ಧ್ಯಾನಮಾಡುವುದು ಅಶಕ್ಯ. ಕ್ರಮವಾಗಿ ಒಂದೊಂದೇ ಗುಣವನ್ನು ಧ್ಯಾನ ಮಾಡುವುದೂ ವಿಹಿತವಾಗಿಲ್ಲ. ಆದಕಾರಣ ಎಲ್ಲ ವೇದಗಳಲ್ಲಿ ಉಕ್ತವಾದ ಗುಣಗಳನ್ನು ತಿಳಿಯುವುದು ಅನವಶ್ಯಕವೆಂದು ಪೂರ್ವಪಕ್ಷ.

ವಿಧಿಕ್ರಿಯಾ ಎನ್ನುವುದು ಸಿದ್ಧಾಂತಯುಕ್ತಿ. 'ಸರ್ವೇ ಗುಣಾಃ ಸರ್ವದೈವ ಹ್ಯುಪಾಸ್ಯಾಃ ತೇನೈವ ವಿದ್ವಾನ್ ವಿಧಿಕೃನ್ನಾನ್ಯಥಾ ಸ್ಯಾತ್' ಎಲ್ಲ ಗುಣಗಳನ್ನು ಯಾವಾಗಲೂ ಧ್ಯಾನ ಮಾಡಬೇಕು ಎಂದು ಶ್ರುತಿಯು ಹೇಳುವುದರಿಂದ, ಸಕಲ ಗುಣಗಳನ್ನು ಉಪಸಂಹಾರಮಾಡಿಯೇ ಧ್ಯಾನಮಾಡಬೇಕು. ಇಲ್ಲದಿದ್ದರೆ ವಿಧಿ ಲೋಪವಾಗುತ್ತದೆ. ಹಾಗೆ ಮಾಡುವುದು ಅಶಕ್ಯವಾದ್ದರಿಂದ ಉಪಸಂಹಾರ ಮಾಡದೆಯೇ ಯಥಾಶಕ್ತಿ ಎಲ್ಲ ಗಣಗಳನ್ನೂ ಧ್ಯಾನಮಾಡಬೇಕು ಎಂದು ಸಿದ್ಧಾಂತ.

### ೩. ಪ್ರಾಪ್ತ್ಯಧಿಕರಣ: ಓಂ ಪ್ರಾಪ್ತೇಶ್ಚ ಸಮಂಜಸಮ್ ಓಂ

ಅನಿರ್ಣೀತಿಯು ಪೂರ್ವಪಕ್ಷಯುಕ್ತಿ. ಉಪಸಂಹಾರ ಮಾಡಿಕೊಂಡು ಧ್ಯಾನ ಅಥವಾ ಮಾಡದೆಯೇ ಧ್ಯಾನ ಎನ್ನುವುದು ಪರಸ್ಪರ ವಿರುದ್ಧವಾಗಿದೆ. ಯಾರು ಉಪಸಂಹಾರ ಸಹಿತ ಧ್ಯಾನ ಮಾಡಬೇಕು, ಯಾರಿಗೆ ಉಪಸಂಹಾರ ಬೇಕಿಲ್ಲ ಎನ್ನುವುದು ನಿರ್ಣಯವಾಗದಿರುವುದರಿಂದ ಎರಡು ಪ್ರಕಾರದ ಧ್ಯಾನವೂ ಅಯುಕ್ತ ಎಂದು ಪೂರ್ವಪಕ್ಷ.

ಮಾಹಾತ್ಮ್ಯವು ಸಿದ್ಧಾಂತಯುಕ್ತಿ. ಮಹಾತ್ಮೆ ಎಂದರೆ ಯೋಗ್ಯತೆ ಎಂದರ್ಥ. ಯಾವ ಯಾವ ಅಧಿಕಾರಿಗಳಿಗೆ ಎಷ್ಟೆಷ್ಟು ಗುಣಗಳು ಏಕಕಾಲದಲ್ಲಿ ತೋರುತ್ತವೋ ಅವರವರು ಅಷ್ಟು ಗುಣಗಳನ್ನು ತಮ್ಮ ಯೋಗ್ಯತಾನುಸಾರ ಉಪಸಂಹಾರ ಮಾಡಿ ಧ್ಯಾನಮಾಡಬೇಕು. ಬ್ರಹ್ಮದೇವರಿಗೆ ಸರ್ವವೇದೋಕ್ತ ಗುಣಗಳೂ ಭಾಸವಾಗುತ್ತವೆ. ಬೇರೆಯವರಿಗೆ ಅವರ ಯೋಗ್ಯತಾನುಸಾರ ಅಷ್ಟಷ್ಟು ಗುಣಗಳು ಭಾಸವಾಗುತ್ತವೆ. ಆದಕಾರಣ ಎರಡು ವಿಧದ ಉಪಾಸನೆಯೂ ಯುಕ್ತವೇ ಆಗಿದೆ ಎಂದು ಸಿದ್ಧಾಂತ.

**೪. ಸರ್ವಾಭೇದಾಧಿಕರಣ: ಓಂ ಸರ್ವಾಭೇದಾದನ್ಯತ್ರೇಮೇ ಓಂ**

ಅನಿರ್ಣೀತಿಯು ಪೂರ್ವಪಕ್ಷಯುಕ್ತಿ. 'ದೃಷ್ಟ್ವೈವ ತಂ ಮುಚ್ಯತೇ' ಎಂದು ಸಾಮಾನ್ಯ ದರ್ಶನದಿಂದ ಮುಕ್ತಿಯನ್ನು ಹೇಳಲಾಗಿದೆ. ಸರ್ವಗುಣೋಪಸಂಹಾರ ಮಾಡುವರಿಗೆ ಅಧಿಕ ಫಲವೂ, ಕಡಿಮೆ ಉಪಸಂಹಾರ ಮಾಡುವರಿಗೆ ಕಡಿಮೆ ಫಲವೂ ಎಂಬ ನಿರ್ಣಯವಿಲ್ಲ. ಆದಕಾರಣ ಸರ್ವಗುಣೋಪಸಂಹಾರ ಅನವಶ್ಯಕ ಎಂದು ಪೂರ್ವಪಕ್ಷ.

ಮಾಹಾತ್ಮ್ಯವು ಸಿದ್ಧಾಂತಯುಕ್ತಿ. ಸರ್ವಗುಣೋಪಸಂಹಾರ ಸಹಿತ ಉಪಾಸನೆಗೆ ಇರುವ ಮಹಿಮೆಯಿಂದಲೇ ಅಂಥಹ ಸಾಧಕರಿಗೆ ಅಧಿಕ ಫಲವೆಂದು ನಿರ್ಣೀತ ವಾಗುತ್ತದೆ. ಇಲ್ಲದಿದ್ದರೆ ಸರ್ವಗುಣೋಪಸಂಹಾರ ವಿಧಾನವೇ ನಿರರ್ಥಕವಾಗುತ್ತದೆ ಎಂದು ಸಿದ್ಧಾಂತ.

**೫. ಆನಂದಾಧಿಕರಣ: ಓಂ ಆನಂದಾದಯಃ ಪ್ರಧಾನಸ್ಯ ಓಂ**

ಸಮುಚ್ಚಯವು ಪೂರ್ವಪಕ್ಷಯುಕ್ತಿ. ಯಾರು ಯಾರು ಯಾವ ಯಾವ ಗುಣಗಳನ್ನು ಉಪಾಸನೆ ಮಾಡಬೇಕೆನ್ನುವುದಕ್ಕೆ ನಿರ್ಣಾಯಕ ಪ್ರಮಾಣವಿಲ್ಲ. ಸ್ವೇಚ್ಛೆಯಿಂದ ಉಪಸಾನೆಯನ್ನು ಹೇಳಿದರೆ, ಗುಣಸಮುಚ್ಚಯ ಮಾಡುವಾಗ ತನ್ನ ಉಪಾಸನೆಗೆ ಯೋಗ್ಯವಾದ ಹಾಗೂ ಅಯೋಗ್ಯವಾದ ಗುಣಗಳ ಸುಮಚ್ಚಯವೂ ಆಗುವುದು. ಆದ್ದರಿಂದ ಧ್ಯಾನವು ಅಯುಕ್ತವೆಂದು ಪೂರ್ವಪಕ್ಷ.

ಅಲ್ಪಶಕ್ತಿತ್ವವು ಸಿದ್ಧಾಂತಯುಕ್ತಿ. ಮನುಷ್ಯರು ಅಲ್ಪಶಕ್ತಿವುಳ್ಳವರಾದ್ದರಿಂದ ಸತ್ ಚಿತ್ ಆನಂದ ಆತ್ಮ ಎಂಬುದಾಗಿ ನಾಲ್ಕು ಗುಣಗಳಿಂದ ಮಾತ್ರ ಪರಬ್ರಹ್ಮನ ಉಪಾಸನೆ ಮಾಡಬೇಕು. ಬ್ರಹ್ಮಾದಿಗಳಿಗೆ ಇನ್ನೂ ಅಧಿಕವಾದ ಗುಣಗಳ ಉಪಾಸನೆ ಯಲ್ಲಿ ಸಾಮರ್ಥ್ಯವಿದ್ದರೂ, ಇತರರಿಗೆ ಅಲ್ಪಶಕ್ತಿತ್ವದ ಪ್ರಯುಕ್ತ ನಾಲ್ಕಕ್ಕಿಂತ ಹೆಚ್ಚಿನ ಗುಣಗಳ ಉಪಾಸನೆಯಲ್ಲಿ ಸಾಮರ್ಥ್ಯವಿಲ್ಲ. ಹೀಗೆ ಸರ್ವೋಪಾಸ್ಯಗಳಾದ ಗುಣಗಳ ನಿರ್ಣಯವಾಗುವುದರಿಂದ ಧ್ಯಾನವು ಯುಕ್ತವೆಂದು ಸಿದ್ಧಾಂತ.

**೬. ಪ್ರಿಯಶಿರಸ್ತ್ವಾಧಿಕರಣ: ಓಂ ಪ್ರಿಯಶಿರಸ್ತ್ವಾದ್ಯಪ್ರಾಪ್ತಿರುಪಚಯಾಪಚಯೌ ಹಿ ಭೇದೇ ಓಂ**

ವಿಶೇಷದರ್ಶನವು ಪೂರ್ವಪಕ್ಷಯುಕ್ತಿ. ಭಗವಂತನ ಪ್ರಿಯಶಿರಸ್ತ್ವಾದಿಗಳು ಆನಂದಾದಿ ಗುಣಗಳ ವಿಶೇಷವೆಂದೇ ಕಂಡಿರುವುದರಿಂದ ಇವುಗಳನ್ನು ಎಲ್ಲರೂ ಉಪಾಸನೆ ಮಾಡಬೇಕು ಎಂದು ಪೂರ್ವಪಕ್ಷ.

ಯಥಾಯೋಗ್ಯಫಲ ಎನ್ನುವುದು ಸಿದ್ಧಾಂತಯುಕ್ತಿ. 'ಯಥಾಯೋಗ್ಯಾನ್ ಗುಣ ಪೂಗಾನುಪಾಸ್ಯ ಫಲಂ ಭವೇನ್ಮುಕ್ತಿಗಂ ನಾನ್ಯಥಾ ಸ್ಯಾತ್' ಎನ್ನುವ ಶ್ರುತಿಯಿಂದ ಯಥಾಯೋಗ್ಯವಾದ ಗುಣಗಳ ಉಪಾಸನೆಯಿಂದಲೇ ಫಲವೆಂದು ನಿರ್ಣಯವು. ಆದ್ದರಿಂದ ಮನುಷ್ಯರು ನಾಲ್ಕು ಗುಣಗಳಿಂದಲೇ ಯಥಾಯೋಗ್ಯವಾಗಿ ಉಪಾಸನೆ ಮಾಡಬೇಕು. ಇಲ್ಲದಿದ್ದರೆ ಫಲತಾರತಮ್ಯ ನಿರ್ವಾಹವೂ ಅಶಕ್ಯವೆಂದು ಸಿದ್ಧಾಂತ.

### ೭. ಇತರಾಧಿಕರಣ: ಓಂ ಇತರೇ ತ್ವರ್ಥಸಾಮಾನ್ಯಾತ್ ಓಂ

ಕಾರ್ಯಲೋಪವು ಪೂರ್ವಪಕ್ಷಯುಕ್ತಿ. ಮನುಷ್ಯರಿಗೆ ನಾಲ್ಕು ಗುಣಗಳ ಉಪಾಸನೆಯಿಂದಲೇ ಫಲವು ಸಿದ್ಧಿಸುವಾಗ ದೇವತೆಗಳು ಬಹುಗುಣಗಳನ್ನು ಏಕೆ ಉಪಾಸನೆ ಮಾಡಬೇಕು? ಹೆಚ್ಚು ಗುಣಗಳ ಉಪಾಸನೆಯಿಂದ ಹೆಚ್ಚಿನ ಫಲವಿಲ್ಲದ ಕಾರಣ ಕಾರ್ಯಲೋಪ ಪ್ರಸಂಗ ಬರುವುದು. ಆದ್ದರಿಂದ ಬ್ರಹ್ಮನಿಂದ ಇತರರಾದ ದೇವತೆಗಳು ನಾಲ್ಕು ಗುಣಗಳನ್ನು ಮಾತ್ರ ಉಪಾಸನೆ ಮಾಡಬೇಕು ಎಂದು ಪೂರ್ವಪಕ್ಷ.

ಭವಃ ಎನ್ನುವುದು ಸಿದ್ಧಾಂತಯುಕ್ತಿ. ಅಂದರೆ ದೇವತೆಗಳಿಗೆ ಇಂತಿಷ್ಟು ಗುಣಗಳ ಉಪಾಸನೆಯೆಂಬ ನಿಯಮ ಸದ್ಭಾವ. ದೇವತೆಗಳಿಗೆ ವಿಮುಕ್ತಿಯಲ್ಲಿ ಉಂಟಾಗುವ ಉತ್ಕರ್ಷವನ್ನು ತಿಳಿದು ಅದಕ್ಕನುಗುಣವಾಗಿ ಬ್ರಹ್ಮದೇವರು ಅವರಿಗೆ ಭಗವಂತನ ಗುಣಗಳನ್ನು ಉಪದೇಶಿಸುತ್ತಾರೆ. ದೇವತೆಗಳು ಅವುಗಳನ್ನು ಉಪಾಸನೆ ಮಾಡಿ ಆಯಾ ಫಲವನ್ನು ಮುಕ್ತಿಯಲ್ಲಿ ಹೊಂದುತ್ತಾರೆ ಎಂದು ಪ್ರಮಾಣವಿದೆ. ಆದ್ದರಿಂದ ಕಾರ್ಯಲೋಪ ಪ್ರಸಂಗವಿಲ್ಲ ಎಂದು ಸಿದ್ಧಾಂತ.

### ೮. ಆಧ್ಯಾನಾಧಿಕರಣ: ಓಂ ಆಧ್ಯಾನಾಯ ಪ್ರಯೋಜನಾಭಾವಾತ್ ಓಂ

ನಾನೋಕ್ತಿಯು ಪೂರ್ವಪಕ್ಷಯುಕ್ತಿ. ಉಪಾಸನೆಗೆಂದೇ ಗುಣಗಳನ್ನು ಹೇಳುವ ಉದ್ದೇಶವಿದ್ದರೆ ವೇದವು ಎಲ್ಲ ಗುಣಗಳನ್ನು ಒಂದೇ ಕಡೆಯಲ್ಲಿ ಹೇಳಬೇಕಿತ್ತು. ಆದರೆ ಒಂದೊಂದು ಶಾಖೆಯಲ್ಲಿ ಒಂದೊಂದು ಗುಣವನ್ನು ಹೇಳಿರುವುದರಿಂದ ವೇದಕ್ಕೆ ಉಪಾಸನೆಗಾಗಿ ಗುಣಗಳನ್ನು ಹೇಳುವ ಉದ್ದೇಶವಿಲ್ಲ ಎಂದು ಪೂರ್ವಪಕ್ಷ.

ಫಲಸಾಮ್ಯವು ಸಿದ್ಧಾಂತಯುಕ್ತಿ. ಬೇರ ಬೇರೆ ಕಡೆಗಳಲ್ಲಿ ಹೇಳಿದ ಗುಣಗಳನ್ನು ಪ್ರಯತ್ನ ಪಟ್ಟು ತಿಳಿದು ಉಪಾಸನೆ ಮಾಡಿದರೆ ಪ್ರಯತ್ನಕ್ಕೆ ತಕ್ಕಂತೆ ಮುಕ್ತಿಯಲ್ಲಿ ಫಲವಿಶೇಷವಿದೆ. ಆದಕಾರಣ ಅಂಥಹ ಫಲವಿಶೇಷಕ್ಕಾಗಿ ವೇದವು ನಾನಾಶಾಖೆಗಳಲ್ಲಿ ಗುಣಗಳನ್ನು ಹೇಳಿದೆ ಎಂದು ಸಿದ್ಧಾಂತ.

## ೯. ಆತ್ಮಗೃಹೀತ್ಯಧಿಕರಣ: ಓಂ ಆತ್ಮಗೃಹೀತಿರಿತರವತ್ತದುತ್ತರಾತ್ ಓಂ

ಆಶುತಾ (ಶೀಘ್ರತ್ವ) ಎನ್ನುವುದು ಪೂರ್ವಪಕ್ಷಯುಕ್ತಿ. ಆತ್ಮೇತ್ಯೇವೋಪಾಸೀತ ಇತ್ಯಾದಿ ಶ್ರುತಿಯು ಆತ್ಮತ್ವವನ್ನು ಮಾತ್ರ ಉಪಾಸನೆ ಮಾಡುವುದರಿಂದ ಶೀಘ್ರದಲ್ಲಿ ಅಪರೋಕ್ಷವು ಎಂದು ಹೇಳಿರುವುದರಿಂದ, ಆತ್ಮತ್ವ ಗುಣವೊಂದನ್ನೇ ಉಪಾಸನೆ ಮಾಡಬೇಕು ಎಂದು ಪೂರ್ವಪಕ್ಷ.

ವಿಶೇಷವು ಸಿದ್ಧಾಂತಯುಕ್ತಿ. ಆನಂದತ್ವ ಚಿತ್ತ್ವ ಸತ್ತ್ವಗಳೂ ಕೂಡ ಆತ್ಮ ಶಬ್ದದ ವಿಶೇಷಾರ್ಥವಾಗಿರುವ ಪ್ರಯುಕ್ತ, ಆತ್ಮ ಎಂದೇ ಉಪಾಸನೆ ಮಾಡಬೇಕು ಎಂದರೆ ಆತ್ಮಶಬ್ದದಿಂದ ಉಪಲಕ್ಷಿತವಾದ ಸತ್ ಚಿತ್ ಆನಂದ ಆತ್ಮ ಹೀಗೆ ಎಲ್ಲ ನಾಲ್ಕು ಗುಣಗಳನ್ನೂ ಉಪಾಸನೆ ಮಾಡಬೇಕೆಂದೇ ಅರ್ಥ ಮಾಡಬೇಕು ಎಂದು ಸಿದ್ಧಾಂತ.

## ೧೦. ಅನ್ವಯಾಧಿಕರಣ: ಓಂ ಅನ್ವಯಾದಿತಿ ಚೇತ್ ಸ್ಯಾದವಧಾರಣಾತ್ ಓಂ

ವಿಭ್ರಮಃ ಎನ್ನುವುದು ಪೂರ್ವಪಕ್ಷಯುಕ್ತಿ. ವ್ಯಾಪ್ತತ್ವ ಮುಂತಾದ ಎಲ್ಲ ಗುಣಗಳಿಗೆ ಆತ್ಮ ಶಬ್ದವು ವಾಚಕವಾದ್ದರಿಂದ, ನಾಲ್ಕು ಗುಣಗಳನ್ನೇ ಉಪಾಸನೆ ಮಾಡಬೇಕೆಂದು ನಿರ್ಣೀತವಾಗುವುದಿಲ್ಲ. ಎಲ್ಲರೂ ಎಲ್ಲ ಗುಣಗಳನ್ನೂ ಉಪಾಸನೆ ಮಾಡಬೇಕೆಂದು ಅರ್ಥವಾಗುವುದರಿಂದ ಸರಿಯಾದ ನಿರ್ಣಯವಾಗುವುದಿಲ್ಲ ಎಂದು ಪೂರ್ವಪಕ್ಷ.

ಗುಣಾಧಿಕ್ಯ ಎನ್ನುವುದು ಸಿದ್ಧಾಂತಯುಕ್ತಿ. ಆತ್ಮಶಬ್ದವು ಸರ್ವಗುಣವಾಚಕವೇ ಆಗಿದ್ದರೂ, ಅಧಿಕ ಗುಣವುಳ್ಳವರಿಗೆ ಮಾತ್ರ ಭಗವಂತನ ಅಧಿಕ ಗುಣಗಳನ್ನು ಬೋಧಿಸುತ್ತದೆಯೇ ಹೊರತು ಎಲ್ಲರಿಗೂ ಅಲ್ಲ. ಎಲ್ಲರಿಗೂ ಅವರವರ ಯೋಗ್ಯತೆಗೆ ಅನುಗುಣವಾಗಿ ಗುಣಗಳನ್ನು ಬೋಧಿಸುತ್ತದೆ. ಆದ್ದರಿಂದ ವಿಭ್ರಮ ಅಥವಾ ಗೊಂದಲಕ್ಕೆ ಅವಕಾಶವಿಲ್ಲವೆಂದು ಸಿದ್ಧಾಂತ.

## ೧೧. ಕಾರ್ಯಾಧಿಕರಣ: ಓಂ ಕಾರ್ಯಾಖ್ಯಾನಾದಪೂರ್ವಂ ಓಂ

ಅಪಾಕೃತಿಯು ಪೂರ್ವಪಕ್ಷಯುಕ್ತಿ. ಭಗವಂತನ ಗುಣಗಳು ಅಲೌಕಿಕವಾದವು. ಧ್ಯಾನಕ್ಕೆ ಮುಂಚೆ ಅವುಗಳ ಅನುಭೂತಿಯು ಇರುವುದಿಲ್ಲ. ಧ್ಯಾನ ಸಮಯದಲ್ಲಿ ಅವುಗಳ ಸ್ಮರಣೆ ಸಾಧ್ಯವಿಲ್ಲ. ಆದಕಾರಣ ಲೌಕಿಕ ಗುಣಗಳಿಂದಲೇ ಭಗವಂತನ ಉಪಾಸನೆ ಮಾಡಬೇಕು. ಭಗವಂತನಲ್ಲಿ ಲೌಕಿಕಗುಣಗಳ ಉಪಾಸನೆ ಕೂಡುವುದಿಲ್ಲ ಎಂದರೆ, ಆಗ ಧ್ಯಾನವೇ ಕೂಡುವುದಿಲ್ಲ ಎಂದು ಪೂರ್ವಪಕ್ಷ.

ಪ್ರಧಾನತಾ ಎನ್ನುವುದು ಸಿದ್ಧಾಂತಯುಕ್ತಿ. ಲೌಕಿಕ ಗುಣಗಳ ದೆಶೆಯಿಂದ ಅಲೌಕಿಕ ಗುಣಗಳು ಅತ್ಯುತ್ತಮವಾದ್ದರಿಂದ ಅತ್ಯಂತ ಪ್ರಧಾನಗಳಾಗಿವೆ. ಭಗವಂತನ ಗುಣಗಳು ಅತ್ಯುತ್ತಮವೆಂದು ಧ್ಯಾನಿಸಿದರೆ ಮಾತ್ರ ಅತ್ಯುತ್ತಮವಾದ ಮೋಕ್ಷಕ್ಕೆ ಕಾರಣವಾಗುತ್ತವೆ. ಆದಕಾರಣ ಪ್ರಧಾನವಾದ್ದರಿಂದ ಅಲೌಕಿಕ ಗುಣಗಳಿಂದಲೇ ಭಗವಂತನನ್ನು ಉಪಾಸನೆ ಮಾಡಬೇಕು ಎಂದು ಸಿದ್ಧಾಂತ.

## ೧೨. ಸಮಾನಾಧಿಕರಣ: ಓಂ ಸಮಾನ ಏವಂ ಚಾಭೇದಾತ್ ಓಂ

ಲಿಂಗವು ಪೂರ್ವಪಕ್ಷಯುಕ್ತಿ. ಬ್ರಹ್ಮ ಸರಸ್ವತಿಯರಿಗೆ ವೇದೋಕ್ತ ಸಮಸ್ತ ಗುಣಗಳ ಉಪಸಂಹಾರವಿದೆ. ಆದರಿಂದ ಮುಕ್ತಿಯಲ್ಲಿ ಸ್ಥಾನೈಕ್ಯವೂ ಇದೆ. ಆದರೂ ಆನಂದರೂಪ ಫಲದಲ್ಲಿ ಬ್ರಹ್ಮದೇವರಿಗೆ ಸರಸ್ವತಿಗಿಂತ ಆಧಿಕ್ಯವಿದೆ. ಸಮಾನವಾದ ಗುಣೋಪಸಂಹಾರವಿದ್ದರೂ ಫಲದಲ್ಲಿ ತಾರತಮ್ಯವೆನ್ನುವ ಲಿಂಗದಿಂದ ಇತರರಿಗೂ ಉಪಾಸನೆಗೆ ತಕ್ಕಂತೆ ಮುಕ್ತಿಯಲ್ಲಿ ಫಲವಾಗುವುದಿಲ್ಲ ಎಂದು ಪೂರ್ವಪಕ್ಷ.

ಯಥಾಶಕ್ತಿಕ್ರಿಯಾವು ಸಿದ್ಧಾಂತಯುಕ್ತಿ. ಬ್ರಹ್ಮದೇವರು ಧ್ಯಾನ ಮಾಡುವ ಎಲ್ಲ ಗುಣಗಳನ್ನೂ ಸರಸ್ವತಿಯು ಧ್ಯಾನ ಮಾಡುವುದರಿಂದ ಇಬ್ಬರಿಗೂ ಸ್ಥಾನೈಕ್ಯವಿದೆ ಎಂಬುದು ನಿಜವೇ. ಆದರೆ ಸರಸ್ವತಿಯು ಸಾಮಾನ್ಯವಾಗಿ ಭಗವಂತನ ಕ್ರಿಯೆಗಳನ್ನು ಉಪಾಸನೆ ಮಾಡುವರೇ ಹೊರತು, ಬ್ರಹ್ಮದೇವರಂತೆ ವಿಶೇಷವಾಗಿ ತ್ರಿವಿಕ್ರಮತ್ವ ಮೊದಲಾದುವನ್ನು ಧ್ಯಾನಿಸುವುದಿಲ್ಲ. ಹೀಗೆ ಯಥಾಶಕ್ತಿ ಕ್ರಿಯಾರೂಪ ಸಾಧನೆ ಯಿಂದ ಅವರಿಬ್ಬರಲ್ಲಿ ಫಲತಾರತಮ್ಯವು ಕೂಡುತ್ತದೆ ಎಂದು ಸಿದ್ಧಾಂತ.

## ೧೩. ನವಾऽವಿಶೇಷಾಧಿಕರಣ: ಓಂ ನ ವಾऽವಿಶೇಷಾತ್ ಓಂ

ಅನವಸ್ಥಾ ಎನ್ನುವುದು ಪೂರ್ವಪಕ್ಷಯುಕ್ತಿ. ಆತ್ಮ ಶಬ್ದವು ಅಧಿಕಾರಿಗಳ ಯೋಗ್ಯತೆಗೆ ಅನುಗುಣವಾಗಿ ಇಷ್ಟಿಷ್ಟೇ ಗುಣಗಳಿಗೆ ವಾಚಕವು ಎಂಬ ವ್ಯವಸ್ಥೆಯು ಇಲ್ಲವಾದ್ದರಿಂದ ಆತ್ಮಶಬ್ದೋಕ್ತ ಗುಣಗಳನ್ನು ಉಪಾಸನೆ ಮಾಡುವುದು ಯುಕ್ತವಲ್ಲ ಎಂದು ಪೂರ್ವಪಕ್ಷ.

ಸಂಧಿ ಎನ್ನುವುದು ಸಿದ್ಧಾಂತಯುಕ್ತಿ. ಸಂಧಿ ಎಂದರೆ ಅಭಿಸಂಧಿ ಅಥವಾ ಅಭಿಪ್ರಾಯ ಎಂದರ್ಥ. ಯಾವ ಯಾವ ಅಧಿಕಾರಿಗಳಿಗೆ ಎಷ್ಟೆಷ್ಟು ಗುಣಗಳನ್ನು ಉಪಾಸನೆ ಮಾಡಲು ಯೋಗ್ಯತೆಯಿದೆಯೋ ಆಯಾ ಅಧಿಕಾರಿಗಳನ್ನು ಕುರಿತು ಆತ್ಮ ಶಬ್ದವು ಅಷ್ಟಷ್ಟು ಗುಣಗಳನ್ನು ಮಾತ್ರ ತಿಳಿಸುತ್ತದೆ ಎಂಬ ಅಭಿಪ್ರಾಯವಿರುವ ಪ್ರಯುಕ್ತ ಆತ್ಮಶಬ್ದೋಕ್ತ ಗುಣಗಳನ್ನು ಉಪಸಂಹಾರ ಮಾಡಬೇಕೆನ್ನುವುದು ಯುಕ್ತವೇ ಎಂದು ಸಿದ್ಧಾಂತ.

## ೧೪. ಸಂಭೃತ್ಯಧಿಕರಣ: ಓಂ ಸಂಭೃತಿ ದ್ಯುವ್ಯಾಪ್ತ್ಯಪಿ ಚಾತಃ ಓಂ

ಅವಿಶೇಷಿತಾ ಎಂಬುದು ಪೂರ್ವಪಕ್ಷಯುಕ್ತಿ. ಮೋಕ್ಷೇಚ್ಛೆಯು ಅವಿಶೇಷವಾಗಿ ಅಂದರೆ ಸಾಮಾನ್ಯವಾಗಿ ಎಲ್ಲರಲ್ಲಿಯೂ ಇರುವುದರಿಂದ ಹಾಗೂ ಎಲ್ಲರಿಗೂ ಸ್ವಾಧಮರ ಸಂಭರಣ ಮತ್ತು ಪ್ರಕಾಶವ್ಯಾಪ್ತಿಯು ಅಪೇಕ್ಷಿತವಾಗಿರುವುದರಿಂದ, ಎಲ್ಲರೂ ಭಗವಂತನ ಈ ಗುಣಗಳನ್ನು ಉಪಾಸನೆ ಮಾಡಬೇಕೆಂದು ಪೂರ್ವಪಕ್ಷ.

ಪ್ರಮಾಣಬಲವು ಸಿದ್ಧಾಂತಯುಕ್ತಿ. 'ಸತ್ಯೋ ಜ್ಞಾನಂ ಪರಮಾನಂದರೂಪಃ ಆತ್ಮೇತ್ಯೇವಂ ನಿತ್ಯದೋಪಾಸನಂ ಸ್ಯಾತ್। ನಾನ್ಯತ್ ಕಿಂಚಿತ್ ಸಮುಪಾಸೀತ ಧೀರಃ

ಸರ್ವೈರ್ಗುಣೈರ್ದೇವಗಣಾ ಉಪಾಸತೇ' 'ಸತ್ಯ ಜ್ಞಾನಮನಂತಂ ಬ್ರಹ್ಮ' ಇತ್ಯಾದಿ ಪ್ರಮಾಣ ಬಲದಿಂದ ಸಂಭೃತಿ ದ್ಯುವ್ಯಾಪ್ತಿಗಳು ಎಲ್ಲರಿಂದ ಉಪಾಸ್ಯವಲ್ಲವೆಂದು ಸಿದ್ಧಾಂತ.

**೧೫. ಪುರುಷವಿದ್ಯಾಧಿಕರಣ: ಓಂ ಪುರುಷ ವಿದ್ಯಾಯಾಮಪಿ ಚೇತರೇಷಾಮನಾಮ್ನಾನಾತ್ ಓಂ**

ಅಪ್ರಯೋಜನತಾ ಎನ್ನುವುದು ಪೂರ್ವಪಕ್ಷಯುಕ್ತಿ. ಪರಮಾತ್ಮನಲ್ಲಿ ಬಹುಗುಣಗಳನ್ನು ಪ್ರತಿಪಾದಿಸುವ ಪುರುಷಸೂಕ್ತಾದಿಗಳು ಇವೆ. ಅಲ್ಪಗುಣಗಳನ್ನು ಪ್ರತಿಪಾದಿಸುವ 'ಸತ್ಯಂ ಜ್ಞಾನಮನಂತಂ ಬ್ರಹ್ಮ' ಇತ್ಯಾದಿ ಶ್ರುತಿಗಳೂ ಇವೆ. ಆದ್ದರಿಂದ ಬೇರೆ ಬೇರೆ ಕಡೆಗಳಿಂದ ಗುಣಗಳನ್ನು ಉಪಸಂಹಾರ ಮಾಡುವುದು ವ್ಯರ್ಥವೆಂದು ಪೂರ್ವಪಕ್ಷ.

ಆನತಿ ಎನ್ನುವುದು ಸಿದ್ಧಾಂತಯುಕ್ತಿ. ಆನತಿ ಎಂದರೆ ಪ್ರಾಪ್ತಿ. 'ಗುಣಾಃ ಸರ್ವೇ ಬ್ರಹ್ಮಣ್ಯೇವ ಹ್ಯುಪಾಸ್ಯಾಃ ನಾನ್ಯೈರ್ದೇವೈಃ ಕಿಮು ಸರ್ವೈರ್ಮನುಷ್ಯೈಃ' ಇತ್ಯಾದಿ ಶ್ರುತಿಗಳಿಂದ ಬ್ರಹ್ಮ ದೇವರನ್ನು ಹೊರತು ಇತರರಿಗೆ ಸರ್ವಗುಣೋಪಸಂಹಾರವು ಸಾಧ್ಯವಿಲ್ಲ. ಎಲ್ಲ ಗುಣಗಳನ್ನು ಒಂದೇ ಕಡೆಯಲ್ಲಿ ಹೇಳಿರುವುದಿಲ್ಲ. ಆದರೂ ಬೇರೆ ಬೇರೆ ಕಡೆಗಳಿಂದ ಯಥಾಶಕ್ತಿ ಸರ್ವಗುಣೋಪಸಂಹಾರ ಪ್ರಾಪ್ತಿಯಿದೆ. ಆದಕಾರಣ ಸರ್ವಗುಣೋಪಸಂಹಾರವು ವ್ಯರ್ಥವಲ್ಲ ಎಂದು ಸಿದ್ಧಾಂತ.

**೧೬. ವೇಧಾದ್ಯಧಿಕರಣ: ಓಂ ವೇಧಾದ್ಯರ್ಥಭೇದಾತ್ ಓಂ**

ಅಪ್ರಯೋಜನತಾವು ಪೂರ್ವಪಕ್ಷಯುಕ್ತಿ. ವೇಧ ಇತ್ಯಾದಿ ಭಗವದ್ಗುಣಗಳನ್ನು ಉಪಾಸನೆ ಮಾಡಿದರೆ ದುಷ್ಟನಿಗ್ರಹರೂಪ ಫಲವು ಉಂಟಾಗುವುದರಿಂದ, ಈ ಉಪಾಸನೆಯಿಂದ ಸಜ್ಜನರಿಗೆ ದ್ರೋಹಾದಿಗಳನ್ನು ಮಾಡಬೇಕೆಂಬ ದುರ್ಜನರಿಗೆ ಪ್ರಯೋಜನಾಭಾವು ಸಿದ್ಧಿಸುವುದು. ಇದು ಎಲ್ಲರಿಗೂ ಅಪೇಕ್ಷಿತವಾದ್ದರಿಂದ ಈ ಗುಣಗಳನ್ನು ಎಲ್ಲರೂ ಉಪಾಸನೆ ಮಾಡಬೇಕು ಎಂದು ಪೂರ್ವಪಕ್ಷ.

ಆನತಿ (ಪ್ರಾಪ್ತಿ) ಎನ್ನುವುದು ಸಿದ್ಧಾಂತಯುಕ್ತಿ. ಯತಿಗಳಿಗೂ ಉಪಾಸನೆಯ ಪ್ರಾಪ್ತಿಯಿದೆ. ಅವರಿಗೆ ವೇಧಾದಿ ಗುಣಗಳ ಉಪಾಸನೆಯು ನಿಷಿದ್ಧವಾದ್ದರಿಂದ ಈ ಗುಣಗಳು ಸರ್ವರಿಂದಲೂ ಉಪಾಸ್ಯವೆನ್ನುವುದು ಯುಕ್ತವಲ್ಲ ಎಂದು ಸಿದ್ಧಾಂತ.

**೧೭. ಹಾನ್ಯಧಿಕರಣ: ಓಂ ಹಾನೌ ತೂಪಾಯನಶಬ್ದಶೇಷತ್ವಾತ್ ಕುಶಾಚ್ಛಂದಸ್ತುತ್ಯುಪಗಾನವತ್ ತದುಕ್ತಂ ಓಂ**

ಅತಿಪ್ರಸಂಗವು ಪೂರ್ವಪಕ್ಷಯುಕ್ತಿ. ಮುಕ್ತಿಯಲ್ಲಿಯೂ ಉಪಾಸನೆಯುಂಟು ಎಂದು ಒಪ್ಪಿದರೆ ಅದರಿಂದ ಫಲ ಪ್ರಾಪ್ತಿಯಾಗಬೇಕಾಗುವುದು. ಅಂದರೆ ಮುಕ್ತಿಗೆ ಮುಂಚೆ ಆ ಫಲವಿದ್ದಿಲ್ಲ ಎಂಬ ಕಾರಣದಿಂದ ಮುಕ್ತಿಗೆ ಅಪೂರ್ಣತ್ವ ಬರುವುದು.

ಹೀಗೆ ಅತಿಪ್ರಸಂಗ ಬರುವುದರಿಂದ ಮುಕ್ತಿಯಲ್ಲಿ ಉಪಾಸನೆಯನ್ನು ಮಾಡಕೂಡದು ಎಂದು ಪೂರ್ವಪಕ್ಷ.

ಕಾರಣವೆನ್ನುವುದು ಸಿದ್ಧಾಂತಯುಕ್ತಿ. 'ನ ಹೀಯತೇ ಯತ್ರ ಗತ್ವಾ ಯತ್ರ ಗತ್ವಾ ನ ವರ್ಧತೇ' ಎಂಬ ಪ್ರಮಾಣದ ಪ್ರಕಾರ ಮುಕ್ತಿಯಲ್ಲಿ ಫಲವಿಲ್ಲದಿದ್ದರೂ, ಸಂಸ್ಕಾರ ವೆಂಬ ಕಾರಣದಿಂದ ಮುಕ್ತಿಯಲ್ಲಿಯೂ ಉಪಾಸನೆಯು ಕೂಡುತ್ತದೆ.

**೧೮. ಛಂದಾಧಿಕರಣ: ಓಂ ಛಂದತ ಉಭಯಾವಿರೋಧಾತ್ ಓಂ**

ಅದೂರಸಂಶ್ರಯ ಎನ್ನುವುದು ಪೂರ್ವಪಕ್ಷಯುಕ್ತಿ. ಮುಕ್ತನು ಸಂಸ್ಕಾರವೆಂಬ ಕಾರಣದಿಂದ ಮುಕ್ತಿಯಲ್ಲಿಯೂ ಉಪಾಸನೆ ಮಾಡುವಂತೆ, ಅವನಿಗೆ ಕರ್ಮಕರಣ ಶಕ್ತಿಯೂ ಇರುವುದರಿಂದ ಕರ್ಮವನ್ನೂ ಮಾಡಲಿ ಎಂದು ಪೂರ್ವಪಕ್ಷ.

ಕಾರ್ಯವೈಶೇಷ್ಯ ಎಂಬುದು ಸಿದ್ಧಾಂತಯುಕ್ತಿ. ಉಪಾಸನಾ ರೂಪ ಕಾರ್ಯಕ್ಕೆ ನಿತ್ಯತ್ವವೆಂಬ ವಿಶೇಷವಿರುವದರಿಂದ ಆ ಸ್ವಭಾವವು ಮುಕ್ತಿಯಲ್ಲಿಯೂ ಇರುವುದು. ಕರ್ಮಕರಣರೂಪ ಕಾರ್ಯದಲ್ಲಿ ಹಾಗೆ ಇಲ್ಲ. ಆದ್ದರಿಂದ ಮುಕ್ತಿಯಲ್ಲಿ ಕರ್ಮ ನಿಯಮವಿಲ್ಲವೆಂದು ಸಿದ್ಧಾಂತ.

**೧೯. ಅನಿಯಮಾಧಿಕರಣ: ಓಂ ಅನಿಯಮಃ ಸರ್ವೇಷಾಮವಿರೋಧಾಚ್ಛಬ್ದಾನುಮಾಭ್ಯಾಂ ಓಂ**

ವಿಶಿಷ್ಟಕಾರಣವೆನ್ನುವುದು ಪೂರ್ವಪಕ್ಷಯುಕ್ತಿ. ಭಗವಂತನ ಸರ್ವಗುಣಗಳನ್ನು ಉಪಾಸನೆ ಮಾಡುವಲ್ಲಿ ಕೆಲವರಿಗೆ ಯೋಗ್ಯತೆಯಿಲ್ಲ ಎನ್ನುವಂತೆ ಜ್ಞಾನಿಗಳಲ್ಲಿಯೂ ಕೆಲವರಿಗೆ ಮೋಕ್ಷವನ್ನು ಹೊಂದುವ ಯೋಗ್ಯತೆ ಇರುವುದಿಲ್ಲ. ಆದಕಾರಣ ಎಲ್ಲ ಜ್ಞಾನಿಗಳೂ ಉಪಾಸನೆ ಮಾಡಬೇಕಿಲ್ಲ ಎಂದು ಪೂರ್ವಪಕ್ಷ.

ಸ್ವಭಾವವು ಸಿದ್ಧಾಂತಯುಕ್ತಿ. ಎಲ್ಲ ಜ್ಞಾನಿಗಳಿಗೂ ನಿಯಮೇನ ಮೋಕ್ಷ ಕೊಡುವುದು ಭಗವಂತನ ಸ್ವಭಾವ. ಮೋಕ್ಷಕ್ಕೆ ಅಯೋಗ್ಯರಾದವರಿಗೆ ಜ್ಞಾನವನ್ನೇ ಉಂಟುಮಾಡುವುದಿಲ್ಲ. ಜ್ಞಾನಿಗಳಿಗೆ ಮೋಕ್ಷವು ಖಚಿತ. ಆದಕಾರಣ ಉಪಾಸನೆ ಮಾಡಬೇಕು ಎಂದು ಸಿದ್ಧಾಂತ.

**೨೦. ಯಾವದಧಿಕರಣ: ಓಂ ಯಾವದಧಿಕಾರಮವಸ್ಥಿತಿರಾಧಿಕಾರಿಕಾಣಾಂ ಓಂ**

ಚೇಷ್ಟಾವು ಪೂರ್ವಪಕ್ಷಯುಕ್ತಿ. ಚೇಷ್ಟಾ ಎಂದರೆ ಪ್ರಯತ್ನ. ಮುಕ್ತಿಯಲ್ಲಿರುವ ಬ್ರಹ್ಮಾದಿಗಳ ಆನಂದಾದಿ ತಾರತಮ್ಯವನ್ನು ನಿರ್ವಾಹ ಮಾಡಲು ಪ್ರಯತ್ನ ತಾರತಮ್ಯವನ್ನು ಅಂಗೀಕರಿಸಿದರೆ ಸಾಕು. ಉಪಾಸನೆಗೆ ಇವರು ಅಧಿಕಾರಿಗಳು, ಅವರಲ್ಲ ಎಂಬ ಅಧಿಕಾರ ನಿಯಮದ ಅಗತ್ಯವಿಲ್ಲವೆಂದು ಪೂರ್ವಪಕ್ಷ.

ವಸ್ತುದೂಷಣವು ಸಿದ್ಧಾಂತಯುಕ್ತಿ. ಪ್ರಯತ್ನ ತಾರತಮ್ಯವು ಅಧಿಕಾರ ಅಥವಾ ಯೋಗ್ಯತಾ ತಾರತಮ್ಯಕ್ಕೆ ಅಧೀನವಾಗಿದೆ. ಯೋಗ್ಯತೆಗೆ ಮೀರಿದ ಪ್ರಯತ್ನವು

ದೂಷಿತವಾಗುವುದರಿಂದ ಯಥಾಯೋಗ್ಯ ಉಪಾಸನೆಯನ್ನು ಅಂಗೀಕರಿಸಲೇಬೇಕು ಎಂದು ಸಿದ್ಧಾಂತ.

**೨೧. ಇಯದಾಮನನಾಧಿಕರಣ: ಓಂ ಇಯದಾಮನನಾತ್ ಓಂ**

ದೃಷ್ಟವೈರೂಪ್ಯವು ಪೂರ್ವಪಕ್ಷಯುಕ್ತಿ. ಸಾಧಕರಲ್ಲಿ ಒಬ್ಬರಿಗಿಂತ ಒಬ್ಬರು ಅಧಿಕರು ಎಂದು ಕಂಡಿದೆ. ಸರ್ವಗುಣ ಉಪಾಸನೆಗೆ ಪ್ರಾಣನಿಗಿಂತ ಅಧಿಕರು ಇಲ್ಲವೆಂದು ಹೇಳಿದರೆ ಲೋಕದಲ್ಲಿ ಕಾಣುವ ಪರಿಸ್ಥಿತಿಗೆ ವಿರೋಧವಾಗುವುದು. ಆದಕಾರಣ ಪ್ರಾಣ ಅಥವಾ ಬ್ರಹ್ಮದೇವರೇ ಸರ್ವಗುಣೋಪಾಸನೆಗೆ ಅಧಿಕಾರಿಗಳು ಎಂದು ಹೇಳುವುದು ಅಯುಕ್ತವು ಎಂದು ಪೂರ್ವಪಕ್ಷ.

ಪ್ರತಿಕ್ರಿಯಾವಿರೋಧವು ಸಿದ್ಧಾಂತಯುಕ್ತಿ. 'ಯಃ ಸರ್ವಮವಜಾನೀಯಾತ್ ಋತೇ ದೇವಂ ನಾರಾಯಣಂ ದೇವೀಂ ಚ ಪರಮಾಂ ಶ್ರಿಯಂ। ಸ ಪ್ರಾಣಾನ ವರುದ್ಧ್ಯೇಮಂ ಮಂತ್ರಮಾವರ್ತಯೀತ' ಇತ್ಯಾದಿ ಪ್ರತಿಕ್ರಿಯಾ ವಿಧಾನಾದಿಗಳಿಂದ ವಿರೋಧ ಬರುವುದರಿಂದ ಪ್ರಾಣನೇ ಸರ್ವಾಧಿಕಾರಿಗಳಲ್ಲಿ ಶ್ರೇಷ್ಠನು. ಆದ್ದರಿಂದ ಉಪಾಸಕರಲ್ಲಿ ಪ್ರಾಣನೇ ಶ್ರೇಷ್ಠನು ಎಂದು ಸಿದ್ಧಾಂತ.

**೨೨. ವ್ಯತಿಹಾರಾಧಿಕರಣ: ಓಂ ವ್ಯತಿಹಾರೋ ವಿಶಿಂಷಂತಿ ಹೀತರವತ್ ಓಂ**

ಉನ್ನತಿಯು ಪೂರ್ವಪಕ್ಷಯುಕ್ತಿ. ಉನ್ನತಿ ಎಂದರೆ ಶ್ರೇಷ್ಠತ್ವ. ಛಾಂದೋಗ್ಯ ಉಪನಿಷತ್ತಿನ ತಾರತಮ್ಯ ಪ್ರಕರಣದಲ್ಲಿ ಯಾರಿಂದ ಯಾರು ಉತ್ತಮರು ಎಂಬ ಪ್ರಶ್ನೆಗೆ ಉತ್ತರವಾಗಿ ನಾಮಾಭಿಮಾನಿ ಉಷಾದೇವಿಯಿಂದ ಆರಂಭಿಸಿ ಪ್ರಾಣನ ಪರ್ಯಂತ ತಾರತಮ್ಯವು ಉಕ್ತವಾಗಿದೆ. ಪ್ರಾಣನಿಗಿಂತ ಶ್ರೇಷ್ಠರು ಯಾರು ಎಂಬ ಪ್ರಶ್ನೆ ಅಲ್ಲಿ ಕಂಡುಬಂದಿಲ್ಲ. ಆದ್ದರಿಂದ ಪ್ರಾಣನಿಗೆ ಉನ್ನತಿಯು ಪ್ರಾಪ್ತವಾಗುವುದು. ಆದ್ದರಿಂದ ವಿಷ್ಣುವಿಗೆ ಪ್ರಾಣನಿಗಿಂತ ಉತ್ತಮತ್ವ ಸಿದ್ಧಿಸುವುದಿಲ್ಲವೆಂದು ಪೂರ್ವಪಕ್ಷ.

ಪ್ರತಿಸಂಧಿಯು ಸಿದ್ಧಾಂತಯುಕ್ತಿ. ಪ್ರತಿಸಂಧಿ ಎಂದರೆ ಅಧ್ಯಾಹಾರ. ಅದೇ ಉಪನಿಷತ್ತಿನಲ್ಲಿ ಪ್ರಾಣ ಪ್ರಕರಣಕ್ಕಿಂತ ಭಿನ್ನವಾದ ಸತ್ಯ ಪ್ರಕರಣದಲ್ಲಿ ಸತ್ಯ ಜ್ಞಾನಿಯು ಪ್ರಾಣಬೋಧಕನಿಗಿಂತಲೂ ಅತ್ಯುತ್ಕೃಷ್ಟ ತತ್ವಬೋಧಕ ಎಂದು 'ಏಷ ತು ಅತಿವದತಿ' ಎಂಬ ವಾಕ್ಯದಿಂದ ಪ್ರಶಂಸಿಸಲಾಗಿದೆ. ಇವೆರಡರ ಮಧ್ಯದಲ್ಲಿ ಪ್ರಾಣನಿಗಿಂತ ಶ್ರೇಷ್ಠನು ಯಾರು ಎಂಬ ಪ್ರಶ್ನೆಯನ್ನೂ, ಸತ್ಯನಾಮಕ ಭಗವಂತನು ಶ್ರೇಷ್ಠ ಎಂಬ ಉತ್ತರವನ್ನೂ ಅಧ್ಯಾಹಾರ ಮಾಡುವುದು ಅವಶ್ಯವಾದ್ದರಿಂದ ವಿಷ್ಣುವೇ ಸರ್ವಶ್ರೇಷ್ಠನೆಂದು ಸಿದ್ಧಾಂತ.

**೨೩. ಸತ್ಯಾಧಿಕರಣ: ಓಂ ಸೈವ ಹಿ ಸತ್ಯಾದಯಃ ಓಂ**

ಅನುಕ್ತಿಯು ಪೂರ್ವಪಕ್ಷಯುಕ್ತಿ. ಛಾಂದೋಗ್ಯದಲ್ಲಿ ಪ್ರಾಣಪ್ರಕರಣದ ಅನಂತರದಲ್ಲಿ ಬರುವ ಸತ್ಯ, ವಿಜ್ಞಾನ, ಆತ್ಮ ಇತ್ಯಾದಿ ಶಬ್ದಗಳಿಂದ ವಾಚ್ಯವಾದವನು

ಒಬ್ಬನೇ ಎಂದು ಅಭೇದೋಕ್ತಿಯು ಇರುವುದಿಲ್ಲ. ಆದ್ದರಿಂದ ಸತ್ಯ ಪದೋಕ್ತನಾದ ವಿಷ್ಣುವಿಗಿಂತ ವಿಜ್ಞಾನಾದಿಗಳಿಗೆ ಉತ್ತಮತ್ವವು ಪ್ರಾಪ್ತವಾಗುವುದರಿಂದ ವಿಷ್ಣುವು ಸರ್ವೋತ್ತಮನಲ್ಲ ಎಂದು ಪೂರ್ವಪಕ್ಷ.

ಅನೂನತಾ ಎನ್ನುವುದು ಸಿದ್ಧಾಂತಯುಕ್ತಿ. ಅನೂನತಾ ಎಂದರೆ ಪೂರ್ಣತ್ವ. ಸತ್ಯಾದಿ ಎಲ್ಲ ಶಬ್ದಗಳಿಂದ ವಾಚ್ಯನಾದವನು ವಿಷ್ಣುವೇ ಹೊರತು ಇತರರಲ್ಲ. ಏಕೆಂದರೆ 'ಸತ್ಯಂ ಪೂರ್ಣಂ ವಿಜ್ಞಾನಂ ಪೂರ್ಣಮದಃ ಪೂರ್ಣಂ ಪೂರ್ಣಮಿದಂ' ಇತ್ಯಾದಿ ಶಾಖಾಂತರದಲ್ಲಿ ಪೂರ್ಣತ್ವ ರೂಪದಿಂದ ಸತ್ಯಾದಿಗಳಿಗೆ ಅಭೇದವೇ ಹೇಳಲ್ಪಟ್ಟಿದೆ. ಆದ್ದರಿಂದ ವಿಷ್ಣುವೇ ಪ್ರಾಣನಿಗಿಂತ ಉತ್ತಮನು ಎಂದು ಸಿದ್ಧಾಂತ.

**೨೪. ಕಾಮಾಧಿಕರಣ: ಓಂ ಕಾಮಾದಿತರತ್ರ ತತ್ರ ಚಾಯತನಾದಿಭ್ಯಃ ಓಂ**

ಅಪ್ರಯತ್ನತ್ವವು ಪೂರ್ವಪಕ್ಷಯುಕ್ತಿ. ಲಕ್ಷ್ಮೀದೇವಿಯು ನಿತ್ಯಮುಕ್ತಳಾದ್ದರಿಂದ ಅವಳು ಉಪಾಸನೆಗಾಗಿ ಪ್ರಯತ್ನ ಮಾಡಬೇಕಿಲ್ಲ. ಆದರೂ ಅವಳು ನಿತ್ಯದಲ್ಲಿಯೂ ಭಗವದುಪಾಸನೆ ಮಾಡುತ್ತಾಳೆ. ಅದನ್ನು ಸಮರ್ಥಿಸಲು ಪ್ರಯತ್ನವನ್ನು ಒಪ್ಪಬೇಕು. ಆಗ ಲಕ್ಷ್ಮೀದೇವಿಯೂ ಉಪಾಸನೆಗೆ ಅಧಿಕಾರಿಣಿ ಎನಿಸುವುದರಿಂದ ಅವಳಿಗೂ ಸಂಸಾರಿತ್ವವು ಬರುವುದು. ಆದ್ದರಿಂದ ಅಧಿಕಾರಿಗಳಲ್ಲಿ ಪ್ರಾಣನಿಗಿಂತ ಮೇಲೆ ಯಾರೂ ಇಲ್ಲ ಎನ್ನುವುದು ಅಯುಕ್ತವೆಂದು ಪೂರ್ವಪಕ್ಷ.

ಸಂಸ್ಕಾರಪಾಟವವು ಸಿದ್ಧಾಂತಯುಕ್ತಿ. ಲಕ್ಷ್ಮೀದೇವಿಯು ಭಗವಂತನಿಗೆ ಅತ್ಯಂತ ಪ್ರಿಯಳು, ಅನಾದಿಕಾಲದಿಂದ ಪರಮಾತ್ಮನಿಗೆ ಅತ್ಯಂತ ಸಮೀಪಳು. ಆದ್ದರಿಂದ ಅವಳು ಅಸ್ವತಂತ್ರಳಾದರೂ ನಿತ್ಯಮುಕ್ತತ್ವವು ಕೂಡುತ್ತದೆ. ಯಾರಾದರೂ ತಮಗೆ ಅತಿಪ್ರಿಯವಾದ ವಸ್ತುವನ್ನು ಸದಾಕಾಲವೂ ಧ್ಯಾನ ಮಾಡುವುದು ಲೋಕದಲ್ಲಿ ಕಂಡಿದೆ. ಲಕ್ಷ್ಮೀದೇವಿಯೂ ತನಗೆ ಅತಿಪ್ರಿಯನಾದ ಪರಮಾತ್ಮನನ್ನು ಮುಕ್ತ್ಯರ್ಥ ಪ್ರಯತ್ನವಿಲ್ಲದೆ ಸಂಸ್ಕಾರ ಪಾಟವದಿಂದ ನಿತ್ಯದಲ್ಲಿಯೂ ಉಪಾಸನೆ ಮಾಡುತ್ತಾಳೆ. ಆದ್ದರಿಂದ ಲಕ್ಷ್ಮೀದೇವಿಯು ಅಧಿಕಾರಿ ವರ್ಗದಲ್ಲಿ ಬರುವುದಿಲ್ಲ. ಆದಕಾರಣ ಪ್ರಾಣನೇ ಅಧಿಕಾರಿವರ್ಗಕ್ಕೆ ಅವಧಿಯು ಎಂದು ಸಿದ್ಧಾಂತ.

**೨೫. ತನ್ನಿರ್ಧಾರಣಾಧಿಕರಣ: ಓಂ ತನ್ನಿರ್ಧಾರಣಾರ್ಥನಿಯಮಸ್ತದ್ದೃಷ್ಟೇಃ ಪೃಥಗ್ಘ್ಯ ಪ್ರತಿಬಂಧಃ ಫಲಂ ಓಂ**

ದೃಢಬಂಧವು ಪೂರ್ವಪಕ್ಷಯುಕ್ತಿ. ಸಂಸಾರಬಂಧವು ಅದೃಢವಾಗಿದ್ದರೆ ಅದನ್ನು ಶ್ರವಣಾದಿಗಳಿಂದಲೇ ಭೇದಿಸಬಹುದಿತ್ತು. ಆದರೆ ಅದು ದೃಢವಾಗಿರುವುದರಿಂದ ಸಾಮಾನ್ಯವಾದ ಶ್ರವಣಾದಿ ಉಪಾಸನೆಯಿಂದ ಅದನ್ನು ಭೇದಿಸಲು ಅಶಕ್ಯವು. ಆದ್ದರಿಂದ ಶ್ರವಣಾದಿಗಳು ವ್ಯರ್ಥ ಎಂದು ಪೂರ್ವಪಕ್ಷ.

ಸ್ವೇಚ್ಛಾನಿಯತಿಯು (ಈಶ್ವರನ ಇಚ್ಛೆಯೆಂಬ ನಿಯಮ) ಸಿದ್ಧಾಂತಯುಕ್ತಿ. ಸಂಸಾರ ಬಂಧವು ಅದೃಢವೇ ಆಗಿದೆ. ಆದರೂ ಶ್ರವಣ ಮನನ ನಿಧಿಧ್ಯಾಸನ ರೂಪ

ಉಪಾಸನೆಯಿಂದ ಸಂತುಷ್ಟನಾದ ನಾನು ಇವನನ್ನು ಸಂಸಾರಬಂಧದಿಂದ ಬಿಡಿಸಿ ಮುಕ್ತಿಯನ್ನು ಕೊಡುತ್ತೇನೆ ಎಂಬ ಈಶ್ವರನ ಇಚ್ಛೆಯೆಂಬ ನಿಯಮವಿರುವುದರಿಂದ ಶ್ರವಣಾದಿಗಳು ವ್ಯರ್ಥವಲ್ಲ ಎಂದು ಸಿದ್ಧಾಂತ.

**೨೬. ಪ್ರದಾನಾಧಿಕರಣ: ಓಂ ಪ್ರದಾನವದೇವ ಹಿ ತದುಕ್ತಂ ಓಂ**

ಪರಾಭವವು ಪೂರ್ವಪಕ್ಷಯುಕ್ತಿ. ಜ್ಞಾನ ಮೋಕ್ಷಗಳು ಗುರುವಿನ ಅಧೀನವು ಎಂದರೆ, ಕದಾಚಿತ್ತಾಗಿ ಗುರುಗಳಿಗೆ ಕೋಪದಿಂದ ಜ್ಞಾನವು ಪರಾಭವ ಅಂದರೆ ನಷ್ಟವಾದ ಪಕ್ಷದಲ್ಲಿ ಮೋಕ್ಷವೇ ಇಲ್ಲದಂತಾಗುವುದು. ಆಗ ಜ್ಞಾನಿಗಳಿಗೆ ಮೋಕ್ಷ ನಿಯತ ಎಂದು ಹೇಳಿದ್ದು ಅಯುಕ್ತವಾಗುವುದು. ಆದಕಾರಣ ಜ್ಞಾನವು ಕೇವಲ ಶ್ರವಣಾದಿಗಳ ಅಧೀನಾದ್ದರಿಂದ ಗುರುಗಳು ಹೇಳಿದಂತೆ ಉಪಾಸನೆ ಮಾಡಕೂಡದು ಎಂದು ಪೂರ್ವಪಕ್ಷ.

ವಸ್ತುವೈಭವ ಎನ್ನುವುದು ಸಿದ್ಧಾಂತಯುಕ್ತಿ. ವಸ್ತುವೈಭವ ಎಂದರೆ ಜ್ಞಾನದ ವೈಭವ. ಜ್ಞಾನವು ಗುರುಗಳ ಅಧೀನವೇ ಆದರೂ ಜ್ಞಾನಿಗಳಿಗೆ ಗುರುಗಳ ಕೋಪ ಶಾಪಗಳು ಮೋಕ್ಷಕ್ಕೆ ಪ್ರತಿಬಂಧಕವಲ್ಲ. 'ಜ್ಞಾನಿನೋ ಗುರುಶಾಪೇಪಿ ನಾಮುಕ್ತಿಃ ಸಂಸೃತೇಃ ಕ್ವಚಿತ್। ಆನಂದಹ್ರಾಸದೋಷೇಣ ಸೈವ ಮುಕ್ತಿರ್ವಿದುಷ್ಯತಿ' ಎಂಬ ಉಕ್ತಿಯ ಪ್ರಕಾರ ಗುರು ಶಾಪದ ನಿಮಿತ್ತದಿಂದ ಮೋಕ್ಷದಲ್ಲಿ ಆನಂದಹ್ರಾಸ ಮಾತ್ರ ಉಂಟಾಗುವುದು. ಜ್ಞಾನಿಗೆ ನಿಯತವಾಗಿ ಮೋಕ್ಷವೆಂಬುದೇ ಜ್ಞಾನದ ವೈಭವ. ಆದ್ದರಿಂದ ಗುರುಪ್ರದಾನವು (ಪ್ರಸಾದಪೂರ್ವಕ ಜ್ಞಾನೋಪದೇಶ) ಅವಶ್ಯಕವೆಂದು ಸಿದ್ಧಾಂತ.

**೨೭. ಲಿಂಗಭೂಯಸ್ತ್ವಾಧಿಕರಣ: ಓಂ ಲಿಂಗಭೂಯಸ್ತ್ವಾತ್ತದ್ಧಿ ಬಲೀಯಸ್ತದಪಿ ಓಂ**

ಪುಂಸಾಮ್ಯವು ಪೂರ್ವಪಕ್ಷಯುಕ್ತಿ. ಶಿಷ್ಯ ಮತ್ತು ಗುರುಗಳಲ್ಲಿ ಪುರುಷತ್ವವು ಸಮಾನವಾಗಿರುವಾಗ ಗುರುಪ್ರಸಾದಕ್ಕೆ ಪ್ರಾಬಲ್ಯವನ್ನು ಹೇಳುವುದು ಯುಕ್ತವಲ್ಲ. ಶಿಷ್ಯ ಪ್ರಯತ್ನವೇ ಪ್ರಧಾನವು, ಗುರು ಪ್ರಸಾದವು ಸಹಕಾರಿಯಷ್ಟೆ ಎಂದು ಏಕೆ ಹೇಳಬಾರದು ಎಂದು ಪೂರ್ವಪಕ್ಷ.

ವಿಶೇಷೋಕ್ತಿಯು ಸಿದ್ಧಾಂತಯುಕ್ತಿ. 'ಗುರುಪ್ರಸಾದೋ ಬಲವಾನ್ನ ತಸ್ಮಾದ್ ಬಲವತ್ತರಂ। ತಥಾಪಿ ಶ್ರವಣಾದಿಶ್ಚ ಕರ್ತವ್ಯೋ ಮೋಕ್ಷಸಿದ್ಧಯೇ' ಇತ್ಯಾದಿ ವಿಶೇಷೋಕ್ತಿಯಿಂದ ಗುರುಗಳ ಪ್ರಸಾದವೇ ಪ್ರಬಲವು. ಆದ್ದರಿಂದ ಅವಶ್ಯವಾಗಿ ಗುರುಗಳ ಅನುಗ್ರಹವನ್ನು ಸಂಪಾದಿಸಬೇಕು ಎಂದು ಸಿದ್ಧಾಂತ.

**೨೮. ಪೂರ್ವವಿಕಲ್ಪಾಧಿಕರಣ: ಓಂ ಪೂರ್ವವಿಕಲ್ಪಃ ಪ್ರಕರಣಾತ್ ಸ್ಯಾತ್ ಕ್ರಿಯಾ ಮಾನಸವತ್ ಓಂ**

ಪ್ರಾಪ್ತಸಂತ್ಯಾಗವು ಪೂರ್ವಪಕ್ಷಯುಕ್ತಿ. ಗುರು ಪರಿತ್ಯಾಗಕ್ಕೆ ದೋಷಪ್ರಾಪ್ತಿಯು ಹೇಳಿರುವ ಪ್ರಯುಕ್ತ ಉತ್ತಮರಾದ ಗುರುಗಳು ಪ್ರಾಪ್ತವಾದಾಗಲೂ ಪೂರ್ವಪ್ರಾಪ್ತ

ಗುರುಗಳನ್ನು ಪರಿತ್ಯಾಗ ಮಾಡಬಾರದು. ಆದ್ದರಿಂದ ಸರ್ವಜ್ಞರಾದ ಗುರುಗಳು ಪ್ರಥಮದಲ್ಲಿ ಪ್ರಾಪ್ತವಾಗದೆ ಅನಂತರ ಪ್ರಾಪ್ತವಾದರೆ ಅವರನ್ನು ಸ್ವೀಕರಿಸಬಾರದು ಎಂದು ಪೂರ್ವಪಕ್ಷ.

ಅಮಾನತ್ವವೆನ್ನುವುದು ಸಿದ್ಧಾಂತಯುಕ್ತಿ. ಉತ್ತಮ ಗುರುಗಳನ್ನು ಸ್ವೀಕರಿಸಲು ಪೂರ್ವಗುರುಗಳ ಪರಿತ್ಯಾಗ ಮಾಡಿದರೆ ದೋಷವಿದೆ ಎನ್ನುವುದಕ್ಕೆ ಪ್ರಮಾಣವಿಲ್ಲ. ಆದ್ದರಿಂದ ಉತ್ತಮಗುರುಗಳನ್ನು ಸ್ವೀಕರಿಸಬಹುದು ಎಂದು ಸಿದ್ಧಾಂತ.

**೨೯. ವಿದ್ಯಾಧಿಕರಣ: ಓಂ ವಿದ್ಯೈವ ತು ನಿರ್ಧಾರಣಾತ್ ಓಂ**

ಕಾರಣಾನಿರ್ಣಯ ಎನ್ನುವುದು ಪೂರ್ವಪಕ್ಷಯುಕ್ತಿ. 'ವಿದ್ವಾನಮೃತೋ ಭವತಿ' ಎಂಬ ಶ್ರುತಿಯ ಪ್ರಕಾರ ಜ್ಞಾನವು ಮೋಕ್ಷಕ್ಕೆ ಕಾರಣವೋ ಅಥವಾ 'ಕರ್ಮಣೈವ ಹಿ ಸಂಸಿದ್ಧಮಾಸ್ಥಿತಾ ಜನಕಾದಯಃ' ಎಂಬ ಸ್ಮೃತಿಯಂತೆ ಕರ್ಮವೇ ಮೋಕ್ಷಕ್ಕೆ ಕಾರಣವೋ ಎಂಬುದು ನಿರ್ಣಯವಾಗದಿರುವುದರಿಂದ ಜ್ಞಾನಕ್ಕಾಗಿ ಉಪಾಸನೆ ಮಾಡಬೇಕಿಲ್ಲ ಎಂದು ಪೂರ್ವಪಕ್ಷ.

ಪ್ರಾಧಾನ್ಯವು ಸಿದ್ಧಾಂತಯುಕ್ತಿ. 'ನಾನ್ಯಃ ಪಂಥಾ ಅಯನಾಯ ವಿದ್ಯತೇ' ಎಂಬ ಶ್ರುತಿಯು ಮೋಕ್ಷಕ್ಕೆ ಜ್ಞಾನವನ್ನು ಹೊರತು ಪಡಿಸಿ ಬೇರೆ ಮಾರ್ಗವಿಲ್ಲವೆಂದು ಜ್ಞಾನಕ್ಕೇ ಪ್ರಾಧಾನ್ಯವನ್ನು ಹೇಳಿರುವುದರಿಂದ ಜ್ಞಾನಕ್ಕಾಗಿ ಉಪಾಸನೆ ಮಾಡಬೇಕು ಎಂದು ಸಿದ್ಧಾಂತ.

**೩೦. ಶ್ರುತ್ಯಧಿಕರಣ: ಓಂ ಶ್ರುತ್ವಾದಿ ಬಲೀಯಸ್ತ್ವಾಚ್ಚ ನ ಬಾಧಃ ಓಂ**

ಭ್ರಮವು ಪೂರ್ವಪಕ್ಷಯುಕ್ತಿ. ಕರ್ಮಣೈವ ಎನ್ನುವ ಸ್ಮೃತಿಯು ಏವಕಾರ ದಿಂದ ಕರ್ಮಕ್ಕೇನೆ ಪ್ರಾಧಾನ್ಯವನ್ನು ಹೇಳುತ್ತಿರುವಾಗ ನಾನ್ಯಃ ಪಂಥಾ ಎಂದು ಹೇಳುವ ಶ್ರುತಿಗೇ ಪ್ರಾಧಾನ್ಯವನ್ನು ತಿಳಿಯುವುದು ಭ್ರಾಂತಿ ಮೂಲಕವು. ಆದ್ದರಿಂದ ಕರ್ಮವೂ ಮೋಕ್ಷಸಾಧನವೆಂದು ಪೂರ್ವಪಕ್ಷ.

ಪ್ರೀತಿಯು ಸಿದ್ಧಾಂತಯುಕ್ತಿ. 'ಪ್ರಿಯೋ ಹಿ ಜ್ಞಾನಿನೋಽತ್ಯರ್ಥಂ ಅಹಂ ಸ ಚ ಮಮ ಪ್ರಿಯಃ' ಎಂಬ ವಚನದಿಂದ ಜ್ಞಾನಿಗಳಲ್ಲೇ ಭಗವಂತನಿಗೆ ಅಧಿಕವಾದ ಪ್ರೀತಿಯು ಎಂದು ಸಿದ್ಧವಾಗಿದೆ. ಯಮೈವೇಷ ವೃಣತೇ ಎಂಬ ವಚನದ ಪ್ರಕಾರ ಭಗವಂತನ ಪ್ರೀತಿಯಿಂದಲೇ ಮೋಕ್ಷವು. ಆದ್ದರಿಂದ ಜ್ಞಾನವೇ ಭಗವತ್ ಪ್ರಸಾದ ರೂಪವಾದ ಮೋಕ್ಷಕ್ಕೆ ಪ್ರಧಾನ ಸಾಧನವೆಂದು ಸಿದ್ಧಾಂತ.

**೩೧. ಅನುಬಂಧಾಧಿಕರಣ: ಓಂ ಅನುಬಂಧಾದಿಭ್ಯಃ ಓಂ**

ವಿಶೇಷದರ್ಶಿತಾ ಎನ್ನುವುದು ಪೂರ್ವಪಕ್ಷಯುಕ್ತಿ. ಯಾವನೋ ಒಬ್ಬ ಶಿಷ್ಯನಿಗೆ ಶ್ರೀಹರಿಯಲ್ಲಿ ಭಕ್ತಾದಿಗಳು ಇಲ್ಲದಿದ್ದರೂ ಗುರುಗಳ ಅನುಗ್ರಹದಿಂದ ಮೋಕ್ಷಕ್ಕೆ ಸಾಧನವಾದ ವಿಶೇಷಜ್ಞಾನವು ಆಗುವುದು. ದ್ವೇಷದಿಂದಲೂ ಮುಕ್ತಿ ಎಂಬ ವಿಶೇಷ

ದರ್ಶನವೂ ಪ್ರಸಿದ್ಧವು. ಆದ್ದರಿಂದ ಭಕ್ತ್ಯಾದಿಗಳು ಅನವಶ್ಯಕವೆಂದು ಪೂರ್ವಪಕ್ಷ.

ಆಗಮವು ಸಿದ್ಧಾಂತಯುಕ್ತಿ. 'ಭಕ್ತ್ಯೈವೈನಂ ಜಾನಾತಿ ಭಕ್ತ್ಯೈವೈನಂ ಪಶ್ಯತಿ ಭಕ್ತ್ಯೈವ ಬಂಧಾದ್ವಿಮುಚ್ಯತೇ' 'ಭಕ್ತ್ಯೈವಾನಂದೀ ಭವತಿ' ಇತ್ಯಾದಿ ಆಗಮಗಳಿಂದ ಭಕ್ತ್ಯಾದಿಗಳು ಅವಶ್ಯಕವೆಂದು ಸಿದ್ಧಾಂತ.

**೩೨. ಪ್ರಜ್ಞಾಂತರಾಧಿಕರಣ: ಓಂ ಪ್ರಜ್ಞಾಂತರ ಪೃಥಕ್ತ್ವವತ್ ದೃಷ್ಟಿಶ್ಚ ತದುಕ್ತಂ ಓಂ**

ಆಲಾಪವು ಪೂರ್ವಪಕ್ಷಯುಕ್ತಿ. 'ದೃಷ್ಟ್ವೈವ ತಂ ಮುಚ್ಯತೇ ನಾ ಪರೇಣ' ಇತ್ಯಾದಿ ವಚನದಿಂದ ಭಗವಂತನ ದರ್ಶನದಿಂದಲೇ ಮೋಕ್ಷವೆಂದು ಹೇಳಿ ಅದರಲ್ಲಿ ತಾರತಮ್ಯನ್ನು ಹೇಳದೆ ಇರುವ ಪ್ರಯುಕ್ತ ಮುಕ್ತಿಯಲ್ಲಿ ತಾರತಮ್ಯವಿಲ್ಲ ಎಂದು ಪೂರ್ವಪಕ್ಷ.

ಸುಸ್ಥಿರತ್ವ ಎನ್ನುವುದು ಸಿದ್ಧಾಂತಯುಕ್ತಿ. 'ಯಥಾಯೋಗ್ಯಮೇವೈಷ ಆತ್ಮಾನಂ ದರ್ಶಯತಿ' ಇತ್ಯಾದಿ ಶ್ರುತಿಯಿಂದ ದರ್ಶನ ತಾರತಮ್ಯವು ಸುಸ್ಥಿರವಾದುದರಿಂದ ತಾರತಮ್ಯವು ಯುಕ್ತವೇ ಎಂದು ಸಿದ್ಧಾಂತ.

**೩೩. ನ ಸಾಮಾನ್ಯಾಧಿಕರಣ: ಓಂ ನ ಸಾಮಾನ್ಯಾದಪ್ಯುಪಲಬ್ಧೇಃ ಮೃತ್ಯುವನ್ನ ಹಿ ಲೋಕಾಪತ್ತಿಃ ಓಂ**

ಗುಣಸಾಮ್ಯವು ಪೂರ್ವಪಕ್ಷಯುಕ್ತಿ. ಭಗವಂತನ ಎಲ್ಲ ರೂಪಗಳಲ್ಲಿ ಗುಣ ಸಾಮ್ಯವಿರುವುದರಿಂದ ಯಾವುದೇ ಭಗವದ್ರೂಪದ ಸಾಕ್ಷಾತ್ಕಾರವೂ ಮುಕ್ತಿಗೆ ಕಾರಣವಾಗುವುದು. ಬಿಂಬರೂಪದ ದರ್ಶನದಿಂದಲೇ ಮುಕ್ತಿಯು ಎನ್ನುವುದು ಯುಕ್ತವಲ್ಲವೆಂದು ಪೂರ್ವಪಕ್ಷ.

ಕೃತಪ್ರಾಪ್ತಿಯು ಸಿದ್ಧಾಂತಯುಕ್ತಿ. ಎಲ್ಲ ಅಶ್ವಮೇಧಯಾಗಗಳೂ ಸಮಾನವೇ ಆಗಿದ್ದರೂ ತಾನು ಮಾಡಿದ ಯಾಗ ಮಾತ್ರ ತನಗೆ ಫಲಪ್ರದವಾಗುವಂತೆ, ಎಲ್ಲ ರೂಪಗಳು ಸಮಾನವಾಗಿದ್ದರೂ ಸ್ವಬಿಂಬರೂಪದರ್ಶನವೇ ತನಗೆ ಫಲಪ್ರದವೆಂದು ಶ್ರುತಿಗಳಿಂದ ತಿಳಿದುಬರುವುದು. ಆದ್ದರಿಂದ ಬಿಬೋಪಾಸನೆಯು ಅವಶ್ಯಕವೆಂದು ಸಿದ್ಧಾಂತ.

**೩೪. ಪರೇಣಾಧಿಕರಣ: ಓಂ ಪರೇಣ ಚ ಶಬ್ದಸ್ಯ ತಾದ್ವಿಧ್ಯಂ ಭೂಯಸ್ತ್ವಾತ್ತ್ವ ನುಬಂಧಃ ಓಂ**

ಪೃಥಗ್ಗೃಶಿಯು ಪೂರ್ವಪಕ್ಷಯುಕ್ತಿ. 'ಭಕ್ತಿರೇವೈನಂ ನಯತಿ' ಭಕ್ತಿಯೇ ಈ ಸಾಧಕನನ್ನು ಮೋಕ್ಷಕ್ಕೆ ಒಯ್ಯುತ್ತದೆ ಎಂಬ ಪ್ರಮಾಣದಂತೆ ಪ್ರತ್ಯೇಕವಾಗಿ ಭಕ್ತಿಗೇ ಮೋಕ್ಷಪ್ರದತ್ವವಿರುವುದರಿಂದ ಭಗವಂತನದ್ದೇನೂ ಕೃತ್ಯವಿಲ್ಲವೆಂದು ಪೂರ್ವಪಕ್ಷ.

ಅನಾದಿಗುಣವಿಸ್ತರ ಎನ್ನುವುದು ಸಿದ್ಧಾಂತಯುಕ್ತಿ. ಕೇವಲ ಭಕ್ತಿಯಿಂದಲೇ ಮೋಕ್ಷವೆನ್ನುವುದು ಸರಿಯಲ್ಲ. ಏಕೆಂದರೆ ಜೀವನಲ್ಲಿ ಅನಾದಿ ಕಾಲದಿಂದಲೂ

ಭಕ್ತಿಯು ಅವ್ಯಕ್ತವಾಗಿಯೇ ಇರುವುದು. ಭಗವಂತನು ತನ್ನ ಇಚ್ಛೆಯಿಂದ ಆ ಭಕ್ತಿಯು ವ್ಯಕ್ತವಾಗುವಂತೆ ಅನುಗ್ರಹಿಸಿ ಅದನ್ನು ನಿಮಿತ್ತ ಮಾಡಿಕೊಂಡು ಮೋಕ್ಷ ಕೊಡುವನು. ಆದ್ದರಿಂದ ಭಗವದನುಗ್ರಹವಿಲ್ಲದೆ ಮೋಕ್ಷವಿಲ್ಲವೆಂದು ಸಿದ್ಧಾಂತ.

**೩೫. ಏಕಾಧಿಕರಣ: ಓಂ ಏಕ ಆತ್ಮನಃ ಶರೀರೇ ಭಾವಾತ್ ಓಂ**

ಅಗಮ್ಯವರ್ತ್ಮ ಎನ್ನುವುದು ಪೂರ್ವಪಕ್ಷಯುಕ್ತಿ. ಅಂಶಿಯ ಜ್ಞಾನಾದಿಗಳು ಅಂಶದಲ್ಲಿ ಇಲ್ಲವಾದ್ದರಿಂದ ಅಂಶಿಯ ಮಾರ್ಗ ಅಂಶದಿಂದ ಅಗಮ್ಯವು. ಅಂಶ ಅಂಶಿಗಳಿಗೆ ಭೇದವು ಇಲ್ಲದೇ ಹೋದರೆ ಜ್ಞಾನಾದಿ ಭೇದವೂ ಇಲ್ಲದೇ ಹೋಗುವುದು. ಅಂಶಿಯ ಯೋಗ್ಯತೆ ಒಂದೊಂದು ಅಂಶದಲ್ಲಿಯೂ ಒಂದೊಂದು ಪ್ರಕಾರವಾಗುವುದು. ಆದ್ದರಿಂದ ಅನಾದಿ ಯೋಗ್ಯತೆ ಎನ್ನುವ ವ್ಯವಸ್ಥೆಯು ಇಲ್ಲದೇ ಹೋಗುವುದು. ಆದಕಾರಣ ಯೋಗ್ಯತೆಗೆ ಅನುಗುಣವಾಗಿ ಉಪಾಸನೆ ಎನ್ನುವುದು ಕೂಡುವುದಿಲ್ಲ ಎಂದು ಪೂರ್ವಪಕ್ಷ.

ಸಾಧನೋತ್ತಮತಾ ಎನ್ನುವುದು ಸಿದ್ಧಾಂತಯುಕ್ತಿ. ಸಾಧನಗಳಲ್ಲಿ ಅದೃಷ್ಟಕ್ಕೆ ಉತ್ತಮತ್ವವಿದೆ. ಅಂಶಿಯ ಅದೃಷ್ಟದಿಂದ ನಿರ್ಮಿತವಾದ ಶರೀರವನ್ನು ಅಂಶನು ಪಡೆಯುತ್ತಾನೆ. ಈ ರೀತಿಯಲ್ಲಿ ಅಂಶ ಅಂಶಿಗಳಿಗೆ ಅಭೇದವಿದೆ. ಆದಕಾರಣ ಅಂಶನೂ ಅವನ ಸ್ವರೂಪಭೂತವಾದ ಅಂಶಿಯ ಯೋಗ್ಯತೆಯೂ ಅನಾದಿ ನಿತ್ಯವು ಎಂದೇ ಒಪ್ಪಬೇಕು. ಅಂಶದ ಸರ್ವವ್ಯಾಪಾರಗಳ ಅನುಭವವು ಅಂಶಿಗೆ ಇರುವುದು. ಆದರೆ ಭಗವಂತನ ಅಚಿಂತ್ಯ ಶಕ್ತಿಯಿಂದ ಅಂಶದ ಎಲ್ಲ ವ್ಯಾಪಾರಗಳ ಅನುಭವವು ಅಂಶಿಗೆ ಬರುವುದಿಲ್ಲ. ಆದರೆ ಅಂಶಿಗೆ ಉಂಟಾಗುವ ಬಿಂಬಾಪರೋಕ್ಷ ಮೊದಲಾದ ಪ್ರಧಾನ ಫಲಗಳು ಅಂಶಿಯ ಅನುಭವಕ್ಕೆ ಬರುತ್ತದೆ. ಆದಕಾರಣ ಅನಾದಿಯಾದ ಉಪಾಸನಾದಿಗಳಲ್ಲಿ ಅನಾದಿಯಾದ ಯೋಗ್ಯತಾಪೇಕ್ಷೆಯಿದೆ ಎಂದು ಸಿದ್ಧಾಂತ.

**೩೬. ಅಂಗಾವಬದ್ಧಾಧಿಕರಣ: ಓಂ ಅಂಗಾವಬದ್ಧಾಸ್ತು ನ ಶಾಖಾಸು ಹಿ ಪ್ರತಿವೇದಂ ಓಂ**

ಸಂಧಾನವು ಪೂರ್ವಪಕ್ಷಯುಕ್ತಿ. ಬ್ರಹ್ಮಾದಿ ದೇವತೆಗಳನ್ನು ಭಗವಂತನ ಪರಿವಾರವೆಂಬ ಅನುಸಂಧಾನ ಸಹಿತ ಭಗವಂತನನ್ನು ಉಪಾಸನೆ ಮಾಡಬೇಕು ಎಂದು ಹೇಳಲಾಗಿದೆ. ಅದು ಯುಕ್ತವಲ್ಲ. ಏಕೆಂದರೆ ದೇವತ್ವಾದಿ ಗುಣಗಳನ್ನು ಸಾಧಾರಣವಾಗಿ ಎಲ್ಲರಲ್ಲಿಯೂ ಅನುಸಂಧಾನ ಮಾಡುವುದರಿಂದ ಒಬ್ಬರ ಅಸಾಧಾರಣ ಗುಣಗಳನ್ನು ಮತ್ತೊಬ್ಬರಲ್ಲಿ ಅನುಸಂಧಾನ ಮಾಡಬೇಕಾದ ಪ್ರಸಂಗ ಬರುವುದು. ಆದಕಾರಣ ಬ್ರಹ್ಮಾದಿ ದೇವತೆಗಳನ್ನು ಭಗವಂತನ ಪರಿವಾರವೆಂದು ಉಪಾಸನೆ ಮಾಡಬಾರದು. ಕೇವಲ ಭಗವಂತನನ್ನು ಮಾತ್ರ ಉಪಾಸನೆ ಮಾಡಬೇಕು ಎಂದು ಪೂರ್ವಪಕ್ಷ.

ನಾನಾದೃಷ್ಟಿಯು ಸಿದ್ಧಾಂತಯುಕ್ತಿ. ವೇದದಲ್ಲಿ ಬ್ರಹ್ಮಾದಿ ಅಂಗದೇವತೆಗಳನ್ನು ಅವರವರ ತಾರತಮ್ಯಕ್ಕೆ ಅನುಸಾರವಾಗಿ ವಿಲಕ್ಷಣ ಗುಣಗಳನ್ನು ಉಳ್ಳವರಾಗಿ

ಪ್ರತಿಪಾದಿಸಲಾಗಿದೆ. ಅದೇರೀತಿಯಲ್ಲಿ ನಾನಾದೃಷ್ಟಿ ಅಂದರೆ ತಾರತಮ್ಯಾನುಸಾರ ಅವರನ್ನು ಉಪಾಸನೆ ಮಾಡಬೇಕು. ಅಧಮರ ಗುಣಗಳನ್ನು ಉತ್ತಮರಲ್ಲಿ ಉಪಾಸನೆ ಮಾಡಬಹುದು. ಆದರೆ ಉತ್ತಮರ ಗುಣಗಳನ್ನು, ಅವರಿಗಿಂತ ಯೋಗ್ಯತೆಯಲ್ಲಿ ನೀಚರಾದ, ಅಧಮರಲ್ಲಿ ಉಪಾಸನೆ ಮಾಡಬಾರದು. ದೇವತ್ವ ಯಜ್ಞಭೋಕ್ತೃತ್ವಾದಿ ಸಾಧಾರಣ ಗುಣಗಳನ್ನು ಎಲ್ಲ ದೇವತೆಗಳಲ್ಲಿಯೂ ಉಪಾಸನೆ ಮಾಡಬಹುದು. ಬ್ರಹ್ಮದೇವರ ಜೀವೋತ್ತಮತ್ವ ಇತ್ಯಾದಿ ಅಸಾಧಾರಣ ಗುಣಗಳನ್ನು ಎಲ್ಲರಲ್ಲಿಯೂ ಉಪಾಸನೆ ಮಾಡಬಾರದು ಎಂದು ಸಿದ್ಧಾಂತ.

**೩೭. ಭೂಮ್ನಕ್ರತ್ವಧಿಕರಣ: ಓಂ ಭೂಮ್ನಃ ಕ್ರತುವಜ್ಜ್ಯಾಯಸ್ತ್ವಂ ತಥಾಚ ದರ್ಶಯತಿ ಓಂ**

ಇಷ್ಟ ಫಲವು ಪೂರ್ವಪಕ್ಷಯುಕ್ತಿ. ಜೀವರಿಗೆ ಇಷ್ಟವಾದ ಆನಂದಾದಿ ಗುಣಗಳ ಉಪಾಸನೆಯಿಂದಲೇ ಅವರ ಸ್ವರೂಪಾನಂದಾಭಿವ್ಯಕ್ತಿ ಮುಂತಾದ ಇಷ್ಟಫಲಗಳು ಲಭಿಸುತ್ತವೆ. ಭೂಮವೆಂಬ (ಪೂರ್ಣತ್ವ) ಗುಣವನ್ನು ಉಪಾಸನೆ ಮಾಡುವುದರಿಂದ ಲಭಿಸುವ ಫಲದಲ್ಲಿ ವಿಶೇಷವೇನೂ ಇರುವುದಿಲ್ಲ. ಆದಕಾರಣ ಭೂಮತ್ವ ಗುಣದ ಉಪಾಸನೆ ಮಾಡಬೇಕಿಲ್ಲ ಎಂದು ಪೂರ್ವಪಕ್ಷ.

ಶಿಷ್ಟಿ ಎನ್ನುವುದು ಸಿದ್ಧಾಂತಯುಕ್ತಿ. 'ಭೂಮೈವ ದೇವಃ ಪರಮೋ ಹ್ಯುಪಾಸ್ಯಾ ನೈವಾಭೂಮಾ ಫಲಮೇಷಾಂ ವಿಧತ್ತೇ' ಪರಮಾತ್ಮನನ್ನು ಪೂರ್ಣಾನಂದ ಪೂರ್ಣ ಜ್ಞಾನ ಇತ್ಯಾದಿ ಭೂಮತ್ವರೂಪದಿಂದ ಉಪಾಸನೆ ಮಾಡದಿದ್ದರೆ ಪರಮಾತ್ಮನು ಫಲವನ್ನು ನೀಡುವುದಿಲ್ಲವಾದ್ದರಿಂದ ಭೂಮತ್ವ ಗುಣವನ್ನು ಸರ್ವರೂ ಉಪಾಸನೆ ಮಾಡಬೇಕು ಎಂಬುದಾಗಿ ಶ್ರುತಿಯು ಶಾಸನ ಮಾಡಿದೆ. ಆದಕಾರಣ ಸರ್ವರೂ ಭೂಮತ್ವವನ್ನು ಉಪಾಸನೆ ಮಾಡಬೇಕು ಎಂದು ಸಿದ್ಧಾಂತ.

**೩೮. ನಾನಾಶಬ್ದಾಧಿಕರಣ: ಓಂ ನಾನಾ ಶಬ್ದಾದಿ ಭೇದಾತ್ ಓಂ**

ಅಕಲ್ಪನಾ ಎನ್ನುವುದು ಪೂರ್ವಪಕ್ಷಯುಕ್ತಿ. ಭೂಮತ್ವದಲ್ಲಿ ನಾನಾಪ್ರಕಾರ ಗಳನ್ನು ಕಲ್ಪನೆ ಮಾಡಲು ಅವಕಾಶವಿಲ್ಲ. ಆದ್ದರಿಂದ ಬ್ರಹ್ಮದೇವರು ಉಪಾಸನೆ ಮಾಡುವ ಭೂಮತ್ವವನ್ನೇ ಬೇರೆಯವರೂ ಉಪಾಸನೆ ಮಾಡಬೇಕು. ಆದಕಾರಣ ಹಿಂದೆ ಹೇಳಿದ ಅಧಿಕಾರಿ ತಾರತಮ್ಯವು ಕೂಡುವುದಿಲ್ಲ ಎಂದು ಪೂರ್ವಪಕ್ಷ.

ಅನೂನತಾ ಎನ್ನುವುದು ಸಿದ್ಧಾಂತಯುಕ್ತಿ. ಅನೂನತಾ ಎಂದರೆ ಯೋಗ್ಯತೆಗೆ ಅನುಗುಣವೆಂದರ್ಥ. 'ಯಾವಾನೇವಾಧಿಕಾರೇಷು ವಿಶೇಷೋಽನೂನ ಏವ ಹಿ । ತತೋ ಭೂಮತ್ವ ದೃಷ್ಟೌ ಚ ಬ್ರಹ್ಮಾದೀನಾಂ ಪೃಥಕ್ ಪೃಥಕ್' ಎಂಬ ವಚನದಿಂದ ಅಧಿಕಾರಿಗಳು ಅವರವರ ಯೋಗ್ಯತಾನುಗುಣವಾದ ಭೂಮತ್ವವನ್ನು ಉಪಾಸನೆ ಮಾಡಬೇಕು ಎಂದು ಸಿದ್ಧಾಂತ.

**೩೯. ವಿಕಲ್ಪಾಧಿಕರಣ: ಓಂ ವಿಕಲ್ಪೋ ವಿಶಿಷ್ಟಫಲವತ್ವಾತ್ ಓಂ**

ಶುದ್ಧವೈರೂಪ್ಯವು ಪೂರ್ವಪಕ್ಷಯುಕ್ತಿ. ಶುದ್ಧ ಎಂದರೆ ಮೋಕ್ಷಸಾಧನವಾದ ಬಿಂಬ ರೂಪ. ಅದಕ್ಕೆ ವೈರೂಪ್ಯವಾದುದು ಎಂದರೆ ಬಿಂಬ ರೂಪಕ್ಕಿಂತ ಇತರವಾದ ಭಗವದ್ರೂಪಗಳು. ಮುಮುಕ್ಷುಗಳು ಬಿಂಬರೂಪಕ್ಕಿಂತ ಬೇರೆಯಾದ ಭಗವದ್ ರೂಪಗಳನ್ನು ಉಪಾಸನೆ ಮಾಡುವ ಅವಶ್ಯಕತೆಯಿಲ್ಲವೆಂದು ಪೂರ್ವಪಕ್ಷ.

ಅವಿಘ್ನತ್ವವು ಸಿದ್ಧಾಂತಯುಕ್ತಿ. ಮೋಕ್ಷಸಾಧನ ಬಿಂಬರೂಪೋಪಾಸನೆಯ ಅನಂತರವೂ ವಿಶಿಷ್ಟ ಮೋಕ್ಷಕ್ಕೆ ಪ್ರತಿಬಂಧಕವಾದ ದುರಿತವನ್ನು ನಿವಾರಿಸಲಿಕ್ಕಾಗಿ ಬಿಂಬಾತಿರಿಕ್ತವಾದ ನರಸಿಂಹಾದಿ ರೂಪಗಳನ್ನು ಉಪಾಸನೆ ಮಾಡಬೇಕು ಎಂದು ಸಿದ್ಧಾಂತ.

**೪೦. ಕಾಮ್ಯಾಧಿಕರಣ: ಓಂ ಕಾಮ್ಯಾಸ್ತು ಯಥಾಕಾಮಂ ಸಮುಚ್ಚೀಯೇರನ್ ನ ವಾ ಪೂರ್ವಹೇತ್ವಭಾವಾತ್ ಓಂ**

ಅಂಗತ್ವವು ಪೂರ್ವಪಕ್ಷಯುಕ್ತಿ. ಮೋಕ್ಷಕ್ಕೆ ಅಂಗಭೂತವಾದುದು ಗುರುಗಳ ಅನುಗ್ರಹ. ಅದಕ್ಕೆ ಅವಶ್ಯಕವಾದ ಧನಕನಕಾದಿಗಳನ್ನು ಸಂಪಾದಿಸಲು ಶ್ರೀಕರಾದಿ ಭಗವದ್ರೂಪಗಳನ್ನು ಉಪಾಸನೆ ಮಾಡಬೇಕು ಎಂದು ಪೂರ್ವಪಕ್ಷ.

ಅವಿರೋಧವು ಸಿದ್ಧಾಂತಯುಕ್ತಿ. ಕಾಮ್ಯೋಪಾಸನೆ ಮಾಡದಿದ್ದರೆ ಮೋಕ್ಷಕ್ಕೆ ಏನೂ ವಿರೋಧವಿಲ್ಲ. ಧನಾಪೇಕ್ಷೆ ಇತ್ಯಾದಿಗಳಿಲ್ಲದೆಯೇ ಗುರುವಿನ ಅನುಗ್ರಹ ಸಂಪಾದಿಸಬಹುದು. ಶ್ರೀಹರಿಯ ಪ್ರಸಾದಕ್ಕಾಗಿ ಉಪಾಸನೆಯೇ ಹೊರತು ಕಾಮ್ಯ ಫಲಕ್ಕಾಗಿ ಅಲ್ಲ ಎಂದು ಸಿದ್ಧಾಂತ.

**೪೧. ಅಂಗಾಧಿಕರಣ: ಓಂ ಅಂಗೇಷು ಯಥಾಶ್ರಯಭಾವಃ ಓಂ**

ಅವಿಶೇಷದೃಶಿಃ ಎನ್ನುವುದು ಪೂರ್ವಪಕ್ಷಯುಕ್ತಿ. ಬ್ರಹ್ಮಾದಿ ದೇವತೆಗಳು ಭಗವಂತನ ಶಿರಸ್ಸು ಇತ್ಯಾದಿ ಅಂಗಗಳನ್ನು ಆಶ್ರಯಿಸಿರುತ್ತಾರೆ ಎಂದು ಉಪಾಸನೆ ಮಾಡಲು ದೇವತೆಗಳು ಮಾತ್ರ ಅಧಿಕಾರಿಗಳು ಎಂಬ ವಿಶೇಷವಚನವಿಲ್ಲ ಹಾಗೂ ಇತರರಿಗೆ ಅದರಲ್ಲಿ ಅಧಿಕಾರವಿಲ್ಲ. ಆದಕಾರಣ ಅಂಗದೇವತೋಪಾಸನೆಗೆ ದೇವತೆಗಳೇ ಅಧಿಕಾರಿಗಳು ಎನ್ನವುದು ಅಯುಕ್ತವೆಂದು ಪೂರ್ವಪಕ್ಷ.

ಗುಣವೈಶೇಷ್ಯವು ಸಿದ್ಧಾಂತಯುಕ್ತಿ. ಮುಕ್ತಿಯಲ್ಲಿ ಭಗವಂತನ ಆಯಾಯ ಅಂಗ ಗಳಲ್ಲಿ ಆಶ್ರಯಿಸಿರುವಿಕೆ ಆಯಾಯ ದೇವತೆಗಳ ವಿಶೇಷಗುಣವಾಗಿದೆ. ಮುಕ್ತಿಯಲ್ಲಿ ನನಗೆ ಭಗವಂತನ ಈ ಅಂಗವು ಆಶ್ರಯವು ಎಂದು ಉಪಾಸನೆ ಮಾಡುವುದರಿಂದ ಆಯಾ ದೇವತೆಗಳಿಗೆ ವಿಶಿಷ್ಟ ಫಲವಿರುವುದು. ಆದಕಾರಣ ದೇವತೆಗಳಿಗೆ ಮಾತ್ರ ಅಂಗದೇವತೋಪಾಸನೆಗೆ ಅಧಿಕಾರವೆಂದು ಸಿದ್ಧಾಂತ.

**೪೨. ನ ವಾಧಿಕರಣ: ಓಂ ನ ವಾ ತತ್ಸಹಭಾವಾತ್ ಶ್ರುತೇಃ ಓಂ**

ಕ್ರಿಯಾ ಎನ್ನುವುದು ಪೂರ್ವಪಕ್ಷಯುಕ್ತಿ. ಅಂಗದೇವತಾ ಉಪಾಸನೆಯು

ಕರ್ತವ್ಯವಾದರೆ, ಅದೂ ಒಂದು ಕ್ರಿಯೆಯಾದ್ದರಿಂದ, ಯಾಗಾದಿ ಕ್ರಿಯೆಗಳನ್ನು ವಿಧಿಸುವಾಗ ಅಗ್ನಿಷ್ಟೋಮೇನ ಯಜೇತ ಎಂದು ಯಾಗವನ್ನು ಹೇಳಿದಂತೆ ಎಲ್ಲ ಶಾಖೆಯಲ್ಲಿಯೂ ಉಪಾಸನಾ ವಿಧಿವಾಕ್ಯದಲ್ಲಿ 'ಚಕ್ಷೋಃಸೂರ್ಯೋ ಅಜಾಯತ' ಇತ್ಯಾದಿ ಅಂಗಾಶ್ರಿತತ್ವವನ್ನು ಹೇಳಬೇಕಿತ್ತು. ಆದರೆ ಹಾಗೆ ಹೇಳಿಲ್ಲವಾದ್ದರಿಂದ ಅಂಗಾಶ್ರಿತತ್ವವನ್ನು ಉಪಾಸನೆ ಮಾಡಬೇಕಿಲ್ಲ ಎಂದು ಪೂರ್ವಪಕ್ಷ.

ಆಗಮ ಎನ್ನುವುದು ಸಿದ್ಧಾಂತಯುಕ್ತಿ. 'ಉಪಾಸನಂ ಯಜನಂ ಚೇತಿ ಸಾಮ್ಯಂ ತತ್ತದ್ವಿಶೇಷಾನ್ ಸಂಹರೇತ್ಸರ್ವತಶ್ಚ ತಥಾ ಕರ್ತ್ರ್ಯಾಣಾಂ ತತ್ಫಲಾನಾಂ ವಿಶೇಷಾದ್ ವ್ಯರ್ಥಾಃ ಹಿ ಶಾಖಾ ಅನ್ಯಥೈವಂ ಚ ಸಾರ್ಥಾಃ' ಅಂಗಾಶ್ರಿತತ್ವಾದಿಗಳು ಯಾವ ಯಾವ ಶಾಖೆಗಳಲ್ಲಿ ಉಕ್ತವಾಗಿವೆಯೋ ಆಯಾ ಶಾಖೆಗಳಿಂದ ಅವುಗಳನ್ನು ಉಪಸಂಹಾರ ಮಾಡಿ ಉಪಾಸನೆ ಮಾಡಬೇಕು. ಇಲ್ಲದಿದ್ದರೆ ಆಯಾ ಶಾಖೆಗಳಲ್ಲಿ ಹೇಳಿದ್ದು ವ್ಯರ್ಥವಾಗುತ್ತದೆ ಎಂದು ಆಗಮ ವಚನವಿದೆ. ಆದಕಾರಣ ಆಯಾ ಅದಿಕಾರಿಗಳು ಅಂಗಾಶ್ರಿತತ್ವವನ್ನು ಉಪಾಸನೆ ಮಾಡಬೇಕು. ಈ ರೀತಿ ಉಪಾಸನೆ ಎಲ್ಲರಿಗೂ ಇಲ್ಲವೆಂಬ ಅಭಿಪ್ರಾಯದಿಂದ ವಿಧಿವಾಕ್ಯದಲ್ಲಿ ಹೇಳಿಲ್ಲವೆಂದು ಸಿದ್ಧಾಂತ.

## ಸರ್ವವೇದಾಧಿಕರಣಮ್

**ಓಂ ಸರ್ವವೇದಾಂತಪ್ರತ್ಯಯಂ ಚೋದನಾದ್ಯವಿಶೇಷಾತ್ ಓಂ**

ಧ್ಯಾನರೂಪವಾದ ಉಪಾಸನೆಯು ಈ ಅಧಿಕರಣದ ವಿಷಯ. ಅಧ್ಯಯನ ಶ್ರವಣ ಮನನಗಳಿಂದ ಕೇವಲ ತಮ್ಮ ತಮ್ಮ ಶಾಖೆಗಳನ್ನಷ್ಟೇ ತಿಳಿಯಬೇಕೋ ಅಥವಾ ಎಲ್ಲ ವೇದಗಳನ್ನೂ ತಿಳಿಯಬೇಕೋ ಎಂದು ಸಂಶಯ. ಶಾಖಾಭೇದವು ಅತಿಪ್ರಸಿದ್ಧವಾದ ಪ್ರಯುಕ್ತ ಮೊದಲನೆಯ ಪಕ್ಷವೇ ಉತ್ತಮ ಎಂದು ಪೂರ್ವಪಕ್ಷ. 'ಸರ್ವವೇದಾಂತ ಪ್ರತ್ಯಯಂ' ಸರ್ವ ಶಾಖೆಗಳನ್ನೂ ಅಧ್ಯಯನ ಮಾಡಬೇಕು ಎಂದು ಸಿದ್ಧಾಂತ. ಅದರಲ್ಲಿ ಸರ್ವ ಶಬ್ದವು ಅಸಂಕುಚಿತವೃತ್ತಿಯಿಂದ ಹೇಳಲ್ಪಟ್ಟಿದೆ ಎಂದರೆ, ಅದನ್ನು ನಿರಾಕರಿಸುವುದಕ್ಕಾಗಿ 'ಯಥಾಶಕ್ತಿ' ಇತ್ಯಾದಿ ವಚನದಿಂದ ವ್ಯಾಖ್ಯಾನ ಮಾಡುತ್ತಾರೆ –

**ಯಥಾಶಕ್ತ್ಯಖಿಲಾನ್ ವೇದಾನ್ವಿಜ್ಞಾಯೋಪಾಸನಂ ಭವೇತ್ ।**

**ತತ್ರಾಖಿಲಸ್ಯ ವಿಜ್ಞಪ್ತಿಃ ಸಮ್ಯಗ್ಬ್ರಹ್ಮಣ ಏವ ಹಿ ।। ೬೮ ।।**

**ತದನ್ಯೇಷಾಂ ಯಥಾಯೋಗಮಖಿಲಜ್ಞಪ್ತಿರಿಷ್ಯತೇ ।**

ತನ್ನ ಶಕ್ತಿ ಅಥವಾ ಯೋಗ್ಯತೆಗೆ ಅನುಸಾರವಾಗಿ ಎಲ್ಲ ವೇದಗಳನ್ನು ತಿಳಿದು ಉಪಾಸನೆಯನ್ನು ಮಾಡತಕ್ಕದ್ದು. ಆ ಉಪಾಸಕರಲ್ಲಿ ಚೆನ್ನಾಗಿ ಅಖಿಲ ವೇದಗಳ ವಿಜ್ಞಾನವು ಬ್ರಹ್ಮನಿಗೆ ಮಾತ್ರ ಸಾಧ್ಯವು. ಇತರರಿಗೆ ಅವರವರ ಯೋಗ್ಯತಾನುಸಾರ ಸರ್ವವೇದಜ್ಞಾನವು ಆಗುವುದೆಂದು ಅಂಗೀಕರಿಸಲ್ಪಡುತ್ತದೆ.

ಹಾಗಾದರೆ 'ಸರ್ವೈಶ್ಚ ವೇದ್ಯೈಃ ಪರಮೋ ಹಿ ದೇವೋ ಜಿಜ್ಞಾಸ್ಯೋಽಸೌ ನಾಲ್ಪವೇದ್ಯೈಃ ಪ್ರಸಿದ್ಧ್ಯೇತ್' ಇತ್ಯಾದಿ ಶ್ರುತಿಯಿಂದ ಅಲ್ಪವೇದಜ್ಞನಿಗೆ ಪರಬ್ರಹ್ಮನ ಉಪಾಸನೆಗೆ ಯೋಗ್ಯವಾದ ವಿಜ್ಞಾನ ಸಂಪತ್ತಿಯು ಕೂಡುವುದಿಲ್ಲ. ಆದ್ದರಿಂದ ಸೂತ್ರಗತ ಸರ್ವ ಶಬ್ದಕ್ಕೆ ಮುಖ್ಯಾರ್ಥವನ್ನೇ ಹೇಳಬೇಕು. ಅಲ್ಪಜ್ಞರಾದ ನಮ್ಮಂಥವರಿಗೆ ಈ ಜನ್ಮದಲ್ಲಿ ಸರ್ವವೇದಜ್ಞಾನವು ಅಸಂಭವ. ಹಾಗಿದ್ದರೂ ಯಾವ ಜನ್ಮದಲ್ಲಿ ಅದು ಸಂಭವನೀಯವೋ ಅಂಥಹ ಜನ್ಮವನ್ನು ಕಲ್ಪಿಸಬೇಕು ಎಂದರೆ –

**ತಾವತೋಪಾಸನೇ ಯೋಗ್ಯೋ ಭವೇದೇವಾಖಿಲಃ ಪುಮಾನ್ ॥ ೬೯ ॥**

ಎಲ್ಲ ಜನರೂ ತಮ್ಮ ಶಕ್ತಿಗೆ ಅನುಸಾರವಾದ ವಿಜ್ಞಾನದಿಂದಲೇ ಧ್ಯಾನರೂಪ ಉಪಾಸನೆಯಲ್ಲಿ ಯೋಗ್ಯರೇ ಆಗುವರು.

ಯಥಾಶಕ್ತಿ ವೇದಜ್ಞಾನವು ಭಗವದುಪಾಸನೆಗೆ ಉಪಯುಕ್ತವು, ಸರ್ವವೇದ ಜ್ಞಾನವು ಅವಶ್ಯಕವಲ್ಲ ಎನ್ನುವಲ್ಲಿ ಪುರಾಣವಾಕ್ಯವನ್ನೂ ಪಠಿಸುತ್ತಾರೆ –

**ಮಹತ್ತ್ವಸ್ಯ ಪರಂ ಪಾರಂ ವಿದಿತ್ವೈವ ಜನಾರ್ದನಃ ।**

**ಸ್ತೋಷ್ಯತಾಮೇತಿ ತುಷ್ಟತ್ವಮಿತಿ ನಾಸ್ತ್ಯೇವ ನಾರದ ॥ ೭೦ ॥**

**ಕಿಂತು ನಿಶ್ಚಲಯಾ ಭಕ್ತ್ಯಾ ಹ್ಯಾತ್ಮಜ್ಞಾನಾನುರೂಪತಃ ।**

**ಯಃ ಸ್ತೋಷ್ಯತಿ ಸದಾ ಭಕ್ತಸ್ತುಷ್ಟಸ್ತಸ್ಯ ಸದಾ ಹರಿಃ ॥ ೭೧ ॥**

**ಇತ್ಯಾದಿ ವಾಕ್ಯಸಂದರ್ಭಾದ್ಯಥಾಯೋಗ್ಯಾಖಿಲಜ್ಞತಾ ।**

**ಆತ್ಮಜ್ಞಾನಾನುರೂಪತ್ವಂ ಯಥಾಶಕ್ತಿವಿಚಾರಣಾತ್ ॥ ೭೨ ॥**

ಎಲೈ ನಾರದನೇ, ಭಗವಂತನು ತನ್ನ ಮಹತ್ವದ ಆಚೆಯ ದಡವನ್ನು ತಿಳಿದವನಿಂದ (ಅಂದರೆ ಸರ್ವವೇದಗಳನ್ನು ತಿಳಿದವನಿಂದ) ಮಾತ್ರ ಸ್ತೋತ್ರವನ್ನು ಮಾಡಿಸಿಕೊಳ್ಳುತ್ತಾನೆ ಹಾಗೂ ಅದರಿಂದ ಮಾತ್ರ ಸಂತುಷ್ಟನಾಗುತ್ತಾನೆ ಹೀಗೆ ನಿಯಮವು ಇಲ್ಲವೇ ಇಲ್ಲ. ಕಿಂತು ನಿಶ್ಚಲವಾದ ದೃಢವಾದ ಭಕ್ತಿಯಿಂದ ತನ್ನ ಯೋಗ್ಯತೆಗೆ ಅನುಸಾರವಾಗಿ ಸದಾ ಸ್ತೋತ್ರವನ್ನು ಮಾಡುವ ಭಕ್ತನಿಗೆ ಶ್ರೀಹರಿಯು ಸದಾ ಸಂತುಷ್ಟನಾಗುತ್ತಾನೆ. ಇದೇ ಮೊದಲಾದ ವಾಕ್ಯಗಳ ಸಂದರ್ಭದಿಂದ ಯಥಾ ಯೋಗ್ಯವಾದ ಸರ್ವವೇದಜ್ಞತ್ವವು ಧ್ಯಾನೋಪಾಸನೆಗೆ ಉಪಯುಕ್ತವೆಂದು ತಿಳಿದು ಬರುತ್ತದೆ. ಇಲ್ಲಿ ಆತ್ಮಜ್ಞಾನವೆಂದರೆ ಆತ್ಮಯೋಗ್ಯಜ್ಞಾನವೆಂದೇ ಅರ್ಥ. ಆ ಆತ್ಮ ಯೋಗ್ಯಜ್ಞಾನಕ್ಕೆ ಅನುರೂಪತ್ವವು ಯಥಾಶಕ್ತಿ ವೇದವಿಚಾರಣೆಯಿಂದ ಆಗುವುದು.

ಯಾವುದಕ್ಕಾಗಿ ಸರ್ವವೇದಜ್ಞಾನ ಎಂದರೆ ಅದಕ್ಕೆ ಉತ್ತರವಾಗಿ ಚೋದನಾದ್ಯ ವಿಶೇಷಾತ್ ಎಂದು ಹೇಳಿದರು. ಅಲ್ಲಿ ಶಾಖಾಭೇದಗಳು ಸುಪ್ರಸಿದ್ಧವಾದುದರಿಂದ ಚೋದನಾದಿಗಳೂ ಕೂಡ ವಿಶೇಷಪರವೆಂದು ವ್ಯಾಖ್ಯಾನ ಮಾಡತಕ್ಕದ್ದು ಎಂದರೆ,

'ಓಂ ಸ್ವಾಧ್ಯಾಯಸ್ಯ. ತಥಾತ್ವೇನ ಹಿ ಸಮಾಚಾರೇಽಧಿಕಾರಾಚ್ಚೇತಿ ಓಂ' ಎನ್ನುವ ಸೂತ್ರದಿಂದ ಸೂತ್ರಕಾರರು ಯುಕ್ತ್ಯಂತರವನ್ನು ಹೇಳಿದರು. ಅದರಲ್ಲಿ 'ಹಿ' ವರೆಗಿನ ಸೂತ್ರಖಂಡವನ್ನು 'ವೇದ' ಎಂಬ ವಚನದಿಂದ ವ್ಯಾಖ್ಯಾನಿಸುತ್ತಾರೆ –

**ವೇದಃ ಕೃತ್ಸ್ನೋಽಧಿಗಂತವ್ಯಃ ಸ್ವಾಧ್ಯಾಯಾಧ್ಯಯನಂ ಭವೇತ್ ।**

**ಇತ್ಯಾದಿ ವಾಕ್ಯವೈಯರ್ಥ್ಯಮನ್ಯಥಾ ನ ನಿವಾರ್ಯತೇ ॥ ೭೩ ॥**

ವೇದಃ ಎಂದು 'ವೇದಃ ಕೃತ್ಸ್ನೋಽಧಿಗಂತವ್ಯಃ ಸರಹಸ್ಯೋ ದ್ವಿಜನ್ಮನಾ' ಎನ್ನುವ ಸ್ಮೃತಿಯನ್ನೂ, ಸ್ವಾಧ್ಯಾಯ ಎಂದು 'ಸ್ವಾಧ್ಯಾಯೋಽಧ್ಯೇತವ್ಯಃ' ಎನ್ನುವ ಶ್ರುತಿಯನ್ನೂ ಸ್ಮರಿಸುತ್ತಾರೆ. ಕೇವಲ ತಮ್ಮ ತಮ್ಮ ಶಾಖೆಗಳ ಜ್ಞಾನವನ್ನು ಮಾತ್ರ ಅಂಗೀಕರಿಸಿದರೆ, ದ್ವಿಜನಾದವನು ಸಮಸ್ತ ವೇದವನ್ನೂ ಹೊಂದತಕ್ಕದ್ದು, ವೇದಾಧ್ಯಯನವು ಕರ್ತವ್ಯ ಇತ್ಯಾದಿ ಶಾಸ್ತ್ರವಾಕ್ಯಗಳಿಗೆ ಬರುವ ವೈಯರ್ಥ್ಯವನ್ನು ನಿವಾರಿಸಲಾಗುವುದಿಲ್ಲ.

ಸಮಾಚಾರೇಽಧಿಕಾರಾಚ್ಚ ಎಂಬ ಸೂತ್ರಖಂಡವನ್ನು ವ್ಯಾಖ್ಯಾನಿಸುತ್ತಾರೆ –

**ಅದ್ಯಾಪಿ ತೇನ ದೇವಾದ್ಯಾಃ ಶೃಣ್ವತೇ ಮನ್ವತೇ ಸದಾ ।**

**ಧ್ಯಾಯಂತಿ ಚ ಯಥಾಯೋಗ್ಯಂ ............................ ॥**

ಸರ್ವವಿಜ್ಞಾನವು ಅವಶ್ಯಕವೆನ್ನುವ ಕಾರಣದಿಂದಲೇ ದೇವಾದಿಗಳು ಈಗಲೂ ಕೂಡ ಸದಾಕಾಲವೂ ಯಥಾಯೋಗ್ಯವಾಗಿ ಶ್ರವಣ ಮಾಡುತ್ತಾರೆ, ಮನನ ಮಾಡುತ್ತಾರೆ ಹಾಗೂ ಧ್ಯಾನವನ್ನೂ ಮಾಡುತ್ತಾರೆ.

ದೇವತೆಗಳಿಗೆ ಬ್ರಹ್ಮಸಾಕ್ಷಾತ್ಕಾರವಾದ ನಂತರವೂ ಈಗಲೂ ಶ್ರವಣಾದಿಗಳನ್ನು ಮಾಡುತ್ತಿರುವರು ಎನ್ನುವುದಾದರೆ, ಆ ಶ್ರವಣಾದಿಗಳಿಗೆ ನಿರವಧಿಕತ್ವವು ಬರುವುದು ಎಂದರೆ –

**................................. ತಥಾಽಪ್ಯಾವಸ್ತುನಿರ್ಣಯಮ್ ॥ ೭೪ ॥**

**ಶ್ರವಣಂ ಮನನಂ ಚೈವ ಕರ್ತವ್ಯಂ ಸರ್ವದೈವ ಹಿ ।**

ಹಾಗಿದ್ದರೂ ಪರಬ್ರಹ್ಮಾದಿ ವಸ್ತುನಿರ್ಣಯವಾಗುವ ಪರ್ಯಂತ (ಅಂದರೆ ಪರೋಕ್ಷವಾಗಿ ಯಥಾರ್ಥವಾದ ನಿಶ್ಚಯವಾಗುವವರೆಗೆ) ಸರ್ವದಾ ಸರ್ವಪ್ರಕಾರದಿಂದಲೂ ಶ್ರವಣವೂ, ಮನನವೂ ಕೂಡ ಕರ್ತವ್ಯವೇ ಆಗಿದೆ. ಹಿ ಶಬ್ದವು ಶ್ರವಣಾದಿಗಳಿಗೆ ವಸ್ತುನಿರ್ಣಯ ಹೇತುತ್ವವನ್ನು ಸೂಚಿಸುತ್ತದೆ.

ವಸ್ತುನಿರ್ಣಯ ಪರ್ಯಂತ ಶ್ರವಣ ಮನನದಲ್ಲಿ ಕರ್ತವ್ಯತ್ವವನ್ನು ಹೇಳುವುದು ಅಯುಕ್ತವು. ಏಕೆಂದರೆ ನಿರ್ಣಯಿಸಲ್ಪಟ್ಟ ಅರ್ಥದಲ್ಲಿಯೂ ಕಾರಣಾಂತರಗಳಿಂದ ಪುನಃ ಸಂಶಯಾದಿಗಳು ಕಂಡುಬರಬಹುದು. ಆದ್ದರಿಂದ ವಸ್ತುನಿರ್ಣಯವಾಗಿದೆ

ಎನ್ನುವುದನ್ನೇ ನಿಶ್ಚಯಿಸಲು ಅಶಕ್ಯವು ಎಂದರೆ –

**ಮತಿಶ್ರುತಿಧ್ಯಾನಕಾಲವಿಶೇಷಂ ಗುರುರುತ್ತಮಃ ।। ೭೫ ।।**

**ವೇತ್ತಿ ತಸ್ಯೋಕ್ತಮಾರ್ಗೇಣ ಕುರ್ವತಃ ಸ್ಯಾದ್ಧಿ ದರ್ಶನಮ್ ।**

ಮನನ, ಶ್ರವಣ, ಧ್ಯಾನ, ಕಾಲ ಇವುಗಳ ವಿಶೇಷವನ್ನು ಉತ್ತಮ ಗುರುವು, ಅಂದರೆ ಶಿಷ್ಯನ ಯೋಗ್ಯತೆಯನ್ನು ತಿಳಿದಿರುವ ಗುರುವು, ತಿಳಿಯುತ್ತಾನೆ. ಅಂಥ ಗುರುವು ಉಪದೇಶಿಸಿದ ಮಾರ್ಗದಲ್ಲಿ ಶ್ರವಣಾದಿಗಳನ್ನು ಮಾಡುವವನಿಗೆ ಬ್ರಹ್ಮ ದರ್ಶನವು ಆಗುವುದು.

ಹಾಗಿದ್ದರೂ ದೇವತೆಗಳು ಈಗಲೂ ಶ್ರವಣಾದಿಗಳನ್ನು ಮಾಡುತ್ತಿರುತ್ತಾರೆ ಎನ್ನುವುದು ಅಯುಕ್ತವು. ಏಕೆಂದರೆ ಶ್ರವಣಾದಿಗಳು ತತ್ವದರ್ಶನಕ್ಕೆ ಸಾಧನವೆಂದು ಹೇಳಲಾಗಿದೆ. ದೇವಾದಿಗಳಿಗೆ ತತ್ವದರ್ಶನವು ಸ್ವಾಭಾವಿಕವೆನ್ನುವ ವಿಷಯದಲ್ಲಿ 'ನೈವ ದೇವಪದಂ ಪ್ರಾಪ್ತಾ ಬ್ರಹ್ಮದರ್ಶನವರ್ಜಿತಾಃ' ಇತ್ಯಾದಿ ಪ್ರಮಾಣವಿದೆ. ಸಾಧ್ಯವನ್ನು ಹೊಂದಿದಮೇಲೆ ಸಾಧನಾನುಷ್ಠಾನವು ಕೂಡುವುದಿಲ್ಲ ಎಂದರೆ –

**ಶ್ರವಣಂ ದೃಷ್ಟತತ್ವಸ್ಯ ಮನನಂ ಧ್ಯಾನಮೇವ ಚ ।। ೭೬ ।।**

**ವಿಶೇಷಾನಂದ ಸಂಪ್ರಾಪ್ತ್ಯೈ ಅನ್ಯಸ್ಯೈತಾನಿ ದೃಷ್ಟಯೇ ।**

ಬ್ರಹ್ಮದರ್ಶನವಾದವನಿಗೂ ವಿಶೇಷವಾದ ಆನಂದ ಪ್ರಾಪ್ತಿಗಾಗಿ ಶ್ರವಣ ಮನನ ಧ್ಯಾನಗಳು ಯುಕ್ತವೇ ಆಗಿದೆ. ಇನ್ನೂ ತತ್ವದರ್ಶನವಿಲ್ಲದವನಿಗೆ ಶ್ರವಣಾದಿಗಳು ಆ ದರ್ಶನಕ್ಕೋಸ್ಕರ ಸಾಧನವಾಗುತ್ತವೆ.

ಶಿಷ್ಯಯೋಗ್ಯತೆಯನ್ನು ತಿಳಿದ ಗುರುವಿನ ಉಪದೇಶಾನುಸಾರ ಶ್ರವಣಾದಿಗಳು ಕರ್ತವ್ಯ ಎನ್ನುವುದು ಅಯುಕ್ತವು. ಏಕೆಂದರೆ ಅಂಥ ಗುರುವು ದುರ್ಲಭವಾದ್ದರಿಂದ ಶ್ರವಣಾದಿಗಳೇ ಅನುಪಪನ್ನವಾಗುವುದು. ಹೀಗೆ ಆಶಂಕಿಸಿದರೆ –

**ಯದಿ ತಾದೃಗ್ಗುರುರ್ನಾಸ್ತಿ ನಿರ್ಣೀತಶ್ರವಣಾದಿಕಮ್ ।। ೭೭ ।।**

**ತತ್ಸಿದ್ಧಾಂತಾನುಸಾರೇಣ ನಿರ್ಣಯಜ್ಞಾತ್ ಸಮಾಚರೇತ್ ।**

ಒಂದುಪಕ್ಷ ಶಿಷ್ಯನ ಯೋಗ್ಯತೆಯನ್ನು ಅರಿತ ಮುಖ್ಯ ಗುರುವು ಸಿಗದಿದ್ದರೂ, ಶ್ರವಣಾದಿಗಳು ಇಲ್ಲವೆಂದಾಗುವುದಿಲ್ಲ. ನಿರ್ಣೀತವಾದ ಬ್ರಹ್ಮಸೂತ್ರಾದಿ ಶಾಸ್ತ್ರಗಳ ಶ್ರವಣದಿಂದ ಸರ್ವಜ್ಞರ ಸಿದ್ಧಾಂತವನ್ನು ಅನುಸರಿಸಿ ನಿರ್ಣಯವನ್ನು ತಿಳಿದಿರುವ ಅಮುಖ್ಯ ಗುರುಗಳಿಂದ ಉಪದೇಶ ಪಡೆದು ಶ್ರವಣಾದಿಗಳನ್ನು ಮಾಡಬೇಕು. ಅನಂತರ ಮುಖ್ಯಗುರುವೂ ಲಭ್ಯವಾಗಿ ಬ್ರಹ್ಮದರ್ಶನಕ್ಕೆ ಕಾರಣವಾಗುವುದು.

ಸರ್ವಜ್ಞರಾದ ಗುರುಗಳಿಂದ ಶ್ರವಣಾದಿಗಳನ್ನು ಮಾಡುವುದೇ ಬ್ರಹ್ಮದರ್ಶನಕ್ಕೆ ಮುಖ್ಯಕಾರಣವಾದರೆ, ಅಂಥ ಗುರುವು ಸಿಗದಿದ್ದರೆ, ಶ್ರವಣಾದಿಗಳ ಅಭಾವನ್ನೇ

ಅಂಗೀಕರಿಸಬಹುದಲ್ಲ? ಸರ್ವಜ್ಞರಾದ ಗುರುಗಳ ಪ್ರಾಪ್ತಿಗೆ ಅಮುಖ್ಯ ಗುರುವಿನಿಂದ ಶ್ರವಣಾದಿಗಳನ್ನೇ ಏಕೆ ಮಾಡಬೇಕು? ಕೇವಲ ಪುಣ್ಯದಿಂದಲೇ ಅಂಥ ಗುರುವು ಲಭ್ಯನಾಗಬಹುದು ಎಂದರೆ –

**ಶ್ರವಣಾದಿ ವಿನಾ ನೈವ ಕ್ಷಣಂ ತಿಷ್ಠೇದಪಿ ಕ್ವಚಿತ್ ।। ೭೮ ।।**

**ಅತ್ಯಶಕ್ಯೇ ತು ನಿದ್ರಾದೌ ಪುನರೇವ ಸಮಾಚರೇತ್ ।**

'ಸ್ವಾಧ್ಯಾಯಪ್ರವಚನೇ ಏವೇತಿ ನಾಕೋ ಮೌದ್ಗಲ್ಯಃ' ಇತ್ಯಾದಿ ಶ್ರುತಿಸ್ಮೃತಿಗಳು ಯಾವಕಾಲಕ್ಕೂ ಒಂದು ಕ್ಷಣವಾದರೂ ಶ್ರವಣಾದಿಗಳನ್ನು ಬಿಟ್ಟು ಸುಮ್ಮನೆ ಕಾಲಹರಣ ಮಾಡತಕ್ಕದ್ದಲ್ಲ ಎಂದು ಹೇಳುತ್ತಿವೆ. ಶ್ರವಣಾದಿಗಳನ್ನು ಸರ್ವಜ್ಞರಾದ ಗುರುಗಳಿಂದ ಮಾಡಬೇಕು ಎನ್ನುವುದೂ ಸರಿಯೇ. ಆದರೂ ಅಂಥ ಗುರುಗಳು ಸಿಗದಿದ್ದರೆ 'ಗುಣೇ ತ್ವನ್ಯಾಯಕಲ್ಪನಾ' ಎನ್ನುವ ನ್ಯಾಯದಿಂದ ಹೇಗಾದರೂ ಶ್ರವಣಾದಿಗಳನ್ನು ಮಾಡಲೇಬೇಕು. ನಿದ್ರಾದಿಗಳನ್ನು ತಪ್ಪಿಸುವಂತಿಲ್ಲವಾದ್ದರಿಂದ ನಿರಂತರವಾಗಿ ಒಂದ ಕ್ಷಣವನ್ನೂ ಬಿಡದೇ ಶ್ರವಣಾದಿಗಳು ಅಶಕ್ಯವು ಎಂದರೆ – ಪರಿಹರಿಸಲು ಅಶಕ್ಯವೇ ಆದ ನಿದ್ರಾದಿಗಳು ಪ್ರಾಪ್ತವಾದರೆ, ಆ ಶ್ರಮವನ್ನು ಪರಿಹರಿಸಿಕೊಂಡು ತಕ್ಷಣವೇ ಮತ್ತೆ ಶ್ರವಣಾದಿಗಳಲ್ಲಿ ತೊಡಗಬೇಕು.

**ಅಭಾವೇ ನಿರ್ಣಯಜ್ಞಸ್ಯ ತಚ್ಛಾಸ್ತ್ರಾಣ್ಯೇವ ಸರ್ವದಾ ।। ೭೯ ।।**

**ಶೃಣುಯಾದ್ಯದಿ ಸಜ್ಜ್ಞಾನಪ್ರಾಚುರ್ಯಮುಪಲಭ್ಯತೇ ।**

ನಿರ್ಣಯವನ್ನು ತಿಳಿದಿರುವ ಗುರುಗಳು ಸಿಗದಿದ್ದರೂ, ಸದಾ ಸಚ್ಛಾಸ್ತ್ರಗಳನ್ನೇ ಶ್ರವಣ ಮಾಡಬೇಕು. ಹಾಗಾದರೆ ಯಾರಿಂದಲಾದರೂ ಶ್ರವಣವನ್ನು ಮಾಡಬಹುದೇ ಎಂದರೆ ಹಾಗೆ ಹೇಳಕೂಡದು. ಯಾರು ತನಗಿಂತ ಹೆಚ್ಚಿಗೆ ಜ್ಞಾನವನ್ನು ಹೊಂದಿರುತ್ತಾರೋ ಅಂಥವರಿಂದಲೇ ಶ್ರವಣ ಮಾಡಬೇಕು.

ತನಗಿಂತ ಜ್ಞಾನದಲ್ಲಿ ಅಧಿಕನೂ ಹಾಗೂ ಚೆನ್ನಾಗಿ ವ್ಯಾಖ್ಯಾನ ಮಾಡತಕ್ಕವನೂ ಆದ ಪುರುಷನು ಸಿಗದಿದ್ದರೆ ಏನು ಮಾಡಬೇಕು ಎಂದರೆ –

**ಮಹದ್ಭ್ಯೋ ವಿಷ್ಣುಭಕ್ತೇಭ್ಯೋ ಯಥಾಶಕ್ತಿ ಚ ಸಂಶಯಾನ್ ।। ೮೦ ।।**

**ಛಿಂದ್ಯಾತ್ ಸ್ವತೋಽಧಿಕಾಭಾವೇ ಸ್ವಯಮೇವ ಸಮಭ್ಯಸೇತ್ ।**

**ಬ್ರೂಯಾದಪಿ ಚ ಶಿಷ್ಯೇಭ್ಯಃ ಸತ್ಸಿದ್ಧಾಂತಮಪಾಹಯನ್ ।। ೮೧ ।।**

ತನ್ನಿಂದ ಜ್ಞಾನದಿಂದಾಗಲೀ ವಿಷ್ಣುಭಕ್ತಿಯಿಂದಾಗಲೀ ಶ್ರೇಷ್ಠರಾದ ವಿಷ್ಣು ಭಕ್ತರ ದೆಶೆಯಿಂದ ಯಥಾಶಕ್ತಿ ತನ್ನ ಸಂದೇಹಗಳನ್ನು ನಾಶಮಾಡಿಕೊಳ್ಳಬೇಕು. ಏಕೆಂದರೆ ವಿಷ್ಣುಭಕ್ತ್ಯಾದಿಗಳಿಂದ ಸಂಪನ್ನರಾದವರು ಅದೇ ಪ್ರಕಾರವಾಗಿ ಆದರವು ಹುಟ್ಟುವ ರೀತಿಯಲ್ಲಿ ವ್ಯಾಖ್ಯಾನ ಮಾಡುತ್ತಾರೆ. ತನಗಿಂತ ಅಧಿಕನು ಸಿಗದಿದ್ದರೆ ತಾನಾಗಿಯೇ

ಚೆನ್ನಾಗಿ ಅಭ್ಯಾಸ ಮಾಡಬೇಕು. ಸತ್ಸಿದ್ಧಾಂತವನ್ನು ಬಿಡದೆ, ಅಂದರೆ ನಿರ್ದುಷ್ಟವಾದ ಪ್ರಾಮಾಣಿಕವಾದ ಶಾಸ್ತ್ರದ ಅಭಿಪ್ರಾಯಕ್ಕೆ ವಿರೋಧವಾಗದಂತೆ, ತಾನೂ ಗಟ್ಟಿ ಮಾಡಿಕೊಳ್ಳುವುದಲ್ಲದೆ, ಶಿಷ್ಯರಲ್ಲಿಯೂ ಸಹ ಸತ್ಸಿದ್ಧಾಂತವು ದೃಢವಾಗಿ ಮನದಟ್ಟಾಗುವ ರೀತಿಯಲ್ಲಿ ಸಿದ್ಧಾಂತವನ್ನು ಹೇಳಬೇಕು.

ಅವಶ್ಯವಾಗಿ ಧಾರಣೆ ಮಾಡತಕ್ಕ ಅಂಥಹ ಸತ್ಸಿದ್ಧಾಂತವು ಪರ ಮತ್ತು ಅಪರ ಎಂಬುದಾಗಿ ಎರಡು ವಿಧ. ಅವೆರಡರಲ್ಲಿಯೂ ಪ್ರತ್ಯೇಕವಾಗಿ ವಾಚನಿಕ ಮತ್ತು ಆನುಷಂಗಿಕ ಎಂಬುದಾಗಿ ಎರಡು ವಿಧ. ಅದರಲ್ಲಿ ವಾಚನಿಕವಾದ ಪರ ಸತ್ಸಿದ್ಧಾಂತವನ್ನು ತಿಳಿಸುತ್ತಾರೆ –

**ಅಶೇಷಗುಣಪೂರ್ಣತ್ವಂ ಸರ್ವದೋಷಮುಜ್ಝಿತಿಃ ।**

**ವಿಷ್ಣೋರನ್ಯಚ್ಚ ತತ್ತಂತ್ರಮಿತಿ ಸಮ್ಯಗ್ ವಿನಿರ್ಣಯಃ ॥ ೮೨ ॥**

ವಿಷ್ಣುವಿಗೆ ಸರ್ವಗುಣಪರಿಪೂರ್ಣತ್ವ ಹಾಗೂ ಸರ್ವದೋಷರಹಿತತ್ವ, ಇತರ ಎಲ್ಲಕ್ಕೂ ಆ ವಿಷ್ಣುವಿನ ಅಧೀನತ್ವ, ಹೀಗೆ ಚೆನ್ನಾಗಿ ನಿರ್ಣಯಿಸಲ್ಪಡುವುದೇ ವಾಚನಿಕವಾದ ಪರ ಸತ್ಸಿದ್ಧಾಂತ. ಎಲ್ಲಕ್ಕೂ ವಿಷ್ಣುವಿನ ಅಧೀನತ್ವವನ್ನು ಹೇಳಿದ್ದರಿಂದ ವಿಷ್ಣುವಿಗೆ ಸಕಲ ಜಗಜ್ಜನ್ಮಾದಿಕಾರಣತ್ವವು ಸಿದ್ಧಿಸುತ್ತದೆ.

ಈಗ ಆನುಷಂಗಿಕವಾದ ಪರ ಸತ್ಸಿದ್ಧಾಂತವನ್ನು ತಿಳಿಸುತ್ತಾರೆ –

**ಸ್ವತಂತ್ರತ್ವಂ ಸದಾ ತಸ್ಯ ತಸ್ಯ ಭೇದಶ್ಚ ಸರ್ವತಃ ।**

**ಅದೋಷತ್ವಸ್ಯ ಸಿದ್ಧ್ಯರ್ಥಂ ಯದಭೇದೇ ತದನ್ವಯಃ ॥ ೮೩ ॥**

ಆ ವಿಷ್ಣುವಿಗೆ ಯಾವಾಗಲೂ ಸ್ವತಂತ್ರತ್ವ (ಅಂದರೆ ಸಮಸ್ತ ಜೀವಜಡಾತ್ಮಕ ಪ್ರಪಂಚದ ಸತ್ತಾದಿ ಎಲ್ಲಕ್ಕೂ ವಿಷ್ಣುವಿನ ಅಧೀನತ್ವ) ಹಾಗೂ ಪ್ರಕೃತಿ ಜೀವ ಜಡಗಳ ದೆಶೆಯಿಂದ ಆತ್ಯಂತಿಕ ಭಿನ್ನತ್ವ, ಹೀಗೆ ತಿಳಿಯುವುದೇ ಆನುಷಂಗಿಕವಾದ ಪರಸತ್ಸಿದ್ಧಾಂತ. ಹೀಗೆ ಅಂಗೀಕರಿಸುವುದರಿಂದ ವಿಷ್ಣುವಿಗೆ ಅದೋಷತ್ವವು, ಉಪ ಲಕ್ಷಣದಿಂದ ಅಶೇಷಗುಣಪೂರ್ಣತ್ವ, ಸಕಲಜಗಜ್ಜನ್ಮಾದಿಕಾರಣತ್ವಗಳು ಸಿದ್ಧಿಸುತ್ತವೆ. ಹಾಗಲ್ಲದೆ ಜಗತ್ತಿಗೆ ವಿಷ್ಣುವಿನಿಂದ ಅಭೇದವೂ ಅಸ್ವಾತಂತ್ರ್ಯವೂ ಇದ್ದರೆ, ಆಗ ವಿಷ್ಣುವಿಗೆ ಜಗತ್ತಿನ ದೋಷಗಳ ಸಂಬಂಧವೂ, ಗುಪೂರ್ಣತ್ವದ ಅಭಾವವೂ ಕೂಡ ಪ್ರಸಕ್ತವಾಗುತ್ತದೆ.

ಅನ್ಯತ್ತಂತ್ರಂ ಎನ್ನುವಲ್ಲಿ ಅನ್ಯಶಬ್ದವು ಅಮುಕ್ತರಿಗೆ ಸಂಬಂಧಿಸಿದ್ದು, ಮುಕ್ತರಿಗಲ್ಲ ಎಂಬ ಶಂಕೆ ಬಂದರೆ ಅದನ್ನು ಪರಿಹರಿಸುತ್ತಾರೆ –

**ತತ್ತಂತ್ರತ್ವಂ ಚ ಮುಕ್ತಾನಾಮಪಿ ತದ್ಗುಣಪೂರ್ತಯೇ ।**

**ಮುಕ್ತಾನಾಮಪಿ ಭೇದಶ್ಚ .................. ॥**

ಶ್ರೀಹರಿಯ ಗುಣಪೂರ್ಣತ್ವದ ಸಿದ್ಧಿಗಾಗಿ ಮುಕ್ತರಿಗೂ ಕೂಡ ಶ್ರೀಹರಿಯ ಅಧೀನತ್ವವನ್ನು ಅಂಗೀಕರಿಸಬೇಕು. ಮುಕ್ತರಿಗೂ ಕೂಡ ಶ್ರೀಹರಿಯಿಂದ ಅತ್ಯಂತ ಭೇದವೂ ಇರತಕ್ಕದ್ದೇ. ಮುಕ್ತರಿಗೆ ಶ್ರೀಹರಿಯಿಂದ ಅಭೇದವಿದ್ದರೆ, ಶ್ರೀಹರಿಯ ಅಧೀನತ್ವವು ಸಿದ್ಧಿಸುವುದಿಲ್ಲ. ಇದರಿಂದ ಶ್ರೀಹರಿಯ ಗುಣಪೂರ್ಣತ್ವಕ್ಕೆ ಭಂಗವು. ಆದ್ದರಿಂದ ಮುಕ್ತರಿಗೂ ಶ್ರೀಹರಿಯಿಂದ ಭೇದವನ್ನು ಅಂಗೀಕರಿಸಬೇಕು.

ಅದನ್ನೇ ಉಪಪಾದಿಸುತ್ತಾರೆ –

**...................... ನ ಹಿ ಭಿನ್ನಮಭಿನ್ನತಾಂ ।। ೮೪ ।।**

**ಗಚ್ಛತ್ ದೃಷ್ಟಂ ಕ್ವಚಿತ್ತಸ್ಯಾಪ್ಯಭಾವೋಽನುಭವೋಪಗಃ ।**

ಒಂದು ಕಾಲದಲ್ಲಿ ಭೇದವುಳ್ಳದ್ದು ಮತ್ತೊಂದು ಕಾಲದಲ್ಲಿ ಅಭೇದತ್ವವನ್ನು ಹೊಂದುವುದೆಂದು ಎಲ್ಲಿಯೂ ಕಂಡಿಲ್ಲ. ಅಮುಕ್ತರಿಗೂ ಪರಮಾತ್ಮನಿಗೂ ಭೇದವು ಎನ್ನುವುದು ಪ್ರತ್ಯಕ್ಷಾನುಭವಸಿದ್ಧವು. ಹೀಗೆ ಮೊದಲು ಭಿನ್ನರಾದವರಿಗೆ ಮುಕ್ತಿಯಲ್ಲಿ ಶ್ರೀಹರಿಯಿಂದ ಅಭೇದವೆನ್ನುವುದು ಕೂಡುವುದಿಲ್ಲ. ಭಿನ್ನವಾದುದು ಅಭಿನ್ನತ್ವವನ್ನು ಹೊಂದುವುದಿಲ್ಲ ಎನ್ನುವುದು ಅನುಭವಸಿದ್ಧವೂ ಆಗಿದೆ.

ಹಾಗಾದರೆ ಸಂಸಾರದಲ್ಲಿಯೂ ಅಭಿನ್ನರಾದವರಿಗೇ ಮುಕ್ತಿಯಲ್ಲಿ ಅಭೇದವು ಬರುವುದಾದರೆ, ಹಾಗೆಯೇ ಏಕೆ ಅಂಗೀಕರಿಸಬಾರದು ಎಂದರೆ –

**ಪೂರ್ವಾಭೇದೇ ದೋಷವತ್ವಮೀಶಸ್ಯೇತ್ಯತಿಭಿನ್ನತಾ ।। ೮೫ ।।**

**ನಾರಾಯಣೇನ ಮುಕ್ತಾನಾಮಪಿ ಸಮ್ಯಗಿತಿ ಸ್ಥಿತಿಃ ।**

ಮುಕ್ತಿಯ ಪೂರ್ವದಲ್ಲಿ ಅಂದರೆ ಸಂಸಾರದಲ್ಲಿ ಅಭೇದವಿದ್ದರೆ, ಸಂಸಾರವು ದುಃಖಾದಿರೂಪವಾದುದರಿಂದ, ಶ್ರೀಹರಿಗೂ ದೋಷವತ್ವವು ಬರಬೇಕಾಗುವುದು. ಆದಕಾರಣ ಮುಕ್ತರಿಗೂ ಕೂಡ ಶ್ರೀಹರಿಯಿಂದ ಅತ್ಯಂತಭೇದವೆಂಬುದು ಚೆನ್ನಾಗಿ ನಿರ್ಣೀತವಾದ ಸ್ಥಿತಿಯು. ಅಂದರೆ ಆನುಷಂಗಿಕವಾದ ಪರ ಸತ್ಸಿದ್ಧಾಂತವು.

ಹಾಗಾದರೆ ಭೇದಾಭೇದವು ಕೂಡುವುದರಿಂದ ಅತ್ಯಂತ ಭೇದವನ್ನು ಏಕೆ ಅಂಗೀಕರಿಸಬೇಕು ಎಂದರೆ –

**ಭೇದಾಭೇದೇಽಪ್ಯಭೇದೇನ ದೋಷಾಣಾಮಪಿ ಸಂಭವಃ ।। ೮೬ ।।**

ಭೇದದಿಂದ ಸಹಿತವಾದ ಅಭೇದವನ್ನು ಸಂಸಾರದಲ್ಲಿಯೂ ಅಂಗೀಕರಿಸಬೇಕು. ಆಗ ಅಭೇದದಿಂದ ಹಿಂದೆ ಹೇಳಿದ ದೋಷಗಳೂ ಕೂಡ ಪ್ರಾಪ್ತವಾಗುತ್ತವೆ. ಆದರೆ ಭೇದವನ್ನು ಅಂಗೀಕರಿಸಿದರೆ ಆ ದೋಷಗಳು ಬರುವುದಿಲ್ಲ. ಆದಪ್ರಯುಕ್ತ ಸಂಸಾರದಲ್ಲಿಯೂ ಮುಕ್ತಿಯಲ್ಲಿಯೂ ಅತ್ಯಂತ ಭೇದವನ್ನೇ ಅಂಗೀಕರಿಸತಕ್ಕದ್ದು.

ಈಗ ಅಪರಸಿದ್ಧಾಂತವನ್ನು ಹೇಳುತ್ತಾರೆ –

ನಿರ್ದೋಷತ್ವಂ ರಮಾಯಾಶ್ಚ ತದನಂತರತಾ ತಥಾ ।

ಬ್ರಹ್ಮಾ ಸರಸ್ವತೀ ವೀಂದ್ರಶೇಷರುದ್ರಾಶ್ಚ ತತ್ ಸ್ತ್ರಿಯಃ ॥ ೮೭ ॥

ಶಕ್ರಕಾಮೌ ತದನ್ಯೇ ಚ ಕ್ರಮಾನ್ಮುಕ್ತಾವಪೀತಿ ಚ ।

ಸತ್ಸಿದ್ಧಾಂತ ಇತಿ ಜ್ಞೇಯೋ ನಿರ್ಣೀತೋ ಹರಿಣಾ ಸ್ವಯಂ ॥ ೮೮ ॥

ಪರಮೇಶ್ವರನಂತೆ ಲಕ್ಷ್ಮೀದೇವಿಗೂ ನಿರ್ದೋಷತ್ವವು ಇದೆ. ಆದರೂ ಪರಮೇಶ್ವರನ ಅಧೀನತ್ವವೂ ಇರುವುದು. ಲಕ್ಷ್ಮೀದೇವಿಗೆ ಭಗವಂತನೊಬ್ಬನಿಂದಲೇ ಅವರತ್ವವು. ಚತುರ್ಮುಖ ಬ್ರಹ್ಮ, ಸರಸ್ವತೀ ದೇವಿ, ಗರುಡ–ಶೇಷ–ರುದ್ರರೂ ಕೂಡ, ಅವರುಗಳ ಪತ್ನಿಯರಾದ ಸೌಪರ್ಣ್ಯಾದಿಗಳೂ, ಇಂದ್ರಕಾಮರು, ಹಾಗೂ ಇತರ ದೇವತೆಗಳೂ ಕೂಡ ಮೇಲೆ ಹೇಳಿದ ತಾರತಮ್ಯ ಕ್ರಮದಿಂದಲೇ ಮುಕ್ತಿಯಲ್ಲಿಯೂ ಸಂಸಾರದಲ್ಲಿಯೂ ಶ್ರೀಹರಿಯ ಅಧೀನರಾಗಿಯೇ ಇರುವರು. ಹೀಗೆಯೇ ಜಗತ್ಸತ್ಯತ್ವಾದಿಗಳೂ ಅಪರಸಿದ್ಧಾಂತದಲ್ಲಿಯೇ ಗ್ರಾಹ್ಯವು. ಅಶೇಷಗುಣ ಪೂರ್ಣತ್ವಾದಿಗಳು ಸತ್ಸಿದ್ಧಾಂತವೆನ್ನುವುದು ಹೇಗೆಂದರೆ, ಇದು ಸೂತ್ರಕಾರರಿಂದ ಸಾಕ್ಷಾತ್ತಾಗಿ ನಿರ್ಣಯಿಸಲ್ಪಟ್ಟಿದೆ. ಬಲಾತ್ಕಾರದಿಂದ ಸೂತ್ರಾರ್ಥವಾಗಿ ಕಲ್ಪಿತವಲ್ಲ.

ಹಿಂದೆ 'ಸತ್ಸಿದ್ಧಾಂತಮಪಾಹಯನ್' ಎಂದು ಉಕ್ತವಾಗಿದೆ. ಸತ್ಸಿದ್ಧಾಂತವನ್ನು ಬಿಡುವುದರಿಂದ ದೋಷವೇನು ಎಂದರೆ –

ಏತದ್ವಿರೋಧಿ ಯತ್ಸರ್ವಂ ತಮಸೇಽಂಧಾಯ ಕೇವಲಂ ।

ಅಂಧಂತಮೋ ವಿಶಂತೀತಿ ಪ್ರಾಹ ಶ್ರುತಿರತಿಸ್ಫುಟಂ ॥ ೮೯ ॥

ಮೇಲೆ ಹೇಳಿದ ಸತ್ಸಿದ್ಧಾಂತಕ್ಕೆ ವಿರುದ್ಧವಾಗಿ ತಿಳಿಯಲ್ಪಡುವ ಎಲ್ಲವೂ ಅಂಧಂ ತಮಸ್ಸಿಗೇ ಕಾರಣವಾಗುವುದು. ಎಂದಿಗೂ ಅದು ಸುಖಕ್ಕೆ ಕಾರಣವಾಗದು. ಏಕೆಂದರೆ 'ಅಂಧಂತಮಃ ಪ್ರವಿಶಂತಿ ಯೇಽವಿದ್ಯಾಮುಪಾಸತೇ' ಹೀಗೆ ಶ್ರುತಿಯು ಅತ್ಯಂತ ಸ್ಪಷ್ಟವಾಗಿ ಹೇಳುತ್ತದೆ. ಪ್ರಾಮಾಣಿಕವಾದ ಸತ್ಸಿದ್ಧಾಂತಕ್ಕೆ ವಿರುದ್ಧವಾದುದೇ ಅವಿದ್ಯೆಯು.

ಹಾಗಾದರೆ ಪ್ರಕೃತವಾದ ಸಿದ್ಧಾಂತಕ್ಕೆ ಪ್ರಾಮಾಣಿಕತ್ವವು ಹೇಗೆ ಎಂದರೆ –

ಇತ್ಯೇವ ಶ್ರುತಯೋಽಶೇಷಾಃ ಪಂಚರಾತ್ರಮಥಾಖಿಲಂ ।

ಮೂಲರಾಮಾಯಣಂ ಚೈವ ಭಾರತಂ ಸ್ಮೃತಯೋಽಖಿಲಾಃ ॥ ೯೦ ॥

ವೈಷ್ಣವಾನಿ ಪುರಾಣಾನಿ ಸಾಂಖ್ಯಯೋಗೌ ಪರಾವಪಿ ।

ಬ್ರಹ್ಮತರ್ಕಶ್ಚ ಮೀಮಾಂಸೇತ್ಯನಂತಃ ಶಬ್ದಸಾಗರಃ ॥ ೯೧ ॥

ಅನಂತಾ ರ್ಯುಕ್ತಯಶ್ಚೈವ ಪ್ರತ್ಯಕ್ಷಾಗಮಮೂಲಕಾಃ ।

**ಪ್ರತ್ಯಕ್ಷಮೈಶ್ವರಂ ಚೈವ ರಮಾದೀನಾಮಶೇಷತಃ ॥ ೯೨ ॥**

**ಮುಕ್ತಾನಾಮಪ್ಯಮುಕ್ತಾನಾಮೇತಮೇವಾರ್ಥಮುತ್ತಮಂ ।**

**ಅನ್ಯಾವಕಾಶರಹಿತಂ ಪ್ರಕಾಶಯತಿ ಸಾದರಮ್ ॥ ೯೩ ॥**

ಮೇಲೆ ಹೇಳಿದ ಪ್ರಕಾರವಾಗಿಯೇ ಎಲ್ಲ ಶ್ರುತಿಗಳೂ, ಜೀವರ ಉತ್ಪತ್ತಿ ಇತ್ಯಾದಿಗಳನ್ನು ಪ್ರತಿಪಾದಿಸತಕ್ಕ ಸಮಸ್ತ ಪಂಚರಾತ್ರಾಗಮವೂ, ಮೂಲರಾಮಾಯಣವೂ (ಅವಾಂತರ ರಾಮಾಯಣವನ್ನು ವ್ಯಾವರ್ತನೆ ಮಾಡಲು ಏವ ಶಬ್ದವು), ಮಹಾಭಾರತವೂ, ಎಲ್ಲ ಸ್ಮೃತಿಗಳೂ, ವೈಷ್ಣವಪುರಾಣಗಳೂ, ಪ್ರಾಚೀನವಾದ ಸಾಂಖ್ಯ ಹಾಗೂ ಯೋಗ ಶಾಸ್ತ್ರಗಳೂ, ಬ್ರಹ್ಮತರ್ಕವೂ, ಮೂರುವಿಧವಾದ ಮೀಮಾಂಸಾ ಶಾಸ್ತ್ರವೂ (ಕರ್ಮ, ದೈವೀ ಹಾಗೂ ಬ್ರಹ್ಮ ಮೀಮಾಂಸಾ) ಇತ್ಯಾದಿ ಅನಂತವಾದ ಶಬ್ದಸಮೂಹವು ಮೇಲೆ ಹೇಳಿದ ಸತ್ಸಿದ್ಧಾಂತವನ್ನೇ ಪ್ರಕಾಶಿಸುತ್ತವೆ. ಪ್ರತ್ಯಕ್ಷ ಹಾಗೂ ಆಗಮಗಳೇ ಮೂಲವಾದ ಅಸಂಖ್ಯ ಯುಕ್ತಿಗಳೂ ಇದನ್ನೇ ಪ್ರಕಾಶಿಸುತ್ತವೆ. ಈಶ್ವರ ಸಂಬಂಧಿಯಾದ ಪ್ರತ್ಯಕ್ಷವೂ ಕೂಡ (ಏವ ಶಬ್ದದಿಂದ ಈಶ್ವರಪ್ರತ್ಯಕ್ಷಕ್ಕೆ ಪ್ರಾಬಲ್ಯವನ್ನು ಸೂಚಿಸುತ್ತಾರೆ) ಲಕ್ಷ್ಮೀದೇವಿಯಿಂದ ಮೊದಲ್ಗೊಂಡು ಎಲ್ಲ ಮುಕ್ತರ ಹಾಗೂ ಅಮುಕ್ತರ ಪ್ರತ್ಯಕ್ಷವೂ ಕೂಡ ಇದೇ ಶ್ರೇಷ್ಠವಾದ ಅರ್ಥವನ್ನು ಇತರ ಅವಕಾಶವು ಇಲ್ಲದಂತೆ ತಾತ್ಪರ್ಯಪೂರ್ವಕವಾಗಿ ಪ್ರಕಾಶಿಸುತ್ತವೆ.

ಈ ಪ್ರಕಾರವಾಗಿ ಸತ್ಸಿದ್ಧಾಂತವನ್ನು ಬಿಡದೇ ಶ್ರವಣಾದಿಗಳನ್ನು ಮಾಡಬೇಕೆಂದು ಹೇಳಲ್ಪಟ್ಟಿತು. ಅದರಲ್ಲಿ ಯಾವಾಗಲೂ ಸಚ್ಛಾಸ್ತ್ರಗಳನ್ನೇ ಶ್ರವಣ ಮಾಡಬೇಕೆಂದು ಹೇಳಿದ್ದನ್ನು ಈಗ ವಿವರಿಸುತ್ತಾರೆ –

**ಏತದೇವ ಚ ಸಚ್ಛಾಸ್ತ್ರಂ ದುಃಶಾಸ್ತ್ರಂ ತು ತತಃ ಪರಮ್ ।**

**ಸಚ್ಛಾಸ್ತ್ರಮಭ್ಯಸೇನ್ನಿತ್ಯಂ ದುಶ್ಶಾಸ್ತ್ರ ತು ಪರಿತ್ಯಜೇತ್ ॥ ೯೪ ॥**

ಮೇಲೆ ಹೇಳಲ್ಪಟ್ಟ ವೇದಾದಿಗಳೇ ಸಚ್ಛಾಸ್ತ್ರಗಳು. ಅದಕ್ಕೆ ವಿರುದ್ಧವಾದುದೂ ಉದಾಸೀನವಾದುದೂ ದುಶ್ಶಾಸ್ತ್ರವು. ನಿತ್ಯವೂ ಸಚ್ಛಾಸ್ತ್ರವನ್ನೇ ಅಭ್ಯಾಸಮಾಡಬೇಕು. ದುಶ್ಶಾಸ್ತ್ರಗಳಾದರೂ, ಹೇಯವಾದ್ದರಿಂದ, ನಿತ್ಯದಲ್ಲಿಯೂ ಪರಿತ್ಯಜಿಸಲೇ ಬೇಕು.

ಹಾಗಾದರೆ ಸಚ್ಛಾಸ್ತ್ರವನ್ನೇ ಅಭ್ಯಾಸ ಮಾಡಬೇಕೆಂದು ಹೇಳುವ ಮೂಲಕ ಶ್ರವಣ ಮನನಗಳಿಗೆ ಕರ್ತವ್ಯತ್ವವನ್ನು ಹೇಳಿದ್ದು ಅಯುಕ್ತವು. ಏಕೆಂದರೆ ಕೇವಲ ನಿಧಿಧ್ಯಾಸನದಿಂದಲೇ ಬ್ರಹ್ಮಸಾಕ್ಷಾತ್ಕಾರವು ಕೂಡುವುದು ಎಂದರೆ –

**ಅಸಂಶಯೇನ ತತ್ವಸ್ಯ ನಿರ್ಣಯೇ ಬ್ರಹ್ಮದರ್ಶನಂ ।**

ಸಂಶಯ ವಿಪರ್ಯಯಗಳು ನಾಶವಾಗಿ ಯಥಾರ್ಥವಾದ ತತ್ವನಿರ್ಣಯವು ಉಂಟಾದಾಗ ನಿಧಿಧ್ಯಾಸನದಿಂದ ಬ್ರಹ್ಮದರ್ಶನವಾಗುವುದು. (ಪರಬ್ರಹ್ಮನನ್ನು ಕುರಿತು ನಿರಂತರವಾದ ಅನುಚಿಂತನವೇ ನಿಧಿಧ್ಯಾಸನವು. ಏನೂ ಗೊತ್ತಿಲ್ಲದ

ವಿಷಯದ ಬಗ್ಗೆ ಅನುಚಿಂತನವು ಸಾಧ್ಯವಿಲ್ಲ. ಆದ್ದರಿಂದ ಪರಬ್ರಹ್ಮ ಸ್ವರೂಪವನ್ನು ಅರಿಯುವುದಕ್ಕಾಗಿ ಶ್ರವಣ ಮನನಗಳು ಅವಶ್ಯಕವು ಎಂದು ತಾತ್ಪರ್ಯ.)

ಹಾಗಾದರೆ ಯಥಾಶಕ್ತಿ ಶ್ರವಣಮನನಗಳನ್ನು ಅವಶ್ಯವಾಗಿ ಮಾಡಬೇಕೆಂದು ಹೇಳಿದ್ದು ಅಯುಕ್ತವು. ಪುರುಷಶಕ್ತಿಯಲ್ಲಿನ ತಾರತಮ್ಯದಿಂದ ಶ್ರವಣ ಮನನಗಳಿಗೂ ತಾರತಮ್ಯವು ಸಂಭವಿಸುವುದು. ಸಾಧ್ಯವಾದ ಫಲವು (ಶ್ರವಣಾದಿಗಳ ಫಲ ಜ್ಞಾನ, ಜ್ಞಾನದ ಫಲ ಮೋಕ್ಷ) ಒಂದೇ ರೀತಿಯಾದುದರಿಂದ ಶ್ರವಣಾದಿಗಳ ತಾರತಮ್ಯಕ್ಕೆ ವೈಯರ್ಥ್ಯವು ಬರುವುದು. ಬಂಧಧ್ವಂಸ ರೂಪವಾದ ಮೋಕ್ಷದಲ್ಲಿ ತಾರತಮ್ಯವು ಕೂಡುವುದಿಲ್ಲ. ಹೀಗೆ ಆಶಂಕಿಸಿದರೆ –

**ಸಮ್ಯಗ್ವಿಷಮವಿಜ್ಞಾನ ತಾರತಮ್ಯಾನುಸಾರತಃ ।। ೯೫ ।।**

**ಫಲಂ ಭವೇತ್ತಾರತಮ್ಯಾತ್ಸುಖದುಃಖಾತ್ಮಕಂ ನೃಣಾಮ್ ।**

**ಸಮ್ಯಕ್ ಚಾಧಿಕವಿಜ್ಞಾನಾತ್ಸುಖಾಧಿಕ್ಯಂ ಭವೇನ್ನೃಣಾಮ್ ।। ೯೬ ।।**

**ಅತೋ ಯಥಾತ್ಮಶಕ್ತ್ಯೈವ ಶ್ರವಣಂ ಮನನಂ ತಥಾ ।**

ಯಥಾರ್ಥಜ್ಞಾನ, ವಿಪರೀತಜ್ಞಾನ ಇವುಗಳ ತಾರತಮ್ಯಕ್ಕೆ ಅನುಸಾರವಾಗಿ ಮನುಷ್ಯರಿಗೆ ಕ್ರಮವಾಗಿ ತಾರತಮ್ಯಸಹಿತವಾದ ಸುಖ–ದುಃಖ ರೂಪವಾದ ಫಲವು ಆಗುವುದು. ಅಂದರೆ ಅಧಿಕವಾದ ಯಥಾರ್ಥಜ್ಞಾನದಿಂದ ಅಧಿಕವಾದ ಸುಖವು, ಅಧಿಕವಾದ ವಿಪರೀತಜ್ಞಾನದಿಂದ ಅಧಿಕವಾದ ದುಃಖವು. ಆದಕಾರಣ ತನ್ನ ಯೋಗ್ಯತಾನುಸಾರವಾಗಿಯೇ ಚೆನ್ನಾಗಿ ಶ್ರವಣವನ್ನೂ ಮನನವನ್ನೂ ಮಾಡಬೇಕು.

## ಉಪಸಂಹಾರಾಧಿಕರಣಮ್

### ಓಂ ಉಪಸಂಹಾರೋಽರ್ಥಾಭೇದಾದ್ವಿಧಿಶೇಷವತ್ಸಮಾನೇ ಚ ಓಂ

ಈ ಅಧಿಕರಣದಲ್ಲಿ ಎಲ್ಲ ವೇದಗಳಲ್ಲಿ ಹೇಳಲ್ಪಟ್ಟ ಎಲ್ಲ ಗುಣಗಳನ್ನೂ ದೋಷಾಭಾವಗಳನ್ನೂ ಸರಿಯಾಗಿ ತಿಳಿದು ಉಪಸಂಹಾರಪೂರ್ವಕವಾಗಿ ಬ್ರಹ್ಮನ ಉಪಾಸನೆ ಮಾಡಬೇಕು. ಹೇಗೆ ವಿಧಿವಿಹಿತಗಳಾದ ಸಂಧ್ಯಾವಂದನಾದಿಗಳನ್ನು ಮಾಡಬೇಕೋ ಹಾಗೆಯೇ ಧ್ಯಾನವನ್ನೂ, ವಿಧಿವಿಹಿತವಾದುದರಿಂದ, ಮಾಡಬೇಕು. ಪೂರ್ಣತ್ವಾದಿಗಳಿಗೆ ಅವಿರುದ್ಧವಾದ ಗುಣಗಳಲ್ಲಿಯೇ ಉಪಸಂಹಾರವು ಎಂದು ಪ್ರತಿಪಾದಿಸಲಾಗಿದೆ.

ಇದನ್ನೇ ವಿವರಿಸುತ್ತಾರೆ –

**ಕೃತ್ವಾಽಥ ಕುರ್ವನ್ನಪಿ ವಾ ನಿದಿಧ್ಯಾಸನಮಾಚರೇತ್ ।। ೯೭ ।।**

ಶ್ರವಣವನ್ನೂ ಮನನವನ್ನೂ ಮಾಡಿದವನಾಗಿ ಅಥವಾ ಮಾಡುವವನಾಗಿ ಆತ್ಮಶಕ್ತಿಗೆ ಅನುಸಾರವಾಗಿ ನಿದಿಧ್ಯಾಸನವನ್ನು ಆಚರಿಸಬೇಕು. ಈ ವಾಕ್ಯದಿಂದ

'ಪ್ರಾಪ್ತೇಶ್ಚ ಸಮಂಜಸಮ್' ಇತ್ಯಾದಿ ಸೂತ್ರಗಳಿಗೂ ತಾತ್ಪರ್ಯವು ಹೇಳಲ್ಪಟ್ಟಿದೆ ಎಂದು ತಿಳಿಯಬೇಕು. 'ಅಸಂಶಯೇನ ತತ್ತ್ವಸ್ಯ ನಿರ್ಣಯೇ ಬ್ರಹ್ಮದರ್ಶನಮ್' ಎನ್ನುವುದರಿಂದ 'ತನ್ನಿರ್ಧಾರಣಾರ್ಥನಿಯಮಃ' ಇತ್ಯಾದಿ ಸೂತ್ರಗಳ ತಾತ್ಪರ್ಯವು ಉಕ್ತವಾಗಿದೆ.

## ಅನುಬಂಧಾದ್ಯಧಿಕರಣಮ್

### ಓಂ ಅನುಬಂಧಾದಿಭ್ಯಃ ಓಂ

ಯೋಗಶಾಸ್ತ್ರದಲ್ಲಿ ಯಮಾದಿಗಳು ಉಪಾಸನೆಗೆ ಅಂಗವಾಗಿ ಉಪದೇಶ ಮಾಡಲ್ಪಡುತ್ತವೆ. ಆದರೆ ಯಮಾನುಷ್ಠಾನವು ಉಪಾಸನೆಗೆ ಅಂಗವಲ್ಲ ಎಂದು ಪೂರ್ವಪಕ್ಷಿಯು ತಿಳಿಯುತ್ತಾನೆ. ವಿಷ್ಣುಭಕ್ತ್ಯಾದಿ ಗುಣಗಳ ಸಂಪತ್ತಿಯೂ, ವಿಷಯ ಸಂಸರ್ಗಾದಿ ದೋಷಗಳ ವರ್ಜನೆಯೂ ಯಮಶಬ್ದದಿಂದ ಹೇಳಲ್ಪಡುತ್ತದೆ. ಭಕ್ತಿ ಇತ್ಯಾದಿಗಳ ಸಹಿತವಾಗಿ ಮಾಡತಕ್ಕ ಉಪಾಸನೆಯೇ ಮೋಕ್ಷಸಾಧನತ್ವವು, ಬೇರೆ ಪ್ರಕಾರವಲ್ಲ ಎನ್ನುವುದಕ್ಕೆ ಪ್ರಮಾಣವಿಲ್ಲ. ದ್ವೇಷಾಚ್ಚೈತ್ಯಾದಯೋ ನೃಪಾಃ ವೈರೇಣ ಯನ್ನೃಪತಯಃ ಇತ್ಯಾದಿಗಳಲ್ಲಿ ದ್ವೇಷಾದಿಗಳಿಗೆ ಮೋಕ್ಷಸಾಧನತ್ವವು ಪ್ರತೀತ ವಾಗಿದೆ. ದೃಷ್ಟ್ವೈವ ತಂ ಮುಚ್ಯತೇ ನಾಪರೇಣ ಎಂದು ಬ್ರಹ್ಮಸಾಕ್ಷಾತ್ಕಾರಕ್ಕೇನೆ ಮೋಕ್ಷಸಾಧನತ್ವವು ಎಂದು ಪ್ರತೀತವಾಗಿದೆ. ಇವೆರಡನ್ನೂ ಪರ್ಯಾಲೋಚಿಸಿದರೆ ದ್ವೇಷಕ್ಕೆ ಬ್ರಹ್ಮಸಾಕ್ಷಾತ್ಕಾರ ಸಾಧನತ್ವವು ತಿಳಿಯಲ್ಪಡುತ್ತದೆ. ಹೀಗೆಯೇ ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರಗಳಿಗೂ ಅಂಗತ್ವವನ್ನು ನಿರಾಕರಿಸಬೇಕು ಎಂದು ಪೂರ್ವಪಕ್ಷಿಯು ಆಶಂಕಿಸಿದರೆ, ಅದರ ಪರಿಹಾರಕ್ಕಾಗಿ ಅನುಬಂಧಾದಿಭ್ಯಃ ಎನ್ನುವ ಸೂತ್ರವು ಹೊರಟಿದೆ. ಬ್ರಹ್ಮಸಾಕ್ಷಾತ್ಕಾರವೂ ಕೂಡ ಭಕ್ತ್ಯಾದಿಗಳಿಂದಲೇ ಆಗುವುದು, ದ್ವೇಷಾದಿಗಳಿಂದಲ್ಲ ಎನ್ನುವುದು ಸೂತ್ರಾರ್ಥ. ಅಲ್ಲಿ ಉಕ್ತ ದೋಷವು ಹೇಗೆ ಪರಿಹೃತವಾಗಿದೆಯೆಂದು ಸ್ಪಷ್ಟವಾಗಿ ತಿಳಿಯುವುದಿಲ್ಲ. ಆದಕಾರಣ ವ್ಯಾಖ್ಯಾನ ಮಾಡುತ್ತಾರೆ –

**ವಿಷಯೇಷು ಚ ಸಂಸರ್ಗಾಚ್ಛಾಶ್ವತಸ್ಯ ಚ ಸಂಶಯಾತ್ ।**
**ಮನಸಾ ಚಾನ್ಯದಾಕಾಂಕ್ಷಾತ್ಪರಂ ನ ಪ್ರತಿಪದ್ಯತೇ ॥ ೯೮ ॥**
**ಇತಿ ಭಾರತವಾಕ್ಯಂ ಹಿ ತೇನೈತದ್ದೋಷವರ್ಜಿತಃ ।**
**ಸದೋಪಾಸನಯಾ ಯುಕ್ತೋ ವಾಸುದೇವಂ ಪ್ರಪಶ್ಯತಿ ॥ ೯೯ ॥**

ವಿಷಯಗಳಲ್ಲಿಯೂ, ವಿಷಯಗಳ ಸಂಸರ್ಗದಿಂದಲೂ, ಶಾಶ್ವತನಾದ ಬ್ರಹ್ಮನ ವಿಷಯದಲ್ಲಿ ಸಂಶಯದಿಂದಲೂ, ಮನಸ್ಸಿನಿಂದಲೂ, ಮುಕ್ತಿಯಿಂದ ಇತರವಾದ ವಿಷಯಸಮೂಹವನ್ನು ಕುರಿತು ಇಚ್ಛೆಯಿಂದಲೂ ಪರಬ್ರಹ್ಮನು ಕಾಣಲ್ಪಡುವುದಿಲ್ಲ. ಹೀಗೆ ಭಾರತವಾಕ್ಯವು ಇರುವುದರಿಂದ, ಮೇಲೆ ಹೇಳಿದ ದೋಷಗಳಿಂದ

ರಹಿತನಾದವನೇ ಯಾವಾಗಲೂ ಉಪಾಸನೆಯಿಂದ ಯುಕ್ತನಾಗಿ ವಾಸುದೇವನನ್ನು ನೋಡುತ್ತಾನೆ. ಯಮಾದಿಗಳಿಂದ ಯುಕ್ತನಾದವನಿಗೇನೆ ವಿಷಯಾದಿಗಳ ಸಂಸರ್ಗ ಮುಂತಾದ ದೋಷಗಳ ರಾಹಿತ್ಯವು ಯುಕ್ತವಾಗುವುದು. ಇದರಿಂದ ಯಮ ನಿಯಮಾದಿಗಳಿಗೆ ಉಪಾಸನೆಯ ಅಂಗತ್ವವು ಸಿದ್ಧಿಸುವುದು.

ಯಮಾದ್ಯನುಷ್ಠಾನವು ಆವಶ್ಯಕವೆನ್ನುವುದಕ್ಕೆ ಯುಕ್ತಿಯನ್ನೂ ಹೇಳುತ್ತಾರೆ –

**ದೋಷಾ ಅನಾದಿಸಂಬದ್ಧಾಸ್ತೇ ಮುಕ್ತಿಪರಿಪಂಥಿನಃ ।**

**ಸಂತ್ಯೇವ ಪ್ರಾಯಶಃ ಪುಂಸು ತೇನ ಮೋಕ್ಷೋ ನ ಜಾಯತೇ ॥ ೧೦೦ ॥**

ವಿಷ್ಣುಭಕ್ತ್ಯಾದಿ ಅಭಾವ, ವಿಷಯಸಂಸರ್ಗ ಮೊದಲಾದ ದೋಷಗಳು ಮುಕ್ತಿ ಮಾರ್ಗಕ್ಕೆ ಅಡಚಣೆಯಾಗಿ ಬಹುತೇಕ ಪುರುಷರಲ್ಲಿ ಅನಾದಿ ಕಾಲದಿಂದಲೂ ಸಂಬಂಧವುಳ್ಳದ್ದಾಗಿ ಇದ್ದೇ ಇರುತ್ತವೆ. ಆ ಕಾರಣದಿಂದ ಅವರಿಗೆ ಮೋಕ್ಷವು ಆಗುವುದಿಲ್ಲ.

ಹಾಗೆಯೇ ಆಗಲಿ. ಆದರೆ ಕೆಲವು ಸಂಸಾರಿಗಳೂ ಕೂಡ ರಾಗಾದಿ ದೋಷ ರಹಿತರೂ, ಚಿಕ್ಕ ಮಕ್ಕಳೂ ಮುಗ್ಧರು ಮೊದಲಾದ ಜೀವರೂ ಇರುತ್ತಾರೆ. ಆದಕಾರಣ ದೋಷಗಳು ಮೋಕ್ಷಾಭಾವಕ್ಕೆ ಕಾರಣವು ಹೇಗೆ ಎಂದರೆ –

**ಸರ್ವೇ ತು ಏತೇ ಜೀವೇಷು ದೃಶ್ಯಂತೇ ತಾರತಮ್ಯತಃ ।**

ಬಾಲಮುಗ್ಧಾದಿ ಎಲ್ಲ ಜೀವರಲ್ಲಿಯೂ ಮೇಲೆ ಹೇಳಿದ ಎಲ್ಲ ದೋಷಗಳು ತಾರತಮ್ಯ ರೂಪದಿಂದಲೇ ಕಾಣಲ್ಪಡುತ್ತವೆ.

ದೋಷಗಳೂ ಕೂಡ ಪ್ರವಾಹತಃ ಅನಾದಿಯಾಗಿವೆ. ಬಾಲಮುಗ್ಧಾದಿ ಜೀವರಲ್ಲಿ ಭಕ್ತ್ಯಾದಿ ಅಭಾವ ಮೊದಲಾದ ದೋಷಗಳು ಪ್ರತ್ಯಕ್ಷ ಅನುಮಾನಗಳಿಂದ ದೃಷ್ಟಗಳೇ ಆಗಿವೆ. ರಾಗದ್ವೇಷಾದಿ ದೋಷಗಳೂ ಕೂಡ ಪುರುಷರಲ್ಲಿ ತಾರತಮ್ಯಕ್ಕೆ ಅನುಗುಣವಾಗಿಯೇ ಇರುತ್ತವೆ. ಆ ದೋಷಗಳು ಪ್ರಸುಪ್ತ (ಅವ್ಯಕ್ತವಾದವು), ತನು (ಅಲ್ಪಗಳು), ವಿಚ್ಛಿನ್ನ (ಬಹುಶಃ ವ್ಯಕ್ತಗಳಾಗಿದ್ದರೂ ಸರ್ವದಾ ಅವಿದ್ಯಮಾನಗಳು), ಉದಾರ (ಯಾವಾಗಲೂ ಪ್ರಕಟವಾದವುಗಳು) ಎನ್ನುವ ಭೇದದಿಂದ ನಾಲ್ಕು ವಿಧ. ಬಾಲಾದಿಗಳಲ್ಲಿ ಸದಾ ಪ್ರಕಟವಾಗುವ ದೋಷಗಳ ಅಭಾವದಿಂದ ಅವುಗಳ ಅಭಾವೋಕ್ತಿಯು. ಸ್ತನ್ಯಪಾನಾದಿ ಇಚ್ಛಾದಿಗಳು ಅವರಲ್ಲಿಯೂ ಕಂಡಿವೆ. ಹೀಗೆ ಎಲ್ಲರಲ್ಲಿಯೂ ಎಲ್ಲ ದೋಷಗಳೂ ಪ್ರಮಿತವಾಗಿವೆ ಎಂದು ಹೇಳಿದ್ದು ಯುಕ್ತವು.

ಹಾಗಾದರೆ ಸಂಸಾರಿಗಳಲ್ಲಿ ಬ್ರಹ್ಮಪದ ಪ್ರಾಪ್ತಿಗೆ ಯೋಗ್ಯರಾದ ಋಜುಗಳೆಂಬ ಪುರುಷರು ಇರುವರು. ಅವರು ದೋಷಿಗಳು ಎಂದು ಹೇಳುವುದು ಯುಕ್ತವಲ್ಲ. ಏಕೆಂದರೆ ದೋಷಯುಕ್ತತ್ವವು ಋಜುತ್ವಕ್ಕೆ ವಿರುದ್ಧವು. ಆದ್ದರಿಂದ ಎಲ್ಲ ಜೀವರೂ ದೋಷಯುಕ್ತರು ಎನ್ನುವುದು ಕೂಡುವುದಿಲ್ಲ ಎಂದರೆ –

**ಋಜೂನಾಮೇಕ ಏವಾಸ್ತಿ ಪರಮೋತ್ಸಾಹವರ್ಜನಮ್ ॥ ೧೦೧ ॥**

**ಸ ಗುಣಾಲ್ಪತ್ವಮಾತ್ರತ್ವಾನ್ನರ್ಜುತ್ವೇನ ವಿರುಧ್ಯತೇ ।**

ಋಜುಗಳಿಗೂ ಪರಮೋತ್ಸಾಹವರ್ಜನ (ಮೋಕ್ಷಕ್ಕಾಗಿ ಮಹಾಪ್ರಯತ್ನವನ್ನು ಬಿಡುವುದು) ಎಂಬ ಒಂದೇ ಒಂದು ದೋಷವು ಇದೆ. ದೋಷಗಳು ಹೆಚ್ಚಾಗಿ ಇಲ್ಲ ಎನ್ನುವ ಅರ್ಥದಲ್ಲಿ ಋಜುತ್ವವು ಕೂಡುತ್ತದೆ. ಅಲ್ಪ ಪ್ರಮಾಣದಲ್ಲಿದ್ದರೆ ಅದು ಇಲ್ಲವೆಂದು ಹೇಳುವುದು ರೂಢಿ. ಪರಮೋತ್ಸಾಹವೆಂಬ ದೋಷವು ರಾಗಾದಿಗಳಂತೆ ಭಾವರೂಪವಾದುದಲ್ಲ. ಅಥವಾ ಗುಣಾಭಾವರೂಪವಾದುದೂ ಅಲ್ಲ. ಅದು ಗುಣಾಲ್ಪತ್ವಮಾತ್ರದಿಂದ ಋಜುತ್ವಕ್ಕೆ ವಿರುದ್ಧವಾಗುವುದಿಲ್ಲ.

ಸಂಸಾರಕ್ಕೆ ಕಾರಣವಾದ ಮುಕ್ತಿಗೆ ಪ್ರತಿಬಂಧಕಗಳಾದ ಈ ದೋಷಗಳು ಎಲ್ಲರಲ್ಲಿಯೂ ಇವೆ ಎನ್ನುವುದರಿಂದ ಏನು ಹೇಳಿದಂತಾಯಿತು ಎಂದರೆ –

**ಅತೋ ವಿಷ್ಣೌ ಪರಾ ಭಕ್ತಿಸ್ತದ್ಭಕ್ತೇಷು ರಮಾದಿಷು ॥ ೧೦೨ ॥**

**ತಾರತಮ್ಯೇನ ಕರ್ತವ್ಯಾ ಪುರುಷಾರ್ಥಮಭೀಪ್ಸತಾ ।**

ಆದಕಾರಣ ಮೋಕ್ಷಾಪೇಕ್ಷಿಯಾದ ಪುರುಷನು ಶ್ರೀಹರಿಯಲ್ಲಿ ಸರ್ವೋತ್ಕೃಷ್ಟ ವಾದ ಭಕ್ತಿಯನ್ನೂ, ವಿಷ್ಣುಭಕ್ತರಾದ ರಮಾದಿಗಳಲ್ಲಿ ತಾರತಮ್ಯಕ್ಕೆ ಅನುಸಾರವಾದ ಭಕ್ತಿಯನ್ನೂ ಮಾಡತಕ್ಕದ್ದು.

ಇದನ್ನೇ ವಿವರಿಸುತ್ತಾರೆ –

**ಸ್ವಾದರಃ ಸರ್ವಜಂತೂನಾಂ ಸಂಸಿದ್ಧೋ ಹಿ ಸ್ವಭಾವತಃ ॥ ೧೦೩ ॥**

**ತತೋಽಧಿಕಃ ಸ್ವೋತ್ತಮೇಷು ತದಾಧಿಕ್ಯಾನುಸಾರತಃ ।**

**ಕರ್ತವ್ಯೋ ವಾಸುದೇವಾಂತಂ ಸರ್ವಥಾ ಶುಭಮಿಚ್ಛತಾ ॥ ೧೦೪ ॥**

**ನ ಕದಾಚಿತ್ತ್ಯಜೇತ್ತಂ ಚ ಕ್ರಮೇಣೈನಂ ವಿವರ್ಧಯೇತ್ ।**

ಎಲ್ಲ ಜಂತುಗಳಿಗೂ ಉಪಕಾರಾದಿಗಳನ್ನು ಅಪೇಕ್ಷಿಸದೆ ಒಳ್ಳೆಯ ಸ್ನೇಹವನ್ನು ಮಾಡತಕ್ಕದ್ದು. ಸರ್ವ ರೀತಿಯಿಂದಲೂ ಮಂಗಲವನ್ನು ಇಚ್ಛಿಸುವ ಪುರುಷನು ತನ್ನ ವಿಷಯಕವಾದ ಆದರದ ದೆಶೆಯಿಂದ ಹೆಚ್ಚಾದ ಆದರವನ್ನು ತನಗಿಂತ ಉತ್ತಮರಲ್ಲಿ ಮಾಡಬೇಕು. ಹೀಗೆ ವಾಸುದೇವ ಪರ್ಯಂತವಾಗಿ ಅವರವರ ಆಧಿಕ್ಯವನ್ನನುಸರಿಸಿ ಹೆಚ್ಚಿನ ಆದರವನ್ನು ಮಾಡಬೇಕು. ವಾಸುದೇವನಲ್ಲಾದರೋ ನಿರತಿಶಯವಾದ ಸ್ನೇಹವನ್ನು ಮಾಡಬೇಕು. ಯಾವಕಾಲದಲ್ಲಿಯೂ ವಿಷ್ಣ್ವಾದಿಗಳಲ್ಲಿ ಆದರವನ್ನು ಬಿಡಬಾರದು. ಜೊತೆಗೆ ಕಾಲಕ್ರಮದಿಂದ ಈ ಆದರವನ್ನು ಹೆಚ್ಚಿಸಿಕೊಳ್ಳಬೇಕು.

ಹಾಗಾದರೆ ತನ್ನ ಸಮಾನಿಕರಲ್ಲಿಯೂ ಹಾಗೂ ತನಗಿಂತ ಅಧಮರಲ್ಲಿಯೂ ಆದರವನ್ನು ಹೇಗೆ ಮಾಡಬೇಕು ಎಂದರೆ –

ಸಮೇಷು ಸ್ವಾತ್ಮವತ್ ಸ್ನೇಹಃ ಸತ್ಸ್ವನ್ಯತ್ರ ತತೋ ದಯಾ ॥ ೧೦೫ ॥

ಕಾರ್ಯೈವಮಾಪರೋಕ್ಷ್ಯೇಣ ದೃಶ್ಯತೇ ಕ್ಷಿಪ್ರಮೀಶ್ವರಃ ।

ಸಮಾನರಲ್ಲಿ ತನ್ನಂತೆಯೇ ಸ್ನೇಹವನ್ನೂ, ಉತ್ತಮರಿಂದಲೂ ಸಮಾನರಿಂದಲೂ ಅಧಮರಾದ ಸಜ್ಜನರಲ್ಲಿ ದಯೆಯನ್ನೂ ಮಾಡಬೇಕು. ಹೀಗೆ ಯೋಗ್ಯತೆಗೆ ಅನುಸಾರವಾಗಿ ಆದರವನ್ನು ಮಾಡುವುದರಿಂದ ಶ್ರೀಹರಿಯು ಶೀಘ್ರದಲ್ಲಿಯೇ ಪ್ರತ್ಯಕ್ಷವಾಗಿ ಕಾಣಲ್ಪಡುತ್ತಾನೆ.

ದೋಷವನ್ನು ತ್ಯಜಿಸುವಲ್ಲಿಯೂ ವಿಶೇಷವಿದೆ. ರಾಗಾದಿಗಳು ಸಂಸಾರವನ್ನು ಹೊಂದಿಸುತ್ತವೆ. ವಿಪರೀತ ಜ್ಞಾನಾದಿಗಳಾದರೂ ನಿತ್ಯನರಕವನ್ನೇ ಹೊಂದಿಸುತ್ತವೆ. ಆದ್ದರಿಂದ ವಿಪರೀತ ಜ್ಞಾನಾದಿಗಳನ್ನು ಅತಿಶಯವಾಗಿ ತ್ಯಜಿಸಬೇಕು ಎನ್ನುವ ಅಭಿಪ್ರಾಯದಿಂದ ಶ್ರುತಿಯನ್ನು ಹೇಳುತ್ತಾರೆ –

ತತ್ತಮೋಽಂಧಂ ವ್ರಜೇದ್ವಿಷ್ಣುಸಮತ್ವಂ ಯೋಽನುಪಶ್ಯತಿ ॥ ೧೦೬ ॥

ರಮಾಬ್ರಹ್ಮಶಿವಾದೀನಾಮಪಿ ಮುಕ್ತೌ ಕಥಂಚನ ।

ಕಿಮುತಾಧಿಕ್ಯದೃಷ್ಟೇಸ್ತದ್ಗುಣಾಭಾವಮತೇರಪಿ ॥ ೧೦೭ ॥

ದೋಷವೇತ್ತುರಭೇದಸ್ಯ ದ್ರಷ್ಟುರ್ದ್ರಷ್ಟುಸ್ತಥೋಭಯೋಃ ।

ಇತ್ಯಾಹ ಸಚ್ಛ್ರುತಿಃ ತೇನ ಸಂಪ್ರೋಕ್ತಗುಣಸಂಯುತಃ ॥ ೧೦೮ ॥

ಉಪಾಸೀತ ಹರಿಂ ದೃಷ್ಟ್ವಾ ಮುಕ್ತಿಸ್ತೇನೈವ ಜಾಯತೇ ।

ಯಾವನು ರಮಾಬ್ರಹ್ಮರುದ್ರಾದಿಗಳಿಗೆ ಮುಕ್ತಿಯಲ್ಲಿಯೂ ಯಾವುದೇ ಧರ್ಮದಿಂದಲೂ ವಿಷ್ಣುಸಾಮ್ಯವನ್ನು ತಿಳಿಯುತ್ತಾನೋ ಅವನು ಪ್ರಸಿದ್ಧವಾದ ಅಂಧಂತಮಸ್ಸನ್ನು ಹೊಂದುವನು. ರಮಾಬ್ರಹ್ಮಾದಿಗಳಿಗೆ ವಿಷ್ಣುವಿನ ದೆಸೆಯಿಂದ ಆಧಿಕ್ಯವನ್ನು ಕಾಣುವವನಿಗೆ ಅಂಧಂತಮಸ್ಸು ನಿಶ್ಚಿತವೆಂದು ಮತ್ತೆ ಹೇಳಬೇಕೇನು? ವಿಷ್ಣುವಿನಲ್ಲಿ ಗುಣಾಭಾವವನ್ನೂ ದೋಷಭಾವವನ್ನೂ ತಿಳಿದಿರುವ, ವಿಷ್ಣುವಿಗೆ ಜೀವರಿಂದಲೂ ಜಡರಿಂದಲೂ ಅಭೇದವನ್ನು ಹಾಗೆಯೇ ಭೇದಾಭೇದವನ್ನು ಕಾಣತಕ್ಕ ಪುರುಷನಿಗೆ ಅಂಧಂತಮಸ್ಸು ಆಗುವುದೆಂದು ಮತ್ತೆ ಹೇಳಬೇಕೇನು? ಹೀಗೆ ಸಮೀಚೀನವಾದ ಶ್ರುತಿಯು ಹೇಳುತ್ತದೆ. ಆದಪ್ರಯುಕ್ತ ಹಿಂದೆ ವಿಶೇಷವಾಗಿ ಉಕ್ತವಾಗಿರುವ ವಿಷಯ ಸಂಸರ್ಗರಾಹಿತ್ಯ ಮುಂತಾದ ಗುಣಗಳಿಂದ ಅಥವಾ ಯೋಗಶಾಸ್ತ್ರೋಕ್ತ ಯಮಾದಿ ಗುಣಗಳಿಂದ ಕೂಡಿದವನಾಗಿ ಶ್ರೀಹರಿಯನ್ನು ಉಪಾಸನೆ ಮಾಡಬೇಕು. ಜ್ಞಾನಾನಂದಾದಿ ಗುಣಗಳಿಂದ ಯುಕ್ತನೆಂದು ಚೆನ್ನಾಗಿ ಹೇಳಲ್ಪಟ್ಟ ಶ್ರೀಹರಿಯನ್ನು ಅಂಥಹ ಉಪಾಸನೆಯಿಂದಲೇ ಕಾಣುವುದರಿಂದ, ಕರ್ಮಕ್ಷಯವು ಪೂರ್ತಿಯಾದ ನಂತರ ಮೋಕ್ಷವು ಆಗುವುದು.

ಪರಮಾತ್ಮನ ದ್ವೇಷಿಗಳಿಗೂ ಮುಕ್ತಿಯಾಗುವುದೆಂದು ಪುರಾಣಗಳಲ್ಲಿ ಹೇಳಿದೆ ಎನ್ನುವ ಪೂರ್ವಪಕ್ಷಿಯ ಮತವನ್ನು ಈಗ ನಿರಾಕರಿಸುತ್ತಾರೆ –

**ದ್ವೇಷಾದ್ಯನ್ಮುಕ್ತಿ ಕಥನಂ ಶ್ರುತಿವಾಕ್ಯವಿರೋಧಿ ತತ್ ॥ ೧೦೯ ॥**

**ರಿಪವೋ ಯೇ ತು ರಾಮಸ್ಯ ವಿಮುಖತ್ವಾನ್ನಿರಾಮಿಣಃ ।**

**ಅಭಿದ್ರೋಹಪದೇ ನಿತ್ಯಮಂಧೇ ತಮಸಿ ತೇ ಸ್ಥಿತಾಃ ॥ ೧೧೦ ॥**

ದ್ವೇಷನಿಮಿತ್ತದಿಂದ ಮುಕ್ತಿ ಎಂದು ಹೇಳುವುದು ಶ್ರುತಿವಾಕ್ಯಕ್ಕೆ ವಿರೋಧಿಯು. ಆದಕಾರಣ ಬೇರೆ ರೀತಿಯಿಂದ ವ್ಯಾಖ್ಯಾನ ಮಾಡಬೇಕು. ಇಲ್ಲಿ ಉದಾಹರಿಸಿರುವ ಶ್ರುತಿವಾಕ್ಯವು ಯಾವುದೆಂದರೆ, 'ಮಾ ನಸ್ತೇನೇಭ್ಯೋ ಯೇ ಅಭಿದ್ರುಹಸ್ಪದೇ ನಿರಾಮಿಣೋ ರಿಪವೋಽನ್ನೇಷು ಜಾಗೃಧುಃ'. ಇದು ವಾಯುವನ್ನು ಕುರಿತು ವಿದ್ಯಾದೇವತೆಯ ವಚನವು. ಈ ಮಂತ್ರಾರ್ಥವರ್ಣನೆಯು ಐತರೇಯ ಭಾಷ್ಯದಲ್ಲಿ ದ್ವಿತೀಯ ಪ್ರಘಟ್ಟಕ ಸಪ್ತಮಾಧ್ಯಾಯದಲ್ಲಿ ಬಂದಿದೆ.

ಈ ಶ್ರುತಿಯನ್ನೇ 'ರಿಪವೋ' ಇತ್ಯಾದಿ ಅರ್ಥತಃ ಪಠಿಸುತ್ತಾರೆ – ಯಾರು ರಾಮನ ಶತ್ರುಗಳೋ ಅವರು ರಾಮನಿಗೆ ವಿಮುಖರಾದ್ದರಿಂದ ನಿರಾಮಿಗಳು. 'ರಾಮೋ ರಮಣಂ ತದಸ್ಯಾಸ್ತೀತಿ ರಾಮೀ ಭಗವಾನ್ ರಾಮಃ ತಸ್ಮಾನ್ನಿಷ್ಕ್ರಾಂತಾಃ ತಸ್ಯ ವಿಮುಖಾ ನಿರಾಮಿಣಃ' ಎನ್ನುವ ವ್ಯುತ್ಪತ್ತಿಯಿಂದ, ಸುಖರೂಪಿಯಾದ ಭಗವಂತನನ್ನು ಅತಿಕ್ರಮಿಸಿದವರು (ಭಕ್ತಿರಹಿತರು). ಆದ್ದರಿಂದಲೇ ರಾಮನಿಗೆ ಶತ್ರುಗಳು. ಅವರು ಅತಿಶಯವಾದ ದ್ರೋಹಕ್ಕೆ ಸ್ಥಾನವಾದ ಅಂಧಂತಮಸ್ಸಿನಲ್ಲಿ ನಿರಂತರವೂ ಇರತಕ್ಕ ಸ್ಥಿತಿಯನ್ನು ಹೊಂದುತ್ತಾರೆ.

**ಹರಿದ್ವಿಷಸ್ತಮೋ ಯಾಂತಿ ಯೇ ಚೈವ ತದಭೇದಿನಃ ।**

**ತನ್ನಿರ್ಗುಣತ್ವವೇತ್ತಾರಸ್ತಸ್ಯ ದೋಷವಿದೋಽಪಿ ಚ ॥ ೧೧೧ ॥**

**ಇತ್ಯಾದಿ ಶ್ರುತಿಸಂದರ್ಭಾದ್ದ್ವೇಷಿಣಸ್ತಮ ಈಯತೇ ।**

ಹರಿದ್ವೇಷಿಗಳು ಅಂಧಂತಮಸ್ಸನ್ನು ಹೊಂದುತ್ತಾರೆ. ಶ್ರೀಹರಿಗೆ ಜೀವಾದಿಗಳಿಂದ ಅಭೇದವನ್ನು ಹೇಳುವವರೂ, ನಿರ್ಗುಣತ್ವವನ್ನು ತಿಳಿಯುವವರೂ, ಅಜ್ಞಾನಾದಿ ದೋಷಗಳನ್ನು ತಿಳಿಯುವವರೂ ಕೂಡ ಅಂಧಂತಮಸ್ಸನ್ನು ಹೊಂದುತ್ತಾರೆ. ಇತ್ಯಾದಿ ಶ್ರುತಿಗಳ ಸಂದರ್ಭದ ದೆಶೆಯಿಂದ ಭಗವದ್ದ್ವೇಷಿಗಳು ಅಂಧತಮಸ್ಸನ್ನು ಹೊಂದುತ್ತಾರೆ ಎನ್ನುವುದು ನಿಶ್ಚಯವಾಗುವುದು.

ಭಗವದ್ದ್ವೇಷಿಗಳಿಗೆ ಮೋಕ್ಷವನ್ನು ಹೇಳುವುದು ಸ್ಮೃತಿವಿರುದ್ಧವೂ ಆಗಿದೆ ಎಂಬ ಅಭಿಪ್ರಾಯದಿಂದ ಆ ಸ್ಮೃತಿಗಳನ್ನು ಪಠಿಸುತ್ತಾರೆ –

**ಹಿರಣ್ಯಕಶಿಪುಶ್ಚಾಪಿ ಭಗವನ್ನಿಂದಯಾ ತಮಃ ॥ ೧೧೨ ॥**

**ವಿವಕ್ಷುರತ್ಯಾಗಾತ್ಸೂನೋಃ ಪ್ರಹ್ಲಾದಸ್ಯಾನುಭಾವತಃ ।**

ಭಗವನ್ನಿಂದೆಯಿಂದ ಅಂಧಂತಮಸ್ಸನ್ನು ಹೊಂದುವ ವಿಷಯದಲ್ಲಿ ಸಂಭಾವನಾ ವಿಷಯನಾದ ಹಿರಣ್ಯಕಶಿಪುವೂ ಕೂಡ ಮಗನಾದ ಪ್ರಹ್ಲಾದನ ಸಾಮರ್ಥ್ಯದಿಂದ ಅಂಧಂತಮಸ್ಸನ್ನು ಅತಿಕ್ರಮಿಸಿದನು.

**ಯದನಿಂದತ್ಪಿತಾ ಮಹ್ಯಂ ತ್ವದ್ಭಕ್ತೇ ಮಯಿ ಚಾಘವಾನ್ ॥ ೧೧೩ ॥**

**ತಸ್ಮಾತ್ಪಿತಾ ಮೇ ಪೂಯೇತ ದುರಂತಾದ್ದುಸ್ತರಾದಘಾತ್ ।**

ನನ್ನ ತಂದೆಯು ನನ್ನ ನಿಮಿತ್ತವಾಗಿ ನಿನ್ನನ್ನು ನಿಂದಿಸಿದನು. ನಿನ್ನ ಭಕ್ತನಾದ ನನ್ನ ವಿಷಯದಲ್ಲಿಯೂ ಅಪರಾಧ ಮಾಡಿದನು. ವಿಷ್ಣು ಹಾಗೂ ವೈಷ್ಣವರ ನಿಂದೆಯೆಂಬ ಅಪರಾಧದಿಂದ ಹುಟ್ಟಿದ ದಾಟಲು ಅಶಕ್ಯವಾದ ಕೊನೆಯಿಲ್ಲದ ನಿತ್ಯನರಕದಿಂದ ನನ್ನ ತಂದೆಯು ರಕ್ಷಿಸಲ್ಪಡಲಿ ಎಂದು ನರಸಿಂಹನನ್ನು ಕುರಿತು ಪ್ರಹ್ಲಾದನು ಪ್ರಾರ್ಥಿಸಿದ್ದಾನೆ. ನಿಂದಾದಿಗಳು ದ್ವೇಷಮೂಲಕವೆಂಬುದು ಪ್ರಸಿದ್ಧವೇ ಆಗಿದೆ. ವಿಷ್ಣು ಹಾಗೂ ವೈಷ್ಣವರ ದ್ವೇಷದಿಂದ ಅಂಧಂತಮಸ್ಸು ಅನಿವಾರ್ಯವೆಂಬುದು ಈ ಪ್ರಸಂಗದಿಂದ ಸಿದ್ಧವಾಗುತ್ತದೆ.

**ನಿಂದಾಂ ಭಗವತಃ ಶೃಣ್ವನ್ ತತ್ಪರಸ್ಯ ಜನಸ್ಯ ವಾ ॥ ೧೧೪ ॥**

**ತತೋ ನಾಪೈತಿ ಯಃ ಸೋಽಪಿ ಯಾತ್ಯಧಃ ಸುಕೃತಾಚ್ಚ್ಯುತಃ ।**

ಭಗವಂತನ ಹಾಗೂ ಭಗವದ್ಭಕ್ತರ ನಿಂದೆಯನ್ನು ಕೇಳಿದಾಗ ಆ ಸ್ಥಳದಿಂದ ದೂರಕ್ಕೆ ಹೋಗದೆ ಇದ್ದರೆ, ಆ ಪುರುಷನೂ ಕೂಡ ಪುಣ್ಯದಿಂದ ಚ್ಯುತನಾಗಿ ಅಂಧಂತಮಸ್ಸನ್ನು ಹೊಂದುವನು. ಅಂದಮೇಲೆ ನಿಂದಕನಿಗೆ ಅಧಃಪತನವಾಗುತ್ತದೆ ಎನ್ನವುದು ಶತಸ್ಸಿದ್ಧವು.

**ಅವಜಾನಂತಿ ಮಾಂ ಮೂಢಾಃ ಮಾನುಷೀಂ ತನುಮಾಶ್ರಿತಂ ॥ ೧೧೫ ॥**

**ಪರಂ ಭಾವಮಜಾನಂತೋ ಮಮ ಭೂತಮಹೇಶ್ವರಂ ।**

**ಮೋಘಾಶಾ ಮೋಘಕರ್ಮಾಣೋ ಮೋಘಜ್ಞಾನಾ ವಿಚೇತಸಃ ॥ ೧೧೬ ॥**

**ರಾಕ್ಷಸೀಮಾಸುರೀಂ ಚೈವ ಪ್ರಕೃತಿಂ ಮೋಹಿನೀಂ ಶ್ರಿತಾಃ ।**

'ಅವಜಾನಂತಿ' ಯಿಂದ ಪ್ರಾರಂಭಿಸಿ 'ಅಧಮಾಂ ಗತಿಂ' ವರೆಗಿನ ಶ್ಲೋಕಗಳು ಶ್ರೀಭಗವದ್ಗೀತೆಯಲ್ಲಿನ ಶ್ರೀಕೃಷ್ಣನ ವಾಕ್ಯಗಳು. ಮನುಷ್ಯ ಸದೃಶವಾದ ದೇಹವನ್ನು ಆಶ್ರಯಿಸಿರುವ ಗುಣಪರಿಪೂರ್ಣನಾದ ಸರ್ವೋತ್ತಮನಾದ ನನ್ನನ್ನು ಅಜ್ಞಾನಿಗಳು ಯಥಾರ್ಥವಾಗಿ ತಿಳಿಯವುದಿಲ್ಲ. ವಿಪರೀತವಾಗಿ ಅಧಮನನ್ನಾಗಿ ತಿಳಿಯುತ್ತಾರೆ. ತಾಮಸ ಸ್ವಭಾವದ ಅವರ ಆಶೆಗಳು ವ್ಯರ್ಥವು, ಕರ್ಮಗಳು ವ್ಯರ್ಥವು ಹಾಗೂ ಅವರ ಜ್ಞಾನವು ನಿಷ್ಪ್ರಯೋಜಕವು. ಅವರಿಗೆ ಸುಖಲೇಶವೂ ಆಗುವುದಿಲ್ಲ.

ವಿಪರೀತವಾದ ಮನಸ್ಸುಳ್ಳ ಅವರು ತಮೋಯೋಗ್ಯರು. ಬುದ್ಧಿಭ್ರಂಶವನ್ನು ಹುಟ್ಟಿಸುವಂಥ ರಾಕ್ಷಸೀ ಹಾಗೂ ಆಸುರೀ ಸ್ವಭಾವವನ್ನು ಆಶ್ರಯಿಸಿದವರಾಗಿ ನನ್ನನ್ನು ತಿರಸ್ಕರಿಸುತ್ತಾರೆ.

**ಮಾಮಾತ್ಮಪರದೇಹೇಷು ಪ್ರದ್ವಿಷಂತೋಽಭ್ಯಸೂಯಕಾಃ ॥ ೧೧೭ ॥**

**ತಾನಹಂ ದ್ವಿಷತಃ ಕ್ರೂರಾನ್ ಸಂಸಾರೇಷು ನರಾಧಮಾನ್ ।**

**ಕ್ಷಿಪಾಮ್ಯಜಸ್ರಮಶುಭಾನಾಸುರೀಷ್ವೇವ ಯೋನಿಷು ॥ ೧೧೮ ॥**

ತನ್ನ ಹಾಗೂ ಪರರ ದೇಹಗಳಲ್ಲಿ ನಿಯಾಮಕನಾಗಿರತಕ್ಕ ನನ್ನಲ್ಲಿ ವಿಶೇಷವಾದ ದ್ವೇಷವನ್ನು ಮಾಡುವ ಹಾಗೂ ನಿರ್ದೋಷನೂ ಗುಣಪೂರ್ಣನೂ ಆದ ನನ್ನ ವಿಷಯದಲ್ಲಿ ವಿಪರೀತವಾಗಿ ಹೇಳುವ ನನ್ನ ದ್ವೇಷಿಗಳೂ, ಕ್ರೂರಿಗಳೂ, ಅಶುಭರೂ ಆದ ಮನುಷ್ಯಾಧಮರನ್ನು ಅಸುರ ಸಂಬಂಧಿಯಾದ ಯೋನಿಗಳಲ್ಲಿ ಸಂಸಾರಗಳಲ್ಲಿ ಮತ್ತೆ ಮತ್ತೆ ಬೀಳಿಸುತ್ತೇನೆ.

**ಆಸುರೀಂ ಯೋನಿಮಾಪನ್ನಾ ಮೂಢಾ ಜನ್ಮನಿ ಜನ್ಮನಿ ।**

**ಮಾಮಪ್ರಾಪ್ಯೈವ ಕೌಂತೇಯ ತತೋ ಯಾಂತ್ಯಧಮಾಂ ಗತಿಂ ॥ ೧೧೯ ॥**

ಹೇ ಅರ್ಜುನನೇ, ತಾಮಸಿಗಳಾದ ಆ ಮೂಢರು ಅನೇಕ ಜನ್ಮಗಳಲ್ಲಿ ಆಸುರೀ ಯೋನಿಯನ್ನು ಹೊಂದುವರು. ನನ್ನನ್ನು ಹೊಂದುವುದೇ ಇಲ್ಲ. ಕೊನೆಯಲ್ಲಿ ನಿತ್ಯನರಕರೂಪವಾದ ಅಧಮವಾದ ಗತಿಯನ್ನು ಹೊಂದುತ್ತಾರೆ.

**ಯೋ ದ್ವಿಷ್ಯಾದ್ವಿಭುದಶ್ರೇಷ್ಠಂ ದೇವಂ ನಾರಾಯಣಂ ಪ್ರಭುಂ ।**

**ಕಥಂ ಸ ನ ಭವೇದ್ದ್ವೇಷ್ಯ ಆಲೋಕಾಂತಸ್ಯ ಕಸ್ಯಚಿತ್ ॥ ೧೨೦ ॥**

**ಯೋದ್ವಿಷ್ಯಾದ್ವಿಬುಧಶ್ರೇಷ್ಠಂ ದೇವಂ ನಾರಾಯಣಂ ಪ್ರಭುಂ ।**

**ಮಜ್ಜಂತಿ ಪಿತರಸ್ತಸ್ಯ ನರಕೇ ಶಾಶ್ವತೀಃ ಸಮಾಃ ॥ ೧೨೧ ॥**

**ಇತ್ಯಾದಿ ವಾಕ್ಯಸಂದೋಹಾದ್ ದ್ವೇಷಿಣಸ್ತಮ ಏವ ತು ।**

ಯಾವಾತನು ದೇವಶ್ರೇಷ್ಠನೂ ಸರ್ವಸಮರ್ಥನೂ ಕ್ರೀಡಾದಿಗುಣವಿಶಿಷ್ಟನೂ ಆದ ನಾರಾಯಣನನ್ನು ದ್ವೇಷಿಸುತ್ತಾನೋ, ಆತನು ಚಂಡಾಲಪರ್ಯಂತವಾದ ಯಾರಿಗಾದರೂ ದ್ವೇಷಿಸಲಿಕ್ಕೆ ಅರ್ಹನು ಹೇಗೆ ಆಗಲಾರನು? ಅಂಥ ಹರಿದ್ವೇಷಿಯ

ಪಿತೃಗಳು ನರಕದಲ್ಲಿ ಅನೇಕ ಸಂವತ್ಸರಗಳ ಕಾಲ ಮುಳುಗಿ ಹೋಗುತ್ತಾರೆ. ಇದೇ ಮೊದಲಾದ ವಾಕ್ಯಗಳ ಸಮೂಹದಿಂದ ಹರಿ ಮತ್ತು ಹರಿಭಕ್ತರ ದ್ವೇಷಿಗಳಿಗೆ ಮತ್ತೆ ಎಂದಿಗೂ ಮೇಲೇಳಲಾರದ ತಮಸ್ಸೇ ಗತಿಯು ಎಂದು ನಿಶ್ಚಯವಾಗುತ್ತದೆ.

## ವಿದ್ಯಾಧಿಕರಣಮ್

### ಓಂ ವಿದ್ಯೈವ ತು ನಿರ್ಧಾರಣಾತ್ ಓಂ

ಈ ಅಧಿಕರಣವನ್ನು 'ಅನುಬಂಧಾದಿಭ್ಯಃ' ಎನ್ನುವ ೩ನೇ ಅಧಿಕರಣಕ್ಕಿಂತ ಮೊದಲಿಗೇ ವ್ಯಾಖ್ಯಾನ ಮಾಡಬೇಕಿತ್ತು. ಹಾಗಿದ್ದರೂ ಉಪಾಸಾನೆಯ ಸ್ವರೂಪವು ತಿಳಿದ ನಂತರವೇ ಅದರ ಸಾರ್ಥಕ್ಯವನ್ನು ಸಮರ್ಥನೆ ಮಾಡುವುದು ಸೂಕ್ತವಾದ ಕಾರಣ ಉಪಾಸನೆಯ ಸ್ವರೂಪವನ್ನು ತಿಳಿಸುವ ೩ನೇ ಅಧಿಕರಣದ ವ್ಯಾಖ್ಯಾನದ ನಂತರ 'ವಿದ್ಯೈವ ತು ನಿರ್ಧಾರಣಾತ್' ಎನ್ನುವ ೪ನೇ ಅಧಿಕರಣದ ವ್ಯಾಖ್ಯಾನ ಮಾಡುವುದು ಸುಸಂಗತವಾಗಿದೆ. ಭಗವದುಪಾಸನೆಯು ಕರ್ತವ್ಯವಲ್ಲ, ವೈಯರ್ಥ್ಯ ಬರುವುದರಿಂದ. ಸಾಕ್ಷಾತ್ಕಾರದಿಂದ ಮೋಕ್ಷಾಖ್ಯ ಫಲವಿರುವುದರಿಂದ ಅದಕ್ಕಾಗಿ ಭಗವದುಪಾಸನೆ ಎಂದೂ ಹೇಳಕೂಡದು. ಏಕೆಂದರೆ ಚಾರ್ವಾಕರ ಪ್ರಕಾರ ಮೋಕ್ಷವೇ ಇಲ್ಲವಾದ್ದರಿಂಧ ಸಾಕ್ಷಾತ್ಕಾರವೂ ನಿಷ್ಪ್ರಯೋಜಕವೆಂದು ಆಶಂಕಿಸಿದರೆ, ಮೋಕ್ಷವು ಇರುವುದೆಂದೂ, ಆ ಮೋಕ್ಷವು ಭಗವದ್ದರ್ಶನದಿಂದಲೇ ಸಾಧ್ಯವೆಂದೂ ಸಾಧಿಸಲಿಕ್ಕಾಗಿ ಈ ಅಧಿಕರಣವು ಪ್ರಸಕ್ತವಾಗಿದೆ. ಮೊದಲಿಗೆ ಚಾರ್ವಾಕ ಮತವನ್ನು ಅನುವಾದ ಮಾಡಿ ಆನಂತರ ಅದನ್ನು ನಿರಾಕರಿಸುತ್ತಾರೆ –

**ನೈವ ಮೋಕ್ಷ ಇತಿ ಪ್ರಾಹುರ್ಲೋಕಾಯತಮತೇ ಸ್ಥಿತಾಃ ॥ ೧೨೨ ॥**

ಚಾರ್ವಾಕ ಮತದಲ್ಲಿ ಶ್ರದ್ಧೆಯುಳ್ಳವರು ಮೋಕ್ಷವು ಇಲ್ಲವೇ ಇಲ್ಲ ಎಂದು ಹೇಳುತ್ತಾರೆ (ಸ್ವರೂಪದಲ್ಲಿಯೇ ಇಲ್ಲವೆಂದು ತಿಳಿಸಲು ಏವ ಶಬ್ದವು).

ಹಾಗಾದರೆ ಯಾವ ಪುರುಷಾರ್ಥವಿದೆ ಎಂದರೆ –

**ಭೋಗಃ ಶರೀರಪರ್ಯಂತಂ ಭಸ್ಮೀಭಾವಸ್ತತೋ ಭವೇತ್ ।**

ಸ್ರಕ್ ಚಂದನ ಮೊದಲಾದ ವಿಷಯಸುಖಾನುಭವ ರೂಪವಾದ ಭೋಗವಿದೆ. ಅದೇ ಪುರಷಾರ್ಥವು ಎಂದು ಹೇಳುತ್ತಾರೆ. ಶರೀರಪಾತವಾಗುವವರೆಗೆ ಮಾತ್ರ ಅನುಭವಸಿಲ್ಪಡುವ ಈ ಭೋಗವು ಐಹಿಕವು. ಸ್ವರ್ಗಾಪವರ್ಗಗಳಿಗೆ ಅಸ್ತಿತ್ವವಿಲ್ಲ. ಏಕೆಂದರೆ ಶರೀರಪತನಾನಂತರ ಶರೀರವು ಭಸ್ಮವಾಗುವುದು. ಶರೀರಪತನವಾದ ಮೇಲೆ ಆತ್ಮನಿಗೆ ಸ್ವರ್ಗಾಪವರ್ಗಗಳನ್ನು ಹೇಳಬೇಕು. ಶರೀರದಿಂದ ಪ್ರತ್ಯೇಕವಾದ ಆತ್ಮನಿಲ್ಲವಾದ್ದರಿಂದ ಶರೀರ ಭಸ್ಮವಾದ ಮೇಲೆ ಆತ್ಮನೂ ನಾಶನಾಗುತ್ತಾನೆ. ಅಂದಮೇಲೆ ಸ್ವರ್ಗಾದಿಗಳು ಯಾರಿಗಾಗಿ ಇದ್ದಾವು? ಹೀಗೆ ಚಾರ್ವಾಕ ಮತವು. ಅದನ್ನು 'ತತ್ಕೇನ' ಇತ್ಯಾದಿ ವಚನದಿಂದ ದೂಷಿಸುತ್ತಾರೆ –

**ಇತಿ ತರ್ಕೇನ ಮಾನೇನ ದೃಷ್ಟಂ ಪ್ರತ್ಯಕ್ಷವಾದಿನಾ ॥ ೧೨೩ ॥**

**ನ ಹಿ ಪ್ರತ್ಯಕ್ಷಮಾನೇನ ಮೋಕ್ಷಾಭಾವೋಽವಸೀಯತೇ ।**

ಹೀಗೆ ಹೇಳಿದರೆ, ಮೋಕ್ಷವಿಲ್ಲವೆಂದು ಯಾವ ಪ್ರಮಾಣದಿಂದ ತಿಳಿದು ಬರುವುದು? ಪ್ರತ್ಯಕ್ಷದಿಂದಲೋ ಅಥವಾ ಬೇರೆ ಪ್ರಮಾಣದಿಂದಲೋ? ಎಂದು ಪ್ರತ್ಯಕ್ಷವಾದಿಯಾದ ಚಾರ್ವಾಕನನ್ನು ಪ್ರಶ್ನಿಸುತ್ತಾರೆ. ಚಾರ್ವಾಕನು ಪ್ರಮಾಣವೆಂದು ಅಂಗೀಕರಿಸುವ ಪ್ರತ್ಯಕ್ಷದಿಂದ ಮೋಕ್ಷಾಭಾವವು ನಿಶ್ಚಯವಾಗದು. ಪ್ರತ್ಯಕ್ಷದಿಂದ ಬೇರೆಯಾದ ಅನುಮಾನಾದಿ ಪ್ರಮಾಣವನ್ನು ಅವನು ಒಪ್ಪುವುದಿಲ್ಲ.

ಹಾಗಾದರೆ ಪ್ರಮಾಣವಿಲ್ಲವಾದ್ದರಿಂದ ಮೋಕ್ಷಾಭಾವವು ನಿಶ್ಚಯವಾಗುವುದು ಬೇಡ. ಮೋಕ್ಷವಿದೆ ಎನ್ನುವ ನಿಶ್ಚಯವೂ ಸಾಧ್ಯವಿಲ್ಲ ಎಂದರೆ –

**ಘಟತೇ ಮುಕ್ತಿದೃಷ್ಟಿಸ್ತು ಪುರುಷೇಣ ಮಹೀಯಸಾ ॥ ೧೨೪ ॥**

ಪ್ರಾಕೃತರ ಪ್ರತ್ಯಕ್ಷವು ಮೋಕ್ಷವನ್ನು ವಿಷಯೀಕರಿಸಲು ಅಶಕ್ಯವಾಗಿದ್ದರೂ, ಮಹಾನುಭಾವರಾದ ಪುರುಷರ ಪ್ರತ್ಯಕ್ಷದಿಂದ ಮೋಕ್ಷವಿದೆಯೆಂಬ ನಿಶ್ಚಯವು ಯುಕ್ತವೇ ಆಗುವುದು. ಮಹಾತ್ಮರಿಗೆ ಮೋಕ್ಷದ ಪ್ರತ್ಯಕ್ಷವಿದೆ ಎನ್ನುವುದು ಪರರಿಗೆ ಅವರ ವಾಕ್ಯದಿಂದಲೇ ತಿಳಿಯುವುದು.

ಹಾಗಾದರೆ ನನಗೂ ಹೇಳಲಿಕ್ಕೆ ಬರುವುದು. ಪರಪುರುಷರಲ್ಲಿರುವ ಮೋಕ್ಷದ ಅಭಾವವು ಅಸ್ಮದಾದಿಗಳಿಗೆ ಪ್ರತ್ಯಕ್ಷವಿಷಯವಾಗದಿದ್ದರೂ, ಮಹಾತ್ಮರಾದ ನಮ್ಮ ಆಚಾರ್ಯರಿಗೆ ಪ್ರತ್ಯಕ್ಷ ಸಿದ್ಧವೇ ಆಗುವುದು. ಅದಾದರೂ ಅವರ ವಾಕ್ಯದಿಂದಲೇ ನಮಗೆ ತಿಳಿಯುವುದು ಎಂದರೆ –

**ನೇತಿ ವಕ್ತುರ್ಮಹತ್ತ್ವಂ ತು ಕಥಂಚನ ನ ವಿದ್ಯತೇ ।**

**ಸಾಧಯನ್ ಸರ್ವಸಾಮಾನ್ಯಂ ಕಥಮೇವ ವಿಶೇಷವಾನ್ ॥ ೧೨೫ ॥**

ಯಾವ ಪುರುಷನಲ್ಲಿಯೂ ವರ್ತಮಾನದಲ್ಲಾಗಲೀ, ಭವಿಷ್ಯದಲ್ಲಾಗಲೀ ಮೋಕ್ಷವು ಇಲ್ಲವೇ ಇಲ್ಲ ಎಂದು ನಾನು ಪ್ರತ್ಯಕ್ಷದಿಂದ ಕಾಣಲು ಸಮರ್ಥನೆಂದು ಹೇಳುವ ಪುರುಷನಿಗೆ ಯಾವಪ್ರಕಾರದಿಂದಲೂ ಮಹತ್ವವೇ ಇರುವುದಿಲ್ಲ. ಎಲ್ಲ ಪುರುಷರಿಗೂ ಸಮಾನ ಧರ್ಮವನ್ನು ಪ್ರತಿಪಾದಿಸುವ ಚಾರ್ವಾಕಾಚಾರ್ಯನು ಹೇಗೆ ತಾನೇ ಇತರರಿಂದ ವಿಶೇಷವಾದ ಮಹಿಮೆಯುಳ್ಳವನಾಗುತ್ತಾನೆ? ಅಂದರೆ ಇತರರಿಗೆ ಇಲ್ಲದ ಮೋಕ್ಷಾಭಾವದ ಪ್ರತ್ಯಕ್ಷವು ಅವನಿಗೂ ಇರುವುದು ಸಾಧ್ಯವಿಲ್ಲ ಎಂದು ಭಾವ.

ಹಾಗಾದರೆ ಪ್ರತ್ಯಕ್ಷದಿಂದ ಮೋಕ್ಷವನ್ನು ಕಾಣುವ ಮಹಾಪುರುಷನೂ ಇಲ್ಲವೇ ಇಲ್ಲ, ಪ್ರಮಾಣವಿಲ್ಲದಿರುವುದರಿಂದ ಎಂದು ನಾನೂ ಹೇಳುತ್ತೇನೆ. ಆದ್ದರಿಂದ ಮೋಕ್ಷವು ಅನಿಶ್ಚಿತವೇ ಎಂದರೆ –

**ದೃಶ್ಯಂತೇ ಪುರುಷಾ ಲೋಕೇ ಪರಾಪರವಿದೋಽಪಿ ಚ ।**

**ಅಪರೋಕ್ಷದೃಶೋ ಯೋಗನಿಷ್ಠಾಶ್ಚಾಮಲಚಕ್ಷುಷಃ ॥ ೧೨೬ ॥**

**ಪ್ರತ್ಯಕ್ಷಂ ದೇವತಾಂ ದೃಷ್ಟ್ವಾ ತತ್ಪ್ರಸಾದಾಪ್ತಭೂತಯಃ ।**

**ಜ್ಞಾನವಿಜ್ಞಾನಪಾರಜ್ಞಾ ನಿಷಿಧ್ಯಂತೇ ಕಥಂ ನೃಭಿಃ ॥ ೧೨೭ ॥**

ವಿಶೇಷವಾದ ಪ್ರತ್ಯಕ್ಷ ದೃಷ್ಟಿಯುಳ್ಳ ಮಹಾಮಹಿಮರಾದ ವಸಿಷ್ಠಾದಿ ಅನೇಕ ಮಹಾಪುರುಷರು (ಕೇವಲ ಒಬ್ಬನಲ್ಲ) ಈ ಭೂಮಂಡಲದಲ್ಲಿ ಕಾಣಲ್ಪಡುತ್ತಾರೆ. ಅವರು ಹೇಗಿರುತ್ತಾರೆಂದರೆ, ಸಾಮಾನ್ಯಜ್ಞಾನ–ವಿಶೇಷಜ್ಞಾನ ಇವುಗಳ ಪಾರವನ್ನೂ, ಪರ–ಅಪರ ತತ್ವಗಳನ್ನೂ ತಿಳಿದಿರುವ ಅವರು ಅಪರೋಕ್ಷಜ್ಞಾನಿಗಳು. ಯೋಗದಲ್ಲಿ ವಿಶೇಷ ನಿಷ್ಠೆಯಿಂದ ಪಡೆದ ನಿರ್ಮಲವಾದ ಚಕ್ಷಸ್ಸುಳ್ಳವರು. ಅಂಥಹ ದಿವ್ಯವಾದ ಚಕ್ಷಸ್ಸಿನಿಂದ ಪರದೇವತೆಯನ್ನು ಪ್ರತ್ಯಕ್ಷದಿಂದ ಕಂಡು, ಆ ದೇವತೆಯ ಪ್ರಸಾದದಿಂದ ತೇಜಸ್ಸು ಮೊದಲಾದ ಐಶ್ವರ್ಯವನ್ನು ಹೊಂದಿರುತ್ತಾರೆ. ಅಂಥಹ ಮಹಾಪುರುಷರ ಪ್ರತ್ಯಕ್ಷದಿಂದ ಮೋಕ್ಷವಿದೆ ಎನ್ನುವುದು ನಿಶ್ಚಯವಾಗುತ್ತದೆ. ನಮ್ಮಂಥಹ ಸಾಮಾನ್ಯರಿಗೆ ಕಾಣದಿರುವುದರಿಂದ ಅವರಿಲ್ಲವೆಂದು ಹೇಳಕೂಡದು. ಅಲ್ಪವಾದ ಜ್ಞಾನ ಹಾಗೂ ಪರಿಮಿತವಾದ ದೃಷ್ಟಿಯುಳ್ಳ ಸಾಮಾನ್ಯ ಜನರಿಂದ ಅವರು ಹೇಗೆ ತಾನೇ ನಿಷೇಧಿಸಲ್ಪಡುತ್ತಾರೆ? ಹಾಗೆ ಕಣ್ಣಿಗೆ ಬೀಳಲು ಅವರೇನು ಸಾಮಾನ್ಯ ಜನರಂತೆ ಅಂಗಡಿ ಬೀದಿಗಳಲ್ಲಿ ಅಡ್ಡಾಡುವುದಿಲ್ಲವಷ್ಟೆ.

ಪುರುಷಸ್ವರೂಪಮಾತ್ರದಲ್ಲಿ ವಿವಾದವೇ ಇಲ್ಲ. ಹಾಗಿದ್ದರೂ ಅವರಿಗೆ ಅಂಥಹ ಮಹಿಮಾತಿಶಯವು ಯಾವುದರಿಂದ ಎಂದರೆ –

**ದೃಶ್ಯತೇ ಚಾತಿಮಾಹಾತ್ಮ್ಯಂ ತೇಷಾಮತಿಮಹೌಜಸಾಂ ।**

**ಯದಿ ತೇಽಪಿ ನಿಷಿಧ್ಯಂತೇ ಕಿಂ ನೋಕ್ತಿಸ್ತೇ ನಿಷಿಧ್ಯತೇ ॥ ೧೨೮ ॥**

ಅವರು ಕೇವಲ ಪುರುಷರಲ್ಲ. ಮತ್ತೆ ಅತ್ಯಂತ ಮಹತ್ತಾದ ಸಾಮರ್ಥ್ಯವುಳ್ಳ ಅಂಥಹ ಮಹಾತ್ಮರ ಮಹಾಮಹಿಮೆಯೂ ಕಾಣಲ್ಪಡುತ್ತದೆ. ವಿಂಧ್ಯಾದ್ರಿಗಳ ವೃದ್ಧಿ ಸ್ತಂಭನ, ಸಮುದ್ರಪಾನ ಇತ್ಯಾದಿ ಮಹಾಸಾಮರ್ಥ್ಯವು ಅಗಸ್ತ್ಯಾದಿಗಳಲ್ಲಿ ಕಂಡಿದೆ. ಅಣಿಮಾದಿ ಮಹೈಶ್ವರ್ಯಾದಿಗಳಿಲ್ಲದೆ ಅಂಥಹ ಮಹಾಕಾರ್ಯಗಳು ಅವರಿಗೆ ಸಿದ್ಧಿಸಲಾರವು. ಮಹಾಯೋಗಸಿದ್ಧಿಯನ್ನು ಹೊಂದಿರುವ ಅವರು ವಂಚನೆಯನ್ನು ಯಾತಕ್ಕಾಗಿ ಮಾಡಬೇಕು. ಅದರಿಂದ ಅವರಿಗೆ ಪ್ರಯೋಜನವಾದರೂ ಏನಿದೆ? ಆದಕಾರಣ ಅಂಥವರ ಪ್ರತ್ಯಕ್ಷಕ್ಕೆ ವಿಷಯವಾದ ಮೋಕ್ಷವನ್ನು ಅಲ್ಲಗಳೆಯಲು ಸಾಧ್ಯವಿಲ್ಲ. ಹಾಗಿದ್ದರೂ ಅವರ ವಾಕ್ಯವನ್ನೂ ಕೂಡ ವಂಚನೆ ಎಂಬರ್ಥದಲ್ಲಿ ನಿಷೇಧಿಸುವುದಾದರೆ, ನೀನು ಅಂಗೀಕರಿಸುವ ಚಾರ್ವಾಕಾಚಾರ್ಯನ ವಾಕ್ಯವೂ ಅದೇ ಕಾರಣದಿಂದ ಏಕೆ ನಿಷೇಧಿಸಲ್ಪಡುವುದಿಲ್ಲ?

ಚಾರ್ವಾಕಾಚಾರ್ಯನ ಉಕ್ತಿಗೆ ಪ್ರತ್ಯಕ್ಷಸಂವಾದದಿಂದ ಪ್ರಾಮಾಣ್ಯ ನಿಶ್ಚಯವು ಆಗುವುದು. ಆದ್ದರಿಂದ ಅದನ್ನು ನಿರಾಕರಿಸುವಂತಿಲ್ಲ ಎಂದರೆ, ಪ್ರಕೃತ ಯೋಗಿಗಳ ವಾಕ್ಯದಲ್ಲಿಯೂ ಅದು ಸಮಾನವೇ ಎನ್ನುತ್ತಾರೆ –

**ಯದುಕ್ತವಾಕ್ಯಪ್ರಾಮಾಣ್ಯಂ ಪ್ರತ್ಯಕ್ಷೇಣೋಪಲಭ್ಯತೇ ।**

**ವರಾದಯೋಽಪಿ ತದ್ದತ್ತಾಃ ಸದಾ ಸತ್ಯಾ ಭವಂತಿ ಹಿ ।। ೧೨೯ ।।**

ಯೋಗಿಗಳಿಂದ ಉಕ್ತವಾದ ವಾಕ್ಯಗಳಿಗೆ ಪ್ರತ್ಯಕ್ಷಸಂವಾದದಿಂದ ಪ್ರಾಮಾಣ್ಯವು ನಿಶ್ಚಯವಾಗುವುದು. ಹಾಗಿದ್ದರೂ ನಾವು ಹೇಳಿದ ಯೋಗಿಗಳ ವಾಕ್ಯವು ನಿನ್ನಿಂದ ನಿಷೇಧಿಸಲ್ಪಡುವುದಾದರೆ, ಹಾಗೆಯೇ ನಿನ್ನ ಚಾರ್ವಾಕಾಚಾರ್ಯನ ವಾಕ್ಯವೂ ಏಕೆ ನಿಷೇಧಿಸಲ್ಪಡುವುದಿಲ್ಲ? ಎನ್ನುವ ಪ್ರಶ್ನೆಯು ಇಲ್ಲಿ ಸಂಭಾವಿತವು. ಆ ಯೋಗಿಗಳಿಂದ ಕೊಡಲ್ಪಟ್ಟ ವರಗಳೂ ಶಾಪಗಳೂ ಕೂಡ ಯಾವಾಗಲೂ ಸತ್ಯವೇ ಆಗುವುದು ಕಂಡಿದೆ. ಯಾವಾಗಲೂ ನಿಯಮದಿಂದ ಯಥಾರ್ಥವಾದುದನ್ನೇ ನುಡಿಯುವ ಯೋಗಿಗಳ ವಾಕ್ಯವನ್ನೂ ನಿಷೇಧಿಸುವುದಾದರೆ ನಿಮ್ಮ ಆಚಾರ್ಯನ ವಾಕ್ಯವೂ ನಿಷೇಧಕ್ಕೆ ಅರ್ಹವೇ ಆಗುವುದು ಎಂದು ತಾತ್ಪರ್ಯ.

ಹೀಗೆ ಮೋಕ್ಷಾಭಾವವನ್ನು ಹೇಳುವ ಚಾರ್ವಾಕಮತದ ಅಪ್ರಾಮಾಣ್ಯವನ್ನು ಉಪಪಾದಿಸಲಾಯಿತು. ಈಗ ಬೇರೆ ಹೇತುವಿನಿಂದಲೂ ಅದಕ್ಕೆ ಅಪ್ರಮಾಣ್ಯವನ್ನು ಉಪಪಾದಿಸುತ್ತಾರೆ –

**ಅಪ್ರಾಮಾಣ್ಯಂ ತದುಕ್ತೇಶ್ಚ ವೃಥಾವಾಚಾವಸೀಯತೇ ।**

**ನ ಹಿ ಪ್ರಯೋಜನಂ ಕಿಂಚಿತ್ಪರಲೋಕನಿವಾರಣಾತ್ ।। ೧೩೦ ।।**

**ವೃಥಾವಾಚಂ ವೃಥಾ ಹನ್ಯಾದ್ಯದಿ ತಸ್ಯ ಕಿಮುತ್ತರಂ ।**

ಚಾರ್ವಾಕನ ಉಕ್ತಿಗೆ ಪ್ರಯೋಜನವಿಲ್ಲದ ಪ್ರಯುಕ್ತ ಅಪ್ರಾಮಾಣ್ಯವು ನಿಶ್ಚಿತವಾಗುತ್ತದೆ. ಮೋಕ್ಷಾದಿ ಪರಲೋಕವನ್ನು ನಿರಾಕರಿಸುವುದರಿಂದ ಯಾವ ಪ್ರಯೋಜನವೂ ಇಲ್ಲವಷ್ಟೆ. ಅದೃಷ್ಟವಾದ ಧರ್ಮಾಧರ್ಮಗಳಾಗಲೀ, ಸ್ವರ್ಗ ನರಕಾದಿಗಳಾಗಲೀ ಇಲ್ಲವೆಂದು ವೃಥಾ ಉಪದೇಶ ಮಾಡುವ ಗುರುವನ್ನಾಗಲೀ ಅವನ ಶಿಷ್ಯನನ್ನಾಗಲೀ ಯಾವನಾದರೂ ವೃಥಾ ಸಂಹರಿಸಿದರೆ, ಅವನನ್ನು ಹಾಗೇಕೆ ಮಾಡಿದೆಯೆಂದು ಕೇಳುವ ಹಾಗಿಲ್ಲ. ಹಾಗೆ ಕೇಳಿದರೆ ಅವನು ನೀಡುವ ಉತ್ತರವಾದರೂ ಏನಿರುವುದು? ಅದಕ್ಕೆ ಏನೂ ಉತ್ತರವಿಲ್ಲವೆಂದು ತಾತ್ಪರ್ಯ.

ಹೀಗೆ ಚಾರ್ವಾಕನ ಉಕ್ತಿಗೆ ವೃಥಾತ್ವವೂ ಅನರ್ಥಕಾರಣತ್ವವೂ ಇರಲಿ. ಹಾಗಿದ್ದರೂ ಅಪ್ರಮಾಣ್ಯವು ಯಾವುದರಿಂದ ಎಂದರೆ –

**ಸ್ವಜೀವನವಿರೋಧಾಯ ವದನ್ ಕಿಂ ನಾಮ ಬುದ್ಧಿಮಾನ್ ।। ೧೩೧ ।।**

ತನ್ನ ಹಾಗೂ ತನ್ನ ಶಿಷ್ಯರ ಜೀವನದ ವಿರೋಧಕ್ಕಾಗಿ ವ್ಯರ್ಥವೂ ಅನರ್ಥಕ್ಕೆ ಕಾರಣವೂ ಆದ ಮಾತನ್ನು ಹೇಳುವವನು ಬುದ್ಧಿವಂತನೆನಿಸುವನೇ? ಅಂದರೆ ಅವನು ವಿವೇಕಶೂನ್ಯನು ಎಂದು ತಾತ್ಪರ್ಯ.

ಮೇಲೆ ಹೇಳಿದ ವಿಷಯವನ್ನೇ ಬುದ್ಧ್ಯಾರೋಹಕ್ಕಾಗಿ ಮತ್ತೆ ಸಂಕ್ಷಿಪ್ತವಾಗಿ ಹೇಳುತ್ತಾರೆ –

**ಪ್ರಾಮಾಣ್ಯೇ ಸಂಶಯಃ ಕಿಂ ಸ್ಯಾತ್ತಯೋಃ ಪುರುಷಯೋರಪಿ ।**

**ಸ್ವಜೀವನವಿರುದ್ಧೋಕ್ತಿರಜ್ಞೋ ದೃಷ್ಟಸ್ಯ ಚಾಪಿ ಯಃ ॥ ೧೩೨ ॥**

**ಯಶ್ಚಾಂತೀದ್ರಿಯದೇವೋಕ್ತಿಶ್ರೋತಾ ದೃಷ್ಟಪರಾವರಃ ।**

**ಅತೀತಾನಾಗತಂ ಸರ್ವಂ ಲೋಕಾನುಭವಮಾಪಯನ್ ॥ ೧೩೩ ॥**

ಚಾರ್ವಾಕನು ತನ್ನ ಹಾಗೂ ಶಿಷ್ಯರ ಜೀವನಕ್ಕೆ ವಿರುದ್ಧವಾಗುವ ರೀತಿಯಲ್ಲಿ ಉಪದೇಶ ಮಾಡುವನು ಹಾಗೂ ಪ್ರತ್ಯಕ್ಷ ವಿಷಯದಲ್ಲಿಯೂ ಅಜ್ಞನಾಗಿರುವನು. ಆದರೆ ಯೋಗಿಯು ಇಂದ್ರಿಯಕ್ಕೆ ಅಗೋಚರವಾದ ದೇವತೆಗಳ ವಚನಗಳನ್ನು ಕೇಳುವನು (ಅಂದರೆ ಅವರ ಮಾತಿನಲ್ಲಿ ವಿಶ್ವಾಸವನ್ನು ಹೊಂದಿರುವನು), ಪರಾಪರ ತತ್ತ್ವಗಳನ್ನು ಬಲ್ಲವನು, ಅತೀತಾನಾಗತವಾದ ಎಲ್ಲ ವಸ್ತುಗಳ ವಿಷಯದಲ್ಲಿ ಪ್ರತ್ಯಕ್ಷ ಸಂವಾದದಿಂದ ಜನರಲ್ಲಿ ವಿಶ್ವಾಸವನ್ನು ಹೊಂದಿಸಿ ಕೊಡುವನು. ಹೀಗಿರುವಾಗ ಯೋಗಿ ಚಾರ್ವಾಕರುಗಳಲ್ಲಿ ಯಾರ ವಚನವು ಪ್ರಮಾಣ ಎನ್ನುವ ವಿಷಯದಲ್ಲಿ ಸಂಶಯವು ಬರುವುದೋ ಏನು?

ಹೀಗೆ ಚಾರ್ವಾಕಾಚಾರ್ಯನ ಪ್ರತ್ಯಕ್ಷಕ್ಕೆ ಅಪ್ರಾಮಾಣ್ಯವೂ, ಯೋಗಿಪ್ರತ್ಯಕ್ಷಕ್ಕೆ ಪ್ರಾಮಾಣ್ಯವೂ ಹೇಳಲ್ಪಟ್ಟಿತು. ಯೋಗಿಯ ವಚನದಿಂದ ತಿಳಿಯಲ್ಪಟ್ಟ ಯೋಗಿಯ ಪ್ರತ್ಯಕ್ಷದಿಂದ ಮೋಕ್ಷವು ಸಿದ್ಧಿಸುವುದೆಂದೂ ಉಪಪಾದಿಸಲಾಯಿತು. ಈಗ ವೇದದಿಂದಲೂ ಅದನ್ನು ಸಾಧಿಸುವ ಇಚ್ಛೆಯಿಂದ ವೇದಪ್ರಾಮಾಣ್ಯದಲ್ಲಿ ಸಂಶಯ ವ್ಯಕ್ತಪಡಿಸುವ ಪರಕೀಯನು ಮಾಡಬಹುದಾದ ವಿಕಲ್ಪಗಳನ್ನು ಒಂದೊಂದಾಗಿ ನಿರಾಕರಿಸುತ್ತಾರೆ.

ಸಮಗ್ರವಾದ ವೇದಕ್ಕೆ ಸಂವಾದವು ಇಲ್ಲದಿರುವ ನಿಮಿತ್ತದಿಂದ ವೇದಕ್ಕೆ ಅಪ್ರಾಮಾಣ್ಯವು ಎನ್ನುವ ಮೊದಲನೆಯ ವಿಕಲ್ಪವನ್ನು 'ಅತಃ' ಎನ್ನುವ ವಚನದಿಂದ ನಿರಾಕರಿಸುತ್ತಾರೆ –

**ಅತಃ ಪ್ರತ್ಯಕ್ಷಗಮ್ಯತ್ವಾದ್ವೇದಮಾತ್ರಸ್ಯ ಚ ಸ್ಫುಟಮ್ ।**

ವೈದಿಕ ಕರ್ಮಾನುಷ್ಠಾನವುಳ್ಳವರಿಗೆ ಫಲಸಿದ್ಧಿಯು ಕಂಡಿರುವುದರಿಂದಲೂ, ಪ್ರತ್ಯಕ್ಷಸಂವಾದದಿಂದ ಸಿದ್ಧವಾಗಿರುವುದರಿಂದಲೂ, ವೇದಪ್ರಾಮಾಣ್ಯವು ಸ್ಪಷ್ಟವಾಗಿ ಸಿದ್ಧವಾಗುತ್ತದೆ. ವೇದಪ್ರಾಮಾಣ್ಯವು ಸಿದ್ಧಿಸುವುದರಿಂದ ವೇದೋಕ್ತ ಮೋಕ್ಷರೂಪ

ಫಲವೂ ಸಿದ್ಧವಾಗುವುದೆಂದು ಭಾವ.

ವೇದದ ಭಾಗವಿಶೇಷಕ್ಕೆ ಸಂವಾದವಿಲ್ಲವೆನ್ನುವ ಎರಡನೆಯ ವಿಕಲ್ಪವನ್ನು 'ಯದಿ' ಎನ್ನುವ ವಚನದಿಂದ ದೂಷಿಸುತ್ತಾರೆ –

**ಯದ್ಯಾಗಮಸ್ಯ ನೋ ಮಾತ್ವಮಕ್ಷಜಸ್ಯ ತಥಾ ಭವೇತ್ ॥ ೧೩೪ ॥**

ವೇದದ ಭಾಗವಿಶೇಷಕ್ಕೆ ಸಂವಾದವಿಲ್ಲದಿರುವ ಪ್ರಯುಕ್ತ ಸಮಗ್ರವಾದ ವೇದಕ್ಕೆ ಅಪ್ರಾಮಾಣ್ಯವು ಹೇಳಲ್ಪಡುವುದಾದರೆ, ಪ್ರತ್ಯಕ್ಷಮಾತ್ರಕ್ಕೆ ಹಾಗೆಯೇ ಅಪ್ರಾಮಾಣ್ಯವು ಆಗುವುದು. ಹೇಗೆಂದರೆ ಸಂವಾದವಿಲ್ಲದಿರುವುದರಿಂದ ನಮ್ಮ ಸುಖಾದಿ ವಿಷಯಕವಾದ ಪ್ರತ್ಯಕ್ಷಕ್ಕೂ ಅಪ್ರಮಾಣ್ಯವು ಬರಬೇಕಾಗುವುದು.

ಪ್ರತ್ಯಕ್ಷವು ಸ್ವತ ಏವ ಪ್ರಮಾಣವು. ಆದ್ದರಿಂದ ಅಲ್ಲಿ ಸಂವಾದದಿಂದ ಏನು ಪ್ರಯೋಜನವು ಎಂದರೆ –

**ಯದ್ಯಕ್ಷಜಸ್ಯ ಮಾತ್ವಂ ಸ್ಯಾದಾಗಮಸ್ಯ ಕಥಂ ನ ತತ್ ।**

ಸಂವಾದವಿಲ್ಲದ ಪ್ರತ್ಯಕ್ಷಕ್ಕೆ ಸ್ವತ ಏವ ಪ್ರಾಮಾಣ್ಯವು ಇರುವುದಾದರೆ ಅದೇ ರೀತಿ ಆಗಮಕ್ಕೆ ಸ್ವತ ಏವ ಪ್ರಾಮಾಣ್ಯವು ಹೇಗೆ ಆಗುವುದಿಲ್ಲ?

ಉನ್ಮತ್ತನ ವಾಕ್ಯದಂತೆ ವಾಕ್ಯತ್ವವಿದ್ದ ಪ್ರಯುಕ್ತ ವೇದವು ಅಪ್ರಮಾಣವೆಂಬ ಮೂರನೆಯ ವಿಕಲ್ಪವನ್ನು ದೂಷಿಸುತ್ತಾರೆ –

**ಲೋಕವಾಕ್ಯಾದ್ವಿಶೇಷಶ್ಚಾವ್ಯಭಿಚಾರೇಣ ಸಿಧ್ಯತಿ ॥ ೧೩೫ ॥**

ಉನ್ಮತ್ತಾದಿಗಳ ವಾಕ್ಯಕ್ಕೆ ಬಾಧವು ಕಂಡುಬರುವುದು. ಆದರೆ ವೇದವಾಕ್ಯವು ಉನ್ಮತ್ತನ ವಾಕ್ಯದಂತಲ್ಲ. ಅದಕ್ಕೆ ಬಾಧರಾಹಿತ್ಯವೆಂಬ ವಿಶೇಷವಿದೆ. ಆದಪ್ರಯುಕ್ತ ವೇದಕ್ಕೆ ಪ್ರಮಾಣ್ಯವು ಸಿದ್ಧಿಸುವುದು. ವೈದಿಕವಾದ ಅರ್ಥವು ಪ್ರತ್ಯಕ್ಷಸಿದ್ಧವಲ್ಲ. ಪ್ರತ್ಯಕ್ಷದಿಂದ ವೇದಕ್ಕೆ ಬಾಧಿತತ್ವವು ಸಿದ್ಧಿಸುವುದಿಲ್ಲ. ಬಾಧಿತವಾದ್ದರಿಂದ ವೇದಕ್ಕೆ ಅಪ್ರಮಾಣ್ಯವು ಎನ್ನುವ ನಾಲ್ಕನೆಯ ವಿಕಲ್ಪವೂ ಇದರಿಂದಲೇ ನಿರಸ್ತವಾಯಿತು. ವೇದಕ್ಕೆ ಫಲಸಂವಾದವಿದೆಯೆಂದು ಈಗಾಗಲೇ ಉಪಪಾದಿಸಲಾಗಿದೆ. ಆದ್ದರಿಂದ ವೇದಪ್ರಾಮಾಣ್ಯ ಸಿದ್ಧಿಗೆ ಯಾವ ಬಾಧಕವೂ ಇಲ್ಲ.

ಹೀಗೆ ಚಾರ್ವಾಕ ಮತವನ್ನು ನಿರಾಕರಿಸಲಾಯಿತು. ಈಗ ಜೈನರು ಹೇಳುವ ಮೋಕ್ಷಸಾಧನವನ್ನು ಮೊದಲು 'ಅಸ್ತಿ' ಇತ್ಯಾದಿ ವಚನದಿಂದ ಅನುವಾದ ಮಾಡಿ, ಅನಂತರ 'ಕಥಂ' ಇತ್ಯಾದಿ ದೂಷಣ ಮಾಡುತ್ತಾರೆ –

**ಅಸ್ತಿ ಮೋಕ್ಷೋಽಪಿ ಧರ್ಮೇಣ ಯಥಾರ್ಥಜ್ಞಾನತೋಽಪಿ ಚ ।**

**ಪ್ರಾಮಾಣ್ಯಮನುಮಾಯಾಶ್ಚ ಜಿನಸ್ಯಾಪ್ತತ್ವಸಾಧನೇ ॥ ೧೩೬ ॥**

**ತದ್ವಾಕ್ಯಾದ್ಧರ್ಮಸಜ್ಜ್ಞಾನವಿಜ್ಞಪ್ತಿರ್ಭವತೀತಿ ಚ ।**

ಮೋಕ್ಷವೂ ಇದೆ. ಆ ಮೋಕ್ಷವು ಧರ್ಮದಿಂದಲೂ ಯಥಾರ್ಥಜ್ಞಾನ ದಿಂದಲೂ ಲಭಿಸುವುದು. ಹೀಗೆ ಮೋಕ್ಷವನ್ನೂ ಮೋಕ್ಷಸಾಧನವನ್ನೂ ಜೈನರು ಅಂಗೀಕರಿಸುತ್ತಾರೆ. ಹಾಗಾದರೆ ವಿವಾದವಾದರೂ ಯಾವ ವಿಷಯದಲ್ಲಿ ಎಂದು ಕೇಳಿದರೆ ಅದನ್ನು ತೋರಿಸುತ್ತಾರೆ. ಜೈನರ ಪ್ರಕಾರ ಯಥಾರ್ಥ ಜ್ಞಾನ, ಸಮ್ಯಕ್ ಚಾರಿತ್ರ್ಯ (ಧರ್ಮ) ಇವುಗಳ ಸಮುಚ್ಚಯದಿಂದ ಸಾಧ್ಯವಾದುದು ಮೋಕ್ಷವು. ಜಿನನಿಗೆ ಆಪ್ತತ್ವವನ್ನು ಸಾಧಿಸುವ ವಿಷಯದಲ್ಲಿ ಜಿನದರ್ಶಿಗಳ ವಾಕ್ಯವು ಪ್ರಮಾಣ. ಜಿನನ ವಾಕ್ಯದಿಂದ ಸರಿಯಾದ ಧರ್ಮಜ್ಞಾನವೂ, ತತ್ವಜ್ಞಾನವೂ ಆಗುವುದೆಂದು ಜೈನರು ಹೇಳುತ್ತಾರೆ. ಅಂದರೆ ಜಿನನ ವಾಕ್ಯಕ್ಕೆ 'ಜಿನಃ ಆಪ್ತಃ ಅಸ್ಖಲಿತವಾಕ್ಯತ್ವಾತ್' ಇತ್ಯಾದಿ ಅನುಮಾನದಿಂದ ಆಪ್ತತ್ವ ನಿಶ್ಚಯವು. ಹೀಗೆ ಆಪ್ತತ್ವವೆಂದು ಭಾವಿಸಲ್ಪಟ್ಟ ವಾಕ್ಯದಿಂದ ಮೋಕ್ಷಸಾಧನದ ಸಿದ್ಧಿಯು. ಸ್ವತಃ ಪ್ರಮಾಣವಾದ ವೇದದಿಂದ ಅಲ್ಲ ಎಂದು ಅಭಿಪ್ರಾಯ.

ಧರ್ಮಜ್ಞಾನಗಳ ಸ್ವರೂಪದಲ್ಲಿಯೂ ವಿಪ್ರತಿಪತ್ತಿಯನ್ನು ತೋರಿಸುತ್ತಾರೆ –

**ಧರ್ಮೋಽಹಿಂಸಾಪರೋ ನಾನ್ಯೋ ಜ್ಞಾನಂ ಪುದ್ಗಲದರ್ಶನಮ್ ॥ ೧೩೭ ॥**

**ಇತಿ ಜೈನಾಃ ಕಥಂ ತತ್ಸ್ಯಾತ್ ಪ್ರಮಾಣಮನುಮಾನತಃ ।**

ಅಹಿಂಸಾಪ್ರಧಾನವಾದುದು ಧರ್ಮ. ಹಿಂಸೆಯಿಂದ ಕೂಡಿದ ಯಜ್ಞಾದಿಗಳು ಧರ್ಮವಲ್ಲ. ಆತ್ಮನಿಗೆ ದೇಹಾದಿಗಳಿಂದ ಭೇದರೂಪವಾದ ದರ್ಶನವೇ ಯಥಾರ್ಥ ಜ್ಞಾನ. ಹೀಗೆ ಜೈನರು ಹೇಳುತ್ತಾರೆ. ಅನುಮಾನದಿಂದ ಜಿನವಾಕ್ಯವು ಪ್ರಮಾಣವು ಎಂದು ತಿಳಿಯಲು ಹೇಗೆ ಯೋಗ್ಯವಾಗುವುದು?

ಜಿನವಾಕ್ಯಕ್ಕೆ ಅನುಮಾನದಿಂದ ಪ್ರಾಮಾಣ್ಯವು ಏಕೆ ಕೂಡುವುದಿಲ್ಲ ಎಂದು ಕೇಳಿದರೆ ಅದಕ್ಕೆ ಹೇತುವನ್ನು ಹೇಳುವುದಕ್ಕಾಗಿ ಉಪೋದ್ಘಾತರೂಪದಿಂದ ಪ್ರತ್ಯಕ್ಷ ಅನುಮಾನ ಆಗಮಗಳ ಸ್ವರೂಪವನ್ನು ಕ್ರಮದಿಂದ ಹೇಳುತ್ತಾರೆ –

**ವಿಷಯಾನ್ಪ್ರತಿ ಸ್ಥಿತಂ ಹ್ಯಕ್ಷಂ ಪ್ರತ್ಯಕ್ಷಮಿತಿ ಗೀಯತೇ ॥ ೧೩೮ ॥**

**ಪ್ರತ್ಯಕ್ಷಶಬ್ದಾನುಸಾರಾದನುಮೇತಿ ಪ್ರಕೀರ್ತಿತಾ ।**

ನಿರ್ದೋಷಗಳಾದ ವಿಷಯಗಳನ್ನು ಕುರಿತು ಇರತಕ್ಕ ದೋಷರಹಿತವಾದ ಇಂದ್ರಿಯವು ಪ್ರತ್ಯಕ್ಷವೆಂದು ಹೇಳಲ್ಪಡುತ್ತದೆ. ಅನುಮಾನಕ್ಕೆ ಪ್ರತ್ಯಕ್ಷ ಆಗಮಗಳ ಅನುಸಾರವಾಗಿಯೇ ಪ್ರಾಮಾಣ್ಯವು. ಆದ್ದರಿಂದಲೇ ಅದು 'ಅನುಮಾ' ಎಂದು ಹೇಳಲ್ಪಡುವುದು.

**ಆಸಮಂತಾದ್ಗಮಯತಿ ಧರ್ಮಾಧರ್ಮೌ ಪರಂ ಪದಂ ॥ ೧೩೯ ॥**

**ಯಚ್ಚಾಪ್ಯತೀಂದ್ರಿಯಂ ತ್ವನ್ಯತ್ತೇನಾಸಾವಾಗಮಃ ಸ್ಮೃತಃ ।**

'ಆ' ಎಂದರೆ ಎಲ್ಲ ರೀತಿಯಿಂದಲೂ ಚೆನ್ನಾಗಿ ಧರ್ಮಾಧರ್ಮಗಳನ್ನೂ, ಶ್ರೇಷ್ಠವಾದ ಪರಬ್ರಹ್ಮಸ್ವರೂಪವನ್ನೂ ಯಾವುದು 'ಗಮಯತಿ' ಎಂದರೆ ತಿಳಿಸಿ ಕೊಡುವುದೋ, ಅತೀಂದ್ರಿಯವಾದುದನ್ನೂ ಹಾಗೂ ಅನುಮಾನದಿಂದ ತಿಳಿಯಲು ಅಶಕ್ಯವಾದ ವಿಷಯಗಳನ್ನೂ ಕೂಡ ತಿಳಿಸಿಕೊಡುವುದೋ, ಆ ಕಾರಣದಿಂದಲೇ ಅದು ಆಗಮವೆಂದು ಹೇಳಲ್ಪಟ್ಟಿದೆ.

**ಏತೇನ ಕಾರಣೇನೈವ ತತ್ತನ್ಮಾನತ್ವಮಿಷ್ಯತೇ ।। ೧೪೦ ।।**

ಈ ಕಾರಣದಿಂದಲೇ ಪ್ರತ್ಯಕ್ಷಾದಿಗಳಿಗೆ ಪ್ರತ್ಯಕ್ಷಾದಿತ್ವವು ಅಂದರೆ ಪ್ರತ್ಯಕ್ಷಾದಿ ಶಬ್ದವಾಚ್ಯತ್ವವು ಪ್ರಾಮಾಣಿಕರಿಂದ ಅಂಗೀಕರಿಸಲ್ಪಡುತ್ತದೆ.

**ಸ್ವರೂಪಂ ಹಿ ತದೇತೇಷಾಮನ್ಯಥಾऽಸಿದ್ಧಿಮಾನತಃ ।**

**ಅತೋऽನುಮಾ ಕಥಂ ಧರ್ಮಂ ಪುದ್ಗಲಂ ಚಾಪಿ ದರ್ಶಯೇತ್ ।। ೧೪೧ ।।**

ನಿರ್ದೋಷವಾದ ವಿಷಯಗಳ ಸಂಪರ್ಕವನ್ನು ಹೊಂದಿರುವ ದೋಷವಿಲ್ಲದ ಇಂದ್ರಿಯಾದಿಗಳನ್ನು ಹೊಂದಿರುವುದೇ ಪ್ರತ್ಯಕ್ಷಾದಿ ಪ್ರಮಾಣಗಳ ಲಕ್ಷಣವು. ಲಕ್ಷಣವೇ ಶಬ್ದಪ್ರವೃತ್ತಿಗೆ ನಿಮಿತ್ತವಾಗುತ್ತದೆ. ಅನ್ಯಥಾ ಅಸಿದ್ಧಿ ಹಾಗೂ ಅದರ ಪ್ರಮಾಣ ಇವುಗಳಿಂದ ಪ್ರಾಮಾಣ್ಯದ ಲಕ್ಷಣವು ನಿರೂಪಿಸಲ್ಪಡುತ್ತದೆ. ಬೇರೆ ಪ್ರಕಾರದಿಂದ ಪ್ರಮಾಣದ ಲಕ್ಷಣವನ್ನು ನಿರೂಪಿಸುವುದು ಸಾಧ್ಯವಿಲ್ಲ. ಆದಕಾರಣ ಅನುಮಾನದಿಂದ ಪ್ರಮಾಣವೆಂದು ತಿಳಿಯಲ್ಪಡುವ ಜಿನವಾಕ್ಯವು ಧರ್ಮವನ್ನೂ, ದೇಹಾತಿರಿಕ್ತ ಆತ್ಮನನ್ನೂ ಕೂಡ ಹೇಗೆ ತಾನೆ ತಿಳಿಸಿಕೊಡುವುದು? ಅಂದರೆ ಜಿನ ವಾಕ್ಯಕ್ಕೆ ಹಿಂದೆ ಹೇಳಿದ ಆಗಮಲಕ್ಷಣವಾಗಲೀ ಜಿನನಿಗೆ ಆಪ್ತತ್ವನಿಶ್ಚಯವಾಗಲೀ ಇಲ್ಲವಾದ ಪ್ರಯುಕ್ತ ಜಿನವಾಕ್ಯದಿಂದ ಧರ್ಮಾಧರ್ಮಗಳ ನಿಶ್ಚಯವು ಆಗುವುದಿಲ್ಲ ಎಂದು ತಾತ್ಪರ್ಯ.

ಕೇವಲ ಜಿನನ ವಾಕ್ಯಕ್ಕೆ ಅಸ್ಖಲಿತತ್ವವು ನಿಶ್ಚಯವಾಗಿಲ್ಲವೆಂದಷ್ಟೇ ಅಲ್ಲ. ಮತ್ತೆ ಸ್ಖಲನವೂ ಕಂಡುಬರುವುದು, ಆದ್ದರಿಂದ ಜಿನನ ವಾಕ್ಯಕ್ಕೆ ಅಸಿದ್ಧತ್ವವು ಎನ್ನುತ್ತಾರೆ –

**ಸ್ವರೂಪೇ ಪುದ್ಗಲಸ್ಯೋಕ್ತಾ ದೋಷಾ ಆನಂದಮೇವ ಚ ।**

**ನ ಮನ್ಯತೇ ಪುದ್ಗಲಂ ಸ ದುಃಖಾಭಾವಃ ಸುಖಂ ತ್ವಿತಿ ।। ೧೪೨ ।।**

**ಮಾತ್ರಾಭೋಗಾತಿರೇಕೇಣ ಸುಖಾಧಿಕಸ್ಯ ದರ್ಶನಾತ್ ।**

ದೇಹಾತಿರಿಕ್ತನಾದ ಮತ್ತು ದೇಹಸದೃಶನಾದ ಆತ್ಮನ ಸ್ವರೂಪದ ವಿಷಯದಲ್ಲಿ 'ಏವಂ ಚಾತ್ಮಾ ಕಾರ್ತ್ಸ್ನ್ಯಂ' ಇತ್ಯಾದಿಗಳಲ್ಲಿ ದೋಷಗಳು ಹೇಳಲ್ಪಟ್ಟಿವೆ. ಆದ್ದರಿಂದ ಜಿನನ ಮಾತುಗಳಿಗೆ ಸ್ಖಲಿತತ್ವವು. ಪ್ರಕಾರಾಂತರದಿಂದಲೂ ಜಿನನ ಮಾತಿನ ಸ್ಖಲನವನ್ನು ತೋರಿಸುತ್ತಾರೆ – ಜಿನನು ಆತ್ಮನನ್ನು ಆನಂದರೂಪಿಯೆಂದೇ ತಿಳಿಯುವುದಿಲ್ಲ. ಆದರೆ ತತ್ವಜ್ಞಾನಿಗಳು ಆತ್ಮನನ್ನು ಆನಂದಸ್ವರೂಪಿಯನ್ನಾಗಿಯೂ

ತಿಳಿಯುತ್ತಾರೆ. ಅಲ್ಲದೆ ಜನನು ಸುಖವನ್ನು ಭಾವರೂಪವೆಂದು ತಿಳಿಯುವುದಿಲ್ಲ. ಮತ್ತೆ ಅದು ದುಃಖಾಭಾವರೂಪವಾದುದೆಂದು ತಿಳಿಯುತ್ತಾನೆ. ಅದು ಅಯುಕ್ತವು. ಆದ್ದರಿಂದ ಜನಮ ಸ್ಖಲಿತವಾದ ಮಾತುಳ್ಳವನು. ಶಬ್ದಾದಿ ವಿಷಯಗಳ ಅಧಿಕವಾದ ಭೋಗದಿಂದ ಸುಖಾಧಿಕ್ಯವೂ, ಅಲ್ಪಭೋಗದಿಂದ ಅಲ್ಪಸುಖವೂ ಎನ್ನುವುದು ಸಾಕ್ಷಿಗೋಚರವು.

**ಸುಖಸ್ಯಾಭಾವತಾ ಕೇನ ನ ಚ ಸ್ಯಾತ್ಕಿಂ ವಿಪರ್ಯಯಃ ॥ ೧೪೩ ॥**

ದುಃಖಾದಿಗಳಂತೆ ಸುಖದಲ್ಲಿ ತಾರತಮ್ಯವಿಲ್ಲವಾದ್ದರಿಂದ ಅದು ಭಾವ ರೂಪವಲ್ಲ ಎನ್ನುವುದು ಸರಿಯಲ್ಲ. ಸುಖವು ತಾರತಮ್ಯಯುಕ್ತವಲ್ಲ ಎನ್ನುವ ಪಕ್ಷದಲ್ಲಿ ಬುದ್ಧಿಯುಳ್ಳ ಯಾವನಾದರೂ ಹೆಚ್ಚಿನ ಸುಖಕ್ಕಾಗಿ ಹೆಚ್ಚಿನ ವಿಷಯ ಭೋಗವನ್ನು ಮಾಡುತ್ತಿರಲಿಲ್ಲ. ಆದ್ದರಿಂದ ಸುಖವು ತಾರತಮ್ಯಯುಕ್ತವೂ ಭಾವ ರೂಪವೂ ಆಗಿದೆ ಎಂದು ತಾತ್ಪರ್ಯ. ಸುಖಾಭಾವತ್ವವು ಪ್ರಮಾಣದಿಂದ ಸಿದ್ಧವಾಗುವುದು ಎಂದಿದ್ದರೆ ಈ ತಾರತಮ್ಯಾದಿ ಪ್ರತೀತಿಗೆ ಔಪಾಧಿಕತ್ವವನ್ನು ಹೇಳಬಹುದಿತ್ತು. ಆದರೆ ಈ ತಾರತಮ್ಯದ ಪ್ರತೀತಿಯು ಸಾಕ್ಷಿಗೋಚರವು. ಅಲ್ಲದೆ ಸುಖಕ್ಕೆ ಅಭಾವತ್ವವು ಯಾವ ಪ್ರಮಾಣದಿಂದಲೂ ಸಿದ್ಧಿಸುವುದಿಲ್ಲ. ಆದಪ್ರಯುಕ್ತ ತಾರತಮ್ಯಾದಿ ಪ್ರತೀತಿಯು ಔಪಾಧಿಕವೆನ್ನುವುದು ಅಯುಕ್ತವು.

ಹೀಗೆಯೇ ಪ್ರತೀತ್ಯಾದಿಗಳಿಗೆ ಔಪಾಧಿಕತ್ವವನ್ನು ಹೇಳಿದರೆ ಬಾಧಕವನ್ನು ಹೇಳುತ್ತಾರೆ 'ನ ಚ' ಎಂದು –

ಯಾವ ನಿಬಂಧನೆಯೂ ಇಲ್ಲದೆ ಸುಖತಾರತಮ್ಯಾದಿ ದರ್ಶನಾದಿಗಳಿಗೆ ಔಪಾಧಿಕತ್ವವನ್ನು ಕಲ್ಪಿಸಿದರೆ, ಆಗ ಸುಖವು ಭಾವರೂಪವು, ದುಃಖವು ಅದರ ಅಭಾವವು ಎಂದಾಗುವುದು. ಅದರಲ್ಲಿ ತಾರತಮ್ಯದರ್ಶನವು ಪ್ರತಿಯೋಗಿಯ ಸುಖೋಪಾಧಿನಿಮಿತ್ತವು. ಸುಖನಿವೃತ್ತಿಗಾಗಿ ಅಹಿಕಂಟಕಾದಿಗಳು – ಹೀಗೆ ಜನನು ಹೇಳಿದರೆ, ಇದಕ್ಕೆ ವಿಪರೀತವಾಗಿಯೂ ಏಕೆ ಆಗಲಾರದು ಎಂದು ಕೇಳುತ್ತಾರೆ. ಎರಡರಲ್ಲಿಯೂ ವಿಶೇಷವು ತೋರುವುದಿಲ್ಲವಾದ ಪ್ರಯುಕ್ತ, ಸ್ವಾಭಾವಿಕವಾಗಿ ತಾರತಮ್ಯವುಳ್ಳ ಸುಖದುಃಖಗಳೆರಡಕ್ಕೂ ಭಾವತ್ವವನ್ನು ಅಂಗೀಕರಿಸತಕ್ಕದ್ದು.

'ಸುಖಮಭಾವೋ ವಸ್ತುತ್ವಾತ್ ಸಮ್ಮತಾಭಾವವತ್' ಎನ್ನುವ ಪ್ರಮಾಣವಿದ್ದ ಪ್ರಯುಕ್ತ 'ಸುಖಸ್ಯಾಭಾವತಾ ಕೇನ' ಎಂದು ಹೇಳಿದ್ದು ಹೇಗೆ ಎಂದರೆ –

**ಯದಿ ಭಾವೋಽಪಿ ಕಶ್ಚಿತ್ಸ್ಯಾತ್ ತಸ್ಯೈವಾಭಾವತಾ ಕುತಃ ।**

ವಸ್ತುತ್ವಾತ್ ಎಂಬ ಹೇತುವಿನಿಂದ ಸುಖಾಭಾವತ್ವವನ್ನು ಅನುಮೇಯಿಸುವವನ ಮತದಲ್ಲಿ, ಯಾವುದಾದರೊಂದು ಪದಾರ್ಥವು ಭಾವವೂ ಕೂಡ ಆಗುವುದಾದರೆ, ಸುಖಕ್ಕೆ ಮಾತ್ರ ಅಭಾವತ್ವವು ಯಾವುದರಿಂದ ಎಂದು ಕೇಳುತ್ತೇವೆ.

ಹಾಗಾದರೆ ಎಲ್ಲ ಪದಾರ್ಥಗಳೂ ಅಭಾವರೂಪಗಳೇ ಎಂದು ಹೇಳಿದರೆ, ಅದನ್ನು ದೂಷಿಸುತ್ತಾರೆ 'ಯದಿ ಸರ್ವೇಽಪಿ' ಎಂದು –

**ಯದಿ ಸರ್ವೇಽಪ್ಯಭಾವಾಃ ಸ್ಯುರನ್ಯೋನ್ಯಮಿತಿ ಭಾವತಾ ॥ ೧೪೪ ॥**

**ಅಭಾವಾಭಾವತೈವ ಸ್ಯಾತ್ಕಿನ್ನಶ್ಭಿನ್ನಂ ತದಾ ಭವೇತ್ ।**

ಎಲ್ಲ ಪದಾರ್ಥಗಳನ್ನೂ ಅನ್ಯೋನ್ಯಾಭಾವಗಳೆಂದು ತಿಳಿಯುವ ಪಕ್ಷದಲ್ಲಿ, ಆಗ ಭಾವತ್ವವೇ ಆಗುವುದು. ಹೀಗೆ ಎಲ್ಲ ಪದಾರ್ಥಗಳಿಗೂ ಅನ್ಯೋನ್ಯಾಭಾವತ್ವವನ್ನು ಹೇಳಿದ್ದರಿಂದ ನಮಗೆ ಯಾವ ಭಿನ್ನತ್ವವೂ ಆಗುವುದಿಲ್ಲ. ಏಕೆಂದರೆ ಅಭಾವದ ಅಭಾವವೆಂದರೆ ಭಾವತ್ವವೇ ಆಗುವುದು. ಮತ್ತೆ 'ಭಾವತ್ವಂ' ಇತ್ಯಾದಿ ವಚನದಿಂದ ಭಾವ ಮತ್ತು ಅಭಾವಗಳ ಸ್ವರೂಪವನ್ನು ಹೇಳುತ್ತಾರೆ –

**ಭಾವತ್ವಂ ವಿಧಿರೂಪತ್ವಂ ನಿಷೇಧತ್ವಮಭಾವತಾ ॥ ೧೪೫ ॥**

**ನಿಷೇಧಸ್ಯ ನಿಷೇಧೋಪಿ ಭಾವ ಏವ ಬಲಾದ್ಭವೇತ್ ।**

**ಪ್ರಥಮಪ್ರತಿಪತ್ತಿಸ್ತು ಭಾವಾಭಾವನಿಯಾಮಿಕಾ ॥ ೧೪೬ ॥**

ಭಾವತ್ವವೆಂದರೆ ವಿಧಿಸ್ವರೂಪತ್ವವು, ಅಭಾವವೆಂದರೆ ನಿಷೇಧಸ್ವರೂಪತ್ವವು. ಅಭಾವವೆಂದರೆ ನಿಷೇಧವು. ನಿಷೇಧಕ್ಕೆ ನಿಷೇಧವೂ ಕೂಡ ಅನುಭವದ ಬಲದಿಂದ ವಿಧಿರೂಪವಾದ ಭಾವಪದಾರ್ಥವೇ ಆಗುವುದು. ಪ್ರಥಮ ಪ್ರತಿಪತ್ತಿಯಲ್ಲಿ ವಿಧಿ ರೂಪದಿಂದ ತೋರುವುದು ಭಾವ ಪದಾರ್ಥ, ನಿಷೇಧರೂಪದಿಂದ ತೋರುವುದು ಅಭಾವ ಪದಾರ್ಥ. ಆದ್ದರಿಂದ ಪ್ರಾಥಮಿಕ ಜ್ಞಾನವೇ ಭಾವಾಭಾವ ನಿಯಾಮಕವು.

ಈ ಪ್ರಕಾರವಾಗಿ ಸ್ಖಲಿತ ವಚನತ್ವವುಳ್ಳ ಜಿನನ ವಾಕ್ಯಕ್ಕೆ ಅಯುಕ್ತತ್ವವನ್ನು ತೋರಿಸಿ, ಜಿನೋಕ್ತವಾದ ಮೋಕ್ಷಸಾಧನಕ್ಕೆ ಅಪ್ರಾಮಾಣಿಕತ್ವವು ಹೇಳಲ್ಪಟ್ಟಿತು. ಈಗ ಯುಕ್ತಿವಿರೋಧವನ್ನೂ ತೋರಿಸುತ್ತಾರೆ –

**ನ ಚ ಪುದ್ಗಲವಿಜ್ಞಾನಂ ಮೋಕ್ಷದಂ ಭವತಿ ಕ್ವಚಿತ್ ।**

ಆತ್ಮಜ್ಞಾನವು ಮುಕ್ತಿಯನ್ನು ಕೊಡತಕ್ಕುದು ಆಗುವುದಿಲ್ಲ, ಅಚೇತನವಾದ್ದರಿಂದ ಪಟದಂತೆಯೇ. ಏಕೆಂದರೆ ಅಚೇತನಕ್ಕೆ ಮೋಕ್ಷದಾತೃತ್ವವು ಎಲ್ಲಿಯೂ ಕಂಡಿಲ್ಲ.

ಆತ್ಮಜ್ಞಾನವು ಅಚೇತನವಾದ್ದರಿಂದ ಮೋಕ್ಷದಾತೃವಲ್ಲವೆಂದರೆ, ಆತ್ಮನೇ ಮೋಕ್ಷದಾತೃವು ಚೇತನನಾದ್ದರಿಂದ ಎಂದು ಹೇಳುತ್ತೇವೆ. ಏಕೆಂದರೆ ಆತ್ಮನು ತಿಳಿಯಲ್ಪಟ್ಟಾಗ, ಅದರಿಂದ ಪ್ರಸನ್ನನ್ನಾಗಿ ಮೋಕ್ಷವನ್ನು ಕೊಡುತ್ತಾನೆ ಎಂದರೆ –

**ಅಸ್ವಾತಂತ್ರ್ಯಾತ್ಪುದ್ಗಲಸ್ಯ ಜ್ಞಾತೋಽಪಿ ಸುಖದೋ ನ ಹಿ ॥ ೧೪೭ ॥**

**ನ ಹಿ ದುಃಖಿಪರಿಜ್ಞಾನಾದ್ದುಃಖಿತ್ವಂ ವಿನಿವರ್ತತೇ ।**

ಆತ್ಮನಿಗೆ ಸ್ವಾತಂತ್ರ್ಯವಿಲ್ಲದ ಪ್ರಯುಕ್ತ, ತಿಳಿಯಲ್ಪಟ್ಟ ಆತ್ಮನೂ ಕೂಡ ಮೋಕ್ಷ ದಾಯಕನು ಆಗಲಾರನು. ಪಟಾದಿಗಳಲ್ಲಿ ವ್ಯಾಪ್ತಿಯು ಸ್ಪಷ್ಟವಾಗಿದೆ ಎನ್ನುವುದನ್ನು ಹಿ ಶಬ್ದದಿಂದ ಸೂಚಿಸುತ್ತಾರೆ. ಹಿಂದೆ ಹೇಳಿದ ಎರಡು ಪಕ್ಷಗಳನ್ನೂ ನ ಹಿ ದುಃಖಿ ಎಂಬ ವಚನದಿಂದ ನಿರಾಕರಿಸುತ್ತಾರೆ – ದುಃಖವುಳ್ಳವನ ಜ್ಞಾನದಿಂದ ದುಃಖಿತ್ವವು ಬಿಟ್ಟು ಹೋಗುವುದಿಲ್ಲ. ಆತ್ಮನು ಅಸ್ವತಂತ್ರನಾದ್ದರಿಂದ ದುಃಖಿಯು ದೇವದತ್ತನಂತೆ. ಆದ್ದರಿಂದ ದುಃಖಿಯಾದ ಆತ್ಮನ ಜ್ಞಾನದಿಂದ ಅವನನ್ನು ತಿಳಿದವನ ದುಃಖವು ನಿವೃತ್ತಿಯಾಗಲಾರದು.

ಹಾಗಾದರೆ ಆತ್ಮಜ್ಞಾನವು ದೇವದತ್ತನು ಹಸುವನ್ನು ದಾನ ಕೊಡುವಂತೆ ಮೋಕ್ಷವನ್ನು ಕೊಡುವುದಿಲ್ಲ. ಮತ್ತೆ ಕತ್ತಲೆಗೆ ವಿರೋಧವಾದ ಬೆಳಕು ಕತ್ತಲೆಯನ್ನು ತೆಗದುಹಾಕುವಂತೆ ಆತ್ಮಜ್ಞಾನವು ದುಃಖವನ್ನು ತೆಗೆದುಹಾಕುವುದು. ಸ್ವಾತ್ಮಜ್ಞಾನವೇ ಸ್ವದುಃಖವಿರೋಧಿಯು, ಕೇವಲ ಆತ್ಮಜ್ಞಾನಮಾತ್ರವಲ್ಲ ಎಂದು ಆಶಂಕಿಸಿದರೆ –

**ಯದಿ ಪುದ್ಗಲವಿಜ್ಞಾನಾದದುಃಖೀ ಸ್ಯಾತ್ಕಥಂಚನ ।। ೧೪೮ ।।**

**ದೇಹವಾನಪಿ ನಾದುಃಖೀ ಕಿಂ ಜ್ಞಾನಾದುತ್ತರಂ ಸದಾ ।**

ದುಃಖ ಮತ್ತು ಆತ್ಮಜ್ಞಾನಗಳಿಗೆ ವಿರುದ್ಧತ್ವವಿರುವ ಪ್ರಯುಕ್ತ, ಆತ್ಮಜ್ಞಾನದಿಂದ ಹೇಗಾದರೂ ಅದುಃಖಿಯು ಆಗುವನು ಎನ್ನುವ ಪಕ್ಷದಲ್ಲಿ, ಜ್ಞಾನೋತ್ತರ ಕಾಲದಲ್ಲಿ ಶರೀರವುಳ್ಳವನೂ ಕೂಡ ನಿರಂತರದಲ್ಲಿಯೂ ಅದುಃಖಿಯು ಏಕೆ ಆಗಲಾರನು?

ಹಾಗಾದರೆ ಈಶ್ವರಜ್ಞಾನವು ಮೋಕ್ಷಸಾಧನವು ಎಂಬುದಾಗಿ ನಿಮ್ಮಿಂದಲೂ ಅಂಗೀಕರಸಲ್ಪಟ್ಟಿದೆ. ಅಲ್ಲಿಯೂ ಈ ದೂಷಣವು ಸಮಾನವೇ ಎಂದರೆ –

**ಈಶಕ್ಲೃಪ್ತ್ಯನುಸಾರೇಣ ಸ್ಯಾತ್ಕಾಲಾದೀಶವಾದಿನಃ ।। ೧೪೯।।**

ಈಶ್ವರನನ್ನು ಒಪ್ಪುವ ನಮ್ಮ ಮತದಲ್ಲಿಯೂ ಈಶ್ವರೇಚ್ಛೆಗೆ ಅನುಸಾರವಾಗಿ ಕೆಲವು ಸಮಯಾನಂತರ ಮುಕ್ತಿಯು ಆಗುವುದು. ಅಂದರೆ ಈಶ್ವರನ ಜ್ಞಾನವೇ ಮೋಕ್ಷಸಾಧನವೆಂದು ನಾವು ಹೇಳುವುದಿಲ್ಲ. ಮತ್ತೆ ಪ್ರಸನ್ನಾದ ಪರಮೇಶ್ವರನೇ ಮೋಕ್ಷಸಾಧನನು ಎಂದು ತಾತ್ಪರ್ಯ.

ಹೀಗೆ ಆತ್ಮಜ್ಞಾನಕ್ಕೆ ಮೋಕ್ಷಸಾಧನತ್ವವನ್ನು ನಿರಾಕರಿಸಿ, ಕರ್ಮಕ್ಕೂ ಕೂಡ ಮೋಕ್ಷಸಾಧನತ್ವವನ್ನು ನಿರಾಕರಿಸುತ್ತಾರೆ –

**ಕರ್ಮಹೇತುತ್ವಮಪಿ ತು ನಿಶ್ಚೈತನ್ಯಾನ್ನ ಹಿ ಕ್ವಚಿತ್ ।**

ಮುಕ್ತಿಯನ್ನು ಕುರಿತು ಕರ್ಮಕ್ಕೆ ಕಾರಣತ್ವವೂ ಕೂಡ ಕೂಡುವುದೇ ಇಲ್ಲ, ಅದು ಅಚೇತನವಾದುದರಿಂದ. ಯಾವ ಅಚೇತನದಲ್ಲಿಯೂ ಮೋಕ್ಷಸಾಧನತ್ವವು ನಮ್ಮಂತೆ ನಿಮಗೂ ಸಮ್ಮತವಲ್ಲ.

ಅಚೇತನತ್ವವಿದ್ದರೂ ವಿಶಿಷ್ಟವಾದ ಈ ಕರ್ಮವು ಮೋಕ್ಷಕ್ಕೆ ಸಾಧನವು ಏಕೆ ಆಗಲಾರದು ಎಂದರೆ – ಮೋಕ್ಷಪರ್ಯಂತವಾಗಿ ಮಾಡಲ್ಪಡತಕ್ಕದು ಒಂದೇ ಕರ್ಮವೋ ಅಥವಾ ಅನೇಕ ಕರ್ಮಗಳೋ ಎಂದು ವಿಕಲ್ಪ ಮಾಡಿಕೊಂಡು ಎರಡು ಪಕ್ಷಗಳಿಗೂ ಬಾಧಕವನ್ನು ಹೇಳುತ್ತಾರೆ –

**ಅಶೇಷದುಃಖವಿಲಯೇ ನೇದಾನೀಂ ಕಾರಣಂ ಯಥಾ ।। ೧೫೦ ।।**

**ತಥೋತ್ತರಂ ನ ಚೈವ ಸ್ಯಾದ್ವ್ಯಷ್ಟಿಪೂರ್ವಾನುಮಾ ಯತಃ ।**

ಹೇಗೆ ಮೊದಲನೆಯ ಕ್ರಿಯೆಯು ಅಶೇಷವಾಗಿ ದುಃಖಗಳ ನಾಶಕ್ಕೆ ಕಾರಣ ವಾಗುವುದಿಲ್ಲವೋ ಹಾಗೆಯೇ ಆ ಕ್ರಿಯೆಯಿಂದ ಹುಟ್ಟಿದ ಎರಡನೆಯ ಹಾಗೂ ಮುಂದಿನ ಎಲ್ಲ ಕರ್ಮಗಳೂ ಅಶೇಷವಾದ ದುಃಖಗಳ ನಾಶಕ್ಕೆ ಅಂದರೆ ಮೋಕ್ಷಕ್ಕೆ ಕಾರಣವು ಆಗುವುದಿಲ್ಲ. ಹಿಂದೆ ಹೇಳಿದ ನಿಶ್ಚೈತನ್ಯಾದಿ ಅನುಮಾನವು ಪ್ರಮಾಣ ಗೃಹೀತವಾದ ವ್ಯಾಪ್ತ್ಯಾದಿಗಳನ್ನು ಹೊಂದಿರುವುದರಿಂದ ಅದು ನಿರ್ದುಷ್ಟವಾದುದು.

**ಶಕ್ತಸ್ಯಾನ್ಯಸ್ಯ ವಿಜ್ಞಾನಂ ತತ್ಪ್ರೀತಿಜನಕಂ ಯದಿ ।। ೧೫೧।।**

**ತಯ್ಯೈವ ಬಂಧಹಾನಿಃಸ್ಯಾದಿತಿ ಕಿನ್ನಾಮ ದೂಷಣಮ್ ।**

ಶಕ್ತನಾದ ಮತ್ತೊಬ್ಬನ ಗುಣೋತ್ಕರ್ಷಾದಿ ವಿಶಿಷ್ಟ ಜ್ಞಾನವು ಆ ವಿಷ್ಣುವಿಗೆ ಪ್ರೀತಿಯನ್ನು ಹುಟ್ಟಿಸುವುದೆಂದು ಹೇಳುವುದಾದರೆ, ಆ ವಿಷ್ಣುವಿನ ಪ್ರೀತಿಯಿಂದಲೇ ಸಂಸಾರಬಂಧವು ನಾಶವಾಗುವುದೆಂದು ಅನುಮೇಯಿಲ್ಪಟ್ಟರೆ ಅದು ಹೇಗೆ ದೂಷಣ ವಾಗುವುದು? ಏಕೆಂದರೆ ಈ ಅನುಮಾನವು ಪ್ರಮಾಣಗೃಹೀತವಾದ ವ್ಯಾಪ್ತ್ಯಾದಿ ಗಳನ್ನು ಹೊಂದಿರುವುದು.

ಹಾಗಾದರೆ ಇದಕ್ಕೆ ವಿರುದ್ಧವಾಗಿಯೂ ನಾನು ಅನುಮಾನ ಮಾಡುತ್ತೇನೆ. ಆದ್ದರಿಂದ ಸತ್ಪ್ರತಿಪಕ್ಷವು. ಹೇಗೆಂದರೆ, 'ವಿಮತಾ ಬಂಧಹಾನಿಃ ಸ್ಯಾತ್ ಸ್ವಜ್ಞಾನ ನಿಬಂಧನಾ' (ವಿವಾದ ವಿಷಯವಾದ ಬಂಧಹಾನಿಯು ತನ್ನ ಜ್ಞಾನವೇ ಕಾರಣ ವಾಗಿವುಳ್ಳದ್ದು), ಅಥವಾ 'ಪರಪ್ರಸಾದ ನಿಬಂಧನಾ ನ ಭವತಿ' (ಇತರರ ಪ್ರಸಾದ ವನ್ನು ಕಾರಣವಾಗಿವುಳ್ಳದ್ದು ಆಗುವುದಿಲ್ಲ) ಎಂದು ಅನುಮೇಯಿಸುತ್ತೇನೆ. ಹೀಗೆ ಆಶಂಕಿಸಿದರೆ –

**ಸ್ವಜ್ಞಾನಾದ್ಬಂಧಹಾನಿಸ್ತು ದೃಶ್ಯತೇ ಕಸ್ಯ ಕುತ್ರಚಿತ್ ।। ೧೫೨ ।।**

**ಅಹಿಂಸಾಯಾಶ್ಚ ಧರ್ಮತ್ವಂ ಕೇನ ಮಾನೇನ ಗಮ್ಯತೇ ।**

**ಹಿಂಸಾಯಾ ಏವ ಧರ್ಮತ್ವಮಿತ್ಯುಕ್ತೇ ಸ್ಯಾತ್ಕಿಮುತ್ತರಮ್ ।। ೧೫೩ ।।**

ತನ್ನ ಜ್ಞಾನದಿಂದ ಬಂಧಹಾನಿ ಎನ್ನುವುದು ಎಲ್ಲಿ ಯಾರಿಗೆ ಕಂಡಿದೆ. ಎಲ್ಲಿಯೂ ಯಾರಿಗೂ ಕಂಡಿಲ್ಲ ಎಂದು ತಾತ್ಪರ್ಯ. ಹೀಗೆ ವ್ಯಾಪ್ತಿಯ ಅಭಾವು. ಅಹಿಂಸೆಗೂ

ಕೂಡ ಧರ್ಮತ್ವವು ಯಾವ ಪ್ರಮಾಣದಿಂದ ತಿಳಿಯಲ್ಪಡುತ್ತದೆ? ಜಿನವಾಕ್ಯದಿಂದ ಎಂದು ಹೇಳಕೂಡದು. ಅದಕ್ಕೆ ಪ್ರಾಮಾಣ್ಯ ಸಾಧಕವಾದುದು ಯಾವುದೂ ಇಲ್ಲ. ಹಿಂಸೆಗೇನೇ ಧರ್ಮತ್ವವನ್ನು ಹೇಳಿದರೆ ಅದಕ್ಕೆ ಏನು ಉತ್ತರವಿದೆ? ಏನೂ ಇಲ್ಲ. ಜಿನನು ಆಪ್ತನೂ, ಸರ್ವಜ್ಞನೂ ಆದುದರಿಂದ ಜಿನವಾಕ್ಯವು ಪ್ರಮಾಣ ಎಂದರೆ, ಜಿನೇತರನು ಆಪ್ತನಲ್ಲ ಅಥವಾ ಸರ್ವಜ್ಞನಲ್ಲವೆಂದು ಹೇಗೆ ನಿಶ್ಚಯವಾಗುವುದು? ಅಂತೂ ಧರ್ಮ ನಿಶ್ಚಯವು ಆಗದೇ ಹೋಗುವುದು.

ಧರ್ಮಾದಿಗಳಿಗೆ ಮೋಕ್ಷಸಾಧನತ್ವವೂ ಕೂಡ ಅಪ್ರಮಾಣಿಕವು ಎನ್ನುತ್ತಾರೆ –

**ಧರ್ಮಸ್ಯ ಸುಖಹೇತುತ್ವಮಪಿ ಕೇನಾವಗಮ್ಯತೇ ।**

**ಹತ್ಯಾಯಾ ಮೋಕ್ಷಹೇತುತ್ವಂ ಕುತೋ ಮಾನಾನ್ನಿವಾರ್ಯತೇ ॥ ೧೫೪ ॥**

ಧರ್ಮಕ್ಕೆ ಮೋಕ್ಷಹೇತುತ್ವವೂ ಕೂಡ ಯಾವುದರಿಽದ ತಿಳಿಯಲ್ಪಡುತ್ತದೆ? ಹಿಂಸೆಗೆ ಮೋಕ್ಷಹೇತುತ್ವವು ಯಾವ ಪ್ರಮಾಣದಿಂದ ನಿವಾರಿಸಲ್ಪಡುತ್ತದೆ? ಹೀಗೆ ಕೇವಲ ಜಿನವಾಕ್ಯದಿಂದಾಗಲೀ ಇತರರ ವಾಕ್ಯದಿಂದಾಗಲೀ ಧರ್ಮಾಧರ್ಮಗಳಿಗೆ ಮೋಕ್ಷಹೇತುತ್ವವು ತೀರ್ಮಾನವಾಗಲಾರದು.

ಈಗ ಬೌದ್ಧರಿಗೆ ಅಭಿಮತವಾದ ಮೋಕ್ಷಸಾಧನವನ್ನು ನಿರಾಕರಿಸುವ ಶೂನ್ಯವಾದಿಯಿಂದ ಹೇಳಲ್ಪಟ್ಟ ಮೋಕ್ಷಸಾಧನವನ್ನೂ ನಿರಾಕರಿಸುತ್ತಾರೆ –

**ನ ಚ ಶೂನ್ಯಪರಿಜ್ಞಾನಾಚ್ಛೂನ್ಯಭಾವನಯಾಪಿ ಚ ।**

**ಮೋಕ್ಷಃ ಕಥಂ ಚ ನ ಭವೇದ್ಯದಿದಾನೀಂ ಕಥಂ ನ ಸಃ ॥ ೧೫೫ ॥**

ಶೂನ್ಯವೇ ತತ್ತ್ವವು, ಸಮಸ್ತವೂ ಅದರಲ್ಲಿಯೇ ಅಡಕವಾಗಿದೆ ಎನ್ನುವ ತಿಳಿವಳಿಕೆಯಿಂದಲೂ, ಹಾಗೆಯೇ ಶೂನ್ಯಧ್ಯಾನದಿಂದಲೂ ಹೇಗಾದರೂ ಮೋಕ್ಷವು ಆಗಲಾರದು. ಹಾಗೊಮ್ಮೆ ಮೋಕ್ಷವಾಗುವುದೆಂದು ಹೇಳಿದರೆ, ಆ ಮೋಕ್ಷವು ಶೂನ್ಯ ಪರಿಜ್ಞಾನ ಬಂದ ಕೂಡಲೇ ಏಕೆ ಆಗಲಾರದು?

ಹಾಗಾದರೆ ನಿಮ್ಮ ಮತದಲ್ಲಿ ಅಂಗೀಕರಿಸುವಂತೆ ನಮ್ಮ ಮತದಲ್ಲಿಯೂ ಜ್ಞಾನವಾದ ಮೇಲೆಯೂ ಸಂಸಾರದಲ್ಲಿ ಅವಸ್ಥಿತಿ ಎನ್ನುವುದು ಏಕೆ ಆಗಲಾರದು ಎಂದರೆ, ಅದರಲ್ಲಿ ವೈಷಮ್ಯವನ್ನು ಹೇಳುತ್ತಾರೆ –

**ಪರಪ್ರಸಾದನೇಚ್ಛೋಽಸ್ತು ವಿಲಂಬೋ ನಾಮ ಯುಜ್ಯತೇ ।**

**ಪುಮಿಚ್ಛಾಧೀನತಾ ನೋ ಚೇದ್ವಿಲಂಬಃ ಕಿಂ ಕೃತೋ ಭವೇತ್ ॥ ೧೫೬ ॥**

ತನ್ನಿಂದ ಅನುಷ್ಠಾನ ಮಾಡಲು ಸಾಧ್ಯವಾದ ಸಾಧನವನ್ನು ಮಾಡಿದವನೂ ಫಲಕ್ಕಾಗಿ ಇನ್ನೊಬ್ಬನ ಪ್ರಸಾದವನ್ನು ಇಚ್ಛಿಸುವುದಾದರೆ, ಫಲ ಹೊಂದುವಲ್ಲಿ ವಿಲಂಬವೆಂಬುದು ಕೂಡುವುದು. ಲೋಕದಲ್ಲಿ ಹಾಗೆ ಕಂಡಿದೆ. ಮೋಕ್ಷವು

ಮತ್ತೊಬ್ಬ ಪುರುಷನ ಪ್ರಸಾದದ ಅಧೀನವಲ್ಲವೆಂದು ಹೇಳವುದಾದರೆ, ಆಗ ಮೋಕ್ಷಕ್ಕೆ ವಿಲಂಬವು ಯಾವ ಕಾರಣದಿಂದ?

ಹಾಗಾದರೆ ಪರಪ್ರಸಾದದ ಅಪೇಕ್ಷೆ ಇಲ್ಲದ ಕೆಲವು ಕಾರ್ಯಗಳಲ್ಲಿಯೂ ಫಲ ವಿಲಂಬವು ಲೋಕದಲ್ಲಿ ಕಂಡಿದೆ (ಔಷಧ ವಿಶೇಷವನ್ನು ಸೇವಿಸಿದರೂ ಅದರ ಕಾರ್ಯವಾದ ರೋಗಪರಿಹಾರವು ವಿಲಂಬವಾಗಿ ಆಗುವುದು ಕಂಡಿದೆ). ಆದ್ದರಿಂದ ಪುರುಷನ ಇಚ್ಛಾಧೀನತ್ವವಿಲ್ಲದಿದ್ದರೆ ವಿಲಂಬವಾಗಬಾರದು ಎನ್ನುವುದು ಸರಿಯಲ್ಲ ಎಂದು ಹೇಳಿದರೆ –

**ಅನ್ಯತ್ರಾಪಿ ವಿಲಂಬಾಸ್ತು ಸ್ಯುರೀಶೇಚ್ಛಾ ನಿಮಿತ್ತತಃ ।**

**ಅನ್ಯಥಾಕಾರಣಂ ಚೇತ್ಸ್ಯಾತ್ಕಿಂ ಕಾರ್ಯಂ ನೋಪಜಾಯತೇ ॥ ೧೫೭ ॥**

**ಕಾರಣೇ ಸತಿ ಕಾರ್ಯಸ್ಯ ಭಾವಃ ಸುನಿಯತೋಽಸ್ಯ ಹಿ ।**

ಮೋಕ್ಷದ ದೆಶೆಯಿಂದ ಬೇರೆ ಕಡೆಗಳಲ್ಲಿಯೂ ವಿಲಂಬಗಳಾದರೂ ಅದಕ್ಕೆ, ಇಷ್ಟು ಸಮಯವಾದ ಮೇಲೆ ಈ ಕಾರ್ಯವು ಆಗಲಿ, ಎನ್ನುವ ಈಶ್ವರನ ಇಚ್ಛೆಯೇ ನಿಮಿತ್ತವು. ಈಶ್ವರನ ಇಚ್ಛೆಯು ನಿಮಿತ್ತವಲ್ಲವಾದರೆ, ಒಂದು ಕಾರ್ಯಕ್ಕೆ ಕಾರಣವು ಇರುವಾಗ ಅದು ಕೂಡಲೇ ಹುಟ್ಟುವುದಿಲ್ಲವೇಕೆ? ಸರ್ವಥಾ ಹುಟ್ಟಲೇಬೇಕು. ಪುರುಷೇಚ್ಛಾಧೀನತ್ವವು ಇಲ್ಲದಿದ್ದರೂ ಸಾಮಗ್ರಿ ವೈಕಲ್ಯ, ಪ್ರತಿಬಂಧಕಾದಿಗಳಿಂದ ವಿಲಂಬವಾಗಲಿಕ್ಕೆ ಸಾಧ್ಯವಿದೆ ಎಂದು ಹೇಳಿದರೆ, ಬೌದ್ಧನಿಗೆ ಹಾಗೆ ಹೇಳಲು ಶಕ್ಯವಿಲ್ಲ ಎನ್ನುತ್ತಾರೆ. ಏಕೆಂದರೆ ಈ ಬೌದ್ಧನ ಮತದಲ್ಲಿ ಕಾರಣವಿರಲಿಕ್ಕೆ ಕಾರ್ಯದ ಉತ್ಪತ್ತಿಯು ಸುನಿಯತವೇ ಆಗಿದೆ. 'ಸಮರ್ಥಸ್ಯ ಕ್ಷೇಪಾಯೋಗಾತ್' ಎನ್ನುವ ಅವನ ಮಾತಿನಿಂದಲೇ ಇದು ನಿಶ್ಚಿತವಾಗುವುದು. ಕಾರ್ಯೋತ್ಪತ್ತಿಯಲ್ಲಿ ಶಕ್ತನಾದವನಿಗೆ ವಿಕ್ಷೇಪ ಅಥವಾ ವಿಲಂಬವು ಕೂಡುವುದಿಲ್ಲ ಎಂದು ಈ ಮಾತಿನ ಅರ್ಥ. ಈ ಪ್ರಕಾರವಾಗಿ ಶೂನ್ಯವಿಜ್ಞಾನಾದಿಗಳು ಮೋಕ್ಷಕ್ಕೆ ಸಾಧನವಲ್ಲವೆಂದು ಸಿದ್ಧವಾಗುವುದು.

ಈಗ ವಿಜ್ಞಾನವಾದಿಗಳಿಂದ ಹೇಳಲ್ಪಟ್ಟ ಮೋಕ್ಷಸಾಧನವನ್ನು ದೂಷಿಸುತ್ತಾರೆ –

**ವಿಜ್ಞಾನವಾದಿನಶ್ಚೈವ ವಿಜ್ಞಾನಾದ್ವೈತವೇದನಾತ್ ॥ ೧೫೮ ॥**

**ವಿಜ್ಞಾನಭಾವನಾಚ್ಚೈವ ಮೋಕ್ಷೋ ನ ಘಟತೇ ಕ್ವಚಿತ್ ।**

ವಿಜ್ಞಾನಾದ್ವೈತ ಜ್ಞಾನದ ನಿಮತ್ತದಿಂದಲೂ (ವಿಜ್ಞಾನವೊಂದೇ ತತ್ತ್ವವು, ಅದರಿಂದ ಬೇರೆಯಾದ ತತ್ತ್ವವಿಲ್ಲ ಎನ್ನುವುದೇ ವಿಜ್ಞಾನಾದ್ವೈತ), ವಿಜ್ಞಾನಾದ್ವೈತ ಧ್ಯಾನದ ನಿಮಿತ್ತದಿಂದಲೂ ಮೋಕ್ಷವಾಗುವುದು ಎಂದು ಹೇಳುವ ವಿಜ್ಞಾನ ವಾದಿಗಳ ಮತದಲ್ಲಿಯೂ ಮೋಕ್ಷವು ಯಾವಕಾಲದಲ್ಲಿಯೂ ಕೂಡುವುದಿಲ್ಲ.

ಈಗ ವೈಭಾಷಿಕ ಸೌತ್ರಾಂತಿಕರಿಗೆ ಅಭಿಮತವಾದ ಮೋಕ್ಷಸಾಧನವನ್ನು

ನಿರಾಕರಿಸುತ್ತಾರೆ –

**ಅಂತರ್ಜ್ಞಾನಸ್ಯ ಬಾಹ್ಯೇ ಚ ಕ್ಷಣಿಕತ್ವಸ್ಯ ವೇದನಾತ್ ॥ ೧೫೯ ॥**

**ಭಾವನಾಚ್ಚೋಕ್ತಮಾರ್ಗೇಣ ಮಾನಾಭಾವಾನ್ನ ಮುಚ್ಯತೇ ।**

ಶರೀರದೊಳಗೆ ಇರತಕ್ಕ ಜ್ಞಾನಕ್ಕೂ ಬಾಹ್ಯದಲ್ಲಿರತಕ್ಕ ರೂಪಕ್ಕೂ ಯಾವ ಕ್ಷಣಿಕತ್ವವಿದೆಯೋ ಅದರ ಜ್ಞಾನದಿಂದಲೂ ಹಾಗೂ ಧ್ಯಾನದಿಂದಲೂ ಕೂಡ ಮೋಕ್ಷವಾಗುವುದಿಲ್ಲ. ಏಕೆಂದರೆ ಕ್ಷಣಿಕತ್ವ ಜ್ಞಾನದಿಂದ ಧ್ಯಾನ ಮಾಡುವವನಿಗೂ ಕ್ಷಣಿಕತ್ವವಿರುವುದು ಹಾಗೂ ಈ ವಿಷಯದಲ್ಲಿ ಪ್ರಮಾಣವೂ ಇರುವುದಿಲ್ಲ. ಈ ಮತವನ್ನು ಅಂಗೀಕರಿಸಿದ ಪಕ್ಷದಲ್ಲಿ – ಸಾಧನಾನುಷ್ಠಾನ ಕರ್ತೃವಿಗೆ ಕ್ಷಣಿಕತ್ವದ ಪ್ರಯುಕ್ತ ನಾಶವಿರುವುದರಿಂದ ಅವನಿಗೆ ಮೋಕ್ಷವಿಲ್ಲ, ಸಾಧನ ಮಾಡದವನಿಗೆ ಮೋಕ್ಷವು ಆಗಬೇಕಾಗುವುದು, ಕರ್ತೃವಿನ ಪುಣ್ಯಕ್ಕೂ ಕ್ಷಣಿಕತ್ವದಿಂದಾಗಿ ನಾಶವು, ಇತ್ಯಾದಿ ದೋಷಗಳು ಬರುತ್ತವೆ.

ಹೀಗೆ ವೇದಬಾಹ್ಯಮತಗಳನ್ನು ನಿರಾಕರಿಸಿ, ವೈದಿಕಮತಗಳನ್ನು ನಿರಾಕರಿಸುವ ಸಲುವಾಗಿ ಸಾಂಖ್ಯೋಕ್ತ ಮೋಕ್ಷಸಾಧನವನ್ನು ಅನುವಾದ ಮಾಡಿ ದೂಷಿಸುತ್ತಾರೆ–

**ಪ್ರಕೃತೇಃ ಪುರುಷಸ್ಯಾಪಿ ವಿವೇಕೋ ಮುಕ್ತಿಸಾಧನಮ್ ॥ ೧೬೦ ॥**

**ಇತಿ ಸಾಂಖ್ಯಾ ನ ಚೈತಸ್ಮಿನ್ಮಾನಮೀಶಾಪ್ರಸಾದತಃ ।**

ಅಂತಃಕರಣಾದಿ ರೂಪವಾದ ಪ್ರಕೃತಿಗೂ ಪುರುಷನಾದ ತನಗೂ ಸ್ವರೂಪ ಹಾಗೂ ಧರ್ಮದಿಂದ ಭೇದದರ್ಶನವು ಮೋಕ್ಷಕ್ಕೆ ಸಾಧನವು, ಹೀಗೆ ಸಾಂಖ್ಯರು ಹೇಳುತ್ತಾರೆ. ಇದು ಅಯುಕ್ತವು. ಈ ಅರ್ಥದಲ್ಲಿ ಪ್ರಮಾಣವು ಇಲ್ಲವೇ ಇಲ್ಲ. ಈಶ್ವರ ಪ್ರಸಾದವಿಲ್ಲದೆ ಕೇವಲ ಪ್ರಕೃತಿ–ಪುರುಷ ವಿವೇಕವು ಮೋಕ್ಷಸಾಧನವು ಎನ್ನುವ ಅರ್ಥದಲ್ಲಿ ಪ್ರಮಾಣವಿಲ್ಲ.

'ಯ ಏನಂ ವೇತ್ತಿ ಪುರುಷಂ ಪ್ರಕೃತಿಂ ಚ ಗುಣೈಃ ಸಹ। ಸರ್ವಥಾ ವರ್ತಮಾನೋಽಪಿ ನ ಸ ಭೂಯೋಽಭಿಜಾಯತೇ। ಕ್ಷೇತ್ರಕ್ಷೇತ್ರಜ್ಞಯೋರೇವಮಂತರಂ ಜ್ಞಾನ ಚಕ್ಷುಷಾ। ಭೂತಪ್ರಕೃತಿಮೋಕ್ಷಂ ಚ ಯೇ ವಿದುರ್ಯಾಂತಿ ತೇ ಪರಮ್' ಇತ್ಯಾದಿ ವಾಕ್ಯಗಳು ಪ್ರಕೃತಿ–ಪುರುಷ ವಿವೇಕಕ್ಕೆ ಮೋಕ್ಷಸಾಧನತ್ವವನ್ನು ಪ್ರತಿಪಾದಿಸುತ್ತವೆ. ಈಶ್ವರನ ಪ್ರಸಾದದ್ವಾರಾ ಮೋಕ್ಷವೆಂದು ಪಾರಂಪರ್ಯ ಕಲ್ಪಿಸಲಿಕ್ಕೆ ಕಾರಣವಿಲ್ಲ. ಆದ್ದರಿಂದ ಇವುಗಳಿಗೇನೆ ಸಾಕ್ಷಾತ್ ಮೋಕ್ಷಸಾಧನತ್ವ ವಿಷಯದಲ್ಲಿ ಪ್ರಾಮಾಣ್ಯವು ಎಂದರೆ –

**ಶ್ರುತಯಃ ಸ್ಮೃತಯಶ್ಚೈವ ಯದೀಶಸ್ಯ ಪ್ರಸಾದತಃ ॥ ೧೬೧ ॥**

**ವದಂತಿ ನಿಯಮಾನ್ಮುಕ್ತಿಂ ತಮೃತೇಽತಃ ಕುತೋ ಭವೇತ್ ।**

'ಯಸ್ಯ ಪ್ರಸಾದಾತ್' ಇತ್ಯಾದಿ ಶ್ರುತಿಗಳೂ, 'ಅಜ್ಞಾನಾಂ ಜ್ಞಾನದೋ ವಿಷ್ಣುಃ' ಇತ್ಯಾದಿ ಸ್ಮೃತಿಗಳೂ ಈಶ್ವರನ ಪ್ರಸಾದದ ದೆಶೆಯಿಂದ ನಿಯಮದಿಂದ (ಮುಚ್ಯತೇ ನಾಪರೇಣ, ಸ ಏವೈಕಃ ಇತ್ಯಾದಿ ವಚನದಿಂದ ಸಾಧನಾಂತರವನ್ನು ನಿರಾಕರಿಸಿ) ಮೋಕ್ಷವನ್ನು ಹೇಳುವ ಪ್ರಯುಕ್ತ, ಈಶಪ್ರಸಾದ ಹೊರತು ಬೇರೆ ಯಾವುದರಿಂದ ಮೋಕ್ಷವು ಆಗುವುದು? ಅಂದರೆ ಈಶ್ವರ ಪ್ರಸಾದದಿದಂಲೇ ಮೋಕ್ಷವು ಎಂದು ತಾತ್ಪರ್ಯ.

ವೈಶೇಷಿಕಾದಿಗಳಿಂದ ಹೇಳಲ್ಪಟ್ಟ ಮೋಕ್ಷಸಾಧನವನ್ನು ನಿರಾಕರಿಸುತ್ತಾರೆ –

**ಕಣಾದಯೋಗಾಕ್ಷಪಾದಾ ಅಪೀಶಸ್ಯ ಪ್ರಸಾದತಃ ।। ೧೬೨ ।।**

**ಮುಕ್ತಿಂ ಬ್ರುವಾಣ ಅಪ್ಯಾಹುಃ ಭೋಗಾದೇವ ಚ ಕರ್ಮಣಾಮ್ ।**

**ಕ್ಷಯಂ ಪ್ರಾಹುಃ ಕುತಶ್ಚೈತತ್ಪ್ರಸನ್ನೇ ಜಗದೀಶ್ವರೇ ।। ೧೬೩ ।।**

ಕೇವಲ ಸಾಂಖ್ಯಾದಿಗಳಷ್ಟೇ ಅಲ್ಲ, ಕಣಾದ ಪತಂಜಲಿ ಅಕ್ಷಪಾದ ಇವರೆಲ್ಲರೂ ಕೂಡ ಅನುಪಪನ್ನಭಾಷಿಗಳೇ. ಹಾಗಾದರೆ ಈ ಮೂವರೂ ಮುಕ್ತಿಯು ಈಶ್ವರ ಪ್ರಸಾದ ಸಾಧ್ಯವೆಂಬುದಾಗಿಯೇ ಹೇಳುತ್ತಾರೆ. ಆದಕಾರಣ ಇವರು ಅನುಪಪನ್ನ ಭಾಷಿಗಳು ಹೇಗೆ ಎಂದರೆ 'ಈಶಸ್ಯ' ಎಂಬ ವಚನದಿಂದ ಸಾಧಿಸುತ್ತಾರೆ –

ಈಶ್ವರನ ಪ್ರಸಾದದಿಂದ ಮುಕ್ತಿಯು ಎಂದು ಹೇಳಿದರೂ ಕೂಡ ಅದಕ್ಕೆ ಧರ್ಮಾದಿ ಸಹಕಾರಿತ್ವವನ್ನೇ ಇವರು ಅಂಗೀಕರಿಸಿರುವರು. ಆದ್ದರಿಂದ ಇವರು ಅನುಪಪನ್ನಭಾಷಿಗಳು. ಭೋಗಾದೇವ ಇತ್ಯಾದಿ ವಚನದಿಂದ ಬೇರೆ ಕಾರಣವನ್ನು ನೀಡುವುದರ ಮೂಲಕ ಇದನ್ನೇ ಸಮರ್ಥಿಸುತ್ತಾರೆ –

ತತ್ವಜ್ಞಾನಿಗಳು ಒಪ್ಪಿರುವಂತೆ ಜ್ಞಾನ ಹುಟ್ಟುವುದಕ್ಕೆ ಮುಂಚಿನ ಕರ್ಮಗಳಿಗೆ ಜ್ಞಾನದಿಂದಲೇ ವಿನಾಶ ಎನ್ನುವುದನ್ನು ವೈಶೇಷಿಕಾದಿಗಳು ಒಪ್ಪುವುದಿಲ್ಲ. ಮತ್ತೆ ಆ ಕರ್ಮಗಳಿಗೆ ಭೋಗದಿಂದಲೇ ವಿನಾಶವನ್ನು ಹೇಳುತ್ತಾರೆ. ಆದ್ದರಿಂದ ಅವರು ಅನುಪಪನ್ನಭಾಷಿಗಳು. ಜ್ಞಾನಿಗೂ ಕೂಡ ಕರ್ಮಗಳಿಗೆ ಫಲಭೋಗದಿಂದಲೇ ವಿನಾಶವು ಎಂದು ಯಾವ ಪ್ರಮಾಣದಿಂದ ತಿಳಿಯಬೇಕು? ಯಾವುದರಿಂದಲೂ ಇಲ್ಲ ಎಂದರ್ಥ. ಕರ್ಮವು ಪೂರ್ತಿಯಾಗಿ ನಾಶವಾಗದೆ ಮೋಕ್ಷವಾಗದು. ಮತ್ತೆ ಬೇರೆ ರೀತಿಯಿಂದ ಕರ್ಮಕ್ಷಯ ಸಾಧ್ಯವಿಲ್ಲ. ಆದ್ದರಿಂದ ಭೋಗದಿಂದಲೇ ಕರ್ಮ ಕ್ಷಯವು ಎಂದು ಕಲ್ಪಿಸುತ್ತೇವೆ ಎಂದರೆ – ಜ್ಞಾನದಿಂದ ಪ್ರಸನ್ನನಾದ ಭಗವಂತನೇ ಅಭುಕ್ತವಾದ ಫಲವುಳ್ಳ ಕರ್ಮಗಳನ್ನು ವಿನಾಶಗೊಳಿಸಿ ಮೋಕ್ಷವನ್ನು ನೀಡುವನು ಎನ್ನುವುದು ಕೂಡುವುದರಿಂದ ಅನ್ಯಥಾ ಕಲ್ಪಿಸುವುದು ಅಯುಕ್ತವು ಎನ್ನುತ್ತಾರೆ. ಜಗದೀಶ್ವರನಾದ ಭಗವಂತನಿಗೆ ಅಸಾಧ್ಯವಾದುದು ಯಾವುದಿದೆ?

ಈಶ್ವರನ ಪ್ರಸಾದದಿಂದಲೇ ಮೋಕ್ಷ ಎಂದು ಸಮರ್ಥಿಸಲು ಪ್ರಮಾಣಗಳನ್ನು

ಹೇಳುತ್ತಾರೆ –

**ಭಿದ್ಯತೇ ಹೃದಯಗ್ರಂಥಿಶ್ಛಿದ್ಯಂತೇ ಸರ್ವಸಂಶಯಾಃ ।**

**ಕ್ಷೀಯಂತೇ ಚಾಸ್ಯ ಕರ್ಮಾಣಿ ತಸ್ಮಿನ್ ದೃಷ್ಟೇ ಪರಾವರೇ ।। ೧೬೪ ।।**

**ಭಿದ್ಯತೇ ಹೃದಯಗ್ರಂಥಿಶ್ಛಿದ್ಯಂತೇ ಸರ್ವಸಂಶಯಾಃ ।**

**ಕ್ಷೀಯಂತೇ ಚಾಸ್ಯ ಕರ್ಮಾಣಿ ದೃಷ್ಟ ಏವಾತ್ಮನೀಶ್ವರೇ ।। ೧೬೫ ।।**

**ಇತಿ ಶ್ರುತಿಪುರಾಣಾದಿವಚನೇಭ್ಯೋಽನ್ಯಥಾಗತೇಃ ।**

ನಮಗಿಂತ ಉತ್ತಮರಾದ ಬ್ರಹ್ಮಾದಿಗಳು ಯಾರ ದೃಷ್ಟಿಯಿಂದ ಅವರರೋ ಅಂಥಹ ಸರ್ವೋತ್ತಮನಾದ ಶ್ರೀಹರಿಯ ದರ್ಶನವಾಗುತ್ತಿರಲು ಅವಿದ್ಯೆಯು ನಾಶವಾಗುತ್ತದೆ, ಎಲ್ಲ ಸಂಶಯಗಳೂ ನಾಶವಾಗುತ್ತವೆ, ಆ ಪುರುಷನ ಕರ್ಮಗಳೂ ನಾಶವಾಗುತ್ತವೆ. ಹೀಗೆ ಶ್ರುತಿಯು. ವ್ಯಾಪ್ತಗುಣವುಳ್ಳ ಜಗದೀಶ್ವರನ ದರ್ಶನವಾದ ಕೂಡಲೇ ಅವಿದ್ಯೆಯೂ, ಎಲ್ಲ ಸಂಶಯಗಳೂ ಹಾಗೂ ಕರ್ಮಗಳೂ ವಿನಾಶ ಹೊಂದುತ್ತವೆ. ಹೀಗೆ ಭಾಗವತ ವಾಕ್ಯವು. ಹೀಗೆ ಶ್ರುತಿ ಪುರಾಣ ಮೊದಲಾದ ವಚನಗಳ ದೆಶೆಯಿಂದ ಈಶ್ವರಪ್ರಸಾದದಿಂದಲೇ ಕರ್ಮಗಳಿಗೆ ವಿನಾಶವೆನ್ನುವುದು ನಿಶ್ಚಯವಾಗುವುದರಿಂದ ಫಲಭೋಗವಿಲ್ಲದೇನೆ ಕರ್ಮಗಳಿಗೆ ನಾಶವು ಕೂಡುತ್ತದೆ.

ಪಾಶುಪತಾದಿಗಳಿಂದ ಹೇಳಲ್ಪಟ್ಟ ಮೋಕ್ಷಸಾಧನವನ್ನು ನಿರಾಕರಿಸುತ್ತಾರೆ –

**ನ ಚ ಪಾಶುಪತಾದ್ಯುಕ್ತಶಿವಾದೀನಾಮನುಗ್ರಹಾತ್ ।। ೧೬೬ ।।**

ಪಾಶುಪತ ಶಬ್ದದಿಂದ ಶೈವ, ಪಾಶುಪತ, ಕಾಲಾಮುಖ ಹಾಗೂ ಮಹಾವ್ರತ ಎಂಬ ನಾಲ್ಕು ವಿಧರಾದವರು ಹೇಳಲ್ಪಡುತ್ತಾರೆ. ಆದಿ ಪದದಿಂದ ಸ್ಕಾಂದ ಸೌರಾದಿಗಳನ್ನೂ ಇಟ್ಟುಕೊಳ್ಳಬೇಕು. ಪಾಶುಪತಾದಿಗಳು ಹೇಳಿರುವಂತೆ ಶಿವಾದಿಗಳ ಅನುಗ್ರಹದಿಂದ ಮೋಕ್ಷವು ಆಗುವುದೇ ಇಲ್ಲ.

ಶಿವಾದಿಗಳ ಅನುಗ್ರಹದಿಂದ ಮೋಕ್ಷವು ಯಾವ ಕಾರಣದಿಂದ ಆಗುವುದಿಲ್ಲ ಎಂದರೆ –

**ನಾನ್ಯಃ ಪಂಥಾ ಇತಿ ಹ್ಯುಕ್ತಂ ಪುರುಷಜ್ಞಾನತಃ ಶ್ರುತೌ ।**

ಮೋಕ್ಷಕ್ಕೆ ಬೇರೆ ಮಾರ್ಗವು ಇಲ್ಲ ಎಂಬುದಾಗಿ ಮೋಕ್ಷಕ್ಕೆ ಅನ್ಯಮಾರ್ಗವನ್ನು ನಿಷೇಧ ಮಾಡಿ 'ತಮೇವ ವಿದ್ವಾನ್' ಎನ್ನುವ ಶ್ರುತಿಯು 'ಸಹಸ್ರಶೀರ್ಷಾ ಪುರುಷಃ' ಎನ್ನುವ ಶ್ರುತಿಯಲ್ಲಿ ಹೇಳಲ್ಪಟ್ಟ ಪುರುಷನ ಜ್ಞಾನದಿಂದಲೇ ಅಮೃತತ್ವವು ಎಂದು ಪ್ರತಿಪಾದಿಸುತ್ತದೆ. ಆದ್ದರಿಂದ ಈ ಪುರುಷನ ಅನುಗ್ರಹವೇ ಮುಕ್ತಿಗೆ ಕಾರಣವು ಶಿವಾದಿಗಳ ಅನುಗ್ರಹವಲ್ಲ ಎಂದು ತಿಳಿಯಬೇಕು.

ಹಾಗಾದರೆ ಪಶುಪತಿಯೆಂದು ಪ್ರಸಿದ್ಧನಾದ ಶಿವನೇ ಪುರುಷಸೂಕ್ತದಲ್ಲಿ ಪುರುಷನೆಂದು ಹೇಳಲ್ಪಟ್ಟಿದ್ದಾನೆ, ವಿಷ್ಣುವಲ್ಲ. ಆದ್ದರಿಂದ ವಿಷ್ಣುಜ್ಞಾನಕ್ಕೇ ಮೋಕ್ಷ ಸಾಧನತ್ವ ಎಂದು ಹೇಳುವುದು ಸರಿಯಲ್ಲ. ಪಶುಪುರುಷನ ಜ್ಞಾನವೂ ಕೂಡ ಪಶುಪತಿಯ ಅನುಗ್ರಹಕ್ಕೆ ಪರಮೋಪಯೋಗಿಯಾದುದರಿಂದ ಅದೇ ಮೋಕ್ಷಸಾಧನವೆಂದು ಹೇಳಲ್ಪಡುತ್ತವೆ. ಹೀಗೆ ಆಶಂಕಿಸಿದರೆ –

ಪುರುಷಶಬ್ದಕ್ಕೆ ವಿಷ್ಣುವಿನಲ್ಲಿ ಶಕ್ತಿಯಿಲ್ಲವಾದ್ದರಿಂದ ಪುರುಷಶಬ್ದವು ವಿಷ್ಣುವನ್ನು ಪ್ರತಿಪಾದಿಸುವುದಿಲ್ಲ ಎಂದು ಹೇಳಕೂಡದು. ಏಕೆಂದರೆ ನಾರಾಯಣಾನುವಾಕವಲ್ಲಿ ಶ್ರೀಹರಿಯಲ್ಲಿ ಪುರುಷಶಬ್ದಕ್ಕೆ ಪ್ರಯೋಗವಿದೆ ಎನ್ನುತ್ತಾರೆ –

**ಸರ್ವೇ ನಿಮೇಷಾ ಜಜ್ಞಿರೇ ವಿದ್ಯುತಃ ಪುರುಷಾದಧಿ ॥ ೧೬೭ ॥**

**ಏವಂ ಪುರುಷಶಬ್ದಶ್ಚ ಪ್ರಯುಕ್ತೋಽಬ್ಧಿಶಯೇ ಹರೌ ।**

ವಿಶೇಷವಾಗಿ ಪ್ರಕಾಶಿಸುವ ಸರ್ವೋತ್ತಮನಾದ ಪುರುಷನಿಂದ ಎಲ್ಲ ನಿಮೇಷಗಳೂ ಹುಟ್ಟಿದವು. 'ವಿದ್ಯುತಃ ಪುರುಷಾತ್' ಎನ್ನುವಲ್ಲಿ ಪಶುಪುರುಷನನ್ನೇ ಏಕೆ ಗ್ರಹಿಸಬಾರದು ಎಂದರೆ ಅದನ್ನು ನಿರಾಕರಿಸಲು 'ಅಬ್ಧಿಶಯೇ ಹರೌ' ಎಂದು ಹೇಳಲಾಗಿದೆ. 'ಅಂಭಸ್ಯಪಾರೇ ಯಮಂತಃ ಸಮುದ್ರೇ' ಎಂದು ಈ ಪುರುಷನಲ್ಲಿ ಅಬ್ಧಿಶಯತ್ವವು ಶ್ರುತವಾಗಿದೆ. 'ಮಹೋದಧಿಶಯೋಂತಕಃ' ಇತ್ಯಾದಿಗಳಿಂದ ಅದು ವಿಷ್ಣುವಿನ ಲಿಂಗವೆಂದು ತಿಳಿಯಲ್ಪಡುತ್ತದೆ. ಹೀಗೆ ಪುರುಷ ಶಬ್ದವಾದರೂ ಕ್ಷೀರಾಬ್ಧಿಶಾಯಿಯಾದ ಶ್ರೀಹರಿಯಲ್ಲಿ ಪ್ರಯೋಗಿಸಲ್ಪಟ್ಟಿವೆ. ಆದ್ದರಿಂದ ಪುರುಷಶಬ್ದದಿಂದ ಶ್ರೀಹರಿಯನ್ನೇ ಗ್ರಹಿಸತಕ್ಕದ್ದು.

ಪುರುಷಶಬ್ದವಾಚಿಯು ನಾರಾಯಣನೇ ಹೊರತು ಪಶುವಲ್ಲ ಎನ್ನುವುದನ್ನು ಕಾರಣಾಂತರದಿಂದಲೂ ಸಮರ್ಥಿಸುತ್ತಾರೆ –

**ನ ತಸ್ಯೇಶೇ ಕಶ್ಚನ ತಸ್ಯ ನಾಮ ಮಹದ್ಯಶಃ ॥ ೧೬೮ ॥**

**ಇತಿ ಚಾಧಿಪತಿಸ್ತಸ್ಯ ಪ್ರತಿಷಿದ್ಧಃ ಸ್ವಯಂ ಶ್ರುತೌ ।**

**ವಿಶ್ವತಃ ಪರಮಾಂ ನಿತ್ಯಂ ವಿಶ್ವಂ ನಾರಾಯಣಂ ಪರಿಮ್ ॥ ೧೬೯ ॥**

**ಇತಿ ಸರ್ವಾಧಿಕತ್ವೋಕ್ತ್ಯಾ ಸಮೋಽಪಿ ವಿನಿವಾರತಃ ।**

**ಸಮಾಧಿಕಸ್ಯ ರಾಹಿತ್ಯಾನ್ನೋಪಚಾರಪುಮಾನಸೌ ॥ ೧೭೦ ॥**

ಆ ಪುರುಷನನ್ನು ಬಿಟ್ಟು ಬೇರೆ ಯಾರೂ ಸಮರ್ಥರಿಲ್ಲ. ಮಹತ್ ಎಂದೂ ಯಶಃ ಎಂದೂ ಅವನಿಗೇ ಹೆಸರು. ಆ ಪುರುಷನಿಗೆ ಮತ್ತೊಬ್ಬ ನಿಯಾಮಕನಿಲ್ಲ ಎಂದು ಶ್ರುತಿಯಲ್ಲಿ (ನ ತಸ್ಯೇಶೇ ಕಶ್ಚನ ಎಂದು) ಮುಖತಃ ನಿಷೇಧಿತವಾಗಿದೆ. ಸರ್ವರೀತಿಯಿಂದಲೂ ಸರ್ವೋತ್ತಮನಾದ ಆ ಶಬ್ದವಾಚ್ಯನಾದ ಅವಿನಾಶಿಯಾದ

ಪೂರ್ಣನಾದ ಪಾಪವಿನಾಶಕನಾದ ನಾರಾಯಣನನ್ನು ತಿಳಿದು ಮುಕ್ತನಾಗುತ್ತಾನೆ ಎಂಬುದಾಗಿ ನಾರಾಯಣಾನುವಾಕದಲ್ಲಿಯೇ ಆ ಪುರುಷನಿಗೆ ಸರ್ವಾಧಿಕ್ಯವನ್ನೂ ಹೇಳಿರುವುದರಿಂದ ಅವನಿಗೆ ಸಮಾನಿಕನೂ ಸಂಪೂರ್ಣವಾಗಿ ನಿವಾರಿಸಲ್ಪಡುವನು. ಆ ಪುರುಷನಿಗೆ ಸಮಾನಿಕನೂ ಅಧಿಕನೂ ಇಲ್ಲದಿರುವ ಪ್ರಯುಕ್ತ ನಾರಾಯಣ ಅನುವಾಕದಲ್ಲಿ ಶ್ರುತನಾದವನು ಔಪಚಾರಿಕನಾದ ಪಶುಪುರುಷನು ಆಗುವುದಿಲ್ಲ. ವಿಷ್ಣುವಿಗೇ ಸಮಾಧಿಕರಾಹಿತ್ಯವು ಕೂಡುವುದರಿಂದ ಪುರುಷಶಬ್ದವಾಚ್ಯನು ವಿಷ್ಣುವೇ ಎಂದು ನಿಶ್ಚಯವಾಗುವುದು.

ಹೀಗೆ ಪುರುಷಶಬ್ದಕ್ಕೆ ವಿಷ್ಣುವಿನಲ್ಲಿ ವಾಚಕತ್ವ ಶಕ್ತಿಯಿದ್ದಾಗಲೂ, ಪುರುಷಸೂಕ್ತ ದಲ್ಲಿ ವಿಷ್ಣುಜ್ಞಾಪಕತ್ವ ಲಿಂಗವಿಲ್ಲದಿರುವುದರಿಂದ ಅದು ವಿಷ್ಣುಪರವಲ್ಲ ಎಂದರೆ –

**ಪುರುಷ ಏವೇದಂ ಸರ್ವಂ ಯದ್ಭೂತಂ ಯಚ್ಚ ಭವ್ಯಮ್ ।**

**ಉತಾಮೃತತ್ವಸ್ಯೇಶಾನೋ ಯದನ್ನೇನಾತಿರೋಹತಿ ॥ ೧೭೧ ॥**

**ಮುಕ್ತಾಮುಕ್ತಪರೇಶತ್ವಮಿತಿ ತಸ್ಯಾಹ ಸಾ ಶ್ರುತಿಃ ।**

**ಅಮೃತೇಶಾನವಚನಾತ್ಸರ್ವಸ್ಯೇಶಾನತೋದಿತಾ ॥ ೧೭೨ ॥**

ಹಿಂದೆ ಆಗಿಹೋದ, ಈಗ ಇರತಕ್ಕ ಮುಂದೆ ಆಗತಕ್ಕ ಯಾವ ಅಮುಕ್ತವಾದ ಜಗತ್ತಿರುವುದೋ ಇದೆಲ್ಲವೂ ಪುರುಷಾಧೀನವೇ. ಈ ಪುರುಷನು ಅನ್ನ ಶಬ್ದದಿಂದ ವಾಚ್ಯವಾದ (ಭಕ್ಷಣೀಯವಾದ) ಅಮುಕ್ತವರ್ಗವನ್ನು ಅತಿಕ್ರಮಿಸುತ್ತಾನೆ ಅಂದರೆ ಅಮುಕ್ತರಿಗೆ ಅಧಿಪತಿಯು. ಆದಕಾರಣ ಮುಕ್ತರ ಸಮೂಹಕ್ಕೂ ನಿಯಾಮಕನು. ಹೀಗೆ ಪುರುಷಸೂಕ್ತವು ಶ್ರೀಹರಿಗೆ ಮುಕ್ತಾಮುಕ್ತರ ನಿಯಾಮಕತ್ವವನ್ನು ಹೇಳುತ್ತದೆ. ಉತ್ತರಾರ್ಧದಲ್ಲಿ ಮುಕ್ತನಿಯಾಮಕತ್ವವನ್ನು ಹೇಳತಕ್ಕ ವಚನವಿರುವ ಪ್ರಯುಕ್ತ, ಪೂರ್ವಾರ್ಧದಲ್ಲಿ ಹೇಳಲ್ಪಟ್ಟ ಅಮುಕ್ತರೆಲ್ಲರಿಗೂ ನಿಯಾಮಕತ್ವವೇ ಹೇಳಲ್ಪಟ್ಟಿದೆ ಎಂದು ತಿಳಿಯತಕ್ಕದ್ದು.

**ಯದಿ ಸರ್ವತ್ವಮುದಿತಮುತೇಶ ಇತಿ ತದ್ವೃಥಾ ।**

**ಉತಶಬ್ದೋ ವದೇದೇಷ ಹೀಶತ್ವಸ್ಯ ಸಮುಚ್ಚಯಮ್ ॥ ೧೭೩ ॥**

ಪೂರ್ವಾರ್ಧದಲ್ಲಿ ಪುರುಷನಿಗೆ ಸರ್ವಾತ್ಮಕತ್ವವು ಹೇಳಲ್ಪಟ್ಟಿದೆ ಎಂದು ಅಂಗೀಕರಿಸಿದರೆ, ಉತ್ತರಾರ್ಧದಲ್ಲಿ ಅಮೃತಸ್ಯೋತೇಶಾನಃ ಎನ್ನುವಲ್ಲಿ ಉತ ಶಬ್ದವು ವ್ಯರ್ಥವಾಗುವುದು. ಹೇಗೆಂದರೆ, ಉತ್ತರಾರ್ಧದಲ್ಲಿರತಕ್ಕ ಉತ ಶಬ್ದವು ಈಶತ್ವಕ್ಕೆ ಸಮುಚ್ಚಯಾರ್ಥವನ್ನು ಹೇಳುವುದು. ಅದಕ್ಕೆ ಬೇರೆ ಅರ್ಥವು ಕೂಡುವುದಿಲ್ಲ. ಆದಕಾರಣ ಎರಡರಲ್ಲಿಯೂ ಈಶತ್ವವನ್ನು ಹೇಳದಿದ್ದರೆ ಅವುಗಳ ಸಮುಚ್ಚಯಾರ್ಥ ವನ್ನು ಹೇಳುವ ಉತ ಶಬ್ದಕ್ಕೆ ವೈಯರ್ಥ್ಯ ಬರುವುದು.

**ಪುರುಷೇಣೈವೇದಂ ವ್ಯಾಪ್ತಮಿತಿ ಬ್ರಾಹ್ಮಣಂ ಚಾಹ ತಂ ಪ್ರತಿ ।**

**ಏತಾವಾನಸ್ಯ ಮಹಿಮೇತಿ ಮಹಿಮ್ನೋ ವಚೋ ಹಿ ತತ್ ॥ ೧೭೩ ॥**

ಪುರುಷನಿಂದಲೇ ಇವೆಲ್ಲವೂ ವ್ಯಾಪ್ತವು (ಅಂದರೆ ವಶೀಕೃತವು ಎಂದರ್ಥ). ವ್ಯಾಪ್ತವೆಂದರೆ ಎಲ್ಲವೂ ಪರರಮಾತ್ಮನೇ ಆಗಿರುವನು ಎಂದು ಅರ್ಥ ಮಾಡುವುದು ಮಿಥ್ಯಾದೃಷ್ಟಿಯು. ಹೀಗೆಂದು ಶಾಖಾಂತರ ಬ್ರಾಹ್ಮಣವೂ ಕೂಡ ಈ ಮಂತ್ರವನ್ನು ಕುರಿತು ಪ್ರವೃತ್ತವಾಗಿದೆ. ಆದ್ದರಿಂದ ಸರ್ವತ್ವವು ಪುರುಷನಿಗೆ ಸರ್ವಾಭೇದತ್ವವನ್ನು ಹೇಳುವುದಿಲ್ಲ. ಸರ್ವಕ್ಕೂ ಪುರಷಾಧೀನತ್ವವನ್ನೇ ಹೇಳುತ್ತದೆ. 'ಏತಾವನಸ್ಯ ಮಹಿಮಾ' ಎಂದು ಈ ಪುರುಷನಿಗೆ ಉಕ್ತವಾದ ಮಹಿಮೆಗಳೆಲ್ಲವೂ 'ಪುರುಷ ಏವೇದಂ ಸರ್ವಂ' ಎಂಬ ಉತ್ತರವಾಕ್ಯದ ಬಲದಿಂದ ಪುರುಷನ ಮಹಿಮೆಯನ್ನು ಹೇಳತಕ್ಕ ವಚನವೆಂದು ತಿಳಿಯಲ್ಪಡುತ್ತದೆ.

**ಸೋಽಮೃತಸ್ಯಾಭಯಸ್ಯೇಶೋ ಮರ್ತ್ಯಮನ್ನಂ ಯದತ್ಯಗಾತ್ ।**

**ಇತ್ಯಮುಕ್ತಾಧಿಪತ್ಯಂ ತು ಪೂರ್ವಾರ್ಧೋಕ್ತಮನೂದ್ಯ ಚ ॥ ೧೭೪ ॥**

**ಉತಾಮೃತಸ್ಯೇಶ ಇತಿ ವಿಧತ್ತೇ ಮುಕ್ತಿಗೇಶತಾಮ್ ।**

**ಅತೋ ವಿಷ್ಣುಪರಿಜ್ಞಾನಾದೇವ ಮುಕ್ತಿರ್ನ ಚಾನ್ಯತಃ ॥ ೧೭೫ ॥**

ಮರಣಶೀಲವಾದ ಅದನೀಯವಾದ ಬ್ರಹ್ಮಾದಿ ಜಗತ್ತನ್ನು ಅತಿಕ್ರಮಿಸಿರುವ ಪ್ರಯುಕ್ತ ಆ ಪುರುಷನು ಭಯರಹಿತವಾದ ಮುಕ್ತರಿಗೆ ನಿಯಾಮಕನು. ಹೀಗೆ ಪುರುಷಸೂಕ್ತಾರ್ಥವನ್ನು ಪ್ರತಿಪಾದಿಸುವ ಭಾಗವತದ ವಚನವಿದೆ. ಆದಕಾರಣ ಪೂರ್ವಾರ್ಧದಲ್ಲಿ ಹೇಳಲ್ಪಟ್ಟ ಅಮುಕ್ತಾಧಿಪತ್ಯವನ್ನೂ ಹೇತುತ್ವೇನ ಅನುವಾದ ಮಾಡಿಕೊಂಡು, 'ಉತಾಮೃತಸ್ಯೇಶಾನಃ' ಎನ್ನುವ ಶ್ರುತಿಯಿಂದ ಮುಕ್ತರಿಗೂ ನಿಯಾಮಕತ್ವವನ್ನು ಪುರುಷಸೂಕ್ತವು ವಿಧಿಸುತ್ತದೆ. ಆದ್ದರಿಂದ ವಿಷ್ಣುಪರಿಜ್ಞಾನದಿಂದ ಹೊಂದಲ್ಪಟ್ಟ ವಿಷ್ಣುಪ್ರಸಾದದಿಂದಲೇ ಮುಕ್ತಿಯು. ಶಿವಾದಿಗಳ ಅನುಗ್ರಹದಿಂದಲ್ಲ.

ಪಾಶುಪತರೂ ಕೂಡ ಜ್ಞಾನಗಳಿಗೆ ಭೋಗದಿಂದಲೇ ಕರ್ಮಕ್ಷಯವನ್ನು ಹೇಳುತ್ತಾರೆ. ಅದೂ ಕೂಡ ಅನುಪಪನ್ನವೆಂದು ಹೇಳುತ್ತಾರೆ –

**ತದ್ಯಥೇತಿ ಶ್ರುತೇಶ್ಚೈವ ತತಃ ಕರ್ಮಕ್ಷಯೋ ಭವೇತ್ ।**

ಅಗ್ನಿಯಲ್ಲಿ ಪ್ರವೇಶಿಸಿದ ಹುಲ್ಲು ಕಡ್ಡಿ ಅಥವಾ ಹತ್ತಿಯ ರಾಶಿಯು ಹೇಗೆ ಸುಟ್ಟು ಭಸ್ಮವಾಗುವುದೋ ಹಾಗೆಯೇ ಜ್ಞಾನಿಯ ಎಲ್ಲ ಪಾಪಗಳೂ ವಿನಾಶವಾಗುತ್ತವೆ ಎಂದು ಹೇಳುವ ಶ್ರುತಿಯಿಂದ (ತದ್ಯಥೇಷೀಕಾತೂಲಮಗ್ನೌ ಪ್ರೋತಂ ಪ್ರದೂಯೇ ತೈವಂ ಹೈವಾಸ್ಯ ಸರ್ವೇ ಪಾಪ್ಮಾನಃ ಪ್ರದೂಯಂತೇ), ಆ ವಿಷ್ಣುಪರಿಜ್ಞಾನದಿಂದಲೇ ಕರ್ಮಕ್ಷಯವು ಆಗುವುದು.

ಮೇಲೆ ಹೇಳಿದ ಅರ್ಥವನ್ನು ಸ್ಪಷ್ಟ ಪಡಿಸಲು ಭಗವದ್ವಾಕ್ಯದ ಸಮಾಖ್ಯೆಯನ್ನು ಹೇಳುತ್ತಾರೆ –

**ಯಥೈಧಾಂಸಿ ಸಮಿದ್ಧೋಗ್ನಿರ್ಭಸ್ಮಸಾತ್ಕುರುತೇಽರ್ಜುನ ॥ ೧೭೬ ॥**

**ಜ್ಞಾನಾಗ್ನಿಃ ಸರ್ವಕರ್ಮಾಣಿ ಭಸ್ಮಸಾತ್ಕುರುತೇ ತಥಾ ।**

**ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ ॥ ೧೭೭ ॥**

**ಅಹಂ ತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾ ಶುಚಃ ।**

**ಇತ್ಯಾದಿ ಭಗವದ್ವಾಕ್ಯೈರುಕ್ತಾರ್ಥಶ್ಚಾವಸೀಯತೇ ॥ ೧೭೮ ॥**

ಹೇ ಅರ್ಜುನನೇ, ಚೆನ್ನಾಗಿ ಪ್ರಜ್ವಲಿಸುವ ಅಗ್ನಿಯು ಕಟ್ಟಿಗೆಗಳನ್ನು ಸುಟ್ಟು ಭಸ್ಮ ಮಾಡುವಂತೆ ಜ್ಞಾನಾಗ್ನಿಯು ಎಲ್ಲ ಕರ್ಮಗಳನ್ನೂ ಭಸ್ಮವನ್ನಾಗಿ ಮಾಡುತ್ತದೆ. ಎಲ್ಲ ಅವೈಷ್ಣವ ಧರ್ಮಗಳನ್ನೂ ಕಾಮ್ಯಕರ್ಮಗಳನ್ನೂ ಸಂಪೂರ್ಣವಾಗಿ ತ್ಯಜಿಸಿ, ನನ್ನನ್ನೇ ಶರಣು ಹೊಂದು. ಆದರಿಂದ ಪ್ರಸನ್ನನಾದ ನಾನು ನಿನ್ನನ್ನು ಎಲ್ಲ ಪಾಪಗಳಿಂದಲೂ ಬಿಡಿಸುವೆನು, ಮೋಕ್ಷವನ್ನೂ ನೀಡುವೆನು. ಶೋಕ ಬೇಡ. ಇತ್ಯಾದಿ ಭಗವಂತನ ವಾಕ್ಯಗಳಿಂದ ನಾವು ಹಿಂದೆ ಹೇಳಿದ ಅರ್ಥವೇ ನಿಶ್ಚಯವಾಗುತ್ತದೆ.

ಭಾಟ್ಟರ ಮೋಕ್ಷಸಾಧನವನ್ನು ಅನುವಾದ ಮಾಡಿ ನಿರಾಕರಿಸುತ್ತಾರೆ –

**ನಿತ್ಯನೈಮಿತ್ತಿಕಂ ಕರ್ಮ ಕುರ್ವನ್ನನ್ಯತಪರಿತ್ಯಜನ್ ।**

**ಮುಚ್ಯತೇ ಸಂಸೃತೇಶ್ಚೈತದಪ್ಯೇತೇನ ನಿರಾಕೃತಮ್ ॥ ೧೭೯ ॥**

ನಿತ್ಯ ನೈಮಿತ್ತಿಕ ಕರ್ಮಗಳನ್ನು ಮಾಡುತ್ತ, ಇತರವಾದ ಕಾಮ್ಯ ಹಾಗೂ ನಿಷಿದ್ಧ ಕರ್ಮಗಳನ್ನು ಬಿಡುತ್ತ, ಉಪಾತ್ತ ಅಂದರೆ ಪೂರ್ವದಲ್ಲಿ ಸಂಪಾದಿತವಾದ ಕರ್ಮಗಳನ್ನು ಭೋಗದಿಂದಲೇ ನಾಶಪಡಿಸುವ ಪುರುಷನು ಸಂಸಾರ ಬಂಧದಿಂದ ಬಿಡುಗಡೆ ಹೊಂದುತ್ತಾನೆ. ಹೀಗೆ ಹೇಳುವ ಭಾಟ್ಟರ ಮೋಕ್ಷಸಾಧನವೂ ಕೂಡ 'ನಾನ್ಯಃ ಪಂಥಾ' ಎನ್ನುವ ಶ್ರುತಿವಾಕ್ಯದಿಂದಲೇ ನಿರಾಕೃತವಾಗುತ್ತದೆ.

ಹಾಗಾದರೆ ಸೂತ್ರದಲ್ಲಿ ಹೇಳಿಲ್ಲದ ಈ ಮೋಕ್ಷಸಾಧನವೆಲ್ಲವನ್ನು ಯಾತಕ್ಕಾಗಿ ಹೇಳಿದ್ದು ಎಂದರೆ –

**ವಿದ್ಯೈವೇತೀಮಮೇವಾರ್ಥಂ ಸ್ವಯಮೇವಾಹ ವೇದರಾಟ್ ।**

'ವಿದ್ಯೈವ ತು ನಿರ್ಧಾರಣಾತ್' ಎನ್ನುವ ಸೂತ್ರದಿಂದ ಭಗವದ್ಜ್ಞಾನದಿಂದಲೇ ಮೋಕ್ಷವು ಎನ್ನುವ ಅರ್ಥವನ್ನು ವೇದವ್ಯಾಸರು ತಾವೇ ಸಾಕ್ಷಾತ್ತಾಗಿ (ಅರ್ಥತಃ ಅಲ್ಲ) ಹೇಳಿದ್ದಾರೆ.

ಸೂತ್ರಗಳಿಗೆ ಬೇರೆ ರೀತಿಯ ಅರ್ಥಗಳನ್ನು ಹೇಳುವ ವೃತ್ತಿಕಾರರ ಮತವನ್ನು ನಿರಾಕರಿಸುವ ಉದ್ದೇಶದಿಂದ ಸಮುಚ್ಚಯನಿಯಮವಾದಿಗಳ ಮತವನ್ನು (ಜ್ಞಾನ ಕರ್ಮಗಳು ಒಟ್ಟಾಗಿ ಸೇರಿ ಮೋಕ್ಷಕ್ಕೆ ಸಾಧನವೆನ್ನುವ ಮತ) ನಿರಾಕರಿಸುತ್ತಾರೆ –

**ವಿನಾ ಕರ್ಮ ನ ಮೋಕ್ಷಃ ಸ್ಯಾಜ್ಜ್ಞಾನೇನೇತ್ಯಪಿ ಸಾ ಶ್ರುತಿಃ ॥ ೧೮೦ ॥**

**ನಾನ್ಯಃ ಪಂಥಾ ಇತಿ ಹ್ಯೇವ ನಿವಾರಯತಿ ಸಾದರಮ್।**

ಕೇವಲ ಜ್ಞಾನದಿಂದ ಸಂಸಾರನಿವೃತ್ತಿಯು ಆಗುವುದು. ಆನಂದವೃದ್ಧಿಯಾದರೂ ಕರ್ಮಸಾಪೇಕ್ಷವಾದ ಜ್ಞಾನದಿಂದ ಎಂದು ವೇದವ್ಯಾಸರ ಸಿದ್ಧಾಂತ. ಆದ್ದರಿಂದ ಜ್ಞಾನಕರ್ಮಗಳಿಂದ ಮೋಕ್ಷವು ಎನ್ನುವ ಸಮುಚ್ಚಯನಿಯಮವಾದಿಗಳ ಮತವನ್ನು 'ವಿನಾ ಕರ್ಮ' ಇತ್ಯಾದಿ ವಚನದಿಂದ ಅನುವಾದ ಮಾಡಿ ನಿರಾಕರಿಸುತ್ತಾರೆ. ಕರ್ಮವನ್ನು ಹೊರತು ಕೇವಲ ಜ್ಞಾನದಿಂದ ಮೋಕ್ಷವು ಆಗಲಾರದು ಎನ್ನುವ ಈ ಮತವನ್ನೂ ಕೂಡ ಸೂತ್ರಗೃಹೀತವೇ ಆದ 'ನಾನ್ಯಃ ಪಂಥಾ' ಎನ್ನುವ ಶ್ರುತಿಯು ಸ್ಪಷ್ಟವಾಗಿ ನಿರಾಕರಿಸುತ್ತದೆ.

ಪರ ಮತ್ತು ಅಪರ ಎಂದು ಮುಕ್ತಿಯಲ್ಲಿ ಎರಡು ವಿಧ. ವೈಕುಂಠ ಹಾಗೂ ಸತ್ಯ ಲೋಕಾದಿಗಳ ಪ್ರಾಪ್ತಿಯು ಅಪರಮುಕ್ತಿಯು. ಅವಿದ್ಯೆಯು ನಾಶವಾಗುತ್ತಿದ್ದಂತೆಯೇ ಅದ್ವೈತ ಬ್ರಹ್ಮನಲ್ಲಿ ಸೇರುವುದು ಪರಮುಕ್ತಿಯು. ಪ್ರತೀಕಾದಿಗಳ ಉಪಾಸನೆಯು ಅಪರಮುಕ್ತಿಗೆ ಸಾಧನವಾದರೆ, ಏಕತ್ವಜ್ಞಾನವು ಪರಮುಕ್ತಿಗೆ ಸಾಧನವು. ಹೀಗೆ ಮಾಯಾವಾದಿಗಳು ಹೇಳುತ್ತಾರೆ. ಅದನ್ನು ನಿರಾಕರಿಸುತ್ತಾರೆ –

**ಅನ್ಯಥೋಪಾಸನಮಪಿ ತಮೇವಮಿತಿ ವಾದಿನೀ ॥ ೧೮೧ ॥**

**ನಿವಾರಯತ್ಯಾದರೇಣ ನ ಪ್ರತೀಕ ಇತಿ ಪ್ರಭುಃ ।**

ಆ ಪುರುಷನನ್ನು ಯಥಾರ್ಥವಾಗಿ ತಿಳಿದವನೇ ಮೋಕ್ಷವನ್ನು ಹೊಂದುತ್ತಾನೆ ಎಂದು ಹೇಳುವ ತಮೇವಂ ವಿದ್ವಾನ್ ಶ್ರುತಿಯು, ಅನ್ಯಥೋಪಾಸನೆಯೂ ಕೂಡ ಪುರುಷಾರ್ಥಕ್ಕೆ ಸಾಧನವೆಂಬುದನ್ನು ವಿಶ್ವಾಸದಿಂದ ನಿವಾರಿಸುತ್ತದೆ. ಪ್ರತಿಮೆಯೇ ಬ್ರಹ್ಮನು ಎನ್ನುವ ಮಿಥ್ಯೋಪಾಸನೆಯನ್ನು ಮಾಡತಕ್ಕದ್ದಲ್ಲ ಎಂದು ವೇದವ್ಯಾಸರು ನ ಪ್ರತೀಕೇ ಹಿ ಸಃ ಎನ್ನುವ ಸೂತ್ರದಿಂದ ಹೇಳಿರುವರು.

ಅನ್ಯಥಾಜ್ಞಾನದಿಂದ ಹಾಗೂ ಏಕತ್ವಜ್ಞಾನದಿಂದ ಮಾಡುವ ಉಪಾಸನೆಗಳು ಪುರುಷಾರ್ಥ ಸಾಧಕವಲ್ಲ ಎಂದಷ್ಟೇ ತಿಳಿಯುವುದಲ್ಲ, ಮತ್ತೆ ಅವು ಅನರ್ಥಕ್ಕೂ ಕಾರಣವು ಎಂದು ಹೇಳುತ್ತಾರೆ –

**ಅಂಧಂತಮಃ ಪ್ರವಿಶಂತಿ ಯೇ ತ್ವವಿದ್ಯಾಮುಪಾಸತೇ ॥ ೧೮೨ ॥**

**ಇತಿ ಶ್ರುತಿವಿರೋಧಾಚ್ಚ ನಾನ್ಯಥೋಪಾಸನಂ ಭವೇತ್ ।**

**ನ ಚಾಪ್ಯೇಕತ್ವವಿಜ್ಞಾನಾದುಕ್ತನ್ಯಾಯೇನ ಮುಚ್ಯತೇ ॥ ೧೮೩ ॥**

ಯಾರು ಅನ್ಯಥಾ ಉಪಾಸನೆ ಮಾಡುತ್ತಾರೋ ಅಂಥವರು ಅಂಧಂತಮಸ್ಸನ್ನು ಪ್ರವೇಶಿಸುತ್ತಾರೆ. ಹೀಗೆ ಶ್ರುತಿವಿರೋಧವಿರುವ ಪ್ರಯುಕ್ತ ಅನ್ಯಥೋಪಾಸನೆಯು ಪುರುಷಾರ್ಥಕ್ಕೆ ಸಾಧಕವಾಗಲಾರದು. ಹಿಂದೆ ಹೇಳಿದ ನ್ಯಾಯದಿಂದಲೇ ಏಕತ್ವ ಜ್ಞಾನದಿಂದಲೂ ಸಂಸಾರದಿಂದ ಬಿಡುಗಡೆಯಾಗದು ಅಂದರೆ ಪರಮೋಕ್ಷವಾಗದು.

ಹೀಗೆ ಪರಮಪುರುಷಾರ್ಥವಾದ ಮೋಕ್ಷಕ್ಕೆ ಭಗವದುಪಾಸನೆಯೊಂದೇ ಸಾಧನವು, ಬೇರೆ ಇಲ್ಲ. ಸರ್ವೋತ್ತಮತ್ವ ಜ್ಞಾನದಿಂದ ಶ್ರೀಹರಿಯನ್ನೇ ಉಪಾಸನೆ ಮಾಡಬೇಕು, ಶಿವಾದಿಗಳನ್ನಲ್ಲ. ಶ್ರುತ್ಯುಕ್ತವಾದ ವಿಜ್ಞಾನ ಆನಂದ ಇತ್ಯಾದಿ ವಿಷ್ಣು ವಿಶಿಷ್ಟವಾದ ಅನಂತ ಗುಣಗಳಲ್ಲಿ ತನ್ನ ಯೋಗ್ಯತೆಗೆ ಎಷ್ಟು ಶಕ್ಯವೋ ಅಷ್ಟನ್ನೂ ಧ್ಯಾನ ಮಾಡಬೇಕು. ಬ್ರಹ್ಮಾದಿಗಳ ಯೋಗ್ಯತೆಯಲ್ಲಿ ತಾರತಮ್ಯವಿರುವಂತೆ ಅವರು ಮಾಡುವ ಉಪಾಸನೆಯಲ್ಲಿಯೂ ತಾರತಮ್ಯವಿದೆ. ಇತ್ಯಾದಿ ವಿಷಯಗಳನ್ನು ಶ್ರುತಿ ಸ್ಮೃತಿಗಳ ಮೂಲಕ ಉಪಪಾದಿಸಿದರು. ಈಗ ಅಧಿಕರಣಾರ್ಥವನ್ನು ಉಪಸಂಹಾರ ಮಾಡುತ್ತಾರೆ –

**ಇತಿ ಸರ್ವಂ ಪ್ರವಿಜ್ಞಾಯ ಸರ್ವೈಸ್ತರ್ಕೈಃ ಸದಾಗಮೈಃ ।**

**ಉಪಾಸೀತ ಹರಿಂ ನಿತ್ಯಂ ಗುಣೈರೇವ ಸ್ವಯೋಗತಃ ।। ೧೮೪ ।।**

ಹೀಗೆ ಎಲ್ಲ ಸದ್ಯುಕ್ತಿಗಳಿಂದ ಹಾಗೂ ಸದಾಗಮಗಳಿಂದ ಎಲ್ಲವನ್ನು ಚೆನ್ನಾಗಿ ತಿಳಿದು, ತನ್ನ ಯೋಗ್ಯತಾನುಸಾರವಾದ ಅಂದರೆ ಉಪಾಸನೆಗೆ ಯೋಗ್ಯವಾದ ಗುಣಗಳಿಂದ ಯುಕ್ತನಾದ ಶ್ರೀಹರಿಯನ್ನು ಉಪಾಸನೆ ಮಾಡತಕ್ಕದ್ದು.

ಆ ಯೋಗ್ಯತೆಯನ್ನೇ ವಿವರಿಸುತ್ತಾರೆ –

**ಬ್ರಹ್ಮಾ ಸರ್ವಗುಣೈಶ್ಚೈವ ಕ್ರಿಯಾಸಾಮಾನ್ಯತಶ್ಚ ಗೀಃ ।**

**ಗುಣಸಾಮಾನ್ಯತೋ ರುದ್ರೋ ದ್ರವ್ಯಸಾಮಾನ್ಯತಃ ಪರೇ ।। ೧೮೫ ।।**

ಕೇವಲ ಚತುರ್ಮುಖ ಬ್ರಹ್ಮನೇ ಸಮಸ್ತವೇದಗಳಿಂದ ಹೇಳಲ್ಪಟ್ಟ ಸಮಸ್ತ ಗುಣ ಕ್ರಿಯಾರೂಪಾದಿಗಳಿಂದಲೂ ಶ್ರೀಹರಿಯನ್ನು ಉಪಾಸನೆ ಮಾಡತಕ್ಕದು. ಸರಸ್ವತಿ ಯಾದರೂ ಕ್ರಿಯಾಸಂಕೋಚದಿಂದ ಸಕಲ ವೇದೋಕ್ತ ಸಕಲ ಗುಣರೂಪಗಳನ್ನೂ, ರುದ್ರನು ಗುಣಸಂಕೋಚದಿಂದ ಸಮಸ್ತ ರೂಪಗಳನ್ನೂ ಉಪಾಸನೆ ಮಾಡಲಿಕ್ಕೆ ಯೋಗ್ಯರು. ಇಂದ್ರಾದಿಗಳು ಗುಣಕ್ರಿಯಾರೂಪಗಳ ಸಂಕೋಚದಿಂದ ಉಪಾಸನೆ ಮಾಡುತ್ತಾರೆ.

'ಇತಿ ಸರ್ವಂ ಪ್ರವಿಜ್ಞಾಯ' ಎನ್ನುವುದರಿಂದಲೇ 'ಸಮಾನ ಏವಂ ಚಾ ಭೇದಾತ್' ಎಂಬ ಅಧಿಕರಣದ ತಾತ್ಪರ್ಯವೂ ಉಕ್ತವಾಯಿತು. ಇದು ೧೨ನೆಯ ಅಧಿಕರಣವಾದರೆ ವಿದ್ಯಾಧಿಕರಣವು ೨೯ನೆಯದು. ಆದಕಾರಣ ಇದು ಬಹಳ ಹಿಂದೆಯೇ ವ್ಯಾಖ್ಯಾನವಾಗಬೇಕಿತ್ತು ಎಂದರೆ – ಪ್ರಕರಣಶುದ್ಧಿಯಿದ್ದರೆ ಪ್ರಮೇಯ ಸಂಗ್ರಹವು ಸುಲಭ. ಆದ್ದರಿಂದ ಕ್ರಮಭಂಗ ಎಂದು ಸುಧಾಕಾರರ ಸಮಾಧಾನ. ಹೇಗೆಂದರೆ, ಉಪಾಸನಾ ಸ್ವರೂಪವು ಅನಿಶ್ಚಿತವಾಗಿದ್ದರೆ ಯಾವ ವಿಚಾರಕ್ಕೂ ಅವಕಾಶ ಲಭಿಸುವುದಿಲ್ಲ. ಆದಕಾರಣ ಉಪಾಸನೆಯ ಸ್ವರೂಪವನ್ನು ಮೊದಲು ತೋರಿಸಿದರು. ಅದರಿಂದ ಉಪಾಸನೆಗೆ ಕರ್ತವ್ಯತ್ವವು ಸಮರ್ಥಿತವಾಗಿದೆ. ಆಮೇಲೆ

ಇತಿಕರ್ತವ್ಯತಾವನ್ನು ಜಿಜ್ಞಾಸೆ ಮಾಡುವಲ್ಲಿ ಯೋಗ್ಯತಾದಿ ವಿಚಾರವು ಅವಶ್ಯಕವು. ಹೀಗೆ ಸುಧಾಕಾರರು ಹೇಳುತ್ತಾರೆ.

## ಯಾವದಧಿಕಾರಾಧಿರಣಮ್

### ಓಂ ಯಾವದಧಿಕಾರಮವಸ್ಥಿತಿರಾಧಿಕಾರಿಕಾಣಾಂ ಓಂ

ಈ ಸೂತ್ರವು ಯಥಾ ಯಥಾ ಇತ್ಯಾದಿಗಳಿಂದ ಭಾಷ್ಯದಲ್ಲಿ ವ್ಯಾಖ್ಯಾನ ಮಾಡಲ್ಪಟ್ಟಿದೆ. ಆದರೆ ಅಧಿಕಾರ ವಿಶೇಷಕ್ಕೆ ಕಾರಣತ್ವವನ್ನು ಹೇಳಿರುವುದಿಲ್ಲ. ಮುಕ್ತಿಯಲ್ಲಿ ಎಂದು ಹೇಳಿರುವುದರಿಂದ ಸಂಸಾರದಲ್ಲಿ ಇಲ್ಲವೇ ಇಲ್ಲ ಎಂದು ಪ್ರತೀತವಾಗುವುದು. ಆನಂದಮಾತ್ರ ಗ್ರಹಣದಿಂದ ಗುಣತಾರತಮ್ಯಕ್ಕೆ ವ್ಯಾವೃತ್ತಿಯು ಪ್ರಾಪ್ತವಾಗುವುದು. ಧರ್ಮಿಗಳು ನಿರ್ದೇಶಿಸಲ್ಪಟ್ಟಿಲ್ಲ. ಹೀಗೆ ಭಾಷ್ಯದಲ್ಲಿಯ ವ್ಯಾಖ್ಯಾನವು ಸ್ಪಷ್ಟವಿಲ್ಲದ ಪ್ರಯುಕ್ತ ಇಲ್ಲಿ ಸ್ಪಷ್ಟವಾಗಿ ವ್ಯಾಖ್ಯಾನ ಮಾಡುತ್ತಾರೆ –

**ಅಧಿಕಾರವಿಶೇಷೇಣ ಭಕ್ತಿಜ್ಞಾನಸುಖಾದಿಭಿಃ ।**

**ವಿಶೇಷೋ ದೇವತಾದೀನಾಂ ಮೋಕ್ಷೇ ಚೈವ ವಿಶೇಷತಃ ॥ ೧೮೬ ॥**

ಯೋಗ್ಯತಾವಿಶೇಷದಿಂದ ಭಕ್ತಿ, ಜ್ಞಾನ, ಸುಖ ಮೊದಲಾದ ಗುಣಗಳಿಂದ ದೇವತೆಗಳೇ ಮೊದಲಾದವರಿಗೆ ವಿಶೇಷವಿದೆ. ಇಲ್ಲಿ ಸಾಮಾನ್ಯಾಕಾರದಿಂದ ಹೇಳಲ್ಪಟ್ಟಿರುವುದರಿಂದ ಮುಕ್ತಿಯಲ್ಲಿಯೂ, ಸಂಸಾರದಲ್ಲಿಯೂ ಕೂಡ ವಿಶೇಷವಿದೆ ಎಂದು ತಿಳಿಯಲ್ಪಡುತ್ತದೆ. ಅದರಲ್ಲಿಯೂ ವಿಶೇಷವಾಗಿ ಕಂಡುಬರುವುದು ಮುಕ್ತಿಯಲ್ಲಿಯೇ. ಈ ಅಭಿಪ್ರಾಯದಿಂದ ಮುಕ್ತಿಯಲ್ಲಿ ವಿಶೇಷವೆಂದು ಭಾಷ್ಯದಲ್ಲಿ ಹೇಳಿರುವುದು ಯುಕ್ತವೇ ಆಗಿದೆ. ಸಂಸಾರದಲ್ಲಿ ವಿಕ್ಷೇಪದ ಕಾರಣ ಸ್ವಲ್ಪ ಮಟ್ಟಿಗೆ ಯೋಗ್ಯತಾನುಸಾರಿತ್ವದಲ್ಲಿ ಏರುಪೇರಾಗುವುದು. ಮುಕ್ತಿಯಲ್ಲಿ ವಿಕ್ಷೇಪವಿಲ್ಲದ ಪ್ರಯುಕ್ತ ಯೋಗ್ಯತಾನುಸಾರಿತ್ವಕ್ಕೆ ವ್ಯತ್ಯಯವಿಲ್ಲ. ಆದಕಾರಣ ಭಾಷ್ಯದಲ್ಲಿ ಮುಕ್ತೌ ಎಂದು ಹೇಳಿದರು.

ಹಾಗಾದರೆ ಮುಕ್ತರಿಗೂ ಪರಸ್ಪರವಾಗಿ ದ್ವೇಷ ಅಸೂಯಾದಿ ಪ್ರಸಂಗದಿಂದ ಮುಕ್ತತ್ವಕ್ಕೆ ವಿರೋಧವು ಬರಬೇಕಾಗುವುದು ಎಂದು ಆಶಂಕಿಸಿದರೆ, ಅದನ್ನು ಪರಹರಿಸುವುದಕ್ಕಾಗಿ 'ಓಂ ಅಕ್ಷರಧಿಯಾಂ ತ್ವವಿರೋಧಃ ಸಾಮಾನ್ಯತದ್ಭಾವಾಭ್ಯಾ ಮೌಪಸದವತ್ತದುಕ್ತಂ ಓಂ' ಎನ್ನುವ ಸೂತ್ರವು ಹೊರಟಿದೆ. ಈ ಸೂತ್ರವೂ ಕೂಡ ಭಾಷ್ಯದಲ್ಲಿ ಸ್ಪಷ್ಟವಾಗಿಲ್ಲ. ಭಾಷ್ಯದಲ್ಲಿ ಉಕ್ತವಾಗಿರುವಂತೆ ದೋಷಾಭಾವಸಾಮ್ಯಾತ್ ಎನ್ನುವಲ್ಲಿ ಸಾಮ್ಯ ಪದಕ್ಕೆ ಪ್ರಯೋಜನವು ಕಾಣುವುದಿಲ್ಲ. ಶಿಷ್ಯವತ್ ಎನ್ನುವುದೂ ಅಯುಕ್ತವೆಂದು ತೋರುವುದು. ಹೀಗೆ ಭಾಷ್ಯದಲ್ಲಿ ಮೇಲ್ನೋಟಕ್ಕೆ ಅಯುಕ್ತವೆಂದು ಭಾಸವಾಗುವ ಸಂಗತಿಗಳನ್ನು ಇಲ್ಲಿನ ವ್ಯಾಖ್ಯಾನದಿಂದ ಸ್ಪಷ್ಟಪಡಿಸುತ್ತಾರೆ –

**ನ ತಾವತಾ ವಿರೋಧೋಽಸ್ತಿ ನಿರ್ದೋಷತ್ವಾತ್ಸಮಸ್ತಶಃ ।**

**ಆಭಾಸತ್ವಾತ್ಪರೇಷಾಂ ತದವರಾಣಾಂ ಚ ಸರ್ವಶಃ ॥ ೧೮೭ ॥**

ಪರಸ್ಪರ ಸಾಮ್ಯವಿದ್ದರೇನೆ ದ್ವೇಷಾದಿ ಪ್ರಸಂಗವು ಹಾಗೂ ಅದರಿಂದ ಮುಕ್ತತ್ವಕ್ಕೆ ವಿರೋಧವು. ಮುಕ್ತರು ಮಾತ್ಸರ್ಯಾದಿ ದೋಷರಹಿತರಾದುದರಿಂದ ಅವರಲ್ಲಿ ಪರಸ್ಪರವಾಗಿ ನಿರ್ದೋಷತ್ವ ರೂಪದಿಂದ ಸಾಮ್ಯವಿರುವುದು. ಉತ್ತಮರಿಂದ ಅಧಮರಾದ ಎಲ್ಲರಿಗೂ ಉತ್ತಮರ ಪ್ರತಿಬಿಂಬತ್ವವಿದ್ದ ಪ್ರಯುಕ್ತ ಪರಸ್ಪರವಾಗಿ ತಾರತಮ್ಯವಿರುವುದು. ಇದರಿಂದ ದ್ವೇಷಾದಿಗಳ ಪ್ರಸಕ್ತಿಯಿಲ್ಲ. ಹೀಗೆ ಒಂದು ರೀತಿಯಿಂದ ಸಾಮ್ಯವೂ ಮತ್ತೊಂದು ರೀತಿಯಿಂದ ತಾರತಮ್ಯವೂ ಕೂಡುವ ಪ್ರಯುಕ್ತ ಮುಕ್ತತ್ವಕ್ಕೆ ವಿರೋಧವಿಲ್ಲ. ಸಮಸ್ತಶಃ ಎನ್ನುವುದು ಭಾಷ್ಯದಲ್ಲಿನ ಸಾಮ್ಯ ಶಬ್ದಕ್ಕೂ, ಆಭಾಸತ್ವಾತ್ ಎನ್ನುವುದು ಉತ್ತಮೇಭ್ಯಃ ಎನ್ನುವುದಕ್ಕೂ ವ್ಯಾಖ್ಯಾನವು.

ಇದನ್ನು ವಿವರಿಸಲಿಕ್ಕಾಗಿಯೇ 'ಯತಃ' ಇತ್ಯಾದಿ ವಚನದಿಂದ ದೃಷ್ಟಾಂತವನ್ನು ವ್ಯಾಖ್ಯಾಸ ಮಾಡುತ್ತಾರೆ –

**ಯತೋಽವರಾಣಾಂ ಸರ್ವೇಽಪಿ ಗುಣಾಃ ಸರ್ವಾಃ ಕ್ರಿಯಾ ಅಪಿ ।**

**ನಿಯಮೇನ್ನೈವ ಪೂರ್ವೇಷಾಂ ಸುಪ್ರಸಾದನಿಬಂಧನಾಃ ॥ ೧೮೮ ॥**

**ಅತಃ ಸಚ್ಛಿಷ್ಯವತ್ತೇಷಾಂ ನೈವೇರ್ಷ್ಯಾದಿಃ ಕಥಂಚನ ।**

ಯೋಗ್ಯತೆಯಲ್ಲಿ ನಿಕೃಷ್ಟರಾದವರ ಎಲ್ಲ ಗುಣಗಳೂ ಎಲ್ಲ ಕ್ರಿಯೆಗಳೂ ಕೂಡ ನಿಯಮವಾಗಿ ಅವರಿಗಿಂತ ಉತ್ತಮರ ಸುಪ್ರಸಾದವೆಂಬ ನಿಬಂಧನೆಗೆ ಒಳಪಟ್ಟಿರುವ ಕಾರಣ, ಗುರುಗಳಲ್ಲಿ ನಿರ್ದುಷ್ಟವಾದ ಭಕ್ತಿಯುಳ್ಳ ಶಿಷ್ಯನಂತೆಯೇ, ಮುಕ್ತರಲ್ಲಿ ಯಾವ ಪ್ರಕಾರದಿದಂಲೂ ಪರಸ್ಪರ ಅಸೂಯಾದಿಗಳು ಇರುವುದೇ ಇಲ್ಲ.

ಮಾಯಾವಾದಿಗಳು ಯಾವದಧಿಕಾರಂ ಎನ್ನುವ ಮೊದಲನೆಯ ಸೂತ್ರಕ್ಕೇನೆ ಇವೆಲ್ಲ ಅರ್ಥವು ಎಂದು ವರ್ಣಿಸುತ್ತ, ಅಕ್ಷರಧಿಯಾಂ ಎನ್ನುವದು ಬೇರೆಯೇ ಅಧಿಕರಣವೆಂದು ವ್ಯಾಖ್ಯಾನ ಮಾಡುತ್ತಾರೆ. ಇದನ್ನು ನಿರಾಕರಿಸುತ್ತಾರೆ –

**ನ ಚ ಸಂಸಾರಿದೇವಾನಾಂ ಕಾಲೇಯತ್ತಾಪರೇ ಇಮೇ ॥ ೧೮೯ ॥**

**ಸೂತ್ರೇ ಹ್ಯಾರಬ್ಧಮಾತ್ರಸ್ಯ ಭೋಗೇನೈವ ಕ್ಷಯೋ ಧ್ರುವಃ ।**

**ಅನಾರಬ್ಧಸ್ಯ ಭೋಗೇನ ತ್ವಿತರೇ ಇತಿ ಚೋದಿತಃ ॥ ೧೯೦ ॥**

**ಪೌನರುಕ್ತ್ಯೇನ ತೇನ್ನೈತೇ ಉಕ್ತಾರ್ಥೇ ಇತಿ ನಿಶ್ಚಯಃ ।**

ಸಂಸಾರಿಗಳಾದ ದೇವತೆಗಳಿಗೆ, ಪ್ರಾರಬ್ಧಕರ್ಮದ ಫಲಭೋಗವು ತೀರುವವರೆಗೆ ಸಂಸಾರದಲ್ಲಿ ಅವಸ್ಥಿತಿಯು ಎಂಬ ಕಾಲಮರ್ಯಾದೆಯನ್ನು ಪ್ರತಿಪಾದಿಸುವುದು ಈ ಸೂತ್ರಗಳ ಉದ್ದೇಶವಲ್ಲ. ಏಕೆಂದರೆ, ಅನಾರಬ್ಧ ಕರ್ಮಕ್ಕೆ ಜ್ಞಾನದಿಂದಲೇ ನಾಶವು, ಪ್ರಾರಬ್ಧ ಕರ್ಮಕ್ಕೆ ಮಾತ್ರ ಭೋಗದಿಂದಲೇ ನಾಶವೆನ್ನುವುದು ನಿಶ್ಚಿತ. ಈ ಅರ್ಥವು

'ಅನಾರಬ್ಧಕಾರ್ಯೇ ಏವ ತು ಪೂರ್ವೇ ತದವಧೇಃ' ಎನ್ನುವ ಸೂತ್ರದಿಂದಲೂ, 'ಭೋಗೇನ ತ್ವಿತರೇ ಕ್ಷಪಯಿತ್ವಾಥ ಸಂಪತ್ಸ್ಯತೇ' ಎನ್ನುವ ಸೂತ್ರದಿಂದಲೂ ಹೇಳಲ್ಪಟ್ಟಿದೆ. ಹೀಗೆ ಮಾಯಾವಾದಿಗಳ ವ್ಯಾಖ್ಯಾನಕ್ಕೆ ಪುನರುಕ್ತಿ ಎಂಬ ದೋಷ ಬರುವುದರಿಂದ ಅಪವ್ಯಾಖ್ಯಾನವು. ಹೀಗೆ ಈ ಸೂತ್ರಗಳು ನಮ್ಮಿಂದ ಹೇಳಲ್ಪಟ್ಟ ಅರ್ಥವನ್ನೇ ಹೊಂದಿವೆ ಎಂದು ನಿಶ್ಚಯವಾಗುವುದು.

## ಇಯದಾಮನನಾಧಿಕರಣಮ್

### ಓಂ ಇಯದಾಮನನಾತ್ ಓಂ

ಯಾವ ಜ್ಞಾನಯೋಗ್ಯರಿಗೆ ಮುಕ್ತಿಸಂಸಾರಗಳಲ್ಲಿ ಈ ತಾರತಮ್ಯವು ಸಮರ್ಥನೆ ಮಾಡಲ್ಪಟ್ಟಿತೋ, ಅವರುಗಳು ಛಾಂದೋಗ ಉಪನಿಷತ್ತಿನಲ್ಲಿ, ನಾಮವಾಗಾದಿ ಕ್ರಮದಿಂದ ಪ್ರಾಣನವರೆಗೆ ಹೇಳಲ್ಪಟ್ಟಿದ್ದಾರೆ. ಅದರಲ್ಲಿ ಪ್ರಾಣನೇ ಅಧಿಕಾರಿಗಳ ತಾರತಮ್ಯಕ್ಕೆ ಅವಧಿಯೋ ಅಥವಾ ಅವನಿಗಿಂತ ಕೆಳಗೆ ಮತ್ತೊಬ್ಬನಿರುವನೋ ಎಂದು ಸಂಶಯವು ಬರಲು, ದೇವತಾ ತಾರತಮ್ಯದ ಅವಧಿಯು ಪ್ರಾಣನ ಪರ್ಯಂತವೇ ಎಂದು ಸಿದ್ಧಾಂತ. ಅದರಲ್ಲಿ ನಾಮಾದಿ ಆ ದೇವತೆಗಳು ಯಾರು ಎಂದು ತಿಳಿಯುವುದಿಲ್ಲ. ಅವರಲ್ಲಿ ಹದಿನೈದು ಮಂದಿಯೇ ಎನ್ನುವುದು ಹೇಗೆ, ಇನ್ನೂ ಹೆಚ್ಚಿರಬಹುದಲ್ಲ ಎಂದು ಆಶಂಕೆ ಬಂದರೆ ಅದನ್ನು ನಿವಾರಿಸಲು ಬೃಹತ್ ಸಂಹಿತಾ ವಚನವನ್ನು ಪಠಿಸುತ್ತಾರೆ –

**ಉಷಾ ಸ್ವಾಹಾ ಚ ಪರ್ಜನ್ಯೋ ಮಿತ್ರೋಽಗ್ನಿರ್ವರುಣೋ ವಿಧುಃ ।। ೧೯೧ ।।**

**ಪ್ರವಹೋಽನಿರುದ್ಧ ಇಂದ್ರೋಮೇ ರುದ್ರೋ ವಾಣೀ ಚ ಮಾರುತಃ ।**

**ಉತ್ತರೋತ್ತರಶ್ಶ್ರೇತೇ ಗುಣೈಸ್ಸರ್ವೈಶ್ಚ ಮುಕ್ತಿಗಾಃ ।। ೧೯೨ ।।**

ಅಶ್ವಿನಿ ದೇವತೆಗಳ ಹೆಂಡತಿ ಉಷಾ, ಅಗ್ನಿಯ ಹೆಂಡತಿ ಸ್ವಾಹಾ, ಪರ್ಜನ್ಯ ಹಾಗೂ ಮಿತ್ರ (ಇವೆರಡೂ ಆದಿತ್ಯನ ರೂಪಗಳು), ಅಗ್ನಿ, ವರುಣ, ಚಂದ್ರ, ಪ್ರವಹ ವಾಯು, ಕಾಮಪುತ್ರ ಅನಿರುದ್ಧ, ಇಂದ್ರ ಹಾಗೂ ಪಾರ್ವತಿ, ರುದ್ರ, ಭಾರತೀದೇವಿ, ಮುಖ್ಯಪ್ರಾಣ, ಮುಕ್ತಿಯಲ್ಲಿ ಹಾಗೂ ಸಂಸಾರದಲ್ಲಿರತಕ್ಕ ಇವರೆಲ್ಲರೂ ಕೂಡ, ಎಲ್ಲ ಗುಣಗಳಿಂದಲೂ ಹಿಂದೆ ಹೇಳಿದ ಕ್ರಮದಿಂದಲೇ ತಾರತಮ್ಯದಲ್ಲಿ ಉತ್ತರೋತ್ತರ ಅಧಿಕರಾಗಿರುತ್ತಾರೆ.

ಮೇಲೆ ಹೇಳಿದವರಿಗಿಂತ ಇನ್ನೂ ಅಧಿಕರು ಇರುವರು ಎಂಬ ಶಂಕೆಯನ್ನು ನಿವಾರಿಸುವುದಕ್ಕಾಗಿ ಇವರುಗಳ ಸಮಾನರನ್ನೂ, ಮಧ್ಯದವರನ್ನೂ ಹೇಳುತ್ತಾರೆ –

**ಸೂರ್ಯಧರ್ಮೌ ಯಥಾ ಸೋಮೋ ಮನುರ್ದಕ್ಷೋ ಬೃಹಸ್ಪತಿಃ ।**

**ಶಚೀ ರತಿಶ್ಚಾನಿರುದ್ಧಸಮಾಸ್ತಾರಾ ಚ ಮಿತ್ರವತ್ ।। ೧೯೩ ।।**

ಸೋಮವಚ್ಛತರೂಪಾ ತು ಪ್ರಸೂತಿರ್ವಹ್ನಿವದ್ವಿರಾಟ್ ।
ಪರ್ಜನ್ಯವದ್ವಾರುಣೀ ಚ ತಥಾ ಸಂಜ್ಞಾ ಚ ರೋಹಿಣೀ ॥ ೧೯೪ ॥
ಧಾರ್ಮಿ ಚ ಮಿತ್ರವತ್ವೇವ ಪ್ರಾವಹೀ ಪರಿಕೀರ್ತಿತಾ ।
ಮಿತ್ರಪರ್ಜನ್ಯಮಧ್ಯಸ್ಥಾವಶ್ವಿನೌ ವಿಘ್ನವಿತ್ತಪೌ ॥ ೧೯೫ ॥
ಭೃಗುರಗ್ನಿಸಮೋ ಮಿತ್ರಸ್ತನ್ಮಧ್ಯೇ ಬ್ರಹ್ಮಪುತ್ರಕಾಃ ।
ವರುಣಾಗ್ನ್ಯಂತರಾ ತತ್ರ ನಾರದಃ ಪ್ರಾಯ ಇಂದ್ರವತ್ ॥ ೧೯೬ ॥
ಕಾಮಃ ಸುಪರ್ಣೀ ಚೋಮಾವದ್ವೀಂದ್ರೋ ರುದ್ರವದೀರಿತಃ ।
ನಿಋತಿರ್ಮಿತ್ರಸದೃಶೋ ವಿಶ್ವಾಮಿತ್ರಃ ಕಸೂನುವತ್ ॥ ೧೯೭ ॥
ವೈವಸ್ವತೋ ಮನುಶ್ಚಾಶ್ವಿಪಶ್ಚಾದನ್ಯೇ ತತೋಽವರಾಃ ।
ಚ್ಯವನೋಚ್ಯಥ್ಯವೈನ್ಯಾಶ್ಚ ಶಶಿಬಿಂದುಶ್ಚ ಹೈಹಯಃ ॥ ೧೯೮ ॥
ತದ್ವಚ್ಚ ವಿಪ್ರರಾಜನ್ಯವಿಶೇಷೋಽತ್ರಾಪಿ ಕಶ್ಚನ ।
ತದ್ವತ್ ಪ್ರಿಯವ್ರತಶ್ಚಾಪಿ ತದನ್ಯಾಃ ಶತದೇವತಾಃ ॥ ೧೯೯ ॥
ಪರ್ಜನ್ಯಮಿತ್ರಾಂತರಾಲೇ ತದನ್ಯೇ ತು ತತೋಽವರಾಃ ।

ಯಥಾ ಸೋಮೋ ತಥಾ ಸೂರ್ಯಧರ್ಮೌ ಎಂದು ಅನ್ವಯ. ಅಂದರೆ ಸೂರ್ಯನು ಯಮನು ಇವರಿಬ್ಬರೂ ಸೋಮನಿಗೆ ಸಮ. ಸ್ವಾಯಂಭುವ ಮನು, ದಕ್ಷಪ್ರಜಾಪತಿ, ಬೃಹಸ್ಪತಿ, ಶಚೀದೇವಿ, ರತಿದೇವಿ ಈ ಐವರು ಅನಿರುದ್ಧನಿಗೆ ಸಮ. ಬೃಹಸ್ಪತಿಯ ಹೆಂಡತಿಯಾದ ತಾರಾದೇವಿಯಾದರೂ ಮಿತ್ರಾಖ್ಯ ಸೂರ್ಯನಿಗೆ ಸಮ. ಸ್ವಾಯಂಭುವಿನ ಹೆಂಡತಿಯಾದ ಶತರೂಪಾ ಸೋಮನಿಗೆ ಸಮ. ದಕ್ಷನ ಹೆಂಡತಿಯಾದ ಪ್ರಸೂತಿಯು ಅಗ್ನಿಗೆ ಸಮ. ಅನಿರುದ್ಧನ ಹೆಂಡತಿಯಾದ ವಿರಾಟ್, ವರುಣನ ಪತ್ನಿ ವಾರುಣೀ, ಸೂರ್ಯ ಪತ್ನಿ ಸಂಜ್ಞಾ, ಸೋಮನ ಪತ್ನಿ ರೋಹಿಣೀ, ಯಮನ ಹೆಂಡತಿ ಇವರುಗಳು ಪರ್ಜನ್ಯಾಖ್ಯ ಸೂರ್ಯನಿಗೆ ಸಮ. ಪ್ರವಹನ ಹೆಂಡತಿಯಾದರೂ ಮಿತ್ರನಿಗೆ ಸಮ. ಅಶ್ವಿನೀದೇವತೆಗಳಿಬ್ಬರು, ಗಣಪತಿ, ಕುಬೇರ ಈ ನಾಲ್ವರು ಸಮಾನಿಕರಾಗಿದ್ದು ಮಿತ್ರಾಖ್ಯ ಸೂರ್ಯನಿಂದ ಅಧಮರು, ಪರ್ಜನ್ಯನ ದೆಶೆಯಿಂದ ಉತ್ತಮರು. ಆದಪ್ರಯುಕ್ತ ಮಿತ್ರಪರ್ಜನ್ಯರ ನಡುವೆ ಇವರಿಗೆ ಸ್ಥಾನ. ಭೃಗುಋಷಿಯು ಅಗ್ನಿಗೆ ಸಮ. ಬ್ರಹ್ಮಪುತ್ರರಾದ ಮರೀಚ್ಯಾದಿಗಳು ಮಿತ್ರ ಅಗ್ನಿಯರ ಮಧ್ಯದಲ್ಲಿ ಬರುತ್ತಾರೆ. ಪರಸ್ಪರ ಸಮಾನಿಕರಾದ ಮರೀಚ್ಯಾದಿಗಳು ಮಿತ್ರನಿಗಿಂತ ಉತ್ತಮರೂ ಅಗ್ನಿಗಿಂತ ಅಧಮರೂ ಆಗಿರುತ್ತಾರೆ. ಆ ಬ್ರಹ್ಮಪುತ್ರರಲ್ಲಿ ನಾರದನು ವರುಣ ಅಗ್ನಿಯರ ಮಧ್ಯದಲ್ಲಿ, ಅಂದರೆ ವರುಣನಿಂದ ಅಧಮನು ಅಗ್ನಿಯಿಂದ

ವರುಣ ಅಗ್ನಿಯರ ಮಧ್ಯದಲ್ಲಿ, ಅಂದರೆ ವರುಣನಿಂದ ಅಧಮನು ಅಗ್ನಿಯಿಂದ ಉತ್ತಮನು. ದಕ್ಷ, ಭೃಗು, ನಾರದ ಇವರುಗಳನ್ನು ಪ್ರತ್ಯೇಕವಾಗಿ ಹೇಳಿರುವುದರಿಂದ ಬ್ರಹ್ಮಪುತ್ರರಾದ ಮರೀಚ್ಯಾದಿಗಳು ಏಳು ಜನ ಮಾತ್ರ. ಮನ್ಮಥನು ಪ್ರಾಯಶಃ ಇಂದ್ರನಂತೆಯೇ ಅಂದರೆ ಇಂದ್ರನಿಗೆ ಸ್ವಲ್ಪ ಕಡಿಮೆಯವನು. ಗರುಡನ ಪತ್ನಿಯು ಪಾರ್ವತಿಯಂತೆ. ಗರುಡನು ರುದ್ರನಂತೆ. ನಿರ್‌ಋತಿ ಮಿತ್ರನಿಗೆ ಸಮ. ವಿಶ್ವಾಮಿತ್ರ ಋಷಿ ಹಾಗೆಯೇ ವೈವಸ್ವತ ಮನುವೂ ಬ್ರಹ್ಮಪುತ್ರರಾದ ಮರೀಚ್ಯಾದಿಗಳಿಗೆ ಸಮ. ಸ್ವಾಯಂಭುವ ಮನು, ವೈವಸ್ವತ ಮನು ಹಾಗೂ ಭಗವದವತಾರವಾದ ತಾಪಸ ಮನು ಇವರನ್ನು ಬಿಟ್ಟು ಉಳಿದ ಮನುಗಳು ವೈವಸ್ವತನಿಗಿಂತ ಕೆಳಗಿನವರು, ಆದರೆ ಅಶ್ವಿನಿದೇವತೆಗಳಿಗಿಂತ ಮೇಲಿನವರು ಅಂದರೆ ಪರ್ಜನ್ಯನಿಂದ ಉತ್ತಮರು. ಚ್ಯವನ, ಉಚಥ್ಯ, ವೈನ್ಯ, ಶಶಿಬಿಂದು, ಹೈಹಯ ಇವರುಗಳು ಹನ್ನೊಂದು ಮನುಗಳಿಗೆ ಸಮಾನರು. ಇವರಲ್ಲಿಯೂ ವಿಪ್ರತ್ವ, ಕ್ಷತ್ರಿಯತ್ವ ನಿಮಿತ್ತಕವಾದ ವಿಶೇಷವಿದೆ. ಮುಕ್ತಿಯಲ್ಲಿಯೂ ವಿಪ್ರತ್ವಾದಿಗಳು ಇರುತ್ತವೆ. ಇವರಲ್ಲಿ ಚ್ಯವನ ಉಚಥ್ಯರು ವಿಪ್ರರು, ಅನ್ಯರು ಕ್ಷತ್ರಿಯರು. ಪ್ರಿಯವ್ರತನೂ ಕೂಡ ಅವರರಾದ ಮನುಗಳಂತೆಯೇ. ಮೇಲೆ ಹೇಳಿದವರಿಂದ ಇತರರಾದ ನೂರು ದೇವತೆಗಳು ಹಾಗೂ ಈ ಗುಂಪಿಗೇ ಸೇರುವ ಸೋಮಪಾನಕ್ಕೆ ಅರ್ಹರಾದ ದೇವತೆಗಳು ಪರ್ಜನ್ಯ ಮಿತ್ರರ ನಡುವೆ ಇರುತ್ತಾರೆ. ಇವರು ಪರ್ಜನ್ಯನಿಂದ ಉತ್ತಮರೂ ಮಿತ್ರನಿಂದ ಅಧಮರೂ, ಅಶ್ವಿನಿ ದೇವತೆಗಳಿಗೆ ಸಮಾನಿಕರೂ ಆಗಿರುತ್ತಾರೆ. ಮೇಲೆ ಹೇಳಿದ ದೇವತೆಗಳಿಗಿಂತ ಇತರರಾದ ದೇವತೆಗಳು ಶತಾಂತರ್ಗತ ದೇವತೆಗಳಿಗಿತಲೂ ನಿಕೃಷ್ಟರು, ಅಂದರೆ ಅವರರಾದ ಮನುವಿಗೆ ಸಮಾನರು.

ಮಹಾಲಕ್ಷ್ಮಿಯು ಪ್ರಾಣನಿಂದಲೂ ಉತ್ತಮಳಾಗಿದ್ದರೂ, ಅಧಿಕಾರಿಗಳಲ್ಲಿ ಪ್ರಾಣಪರ್ಯಂತವಾಗಿ ಹೇಳಿದ್ದು ಹೇಗೆ ಎಂದರೆ –

**ಏತೇಭ್ಯೋಽಭ್ಯಧಿಕಾ ಶ್ರೀಸ್ತು ಸದಾ ಮುಕ್ತಾ ವಿಶೇಷತಃ ॥ ೨೦೦ ॥**

**ತತ್ಸಮೋ ನಾಸ್ತಿ ಪರಮೋ ಹರಿರೇವ ನ ಚಾಪರಃ ।**

**ಸಂಹಿತಾಯಾಂ ಬೃಹತ್ಯಾಂ ತು ಸ್ವಯಂ ಭಗವತೋದಿತಮ್ ॥ ೨೦೧ ॥**

**ತದೇತದಖಿಲಂ ......................... ।**

ಮಹಾಲಕ್ಷ್ಮಿಯು ಪೂರ್ವೋಕ್ತವಾದ ಎಲ್ಲ ದೇವತೆಗಳಿಂದ ವಿಶೇಷವಾಗಿ ಅತ್ಯಧಿಕಳು. ಅವಳು ಸರ್ವದಾ ಮುಕ್ತಳು (ಬಂಧರಹಿತಳು). ಆದಕಾರಣ ಅಧಿಕಾರ ವರ್ಗದಲ್ಲಿ ಅವಳು ಸೇರುವುದಿಲ್ಲ. ಲಕ್ಷ್ಮಿಗೆ ಸಮಾನಿಕರು ಯಾರೂ ಇಲ್ಲ. ಇದರಿಂದ 'ಕಾಮಾದಿತರತ್ರ ತತ್ರ ಚಾಯತನಾದಿಭ್ಯಃ' ಎನ್ನುವ ಅಧಿಕರಣದ ತಾತ್ಪರ್ಯವು ಉಕ್ತವಾಯಿತು. ಮಹಾಲಕ್ಷ್ಮಿಗಿಂತಲೂ ಉತ್ತಮನಾದ ಶ್ರೀಹರಿಯೇ ಸರ್ವೋತ್ತಮನು. ಅವನಿಗೆ ಸಮನೂ ಅಧಿಕನೂ ಮತ್ತೊಬ್ಬನಿಲ್ಲ. ಇದರಿಂದ 'ವ್ಯತಿಹಾರೋ ವಿಶಿಂಷಂತಿ ಹೀತರವತ್' ಹಾಗೂ 'ಸೈವ ಹಿ ಸತ್ಯಾದಯಃ' ಎನ್ನುವ

ಎರಡು ಅಧಿಕರಣಗಳ ತಾತ್ಪರ್ಯ ಹೇಳಲ್ಪಟ್ಟಿತು. ಇವೆಲ್ಲವೂ ಬೃಹತ್ಸಂಹಿತೆಯಲ್ಲಿ ಸಾಕ್ಷಾತ್ತಾಗಿ ಭಗವಾನ್ ವೇದವ್ಯಾಸರಿಂದಲೇ ಹೇಳಲ್ಪಟ್ಟಿದೆ.

ಹಾಗಾದರೆ ಉಪನಿಷತ್ತಿನಲ್ಲಿ ನಾಮದಿಂದ ಪ್ರಾರಂಭಿಸಿ ಪ್ರಾಣಪರ್ಯಂತವಾಗಿ ಹದಿನೈದು ಮಂದಿಯನ್ನು ಹೇಳಲಾಗಿದೆ. ಇಲ್ಲಿ ಉಷಾ ಸ್ವಾಹಾ ಇತ್ಯಾದಿಯಾಗಿ ಹದಿನಾಲ್ಕೇ ಹೇಳಿರುವುದರಿಂದ ವಿಸಂವಾದವು ಹೇಗೆ ಇಲ್ಲ ಎಂದರೆ –

**............. ಪ್ರಾಣ ಆಹಂಕಾರಿಕ ಏವ ಚ ।**

**ಇಂದ್ರಾದನಂತರಃ ....................................... ॥**

ತೈಜಸಾಹಂಕಾರದಿಂದ ಹುಟ್ಟಿರುವ ಮತ್ತೊಬ್ಬ ಪ್ರಾಣನಿರುವನು. ಅವನಾದರೂ ಇಂದ್ರನಿಂದ ಹಾಗೂ ಅನಿರುದ್ಧನಿಂದ ಉತ್ತಮನೆಂದೂ ತಿಳಿಯತಕ್ಕುದು.

## ಪ್ರಜ್ಞಾಂತರಾಧಿಕರಣಮ್

### ಓಂ ಪ್ರಜ್ಞಾಂತರಪೃಥಕ್ತ್ವವದ್ದೃಷ್ಟಿಶ್ಚ ತದುಕ್ತಂ ಓಂ

ಈ ಅಧಿಕರಣದ ವ್ಯಾಖ್ಯಾನ ಮಾಡುವಾಗ ಉಪಾಸನಾ ಭೇದದಂತೆಯೇ ದರ್ಶನಭೇದವು ಎಂದು ಭಾಷ್ಯದಲ್ಲಿ ಹೇಳಿರುವರು. ದರ್ಶನಭೇದದ ವಿಷಯದಲ್ಲಿ ಮೂಲಕಾರಣವನ್ನು ಹೇಳಿಲ್ಲವಾದ ಕಾರಣ ಭಾಷ್ಯೋಕ್ತಿಯು ಅಸ್ಪಷ್ಟವು. ಆದ್ದರಿಂದ ಇಲ್ಲಿ ಸ್ಪಷ್ಟವಾಗಿ ವ್ಯಾಖ್ಯಾನ ಮಾಡುತ್ತಾರೆ –

**..................... ದೃಷ್ಟಿರಪಿ ಯೋಗ್ಯಾನುಸಾರತಃ ॥ ೨೦೨ ॥**

ದರ್ಶನವೂ ಕೂಡ ಯೋಗ್ಯತಾನುಸಾರ ಅನೇಕ ವಿಧವು ಎಂದು ತಾತ್ಪರ್ಯ.

## ಪ್ರದಾನಾಧಿಕರಣಮ್

### ಓಂ ಪ್ರದಾನವದೇವ ತದುಕ್ತಮ್ ಓಂ

## ಲಿಂಗಭೂಯಸ್ತ್ವಾಧಿಕರಣಮ್

### ಓಂ ಲಿಂಗಭೂಯಸ್ತ್ವಾತ್ತದ್ಧಿ ಬಲೀಯಸ್ತದಪಿ ಓಂ

ಇಲ್ಲಿ ಪ್ರದಾನವೆಂದರೆ ಪ್ರಕೃಷ್ಟವಾದ ದಾನ. ಪ್ರ ಶಬ್ದವು ಭಾಷ್ಯದಲ್ಲಿ ಸ್ಪಷ್ಟವಾಗಿ ವ್ಯಾಖ್ಯಾತವಾಗಿಲ್ಲ. ಆದಕಾರಣ ಸೂತ್ರಾರ್ಥವನ್ನು ಹೇಳುತ್ತಾರೆ –

**ಸಮ್ಯಗ್ಗುರುಪ್ರಸಾದಶ್ಚ ಮುಖ್ಯತೋ ದೃಷ್ಟಿಕಾರಣಮ್ ।**

ಕೇವಲ ಶ್ರವಣಾದಿಗಳಲ್ಲ, ಚೆನ್ನಾಗಿ ಗುರುಪ್ರಸಾದವೂ ಕೂಡ ಮುಖ್ಯವಾಗಿ ಭಗವದ್ದರ್ಶನಕ್ಕೆ ಕಾರಣ. ಸಮ್ಯಕ್ ಅನುಗ್ರಹಪೂರ್ವಕವಾಗಿ ಗುರುಗಳಿಂದ ಯಾವ ವಿದ್ಯಾದಾನವಾಗುವುದೋ ಅದೂ ಕೂಡ ಭಗವದ್ದರ್ಶನಕ್ಕೆ ಕಾರಣವು ಎಂದರ್ಥ.

ಲಿಂಗಭೂಯಸ್ತ್ವಾಧಿಕರಣದಲ್ಲಿ ಗುರುಪ್ರಸಾದಕ್ಕೆ ಶ್ರವಣಾದಿಗಳಿಂದ ಪ್ರಾಬಲ್ಯವು ಉಕ್ತವಾಗಿದೆ. ಅದು ಅಯುಕ್ತವು. ಪ್ರದಾನ ಶಬ್ದಾರ್ಥದಲ್ಲಿಯೇ ಅದೂ ಕೂಡ

ಸೇರಿದೆ. ತನ್ನ ದೆಶೆಯಿಂದಲೇ ತಾನು ಬಲಿಷ್ಠವೆನ್ನುವದು ಅಸಂಭವವು. ಹೀಗೆ ಆಶಂಕಿಸಿದರೆ, ಅದಕ್ಕೆ ಸಮ್ಯಕ್ ಎನ್ನುವುದರಿಂದಲೇ ಉತ್ತರಿಸುತ್ತಾರೆ. ಚೆನ್ನಾಗಿ ಗುರುಪ್ರಸಾದವೂ ಕೂಡ ಶ್ರವಣಾದಿಗಳಿಗಿಂತ ಅತಿಶಯವಾಗಿ ಕಾರಣವು ಎಂದರ್ಥ.

ಲಿಂಗಗಳುಳ್ಳ ಆಖ್ಯಾಯಿಕೆಗಳಲ್ಲಿ ಗುರುಪ್ರಸಾದದಿಂದಲೇ ಜ್ಞಾನಪ್ರಾಪ್ತಿಯು ಶ್ರುತವಾಗಿರುವ ಪ್ರಯುಕ್ತ ಶ್ರವಣಾದಿಗಳನ್ನು ಮಾಡಬೇಕಿಲ್ಲ ಎಂಬ ಶಂಕೆ ಬಂದರೆ, ಅದನ್ನು ನಿವಾರಣೆ ಮಾಡುವುದಕ್ಕಾಗಿ ತದಪಿ ಎಂದು ಸೂತ್ರದಲ್ಲಿ ಹೇಳಿರುವರು. ಅದನ್ನು ವ್ಯಾಖ್ಯಾನ ಮಾಡುತ್ತಾರೆ ಶ್ರವಣಾದಿ ಚ ಎಂದು –

**ಶ್ರವಣಾದಿ ಚ ಕರ್ತವ್ಯಂ ನಾನ್ಯಥಾ ದರ್ಶನಂ ಕ್ವಚಿತ್ ।। ೨೦೩ ।।**

ಶ್ರವಣಾದಿಗಳನ್ನೂ ಕೂಡ ಮಾಡತಕ್ಕದ್ದು. ಏಕೆಂದರೆ ಶ್ರವಣಾದಿಗಳಿಲ್ಲದೆ ಎಲ್ಲಿಯೂ ದರ್ಶನವಾಗಲಾರದು.

## ಪೂರ್ವವಿಕಲ್ಪಾಧಿಕರಣಮ್

**ಓಂ ಪೂರ್ವವಿಕಲ್ಪಃ ಪ್ರಕರಣಾತ್ಸ್ಯಾತ್ ಕ್ರಿಯಾಮಾನಸವತ್ ಓಂ**

ಪ್ರಥಮ ಪ್ರಾಪ್ತನಾದ ಗುರುವನ್ನೇ ಎಂದಿಗೂ ಬಿಡದೆ ಇರತಕ್ಕುದೋ ಅಥವಾ ಆ ಗುರುವನ್ನು ತ್ಯಜಿಸಿ ಮತ್ತೊಬ್ಬನನ್ನೂ ಕೂಡ ಗುರುವಾಗಿ ಸ್ವೀಕರಿಸಬಹುದೋ ಎಂಬ ಶಂಕೆಯು ಬಂದರೆ, 'ಗುರುಮಂತ್ರಪರಿತ್ಯಾಗೀ ರೌರವಂ ನರಕಂ ವ್ರಜೇತ್' (ಗುರುಗಳನ್ನೂ ಅವರಿಂದ ಉಪದೇಶ ಪಡೆದ ಮಂತ್ರವನ್ನೂ ಬಿಟ್ಟವನು ರೌರವ ನರಕವನ್ನು ಹೊಂದುತ್ತಾನೆ) ಎಂದು ಗುರುಪರಿತ್ಯಾಗಕ್ಕೆ ದೋಷವು ಹೇಳಲ್ಪಟ್ಟಿರುವ ಪ್ರಯುಕ್ತ, ಪ್ರಥಮಪ್ರಾಪ್ತ ಗುರುವೇ ಆಗಬೇಕು ಎಂದು ಹೇಳಿದರೆ ಅದಕ್ಕೆ ವಿಕಲ್ಪವು ಹೇಳಲ್ಪಡುತ್ತದೆ. ಹೀನರೂ, ಸಮರೂ, ಉತ್ತಮರೂ ಆದ ಗುರುಗಳಲ್ಲಿ ಯಾರ ಪರಿತ್ಯಾಗದಿಂದ ದೋಷವು ಅಥವಾ ಮೇಲಿನ ಪ್ರಮಾಣ ವಾಕ್ಯವು ಯಾವ ಗುರುವನ್ನು ಕುರಿತು ಹೊರಟಿದೆ ಎಂದರೆ, ಅದನ್ನು ಸ್ಪಷ್ಟಪಡಿಸಲು 'ಗುಣಾಧಿಕಂ' ಇತ್ಯಾದಿ ವಚನದಿಂದ ವ್ಯಾಖ್ಯಾನ ಮಾಡುತ್ತಾರೆ –

**ಗುಣಾಧಿಕಂ ಗುರುಂ ಪ್ರಾಪ್ಯ ತದ್ಧೀನಂ ನಾಪ್ನುಯಾತ್ ಕ್ವಚಿತ್ ।**

ಗುಣಗಳಿಂದ ಉತ್ತಮನಾದ ಗುರುವು ಪ್ರಾಪ್ತವಾದ ಮೇಲೆ ಅವನಿಗಿಂತ ಗುಣದಲ್ಲಿ ಹೀನನಾದ ಗುರುವನ್ನು ಯಾವುದೇ ಪ್ರಯೋಜನಕ್ಕೂ ಹೊಂದಬಾರದು. ಉತ್ತಮನನ್ನು ಬಿಟ್ಟು ಹೀನನಾದ ಗುರುವನ್ನು ಗ್ರಹಿಸಿದರೆ ದೋಷವು ಎಂದು ಭಾವ.

**ವಿಪರ್ಯಯಸ್ತು ಕರ್ತವ್ಯಃ ಸರ್ವಥಾ ಶುಭಮಿಚ್ಛತಾ ।। ೨೦೪।।**

ಎಲ್ಲ ರೀತಿಯಿಂದಲೂ ಮಂಗಲವನ್ನು ಇಚ್ಛಿಸುವವನು ಅಧಮ ಗುರುವನ್ನು ಪರಿತ್ಯಜಿಸಿ ಉತ್ತಮ ಗುರುವನ್ನು ಸ್ವೀಕಾರ ಮಾಡುವುದು ಕರ್ತವ್ಯ. ಇಲ್ಲದಿದ್ದರೆ ಮೊದಲು ಪ್ರಾಪ್ತನಾದ ಅಲ್ಪಗುರುವಿನಿಂದ ಸಂಶಯ ವಿಪರ್ಯಯಗಳ ನಿವೃತ್ತಿಯು ಆಗದೇ ಹೋಗುವುದು.

ಹಾಗಾದರೆ ಪ್ರಥಮ ಪ್ರಾಪ್ತ ಗುರುವು ಉತ್ತಮನೇ ಆಗಿದ್ದರೂ ಅವನಿಂದ ಶಿಷ್ಯನಿಗೆ ಸರಿಯಾಗಿ ಉಪದೇಶವಾಗದೆ ಸಂಶಯ ವಿಪರ್ಯಗಳು ನಿವೃತ್ತವಾಗದಿದ್ದರೆ ಅವನನ್ನು ಬಿಟ್ಟು ಅಧಮಗುರುವಿನ ಸ್ವೀಕಾರವು ಕರ್ತವ್ಯವಲ್ಲವೇ ಎಂದರೆ, ಸತ್ಯವೇ. 'ಗುರುಮಂತ್ರ ಪರಿತ್ಯಾಗೀ' ಎಂಬ ವಚನದಿಂದ, ವಿಶೇಷಲಾಭಕ್ಕಾಗಿ ಮತ್ತೊಬ್ಬನನ್ನು ಹೊಂದಬೇಕು ಎನ್ನುವ ನ್ಯಾಯವನ್ನು ಅಧಮ ಗುರುವಿನ ವಿಷಯದಲ್ಲಿ ಬಿಡಬೇಕು. ಹಾಗಾದರೆ ಸೂತ್ರದಲ್ಲಿರುವ ವಿಕಲ್ಪಕ್ಕೆ ಏನು ವಿಷಯವು ಎಂದರೆ –

**ಸಮೇ ವಿಕಲ್ಪ ಏವ ಸ್ಯಾತ್ಪೂರ್ವಾನುಜ್ಞಾ ಚ ಸರ್ವಥಾ ।**

**ತದುತ್ತಮಗುರುಪ್ರಾಪ್ತ್ಯೈ ಪೂರ್ವಾನುಜ್ಞಾ ನ ಮೃಗ್ಯತೇ ॥ ೨೦೫ ॥**

ಪೂರ್ವಪ್ರಾಪ್ತನಾದ ಗುರುವಿಗೆ ಸಮನಾದ ಮತ್ತೊಬ್ಬನ ಗುರುವು ತಾನಾಗಿಯೇ ಲಭಿಸಿದಾಗ ಸ್ವೀಕಾರಕ್ಕೆ ವಿಕಲ್ಪವೇ ಬರುವುದು. ಅಂದರೆ ನಿಯಮವಿಲ್ಲ. ಆದರೆ ಸಮಾನಿಕನಾದ ಬೇರೆ ಗುರುವನ್ನು ಸ್ವೀಕಾರ ಮಾಡುವುದಕ್ಕೂ ಪೂರ್ವಗುರುವಿನ ಅನುಜ್ಞೆಯು ಸರ್ವಥಾ ಅವಶ್ಯಕವು. ಅನುಜ್ಞೆಯನ್ನು ಪಡೆಯದೆ ಸಮಾನಿಕನಾದ ಪೂರ್ವಗುರುವನ್ನು ಪರಿತ್ಯಾಗ ಮಾಡುವುದು ದೋಷಕ್ಕೆ ಕಾರಣವು. ಆದರೆ ಉತ್ತಮ ಗುರುಗಳ ಪ್ರಾಪ್ತಿಗೋಸ್ಕರ ಪೂರ್ವಗುರುವಿನ ಅನುಜ್ಞೆಯು ಅವಶ್ಯಕವಿಲ್ಲ.

ಗುರುಪ್ರಸಾದವನ್ನು ಸರ್ವಥಾ ಹೊಂದತಕ್ಕುದು ಎಂದು ಸೂತ್ರಕಾರರು ಹೇಳಿದರು. ಆಯಾಯ ವಿದ್ಯಾ ಹಾಗೂ ದೇವತೆಯ ಪ್ರಸಾದವು ಉಪಲಕ್ಷಣವು ಎನ್ನುವ ವಿವಕ್ಷೆಯಿಂದ ಗುರು, ವಿದ್ಯಾ ದೇವತೆಯ ಸ್ವರೂಪವನ್ನು ಹೇಳುತ್ತಾರೆ –

**ಗುರುರ್ಬ್ರಹ್ಮಾಖಿಲಾನಾಂ ಚ ವಿದ್ಯಾ ಚೈವ ಸರಸ್ವತೀ ।**

**ದೇವತಾ ಭಗವಾನ್ವಿಷ್ಣುಃ ಸರ್ವೇಷಾಮವಿಶೇಷತಃ ॥ ೨೦೬ ॥**

**ತತ್ಪ್ರಸಾದೇನ ಮುಕ್ತಿಸ್ಸ್ಯಾನ್ನಾನ್ಯಥಾ ತು ಕಥಂಚನ ।**

ಎಲ್ಲರಿಗೂ ಕೂಡ ಚತುರ್ಮುಖ ಬ್ರಹ್ಮನೇ ಗುರುವು. ವಿದ್ಯಾಭಿಮಾನಿಯೂ ಸರಸ್ವತಿಯೇ. ಅವರಿಗೆ ಇವರಿಗೆ ಎನ್ನದೆ ಅವಿಶೇಷವಾಗಿ ಎಲ್ಲರಿಗೂ ಭಗವಾನ್ ವಿಷ್ಣುವೇ ದೇವತೆ. ಗುರು, ವಿದ್ಯಾ, ದೇವತೆ ಇವರೆಲ್ಲರ ಪ್ರಸಾದದಿಂದಲೇ ಜ್ಞಾನ ಹಾಗೂ ಮುಕ್ತಿಯು. ಬೇರೆ ಯಾವ ರೀತಿಯಿಂದಲೂ ಆಗಲಾರದು.

ಸಾಧಾರಣ ಗುರುಗಳನ್ನು ಹೇಳಿ ಅಸಾಧಾರಣ ಗುರುಗಳನ್ನು ಹೇಳುತ್ತಾರೆ –

**ಸ್ವೋತ್ತಮಾಸ್ತು ಕ್ರಮೇಣೈವ ಸರ್ವೇಷಾಂ ಗುರವಃ ಸ್ಮೃತಾಃ ॥ ೨೦೭ ॥**

ತಮ್ಮಿಂದ ಉತ್ತಮರಾದವರೆಲ್ಲರೂ ಕ್ರಮದಿಂದಲೇ ಎಲ್ಲರಿಗೂ ಗುರುಗಳು ಎಂದು ಸ್ಮೃತರಾಗಿದ್ದಾರೆ. ಕ್ರಮೇಣ ಎಂದರೆ ತನಗಿಂತ ಸಾಕ್ಷಾತ್ ಉತ್ತಮನು ಗುರುವು, ಆ ಗುರುವಿಗಿಂತ ಉತ್ತಮನಾದವನು ಗುರುತರನು ಹೀಗೆ ತಿಳಿಯಬೇಕು. ಹೀಗೆ ವಿದ್ಯಾವಿಶೇಷವಿದ್ದರೆ ಆಯಾ ದೇವತಾ ವಿಶೇಷವನ್ನೂ ತಿಳಿಯಬೇಕು.

ಎಲ್ಲರಿಗೂ ಬ್ರಹ್ಮನಿಂದ ವಿದ್ಯೋಪದೇಶವಿರುವುದಿಲ್ಲ. ಆದಕಾರಣ ಎಲ್ಲರಿಗೂ ಬ್ರಹ್ಮನೇ ಗುರು ಎನ್ನುವುದು ಹೇಗೆ ಎಂದರೆ –

**ಉಪದೇಶೋ ಬ್ರಹ್ಮಣಸ್ತು ಸರ್ವೇಷಾಮೇವ ಮುಕ್ತಯೇ ।**

ಎಲ್ಲರಿಗೂ ಮುಕ್ತಿಗೋಸ್ಕರ ಬ್ರಹ್ಮನಿಂದ ಉಪದೇಶವು ಆಗಲೇಬೇಕು. ಈ ಜನ್ಮದಲ್ಲಾಗಲೀ, ಜನ್ಮಾಂತರದಲ್ಲಾಗಲೀ ಬ್ರಹ್ಮನ ಉಪದೇಶವಿಲ್ಲದೆ ಯಾರಿಗೂ ಮುಕ್ತಿಯಾಗಲಾರದು. ಆದಕಾರಣ ಬ್ರಹ್ಮನಿಗೆ ಸರ್ವಗುರುತ್ವವು ಯುಕ್ತವೇ ಆಗಿದೆ.

## ಪರೇಣಾಧಿಕರಣಮ್

**ಓಂ ಪರೇಣ ಚ ಶಬ್ದಸ್ಯ ತಾದ್ವಿಧ್ಯಂ ಭೂಯಸ್ತ್ವಾತ್ತ್ವನುಬಂಧಃ ಓಂ**

'ಭಕ್ತಿರೇವ ಏನಂ ನಯತಿ' ಭಕ್ತಿಯೇ ಇವನನ್ನು ಮೋಕ್ಷಕ್ಕೆ ಒಯ್ಯುತ್ತದೆ, ಇತ್ಯಾದಿ ಶ್ರುತಿಗಳಿಂದ ಭಕ್ತಿಯೇ ಮುಕ್ತಿಗೆ ಸಾಧನ, ಪರಮಾತ್ಮನಲ್ಲ. ಏಕಲವ್ಯನಿಗೆ ಗುರಭಕ್ತಿಯೇ ವಿದ್ಯಾಪ್ರಾಪ್ತಿಗೆ ಸಾಧನವಾಯಿತು, ಗುರುವಲ್ಲವೆಂದರೆ – 'ಪ್ರಧಾನ ಸಾಧನತ್ವಾದ್ಭಕ್ತೇಃ ಕರಣತ್ವೇನೋಚ್ಯತೇ' ಎಂದು ಭಾಷ್ಯವು. ಅದರಲ್ಲಿ ಭಗವಂತನನ್ನು ಅಪೇಕ್ಷಿಸಿಯೇ ಭಕ್ತಿಗೆ ಪ್ರಾಧಾನ್ಯವು ಎಂದು ಭಾಸವಾಗುವುದು. ಅದನ್ನು ನಿವಾರಿಸುವುದಕ್ಕಾಗಿ ಹೇಳುತ್ತಾರೆ –

**ಸಾಧನೇಭ್ಯೋಽಧಿಕಾ ಭಕ್ತಿರ್ನೈವಾನ್ಯತ್ತಾದೃಶಂ ಕ್ವಚಿತ್ ।। ೨೦೮ ।।**

**ಭಕ್ತಿಶ್ಚೈವ ಹರಾವೇವ ಮುಖ್ಯಾನ್ಯತ್ರ ಯಥಾಕ್ರಮಮ್ ।**

**ಸ್ವಾಧಿಕತ್ವೇನ ಸರ್ವತ್ರ ಸ್ವೋತ್ತಮೇಷು ಕ್ರಮೇಣ ಚ ।। ೨೦೯ ।।**

ಮೋಕ್ಷಸಾಧನವಾದ ಜ್ಞಾನಾದಿಗಳಿಗಿಂತಲೂ ಭಕ್ತಿಯು ಶ್ರೇಷ್ಠವು. ಎಲ್ಲಿಯೂ ಮುಕ್ತಿಯಲ್ಲಾಗಲೀ ಭಕ್ತಿಗೆ ಸಮನಾದುದು ಬೇರೆ ಯಾವುದೂ ಇಲ್ಲ. ಶ್ರೀಹರಿಯಲ್ಲಿಯೇ ಸರ್ವಾಧಿಕವಾದ ಭಕ್ತಿಯನ್ನು ಮಾಡಬೇಕು. ಸ್ವೋತ್ತಮರಲ್ಲಿಯೂ ಯಥಾಕ್ರಮವಾಗಿ ತಾರತಮ್ಯಾನುಸಾರವಾಗಿಯೇ ಮಾಡತಕ್ಕದ್ದು ಸಮನಾಗಿ ಅಲ್ಲ.

**ಅನುವರ್ತತೇ ಚ ಸಾ ಭಕ್ತಿರ್ಮುಕ್ತಾವಾನಂದರೂಪಿಣೀ ।**

**ತತ್ಪೂರ್ವಿಕೋಪಾಸನೈವಂ ಕರ್ತವ್ಯಾ ಮುಕ್ತಯೇ ಗುಣ್ಯೈಃ ।। ೨೧೦ ।।**

ಆ ಭಕ್ತಿಯು ಮುಕ್ತಿಯಲ್ಲಿಯೂ ಆನಂದಸ್ವರೂಪಿಣಿಯಾಗಿ ಅನುವರ್ತಿಸುತ್ತದೆ. ಹೀಗೆ ಯೋಗ್ಯತಾನುಸಾರ ಭಕ್ತಿಪೂರ್ವಕವಾದ ಉಪಾಸನೆಯನ್ನು ಮೋಕ್ಷಕ್ಕಾಗಿ ಗುಣಪೂರ್ಣನಾದ ಶ್ರೀಹರಿಯಲ್ಲಿ ಮಾಡಬೇಕಾದ್ದು ಅವಶ್ಯಕವು.

**।। ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತೇ**

**ಶ್ರೀಮದನುವ್ಯಾಖ್ಯಾನೇ ತೃತೀಯಾಧ್ಯಾಯಸ್ಯ ತೃತೀಯಃ ಪಾದಃ ।।**

**।। ಇಲ್ಲಿಗೆ ಶ್ರೀಮದನುವ್ಯಾಖ್ಯಾನದ ಮೂರನೆಯ ಅಧ್ಯಾಯ ಮೂರನೆಯ ಪಾದದ**

**ಶ್ರೀಮನ್ನ್ಯಾಯಸುಧಾನುಸಾರಿ ವಿವರಣೆ ಸಹಿತ ಕನ್ನಡಾನುವಾದವು ಮುಕ್ತಾಯವಾಯಿತು ।।**

# ಮೂರನೆಯ ಅಧ್ಯಾಯ ನಾಲ್ಕನೆಯ ಪಾದ

ಜ್ಞಾನಸಾಮರ್ಥ್ಯವು ಈ ಪಾದದಲ್ಲಿ ಹೇಳಲ್ಪಡುತ್ತದೆ ಎಂದು ಭಾಷ್ಯದಲ್ಲಿ ಹೇಳಿರುತ್ತಾರೆ. ಹಾಗಾದರೆ ಜ್ಞಾನಕ್ಕೆ ಸ್ವತಂತ್ರವಾಗಿ ಮೋಕ್ಷಸಾಧನತ್ವ ಸಾಮರ್ಥ್ಯವು ಇರುವುದೆಂದು ಮೂರನೆಯ ಪಾದದಲ್ಲಿ 'ವಿದ್ಯೈವ ತು' ಎನ್ನುವಲ್ಲಿ ಉಕ್ತವಾಗಿದೆ. ಇನ್ನು ಪ್ರತಿಪಾದಿಸುವುದು ಏನು ಉಳಿದಿದೆ ? ಮತ್ತೆ ಯಾವುದಕ್ಕಾಗಿ ಈ ಪಾದದ ಆರಂಭವು ? ಎಂದರೆ – ಹೌದು, ನೀವು ಹೇಳುವಂತೆ ಜ್ಞಾನವು ಸ್ವತಂತ್ರವಾಗಿ ಮೋಕ್ಷಸಾಧನವು ಎಂದು ಹಿಂದೆಯೇ ಸಿದ್ಧವಾಗಿದೆ. ಬೇರೆ ವಿಷಯದಲ್ಲಿಯೂ ಸಾಮರ್ಥ್ಯವು ಇಲ್ಲಿ ಸಮರ್ಥಿಸಲ್ಪಡುತ್ತದೆ. ಸಾಧಕನು ಮೋಕ್ಷಕ್ಕೆಂದೇ ಜ್ಞಾನವನ್ನು ಸಾಧಿಸಿದರೂ, ಅದಕ್ಕೆ ಸ್ವಭಾವತಃ ಇತರ ಪುರುಷಾರ್ಥಗಳನ್ನು ಹೊಂದಿಸುವ ಸಾಮರ್ಥ್ಯವೂ ಇರುವುದು. ಸುಡಲಿಕ್ಕಾಗಿ ಹತ್ತಿಸಿದ ಬೆಂಕಿಯು ಸ್ವಭಾವದಿಂದಲೇ ಹೇಗೆ ಬೆಳಕನ್ನೂ ಕೊಡುವುದೋ ಹಾಗೆ.

### ಪುರುಷಾರ್ಥಾಧಿಕರಣಮ್

**ಓಂ ಪುರುಷಾರ್ಥೋಽತಃ ಶಬ್ದಾದಿತಿ ಬಾದರಾಯಣಃ ಓಂ**

ಕರ್ಮದ ಸಹಾಯದಿಂದ ಜ್ಞಾನವು ಮೋಕ್ಷಕ್ಕೆ ಸಾಧನವೋ ಅಥವಾ ಸ್ವತಂತ್ರ ವಾಗಿಯೋ ಎಂದು ಸಂಶಯ ಬಂದರೆ, ಸ್ವತಂತ್ರವಾಗಿಯೇ ಜ್ಞಾನವು ಮೋಕ್ಷಕ್ಕೆ ಸಾಧನವೆಂದು ಈ ಅಧಿಕರಣದಲ್ಲಿ ಹೇಳಲ್ಪಡುತ್ತದೆ ಎಂದು ಕೆಲವರು ಹೇಳುತ್ತಾರೆ. ಅದು ಸರಿಯಲ್ಲ. ಏಕೆಂದರೆ ಈ ಅರ್ಥವು 'ವಿದ್ಯೈವ ತು ನಿರ್ಧಾರಣಾತ್' ಎನ್ನುವುದರಿಂದ ಸಮರ್ಥಿಸಲ್ಪಟ್ಟಿದೆ. ಹಾಗಾದರೆ ಜ್ಞಾನಿಗಳಿಗೆ ಮೋಕ್ಷ ಬಿಟ್ಟು ಬೇರೆ ಪುರುಷಾರ್ಥದಲ್ಲಿ ಆಸಕ್ತಿಯಿರುವುದಿಲ್ಲ. ಆದಕಾರಣ ಜ್ಞಾನವು ಮೋಕ್ಷಕ್ಕೇನೆ ಸಾಧಕವು ಎಂದು ಪ್ರಾಪ್ತವಾದರೆ, ಸ್ಪಷ್ಟನೆಗಾಗಿ ಈ ಅಧಿಕರಣವು ಪ್ರವೃತ್ತವಾಗಿದೆ ಎಂಬ ಆಶಯದಿಂದ 'ಪುರಷಾರ್ಥೋಽತಃ' ಎನ್ನುವುದನ್ನು ವ್ಯಾಖ್ಯಾನಿಸುತ್ತಾರೆ –

**ಏವಮುತ್ಪನ್ನನಿರ್ದೋಷಭಗವದ್ದರ್ಶನಾತ್ಸದಾ ।**

**ಅಪೇಕ್ಷಿತಫಲಪ್ರಾಪ್ತಿರಾರಬ್ಧಸ್ಯಾನತಿಕ್ರಮಾತ್ ॥ ೧ ॥**

ಹಿಂದಿನ ಪಾದದಲ್ಲಿ ಉಪಾಸನೆಯೇ ಮೋಕ್ಷಸಾಧನವಾಗಿ ಪ್ರಧಾನವಾಗಿ ಹೇಳಲ್ಪಟ್ಟಿದೆ. ಹಿಂದೆ ಹೇಳಿದ ಪ್ರಕಾರ ಉಪಾಸನೆಯಿಂದ ಹುಟ್ಟಿದ ನಿರ್ದೋಷ ವಾದ ಭಗವದ್ದರ್ಶನದಿಂದ, ಜ್ಞಾನೋದಯ ಕ್ಷಣದಿಂದ ಆರಂಭಿಸಿ ಅಪೇಕ್ಷಿತ ಫಲದ ಪ್ರಾಪ್ತಿಯು ಆಗುವುದು. ಪ್ರಾರಬ್ಧಕರ್ಮದ ಅತಿಕ್ರಮ ಮಾಡದೇ ಅಪೇಕ್ಷಿತ ಫಲದ ಪ್ರಾಪ್ತಿಯಾಗುವುದು. ಪ್ರಾರಬ್ಧಕರ್ಮದ ಪ್ರತಿಬಂಧವಿರುವ ತನಕ ಜ್ಞಾನವು

ಮೋಕ್ಷಕ್ಕೆ ಕಾರಣವಾಗದಿದ್ದರೂ, ಇತರ ಇಷ್ಟಾರ್ಥವನ್ನು ನೀಡುವುದು ಎಂದರ್ಥ.

ಜ್ಞಾನಕ್ಕೆ ಪುರುಷಾರ್ಥ ಕಾರಣತ್ವದಲ್ಲಿಯೂ ವಿಶೇಷವಿದೆ ಎನ್ನುತ್ತಾರೆ –

**ದೇವರ್ಷಿಮಾನುಷಾದೀನಾಂ ತತ್ತಜ್ಞಾತ್ಯನುಸಾರತಃ ।**

ದೇವತೆಗಳು, ಋಷಿಗಳು, ಮನುಷ್ಯರೇ ಮೊದಲಾದವರಿಗೆ ಅವರವರ ಯೋಗ್ಯತಾನುಸಾರವಾಗಿ ಅಪೇಕ್ಷಿತ ಫಲಪ್ರಾಪ್ತಿಯು ಆಗುವುದು.

**ಜೈಮಿನ್ಯುಕ್ತಂ ಮಾನುಷಾಣಾಂ ತದ್ವಿಶೇಷಾಶ್ಚ ಕೇಚನ ॥ ೨ ॥**

ಜ್ಞಾನಶೇಷವಾದ ಕರ್ಮಕ್ಕೇ ಸ್ವರ್ಗಾದಿ ಸಾಧನತ್ವವು ಎಂದು ಜೈಮಿನಿಗಳು ಹೇಳಿರುವುದು ಮಾನುಷ ಜ್ಞಾನಿ ವಿಷಯಕವಾದುದು. ಹೀಗೆ ಜೈಮಿನಿಯು ಹೇಳಿದರೆ, ಮತ್ತೆ ಕೆಲವರು ಸ್ವರ್ಗಾದಿಗಳು ಕರ್ಮದಿಂದಲೇ, ಅನ್ಯಥಾ ಇಲ್ಲವೆಂದು ಹೇಳುತ್ತಾರೆ. ಮನುಷ್ಯರಲ್ಲಿಯೂ ಉತ್ತಮ ಮಧ್ಯಮ ಅಧಮ ಎಂಬ ಭೇದವಿದೆ. ಜೈಮಿನಿಗಳು ಹೇಳಿದ್ದು ಉತ್ತಮ ಮನುಷ್ಯರ ವಿಷಯಕವು ಎಂದೂ ಹೇಳುತ್ತಾರೆ.

ಹಾಗಾದರೆ ಸೂತ್ರಕಾರರ ಮತವೇನು ಎಂದರೆ –

**ಸಾಮಾನ್ಯಂ ಭಗವತ್ಪ್ರೋಕ್ತಂ ದೇವಾದೀನಾಂ ವಿಶೇಷತಃ ।**
**ಬಲವದ್ವಿರೋಧಿಸದ್ಭಾವೇ ಜೈಮಿನ್ಯಾದ್ಯುಕ್ತಿರಿಷ್ಯತೇ ॥ ೩ ॥**

ಜ್ಞಾನವು ಸಕಲ ಪುರುಷಾರ್ಥಗಳಿಗೆ ಸಾಧನವೆಂದು ಸಾಮಾನ್ಯಾಕಾರವಾಗಿಯೇ ಸೂತ್ರಕಾರರಾದ ಭಗವಾನ್ ವೇದವ್ಯಾಸರಿಂದ ಹೇಳಲ್ಪಟ್ಟಿದೆ. ಸಾಮಾನ್ಯದಲ್ಲಿಯೂ ವಿಶೇಷವಿದೆ. ಅದೇನೆಂದರೆ ದೇವತೆಗಳ ವಿಷಯದಲ್ಲಿ ವೇದವ್ಯಾಸರ ಮತವು ಅಪವಾದವಿಲ್ಲದೇ ಇರುವುದು. ಪ್ರಬಲವಾದ ಪ್ರತಿಬಂಧಕವಿದ್ದರೆ ಜೈಮಿನ್ಯಾದಿಗಳ ಮತವು ಗ್ರಾಹ್ಯವು. ಅಂದರೆ ಸಾಮಾನ್ಯ ವಿಶೇಷ ಎಂಬ ಭೇದವಿರುವ ಪ್ರಯುಕ್ತ ವೇದವ್ಯಾಸರ ಮತಕ್ಕೂ ಜೈಮಿನಿಯ ಮತಕ್ಕೂ ವಿರೋಧವಿಲ್ಲ.

## ಸ್ತುತ್ಯಧಿಕರಣಮ್
## (ಕಾಮಚಾರಾಧಿಕರಣಮ್)

### ಓಂ ಸ್ತುತಯೇಽನುಮತಿರ್ವಾ ಓಂ

ಭಾಷ್ಯದಲ್ಲಿಯೇ ಈ ಅಧಿಕರಣಾರ್ಥವು ಸ್ಪಷ್ಟವಾಗಿರುವ ಕಾರಣ ಇಲ್ಲಿ ಪುನಃ ಅದನ್ನೇ ಹೇಳುವುದರಲ್ಲಿ ಸಂಗತಿಯೇನು ಎಂದರೆ, ಭಾಷ್ಯದಲ್ಲಿನ ಅರ್ಥವನ್ನು ಅನುವಾದ ಮಾಡುತ್ತ ಸುಧಾಕಾರರು ಅಲ್ಲಿ ಬರುವ ಆಶಂಕೆಯನ್ನು ತೋರಿಸುತ್ತಾರೆ. ಹೇಗೆಂದರೆ – ಈ ಅಧಿಕರಣದಲ್ಲಿ ಜ್ಞಾನಿಗೆ ಸತ್ ಮತ್ತು ಅಸತ್ ವೃತ್ತಿಗಳಿಂದ ವಿಶೇಷತೆಯು ಸಮರ್ಥಿಸಲ್ಪಡುತ್ತದೆ. ಹಾಗಾದರೆ ಅಜ್ಞಾನಿಸಾಮಾನ್ಯ ಸಮರ್ಥನೆಯ

ಅರ್ಥವುಳ್ಳ ಈ ಅಧಿಕರಣಕ್ಕೆ ಜ್ಞಾನಸಾಮರ್ಥ್ಯ ಪ್ರತಿಪಾದಿಸುವ ಅರ್ಥದಲ್ಲಿ ಅಂತರ್ಭಾವವು ಕೂಡುವುದಿಲ್ಲ ಎಂಬ ಶಂಕೆ ಬರುವುದು. ಆ ಶಂಕಾ ನಿವಾರಣೆಗಾಗಿ 'ವಿಕರ್ಮ' ಇತ್ಯಾದಿ ವಚನದಿಂದ ಅಧಿಕರಣದ ತಾತ್ಪರ್ಯವನ್ನು ಹೇಳುತ್ತಾರೆ –

**ವಿಕರ್ಮಲೇಪೋ ನೈವಾಸ್ತಿ ಸಮ್ಯಗ್ದೃಷ್ಟಿಮತಾಂ ಕ್ವಚಿತ್ ।**

ಇಲ್ಲಿ ಜ್ಞಾನಿಗಳಿಗೆ ಸದಸತ್ ಪ್ರವೃತ್ತಿಗಳಲ್ಲಿ ವಿಶೇಷವಿದೆ ಎಂದು ಶಬ್ದತಃ ಪ್ರತಿಪಾದನೆ ಮಾಡಲ್ಪಡುವುದು. ಹಾಗಿದ್ದರೂ ಅಪರೋಕ್ಷಜ್ಞಾನಿಗಳಿಗೆ ಎಲ್ಲಿಯೂ ಮೋಕ್ಷಕ್ಕೆ ಪ್ರತಿಬಂಧಕವಾದ ವಿಕರ್ಮ ಲೇಪವೇ ಇರುವುದಿಲ್ಲ. ಆದಕಾರಣ ಈ ಅಧಿಕರಣದಲ್ಲಿ ಜ್ಞಾನಸಾಮರ್ಥ್ಯ ಪ್ರತಿಪಾದಕವಾದ ಅರ್ಥದಲ್ಲಿ ಅಂತರ್ಭಾವವು ಯುಕ್ತವೇ ಆಗಿದೆ. ಅಜ್ಞಾನಿಗಳಿಗೆ ವಿಕರ್ಮ ಲೇಪವು ಇದ್ದೇ ಇರುವುದೆಂದು ಭಾವ.

ಹಾಗಾದರೆ ಎಲ್ಲ ಜ್ಞಾನಿಗಳಿಗೂ ವಿಕರ್ಮವೂ, ಗುಣಹಾನಿಯೂ ಉಂಟೋ ಎಂದರೆ –

**ಗುಣಹಾನಿಶ್ಚ ನೈವಾಸ್ತಿ ಬ್ರಹ್ಮಣಸ್ತು ವಿಕರ್ಮತಃ ॥ ೪ ॥**

**ದೇವಾನಾಮಪಿ ನ ಪ್ರಾಯಃ ಕ್ಲೃಪ್ತಸ್ಯ ತು ಕಥಂಚನ ।**

ಚತುರ್ಮುಖ ಬ್ರಹ್ಮನಿಗಾದರೂ ವಿಕರ್ಮವು ಸರ್ವಥಾ ಇರುವುದಿಲ್ಲವಾದ ಪ್ರಯುಕ್ತ ತನ್ನಿಮಿತ್ತಕ ಆನಂದಾದಿ ಗುಣಗಳ ಹಾನಿಯೂ ಇರುವುದೇ ಇಲ್ಲ. 'ನ ಭಾರತೀ ಮೇಽಂಗ ಮೃಷೋಪಲಕ್ಷ್ಯತೇ ನ ಕರ್ಹಿಚಿನ್ಮೇ ಮನಸೋ ಮೃಷಾ ಗತಿಃ । ನ ಮೇ ಹೃಷೀಕಾಣಿ ಪತಂತ್ಯಸತ್ಪಥೇ ಯನ್ಮೇ ಹೃದೌತ್ಕಂಠ್ಯವತಾ ಧೃತೌ ಹರಿಃ' ಇತ್ಯಾದಿ ವಚನವು ಇದಕ್ಕೆ ಪ್ರಮಾಣ. ಇತರ ದೇವತೆಗಳಿಗೂ ಕೂಡ ಪ್ರಾಯಶಃ ವಿಕರ್ಮಗುಣಹಾನಿಗಳು ಇರುವುದಿಲ್ಲ. ಅಂದರೆ ಅವರಿಗೆ ಸ್ವಲ್ಪ ವಿಕರ್ಮವೂ, ತನ್ನಿಮಿತ್ತಕ ಗುಣಹಾನಿಯೂ ಇರುವುದು ಎಂದು ಭಾವ. ಈ ದೇವತೆಗೆ ಇಷ್ಟು ಎಂದು ಯೋಗ್ಯತಾನುಸಾರ ನಿಯಮಿತವಾಗಿರುವ ಗುಣವೇ ಕ್ಲೃಪ್ತಗುಣವು. ಅದಕ್ಕೆ ಯಾವುದೇ ವಿಕರ್ಮದಿಂದಲೂ ಹಾನಿಯಿಲ್ಲ.

ಹಾಗಾದರೆ ದೇವತೆಗಳಿಗೆ ವಿಕರ್ಮದಿಂದ ಸ್ವಲ್ಪಮಟ್ಟಿಗೆ ಗುಣಹಾನಿಯುಂಟು ಎನ್ನುವುದಕ್ಕೆ ಏನು ಅರ್ಥ ಎಂದರೆ –

**ಪ್ರಾಪ್ತಹ್ರಾಸೋ ಭವೇತ್ ಕ್ವಾಪಿ ಮಹತಾ ವಿಕರ್ಮಣಾ ॥ ೫ ॥**

**ತಥಾಪಿ ತತ್ಕ್ಲೃಪ್ತಮೇವ ತಸ್ಮಾನ್ನ ನಿಯಮೋಜ್ಝಿತಿಃ ।**

ಈಶ್ವರೇಚ್ಛೆಯಿಂದ ಹೇಗೋ ಪ್ರಸಕ್ತವಾದ ಮಹಾ ವಿಕರ್ಮದ ನಿಮಿತ್ತದಿಂದ ಪ್ರಾಪ್ತವಾದ ಗುಣಕ್ಕೇನೆ ಹ್ರಾಸವಾಗುವುದು. ಅಂದರೆ ಸ್ವಯೋಗ್ಯವಾದ ಗುಣಗಳ ಪೂರ್ತಿಗಾಗಿ ಅವಶ್ಯವಾದುದಕ್ಕಿಂತ ಹೆಚ್ಚಿನ ಸಾಧನಾನುಷ್ಠಾನದಿಂದ ಪ್ರಸಕ್ತವಾದ ಹೆಚ್ಚಿನ ಗುಣಗಳಿಗೆ ಮಾತ್ರ ಹ್ರಾಸವು. ಆದ್ದರಿಂದ ಕ್ಲೃಪ್ತಗುಣಗಳಿಗೆ ಹಾನಿಯಿಲ್ಲವೆಂಬ

ನಿಯಮಕ್ಕೆ ಭಂಗವಿಲ್ಲ. ಕ್ಲೃಪ್ತಹಾನಿಯ ಅಭಾವವಿರುವುದರಿಂದಲೂ, ಯೋಗ್ಯತೆಗೆ ಮೀರಿದ ಅನುಷ್ಠಾನದಿಂದ ವಿಕರ್ಮವು ಬಂದೇ ಬರುವುದೆಂಬ ನಿಯಮದಿಂದಲೂ, ಶ್ರೌತ ತಾರತಮ್ಯ ನಿಯಮಕ್ಕೆ ಭಂಗವಿಲ್ಲ ಎಂದರ್ಥ.

ಮೇಲೆ ಹೇಳಿದ ಅರ್ಥವನ್ನು ಉದಾಹರಣೆ ಮೂಲಕ ಸ್ಪಷ್ಟಪಡಿಸುತ್ತಾರೆ –

**ಚಂದ್ರಸುಗ್ರೀವಯೋಶ್ಚೈವ ಸ್ವೋಚ್ಚದಾರಪರಿಗ್ರಹಾತ್ ॥ ೬ ॥**

**ಪ್ರಾಪ್ತಹಾನಿರಭೂನ್ನೈವ ಕ್ಲೃಪ್ತಹಾನಿಃ ಕಥಂಚನ ॥**

ಚಂದ್ರ ಸುಗ್ರೀವರಿಗೆ ಸ್ವೋತ್ತಮರ ಹೆಂಡತಿಯರನ್ನು ಸ್ವೀಕರಿಸಿದ್ದರಿಂದ ಪ್ರಾಪ್ತಕ್ಕೆ ಹಾನಿಯೇ ಆಯಿತು. ಯಾವ ವಿಧದಿಂದಲೂ ಕ್ಲೃಪ್ತ ಹಾನಿಯು ಆಗಲೇ ಇಲ್ಲ.

ದೇವತೆಗಳಿಂದ ಇತರರಿಗೆ ಹೇಗೆ ಎಂದರೆ –

**ಹ್ರಾಸೋಪಿ ಮಾನುಷಾದೀನಾಮಾನಂದಸ್ಯ ವಿಕರ್ಮಣಾ ॥ ೭ ॥**

**ಭವೇನ್ಮುಕ್ತೌ ವಿಶೇಷೇಣ ಸ್ವೋಚ್ಚಾನಾಮಪರಾಧತಃ ।**

ಮನುಷ್ಯರೇ ಮೊದಲಾದವರಿಗೆ ವಿಕರ್ಮದಿಂದ ಮೋಕ್ಷದಲ್ಲಿ ಕ್ಲೃಪ್ತವಾದ ಆನಂದಕ್ಕೂ ಹ್ರಾಸವಾಗುವುದು. ಹ್ರಾಸ ಎಂದರೆ ಅನಭಿವ್ಯಕ್ತಿ. ಅದೂ ಕೂಡ ಈಶ್ವರನ ಇಚ್ಛಾಧೀನ. ಅದರಲ್ಲೂ ಸ್ವೋತ್ತಮರಿಗೆ ಸಂಬಂಧಿಸಿದ ಅಪರಾಧದಿಂದ ವಿಶೇಷವಾಗಿ ಅಂದರೆ ಅಧಿಕವಾಗಿ ಹ್ರಾಸವಾಗುವುದು.

ಹಾಗಾದರೆ ಈ ಅಧಿಕರಣದಲ್ಲಿ 'ಕಾಮಕಾರೇಣ ಚೈಕೇ' ಎನ್ನುವ ಸೂತ್ರದಿಂದ ಅಪರೋಕ್ಷಜ್ಞಾನಾನಂತರ ಮಾಡಿದ ವಿಕರ್ಮದಿಂದ ಜ್ಞಾನಿಗೆ ಕರ್ಮಲೇಪವು ಇಲ್ಲವೆಂದು ಹೇಳಲ್ಪಡುತ್ತದೆ. ಹಾಗೆಯೇ 'ಉಪಮರ್ದಂ ಚ' ಎನ್ನುವ ಸೂತ್ರದಿಂದ ಜ್ಞಾನಪ್ರಾಪ್ತವಾಗುವ ಮುಂಚಿನ ಕರ್ಮಗಳಿಗೆ ಜ್ಞಾನದಿಂದ ವಿನಾಶವು ಎಂದು ಹೇಳಲ್ಪಡುತ್ತದೆ. ಇವೆರಡೂ ಕೂಡ ನಾಲ್ಕನೆಯ ಅಧ್ಯಾಯದಲ್ಲಿ 'ತದಧಿಗಮ ಉತ್ತರಪೂರ್ವಾಘಯೋರಶ್ಲೇಷವಿನಾಶೌ' ಎನ್ನುವ ಸೂತ್ರದಿಂದ ಹೇಳಲ್ಪಡುತ್ತದೆ. ಆದಕಾರಣ ಪುನರುಕ್ತಿ ದೋಷವು ಬರುವುದಿಲ್ಲವೇ ಎಂದರೆ, 'ಕಾಮಕಾರೇಣ ಚೈಕೇ' ಎನ್ನುವುದಕ್ಕೆ ಪುನರುಕ್ತಿದೋಷವನ್ನು ಪರಿಹರಿಸುತ್ತಾರೆ –

**ಜ್ಞಾನೋತ್ತರಸ್ಯ ಪಾಪಸ್ಯ ಚತುರ್ಥೇಽಲೇಪ ಉಚ್ಯತೇ ॥ ೮ ॥**

**ಅಶುಚಿತ್ವಾದಿಕಂ ಚಾಸ್ಯ ನ ಭವೇದಿತಿ ತತ್ಫಲಮ್ ।**

**ಅತ್ರ ಜ್ಞಾನಫಲಸ್ಯೈವ ಮುಕ್ತೇರ್ನಿಯತತೋಚ್ಯತೇ ॥ ೯ ॥**

ಜ್ಞಾನೋತ್ತರ ಕಾಲದಲ್ಲಿ ಮಾಡಿದ ಪಾಪಕ್ಕೆ ಲೇಪವಿಲ್ಲ, ಅಂದರೆ ಪಾಪದ ಫಲವಾದ ನರಕಾದಿಗಳ ಪ್ರಾಪ್ತಿಯಿಲ್ಲವೆಂದು ನಾಲ್ಕನೇ ಅಧ್ಯಾಯದಲ್ಲಿ ಹೇಳಿದೆ.

ಜ್ಞಾನಿಗೆ ಜ್ಞಾನೋತ್ತರ ಪಾಪದ ಫಲವಾದ ಅಶುಚಿತ್ವ, ಅಸಂಭಾಷ್ಯತ್ವ ಇತ್ಯಾದಿಗಳೂ ಆಗುವುದಿಲ್ಲವೆಂದು 'ಉತ್ತರಾಘಸ್ಯಾಶ್ಲೇಷವಿನಾಶಃ' ಎನ್ನುವುದರಿಂದ ಹೇಳಲ್ಪಡುತ್ತದೆ. ಈ ಮೂರನೆಯ ಅಧ್ಯಾಯದಲ್ಲಿ 'ಕಾಮಕಾರೇಣ ಚೈಕೇ' ಎನ್ನುವುದರಿಂದ ಜ್ಞಾನದ ಫಲವಾದ ಮೋಕ್ಷಕ್ಕೆ ನಿಯತತ್ವವು ಹೇಳಲ್ಪಡುತ್ತದೆ. ಹೀಗೆ ಅರ್ಥಬೇಧವಿರುವ ಪ್ರಯುಕ್ತ ಪುನರುಕ್ತಿ ದೋಷವಿಲ್ಲ.

ಎರಡನೆಯ ಪುನರುಕ್ತಿಯನ್ನು ಪರಿಹರಿಸುವುದಕ್ಕೆ 'ಉಪಮರ್ದಂ ಚ' ಎನ್ನುವ ಸೂತ್ರದರಿಂದ ಪ್ರತಿಪಾದ್ಯವಾದ ಅರ್ಥವನ್ನು ಹೇಳುತ್ತಾರೆ –

**ಪ್ರಾರಬ್ಧಕರ್ಮಜಸ್ಯೈವ ವಿಷಭಕ್ಷಾನ್ಮೃತೇರಿವ ।**

**ಪ್ರಾಪ್ತಸ್ಯಾಪ್ಯನಿವರ್ತ್ಯಸ್ಯ ಕಿಂಚಿದ್ಭುಕ್ತಸ್ಯ ಸಂವಿದಾ ॥ ೧೦ ॥**

**ಉಪಮರ್ದ ಇಹ ಪ್ರೋಕ್ತಃ ।**

ನಾಲ್ಕನೆಯ ಅಧ್ಯಾಯದಲ್ಲಿ 'ಪೂರ್ವಾಘಸ್ಯ ವಿನಾಶಃ' ಎನ್ನುವುದರಿಂದ ಜ್ಞಾನ ಪೂರ್ವ ಅಪ್ರಾರಬ್ಧರೂಪ ಪಾಪಕ್ಕೆ ಸ್ವರೂಪತಃ ವಿನಾಶವು ಹೇಳಲ್ಪಡುತ್ತದೆ. ಇಲ್ಲಿ 'ಉಪಮರ್ದಂ ಚ' ಎನ್ನುವ ಸೂತ್ರದಿಂದ ಪ್ರಾರಬ್ಧಕರ್ಮದಿಂದ ಹುಟ್ಟಿದ ಫಲಕ್ಕೇ ಹ್ರಾಸವು ಹೇಳಲ್ಪಡುತ್ತದೆ. ವಿಷಭಕ್ಷಣದಿಂದ ಪ್ರಾಪ್ತವಾದ ಮರಣವು ಸರ್ವ ಪ್ರಕಾರದಿಂದಲೂ ಅಪರಿಹಾರ್ಯವೇ ಆದರೂ, ಸ್ವಲ್ಪವೇ ಭೋಗಿಸಿದ್ದರೆ ವಿಷ ಪರಿಹರಾಕ ಮಂತ್ರಾದಿಗಳಿಂದ ಹೇಗೆ ಪರಿಹರಿಸುವುದು ಸಾಧ್ಯವೋ ಹಾಗೆ, ಪ್ರಾರಬ್ಧ ಕರ್ಮದಿಂದ ಪ್ರಾಪ್ತವಾದ ಸರ್ವಾತ್ಮನಾ ಭೋಗಿಸದೇ ನಾಶವಾಗದಿರುವ ಪುಣ್ಯ ಪಾಪಗಳಿಗೆ, ಸ್ವಲ್ಪ ಭುಕ್ತವಾದುದಕ್ಕೆ ಬ್ರಹ್ಮಜ್ಞಾನದಿಂದ ಫಲಹ್ರಾಸವು ಈ ಮೂರನೆ ಅಧ್ಯಾಯದಲ್ಲಿ ಹೇಳಲ್ಪಡುತ್ತದೆ.

ಹಾಗಾದರೆ ಎಲ್ಲ ಜ್ಞಾನಿಗಳಿಗೂ ಪ್ರಾರಬ್ಧಕರ್ಮಫಲದ ಉಪಮರ್ದವು ಒಂದೇ ವಿಧವೋ ಅಥವಾ ಅನೇಕ ವಿಧವೋ ಎಂದು ಕೇಳಿದರೆ –

**ದೇವಾದೀನಾಂ ಯಥಾಕ್ರಮಮ್ ।**

ದೇವತೆಗಳೇ ಮೊದಲಾದವರಿಗೆ ಯಥಾ ಯೋಗ್ಯವಾಗಿ, ಅಂದರೆ ಯಾರಿಗೆ ಹೆಚ್ಚಿನ ಜ್ಞಾನವೋ ಅವರಿಗೆ ಹೆಚ್ಚಿನ ಉಪಮರ್ದವು ಎಂದು ಹೇಳುತ್ತಾರೆ.

ಪ್ರಾರಬ್ಧ ಕರ್ಮಗಳಿಗೆ ಭೋಗದ ಹೊರತು ನಾಶವಿಲ್ಲ. ಮತ್ತೆ ಬ್ರಹ್ಮಜ್ಞಾನದಿಂದ ಫಲಹ್ರಾಸವೆಂದು ಹೇಳಲ್ಪಟ್ಟಿದೆ. ಅದು ಅಯುಕ್ತವು ಎಂದರೆ –

**ಸರ್ವಾತ್ಮನಾ ತ್ವಭೋಗೋ ಹಿ ಪ್ರಾರಬ್ಧಸ್ಯೈವ ಕರ್ಮಣಃ ॥ ೧೧ ॥**

**ನ ಬ್ರಹ್ಮದರ್ಶಿನೋಽಪಿ ಸ್ಯಾತ್ಫಲಹ್ರಾಸಸ್ತು ವಿದ್ಯತೇ ।**

ಅಪರೋಕ್ಷಜ್ಞಾನಿಗೂ ಕೂಡ ಪ್ರಾರಬ್ಧಕರ್ಮಕ್ಕೆ ಸರ್ವವಿಧದಿಂದಲೂ ಭೋಗ

ಅಭಾವವಿಲ್ಲವೆನ್ನುವುದು ಸಿದ್ಧವಾಗಿದೆ. ಫಲವನ್ನು ಭೋಗಿಸದೆ ಬ್ರಹ್ಮ ಜ್ಞಾನದಿಂದಲೇ ಪ್ರಾರಬ್ಧಕರ್ಮಗಳೂ ನಾಶವಾಗುತ್ತವೆ ಎನ್ನುವುದು ಯುಕ್ತವಲ್ಲ. ಹಾಗೆ ಒಪ್ಪಿದರೆ, ಬ್ರಹ್ಮಾಪರೋಕ್ಷಿಗಳಾದ ಶುಕ ವಾಮದೇವಾದಿಗಳಿಗೆ ಸಂಸಾರದಲ್ಲಿ ಅವಸ್ಥಿತಿಯು ಕೂಡುವುದಿಲ್ಲ. ಅಪರೋಕ್ಷಜ್ಞಾನಿಯ ಪ್ರಾರಬ್ಧಕರ್ಮಕ್ಕಾದರೂ ಫಲಹ್ರಾಸವು ಇರುತ್ತದೆ.

ಹೀಗೆ ಏಕೆ ಅಂಗೀಕರಿಸಬೇಕು ಎಂದರೆ –

**ಸರ್ವಾತ್ಮನಾ ಫಲಹ್ರಾಸೋ ಯದಿ ನಾರಬ್ಧಕರ್ಮಣಃ ।। ೧೨ ।।**

**ಸ್ಯಾತ್ಕಾಮ್ಯವಿಧಿವೈಯರ್ಥ್ಯಮಿತ್ಯುಕ್ತನಿಯಮೋ ಭವೇತ್ ।**

ಏಕೆಂದರೆ ಸರ್ವಪ್ರಕಾರದಿಂದಲೂ ಸ್ವಲ್ಪವೂ ಕೂಡ ಫಲ ಹ್ರಾಸವು ಆಗದಿದ್ದರೆ, ಕಾಮ್ಯವಿಧಿಗೆ ವೈಯರ್ಥ್ಯವು ಬರುವುದು. ಆದಕಾರಣ ಪ್ರಾರಬ್ಧಕರ್ಮಗಳಿಗೆ ಭೋಗದಿಂದಲೇ ವಿನಾಶವಾದರೂ, ಫಲಹ್ರಾಸವೂ ಉಂಟು ಎಂಬ ನಿಯಮವು ಯುಕ್ತವೇ ಆಗಿದೆ.

'ಏವಮುತ್ಪನ್ನ ನಿರ್ದೋಷ' ಇತ್ಯಾದಿಯಾಗಿ ಈ ಪಾದದ ಆರಂಭದಲ್ಲಿ ಹೇಳಿದ ವಿಷಯದಲ್ಲಿ ಸ್ಮೃತಿಸಮ್ಮತಿಯನ್ನು ಹೇಳುತ್ತಾರೆ –

**ಏವಮಾದ್ಯಪಿ ಸಂಪ್ರೋಕ್ತಂ ತಂತ್ರಭಾಗವತೇ ಸ್ಫುಟಮ್ ।। ೧೩ ।।**

ಇಲ್ಲಿ ಹೇಳಿದ ಎಲ್ಲವೂ ಹಾಗೂ ಇದಕ್ಕೆ ಉಪಯುಕ್ತವಾದ ಭಾಷ್ಯಾದಿಗಳಲ್ಲಿ ಉದಾಹರಿಸಿದ ವಚನಗಳೂ ತಂತ್ರಭಾಗವತದಲ್ಲಿ ಸ್ಪಷ್ಟವಾಗಿ ಹೇಳಲ್ಪಟ್ಟಿದೆ.

ಪುರುಷಾರ್ಥ ಹಾಗೂ ಸ್ತುತ್ಯಧಿಕರಣಗಳಲ್ಲಿ ಜ್ಞಾನಫಲಕ್ಕೆ ತಾರತಮ್ಯವು ಅಭಿಪ್ರೇತವಾಗಿದೆ. ಅದು ಸಾಂಸಾರಿಕ ಫಲಕ್ಕೆ ವಿರೋಧವಾಗುವುದಿಲ್ಲ. ಆದ್ದರಿಂದ ಮೋಕ್ಷದಲ್ಲಿನ ಫಲತಾರತಮ್ಯವನ್ನು ಸಾಧಿಸುವುದಕ್ಕಾಗಿ ಉತ್ತರಗ್ರಂಥವು. ಯಾರು ಮೋಕ್ಷದಲ್ಲಿ ಭೇದವನ್ನೇ ಅಂಗೀಕರಿಸುವುದಿಲ್ಲವೋ, ಭೇದವನ್ನು ಅಂಗೀಕರಿಸಿದರೂ ಆನಂದಾದಿಗಳನ್ನು ಅಂಗೀಕರಿಸುವುದಿಲ್ಲವೋ, ಅವರನ್ನು ಕುರಿತು ತಾರತಮ್ಯವನ್ನು ಸಾಧಿಸಲಿಕ್ಕೆ ಅವಕಾಶವಿಲ್ಲ. ಮತ್ತೆ ಭೇದಾದಿ ಸಾಧನವೇ ಮಾಡತಕ್ಕುದು. ಅದನ್ನು ನಾಲ್ಕನೆಯ ಅಧ್ಯಾಯದಲ್ಲಿ ಮಾಡಲಾಗುತ್ತದೆ. ಯಾರು ಭೇದ ಆನಂದಾದಿಗಳನ್ನು ಅಂಗೀಕರಿಸಿಯೂ ತಾರತಮ್ಯವನ್ನು ಒಪ್ಪುವುದಿಲ್ಲವೋ ಅವರನ್ನು ಉದ್ದೇಶಿಸಿ ತಾರತಮ್ಯವನ್ನು ಸಾಧಿಸಲು ಪ್ರಯತ್ನ ಮಾಡಲ್ಪಡುತ್ತದೆ.

ಅದರಲ್ಲಿ ಪ್ರಕೃತದಲ್ಲಿ ಶ್ರುತಿಯಿಂದ ಮೋಕ್ಷದಲ್ಲಿ ಆನಂದತಾರತಮ್ಯವನ್ನು ಉಪಪಾದಿಸುತ್ತಾರೆ –

**ತಾರತಮ್ಯಂ ಫಲೇ ನೋ ಚೇದ್ಬ್ರಹ್ಮಾದೀನಾಂ ಕಥಂ ಶ್ರುತಿಃ ।**

**ಅವೃಜಿನೋಽಕಾಮಹತ ಇತಿ ಮುಕ್ತಿಂ ನಿಗದ್ಯ ಚ ।। ೧೪ ।।**

**ಆನಂದತಾರತಮ್ಯಂ ಚ ತೇಷಾಂ ಬ್ರೂಯಾತ್ಪೃಥಕ್ಪೃಥಕ್ ।**

ಬ್ರಹ್ಮಾದಿಗಳಿಗೆ ಜ್ಞಾನಫಲದಲ್ಲಿ ಅಂದರೆ ಮೋಕ್ಷಗಾಮಿಯಾದ ಆನಂದದಲ್ಲಿ ತಾರತಮ್ಯವು ಇಲ್ಲದೆ ಇದ್ದರೆ 'ಸ ಯೋ ಹವೈ ಮನುಷ್ಯಾಣಾಂ ರಾದ್ಧ' ಇತ್ಯಾದಿ ವಾಜಸನೇಯಿ ಶ್ರುತಿಯೂ, 'ಸೈಷಾऽऽನಂದಸ್ಯ ಮೀಮಾಂಸಾ ಭವತಿ' ಇತ್ಯಾದಿ ತೈತ್ತಿರೀಯ ಶ್ರುತಿಯೂ, ಬ್ರಹ್ಮಾದಿಗಳ ಆನಂದದ ವಿಷಯದಲ್ಲಿ ತಾರತಮ್ಯವನ್ನು ಹೇಗೆ ತಾನೆ ಹೇಳೀತು? ಎಲ್ಲರೂ ಉತ್ತರೋತ್ತರ ಶತಗುಣ ಆನಂದವುಳ್ಳವರು ಎಂದಷ್ಟೇ ಹೇಳದೆ ಪ್ರತ್ಯೇಕ ಪ್ರತ್ಯೇಕವಾಗಿಯೇ ಹೇಳುತ್ತದೆ. ಬ್ರಹ್ಮಾದಿಗಳ ಆನಂದಕ್ಕೆ ತಾರತಮ್ಯವನ್ನು ಶ್ರುತಿಯು ಹೇಳುತ್ತದೆ ಎನ್ನುವುದಕ್ಕೆ ಜ್ಞಾಪಕವು ಏನಿದೆ ಎಂದರೆ – ಯಶ್ಚ ಶ್ರೋತ್ರಿಯೋऽವೃಜಿನೋऽಕಾಮಹತ ಇತ್ಯಾದಿ ಶ್ರುತಿಯು ಮುಕ್ತಿಯನ್ನು ಹೇಳಿಯೂ, ಆ ಮುಕ್ತರಿಗೆ ಆನಂದತಾರತಮ್ಯವನ್ನೂ ಹೇಳುತ್ತದೆ.

**ಸಂಸಾರ ಏವ ಚೇದೇತತ್ತಾರತಮ್ಯಂ ನ ಮುಖ್ಯತಃ ॥ ೧೫ ॥**

**ಅಕಾಮಹತಶಬ್ದಾರ್ಥೋऽವೃಜಿನತ್ವಂ ಚ ನೋ ಭವೇತ್ ।**

ಈ ತಾರತಮ್ಯವು ಸಂಸಾರದಲ್ಲಿಯೇ ಹೊರತು ಮುಖ್ಯ ಪುರುಷಾರ್ಥವಾದ ಮೋಕ್ಷದಲ್ಲಿ ಅಲ್ಲ ಎಂದು ಹೇಳಿದರೆ, ಆಗ ಶ್ರುತಿಯಲ್ಲಿ ಉಕ್ತವಾಗಿರುವ ಅಕಾಮಹತತ್ವವೂ, ಪಾಪರಾಹಿತ್ಯವೂ ಯುಕ್ತವಾಗಲಾರದು.

ಹಾಗಾದರೆ ಸಂಸಾರಿಗಳಲ್ಲಿಯೂ ಅಕಾಮಹತತ್ವಾದಿಗಳು ಹೇಗಾದರೂ ಸಂಭವಿಸುವುದು ಎಂದರೆ, ಸತ್ಯವೇ. ಆದರೆ ಮುಖ್ಯಾರ್ಥದಲ್ಲಿ ಕೂಡುವುದಿಲ್ಲ ಎಂದು ಹೇಳುತ್ತೇವೆ. ಮುಖ್ಯಾರ್ಥಕ್ಕೆ ಬಾಧಕವಿಲ್ಲದಾಗ ಅಮುಖ್ಯಾರ್ಥವನ್ನು ಅಂಗೀಕರಿಸುವುದು ಯುಕ್ತವಲ್ಲ. ಸಂಸಾರಿಗಳಲ್ಲಿ ಅಕಾಮಹತತ್ವಾದಿಗಳು ಹೇಗೆ ಕೂಡುವುದಿಲ್ಲ ಎನ್ನುವುದನ್ನು ಉಪಪಾದಿಸುತ್ತಾರೆ –

**ಕಾಮಸ್ಯ ಯತ್ರಾಪ್ತಾಃ ಕಾಮಾಸ್ತತ್ರ ಮಾಮಮೃತಂ ಕೃಧಿ ॥ ೧೬ ॥**

**ಇತಿ ಯಲ್ಲಕ್ಷಣಂ ಮುಕ್ತೇಃ ಶ್ರುತಿರಾಹ ಬಲೀಯಸೀ ।**

**ಕಾಮಾಹತಿಃ ಕುತೋऽನ್ಯತ್ರ ಪ್ರಾಪ್ತಕಾಮಸ್ಯ ಸಾ ಭವೇತ್ ॥ ೧೭ ॥**

ಯಾವ ಲೋಕದಲ್ಲಿ ಇಚ್ಛೆಯ ವಿಷಯಗಳು ಪೂರ್ಣವಾಗಿವೆಯೋ ಆ ಲೋಕದಲ್ಲಿ ನನ್ನನ್ನು ಮುಕ್ತನನ್ನಾಗಿ ಮಾಡು (ಹೀಗೆ ವಾಯುದೇವರಲ್ಲಿ ಪ್ರಾರ್ಥನೆ). ಹೀಗೆ ಬಲಿಷ್ಠವಾದ ಶ್ರುತಿಯು ಆಪ್ತಕಾಮತ್ವವನ್ನು ಮುಕ್ತಿಯ ಲಕ್ಷಣವನ್ನಾಗಿ ಹೇಳುತ್ತದೆ. ಆದರೆ ಇಲ್ಲಿ ಮುಕ್ತನಿಗೆ ಸರ್ವಕಾಮಗಳ ಪ್ರಾಪ್ತಿಯೇ ತೋರುವುದು, ಅಕಾಮಹತತ್ವವು ತೋರುವುದಿಲ್ಲ ಎಂದರೆ – ಅಕಾಮಹತತ್ವವು ಮುಕ್ತಿಯಲ್ಲಿ ಸಂಭವಿಸದಿದ್ದರೆ ಸಂಸಾರದಲ್ಲಿ ತಾನೇ ಹೇಗೆ ಸಂಭವಿಸುವುದು? ಅಕಾಮಹತತ್ವವು ಪ್ರಾಪ್ತಕಾಮನಿಗೇ ಆಗುವುದು. ಅಕಾಮಹತತ್ವಕ್ಕೆ ಕಾಮಪ್ರಾಪ್ತಿಯೇ ಹೇತುವು.

ಆಪ್ತಕಾಮನಿಗೆ ಅಕಾಮಹತತ್ವವು ಹೇಗೆ ಎನ್ನುವುದನ್ನು ವಿವರಿಸುತ್ತಾರೆ –

**ಅಪ್ರಯತ್ನೇನ ಕಾಮಾನಾಮವಾಪ್ತಿಃ ಸಾ ಯದಾ ಭವೇತ್ ।**

**ತದೈವ ಕಾಮಹತತಾ ಕುತ ಏವಾನ್ಯಥಾ ಭವೇತ್ ॥ ೧೮ ॥**

ಯಾವಾಗ ಅಪ್ರಯತ್ನವಾಗಿ ಕಾಮಿತಾರ್ಥಗಳ ಪ್ರಾಪ್ತಿಯು ಆಗುವುದೋ, ಆವಾಗಲೇ ಅಕಾಮಹತತ್ವವು ಆಗುವುದು. ಹಾಗೆ ಕಾಮಗಳ ಪ್ರಾಪ್ತಿಯಾಗದಿದ್ದರೆ ಹೇಗೆ ತಾನೆ ಅಕಾಮಹತಿಯು ಆಗುವುದು?

ಕಾಮದಿಂದ ಉಪದ್ರವವೇ ಕಾಮಹತತ್ವ. ಅದರ ಅಭಾವವೇ ಅಕಾಮಹತತ್ವ. ಅಥವಾ ಯಾವನು ಕಾಮಿತವಾದುದನ್ನು ನಿಯಮವಾಗಿ ಹೊಂದುತ್ತಾನೋ ಅವನು ಅಕಾಮಹತನು. ಆತನು ಮುಕ್ತನಾಗುವುದಕ್ಕೆ ಅರ್ಹನು. ಆದ್ದರಿಂದ ಮುಕ್ತನಿಗೇ ಅಕಾಮಹತತ್ವವು ಎಂದು ತಾತ್ಪರ್ಯ.

ಹಾಗಾದರೆ ಆಪ್ತಕಾಮನಿಗೇ ಕಾಮನಿಮಿತ್ತವಾದ ಉಪದ್ರವಾಭಾವವು ಎನ್ನುವ ನಿಯಮವಿಲ್ಲ. ಕಾಮವಿಲ್ಲದಿದ್ದರೂ ಕಾಮೋಪದ್ರವ ಅಭಾವವು ಕೂಡುವುದು. ಹೀಗೆ ಆಶಂಕಿಸಿದರೆ ಚೇತನರಲ್ಲಿ ಕಾಮನಾಭಾವವೇ ಕೂಡುವುದಿಲ್ಲ ಎನ್ನುತ್ತಾರೆ –

**ಚೇತನಸ್ಯ ತ್ವಸುಪ್ತಸ್ಯ ಕುತ್ರ ದೃಷ್ಟಾ ಹ್ಯಕಾಮತಾ ।**

**ಅವ್ಯಕ್ತಿರೇವ ಕಾಮಾನಾಂ ನ ನಾಶೋ ಮೋಹಸುಪ್ತಯೋಃ ॥ ೧೯ ॥**

ಸುಷುಪ್ತಿ ಮೋಹಗಳನ್ನು ಹೊಂದದೇ ಇರುವ ಚೇತನನಿಗೆ ಕಾಮನಾಭಾವವು ಎಲ್ಲಿಯೂ ಕಂಡಿಲ್ಲ. ಮೋಹ ಮತ್ತು ಸುಷುಪ್ತಿಗಳಲ್ಲಿಯೂ ಕಾಮನೆಗಳು ಅವ್ಯಕ್ತವೇ ಆಗಿರುತ್ತವೆ ಹೊರತು ಪೂರ್ತಿಯಾಗಿ ನಾಶವಾಗಿರುವುದಿಲ್ಲ.

ಸುಪ್ತ್ಯಾದಿಗಳಲ್ಲಿ ಕಾಮವಿರುವುದು ಎನ್ನುವುದೇ ಸಿದ್ಧವಾಗಿಲ್ಲ. ಹಾಗಿರುವಾಗ ಕಾಮದ ಅವ್ಯಕ್ತಿ ಎನ್ನುವ ಕಲ್ಪನೆಯೇ ಕೂಡುವುದಿಲ್ಲ ಎಂದರೆ –

**ಯತ್ಕಾಮಃ ಸ್ವಾಪಮಾಪ್ನೋತಿ ತದೇವೋತ್ಥಾಪಿತಃ ಪುನಃ ।**

**ಅವಶೋಽಪಿ ವ್ಯಾಹರತಿ ಕುತಃ ಸುಪ್ತಾವಕಾಮತಾ ॥ ೨೦ ॥**

ಭೋಜನಾದಿ ಇಚ್ಛೆಯಿಂದ ಯುಕ್ತನಾಗಿ ಸುಪ್ತಿಯನ್ನು ಹೊಂದಿದ ಪುರುಷನು, ಎದ್ದಕೂಡಲೇ ಕೆಲವುವೇಳೆ ಪರವಶನಾಗಿದ್ದರೂ ತಾನು ಸುಪ್ತಿಯನ್ನು ಹೊಂದುವ ಮುಂಚೆ ಬಯಸಿದ್ದನ್ನೇ ಪುನಃ ಕೇಳುವುದು ಕಂಡಿದೆ. ಆದಕಾರಣ ಸುಪ್ತಿಯಲ್ಲಿ ಕಾಮನಾಭಾವವು ಹೇಗೆ ಸಿದ್ಧಿಸುತ್ತದೆ? ಆದಕಾರಣ ಸ್ವಾಪಕಾಲದಲ್ಲಿಯೂ ಕಾಮವು ಇರುವುದು ಎಂದು ಸಿದ್ಧಿಸುವುದು.

ಹಿಂದೆ ಹೇಳಿದ ಕೇವಲ ಅನುಮಾನದಿಂದ ಮಾತ್ರವಲ್ಲ, 'ಸೋಽಶ್ನುತೇ ಸರ್ವಾನ್ ಕಾಮಾನ್ ಸಹ ಬ್ರಹ್ಮಣಾ ವಿಪಶ್ಚಿತಾ' ಇತ್ಯಾದಿ ಶ್ರುತಿಗಳಿಂದಲೂ

ಮುಕ್ತನಿಗೆ ಸಕಾಮತ್ವವು ಸಿದ್ಧಿಸುತ್ತದೆ ಎಂದು ಹೇಳುತ್ತಾರೆ –

**ಸರ್ವಕಾಮಾನವಾಪ್ನೋತಿ ಬ್ರಹ್ಮಣಾ ಸಹ ಮುಕ್ತಿಗಃ ।**

**ಪರ್ಯೇತಿ ತತ್ರ ಜಕ್ಷಂಶ್ಚ ಕ್ರೀಡನ್ ರತಿಮವಾಪ್ನುಯಾತ್ ॥ ೨೧ ॥**

**ಕಾಮಾನ್ನೀ ಕಾಮರೂಪೀ ಸನ್ನಿಮಾನ್ ಲೋಕಾಂಶ್ಚ ಸಂಚರನ್ ।**

**ಆಸ್ತೇ ಗಾಯನ್ಸಾಮ ಮುಕ್ತ ಇತ್ಯಾದಿ ಶ್ರುತಿಸದ್ಬಲಾತ್ ॥ ೨೨ ॥**

**ಅಕಾಮಃ ಸ್ಯಾತ್ಕಥಂ ಮುಕ್ತಃ ।**

ಮುಕ್ತಿಯಲ್ಲಿರುವವನು ಪರಬ್ರಹ್ಮನೊಂದಿಗೆ ಕೂಡಿಕೊಂಡು ಎಲ್ಲ ಇಚ್ಛೆಗಳನ್ನು ಹೊಂದುತ್ತಾನೆ. ಅಲ್ಲಿ ಭಕ್ಷಿಸುತ್ತ, ಕ್ರೀಡಿಸುತ್ತ, ರಮಣವನ್ನು ಹೊಂದಿದವನಾಗಿ ಅಡ್ಡಾಡುತ್ತಿರುತ್ತಾನೆ. ಮುಕ್ತನು ಇಷ್ಟಪಟ್ಟ ಅನ್ನವನ್ನು ಹೊಂದಿದವನಾಗಿ, ಇಷ್ಟವಾದ ರೂಪವುಳ್ಳವನಾಗಿ, ಈ ಲೋಕಗಳನ್ನು ಸಂಚರಿಸುತ್ತ ಸಾಮವೇದವನ್ನು ಗಾಯನ ಮಾಡುತ್ತ ಇರುತ್ತಾನೆ. ಇತ್ಯಾದಿ ಶ್ರುತಿಯ ಬಲದಿಂದ ಮುಕ್ತನಿಗೆ ಕಾಮವಿದೆ ಎಂದು ತಿಳಿದುಬರುವುದು. ಆದಕಾರಣ ಮುಕ್ತನು ಅಕಾಮನು ಹೇಗೆ ಆದಾನು?

ಹಾಗಾದರೆ ಮುಕ್ತನಿಗೆ ಕಾಮವಿಲ್ಲವೆನ್ನುವ ವಿಷಯದಲ್ಲಿಯೂ 'ಯದಾ ಸರ್ವೇ ಪ್ರಮುಚ್ಯಂತೇ ಕಾಮಾ ಯೇಽಸ್ಯ ಹೃದಿಸ್ಥಿತಾಃ । ಅಥ ಮರ್ತ್ಯೋಽಮೃತೋ ಭವತ್ಯತ್ರ ಬ್ರಹ್ಮ ಸಮಶ್ನುತೇ' ಇತ್ಯಾದಿ ಶ್ರುತಿಯಿದೆ. ಆದಕಾರಣ ಮುಕ್ತನಿಗೆ ಕಾಮವಿದೆ ಎನ್ನುವ ನಿಶ್ಚಯವು ಹೇಗೆ ಎಂದರೆ –

**ಕಾಮಾ ಯೇಽಸ್ಯ ಹೃದಿ ಶ್ರಿತಾಃ ।**

**ಇತ್ಯಂತಃಕರಣಸ್ಥಾನಾಂ ಕಾಮಾನಾಂ ಮೋಕ್ಷಮೇವ ಹಿ ॥ ೨೩ ॥**

**ಆಹ ಶ್ರುತಿರ್ಹೃದೀತ್ಯೇವ ನ ಚೇದ್ವ್ಯರ್ಥಂ ವಿಶೇಷಣಮ್ ।**

'ಯದಾ ಸರ್ವೇ ಪ್ರಮುಚ್ಯಂತೇ ಕಾಮಾ ಯೇಽಸ್ಯ ಹೃದಿಸ್ಥಿತಾಃ' ಇತ್ಯಾದಿ ಶ್ರುತಿಯು ಯಾವಾಗ ಜೀವನ ಅಂತಃಕರಣದಲ್ಲಿಯೇ ಇರುವ ಎಲ್ಲ ಕಾಮಗಳಿಗೆ ಬಿಡುಗಡೆಯಾಗುವುದೋ ಆಗ ಅವನು ಮುಕ್ತನಾಗುತ್ತಾನೆ ಎಂದು ಹೇಳುವುದು. ಇಲ್ಲಿ ಪ್ರಾಕೃತ ಕಾಮರಾಹಿತ್ಯವನ್ನು ಮಾತ್ರ ಶ್ರುತಿಯು ಪ್ರತಿಪಾದಿಸುತ್ತದೆ, ಸರ್ವಥಾ ಕಾಮಾಭಾವವನ್ನಲ್ಲ. ಈ ಶ್ರುತಿಯು ಅಂತಃಕರಣದ ಪರಿಣಾಮಗಳಾದ ಕಾಮಗಳಿಗೆ ನಿವೃತ್ತಿಯನ್ನು ಹೇಳುತ್ತದೆ. ಜೀವಸ್ವರೂಪದಲ್ಲಿರುವ ಕಾಮಗಳಿಗೆ ಅಲ್ಲ. ಇಲ್ಲದಿದ್ದರೆ 'ಹೃದಿ ಶ್ರಿತಾಃ' ಎನ್ನುವ ವಿಶೇಷಣವು ವ್ಯರ್ಥವೇ ಆಗುವುದು.

'ಹೃದಿ ಶ್ರಿತಾಃ' ಎನ್ನುವುದು ವಿಶೇಷಣವಲ್ಲ. ಎಲ್ಲ ಕಾಮಗಳು ಅಂತಃಕರಣದ ಪರಿಣಾಮಗಳೇ. ಆತ್ಮಧರ್ಮವಾದ ಕಾಮವೆಂಬುದಿಲ್ಲ. ಆದಕಾರಣ ಹೃದಿ ಶ್ರಿತಾಃ ಎನ್ನುವುದು ಸ್ವರೂಪಕಥನಮಾತ್ರವು ಎಂದು ಆಶಂಕಿಸಿಕೊಂಡು, ನಿಷೇಧಿಸುತ್ತಾರೆ –

**ಹೃದ್ಯೇವ ತೇಷಾಂ ಶ್ರಯಣಮಿತಿ ಪಕ್ಷೋ ನ ಭಾಸತೇ ॥ ೨೪ ॥**

**ಮುಕ್ತಾನಾಂ ಕಾಮಿತಾಮಾಹ ಪೃಥಕ್ ಶಾಖಾಸು ಯಚ್ಛ್ರುತಿಃ ।**

**ಅತೋಽಕಾಮಹತತ್ವಂ ತು ಮುಕ್ತಾನಾಮೇವ ಮುಖ್ಯತಃ ॥ ೨೫ ॥**

**ಮುಖ್ಯಾರ್ಥಸ್ಯ ವೃಥಾ ತ್ಯಾಗೋ ಮಾಯಿನಾಮೇವ ಭೂಷಣಮ್ ।**

ಅಂತಃಕರಣದಲ್ಲಿಯೇ ಕಾಮಗಳಿಗೆ ಆಶ್ರಯವು ಎನ್ನುವ ಪಕ್ಷವು ಇಲ್ಲಿ ಪ್ರಕಾಶಿಸುವುದಿಲ್ಲ. ಏಕೆಂದರೆ ಶ್ರುತಿಯು ಪ್ರತ್ಯೇಕವಾಗಿ ಶಾಖೆಗಳಲ್ಲಿ ಮುಕ್ತರಿಗೆ ಕಾಮವನ್ನು ಹೇಳುತ್ತದೆ. ಆದುದರಿಂದ ಮುಖ್ಯವಾಗಿ ಅಕಾಮಹತತ್ವವು ಮುಕ್ತರಿಗೇ ಎಂದು ಸಿದ್ಧವಾಗುವುದು. ಕಾರಣವಿಲ್ಲದೆ ವೃಥಾ ಮುಖ್ಯವಾದ ಅರ್ಥವನ್ನು ಬಿಡುವುದು ಮಾಯಿಗಳಿಗೆ ಮಾತ್ರ ಭೂಷಣವು.

ಮುಕ್ತರಲ್ಲಿ ಅಕಾಮಹತತ್ವವು ಕೂಡುವುದಿಲ್ಲವೆಂದು ಪ್ರತಿಪಾದಿಸಲಾಯಿತು. ಹಾಗೆಯೇ ಅವೃಜಿನತ್ವವೂ ಕೂಡುವುದಿಲ್ಲವೆಂದು ಹೇಳುತ್ತ, ಅದನ್ನು ವಿವರಿಸುತ್ತಾರೆ.

**ಅಪಾಪತ್ವಮದುಃಖತ್ವಂ ಚಾವೃಜಿನತ್ವಮಿಹೋದಿತಮ್ ॥ ೨೬ ॥**

**ಅಪ್ರಿಯಂ ವೃಜಿನಂ ದುಃಖಮಕಂ ತೋದ ಇತೀರ್ಯತೇ ।**

**ತತ್ಕಾರಣತ್ವಾತ್ಪಾಪಂ ವಾ ವೃಜಿನಂ ನಾಮ ಕಥ್ಯತೇ ॥ ೨೭ ॥**

**ಇತ್ಯುಕ್ತಃ ಸ್ವಯಮೀಶೇನ ನಾಮಾರ್ಥಃ ಶಬ್ದನಿರ್ಣಯೇ ।**

ಅಪಾಪತ್ವ, ಅದುಃಖತ್ವಗಳೇ ಇಲ್ಲಿ ಅವೃಜಿನತ್ವವೆಂಬುದಾಗಿ ಹೇಳಲ್ಪಟ್ಟಿವೆ. ದುಃಖವು ಅಪ್ರಿಯಂ, ವೃಜಿನಂ, ಅಕಂ ತೋದಃ ಇತ್ಯಾದಿಗಳಿಂದ ಹೇಳಲ್ಪಡುತ್ತದೆ. ದುಃಖಕ್ಕೆ ಕಾರಣವಾದ್ದರಿಂದ ಪಾಪವೂ ವೃಜಿನವೆಂದು ಹೇಳಲ್ಪಡುತ್ತದೆ. ಹೀಗೆ ಶಬ್ದನಿರ್ಣಯದಲ್ಲಿ ಸ್ವಯಂ ಶ್ರೀಹರಿಯಿಂದಲೇ ವೃಜಿನ ಶಬ್ದಾರ್ಥವು ಹೇಳಲ್ಪಟ್ಟಿದೆ.

**ಅಪಾಪತ್ವಂ ಚ ನೈವಾಸ್ತಿ ಯಾವತ್ಸಂಸಾರಮಸ್ಯ ಹಿ ॥ ೨೮ ॥**

**ಆರಬ್ಧಪಾಪಮಸ್ತ್ಯೇವ ದುಃಖಂ ಚ ಜ್ಞಾನಿನೋಽಪಿ ಹಿ ।**

**ತಸ್ಮಾತ್ತಸ್ಮಾದಕಾಮತ್ವಮಿತಿ ಚಾಶ್ರುತಕಲ್ಪನಾ ॥ ೨೯ ॥**

**ಅಕಾಮಹತ ಇತ್ಯುಕ್ತೇಃ ಶ್ರುತಹಾನಿರಪಿ ಸ್ಫುಟಾ ।**

ಈ ಜೀವನಿಗೆ ಸಂಸಾರವಿರುವ ತನಕ ಅಪಾಪತ್ವವೂ ಕೂಡ ಇರುವುದೇ ಇಲ್ಲ. ಜ್ಞಾನಿಗೂ ಕೂಡ ಪ್ರಾರಬ್ಧವಾದ ಪಾಪವೂ ದುಃಖವೂ ಕೂಡ ಇದ್ದೇ ಇರುವುದು. ಪೂರ್ವಪೂರ್ವದಲ್ಲಿ ನಿರ್ದಿಷ್ಟರಾದವರಿಂದ ಅತಿಶಯವಾಗಿ ಉತ್ತರೋತ್ತರದವರಿಗೆ ಕಾಮರಾಹಿತ್ಯವನ್ನು ಹೇಳುವುದರಿಂದ ಅಶ್ರುತಕಲ್ಪನಾ ಎಂಬ ದೋಷ ಬರುವುದು. ಶ್ರುತಿಯಲ್ಲಿದ್ದ ಅಕಾಮಹತಃ ಎನ್ನುವ ಹೇಳಿಕೆಗೆ ಪರಕೀಯರು ಅಕಾಮಃ ಎಂದು ವ್ಯಾಖ್ಯಾನಮಾಡಿರುತ್ತಾರೆ. ಇದರಿಂದ ಶ್ರುತಿಯಲ್ಲಿನ ಹತ ಶಬ್ದಕ್ಕೆ ಯಾವುದೇ

ಪ್ರಯೋಜನವೂ ಇಲ್ಲದಂತಾಗುವುದು. ಹೀಗೆ ಶ್ರುತಹಾನಿಯೂ ಕೂಡ ಸ್ಪಷ್ಟವೇ.

ಅಧಿಕವಾದ ದೋಷವನ್ನೂ ಹೇಳುತ್ತಾರೆ –

**ಕುತ್ರಚಿತ್ಕಾಮಿನಃ ಪುಂಸಃ ಕಾಮಾಭಾವಾತ್ ಕ್ವಚಿತ್ಕ್ವಚಿತ್ ॥ ೩೦ ॥**

**ಇಂದ್ರಾದಿಸುಖಭೋಗೋಽಸ್ತೀತ್ಯನುಭೂತಿರ್ಹಿ ಕುಪ್ಯತಿ ।**

ಇಂದ್ರಾದಿ ಪದವಿಗಳಿಗೆ ವ್ಯತಿರಿಕ್ತವಾದ ಯಾವುದಾದರೊಂದು ಪದವಿಯಲ್ಲಿ ಕಾಮನೆಯುಳ್ಳ ಪುರುಷನಿಗೆ, ಇಂದ್ರಾದಿ ಪದವಿಗಳಲ್ಲಿ ಕಾಮನೆಯಿಲ್ಲದಿದ್ದರೂ, ಇಂದ್ರಾದಿಗಳಿಗೆ ಸಮವಾದ ಸುಖಭೋಗವು ಎಂದು ವ್ಯಾಖ್ಯಾನಮಾಡಿದರೆ, ಅದು ಅನುಭವಕ್ಕೆ ವಿರುದ್ಧವಾಗುವುದು. ರಾಜ್ಯವನ್ನು ಇಚ್ಛಿಸದೆ ಇದ್ದವನಿಗೆ ರಾಜಸಮಾನ ಸುಖಭೋಗವು ಅನುಭವಬಾಧಿತವು ಎನ್ನುವುದು ಲೋಕದಲ್ಲಿ ಸ್ಪಷ್ಟವೇ ಆಗಿದೆ.

ಹಾಗಾದರೆ ಶ್ರುತಿಯ ಅರ್ಥವು ಯಾವುದೆಂದರೆ –

**ತಸ್ಮಾದಮುಕ್ತಸುಖಗಂ ತಾರತಮ್ಯಂ ಪೃಥಕ್ಪೃಥಕ್ ॥ ೩೧ ॥**

**ಉಕ್ತ್ವಾ ಯಶ್ಚೇತಿ ಮುಕ್ತಾನಾಂ ತಾರತಮ್ಯಂ ಸುಖೇ ಶ್ರುತಿಃ ।**

**ಆಹೇತಿ ಪೇಶಲಂ ತಚ್ಚ ಚ ಶಬ್ದಾದೇವ ಗಮ್ಯತೇ ॥ ೩೨ ॥**

ಹೀಗೆ ಶ್ರುತಿಗೆ ಅರ್ಥಾಂತರವು ನಿರಸ್ತವಾಯಿತು. ಹಾಗಾದರೆ ಶ್ರುತಿಯು ಏನು ಹೇಳುವುದು ಎಂದರೆ – ಅಮುಕ್ತರಾದ ಮನುಷ್ಯಾದಿಗಳ ಸುಖಕ್ಕೆ ಸಂಬಂಧಿಸಿದ ತಾರತಮ್ಯವನ್ನು 'ತೇ ಯೇ ಶತಂ' ಇತ್ಯಾದಿ ವಾಕ್ಯಗಳಿಂದ ಬೇರೆಬೇರೆಯಾಗಿ ಹೇಳಿ, 'ಯಶ್ಚ ಶ್ರೋತ್ರಿಯಸ್ಯ ಚ' ಎನ್ನುವ ವಾಕ್ಯದಿಂದ ಮುಕ್ತರಾದ ಮನುಷ್ಯಾದಿಗಳ ಸುಖ ದಲ್ಲಿ ತಾರತಮ್ಯವನ್ನು ಶ್ರುತಿಯು ಅತಿದೇಶದಿಂದ ಹೇಳುತ್ತದೆ. ಹೀಗೆ ವ್ಯಾಖ್ಯಾನ ಮಾಡಿದರೆ ದೋಷವಿಲ್ಲ. ಹೀಗಾದರೆ ವಾಕ್ಯಭೇದವೆಂಬ ದೋಷವು ಬರುವುದು ಎಂದರೆ, ಜ್ಞಾಪಕವಿರುವ ಪ್ರಯುಕ್ತ ದೋಷವಿಲ್ಲ ಎನ್ನುತ್ತಾರೆ. 'ಯಶ್ಚ' ಎನ್ನುವ ವಾಕ್ಯಕ್ಕೆ ಪ್ರಕೃತವಾದ ಅರ್ಥದ ದೆಶೆಯಿಂದ ಬೇರೆ ವಿಷಯವಿದೆ ಎನ್ನುವುದು 'ಚ' ಶಬ್ದದಿಂದಲೇ ತಿಳಿಯುತ್ತದೆ.

ಮನುಷ್ಯರಿಂದ ಆರಂಭಿಸಿ ಹಿರಣ್ಯಗರ್ಭನವರೆಗೆ ಅಮುಕ್ತರಿಗೂ ಮುಕ್ತರಿಗೂ ಉತ್ತರೋತ್ತರ ಶತ ಗುಣ ಆನಂದಾಧಿಕ್ಯವಿದೆ ಎಂದು ಎರಡು ಶ್ರುತಿಗಳು ಹೇಳುತ್ತವೆ ಎನ್ನುವುದು ಅಯುಕ್ತವು. ಮನುಷ್ಯರ ಆನಂದವನ್ನು ಹೇಳುವಲ್ಲಿ ಮುಕ್ತಜ್ಞಾಪಕವು ಇಲ್ಲ. ಅಲ್ಲಿ ಅಕಾಮಹತತ್ವ ಇತ್ಯಾದಿಗಳೂ ಶ್ರುತವಾಗಿಲ್ಲ ಎಂಬ ಆಶಂಕೆಯನ್ನು ನಿರಾಕರಿಸುತ್ತ, ರಾದ್ಧಃ ಇತ್ಯಾದಿ ವಾಕ್ಯದಿಂದ ಆರಂಭಿಸಿ ಅಭಿವೀಕ್ಷತಃ ಎನ್ನುವ ತನಕ ಶ್ರುತ್ಯರ್ಥವನ್ನು ವಿವರಿಸುತ್ತಾರೆ –

ಅದರಲ್ಲಿ ರಾದ್ಧಃ ಎನ್ನುವುದರಿಂದ ಬೃಹದಾರಣ್ಯಕದಲ್ಲಿ ಮನುಷ್ಯಮುಕ್ತನ ಜ್ಞಾಪಕವನ್ನು ತೋರಿಸುತ್ತಾರೆ –

**ರಾದ್ಧಃ ಸಂಸಿದ್ಧ ಇತ್ಯೇವ ಮುಕ್ತ ಏವಾವಗಮ್ಯತೇ ।**

'ಸ ಯೋ ಮನುಷ್ಯಾಣಾಂ ರಾದ್ಧಃ ಸಮೃದ್ಧೋ ಭವತಿ' ಎನ್ನುವ ಉಪಕ್ರಮ ವಾಕ್ಯದಲ್ಲಿರುವ ರಾದ್ಧಃ ಎಂಬ ಪದದಿಂದ ಸಂಸಿದ್ಧಃ ಎಂಬ ಅರ್ಥದಲ್ಲಿ (ರಾಧ ಸಾಧ ಸಂಸಿದ್ಧೌ) ಮುಕ್ತನೇ ಹೇಳಲ್ಪಟ್ಟಿದ್ದಾನೆ. ಇನ್ನೂ ಮುಕ್ತಿಯಾಗದೇ ಇದ್ದಾಗ ಸಮೃದ್ಧಿ ಇರುವುದಿಲ್ಲ ಮುಕ್ತನಾದಾಗಲೇ ಸಮೃದ್ಧಿಯು. ಆದಕಾರಣ ಸಮೃದ್ಧ ಶಬ್ದವೂ ಮುಕ್ತ ವಾಚಕವು. ಹೀಗೆ ರಾದ್ಧ ಶಬ್ದವು ಶಕ್ತಿವೃತ್ತಿಯಿಂದಲೇ ಮುಕ್ತನನ್ನು ಹೇಳುತ್ತದೆ.

ತೈತ್ತಿರೀಯ ಶ್ರುತಿಯಲ್ಲಿನ ಮುಕ್ತಮನುಷ್ಯ ಜ್ಞಾಪಕವನ್ನು ತೋರಿಸುತ್ತ 'ಯುವಾ ಸ್ಯಾತ್' ಇತ್ಯಾದಿ ಪದಗಳನ್ನು 'ಸಾಧುನಾ' ಇತ್ಯಾದಿ ವ್ಯಾಖ್ಯಾನ ಮಾಡುತ್ತಾರೆ –

**ಸಾಧುನಾ ವಿಷ್ಣುನಾ ಯುಕ್ತೋ ಮುಕ್ತಃ ಸಾಧುಯುವಾ ಮತಃ ।। ೩೩ ।।**

**ಯೌವನಂ ನಿತ್ಯಮೇತಸ್ಯ ಮುಕ್ತಸ್ಯೇತಿ ಯುವಾ ಸ ಚ ।**

**ಫಲಮಧ್ಯಯನಸ್ಯಾಪ್ತಂ ತೇನಾಧ್ಯಾಯಕ ಈರಿತಃ ।। ೩೪ ।।**

**ನಿರ್ಹ್ರಾಸಾನಂದಸಂಪ್ರಾಪ್ತ್ಯಾ ಚಾಶಿಷ್ಠ ಇತಿ ಗೀಯತೇ ।**

**ಸ್ಥಿತಸ್ಯಾನನ್ಯಥಾಪ್ರಾಪ್ತೇರ್ದೃಢಿಷ್ಠ ಇತಿ ಚೋದಿತಃ ।। ೩೫ ।।**

**ಬಲಿಷ್ಠಶ್ಚ ಸ್ವಭಾವೇನ ಮುಕ್ತೋ ಭವತಿ ಕೇವಲಮ್ ।**

ನಿರ್ದೋಷನೇ ಸಾಧು ಎಂದು ಕರೆಯಲ್ಪಡುತ್ತಾನೆ. ವಿಷ್ಣುವಿನಿಂದ ಇತರರು ಯಾರೂ ನಿರ್ದೋಷರಲ್ಲ. ಆದ್ದರಿಂದ ಸಾಧುನಾ ವಿಷ್ಣುನಾ ಎಂದು ಇಲ್ಲಿ ಹೇಳಿದೆ. ನಿರ್ದೋಷನಾದ ವಿಷ್ಣುವಿನಿಂದ ಕೂಡಿದ ಮುಕ್ತನು (ಭಗವತ್ ಸಾಮೀಪ್ಯ ರೂಪವಾದ ಮೋಕ್ಷವುಳ್ಳವನು) ಸಾಧು ಯುವಾ ಎಂದು ಮತವು. ಯುವ ಶಬ್ದಕ್ಕೆ ನಿತ್ಯವಾದ ಯೌವನವೆಂದೇ ಮುಖ್ಯಾರ್ಥವು. ಆದ್ದರಿಂದ ನಿತ್ಯವಾದ ಯೌವನವು ಮುಕ್ತನಾದ ಈ ಮನುಷ್ಯನಿಗೇ ಕೂಡುತ್ತದೆ, ಹೊರತು ಸಂಸಾರಿಗಲ್ಲ. ಈ ಕಾರಣದಿಂದ ಯುವಶಬ್ದವಾಚ್ಯನು ಮುಕ್ತನೇ. ಅಧ್ಯಯನದ ಫಲವಾದ ಮುಕ್ತಿಯು ಮುಕ್ತನಿಂದಲೇ ಹೊಂದಲ್ಪಟ್ಟಿದೆ. ಆ ಕಾರಣದಿಂದ ಮುಕ್ತನೇ ಆಧ್ಯಾಯಕನೆಂದು ಹೇಳಿಸಿಕೊಳ್ಳುತ್ತಾನೆ. ಹ್ರಾಸವಿಲ್ಲದ ಅಂದರೆ ಯೋಗ್ಯತಾನುಸಾರವಾಗಿ ಪೂರ್ಣವಾದ ಆನಂದದ ಸಂಪ್ರಾಪ್ತಿಯಿಂದ ಮುಕ್ತನೇ ಆಶಿಷ್ಠ ಎಂದು ಹೇಳಿಸಿಕೊಳ್ಳುತ್ತಾನೆ. 'ಆ ಸಮ್ಯಕ್ ಸಮಂತಾಚ್ಚ ಶಂ ಅಸ್ಯ ಇತಿ ಆಶಃ' ಅಂದರೆ ಚೆನ್ನಾಗಿ ಸುಖವುಳ್ಳವನು ಆಶನು. 'ಅತಿಶಯೇನ ಆಶಃ ಆಶಿಷ್ಠಃ' ಹ್ರಾಸವಿಲ್ಲದ ಅತಿಶಯವಾದ ಸುಖವುಳ್ಳವನು ಆಶಿಷ್ಠನು. ದೃಢನೆಂದರೆ ಅವಿಕಾರನು. ಅತಿಶಯವಾಗಿ ಅವಿಕಾರನು ದೃಢಿಷ್ಠನು. ಮುಕ್ತಿಯಲ್ಲಿ ಸ್ಥಿತನಾದವನಿಗೆ ಅನ್ಯಥಾ ಪ್ರಾಪ್ತಿಯು (ಅತಿಶಯವಾದ ವಿಕಾರವು) ಆಗದಿರುವ ಕಾರಣ ಮುಕ್ತನು ದೃಢಿಷ್ಠನೆಂದು ಹೇಳಿಸಿಕೊಳ್ಳುತ್ತಾನೆ. 'ಬಲಮಸ್ಯ ಅಸ್ತೀತಿ ಬಲೀ' 'ಅತಿಶಯೇನ ಬಲೀ ಬಲಿಷ್ಠಃ'. ಅತಿಶಯವಂದರೆ ಸ್ವಾಭಾವಿಕತ್ವವು.

ಸ್ವಭಾವದಿಂದ ಬಲಿಷ್ಠನಾದವನು ಮುಕ್ತನೇ ಹೊರತು ಅಮುಕ್ತನಲ್ಲ. ಆದ್ದರಿಂದ ಮುಕ್ತನೇ ಬಲಿಷ್ಠನೆಂದು ಹೇಳಿಸಿಕೊಳ್ಳುತ್ತಾನೆ.

ಹಾಗಾದರೆ ಮುಕ್ತನಿಗೆ 'ತಸ್ಯೇವಂ ಪೃಥಿವೀ ಸರ್ವಾ ವಿತ್ತಸ್ಯ ಪೂರ್ಣಾ ಸ್ಯಾತ್' ಎಂದು ವಿತ್ತಪರಿಪೂರ್ಣತ್ವ ಪೃಥಿವೀಪತಿತ್ವಗಳನ್ನು ಹೇಳುವುದು ಹೇಗೆ ಕೂಡುತ್ತದೆ ಎಂದರೆ –

**ತಸ್ಯೇಯಂ ಪೃಥಿವೀತ್ಯಾದಿ ಪೂರ್ವಭಾವವ್ಯಪೇಕ್ಷಯಾ ।। ೩೬ ।।**

ತಸ್ಯೇಯಂ ಪೃಥಿವೀ ಇತ್ಯಾದಿ ವಾಕ್ಯವು ಮುಕ್ತಿಗೆ ಪೂರ್ವಭಾವ ಅಂದರೆ ಅಮುಕ್ತತ್ವ ವಿವಕ್ಷೆಯಿಂದ ಹೇಳಿದ್ದು. ಮುಕ್ತ ಹಾಗೂ ಅಮುಕ್ತರ ವಿವಕ್ಷೆಯಿಂದ ಯುವಾ ಸ್ಯಾತ್ ಇತ್ಯಾದಿ ವಾಕ್ಯವು ಪ್ರವೃತ್ತವಾಗಿದೆ. ಅದರಲ್ಲಿ ಯುವಾ ಸ್ಯಾತ್ ಇತ್ಯಾದಿಗಳಿಂಡ ಮುಕ್ತರನ್ನೂ, ತಸ್ಯೇಯಂ ಇತ್ಯಾದಿಗಳಿಂದ ಅಮುಕ್ತರನ್ನೂ ವಿವಕ್ಷೆ ಮಾಡಿಕೊಂಡು ಹೇಳಲಾಗಿದೆ. ಹಾಗಾದರೆ ಯುವಾ ಸ್ಯಾತ್ ಇತ್ಯಾದಿಗಳಿಗೆ ಮುಕ್ತಾ ಮುಕ್ತ ವಿಷಯತ್ವವನ್ನು ಅಂಗೀಕರಿಸಿದರೆ ಏಕವಿಷಯತ್ವ ಪ್ರತೀತಿಗೆ ವಿರೋಧವು ಎಂಬ ಆಶಂಕೆ ನಿವಾರಣೆಗಾಗಿ ಅಮುಕ್ತಃ ಎನ್ನುವ ಬದಲು ಪೂರ್ವಾಭಾವವೆಂದು ಹೇಳಿದರು. ಒಬ್ಬನೇ ಚೇತನನು ಅವಸ್ಥಾಭೇದದಿಂದ ಯುವಾ ಇತ್ಯಾದಿ ಶಬ್ದಗಳಿಂದ ಪ್ರತಿಪಾದಿಸಲ್ಪಡುತ್ತಾನೆ. ಆದ್ದರಿಂದ ಏಕವಿಷಯತ್ವಪ್ರತೀತಿಯು ಅಯುಕ್ತವಲ್ಲ.

ಹೀಗೆಯೇ ವಾಜಸನೇಯ ಶ್ರುತಿಯಲ್ಲಿ 'ಸ ಯೋ ಹ ವೈ ಮನುಷ್ಯಾಣಾಂ' ಎನ್ನುವುದರಿಂದ ಆರಂಭಿಸಿ 'ಸಂಪನ್ನತಮಃ' ಎನ್ನುವ ತನಕ, ತೈತ್ತಿರೀಯ ಶ್ರುತಿಯಲ್ಲಿ 'ಯುವಾ ಸ್ಯಾತ್' ಎನ್ನುವುದರಿಂದ ಆರಂಭಿಸಿ 'ಪೂರ್ಣಾ ಸ್ಯಾತ್' ಎನ್ನುವ ತನಕ ಮುಕ್ತಾಮುಕ್ತ ಪರವಾಗಿ ವರ್ಣಿಸಲಾಗಿದೆ. ಇದರಿಂದ 'ಸ ಮನುಷ್ಯಾಣಾಂ ಪರಮ ಆನಂದೋऽಥ ಯೇ ಶತಂ ಮನುಷ್ಯಾಣಾಮಾನಂದಾಃ' ಎನ್ನುವ ವಾಕ್ಯವೂ ಹಾಗೂ 'ಏಕೋ ಮಾನುಷ ಆನಂದಸ್ತೇ ಯೇ ಶತಂ ಮಾನುಷಾ ಆನಂದಾಃ' ಎನ್ನುವ ವಾಕ್ಯವೂ ಕೂಡ ಮುಕ್ತಾಮುಕ್ತ ವಿಷಯಕವು ಎಂದು ಸಿದ್ಧವಾಗುವುದು. ಈಗ ತೈತ್ತಿರೀಯ ಶ್ರುತಿಯಲ್ಲಿರತಕ್ಕ 'ಸ ಏಕೋ ಮನುಷ್ಯಗಂಧರ್ವಾಣಾಮಾನಂದಃ ಶ್ರೋತ್ರಿಯಸ್ಯ ಚಾಕಾಮಹತಸ್ಯ' ಎನ್ನುವವರೆಗೆ ವ್ಯಾಖ್ಯಾನ ಮಾಡುತ್ತಾರೆ –

**ಸ ಏಕ ಇತಿ ಸಂಸಾರಗತಮುಕ್ತ್ವಾ ಸುಖಂ ಪುನಃ ।**

**ಶ್ರೋತ್ರಿಯಸ್ಯೇತಿ ವದತಿ ಮುಕ್ತಾಚ್ಛತಗುಣಾತ್ಮತಾಮ್ ।। ೩೭ ।।**

ತೈತ್ತಿರೀಯ ಶ್ರುತಿಯು 'ಸ ಏಕಃ' ಎನ್ನುವ ವಾಕ್ಯದಿಂದ ಸಂಸಾರಿಗಳಾದ ಮನುಷ್ಯರ ಸುಖಕ್ಕಿಂತ ನೂರು ಗುಣಗಳಷ್ಟು ಹೆಚ್ಚಿನ ಸುಖವನ್ನು ಸಂಸಾರಿಗಳಾದ ಮನುಷ್ಯಗಂಧರ್ವರಿಗೆ ಹೇಳಿ, ಪುನಃ ಶ್ರೋತ್ರಿಯಸ್ಯ ಎನ್ನುವ ವಾಕ್ಯದಿಂದ ಮುಕ್ತ ಮನುಷ್ಯನ ದೆಶೆಯಿಂದ ಮುಕ್ತ ಮನುಷ್ಯಗಂಧರ್ವನಿಗೆ ನೂರು ಗುಣಗಳಷ್ಟು ಹೆಚ್ಚಿನ ಸುಖವತ್ವವನ್ನು ಹೇಳುತ್ತದೆ.

ಇದೇ ನ್ಯಾಯದಿಂದ 'ತೇ ಯೇ ಶತಂ ಮನುಷ್ಯಗಂಧರ್ವಾಣಾಮಾನಂದಾಃ' ಇತ್ಯಾದಿ ವಾಕ್ಯವನ್ನೂ ವ್ಯಾಖ್ಯಾನ ಮಾಡಬೇಕು ಎಂಬ ಅಭಿಪ್ರಾಯದಿಂದ 'ಸಂಸಾರ ಗಾತ್' ಇತ್ಯಾದಿಯಾಗಿ ಹೇಳುತ್ತಾರೆ –

**ಸಂಸಾರಗಾಚ್ಚ ಸಂಸಾರಗತಸ್ಯೈವ ಶತಾಧಿಕಮ್ ।**

**ಮುಕ್ತಾನ್ಮುಕ್ತಸ್ಯ ಯುಕ್ತಂ ಸ್ಯಾಚ್ಛ್ರುತ್ಯುಕ್ತಮಭಿವೀಕ್ಷತಃ ।। ೩೮ ।।**

ಸಂಸಾರಿಗಳಾದ ಮನುಷ್ಯಗಂಧರ್ವಾದಿಗಳ ಸುಖದ ದೆಶೆಯಿಂದ ಸಂಸಾರಗತ ದೇವಗಂಧರ್ವಾದಿಗಳಿಗೆ ನೂರು ಗುಣಗಳಷ್ಟು ಹೆಚ್ಚಿನ ಸುಖವನ್ನು ಹೇಳಿ, ಮುಕ್ತ ಮನುಷ್ಯಗಂಧರ್ವಾದಿಗಳ ಸುಖದ ದೆಶೆಯಿಂದ ನೂರು ಗುಣ ಹೆಚ್ಚಿನ ಸುಖವನ್ನು ಮುಕ್ತ ದೇವಗಂಧರ್ವಾದಿಗಳಿಗೆ ಹೇಳುತ್ತದೆ. ಶ್ರುತ್ಯುಕ್ತವಾದುದನ್ನು ಚೆನ್ನಾಗಿ ವಿಚಾರ ಮಾಡತಕ್ಕವರಿಗೆ ಈ ವ್ಯಾಖ್ಯಾನವು ಯುಕ್ತವೇ ಆಗುವುದು.

ಹೀಗೆ ಶ್ರುತಿಯಿಂದ ಮುಕ್ತಿಯಲ್ಲಿನ ತಾರತಮ್ಯವನ್ನು ಉಪಪಾದಿಸಿ ಈಗ ಯುಕ್ತಿಯಿಂದಲೂ ಸಮರ್ಥಿಸುತ್ತಾರೆ –

**ಯುಕ್ತಂ ಚ ಸಾಧನಾಧಿಕ್ಯಾತ್ಸಾಧ್ಯಾಧಿಕ್ಯಂ ಸುರಾದಿಷು ।**

**ನಾಧಿಕ್ಯಂ ಯದಿ ಸಾಧ್ಯೇ ಸ್ಯಾತ್ಪ್ರಯತ್ನಃ ಸಾಧನೇ ಕುತಃ ।। ೩೯ ।।**

ದೇವಾದಿಗಳಲ್ಲಿ ಮನುಷ್ಯಾದಿಗಳ ದೆಶೆಯಿಂದ ಸಾಧನಾಧಿಕ್ಯದ ಕಾರಣದಿಂದ ಮುಕ್ತಿಯಲ್ಲಿನ ಫಲಾಧಿಕ್ಯವು ಅನುಮಿತವಾಗುವುದು. ದೇವಾದಿಗಳಿಗೆ ಸಾಧ್ಯವಾದ ಫಲದಲ್ಲಿ ಮನುಷ್ಯಾದಿಗಳ ದೆಶೆಯಿಂದ ಆಧಿಕ್ಯವು ಆಗದೇ ಹೋದರೆ, ಅಧಿಕವಾದ ಸಾಧನೆಯಲ್ಲಿ ಪ್ರಯತ್ನವು ಹೇಗೆ ಆಗುವುದು? ಅಧಿಕವಲ್ಲದ ಫಲಕ್ಕಾಗಿ ಅಧಿಕವಾದ ಪ್ರಯತ್ನ ಮಾಡುವವರು ಪ್ರೇಕ್ಷಾವಂತರೇ ಆಗುವುದಿಲ್ಲ. ಅಧಿಕವಾದ ಫಲವಿದ್ದರೆ ಮಾತ್ರ ಅದನ್ನು ಹೊಂದಲಿಕ್ಕಾಗಿ ಅಧಿಕವಾದ ಸಾಧನೆಯು ಯುಕ್ತವಾಗುವುದು ಎಂದು ತಾತ್ಪರ್ಯ.

ಪ್ರಮಾಣವಿಲ್ಲದಿರುವ ಪ್ರಯುಕ್ತ ಸ್ವರೂಪಾಸಿದ್ಧಿಯಾಗಲಿ ಎಂದರೆ –

**ಯತ್ನಶ್ಚ ದೃಶ್ಯತೇ ತೇಷಾಂ ಮಹಾನೇವ ಮಹಾತ್ಮನಾಮ್ ।**

ಮಹಾಫಲಕ್ಕೆ ಭಾಗಿಗಳಾದ ಮಹಾತ್ಮರಾದ ಆ ದೇವಾದಿಗಳಿಗೆ ಮನುಷ್ಯರಿಗಿಂತ ಮಹತ್ತರವಾದ ಪ್ರಯತ್ನವು ಅಂದರೆ ಮೋಕ್ಷಸಾಧಾನಾನುಷ್ಠಾನವು ಎನ್ನುವುದು ಪ್ರಮಾಣಗಳಿಂದ ಕಂಡುಬರುತ್ತದೆ.

ಈ ವಿಷಯದಲ್ಲಿ ವ್ಯಾಪ್ತಿಯನ್ನು ಉಪಪಾದಿಸುತ್ತಾರೆ –

**ಯತ್ರ ಸಾಧನಬಾಹುಲ್ಯಂ ಸಾಧ್ಯಬಾಹುಲ್ಯಮತ್ರ ಚ ।। ೪೦ ।।**

**ದೃಷ್ಟಂ ನಿಯಮತೋ ನೋ ಚೇನ್ನ ಯತ್ನಂ ಕುರ್ಯುರಂಜಸಾ ।**

ಯಾವ ಪುರುಷನಲ್ಲಿ ಬೇರೆಯವರಿಗಿಂತ ಸಾಧನಾಧಿಕ್ಯವು ಕಂಡುಬರುವುದೋ ಅವನಲ್ಲಿ ಬೇರೆಯವರಿಗಿಂತ ಸಾಧ್ಯಫಲಾಧಿಕ್ಯವೂ ನಿಯಮವಾಗಿ ದೃಷ್ಟವಾಗಿದೆ. ಹಾಗೆ ಇಲ್ಲದೇ ಹೋದರೆ ಆಗ ಯಾರೂ ಕೂಡ ಚೆನ್ನಾಗಿ ಸಾಧನಾನುಷ್ಠಾನವನ್ನು ಮಾಡಲಾರರು.

ಉಪಾಸನಾದಿ ತಾರತಮ್ಯವಿದ್ದರೂ ಫಲದಲ್ಲಿ ತಾರತಮ್ಯವಿಲ್ಲದಿರುವುದರಿಂದ ತರ್ಕಸಹಿತಗಳಾದ ಅನುಮಾನಗಳು ಅಯುಕ್ತವೇ. ಸಾಧ್ಯವೇ ಇಲ್ಲವಾದ್ದರಿಂದ ಮುಕ್ತರಿಂದ ಅನುಷ್ಠಿತವಾದುದು ಸಾಧನವೇ ಆಗದು. ಅಮುಕ್ತರ ಅನುಷ್ಠಾನಕ್ಕೂ ಅದೇ ಗತಿಯೇ. ಹೀಗೆ ಆಶಂಕಿಸಿದರೆ –

**ಕೃಚ್ಛ್ರೇಣ ಸಾಧನಾದೇವ ನ ಮುಕ್ತವದುದೀರ್ಯತೇ ॥ ೪೧ ॥**

ಮುಮುಕ್ಷುಗಳು (ಅಮುಕ್ತರು) ಕಷ್ಟದಿಂದಲೇ ಸಾಧನೆ ಮಾಡುವರು. ಅವರ ಅನುಷ್ಠಾನವು ಮುಕ್ತರು ಮಾಡುವಂತೆ ಲೀಲಾರೂಪವಾದುದಲ್ಲ.

ಈ ವಿಷಯವನ್ನು ಆಗಮಗಳಿಂದ ಸಮರ್ಥಿಸುತ್ತಾರೆ –

**ದಶಕಲ್ಪಂ ತಪಶ್ಚೀರ್ಣಂ ರುದ್ರೇಣ ಲವಣಾರ್ಣವೇ ।**

**ತ್ಯಕ್ತ್ವಾ ಸುಖಾನಿ ಸರ್ವಾಣಿ ಕ್ಲಿಷ್ಟೇನ ಲವಣಾಂಭಸಾ ॥ ೪೨ ॥**

ರುದ್ರದೇವರು ಹತ್ತು ಕಲ್ಪಗಳಷ್ಟು ಕಾಲ (ದೈನಂದಿನ ಕಲ್ಪ – ಒಂದು ಕಲ್ಪ ಎಂದರೆ ಬ್ರಹ್ಮನ ಒಂದು ದಿವಸ) ಎಲ್ಲ ಸುಖಗಳನ್ನೂ ಬಿಟ್ಟು ಕಷ್ಟಸಾಧ್ಯವಾದ ತಪಸ್ಸನ್ನು ಲವಣಸಮುದ್ರದಲ್ಲಿ ಉಪ್ಪು ನೀರನ್ನು ಸೇವಿಸುತ್ತ ಮಾಡಿದರು.

**ಶಕ್ರೇಣ ವರ್ಷಕೋಟೀಶ್ಚ ಧೂಮಃ ಪೀತೋಽತಿದುಃಖತಃ ।**

**ವರ್ಷಾಯುತಂ ಚ ಸೂರ್ಯೇಣ ತಪೋಽವಾಕ್ಛಿರಸಾ ಕೃತಮ್ ॥ ೪೩ ॥**

ದೇವೇಂದ್ರನು ಕೋಟಿ ವರ್ಷಗಳಲ್ಲಿ ಅತಿದುಃಖದಿಂದ ಹೋಮಧೂಮವನ್ನು ಕುಡಿದು ಸಾಧನೆ ಮಾಡಿದನು. ಸೂರ್ಯನು ಸಾವಿರ ವರ್ಷಗಳಷ್ಟು ಕಾಲ ತಲೆ ಕೆಳಗಾಗಿ ನಿಂತು ತಪಸ್ಸು ಮಾಡಿದನು.

**ಸುದುಃಖೇನ ಸುಖಂ ತ್ಯಕ್ತ್ವಾ ಧರ್ಮೇಣಾಕಾಶಶಾಯಿನಾ ।**

**ಪೀತಾ ಮರೀಚಯೋ ವರ್ಷಸಾಹಸ್ರಮತಿಸಾದರಮ್ ॥ ೪೪ ॥**

ಯಮಧರ್ಮನು ಆಕಾಶಶಾಯಿಯಾಗಿ, ಅತಿದುಃಖದಿಂದ ಸುಖವನ್ನು ಬಿಟ್ಟು, ಸಾವಿರ ವರ್ಷ ಪರ್ಯಂತ ಬಹಳ ಆದರದಿಂದ ಕಿರಣಗಳನ್ನು ಕುಡಿದನು.

**ಅತಿಕೃಚ್ಛ್ರೇಣ ಕುರ್ವಂತಿ ಯತ್ನಂ ಬ್ರಹ್ಮವಿದೋಽಪಿ ಚ ।**

**ಇತ್ಯೇತದಖಿಲಂ ಮೋಕ್ಷವಿಶೇಷಾಭಾವತಃ ಕಥಮ್ ॥ ೪೫ ॥**

ಬ್ರಹ್ಮಜ್ಞಾನಿಗಳೂ ಕೂಡ ಅತಿಕಷ್ಟದಿಂದ ಪ್ರಯತ್ನವನ್ನು ಮಾಡುತ್ತಾರೆ. ಹೀಗೆ ಆಗಮಗಳಲ್ಲಿ ಹೇಳಲ್ಪಟ್ಟಿದೆ. ಇವೆಲ್ಲ ಬಹಳ ಕಷ್ಟವಾದ ಮೋಕ್ಷಸಾಧನಾನುಷ್ಠಾನವು, ಮೋಕ್ಷದಲ್ಲಿ ಫಲವಿಶೇಷವಿಲ್ಲದಿದ್ದರೆ, ಹೇಗೆ ಯುಕ್ತವಾಗುವುದು? ಇದರಿಂದ ಮೋಕ್ಷದಲ್ಲಿ ವಿಶೇಷವು ಸಿದ್ಧವಾಗುವುದು.

ಹಾಗಿದ್ದರೂ ಮುಕ್ತಿಯಲ್ಲಿ ತಾರತಮ್ಯ ಪ್ರತಿಪಾದಕ ಅನುಮಾನವು 'ಪರಮಂ ಸಾಮ್ಯ ಮುಪೈತಿ' ಇತ್ಯಾದಿ ಶ್ರುತಿಗಳಿಗೆ ವಿರುದ್ಧವಾದ ಪ್ರಯುಕ್ತ ಕಾಲಾತ್ಯಯ ಎಂಬ ದೋಷವು ಎಂದರೆ ಹಾಗೆ ಹೇಳಕೂಡದು. ಏಕೆಂದರೆ ಮುಕ್ತಿಯಲ್ಲಿ ಸಾಮ್ಯವೆಂಬ ಅರ್ಥವನ್ನು ಈ ಶ್ರುತಿಗೆ ಹೇಳಿದರೆ ತಾರತಮ್ಯವನ್ನು ಪ್ರತಿಪಾದಿಸುವ ಇತರ ಶ್ರುತಿ ಸ್ಮೃತಿಗಳಿಂದ ಬಾಧಕವು ಬರುವುದು. ಹಾಗಾದರೆ ಮುಕ್ತಿಯಲ್ಲಿ ತಾರತಮ್ಯವನ್ನು ಹೇಳುವ ಶ್ರುತಿಸ್ಮೃತಿಗಳು ಯಾವುವೆಂದರೆ ಅವನ್ನು ಪಠಿಸುತ್ತಾರೆ –

**ದೈವೀ ಸಂಪದ್ವಿಮೋಕ್ಷಾಯ ನಿಬಂಧಾಯಾಸುರೀ ಮತಾ ।**

**ಇತಿ ಮೋಕ್ಷವಿಶೇಷಶ್ಚ ಸ್ವಯಂ ಭಗವತೋದಿತಃ ॥ ೪೬ ॥**

'ಸಂಪದ್ಯೋಗ್ಯತಾ। ವಿಮೋಕ್ಷೋ ವಿಶಿಷ್ಟಮೋಕ್ಷಃ। ನಿಬಂಧೋ ನೀಚ ಸ್ಥಾನೇ ಅಂಧೇ ತಮಸಿ ಬಂಧಃ।' ದೇವತೆಗಳಿಗೆ ಸಂಬಂಧಿಸಿದ ಯೋಗ್ಯತೆಯು ವಿಶಿಷ್ಟವಾದ ಮೋಕ್ಷಕ್ಕಾಗಿಯೂ, ಅಸುರರಿಗೆ ಸಂಬಂಧಿಸಿದ ಯೋಗ್ಯತೆಯು ಅಂಧಂತಮಸ್ಸಿನಲ್ಲಿ ಬಂಧಕ್ಕಾಗಿಯೂ ಎಂಬುದಾಗಿ ಮತವು. ಹೀಗೆ ಮೋಕ್ಷವಿಶೇಷವಾದರೂ ಸ್ವಯಂ ಭಗವಂತನಿಂದ (ಭಗವದ್ಗೀತೆಯಲ್ಲಿ) ಹೇಳಲ್ಪಟ್ಟಿದೆ. ಮೋಕ್ಷದಲ್ಲಿ ತಾರತಮ್ಯ ವಿಶೇಷವು ಇಲ್ಲದಿದ್ದರೆ ಮೋಕ್ಷಕ್ಕೆ ವಿ ಎನ್ನುವ ಉಪಸರ್ಗವು ವ್ಯರ್ಥವೇ.

**ತಮೇವ ಯೂಯಂ ಭಜತಾತ್ಮವೃತ್ತಿಭಿಃ**

**ಮನೋವಚಃ ಕಾಯಗುಣೈಃ ಸ್ವಕರ್ಮಭಿಃ ।**

**ಅಮಾಯಿನಃ ಕಾಮಾದುಘಾಂಘ್ರಿಪಂಕಜಂ**

**ಯಥಾಧಿಕಾರಾವಸಿತಾರ್ಥಸಿದ್ಧಯೇ ॥ ೪೭ ॥**

ಇದು ಭಾಗವತದ ವಾಕ್ಯ. ಮುನಿಗಳನ್ನು ಕುರಿತು ಪೃಥುವಿನ ವಚನ. ಹೇ ಮುನಿಗಳೇ, ನೀವು ಕಪಟ ರಹಿತರಾಗಿ, ಕೃಷ್ಣಾರ್ಪಣ ಬುದ್ಧಿಯಿಂದ, ಅಂದರೆ ಶ್ರೀಹರಿಯಲ್ಲಿಯೇ ನೆಲೆಸಿರತಕ್ಕ ಮನಸ್ಸು, ವಚನ ಹಾಗೂ ಶರೀರದಿಂದ ಮಾಡಿದ ತಮ್ಮ ತಮ್ಮ ಕರ್ಮಗಳಿಂದ, ಯೋಗ್ಯತಾನುಸಾರ ನಿಶ್ಚಿತವಾದ ಮೋಕ್ಷರೂಪ ಪುರುಷಾರ್ಥದ ಸಿದ್ಧಿಗಾಗಿ, ಇಷ್ಟಾರ್ಥಗಳನ್ನು ನೀಡತಕ್ಕ ಪಾದಪದ್ಮವುಳ್ಳ ಆ ವಿಷ್ಣುವನ್ನೇ ಸೇವಿಸಿರಿ. ಯಥಾಧಿಕಾರಾವಸಿತಾರ್ಥ ಎನ್ನುವುದರಿಂದ ಮೋಕ್ಷದಲ್ಲಿ ತಾರತಮ್ಯವನ್ನೇ ಹೇಳಲಾಗಿದೆ.

**ಅಕ್ಷಣ್ವಂತಃ ಕರ್ಣವಂತಃ ಸಖಾಯೋ**

**ಮನೋಜವೇಷ್ವಸಮಾ ಬಭೂವುಃ ।**

**ಆದಘ್ನಾಸ ಉಪಕಕ್ಷಾಸ ಉ ತ್ವೇ**

**ಹ್ರದಾ ಇವ ಸ್ನಾತ್ವಾ ಉ ತ್ವೇ ದದೃಶ್ರೇ ।। ೪೮ ।।**

ಇದು ಶ್ರುತಿವಾಕ್ಯ. ನಿರ್ದುಷ್ಟವಾದ ಕಣ್ಣುಗಳನ್ನೂ, ಕಿವಿಗಳನ್ನೂ ಹೊಂದಿರತಕ್ಕ (ಅಂದರೆ ಸಮಸ್ತ ಇಂದ್ರಿಯಫಲಗಳನ್ನೂ ಹೊಂದಿರತಕ್ಕ) ಪರಸ್ಪರ ಸಖರಾದ ಮುಕ್ತರು ಜ್ಞಾನಾದಿ ಗುಣಗಳಲ್ಲಿ ಅಸಮರು ಆದರು (ಇಲ್ಲಿ ಅಸಮ ಎನ್ನುವುದರಿಂದ ತಾರತಮ್ಯವು ಹೇಳಲ್ಪಟ್ಟಿದೆ). ಅದರಲ್ಲಿಯೂ ಕೆಲವರು ಮುಖದವರೆಗೆ ಸುಧಾ ಸಮುದ್ರದಲ್ಲಿ ಮುಳುಗಿ ಕ್ರೀಡಿಸುತ್ತ ಇರುವವರು ಆದರು. ಕ್ರೀಡೆ ಎನ್ನುವುದರಿಂದ ಒಂದೇ ಕಡೆಯಲ್ಲಿದ್ದರೂ ದೂರತ್ವವು ಹೇಳಿದಂತಾಯಿತು. ಮತ್ತೆ ಕೆಲವರು ಶ್ವೇತದ್ವೀಪದಲ್ಲಿರತಕ್ಕ ವನದಲ್ಲಿ ಕ್ರೀಡೆಯಲ್ಲಿ ಆಸಕ್ತರಾದವರೇ ಆದರು. ಇದರಿಂದ ಮಧ್ಯಮತ್ವವು ಹೇಳಲ್ಪಟ್ಟಿತು. ಕೆಲವರು ಪರಮಾತ್ಮನನ್ನು ಸ್ನಾನ ಮಾಡಲಿಕ್ಕೆ ಅರ್ಹವಾದ ಹ್ರದಗಳಂತೆ ಗಂಭೀರವಾಗಿ ನೋಡಿದರು. ಇದರಿಂದ ಅತಿಸಾಮೀಪ್ಯವು ಹೇಳಲ್ಪಟ್ಟಿದೆ.

**ಇತ್ಯಾದೀನಿ ಚ ವಾಕ್ಯಾನಿ ತಾರತಮ್ಯಂ ವಿಮುಕ್ತಿಗಮ್ ।**

**ವ್ಯಕ್ತಂ ವದಂತಿ ತತ್ಕೇನ ಸಾಮ್ಯಂ ಮುಕ್ತೇಷು ಗಮ್ಯತೇ ।। ೪೯ ।।**

ಇತ್ಯಾದಿ ವಾಕ್ಯಗಳು ಮೋಕ್ಷದಲ್ಲಿರತಕ್ಕ ತಾರತಮ್ಯವನ್ನು ನಿರವಕಾಶವಾಗಿ ಹೇಳುತ್ತವೆ. ಆದಕಾರಣ ನಿರವಕಾಶ ಶ್ರುತಿ ಸ್ಮೃತಿಗಳಿಂದ ಬಾಧಿತವಾದುದರಿಂದ ಮುಕ್ತರಲ್ಲಿ ಸಾಮ್ಯವು ಯಾವುದರಿಂದಲೂ ತಿಳಿಯಲ್ಪಡುವುದಿಲ್ಲ. ಅಂದರೆ ಇಲ್ಲಿ ಉದಾಹರಿಸಲ್ಪಟ್ಟ ಪರಮಂ ಸಾಮ್ಯಮುಪೈತಿ ಎನ್ನುವ ವಾಕ್ಯವು ಸಾಮ್ಯ ಪ್ರತಿಪಾದಕವಲ್ಲವೆಂದು ತಾತ್ಪರ್ಯ.

**ಹಾಗಾದರೆ ಆ ಶ್ರುತಿವಾಕ್ಯದ ಅರ್ಥವಾದರೂ ಏನು ಎಂದರೆ –**

**ದುಃಖಾದ್ಯಭಾವಸಾಮ್ಯಂ ಚ ಸಾಮ್ಯವಾಕ್ಯಾರ್ಥ ಈಯತೇ ।**

ದುಃಖಾದಿಗಳ ಅಭಾವದಿಂದ ಸಾಮ್ಯವೂ, ಪರಮಾನಂದದಿಂದ ಸಾಮ್ಯವೂ ಸಾಮ್ಯ ವಾಕ್ಯಾರ್ಥವೆಂದು ಹೇಳಲ್ಪಡುತ್ತದೆ. 'ದುಃಖಾಭಾವಃ ಪರಾನಂದೋ ಲಿಂಗಭೇದಃ ಸಮಾ ಮತಾ' ಎಂಬುದಾಗಿ ಗೀತಾಭಾಷ್ಯದ ದ್ವಿತೀಯ ಅಧ್ಯಾಯದಲ್ಲಿ ಉಕ್ತವಾಗಿದೆ.

ಮತ್ತೆ ಈ ಅನುಮಾನವಾದರೂ ಉತ್ಪ್ರೇಕ್ಷಿತವಲ್ಲ. ಆಗಮದಿಂದ ಸಿದ್ಧವಾಗಿದೆ. ಅಲ್ಲಿ ಸಾಮ್ಯಶ್ರುತಿ ಬಾಧಿತತ್ವವೂ ಇರುವುದಿಲ್ಲ ಎಂದು ಹೇಳುತ್ತಾರೆ –

**ಭಕ್ತ್ಯಾದಿಗುಣಸದ್ಭಾವೇ ಹ್ಯತುಲ್ಯತ್ವಂ ಚ ಭಾರತೇ ।। ೫೦ ।।**

**ಉಕ್ತಂ ಸಾಧನವೈಚಿತ್ರ್ಯಮಪಿ ಸರ್ವತ್ರ ಕಥ್ಯತೇ ।**

ತಾರತಮ್ಯದಿಂದ ಭಕ್ತಿ ಮೊದಲಾದ ಗುಣಗಳು ಇದ್ದಾಗಲೇ ಮೋಕ್ಷಫಲದಲ್ಲಿ ಅಸಾಮ್ಯವೆಂದು ಕೇವಲ ನಮ್ಮಿಂದ ಮಾತ್ರವಲ್ಲ, ಭಾರತದಲ್ಲಿಯೂ ಹೇಳಲ್ಪಟ್ಟದೆ. ಇದು ಪ್ರಸಿದ್ಧವು ಎಂದು ತಿಳಿಸಲಿಕ್ಕಾಗಿ ಹಿ ಶಬ್ದವು. 'ಸತಿ ಹಿ ಗುಣೇ ಪ್ರವದಂತ್ಯ ತುಲ್ಯತಾಂ' ಎಂದು ಶಾಂತಿಪರ್ವದಲ್ಲಿ ಉಕ್ತವಾಗಿರುವ ವಾಕ್ಯವನ್ನು ಇಲ್ಲಿ ಯೋಜಿಸಿ ಕೊಳ್ಳಬೇಕು. ಮತ್ತೆ ಸಾಧಕರಿಗೆ ಸಾಧನಗಳಲ್ಲಿ ವೈಲಕ್ಷಣ್ಯವು ಎಲ್ಲ ಗ್ರಂಥಗಳಲ್ಲಿಯೂ ಉಕ್ತವಾಗಿದೆ ಎನ್ನುತ್ತಾರೆ. ಸಾಧನತಾರತಮ್ಯ ವಿಷಯದಲ್ಲಿ ದುರ್ಜ್ಞೇಯಂ ಇತ್ಯಾದಿ ಪ್ರಮಾಣಗಳನ್ನು ಉದಾಹರಿಸುತ್ತಾರೆ.

**ದುರ್ಜ್ಞೇಯಂ ಘೋರರೂಪಸ್ಯ ತ್ರೈಲೋಕ್ಯಧ್ವಂಸಿನಃ ಪ್ರಭೋಃ ॥ ೫೧ ॥**

**ದೈವತೈರ್ಮುನಿಭಿಃ ಸಿದ್ಧೈರ್ಮಹಾಯೋಗಿಭಿರೇವ ಚ ।**

ಸರ್ವಸ್ವಾಮಿಯಾದ ನರಸಿಂಹದೇವರ ಧ್ಯಾನಚಕ್ರವು ಮಹಾಯೋಗಿಗಳಾದ ದೇವತೆಗಳು, ಮುನಿಗಳು, ಸಿದ್ಧರೇ ಮೊದಲಾದವರಿಂದಲೂ ಕೂಡ ತಿಳಿಯಲಿಕ್ಕೆ ಅಶ್ಯಕ್ಯವು. ಏಕೆಂದರೆ ಆ ನರಸಿಂಹದೇವರ ರೂಪವು ಭಯಂಕರವೂ ಮೂರು ಲೋಕಗಳನ್ನು ನಾಶಮಾಡತಕ್ಕ ಸ್ವಭಾವವುಳ್ಳದ್ದೂ ಆಗಿರುವುದು.

ಮಹಾಯೋಗಿಗಳು ಎನ್ನುವುದನ್ನೇ ಅರ್ಥತಃ ವಿವರಿಸುತ್ತಾರೆ –

**ನಿತ್ಯಯುಕ್ತೈರ್ಮಹಾಭಾಗೈರ್ವಿಮೋಹಕ್ಲೇಶಸಾಧ್ವಸೈಃ ॥ ೫೨ ॥**

**ಮಹೋತ್ಸಾಹೈರ್ಮಹಾಧೈರ್ಯೈಃ ಸತ್ವಸ್ಥೈರ್ವ್ಯವಸಾಯಿಭಿಃ ।**

**ಅತೀತಾನಾಗತಜ್ಞಾನಪ್ರಭಾವಾಪ್ಯಯವೇದಿಭಿಃ ॥ ೫೩ ॥**

**ಶೌಚಸ್ವಾಧ್ಯಾಯಸಂತೋಷತಪಃ ಸತ್ವದಯಾನ್ವಿತೈಃ ।**

ಸರ್ವದಾ ಧ್ಯಾನಾದಿಗಳಲ್ಲಿಯೇ ತೊಡಗಿರುವ, ಇಂದ್ರಿಯ ಜಯ ಮೊದಲಾದ ಮಹಾ ಭಾಗ್ಯವುಳ್ಳ, ಮಿಥ್ಯಾಜ್ಞಾನ ಅವಿದ್ಯಾದಿಗಳು ಹಾಗೂ ವಿಘ್ನಾದಿ ಭಯಗಳನ್ನು ಕಳೆದುಕೊಂಡಿರುವ, ಮಹಾಪ್ರಯತ್ನವುಳ್ಳ, ಮಹಾಧೈರ್ಯವುಳ್ಳ, ಯಾವಾಗಲೂ ಸತ್ವಗುಣಪ್ರಚುರರಾದ, ನಿಶ್ಚಯಬುದ್ಧಿಯುಳ್ಳ, ಭೂತಭವಿಷ್ಯತ್ಕಾಲಗಳ ಜ್ಞಾನವುಳ್ಳ ಹಾಗೂ ಭೂತಭವಿಷ್ಯತ್ಕಾಲೀನ ವಸ್ತುಗಳ ಸೃಷ್ಟಿ ಸಂಹಾರಗಳನ್ನು ತಿಳಿಯತಕ್ಕ ಸ್ವಭಾವವುಳ್ಳ, ಶೌಚ ಸ್ವಾಧ್ಯಾಯ ಸಂತೋಷ ತಪಸ್ಸು ಸತ್ಯ ದಯಾ ಇವುಗಳಿಂದ ಯುಕ್ತರಾದ ಮಹಾಭಾಗರು ದೇವತಾದಿಗಳು. ಆ ನರಸಿಂಹದೇವರ ಧ್ಯಾನಚಕ್ರವು ಇಂಥವರಿಂದಲೇ ತಿಳಿಯಲಿಕ್ಕೆ ಅಶಕ್ಯವೆಂದರೆ, ಇನ್ನು ಮನುಷ್ಯರಿಂದ ದುರ್ಜ್ಞೇವು ಎಂದು ಹೇಳಬೇಕೇನು?

**ಕಿಮು ಮರ್ತ್ಯೈರ್ಭಯಭ್ರಾಂತಿಧ್ವಂಸಮೋಹರುಜಾನ್ವಿತೈಃ ॥ ೫೪ ॥**

**ಅಲ್ಪಾಯುರ್ವೀರ್ಯಧೀಸತ್ವವ್ಯವಸಾಯಶ್ರುತಿವ್ರತೈಃ ।**

ಮನುಷ್ಯರು ಭಯ, ಭ್ರಾಂತಿ, ಧ್ವಂಸ ಅಂದರೆ ಮನೋವಿಶರಣ (ಮನಸ್ಸಿನಲ್ಲಿ ಕಳವಳ), ಅಜ್ಞಾನ, ರೋಗ ಇವುಗಳಿಂದ ಕೂಡಿರುವರು. ಅವರ ಆಯುಷ್ಯ ವೀರ್ಯ, ಬುದ್ಧಿ, ಬಲ, ನಿಶ್ಚಯಜ್ಞಾನ, ಶ್ರವಣ, ನಿಯಮ ಇವೆಲ್ಲವೂ ಅಲ್ಪವೇ ಆಗಿರುತ್ತವೆ. ಹೀಗೆ ಮನುಷ್ಯರಿಗೆ ದೇವಾದಿಗಳಿಗಿಂತ ಅಲ್ಪವಾದ ಸಾಧನವು ಎಂದು ವೈಹಾಯಸ ಸಂಹಿತಾ ವಾಕ್ಯದಿಂದ ಸ್ಪಷ್ಟವಾಗಿ ತಿಳಿದುಬರುವುದು.

**ಕಸ್ತಂ ಮದಾಮದಂ ದೇವಂ ಮದನ್ಯೋ ಜ್ಞಾತುಮರ್ಹತಿ ॥ ೫೫ ॥**

**ಬ್ರಹ್ಮೈವ ಕಿಂಚಿಜ್ಜಾನಾತಿ ನ ತದನ್ಯೋ ಹಿ ಕಶ್ಚನ ।**

ಕಸ್ತಂ ಎನ್ನುವುದು ಕಠೋಪನಿಷತ್ತಿನಲ್ಲಿನ ಯಮನ ವಾಕ್ಯ. ದೇವತೆಗಳಿಗೆ ಸುಖಕ್ಕೂ, ಅಸುರರಿಗೆ ದುಃಖಕ್ಕೂ ಕಾರಣನಾದುದರಿಂದ ಮದಾಮದ ಎಂದು ಹೇಳಿಸಿಕೊಳ್ಳುವ ಆ ಶ್ರೀಹರಿಯನ್ನು ಬ್ರಹ್ಮಾದಿಗಳನ್ನು ಹೊರತು ನನ್ನಿಂದ ಅನ್ಯನು ಯಾವನು ತಾನೆ ತಿಳಿಯಲಿಕ್ಕೆ ಅರ್ಹನಾಗುವನು. ಚತುರ್ಮುಖನೊಬ್ಬನೇ ಸ್ವಲ್ಪ ತಿಳಿಯುತ್ತಾನೆ. ಬ್ರಹ್ಮನಿಂದ ಇತರರಾದ ಯಾರೂ ತಿಳಿಯುವುದಿಲ್ಲ. ಆದುದರಿಂದ ಮದನ್ಯೋ ಎನ್ನುವುದಕ್ಕೆ ಬ್ರಹ್ಮಾದಿಗಳನ್ನು ಹೊರತು ಯಮನಿಂದ ಅನ್ಯನು ಎಂದು ವ್ಯಾಖ್ಯಾನ ಮಾಡಿದ್ದು.

**ಮುಕ್ತಾನಾಮಪಿ ಸಿದ್ಧಾನಾಂ ನಾರಾಯಣಪರಾಯಣಃ ॥ ೫೬ ॥**

**ಸುದುರ್ಲಭಃ ಪ್ರಶಾಂತಾತ್ಮಾ ಕೋಟಿಷ್ವಪಿ ಮಹಾಮತೇ ।**

ಇದು ಮೋಕ್ಷದಲ್ಲಿಯೂ ತಾರತಮ್ಯವಿದೆ ಎಂದು ಪ್ರತಿಪಾದಿಸುವ ಭಾಗವತದ ವಾಕ್ಯ. ಮಹಾಜ್ಞಾನಿಯೇ, ಶರೀರಾದಿ ಅಭಿಮಾನ ರಹಿತರಾದ ಕೋಟಿ ಸಂಖ್ಯೆಯ ಜ್ಞಾನಿಗಳಲ್ಲಿಯೂ ನಾರಾಯಣನೊಬ್ಬನೇ ರಕ್ಷಕನೆಂಬುದಾಗಿ ಅನನ್ಯ ಭಕ್ತಿಯಿಂದ ನಾರಾಯಣನಲ್ಲಿಯೇ ನಿಶ್ಚಲವಾಗಿ ಮನಸ್ಸಿಟ್ಟವನು ಯಾವನೂ ಕೂಡ ಸಿಗುವುದಿಲ್ಲ. ನಾರಾಯಣಪರಾಯಣಃ ಮತ್ತು ಪ್ರಶಾಂತಾತ್ಮಾ ಎಂಬ ಎರಡು ವಿಶೇಷಣಗಳಿಂದ ವೈರಾಗ್ಯ ಭಕ್ತಿಗಳು ಹೇಳಲ್ಪಟ್ಟವು.

**ಇಯಂ ವಿಸೃಷ್ಟಿರ್ಯತ ಆ ಬಭೂವ**

**ಯದಿ ವಾ ದಧೇ ಯದಿ ವಾ ನ ।**

**ಯೋ ಅಸ್ಯಾಧ್ಯಕ್ಷಃ ಪರಮೇ ವ್ಯೋಮನ್**

**ಸೋ ಅಂಗ ವೇದ ಯದಿ ವಾ ನ ವೇದ ॥ ೫೭ ॥**

ಇದು ಋಗ್ವೇದದ ಮಂತ್ರ. ಪ್ರತ್ಯಕ್ಷಾದಿ ಸಿದ್ಧವಾದ ವಿವಿಧವಾದ ಈ ಸೃಷ್ಟಿಯು ಯಾವ ಹಿರಣ್ಯಗರ್ಭನಿಂದ ಚೆನ್ನಾಗಿ ಉಂಟಾಯಿತೋ ಅವನೇ ಈ ಪ್ರಪಂಚಕ್ಕೆ

ಅಧಿಪತಿ. ಅವನೂ ಕೂಡ ಪರಮಾತ್ಮನನ್ನು ಹೃದಯಾಕಾಶದಲ್ಲಿ ಧರಿಸುತ್ತಾನೋ ಅಥವಾ ಇಲ್ಲವೋ (ಅಂದರೆ ಧ್ಯಾನಮಾಡುತ್ತಾನೋ ಇಲ್ಲವೋ), ತಿಳಿಯುತ್ತಾನೋ ಅಥವಾ ಇಲ್ಲವೋ ಎಂದು ಶ್ರುತಿಯು ಹೇಳುತ್ತದೆ. ಇಡೀ ಪ್ರಪಂಚವನ್ನೇ ಸೃಷ್ಟಿ ಮಾಡಿ ಧರಿಸುವ ಚತುರ್ಮುಖಬ್ರಹ್ಮನು ಇತರರ ಅಪೇಕ್ಷೆಯಿಂದ ಪರಮಾತ್ಮನನ್ನು ಹೆಚ್ಚಾಗಿಯೇ ಧ್ಯಾನಿಸುವನು ಹಾಗೂ ತಿಳಿಯುವನು. ಹಾಗಿದ್ದರೂ ಪೂರ್ಣವಾಗಿ ಧ್ಯಾನಿಸಲಾರನು ಹಾಗು ತಿಳಿಯಲಾರನು. ಇದರಿಂದ ಪರಮಾತ್ಮನ ಶ್ರೇಷ್ಠತ್ವ ಜ್ಯೇಷ್ಠತ್ವಗಳು ತಿಳಿಯುವುದು. ಇಲ್ಲಿ ಅಂಗ ಎನ್ನುವುದು ಸಂಬೋಧನೆಯು.

**ಯಃ ಸ್ವಾತ್ಮಮಾಯಾವಿಭವಂ ಸ್ವಯಂ ಗತೋ**

**ನಾಹಂ ನಭಸ್ವಾಂಸ್ತಥಾಪರೇ ಕುತಃ ।**

**ಬ್ರಹ್ಮಾಪಿ ಯಂ ವೇತ್ತಿ ನ ಚೇಹ ಸಮ್ಯಕ್**

**ಅನ್ಯೇ ಕುತೋ ದೇವಮುನೀಂದ್ರಮರ್ತ್ಯಾಃ ।। ೫೮ ।।**

ಯಃ ಸ್ವಾತ್ಮಮಾಯಾ ಇತ್ಯಾದಿ ಭಾಗವತವಾಕ್ಯಗಳಲ್ಲಿ ಕೈಮುತ್ಯನ್ಯಾಯದಿಂದ ಜ್ಞಾನತಾರತಮ್ಯವು ತಿಳಿಯಲ್ಪಡುತ್ತದೆ. ಶ್ರೀಹರಿಯು ತನ್ನ ಸ್ವರೂಪಮಹಿಮೆಯ ವಿಸ್ತಾರವನ್ನು ತಾನು ಮಾತ್ರ ತಿಳಿದಿರುವನು. ನಾನಾಗಲೀ ವಾಯುದೇವರಾಗಲೀ ಚೆನ್ನಾಗಿ ತಿಳಿದಿರುವುದಿಲ್ಲ. ಅಂದಮೇಲೆ ಇತರರು ಆ ಶ್ರೀಹರಿಯ ಅಗಾಧ ಮಹಿಮೆಯನ್ನು ತಿಳಿಯಲಾರರು ಎಂದು ಹೇಳಬೇಕೇನು? ಜೀವಕೋಟಿಯಲ್ಲಿ ಚತುರ್ಮುಖನೂ ಕೂಡ ಯಾರನ್ನು ತಿಳಿಯುತ್ತಾನೋ, ಚೆನ್ನಾಗಿ ತಿಳಿಯುವುದೇ ಇಲ್ಲವೋ, ಅವನಿಗಿಂತ ಜ್ಞಾನಾದಿ ಯೋಗ್ಯತೆಯಲ್ಲಿ ನ್ಯೂನರಾದ ದೇವತೆಗಳೂ, ಮುನಿಶ್ರೇಷ್ಠರೂ, ಮನುಷ್ಯರೂ ತಿಳಿಯುವುದಿಲ್ಲವೆಂದು ಏನು ಹೇಳಬೇಕು?

**ನಮಸ್ತೇಽಮಿತತತ್ವಾಯ ಬ್ರಹ್ಮಾದೀನಾಂ ಚ ಸೂತಯೇ ।**

**ನಿರ್ಗುಣಾಯ ಚ ಸತ್ಕಾಷ್ಠಾಂ ನಾಹಂ ವೇದಾಪರೇ ಕುತಃ ।। ೫೯ ।।**

ಇದು ಬ್ರಹ್ಮದೇವರ ವಾಕ್ಯ. ಅಪರಿಮಿತ ಸ್ವರೂಪವುಳ್ಳ, ಬ್ರಹ್ಮಾದಿಗಳಿಗೆ ಕಾರಣನಾದ, ಸತ್ವಾದಿ ಪ್ರಾಕೃತಗುಣರಹಿತನಾದ ನಿನಗೆ ನಮಸ್ಕಾರವು. ಶ್ರೀಹರಿಯ ಅಗಾಧವಾದ ಮಹಿಮೆಯ ಏಕದೇಶವನ್ನು ನಾನು ತಿಳಿಯಲಾರೆನು. ಇತರರು ತಿಳಿಯುವುದಿಲ್ಲವೆಂದು ಹೇಳಬೇಕೇನು?

**ನಾಹಂ ಪರಾಯುರ್ಋಷಯೋ ನ ಮರೀಚಿಮುಖ್ಯಾಃ**

**ಜಾನಂತಿ ಯದ್ವಿರಚಿತಂ ಖಲು ಸತ್ವಸಂಘಾಃ ।**

**ಯನ್ಮಾಯಯಾ ಮುಷಿತಚೇತಸ ಈಶದೈತ್ಯ-**

**ಮರ್ತ್ಯಾದಯಃ ಕಿಮುತ ಶಶ್ವದಭದ್ರವೃತ್ತಾಃ ।। ೬೦ ।।**

ಇದು ರುದ್ರದೇವರ ವಾಕ್ಯ. ಹೇ ಸ್ವಾಮಿಯೇ, ನಾನಾಗಲೀ, ಬ್ರಹ್ಮನಾಗಲೀ, ಮರೀಚಿಯೇ ಪ್ರಧಾನವಾಗಿವುಳ್ಳ ವಿಶೇಷವಾಗಿ ಸಾತ್ವಿಕರಾದ ಋಷಿಗಳಾಗಲೀ ಯಾರ ಚರಿತ್ರೆಯನ್ನು ತಿಳಿಯುವುದಿಲ್ಲವೋ, ಅಂಥ ಶ್ರೀಹರಿಯ ಮಾಯೆಯಿಂದ ಮೋಹಿತವಾದ ಮನುಸ್ಸುಳ್ಳ, ಯಾವಾಗಲೂ ಅಮಂಗಲ ಪ್ರವೃತ್ತಿವುಳ್ಳ ದೈತ್ಯರು ಮನುಷ್ಯರೇ ಮೊದಲಾದ ಚೇತನ ಸಮೂಹಗಳು ತಿಳಿಯುವುದಿಲ್ಲವೆಂದು ಹೇಳಬೇಕೇನು?

ಅಹಂ ಮಹೇಂದ್ರೋ ನಿರ್ಋತಿಃ ಪ್ರಚೇತಾಃ

ಸೋಮೋಽಗ್ನಿರೀಶಃ ಪವನೋಽರ್ಕೋ ವಿರಿಂಚಃ ।

ಆದಿತ್ಯವಿಶ್ವೇ ವಸವೋಽಥ ಸಾಧ್ಯಾಃ

ಮರುದ್ಗಣಾ ರುದ್ರಗಣಾಃ ಸಸಿದ್ಧಾಃ ॥ ೬೧ ॥

ಅನ್ಯೇ ಚ ಯೇ ವಿಶ್ವಸೃಜೋಽಮರೇಶಾಃ

ಭೃಗ್ವಾದಯೋಽಸ್ಪೃಷ್ಟರಜಸ್ತಮಸ್ಕಾಃ ।

ಯಸ್ಯೇಹಿತಂ ನ ವಿದುಃ ಸ್ಪೃಷ್ಟಮಾಯಾಃ

ಸತ್ವಪ್ರಧಾನಾ ಅಪಿ ಕಿಂ ತತೋಽನ್ಯೇ ॥ ೬೨ ॥

ಇದು ಯಮದೇವರ ವಚನ. ನಾನು, ದೇವೇಂದ್ರ, ನಿರ್ಋತಿ, ವರುಣ, ಕುಬೇರ, ಅಗ್ನಿ, ರುದ್ರ, ವಾಯು, ಸೂರ್ಯ, ಚತುರ್ಮುಖ, ಆದಿತ್ಯ ವಿಶ್ವೇದೇವತೆಗಳು, ಅಷ್ಟವಸುಗಳು, ಹಾಗೆಯೇ ಸಾಧ್ಯರು, ಮರುದ್ಗಣಗಳು, ರುದ್ರ ಗಣಗಳು, ಸಿದ್ಧರು, ಹಾಗೂ ಜಗತ್ಸೃಷ್ಟಿಮಾಡುವ ಇತರ ದೇವತೆಗಳ ಅಧಿಪತಿಗಳು, ಶುದ್ಧಸತ್ವರಾದ ಭೃಗ್ವಾದಿಗಳೂ ಶ್ರೀಹರಿಯ ಚೇಷ್ಟೆಯನ್ನು ತಿಳಿಯಲಾರರು ಎಂದ ಮೇಲೆ ಸತ್ವಗುಣವನ್ನೇ ಪ್ರಧಾನವಾಗಿ ಹೊಂದಿದ್ದರೂ ಮಾಯೆಯ ಸಂಪರ್ಕದಿಂದ ಅವರರಾದ ಇತರರು ತಿಳಿಯುವುದಿಲ್ಲವೆಂದು ಹೇಳಬೇಕೇನು?

ಸರ್ವಸ್ಯಾದೌ ಸ್ಮೃತೋ ಬ್ರಹ್ಮಾ ತಸ್ಮಾದ್ದೇವಾದನಂತರಃ ।

ಜಾನಾತಿ ದೇವಪ್ರವರಂ ಭೂಯಶ್ಚಾತೋಽಧಿಕಂ ನೃಪ ॥ ೬೩ ॥

ಇದು ಮೋಕ್ಷಧರ್ಮದ ವಚನ. ಹೇ ರಾಜನೇ, ಚತುರ್ಮುಖ ಬ್ರಹ್ಮನು ಸಮಸ್ತ ಪ್ರಪಂಚಕ್ಕೆ ಆದಿಪುರುಷನೆಂದು ಸ್ಮೃತನಾಗಿರುವನು. ಆದಪ್ರಯುಕ್ತ ತಾರತಮ್ಯದಲ್ಲಿ ಶ್ರೀಲಕ್ಷ್ಮೀನಾರಾಯಣರ ಅನಂತರ ಪ್ರಥಮ ಸ್ಥಾನದಲ್ಲಿರುವ ಚತುರ್ಮುಖನು, ದೇವಶ್ರೇಷ್ಠನಾದ ಶ್ರೀಹರಿಯನ್ನು ಸಮಸ್ತ ಜ್ಞಾನಿಸಮೂಹದ ದೆಶೆಯಿಂದ ಅತಿಶಯವಾಗಿ ಅಧಿಕನನ್ನಾಗಿ ತಿಳಿಯುತ್ತಾನೆ.

ನ ತ್ವಾಮತಿಶಯಿಷ್ಯಂತಿ ಮುಕ್ತಾವಪಿ ಕಥಂಚನ ।

ಮದ್ಭಕ್ತಿಯೋಗಾಜ್ಞ್ಞಾನಾಚ್ಚ ಸರ್ವಾನತಿಶಯಿಷ್ಯಸಿ ।। ೬೪ ।।

ಇದು ಬ್ರಹ್ಮನ್ನು ಕುರಿತು ಭಗವಂತನ ವಚನ. ಮುಕ್ತಿಯಲ್ಲಿಯೂ ಯಾರೂ ಯಾವ ರೀತಿಯಿಂದಲೂ ನಿನ್ನನ್ನು ಅತಿಕ್ರಮಿಸುವುದಿಲ್ಲ. ನಿನಗೆ ನನ್ನಲ್ಲಿರುವ ಭಕ್ತಿಯೋಗದಿಂದಲೂ, ಜ್ಞಾನದಿದಂಲೂ, ನೀನು ಎಲ್ಲರನ್ನೂ ಅತಿಕ್ರಮಿಸಿರುವಿ.

ಯಥಾ ಭಕ್ತಿವಿಶೇಷೋಽತ್ರ ದೃಶ್ಯತೇ ಪುರುಷೋತ್ತಮೇ ।

ತಥಾ ಮುಕ್ತಿವಿಶೇಷೋಽಪಿ ಜ್ಞಾನಿನಾಂ ಲಿಂಗಭೇದನೇ ।। ೬೫ ।।

ಈ ಸಂಸಾರದಲ್ಲಿ ಹೇಗೆ ಪುರುಷೋತ್ತಮನಾದ ಶ್ರೀಹರಿಯಲ್ಲಿ ಭಕ್ತಿವಿಶೇಷವು ಕಂಡುಬರುವುದೋ ಹಾಗೆಯೇ ಜ್ಞಾನಿಗಳಿಗೆ ಲಿಂಗದೇಹವು ಭಂಗವಾಗುತ್ತಿರಲು ಮುಕ್ತಿವಿಶೇಷವೂ ಕೂಡ ಕಂಡುಬರುವುದು.

ಸಾಯುಜ್ಯಂ ಸಮನುಪ್ರಾಪ್ತಾ ಅಪಿ ದೇವಾದಯೋಽಖಿಲಾಃ ।

ತಾರತಮ್ಯಾದ್ಧಿ ತಿಷ್ಠಂತಿ ತಾರತಮ್ಯಂ ಹಿ ಸಾಧನೇ ।। ೬೬ ।।

ದೇವತೆಗಳೇ ಮೊದಲಾದವರೆಲ್ಲರೂ ಶ್ರೀಹರಿಯ ಸಾಯುಜ್ಯವನ್ನು ಚೆನ್ನಾಗಿ ಹೊಂದಿದರೂ ಕೂಡ ತಾರತಮ್ಯದಿಂದಲೇ ಇರುತ್ತಾರೆ. ಸಾಧನದಲ್ಲಿ ತಾರತಮ್ಯ ಎನ್ನುವುದು ಪ್ರಮಾಣಸಿದ್ಧವು.

ಈ ತಾರತಮ್ಯದ ವಿಷಯದಲ್ಲಿ ಭಗವದ್ಗೀತೆಯ 'ಮನುಷ್ಯಾಣಾಂ' ಇತ್ಯಾದಿ ವಾಕ್ಯಗಳನ್ನು ಪ್ರಮಾಣವನ್ನಾಗಿ ಉದಾಹರಿಸುತ್ತಾರೆ –

ಮನುಷ್ಯಾಣಾಂ ಸಹಸ್ರೇಷು ಕಶ್ಚಿದ್ಯತತಿ ಸಿದ್ಧಯೇ ।

ಯತತಾಮಪಿ ಸಿದ್ಧಾನಾಂ ಕಶ್ಚಿನ್ಮಾಂ ವೇತ್ತಿ ತತ್ತ್ವತಃ ।। ೬೭ ।।

ಸಹಸ್ರಾರು ಮನುಷ್ಯರ ಮಧ್ಯದಲ್ಲಿ ಎಲ್ಲೋ ಕೆಲವು ಮುಕ್ತಿಯೋಗ್ಯರು ಮಾತ್ರ ಜ್ಞಾನಕ್ಕಾಗಿ ಪ್ರಯತ್ನಿಸುತ್ತಾರೆ. ಹೀಗೆ ಪ್ರಯತ್ನ ಮಾಡುವವರಲ್ಲಿಯೂ ಕೆಲವರು ಮಾತ್ರ ಸಿದ್ಧಿಯನ್ನು ಹೊಂದುತ್ತಾರೆ. ಸಿದ್ಧಿ ಹೊಂದಿದವರಲ್ಲಿಯೂ ಕೆಲವರು ಮಾತ್ರ (ಬ್ರಹ್ಮರುದ್ರಾದಿಗಳು) ಪ್ರಾಚುರ್ಯದಿಂದ ಯಥಾರ್ಥವಾಗಿ ನನ್ನನ್ನು ತಿಳಿಯುತ್ತಾರೆ.

ಯ ಇಮಂ ಪರಮಂ ಗುಹ್ಯಂ ಮದ್ಭಕ್ತೇಷ್ವಭಿಧಾಸ್ಯತಿ ।

ಭಕ್ತಿಂ ಮಯಿ ಪರಾಂ ಕೃತ್ವಾ ಮಾಮೇವೈಷ್ಯತ್ಯಸಂಶಯಃ ।। ೬೮ ।।

ನ ಚ ತಸ್ಮಾನ್ಮನುಷ್ಯೇಷು ಕಶ್ಚಿನ್ಮೇ ಪ್ರಿಯಕೃತ್ತಮಃ ।

ಭವಿತಾ ನ ಚ ಮೇ ತಸ್ಮಾದನ್ಯಃ ಪ್ರಿಯತರೋ ಭುವಿ ।। ೬೯ ।।

ಬಹಳ ಗೋಪ್ಯವಾದ ಈ ಗೀತಾಶಾಸ್ತ್ರವನ್ನು ಯಾವನು ನನ್ನ ಭಕ್ತರಲ್ಲಿ ಉಪದೇಶ ಮಾಡುವನೋ ಅವನು ನನ್ನಲ್ಲಿ ಶ್ರೇಷ್ಠವಾದ ಭಕ್ತಿಯನ್ನು ಮಾಡಿ ನನ್ನನ್ನೇ ಹೊಂದುತ್ತಾನೆ. ಇದರಲ್ಲಿ ಸಂದೇಹವಿಲ್ಲ. ಮನುಷ್ಯರಲ್ಲಿ ಹೀಗೆ ಉಪದೇಶ ಮಾಡುವ ಜ್ಞಾನಿಗಿಂತ ನನಗೆ ಅತ್ಯಂತ ಹೆಚ್ಚಿನ ಪ್ರಿಯತಮನು ಮತ್ತೊಬ್ಬನಿಲ್ಲ. ನನಗೆ ಅವನಿಗಿಂತ ಪ್ರಿಯತಮನಾದ ಮತ್ತೊಬ್ಬನು ಈ ಭೂಲೋಕದಲ್ಲಿ ಎಂದಿಗೂ ಆಗಲಾರನು.

**ಅಧ್ಯೇಷ್ಯತೇ ಚ ಯ ಇಮಂ ಧರ್ಮ್ಯಂ ಸಂವಾದಮಾವಯೋಃ ।**

**ಜ್ಞಾನಯಜ್ಞೇನ ತೇನಾಹಮಿಷ್ಟಃ ಸ್ಯಾಮಿತಿ ಮೇ ಮತಿಃ ॥ ೭೦ ॥**

ಯಾರು ನಮ್ಮಿಬ್ಬರ ನಡುವಿನ ಸಂವಾದರೂಪವಾದ ಧರ್ಮಸಾಧನವಾದ ಈ ಗೀತಾಶಾಸ್ತ್ರವನ್ನು ಅಧ್ಯಯನ ಮಾಡುವನೋ, ಆತನಿಂದ ಜ್ಞಾನಾಖ್ಯ ಯಜ್ಞದಿಂದ ನಾನು ಪೂಜಿಸಿಕೊಳ್ಳಲ್ಪಡುತ್ತೇನೆ. ಇದೇ ನನ್ನ ಮತ.

**ಶ್ರದ್ಧಾವಾನನಸೂಯಶ್ಚ ಶೃಣುಯಾದಪಿ ಯೋ ನರಃ ।**

**ಸೋऽಪಿ ಮುಕ್ತಃ ಶುಭಾನ್ಲೋಕಾನ್ ಪ್ರಾಪ್ನುಯಾತ್ಪುಣ್ಯಕರ್ಮಣಾಂ ॥೭೧॥**

ಆಸ್ತಿಕ್ಯಬುದ್ಧಿಯುಳ್ಳ ಹಾಗೂ ಅಸೂಯಾದಿ ದೋಷರಹಿತನಾದ ಯಾವ ಮನುಷ್ಯನು ಈ ಗೀತಾಶಾಸ್ತ್ರವನ್ನು ಕೇವಲ ಶ್ರವಣವನ್ನು ಮಾಡುತ್ತಾನೋ ಅವನೂ ಕೂಡ ಮುಕ್ತನಾಗಿ, ಪುಣ್ಯಕರ್ಮಗಳಿಂದ ಉತ್ತಮ ಲೋಕಗಳನ್ನು ಹೊಂದುವನು.

**ಧ್ಯಾನೇನಾತ್ಮನಿ ಪಶ್ಯಂತಿ ಕೇಚಿದಾತ್ಮಾನಮಾತ್ಮನಾ ।**

**ಅನ್ಯೇ ಸಾಂಖ್ಯೇನ ಯೋಗೇನ ಕರ್ಮಯೋಗೇನ ಚಾಪರೇ ॥ ೭೨ ॥**

**ಅನ್ಯೇ ತ್ವೇವಮಜಾನಂತಃ ಶ್ರುತ್ವಾನ್ಯೇಭ್ಯ ಉಪಾಸತೇ ।**

**ತೇऽಪಿ ಚಾತಿತರಂತ್ಯೇವ ಮೃತ್ಯುಂ ಶ್ರುತಿಪರಾಯಣಾಃ ॥ ೭೩ ॥**

ಕೆಲವರು(ಶ್ರವಣಾದಿಗಳನ್ನು ಹೊಂದಿದವರು) ಪರಮಾತ್ಮನನ್ನು ಧ್ಯಾನದಿಂದಲೇ ಮನಸ್ಸಿನಿಂದ ತಮ್ಮ ಹೃದಯದಲ್ಲಿ ನೋಡುತ್ತಾರೆ. ಇನ್ನೂ ಕೆಲವರು ಅಪರೋಕ್ಷ ಜ್ಞಾನರೂಪವಾದ ಯೋಗದಿಂದಲೂ, ಧ್ಯಾನದಿದಂಲೂ ನೋಡುತ್ತಾರೆ. ಶ್ರವಣಾದಿ ಗಳಿಲ್ಲದ ರಾಜಾದಿಗಳು ಕರ್ಮಯೋಗದಿಂದ, ಅಂದರೆ ಯಜ್ಞಾದಿ ಕರ್ಮಗಳ ಅನುಷ್ಠಾನದ ಮೂಲಕ ಭಗವದನುಗ್ರಹದಿಂದ, ಪಡೆದ ಧ್ಯಾನದಿಂದ ನೋಡುತ್ತಾರೆ. ಇತರರಾದ ಮನುಷ್ಯೋತ್ತಮರು, ಸ್ವಪ್ರತಿಭೆಯಿಂದ ಶ್ರೀಹರಿಯನ್ನು ತಿಳಿಯಲಿಕ್ಕೆ ಆಗದವರು, ಸ್ವೋತ್ತಮರಿಂದ ಶ್ರವಣ ಮಾಡಿ ಉಪಾಸನೆ ಮಾಡುತ್ತಾರೆ ಹಾಗೂ ಶ್ರೀಹರಿಯನ್ನು ನೋಡುತ್ತಾರೆ. ಅತ್ಯಲ್ಪವಾದ ಪ್ರತಿಭೆಯನ್ನು ಉಳ್ಳವರೂ ಕೂಡ ಬಹು ಶ್ರವಣದಿಂದ ಸಂಸಾರವನ್ನು ಅತಿಕ್ರಮಿಸಿಯೇ ತೀರುತ್ತಾರೆ. ಎಲ್ಲರಿಗೂ

ಶ್ರವಣವು ಅವಶ್ಯಕ. ಅದರಲ್ಲೂ ಅಲ್ಪಪ್ರತಿಭೆಯುಳ್ಳ ಮನುಷ್ಯರಿಗೆ ಅತಿ ಹೆಚ್ಚಿನ ಶ್ರವಣವು ಅತ್ಯವಶ್ಯಕವು. ಪ್ರತಿಭೆ ಅಥವಾ ಯೋಗ್ಯತೆಯ ತಾರತಮ್ಯಕ್ಕೆ ತಕ್ಕಂತೆ ಶ್ರವಣ ಮನನ ಧ್ಯಾನಗಳಲ್ಲಿ ತಾರತಮ್ಯ. ಅದಕ್ಕೆ ತಕ್ಕಂತೆ ದರ್ಶನದಲ್ಲಿ ತಾರತಮ್ಯ. ಹೀಗೆ ಸಾಧನ ತಾರತಮ್ಯಕ್ಕೆ ಅನುಗುಣವಾಗಿ ಸಾಧ್ಯದಲ್ಲಿ ತಾರತಮ್ಯ ಎನ್ನುವುದು ಮೇಲಿನ ಗೀತಾಶ್ಲೋಕಗಳ ಅಭಿಪ್ರಾಯ.

ಸುಸೂಕ್ಷ್ಮೈಃ ಇತ್ಯಾದಿ ವಚನದಿಂದ ಮುಕ್ತಿತಾರತಮ್ಯಕ್ಕೆ ಕಾರಣವಾದ ದರ್ಶನ ತಾರತಮ್ಯವನ್ನು ಹೇಳುತ್ತಾರೆ –

**ಸುಸೂಕ್ಷ್ಮೈರಪ್ಯಶೇಷೈಶ್ಚ ವಿಶೇಷೈಃ ಸಹ ಪಶ್ಯತಿ ।**

**ಸ್ವಾತ್ಮಾನಂ ಭಗವಾನ್ವಿಷ್ಣುಃ ಸರ್ವರೂಪೋಽಪಿ ಸರ್ವದಾ ॥ ೭೪ ॥**

**ಸರ್ವತ್ರ ಚಾನ್ಯದಪ್ಯೇವಂ ತೇನಾದೃಷ್ಟಂ ನ ಹಿ ಕ್ವಚಿತ್ ।**

ಭಗವಂತನಾದ ವಿಷ್ಣುವು ಯಾವಾಗಲೂ ಪೂರ್ಣಸ್ವರೂಪನಾಗಿದ್ದರೂ ಅತ್ಯಂತ ಸೂಕ್ಷ್ಮವಾದ ಎಲ್ಲ ವಿಶೇಷಗಳಿಂದ ಯುಕ್ತವಾಗಿ ತನ್ನ ಸ್ವರೂಪವನ್ನು ನೋಡುತ್ತಾನೆ. ಶ್ರೀಹರಿಯು ಎಲ್ಲ ಕಡೆಗಳಲ್ಲಿಯೂ ತನ್ನಿಂದ ಭಿನ್ನವಾದ ಇತರ ಜಗತ್ತನ್ನೂ ಹೀಗೇ ನೋಡುತ್ತಾನೆ. ಅವನಿಂದ ನೋಡಲ್ಪಡದೇ ಇದ್ದುದು ಎಲ್ಲಿಯೂ ಇಲ್ಲವೇ ಇಲ್ಲ.

**ಸರ್ವತ್ರ ಸರ್ವದೈವೇಶಂ ಪಶ್ಯತ್ಯೇವ ರಮಾಪಿ ತು ॥ ೭೫ ॥**

**ನ ತು ಸರ್ವೈರ್ವಿಶೇಷೈಸ್ತಂ ಪಶ್ಯಂತ್ಯಪ್ಯನ್ಯತೋಽಧಿಕಮ್ ।**

**ಸ್ವಾತ್ಮಾನಮನ್ಯಚ್ಚಾಶೇಷಂ ಪಶ್ಯತ್ಯೇವ ಹಿ ಸರ್ವದಾ ॥ ೭೬ ॥**

ರಮಾದೇವಿಯು ಎಲ್ಲ ಕಡೆಗಳಲ್ಲಿಯೂ ಯಾವಾಗಲೂ ಪರಮಾತ್ಮನನ್ನು ನೋಡುತ್ತಾಳೆ. ಬ್ರಹ್ಮರುದ್ರಾದಿ ಜ್ಞಾನಿವರ್ಗದಿಂದ ಕಾಣಲ್ಪಡದೇ ಇರುವ ಹೆಚ್ಚಿನ ವಿಶೇಷಗಳಿಂದ ನೋಡುವುಳಾದರೂ, ಪರಮಾತ್ಮನು ತನ್ನನ್ನು ತಾನು ನೋಡುವಂತೆ ಎಲ್ಲ ವಿಶೇಷಗಳಿಂದ ನೋಡುವುದೇ ಇಲ್ಲ. ವಿಷ್ಣುವಿನಿಂದಲೂ ತನ್ನಿಂದಲೂ ಇತರವಾದ ಎಲ್ಲ ಜಗತ್ತನ್ನೂ ಯಾವಾಗಲೂ ನೋಡಿಯೇ ನೋಡುವಳು.

**ಬ್ರಹ್ಮಾ ತು ಸರ್ವಗಂ ಪಶ್ಯೇದ್ಗುಣಾನಪ್ಯನ್ಯತೋಽಧಿಕಮ್ ।**

**ನ ತು ಸರ್ವೇಷು ಕಾಲೇಷು ತಥಾ ಪಶ್ಯತ್ಯಮುಕ್ತಿಗಃ ॥ ೭೭ ॥**

ಬ್ರಹ್ಮನಾದರೂ ಸರ್ವತ್ರ ಇರತಕ್ಕ ಶ್ರೀಹರಿಯನ್ನು ನೋಡುವನು. ತನ್ನಿಂದ ಇತರರಾದ ಸರಸ್ವತಿ ಮೊದಲಾದವರು ಕಾಣುವುದಕ್ಕಿಂತ ಅಧಿಕವಾಗಿ ಶ್ರೀಹರಿಯ ಗುಣಗಳನ್ನು ಕಾಣುವನು. ಅಮುಕ್ತ ಬ್ರಹ್ಮನು ಎಲ್ಲ ಕಾಲಗಳಲ್ಲಿ ಮುಕ್ತಬ್ರಹ್ಮನಿಂದ ನೋಡಲ್ಪಡುವಂತೆ ನೋಡುವುದಿಲ್ಲ.

**ಮುಕ್ತಸ್ತು ಸರ್ವದಾ ಪಶ್ಯೇತ್ಸರ್ವಗತ್ವೇನ ಚಾಪಿ ತು ।**

**ನ ರಮಾವದ್ವಿಶೇಷಾಣಾಂ ದರ್ಶನಂ ಶಕ್ನುಯಾತ್ಕ್ವಚಿತ್ ॥ ೭೮ ॥**

ಮುಕ್ತ ಬ್ರಹ್ಮನಾದರೂ ಯಾವಾಗಲೂ ಸರಸ್ವತ್ಯಾದಿಗಳಿಗೆ ಕಾಣುವುದಕ್ಕಿಂತ ಅಧಿಕವಾದ ವ್ಯಾಪ್ತತ್ವದಿಂದಲೂ ಗುಣಗಳಿಂದಲೂ ಶ್ರೀಹರಿಯನ್ನು ನೋಡುವನು. ಆದರೆ ರಮಾದೇವಿಯು ಕಾಣುವಷ್ಟು ಅಧಿಕವಾದ ವಿಶೇಷಗಳಿಂದ ಶ್ರೀಹರಿಯನ್ನು ನೋಡಲು ಬ್ರಹ್ಮನಿಗೆ ಎಂದಿಗೂ ಶಕ್ಯವಾಗದು.

**ಸ್ವಾತ್ಮಾನಮನ್ಯಚ್ಚ ಸದಾ ವಿಶೇಷೈರಖಿಲೈರಪಿ ।**

**ಪಶ್ಯತ್ಯಂಜಸ್ತಥಾ ವಾಣೀ ವಿಶೇಷಾಂಸ್ತಾವತೋ ನ ತು ॥ ೭೯ ॥**

**ತ್ರೈಗುಣ್ಯಾತ್ಪರತಃ ಪಶ್ಯೇದ್ವ್ಯಾಪ್ತಂ ಶತಗುಣಂ ಹರಿಮ್ ।**

ಹಾಗೆಯೇ ಸರಸ್ವತಿಯು ಎಲ್ಲ ವಿಶೇಷಗಳಿಂದಲೂ ಯಾವಾಗಲೂ ಚೆನ್ನಾಗಿ ಶ್ರೀಹರಿಯ ಸ್ವರೂಪವನ್ನೂ, ಅವನಿಂದ ಇತರವಾದುದನ್ನೂ ನೋಡುತ್ತಾಳೆ. ಆದರೆ ಲಕ್ಷ್ಮಿಯಿಂದ ಕಾಣಲ್ಪಡುವಷ್ಟು ವಿಶೇಷಗಳನ್ನು ಬ್ರಹ್ಮನು ಹೇಗೆ ಕಾಣಲಾರನೋ ಹಾಗೆಯೇ ಬ್ರಹ್ಮನಿಂದ ದೃಷ್ಟವಾದಷ್ಟು ವಿಶೇಷಗಳನ್ನು ಸರಸ್ವತಿಯು ಕಾಣಲಾರಳು. ಬ್ರಹ್ಮಾಂಡ ಪರಿಮಿತ ದೇಶದಿಂದ ಆರಂಭಿಸಿ ಮಹದಾದಿ ಆವರಣ ರೂಪವಾದ ತ್ರೈಗುಣ್ಯದ ಮೇಲೆ ಶತಗುಣ ಪರ್ಯಂತ ದೇಶದಲ್ಲಿ ವ್ಯಾಪ್ತನಾದ ಶ್ರೀಹರಿಯನ್ನು ನೋಡುವಳು.

**ಗಿರಿಶೋ ಗರುಡಶ್ಚೈವ ತಮೋಮಾತ್ರಗಂ ಹರಿಮ್ ॥ ೮೦ ॥**

**ಪಶ್ಯೇದ್ವಿಶೇಷಾನಪಿ ಹಿ ವಾಣೀದೃಷ್ಟಾನ್ನ ಪಶ್ಯತಿ ।**

ರುದ್ರನೂ ಗರುಡನೂ ಕೂಡ ತಮೋಗುಣದಿಂದ ಪರಿಮಿತವಾದ ದೇಶ ಪರ್ಯಂತ ವ್ಯಾಪ್ತನಾದ ಶ್ರೀಹರಿಯನ್ನು ನೋಡುವರು. ಆದರೆ ಸರಸ್ವತಿಯಿಂದ ಕಾಣಲ್ಪಡುವಷ್ಟು ವಿಶೇಷಗಳನ್ನು ನೋಡಲಾರರು.

**ಉಮಾ ಸುಪರ್ಣೀ ಚ ಮಹತ್ತತ್ವಂ ಯಾವತ್ಪ್ರಪಶ್ಯತಿ ॥ ೮೧ ॥**

**ರುದ್ರದೃಷ್ಟಾನ್ ವಿಶೇಷಾಂಶ್ಚ ನೈವ ಪಶ್ಯೇತ್ಕದಾಚನ ।**

ಪಾರ್ವತಿಯೂ ಸುಪರ್ಣಿಯೂ ಕೂಡ ಮಹತ್ತತ್ವದವರೆಗೆ ವ್ಯಾಪ್ತನಾದ ಶ್ರೀಹರಿಯನ್ನು ನೋಡುತ್ತಾರಾದರೂ, ರುದ್ರನು ನೋಡುವಷ್ಟು ವಿಶೇಷಾಂಶಗಳನ್ನು ಎಂದಿಗೂ ನೋಡುವುದೇ ಇಲ್ಲ.

ಸ್ವರೂಪಮನ್ಯರೂಪಂ ಚ ಮುಕ್ತಾ ದೇವಾಃ ಸಮಸ್ತಶಃ ॥ ೮೨ ॥

ಜಾನಂತೀಂದ್ರಶ್ಚ ಕಾಮಶ್ಚ ಬ್ರಹ್ಮ ಯಾವದಹಂಕೃತಿಃ ।

ಪಶ್ಯಂತೋ ಮನುದಕ್ಷಾದ್ಯಾ ಬುದ್ಧಿತತ್ವಸ್ಥಿತಂ ಹರಿಮ್ ॥ ೮೩ ॥

ಮುಕ್ತರಾದ ದೇವತೆಗಳು ತಮ್ಮ ಸ್ವರೂಪವನ್ನೂ ತಮಗಿಂತ ಅಧಮರಾದವರ ಸ್ವರೂಪವನ್ನೂ ತಿಳಿಯುತ್ತಾರೆ. ಇಂದ್ರನೂ ಕಾಮನೂ ಕೂಡ ಅಹಂಕಾರ ತತ್ವದ ಪರ್ಯಂತ ಪರಬ್ರಹ್ಮನನ್ನು ನೋಡುತ್ತಾರೆ. ಮನು, ದಕ್ಷಪ್ರಜಾಪತಿ ಮುಂತಾದವರು ಬುದ್ಧಿತತ್ವದ ವರೆಗೆ ವ್ಯಾಪಿಸಿರುವ ಶ್ರೀಹರಿಯನ್ನು ನೋಡುತ್ತಾರೆ.

**ಪಶ್ಯಂತಿ ಸೋಮಸೂರ್ಯೌ ತು ಮನಃಸ್ಥಂ ಪರಮೇಶ್ವರಮ್ ।**

**ಅನ್ಯೇ ಭೂತಸ್ಥಿತಂ ವಿಷ್ಣುಂ ದೇವಾಃ ಪಶ್ಯಂತಿ ಸರ್ವದಾ ॥ ೮೪ ॥**

**ಬಹುಸಾಹಸ್ರವರ್ಷೇಣ ಮಹತ್ತತ್ವೇ ಕ್ವಚಿತ್ ಕ್ವಚಿತ್ ।**

ಚಂದ್ರಸೂರ್ಯರಾದರೂ ಮನಸ್ತತ್ವ ಪರ್ಯಂತ ವ್ಯಾಪಿಸಿರುವ ಶ್ರೀಹರಿಯನ್ನು ನೋಡುತ್ತಾರೆ. ಇತರ ದೇವತೆಗಳು ಯಾವಾಗಲೂ ಪಂಚಭೂತ ಪರಿಮಿತವಾದ ದೇಶದಲ್ಲಿರತಕ್ಕ ವಿಷ್ಣುವನ್ನು ನೋಡುತ್ತಾರೆ. ಅನೇಕ ಸಾವಿರ ವರ್ಷಗಳ ಸಾಧನಾ ವಿಶೇಷದಿಂದ ಕೆಲವು ಕಾಲಗಳಲ್ಲಿ ಮಹತ್ತತ್ವದವರೆಗೂ ವ್ಯಾಪಿಸಿರತಕ್ಕ ವಿಷ್ಣುವನ್ನು ನೋಡುತ್ತಾರೆ.

**ಅನ್ಯೇ ಚೈವ ಯಥಾಯೋಗಮಂಡಾಂತರ್ವರ್ತಿನಂ ಹರಿಮ್ ॥ ೮೫ ॥**

**ಶ್ವೇತದ್ವೀಪಪತಿ ಚೈವ ಹೃದ್ಯೇವಾನ್ಯೇ ತು ಕೇಚನ ।**

**ಕದಾಚಿದೇವ ತತ್ರಾಪಿ ಕೇಚಿತ್ಪಶ್ಯಂತಿ ಕೇಶವಮ್ ॥ ೮೬ ॥**

ಇನ್ನೂ ಕೆಲವರು ಯೋಗ್ಯತಾನುಸಾರವಾಗಿ ಬ್ರಹ್ಮಾಂಡದೊಳಗೆ ಇರತಕ್ಕ ಶ್ರೀಹರಿಯನ್ನು ನೋಡುತ್ತಾರೆ. ಮತ್ತೆ ಕೆಲವರು ಶ್ವೇತದ್ವೀಪಪತಿ ಶ್ರೀಹರಿಯನ್ನು ಹೃದಯದಲ್ಲಿಯೇ ನೋಡುತ್ತಾರೆ. ಹೃದಯದಲ್ಲಿಯೂ ಕೂಡ ಕೆಲವರು ಒಮ್ಮೊಮ್ಮೆ ಮಾತ್ರ ಕೇಶವನನ್ನು ನೋಡುತ್ತಾರೆ.

**ಉಮಾ ಯಾವದನಂತಾಂಶಾನ್ ಪೂರ್ವದೃಷ್ಟೇಭ್ಯ ಏವ ತು ।**

**ವಿಶೇಷಾನ್ವಾಸುದೇವಸ್ಯ ಪಶ್ಚಾದುಕ್ತಾನ್ವಿಚಕ್ಷತೇ ॥ ೮೭ ॥**

**ಶಕ್ರಕಾಮಾದಯಶ್ಚೈವ ವಿಶೇಷಾನ್ ಬ್ರಹ್ಮಣಿ ಸ್ಥಿತಾನ್ ।**

**ಉಮಾದಿಭಿಃ ಪ್ರಬುದ್ಧೇಭ್ಯಃ ಶತಾಂಶಾನೇವ ಚಕ್ಷತೇ ॥ ೮೮ ॥**

**ಇತ್ಯಾದಿವೇದಸ್ಮೃತಿಗವಚನೇಭ್ಯೋ ಯಥಾರ್ಥತಃ ।**

**ತಾರತಮ್ಯಂ ಚ ಮುಕ್ತಾನಾಂ ಸಾಧನಾನಾಂ ಚ ದೃಶ್ಯತೇ ॥ ೮೯ ॥**

**ಸಾಧ್ಯಸಾಧನವೈರೂಪ್ಯಮದೃಷ್ಟಂ ಕೇನ ಕಲ್ಪ್ಯತೇ ।**

ಪಾರ್ವತಿಗಿಂತ ಹಿಂದೆ ಹಿಂದೆ ಹೇಳಲ್ಪಟ್ಟವರು ತಮ್ಮ ಹಿಂದಿನವರಿಂದ

ಕಾಣಲ್ಪಟ್ಟ ವಾಸುದೇವನ ಗುಣಗಳಲ್ಲಿ ಅನಂತಾಂಶದಷ್ಟು ವಿಶೇಷವನ್ನು ಮಾತ್ರ ಕಾಣುತ್ತಾರೆ. ಇಂದ್ರಕಾಮಾದಿಗಳಾದರೂ ಪಾರ್ವತಿ ಮೊದಲಾದವರಿಂದ ಚೆನ್ನಾಗಿ ತಿಳಿಯಲ್ಪಟ್ಟ ಶ್ರೀಹರಿಯ ಗುಣಗಳಲ್ಲಿ ನೂರು ಅಂಶದಷ್ಟನ್ನೇ ಕಾಣುತ್ತಾರೆ.

ಇಲ್ಲಿ ಉದಾಹರಿಸಲಾದ ವೇದ ಹಾಗೂ ಸ್ಮೃತಿಗಳಲ್ಲಿರತಕ್ಕ ವಚನಗಳಿಂದ ಯಥಾರ್ಥವಾಗಿಯೇ ಮುಕ್ತರಿಗೂ ಸಾಧನಗಳಿಗೂ ತಾರತಮ್ಯವು ಕಂಡು ಬರುತ್ತದೆ. ಹೀಗಿರುವಾಗ ಎಲ್ಲಿಯೂ ಕಂಡುಬರದ ಸಾಧ್ಯಸಾಧನಗಳ ವೈರೂಪ್ಯವು ಯಾವ ಕಾರಣದಿಂದ ಶಂಕಿಸಲ್ಪಡುತ್ತದೆ? ಸಾಧನದಲ್ಲಿ ವೈಚಿತ್ರ್ಯವಿದ್ದರೆ ಸಾಧ್ಯದಲ್ಲಿಯೂ ವೈಚಿತ್ರ್ಯವಿರುವುದಾಗಿ ಲೋಕದಲ್ಲಿ ಕಂಡಿದೆ. ಸಾಧನದಲ್ಲಿ ವೈಚಿತ್ರ್ಯವಿದ್ದರೂ ಸಾಧ್ಯ ದಲ್ಲಿ ವೈಚಿತ್ರ್ಯವಿರುವುದಿಲ್ಲ ಎಂದು ಹೇಳುವುದು ಅಪ್ರಾಮಾಣಿಕ ಎಂದು ಭಾವ.

**ವೈಷಮ್ಯಂ ನಿರ್ಘೃಣತ್ವಂ ಚ ತೇನ ಸ್ಯಾತಾಂ ಪರಸ್ಯ ಚ ॥ ೯೦ ॥**

**ಸಾಪೇಕ್ಷತ್ವಾದಿತಿ ಚ ತೌ ವಿದ್ಯಾಧೀಶೇನ ವಾರಿತೌ ।**

ಸಾಧ್ಯಸಾಧನವೈರೂಪ್ಯದಿಂದ ಈಶ್ವರನಿಗೆ ವೈಷಮ್ಯವೂ, ದಯಾರಾಹಿತ್ಯವೂ ಬರಬೇಕಾಗುವುದು. ಆದ್ದರಿಂದ ವಿದ್ಯಾಧೀಶರಾದ ವೇದವ್ಯಾಸರಿಂದ ಸಾಪೇಕ್ಷತ್ವಾತ್ ಎನ್ನುವ ಸೂತ್ರದಿಂದ, ಕರ್ಮಸಾಪೇಕ್ಷತ್ವವನ್ನು ಹೇಳುವ ಮೂಲಕ, ಆ ವೈಷಮ್ಯ ನೈರ್ಘೃಣ್ಯಗಳು ನಿವಾರಿಸಲ್ಪಟ್ಟವು.

**ತಾರತಮ್ಯಾತ್ಸಾಧನಾನಾಂ ಸಾಧ್ಯತಾದೃಕ್ತ್ವಮೀಶತಃ ॥ ೯೧ ॥**

**ಅವೈಷಮ್ಯಾದಿಹೇತುಃ ಸ್ಯಾತ್ಸದೈವ ಪರಮೇಶ್ವರೇ ।**

ಶ್ರೀಹರಿಯು ನಿಯಮೇನ ಸಾಧನಗಳ ತಾರತಮ್ಯಕ್ಕೆ ಅನುಗುಣವಾಗಿ ಸಾಧ್ಯದಲ್ಲಿಯೂ ತಾರತಮ್ಯವನ್ನು ಉಂಟುಮಾಡುವುದರಿಂದ, ಅದು ಅವನಲ್ಲಿ ವೈಷಮ್ಯಾದಿ ದೋಷಗಳ ಅಭಾವಕ್ಕೆ ಕಾರಣವಾಗುವುದು.

ಸಾಧನಭೂತ ಸಂಸ್ಕಾರರೂಪವಾದ ಪೂರ್ವಕರ್ಮಗಳ ಅಪೇಕ್ಷೆಯಿಂದ ಸೂತ್ರಕಾರರು ಶ್ರೀಹರಿಯಲ್ಲಿ ವೈಷಮ್ಯಾದಿಗಳ ನಿರಾಕರಣೆ ಮಾಡಿದ್ದು ವ್ಯರ್ಥವೇ. ಫಲದಲ್ಲಿ ವೈಷಮ್ಯಾದಿಗಳು ಪರಿಹೃತವಾದರೂ, ಸಾಧನಾದಿಗಳಲ್ಲಿ ಪರಹರಿಸಲಿಕ್ಕೆ ಅಶಕ್ಯವಾಗಿದೆ. ಹೇಗೆಂದರೆ – ಸಾಧನಾದಿಗಳಲ್ಲಿ ಪರಮೇಶ್ವರನಿಗೆ ಪ್ರೇರಕತ್ವವು ಇದೆಯೋ, ಇಲ್ಲವೋ? ಇಲ್ಲವೆನ್ನುವ ಪಕ್ಷದಲ್ಲಿ ಪರಮೇಶ್ವರತ್ವಕ್ಕೆ ಹಾನಿಯು. ಇದೆ ಎನ್ನುವ ಪಕ್ಷದಲ್ಲಿ, ನಿಷ್ಕಾರಣವಾಗಿ ವಿಚಿತ್ರ ಸಾಧನೆಗಳನ್ನು ಮಾಡಿಸುವುದರಿಂದ ವೈಷಮ್ಯಾದಿಗಳ ನಿವಾರಣೆ ಹೇಗೆ ಸಾಧ್ಯವಾಗುವುದು? ಎಂದು ಆಶಂಕಿಸಿದರೆ, ಅದನ್ನು ಸೂತ್ರಕಾರರೇ ಪರಿಹರಿಸುತ್ತಾರೆ ಎಂದು ಹೇಳುತ್ತಾರೆ –

**ಸ್ವಾತಂತ್ರ್ಯೇ ವಿದ್ಯಮಾನೇಪಿ ಸಾಧನಾದೌ ಪರೇಶಿತುಃ ॥ ೯೨ ॥**

**ಅಪೇಕ್ಷ್ಯನಾದಿವೈಚಿತ್ರ್ಯಂ ನ ದೋಷ ಇತಿ ತದ್ವಚಃ ।**

ಪರಮೇಶ್ವರನಿಗೆ ಸಾಧನಾದಿಗಳ ಪ್ರೇರಕತ್ವದಲ್ಲಿ ಸ್ವಾತಂತ್ರ್ಯವಿದ್ದರೂ ಕೂಡ, ಸಾಧನೆಗಳಲ್ಲಿರುವ ಅನಾದಿಯಾದ ವೈಚಿತ್ರ್ಯವನ್ನು ಅಪೇಕ್ಷಿಸಿಕೊಂಡು ಪ್ರೇರಣೆ ಮಾಡುವುದರಿಂದ, ಅವನಿಗೆ ವೈಷಮ್ಯಾದಿ ದೋಷವು ಬರುವುದಿಲ್ಲ ಎಂಬುದಾಗಿ ಸೂತ್ರಕಾರರ ವಚನವು ಇದೆ.

ಹಾಗಾದರೆ ಹೀಗೆ ಎಲ್ಲ ಕಡೆಯಲ್ಲಿಯೂ ಕರ್ಮಸಾಪೇಕ್ಷವಾಗಿ ಫಲವನ್ನು ನೀಡುವುದರಿಂದ ಶ್ರೀಹರಿಗೆ ಸ್ವಾತಂತ್ರಹಾನಿಯು ಬರಬೇಕಾಗುವುದು ಎಂದರೆ, ಸ್ವಾತಂತ್ರ್ಯ ಎನ್ನುವ ವಚನದಿಂದಲೇ ಆ ಶಂಕೆಯನ್ನೂ ಪರಿಹರಿಸುತ್ತಾರೆ. ಶ್ರೀಹರಿಗೆ ಸಾಧನಾದಿಗಳಲ್ಲಿ ಸ್ವಾತಂತ್ರ್ಯವಿದ್ದರೂ ಕೂಡ ತನ್ನ ಇಚ್ಛೆಯಿಂದಲೇ ಅನಾದಿಯಾದ ಸಾಧನವೈಚಿತ್ರ್ಯವನ್ನು ಅಪೇಕ್ಷಿಸಿಕೊಂಡು ಪ್ರೇರಕತ್ವವು ಎನ್ನುವ ಅರ್ಥವನ್ನು ಪ್ರತಿಪಾದಿಸುವ ಸೂತ್ರಕಾರರ ವಚನವಿದೆ ಎಂದು ಹೇಳುತ್ತ, ಕ್ರಮವಾಗಿ ಎರಡು ಸೂತ್ರಗಳನ್ನು ಪಠಿಸುತ್ತಾರೆ –

**ನಾನಾದಿತ್ವಾದಿತಿ ಹ್ಯುಕ್ತಮುಪಪದ್ಯತ ಇತ್ಯಪಿ ॥ ೯೩ ॥**

ಆದರಲ್ಲಿ ಮೊದಲನೆಯ ದೋಷವನ್ನು ಪರಿಹರಿಸುವುದಕ್ಕಾಗಿ 'ನ ಕರ್ಮ ವಿಭಾಗಾದಿತಿ ಚೇನ್ನಾನಾದಿತ್ವಾತ್' ಎನ್ನುವ ಸೂತ್ರವು. ಎರಡನೆಯ ದೋಷ ಪರಿಹಾರಕ್ಕಾಗಿ 'ಉಪಪದ್ಯತೇ ಚಾಪ್ಯುಪಲಭ್ಯತೇ ಚ' ಎನ್ನುವ ಸೂತ್ರವು.

ಹೀಗೆ ಅನುಮಾನಕ್ಕೆ ಅನ್ಯಥಾಸಿದ್ಧಿಯನ್ನು ನಿರಾಕರಿಸಿ, ಬಾಧಕಪ್ರತಿರೋಧವನ್ನು ನಿರಾಕರಿಸುತ್ತಾರೆ –

**ಅಪೇಕ್ಷ್ಯೋಪಾಯವೈಷಮ್ಯಮುಪೇಯಸ್ಯ ತಥಾ ಸ್ಥಿತಿಃ ।**

**ಮಯಾ ಕಯಾ ವಿರುದ್ಧಾ ಸ್ಯಾದ್ರಾಜಾದಾವಪಿ ದೃಶ್ಯತೇ ॥ ೯೪ ॥**

ಸಾಧನವೈಷಮ್ಯವನ್ನು ಅಪೇಕ್ಷಿಸಿಕೊಂಡು ಸಾಧ್ಯವೈಷಮ್ಯವು ಈಶ್ವರನಿಂದ ಮಾಡಲ್ಪಡುತ್ತದೆ ಎನ್ನುವುದು ಯಾವ ಪ್ರಮಾಣದಿಂದ ವಿರುದ್ಧವಾಗುವುದು? ಯಾವ ಪ್ರಮಾಣದಿಂದಲೂ ವಿರೋಧವಿಲ್ಲ ಎಂದು ತಾತ್ಪರ್ಯ. ಪರಮಂ ಸಾಮ್ಯಂ ಇತ್ಯಾದಿ ಶ್ರುತಿಯೂ ಮೇಲೆ ಹೇಳಿದ ಸಿದ್ಧಾಂತಕ್ಕೆ ವಿರುದ್ಧವಾಗಿಲ್ಲ ಎನ್ನುವುದು ಹಿಂದಿನ ವ್ಯಾಖ್ಯಾನದಿಂದಲೇ ಸಿದ್ಧವಾಗಿದೆ. ಅನುಮಾನಾದಿಗಳಿಗೆ ವ್ಯಾಪ್ತಿಜ್ಞಾನಕ್ಕಾಗಿ ದೃಷ್ಟಾಂತವನ್ನು ಹೇಳುತ್ತಾರೆ – ವಿವೇಕವುಳ್ಳ ರಾಜಾದಿಗಳು ಸೇವೆಗೆ ತಕ್ಕಂತೆ ಫಲವನ್ನು ಕೊಡುವುದೂ, ವಿವೇಕವಿಲ್ಲದಿದ್ದರೆ ಸೇವೆಗೆ ಅನುಗುಣವಾದ ಫಲವನ್ನು ಕೊಡದಿರುವ ವೈಷಮ್ಯವೂ ಲೋಕದಲ್ಲಿ ಕಂಡುಬರುವುದು.

ಸಾಧ್ಯಸಾಧನಗಳಲ್ಲಿ ವೈರೂಪ್ಯ ಕಲ್ಪಿಸಿದರೆ ಬಾಧಕಾಂತರವನ್ನು ಹೇಳುತ್ತಾರೆ –

**ತ್ಯಾಗೋ ದೃಷ್ಟಸ್ಯ ಚಾದೃಷ್ಟಕಲ್ಪನೇತಿ ಸುದುಷ್ಕರೌ ।**

**ಮಾಯಿಭ್ಯೋಽನ್ಯೇನ ಕೇನಾಪಿ ತತ್ಕಿಮನ್ಯೈಶ್ಚ ವಾದಿಭಿಃ ॥ ೯೫ ॥**

**ಮಾಯಿನೋಽತ್ರಾನುಗಮ್ಯಂತೇ ಶ್ರುತಹಾನ್ಯಶ್ರುತಗ್ರಹೌ ।**

**ಅಪ್ಯತ್ರ ಮಾಯಿನಾಂ ಲಿಂಗೇ ತರ್ಕೇ ದೋಷಾಸ್ತತೋಽಧಿಕಾಃ ॥ ೯೬ ॥**

ಸಾಧ್ಯಸಾಧನಗಳಲ್ಲಿ ವೈರೂಪ್ಯ ಕಲ್ಪಿಸುವುದರಿಂದ ಪ್ರಮಾಣದೃಷ್ಟವಾದುದನ್ನು ಪರಿತ್ಯಾಗ ಮಾಡುವುದೂ ಅದೃಷ್ಟವಾದುದನ್ನು ಕಲ್ಪಿಸುವುದೂ ಹೀಗೆ ಎರಡು ರೀತಿಯ ದೋಷಗಳು ಬರುತ್ತವೆ. ಮಾಯಾವಾದಿಗಳಲ್ಲದೆ ಬೇರೆ ಯಾರಿಂದಲೂ ಈ ದೋಷಗಳು ಅಂಗೀಕರಿಸಲಿಕ್ಕೆ ಅಸಾಧ್ಯವು. ಮಾಯಾವಾದಿಗಳು ದೃಷ್ಟವಾದ ಪ್ರಪಂಚಕ್ಕೆ ಸತ್ಯತ್ವಾದಿಗಳನ್ನು ತ್ಯಾಗ ಮಾಡಿ, ಅದೃಷ್ಟವಾದ ಅನಿರ್ವಾಚ್ಯತ್ವಾದಿಗಳನ್ನು ಕಲ್ಪಿಸುತ್ತಾರೆ. ಆದಕಾರಣ ಅವರಿಗೆ ದೃಷ್ಟತ್ಯಾಗ, ಅದೃಷ್ಟಕಲ್ಪನಾದಿ ದೋಷಗಳು ಬರುತ್ತವೆ. ಈ ವಿಷಯದಲ್ಲಿ ಮಾಯಾವಾದಿಗಳು ಇತರ ವಾದಿಗಳಿಂದ ಅನುಸರಿಸಲ್ಪಡುತ್ತಾರೋ ಏನು? ದೃಷ್ಟತ್ಯಾಗಾದಿಗಳನ್ನು ದೂಷಿಸತಕ್ಕ ಇತರ ವಾದಿಗಳೂ ಈ ವಿಷಯದಲ್ಲಿ ದೃಷ್ಟತ್ಯಾಗಾದಿಗಳನ್ನು ಮಾಡುವುದಾದರೆ ಸ್ವವಚನ ವಿರೋಧವು ಬರುವುದು. ಸಾಧ್ಯಸಾಧನಗಳಿಗೆ ಸಾರೂಪ್ಯವು ಶ್ರುತವಾದುದರಿಂದ, ಅದರಲ್ಲಿ ವೈರೂಪ್ಯವನ್ನು ಅಂಗೀಕರಿಸಿದರೆ, ಮಾಯಿಗಳಿಗೆ ಜ್ಞಾಪಕಗಳಾದ ಶ್ರುತಾರ್ಥಪರಿತ್ಯಾಗ, ಅಶ್ರುತಾರ್ಥಸ್ವೀಕಾರ ಎಂಬ ದೋಷಗಳೂ ಕೂಡ ಬರುತ್ತವೆ. ಮಾಯಾವಾದಿಗಳು ಶ್ರುತನಾದ ಸರ್ವಜ್ಞತ್ವಾದಿ ಯುಕ್ತನಾದ ಬ್ರಹ್ಮನನ್ನು ತ್ಯಜಿಸಿ ಅಶ್ರುತನಾದ ನಿರ್ಗುಣ ಬ್ರಹ್ಮನನ್ನು ಅಂಗೀಕರಿಸುತ್ತಾರೆ. ದೃಷ್ಟತ್ಯಾಗಾದಿಗಳಿಗಿಂತ ಅಧಿಕವಾದ ದೋಷಗಳು ಯಾವುದೂ ಇಲ್ಲ.

ಹಾಗಾದರೆ ಮುಕ್ತರು ತಾರತಮ್ಯ ಯುಕ್ತರಾಗಿದ್ದರೆ ಆಗ ಪರಸ್ಪರ ದ್ವೇಷವಂತರು ಆಗಬೇಕಾಗುವುದು ಎಂಬ ಪ್ರತಿಕೂಲ ತರ್ಕವನ್ನು ನಿರಾಕರಿಸುತ್ತಾರೆ –

**ನಿಃಶೇಷಗತದೋಷಾಣಾಂ ಬಹುಭಿರ್ಜನ್ಮಭಿಃ ಪುನಃ ।**

**ಸ್ಯಾದಾಪರೋಕ್ಷ್ಯಂ ಹಿ ಹರೇರ್ದ್ವೇಷೇರ್ಷ್ಯಾದಿಸ್ತತಃ ಕುತಃ ॥ ೯೭ ॥**

ಬಹುಜನ್ಮಗಳ ಸಾಧನೆಯಿಂದ ಎಲ್ಲ ದೋಷಗಳನ್ನು ಕಳೆದುಕೊಂಡು ಪುನಃ ಶ್ರವಣಾದಿಗಳುಳ್ಳ ಜ್ಞಾನಿಗಳಿಗೆ ಶ್ರೀಹರಿಯ ಅಪರೋಕ್ಷವು ಆಗುವುದು. ಆದ್ದರಿಂದ, ಅಜ್ಞಾನಾದಿ ದೋಷಗಳು ಇಲ್ಲದಿರುವುದರಿಂದ, ಮುಕ್ತರಲ್ಲಿ ತಾರತಮ್ಯವಿದ್ದರೂ ದ್ವೇಷ ಅಸೂಯ ಇತ್ಯಾದಿಗಳು ಉಂಟಾಗಲು ಸಾಧ್ಯವಿಲ್ಲ. ಲೌಕಿಕರಲ್ಲಿ ದ್ವೇಷ ಅಸೂಯ ಮುಂತಾದವು ಕಂಡುಬರಲು ಅವರಲ್ಲಿರುವ ಅಜ್ಞಾನಾದಿ ದೋಷಗಳೇ ಕಾರಣವೇ ಹೊರತು ತಾರತಮ್ಯವಲ್ಲವೆಂದು ತಿಳಿಯಬೇಕು. ಎಲ್ಲೆಲ್ಲಿ ದೋಷಿತ್ವವೋ ಅಲ್ಲಲ್ಲಿ ದ್ವೇಷಾದಿಮತ್ತ್ವವು ಎಂಬ ವ್ಯಾಪ್ತಿಯಿದೆ. ಮುಕ್ತರಲ್ಲಿ ದೋಷವಿಲ್ಲವಾದ್ದರಿಂದ ದ್ವೇಷಾದಿಗಳು ಇಲ್ಲವೆಂದು ಅಭಿಪ್ರಾಯ.

ದೋಷಾದಿಗಳಿಗೇ ದ್ವೇಷಾದಿಗಳಲ್ಲಿ ಪ್ರಯೋಜಕತ್ವವು ಎಂಬ ಅರ್ಥವನ್ನು ಪರರಿಂದಲೂ ಸ್ವೀಕಾರ ಮಾಡಿಸುವುದಕ್ಕಾಗಿ ಪ್ರತಿಬಂಧಿಯನ್ನು ಹೇಳುತ್ತಾರೆ –

ಭವೇಯುರ್ಯದಿ ಚೇಷ್ಯಾರ್ದ್ಯಾಃ ಸಮೇಷ್ವಪಿ ಕುತೋ ನ ತೇ ।

ತಪ್ಯಮಾನಾಃ ಸಮಾನ್ ದೃಷ್ಟ್ವಾ ದ್ವೇಷೇರ್ಷ್ಯಾದಿಯುತಾ ಅಪಿ ॥ ೯೮ ॥

ದೃಶ್ಯಂತೇ ಬಹವೋ ಲೋಕೇ ದೋಷಾ ಏವಾತ್ರ ಕಾರಣಮ್ ।

ಮುಕ್ತರಲ್ಲಿ ತಾರತಮ್ಯವನ್ನು ಅಂಗೀಕರಿಸುವುದರಿಂದ ಅಸೂಯಾದಿಗಳು ಉಂಟಾಗುತ್ತವೆ ಎಂದು ಆಪಾದಿಸುವುದಾದರೆ, ಸಾಮ್ಯವನ್ನು ಅಂಗೀಕರಿಸಿದರೂ ಆ ದೋಷಗಳು ಏಕೆ ಬರಲಾರವು ? ಏಕೆಂದರೆ ಲೋಕದಲ್ಲಿ ಸಮಾನಿಕರನ್ನು ನೋಡಿ ದುಃಖಪಡತಕ್ಕವರು, ದ್ವೇಷ ಅಸೂಯೆ ಮುಂತಾದ ದೋಷಗಳಿಂದ ಕೂಡಿದವರೂ ಕೂಡ ಲೋಕದಲ್ಲಿ ಬಹುಮಂದಿ ಕಾಣಲ್ಪಡುತ್ತಾರೆ. ಆದ್ದರಿಂದ ದ್ವೇಷಾದಿಗಳಿಗೆ ದೋಷಗಳೇ ಕಾರಣವೆಂದು ತೀರ್ಮಾನವಾಯಿತು.

ಯದಿ ನಿರ್ದೋಷತಾ ತತ್ರ ಕಿಮಾಧಿಕ್ಯೇನ ದೂಷ್ಯತೇ ॥ ೯೯ ॥

ಯದ್ಯನ್ಯದರ್ಶನಾಭಾವಾದೀರ್ಷ್ಯಾದಿರ್ವಿನಿವಾರ್ಯತೇ ।

ಹೀಗೆ ದೋಷಾದಿಗಳಿಗೆ ದ್ವೇಷಾದಿ ಕಾರಣತ್ವವಿರುವುದರಿಂದ, ಮುಕ್ತರಲ್ಲಿ ದೋಷಗಳೇ ಇಲ್ಲವಾದ್ದರಿಂದ, ನೀಚೋಚ್ಚಭಾವವನ್ನು ಒಪ್ಪಿದರೂ ಯಾವುದೇ ದೂಷಣವೂ ಇರುವುದಿಲ್ಲ. ಸಾಮ್ಯ ನಿಮಿತ್ತಕ ದ್ವೇಷಾದಿಗಳನ್ನು ನಿರ್ದೋಷತ್ವದಿಂದ ನಿವಾರಣೆ ಮಾಡಿದ್ದರೆ ಹಿಂದೆ ಹೇಳಿದ್ದು ಯುಕ್ತವಾಗುತ್ತಿತ್ತು ಎಂದು ಆಶಂಕಿಸಿದರೆ, ಮುಕ್ತನಿಗೆ ಮುಕ್ತಿಯಲ್ಲಿ ತನಗೆ ಸಮಾನಿಕರಾದ ಅನ್ಯ ಮುಕ್ತರ ದರ್ಶನವೇ ಇರುವುದಿಲ್ಲ. ಆದ್ದರಿಂದ ಮುಕ್ತಿಯಲ್ಲಿ ಸಮಾನಿಕರ ದರ್ಶನದಿಂದ ದ್ವೇಷಾದಿಗಳು ಉಂಟಾಗುವ ಪ್ರಸಕ್ತಿಯೇ ಇರುವುದಿಲ್ಲ.

ಹೀಗೆ ದರ್ಶನವೇ ದ್ವೇಷಾದಿಗಳಿಗೆ ಕಾರಣವೆಂದು ಅಂಗೀಕರಿಸಿದರೆ, ಕೇವಲ ತಾರತಮ್ಯವಿರುವುದೇ ದ್ವೇಷಾದಿಗಳಿಗೆ ಕಾರಣವಲ್ಲ. ಮತ್ತೆ ತನಗಿಂತ ಅಧಿಕರನ್ನು ನೋಡೋಣವೇ ದ್ವೇಷಾದಿಗಳಿಗೆ ಕಾರಣವು ಎಂದಾಗುವುದು. ಮುಕ್ತನು ತನಗಿಂತ ಅಧಿಕರಾದ ಅನ್ಯ ಮುಕ್ತರನ್ನು ನೋಡುವುದಿಲ್ಲವಾದ್ದರಿಂದ ದ್ವೇಷಾದಿಗಳ ಪ್ರಸಕ್ತಿಯು ಇಲ್ಲವೆಂದು ಏಕೆ ಹೇಳಬಾರದು ಎಂದರೆ –

ಅದರ್ಶನಾದರತ್ಯಾದಿಃ ಕಥಂ ತೇನ ನಿವಾರ್ಯತೇ ॥ ೧೦೦ ॥

ಬ್ರಹ್ಮಣೋಽಪ್ಯರತಿರ್ದೃಷ್ಟಾ ಪೂರ್ವಮೇಕಾಕಿನಃ ಶ್ರುತೌ ।

ಹೀಗೆ ಅನ್ಯದರ್ಶನಾಭಾವದಿಂದ ದ್ವೇಷಾದಿಗಳನ್ನು ನಿವಾರಣೆ ಮಾಡುವುದಾದರೆ ದರ್ಶನಾಭಾವದಿಂದ ಪ್ರಸಕ್ತವಾಗುವ ಸುಖಾಭಾವ, ಆಲಸ್ಯ ಭಯ ಮುಂತಾದವು ಹೇಗ ನಿವಾರಿಸಲ್ಪಡುತ್ತವೆ ? ಏಕೆಂದರೆ ಆದಿಕಾಲದಲ್ಲಿ ಏಕಾಕಿಯಾದ ಬ್ರಹ್ಮನಿಗೂ ಸುಖಾಭಾವ, ಭಯಾದಿಗಳ ಪ್ರಸಕ್ತಿಯು ಶ್ರುತಿಗಳಲ್ಲಿ ದೃಷ್ಟವಾಗಿದೆ.

'ಸ ವೈ ನೈವ ರೇಮೇ ತಸ್ಮಾದೇಕಾಕೀ ನ ರಮತೇ ಸ ದ್ವಿತೀಯಮೈಚ್ಛತ್' ಇತ್ಯಾದಿ ಶ್ರುತಿಯನ್ನು ಉದಾಹರಿಸುತ್ತಾರೆ –

**ನೈವ ರೇಮೇ ಸ ಚೈಕಾಕೀ ತಸ್ಮಾನ್ನ ರಮತೇ ಕ್ವಚಿತ್ ॥ ೧೦೧ ॥**

**ದ್ವಿತೀಯಮೈಚ್ಛತ್ತೇನಾಸಾವಿತಿ ಶ್ರುತಯ ಊದಿರೇ ।**

ಏಕಾಕಿಯಾದ ಬ್ರಹ್ಮನು ಕ್ರೀಡಿಸಲಿಲ್ಲ. ಆದ್ದರಿಂದ ಏಕಾಕಿಯಾದರೆ ಈಗಲೂ ಎಲ್ಲಿಯೂ ಯಾವನೊಬ್ಬನೂ ಸುಖ ಪಡುವುದೇ ಇಲ್ಲ. ಆದಕಾರಣ ಬ್ರಹ್ಮನು ಎರಡನೆಯ ವಸ್ತುವನ್ನು ಇಚ್ಛಿಸಿದನು. ಹೀಗೆ ಶ್ರುತಿಗಳು ಹೇಳಿದವು.

ಕೇವಲ ಎರಡನೆಯ ವಸ್ತುವಿನ ಅದರ್ಶನವೇ ಅರತ್ಯಾದಿಗಳಿಗೆ ಕಾರಣವೆಂದು ಹೇಳುವುದು ಯುಕ್ತವಲ್ಲ. ಏಕೆಂದರೆ ಲೋಕದಲ್ಲಿ ಅನ್ಯದರ್ಶನದಲ್ಲಿ ಇಚ್ಛೆಯಿದ್ದಾಗ ಹಾಗೆ ದರ್ಶನವಾಗದಿದ್ದರೆ ದುಃಖಾದಿಗಳ ಪ್ರಸಕ್ತಿಯು ಕಂಡಿದೆ. ಆದರೆ ಮುಕ್ತನಿಗೆ ಅನ್ಯದರ್ಶನದಲ್ಲಿ ಇಚ್ಛೆಯೇ ಇಲ್ಲ. ಆದ್ದರಿಂದ ಮುಕ್ತನಿಗೆ ದುಃಖಾದಿಗಳ ಅಭಾವವು ಎಂದರೆ –

**ಯದೀಚ್ಛಾ ನೈವ ತತ್ರಾಸ್ತೀತ್ಯೇವ ತತ್ಕಲ್ಪ್ಯತೇ ಮೃಷಾ ॥ ೧೦೨ ॥**

**ಶ್ರುತ್ಯುಕ್ತ ನಿರ್ದೋಷತೈವಂ ಕಿಂ ನಾಂಗೀಕ್ರಿಯತೇ ಸ್ವಯಮ್ ।**

ಮುಕ್ತಿಯಲ್ಲಿ ಅನ್ಯದರ್ಶನ ವಿಷಯದಲ್ಲಿ ಇಚ್ಛೆಯು ಇರುವುದೇ ಇಲ್ಲ ಎಂದು ಪ್ರಮಾಣವಿಲ್ಲದೆಯೇ ಕಲ್ಪಿಸುವುದಾದರೆ, ಇದೇರೀತಿ 'ಭಿದ್ಯತೇ ಹೃದಯಗ್ರಂಥಿಃ' ಇತ್ಯಾದಿ ಶ್ರುತಿಗಳಲ್ಲಿ ಸಾಕ್ಷಾತ್ತಾಗಿ ಹೇಳಲ್ಪಟ್ಟ ದೋಷಾದಿಗಳ ಅಭಾವವನ್ನು ಏಕೆ ಅಂಗೀಕರಿಸುವುದಿಲ್ಲ ?

ಇಲ್ಲಿನ ಅಭಿಪ್ರಾಯವು ಹೀಗಿದೆ – ಮುಕ್ತರಿಗೆ ಸಾಮ್ಯವನ್ನು ಅಂಗೀಕರಿಸಿ, ಅನ್ಯದರ್ಶನಾಭಾವದಿಂದ ದ್ವೇಷಾದಿಗಳನ್ನೂ ಹಾಗೂ ಅನ್ಯದರ್ಶನ ಇಚ್ಛಾಭಾವ ದಿಂದ ದುಃಖಾದಿಗಳನ್ನೂ ಪರಿಹರಿಸುವುದಾದರೆ, ಅಪ್ರಾಮಾಣಿಕವಾದ ಅನೇಕ ವಸ್ತುಗಳ ಕಲ್ಪನೆಯೂ ಪ್ರಾಮಾಣಿಕಪರಿತ್ಯಾಗವೂ ಆಗುವುದು. ಸಾಮ್ಯ, ಅನ್ಯ ದರ್ಶನಾಭಾವ ಹಾಗೂ ತದಿಚ್ಛಾಭಾವವು ಅಪ್ರಾಮಾಣಿಕವು. ತಾರತಮ್ಯಾದಿಗಳು ಪ್ರಾಮಾಣಿಕವು. ಆದಕಾರಣ ಅಪ್ರಾಮಾಣಿಕವಾದ ಅನೇಕ ವಸ್ತುಗಳ ಕಲ್ಪನೆ ಮಾಡುವುದಕ್ಕಿಂತ ಪ್ರಾಮಾಣಿಕವಾದ ತಾರತಮ್ಯವನ್ನು ಅಂಗೀಕರಿಸಿ, ದ್ವೇಷಾದಿಗಳ ನಿರಾಕರಣೆಗಾಗಿ ಶ್ರುತ್ಯುಕ್ತ ನಿರ್ದೋಷತ್ವವನ್ನು ಸ್ವೀಕರಿಸುವುದೇ ಉತ್ತಮ.

**ತಾರತಮ್ಯಂ ಚ ಕಾಮಂ ಚ ಶ್ರುತಮೇವಾತಿಹಾಯ ತು ॥ ೧೦೩ ॥**

**ಅಶ್ರುತಾ ಸಮತಾ ಕೇನ ಕಲ್ಪ್ಯತೇ ಯುಕ್ತಿಮಾನಿನಾ ।**

'ಸ ಯೋ ಮನುಷ್ಯಾಣಾಂ ರಾದ್ಧಃ ಕಾಮಸ್ಯ ಯತ್ರಾಪ್ತಾಃ ಕಾಮಾಃ ಅಕ್ಷಣ್ವಂತಃ

ಕರ್ಣವಂತಃ ಸಖಾಯ' ಇತ್ಯಾದಿ ಶ್ರುತ್ಯುಕ್ತವಾದ ತಾರತಮ್ಯವನ್ನೂ, ಇಚ್ಛೆಯನ್ನೂ, ಅನ್ಯದರ್ಶನವನ್ನೂ ಕೂಡ ಪರಿತ್ಯಜಿಸಿ, ಅಶ್ರುತವಾದ ಸಾಮ್ಯ, ಅನ್ಯದರ್ಶನಾಭಾವ, ಇಚ್ಛಾಭಾವಗಳನ್ನು ಯುಕ್ತಿಯನ್ನು ಗೌರವಿಸುವ ಯಾವನು ತಾನೇ ಕಲ್ಪಿಸುತ್ತಾನೆ ?

ಸಾಮ್ಯವು ಅಶ್ರುತವಾಗಿದ್ದರೂ ಅಪ್ರಮಾಣವಲ್ಲ. ಸಾಮ್ಯದ ವಿಷಯದಲ್ಲಿ ಶ್ರುತಿಯೇ ಪ್ರಮಾಣವಲ್ಲ ಎಂದರೆ –

**ಕಿಂ ತನ್ಮಾನಂ ಸಮತ್ವೇ ತೇ ಮುಕ್ತಾನಾಮುಪಲಭ್ಯತೇ ।। ೧೦೪ ।।**

**ವೃಥಾಽಯಮಾಗ್ರಹಃ ಕೇನ ಶ್ರುತಹಾನ್ಯಶ್ರುತಗ್ರಹೇ ।**

ಹಾಗಾದರೆ ಸಾಮ್ಯದ ವಿಷಯದಲ್ಲಿ ನಿನಗೆ ಶ್ರುತಿಗಿಂತ ಇತರವಾದ ಯಾವ ಪ್ರಮಾಣವು ಉಪಲಭ್ಯವಿದೆ ಎಂದು ಕೇಳುತ್ತೇವೆ. ಆದ್ದರಿಂದ ಶ್ರುತಾರ್ಥಪರಿತ್ಯಾಗ ಹಾಗೂ ಅಶ್ರುತಾರ್ಥಪರಿಗ್ರಹ ಇವುಗಳಲ್ಲಿ ವ್ಯರ್ಥವಾದ ಆಗ್ರಹವು ಕೂಡದು.

ಮುಕ್ತರಿಗೆ ತಾರತಮ್ಯ ವಿಷಯದಲ್ಲಿ ಅನುಮಾನಾಂತರವನ್ನು ಹೇಳುತ್ತಾರೆ –

**ಮೋಕ್ಷೇಽಪಿ ತಾರತಮ್ಯೇತಶ್ಚೇತನತ್ವಾದ್ಯಥಾ ಪುರಾ ।। ೧೦೫ ।।**

**ಇತ್ಯುಕ್ತ ಉತ್ತರಂ ಕಿಂ ತೇ ಕಲ್ಪನಾಮಾತ್ರವಾದಿನಃ ।**

ಸಂಸಾರದಲ್ಲಿದ್ದಂತೆ ಮುಕ್ತಿಯಲ್ಲಿಯೂ ಕೂಡ ಚೇತನತ್ವವಿರುವ ಪ್ರಯುಕ್ತ ಮುಕ್ತನು ತಾರತಮ್ಯದಿಂದ ಯುಕ್ತನು ಎಂದು ಅನುಮಾನವು ಪ್ರಯುಕ್ತವಾಗಿರಲು, ಕೇವಲ ಕಲ್ಪನೆಯಿಂದ ವಾದಮಾಡುವ ನಿನಗೆ ಏನು ಉತ್ತರವನ್ನು ಹೇಳಲು ಸಾಧ್ಯ? ವ್ಯಾಪ್ತಿ, ಪಕ್ಷ ಧರ್ಮತ್ವಗಳು ಪ್ರಮಿತವಾಗಿರುವುದರಿಂದ ನಿನ್ನಿಂದ ಯಾವ ಉತ್ತರವೂ ಸಾಧ್ಯವಿಲ್ಲ ಎಂದು ಅಭಿಪ್ರಾಯ.

ಹಾಗಾದರೆ ಮುಕ್ತರು ದುಃಖಾದಿಗಳಿಂದ ಕೂಡಿದವರು ಚೇತನತ್ವದ ಪ್ರಯುಕ್ತ ಸಂಸಾರಿಗಳಂತೆ ಎಂದು ಅನುಮೇಯಿಸುತ್ತೇನೆ ಎಂದರೆ –

**ನ ಚ ದುಃಖಾದಿಕಂ ಕಲ್ಪ್ಯಂ ನಿರ್ದುಃಖತ್ವಶ್ರುತೇರ್ಬಲಾತ್ ।। ೧೦೬ ।।**

ಶ್ರುತಿಗಳು ನಿರ್ದುಃಖತ್ವವನ್ನು ಪ್ರತಿಪಾದಿಸುತ್ತವೆ. ಕೇವಲ ಅನುಮಾನಕ್ಕಿಂತ ಶ್ರುತಿಯು ಪ್ರಬಲವು. ಆದ್ದರಿಂದ ಮುಕ್ತನಿಗೆ ಅನುಮಾನದಿಂದ ದುಃಖಾದಿಗಳನ್ನು ಕಲ್ಪನೆ ಮಾಡುವುದು ಕೂಡುವುದಿಲ್ಲ.

ಮುಕ್ತನಿಗೆ ನಿರ್ದುಃಖತ್ವಾದಿಗಳನ್ನು ಪ್ರತಿಪಾದಿಸುವ ಶ್ರುತಿಗಳನ್ನು ಪಠಿಸುತ್ತ, ಅವುಗಳ ತಾತ್ಪರ್ಯವನ್ನು ಹೇಳುತ್ತಾರೆ –

**ಶೋಕಂ ತರತ್ಯಾತ್ಮವೇತ್ತಾ ತೀರ್ಣಃ ಸರ್ವಾನದುಃಖಭಾಕ್ ।**

**ಯೇನಾನಂದ್ಯೇವ ಭವತಿ ನ ಶೋಚತಿ ಕದಾಚನ ।। ೧೦೭ ।।**

**ಕಿಲ್ಬಿಷಸ್ಪೃತ್ಪಿತುಷಣಿರರಂ ಹಿತ ಇಹೇಶ್ವರಃ ।**

**ಯಂ ಯಮಂತಮಭಿಪ್ರೇಪ್ಸುಃ ಸ ಸಂಕಲ್ಪಾದ್ಭವೇದಿಹ ॥ ೧೦೮ ॥**

**ಇತ್ಯಾದಿಶ್ರುತಯೋ ಮಾನಂ ನಿರ್ದುಃಖತ್ವಾದಿಸಂಪದಿ ।**

ಆತ್ಮಜ್ಞಾನಿಯು ಶೋಕವನ್ನು ದಾಟುತ್ತಾನೆ (ತರತಿ ಶೋಕಮಾತ್ಮವಿತ್), ಎಲ್ಲ ಶೋಕಗಳನ್ನು ದಾಟಿದವನಾಗುವನು (ತೀರ್ಣೋ ಹಿ ತದಾ ಸರ್ವಾನ್ ಶೋಕಾನ್), ದುಃಖವನ್ನು ಹೊಂದುವುದಿಲ್ಲ (ನಾನಾನಂದಂ ಕಂಚಿದುಪಸ್ಪೃಶತಿ), ಯಾವುದರಿಂದ ಆನಂದವುಳ್ಳವನೇ ಆಗುವನೋ, ಯಾವಾಗಲೂ ದುಃಖಪಡುವುದಿಲ್ಲವೋ(ತದ್ವೈ ಜೈವಂ ಮನೋ ಯೇನಾನಂದ್ಯೇವ ಭವತೀತ್ಯಥೋ ನ ಶೋಚತಿ), ಮುಕ್ತರ ದುಃಖವನ್ನು ಸಹಿಸುವುದಿಲ್ಲ (ಕಿಲ್ಬಿಷಸ್ಪೃತ್), ಮುಕ್ತರಿಗೆ ಅನ್ನನೀಡುವನು (ಪಿತುಷಣಿ) ಇಂದ್ರಿಯಗಳಿಗೆ ಅತ್ಯಂತ ಹಿತಕರನಾಗುವನು (ಅರಂ ಹಿತ), ಮುಕ್ತರ ವಿಷಯದಲ್ಲಿ ಶ್ರೀಹರಿಯೇ ನಿಯಾಮಕನು (ಇಹೇಶ್ವರಃ). ಕಿಲ್ಬಿಷ ಎನ್ನುವುದರಿಂದ 'ಸರ್ವೇ ನಂದಂತಿ ಯಶಸಾऽऽಗತೇನ ಸಭಾಸಾಹೇನ ಸಖ್ಯಾ ಸಖಾಯಃ ಕಿಲ್ಬಿಷऽ ಸ್ಪೃತ್ಪಿತುऽಷಣಿರ್ಹ್ಯೇಷಾಮರಂ ಹಿತೋ ಭವತಿ ವಾಜಿನಾಯ' ಎಂಬ ಋಗ್ವೇದ ಮಂತ್ರವನ್ನು ಗ್ರಹಿಸಬೇಕು. ಯಾವ ಯಾವ ಸ್ಥಾನವನ್ನು ಇಚ್ಛಿಸುತ್ತಾನೋ ಅದು ಮುಕ್ತಿಯಲ್ಲಿ ಸಂಕಲ್ಪದಿಂದಲೇ ಆಗುವುದು (ಯಂ ಯಮಂತಮಭಿಕಾಮೋ ಭವತಿ ಸೋऽಸ್ಯ ಸಂಕಲ್ಪಾದೇವ ಭವತಿ). ಇವೇ ಮೊದಲಾದ ಶ್ರುತಿಗಳು ನಿರ್ದುಃಖತ್ವಾದಿ ಸಂಪತ್ತಿನಲ್ಲಿ ಪ್ರಮಾಣವು.

**ಅತೋ ದುಃಖಾದ್ಯನುಮಯಾ ನಾವಕಾಶೋऽತ್ರ ಲಭ್ಯತೇ ॥ ೧೦೯ ॥**

**ತಾರತಮ್ಯಾನುಮಾ ತಸ್ಮಾದ್ಭವೇನ್ನಾತಿಪ್ರಸಂಗಿನೀ ।**

**ಶ್ರುತಿಯುಕ್ತಿಬಲಾದೇವ ತಾರತಮ್ಯಂ ವಿಭಾವ್ಯತೇ ॥ ೧೧೦ ॥**

**ಮುಕ್ತಾವಪಿ ತತಃ ಕೇऽತ್ರ ವಿರೋಧಂ ಕರ್ತುಮೀಶತೇ ।**

ಆದ್ದರಿಂದ (ಅಂದರೆ ಶ್ರುತಿಬಾಧಿತವಾದ್ದರಿಂದ) ದುಃಖಾದಿಗಳನ್ನು ಸಾಧಿಸುವ ಅನುಮಾನದಿಂದಲೂ 'ಮುಕ್ತಾಃ ದುಃಖಾದ್ಯುಪೇತಾಃ' ಎನ್ನುವ ಪ್ರತಿಜ್ಞೆಗೆ ಮುಕ್ತರ ವಿಷಯದಲ್ಲಿ ಅವಕಾಶವು ಲಭಿಸುವುದಿಲ್ಲ. ಅಂದರೆ ಸ್ವವ್ಯಾಹತವಾದ್ದರಿಂದ ಈ ಪ್ರತಿಜ್ಞೆಯು ಯುಕ್ತವಾಗುವುದಿಲ್ಲ. ಆದ್ದರಿಂದ ದುಃಖಸಾಧಕವಾದ ಚೇತನತ್ವಾನು ಮಾನದಿಂದ ತಾರತಮ್ಯಾನುಮಾನವು ಅತಿಪ್ರಸಂಗವುಳ್ಳದ್ದು ಆಗುವುದಿಲ್ಲ. ಶ್ರುತಿ ಯುಕ್ತಿಗಳ ಬಲದಿಂದಲೇ ತಾರತಮ್ಯವು ಚೆನ್ನಾಗಿ ಅನುಭವಸಿದ್ಧವು. ಆದಕಾರಣ ಮುಕ್ತಿಯಲ್ಲಿಯೂ ಮುಕ್ತರ ತಾರತಮ್ಯ ವಿಷಯದಲ್ಲಿ ಯಾವ ವಾದಿಗಳು ತಾನೆ ವಿರೋಧವನ್ನು ಮಾಡಲು ಶಕ್ಯರಾಗುತ್ತಾರೆ ?

## ಉಭಯಲಿಂಗಾಧಿಕರಣಮ್

**ಓಂ ಸರ್ವಥಾಽಪಿ ತು ತ ಏವೋಭಯಲಿಂಗಾತ್ ಓಂ**

## ಆಧಿಕಾರಿಕಾಧಿಕರಣಮ್

**ಓಂ ನ ಚಾಧಿಕಾರಿಕಮಪಿ ಪತನಾನುಮಾನಾತ್ತದ್ಯೋಗಾತ್ ಓಂ**

ಇಲ್ಲಿ ಪ್ರಥಮಾಧಿಕರಣದಲ್ಲಿ ಅನಾದಿಯಾದ ಜ್ಞಾನಯೋಗ್ಯತೆವುಳ್ಳವರಿಗೇ ಜ್ಞಾನಪ್ರಾಪ್ತಿಯು, ಇತರರಿಗೆ ಇಲ್ಲ ಎಂದು ಹೇಳಲ್ಪಟ್ಟಿದೆ. ದ್ವಿತೀಯಾಧಿಕರಣದಲ್ಲಿ ಅನಾದಿಯಾದ ಪದಪ್ರಾಪ್ತಿಯೋಗ್ಯತೆವುಳ್ಳವರಿಗೆ ಮಾತ್ರ ದೇವತಾಪದಪ್ರಾಪ್ತಿಯೇ ಹೊರತು ಅನ್ಯರಿಗಲ್ಲ ಎಂದು ಉಕ್ತವಾಗಿದೆ. ಪ್ರಸಿದ್ಧವಾದ ಪ್ರಯತ್ನ ಮುಂತಾದ ಕಾರಣಗಳಿಂದಲೇ ಆಯಾ ಜೀವರಿಗೆ ಉತ್ಕರ್ಷಅಪಕರ್ಷ ಪ್ರಾಪ್ತಿಯೆಂದು ಹೇಳುವ ವಾದಿಗಳು ಜೀವರುಗಳ ನಾನವಿಧವಾದ ಅನಾದಿಯೋಗ್ಯತೆಯನ್ನು ಒಪ್ಪುವುದಿಲ್ಲ. ಆದ್ದರಿಂದ ಅದನ್ನು ಸಾಧಿಸಲಿಕ್ಕಾಗಿ 'ಅನಾದಿ' ಇತ್ಯಾದಿ ವಚನವನ್ನು ಹೇಳುತ್ತಾರೆ –

**ಅನಾದಿಯೋಗ್ಯತಾಂ ಚೈವ ಕಲಿವಾಣೀಶ್ವರಾವಧಿಮ್ ॥ ೧೧೧ ॥**

**ಕೋ ನಿವಾರಯಿತುಂ ಶಕ್ತೋ ಯುಕ್ತ್ಯಾಗಮಬಲೋದ್ಧತಾಮ್ ।**

ಕಲಿ ಹಾಗೂ ಬ್ರಹ್ಮ ಇವರುಗಳೇ ಅವಧಿಯಾಗಿರುವ(ಯೋಗ್ಯತಾ ಅಪಕರ್ಷಕ್ಕೆ ಕಲಿಯೂ ಉತ್ಕರ್ಷಕ್ಕೆ ಬ್ರಹ್ಮನೂ ಅವಧಿಯು), ಯುಕ್ತಿ ಮತ್ತು ಆಗಮಗಳ ಬಲದಿಂದ ಅಪ್ರತಿಹತವಾದ ಮುಕ್ತರ ತಾರತಮ್ಯವನ್ನೂ ಅನಾದಿಯೋಗ್ಯತೆಯನ್ನೂ ಕೂಡ ಯಾವನು ತಾನೆ ನಿವಾರಿಸಲು ಸಮರ್ಥನಾದಾನು?

ಯುಕ್ತಿಯನ್ನು ಆದರಿಸುವ ವಾದಿಯನ್ನು ಉದ್ದೇಶಿಸಿ ಮೊದಲು 'ಬ್ರಹ್ಮಣೋ' ಇತ್ಯಾದಿ ವಚನದಿಂದ ಯುಕ್ತಿಯನ್ನು ಹೇಳುತ್ತಾರೆ –

**ಬ್ರಹ್ಮಣೋಽನ್ಯತ ಆಧಿಕ್ಯಯುಕ್ತಃ ಕಾಲೋ ವಿವಾದವಾನ್ ॥ ೧೧೨ ॥**

**ಕಾಲೋ ಹ್ಯಯಂ ಯಥೇತ್ಯಾದಿ ಮಾನುಮಾಮಾನಿನೋ ಭವೇತ್ ।**

ವರ್ತಮಾನ ಕಾಲದಲ್ಲಿ ಬ್ರಹ್ಮನು ಸರ್ವಾಧಿಕನೆನ್ನುವುದು ಸಂಪ್ರತಿಪನ್ನವಾಗಿದೆ. ಆದಕಾರಣ ಕಾಲವು ವಿವಾದ ವಿಷಯವೆಂದು ಹೇಳಿದೆ. ಈಗಿನ ಮಹಾಕಲ್ಪಕ್ಕೆ ವ್ಯತಿರಿಕ್ತವಾದ ಅತೀತ ಹಾಗೂ ಭವಿಷತ್ಕಾಲಗಳಲ್ಲಿಯೂ ಈ ಬ್ರಹ್ಮನಿಗೆ ಇತರರಿಂದ ಆಧಿಕ್ಯವು ಯುಕ್ತವಾಗಿದೆ, ಕಾಲತ್ವವಿರುವ ಪ್ರಯುಕ್ತ, ಈ ವರ್ತಮಾನಕಾಲದಂತೆ ಎಂಬ ಅನುಮಾನದಿಂದ ಬ್ರಹ್ಮನಿಗೆ ಇತರರಿಂದ ಸರ್ವೋತ್ಕರ್ಷ ಸಿದ್ಧವಾಗುವುದು. ಪದವಿ ಮೊದಲಾದವು ಇಲ್ಲದ ಕಾಲದಲ್ಲಿಯೂ ಸರ್ವೋತ್ಕರ್ಷವಿರುವುದರಿಂದ ಬ್ರಹ್ಮನ ಯೋಗ್ಯತೆಯೂ ಕೂಡ ಅನಾದಿನಿತ್ಯವೂ ಸರ್ವೋತ್ಕೃಷ್ಟವೂ ಎಂದು ಸಿದ್ಧವಾಗುವುದು.

ಈ ಪ್ರತಿಜ್ಞೆಯು ಪ್ರಮಾಣಬಾಧಿತವು. ದೃಷ್ಟಾಂತವಾದರೂ ಸಾಧ್ಯವೈಕಲ್ಯ ಯುಕ್ತವು. ಅನ್ಯ ಶಬ್ದವು ಬ್ರಹ್ಮ ವ್ಯತಿರಿಕ್ತವಾದ ಎಲ್ಲವನ್ನೂ ಹೇಳುತ್ತದೆ. ಅದರಲ್ಲಿ ಬ್ರಹ್ಮನಿಗೆ ಕಾಲತ್ರಯದಲ್ಲಿಯೂ ಶ್ರೀಹರಿಯಿಂದಲೂ, ಮಹಾಲಕ್ಷ್ಮಿಯಿಂದಲೂ ಹಾಗೂ ಋಜುಗಳಿಂದಲೂ ಆಧಿಕ್ಯವು ಇಲ್ಲ. ಶ್ರೀಹರಿಯೂ ಮಹಾಲಕ್ಷ್ಮಿಯೂ ಬ್ರಹ್ಮನಿಗಿಂತ ಅಧಿಕರೆಂದೂ, ಋಜುಗಳು ಸಮರೆಂದೂ ಪ್ರಮಿತರಾಗಿದ್ದಾರೆ. ಹೀಗೆ ಆಶಂಕಿಸಿದರೆ –

**ಅನ್ಯಶಬ್ದೋ ಹರಿಶ್ರೀಸ್ವಸಮೇಭ್ಯೋಽನ್ಯವಿವಕ್ಷಯಾ ॥ ೧೧೩ ॥**

**ಪ್ರಯುಕ್ತೋ ನೈವ ದೋಷಾಯ ರುದ್ರಾದಿಷು ಚ ಯುಕ್ತಿತಃ ।**

ಇಲ್ಲಿ ಪ್ರಸಕ್ತವಾಗಿರುವ ಅನ್ಯ ಶಬ್ದವು ಬ್ರಹ್ಮನಿಂದ ಅಧಿಕರಾದ ಲಕ್ಷ್ಮೀ ನಾರಾಯಣರನ್ನೂ, ಸಮರಾದ ಋಜುಗಳನ್ನೂ ಬಿಟ್ಟು ಇತರರ ವಿವಕ್ಷೆಯಿಂದ ಪ್ರಯೋಗಿಸಲ್ಪಟ್ಟಿದೆ. ಆದ್ದರಿಂದ ಬಾಧಾದಿ ದೋಷಕ್ಕೆ ಕಾರಣವಾಗುವುದೇ ಇಲ್ಲ. ಇದೇಪ್ರಕಾರವಾಗಿ ರುದ್ರಾದಿಗಳಲ್ಲಿಯೂ ಯುಕ್ತಿಯಿಂದ ಅನಾದಿ ಯೋಗ್ಯತೆಯನ್ನು ಸಾಧಿಸಬೇಕು.

ಹಾಗಾದರೆ ಮುಕ್ತರೆಲ್ಲರೂ ಬ್ರಹ್ಮನಿಗಿಂತ ಅಧಿಕರು, ಅವರಿಗೆ ಮುಕ್ತತ್ವವೂ ಬ್ರಹ್ಮನಿಗೆ ಸಂಸಾರಿತ್ವವೂ ಇರುವ ಪ್ರಯುಕ್ತ. ಆದ್ದರಿಂದ ಅನ್ಯ ಶಬ್ದ ವ್ಯಾಖ್ಯಾನದಲ್ಲಿ ಮುಕ್ತರನ್ನು ಏಕೆ ಗ್ರಹಿಸಲಿಲ್ಲ ಎಂದರೆ –

**ಉತ್ತಮತ್ವಂ ತು ಮುಕ್ತಾನಾಮಪಿ ನ ಬ್ರಹ್ಮಣೋ ಭವೇತ್ ॥ ೧೧೪ ॥**

**ವ್ಯಕ್ತಿಃ ಸುಖಸ್ಯ ತು ಭವೇನ್ನ ತ್ವಾಧಿಕ್ಯಂ ಸುಖಸ್ಯ ಚ ।**

**ಬಲಜ್ಞಾನಾಧಿಕತ್ವಂ ತು ತೇಭ್ಯೋಃ ಹಿ ಬ್ರಹ್ಮಣಃ ಸದಾ ॥ ೧೧೫ ॥**

**ಆಧಿಕ್ಯಸ್ಯ ತ್ವನಿತ್ಯತ್ವೇ ನ ಕಿಂಚಿನ್ಮಾನಮೀಯತೇ ॥ ೧೧೬ ॥**

ಮುಕ್ತರಾದವರಿಗೆ ಚತುರ್ಮುಖ ಬ್ರಹ್ಮನಿಂದ ಉತ್ತಮತ್ವವು ಬರಲಾರದು. ಆದಕಾರಣ ಹಿಂದಿನ ವ್ಯಾಖ್ಯಾನದಲ್ಲಿ ಅನ್ಯ ಶಬ್ದ ಅವರನ್ನು ತೆಗೆದುಕೊಳ್ಳದಿದ್ದರೂ ದೋಷವಿಲ್ಲ. ಏಕೆಂದರೆ, ಮುಕ್ತಿಗೆ ಪೂರ್ವದಲ್ಲಿ ಇರತಕ್ಕ ಸ್ವರೂಪ ಸುಖಾದಿಗಳಿಗೆ ಮುಕ್ತಿಯಲ್ಲಿ ಅಭಿವ್ಯಕ್ತಿಯು ಮಾತ್ರ. ಸ್ವರೂಪದಲ್ಲಿರತಕ್ಕ ಸುಖಾದಿಗಳಿಗೆ ಮುಕ್ತಿಯಲ್ಲಿ ಆಧಿಕ್ಯವು ಉಂಟಾಗುವುದಿಲ್ಲ. ಬ್ರಹ್ಮನಿಂದ ಇತರರಿಗೆ ಸ್ವರೂಪಾಧಿಕ್ಯವಿಲ್ಲ. ಬ್ರಹ್ಮನಿಗೆ ಸಂಸಾರದಲ್ಲಿಯೂ ಮುಕ್ತಿಯಲ್ಲಿಯೂ ಆ ಮುಕ್ತರ ದೆಶೆಯಿಂದ ಬಲಜ್ಞಾನಾದಿ ಎಲ್ಲ ಗುಣಗಳಿಂದಲೂ ಆಧಿಕ್ಯವಿರುವುದು. ಬ್ರಹ್ಮನ ಆಧಿಕ್ಯವು ಅನಿತ್ಯವೂ ಹಾಗೂ ಸಾದಿಯೂ ಎಂಬುದಾಗಿ ಯಾವುದೇ ಪ್ರಮಾಣದಿಂದ ತಿಳಿದುಬರುವುದಿಲ್ಲ.

ಹೀಗೆ ಬ್ರಹ್ಮಾದಿ ಜೀವರಲ್ಲಿ ಅನಾದಿನಿತ್ಯವಾದ ನಾನವಿಧವಾದ ಯೋಗ್ಯತೆಯನ್ನು ಸಾಧಿಸಿ, ಈಗ ಆಗಮದಿಂದಲೂ ಸಾಧಿಸುತ್ತ ಮೊದಲು ಶ್ರುತಿಗಳನ್ನು ಪಠಿಸುತ್ತಾರೆ –

**ಶೃಣ್ವೇ ವೀರ ಉಗ್ರಮುಗ್ರಂ ದಮಾಯನ್**

**ಅನ್ಯಮನ್ಯಮತಿನೇನೀಯಮಾನಃ ।**

**ಏಧಮಾನದ್ವಿಳುಭಯಸ್ಯ ರಾಜಾ**

**ಚೋಷ್ಕೂಯತೇ ವಿಶ ಇಂದ್ರೋ ಮನುಷ್ಯಾನ್ ॥ ೧೧೭ ॥**

ಆರಂಭಿಸಿದ್ದನ್ನು ಪೂರ್ತಿಗೊಳಿಸುವ (ವೀರ), ಪರಮೇಶ್ವರನು (ಇಂದ್ರ) ಎಲ್ಲ ದುಷ್ಟ ಪ್ರಕೃತಿವುಳ್ಳವರನ್ನು (ಉಗ್ರಮುಗ್ರಂ) ದಮನಮಾಡಿ ಅಂದರೆ ನಿತ್ಯನರಕವನ್ನು ಹೊಂದಿಸಿ, ದುಷ್ಟರಾದ ಅಸುರರಿಂದ ಅನ್ಯರಾದ ಎಲ್ಲ ಸಾಧು ಸ್ವಭಾವದವರನ್ನು ಸಂಸಾರವನ್ನು ಚೆನ್ನಾಗಿ ಅತಿಕ್ರಮಿಸುವಂತೆ ಮಾಡಿ ಸ್ವಕೀಯವಾದ ಪದವಿಯನ್ನು ಹೊಂದಿಸುವನು ಎಂಬುದಾಗಿ ಶ್ರುತನಾಗಿದ್ದಾನೆ. ಸ್ವಯೋಗ್ಯತೆಯನ್ನು ಅತಿಕ್ರಮಿಸಿ ಅಭಿವೃದ್ಧಿಗೆ ಬರಲು ಪ್ರಯತ್ನಿಸುವವರನ್ನು (ಅಸುರರನ್ನು) ದ್ವೇಷಿಸುತ್ತಾನೆ. ಏಕೆಂದರೆ ಅವನು ದೇವತಾ ಹಾಗೂ ಅಸುರಿ ವರ್ಗಗಳೆರಡಕ್ಕೂ ರಾಜನು. ರಾಜಸ ಸ್ವಭಾವದ ಮಧ್ಯಮ ಮನುಷ್ಯರನ್ನು ನಿತ್ಯದಲ್ಲಿಯೂ ಸಂಸಾರದಲ್ಲಿಯೇ ತಿರುಗಿಸುತ್ತಾನೆ.

**ಪರಾ ಪೂರ್ವೇಷಾಂ ಸಖ್ಯಾ ವೃಣಕ್ತಿ**

**ವಿತರ್ತುರಾಣೋ ಅಪರೇಭಿರೇತಿ ।**

**ಅನಾನುಭೂತೀರವಧೂನ್ವಾನಃ**

**ಪೂರ್ವೀರಿಂದ್ರಃ ಶರದಸ್ತರ್ತರೀತಿ ॥ ೧೧೮ ॥**

ಆ ಶ್ರೀಹರಿಯೇ ಹಿಂದಿನ ಮಂತ್ರದಲ್ಲಿ ಉಗ್ರ ಶಬ್ದದಿಂದ ನಿರ್ದಿಷ್ಟರಾದ ಅಸುರರ ಮೈತ್ರ್ಯಗಳನ್ನು ಪರಿತ್ಯಜಿಸುತ್ತಾನೆ. ಇತರರಾದ ದೇವಪ್ರಕೃತಿವುಳ್ಳವರ ಮೈತ್ರ್ಯಗಳನ್ನು ವೇಗದಿಂದ ಹೊರಿದುತ್ತಾನೆ. ಸಮ್ಯಕ್ ಅನುಭವಶೂನ್ಯರಾದ ನಿತ್ಯ ಸಂಸಾರಿ ಜೀವರನ್ನು ಸಂಸಾರದಲ್ಲಿಯೇ ತಿರುಗುವಂತೆ ಮಾಡುವ ಶ್ರೀಹರಿಯು ಅತೀತವಾದ ಸಂವತ್ಸರಗಳನ್ನು ದಾಟಿದವನಾಗಿ, ಈಗಿನ ಹಾಗೂ ಮುಂದಿನ ಸಂವತ್ಸರಗಳನ್ನೂ ದಾಟುತ್ತಾನೆ.

**ದಿವೇ ದಿವೇ ಸದೃಶೀರನ್ಯಮರ್ಧಂ**

**ಕೃಷ್ಣಾ ಅಸೇಧದಪ ಸದ್ಮನೋಜಾಃ ।**

**ಅಹಂ ದಾಸಾ ವೃಷಭೋ ವಸ್ನಯಂತೋ–**

**ದವ್ರಜೇ ವರ್ಚಿನಂ ಶಂಬರಂ ಚ ॥ ೧೧೯ ॥**

ಅಭೀಷ್ಟವನ್ನು ವರ್ಷಿಸುವ ಪ್ರಯುಕ್ತ ವೃಷಭನೆಂದು ಹೆಸರುಳ್ಳ ಶ್ರೀಹರಿಯು ಪ್ರತಿದಿವಸವೂ, ಚೇತನತ್ವ ಮಾತ್ರದಿಂದ ಸದೃಶರಾದ ದೇವತೆಗಳಿಂದ ಇತರರಾದ ಕೇವಲ ತಮೋಗುಣಪ್ರಚುರರಾದ, ಅಸುರರನ್ನು ಸ್ವಕೀಯವಾದ ಶಾಶ್ವತವಾದ ಲೋಕದಿಂದ ನಿವಾರಣೆ ಮಾಡಿದನು. ಅಂದರೆ ಶ್ರೀಹರಿಯ ಯಾವಾಗಲೂ ಅಸುರರನ್ನು ತನ್ನ ಲೋಕಕ್ಕೆ ಸ್ವೀಕರಿಸುವುದಿಲ್ಲ. ಜಗತ್ತನ್ನೇ ಆಚ್ಛಾದನೆ ಮಾಡತಕ್ಕ ಆ ಮಹಾ ಕಳ್ಳರಾದ ವರ್ಚಿನ ಹಾಗೂ ಶಂಬರ ಎಂಬ ಅಸುರರನ್ನು ಸಮುದ್ರದಲ್ಲಿ ಸಂಹರಿಸಿದನು. ಅಂದರೆ ಅಂಧಂತಮಸ್ಸಿಗೇ ತಳ್ಳಿದನು ಎಂದರ್ಥ. ದೈತ್ಯರಿಗೆ ಯಾವಕಾಲಕ್ಕೂ ಮೋಕ್ಷವಿಲ್ಲವೆಂದು ಅಭಿಪ್ರಾಯ.

**ತಂ ಭೂತಿರಿತಿ ದೇವಾ ಉಪಾಸಾಂಚಕ್ರಿರೇ**

**ತೇ ಬಭೂವುಸ್ತಸ್ಮಾದ್ಧಾಪ್ಯೇತರ್ಹಿ ।**

**ಭೂರ್ಭೂರಿತ್ಯೇವ ಪ್ರಶ್ವಸಿತ್ಯಭೂತಿ-**

**ರಿತ್ಯಸುರಾಸ್ತೇ ಹ ಪರಾವಬಭೂವುಃ ॥ ೧೨೦ ॥**

ಆ ಪರಮೇಶ್ವರನನ್ನು ಐಶ್ವರ್ಯರೂಪಿಯೆಂದು, ಐಶ್ವರ್ಯದಾಯಕನೆಂದು ವಾಯು ಮೊದಲಾದ ದೇವತೆಗಳು ಉಪಾಸನೆ ಮಾಡಿದರು. ಆದರಿಂದ ಅವರು ಮುಕ್ತರಾದರು. ಆದ್ದರಿಂದ ಈಗಲೂ ಕೂಡ ಸುಪ್ತರಲ್ಲಿರತಕ್ಕ ವಾಯುದೇವರು ಭೂಃ ಭೂಃ ಎಂದೇ ಶ್ವಾಸ ರೂಪ ಜಪ ಮಾಡುತ್ತಾ ಪರಮಾತ್ಮನನ್ನು ಭೂತಿ ಎಂದು ಉಪಾಸನೆ ಮಾಡುತ್ತಾರೆ. ಅಸುರರು ಅಭೂತಿ ಎಂದು ಉಪಾಸನೆ ಮಾಡುತ್ತಾರೆ. ಆದರಿಂದ ನಿತ್ಯನರಕವನ್ನು ಹೊಂದುತ್ತಾರೆ. ಸಮ್ಯಗುಪಾಸನೆಯಿಂದ ಮೋಕ್ಷವೂ ವಿಪರೀತ ಉಪಾಸನೆಯಿಂದ ತಮಸ್ಸೂ ಇಲ್ಲಿ ಶ್ರುತವಾಗಿದೆ. ಇದರಿಂದ ದೇವತ್ವ ಹಾಗೂ ಅಸುರತ್ವಗಳು ಸಹಜವೆಂದು ತಿಳಿದುಬರುತ್ತದೆ.

**ತದ್ಯಥಾ ಪೇಶಸ್ಕಾರೀ ಪೇಶಸೋ ಮಾತ್ರಾಮುಪಾದಾಯನ್ಯನ್ನ-**

**ವತರಂ ಕಲ್ಯಾಣತರಂ ರೂಪಂ ತನುತೇ ಏವಮೇವಾಯಮಾತ್ಮೇದಂ ।**

**ಶರೀರಂ ನಿಹತ್ಯಾವಿದ್ಯಾಂ ಗಮಯಿತ್ವಾನ್ಯನ್ನವತರಂ ಕಲ್ಯಾಣತರಂ**

**ರೂಪಂ ಕುರುತೇ ಪಿತ್ರ್ಯಂ ವಾ ಗಾಂಧರ್ವಂ ವಾ ದೇವಂ ವಾ ।**

**ಪ್ರಾಜಾಪತ್ಯಂ ವಾ ಬ್ರಾಹ್ಮಂ ವಾನ್ಯೇಷಾಂ ಭೂತಾನಾಮ್ ॥ ೧೨೧ ॥**

ಇದಕ್ಕೆ ದೃಷ್ಟಾಂತವು ಹೇಗೆಂದರೆ – ಸ್ವರ್ಣಕಾರನು ಸುವರ್ಣದ ಅಂಶವನ್ನು ತೆಗೆದುಕೊಂಡು ಅದನ್ನು ಮತ್ತೊಂದು ನೂತನವಾದ ನಿಷ್ಕಲವಾದ ಶೋಭನವಾದ ಕಂಠಭೂಷಣಾದಿಗಳನ್ನಾಗಿ ಮಾಡುತ್ತಾನೆ. ಇದೇ ಪ್ರಕಾರವಾಗಿ ಪರಮಾತ್ಮನು ಈ

ಶರೀರವನ್ನು ನಾಶಮಾಡಿ ಅಂದರೆ ಆಯಾ ಭೂತಗಳಲ್ಲಿ ಸೇರಿಸಿ, ಅವಿದ್ಯೆಯನ್ನು ಹೋಗಲಾಡಿಸಿ, ಮತ್ತೊಂದು ನೂತನವಾದ ಪರಮಶೋಭನಕರವಾದ ರೂಪವನ್ನು ಉಂಟು ಮಾಡುತ್ತಾನೆ. ಆಯಾ ಪಿತೃ ಜೀವರಿಗೆ ಪಿತೃ ಸಂಬಂಧಿಯಾದ ಶರೀರವನ್ನೂ, ಅದರಂತೆಯೇ ಯೋಗ್ಯತೆಗೆ ಅನುರೂಪವಾಗಿ ಗಂಧರ್ವ, ದೇವತೆ, ಶಿವ, ಚತುರ್ಮುಖ ಇತ್ಯಾದಿಗಳಿಗೆ ಸಂಬಂಧಿಸಿದ ಶರೀರವನ್ನು ಮಾಡುತ್ತಾನೆ. ಹಾಗೆಯೇ ಇತರರಾದ ಮನುಷ್ಯೋತ್ತಮರಿಗೆ ಅದಕ್ಕನುರೂಪವಾದ ಶರೀರವನ್ನು ಮಾಡುತ್ತಾನೆ. ಹೇಗೆ ಸುವರ್ಣದಿಂದಲೇ ಕಂಠಭೂಷಣಾದಿಗಳು ಆಗುತ್ತವೋ, ಅನ್ಯ ದ್ರವ್ಯದಿಂದಲ್ಲವೋ, ಹಾಗೆಯೇ ಈಶ್ವರನಿಂದ ಮುಕ್ತಿಯೋಗ್ಯರಿಗೇನೆ ಮುಕ್ತತ್ವವು ಉಂಟಾಗುತ್ತದೆ, ಅನ್ಯರಿಗಲ್ಲವೆಂದು ಈ ಶ್ರುತಿಯ ತಾತ್ಪರ್ಯ.

**ಪ್ರಯಾಂತಿ ಪರಮಾಂ ಸಿದ್ಧಿಮೈಹಿಕಾಮುಷ್ಮಿಕೀಂ ದ್ರುತಮ್ ।**

**ಯಾ ನ ಪ್ರಾಪ್ಯಾಸುರೈಃ ಸರ್ವೈರಕ್ಷಯ್ಯಾ ಕ್ಲೇಶವರ್ಜಿತಾ ॥ ೧೨೨ ॥**

**ನ ತಾಂ ಗತಿಂ ಪ್ರಪದ್ಯಂತೇ ವಿನಾ ಭಾಗವತಾನ್ನರಾನ್ ।**

ಇದು ಪದ್ಮ ಪುರಾಣದ ವಚನ. 'ಪುರಾ ಸತ್ಯೇಯುಗೇ 'ದೇವಾ ವಿಶುದ್ಧ ಮತಯೋಽಖಿಲಾಃ। ಯಜಂತಿ ವಿಷ್ಣುಮೇವೈಕಂ ಜ್ಞಾತ್ವಾ ಸರ್ವೇಶ್ವರೇಶ್ವರಮ್' ಅಂದರೆ ಪೂರ್ವದಲ್ಲಿ ಸತ್ಯಯುಗದಲ್ಲಿ ವಿಶುದ್ಧವಾದ ಸ್ವಭಾವವುಳ್ಳ ದೇವತೆಗಳೆಲ್ಲರೂ ಶ್ರೀಹರಿಯನ್ನೇ ಸರ್ವೋತ್ತಮನೆಂದು ತಿಳಿದು ಪೂಜಿಸುತ್ತಾರೆ.( ಅಲ್ಲಿಂದ ಮುಂದಿನ ಭಾಗ ಪ್ರಯಾಂತಿ ಇತ್ಯಾದಿ). ಅಂಥವರು ಕ್ಷಿಪ್ರವೇ ಐಹಿಕ ಆಮುಷ್ಮಿಕ ರೂಪವಾದ ಉತ್ಕೃಷ್ಟವಾದ ಸಿದ್ಧಿಯನ್ನು (ಮೋಕ್ಷಾದಿ ಫಲಪ್ರಾಪ್ತಿ) ಚೆನ್ನಾಗಿ ಹೊಂದುತ್ತಾರೆ. ಎಲ್ಲ ಅಸುರರಿಂದಲೂ ಅಕ್ಷಯವೂ ಕ್ಲೇಶರಹಿತವೂ ಆದ ಯಾವ ಉತ್ತಮಗತಿಯು ಹೊಂದಲು ಸಾಧ್ಯವಿಲ್ಲವೋ, ಅಂಥಹ ಗತಿಯನ್ನು ಭಗವದ್ಭಕ್ತರಾದ ಮನುಷ್ಯರನ್ನು ಹೊರತು ಅನ್ಯರು ಹೊಂದುವುದಿಲ್ಲ.

**ಅವಜಾನಂತಿ ಮಾಂ ಮೂಢಾ ಮಾನುಷೀಂ ತನುಮಾಶ್ರಿತಮ್ ॥ ೧೨೩ ॥**

**ಪರಂ ಭಾವಮಜಾನಂತೋ ಮಮ ಭೂತಮಹೇಶ್ವರಮ್ ।**

**ಮೋಘಾಶಾ ಮೋಘಕರ್ಮಾಣೋ ಮೋಘಜ್ಞಾನಾ ವಿಚೇತಸಃ ॥ ೧೨೪ ॥**

**ರಾಕ್ಷಸೀಮಾಸುರೀಂ ಚೈವ ಪ್ರಕೃತಿಂ ಮೋಹಿನೀಂ ಶ್ರಿತಾಃ ।**

ಅವಜಾನಂತಿ ಇತ್ಯಾದಿ ಭಗವದ್ಗೀತಾ ವಚನದಿಂದ ಭಗವಂತನ ಅವಜ್ಞಾದಿ ರೂಪ ರಾಕ್ಷಸಾದಿ ಸ್ವಭಾವವುಳ್ಳವರಿಗೆ ಯಾವಕಾಲಕ್ಕೂ ಪುರಷಾರ್ಥ ಪ್ರಾಪ್ತಿಯು ಆಗುವುದಿಲ್ಲ ಎಂದು ಹೇಳುತ್ತಾರೆ. ಮಾನುಷ ಶರೀರಕ್ಕೆ ಸದೃಶವಾದ ಶರೀರವನ್ನು ಆಶ್ರಯಿಸಿರತಕ್ಕ ನನ್ನನ್ನು ತಾಮಸರು ತಪ್ಪಾಗಿ ತಿಳಿಯುತ್ತಾರೆ. ಸದಾಕಾಲದಲ್ಲಿಯೂ ಇರತಕ್ಕ ಶ್ರೇಷ್ಠವಾದ ಗುಣಪರಿಪೂರ್ಣವಾದ ನನ್ನ ಯಥಾರ್ಥವಾದ ಸ್ವರೂಪವನ್ನು

ಅವರು ತಿಳಿಯುವುದಿಲ್ಲ. ಆ ಕಾರಣದಿಂದ ಅವರ ಎಲ್ಲ ಬಯಕೆಗಳೂ, ಯಜ್ಞಾದಿ ಕರ್ಮಗಳೂ, ತತ್ತ್ವಜ್ಞಾನವೂ ವ್ಯರ್ಥವಾಗುತ್ತವೆ. ವಿಕೃತವಾದ ಹಾಗೂ ವಿರುದ್ಧವಾದ ಮನಸ್ಸುಳ್ಳ ಅವರು ಬುದ್ಧಿಭ್ರಂಶಕ್ಕೆ ಕಾರಣವಾಗುವ ರಾಕ್ಷಸರ ಹಾಗೂ ಅಸುರರ ಸಂಬಂಧಿಯಾದ ಸ್ವಭಾವವನ್ನು ಆಶ್ರಯಿಸಿರುತ್ತಾರೆ. ತಮೋಯೋಗ್ಯರಾದ ಅವರು ನನ್ನನ್ನು ಅಧಮನೆಂದು ತಿಳಿಯುತ್ತಾರೆ.

**ಮಹಾತ್ಮಾನಸ್ತು ಮಾಂ ಪಾರ್ಥ ದೈವೀಂ ಪ್ರಕೃತಿಮಾಶ್ರಿತಾಃ ॥ ೧೨೫ ॥**

**ಭಜಂತ್ಯನನ್ಯಮನಸೋ ಜ್ಞಾತ್ವಾ ಭೂತಾದಿಮವ್ಯಯಮ್ ।**

ಮಹಾತ್ಮಾನಃ ಎನ್ನುವಲ್ಲಿ ಭಗವಂತನ ಭಜನಾದಿ ರೂಪವಾದ ದೇವತ್ವವು ಅವರ ಸ್ವಭಾವವೆಂದು ತಿಳಿಯಲ್ಪಡುತ್ತದೆ. ಹೇ ಅರ್ಜುನನೇ, ದೇವತ್ವ ಸ್ವಭಾವವನ್ನು ಆಶ್ರಯಿಸಿರುವ ಮಹಾತ್ಮರು ಭೂತಗಳಿಗೆ ಕಾರಣನೂ ಚತುರ್ವಿಧ ನಾಶರಹಿತನೂ ಎಂಬುದಾಗಿ ಯಥಾರ್ಥವಾಗಿ ತಿಳಿದು ಅನ್ಯವಿಷಯಗಳಲ್ಲಿ ಮನಸ್ಸನ್ನಿಡದೆ ನನ್ನನ್ನು ಉಪಾಸನೆ ಮಾಡುತ್ತಾರೆ.

**ಅಭಯಂ ಸತ್ವಸಂಶುದ್ಧಿರ್ಜ್ಞಾನಯೋಗವ್ಯವಸ್ಥಿತಿಃ ॥ ೧೨೬ ॥**

**ದಾನಂ ದಮಶ್ಚ ಯಜ್ಞಶ್ಚ ಸ್ವಾಧ್ಯಾಯಸ್ತಪ ಆರ್ಜವಮ್ ।**

**ಅಹಿಂಸಾ ಸತ್ಯಮಕ್ರೋಧಸ್ತ್ಯಾಗಃ ಶಾಂತಿರಪೈಶುನಮ್ ॥ ೧೨೭ ॥**

**ದಯಾ ಭೂತೇಷ್ವಲೋಲುತ್ವಂ ಮಾರ್ದವಂ ಹ್ರೀರಚಾಪಲಮ್ ।**

**ತೇಜಃ ಕ್ಷಮಾ ಧೃತಿಃ ಶೌಚಮದ್ರೋಹೋ ನಾತಿಮಾನಿತಾ ॥ ೧೨೮ ॥**

**ಭವಂತಿ ಸಂಪದಂ ದೈವೀಮಭಿಜಾತಸ್ಯ ಭಾರತ ।**

ಅಭಯಂ ಇತ್ಯಾದಿ ವಚನದಿಂದ ಅಭಯಾದಿ ರೂಪವಾದುದು ದೇವತ್ವ ಸ್ವಭಾವವೆಂದೂ, ದಂಭಾದಿ ರೂಪವಾದುದು ಅಸುರತ್ವ ಸ್ವಭಾವವೆಂದೂ ಹೇಳಿದೆ. ತನಗೂ ತನ್ನಿಂದ ಇತರರಿಗೂ ಭಯವಿಲ್ಲದಿರುವಿಕೆ, ಚಿತ್ತಪ್ರಸಾದ, ಜ್ಞಾನೋಪಾಯ ದಲ್ಲಿ ಆಸಕ್ತಿ, ಸತ್ಪಾತ್ರರಲ್ಲಿ ದ್ರವ್ಯಾದಿ ದಾನ, ಇಂದ್ರಿಯನಿಗ್ರಹ, ಯಜ್ಞ, ವೇದಾ ಧ್ಯಯನ, ಬ್ರಹ್ಮಚರ್ಯಾದಿ ತಪಸ್ಸು, ನಡೆ ನುಡಿಗಳಲ್ಲಿ ಏಕರೂಪತ್ವ, ಅಹಿಂಸೆ, ಸತ್ಯ, ಕ್ರೋಧರಾಹಿತ್ಯ ಅಂದರೆ ಚಿತ್ತವಿಕಾರಾಭಾವ, ತ್ಯಾಗ, ಭಗವಂತನಲ್ಲಿ ಆಸಕ್ತವಾದ ಬುದ್ಧಿ, ಪರರ ಉಪದ್ರವಕ್ಕೆ ಕಾರಣವಾಗುವ ದೋಷಾದಿಗಳನ್ನು ಹೇಳದಿರುವುದು, ಪ್ರಾಣಿಗಳಲ್ಲಿ ದಯೆ ಅಥವಾ ಪರರಿಗೆ ಹಿತವನ್ನು ಮಾಡುವ ಮನಸ್ಸು, ವಿಷಯಗಳಲ್ಲಿ ರಾಗವಿಲ್ಲದಿರುವಿಕೆ, ತನಗೆ ಹಿಂಸೆ ಮಾಡುವವರಲ್ಲಿಯೂ ಕ್ರೋಧವಿಲ್ಲದಿರುವುದು, ಅಧರ್ಮವನ್ನು ಮಾಡಲು ನಾಚಿಕೆ, ಸ್ಥಿರತ್ವ, ತೇಜಸ್ಸು, ಕ್ಷಮೆ ಅಂದರೆ ತನಗೆ ಅಪಕಾರ ಮಾಡಿದವನಿಗೂ ಅಪಕಾರ ಮಾಡದಿರುವುದು, ಆತಂಕರಾಹಿತ್ಯ ಬಾಹ್ಯ ಮತ್ತು ಆಂತರಿಕ ಶುಚಿತ್ವ, ಪರರಿಗೆ ದ್ರೋಹ

ಮಾಡದಿರುವಿಕೆ, ಅಹಂಕಾರರಾಹಿತ್ಯ ಇವೆಲ್ಲ ಗುಣಗಳೂ ದೇವತ್ವ ಸಂಬಂಧಿಯಾದ ಸಂಪತ್ತನ್ನು ಹೊಂದಿದವರಿಗೆ ಆಗುತ್ತವೆ.

**ದಂಭೋ ದರ್ಪೋಽಭಿಮಾನಶ್ಚ ಕ್ರೋಧಃ ಪಾರುಷ್ಯಮೇವ ಚ ।। ೧೨೯ ।।**

**ಅಜ್ಞಾನಂ ಚಾಭಿಜಾತಸ್ಯ ಪಾರ್ಥ ಸಂಪದಮಾಸುರೀಮ್ ।**

ತಾನು ಅಲ್ಪನೆಂದು ತಿಳಿದಿದ್ದರೂ ಮಹಾತ್ಮನೆಂದು ತೋರಿಸುವುದು, ಭಯಕ್ಕೆ ಕಾರಣವಿದ್ದರೂ ಮದದಿಂದ ಅದು ಇಲ್ಲವೆಂದು ತೋರಿಸುವುದು, ಪ್ರಮಾಣಗಳನ್ನು ಅತಿಕ್ರಮಿಸಿ ನಡೆಯುವುದು, ಕ್ರೋಧ, ನಿಷ್ಠುರತೆ, ಅಜ್ಞಾನವೂ ಕೂಡ ಆಸುರೀ ಸಂಪತ್ತುಳ್ಳವರಿಗೆ ಆಗುತ್ತವೆ.

**ಮಾಮಾತ್ಮಪರದೇಹೇಷು ಪ್ರದ್ವಿಷಂತೋಽಭ್ಯಸೂಯಕಾಃ ।। ೧೩೦ ।।**

**ತಾನಹಂ ದ್ವಿಷತಃ ಕ್ರೂರಾನ್ ಸಂಸಾರೇಷು ನರಾಧಮಾನ್ ।**

**ಕ್ಷಿಪಾಮ್ಯಜಸ್ರಮಶುಭಾನಾಸುರೀಷ್ವೇವ ಯೋನಿಷು ।। ೧೩೧ ।।**

**ಆಸುರೀಂ ಯೋನಿಮಾಪನ್ನಾ ಮೂಢಾ ಜನ್ಮನಿ ಜನ್ಮನಿ ।**

**ಮಾಮಪ್ರಾಪ್ಯೈವ ಕೌಂತೇಯ ತತೋ ಯಾಂತ್ಯಧಮಾಂ ಗತಿಮ್ ।।೧೩೨।।**

ಮಾಮಾತ್ಮ ಇತ್ಯಾದಿ ವಚನದಿಂದ ಆಸುರೀ ಸ್ವಭಾವದವರಿಗೆ ಅಂಧಂತಮಸ್ಸಿನ ಪ್ರಾಪ್ತಿಯಿಂದಲೇ ಅವಸಾನವೆಂದು ತಿಳಿಸುತ್ತಾರೆ. ಅಸುರರು ತನ್ನ ಶರೀರದಲ್ಲಿಯೂ ಪರರ ಶರೀರದಲ್ಲಿಯೂ ನಿಯಾಮಕನಾದ ನನ್ನನ್ನು ವಿಶೇಷವಾಗಿ ದ್ವೇಷಿಸುತ್ತ ನಿರ್ದೋಷನಾದ ನನ್ನಲ್ಲಿ ದೋಷಗಳನ್ನು ಆರೋಪ ಮಾಡುತ್ತ ಯಾಗಾದಿಗಳನ್ನು ಮಾಡುವರು. ನನ್ನನ್ನು ದ್ವೇಷಿಸುವ ಕ್ರೂರರಾದ ಅಮಂಗಲರಾದ ನರಾಧಮರಾದ ಆ ಅಸುರರನ್ನು ಸಂಸಾರಗಳಲ್ಲಿಯೇ ಆಸುರೀ ಯೋನಿಗಳಲ್ಲಿಯೇ ನಿರಂತರವಾಗಿ ಸ್ಥಾಪಿಸುತ್ತೇನೆ. ಆದರಿಂದ ತಾಮಸ ಸ್ವಭಾವದ ಅವರು ಅನೇಕ ಜನ್ಮಗಳಲ್ಲಿ ಆಸುರೀ ಯೋನಿಯನ್ನು ಹೊಂದಿದವರಾಗಿ, ನನ್ನನ್ನು ಎಂದಿಗೂ ಹೊಂದದೇ ನಿತ್ಯನರಕ ರೂಪವಾದ ಅಧಮವಾದ ಗತಿಯನ್ನು ಹೊಂದುತ್ತಾರೆ.

ದ್ವಿವಿಧೋ ಇತ್ಯಾದಿ ಸ್ಮೃತಿಗಳನ್ನು ಉದಾಹರಿಸುವ ಮೂಲಕ ದೇವತ್ವ ಆಸುರತ್ವಗಳ ಸ್ವಭಾವತ್ವವನ್ನು ಸ್ಪಷ್ಟಪಡಿಸುತ್ತಾರೆ –

**ದ್ವಿವಿಧೋ ಭೂತಸರ್ಗೋಽತ್ರ ದೈವ ಆಸುರ ಏವ ಚ ।**

**ವಿಷ್ಣುಭಕ್ತಿಪರೋ ದೈವೋ ವಿಪರೀತಸ್ತಥಾಸುರಃ ।। ೧೩೩ ।।**

ಎಲೈ ರಾಜನೇ, ವಿಷ್ಣುಭಕ್ತಿಯಲ್ಲಿಯೇ ಆಸಕ್ತಿಯುಳ್ಳ ದೇವ ಸ್ವಭಾವದವರು ಮತ್ತು ಅದಕ್ಕೆ ವಿಪರೀತವಾದ ಅಸುರ ಸ್ವಭಾವದವರು ಎಂದು ಇಲ್ಲಿ ಸೃಷ್ಟಿಯು ಎರಡೇ ವಿಧವು.

**ದೇವಾನಾಂ ಪರಮೋ ಧರ್ಮಃ ಸದಾ ಯಜ್ಞಾದಿಕಾಃ ಕ್ರಿಯಾಃ ।**

**ಸ್ವಾಧ್ಯಾಯಸ್ತತ್ವವೇದಿತ್ವಂ ವಿಷ್ಣುಪೂಜಾರತಿಃ ಸ್ಮೃತಿಃ ।। ೧೩೪ ।।**

ಯಾವಾಗಲೂ ಭಗವದರ್ಪಣ ಬುದ್ಧಿಯಿಂದ ಯಜ್ಞಾದಿಗಳನ್ನು ಮಾಡುವುದು, ವೇದಾಧ್ಯಯನ, ಯಥಾರ್ಥವಾದ ತತ್ವವನ್ನು ಅರಿಯುವುದು, ವಿಷ್ಣುಪೂಜೆಯಲ್ಲಿ ಆಸಕ್ತಿ ಹಾಗೂ ವಿಷ್ಣುಸ್ಮರಣೆ ಇವುಗಳೇ ದೇವತೆಗಳ ಪರಮಧರ್ಮ.

**ದೈತ್ಯಾನಾಂ ಬಾಹುಶಾಲಿತ್ವಂ ಮಾತ್ಸರ್ಯಂ ಯುದ್ಧಸತ್ಕ್ರಿಯಾ ।**

**ನೀತಿಶಾಸ್ತ್ರಪ್ರವೇದಿತ್ವಂ ಶಿವಪೂಜಾ ರತಿಃ ಸ್ಮೃತಿಃ ।। ೧೩೫ ।।**

ನಿರರ್ಥಕವಾದ ಭುಜಪರಾಕ್ರಮ, ಸಜ್ಜನರಲ್ಲಿ ಮಾತ್ಸರ್ಯ, ಯುದ್ಧಕೌಶಲ, ನೀತಿಶಾಸ್ತ್ರಗಳ ಜ್ಞಾನ, ರುದ್ರನ ಪೂಜೆಯಲ್ಲಿ ಆಸಕ್ತಿ ಹಾಗೂ ರುದ್ರನ ಸ್ಮರಣೆ ಇವುಗಳು ದೈತ್ಯರ ಧರ್ಮ.

**ವರ್ಣಾಶ್ರಮಾಚಾರವತ್ವಂ ಸ್ವಾಧ್ಯಾಯೋ ಭಕ್ತಿರಚ್ಯುತೇ ।**

**ಶಿವೇ ಸೂರ್ಯೇ ತಥಾ ದೇವ್ಯಾಂ ಸ್ವಭಾವೋ ಮಾನುಷಃ ಸ್ಮೃತಃ ।।೧೩೬।।**

ವರ್ಣಾಶ್ರಮ ಧರ್ಮಗಳ ಅನುಷ್ಠಾನ, ವೇದಾಧ್ಯಯನ, ಶ್ರೀಹರಿ, ರುದ್ರ ಸೂರ್ಯ ಹಾಗೂ ಲಕ್ಷ್ಮೀದೇವಿ ಎಲ್ಲರಲ್ಲಿಯೂ ಸಮನಾದ ಭಕ್ತಿ, ಇವುಗಳು ಮಾನುಷ ಸ್ವಭಾವವೆಂದು ಹೇಳಲ್ಪಟ್ಟಿದೆ.

**ಅನಾದಿವೈಷ್ಣವಾ ಏವ ದೇವತಾಸ್ತು ಸ್ವಭಾವತಃ ।**

**ವಿಪರೀತಾಃ ಸ್ಮೃತಾ ದೈತ್ಯಾಃ ಸದೈವಾನಾದಿಕಾಲತಃ ।। ೧೩೭ ।।**

**ಮಾನುಷಾ ಮಿಶ್ರಮತಯೋ ವಿಮಿಶ್ರಗತಯೋಽಪಿ ಚ ।**

**ಇತ್ಯಾದಿವಾಕ್ಯ ಸಂದರ್ಭೈರ್ಜ್ಞಾಯತೇಽನಾದಿಯೋಗ್ಯತಾ ।। ೧೩೮ ।।**

ಸ್ವಾಭಾವಿಕವಾಗಿ ದೇವತೆಗಳು ಅನಾದಿ ಕಾಲದಿಂದ ವಿಷ್ಣುಭಕ್ತರೇ ಆಗಿರುವರು. ದೈತ್ಯರು ಅನಾದಿ ಕಾಲದಿಂದಲೂ ಸರ್ವದಾ ಮಿಥ್ಯಾಜ್ಞಾನಿಗಳೂ ವಿಷ್ಣುದ್ವೇಷಿಗಳೂ ಎಂದೇ ಹೇಳಲ್ಪಟ್ಟಿದ್ದಾರೆ. ಮನುಷ್ಯರು ಅನಾದಿ ಕಾಲದಿಂದಲೂ ಯಥಾರ್ಥ ಮತ್ತು ಅಯಥಾರ್ಥಜ್ಞಾನದಿಂದ ಮಿಶ್ರಬುದ್ಧಿಯುಳ್ಳವರು ಹಾಗೂ ಸುಖದುಃಖಗಳಿಂದ ಮಿಶ್ರವಾದ ಫಲವುಳ್ಳವರು (ನಿತ್ಯಸಂಸಾರಿಗಳು), ಇವೇ ಮೊದಲಾದ ವಾಕ್ಯಗಳ ಸಂದರ್ಭಗಳಿಂದ ತ್ರಿವಿಧ ಜೀವರ ಅನಾದಿ ಯೋಗ್ಯತೆಯು ತಿಳಿಯಲ್ಪಡುತ್ತದೆ. ಈ ಪ್ರಕಾರವಾಗಿ ದೇವತ್ವಾದಿಗಳು ಸ್ವಭಾವವೆಂದು ಸ್ಪಷ್ಟಮಾಡಲ್ಪಟ್ಟಿತು.

ಮೇಲೆ ಹೇಳಿದ ಅನುಮಾನಗಳಿಗೆ ವ್ಯಾಪ್ತಿಯನ್ನು ನಿರ್ಧರಿಸುವುದಕ್ಕೂ ಹಾಗೂ ಆಗಮಗಳಿಗೆ ಅನ್ಯಾರ್ಥವ್ಯಾಖ್ಯಾನವನ್ನು ನಿರಾಕರಿಸುವುದಕ್ಕೂ ಅನುಗ್ರಾಹಕವಾದ ತರ್ಕವನ್ನು ಹೇಳುತ್ತಾರೆ –

**ಯದ್ಯನಾದಿವಿಶೇಷೋ ನ ಸಾಂಪ್ರತಂ ಕಥಮೇವ ಸಃ ।**

ಚತುರ್ಮುಖನಿಗೆ ಅನಾದಿಯಾದ ಸರ್ವೋತ್ಕೃಷ್ಟವಾದ ಯೋಗ್ಯತಾರೂಪ ವಿಶೇಷವು ಇಲ್ಲವೆಂದರೆ, ಈಗ ಕಾಣುತ್ತಿರುವ ಸರ್ವೋತ್ಕೃಷ್ಟತ್ವವು ಹೇಗೆ ತಾನೆ ಕೂಡುವುದು? ಸರ್ವೋತ್ಕೃಷ್ಟತ್ವಕ್ಕೆ ಅನಾದಿಯಾದ ಯೋಗ್ಯತೆಯೇ ಕಾರಣ. ಕಾರಣವಿಲ್ಲದಿದ್ದರೆ ಕಾರ್ಯವೂ ಆಗಲಾರದು. ಹಾಗೆ ನಿಯಮವಿಲ್ಲದೇ ಇದ್ದರೆ ಎಲ್ಲರಿಗೂ ಸರ್ವೋತ್ಕೃಷ್ಟತ್ವವು ಬರಬೇಕಾಗುವುದು.

ಹಾಗಾದರೆ ಬ್ರಹ್ಮಾದಿಗಳಿಗೆ ಯೋಗ್ಯತಾರೂಪವಾದ ಅನಾದಿಯಾದ ವಿಶೇಷವು ಇಲ್ಲದಿದ್ದರೂ ಸಾದಿಯಾದ ವಿಶಿಷ್ಟವಾದ ಅದೃಷ್ಟದಿಂದಲೇ ಸರ್ವೋತ್ಕಷ್ಟಾದಿಗಳು ಸಂಭವಿಸುತ್ತವೆ. ಏಕೆಂದರೆ 'ಸ್ವಧರ್ಮನಿಷ್ಠಃ ಶತಜನ್ಮಭಿಃ ಪುಮಾನ್ವಿರಿಂಚಿತಾಮೇತಿ' ಎಂದು ಸ್ಮೃತಿಯಿದೆ ಎಂದರೆ, ಆಗ ವಿರಿಂಚನ ಸರ್ವೋತ್ಕರ್ಷತ್ವಕ್ಕೆ ಬೀಜವಾದ ವಿಶಿಷ್ಟವಾದ ಅದೃಷ್ಟವು ಹಿಂದಿನ ಅದೃಷ್ಟದ ಅಪೇಕ್ಷೆಯಿಲ್ಲದೆ ಹುಟ್ಟುವುದೋ ಅಥವಾ ಅಪೇಕ್ಷೆಯಿಂದಲೋ? ಎಂದು ಪ್ರಶ್ನೆ ಮಾಡಬೇಕಾಗುವುದು. ಅದರಲ್ಲಿ ಮೊದಲನೆಯದನ್ನು ಅದೃಷ್ಟಾದೇವ ಇತ್ಯಾದಿ ವಚನದಿಂದಲೂ, ಎರಡನೆಯದನ್ನು ಅದೃಷ್ಟಾಚ್ಚೇತ್ ಇತ್ಯಾದಿ ವಚನದದಿಂದಲೂ ದೂಷಿಸುತ್ತಾರೆ –

**ಅದೃಷ್ಟಾದೇವ ಚಾದೃಷ್ಟಂ ಸ್ವೀಕೃತಂ ಸರ್ವವಾದಿಭಿಃ ।। ೧೩೯ ।।**

**ಆಕಸ್ಮಿಕೋ ವಿಶೇಷಶ್ಚೇದದೃಷ್ಟೇ ಕ್ವಚಿದಿಷ್ಯತೇ ।**

**ಸರ್ವತ್ರಾಕಸ್ಮಿಕತ್ವಂ ಸ್ಯಾನ್ನಾದೃಷ್ಟಾಪೇಕ್ಷತಾ ಭವೇತ್ ।। ೧೪೦ ।।**

**ಅದೃಷ್ಟಾಚ್ಚೇದ್ವಿಶೇಷೋಽಯಮಾನದಿತ್ವಂ ಕುತೋ ನ ತತ್ ।**

ಉತ್ತರೋತ್ತರ ಅದೃಷ್ಟವು ಪೂರ್ವಾಪೂರ್ವ ಅದೃಷ್ಟದಿಂದಲೇ ಉಂಟಾಗುತ್ತದೆ ಎಂದು ಚಾರ್ವಾಕನನ್ನು ಬಿಟ್ಟು ಉಳಿದ ಎಲ್ಲ ವಾದಿಗಳೂ ಸ್ವೀಕರಿಸಿರುತ್ತಾರೆ. ಆದಕಾರಣ ಸರ್ವೋತ್ಕರ್ಷತ್ವಕ್ಕೆ ಕಾರಣವಾದ ಅದೃಷ್ಟವು ಹಿಂದಿನ ಅದೃಷ್ಟದ ಅಪೇಕ್ಷೆಯಿಲ್ಲದೆ ಹುಟ್ಟುತ್ತದೆ ಎಂದು ಹೇಳಿದರೆ ಅಪಸಿದ್ಧಾಂತವು. ವಿರಿಂಚನ ಉತ್ಕರ್ಷಕ್ಕೆ ಕಾರಣವಾದ ಯಾವುದೋ ಒಂದು ಅದೃಷ್ಟದಲ್ಲಿ ಅತಿಶಯವು ಆಕಸ್ಮಿಕವಾಗಿಯೇ (ಅದೃಷ್ಟದ ಅಪೇಕ್ಷೆಯಿಲ್ಲದೇ) ಆಗುವುದಾದರೆ, ಫಲಾದಿಗಳೂ ಕೂಡ ಆಕಸ್ಮಿಕವಾಗಿಯೇ ಆಗುವುದೆಂದು ಅಂಗೀಕರಿಸಬೇಕಾಗುವುದು. ಹಾಗಾದರೆ ಅದೃಷ್ಟವನ್ನು ಅಪೇಕ್ಷಿಸಿಯೇ ಹುಟ್ಟಲಿ ಎಂದರೆ – ವಿರಿಂಚನ ಸರ್ವೋತ್ಕರ್ಷಕ್ಕೆ ಕಾರಣವಾದ ಅದೃಷ್ಟವು ಹಿಂದಿನ ಅದೃಷ್ಟದಿಂದ ಹುಟ್ಟುವುದೆಂದು ಒಪ್ಪಿದರೆ ಅಂಥಹ ಅದೃಷ್ಟ ಪರಂಪರೆಗೆ ಅನಾದಿತ್ವವನ್ನು ಒಪ್ಪಬೇಕಾಗುವುದು.

ಭಗವಂತನು ನಿರ್ದೋಷನೆಂದು ಹಿಂದೆ ಈ ಪಾದದ ಉಪಕ್ರಮದಲ್ಲಿ ಏನು ಹೇಳಲ್ಪಟ್ಟಿತೋ, ಅದನ್ನು ಸಮರ್ಥಿಸಲಿಕ್ಕಾಗಿ ಉತ್ತರ ಗ್ರಂಥವು. ಇದನ್ನು ನ

ಸ್ಥಾನತೋಽಪಿ ಇತ್ಯಾದಿಗಳಿಂದಲೇ ಸಮರ್ಥನೆ ಮಾಡಲಾಗಿದೆ ಎಂದರೆ, ಸತ್ಯವೇ. ಅಲ್ಲಿ ಯುಕ್ತ್ಯಾದಿಗಳಿಂದ ಪ್ರಾಪ್ತವಾದ ಸದೋಷತ್ವವನ್ನು ನಿರಾಕರಿಸಲಾಗಿದೆ. ಇಲ್ಲಾದರೂ ಪ್ರತ್ಯಕ್ಷಪ್ರಾಪ್ತವಾದ ದೋಷತ್ವವನ್ನು ನಿಕಾರಿಸಲಾಗುವುದು. ಹೀಗೆ ಪ್ರಕರಣ ಭೇದವಿದೆ.

ಇಲ್ಲಿ ಹೀಗೆ ಶಂಕಿಸಲ್ಪಡುತ್ತದೆ – ಭಗವದವತಾರಗಳಾದ ರಾಮಕೃಷ್ಣಾದಿ ರೂಪಗಳು ಭಗವಂತನಿಂದ ಅತ್ಯಂತಾಭಿನ್ನಗಳೆಂದು ಸಮರ್ಥಿಸಲಾಗಿದೆ. ರಾಮ ಕೃಷ್ಣಾದಿ ರೂಪಗಳಲ್ಲಿ ಪರಸ್ಪರ ಭೇದವೂ, ವೇಧಾದಿಗಳೂ ಆ ಕಾಲದ ಜನರಿಂಧ ಪ್ರತ್ಯಕ್ಷವಾಗಿ ಕಂಡಿವೆ. ಆದಕಾರಣ ಭಗವಂತನಲ್ಲಿ ನಿರ್ದೋಷತ್ವವಿಲ್ಲ ಎಂದರೆ –

**ನ ಚಾನ್ಯಭೇದವದ್ವಿಷ್ಣೌ ಭೇದಸ್ತದ್ದರ್ಶಿನಾಮಪಿ ॥ ೧೪೧ ॥**

**ದೃಶ್ಯತೇ ಪ್ರತ್ಯಭಿಜ್ಞೈವ ಬಹುರೂಪೇಷು ದೃಶ್ಯತೇ ।**

**ಬಹುತ್ವಂ ಚ ವಿಶೇಷೇಣ ನ ಭೇದೇನ ಕಥಂಚನ ॥ ೧೪೨ ॥**

ಭಗವದಿತರವಾದ ಘಟಾದಿಗಳಲ್ಲಿ ಅನೇಕತ್ವದಿಂದ ಅತಿರಿಕ್ತವಾದ ಅನ್ಯೋನ್ಯಾ ಭಾವರೂಪವಾದ ಭೇದವು ಹೇಗೆ ಕಾಣಲ್ಪಡುವುದೋ ಹಾಗೆ ವಿಷ್ಣುವಿನ ರಾಮ ಕೃಷ್ಣಾದಿ ರೂಪಗಳಲ್ಲಿ ಭೇದವು ಕಾಣಲ್ಪಡುವುದಿಲ್ಲ. ಸ್ವಭಾವದಿಂದ ಜೀವರಲ್ಲಿ ದೇವ ದಾನವ ಮಾನವ ಎಂದು ಮೂರು ವಿಧ. ಅದರಲ್ಲಿ ದೇವತೆಗಳ ಪ್ರತ್ಯಕ್ಷಕ್ಕೆ ಭಗವಂತನ ಅವತಾರಗಳಲ್ಲಿ ಭೇದವು ತೋರುವುದಿಲ್ಲ. ಉತ್ತಮರಾದ ಪುರುಷರಿಗೆ ಭಗವಂತನ ಅನೇಕ ರೂಪಗಳಲ್ಲಿ ಪ್ರತ್ಯಭಿಜ್ಞೆಯಿಂದ ಅಭೇದವೇ ಕಂಡುಬರುವುದು. ಅಂದರೆ ಆ ರಾಮನೇ ಈ ಕೃಷ್ಣನು ಎಂದು ಜಾಂಬವಂತ ಕಂಡಂತೆ. ಭಗವಂತನ ರೂಪಗಳಿಗೆ ಬಹುತ್ವವಾದರೂ, ಅಭೇದವಿದ್ದಾಗಲೂ ಭೇದವನ್ನು ನಿರ್ವಹಿಸುವ ವಿಶೇಷದಿಂದಲೇ ಕೂಡುವುದು. ಭಗವಂತನ ರೂಪಗಳಲ್ಲಿ ಭೇದವಿದೆ ಎನ್ನುವಲ್ಲಿ ನಿರವಕಾಶವಾದ ಯಾವುದೇ ಪ್ರಮಾಣವಿಲ್ಲದ ಕಾರಣ, ಯಾವ ರೀತಿಯಿಂದಲೂ ಭಗವಂತನ ರೂಪರೂಪಗಳಲ್ಲಿ ಭೇದವು ಕೂಡುವುದಿಲ್ಲ.

ಹಾಗಾದರೆ ಪರಮಾತ್ಮನ ರೂಪಗಳಲ್ಲಿ ಅಭೇದವನ್ನು ಕಾಣುವ ಪ್ರತ್ಯಭಿಜ್ಞೆಯ ಅಭಾವದಿಂದ ಮಧ್ಯಮ ಪುರುಷರ ದೃಷ್ಟಿಯಿಂದ ಅಭೇದ ಕೂಡುವುದಿಲ್ಲವೆಂದರೆ–

**ಪ್ರತ್ಯಭಿಜ್ಞಾ ಚ ಯೇಷಾಂ ನ ತೇಽಪಿ ತನ್ಮುಷ್ಟದೃಷ್ಟಯಃ ।**

**ಭೇದಂ ನೈವ ಪ್ರಪಶ್ಯಂತಿ ಭೇದಮನ್ಯೇಭ್ಯ ಏವ ಚ ॥ ೧೪೩ ॥**

**ಪಶ್ಯಂತ್ಯೇವಂ ಹರಿಸ್ತೇಷಾಂ ಸಂದರ್ಶಯತಿ ನಾನ್ಯಥಾ ।**

**ಏವಂ ಬೃಹತ್ಸಂಹಿತಾಯಾಂ ವಚನಂ...............॥**

ಭಗವದ್ರೂಪಗಳಲ್ಲಿ ಪ್ರತ್ಯಭಿಜ್ಞೆಯಿಲ್ಲದಿರುವ ಮಧ್ಯಮ ಜನರೂ ಕೂಡ ಆ

ಹರಿಯಲ್ಲಿ ಭೇದವನ್ನು ಕಾಣುವುದೇ ಇಲ್ಲ. ಭಗವಂತನಿಂದಲೇ ಅಪಹೃತವಾದ ದೃಷ್ಟಿಯುಳ್ಳವರೇ ಮುಷ್ಟದುಷ್ಟಿಗಳು. ಅದೇ ಅವರ ಪ್ರತ್ಯಭಿಜ್ಞಾಭಾವಕ್ಕೆ ಕಾರಣವು. ಅವರು ಭಗವದ್ರೂಪಗಳಿಗೆ ಭಗವದಿತರ ವಸ್ತುಗಳಿಂದ ಭೇದವನ್ನೂ ನೋಡಿಯೇ ನೋಡುತ್ತಾರೆ. ಭೇದಾಭೇದಗಳ ವಿಷಯದಲ್ಲಿ ಉದಾಸೀನರಾಗಿರುವ ಮಧ್ಯಮರಿಗೆ ಈ ರೀತಿಯ ಪ್ರತೀತಿಯು ಹೇಗೆ ಎಂದರೆ, ಆ ಮಧ್ಯಮ ಜನರಿಗೆ, ಅವರ ಯೋಗ್ಯತೆಯಿಂದ, ಶ್ರೀಹರಿಯು ಅನ್ಯಥಾ ತನ್ನ ರೂಪವನ್ನು ತೋರಿಸುವುದಿಲ್ಲ. ಹೀಗೆ ಬೃಹತ್ಸಂಹಿತೆಯ ವಚನವು.

ಭಗವದ್ರೂಪಗಳಲ್ಲಿ ಭೇದವು ಪತ್ಯಕ್ಷ ಅನುಮಾನಗಳಿಂದ ಸಿದ್ಧವಾಗದಿದ್ದರೆ ಬೇಡ. ಏಕೆಂದರೆ ಆಗಮದಿಂದ ಆ ಭೇದವು ಸಿದ್ಧವಾಗುವುದು. ಪುರಾಣಗಳಲ್ಲಿ ಅಲ್ಲಲ್ಲಿ ಭೇದ ಹೇಳುವ ವಚನಗಳು ಶ್ರುತವಾಗಿವೆ ಎಂದರೆ, ನೇಹ ನಾನಾಸ್ತಿ ಕಿಂಚನ ಇತ್ಯಾದಿ ಶ್ರುತಿಗಳಿಗೆ ವಿರುದ್ಧವಾದ್ದರಿಂದ ಭೇದ ಹೇಳುವಂತೆ ತೋರುವ ಪುರಾಣಗಳ ವಾಕ್ಯಗಳಿಗೆ ಬೇರೆ ಅರ್ಥವನ್ನು ಮಾಡಬೇಕು ಎಂದು ಹೇಳುತ್ತಾರೆ –

**.......................................ನ ಪುರಾಣಗಮ್ ॥ ೧೪೪ ॥**

**ಲೋಕದರ್ಶನವಾದ್ಯೇವ ವೇದರೋಧಾಯ ಶಕ್ನುಯಾತ್ ।**

ಪುರಾಣದಲ್ಲಿರತಕ್ಕ ಭೇದಪ್ರತಿಪಾದಕವಾದ ವಚನವು ಜನರಿಗೆ ಭಗವದ್ ರೂಪಗಳಲ್ಲಿ ಯಾವ ಭೇದದರ್ಶನವಾಗುವುದೋ ಅದರ ಅನುವಾದವೇ ಹೊರತು ವಾಸ್ತವವಾಗಿ ಅದಕ್ಕೆ ಭೇದವನ್ನು ಹೇಳುವುದರಲ್ಲಿ ತಾತ್ಪರ್ಯವಿರುವುದಿಲ್ಲ. ಉಪಕ್ರಮಾದಿ ಲಿಂಗಗಳಿಂದ ಹಾಗೆ ನಿಶ್ಚಿತವಾಗುತ್ತದೆ. ಆದ್ದರಿಂದ ಭಗವದ್ರೂಪ ಗಳಲ್ಲಿ ಅಭೇದವನ್ನು ಪ್ರತಿಪಾದಿಸುವ ನೇಹ ನಾನಾಸ್ತಿ ಇತ್ಯಾದಿ ವೇದ ವಾಕ್ಯಗಳನ್ನು ಬಾಧಿಸುವುದಕ್ಕೆ ಪುರಾಣ ವಾಕ್ಯಗಳು ಶಕ್ತವಾಗುವುದಿಲ್ಲ.

ಹಾಗಾದರೆ ಮೊದಲು ಭಗವದ್ರೂಪ ಭೇದ ವಿಷಯದಲ್ಲಿ ಪ್ರತ್ಯಕ್ಷವಿಲ್ಲವೆಂದು ಹೇಳಿ, ಈಗ ಆ ಪ್ರತ್ಯಕ್ಷವುಂಟು ಎಂದು ಹೇಳಿದರೆ ವ್ಯಾಹತವಾಗುವುದು. ಉತ್ತಮ ಮಧ್ಯಮರಿಗೆ ಭೇದ ಪ್ರತ್ಯಕ್ಷವಿಲ್ಲವೆಂದು ಹೇಳಲ್ಪಟ್ಟಿದೆ. ಅಧಮರಿಗೆ ಭೇದಪ್ರತ್ಯಕ್ಷವು ಇದೆ ಎಂದು ಈಗ ಅಂಗೀಕರಿಸಲ್ಪಡುತ್ತದೆ. ಆದ್ದರಿಂದ ಅಧಮರ ಭೇದ ಪ್ರತ್ಯಕ್ಷವೇ ಅಭೇದ ದರ್ಶನಕ್ಕೆ ಬಾಧಕವು ಏಕೆ ಆಗಲಾರದು ಎಂದರೆ –

**ಅಪರೀಕ್ಷಿತದೃಷ್ಟಿಶ್ಚ ಪರೀಕ್ಷಾಪೂರ್ವದರ್ಶನಮ್ ॥ ೧೪೫ ॥**

**ನಿಷೇದ್ಧುಂ ಶಕ್ನುಯಾತ್ ಕ್ವಾಪಿ ದೇವದತ್ತಾದಿದೃಷ್ಟಿವತ್ ।**

ಪರೀಕ್ಷೆಯಿಂದ ಪ್ರಮಾಣವೆಂದು ನಿಶ್ಚಿತವಾಗದ ಜ್ಞಾನವು ಪರೀಕ್ಷಾಪೂರ್ವಕ ಪ್ರಾಮಾಣ್ಯನಿಶ್ಚಯವುಳ್ಳ ಪ್ರತ್ಯಕ್ಷವನ್ನು ಎಲ್ಲಿಯೂ ನಿಷೇಧಿಸಲಿಕ್ಕೆ ಶಕ್ಯವಾಗದು. ಹೇಗೆ ಯಜ್ಞದತ್ತಾದಿಗಳಲ್ಲಿ ಅನಿಶ್ಚಿತ ಪ್ರಾಮಾಣ್ಯವುಳ್ಳ ದೇವದತ್ತಾದಿಗಳ ದೃಷ್ಟಿಯು

ನಿಶ್ಚಿತ ಪ್ರಾಮಾಣ್ಯವುಳ್ಳ ಯಜ್ಞದತ್ತಾದಿಗಳ ದೃಷ್ಟಿಯನ್ನು ಬಾಧಿಸುವುದಿಲ್ಲವೋ ಹಾಗೆ. ಭೇದದೃಷ್ಟಿಯು ಅನಿಶ್ಚಿತ ಪ್ರಾಮಾಣ್ಯವುಳ್ಳದ್ದು. ಆದರೆ ಅಭೇದ ದೃಷ್ಟಿಯು ನಿಶ್ಚಿತ ಪ್ರಾಮಾಣ್ಯವುಳ್ಳದ್ದು. ಆದ್ದರಿಂದ ಅಭೇದದರ್ಶನಕ್ಕೆ ಬಾಧವಿಲ್ಲವೆಂದು ಭಾವ.

ಭೇದದರ್ಶನವು ಅನಿಶ್ಚಿತ ಪ್ರಾಮಾಣ್ಯವುಳ್ಳದ್ದು ಹೇಗೆ ಎಂದರೆ –

**ನ ಚ ನಿಶ್ಚಿತಭೇದಸ್ಯ ದರ್ಶನೇऽಸ್ತಿ ಪುರಾಣಗಮ್ ।। ೧೪೬ ।।**

**ವಾಕ್ಯಂ ಕ್ವಚಿದ್ಧಿ ಸಂಮುಗ್ಧಂ ದರ್ಶನಂ ತತ್ರ ಗಮ್ಯತೇ ।**

ಪರಮೇಶ್ವರನ ರೂಪಗಳಿಗೆ ಭೇದ ವಿಷಯಕವಾದ ಪ್ರತ್ಯಕ್ಷವು ನಮಗೆ ಪುರಾಣ ವಾಕ್ಯಗಳಿಂದಲೇ ಸಿದ್ಧವಾಗಿದೆ. ಪುರಾಣವಾಕ್ಯವಾದರೂ ಕೆಲವರು ಭೇದವನ್ನು ನೋಡುತ್ತಾರೆಂದು ಅನುವಾದ ರೂಪದಿಂದ ಪ್ರತಿಪಾದಿಸುತ್ತದೆ. ಅದರ ಪ್ರಾಮಾಣ್ಯ ನಿಶ್ಚಯಕ್ಕೆ ನಾವು ಪುರಾಣಾಂತರಗಳನ್ನು ನೋಡಬೇಕು. ಆದರೆ ಭೇದದರ್ಶನವನ್ನು ನಿಶ್ಚಿತವಾಗಿ ಪ್ರತಿಪಾದಿಸುವ ಯಾವುದೇ ಪೂರಾಣವಾಕ್ಯವೂ ಕಂಡುಬರುವುದಿಲ್ಲ. ಹೀಗೆ ಪ್ರಮಾಣಾಭಾವದ ಕಾರಣದಿಂದ ಭೇದದರ್ಶನಕ್ಕೆ ಪ್ರಾಮಾಣ್ಯ ನಿಶ್ಚಯವಿಲ್ಲ. ಪುರಾಣವಾಕ್ಯದಿಂದ ಭೇದವೋ ಅಭೇದವೋ ಎಂಬ ಸಂಶಯದಿಂದ ಕೂಡಿದ ಭೇದದರ್ಶನವು ಮಾತ್ರ ತಿಳಿಯಲ್ಪಡುತ್ತದೆ.

ಹಾಗಾದರೆ ಭಗವದ್ರೂಪಗಳಲ್ಲಿ ವೇಧಾದಿಗಳನ್ನು ನೋಡಿದವರ ಪ್ರತ್ಯಕ್ಷವೇ ಭೇದದರ್ಶನಕ್ಕೆ ಪ್ರಮಾಣವು ಎಂದು ಹೇಳಕೂಡದು. ಏಕೆಂದರೆ ವೇಧಾದಿಗಳ ಅಭಾವವನ್ನು ಗ್ರಹಿಸತಕ್ಕ ಮಹಾತ್ಮರ ಪ್ರತ್ಯಕ್ಷದಿಂದ ಅದು ಬಾಧಿತವು. ಮಹಾತ್ಮರ ಪ್ರತ್ಯಕ್ಷಕ್ಕೆ ಬಾಧಕವಿಲ್ಲವಾದ್ದರಿಂದ ಅದಕ್ಕೇ ಪ್ರಾಮಾಣ್ಯವು ಎನ್ನುತ್ತಾರೆ –

**ಅಪರೀಕ್ಷಿತಮೇವಾತ್ರ ವೇಧಾದಿಕಮಧೀಶಿತುಃ ।। ೧೪೭ ।।**

**ಪರೀಕ್ಷಾದರ್ಶನೇನೈವ ದೃಶ್ಯತೇ ಕೇನಚಿತ್ಕ್ವಚಿತ್ ।**

ಪರಮಾತ್ಮನ ಅವತಾರಗಳಲ್ಲಿ ಅಪರೀಕ್ಷಿತವಾದ ದೃಷ್ಟಿಯುಳ್ಳವರಿಗೆ ಮಾತ್ರ ವೇಧಾದಿ ದೋಷಗಳು ಕಾಣುತ್ತವೆ. ಪರೀಕ್ಷಾಪೂರ್ವಕ ದರ್ಶನದಲ್ಲಿ ವೇಧಾದಿಗಳು ಯಾರಿಗೂ ಎಲ್ಲಿಯೂ ಕಂಡುಬರುವುದಿಲ್ಲ. ದೋಷದರ್ಶನವು ಅಪರೀಕ್ಷಿತವಾದರೆ ನಿರ್ದೋಷದರ್ಶನವು ಪರೀಕ್ಷಿತವು ಎಂದು ಭಾವ.

ಹಾಗಾದರೆ ಮಹಾತ್ಮರ ಪ್ರತ್ಯಕ್ಷವೇ ನಿರ್ದುಷ್ಟವಾದುದು ಎಂದು ಹೇಗೆ ತಿಳಿದು ಬರುತ್ತದೆ ಎಂದರೆ ಅದಕ್ಕೆ ಪ್ರಮಾಣವಾಗಿ ಬರ್ಕಶ್ರುತಿಯನ್ನು ಉದಾಹರಿಸುತ್ತಾರೆ –

**ನಿರ್ದೋಷಮೇವ ತಂ ಬ್ರಹ್ಮಾ ದದರ್ಶಾಶೇಷರೂಪಿಣಮ್ ।। ೧೪೮ ।।**

**ನಿರ್ದೋಷಮೇವ ರುದ್ರೋऽದ್ರಾಕ್ಷ್ನಿರ್ದೋಷಂ ತಂ ಪುರಂದರಃ ।**

**ನಿರ್ದೋಷಾಣ್ಯಸ್ಯ ರೂಪಾಣಿ ದೃಷ್ಟಾನ್ಯೇವಂ ಸುರೋತ್ತಮೈಃ ।। ೧೪೯ ।।**

**ಅನ್ಯೇ ಸ ದೋಷಾಃ ಸರ್ವೇऽಪಿ ನಿರ್ದೋಷೋ ಹರಿರೇಕಲಃ ।**

**ಇತಿ ಬರ್ಕಶ್ರುತೇಶ್ಚೈವ ಸದೋಷಂ ನಾಸ್ಯ ದರ್ಶನಮ್ ॥ ೧೫೦ ॥**

ಚತುರ್ಮುಖ ಬ್ರಹ್ಮನು ನಿರ್ದೋಷನೇ ಆದ ಅನಂತಾನಂತ ರೂಪವುಳ್ಳ ಆ ಶ್ರೀಹರಿಯನ್ನು ನೋಡಿದನು. ರುದ್ರನೂ ನಿರ್ದೋಷನೇ ಆದ ಶ್ರೀಹರಿಯನ್ನು ನೋಡಿದನು. ಇಂದ್ರನೂ ಅವನನ್ನು ದೋಷರಹಿತನೆಂದೇ ನೋಡಿದನು. ಹೀಗೆಯೇ ದೇವಶ್ರೇಷ್ಠರಿಂದ ಶ್ರೀಹರಿಯ ನಿರ್ದೋಷವಾದ ರೂಪಗಳೇ ಕಾಣಲ್ಪಟ್ಟಿವೆ. ಶ್ರೀಹರಿಯಿಂದ ಇತರರಾದ ಎಲ್ಲರೂ ದೋಷಸಹಿತರೇ. ಹರಿಯೊಬ್ಬನೇ ದೋಷ ರಹಿತನು. ಹೀಗೆ ಬರ್ಕಶ್ರುತಿಯ ವಚನವಿದೆ. ಆದಕಾರಣ ಪರಮೇಶ್ವರನ ವಿಷಯದಲ್ಲಿ ಮಹಾತ್ಮರ ದರ್ಶನವು ಸದೋಷವಲ್ಲವೇ ಅಲ್ಲ.

ದೋಷದರ್ಶನವು ಅಪರೀಕ್ಷಿತವೂ, ನಿರ್ದೋಷದರ್ಶನವು ಪರೀಕ್ಷಿತವೂ ಎನ್ನುವುದು ಯಾವಕಾರಣದಿಂದ ಎಂದರೆ –

**ಅವಿದ್ಧೋ ವಿದ್ಧವದ್ವಿಷ್ಣುರಜಾತೋ ಜಾತವನ್ಮೃಷಾ ।**

**ಅಬದ್ಧೋ ಬದ್ಧವಚ್ಚೈವ ದರ್ಶಯತ್ಯಮಿತದ್ಯುತಿಃ ॥ ೧೫೧ ॥**

**ಇತಿ ಪೈಂಗಿಶ್ರುತಿಶ್ಚೈವ ಪ್ರಾಹ ನಿರ್ದೋಷತಾಂ ಹರೇಃ ।**

ಅಪರಿಮಿತ ಕಾಂತಿಯುಳ್ಳ ವಿಷ್ಣುವು ಶಸ್ತ್ರಗಳಿಂದ ಹಿಂಸೆಗೊಳಗಾಗದಿದ್ದರೂ ಹಿಂಸೆ ಪಟ್ಟಂತೆಯೂ, ಜನ್ಮವಿಲ್ಲವಾದರೂ ಹುಟ್ಟಿದವನಂತೆಯೂ, ಬದ್ಧನಾಗದೇ ಇದ್ದರೂ ಬದ್ಧನಾದಂತೆಯೂ ಮಿಥ್ಯೆಯಾಗಿಯೇ ತನ್ನನ್ನು ತೋರಿಸುತ್ತಾನೆ. ಹೀಗೆ ಪೈಂಗಿಶ್ರುತಿಯೂ ಕೂಡ ಶ್ರೀಹರಿಗೆ ನಿರ್ದೋಷತ್ವವನ್ನೇ ಹೇಳುತ್ತದೆ.

**ಅಪರೀಕ್ಷಿತ ದೃಷ್ಟ್ಯೈವ ಸದೋಷೋ ದೃಶ್ಯತೇ ಹರಿಃ ॥ ೧೫೨ ॥**

**ಪರೀಕ್ಷಾದರ್ಶನೇ ನೈವ ದೋಷೋ ದೃಶ್ಯೋ ಹರೇಃ ಕ್ವಚಿತ್ ।**

**ಇತಿ ಪೈಂಗಿಶ್ರುತಿಶ್ಚಾಹ ಪ್ರಮಾಣಂ ಹಿ ಪರೀಕ್ಷಿತಮ್ ॥ ೧೫೩ ॥**

ಅಪರೀಕ್ಷಿತ ದೃಷ್ಟಿಯಿಂದ ಶ್ರೀಹರಿಯು ದೋಷವುಳ್ಳವನಾಗಿ ಕಾಣಲ್ಪಡುತ್ತಾನೆ. ಪರೀಕ್ಷಿತ ದರ್ಶನದಲ್ಲಿ ಶ್ರೀಹರಿಗೆ ಎಲ್ಲಿಯೂ ಸ್ವಲ್ಪವೂ ದೋಷವು ಕಂಡುಬರದು. ಹೀಗೆ ಪೈಂಗಿಶ್ರುತಿಯೂ ಕೂಡ ಹೇಳುತ್ತದೆ. ಇದರಿಂದ ಪರೀಕ್ಷಿತವಾದುದಕ್ಕೇ ಪ್ರಾಮಾಣ್ಯ ನಿಶ್ಚಯವು ಎಂದು ಸಿದ್ಧವಾಗುವುದು.

ಈ ವಿಷಯದಲ್ಲಿ ಕೆಲವರು (ಪ್ರಾಭಾಕರರು) ಹೇಳುವಂತೆ ಜ್ಞಾನಗಳ ಪ್ರಾಮಾಣ್ಯವು ಪರೀಕ್ಷಾಧೀನವಲ್ಲ, ಅದು ಸ್ವತಃಸಿದ್ಧವಾದುದು. ಎಲ್ಲ ಜ್ಞಾನವೂ ಕೂಡ ಸ್ವಪ್ರಕಾಶ ಹಾಗೂ ಯಥಾರ್ಥವಾದುದು ಆದ್ದರಿಂದ ಜ್ಞಾನದ ಪ್ರಾಮಾಣ್ಯ ನಿಶ್ಚಯಕ್ಕೆ ಪರೀಕ್ಷೆ ಬೇಕಾಗಿಲ್ಲ. ಇನ್ನೂ ಕೆಲವರು (ಭಾಟ್ಟರು) ಹೇಳುವಂತೆ ಜ್ಞಾನ

ಮತ್ತು ಅದರ ಪ್ರಾಮಾಣ್ಯವೂ ಕೂಡ ಅನುಮಾನದಿಂದಲೇ ಗ್ರಹಿಸಲ್ಪಡುತ್ತದೆ. ಮತ್ತೆ ಕೆಲವರು (ಸಿದ್ಧಾಂತಿಗಳು) ಹೇಳುವ ಪ್ರಕಾರ ಜ್ಞಾನವೂ, ಅದರ ಪ್ರಾಮಾಣ್ಯವೂ ಸಾಕ್ಷಿಯಿಂದಲೇ ತಿಳಿಯಲ್ಪಡುತ್ತದೆ. ಪ್ರಾಮಾಣ್ಯನಿಶ್ಚಯವು ಪರೀಕ್ಷಾಧೀನವೆಂದು ಒಪ್ಪಿದರೆ ಅನವಸ್ಥೆ ಬರುತ್ತದೆ ಎಂದು ಆಶಂಕಿಸಿದರೆ ಅದನ್ನು ಪರಿಹರಿಸುತ್ತಾರೆ –

**ನ ಪರೀಕ್ಷಾಽನವಸ್ಥಾ ಸ್ಯಾತ್ಸಾಕ್ಷಿಸಿದ್ಧೇ ತ್ವಸಂಶಯಾತ್ ।**

**ಮಾನಸೇ ದರ್ಶನೇ ದೋಷಾಃ ಸ್ಯುರ್ನ ವೈ ಸಾಕ್ಷಿದರ್ಶನೇ ॥ ೧೫೪ ॥**

ಪ್ರಾಮಾಣ್ಯ ಸ್ವೀಕಾರದಲ್ಲಿ ಪರೀಕ್ಷಾಧೀನತ್ವವನ್ನು ಅಂಗೀಕರಿಸಿದರೂ ಅನವಸ್ಥೆ ಬರುವುದಿಲ್ಲ. ಏಕೆಂದರೆ ಸಾಕ್ಷಿಸಿದ್ಧವಾದ ಸುಖದುಃಖಾದಿಗಳಲ್ಲಿ ಸಂದೇಹವು ಇರುವುದಿಲ್ಲ. ಜ್ಞಾನವು ಎರಡು ವಿಧ. ಅಂತಃಕರಣ ಪರಿಣಾಮರೂಪವಾದುದು ಮತ್ತು ಸಾಕ್ಷಿರೂಪವಾದುದು ಎಂದು. ಸಂಶಯವಾದರೂ ಮನೋವೃತ್ತಿಗೆ ಸಂಬಂಧಿಸಿದ ವಿಷಯವಾದ ಪಾನೀಯಾದಿಗಳಲ್ಲಿ ಬರುವುದು. ಆಗ ಪ್ರಾಮಾಣ್ಯ ಗ್ರಹಣಕ್ಕೆ ಪರೀಕ್ಷೆಯು ಬೇಕಾಗುವುದು. ಆದರೆ ಸಾಕ್ಷಿಸಿದ್ಧವಾದ ಸುಖಾದಿಗಳಲ್ಲಿ ಸಂಶಯ ಬರುವುದಿಲ್ಲ. ಅಲ್ಲಿ ಪುನಃ ಪರೀಕ್ಷಾದಿಗಳು ಬೇಕಾಗಿಲ್ಲ. ಮನಃಪರಿಣತಿ ರೂಪವಾದ ದರ್ಶನದಲ್ಲಿ ದೋಷಗಳು ಸಂಭವನೀಯವೇ ಆಗಿವೆ. ಆದರೆ ಸಾಕ್ಷಿ ದರ್ಶನದಲ್ಲಿ ದೋಷಗಳೇ ಇಲ್ಲ.

ಮಾನಸಿಕ ದರ್ಶನದಲ್ಲಿ ದೋಷಗಳು ಸಂಭಾವಿತವು ಎನ್ನುವುದು ಸ್ಪಷ್ಟವೇ ಆಗಿದೆ. ಸಾಕ್ಷಿದರ್ಶನದಲ್ಲಿ ದೋಷಗಳ ಸಂಭವವಿಲ್ಲವೆನ್ನುವುದು ಹೇಗೆ ಎಂದರೆ –

**ಸುದೃಢೋ ನಿರ್ಣಯೋ ಯತ್ರ ಜ್ಞೇಯಂ ತತ್ಸಾಕ್ಷಿದರ್ಶನಮ್ ।**

**ಇಚ್ಛಾ ಜ್ಞಾನಂ ಸುಖಂ ದುಃಖಂ ಭಯಾಭಯಕೃಪಾದಯಃ ॥ ೧೫೫ ॥**

**ಸಾಕ್ಷಿಸಿದ್ಧಾಃ ನ ಕಶ್ಚಿದ್ಧಿ ತತ್ರ ಸಂಶಯವಾನ್ ಕ್ವಚಿತ್ ।**

**ಯತ್ಕ್ವಚಿದ್ವ್ಯಭಿಚಾರಿ ಸ್ಯಾದ್ದರ್ಶನಂ ಮಾನಸಂ ಹಿ ತತ್ ॥ ೧೫೬ ॥**

ಯಾವುದು ಯಾವಾಗಲೂ ಸುದೃಢವಾದ ಅಂದರೆ ಬಾಧರಹಿತವಾದ ನಿಶ್ಚಯಾತ್ಮಕ ಜ್ಞಾನವೋ ಅದು ಸಾಕ್ಷಿದರ್ಶನವೆಂದು ತಿಳಿಯತಕ್ಕದ್ದು. ಇಚ್ಛೆ, ಜ್ಞಾನ, ಸುಖ, ದುಃಖ, ಭಯ, ಅಭಯ, ಅನುಕಂಪ ಇತ್ಯಾದಿಗಳು ಸಾಕ್ಷಿಸಿದ್ಧವು. ಅವುಗಳ ವಿಷಯದಲ್ಲಿ ಯಾವನೂ ಎಲ್ಲಿಯೂ ಸಂಶಯವನ್ನು ಹೊಂದುವುದಿಲ್ಲ. ಯಾವ ದರ್ಶನವು ಶುಕ್ತಿರಜತಾದಿ ವಿಷಯದಲ್ಲಿ ಬಾಧಿತವಾಗುವುದೋ ಅದು ಮನಃ ಪರಿಣಾಮ ರೂಪವಾದ ವೃತ್ತಿಜ್ಞಾನವೇ. ಮಾನಸದರ್ಶನಕ್ಕೆ ಬಾಧ್ಯತ್ವವನ್ನು ಹೇಳಿದರೆ ಅನಿಷ್ಟವಿಲ್ಲ. ಸಾಕ್ಷಿಗಾದರೂ ಬಾಧ್ಯತ್ವವನ್ನು ಅಂಗೀಕರಿಸಿದರೆ ಎಲ್ಲ ವ್ಯವಹಾರಗಳಿಗೂ ಲೋಪ ಬರುವುದರಿಂದ ಅನಿಷ್ಟವು.

ಮಾನಸದರ್ಶನಕ್ಕೆ ದೋಷಬಾಧವು ಸಂಭವಿಸುವುದಾದರೆ ಎಂಥಹ ದರ್ಶನಕ್ಕೆ

ಪ್ರಾಮಾಣ್ಯವು ಎಂದರೆ –

**ಮನಶ್ಚಕ್ಷುರ್ದರ್ಶನಾದೇರಪಿ ಯತ್ರೈವ ಸಾಕ್ಷಿಣಾ ।**

**ಪ್ರಾಮಾಣ್ಯ ಸುಗೃಹೀತಂ ಸ್ಯಾತ್ತತ್ಪರೀಕ್ಷಿತದರ್ಶನಮ್ ॥ ೧೫೭ ॥**

ಮನಸ್ಸು, ಕಣ್ಣು, ಕಿವಿ ಇತ್ಯಾದಿ ಇಂದ್ರಿಯಗಳಿಂದ ಉಂಟಾಗತಕ್ಕ ಸಾಕ್ಷಾತ್ಕಾರ ಮುಂತಾದ ಪ್ರತ್ಯಕ್ಷ ಅನುಮಾನ ಹಾಗೂ ಆಗಮ ಜನ್ಯ ಜ್ಞಾನಗಳ ಮಧ್ಯದಲ್ಲಿ ಯಾವುದರಲ್ಲಿ ಸಾಕ್ಷಿಯಿಂದ ಪ್ರಾಮಾಣ್ಯವು ಪರೀಕ್ಷೆಯಿಂದ ನಿಶ್ಚಿತವಾಗಿದೆಯೋ ಆ ಜ್ಞಾನವೇ ಪರೀಕ್ಷಿತವಾದ ಸಾಕ್ಷಾತ್ಕಾರವು ಅಂದರೆ ಪ್ರಮಾಣವು.

**ನ ಜ್ಞಾನದೃಷ್ಟಿಮಾತ್ರೇಣ ಪ್ರಾಮಾಣ್ಯಂ ತಸ್ಯ ದೃಶ್ಯತೇ ।**

**ನಿಯಮೇನ ಸುಖಾದ್ಯೇಷು ಪ್ರಾಮಾಣ್ಯಂ ಸಾಕ್ಷಿಗೋಚರಮ್ ॥ ೧೫೮ ॥**

ಜ್ಞಾನದ ಸಾಕ್ಷಾತ್ಕಾರ ಮಾತ್ರದಿಂದ ಆ ಜ್ಞಾನಕ್ಕೆ ಪ್ರಾಮಾಣ್ಯವು ಕಂಡು ಬರುದಿಲ್ಲ. ಸಾಕ್ಷಿಯಿಂದ ಗೃಹೀತವಾದರೆ ಮಾತ್ರ ಅದಕ್ಕೆ ಪ್ರಾಮಾಣ್ಯವು. ಸುಖಾದಿ ವಿಷಯದಲ್ಲಿ ಸಾಕ್ಷಿಗೋಚರವಾದ ಪ್ರಾಮಾಣ್ಯವು ನಿಯಮೇನ ಕಾಣಲ್ಪಡುತ್ತದೆ.

ಪ್ರತ್ಯಕ್ಷಾದಿ ಜ್ಞಾನದ ಪ್ರಾಮಾಣ್ಯದ ವಿಷಯದಲ್ಲಿ ಪರೀಕ್ಷಾಪೇಕ್ಷೆಯಿರುವಂತೆ ಸಾಕ್ಷಿಗೃಹೀತವಾದ ಪ್ರಾಮಾಣ್ಯಕ್ಕೂ ಪರೀಕ್ಷಾಪೇಕ್ಷೆಯಿದ್ದರೆ ಅನವಸ್ಥೆಯಾಗುವುದು ಎಂದು ಆಶಂಕಿಸಿದರೆ –

**ಸ್ವಪ್ರಾಮಾಣ್ಯಂ ಸದಾ ಸಾಕ್ಷೀ ಪಶ್ಯತ್ಯೇವ ಸುನಿಶ್ಚಯಾತ್ ।**

**ಜ್ಞಾನಸ್ಯ ಗ್ರಾಹಕೇಣೈವ ಸಾಕ್ಷಿಣಾ ಮಾನತಾಮಿತೇಃ ॥ ೧೫೯ ॥**

**ದೋಷಾಭಾವೇ ಪ್ರಮಾಣತ್ವಂ ದೋಷಾಭಾವಸ್ಯ ಸಾಕ್ಷಿಣಾ ।**

**ನಿಶ್ಚಿತತ್ವಂ ಕ್ವಚಿಚ್ಚೈವ ಸ್ವತಃ ಪ್ರಾಮಾಣ್ಯಮಿಷ್ಯತೇ ॥ ೧೬೦ ॥**

**ಅತೋ ನ ಸರ್ವಮಾನಾನಾಂ ಪ್ರಾಮಾಣ್ಯಂ ನಿಶ್ಚಿತಂ ಭವೇತ್ ।**

**ಸಾಕ್ಷಿಣಾ ನಿಶ್ಚಿತಂ ಯತ್ರ ತತ್ಪ್ರಾಮಾಣ್ಯಂ ಸ್ವಲಕ್ಷಣಮ್ ॥ ೧೬೧ ॥**

ಸಾಕ್ಷಿಯು ತನ್ನ ಪ್ರಾಮಾಣ್ಯವನ್ನು ಯಾವಾಗಲೂ ಸುನಿಶ್ಚಿತವಾಗಿಯೇ ಅಂದರೆ ಪರೀಕ್ಷಾನಪೇಕ್ಷವಾಗಿಯೇ ವಿಷಯೀಕರಿಸುತ್ತದೆ. ಜ್ಞಾನಗ್ರಾಹಕವಾದ ಸಾಕ್ಷಿಯೇ ಆ ಜ್ಞಾನದ ಪ್ರಾಮಾಣ್ಯವನ್ನೂ ಗ್ರಹಿಸುತ್ತದೆ. ಜ್ಞಾನದಂತೆಯೇ ಜ್ಞಾನಪ್ರಾಮಾಣ್ಯವೂ ಸಾಕ್ಷಿವೇದ್ಯವೇ ಆಗಿದೆಯೆಂದು ತಾತ್ಪರ್ಯ. ಮತ್ತೆ ಸಾಕ್ಷಿಗೆ ಪರೀಕ್ಷಾಪೇಕ್ಷೆಯನ್ನು ಏಕೆ ಅಂಗೀಕರಿಸಿದ್ದು ಎಂದರೆ, ಜ್ಞಾನದಲ್ಲಿ ಕರಣದೋಷಗಳು ಇಲ್ಲವೆಂದು ನಿಶ್ಚಯಿಸಲು ಸಾಕ್ಷಿಗೆ ಪರೀಕ್ಷಾಪೇಕ್ಷತ್ವವು. ಪರೀಕ್ಷೆಯಿಂದ ದೋಷಾಭಾವವು

ನಿಶ್ಚಯವಾದಾಗ ಸಾಕ್ಷಿಯು ಆ ಜ್ಞಾನವನ್ನು ಪ್ರಮಾಣವೆಂದು ಸ್ವೀಕರಿಸುತ್ತದೆ. ದೋಷಾಭಾವದ ನಿಶ್ಚಯಕ್ಕಾಗಿ ಪರೀಕ್ಷೆಯೇ ಹೊರತು ಪ್ರಾಮಾಣ್ಯ ಗ್ರಹಣಕ್ಕಾಗಿ ಅಲ್ಲ. ಸಾಕ್ಷಿಯಿಂದ ಸ್ವತಃ ಪ್ರಾಮಾಣ್ಯವು ಅಂಗೀಕರಿಸಲ್ಪಡುತ್ತದೆ. ಆದ್ದರಿಂದ ಎಲ್ಲ ಜ್ಞಾನಗಳಿಗೆ ಮೊದಲಿಗೇ ಪ್ರಾಮಾಣ್ಯ ನಿಶ್ಚಯವು ಆಗುವುದಿಲ್ಲ. ಯಾವಾಗ ಪರೀಕ್ಷಾ ಸಹಕೃತವಾದ ಸಾಕ್ಷಿಯಿಂದ ಪ್ರಾಮಾಣ್ಯವು ನಿಶ್ಚಿತವಾಗುವುದೋ ಆವಾಗಲೇ ಪ್ರಾಮಾಣ್ಯದ ಸ್ವರೂಪವು ಸಿದ್ಧವಾಗುತ್ತದೆ.

ಮೇಲೆ ಹೇಳಿದ ಅರ್ಥವನ್ನು ಬುದ್ಧ್ಯಾರೋಢಕ್ಕಾಗಿ ಸಂಗ್ರಹವಾಗಿ ಹೇಳುತ್ತಾರೆ–

**ನ ಹಿ ಕಶ್ಚಿತ್ಸುಖಾದ್ಯೇಷು ಸಂಶಯಂ ಕುರುತೇ ಜನಃ ।**

**ನ ಚೈವಾಖಿಲಮಾನಾನಿ ನಿಶ್ಚಿನೋತ್ಯಖಿಲೋ ಜನಃ ।। ೧೬೨ ।।**

**ತಸ್ಮಾದನುಭವಾರೂಢಂ ಕಿಮರ್ಥಮಪಲಪ್ಯತೇ ।**

ಸುಖಾದಿಗಳಲ್ಲಿ ಯಾವ ಜನರೂ ಸಂದೇಹವನ್ನು ಮಾಡುವುದಿಲ್ಲ. ಎಲ್ಲ ಜನರೂ ಎಲ್ಲ ವೃತ್ತಿಜ್ಞಾನಗಳನ್ನೂ ದರ್ಶನದಿಂದಲೇ ಪ್ರಮಾಣವೆಂದು ನಿಶ್ಚಯ ಮಾಡುತ್ತಾರೆ. ಆದಕಾರಣ ಸಾಕ್ಷಿಪ್ರಮಾಣ್ಯವು ಪರೀಕ್ಷಾನಪೇಕ್ಷಿತ ಸಾಕ್ಷಿಯಿಂದಲೇ ಗ್ರಹಿಸಲ್ಪಡುತ್ತದೆ. ವೃತ್ತಿಜ್ಞಾನಗಳ ಪ್ರಾಮಾಣ್ಯವಾದರೂ ಪರೀಕ್ಷಾಪೇಕ್ಷಿತವಾದ ಸಾಕ್ಷಿಯಿಂದ ಎಂದು ಅನುಭವಾರೂಢವಾದ ಪ್ರಮೇಯವು ಯಾವಕಾರಣಕ್ಕಾಗಿ ಅಪಲಾಪ ಮಾಡಲ್ಪಡುತ್ತದೆ. ನಿರ್ನಿಮಿತ್ತವಾಗಿ ಅಪಲಾಪ ಮಾಡುವುದಕ್ಕೆ ಅಶಕ್ಯವು.

ನ ಪರೀಕ್ಷಾऽನವಸ್ಥಾ ಸ್ಯಾತ್ ಎಂದು ಹೇಳಿದ್ದನ್ನು ಉಪಸಂಹಾರ ಮಾಡುತ್ತಾರೆ.

**ದೋಷಾಭಾವಾದಿಕಂ ಚೈವ ಸಾಕ್ಷೀ ಸಮ್ಯಕ್ ಪ್ರಪಶ್ಯತಿ ।। ೧೬೩ ।।**

**ತತ್ಪರೀಕ್ಷಿತಮಾನೇನ ನ ದೋಷೋ ವಿಷ್ಣವಿ ಕ್ವಚಿತ್ ।**

**ಅಪರೀಕ್ಷಿತದೃಷ್ಟಿಸ್ತು ಕಸ್ಮಿನ್ನರ್ಥೇ ನ ವಿದ್ಯತೇ ।। ೧೬೪ ।।**

ತನಗೂ ಪರೀಕ್ಷೆಗೂ ಕೂಡ ದೋಷಾಭಾವವನ್ನೂ ಪ್ರಾಮಾಣ್ಯವನ್ನೂ ಕೂಡ ಸ್ವಯಂ ಸಾಕ್ಷಿಯೇ ಪರೀಕ್ಷಾಪೇಕ್ಷೆಯಿಲ್ಲದೇನೆ ಚೆನ್ನಾಗಿ ನೋಡುತ್ತದೆ. ಆದಕಾರಣ ಪರೀಕ್ಷಿತವೇ ಆದ ಪ್ರಮಾಣದಿಂದ ಭಗವಂತನಲ್ಲಿ ಎಲ್ಲಿಯೂ ಕೂಡ ದೋಷವು ಇಲ್ಲವೆಂದು ಸಿದ್ಧವಾಗುತ್ತದೆ. ಅಪರೀಕ್ಷಿತದೃಷ್ಟಿಯಾದರೂ ಯಾವ ಅರ್ಥದಲ್ಲಿಯೂ ಇರುವುದಿಲ್ಲ. ಅಪರೀಕ್ಷಿತವಾದುದು ದೋಷದರ್ಶನವಾದ್ದರಿಂದ ಅಪ್ರಮಾಣವು.

ಈ ಹಿಂದೆ ಅಂದರೆ ಪೃಥಗಧಿಕರಣದಲ್ಲಿ, ಅನುಭೂತಿವಿರೋಧೇನ ಕಥಮೇಕತ್ವ ಮುಚ್ಯತೇ ಇತ್ಯಾದಿ ವಚನದಿಂದ, ಪ್ರತ್ಯಕ್ಷಕ್ಕೆ ವಿರುದ್ಧವಾದುದರಿಂದ ತತ್ತ್ವಮಸಿ ಇತ್ಯಾದಿ ಆಗಮಕ್ಕೆ ಆಪಾತವಾಗಿ ತೋರುವ ಏಕತ್ವಾರ್ಥದಲ್ಲಿ ಪ್ರಮಾಣವಿಲ್ಲವೆಂದು

ಹೇಳಲ್ಪಟ್ಟಿದೆ. ಅದಕ್ಕೆ ವಿಪರೀತವಾಗಿ ಅಂದರೆ ಪ್ರತ್ಯಕ್ಷಕ್ಕೆ ಆಗಮ ವಿರೋಧದಿಂದ ಅಪ್ರಾಮಾಣ್ಯವು ಹೇಗೆ ಹೇಳಲ್ಪಡುತ್ತದೆ ಎಂಬ ಆಶಂಕೆಯನ್ನು ಪರಿಹರಿಸುತ್ತಾರೆ –

**ತತ್ರಪ್ರತ್ಯಕ್ಷವಿರುದ್ಧಾರ್ಥೇ ನಾಗಮಸ್ಯಾಪಿ ಮಾನತಾ ।**

**ಉಪಜೀವ್ಯಮಕ್ಷಜಂ ಯತ್ರ ತದನ್ಯತ್ರ ವಿಪರ್ಯಯಃ ।। ೧೬೫ ।।**

ಜೀವಬ್ರಹ್ಮರಿಗೆ ಅಭೇದವಿಲ್ಲವೆನ್ನುವುದು ಪ್ರತ್ಯಕ್ಷಕ್ಕೆ ಗೋಚರವಾದ ವಿಷಯವು. ತತ್ತ್ವಮಸಿ ಇತ್ಯಾದಿ ಜೀವಬ್ರಹ್ಮರಿಗೆ ಏಕ್ಯವನ್ನು ಹೇಳುವಂತೆ ತೋರುವ ಆಗಮವು ಉಪಜೀವ್ಯವಾದ ಪ್ರತ್ಯಕ್ಷಕ್ಕೆ ವಿರುದ್ಧವಾದ್ದರಿಂದ ಪ್ರಮಾಣವಾಗುವುದಿಲ್ಲ. ಇದಕ್ಕೆ ವಿರುದ್ಧವಾಗಿ ಯಾವಾಗ ಆಗಮವು ಪ್ರತ್ಯಕ್ಷಕ್ಕೆ ಉಪಜೀವ್ಯವಾಗಿರುವುದೋ ಆಗ ಆಗಮಕ್ಕೆ ವಿರುದ್ಧಾರ್ಥದಲ್ಲಿ ಪ್ರತ್ಯಕ್ಷಕ್ಕೆ ಪ್ರಾಮಾಣ್ಯವಿರುವುದಿಲ್ಲ.

**ಲೌಕಿಕೇ ವ್ಯವಹಾರೇಽತ್ರ ಪ್ರತ್ಯಕ್ಷಸ್ಯೋಪಜೀವ್ಯತಾ ।**

**ಅವತಾರಾದಿದೃಷ್ಟೌ ಸ್ಯಾದಾಗಮಸ್ಯೋಪಜೀವ್ಯತಾ ।। ೧೬೬ ।।**

ಲೌಕಿಕ ವ್ಯವಹಾರದಲ್ಲಿ ಅಂದರೆ ಪ್ರತ್ಯಕ್ಷಸಿದ್ಧವಾದ ಜೀವರ ವಿಷಯದಲ್ಲಿ, ಪ್ರತ್ಯಕ್ಷಕ್ಕೆ ಉಪಜೀವ್ಯತ್ವವಿರುವುದರಿಂದ, ಜೀವಬ್ರಹ್ಮೈಕ್ಯವನ್ನು ಬೋಧಿಸುವಂತೆ ತೋರುವ ತತ್ತ್ವಮಸಿ ಇತ್ಯಾದಿ ಆಗಮವು ಪ್ರತ್ಯಕ್ಷಕ್ಕೆ ವಿರುದ್ಧವಾದ ಪ್ರಯುಕ್ತ ಅಪ್ರಮಾಣವಾಗುವುದು. ಅಲೌಕಿಕವಾದ ವಿಷ್ಣುವಿನ ಅವತಾರಗಳಿಗೆ ಸಂಬಂಧಿಸಿದ ವ್ಯವಹಾರದಲ್ಲಿ, ಪ್ರತ್ಯಕ್ಷದಿಂದ ದೋಷವು ಕಂಡುಬಂದರೂ ಕೂಡ, ಅದು ಪ್ರಮಾಣವಾಗಲಾರದು. ಏಕೆಂದರೆ ಆ ಪ್ರತ್ಯಕ್ಷಾದಿಗಳನ್ನು ಕುರಿತು ಆಗಮಕ್ಕೆ ಉಪಜೀವ್ಯತ್ವವಿದೆ. ಉಪಜೀವ್ಯವು ಉಪಜೀವಕಕ್ಕಿಂತ ಪ್ರಬಲವು. ವಿಷ್ಣುವಿನ ಅವತಾರಾದಿ ವಿಷಯದಲ್ಲಿ ಆಗಮವೇ ಉಪಜೀವ್ಯವಾದ್ದರಿಂದ, ಪ್ರತ್ಯಕ್ಷಕ್ಕೆ ವಿರುದ್ಧವಾದ ಆಗಮವೇ ಅಪ್ರಮಾಣ ಎಂದು ಹೇಳುವುದು ಮೂರ್ಖರ ವಾದವು.

ಪ್ರತ್ಯಕ್ಷವನ್ನು ಕುರಿತು ಆಗಮಕ್ಕೆ ಹೇಗೆ ಉಪಜೀವ್ಯತ್ವವು ಎಂದರೆ –

**ಆಗಮೇನ ಹಿ ವಿಷ್ಣುತ್ವಂ ಜ್ಞಾತ್ವಾ ದೋಷೋಽತ್ರ ಕಲ್ಪ್ಯತೇ ।**

**ನ ಚೇತ್ಸ್ಯಾದ್ದೋಷವಾನನ್ಯಃ ಶಾಸ್ತ್ರಸಿದ್ಧಂ ಹಿ ಲಕ್ಷಣಮ್ ।। ೧೬೭ ।।**

ಆಗಮದಿಂದಲೇ ರಾಮಕೃಷ್ಣಾದಿ ಅವತಾರಗಳಿಗೆ ವಿಷ್ಣುತತ್ವವನ್ನು ತಿಳಿದು ಆ ವಿಷ್ಣುವಿನಲ್ಲಿ ಪ್ರತ್ಯಕ್ಷದಿಂದ ದೋಷವು ಕಲ್ಪಿಸಲ್ಪಡುತ್ತದೆ. ವಿಷ್ಣುವಿನಲ್ಲಿ ದೋಷತ್ವವು ಕೇವಲ ಕಲ್ಪನೆಯೇ ಹೊರತು ಯಥಾರ್ಥವಾದ ಜ್ಞಾನವಲ್ಲ ಎಂದು ತಿಳಿಸಲು ಇಲ್ಲಿ ಕಲ್ಪ್ಯತೇ ಎಂಬ ಶಬ್ದ ಪ್ರಯೋಗಮಾಡಲಾಗಿದೆ. ಆಗಮಕ್ಕೆ ಉಪಜೀವ್ಯತ್ವವನ್ನು ಒಪ್ಪದಿದ್ದ ಪಕ್ಷದಲ್ಲಿ, ಆಗ ರಾಮಕೃಷ್ಣಾದಿಗಳು ವಿಷ್ಣುವಿನ ಅವತಾರ ರೂಪಗಳೆಂದು ತಿಳಿಯಲ್ಪಡುವುದಿಲ್ಲ. ಆಗ ರಾಮಕೃಷ್ಣಾದಿಗಳಲ್ಲಿ ದೋಷವಿದೆಯೆಂದು ಪ್ರತ್ಯಕ್ಷದಿಂದ ಜ್ಞಾತವಾದಲ್ಲಿ, ವಿಷ್ಣುವಿನಿಂದ ಇತರರು ದೋಷವುಳ್ಳವರೆಂದು ಸಿದ್ಧವಾಗುವುದು.

ವಿಷ್ಣುವು ದೋಷವುಳ್ಳವನೆಂದು ಜ್ಞಾತವಾಗುವುದಿಲ್ಲ. ಹಾಗಿದ್ದರೂ ಕೂಡ ಆಗಮಕ್ಕೆ ಉಪಜೀವ್ಯತ್ವವಿಲ್ಲ. ಏಕೆಂದರೆ ಶ್ರೀವತ್ಸ ಕೌಸ್ತುಭಾದಿ ಲಕ್ಷಣದಿಂದ ರಾಮಕೃಷ್ಣಾದಿ ರೂಪಗಳಲ್ಲಿ ವಿಷ್ಣುತ್ವವನ್ನು ಅನುಮೇಯಿಸಿಕೊಂಡು ವಿಷ್ಣುವು ದೋಷವುಳ್ಳವನೆಂದು ಪ್ರತ್ಯಕ್ಷದಿಂದ ತಿಳಿಯಲ್ಪಡುತ್ತದೆ ಎಂದರೆ; ಶ್ರೀವತ್ಸಾದಿ ಲಕ್ಷಣವು ವಿಷ್ಣುತ್ವದಿಂದ ವ್ಯಾಪ್ತವಾಗಿದೆ ಎನ್ನುವುದೂ ಕೂಡ ಶಾಸ್ತ್ರದಿಂದಲೇ ಸಿದ್ಧವಾಗಿದೆ. ಆದ್ದರಿಂದ ವಿಷ್ಣುತ್ವಾದಿ ಅಲೌಕಿಕ ವಿಷಯದಲ್ಲಿ ಆಗಮಕ್ಕೇ ಉಪಜೀವ್ಯತ್ವವೆಂದು ತೀರ್ಮಾನ.

ಹಾಗಾದರೆ ರಾಮಕೃಷ್ಣಾದಿಗಳಲ್ಲಿ ವಿಷ್ಣುತ್ವವು ಪ್ರತ್ಯಕ್ಷದಿಂದ ಜ್ಞಾತವಾಗದಿದ್ದರೆ, ವಿಷ್ಣುವಿನಿಂದ ಅನ್ಯನು ದೋಷವುಳ್ಳವನು ಎಂಬುದಾದರೂ ಪ್ರತ್ಯಕ್ಷದಿಂದ ಹೇಗೆ ಸಿದ್ಧಿಸುತ್ತದೆ? ಏಕೆಂದರೆ ವಿಷ್ಣುತ್ವದಂತೆ ವಿಷ್ಣುವಿನಿಂದ ಅನ್ಯತ್ವವೂ ಕೂಡ ರಾಮಕೃಷ್ಣ ಇತ್ಯಾದಿಗಳಲ್ಲಿ ಅಜ್ಞಾತವು ಎಂದರೆ –

**ಕಸ್ಯಚಿದ್ದೋಷವತ್ತ್ವಂ ಸ್ಯಾದಿತಿ ಮಾತ್ರೇಽಕ್ಷಜಂ ಭವೇತ್ ।**

**ನ ವಿಷ್ಣೋರ್ದೋಷವತ್ತ್ವೇ ಹಿ ಪ್ರತ್ಯಕ್ಷಂ ವರ್ತತೇ ಸ್ವತಃ ॥ ೧೬೪ ॥**

ಯಾವುದೋ ಒಬ್ಬನಿಗೆ ದೋಷವತ್ವವು ಆಗುವುದು ಎಂದು ಇಷ್ಟು ಮಾತ್ರ ವಿಷಯದಲ್ಲಿ ಪ್ರತ್ಯಕ್ಷವು ಆಗುವುದು. ವಿಷ್ಣುವು ದೋಷವುಳ್ಳವನು ಎಂಬ ಜ್ಞಾನವು ಹುಟ್ಟುವುದೇ ಇಲ್ಲ ಎಂದು ತಾತ್ಪರ್ಯ. ವಿಷ್ಣುವು ದೋಷವುಳ್ಳವನು ಎಂಬ ವಿಷಯದಲ್ಲಿ ಸ್ವಯಂ (ಅಂದರೆ ಇನ್ನೊಂದನ್ನು ಉಪಜೀವಿಸದಿರುವ) ಪ್ರತ್ಯಕ್ಷವು ಇರುವುದಿಲ್ಲ.

ಕಾರಣಾಂತರದಿಂದಲೂ ದೋಷಗ್ರಾಹಕ ಪ್ರತ್ಯಕ್ಷವು ಅಪ್ರಮಾಣವೆಂದು ತೋರಿಸುತ್ತಾರೆ –

**ಕೇಚಿತ್ಪಶ್ಯಂತಿ ದೋಷಾನಿತ್ಯತ್ರಾಪಿ ಸ್ಯಾನ್ನ ಅಕ್ಷಜಮ್ ।**

**ಪೌರಾಣಂ ವಾಕ್ಯಮೇವಾತ್ರ ತಚ್ಛ್ರುತ್ಯೈವ ವಿರುದ್ಧ್ಯತೇ ॥ ೧೬೯ ॥**

ಕೆಲವರು ಭಗವದ್ರೂಪಗಳಲ್ಲಿ ದೋಷಗಳನ್ನು ನೋಡುತ್ತಾರೆ ಎನ್ನುವಲ್ಲಿಯೂ ಪ್ರತ್ಯಕ್ಷವಾಗಲೀ ಅನುಮಾನವಾಗಲೀ ಪ್ರಮಾಣವಾಗಲಾರದು. ಅಪೌರುಷೇಯ ಆಗಮವೂ ಇರುವುದಿಲ್ಲ. ಆದ್ದರಿಂದ ಭಗವಂತನ ರೂಪಗಳಲ್ಲಿ ದೋಷಪ್ರತೀತಿ ಸಮರ್ಥನೆಗೆ ಪೌರುಷೇಯವಾದ ಪುರಾಣವಾಕ್ಯವನ್ನೇ ಹೇಳಬೇಕು. ಅಂಥಹ ಪುರಾಣವಾಕ್ಯವು ಶ್ರುತಿಯಿಂದಲೇ ವಿರೋಧಿಸಲ್ಪಡುತ್ತದೆ.

ಪುರಾಣವಾಕ್ಯಕ್ಕೆ ಶ್ರುತಿವಿರುದ್ಧತ್ವವಿದ್ದರೆ ದೋಷವೇನು ಎಂದರೆ –

**ಪುರಾಣಸ್ಯೋಪಜೀವ್ಯಶ್ಚ ವೇದ ಏವ ನ ಚಾಪರಃ ।**

**ತದ್ವಿರೋಧೇ ಕಥಂ ಮಾನಂ ತತ್ತತ್ರ ಚ ಭವಿಷ್ಯತಿ ॥ ೧೭೦ ॥**

ಪುರಾಣಕ್ಕೆ ಉಪಜೀವ್ಯವು ವೇದವೇ. ಅಂದರೆ ಪುರಾಣವಾಕ್ಯಕ್ಕೆ ವೇದವೇ ಮೂಲವು. ಪೌರುಷೇಯ ಗ್ರಂಥವಲ್ಲ. ಪ್ರತ್ಯಕ್ಷಾದಿಗಳೂ ಅಲ್ಲ. ಪೌರುಷೇಯ ಆಗಮವು ಪುರಾಣಕ್ಕೆ ಮೂಲವೆಂದು ಹೇಳಿದರೆ, ಅದಕ್ಕೂ ಕೂಡ ಮತ್ತೊಂದು ಪೌರುಷೇಯ ಮೂಲವನ್ನು ಅಪೇಕ್ಷಿಸಿದರೆ ಅದು ಅಂಧಪರಂಪರೆಯಾಗುವುದು. ಪ್ರತ್ಯಕ್ಷ ಅನುಮಾನಗಳು ಧರ್ಮಾದಿ ಅತೀಂದ್ರಿಯ ವಸ್ತುಗಳನ್ನು ವಿಷಯೀಕರಿಸಲು ಅಸಮರ್ಥವು. ಆದ್ದರಿಂದ ಪರಿಶೇಷದಿಂದ ವೇದವೇ ಪುರಾಣಕ್ಕೆ ಉಪಜೀವ್ಯವೆಂದು ಸಿದ್ಧವಾಗುವುದು. ಉಪಜೀವ್ಯಕ್ಕೆ ವಿರುದ್ಧವಾದ ಉಪಜೀವಕವು ಯಾವಾಗಲೂ ಅಪ್ರಮಾಣವೇ ಆಗುವುದು. ಆದಕಾರಣ ಉಪಜೀವ್ಯವಾದ ವೇದಕ್ಕೆ ವಿರುದ್ಧವಾದ ಪುರಾಣವಾಕ್ಯವು ಭಗವಂತನಲ್ಲಿ ದೋಷವತ್ವವನ್ನು ಹೇಳಿದ ಪಕ್ಷದಲ್ಲಿ ಅದು ಹೇಗೆ ತಾನೆ ಪ್ರಮಾಣವಾದೀತು?

ಅಪರೀಕ್ಷಿತವಾದ ಪ್ರತೀತಿಮಾತ್ರದಿಂದ ಪ್ರತ್ಯಕ್ಷತ್ವವನ್ನು ಪುರಾಣವಾಕ್ಯವು ತಿಳಿಸುತ್ತದೆ ಎನ್ನುವ ಪಕ್ಷವನ್ನು ದೂಷಿಸುತ್ತಾರೆ –

**ಅಪರೀಕ್ಷಿತದೃಷ್ಟಿಶ್ಚ ಕಥಮೇವಾಕ್ಷಜಂ ಭವೇತ್ ।**

**ಯದ್ಯೇವಂ ದೇವದತ್ತಾದಿಭ್ರಮಃ ಕಿಂ ನಾಕ್ಷಜಂ ಭವೇತ್ ॥ ೧೭೧ ॥**

ಅಪರೀಕ್ಷಿತ ದೃಷ್ಟಿಯಾದರೂ ಪ್ರತ್ಯಕ್ಷವು ಹೇಗೆ ತಾನೆ ಆಗುವುದು? ಅಂದರೆ ಅಂಥಹ ದೃಷ್ಟಿಯಿಂದ ಪ್ರತ್ಯಕ್ಷವನ್ನು ಪ್ರಮಾಣವಾಗಿ ಗ್ರಹಿಸಲು ಶಕ್ಯವಾಗದು. ಅಪರೀಕ್ಷಿತ ದೃಷ್ಟಿಯನ್ನು ಪ್ರತ್ಯಕ್ಷಪ್ರಮಾಣವೆಂದು ಹೇಳುವುದಾದರೆ, ಯಜ್ಞದತ್ತ ಶುಕ್ತ್ಯಾದಿಗಳಲ್ಲಿ ದೇವದತ್ತ ರಜತಾದಿಗಳ ಭ್ರಮೆಯೂ ಪ್ರತ್ಯಕ್ಷಮೂಲವಾದ ಪ್ರಮಾಣವೆಂದು ಏಕೆ ಆಗಬಾರದು? ಅಂಥಹ ಪ್ರತ್ಯಕ್ಷಕ್ಕೆ ಬಾಧವಿರುವ ಪ್ರಯಕ್ತ ಅದು ಪ್ರಮಾಣವಾಗಲಾರದು. ಭಗವಂತನಿಗೆ ಸದೋಷತ್ವವನ್ನು ಹೇಳುವ ಪುರಾಣ ವಾಕ್ಯಕ್ಕೆ 'ನಿರನಿಷ್ಟೋ ನಿರವದ್ಯಃ' ಇತ್ಯಾದಿ ವೇದವಾಕ್ಯದಿಂದ ಬಾಧವಿರುವ ಪ್ರಯುಕ್ತ ಅದು ಅಪ್ರಮಾಣವು.

ಹಾಗಾದರೆ ಉಪಜೀವ್ಯವಾದ ವೇದಕ್ಕೆ ವಿರುದ್ಧವಾದ್ದರಿಂದ ಉಪಜೀವಕಗಳಾದ ಪ್ರತ್ಯಕ್ಷ ಹಾಗೂ ಪುರಾಣವಾಕ್ಯಗಳು ಅಪ್ರಮಾಣವೆಂದು ಏನು ಹೇಳಲ್ಪಟ್ಟಿತೋ ಅದು ಸರಿಯಲ್ಲ. ಏಕೆಂದರೆ ಉಪಜೀವಕವು ಉಪಜೀವ್ಯವಿರೋಧದಿಂದ ಬಾಧಿತವು ಎಂಬ ನಿಯಮವಿಲ್ಲವೆಂದು ಹೇಳಿದರೆ –

**ಯಾವಚ್ಛಕ್ತಿಪರೀಕ್ಷಾಯಾಮುಪಜೀವ್ಯಸ್ಯಬಾಧನೇ ।**

**ದೋಷೋ ನಾಶೋಧಿತೇ ದೋಷ ಉಪಜೀವ್ಯತ್ವಮಸ್ಥಲಮ್ ॥ ೧೭೨ ॥**

ಶಕ್ತ್ಯನುಸಾರವಾಗಿ ಪರೀಕ್ಷೆಯಿಂದ ಪ್ರಮಾಣವೆಂದು ಪ್ರತೀತವಾಗುತ್ತಿರಲು, ಉಪಜೀವ್ಯಕ್ಕೆ ಉಪಜೀವಕದಿಂದ ಬಾಧವು ಮಾಡಲ್ಪಟ್ಟರೆ, ಆಗ ನಿಯಮಭಂಗ

ದೋಷವು ಬರುವುದೆಂಬುದು ನಮಗೂ ಅಭಿಮತವೇ. ಅಂದರೆ ಪರೀಕ್ಷೆಯಿಂದ ಅಪ್ರಮಾಣವೆಂದು ನಿಶ್ಚಿತವಾದುದಕ್ಕೆ ಉಪಜೀವಕದಿಂದ ಬಾಧ ಬಂದರೆ ಅದು ದೋಷವಲ್ಲ. ಪೂರ್ವೋತ್ತರಜ್ಞಾನಗಳಿಗೆ ಉಪಜೀವ್ಯತ್ವವೂ ಉಪಜೀವಕತ್ವವೂ ನಿಶ್ಚಯವಾಗಿದ್ದರೂ, ಪರೀಕ್ಷೆಯಿಂದ ಪ್ರಮಾಣವೆಂದು ನಿಶ್ಚಿತವಾದ ಉಪಜೀವ್ಯದ ವಿರೋಧದಿಂದ ಉಪಜೀವಕವು ಬಾಧಿತವಾಗುವುದೆಂಬ ನಿಯಮಕ್ಕೆ ಭಂಗವಿಲ್ಲ.

**ಭ್ರಮೇಽಪ್ಯಭ್ರಮಭಾಗೋಽಸ್ತಿ ತನ್ಮಾತ್ರಮುಪಜೀವ್ಯ ಹಿ ।**

**ಬಾಧಕಜ್ಞಾನವೃತ್ತಿಸ್ಸ್ಯಾತ್...................... ॥**

ಭ್ರಮೆಯಲ್ಲಿಯೂ ಕೂಡ ಅಭ್ರಮ ಭಾಗವು ಇರುವುದು. ಉದಾಹರಣೆಗೆ ಇದಂ ರಜತಂ ಎನ್ನುವುದು ಒಂದೇ ಜ್ಞಾನವಾದರೂ, ಅದರಲ್ಲಿ ವಿಷಯರೂಪವಾದ ಉಪಾಧಿಯ ನಿಮಿತ್ತದಿಂದ ಎರಡು ಭಾಗವು. ಪ್ರಕಾರಾಂಶದಲ್ಲಿ ಭ್ರಮತ್ವವಿದ್ದರೂ ಸ್ವರೂಪ ಅಥವಾ ಧರ್ಮ್ಯಂಶದಲ್ಲಿ ಅಭ್ರಮತ್ವವೇ. ಧರ್ಮ್ಯಂಶದಲ್ಲಿ ಯಾವತ್ತೂ ಬಾಧವಿರುವುದಿಲ್ಲ. ಕೇವಲ ಅಭ್ರಮ ಭಾಗವನ್ನು ಉಪಜೀವಿಸಿಕೊಂಡು ಬಾಧಕ ಜ್ಞಾನದ ವೃತ್ತಿಯು ಆಗುವುದು. ಶುಕ್ತಿಯಲ್ಲಿ ರಜತತ್ವ ಭ್ರಮೆಯನ್ನು ಹುಟ್ಟಿಸುವ ರಜತಾಕಾರಕ್ಕೆ ಬಾಧವಿರುವುದರಿಂದ ಅದಕ್ಕೆ ಧರ್ಮಿತ್ವವಿಲ್ಲವೆನ್ನುವುದು ಪ್ರಸಿದ್ಧವು ಎಂಬುದಾಗಿ ಹಿ ಶಬ್ದದ ಅರ್ಥವು. ಅಂದರೆ ಯಾವುದು ಉಪಜೀವ್ಯವಾದ ಧರ್ಮ್ಯಂಶವೋ ಅದಕ್ಕೆ ಉಪಜೀವಕದಿಂದ ಬಾಧವಿಲ್ಲ. ಯಾವುದಕ್ಕೆ ಬಾಧವು ಕಂಡುಬರುವುದೋ ಅದು ಉಪಜೀವ್ಯವಲ್ಲ. ಆದ್ದರಿಂದ ಉಪಜೀವ್ಯ–ಉಪಜೀವಕಗಳಲ್ಲಿ ಬಾಧ್ಯ–ಬಾಧಕ ವ್ಯವಸ್ಥೆಗೆ ಸಂಬಂಧಿಸಿದಂತೆ ನಮ್ಮ ನಿಯಮಕ್ಕೆ ನೇದಂ ರಜತಂ ಎಂಬ ಉದಾಹರಣೆಯಿಂದ ಭಂಗವಿಲ್ಲವೆಂದು ಅಭಿಪ್ರಾಯ.

**.......................... ನ ಚೈವಂ ಸುಪರೀಕ್ಷಿತೇ ॥ ೧೭೩ ॥**

ಪ್ರಥಮ ಪ್ರಮಾಣವು ಚೆನ್ನಾಗಿ ಪರೀಕ್ಷಿತವಾಗಿರಲು ಹೀಗೆ ಇಲ್ಲ. ಅಂದರೆ ಸುಪರೀಕ್ಷಿತವಾದ ಉಪಜೀವ್ಯಕ್ಕೆ ಉಪಜೀವಕದಿಂದ ಬಾಧವಿಲ್ಲ ಎಂದರ್ಥ. ಇದೇ ರೀತಿಯಲ್ಲಿ 'ಯಃ ಸರ್ವಜ್ಞಃ' ಇತ್ಯಾದಿ ಶ್ರುತಿಗಳೂ 'ಅಹಂ ದುಃಖೀ' ಇತ್ಯಾದಿ ಅನುಭವವೂ ಚೆನ್ನಾಗಿ ಪರೀಕ್ಷಿತವೇ ಆಗಿರುವುದರಿಂದ ಬಾಧಿತವಾಗುವುದಿಲ್ಲ.

**ಸರ್ವಂ ತದುಪಜೀವ್ಯೈವ ಪ್ರಮಾಣಂ ವರ್ತತೇ ಯತಃ ।**

ಆ ಸರ್ವಜ್ಞತ್ವಾದಿಗಳೆಲ್ಲವನ್ನೂ ಉಪಜೀವಿಸಿಕೊಂಡೇ ತತ್ತ್ವಮಸಿ ಇತ್ಯಾದಿ ಪ್ರಮಾಣಗಳು ಪ್ರವೃತ್ತವಾಗಿರುವ ಕಾರಣ ಆ ವಾಕ್ಯಗಳಿಗೆ ಉಪಜೀವ್ಯಕ್ಕೆ ವಿರುದ್ಧವಾದ ಅರ್ಥದಲ್ಲಿ ಪ್ರಾಮಾಣ್ಯವಿಲ್ಲ.

ಹಾಗಾದರೆ ತತ್ತ್ವಮಸಿ ಇತ್ಯಾದಿ ವಾಕ್ಯವೂ ಕೂಡ ಸ್ವರೂಪಮಾತ್ರವನ್ನು ಉಪಜೀವಿಸಿಕೊಂಡು ಪ್ರವೃತ್ತವಾಗುವುದೆಂದರೆ ಆಗ ಯಾವ ದೋಷವು ಎಂದರೆ –

ಕಥಂ ಬ್ರಹ್ಮೇತಿ ತಜ್ಜ್ಞೇಯಂ ಸರ್ವಜ್ಞತ್ವಾದಿಲಕ್ಷಣಮ್ ॥ ೧೭೪ ॥

ವಿಹಾಯ ಯಸ್ಮಾತ್ಕಸ್ಮಾಚ್ಚಿತ್ಸ್ವರೂಪಸ್ಯೈವ ಚೇದ್ಯದಿ ।

ಉಪಜೀವ್ಯತ್ವಮೇತಸ್ಮಾದ್ವ್ಯಾವೃತ್ತಂ ಯಾವತಾ ಭವೇತ್ ॥ ೧೭೫ ॥

ತಾವತ್ತೈವೋಪಜೀವ್ಯತ್ವಂ ಸ್ವರೂಪಸ್ಯೈವ ನ ಕ್ವಚಿತ್ ।

ಸರ್ವಜ್ಞತ್ವಾದಿ ಧರ್ಮಗಳನ್ನು ಬಿಟ್ಟು ಸ್ವರೂಪಮಾತ್ರಕ್ಕೆ ಉಪಜೀವ್ಯತ್ವವಿದೆ ಎಂದರೆ, ತತ್ತ್ವಮಸಿ ಎನ್ನುವುದರಿಂದ ಏನು ಬೋಧಿಸಲ್ಪಡುತ್ತದೆ ಎನ್ನುವುದು ಹೇಗೆ ಜ್ಞಾತವಾಗುತ್ತದೆ? ಹಾಗಾದರೆ ಸ್ವರೂಪಮಾತ್ರಕ್ಕೆ ಉಪಜೀವ್ಯತ್ವವನ್ನು ಹೇಳುವುದಿಲ್ಲ, ಮತ್ತೆ ಭೇದಕಗಳಾದ ಸರ್ವಜ್ಞತ್ವಾದಿ ಧರ್ಮಗಳನ್ನು ಬಿಟ್ಟು ತತ್ತ್ವಾದಿ ಧರ್ಮಗಳಿಂದ ವಿಶಿಷ್ಟನಿಗೆ ಉಪಜೀವ್ಯತ್ವವು ಎಂದು ಹೇಳುತ್ತೇವೆ. ಆದಕಾರಣ ದೋಷವಿಲ್ಲವೆಂದರೆ, ತತ್ತ್ವಾದಿ ಧರ್ಮವಿಶಿಷ್ಟನಿಗೆ ಉಪಜೀವ್ಯತ್ವವಿದ್ದರೆ ಆಗ ಸರ್ವಜ್ಞತ್ವಾದಿಗಳನ್ನು ಬಿಟ್ಟು ಯಾವುದಾದರೊಂದು ತತ್ವಾದಿ ಧರ್ಮದ ದೆಶೆಯಿಂದ ಅವನು ಬ್ರಹ್ಮನೆಂದು ಹೇಗೆ ತಿಳಿಯಲು ಸಾಧ್ಯ? ಆದಕಾರಣ ಯಾವ ಧರ್ಮದಿಂದ ವ್ಯಾವೃತ್ತವು ಆಗುವುದೋ ಆ ಧರ್ಮದಿಂದ ಯುಕ್ತನಾದವನಿಗೆ ಮಾತ್ರ ಉಪಜೀವ್ಯತ್ವವು. ಸ್ವರೂಪಮಾತ್ರಕ್ಕೆ ಎಲ್ಲಿಯೂ ಉಪಜೀವ್ಯತ್ವವು ಇರುವುದಿಲ್ಲ.

ಹಾಗಾದರೆ ತತ್ತ್ವಮಸಿ ಎನ್ನುವಲ್ಲಿ ತತ್ ಶಬ್ದವು ಯಃ ಸರ್ವಜ್ಞಃ ಎನ್ನುವುದನ್ನು ಉಪಜೀವಿಸಿಕೊಂಡು ಬ್ರಹ್ಮನು ಸರ್ವಜ್ಞನೆಂದು ಬೋಧಿಸಬೇಕಿಲ್ಲ. ತತ್ ಶಬ್ದವೇ ಸರ್ವಜ್ಞತ್ವ ವಿಶಿಷ್ಟವಾದ ವಸ್ತುವನ್ನು ತಿಳಿಸಿಕೊಡುತ್ತದೆ ಎಂದರೆ –

ಸರ್ವಲಕ್ಷಣಯುಕ್ತಂ ಚ ಸ್ವರೂಪಂ ಯದಿ ಭಣ್ಯತೇ ॥ ೧೭೬ ॥

ಅಸ್ತು ನೋ ನೈವ ಹಾನಿಃ ಸ್ಯಾತ್ಸ್ವಪಕ್ಷಶ್ಚಾಯಮಂಜಸಾ ।

ಯಸ್ಮಾದನ್ವಿತ ಏವಾರ್ಥಃ ಶಬ್ದಾನಾಮಪಿ ಸರ್ವಶಃ ॥ ೧೭೭ ॥

ವಿಶೇಷಸಾಮಾನ್ಯತಯಾ ಸ್ವರೂಪಮಖಿಲಂ ಭವೇತ್ ।

ಎಲ್ಲ ಲಕ್ಷಣಗಳಿಂದ ಕೂಡಿದ ಸ್ವರೂಪವೇ ತತ್ ಶಬ್ದದಿಂದ ಹೇಳಲ್ಪಡುತ್ತದೆ ಎಂದು ಹೇಳುವುದಾದರೆ, ಸರಿ ಹಾಗೆಯೇ ಆಗಲಿ. ಹೀಗೆ ಅಂಗೀಕರಿಸುವುದರಿಂದ ನಮಗೆ ಹಾನಿಯೇನೂ ಆಗುವುದಿಲ್ಲ. ಇದು ಚೆನ್ನಾಗಿ ನಮ್ಮ ಪಕ್ಷವೇ ಆಗಿದೆ. ಏಕೆಂದರೆ ಎಲ್ಲ ಶಬ್ದಗಳಿಗೂ ಯೋಗ್ಯವಾದ ಇತರ ಶಬ್ದಗಳಿಂದ ಯುಕ್ತವೇ ಆದ ಅರ್ಥವು (ಅನ್ವಿತಾಭಿಧಾನವು) ನಮ್ಮಿಂದ ಅಂಗೀಕೃತವಾಗಿದೆ. ಭಕ್ತಿಪಾದದಲ್ಲಿನ ಉಭಯವ್ಯಪದೇಶಾತ್ ಎಂಬ ಸೂತ್ರಸಾಮರ್ಥ್ಯದಿಂದ ಈ ಪ್ರಮೇಯವು 'ತಚ್ಚ ನಾಭಿಹಿತಾನ್ವಯಃ' ಇತ್ಯಾದಿ ವ್ಯಾಖ್ಯಾನದಲ್ಲಿ ಉಪಪಾದಿತವಾಗಿದೆ. ಯೋಗ್ಯವಾದ ಇತರರಿಂದ ಅನ್ವಿತವಾದ ಸ್ವರೂಪವು ವಿಶೇಷಸಾಮಾನ್ಯರೂಪದಿಂದ ಶಬ್ದದಿಂದ ಬೋಧ್ಯವಾಗುವುದು.

ವ್ಯಾವರ್ತಕಧರ್ಮಗಳಿಂದ ವ್ಯಾವೃತ್ತಕ್ಕೇನೆ ಉಪಜೀವ್ಯತ್ವವು ಎಂದು ಹೇಳಿದ್ದು ಸರಿಯಲ್ಲ. ಬಾಧಕ ಜ್ಞಾನಗಳಲ್ಲಿ ಹಾಗಿರುವುದಿಲ್ಲ. ಪೂರ್ವದಲ್ಲಿದ್ದ ಭ್ರಮಜ್ಞಾನದಲ್ಲಿ ವ್ಯಾವೃತ್ತತ್ವವೇ ಅಸಿದ್ಧವಾದುದರಿಂದ ಅಲ್ಲಿ ಕೂಡ ವ್ಯಾವೃತ್ತಕ್ಕೇ ಉಪಜೀವ್ಯತ್ವವು, ಸ್ವರೂಪಮಾತ್ರಕ್ಕಲ್ಲವೆಂದು ಹೇಳಕೂಡದು. ಭ್ರಮತ್ವಕ್ಕೆ ಅನುಪತ್ತಿಯು ಸಿದ್ಧವೂ ಆಗಿದೆ. 'ತನ್ಮಾತ್ರಮುಪಜೀವ್ಯ ಹಿ' ಎಂದು ವಿರೋಧೋಕ್ತಿಯೂ ಇದೆ ಎಂದರೆ –

**ಪುರೋವರ್ತಿತ್ವಪೂರ್ವಾಣಿ ದೇವದತ್ತಾದಿಕಭ್ರಮೇ ॥ ೧೭೮ ॥**

**ವ್ಯಾವರ್ತಯಂತಿ ತದ್ರೂಪಂ ಚೈತ್ರಮಾತ್ರಾದ್ವಿನೈವ ತು ।**

**ಬ್ರಹ್ಮಣೋ ನಿರ್ವಿಶೇಷತ್ವಾದ್ವ್ಯಾವರ್ತಯತಿ ಕಿಂ ಪುನಃ ॥ ೧೭೯ ॥**

ದೇವದತ್ತಾದಿಗಳ ವಿಷಯದಲ್ಲಿ ಯಾವ ಚೈತ್ರಾದಿ ಭ್ರಮೆಯಿದೆಯೋ ಅದರಲ್ಲಿ ಪುರೋವರ್ತಿತ್ವಾದಿ ವಿಶೇಷಣಗಳು ದೇವದತ್ತಾದಿ ಸ್ವರೂಪವನ್ನು ಕೇವಲ ಚೈತ್ರನ ದೆಶೆಯಿಂದ ಹೊರತು ಪಡಿಸಿಯೇ ವ್ಯಾವರ್ತಿಸುತ್ತವೆ. ಆದಕಾರಣ ಬಾಧಕಜ್ಞಾನವು ವ್ಯಾವೃತ್ತವನ್ನೇ ಉಪಜೀವಿಸುತ್ತದೆ ಎನ್ನುವ ನಿಯಮವು ಅಯುಕ್ತವಲ್ಲ. ಆರೋಪ್ಯ ವ್ಯಾವೃತ್ತಿಗಳು ಅನಂಗೀಕೃತವಾದ್ದರಿಂದ ಭ್ರಮೆಯ ಅನುಪತ್ತಿಯೂ ಇಲ್ಲ. ಮತ್ತೆ ಬ್ರಹ್ಮನಿಗೆ ವಿಶೇಷವಿಲ್ಲದಿರುವುದರಿಂದ ಬ್ರಹ್ಮನನ್ನು ಯಾವುದು ವ್ಯಾವರ್ತಿಸುತ್ತದೆ? ಯಾವುದೂ ವ್ಯಾವರ್ತಿಸುವುದಿಲ್ಲ ಎಂದ ಭಾವ.

ತತ್ವಾದಿಗಳನ್ನು ಅಂಗೀಕರಿಸಿದರೂ ದೋಷವನ್ನು ಹೇಳುತ್ತಾರೆ –

**ಯಸ್ಮಾತ್ಕಸ್ಮಾಚ್ಚಿದಪ್ಯರ್ಥಾತ್ತಾವಚ್ಚೇತ್ಸಿದ್ಧಸಾಧನಮ್ ।**

ತತ್ವಾದಿ ವಿಶೇಷಣದಿಂದ ತತ್ವಾದಿರಹಿತವಾದ ಯಾವುದಾದರೊಂದು ಅರ್ಥದಿಂದ ವ್ಯಾವೃತ್ತವಾದುದನ್ನು ಉಪಜೀವಿಸಿಕೊಂಡು ತ್ವಮಸಿ ಎಂದು ಜೀವಾಭೇದವನ್ನು ಬೋಧಿಸಿದರೆ, ಅದಕ್ಕೆ ಸಿದ್ಧಸಾಧನವೆಂಬ ದೋಷವು. ಏಕೆಂದರೆ ಈ ಅರ್ಥವು ಬೋಧನಾ ಪೂರ್ವದಲ್ಲಿಯೇ ತಿಳಿದಿರುವುದು. ಆದ್ದರಿಂದ ಅಶಾಸ್ತ್ರವು.

ಹಾಗಾದರೆ ತತ್ವಾದಿಗಳಿಂದ ವ್ಯಾವೃತ್ತನಾದ ಬ್ರಹ್ಮನು ಉಪಜೀವ್ಯನಾಗುವುದು ಬೇಡ. 'ವಿಜ್ಞಾನಮಾನಂದಂ ಬ್ರಹ್ಮ' ಇತ್ಯಾದಿ ಶ್ರುತಿಯಿಂದ ಬ್ರಹ್ಮನಿಗೆ ಲಕ್ಷಣವೆಂದು ಹೇಳಲ್ಪಟ್ಟ ಚಿನ್ಮಾತ್ರತ್ವಾದಿ ಧರ್ಮಗಳಿಂದ ವ್ಯಾವೃತ್ತನಾದ ಬ್ರಹ್ಮನು ಉಪಜೀವ್ಯನಾಗುವನು ಎಂದರೆ –

**ಚಿನ್ಮಾತ್ರತ್ವಂ ಚ ನೈವೇಷ್ಟಮವಿಶೇಷತ್ವವಾದಿನಃ ॥ ೧೮೦ ॥**

ಬ್ರಹ್ಮನು ನಿರ್ವಿಶೇಷನೆಂದು ಹೇಳುವರಿಗೆ ಚಿನ್ಮಾತ್ರಸ್ವರೂಪತ್ವವು ಇಷ್ಟವೇ ಇಲ್ಲ. ಹಾಗಾದರೆ ಚಿನ್ಮಾತ್ರತ್ವಾದಿಗಳನ್ನು ಬ್ರಹ್ಮಾಭಿನ್ನವೆಂದು ಅಂಗೀಕರಿಸುತ್ತೇವೆ. ಆದ

ಕಾರಣ ಬ್ರಹ್ಮನ ನಿರ್ವಿಶೇಷತ್ವಕ್ಕೆ ವಿರೋಧವಿಲ್ಲವೆಂದರೆ –

**ತಾವನ್ಮಾತ್ರಂ ಯದೀಷ್ಟಂ ಸ್ಯಾತ್ಸರ್ವಜ್ಞತ್ವಂ ಕುತೋ ನ ತತ್ ।**

**ಚಿನ್ಮಾತ್ರಾಭೇದಸಾಧ್ಯೇಽಪಿ ಸಿದ್ಧಂ ತತ್ಪ್ರತಿವಾದಿನಃ ।। ೧೪೧ ।।**

**ಸ್ವಾಭೇದಾಂಗೀಕೃತೇರೇವ ಚಿತ್ತಂ ಸ್ವಸ್ಯಾಪಿ ಯನ್ಮತಮ್ ।**

ಅಷ್ಟು ಮಾತ್ರವು ನಿಮಗೆ ಇಷ್ಟವಾಗುವುದಾದರೆ ಸರ್ವಜ್ಞತ್ವಾದಿ ಧರ್ಮಗಳನ್ನು, ಅವೂ ಕೂಡ ಶ್ರುತವೂ ಅಭಿನ್ನವೂ ಆದುದರಿಂದ, ಏಕೆ ಅಂಗೀಕರಿಸಬಾರದು? ತತ್ವಮಸಿ ಇತ್ಯಾದಿ ವಾಕ್ಯವು ಚಿನ್ಮಾತ್ರದಿಂದ ಅಭೇದವನ್ನೇ ಪ್ರತಿಪಾದಿಸುವುದೆಂದು ಅಂಗೀಕರಿಸಿದರೂ ಸಿದ್ಧಸಾಧನವೇ ಆಗುವುದು. ಅದು ಹೇಗೆಂದರೆ – ಬೋಧ್ಯನಾದ ಪ್ರತಿವಾದಿಯು ತನ್ನಿಂದ ತನಗೆ ಅಭೇದವನ್ನು ಅಂಗೀಕರಿಸಿರುವುದರಿಂದ, ಅವನಿಗೆ ಚಿದೈಕ್ಯವು ಸಿದ್ಧವಾಗಿದೆ. ಅದು ಹೇಗೆಂದರೆ – ಬೋಧ್ಯನಾದವನಿಗೂ ಕೂಡ ಚೇತನತ್ವವು ಸಮ್ಮತವು. ಆದಕಾರಣ ಚಿದಭೇದವು ಸಿದ್ಧವಾಗಿದೆ.

ಬ್ರಹ್ಮನಿಗೆ ಚಿದಾನಂದಾದಿ ಸ್ವರೂಪತ್ವವನ್ನು ಅಂಗೀಕರಿಸುವಂತೆಯೇ ಸರ್ವಜ್ಞತ್ವ ಮುಂತಾದವುಗಳಿಗೂ ಏಕೆ ಬ್ರಹ್ಮಸ್ವರೂಪತ್ವವನ್ನು ಅಂಗೀಕರಿಸುವುದಿಲ್ಲ ಎಂದರೆ –

**ಸರ್ವಾಪೇಕ್ಷತಯಾ ಸರ್ವಜ್ಞತ್ವಮಿತ್ಯೇವ ತನ್ನಹಿ ।। ೧೪೨ ।।**

**ಇತಿ ಚೇಚ್ಚೇತನತ್ವಂ ಚ ಜ್ಞತ್ವಂ ನ ಜ್ಞೇಯವರ್ಜಿತಮ್ ।**

ಸರ್ವಜ್ಞತ್ವವು ಮಿಥ್ಯಾಭೂತಗಳಾದ ಆಕಾಶಾದಿ ಎಲ್ಲ ಪದಾರ್ಥಗಳನ್ನು ಅಪೇಕ್ಷಿಸಿಕೊಂಡೇ ಇರುವುದು. ಆದಕಾರಣ ಆ ಸರ್ವಜ್ಞತ್ವವೂ ಮಿಥ್ಯೆಯೇ ಆಗುವುದು. ಹೀಗೆ ಹೇಳಿದರೆ, ಅಂದರೆ ಯಾವುದು ಪರಸಾಪೇಕ್ಷಿತವೋ ಅದು ಸತ್ತಲ್ಲ ಎಂದು ಅಂಗೀಕರಿಸಿದರೆ ಬ್ರಹ್ಮನಿಗೆ ಚೇತನತ್ವವೂ ಕೂಡ ಇಲ್ಲದೇ ಹೋಗುವುದು. ಏಕೆಂದರೆ ಚೇತನತ್ವವು ಜ್ಞಾನಿತ್ವರೂಪವು. ಆ ಜ್ಞಾನಿತ್ವವಾದರೂ ಜ್ಞೇಯದಿಂದ ವಿರಹಿತವಲ್ಲ, ಮತ್ತೆ ಜ್ಞೇಯಸಾಪೇಕ್ಷವೇ ಆಗಿದೆ. ಜ್ಞಾನಕ್ರಿಯೆಯನ್ನು ಕುರಿತು ಕರ್ತೃತ್ವವೇ ಜ್ಞತ್ವವು. ಆದ್ದರಿಂದ ಕರ್ಮಾಪೇಕ್ಷಿತವಾದ ಕ್ರಿಯಾಕರ್ತೃತ್ವವೂ ಕೂಡ ಪರಸಾಪೇಕ್ಷಿತವೇ ಆಗಿದೆ.

ಹಾಗಿದ್ದರೂ ಚೇತನತ್ವವು ಏಕೆ ಕೂಡಲಾರದು ಎಂದರೆ – ಜ್ಞಾನಿಯಾದ ಬ್ರಹ್ಮನಿಗೆ ಸ್ವಯಂ ತಾನೇ ಜ್ಞೇಯವೋ ಅಥವಾ ಮತ್ತೊಂದು ಆಗುವುದೋ? ಮೊದಲನೆಯ ಪಕ್ಷವನ್ನು 'ಸ್ವಜ್ಞೇಯತ್ವಂ' ಇತ್ಯಾದಿ ವಚನದಿಂದ ನಿರಾಕರಿಸುತ್ತಾರೆ–

**ಸ್ವಜ್ಞೇಯತ್ವಂ ಚ ನೈವಾಸೌ ಮನ್ಯತೇ ಸವಿಶೇಷತಃ ।। ೧೪೩ ।।**

**ಸ್ವಶಬ್ದೋಽಪಿ ಪರಾಪೇಕ್ಷಸ್ತಸ್ಮಾದ್ವ್ಯಾವೃತ್ತಿರೇವ ಹಿ ।**

**ಸ್ವಶಬ್ದಾರ್ಥ ಇತಿ ಪ್ರೋಕ್ತಃ ಸ್ವರೂಪಂ ನಾಮ ಕಿಂ ನ ಚೇತ್ ।। ೧೪೪ ।।**

**ನ ಸ್ವರೂಪಾಭಿಧಾಯಿ ಸ್ಯಾದ್ವೈಯರ್ಥ್ಯಂ ಸ್ವಪದಸ್ಯ ಯತ್ ।**

**ರೂಪಶಬ್ದೇನ ಪೂರ್ಣತ್ವಾತ್ತಚ್ಚ ಸಾಮಾನ್ಯತಾವಚಃ ॥ ೧೮೫ ॥**

ಸ್ವಜ್ಞೇಯತ್ವವನ್ನು ಒಪ್ಪಿದರೆ ಸವಿಶೇಷತ್ವವು ಬರಬೇಕಾಗುವುದು. ಆದಕಾರಣ ಮಾಯಾವಾದಿಯು ಅದನ್ನು ಒಪ್ಪುವುದೇ ಇಲ್ಲ.

ಹೇಗೆಂದರೆ, ಒಂದೇ ಕ್ರಿಯೆಯಲ್ಲಿ ಒಬ್ಬನಿಗೇ ಕರ್ತೃಕರ್ಮಭಾವವು ಕೂಡುವುದಿಲ್ಲ. ಹಾಗೆ ಕೂಡಿಸಬೇಕಾದರೆ ಭೇದ ಪ್ರತಿನಿಧಿಯಾದ ವಿಶೇಷವನ್ನು ಅಂಗೀಕರಿಸಬೇಕು. ಬ್ರಹ್ಮನಲ್ಲಿ ಜ್ಞತ್ವ–ಜ್ಞೇಯತ್ವಗಳನ್ನು ಒಪ್ಪಿದರೆ ವಿಶೇಷವನ್ನೂ ಒಪ್ಪಬೇಕಾಗುವುದು. ಬ್ರಹ್ಮ ನಿರ್ವಿಶೇಷನೆಂದು ಅಂಗೀಕರಿಸುವ ಮಾಯಾವಾದಿಯು ಸ್ವಜ್ಞೇಯತ್ವವನ್ನು ಒಪ್ಪುವುದಿಲ್ಲ. ಆದ್ದರಿಂದ ಪರವೇ ಜ್ಞೇಯವೆಂದು ಹೇಳಬೇಕು. ಬ್ರಹ್ಮನಿಂದ ಇತರವಾದುದೆಲ್ಲ ಮಿಥ್ಯೆಯೇ. ಆದ್ದರಿಂದ ಅದನ್ನು ಅಪೇಕ್ಷಿಸತಕ್ಕ ಚೇತನತ್ವವು ಹೇಗೆ ಸತ್ತಾಗುವುದು?

ಸ್ವಶಬ್ದವೂ ಪರಾಪೇಕ್ಷಿತವಾದ ಅರ್ಥವನ್ನು ಪ್ರತಿಪಾದಿಸುವುದು. ಹೇಗೆಂದರೆ ಪರರಿಂದ ವ್ಯಾವೃತ್ತಿಯೇ ಸ್ವಶಬ್ದದ ಪ್ರವೃತ್ತಿನಿಮಿತ್ತವು. ಹೀಗೆಂದು ಶಬ್ದಶಕ್ತಿಯನ್ನು ಬಲ್ಲವರಿಂದ ಹೇಳಲ್ಪಟ್ಟಿದೆ. ನಮಗೆ ಅಭಿಮತವಾದ ವ್ಯಾಖ್ಯಾನವನ್ನು ಒಪ್ಪದಿದ್ದರೆ ಸ್ವರೂಪವೆನ್ನುವುದು ಇಲ್ಲದೇ ಹೋಗಬೇಕಾಗುವುದು. ಅಂದರೆ ಸ್ವರೂಪ ಶಬ್ದವು ನಿರರ್ಥಕವಾಗುವುದು. ಸ್ವರೂಪ ಮತ್ತು ರೂಪ ಶಬ್ದಗಳು ಸಮಾನಾರ್ಥಕವೆಂದು ಹೇಳುತ್ತೇವೆ ಎಂದರೆ – 'ಸ್ವಂ ಚ ತತ್ ರೂಪಂ ಚ' ಎಂಬ ವ್ಯುತ್ಪತ್ತಿಯಿಂದ ಹೀಗೆ ಹೇಳುವಿರೋ? ಅಥವಾ ಅಖಂಡವಾದ ಸ್ವರೂಪಶಬ್ದವು ರೂಪಶಬ್ದಕ್ಕೆ ಸಮಾನಾರ್ಥಕವೆಂದು ಹೇಳುವಿರೋ? ಎಂದು ಕೇಳುತ್ತೇವೆ. ಮೊದಲನೆ ಪಕ್ಷದಲ್ಲಿ ಸ್ವಶಬ್ದಕ್ಕೆ ವೈಯರ್ಥ್ಯ ಬರುವುದರಿಂದ ಸ್ವರೂಪವೆಂದರೆ ಯಾವುದೂ ಇಲ್ಲ. ವೈಯರ್ಥ್ಯವು ಹೇಗೆಂದರೆ ಸ್ವರೂಪಶಬ್ದದಲ್ಲಿರತಕ್ಕ ರೂಪಶಬ್ದದಿಂದಲೇ ರೂಪ ಶಬ್ದಾರ್ಥಕ್ಕೆ ಪೂರ್ಣತ್ವವು ಬರುವುದರಿಂದ, ಸ್ವರೂಪ ಶಬ್ದದಿಂದ ಕರೆಸಿಕೊಳ್ಳುವ ವಸ್ತುವು ಯಾವುದೂ ಇರುವುದಿಲ್ಲ. ಎರಡನೆ ಪಕ್ಷವೂ ಕೂಡುವುದಿಲ್ಲ. ಏಕೆಂದರೆ ರೂಪಶಬ್ದವು ಸಾಮಾನ್ಯಾಕಾರವನ್ನು ಹೇಳುವುದರಿಂದ ಅದು ಸ್ವರೂಪವನ್ನು ಪ್ರತಿಪಾದಿಸಲಾರದು.

ಹಾಗಾದರೆ ಬ್ರಹ್ಮನಿಗೆ ಚೇತನತ್ವವು ಬರಲಾರದು ಎಂದು ಯಾವುದು ಹೇಳಲ್ಪಟ್ಟಿದೆಯೋ ಅದು ಇಷ್ಟಾಪಾದನವು. ನಾವು ಬ್ರಹ್ಮನಿಗೆ ಚೇತನತ್ವವನ್ನು ಅಂಗೀಕರಿಸುವುದಿಲ್ಲ, ಮತ್ತೆ ಚೈತನ್ಯವೇ ಬ್ರಹ್ಮ ಎಂದು ಹೇಳುತ್ತೇವೆ ಎಂದರೆ, ಅದೂ ಕೂಡ ಪರರಿಂದ ಅಂಗೀಕರಿಸಲಿಕ್ಕೆ ಬರುವುದಿಲ್ಲವೆಂದು ಹೇಳುತ್ತಾರೆ –

**ಚೇತನಸ್ಯ ಸ್ವಭಾವೋ ಹಿ ಚೈತನ್ಯಮಿತಿ ಗೀಯತೇ ।**

**ತಸ್ಮಾದ್ವಿಶೇಷಬಾಹುಲ್ಯಂ ಚೈತನ್ಯಸ್ಯ ವಿಶೇಷತಃ ॥ ೧೮೬ ॥**

ಚೇತನದ ಧರ್ಮವೇ ಚೈತನ್ಯವೆಂದು ಹೇಳಲ್ಪಡುತ್ತದೆ. ಚಿತೀಸಂಜ್ಞಾನೇ ಎಂಬ ಧಾತುವಿನಿಂದ ಚೇತನಶಬ್ದಪ್ರವೃತ್ತಿ ನಿಮಿತ್ತವಾದುದು ಜ್ಞಾನವೆಂದು ತಿಳಿದುಬರುತ್ತದೆ. ಅಂದರೆ ಜ್ಞಾನವು ಬ್ರಹ್ಮನೆಂದು ಹೇಳಿದಂತಾಯಿತು. ಈ ಕಾರಣದಿಂದ ಬ್ರಹ್ಮನಿಗೆ ಅತಿಶಯದಿಂದ ಧರ್ಮಬಾಹುಲ್ಯವು ಪ್ರಸಕ್ತವಾಗುತ್ತದೆ. ಅಂದರೆ ಬ್ರಹ್ಮನಿಗೆ ಜ್ಞಾನ ರೂಪತ್ವವನ್ನು ಒಪ್ಪಿದರೆ ಸವಿಶೇಷತ್ವವು ಬರಬೇಕಾಗುವುದು.

ನ ಜ್ಞೇಯಜ್ಞಾತೃಹೀನಂ ಹಿ ಜ್ಞಾನಂ ನಾಮ ಕ್ವಚಿದ್ಭವೇತ್ ।

ಜ್ಞೇಯಜ್ಞಾನವಿಹೀನಶ್ಚ ಜ್ಞ ಇತ್ಯತ್ರ ನ ಚ ಪ್ರಮಾ ।। ೧೪೭ ।।

ಜ್ಞೇಯ-ಜ್ಞಾತೃರಹಿತವಾದ ಜ್ಞಾನವೆಂಬುದು ಎಲ್ಲಿಯೂ ಇಲ್ಲ. ಜ್ಞೇಯಜ್ಞಾನ ವಿರಹಿತನಾದ ಜ್ಞಾನಾಶ್ರಯನು ಇದ್ದಾನೆ ಎಂಬ ವಿಷಯದಲ್ಲಿ ಪ್ರಮಾಣವಿಲ್ಲ. ಅಂತೂ ಬ್ರಹ್ಮನಿಗೆ ಅಸ್ತಿತ್ವವೇ ಇಲ್ಲದಂತಾಗುವುದು. ಆದಕಾರಣ ಪರರು ಚೈತನ್ಯನೇ ಬ್ರಹ್ಮ ಎಂದು ಅಂಗೀಕರಿಸಲಿಕ್ಕೆ ಆಗುವುದಿಲ್ಲವೆಂದು ಅಭಿಪ್ರಾಯ.

ಹಾಗಾದರೆ ಪ್ರಸಿದ್ಧವಾದ ಘಟಾದಿ ಜ್ಞಾನವು ಜ್ಞೇಯಾದಿಗಳಿಂದ ಯುಕ್ತವು ಎಂದು ಒಪ್ಪಿದರೂ, ಈ ಬ್ರಹ್ಮಸ್ವರೂಪವಾದ ಜ್ಞಾನವು ಜ್ಞೇಯಾದಿ ರಹಿತವೆಂದು ಆಗಲಿ. ಅದರಿಂದ ಬಾಧಕವೇನು ಎಂದರೆ -

ಜ್ಞಾತೃಜ್ಞೇಯವಿಹೀನಂ ಚ ಜ್ಞಾನಂ ಚೇದ್ಭೋಕ್ತೃಭೋಗ್ಯತಃ ।

ಹೀನಂ ಭೋಜನಮೇವ ಸ್ಯಾತ್ತಾಡನಂ ಕರ್ತೃತಾಡ್ಯತಃ ।। ೧೪೮ ।।

ಜ್ಞಾನವು ಜ್ಞಾತೃಜ್ಞೇಯಗಳಿಂದ ವಿರಹಿತವೆಂದರೆ, ಭೋಕ್ತೃವೂ ಭೋಜ್ಯವಾದ ಪದಾರ್ಥಗಳೂ ಇವುಗಳಿಲ್ಲದೇ ಭೋಜನವೂ ಕೂಡ ಆಗಬೇಕಾಗುವುದು. ಅದೇ ರೀತಿ ಹೊಡೆಯುವವನೂ ಹೊಡೆಸಿಕೊಳ್ಳುವವನೂ ಇಲ್ಲದಿದ್ದರೂ ಹೊಡೆತವು ಆಗಬೇಕಾಗುವುದು. ಹೀಗೆ ಅತಿಪ್ರಸಂಗವು.

ಭೋಜನಾದಿಗಳು ಅನಿತ್ಯವು, ಜ್ಞಾನವಾದರೋ ನಿತ್ಯವು. ಆದ್ದರಿಂದ ಜ್ಞಾನಕ್ಕೆ ಕರ್ತೃಕರ್ಮಗಳ ಅಪೇಕ್ಷೆಯು ಬೇಕಿಲ್ಲ ಎಂದರೆ -

ನಿತ್ಯತ್ವಾತ್ತಾದೃಶಂ ಚ ಸ್ಯಾದಿತಿ ಚೇನ್ನಿತ್ಯವಾಗಪಿ ।

ವಾಚ್ಯವಕ್ತೃವಿಹೀನಾ ಸ್ಯಾನ್ನ ಹಿ ಸಾ ಚೈವ ತಾದೃಶೀ ।। ೧೪೯ ।।

ಈಶ್ವರಜ್ಞಾನವು ನಿತ್ಯವಾದುದರಿಂದ(ಅಕಾರ್ಯವೂ ಆದುದರಿಂದ) ಜ್ಞಾತ್ರಾದಿ ರಹಿತವಾದುದು ಆಗುವುದು ಎಂದು ಹೇಳಿದರೆ, ಅಕಾರ್ಯವೂ ನಿತ್ಯವೂ ಆದ ವೇದವಚನವೂ ಕೂಡ ವಾಚ್ಯವಕ್ತೃಗಳಿಂದ ವಿರಹಿತವಾಗಬೇಕಾಗುವುದು. ಆದರೆ ಹಾಗಿಲ್ಲ. ಅಂದರೆ ವೇದವಚನವು ನಿತ್ಯವಾಗಿದ್ದರೂ ಎಂದಿಗೂ ವಾಚ್ಯವಕ್ತೃಗಳಿಂದ ವಿಹೀನವಾದುದು ಆಗುವುದೇ ಇಲ್ಲ.

ವೇದವಚನವು ಏಕೆ ವಕ್ತ್ರಾದಿ ವಿಹೀನವಾಗುವುದಿಲ್ಲವೆಂದರೆ –

**ದ್ರಷ್ಟಾರೋ ವೇದವಾಚೋ ಹಿ ಸಂತಿ ವಾಚ್ಯಾನಿ ಚಾಂಜಸಾ ।**

**ನಿತ್ಯೋ ದ್ರಷ್ಟಾ ಚ ವಾಚ್ಯಶ್ಚ ಭಗವಾನೇವ ಚ ಸ್ವಯಮ್ ॥ ೧೯೦ ॥**

**ನ ಹಿ ವಕ್ತೃವಿಹೀನಾ ಚ ವಾಚ್ಯಹೀನಾಽಪಿ ವಾಕ್ ಕ್ವಚಿತ್ ।**

ವೇದವಚನಗಳಿಗೆ ದ್ರಷ್ಟಾರರೂ ಇರುತ್ತಾರೆ, ಚೆನ್ನಾಗಿ ವಾಚ್ಯವಾದ ಅರ್ಥಗಳೂ ಇರುತ್ತವೆ. ಸ್ಥಿತಿ ಕಾಲದಲ್ಲಿ ವೇದವಚನಗಳ ದ್ರಷ್ಟಾರರು ಇರಲಿ, ಆದರೆ ಮಹಾ ಪ್ರಲಯದಲ್ಲಿ ವಾಚ್ಯವಕ್ತೃಗಳು ಇರುವುದಿಲ್ಲ ಎಂದರೆ ಹಾಗೆ ಹೇಳಕೂಡದು. ಏಕೆಂದರೆ ನಿತ್ಯನಾದ ದ್ರಷ್ಟಾರನೂ ವಾಚ್ಯನೂ ಕೂಡ ಸಾಕ್ಷಾತ್ ಭಗವಂತನೇ ಆದುದರಿಂದ ವೇದ ವಚನವು ಪ್ರಲಯಕಾಲದಲ್ಲಿಯೂ ಕೂಡ ವಕ್ತೃ–ವಾಚ್ಯಗಳಿಂದ ವಿರಹಿತವಾದುದು ಆಗುವುದೇ ಇಲ್ಲ.

ಆದ್ದರಿಂದ ನಿತ್ಯವಾದ ವೇದವಚನದಂತೆ ನಿತ್ಯವಾದ ಜ್ಞಾನವೂ ಕೂಡ ಜ್ಞೇಯಾದಿಗಳಿಂದ ಯುಕ್ತವೇ ಆಗಿದೆ ಎಂದು ಅಂಗೀಕರಿಸಬೇಕೆಂದು ಉಪಸಂಹಾರ ಮಾಡುತ್ತಾರೆ –

**ಜ್ಞಾತೃಜ್ಞೇಯವಿಹೀನಂ ಚ ಜ್ಞಾನಮೇವ ನ ತದ್ಭವೇತ್ ॥ ೧೯೧ ॥**

**ನ ಹಿ ನಿತ್ಯೋಽಪಿ ವಕ್ತಾಽಸ್ತಿ ವಾಕ್ಯವಾಚ್ಯವಿವರ್ಜಿತಃ ।**

**ಜ್ಞಾನಜ್ಞೇಯವಿಹೀನಶ್ಚ ಜ್ಞೋಽಪ್ಯೇವಂ ನೈವ ವಿದ್ಯತೇ ॥ ೧೯೨ ॥**

ಜ್ಞಾತೃ–ಜ್ಞೇಯವಿರಹಿತವಾದುದು ಜ್ಞಾನವೇ ಆಗುವುದಿಲ್ಲ. ನಿತ್ಯನಾಗಿದ್ದರೂ ವಾಕ್ಯವಾಚ್ಯಗಳಿಂದ ವಿರಹಿತನಾದ ವಕ್ತಾರನೂ, ಜ್ಞಾನಜ್ಞೇಯಗಳಿಂದ ವಿರಹಿತನಾದ ಜ್ಞಾನಾಶ್ರಯನೂ ಕೂಡ ಇಲ್ಲವೇ ಇಲ್ಲ.

ಪರವಸ್ತು ಹಾಗೂ ಅದನ್ನು ಅಪೇಕ್ಷಿಸಿಕೊಂಡಿರುವ ಬ್ರಹ್ಮನ ಸರ್ವಜ್ಞತ್ವಕ್ಕೂ ಮಿಥ್ಯಾತ್ವವನ್ನು ಹೇಳುವುದರಿಂದ ಚೇತನತ್ವಾದಿಗಳೇ ಇಲ್ಲವೆಂದಾಗುವವು ಎಂದು ಹೇಳಲಾಯಿತು. ಈಗ ಪ್ರಪಂಚಮಿಥ್ಯಾತ್ವವೂ ಕೂಡ ಅಪ್ರಾಮಾಣಿಕವೆಂದು ಹೇಳುತ್ತಾರೆ –

**ಕಿಂಚ ಸರ್ವವಿಲೋಪಶ್ಚ ಕೇನ ಮಾನೇನ ಗಮ್ಯತೇ ।**

**ಸರ್ವೇಣ ಸಹ ತದ್ವಾಕ್ಯಮರ್ಥಶ್ಚ ಯದಿ ಗೃಹ್ಯತೇ ॥ ೧೯೩ ॥**

**ತದಭಾವೇನ ಸರ್ವಸ್ಯ ನಾಪಲಾಪೋ ಭವೇತ್ತದಾ ।**

**ನ ಗೃಹ್ಯತೇ ಚೇತ್ತನ್ನ್ಯಾಯಾದಪಲಾಪೋ ನ ಹಿ ಕ್ವಚಿತ್ ॥ ೧೯೪ ॥**

ಸರ್ವಕ್ಕೂ ಮಿಥ್ಯಾತ್ವವೂ ಕೂಡ ಯಾವ ಪ್ರಮಾಣದಿಂದ ತಿಳಿಯಲ್ಪಡುತ್ತದೆ? ಅಂದರೆ ಪ್ರತ್ಯಕ್ಷದಿಂದಲೂ ಆಗಮದಿಂದಲೂ ಅನುಮಾನದಿಂದಲೂ ಪ್ರಪಂಚಕ್ಕೆ ಮಿಥ್ಯಾತ್ವವು ತಿಳಿಯಲ್ಪಡುವುದಿಲ್ಲ ಎಂದರ್ಥ.

ಹಾಗಾದರೆ 'ನೇಹ ನಾನಸ್ತಿ ಕಿಂಚನ' ಇತ್ಯಾದಿ ಪ್ರಪಂಚಮಿಥ್ಯಾತ್ವ ಸಾಧಕ ಆಗಮವಾಕ್ಯವು ಇದೆಯಲ್ಲ ಎಂದರೆ –

ಸರ್ವದಿಂದ ಕೂಡಿಕೊಂಡು ಆ ವಾಕ್ಯವೂ ಅದರ ಅರ್ಥವೂ ಸ್ವೀಕರಿಸಲ್ಪಡುವ ಪಕ್ಷದಲ್ಲಿ ಆ ವಾಕ್ಯ ಮತ್ತು ವಾಕ್ಯಾರ್ಥಕ್ಕೂ ಮಿಥ್ಯಾತ್ವವು ಬರಬೇಕಾಗುವುದು. ಆಗ ಮಿಥ್ಯಾತ್ವ ಪ್ರತಿಪಾದಕ ವಾಕ್ಯಾಭಾವದ ಕಾರಣ ಸರ್ವಮಿಥ್ಯಾತ್ವವೂ ಕೂಡುವುದಿಲ್ಲ. ಸರ್ವಾಂತರ್ಗತವಾಗಿ ಈ ವಾಕ್ಯವನ್ನೂ ವಾಕ್ಯಾರ್ಥವನ್ನೂ ಸ್ವೀಕರಿಸದೇ ಇದ್ದರೆ, ಆ ನ್ಯಾಯದಿಂದಲೇ ಆಕಾಶ ಇತ್ಯಾದಿ ವಿಷಯದಲ್ಲಿಯೂ ನಿಷೇಧವು ಕೂಡುವುದಿಲ್ಲ.

ಹಾಗಾದರೆ ಅಭಿಮತವಾದ ಅರ್ಥದ ಸಿದ್ಧಿಗಾಗಿ ವಾಕ್ಯವನ್ನು ಪ್ರಮಾಣವೆಂದು ಉದಾಹರಿಸಿದಾಗ, ಇಂಥಹ ವಾಕ್ಯವು ಇಲ್ಲವೆಂದೋ, ಈ ಪದಗಳಿಗೆ ಅರ್ಥಶಕ್ತಿ ಇಲ್ಲವೆಂದೋ ಅಥವಾ ಈ ವಾಕ್ಯಕ್ಕೆ ಅಲ್ಲಿ ತಾತ್ಪರ್ಯವಿಲ್ಲವೆಂದೋ ದೋಷವನ್ನು ಹೇಳಬೇಕು. ಹಿಂದೆ ಹೇಳಿದ ಪ್ರಕಾರ ವಿಕಲ್ಪಮಾಡಿಕೊಂಡು ನಿರಾಕರಣೆಯನ್ನು ಮಾಡಿದ್ದರಿಂದ ದೋಷ ಹೇಳಿದಂತೆ ಆಗಲಿಲ್ಲ ಎಂದರೆ –

**ಉಪಪತ್ತಿವಿಹೀನಸ್ಯ ವಾಕ್ಯಸ್ಯಾರ್ಥೋ ನ ಗಮ್ಯತೇ ।**

**ಉಪಕ್ರಮಾದಿ ಲಿಂಗಾನಾಂ ಬಲೀಯೋ ಹ್ಯುತ್ತರೋತ್ತರಮ್ ॥ ೧೯೫ ॥**

**ಶ್ರುತ್ಯಾದೌ ಪೂರ್ವಪೂರ್ವಂ ಚ ಬ್ರಹ್ಮತರ್ಕ ವಿನಿರ್ಣಯಾತ್ ।**

ಯುಕ್ತಿಯಿಂದ ವಿರುದ್ಧವಾದ ವಾಕ್ಯಕ್ಕೆ ತಾತ್ಪರ್ಯವು ತಿಳಿಯಲ್ಪಡುವುದಿಲ್ಲ. ಉಪಕ್ರಮಾದಿ ಲಿಂಗಗಳಲ್ಲಿ ಉತ್ತರೋತ್ತರ ಪ್ರಾಬಲ್ಯವು ಎಂದು ಪ್ರಸಿದ್ಧ. ಉಪಕ್ರಮ, ಉಪಸಂಹಾರ, ಅಭ್ಯಾಸ, ಅಪೂರ್ವತಾ, ಫಲ, ಅರ್ಥವಾದ ಹಾಗೂ ಉಪಪತ್ತಿ ಇವು ತಾತ್ಪರ್ಯನಿರ್ಣಾಯಕ ಲಿಂಗಗಳು. ಅದರಲ್ಲಿ ಕೊನೆಯದಾದ ಉಪಪತ್ತಿಯೇ ಪ್ರಬಲ. ಶ್ರುತಿ ಮೊದಲಾದ ಲಿಂಗಗಳಲ್ಲಿ (ಶ್ರುತಿ, ಲಿಂಗ, ವಾಕ್ಯ ಪ್ರಕರಣ, ಸ್ಥಾನ ಹಾಗೂ ಸಮಾಖ್ಯೆ) ಪೂರ್ವಪೂರ್ವ ಪ್ರಬಲವು. ಆದ್ದರಿಂದ ಅವುಗಳಲ್ಲಿ ಶ್ರುತಿಯೇ ಎಲ್ಲಕ್ಕಿಂತ ಪ್ರಬಲವು. ಹೀಗೆ ಬ್ರಹ್ಮತರ್ಕದಲ್ಲಿ ನಿರ್ಣಯಿಸಲಾಗಿದೆ.

**ಪ್ರತ್ಯಕ್ಷಮುಪಪತ್ತಿಶ್ಚ ಬಹವಶ್ಚಾಗಮಾ ಯದಾ ॥ ೧೯೬ ॥**

**ವಿರುದ್ಧ್ಯಂತೇ ನ ಚಾರ್ಥೋಽಸ್ತಿ ಯತ್ರ ಲಿಂಗವಿರೋಧಿತಾ ।**

**ಸ ಏವಾರ್ಥಃ ಕಥಂ ಗ್ರಾಹ್ಯಃ ಉಪಪನ್ನೇಽವಿರೋಧಿನಿ ॥ ೧೯೭ ॥**

ವಿಶ್ವಮಿಥ್ಯಾತ್ವವನ್ನು ಅಂಗೀಕರಿಸಿದರೆ, ಈ ಗಗನವು ಸತ್ಯ ಎಂಬ ಪ್ರತ್ಯಕ್ಷವೂ

(ಇದು ಸಾಕ್ಷಿರೂಪವಾದ್ದರಿಂದ ಬಲಿಷ್ಠವು), ಅರ್ಥಕ್ರಿಯಾಕಾರಿತ್ವಾದಿ ರೂಪವಾದ ಯುಕ್ತಿಯೂ(ವ್ಯಾಪ್ತ್ಯಾದಿ ವಿಶಿಷ್ಟವಾದ್ದರಿಂದ ಪ್ರಬಲ), ವಿಶ್ವಂ ಸತ್ಯಂ ಇತ್ಯಾದಿ ಅನೇಕ ಆಗಮಗಳೂ(ನಿರವಕಾಶತ್ವವಾದ್ದರಿಂದ ಪ್ರಬಲ) ಅದಕ್ಕೆ ವಿರುದ್ಧವಾಗುತ್ತವೆ. ಆದಕಾರಣ ಯಾವ ಅರ್ಥವನ್ನು ಅಂಗೀಕರಿಸಿದರೆ ಪ್ರತ್ಯಕ್ಷಾದಿ ಪ್ರಮಾಣಗಳಿಗೂ ಉಪಕ್ರಮಾದಿ ಲಿಂಗಗಳಿಗೂ ವಿರೋಧವಾಗುವುದಿಲ್ಲವೋ ಆ ಅರ್ಥವನ್ನೇ ಗ್ರಹಿಸಬೇಕು. ನೇಹ ನಾನಾಸ್ತಿ ಕಿಂಚನ ಎನ್ನುವ ವಾಕ್ಯಕ್ಕೆ ಸ್ವಗತಭೇದಾಭಾವ ಎಂಬ ಅರ್ಥವು ಪ್ರಮಾಣಾನುಕೂಲ್ಯದಿಂದ ಕೂಡುತ್ತಿರಲು ಆ ಅರ್ಥವನ್ನೇ ಗ್ರಹಿಸಬೇಕು, ಹೊರತು ಪ್ರಪಂಚಮಿಥ್ಯಾತ್ವ ಪ್ರತಿಪಾದಕಾರ್ಥವನ್ನು ಸ್ವೀಕರಿಸಬಾರದು.

**ಮುಖ್ಯಾರ್ಥೇ ವಿದ್ಯಮಾನೇ ತು ಕ್ವ ಸಾರ್ವಜ್ಞಂ ನಿಷಿಧ್ಯತೇ ।**

**ಅತಃ ಸರ್ವಗುಣೈರ್ಯುಕ್ತಂ ಬ್ರಹ್ಮಾಂಗೀಕಾರ್ಯಮೇವ ಹಿ ॥ ೧೯೮ ॥**

**ಅಪಲಾಪೋಽಪಿ ಸರ್ವಸ್ಯ ನ ಕಥಂಚನ ಯುಜ್ಯತೇ ।**

ಈ ವಾಕ್ಯಕ್ಕೆ ಪ್ರಪಂಚಮಿಥ್ಯಾತ್ವ ಪ್ರತಿಪಾದಕ ಅರ್ಥವು ಕೂಡದಿರಲು ಹಾಗೂ ಪರಮಾತ್ಮನಲ್ಲಿ ಸ್ವಗುಣಕ್ರಿಯಾದಿಗಳಿಂದ ಭೇದವಿಲ್ಲವೆಂಬುದಾಗಿ ಮುಖ್ಯಾರ್ಥವು ಕೂಡುತ್ತಿರಲು, ಭಗವಂತನ ಸರ್ವಜ್ಞತ್ವವನ್ನು ಈ ವಾಕ್ಯವು ಹೇಗೆ ನಿಷೇಧಿಸೀತು? ಆದ್ದರಿಂದ ಸರ್ವಗುಣಗಳಿಂದ ಯುಕ್ತನಾದ ಬ್ರಹ್ಮನನ್ನು ಅಂಗೀಕರಿಸಲೇಬೇಕು. ಸರ್ವವನ್ನೂ ಮಿಥ್ಯೆಯೆಂದು ಅಪಲಾಪ ಮಾಡುವುದು ಯಾವ ರೀತಿಯಿಂದಲೂ ಕೂಡುವುದಿಲ್ಲ. ಆದಕಾರಣ ಸರ್ವಜ್ಞತ್ವಾದಿ ಧರ್ಮಗಳು ಶ್ರೀಹರಿಯಲ್ಲಿ ಸತ್ಯವೇ ಆಗಿರುವುದರಿಂದ, ವಿರುದ್ಧ ಧರ್ಮಗಳಿಂದ ಯುಕ್ತರಾದ ಜೀವ-ಬ್ರಹ್ಮರಿಗೆ ತತ್ವಮಸಿ ಇತ್ಯಾದಿ ವಾಕ್ಯದ ಆಧಾರದಿಂದ ಐಕ್ಯವನ್ನು ಹೇಳುವುದು ಸರ್ವಥಾ ಕೂಡುವುದಿಲ್ಲ.

ಈ ವಿಷಯದಲ್ಲಿ ದೋಷಾಂತರವನ್ನೂ ಹೇಳುತ್ತಾರೆ –

**ಅನಾದಿಯೋಗ್ಯತಾ ಚೋಕ್ತಾ ತೇನ ಗ್ರಾಹ್ಯೈವ ಸರ್ವಥಾ ॥ ೧೯೯ ॥**

ಜೀವರಿಗೆ ಅನಾದಿಯೋಗ್ಯತೆಯು ಪ್ರಮಾಣಗಳಿಂದ ಉಪಪಾದಿಸಲ್ಪಟ್ಟಿದೆ. ಆ ಕಾರಣದಿಂದ ಅನಾದಿಯೋಗ್ಯತೆಯು ಸರ್ವಪ್ರಕಾರದಿಂದಲೂ ಗ್ರಾಹ್ಯವೇ ಆಗಿದೆ. ಆದಕಾರಣ ಜೀವರಲ್ಲಿ ದೇವ ಮಾನವ ದಾನವ ರೂಪವಾದ ಹಾಗೂ ಅವುಗಳ ಅವಾಂತರ ಭೇದರೂಪವಾದ ಅನಾದಿ ನಿತ್ಯವಾದ ಯೋಗ್ಯತೆಯು ಪ್ರಮಾಣಗಳಿಂದ ಸಿದ್ಧವಾಗಿರಲು ಜೀವಬ್ರಹ್ಮರಿಗೆ ಐಕ್ಯವು ಅಸಂಭಾವಿತವೆಂದು ಅಭಿಪ್ರಾಯ.

ಈ ವಿಷಯದಲ್ಲಿ ಮತ್ತೊಂದು ಹೇತುವನ್ನೂ ಹೇಳುತ್ತಾರೆ –

**ಮುಕ್ತಾನಾಂ ತಾರತಮ್ಯಂ ಚ ಮಾನೈರುಕ್ತೈರ್ನ ಚಾಲ್ಯತೇ ।**

ಮುಕ್ತರಲ್ಲಿರತಕ್ಕ ತಾರತಮ್ಯವು ಪೂರ್ವೋಕ್ತ ಪ್ರಮಾಣಗಳಿಂದ ಸಿದ್ಧವಾಗಿರುವ ಕಾರಣ ಅದನ್ನು ಅನ್ಯಥಾ ಮಾಡಲಿಕ್ಕೆ ಶಕ್ಯವಾಗುವುದಿಲ್ಲ.

ಹೀಗೆ ಮುಕ್ತರಲ್ಲಿಯೂ ತಾರತಮ್ಯವು ಪ್ರಮಿತವಾಗಿರಲು ಜೀವಬ್ರಹ್ಮೈಕ್ಯವು ಸರ್ವಥಾ ಅಯುಕ್ತವು. ಆಗ ತತ್ವಮಸಿ ಇತ್ಯಾದಿ ವಾಕ್ಯಗಳಿಗೆ ಐಕ್ಯಪರತ್ವವೂ ಕೂಡುವುದಿಲ್ಲ. ಗುಣಗಳಿಗೆ ಮಿಥ್ಯಾತ್ವ ಕಲ್ಪನೆಯೂ ಸರ್ವಥಾ ಅಯುಕ್ತವಾಗುವುದು ಎಂದು ಅಭಿಪ್ರಾಯ.

ಮುಕ್ತರ ತಾರತಮ್ಯ ವಿಷಯದಲ್ಲಿ ಪ್ರಮಾಣಾಂತರವನ್ನು ಹೇಳುತ್ತಾರೆ –

**ಜ್ಞಾನಿನೋಽಪಿ ಯತೋ ನಿತ್ಯಂ ಕುರ್ವಂತಿ ಶುಭಮೇವ ಹಿ ।। ೨೦೦ ।।**

**ತಾರತಮ್ಯಂ ತು ಮುಕ್ತೌ ಚ ತೇನೈವಾಧ್ಯವಸೀಯತೇ ।**

**ತಾರತಮ್ಯಂ ನ ಚೇನ್ಮುಕ್ತೌ ಕುತಃ ಕುರ್ಯುಃ ಶುಭಂ ಪುನ ೨೦೧ ।।**

ಜ್ಞಾನಿಗಳೂ ಕೂಡ ನಿತ್ಯದಲ್ಲಿಯೂ ಶುಭಕರ್ಮವನ್ನೇ ಮಾಡುತ್ತಾರೆ ಹಾಗೂ ಪಾಪವನ್ನು ಪರಿಹರಿಸಿಕೊಳ್ಳುತ್ತಾರೆ. ಆದಕಾರಣ ಶುಭಕರ್ಮಕರಣ ಹಾಗೂ ಅಶುಭ ಕರ್ಮಪರಿತ್ಯಾಗಗಳಲ್ಲಿ ತಾರತಮ್ಯವು ಇದೆ. ಅದು 'ದಶಕಲ್ಪಂ ತಪಶ್ಚೀರ್ಣಂ' ಇತ್ಯಾದಿ ಪ್ರಮಾಣಗಳಿಂದ ಸಿದ್ಧವು. ಈ ನಿರವಕಾಶ ಪ್ರಮಾಣದಿಂದಲೇ ಮೋಕ್ಷ ಪೂರ್ವ ಸಾಧನೆಗಳಲ್ಲಿ ತಾರತಮ್ಯವು ಸಿದ್ಧವಾಗುವುದರಿಂದ, ಮುಕ್ತಿಯಲ್ಲಿ ತಾರತಮ್ಯವಿದೆ ಎಂಬುದು ನಿಶ್ಚಯವಾಗುವುದು. ಬ್ರಹ್ಮಾದಿಗಳು ಮುಕ್ತಿಯಲ್ಲಿ ತಾರತಮ್ಯವುಳ್ಳವರು ಆಗಿಲ್ಲದ ಪಕ್ಷದಲ್ಲಿ, ಆಗ ಕೇವಲ ಜ್ಞಾನದಿಂದಲೇ ಮುಕ್ತಿಯು ಪ್ರಾಪ್ತವಾಗುವಾಗ, ಪುನಃ ಅಂದರೆ ಅಪರೋಕ್ಷಜ್ಞಾನವು ಹುಟ್ಟಿದಮೇಲೂ ಶುಭ ಕರ್ಮವನ್ನು ಮಾಡುತ್ತಿರಲಿಲ್ಲ.

ಇದನ್ನೇ ವಿಪರ್ಯಯದಿಂದ ಪ್ರತಿಪಾದಿಸುತ್ತಾರೆ –

**ಕೃಚ್ಛ್ರೇಣಾಪಿ ತಪೋ ಜ್ಞಾನಂ ಕರ್ಮಾಣ್ಯೇತೇ ಚರಂತಿ ಹಿ ।**

**ಬಿಭ್ಯತಿ ಸ್ಮಾಶುಭಾನ್ನಿತ್ಯಂ ಸಕಾಮಾಶ್ಚ ಶುಭೇ ಸದಾ ।। ೨೦೨ ।।**

ಈ ಜ್ಞಾನಿಗಳು ಕಷ್ಟದಿಂದಲೂ ತಪಸ್ಸು, ಜ್ಞಾನಪ್ರಾಪಕ ಶ್ರವಣಾದಿಗಳು ಹಾಗೂ ಯಜ್ಞಾದಿ ಕರ್ಮಗಳನ್ನೂ ಮಾಡುತ್ತಾರೆ. ಯಾವಾಗಲೂ ಶುಭವನ್ನೇ ಇಚ್ಛಿಸುವ ಅವರು ನಿತ್ಯದಲ್ಲಿಯೂ ಅಶುಭ ಕರ್ಮದಿಂದಾಗುವ ಅನರ್ಥವನ್ನು ಕುರಿತು ಭಯ ಪಡುತ್ತಾ ಇರುವರು.

**ನ ಚ ಸ್ವಭಾವ ಏವಾಯಂ ಭಯಪೂರ್ವಪ್ರವೃತ್ತಿತಃ ।**

**ಕೃಚ್ಛ್ರೇಣಾಚರಣಾಚ್ಚೈವ ಶುಭಸ್ಯೈವ ಪುನಃ ಪುನಃ ।। ೨೦೩ ।।**

ಜ್ಞಾನಿಗಳ ಶುಭಾಚರಣರೂಪವಾದ ಈ ಪ್ರವೃತ್ತಿಯು ಅವರ ಸ್ವಭಾವವೇ ಅಲ್ಲ. ಏಕೆಂದರೆ ಶುಭಕರ್ಮವನ್ನು ಮಾಡದಿದ್ದರೆ ಪ್ರತ್ಯವಾಯ ಬರುವುದೆಂಬ ಭಯದಿಂದ ಅವರು ಕಷ್ಟದಿಂದ ಮತ್ತೆ ಮತ್ತೆ ಶುಭಕರ್ಮವನ್ನು ಆಚರಿಸುತ್ತಾರೆ.

ಹಾಗಾದರೆ ಜ್ಞಾನಿಗಳು ಕರ್ಮಮಾಡುವುದಕ್ಕೆ ಮೊದಲೇ ಭಯದಿಂದ ಹಾಗೂ ಕಷ್ಟದಿಂದ ಅಶುಭಕರ್ಮವನ್ನು ಪರಿತ್ಯಾಗಮಾಡಿ ಶುಭಕರ್ಮವನ್ನು ಅನುಷ್ಠಾನ ಮಾಡುತ್ತಾರೆ. ಆದ್ದರಿಂದ ಸ್ವಭಾವದಿಂದಲೇ ಅವರು ಹಾಗೆ ಮಾಡುತ್ತಾರೆ ಎಂದು ಅಂಗೀಕರಿಸಿದರೆ ದೋಷವೇನು ಎಂದರೆ –

**ತಾದೃಶೇಪಿ ಸ್ವಭಾವಶ್ಚೇದಜ್ಞಸ್ಯಾಪಿ ಭವೇತ್ತಥಾ ।**

**ಫಲವತ್ತ್ವೇ ಪ್ರಮಾಣಂ ಚೇತ್ತತ್ರ ಜ್ಞಸ್ಯ ಸಮಂ ಹಿ ತತ್ ।। ೨೦೪ ।।**

ಭಯಪೂರ್ವ ಪ್ರವೃತ್ತಿಯೂ ಕೂಡ ಜ್ಞಾನಿಯ ಸ್ವಭಾವವೆಂದಾದರೆ ಅಜ್ಞನಿಗೂ ಹಾಗೆಯೇ ಆಗುವುದು. ಆಗ ಜ್ಞಾನಿಗಳಿಗೆ ಕರ್ಮಾನುಷ್ಠಾನದಲ್ಲಿ ಅಜ್ಞರಿಗಿಂತ ವಿಶೇಷವಿಲ್ಲ ಎಂದು ಹೇಳಬೇಕಾಗುತ್ತದೆ. ಫಲವತ್ವದಲ್ಲಿ ಸಾಮ್ಯವಿರುವುದಾದರೆ ಹಾಗೆ ಒಪ್ಪಬಹುದಿತ್ತು. ಅಜ್ಞಾನಿಗಳು ಮಾಡಿದ ಕರ್ಮಗಳಿಗೆ ಫಲವಿದೆ ಎನ್ನುವಲ್ಲಿ ಪ್ರಮಾಣವಿದೆ ಎನ್ನುವುದಾದರೆ, ಜ್ಞಾನಿಗೂ ಈ ವಿಷಯದಲ್ಲಿ ಸಾಮ್ಯವಿದೆ. ಅಂದರೆ ಜ್ಞಾನಿಗೆ ಕರ್ಮಕ್ಕೆ ಫಲವಿದೆ ಎನ್ನುವ ವಿಷಯದಲ್ಲಿ ಪ್ರಮಾಣ, ಅಧಿಕಾರ ಮೊದಲಾದವು ಇದ್ದೇ ಇರುವುದು.

ಆ ಪ್ರಮಾಣವು ಯಾವುದೆಂದರೆ ಅದನ್ನು ತೋರಿಸುತ್ತಾರೆ –

**ನಿಷ್ಕಾಮಂ ಜ್ಞಾನಪೂರ್ವಂ ಚ ನಿವೃತ್ತಮಿಹ ಚೋಚ್ಯತೇ ।**

**ನಿವೃತ್ತಂ ಸೇವಮಾನಸ್ತು ಬ್ರಹ್ಮಾಭ್ಯೇತಿ ಸನಾತನಮ್ ।। ೨೦೫ ।।**

ಪ್ರವೃತ್ತ ನಿವೃತ್ತ ಕರ್ಮಗಳ ಮಧ್ಯದಲ್ಲಿ ಕಾಮನಾರಹಿತವೂ ಜ್ಞಾನಪೂರ್ವಕವೂ ಆದ ಕರ್ಮವು ನಿಷ್ಕಾಮಕರ್ಮವೆಂದು ಹೇಳಲ್ಪಡುತ್ತದೆ. ನಿವೃತ್ತಕರ್ಮವನ್ನು ಸೇವಿಸುವವನು ನಿತ್ಯನೂತನನಾದ ಪರಬ್ರಹ್ಮನನ್ನು ಅತಿಶಯವಾಗಿ ಹೊಂದುತ್ತಾನೆ. ಅಂದರೆ ಆನಂದೋದ್ರೇಕಸಹಿತನಾಗಿ ಮುಕ್ತನಾಗುತ್ತಾನೆ ಎಂದರ್ಥ.

ಇಲ್ಲಿ ಹೇಳಿದ ಸ್ಮೃತಿಯ ವಾಕ್ಯಾರ್ಥ ವಿವರಣೆಗಾಗಿ ಮತ್ತೊಂದು ಸ್ಮೃತಿಯನ್ನು ಪಠಿಸುತ್ತಾರೆ –

**ಶುಭೇನಾನಂದವೃದ್ಧಿಃ ಸ್ಯಾದ್ ಹ್ರಾಸಶ್ಚೈವಾಶುಭೇನ ಹಿ ।**

**ಜ್ಞಾನಿನೋಽಪಿ ಯತಸ್ತೇನ ಕರ್ತವ್ಯಂ ಶುಭಮೇವ ತೈಃ ।। ೨೦೬ ।।**

ಶುಭಕರ್ಮದಿಂದ ಆನಂದವೃದ್ಧಿಯೂ ಅಶುಭಕರ್ಮದಿಂದ ಆನಂದಹ್ರಾಸವೂ ಆಗುವುದು. ಜ್ಞಾನಿಗೂ ಕೂಡ ಅಶುಭಕರ್ಮದಿಂದ ಆನಂದಹ್ರಾಸವಿರುವ ಕಾರಣ ಜ್ಞಾನಿಗಳಿಂದ ಶುಭಕರ್ಮವೇ ಮಾಡತಕ್ಕದು, ಅಶುಭಕರ್ಮವು ಬಿಡತಕ್ಕದ್ದೇ.

ಈ ವಿಷಯದಲ್ಲಿ ಶ್ರುತಿಯನ್ನು ಹೇಳುತ್ತಾರೆ –

**ಉಪಾಸ್ತೇ ಸ ಯ ಆತ್ಮಾನಂ ಕ್ಷೀಯತೇ ನಾಸ್ಯ ಕರ್ಮ ಹಿ ।**

**ಅಸ್ಮಾದ್ಧ್ಯೇವಾತ್ಮನೋ ಯದ್ಯತ್ಕಾಮಯೇತ್ಸೃಜತೇ ಚ ತತ್ ।। ೨೦೭ ।।**

ಜ್ಞಾನಿಯಾದ ಯಾವನು ಪರಮಾತ್ಮನನ್ನು ಉಪಾಸನೆ ಮಾಡುತ್ತಾನೋ ಅವನ ಕರ್ಮವು ಕ್ಷಯಿಸುವುದಿಲ್ಲ. ಆ ಜ್ಞಾನಿಯು ಯಾವಯಾವುದನ್ನು ಇಚ್ಛಿಸುವನೋ ಆವಾವುದನ್ನು ಪರಮಾತ್ಮನ ಪ್ರಸಾದದಿಂದಲೇ ಸೃಷ್ಟಿ ಮಾಡುತ್ತಾನೆ. ಇಲ್ಲಿ 'ಸ ಯ ಆತ್ಮಾನಮೇವ ಲೋಕಮುಪಾಸ್ತೇ ನ ಹಾಸ್ಯ ಕರ್ಮ ಕ್ಷೀಯತೇಽಸ್ಮಾದ್ಧ್ಯೇವಾತ್ಮನೋ ಯದ್ಯತ್ಕಾಮಯತೇ ತತ್ತತ್ಸೃಜತೇ' ಎಂಬ ಶ್ರುತಿಯನ್ನು ಸ್ಮರಿಸುತ್ತಾರೆ.

**ಅವಿದ್ವಾನ್ಬಹುಕರ್ಮಾಪಿ ಹ್ಯಂತವತ್ಫಲಮಾಪ್ನುಯಾತ್ ।**

**ಯದೇವ ವಿದ್ಯಯಾ ಕುರ್ಯಾತ್ತದೇವ ಹ್ಯತಿವೀರ್ಯವತ್ ।। ೨೦೮ ।।**

ಜ್ಞಾನಿಯಲ್ಲದವನು ಬಹುಕರ್ಮವಂತನಾದರೂ ಕೂಡ ನಾಶವುಳ್ಳ ಫಲವನ್ನು ಹೊಂದುತ್ತಾನೆ. ಯಾವುದನ್ನೇ ವಿದ್ಯೆಯಿಂದ, ಅಂದರೆ ತನಗೆ ಯೋಗ್ಯವಾದ ಉಪನಿಷತ್ತಿನಿಂದ, ಮಾಡುವನೋ ಅದುವೇ ಅತ್ಯಂತ ವೀರ್ಯವುಳ್ಳದ್ದು. ಇಲ್ಲಿ ಅವಿದ್ವಾನ್ ಎನ್ನುವುದರಿಂದ 'ಯದ್ಯಪ್ಯನೇವಂವಿತ್ ಮಹತ್ಪುಣ್ಯಂ ಕರ್ಮ ಕರೋತಿ ತದ್ಧಾಸ್ಯಾತಂತಃ ಕ್ಷೀಯತ ಏವ' ಎಂಬ ಶ್ರುತಿಯನ್ನೂ, ಯದೇವ ಎನ್ನುವುದರಿಂದ 'ಯದೇವ ವಿದ್ಯಯಾ ಕರೋತಿ ಶ್ರದ್ಧಯೋಪನಿಷದಾ ತದೇವ ವೀರ್ಯವತ್ತರಂ ಭವತಿ' ಎಂಬ ಶ್ರುತಿಯನ್ನೂ ಸ್ಮರಿಸುತ್ತಾರೆ.

**ಇತ್ಯಾದಿ ವಾಕ್ಯಸಾಮರ್ಥ್ಯಾತ್ತಾರತಮ್ಯಂ ವಿಮುಕ್ತಿಗಮ್ ।**

ಇದೇ ಮೊದಲಾದ ವಾಕ್ಯಗಳ ಸಾಮರ್ಥ್ಯದಿಂದ ಮೋಕ್ಷದಲ್ಲಿನ ತಾರತಮ್ಯವು ಸಿದ್ಧವಾಗುವುದು.

ಈ ವಾಕ್ಯಗಳು ಜ್ಞಾನಿಯ ಕರ್ಮಗಳಿಗೆ ಸಫಲತ್ವವನ್ನು ಪ್ರತಿಪಾದಿಸುವುದಿಲ್ಲ. 'ಸ ಯ ಆತ್ಮಾನಂ' ಎನ್ನುವಲ್ಲಿ ಉಪಾಸಕನ ಕರ್ಮಗಳಿಗೆ ಅಕ್ಷಯಫಲತ್ವವು ಶ್ರುತವಾಗಿದೆ. ಇತರೆಡೆಗಳಲ್ಲಿ ಜ್ಞಾನ ವಿದ್ಯಾ ಶಬ್ದಗಳಿಂದ ಪರೋಕ್ಷಜ್ಞಾನಾರ್ಥತ್ವವೂ ಕೂಡುವುದೆಂಬ ಆಶಂಕೆಯನ್ನು 'ನ ಚ' ಇತ್ಯಾದಿ ವಚನದಿಂದ ಪರಿಹರಿಸುತ್ತಾರೆ –

**ನ ಚಾತ್ರೋಪಸಾಕಸ್ಯೈವ ಫಲಮಕ್ಷಯಮುಚ್ಯತೇ ।। ೨೦೯ ।।**

**ನ ಹಿ ಜ್ಞಾನಂ ವಿನಾ ಕ್ವಾಪಿ ಫಲಸ್ಯಾಕ್ಷಯತಾ ಭವೇತ್ ।**

ಈ ವಾಕ್ಯಗಳಲ್ಲಿ ಉಪಾಸಕನ ಕರ್ಮಗಳಿಗೇ ಅಕ್ಷಯ ಫಲವು ಹೇಳಲ್ಪಟ್ಟಿಲ್ಲ. ಏಕೆಂದರೆ ಬ್ರಹ್ಮಸಾಕ್ಷಾತ್ಕಾರವನ್ನು ಹೊರತು ಎಲ್ಲಿಯೂ ಮೋಕ್ಷದಲ್ಲಿಯೂ ಕರ್ಮಗಳ ಫಲಕ್ಕೆ ಅಕ್ಷಯತ್ವವು ಆಗಲಾರದು.

ಹಾಗಾದರೆ ಅಜ್ಞಾನಿಯ ಪಕ್ಷದಲ್ಲಿಯೂ ಅನುಪಪತ್ತಿಯಿಲ್ಲ. ಕರ್ಮಣಾ ಜ್ಞಾನಮಾತನೋತಿ ಎನ್ನುವ ಶ್ರುತಿಯಿಂದ ಉಪಾಸಕನಿಂದ ಮಾಡಲ್ಪಟ್ಟ ಅಸಂಕಲ್ಪಿತ ಫಲವುಳ್ಳ ಕರ್ಮಗಳು ಜ್ಞಾನವನ್ನು ಹುಟ್ಟಿಸುತ್ತವೆ. ಜ್ಞಾನದಿಂದ

ಮೋಕ್ಷವು ಆಗುವುದು. ಹೀಗೆ ಅಜ್ಞಾನಿಯು ಮಾಡಿದ ಕರ್ಮಗಳಿಗೂ ಕೂಡ ಜ್ಞಾನ ದ್ವಾರಾ ಅಕ್ಷಯಫಲತ್ವವು ಕೂಡುವುದು ಎಂದು ಆಶಂಕಿಸಿದರೆ –

**ಜ್ಞಾನದ್ವಾರೇಣ ಚೇತ್ತಸ್ಯ ನಾಸ್ಮತ್ಪಕ್ಷಪ್ರತೀಪತಾ ॥ ೨೧೦ ॥**

ಕರ್ಮಫಲಕ್ಕೆ ಅಕ್ಷಯತ್ವವು ಜ್ಞಾನದ್ವಾರಾ ಎಂಬ ಪರರ ವ್ಯಾಖ್ಯಾನಕ್ಕೆ ಮುಕ್ತಿಯಲ್ಲೂ ತಾರತಮ್ಯವನ್ನು ಹೇಳುವ ನಮ್ಮ ಪಕ್ಷದಿಂದ ವಿರೋಧವು ಇಲ್ಲ.

ಜ್ಞಾನದ್ವಾರದಿಂದ ಕರ್ಮಫಲಕ್ಕೆ ಅಕ್ಷಯತ್ವವನ್ನು ಹೇಳುವ ಅನ್ಯಥಾ ವ್ಯಾಖ್ಯಾನವು ಯುಕ್ತವೇ ಆಗಿದೆ ಎಂದು ಒಪ್ಪಿದರೂ, ಆ ವಾಕ್ಯಗಳಿಗೆ ಪ್ರಕೃತದಲ್ಲಿ ಸಾಧಕತ್ವವಿಲ್ಲ. ಜ್ಞಾನೋತ್ತರಕರ್ಮಕ್ಕೆ ಮೋಕ್ಷಾಂತರ್ಗತ ಫಲಹೇತುತ್ವವು ಅನ್ಯ ಪ್ರಮಾಣದಿಂದಲೇ ಸಿದ್ಧವಾಗುವುದು. ಆದ್ದರಿಂದ ಮುಕ್ತರ ತಾರತಮ್ಯವನ್ನು ಬಿಡಲು ಅಶಕ್ಯವು ಎಂದು ಅಂಗೀಕರಿಸಿಕೊಂಡು (ಅಭ್ಯುಪಗಮವಾದದಿಂದ) ಹೇಳುತ್ತಾರೆ –

**ಜ್ಞಾನೋತ್ತರಸ್ಯೈವಮಪಿ ಹ್ಯಕ್ಷಯತ್ವಂ ನ ಚಾನ್ಯಥಾ ।**

ಬ್ರಹ್ಮಸಾಕ್ಷಾತ್ಕಾರವಾದಮೇಲೆ ಇರತಕ್ಕ ಕರ್ಮಕ್ಕೇನೆ ಮೋಕ್ಷದಲ್ಲಿ ಅಕ್ಷಯ ಫಲವತ್ವವು, ಬೇರೆ ಪ್ರಕಾರವಿಲ್ಲ. ಅಂದರೆ ಪರಿಶೇಷಪ್ರಮಾಣದಿಂದ ಎಂದರ್ಥ.

ಪರಿಶೇಷಪ್ರಮಾಣವನ್ನು ತೋರಿಸುತ್ತಾರೆ –

**ಪೂರ್ವಭಾವಿಶುಭಾನಾಂ ಹಿ ಜ್ಞಾನೇನೈವ ಕೃತಾರ್ಥತಾ ॥ ೨೧೧ ॥**

**ಪ್ರಾರಬ್ಧಾನಾಂ ತು ಭೋಗೇನ ತಜ್ಜ್ಞಾನೋತ್ತರಕರ್ಮಣಾಂ ।**

**ಮುಕ್ತಾವನುಪ್ರವೇಶಃ ಸ್ಯಾದನ್ಯಥಾ ತತ್ಕೃತಿರ್ನ ಹಿ ॥ ೨೧೨ ॥**

ಜ್ಞಾನಿಕೃತ ಕರ್ಮಗಳಲ್ಲಿ ಜ್ಞಾನಾರ್ಥತ್ವ, ಭೋಗಾರ್ಥತ್ವ ಅಥವಾ ವ್ಯರ್ಥತ್ವ ಹೀಗೆ ಮೂರು ವಿಧಗಳು ಸಂಭವನೀಯವು. ಇವುಗಳಲ್ಲಿ ಜ್ಞಾನಿಕೃತ ಕರ್ಮಗಳಿಗೆ ಜ್ಞಾನಾರ್ಥತ್ವವು ಕೂಡುವುದಿಲ್ಲ. ಏಕೆಂದರೆ – ಜ್ಞಾನಬರುವುದಕ್ಕೆ ಪೂರ್ವದಲ್ಲಿ ಇರತಕ್ಕ ಶುಭಕರ್ಮಗಳಿಗೆ ಜ್ಞಾನಹುಟ್ಟಿಸುವುದರಿಂದಲೇ ಕೃತಾರ್ಥತೆಯು. ಆ ಕರ್ಮಗಳಿಗೆ ಬೇರೆ ಕಾರ್ಯವಿಲ್ಲ. ಭೋಗಾರ್ಥತ್ವವೂ ಕೂಡಲಾರದು. ಪ್ರಾಚೀನ ಪ್ರಾರಬ್ಧಕರ್ಮಗಳಿಂದಲೇ ಭೋಗ ಹುಟ್ಟುವುದು. ಹೇಗೆಂದರೆ ಪ್ರಾರಬ್ಧಕರ್ಮಗಳಿಗೆ ಭೋಗದಿಂದಲೇ ಕೃತಾರ್ಥತೆಯು. ಜ್ಞಾನಿಗಳ ಕರ್ಮಗಳಿಗೆ ವೈಯರ್ಥ್ಯವಿದ್ದರೆ ಆ ಕರ್ಮಗಳ ಅನುಷ್ಠಾನವು ಕೂಡುವುದಿಲ್ಲ. ಏಕೆಂದರೆ ಪ್ರೇಕ್ಷಾವಂತರು ಎಂದಿಗೂ ವ್ಯರ್ಥವಾದ ಕರ್ಮವನ್ನು ಮಾಡವುದಿಲ್ಲವಷ್ಟೆ. ಆದ್ದರಿಂದ ಜ್ಞಾನೋತ್ತರದಲ್ಲಿ ಮಾಡಿದ ಕರ್ಮಾನುಷ್ಠಾನವು ಮುಕ್ತಿಯಲ್ಲಿ ಆನಂದವೃದ್ಧಿಗೋಸ್ಕರವೇ ಆಗುವುದು.

ಪೂರ್ವಭಾವಿ ಶುಭಕರ್ಮಗಳು ಜ್ಞಾನಾರ್ಥಕ್ಕಾಗಿ ಎಂದು ಹೇಳಲಾಯಿತು. ಎಲ್ಲಕ್ಕೂ ಜ್ಞಾನಾರ್ಥತ್ವವಿದ್ದರೂ ಅದರಲ್ಲಿ ವಿಶೇಷವನ್ನು ಹೇಳುತ್ತಾರೆ –

ಜ್ಞಾನಾತ್ಪೂರ್ವಾಣಿ ಕರ್ಮಾಣಿ ಶುಭಾನಿ ಜ್ಞಾನಸಿದ್ಧಯೇ ।

ಅಕಾಮ್ಯಾನಿ ನಿಷಿದ್ಧಾನಿ ಜ್ಞಾನರೋಧಾಯ ಭುಕ್ತಯೇ ।। ೨೧೩ ।।

ಜ್ಞಾನಕ್ಕೆ ಪೂರ್ವದಲ್ಲಿ ಮಾಡಿದ ಅಕಾಮ್ಯಗಳೇ ಆದ ಶುಭಕರ್ಮಗಳು ಜ್ಞಾನ ಸಿದ್ಧಿಗೋಸ್ಕರವೇ ಆಗುತ್ತವೆ. ಆದರೆ ಕಾಮ್ಯಕರ್ಮಗಳಲ್ಲ. ನಿಷಿದ್ಧ ಕರ್ಮಗಳಾದರೂ ಜ್ಞಾನ ಹುಟ್ಟದಂತೆ ಮಾಡುವುದಕ್ಕೂ ಅಥವಾ ಹುಟ್ಟಿದ ಜ್ಞಾನದ ನಾಶಕ್ಕಾಗಿಯೂ ಕಾರಣವಾಗುವುದಲ್ಲದೆ ದುಃಖದ ಅನುಭವಕ್ಕಾಗಿಯೂ ಆಗುತ್ತವೆ.

ಕಾಮ್ಯಾನಿ ಶುಭಾನಿ ಎಂಬಂತೆಯೇ ನಿತ್ಯ ನೈಮಿತ್ತಿಕ ವ್ಯತಿರಿಕ್ತಾನಿ ಎಂದೂ ವಿಶೇಷಣವನ್ನು ತೆಗೆದುಕೊಳ್ಳಬೇಕು. ಏಕೆಂದರೆ, ನಿತ್ಯಾದಿಗಳೂ ಕೂಡ ಪ್ರತ್ಯವಾಯ ಪರಿಹಾರಕಗಳು, ಜ್ಞಾನಕ್ಕೆ ಕಾರಣಗಳಲ್ಲ ಎಂದರೆ –

ಯೋಗ್ಯತಾಯಾ ಬಲಾದ್ಯಾಶ್ಚ ಶುಭಬಾಹುಲ್ಯಮಾದಿತಃ ।

ಜ್ಞಾನಬಾಹುಲ್ಯಮೇವೈತತ್ಕುರ್ಯಾನ್ನಾನ್ಯಸ್ಯ ಕಾರಣಮ್ ।। ೨೧೪ ।।

ಬ್ರಾಹ್ಮಣತ್ವಾದಿರೂಪವಾದ ಅಥವಾ ಪಿತೃಮರಣಾದಿರೂಪವಾದ ಯೋಗ್ಯತಾ ಬಲದಿಂದ ಜ್ಞಾನಪೂರ್ವದಲ್ಲಿ ಮಾಡುವ ಶುಭಕರ್ಮಗಳ ಬಾಹುಲ್ಯವು ಜ್ಞಾನಕ್ಕೆ ಬಾಹುಲ್ಯವನ್ನೇ ಮಾಡುವುದು. ಪ್ರತ್ಯವಾಯ ಮಾತ್ರ ಪರಿಹಾರಕ್ಕೆ ಕಾರಣವಲ್ಲ. ಈ ಶಾಸ್ತ್ರದಲ್ಲಿ ಎಲ್ಲೆಲ್ಲಿ ಜ್ಞಾನಕ್ಕೆ ಮೋಕ್ಷಸಾಧನತ್ವವು ಹೇಳಲ್ಪಡುತ್ತದೋ ಅಲ್ಲಲ್ಲಿ ಜ್ಞಾನವೆನ್ನುವ ಪದದಿಂದ ಭಕ್ತಿಯು ಲಕ್ಷಿತವಾಗುತ್ತದೆ.

ಜ್ಞಾನಸ್ಯ ಭಕ್ತಿಭಾಗತ್ವಾದ್ಭಕ್ತಿರ್ಜ್ಞಾನಮಿತೀರ್ಯತೇ ।

ಜ್ಞಾನಸ್ಯೈವ ವಿಶೇಷೋ ಯದ್ಭಕ್ತಿರಿತ್ಯಭಿಧೀಯತೇ ।। ೨೧೫ ।।

ಪರೋಕ್ಷತ್ವಾಪರೋಕ್ಷತ್ವೇ ವಿಶೇಷೌ ಜ್ಞಾನಗೌ ಯಥಾ ।

ಸ್ನೇಹಯೋರ್ಗೋಪಿ ತದ್ವತ್ಸ್ಯಾದ್ವಿಶೇಷೋ ಜ್ಞಾನಗೋಽಪರಃ ।। ೨೧೬ ।।

ಜ್ಞಾನಕ್ಕೆ ಭಕ್ತಿಯ ಏಕದೇಶತ್ವವಿದೆ. ಹೇಗೆಂದರೆ ಮಾಹಾತ್ಮ್ಯ ಜ್ಞಾನ ಸ್ನೇಹ ಸಮುದಾಯವೇ ಭಕ್ತಿಯು ಎಂದು ಹೇಳಲ್ಪಟ್ಟಿದೆ. ಸ್ನೇಹವೆಂಬ ವಿಶೇಷದಿಂದ ಯುಕ್ತವಾದ ಜ್ಞಾನಕ್ಕೇನೆ ಭಕ್ತಿಯೆಂದು ಹೆಸರು. ಹೇಗೆ ಪರೋಕ್ಷತ್ವ ಅಪರೋಕ್ಷತ್ವ ರೂಪಗಳಾದ ವಿಶೇಷಗಳು ಜ್ಞಾನಗತವಾದ ಧರ್ಮಗಳೋ ಅದರಂತೆಯೇ ಜ್ಞಾನಗತವಾದ ಇತರವಾದ ಸ್ನೇಹ ಸಂಬಂಧಿಯಾದ ವಿಶೇಷವು ಆಗುವುದು. ಏಕದೇಶದಿಂದ ಏಕದೇಶಾಂತರ ಲಕ್ಷಣವೂ ಆಗುವುದು.

ಲಾಕ್ಷಣಿಕ ಪ್ರಯೋಗದಲ್ಲಿ ಸೂತ್ರಕಾರರಿಗೆ ಏನು ಪ್ರಯೋಜನವೆಂದರೆ –

ಇತ್ಯಭಿಪ್ರಾಯತಃ ಪ್ರಾಯೋ ಜ್ಞಾನಮೇವ ವಿಮುಕ್ತಯೇ ।

ವದಂತಿ ಶ್ರುತಯಃ ಸೋಽಯಂ...................... ।।

ಜ್ಞಾನಕ್ಕೆ ದ್ವಿವಿಧ ಲಕ್ಷಣವೆಂಬ ಅಭಿಪ್ರಾಯದಿಂದ ತರತಿ ಶೋಕಮಾತ್ಮವಿತ್ ಇತ್ಯಾದಿ ಶ್ರುತಿಗಳು ಪ್ರಾಯಶಃ ಮೋಕ್ಷಕ್ಕಾಗಿ ಜ್ಞಾನವನ್ನೇ ಹೇಳುತ್ತವೆ.

ಹಾಗಾದರೆ ಜ್ಞಾನಪದಕ್ಕೆ ಎರಡು ಅರ್ಥವಿದ್ದರೆ ಭಕ್ತಿಗ್ರಹಣಕ್ಕೆ ವೈಯರ್ಥ್ಯ ಬರುವುದು ಎಂದರೆ –

**.......................... ವಿಶೇಷೋಽಪಿ ಹ್ಯುದೀರ್ಯತೇ ॥ ೨೧೭ ॥**

**ಭಕ್ತಿರ್ಜ್ಞಾನಮಿತಿ ಕ್ವಾಪಿ ...................... ।**

ಎಲ್ಲಿಯಾದರೂ ಭಕ್ತಿ ಜ್ಞಾನ ಎಂಬ ಪದಗಳಿಂದ ಈ ಸ್ನೇಹರೂಪವಾದ ಮತ್ತು ಬೋಧರೂಪವಾದ ವಿಶೇಷವೂ ಹೇಳಲ್ಪಡುತ್ತದೆ. ಆದುದರಿಂದ ಅನುಪಪತ್ತಿಯಿಲ್ಲ.

ಹಾಗಾದರೆ ಸ್ನೇಹವಿಲ್ಲದೆ ಜ್ಞಾನಮಾತ್ರದಿಂದ ಮುಕ್ತಿಯು ಕೂಡುವುದಿಲ್ಲವೆಂದರೆ ಆಗ ಜ್ಞಾನಪದಕ್ಕೆ ಲಕ್ಷಕತ್ವವನ್ನು ಆಶ್ರಯಿಸಬೇಕು. ಹೀಗೆ ಇಲ್ಲ. ಪುರುಷಾರ್ಥವು ಕೇವಲ ಭಕ್ತಿಯಿಂದಲೇ ಸಾಧ್ಯವು ಎನ್ನುವುದಕ್ಕೆ ಪ್ರಮಾಣವಿಲ್ಲ. ದ್ವೇಷಿಗಳಾದ ಶಿಶುಪಾಲಾದಿಗಳಿಗೂ ಮೋಕ್ಷವು ಕಂಡಿದೆ ಎಂದರೆ –

**............................... ನ ಹಿ ದ್ವೇಷಯುತಾ ಧೃತಿಃ ।**

**ಪುರುಷಾರ್ಥಾಯ ಭವತಿ ಸರ್ವಶ್ರುತಿವಿರೋಧತಃ ॥ ೨೧೮ ॥**

ದ್ವೇಷಯುಕ್ತವಾದ ಜ್ಞಾನವು ಮೋಕ್ಷಕ್ಕಾಗಿ ಆಗುವುದಿಲ್ಲ. ಹಾಗೆ ಹೇಳಿದರೆ ಎಲ್ಲ ಶ್ರುತಿಗಳಿಂದಲೂ ವಿರೋಧ ಬರುವುದು.

ಮಾಹಾತ್ಮ್ಯ ಜ್ಞಾನವೂ ಕೂಡ ದ್ವೇಷಸಹಿತವಿದ್ದರೆ ಮುಕ್ತಿಗೆ ಕಾರಣವಾಗದು. ಇನ್ನು ಕೇವಲ ದ್ವೇಷವು ಮುಕ್ತಿಗೆ ಕಾರಣವಲ್ಲವೆಂದು ಹೇಳಬೇಕೇನು? 'ನೈಷ್ಕರ್ಮ್ಯ ಮಪ್ಯಚ್ಯುತಭಾವವರ್ಜಿತಂ ನ ಶೋಭತೇ ಜ್ಞಾನಮಲಂ ನಿರಂಜನಮ್' ಎಂದು ಭಾಗವತದ ವಚನ. ಕಾಮಾದಿ ದೋಷರಹಿತವಾದ ಜ್ಞಾನವೂ ಭಕ್ತಿರಹಿತವಾಗಿದ್ದರೆ, ಅಂದರೆ ದ್ವೇಷಯುಕ್ತವಾಗಿದ್ದರೆ, ಮೋಕ್ಷಹೇತುವಲ್ಲ ಎಂದು ಈ ವಾಕ್ಯದ ಅರ್ಥ.

ದ್ವೇಷಕ್ಕೆ ಮುಕ್ತಿಸಾಧನತ್ವವನ್ನು ಅಂಗೀಕರಿಸಿದರೆ ಸರ್ವಶ್ರುತಿಗಳ ವಿರೋಧವು ಹೇಗೆ ಎಂದರೆ ಅದರ ಸಮರ್ಥನೆಗಾಗಿ ಒಂದು ಶ್ರುತಿಯನ್ನು ಪಠಿಸುತ್ತಾರೆ –

**ಚೇತನಸ್ಯ ದ್ವಯಂ ಭೋಗ್ಯಂ ಸಂಸಾರೋ ಮುಕ್ತಿರೇವ ಚ ।**

**ಸಂಸಾರಿಸ್ತ್ರಿವಿಧಸ್ತತ್ರ ಸ್ವರ್ಗೋ ಮಧ್ಯಮಧಸ್ತಥಾ ॥ ೨೧೯ ॥**

**ಮುಕ್ತಿಶ್ಚ ದ್ವಿವಿಧಾ ತತ್ರ ಸುಖಂ ನಿತ್ಯಂ ತಥಾಪರಮ್ ।**

**ನಿತ್ಯದುಃಖಮಿತಿ ಜ್ಞೇಯಂ ಸಾಧನಂ ಸಂಸ್ಕೃತಾವಪಿ ॥ ೨೨೦ ॥**

**ಕಾಮ್ಯಂ ಕರ್ಮ ನಿಷಿದ್ಧಂ ಚ ಸಾಜ್ಞಾನಮಿತಿ ನಿಶ್ಚಯಃ ।**

**ದ್ವೇಷೋ ಭಕ್ತಿಶ್ಚ ಮುಕ್ತೌ ತು ಮುಕ್ತಿದ್ವಯವಿಧಾಯಕಮ್ ॥ ೨೨೧ ॥**

**ಇತಿ ಪೈಂಗಿಶ್ರುತೇರ್ದ್ವೇಷೋ ನೈವ ಸನ್ಮುಕ್ತಿಕಾರಣಮ್ ।**

**ಅಸನ್ಮುಕ್ತೇಃ ಕಾರಣಂ ಚ .......................... ॥**

ಜೀವಜಾತಕ್ಕೆ ಸಂಸಾರ ಹಾಗೂ ಮುಕ್ತಿ ಎಂಬುದಾಗಿ ಎರಡೇ ಭೋಗಿಸಲಿಕ್ಕೆ ಯೋಗ್ಯವು. ಮುಕ್ತಿಸಂಸಾರಗಳ ಮಧ್ಯೆ ಸಂಸಾರವು ಸ್ವರ್ಗ, ಮಾನುಷತ್ವ ಹಾಗೂ ನರಕಾದಿಗಳು ಎಂದು ಮೂರು ವಿಧ. ಹಾಗೆಯೇ ಮುಕ್ತಿಯೂ ಎರಡು ವಿಧ. ಅದರಲ್ಲಿ ಒಂದು ನಿತ್ಯಸುಖರೂಪವಾಗಿದ್ದರೆ, ಮತ್ತೊಂದು ನಿತ್ಯದುಃಖರೂಪವೆಂದು ತಿಳಿಯತಕ್ಕದ್ದು. ಸಂಸಾರವಿಷಯದಲ್ಲಿ ಅಜ್ಞಾನಸಹಿತವಾದ ಕಾಮ್ಯಕರ್ಮವೂ ನಿಷಿದ್ಧಕರ್ಮವೂ ಸಾಧನವೆಂದು ನಿಶ್ಚಯ. ಮುಕ್ತಿಯ ವಿಷಯದಲ್ಲಾದರೂ ಯಥಾ ಯೋಗ್ಯವಾಗಿ ದ್ವೇಷವೂ ಭಕ್ತಿಯೂ ಎರಡು ವಿಧವಾದ ಮುಕ್ತಿಗೆ ಕಾರಕವು ಎಂದು ತಿಳಿಯತಕ್ಕದ್ದು. ಹೀಗೆ ಪೈಂಗಿಶ್ರುತಿಯಿಂದ ದ್ವೇಷವು ನಿತ್ಯಸುಖರೂಪವಾದ ಸನ್ ಮುಕ್ತಿಗೆ ಕಾರಣವೇ ಅಲ್ಲ, ಮತ್ತೆ ನಿತ್ಯದುಃಖರೂಪವಾದ ಅಸನ್ಮುಕ್ತಿಗೆ ಕಾರಣವೆಂದು ಹೇಳಲ್ಪಟ್ಟಿದೆ. ಹಾಗಾದರೆ ಈ ಶ್ರುತಿಯಲ್ಲಿ ಮುಕ್ತಿವಿಷಯಕಗಳಾದ ಭಕ್ತಿದ್ವೇಷಗಳು ಸದಸನ್ಮುಕ್ತಿಗಳಿಗೆ ಕಾರಣಗಳೆಂದು ಹೇಳಲ್ಪಟ್ಟಿವೆ. ವಿಷ್ಣುವಿಷಯಕಗಳಾದ ಭಕ್ತಿ ದ್ವೇಷಗಳು ಇಲ್ಲಿ ಪ್ರಕೃತವು. ಆದ್ದರಿಂದ ಈ ಶ್ರುತಿಯು ಹೇಗೆ ಸಂಗತವು ಎಂದರೆ –

**.................................. ಮುಕ್ತಾವಿತ್ಯತ್ರ ಕೇಶವಃ ॥ ೨೨೨ ॥**

**ಮುಕ್ತಿಶಬ್ದೋದಿತೋ ಮೋಕ್ಷಂ ಸ್ವಭಕ್ತಾನಾಂ ಕರೋತಿ ಯತ್ ।**

ತನ್ನ ಭಕ್ತರಿಗೆ ಮುಕ್ತಿಯನ್ನು ಉಂಟುಮಾಡುತ್ತಾನೆ ಎಂಬ ಕಾರಣದಿಂದ ಶ್ರೀಹರಿಯು ಇಲ್ಲಿ ಮುಕ್ತೌ ಎನ್ನುವ ಸಪ್ತಮ್ಯಂತ ಪದದಲ್ಲಿ ಮುಕ್ತಿ ಎನ್ನುವ ಪದದಿಂದ ಪ್ರತಿಪಾದ್ಯನು.

ದ್ವೇಷವು ಮುಕ್ತಿಗೆ ಸಾಧನವೆಂದು ಅಂಗೀಕರಿಸಿದರೆ ಯುಕ್ತಿವಿರೋಧವೂ ಇದೆ ಎಂದು ಹೇಳುತ್ತಾರೆ –

**ದ್ವೇಷತೋಽಪಿ ವಿಮುಕ್ತಿಶ್ಚೇನ್ಮಹಾತಾತ್ಪರ್ಯರೋಧನಮ್ ॥ ೨೨೩ ॥**

**ಭಕ್ತ್ಯಾ ಪ್ರಸನ್ನತೋ ದೇವಾನ್ಮುಕ್ತಿರಿತ್ಯೇವ ತದ್ಗುಣಾನ್ ।**

**ವದಂತಿ ಶ್ರುತಯಃ ಸರ್ವಾಃ ಪುರಾಣಾನ್ಯಾಗಮಾ ಅಪಿ ॥ ೨೨೪ ॥**

ಕೇವಲ ಭಕ್ತಿಯಿಂದಷ್ಟೇ ಅಲ್ಲ ದ್ವೇಷದಿಂದಲೂ ಸುಖವಿಶಿಷ್ಟವಾದ ಮುಕ್ತಿಯು ಎಂದು ಅಂಗೀಕರಿಸಿದರೆ, ಆಗ ಎಲ್ಲ ಶ್ರುತಿಗಳಿಗೂ ಭಗವದ್ಗುಣೋತ್ಕರ್ಷದಲ್ಲಿಯೇ ಯಾವ ಮಹಾತಾತ್ಪರ್ಯವಿದೆಯೋ ಅದಕ್ಕೆ ವಿರೋಧವು. ಅದು ಹೇಗೆಂದರೆ – ಭಕ್ತಿಯಿಂದ ಸಂತುಷ್ಟನಾದ ದೇವದೇವನಾದ ಶ್ರೀಹರಿಯಿಂದಲೇ ಮುಕ್ತಿಯೆಂದು

ಎಲ್ಲ ಶ್ರುತಿಗಳೂ, ಪುರಾಣಗಳೂ, ಬೇರೆ ಆಗಮಗಳೂ ಕೂಡ ಶ್ರೀಹರಿಯ ಗುಣಗಳನ್ನೇ ಹೇಳುತ್ತವೆ.

ಭಕ್ತಿಗೆ ಮೋಕ್ಷಸಾಧನತ್ವವು ಇದರಿಂದ ತಿಳಿಯಲ್ಪಡುತ್ತದೆ. ನಾವು ಅದನ್ನು ಅಪಲಾಪ ಮಾಡುವುದಿಲ್ಲ. ಮತ್ತೆ ಭಕ್ತಿಯಂತೆಯೇ ದ್ವೇಷವೂ ಕೂಡ ಮುಕ್ತಿಗೆ ಕಾರಣವು ಎಂದು ಹೇಳುತ್ತೇವೆ ಎಂದರೆ –

**ಯದಿ ದ್ವೇಷೇಣ ಮುಕ್ತಿಃ ಸ್ಯಾದ್ವಕ್ತವ್ಯೋ ದೋಷಸಂಚಯಃ ।**

ದ್ವೇಷದಿಂದಲೂ ಮೋಕ್ಷವಾಗುವುದು ಎಂದು ಶ್ರುತಿಗಳ ತಾತ್ಪರ್ಯವಾಗಿದ್ದರೆ, ಆಗ ದ್ವೇಷೋತ್ಪತ್ತಿಗಾಗಿ ಶ್ರೀಹರಿಯಲ್ಲಿ ದೋಷ ಸಂಚಯವನ್ನು ಶ್ರುತಿಗಳು ಹೇಳಬೇಕಿತ್ತು. ಆದರೆ ಶ್ರುತಿಗಳು ಗುಣಗಳನ್ನು ಮಾತ್ರ ಪ್ರತಿಪಾದಿಸಿವೆ. ಆದಕಾರಣ ಮೋಕ್ಷಕ್ಕಾಗಿ ಪ್ರವೃತ್ತವಾದ ವೇದಾದಿಗಳು ಗುಣಗಳನ್ನೇ ಪ್ರತಿಪಾದಿಸುತ್ತ ಮೋಕ್ಷಕ್ಕೆ ಭಕ್ತಿಮಾತ್ರ ಸಾಧ್ಯತ್ವದಲ್ಲಿ ತಾತ್ಪರ್ಯವೆಂದು ತಿಳಿಸುತ್ತವೆ.

ಹಾಗಾದರೆ ದ್ವೇಷಕ್ಕೂ ಕೂಡ ಮೋಕ್ಷಸಾಧನತ್ವವನ್ನು ಪ್ರತಿಪಾದಿಸುವ 'ದ್ವೇಷಾಚ್ಚೈದ್ಯಾದಯೋ ನೃಪಾಃ' ಇತ್ಯಾದಿ ವಾಕ್ಯಗಳು ಇವೆ. ಆದಕಾರಣ ದ್ವೇಷಕ್ಕೆ ಮೋಕ್ಷ ಸಾಧನತ್ವವಿಲ್ಲವೆನ್ನುವುದು ಹೇಗೆ ಎಂದರೆ –

**ಸ್ಮರ್ತವ್ಯೋ ಭಗವಾನ್ನಿತ್ಯಮಿತ್ಯರ್ಥೇನೈವ ಹಿ ಕ್ವಚಿತ್ ॥ ೨೨೫ ॥**

**ದ್ವೇಷಾದಿವ ಗುಣಾನಾಹ ಪುರಾಣೇ ಕ್ರುದ್ಧವಾಕ್ಯವತ್ ।**

ಪುರಾಣದಲ್ಲಿ ಕೆಲವು ಕಡೆಗಳಲ್ಲಿ ಶ್ರೀಹರಿಯನ್ನು ನಿತ್ಯದಲ್ಲಿಯೂ ಸ್ಮರಿಸಬೇಕು ಎಂಬ ಅಭಿಪ್ರಾಯದಿಂದಲೇ ದ್ವೇಷದಿಂದ ಮುಕ್ತಿಯನ್ನು ಹೇಳಿದಂತೆ ಕಾಣುತ್ತದೆ. ಆದುದರಿಂದ ಹಿಂದೆ ಹೇಳಿದ್ದಕ್ಕೆ ವಿರೋಧವಿಲ್ಲ. ಚೈದ್ಯಾದಿಗಳಿಗೆ ದ್ವೇಷದಿಂದ ಮುಕ್ತಿಯೆಂದು ಪ್ರತಿಪಾದಿಸುವ ವಾಕ್ಯವು ಶ್ರೀಹರಿಗೆ ಕೃಪಾಲುತ್ವಾದಿ ಗುಣಗಳನ್ನು ಹೇಳುತ್ತದೆ. ಹೇಗೆ ಕ್ರುದ್ಧನ ಮಾತಿಗೆ ಮೇಲ್ನೋಟಕ್ಕೆ ಕಾಣುವ ಅರ್ಥದಲ್ಲಿಯೇ ತಾತ್ಪರ್ಯವಿಲ್ಲವೋ ಹಾಗೆ ಈ ಪುರಾಣವಾಕ್ಯಗಳನ್ನೂ ತಿಳಿಯಬೇಕು.

ಶಾಪಾದಿಗಳಿಂದ ದ್ವೇಷಿಗಳಾಗಿದ್ದರೂ ತಾತ್ಕಾಲಿಕದ್ವೇಷವನ್ನು ಗಮನಿಸದೆ ಪೂರ್ವದಲ್ಲಿದ್ದ ಭಕ್ತಿಯನ್ನೇ ಅಪೇಕ್ಷಿಸಿ ಚೈದ್ಯಾದಿಗಳನ್ನು ಮೋಚನಗೊಳಿಸಿದನು. ಶ್ರೀಹರಿಯ ಕೃಪಾಲುತ್ವ, ನಿರ್ವಿಕಾರತ್ವ, ಸತ್ಯಸಂಕಲ್ಪತ್ವಾದಿಗಳನ್ನು ತಿಳಿಸುವುದೇ ಇಂಥಹ ವಾಕ್ಯಗಳ ತಾತ್ಪರ್ಯ.

ಪುರಾಣವಾಕ್ಯಗಳಲ್ಲಿ ಎರಡು ವಿಧ. 'ವೈರೇಣ ಯನ್ನೃಪತಯಃ' ಇತ್ಯಾದಿ ವಾಕ್ಯಗಳು ಸ್ಮರಣಪ್ರಧಾನಗಳು. ಅವುಗಳಿಗೆ ಪ್ರಾಥಮಿಕ ಗತಿಯು. 'ದ್ವೇಷಾಚ್ಚೈದ್ಯಾದಯಃ' ಇತ್ಯಾದಿ ವಾಕ್ಯಗಳು ದ್ವೇಷಸಾಧಕಗಳು. ಅವುಗಳಿಗೆ ಎರಡನೆಯ ಗತಿಯು ಎಂದು ಅಭಿಪ್ರಾಯ.

ಮೇಲೆ ಹೇಳಿದ್ದನ್ನೇ ವಿವರಿಸುತ್ತಾರೆ –

**ಯಥಾ ಕೃದ್ಧಃ ಪಿತಾ ಪುತ್ರಂ ಮರೇತ್ಯಾಕ್ಷೇಪಪೂರ್ವಕಮ್ ॥ ೨೧೬ ॥**

**ಪ್ರೋಕ್ತಸ್ಯಾನ್ಯಸ್ಯ ಕೃತ್ಯರ್ಥಂ ವದತ್ಯೇವಂ ಪುರಾಣಗಮ್ ।**

**ವಾಕ್ಯಂ ಶ್ರುತಿವಿರೋಧೇನ ಸ್ವವಿರೋಧೇನ ಚಾಂಜಸಾ ॥ ೨೧೭ ॥**

**ಬಹ್ವಾಗಮವಿರೋಧಾಚ್ಚ ನ ದ್ವೇಷಾನ್ಮುಕ್ತಿವಾಚಕಮ್ ।**

ಕೋಪಗೊಂಡ ತಂದೆಯು ಮಗನನ್ನು ಕುರಿತು ಮೃತನಾಗು ಎಂದು ನಿಂದಾಪೂರ್ವಕವಾಗಿ ಹೇಳಿದರೂ, ಬೇರೆ ಕಾರ್ಯವನ್ನು ಮಾಡುವುದಕ್ಕಾಗಿಯೇ ಹಾಗೆ ಹೇಳಿರುತ್ತಾನೆಂದು ಅರ್ಥಮಾಡುತ್ತೇವೆ. ಹಾಗೆಯೇ ಪುರಾಣಗತ ವಾಕ್ಯವೂ ಎಲ್ಲಿ ದ್ವೇಷಕ್ಕೆ ಮುಕ್ತಿಸಾಧನತ್ವವನ್ನು ಹೇಳಿರುವುದೋ, ಶ್ರುತಿವಿರೋಧದಿಂದಾಗಿ ಅಲ್ಲಿಯೇ ಅದಕ್ಕೆ ವಿರುದ್ಧವಾದುದನ್ನೂ ಮುಖ್ಯವಾದ ವೃತ್ತಿಯಿಂದಲೇ ಹೇಳಿರುತ್ತದೆ. ಬಹು ಆಗಮಗಳ ವಿರೋಧವಿರುವುದರಿಂದ ಪುರಾಣವಾಕ್ಯವು ದ್ವೇಷದಿಂದ ಮುಕ್ತಿಯೆಂದು ಹೇಳತಕ್ಕದ್ದು ಆಗುವುದಿಲ್ಲ.

ಆಗಮವಿರೋಧವನ್ನು ತೋರಿಸುತ್ತಾರೆ –

**ತಮೋ ದ್ವೇಷೇಣ ಸಂಯಾಂತಿ ಭಕ್ತ್ಯಾ ಮುಕ್ತಿಂ ತಥೈವ ಚ ॥ ೨೧೮ ॥**

**ವಿಷ್ಣೌ ವಿಷ್ಣುಪ್ರಸಾದೇನ ವಿಲೋಮತತ್ವೇನ ಚಾಂಜಸಾ ।**

**ಇತಿ ಷಾಡ್ಗುಣ್ಯವಚನಮಪ್ಯುಕ್ತಾರ್ಥನಿಯಾಮಕಮ್ ॥ ೨೧೯ ॥**

ವಿಷ್ಣುವಿನಲ್ಲಿ ಮಾಡತಕ್ಕ ಭಕ್ತಿಯಿಂದ ಉಂಟಾಗುವ ವಿಷ್ಣುಪ್ರಸಾದದಿಂದ ಮೋಕ್ಷವನ್ನು ಹೊಂದುತ್ತಾರೆ. ಹಾಗೆಯೇ ವಿಷ್ಣುವಿನಲ್ಲಿ ಮಾಡತಕ್ಕ ದ್ವೇಷದಿಂದ ಉಂಟಾಗುವ ವಿಷ್ಣುವಿನ ಕೋಪದಿಂದ ಮುಖ್ಯವಾದ ತಮಸ್ಸನ್ನು ಹೊಂದುತ್ತಾರೆ. ಹೀಗೆ ಷಾಡ್ಗುಣ್ಯ ವಚನವೂ ಕೂಡ, ಭಕ್ತಿಯಿಂದಲೇ ಮೋಕ್ಷ ದ್ವೇಷದಿಂದಲ್ಲವೆಂದು, ಹಿಂದೆ ಹೇಳಿದ ಅರ್ಥಕ್ಕೆ ನಿಯಾಮಕವಾಗಿದೆ. ಈ ವಾಕ್ಯದ ಸಮಾಖ್ಯೆಯಿಂದಲೂ ಚೇತನಸ್ಯ ಎನ್ನುವ ಶ್ರುತಿಯಲ್ಲಿ ಮುಕ್ತೌ ಎನ್ನುವ ಶಬ್ದವು ವಿಷ್ಣುವಿಗೆ ವಾಚಕವೆಂದು ಸಿದ್ಧಿಸುತ್ತದೆ.

**ಮಹಾತಾತ್ಪರ್ಯರೋಧೇನ ಕಥಂ ವಾಕ್ಯಂ ಪ್ರಮಾಣತಾಂ ।**

**ಯಾತಿ ಸರ್ವಾರ್ಥರೂಪಂ ಹಿ ಮಹಾತಾತ್ಪರ್ಯಮಿಷ್ಯತೇ ॥ ೨೨೦ ॥**

ಮೋಕ್ಷಪ್ರಯೋಜನವುಳ್ಳ ಎಲ್ಲ ಆಗಮಗಳಿಗೆ ಭಗವದ್ಗುಣೋತ್ಕರ್ಷದಲ್ಲಿಯೇ ಮಹಾತಾತ್ಪರ್ಯ. ಗುಣೋತ್ಕರ್ಷಜ್ಞಾನದಿಂದಲೇ ಭಕ್ತಿ. ಆ ಭಕ್ತಿಯಿಂದಲೇ ಮುಕ್ತಿ. ಆದಕಾರಣ ಎಲ್ಲ ಶ್ರುತಿಗಳ ಮಹಾತಾತ್ಪರ್ಯಕ್ಕೆ ವಿರೋಧವಾಗಿ ದ್ವೇಷದಿಂದ

ಮುಕ್ತಿ ಎಂದು ಹೇಳುವ ವಾಕ್ಯವು ಹೇಗೆ ತಾನೆ ಪ್ರಮಾಣತ್ವವನ್ನು ಹೊಂದೀತು? ಎಲ್ಲ ಶಾಸ್ತ್ರಗಳಿಗೆ ಮುಖ್ಯವಾಗಿ ಯಾವುದು ಏಕಾರ್ಥತ್ವವನ್ನು ಪ್ರತಿಪಾದಿಸುವುದೋ ಅದೇ ಮಹಾತಾತ್ಪರ್ಯವೆಂದು ಅಂಗೀಕರಿಸಲ್ಪಡುತ್ತದೆ.

ಇದು ಮಹಾತಾತ್ಪರ್ಯ ಶಬ್ದಾರ್ಥವು ಹೇಗೆ ಎಂದರೆ –

**ವಾಚಕತ್ವಂ ಹಿ ತಾತ್ಪರ್ಯಂ ಯದರ್ಥಾ ಅಖಿಲಾ ರವಾಃ ।**

**ಸೋಽರ್ಥಃ ಕಥಂ ಪರಿತ್ಯಾಜ್ಯಃ ಏಕಶಬ್ದಸ್ಯ ಸಂಶಯೇ ॥ ೨೩೧ ॥**

ತತ್ ಪರಂ ಪ್ರತಿಪಾದ್ಯಂ ಯಸ್ಯ ತತ್ ತತ್ಪರಂ ತಸ್ಯ ಭಾವಃ ತಾತ್ಪರ್ಯಮ್ (ಅದೇ ಪ್ರತಿಪಾದ್ಯವಾಗಿವುಳ್ಳದ್ದು ಯಾವುದೋ ಅದು ತತ್ಪರವು. ಅದರ ಭಾವವೇ ತಾತ್ಪರ್ಯ) ಎನ್ನುವ ವ್ಯುತ್ಪತ್ತಿಯಿಂದ ಪ್ರತಿಪಾದಕತ್ವವೇ ತಾತ್ಪರ್ಯವೆಂದು ಹೇಳಲ್ಪಡುತ್ತದೆ. ಅದಕ್ಕೆ ಮಹತ್ ಶಬ್ದದಿಂದ ವಿಶೇಷಣವಿದ್ದರೆ ಯೋಗ್ಯತೆಯಿಂದ ಇದೇ ಅರ್ಥವು ಮಹಾತಾತ್ಪರ್ಯ ಶಬ್ದಕ್ಕೆ ಆಗುವುದು. ಅದು ಹೇಗೆಂದರೆ – ಎಲ್ಲ ಆಗಮಗಳೂ ಯಾವುದನ್ನು (ವಿಷ್ಣುಗುಣೋತ್ಕರ್ಷವನ್ನು) ಮುಖ್ಯಾರ್ಥವನ್ನಾಗಿ ಹೊಂದಿವೆಯೋ ಅದಕ್ಕೆ ವಿರುದ್ಧಾರ್ಥಸಂಬಂಧವುಳ್ಳ ಒಂದು ವಾಕ್ಯದಿಂದ ಸಂಶಯ ಬರಲು, ಸಂಶಯಕ್ಕೆ ಕಾರಣವಾದ ಆ ವಾಕ್ಯದ ದೆಶೆಯಿಂದ, ಅಸಂದಿಗ್ಧವಾದ ಮುಖ್ಯಾರ್ಥವು ಹೇಗೆ ಪರಿತ್ಯಾಗಕ್ಕೆ ಅರ್ಹವಾಗುತ್ತದೆ?

ದ್ವೇಷಕ್ಕೆ ಮುಕ್ತಿಸಾಧನತ್ವ ನಿರಾಕರಣವನ್ನು ಉಪಸಂಹಾರ ಮಾಡುತ್ತಾರೆ –

**ಅತೋ ವಿಜ್ಞಾನಭಕ್ತಿಭ್ಯಾಂ ಪುರುಷಾರ್ಥಃ ಪರೋ ಭವೇತ್ ।**

ಆದಕಾರಣ ಮಾಹಾತ್ಮ್ಯ ಜ್ಞಾನ, ಸ್ನೇಹಗಳಿಂದಲೇ (ಅಂದರೆ ಭಕ್ತಿಯಿಂದಲೇ) ಪರಮಪುರುಷಾರ್ಥವಾದ ಮೋಕ್ಷವು ಆಗುವುದು, ದ್ವೇಷದಿಂದಲ್ಲ.

ಹೀಗೆ ದ್ವೇಷಕ್ಕೆ ಮುಕ್ತಿಸಾಧನತ್ವವನ್ನು ನಿರಾಕರಿಸಿ, ಈಗ ಭಕ್ತಿಯು ಪರಮ ಪುರುಷಾರ್ಥವಾದ ಮೋಕ್ಷಕ್ಕೆ ಸಾಧಕವು ಎಂಬ ವಿಷಯದಲ್ಲಿ ಪ್ರಮಾಣವಿಲ್ಲವೆಂದು ಹೇಳುವುದನ್ನು ನಿರಾಕರಿಸುವುದಕ್ಕಾಗಿ ಪ್ರಮಾಣಗಳನ್ನು ಹೇಳುತ್ತಾರೆ –

**ಯಸ್ಯ ದೇವೇ ಪರಾಭಕ್ತಿರ್ಯಥಾ ದೇವೇ ತಥಾ ಗುರೌ ॥ ೨೩೨ ॥**

**ತಸ್ಯೈತೇ ಕಥಿತಾ ಹ್ಯರ್ಥಾಃ ಪ್ರಕಾಶಂತೇ ಮಹಾತ್ಮನಃ ।**

ಯಾವನಿಗೆ ಶ್ರೀಹರಿಯಲ್ಲಿ ಶ್ರೇಷ್ಠವಾದ ಭಕ್ತಿಯೂ, ಅದೇರೀತಿ ದೇವತೆಗಳಲ್ಲಿ ಹಾಗೂ ಗುರುಗಳಲ್ಲಿ ಅವರವರ ಯೋಗ್ಯತಾನುಸಾರವಾಗಿ ಭಕ್ತಿಯೂ ಇರುವುದೋ ಅಂಥ ಮಹಾತ್ಮನಿಗೆ ಇದುವರೆಗೆ ಹೇಳಿದ ವಿಷಯಗಳೆಲ್ಲ ಪ್ರಕಾಶಿಸುತ್ತವೆ. ಇದರಿಂದ ಜ್ಞಾನಕ್ಕೆ ಭಕ್ತಿಸಾಧನತ್ವವು ಹೇಳಲ್ಪಟ್ಟಿದೆ.

**ಭಕ್ತ್ಯಾ ಜ್ಞಾನಂ ತತೋ ಭಕ್ತಿಸ್ತತೋ ದೃಷ್ಟಿಸ್ತತಶ್ಚ ಸಾ ॥ ೨೩೩ ॥**

ತತೋ ಮುಕ್ತಿಸ್ತತೋ ಭಕ್ತಿಃ ಸೈವ ಸ್ಯಾತ್ಸುಖರೂಪಿಣೀ ।

ಭಕ್ತಿಯಿಂದ ಪರೋಕ್ಷನಿಶ್ಚಯವು ಆಗುವುದು. ಅದರಿಂದ ಪಕ್ವವಾದ ಭಕ್ತಿ. ಅದರಿಂದ ಸಾಕ್ಷಾತ್ಕಾರ. ಅದರಿಂದ ಪರಿಪಕ್ವವಾದ ಭಕ್ತಿ. ಆಮೇಲೆ ಮೋಕ್ಷ. ಮೋಕ್ಷಾನಂತರವೂ ಇನ್ನೂ ವಿಶೇಷವಾದ ಭಕ್ತಿಯು ಇರುವುದು. ಆ ಭಕ್ತಿಯು ಸುಖರೂಪಿಯಾಗಿಯೇ ಇರುವುದು, ಫಲವುಳ್ಳದ್ದಾಗುವುದಿಲ್ಲ.

ಭಕ್ತ್ಯಾ ಪ್ರಸನ್ನೋ ಭಗವಾನ್ ದದ್ಯಾಜ್ಜ್ಞಾನಮನಾಕುಲಮ್ ॥ ೨೩೪ ॥

ತಯೈವ ದರ್ಶನಂ ಯಾತಃ ಪ್ರದದ್ಯಾನ್ಮುಕ್ತಿಮೇತಯಾ ।

ಭಕ್ತಿಯಿಂದ ಸಂತುಷ್ಟನಾದ ಶ್ರೀಹರಿಯು ವ್ಯತ್ಯಾಸವಿಲ್ಲದ ಜ್ಞಾನವನ್ನು ಅಂದರೆ ಪಕ್ವವಾದ ಬುದ್ಧಿಯನ್ನು ಕೊಡುವನು. ಆ ಪಕ್ವವಾದ ಬುದ್ಧಿಯಿಂದಲೇ ಅಪರೋಕ್ಷ ಜ್ಞಾನ ಅಂದರೆ ಪರಿಪಕ್ವವಾದ ಬುದ್ಧಿಯು ಲಭಿಸುವುದು. ಈ ಪರಿಪಕ್ವ ಬುದ್ಧಿಯಿಂದ ಸಂತುಷ್ಟನಾದ ಶ್ರೀಹರಿಯು ಮೋಕ್ಷವನ್ನು ವಿಶೇಷವಾಗಿ ಕೊಡುವನು. ಜ್ಞಾನದಿಂದ ಭಕ್ತಿ, ಭಕ್ತಿಯಿಂದ ಮುಕ್ತಿ ಎನ್ನುವುದೇ ಇಲ್ಲಿಯೂ ಪ್ರತಿಪಾದಿತವಾಗಿದೆ.

ನಾಹಂ ವೇದೈರ್ನ ತಪಸಾ ನ ದಾನೇನ ನ ಚೇಜ್ಯಯಾ ॥ ೨೩೫ ॥

ಶಕ್ಯ ಏವಂವಿಧೋ ದ್ರಷ್ಟುಂ ದೃಷ್ಟವಾನಸಿ ಮಾಂ ಯಥಾ ।

ಭಕ್ತ್ಯಾ ತ್ವನನ್ಯಯಾ ಶಕ್ಯ ಅಹಮೇವಂವಿಧೋಽರ್ಜುನ ॥ ೨೩೬ ॥

ಜ್ಞಾತುಂ ದ್ರಷ್ಟುಂ ಚ ತತ್ತ್ವೇನ ಪ್ರವೇಷ್ಟುಂ ಚ ಪರಂತಪ ।

ಇತ್ಯಾದಿವಾಕ್ಯತಶ್ಚೈವ ಸೋಽಯಮುಕ್ತಾರ್ಥ ಈಯತೇ ॥ ೨೩೭ ॥

ನನ್ನನ್ನು ಈಗ ಹೇಗೆ ನೋಡುತ್ತಿರುವೆಯೋ, ಇದೇ ರೀತಿಯಲ್ಲಿ ನಾನು ಭಕ್ತಿ ರಹಿತ ವೇದಗಳಿಂದ ಶ್ರವಣಾದಿಗಳಿಂದ ನೋಡಲಿಕ್ಕೆ ಶಕ್ಯನಲ್ಲ. ತಪಸ್ಸಿನಿಂದಲೂ, ದಾನದಿಂದಲೂ, ಯಾಗಾದಿಗಳಿಂದಲೂ ನಾನು ನೋಡಲಿಕ್ಕೆ ಶಕ್ಯನಲ್ಲ. ಹೇ ಅರ್ಜುನನೇ, ಅನನ್ಯವಾದ ಭಕ್ತಿಯಿಂದಲೇ ಈ ವಿಧವಾಗಿ ನನ್ನನ್ನು ತಿಳಿಯಲಿಕ್ಕೆ ಶಕ್ಯವು. ಅನನ್ಯವಾದ ಭಕ್ತಿಯಿಂದಲೇ ನನ್ನನ್ನು ಯಥಾರ್ಥದಿಂದ ತಿಳಿಯಲಿಕ್ಕೆ, ಕಾಣಲಿಕ್ಕೆ ಹಾಗೂ ಹೊಂದುವುದಕ್ಕೆ ಶಕ್ಯವು. ಇತ್ಯಾದಿ ವಾಕ್ಯಗಳಿಂದಲೇ ಹಿಂದೆ ಹೇಳಿದ ಅರ್ಥವು ತಿಳಿಯಲ್ಪಡುತ್ತದೆ. 'ಯಾದೃಶೀ ತತ್ರ ಭಕ್ತಿಃ ಸ್ಯಾತ್ತಾದೃಶ್ಯನ್ಯತ್ರ ನೈವ ಚೇತ್। ಅನನ್ಯಭಕ್ತಿಃ ಸಾ ಜ್ಞೇಯಾ ವಿಷ್ಣಾವೇವ ಚ ಸಾ ಭವೇತ್' ಎಂಬ ಸ್ಮೃತಿಯು ಅನನ್ಯಭಕ್ತಿಯ ಲಕ್ಷಣವನ್ನು ಹೇಳಿದೆ. ಅಂದರೆ, ಯಾವುದರಲ್ಲಿ ಎಂಥಹ ಉತ್ತಮ ರೀತಿಯಲ್ಲಿರುವುದೋ ಅದೇ ರೀತಿಯಲ್ಲಿ ಬೇರೆ ಕಡೆಯಲ್ಲಿ ಇಲ್ಲದಿರುವ ಭಕ್ತಿಯನ್ನೇ ಅನನ್ಯ ಭಕ್ತಿಯೆಂದು ತಿಳಿಯತಕ್ಕದ್ದು. ಅದಾದರೂ ವಿಷ್ಣುವಿನಲ್ಲಿಯೇ ಆಗುವುದು.

**ನ ಚ ಪ್ರಸಾದಮಾಪ್ನೋತಿ ದ್ವೇಷಾದ್ಭಕ್ತ್ಯಾ ತಮಾಪ್ನುಯಾತ್ ।**

**ಇತಿ ದೃಷ್ಟಾನುಸಾರಿತ್ವಮಪ್ಯಸ್ಮಿನ್ನರ್ಥ ಈಯತೇ ॥ ೨೩೮ ॥**

ಭಗವದ್ದ್ವೇಷದಿಂದ ಭಗವತ್ಪ್ರಸಾದವನ್ನು ಹೊಂದುವುದೇ ಇಲ್ಲ. ಭಗವತ್ ಭಕ್ತಿಯಿಂದಲೇ ಭಗವತ್ಪ್ರಸಾದವನ್ನು ಹೊಂದತಕ್ಕುದು. ಈ ರೀತಿ ಈ ಅರ್ಥದಲ್ಲಿ ಪ್ರತ್ಯಕ್ಷದೃಷ್ಟವ್ಯಾಪ್ತಿಯುಳ್ಳ ಅನುಮಾನದ ಅನುಸಾರಿತ್ವವೂ ತಿಳಿಯಲ್ಪಡುತ್ತದೆ. ಭಗವತ್ಪ್ರಸಾದದಿಂದಲೇ ಮೋಕ್ಷವು ಎಂಬುದಾಗಿ ಜಿಜ್ಞಾಸಾ ಸೂತ್ರ ವ್ಯಾಖ್ಯಾನದ ಸಂದರ್ಭದಲ್ಲಿ ನಿರ್ಣೀತವಾಗಿದೆ. ಅದನ್ನು ಇಲ್ಲಿ ಸ್ಮರಿಸಬಹುದು.

ಲೋಕವಿಲಕ್ಷಣನಾದ ಶ್ರೀಹರಿಯಲ್ಲಿ ಲೋಕದೃಷ್ಟಾನುಸಾರಿ ಅನುಮಾನವು ಕೂಡುವುದಿಲ್ಲ. ಶ್ರೀಹರಿಯು ಲೋಕವಿಲಕ್ಷಣನಾದುದರಿಂದ ದ್ವೇಷದಿಂದಲೂ ಪ್ರಸನನ್ನಾಗುತ್ತಾನೆ ಎಂದು ಅಂಗೀಕರಿಸಿದರೆ ಬಾಧಕವಿಲ್ಲ ಎಂಬ ಆಶಂಕೆಯನ್ನು ಆಗಮವಾಕ್ಯದಿಂದ ಪರಿಹರಿಸುತ್ತಾರೆ –

**ಯೇ ಪೃಥಗ್ವಿಹಿತಾ ವಿಷ್ಣೋರ್ಗುಣಾ ವೇದೇನ ಸಾದರಮ್ ।**

**ತ ಏವ ದೃಷ್ಟವೈಲೋಮ್ಯಾದಂಗೀಕಾರ್ಯಾ ನ ಚಾಪರಮ್ ॥ ೨೩೯ ॥**

**ಅನ್ಯದೃಷ್ಟಾನುಸಾರೇಣ ವಾಸುದೇವೇಽಪಿ ಗೃಹ್ಯತೇ ।**

ಶ್ರೀಹರಿಯ ಯಾವ ಗುಣಗಳು ವೇದದಿಂದ ಲೋಕವೈಲಕ್ಷಣ್ಯದಿಂದ ತಾತ್ಪರ್ಯರೂಪವಾಗಿ ಉಕ್ತವಾಗಿವೆಯೋ, ಅವುಗಳೇ ದೃಷ್ಟವೈಷಮ್ಯವನ್ನು ಆದರಿಸದೆ ಅಂಗೀಕಾರ್ಯಕ್ಕೆ ಅರ್ಹವು. ವೇದಗಳಲ್ಲಿ ಅನುಕ್ತವಾದ ಲೋಕವಿಲಕ್ಷಣ ಗುಣ ಸಮುದಾಯವು ಅಂಗೀಕಾರ್ಯಕ್ಕೆ ಅರ್ಹವಲ್ಲ. ಆದರೆ ವೇದದಲ್ಲಿ ಹೇಳಲ್ಪಟ್ಟ ಲೋಕವಿಲಕ್ಷಣದಿಂದ ಇತರವಾದ ಗುಣಸಮುದಾಯವು ಪ್ರತ್ಯಕ್ಷಕ್ಕೆ ಅನುಸಾರವಾಗಿ ಶ್ರೀಹರಿಯಲ್ಲಿ ಸ್ವೀಕರಿಸಲ್ಪಡುತ್ತದೆ.

**ದೋಷಾಭಾವಾಶ್ಚ ಯೇ ವೇದೈರುದಿತಾ ಅವಿಹಾಯ ತಾನ್ ॥ ೨೪೦ ॥**

**ಅನುಕ್ತಾ ಅಪಿ ಚ ಗ್ರಾಹ್ಯಾ ಮಹಾತಾತ್ಪರ್ಯಶಕ್ತಿತಃ ।**

**ಏವಂ ಬೃಹತ್ಸಂಹಿತಾವಾಕ್ ಸಿದ್ಧಾಂತೋ ಹಿ ತದೀರಿತಃ ॥ ೨೪೧ ॥**

ಸರ್ವಪ್ರಕಾರದಿಂದಲೂ ಶ್ರೀಹರಿಯಲ್ಲಿ ದೋಷವಿಲ್ಲವೆಂದು ಸರ್ವ ಶಾಸ್ತ್ರಗಳ ಮಹಾತಾತ್ಪರ್ಯದಿಂದ ನಿರ್ಣಯವಾಗಿರುವ ಪ್ರಯುಕ್ತ, ವೇದೋಕ್ತವಾದ ಲೋಕ ವಿಲಕ್ಷಣವೂ ಹಾಗೂ ಅವಿಲಕ್ಷಣವೂ ಆಗಿರುವ ದೋಷಾಭಾವಗಳನ್ನು ಬಿಡದೆ, ಅನುಕ್ತವಾದ ಗುಣಗಳನ್ನೂ ಶ್ರೀಹರಿಯಲ್ಲಿ ಅಂಗೀಕರಿಸಬೇಕು. ಹೀಗೆ ಬೃಹತ್ಸಂಹಿತಾ ವಚನವಿರುವ ಪ್ರಯುಕ್ತ ನಾವು ಹಿಂದೆ ಹೇಳಿದ ಅರ್ಥವೇ ಪ್ರಾಮಾಣಿಕವು.

ಹೀಗೆ ಭಕ್ತಿಯೇ ಮೋಕ್ಷಸಾಧನತ್ವವೆಂದು ಉಪಪಾದಿಸಲಾಯಿತು. ಕೇವಲ

ಭಗವದ್ವಿಷಯದಲ್ಲಿ ಮಾತ್ರ ಭಕ್ತಿ ಎಂಬ ಪ್ರತೀತಿಯನ್ನು ತಾರತಮ್ಯೇನ ಎನ್ನುವ ವಚನದಿಂದ ನಿರಾಕರಿಸುತ್ತಾರೆ –

**ತಾರತಮ್ಯೇನ ತದ್ಭಕ್ತೇಷ್ವಪಿ ಭಕ್ತಿರ್ವಿನಿಶ್ಚಯಾತ್ ।**

**ಕರ್ತವ್ಯೈಷಾಪಿ ತದ್ಭಕ್ತಿರ್ಲೋಕವೇದಾನುಸಾರತಃ ॥ ೨೪೨ ॥**

ವಿಷ್ಣುವಿನಲ್ಲಿ ಮಾತ್ರವಲ್ಲ, ವಿಷ್ಣುಭಕ್ತರಾದ ರಮಾದಿಗಳಲ್ಲಿಯೂ ಭಕ್ತಿಯನ್ನು ತಾರತಮ್ಯಾನುಸಾರವಾಗಿ ಸರ್ವಥಾ ಮಾಡತಕ್ಕದ್ದು. ಹಾಗೆ ವಿಷ್ಣುಭಕ್ತರಲ್ಲಿ ಮಾಡುವ ಭಕ್ತಿಯೂ ವಿಷ್ಣುಭಕ್ತಿಯೇ ಆಗುವುದು. ಇದು ಲೋಕಸಿದ್ಧವ್ಯಾಪ್ತಿಯುಳ್ಳ ಅನುಮಾನ ಹಾಗೂ ಆಗಮಗಳಿಗೆ ಅನುಸಾರವಾಗಿಯೇ ಇದೆ.

ಲೋಕಾನುಸಾರಿತ್ವವನ್ನು ತೋರಿಸುತ್ತಾರೆ –

**ಯೋ ಹಿ ಭಕ್ತಃ ಪ್ರಧಾನೇ ಸ್ಯಾತ್ತದೀಯೇಷ್ವಪಿ ಭಕ್ತಿಮಾನ್ ।**

**ದೃಶ್ಯತೇಽಸೌ ನಿಯಮತೋ ವಿಪರೀತೋ ವಿಪರ್ಯಯೇ ॥ ೨೪೩ ॥**

ಯಾವನು ರಾಜಾದಿಗಳಲ್ಲಿ ಭಕ್ತಿಯನ್ನು ಮಾಡುವನೋ ಅವನು ರಾಜನ ಸಂಬಂಧಿಕರಲ್ಲಿಯೂ ಭಕ್ತಿಯುಳ್ಳವನಾಗಿ ನಿಯಮದಿಂದ ಕಂಡುಬರುತ್ತಾನೆ. ರಾಜನ ಸಂಬಂಧಿಗಳಲ್ಲಿ ಭಕ್ತಿಯಿಲ್ಲದಿದ್ದರೆ ನಿಯಮೇನ ರಾಜನಲ್ಲಿಯೂ ಭಕ್ತಿರಹಿತನಾಗಿ ಕಂಡುಬರುತ್ತಾನೆ.

ಹಾಗಾದರೆ ದೈತ್ಯಾದಿಗಳು ಬ್ರಹ್ಮಾದಿಗಳಲ್ಲಿ ಭಕ್ತಿಯನ್ನು ಹೊಂದಿದ್ದರೂ ಅವರ ಭಕ್ತರಾದ ಇಂದ್ರಾದಿಗಳಲ್ಲಿ ಭಕ್ತಿರಹಿತರಾಗಿ ಕಂಡುಬರುವುದರಿಂದ ಈ ನಿಯಮಕ್ಕೆ ವ್ಯಭಿಚಾರವು ಎಂದರೆ –

**ವ್ಯಭಿಚಾರೋ ಯದಿ ಕ್ವಾಪಿ ಭಕ್ತಿಹ್ರಾಸೋಽತ್ರ ಕಲ್ಪ್ಯತೇ ।**

**ಭಕ್ತಿದೋಷೋ ಹ್ಯಸೌ ಯನ್ನ ತದ್ಭಕ್ತೇಷ್ವಪಿ ಭಕ್ತಿಮಾನ್ ॥ ೨೪೪ ॥**

ಎಲ್ಲಿಯಾದರೂ ಈ ನಿಯಮದಲ್ಲಿ ಪರರಿಂದ ವ್ಯಭಿಚಾರವು ಕಲ್ಪಿಸಲ್ಪಟ್ಟರೆ ಆಗ ಆ ಪುರುಷನಲ್ಲಿ ಭಕ್ತಿಹ್ರಾಸವು ನಮ್ಮಿಂದಲೂ ಕಲ್ಪಿಸಲ್ಪಡುತ್ತದೆ. ಅಂದರೆ ವಿಫಲ ಭಕ್ತಿತ್ವವು ಹೇಳಲ್ಪಡುತ್ತದೆ. ವಿಷ್ಣುಭಕ್ತರಲ್ಲಿಯೂ ಭಕ್ತಿಯುಳ್ಳವನಲ್ಲವೆಂದರೆ ಅದು ಪ್ರಧಾನಭಕ್ತಿಯದ್ದೇ ದೋಷವು, ಅಂಥಹ ಭಕ್ತಿಗೆ ಫಲವಿಲ್ಲವೆಂದು ತಾತ್ಪರ್ಯ.

ವಿಷ್ಣುಭಕ್ತರಲ್ಲಿ ತಾರತಮ್ಯಾನುಸಾರವೇ ಭಕ್ತಿಯನ್ನು ಮಾಡಬೇಕಾದ್ದು ಕರ್ತವ್ಯ ಎಂದು ಹೇಳುತ್ತಾರೆ –

**ತಾರತಮ್ಯೇನ ತೇಷ್ವದ್ಧಾ ಭಕ್ತಿರ್ದೃಷ್ಟಾನುಸಾರತಃ ।**

**ವಿಷ್ಣುಪ್ರಸಾದಾನುಸಾರಾತ್ಕಾರ್ಯಾ ದೋಷಸ್ತದನ್ಯಥಾ ॥ ೨೪೫ ॥**

**ಸ್ವಪ್ರೀತ್ಯನುಸೃತೌ ಪ್ರೀತಿರ್ಲೋಕೇಪ್ಯಽದ್ಧೈವ ದೃಶ್ಯತೇ ।**

**ತಾರತಮ್ಯಪರಿಜ್ಞಾನಮಪ್ಯೇತೇನೈವ ಸಾಧನಮ್ ।। ೨೪೬ ।।**

ವಿಷ್ಣುಭಕ್ತರಲ್ಲಿ ತಾರತಮ್ಯಕ್ಕೆ ಅನುಸಾರವಾಗಿಯೇ ಸರ್ವಪ್ರಕಾರದಿಂದಲೂ ಭಕ್ತಿಯನ್ನು ಮಾಡಬೇಕು. ಅಂಥಹ ಭಕ್ತಿಯು ವಿಷ್ಣುವಿನ ಅನುಗ್ರಹಕ್ಕಾಗಿಯೂ ಲೋಕದೃಷ್ಟಿಗೆ ಅನುಸಾರವಾಗಿಯೂ ಮಾಡತತಕ್ಕದ್ದು. ಹಾಗಲ್ಲದೆ ಬೇರೆ ರೀತಿಯಿಂದ ಅಂದರೆ ಸಾಮ್ಯದಿಂದ ಅಥವಾ ವೈಪರೀತ್ಯದಿಂದ ಮಾಡಿದರೆ ಅದು ಅನರ್ಥಕ್ಕೆ ಕಾರಣವಾಗುವುದು. ಹೇಗೆಂದರೆ, ರಾಜನ ಪ್ರೀತಿಯನ್ನು ಅನುಸರಿಸಿದರೆ, ಅಂದರೆ ರಾಜನಿಗೆ ಯಾರಲ್ಲಿ ಹೆಚ್ಚು ಪ್ರೀತಿಯಿದೆಯೋ ಅವರಲ್ಲಿ ಹೆಚ್ಚು ಭಕ್ತಿಯನ್ನು ಮಾಡಿದರೆ, ಅಂಥ ಭಕ್ತನಲ್ಲಿ ರಾಜನಿಗೂ ಪ್ರೀತಿಯಿರುವುದೆಂಬುದು ಲೋಕದಲ್ಲಿ ನಿಯಮದಿಂದಲೇ ಕಂಡುಬರುವುದು. ಇದರಿಂದ ಭಗವದ್ಭಕ್ತರಾದ ರಮಾದಿಗಳಲ್ಲಿ ತಾರತಮ್ಯ ಪರಿಜ್ಞಾನದಿಂದಲೇ ಭಕ್ತಿಯನ್ನು ಮಾಡಬೇಕೆಂದೂ ಹಾಗೂ ಅದೂ ಕೂಡ ಮೋಕ್ಷಕ್ಕೆ ಸಾಧನವೆಂದೂ ಸಿದ್ಧವಾಯಿತು.

ಭಗವತ್ಪ್ರಸಾದ ತಾರತಮ್ಯಾನುಸಾರವಾಗಿಯೇ ಭಗವದ್ಭಕ್ತರಲ್ಲಿ ಭಕ್ತಿಯನ್ನು ಮಾಡಬೇಕು ಎನ್ನುವಲ್ಲಿ ಆಗಮವನ್ನು ಹೇಳುತ್ತಾರೆ –

**ಲಕ್ಷ್ಮೀವಿರಿಂಚವಾಣೀಶಗಿರಿಜೇಂದ್ರಾ ಗಿರಾಂ ಪತಿಃ ।**

**ಸೂರ್ಯಾದಯಶ್ಚ ಕ್ರಮಶೋ ಭಗವತ್ಪ್ರೀತಿಗೋಚರಾಃ ।। ೨೪೭ ।।**

**ತೇಷು ಭಕ್ತಿಃ ಕ್ರಮೇಣೈವ ಕಾರ್ಯಾ ನಿತ್ಯಂ ಮುಮುಕ್ಷುಭಿಃ ।**

ಲಕ್ಷ್ಮೀದೇವಿ, ಬ್ರಹ್ಮ, ಸರಸ್ವತಿ, ರುದ್ರ, ಪಾರ್ವತಿ, ಇಂದ್ರ, ಬೃಹಸ್ಪತಿ, ಸೂರ್ಯಾದಿಗಳು ಕ್ರಮವಾಗಿ ಶ್ರೀಹರಿಯ ಪ್ರೀತಿಗೆ ವಿಷಯರಾದವರು. ಅವರಲ್ಲಿ ಅದೇ ಕ್ರಮದಲ್ಲಿಯೇ ಮುಮುಕ್ಷುಗಳಿಂದ ನಿತ್ಯವೂ ಭಕ್ತಿಯು ಮಾಡತಕ್ಕದ್ದು.

**ಸರ್ವೇಽಪಿ ಗುರವಶ್ಚೈತೇ ಪುರುಷಸ್ಯ ಸದೈವ ಹಿ ।। ೨೪೮ ।।**

**ತಸ್ಮಾತ್ಪೂಜ್ಯಾಶ್ಚ ನಮ್ಯಾಶ್ಚ ಧ್ಯೇಯಾಶ್ಚ ಪರಿತೋ ಹರಿಮ್ ।**

**ಇತಿ ಷಾಡ್ಗುಣ್ಯವಚನಾದಪ್ಯೇಷೋಽರ್ಥೋಽವಸೀಯತೇ ।। ೨೪೯ ।।**

ಪುರುಷನಿಗೆ ಯಾವಾಗಲೂ ಇವರೆಲ್ಲರೂ ಗುರುಗಳೇ ಎಂದು ಪ್ರಸಿದ್ಧವು. ಆದ ಕಾರಣ ಇವರೆಲ್ಲರೂ ಶ್ರೀಹರಿಯ ಪರಿವಾರವೆಂದು ಪೂಜ್ಯರು, ನಮ್ಯರು ಹಾಗೂ ಧ್ಯಾನಿಸಲ್ಪಡತಕ್ಕವರು. ಹೀಗೆ ಷಾಡ್ಗುಣ್ಯವಚನದಿಂದಲೂ ಕೂಡ ಇದೇ ಅರ್ಥವೇ ನಿಶ್ಚಯಿಸಲ್ಪಡುತ್ತದೆ.

**ಹರಿಭಕ್ತಿಃ ಕ್ರಮೇಣೈವ ತದೀಯೇಷು ಹರಿಸ್ಮೃತಿಃ ।**

**ಹರಿಸ್ತುತಿಸ್ತತ್ಸ್ಮೃತಿಶ್ಚ ತತ್ಸ್ತುತಿರ್ಹರಿಪೂಜನಮ್ ।। ೨೫೦ ।।**

ತತ್ಪೂಜಾ ವಿಹಿತಾತ್ಯಾಗ ಇತಿ ಮುಕ್ತೇಃ ಕ್ರಮೇಣ ಹಿ ।

ನಿಯಮಾತ್ಸಾಧನಾನ್ಯೇವ ನಿತ್ಯಸಾಧ್ಯಾನಿ ಚಾಖಿಲೈಃ ।। ೨೫೧ ।।

ಇತಿ ಪ್ರವೃತ್ತವಚನಂ ಸಾಧನಸ್ಯ ವಿನಿರ್ಣಯೇ ।

ಶ್ರೀಹರಿಯಲ್ಲಿ ನಿರತಿಶಯವಾದ ಭಕ್ತಿ, ಹರಿಭಕ್ತರಲ್ಲಿ ಕ್ರಮದಿಂದಲೇ ಭಕ್ತಿ, ಹರಿ ಸ್ಮರಣೆ, ಹರಿಸ್ತುತಿ, ಹರಿಭಕ್ತರ ಸ್ಮರಣೆ ಹಾಗೂ ಸ್ತುತಿ, ಹರಿಪೂಜೆ, ತದ್ಭಕ್ತರ ಪೂಜೆ, ವಿಹಿತವಾದ್ದನ್ನು ಬಿಡದಿರುವುದು – ಇವುಗಳೆಲ್ಲವೂ ಕ್ರಮದಿಂದಲೇ ನಿಯಮದಿಂದ ಮುಕ್ತಿಗೆ ಸಾಧನಗಳೇ. ಎಲ್ಲ ಮುಮುಕ್ಷುಗಳಿಂದ ನಿತ್ಯವೂ ಸಾಧ್ಯಗಳೇ ಆಗಿವೆ. ಹೀಗೆ ಪ್ರವೃತ್ತ ವಚನವು ಸಾಧನ ನಿರ್ಣಯಕ್ಕೆ ಸಂಬಂಧಿಸಿದ ಪ್ರಕರಣದಲ್ಲಿ ಇದೆ.

ಪ್ರವೃತ್ತೇ ಪಂಚರಾತ್ರೇ ಹಿ ಸಾಧನಸ್ಯ ವಿನಿರ್ಣಯಃ ।। ೨೫೨ ।।

ಪಂಚರಾತ್ರದಲ್ಲಿ ಪ್ರವೃತ್ತವೆಂಬ ಅವಾಂತರ ಗ್ರಂಥದಲ್ಲಿ ಸಾಧನ ವಿನಿರ್ಣಯ ಎಂಬ ಪ್ರಕರಣವಿದೆ.

ಮೇಲೆ ಹೇಳಿದ ಅರ್ಥದಲ್ಲಿ ಅನುಮಾನಾಂತರವನ್ನು ಹೇಳುತ್ತಾರೆ –

ಹರಿದ್ವೇಷೋ ನ ಶುಭದಃ ಸದ್ವೇಷತ್ವಾದ್ಯಥಾ ಗುರೋಃ ।

ಕ್ರಮಾದ್ಭಕ್ತಿರ್ಹರಿಪ್ರೀತಿಕಾರಣಂ ತತ್ಪ್ರಿಯೋಪಗಾ ।। ೨೫೩ ।।

ಉತ್ತಮಪುರುಷರ ದ್ವೇಷವಾದುದರಿಂದ ಶ್ರೀಹರಿಯಲ್ಲಿ ಮಾಡುವ ದ್ವೇಷವು ಶುಭವನ್ನು ಕೊಡತಕ್ಕುದು ಅಲ್ಲ. ಗುರುಗಳ ದ್ವೇಷವು ಹೇಗೋ ಹಾಗೆ. ಕ್ರಮದಿಂದ ರಮಾದಿಗಳಲ್ಲಿ ಮಾಡುವ ಭಕ್ತಿಯು ಶ್ರೀಹರಿಯ ಪ್ರೀತಿಗೆ ಕಾರಣವಾದುದು. ಯಾವ ಭಕ್ತಿಯು ಶ್ರೀಹರಿಯ ಭಕ್ತರ ವಿಷಯಕವೋ ಅದು ಆ ಶ್ರೀಹರಿಯ ಪ್ರೀತಿಗೆ ಕಾರಣವಾದುದು.

ಭಕ್ತಿರ್ಯತೋ ಯಥಾ ಸ್ವಸ್ಮಿನ್ನಿತ್ಯಾದ್ಯಾ ಯುಕ್ತಿರತ್ರ ಚ ।

ಪ್ರಾಧಾನ್ಯತಾರತಮ್ಯಾನುಸಾರಿಣೀ ಭಕ್ತಿರುತ್ತಮಾ ।। ೨೫೪ ।।

ಪ್ರೀತಿದೈವ ಹರೇರ್ಯಸ್ಮಾದ್ಭಕ್ತಿಃ ಸಾ ಸ್ವೋಪಗಾ ಯಥಾ ।

ಇತಿ ವಾ ......................... ।।

ಹೇಗೆ ರಾಜನಿಗೆ ಪ್ರಿಯನಾದ ವ್ಯಕ್ತಿಯಲ್ಲಿ ಮಾಡುವ ಭಕ್ತಿಯು ರಾಜನ ಪ್ರೀತಿಗೆ ಕಾರಣವೋ, ಇತ್ಯಾದಿಯಾಗಿ ಹಿಂದೆ ಹೇಳಿದ ಯುಕ್ತಿಯೂ ಕೂಡ, ರಮಾದಿ ಉತ್ತಮತ್ವ ತಾರತಮ್ಯವನ್ನು ಅನುಸರಿಸಿಕೊಂಡು ಇರುವ ಭಕ್ತಿಯು ಶ್ರೀಹರಿಗೆ ಪ್ರೀತಿಯನ್ನುಂಟುಮಾಡುವುದು. ಆದ್ದರಿಂದ ಅದು ವಿಷ್ಣುವಿಷಯಕವಾದ ಭಕ್ತಿಯು ಹೇಗೋ ಹಾಗೆ ಉತ್ತಮವಾದ ಭಕ್ತಿಯು. ಹೀಗೆಯೇ ತಿಳಿಯತಕ್ಕದ್ದು.

## ಫಲಶ್ರುತ್ಯಧಿಕರಣಮ್

**ಓಂ ಸ್ವಾಮಿನಃ ಫಲಶ್ರುತೇರಿತ್ಯಾತ್ರೇಯಃ ಓಂ**

ಜ್ಞಾನವು ಮಹಾಫಲಕ್ಕೆ ಕಾರಣವೆಂದು ಪುರುಷಾರ್ಥಾಧಿಕರಣದಲ್ಲಿಯೂ, ಜ್ಞಾನೋತ್ತರದಲ್ಲಿ ಅನುಷ್ಠಿತವಾದ ವರ್ಣಾಶ್ರಮಕರ್ಮ ಶಮದಮಾದಿಗಳೂ ಕೂಡ ಆನಂದಾತಿಶಯಕ್ಕೆ ಕಾರಣವೆಂದು ಸ್ತುತ್ಯಧಿಕರಣದಲ್ಲಿಯೂ ಪ್ರತಿಪಾದಿತವಾಗಿದೆ. ಜ್ಞಾನಕರ್ಮಾದಿಗಳ ಫಲವು ಪ್ರೇರಕರಾದ ದೇವತೆಗಳಿಗೋ ಅಥವಾ ಕರ್ತೃವಾದ ಪುರುಷನಿಗೋ ಎಂದು ಸಂಶಯವು. ಅದಕ್ಕೆ ಪ್ರಥಮ ಸೂತ್ರದಿಂದ ದೇವತೆಗಳಿಗೇ ಫಲವೆಂದು ಆತ್ರೇಯಮತವನ್ನು ಪೂರ್ವಪಕ್ಷ ಮಾಡಿಕೊಂಡು, **ಆರ್ತ್ವಿಜ್ಯಮಿತ್ಯೌಡಲೋಮಿಃ** ಎಂದು ಏಕದೇಶಿಗಳ ಮತದಿಂದ ಸಿದ್ಧಾಂತವನ್ನು ಹೇಳಿದರು. ಅನಂತರ **ಸಹಕಾರ್ಯಂತರ ವಿಧಿಃ ಪಕ್ಷೇಣ ತೃತೀಯಂ ತದ್ವತೋ ವಿಧ್ಯಾದಿವತ್** ಎಂದು ಪರಮಸಿದ್ಧಾಂತವನ್ನು ಹೇಳಿದರು. ಅದರಲ್ಲಿ ದೇವತೆಗಳಿಗೆ ಜ್ಞಾನಾದಿ ಫಲವು ಎಂಬ ಪೂರ್ವಪಕ್ಷಾಂಶವನ್ನು ಗ್ರಹಿಸಬೇಕು, ನಿಶ್ಚಯಾಂಶವನ್ನಷ್ಟೇ ಬಿಡಬೇಕು. ಆದ್ದರಿಂದ ಪೂರ್ವಪಕ್ಷ ಸೂತ್ರಾರ್ಥವನ್ನು ವಿವರಿಸುತ್ತಾರೆ –

**......... ಜ್ಞಾನಕರ್ಮಾದಿ ಫಲಂ ಚೈಷು ಕ್ರಮೋಪಗಮ್ ॥ ೨೫೫ ॥**

**ಸ್ವಾತಂತ್ರ್ಯತಾರತಮ್ಯೇನ ಫಲಂ ಹಿ ಫಲಿನಾಂ ಭವೇತ್ ।**

ಜ್ಞಾನಕರ್ಮಾದಿಗಳ ಫಲವೂ ದೇವತೆಗಳಿಗೆ ಆಗುವುದು. ಈ ದೇವತೆಗಳಲ್ಲಿ ಉಂಟಾಗುವ ಫಲವು ಕ್ರಮದಿಂದಲೇ ಆಗುವುದು. ದೇವದತ್ತಾದಿಗಳಿಂದ ಅನುಷ್ಠಿತವಾದ ಜ್ಞಾನಾಕರ್ಮಾದಿಗಳಿಗೆ ಫಲಭಾಗಿಗಳಾದ ದೇವತೆಗಳಿಗೆ ಫಲವು ಸ್ವಾಮಿತ್ವ ತಾರತಮ್ಯದಿಂದಲೇ ಆಗುವುದು.

ಹಾಗಾದರೆ ದೇವದತ್ತಾದಿಗಳು ಮಾಡುವ ಮಿಥ್ಯಾಜ್ಞಾನಾದಿಗಳ ಅನರ್ಥ ಫಲವೂ ದೇವತೆಗಳಿಗೆ ಆಗಬೇಕಾಗುವುದು ಎಂದರೆ –

**ಅಶುಭಂ ತ್ವಶುಭೇಽಪ್ಯೇಷಾಂ ಸ್ವಾತಂತ್ರ್ಯಾತ್ಪ್ರೀತಿತೋ ಹರೇಃ ॥ ೨೫೬ ॥**

**ಆಜ್ಞಯಾ ಚಾನ್ಯಗಂ ನೈವ ಭೋಗಾಯ ಭವತಿ ಕ್ವಚಿತ್ ।**

ಅನ್ಯರಲ್ಲಿರತಕ್ಕ ಅಶುಭವಾದರೂ ಈ ದೇವತೆಗಳಿಗೆ ಎಲ್ಲಿಯೂ ಭೋಗಕ್ಕಾಗಿ ಆಗುವುದಿಲ್ಲ. ಏಕೆಂದರೆ ದೇವತೆಗಳಿಗೆ ಅಶುಭವನ್ನು ಹೊಂದಬಾರದು ಎನ್ನುವಲ್ಲಿ ಶ್ರೀಹರಿಯ ಅನುಗ್ರಹದಿಂದ ಸ್ವಾತಂತ್ರ್ಯವಿರುವ ಪ್ರಯುಕ್ತ ಅಶುಭವನ್ನು ಅವರು ನಿವಾರಣೆ ಮಾಡಿಕೊಳ್ಳುತ್ತಾರೆ.

ಈ ವಿಷಯದಲ್ಲಿ ಶ್ರುತಿಯೂ ಇದೆ ಎನ್ನುತ್ತಾರೆ –

**ಪುಣ್ಯಮೇವಾಮುಮಾಪ್ನೋತಿ ನ ದೇವಾನ್ ಪಾಪಮಾಪ್ನುಯಾತ್ ॥೨೫೭॥**

ಇತ್ಯಾದಿಶ್ರುತಯೋ ಮಾನಮುಕ್ತೇऽರ್ಥೇ ಯುಕ್ತಯೋऽಪರಾಃ ।

ಪುಣ್ಯಮೇವಾಮುಂ ಗಚ್ಛತಿ ನ ಹ ವೈ ದೇವಾನ್ಪಾಪಂ ಗಚ್ಛತಿ ಎಂಬ ಶ್ರುತಿಯನ್ನು ಉದಾಹರಿಸುತ್ತಾರೆ. ಸಪ್ತಾನ್ನ ವಿದ್ಯೋಪಾಸನೆಯಿಂದ ಪ್ರೇರಕರಾಗಿ ಪರರ ಶರೀರವನ್ನು ಪ್ರವೇಶ ಮಾಡಿದವರನ್ನು ಪರಕೃತ ಪುಣ್ಯವೇ ಹೊಂದುತ್ತದೆ, ಪಾಪವಲ್ಲ. ದೇವತೆಗಳನ್ನು ಪಾಪವು ಹೊಂದಲಾರದು. ಏಕೆಂದರೆ ಅವರು ದೇವತೆಗಳಾಗಿಯೇ ಹುಟ್ಟಿರುತ್ತಾರೆ. ಇತ್ಯಾದಿ ಶ್ರುತಿಗಳು, ದೇವತೆಗಳು ಶುಭವನ್ನೇ ಹೊಂದುತ್ತಾರೆ, ಅಶುಭವನ್ನಲ್ಲ ಎಂದು ಹಿಂದೆ ಹೇಳಿದ ಅರ್ಥದಲ್ಲಿ ಪ್ರಮಾಣವು. ಇತರವಾದ ಯುಕ್ತಿಗಳೂ ಈ ವಿಷಯದಲ್ಲಿ ಪ್ರಮಾಣವಾಗಿವೆ.

ಆ ಯುಕ್ತಿಗಳು ಯಾವುವು ಎಂದರೆ, ಅವುಗಳನ್ನು ತೋರಿಸಲು ಆಗಮ ವಾಕ್ಯವನ್ನು ಪಠಿಸುತ್ತಾರೆ –

**ಉಪಾಸನಾಧರ್ಮಫಲಂ ಯತೋ ದೇಹಾಂತರೇ ಸ್ಥಿತಿಃ ।। ೨೫೮ ।।**

**ವಾಸುದೇವಾಜ್ಞಯಾ ಚೈವ ಪೂರ್ವಕರ್ಮಾನುಸಾರತಃ ।**

**ಪ್ರೇರಯಂತಿ ಹಿ ತೇ ಜೀವಾನ್ಪುಣ್ಯಪಾಪೇಷು ನಿತ್ಯಶಃ ।। ೨೫೯ ।।**

**ಅರಾಗದ್ವೇಷತಶ್ಚೈವ ಕಥಂ ದೋಷಾನವಾಪ್ನುಯುಃ ।**

**ಹರ್ಯಾಜ್ಞಾಕರಣಾದೇವ ಪುಣ್ಯಮೇಭಿರವಾಪ್ಯತೇ ।। ೨೬೦ ।।**

ಬೇರೆ ದೇಹದಲ್ಲಿದ್ದರೂ ದೇವತೆಗಳಿಗೆ ಶ್ರೀಹರಿಯ ಉಪಾಸನೆಯ ರೂಪವಾದ ಧರ್ಮದ ಫಲವೇ ಆಗುವುದು. ಅವರು ಶ್ರೀಹರಿಯ ಆಜ್ಞಾನುಸಾರವಾಗಿಯೇ ರಾಗದ್ವೇಷರಹಿತರಾಗಿಯೇ ನಿತ್ಯವೂ ಜೀವರನ್ನು ಅವರವರ ಪೂರ್ವಕರ್ಮಕ್ಕೆ ಅನುಗುಣವಾಗಿ ಪುಣ್ಯಪಾಪಗಳಲ್ಲಿ ಪ್ರೇರಿಸುತ್ತಾರೆ. ಆದಕಾರಣ ದೇವತೆಗಳ ಪ್ರೇರಣೆಯಿಂದಲೇ ಜೀವರು ಪಾಪಕರ್ಮಗಳನ್ನು ಮಾಡಿದರೂ ತನ್ನಿಮಿತ್ತಕವಾದ ದೋಷಗಳನ್ನು ದೇವತೆಗಳು ಹೊಂದುವುದಿಲ್ಲ. ಮತ್ತೆ ಶ್ರೀಹರಿಯ ಆಜ್ಞೆಯನ್ನೇ ಅವರು ಮಾಡುವುದರಿಂದ ಪುಣ್ಯವನ್ನೇ ಹೊಂದುತ್ತಾರೆ.

**ಹರಿಪೂಜೇತಿ ಚೋದ್ದೇಶಾತ್ಕಥಂ ನ ಶುಭಮಾಪ್ನುಯುಃ ।**

**ಅತೋ ಯಥಾಕ್ರಮಂ ಧರ್ಮಜ್ಞಾನಯೋಃ ಫಲಮಂಜಸಾ ।। ೨೬೧ ।।**

**ಸರ್ವಪ್ರಾಣಿಗತಂ ದೇವಾಃ ಪ್ರಾಪ್ನುವಂತ್ಯಾ ವಿರಿಂಚತಃ ।**

ಶ್ರೀಹರಿಯ ಪೂಜೆ ಎನ್ನುವ ಉದ್ದೇಶದಿಂದಲೇ ಜೀವರನ್ನು ಅವರವರಿಗೆ ವಿಹಿತವಾದ ಕರ್ಮದಲ್ಲಿ ಪ್ರೇರಿಸುವುದರಿಂದ ದೇವತೆಗಳು ಹೇಗೆ ಶುಭವನ್ನು ಹೊಂದಲಾರರು? ಆದುದರಿಂದ ದೇವತೆಗಳು ಎಲ್ಲ ಪ್ರಾಣಿಗಳಲ್ಲಿರತಕ್ಕ ಧರ್ಮ

ಜ್ಞಾನಗಳ ಫಲವನ್ನು ಚೆನ್ನಾಗಿ ಬ್ರಹ್ಮದೇವರ ಪರ್ಯಂತವಾಗಿ ಯಥಾಕ್ರಮದಲ್ಲಿ ಹೊಂದುತ್ತಾರೆ.

ಅನ್ಯರಲ್ಲಿರತಕ್ಕ ಜ್ಞಾನಾದಿ ಫಲವನ್ನು ದೇವತೆಗಳು ಹೊಂದುವರು ಎಂಬುದು ಸರಿಯೇ. ಆದರೆ ದೇವತೆಗಳಲ್ಲಿರತಕ್ಕ ಫಲವನ್ನು ಹೇಗೆ ಎಂದು ಆಕ್ಷೇಪಿಸಿದರೆ –

**ದೇವಾ ಏವ ಹಿ ದೇವಾನಾಂ ವಿಶಿಷ್ಟಾ ವಿನಿಯಾಮಕಾಃ ॥ ೨೬೨ ॥**

**ಬ್ರಹ್ಮಾ ತ್ವಖಿಲದೇವಾನಾಂ ನರಾಣಾಂ ಚ ನಿಯಾಮಕಃ ।**

**ಅತಃ ಸರ್ವಗುಣಾನೇಷ ಪ್ರಾಪ್ನೋತ್ಯಧಿಕಮನ್ಯತಃ ॥ ೨೬೩ ॥**

ಅಧಮ ದೇವತೆಗಳಿಗೆ ಉತ್ತಮ ದೇವತೆಗಳೇ ನಿಯಾಮಕರು. ಆದುದರಿಂದ ಅಧಮ ದೇವತೆಗಳ ಜ್ಞಾನಾದಿಗಳ ಫಲವು ಉತ್ತಮರಿಗೆ ಆಗುತ್ತವೆ. ಬ್ರಹ್ಮನಾದರೂ ಎಲ್ಲ ದೇವತೆಗಳಿಗೂ ಹಾಗೆಯೇ ಮನುಷ್ಯರಿಗೂ ಕೂಡ ನಿಯಾಮಕರು. ಆದ್ದರಿಂದ ಈ ಚತುರ್ಮುಖ ಬ್ರಹ್ಮನೇ ಇತರ ದೇವತೆಗಳಿಗಿಂತ ಅತ್ಯಂತ ಹೆಚ್ಚಿನ ಮಟ್ಟದಲ್ಲಿ ಎಲ್ಲ ಗುಣಗಳನ್ನು ಹೊಂದುತ್ತಾನೆ.

ದೇವತೆಗಳಿಗೆ ಅನ್ಯಗತವಾದ ಜ್ಞಾನಾದಿ ಫಲಪ್ರಾಪ್ತಿಯಿರಲಿ. ಅದರಲ್ಲಿಯೂ ತಾರತಮ್ಯ ಎನ್ನುವಲ್ಲಿ ಹೇತುವೇನು ಎಂದರೆ –

**ದ್ರವ್ಯಸ್ವಾತಂತ್ರ್ಯವಿಜ್ಞಾನಪ್ರಯತ್ನೈರಧಿಕಂ ಫಲಮ್ ।**

**ದೇವಾನಾಮನ್ಯಗಂ ಚಾಪಿ ತೇಷು ಹಿ ಬ್ರಹ್ಮಣೋಽಧಿಕಮ್ ॥ ೨೬೪ ॥**

**ಬೃಹತ್ತಂತ್ರೋದಿತಂ ವಾಕ್ಯಂ ಹರಿಣಾ ಫಲನಿರ್ಣಯೇ ।**

**ಲೋಕೇಪ್ಯೇತಾದೃಶಗುಣೈಃ ಫಲಾಧಿಕ್ಯಂ ಹಿ ದೃಶ್ಯತೇ ॥ ೨೬೫ ॥**

ಧರ್ಮಾದಿಗಳನ್ನು ಹುಟ್ಟಿಸುವ ವಿಷಯದಲ್ಲಿ ದೇವತೆಗಳಿಗೆ ಇಂದ್ರಿಯಾದಿ ದ್ರವ್ಯಗಳಲ್ಲಿ ಸ್ವಾತಂತ್ರ್ಯ, ವಿಜ್ಞಾನ ಹಾಗೂ ಪ್ರಯತ್ನಗಳಿಂದ ಆಧಿಕ್ಯವಿರುವ ಪ್ರಯುಕ್ತ ಅವರಿಗೆ ಇತರರಲ್ಲಿ ಇರುವುದಕ್ಕಿಂತ ಹೆಚ್ಚಿನ ಫಲವು ಆಗುತ್ತದೆ. ಇತರ ಎಲ್ಲರಿಗಿಂತ ನಿರವಧಿಕವಾದ ದ್ರವ್ಯಸ್ವಾತಂತ್ರ್ಯಾದಿಗಳಿರುವ ಪ್ರಯುಕ್ತ ಬ್ರಹ್ಮನಿಗೆ ಅತ್ಯಧಿಕವಾದ ಫಲವು. ಹೀಗೆ ಬೃಹತ್ತಂತ್ರದಲ್ಲಿ ಫಲನಿರ್ಣಯ ಪ್ರಕರಣದಲ್ಲಿ ಶ್ರೀಹರಿಯಿಂದ ಹೇಳಲ್ಪಟ್ಟ ವಾಕ್ಯವಿದೆ. ಲೋಕದಲ್ಲಿಯೂ ಕೂಡ ಇಂಥಹ ಗುಣಗಳ ಆಧಿಕ್ಯದಿಂದ ಫಲಾಧಿಕ್ಯವು ಕಂಡುಬರುವುದು. ಇದು ಪ್ರಸಿದ್ಧವು.

**ಏವಂ ಚ ಕಲಿಪೂರ್ವಾಣಾಮಸುರಾಣಾಂ ಮಹತ್ಫಲಮ್ ।**

**ಅಶುಭೇಷು ಸದೈವ ಸ್ಯಾನ್ಮಿಥ್ಯಾಜ್ಞಾನಾದಿಕೇಷು ಹಿ ॥ ೨೬೬ ॥**

ಹೀಗೆ ಮಹಾಪ್ರೇರಕರಾದ ಕಲಿಯೇ ಮೊದಲಾದ ಅಸುರರಿಗೆ ಯಾವಾಗಲೂ ಮಿಥ್ಯಾಜ್ಞಾನಾದಿಗಳಿಗೆ ಕಾರಣವಾಗುವ ಅಶುಭಕರ್ಮ ನಿಮಿತ್ತಕವಾದ ಮಹತ್ತಾದ ಫಲವೇ ಆಗುವುದು.

ಮೇಲೆ ಹೇಳಿದ ವಿಷಯದಲ್ಲಿ ಪ್ರಮಾಣಾಂತರವನ್ನು ಹೇಳುತ್ತಾರೆ –

**ಶುಭಾಶುಭಫಲಂ ದೇವಾ ಅಸುರಾಶ್ಚ ಸಮಾಪ್ನುಯುಃ ।**

**ಕ್ರಮೇಣೈವ ಯಥಾಶಕ್ತಿ ಯಥಾ ಯೇ ಯೇ ಪ್ರಯೋಜಕಾಃ ॥ ೨೬೭ ॥**

**ಪ್ರೇರಕಾ ಅಪಿ ಪಾಪಾನಾಂ ನ ದೇವಾಃ ಪಾಪಮಾಪ್ನುಯುಃ ।**

**ಇತಿ ಪ್ರಕಾಶಿಕಾಯಾಂ ಹಿ ಪ್ರೋವಾಚ ಹರಿರಂಜಸಾ ॥ ೨೬೮ ॥**

ಯಾರು ಯಾರು ಯಥಾಶಕ್ತಿ ಹೇಗೆ ಹೇಗೆ ಪುಣ್ಯಪಾಪಗಳಿಗೆ ಪ್ರೇರಕರೋ ಅದೇ ಕ್ರಮದಿಂದಲೇ ದೇವತೆಗಳೂ ಹಾಗೂ ಅಸುರರೂ ಶುಭ ಹಾಗೂ ಅಶುಭ ಫಲಗಳನ್ನು ಹೊಂದುತ್ತಾರೆ. ಆದರೆ ದೇವತೆಗಳು ಪಾಪಕರ್ಮಗಳಿಗೆ ಪ್ರೇರಕರೇ ಆದರೂ ಕೂಡ ಪಾಪವನ್ನು ಹೊಂದುವುದಿಲ್ಲ. ಹೀಗೆ ಪ್ರಕಾಶಿಕಾ ಎಂಬ ಗ್ರಂಥದಲ್ಲಿ ಶ್ರೀವೇದವ್ಯಾಸರು ಚೆನ್ನಾಗಿ ಹೇಳಿರುವರು.

ಹೀಗೆ ವಿಸ್ತಾರದಿಂದ ಪೂರ್ವಪಕ್ಷವನ್ನು ಹೇಳಿ ಸಿದ್ಧಾಂತಸೂತ್ರದ ತಾತ್ಪರ್ಯ ವನ್ನು ಆಗಮವಾಕ್ಯದಿಂದ ಹೇಳುತ್ತಾರೆ –

**ಯದ್ಯಪ್ಯೇವಂ ಸುರಾಣಾಂ ಚ ದೈತ್ಯಾನಾಂ ಚ ಮಹತ್ಫಲಮ್ ।**

**ಶುಭಾಶುಭೇಭ್ಯ ಏವಂ ಚ ಕರ್ತುಶ್ಚ ಸ್ಯಾದ್ಯಥೋದಿತಮ್ ॥ ೨೬೯ ॥**

ಹೀಗೆ ಹಿಂದೆ ಹೇಳಿದ ಪ್ರಕಾರ ಶುಭಾಶುಭ ಜ್ಞಾನಾದಿಗಳಿಂದ ಉಂಟಾಗತಕ್ಕ ಮಹತ್ತಾದ ಫಲವು ದೇವತೆಗಳಿಗೂ ದೈತ್ಯರಿಗೂ ಕೂಡ ಆಗುವುದಾದರೂ, ಕರ್ತೃವಾದ ಜೀವನಿಗೂ ಶ್ರುತಿಸ್ಮೃತಿಗಳಲ್ಲಿ ಉಕ್ತವಾಗಿರುವಂತೆ ಶುಭಾಶುಭ ಫಲವು ಆಗಿಯೇ ಆಗುವುದು.

ಈ ವಿಷಯದಲ್ಲಿ ಯುಕ್ತಿಯನ್ನೂ ಹೇಳುತ್ತಾರೆ –

**ತಸ್ಮಾನ್ನಿರಯಮಾನುಷ್ಯಸ್ವರ್ಗಮುಕ್ತ್ಯುಪಭೋಗಿನಃ ।**

**ಮಾನುಷೋತ್ತಮಮಾರಭ್ಯ ದೇವಾಸ್ತು ನಿರಯಂ ವಿನಾ ॥ ೨೭೦ ॥**

**ಅಸುರಾಸ್ತು ವಿನಾ ಮುಕ್ತಿಂ ತಮೋಽಂಧಮಪಿ ಚಾಪ್ನುಯುಃ ।**

**ಇತಿ ತತ್ತ್ವವಿವೇಕೋಕ್ತಂ ಸ್ವಯಂ ಭಗವತೋ ವಚಃ ॥ ೨೭೧ ॥**

ಕರ್ತೃವಿಗೆ ಶುಭಾಶುಭ ಫಲವು ಇರುವುದರಿಂದಲೇ ಮಾನುಷೋತ್ತಮರಿಂದ ಆರಂಭಿಸಿ ಕ್ರಮವಾಗಿ ದೇವತೆಗಳ ಪರ್ಯಂತ ಹಾಗೂ ಅಸುರರ ಪರ್ಯಂತ ಯೋಗ್ಯತಾನುಸಾರನಾಗಿ ನರಕ, ಮನುಷ್ಯಲೋಕ, ಸ್ವರ್ಗ ಹಾಗೂ ಮುಕ್ತಿಗಳನ್ನು ಭೋಗಿಸುವರು. ದೇವತೆಗಳು ನರಕವನ್ನು ಬಿಟ್ಟು ಇತರ ಫಲವನ್ನು ಹೊಂದುವರು. ಅಸುರರು ಮುಕ್ತಿಯನ್ನು ಹೊರತು ಅಂಧಂತಮಸ್ಸನ್ನೂ ಹೊಂದುವರು. ಹೀಗೆ ತತ್ವವಿವೇಕ ಎಂಬ ಗ್ರಂಥದಲ್ಲಿ ಸಾಕ್ಷಾತ್ತಾಗಿ ಶ್ರೀಹರಿಯಿಂದ ಹೇಳಿದ ವಚನವಿದೆ.

## ಅನಾವಿಷ್ಕಾರಾಧಿಕರಣಮ್

### ಓಂ ಅನಾವಿಷ್ಕುರ್ವನ್ನನ್ವಯಾತ್ ಓಂ

ಗುರುಗಳು ಸಭಾ ಚತ್ವರಾದಿಗಳಲ್ಲಿ ಆವಿಷ್ಕಾರ ಮಾಡಿಕೊಂಡು ಜ್ಞಾನವನ್ನು ಉಪದೇಶ ಮಾಡಬೇಕೋ ಅಥವಾ ಆವಿಷ್ಕರಿಸದೆ ಮಾಡಬೇಕೋ ಎಂಬ ಸಂಶಯವು ಬಂದರೆ, ಪೂರ್ವಪಕ್ಷವು ಅತ್ಯಂತ ಹೇಯವಲ್ಲವಾದ್ದರಿಂದ ಅದನ್ನು ವಿಸ್ತರಿಸುತ್ತ, ಸಿದ್ಧಾಂತವನ್ನು ಹೇಳುತ್ತಾರೆ –

**ಜ್ಞಾನದಾ ಅಪಿ ಚಾಚಾರ್ಯಾ ವಿಶೇಷಾತ್ಫಲಮಾಪ್ನುಯುಃ ।**

ಶಿಷ್ಯರು ಮಾತ್ರವಲ್ಲ ಜ್ಞಾನವನ್ನು ನೀಡಿದ ಗುರುಗಳೂ ಕೂಡ ಶಿಷ್ಯರಿಗಿಂತ ಅತಿಶಯವಾಗಿ ಫಲವನ್ನು ಹೊಂದುವರು.

**ಮುಕ್ತಾವಷ್ಟಗುಣಂ ಶಿಷ್ಯಾದ್ಗುರುರಾಪ್ನೋತಿ ಶೋಭನಮ್ ॥ ೨೭೨ ॥**

**ತದ್ಗುರುರ್ದ್ವಿಗುಣಂ ತಸ್ಮಾತ್ಸಾರ್ಧಂ ತಾವತ್ತತೋಽಪರೇ ।**

**ದೇವಾಃ ಸಹಸ್ರಗುಣಿತಂ ಕ್ರಮಾತ್ತಸ್ಮಾದ್ಯಥೋತ್ತರಮ್ ॥ ೨೭೩ ॥**

**ಬ್ರಹ್ಮಾ ಮಹೌಘಗುಣಿತಮೇವಂ ಫಲವಿನಿರ್ಣಯಃ ।**

**ಇತ್ಯಾಹ ಭಗವಾಂಶ್ಶಾಸ್ತ್ರೇ ಗುರುವೃತ್ತಾಭಿಧೇ ಸ್ವಯಮ್ ॥ ೨೭೪ ॥**

ಶಿಷ್ಯರಿಗೆ ಶ್ರವಣದಿಂದ ಬರುವ ಶೋಭನವಾದ ಫಲಕ್ಕಿಂತ ಎಂಟು ಪಾಲು ಹೆಚ್ಚು ಮಂಗಲವನ್ನು ಮುಕ್ತಿಯಲ್ಲಿ ಗುರುವು ಹೊಂದುತ್ತಾನೆ. ಆ ಗುರುಗಳ ಗುರುವಿಗೆ (ಅಂದರೆ ಪರಮಗುರುವಿಗೆ) ಆ ಗುರುವಿಗಿಂತ ಎರಡು ಪಟ್ಟು ಫಲವು. ಪರಮ ಗುರುವಿನಿಂದ ಮೇಲಿನವರು ತಮ್ಮ ಶಿಷ್ಯನ ಫಲಕ್ಕಿಂತ ಅರ್ಧದಷ್ಟು ಹೆಚ್ಚಿನ ಫಲವನ್ನು ಕ್ರಮದಿಂದ ಹೊಂದುತ್ತಾರೆ. ಇದೇ ಕ್ರಮದಿಂದ ದೇವತೆಗಳು ಜ್ಞಾನಪ್ರವರ್ತಕರಾದ ಕಾರಣ ಸಹಸ್ರ ಪಾಲು ಅಧಿಕ ಫಲವನ್ನು ಹೊಂದುತ್ತಾರೆ. ಆ ಕ್ರಮದಿಂದಲೇ ಬ್ರಹ್ಮನು ಮಹೌಘದಿಂದ ಗುಣಿತವಾದ ಫಲವನ್ನು ಹೊಂದುತ್ತಾನೆ.

ಹೀಗೆ ಫಲನಿರ್ಣಯವು ಎಂಬುದಾಗಿ ಭಗವಾನ್ ವೇದವ್ಯಾಸರು ಗುರುವೃತ್ತವೆಂಬ ಶಾಸ್ತ್ರಗ್ರಂಥದಲ್ಲಿ ಸಾಕ್ಷಾತ್ತಾಗಿ ಹೇಳಿದ್ದಾರೆ.

ಆಗಮಸಿದ್ಧವಾದ ಈ ಅರ್ಥದಲ್ಲಿ ಯುಕ್ತಿಯೂ ಇದೆ ಎಂದು ಹೇಳುತ್ತಾರೆ –

**ಯುಕ್ತಂ ಚ ತನ್ನ ಗೋದಾತಾ ಗೋಮಾತ್ರಫಲಮಾಪ್ನುಯಾತ್ ।**

ಜ್ಞಾನವನ್ನು ಪಡೆಯುವ ಶಿಷ್ಯನು ಗಳಿಸುವ ಫಲಕ್ಕಿಂತ ಗುರುವಿಗೆ ಲಭಿಸುವ ಫಲವು ಅಧಿಕವು ಎನ್ನುವುದು ಯುಕ್ತಿಸಿದ್ಧವೂ ಆಗಿದೆ. ಹೇಗೆಂದರೆ, ಗೋದಾನ ಮಾಡಿದವನು, ಕೇವಲ ಗೋವನ್ನು ಸ್ವೀಕರಿಸಿದವನಿಗೆ ಬಂದಷ್ಟೇ ಫಲವಲ್ಲದೆ ಮತ್ತೆ ಮಹಾಫಲವಾದ ಸ್ವರ್ಗಾದಿಗಳನ್ನು ಹೊಂದುತ್ತಾನೆ. ಆದರೆ ಗೋವನ್ನು ದಾನವಾಗಿ ಪಡೆದವನಿಗೆ ಗೊವನ್ನು ಪಡೆದಿದ್ದೇ ಫಲವು. ಹಾಗೆಯೇ ಇಲ್ಲಿಯೂ ತಿಳಿಯತಕ್ಕದ್ದು.

ಜ್ಞಾನಫಲಕ್ಕಿಂತಲೂ ಆಚಾರ್ಯರಿಗೆ ಜ್ಞಾನದಾನ ಫಲವು ಅಧಿಕವೆಂಬುದಕ್ಕೆ ಸಂವಾದವಾಗಿ ಭಗವದ್ಗೀತೆಯ ವಾಕ್ಯವನ್ನು ಪಠಿಸುತ್ತಾರೆ –

**ಯ ಇಮಂ ಪರಮಂ ಗುಹ್ಯಂ ಮದ್ಭಕ್ತೇಷ್ವಭಿಧಾಸ್ಯತಿ ॥ ೨೭೫ ॥**

**ಭಕ್ತಿಂ ಮಯಿ ಪರಾಂ ಕೃತ್ವಾ ಮಾಮೇವೈಷ್ಯತ್ಯಸಂಶಯಃ ।**

**ನ ಚ ತಸ್ಮಾನ್ಮನುಷ್ಯೇಷು ಕಶ್ಚಿನ್ಮೇ ಪ್ರಿಯಕೃತ್ತಮಃ ॥ ೨೭೬ ॥**

**ಭವಿತಾ ನ ಚ ಮೇ ತಸ್ಮಾದನ್ಯಃ ಪ್ರಿಯತಮೋ ಭುವಿ ।**

**ಇತ್ಯಾಹ ಭಗವಾನೇವಮಪಿ ಪಾತ್ರಮಪೇಕ್ಷ್ಯತೇ ॥ ೨೭೭ ॥**

ಯಾವ ಅಧಿಕಾರಿಯು ಅತ್ಯಂತ ಗೋಪ್ಯವಾದ ಈ ಗೀತಾಶಾಸ್ತ್ರವನ್ನು ನನ್ನ ಭಕ್ತರಲ್ಲಿ ಉಪದೇಶಿಸುವನೋ ಅವನು ನನ್ನಲ್ಲಿ ಉತ್ಕೃಷ್ಟವಾದ ಭಕ್ತಿಯನ್ನು ಮಾಡಿ ನನ್ನನ್ನೇ ಹೊಂದುವವನು. ನನಗೆ ಅತಿಶಯವಾಗಿ ಪ್ರಿಯವನ್ನು ಮಾಡುವುದರಲ್ಲಿ ಆ ಗೀತೋಪದೇಶಕನಿಗಿಂತ ಬೇರೆ ಯಾವನೂ ಕೂಡ ಮನುಷ್ಯರಲ್ಲಿ ಇಲ್ಲವೇ ಇಲ್ಲ. ನನಗೆ ಅವನಿಗಿಂತ ಪ್ರಿಯತಮನಾದ ಮತ್ತೊಬ್ಬನು ಈ ಭೂಮಿಯಲ್ಲಿ ಮುಂದೆಯೂ ಆಗಲಾರನು. ಹೀಗೆ ಭಗವಂತನು ಹೇಳಿದನು. ಹೀಗಿದ್ದರೂ ದಾನ ಫಲವು ಸತ್ಪಾತ್ರದಾನವನ್ನು ಅಪೇಕ್ಷಿಸುತ್ತದೆ. ಶಿಶುವಾಗಿದ್ದ ಮಧ್ವಾಚಾರ್ಯರಿಗೆ ಗೋದಾನ ಮಾಡಿದವನಿಗೆ ಅದರ ಪುಣ್ಯದಿಂದ ಅಪರೋಕ್ಷಜ್ಞಾನದ್ವಾರಾ ಕ್ರಮೇಣ ಮೋಕ್ಷವು ಲಭಿಸಿತೆಂಬುದನ್ನು ಇಲ್ಲಿ ಸ್ಮರಿಸಬಹುದು. ಶ್ರೀಮದಾಚಾರ್ಯರಿಗಿಂತ ಮಹಾಪಾತ್ರರು ದಾನಕ್ಕೆ ಬೇರೆ ಯಾರು ಲಭಿಸಿಯಾರು?

## ಐಹಿಕಾಧಿಕರಣಮ್

ಓಂ ಐಹಿಕಮಪ್ರಸ್ತುತಪ್ರತಿಬಂಧೇ ತದ್ದರ್ಶನಾತ್ ಓಂ

## ಮುಕ್ತಿಫಲಾಧಿಕರಣಮ್

ಓಂ ಏವಂ ಮುಕ್ತಿಫಲಾನಿಯಮಸ್ತದವಸ್ಥಾವಧೃತೇಸ್ತದವಸ್ಥಾವಧೃತೇಃ ಓಂ

**ಏವಮವಿರೋಧೇನ ಪ್ರಾರಬ್ಧಸ್ಯೈವ ಕರ್ಮಣಃ ।**

**ಜ್ಞಾನಂ ದೃಷ್ಟಫಲಂ ಪ್ರೋಕ್ತಂ ಮುಕ್ತಿಶ್ಚೈವೇಹ ಲಭ್ಯತೇ ।। ೨೭೮ ।।**

ಪ್ರಾರಬ್ಧಕರ್ಮಕ್ಕೆ ಅವಿರೋಧದಿಂದಲೇ ಜ್ಞಾನಕ್ಕೆ ದೃಷ್ಟಫಲವೆಂದು ಹೇಳಿದೆ. ಪ್ರಾರಬ್ಧಕರ್ಮದ ಪ್ರತಿಬಂಧವಿಲ್ಲದಿದ್ದರೆ ಶ್ರವಣಾದಿಗಳು ಪೂರ್ತಿಯಾದ ಮೇಲೆಯೇ ಜ್ಞಾನವು ಹುಟ್ಟುತ್ತದೆ. ಪ್ರತಿಬಂಧವಿದ್ದರೆ ಅದು ಕಳೆದ ಮೇಲೇ ಜ್ಞಾನದ ಉತ್ಪತ್ತಿ. ಹೀಗೆಯೇ ಮುಕ್ತಿಯೂ ಕೂಡ ಇಲ್ಲಿಯೇ ಹೊಂದಲ್ಪಡುತ್ತದೆ. ಅಂದರೆ ಯಾವ ದೇಹದಲ್ಲಿ ಜ್ಞಾನ ಹುಟ್ಟುವುದೋ ಆ ದೇಹಪಾತವಾದ ತಕ್ಷಣವೇ ಮುಕ್ತಿಯು.

।। ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತೇ

ಶ್ರೀಮದನುವ್ಯಾಖ್ಯಾನೇ ತೃತೀಯಾಧ್ಯಾಯಸ್ಯ ಚತುರ್ಥಃ ಪಾದಃ ।।

।। ಇತಿ ತೃತೀಯಾಧ್ಯಾಯಃ ಸಮಾಪ್ತಃ ।।

।।ಇಲ್ಲಿಗೆ ಶ್ರೀಮದನುವ್ಯಾಖ್ಯಾನದ ಮೂರನೆಯ ಅಧ್ಯಾಯ ನಾಲ್ಕನೆಯ ಪಾದದ

ಶ್ರೀಮನ್ನ್ಯಾಯಸುಧಾನುಸಾರಿ ವಿವರಣೆ ಸಹಿತ ಕನ್ನಡಾನುವಾದವು ಮುಕ್ತಾಯವಾಯಿತು।।

।। ಇಲ್ಲಿಗೆ ನಾಲ್ಕನೆಯ ಅಧ್ಯಾಯವು ಸಮಾಪ್ತವಾಯಿತು ।।

।। ಶ್ರೀಕೃಷ್ಣಾರ್ಪಣಮಸ್ತು ।।

* * *

ಮಿಥ್ಯಾಸಿದ್ಧಾಂತದುರ್ಧ್ವಾಂತ ವಿಧ್ವಂಸನ ವಿಚಕ್ಷಣಃ ।
ಜಯತೀರ್ಥಾಖ್ಯ ತರಣಿರ್ಭಾಸತಾಂ ನೋ ಹೃದಂಬರೇ ॥



ಶ್ರೀ ಜಯತೀರ್ಥರು


ಪ್ರಕಾಶಕರು :

**ಪವನಜ ಪ್ರಕಾಶನ**

ನಂ. 1625, 5ನೇ 'ಬಿ' ಕ್ರಾಸ್, ಎರಡನೆಯ ಬ್ಲಾಕ್
ಬನಶಂಕರಿ 1ನೇ ಸ್ಟೇಜ್, ಬೆಂಗಳೂರು-560 050
ದೂರವಾಣಿ : 6600932

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತಮ್

# ಶ್ರೀಮದನುವ್ಯಾಖ್ಯಾನಮ್

ಸಂಪುಟ-೪

ನಾಲ್ಕನೆಯ ಅಧ್ಯಾಯ (ಫಲಾಧ್ಯಾಯ)



ಪ್ರೊ।। ಎಸ್. ವೆಂಕಟೇಶಮೂರ್ತಿ

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತಮ್

# ಶ್ರೀಮದನುವ್ಯಾಖ್ಯಾನಮ್

## ಸಂಪುಟ - 4

## ನಾಲ್ಕನೆಯ ಅಧ್ಯಾಯ (ಫಲಾಧ್ಯಾಯ)

**ಶ್ರೀಮಜ್ಜಯತೀರ್ಥರ ಶ್ರೀಮನ್ನ್ಯಾಯಸುಧಾನುಸಾರಿ**

**ಕನ್ನಡದಲ್ಲಿ ಅರ್ಥ ಮತ್ತು ವಿವರಣೆ ಸಹಿತ**


**ಲೇಖಕರು**

**ಪ್ರೊ|| ಎಸ್. ವೆಂಕಟೇಶ ಮೂರ್ತಿ, ಎಂ. ಎಸ್‌ಸಿ**



**ಪವನಜ ಪ್ರಕಾಶನ**

**ನಂ. 1625, 5 ನೇ ಬಿ ಕ್ರಾಸ್, 17ನೇ ಮುಖ್ಯ ರಸ್ತೆ,**

**ಎರಡನೆಯ ಬ್ಲಾಕ್, ಬನಶಂಕರಿ ಮೊದಲನೆಯ ಸ್ಟೇಜ್,**

**ಬೆಂಗಳೂರು 560050 :: ದೂರವಾಣಿ: 6600932**

Sri Madhvacharya's

*Śrīmadanuvyākhyānam*

Part - 4

Rendered in Kannada by:
Prof. S. Venkatesha Murthy, M. Sc.
Published by:
Pavanaja Prakashana,
#1625, 5th 'B' Cross, Second Block, Banashankari
First Stage, Bangalore 560050; Phone: 6600932

First Edition: 2003
Pages: 96
Price: Rs. 30/-

ಶ್ರೀಮನ್ಮಧ್ವಾಚಾರ್ಯ ವಿರಚಿತ
ಶ್ರೀಮದನುವ್ಯಾಖ್ಯಾನಮ್: ಸಂಪುಟ - 4

ಮೊದಲನೆಯ ಮುದ್ರಣ : 2003

ಪುಟಗಳು : 96

ಬೆಲೆ : ರೂ. 30/-

ಮುದ್ರಕರು :
ಪರಿಮಳ ಮುದ್ರಣಾಲಯ,
ಹನುಮಂತನಗರ, ಬೆಂಗಳೂರು 560019

# ಮುನ್ನುಡಿ

ಶ್ರೀಮನ್ಮಧ್ವಾಚಾರ್ಯರ ಸರ್ವಮೂಲಗ್ರಂಥಗಳಲ್ಲಿ ಮೇರುಕೃತಿಯಾದ ಹಾಗೂ ಶ್ರೀಮನ್ನ್ಯಾಯಸುಧಾದಂತಹ ಪ್ರಬುದ್ಧವಾದ ಟೀಕಾ ಗ್ರಂಥಕ್ಕೆ ಮೂಲಕಾರಣವಾದ ಶ್ರೀಮದನುವ್ಯಾಖ್ಯಾನ ಗ್ರಂಥಕ್ಕೆ ಕನ್ನಡದಲ್ಲಿ ಅರ್ಥ ವಿವರಣೆಗಳನ್ನು ನೀಡುವಂತಹ ಬಹು ಕಷ್ಟಸಾಧ್ಯವಾದ ಕಾರ್ಯವನ್ನು ಕೈಗೊಳ್ಳುವಂತೆ ಪ್ರೇರಣೆ ನೀಡಿ, ತಾವೇ ನನ್ನೊಳಗೆ ನಿಂತು, ಅಲ್ಪನಾದ ನನ್ನಿಂದ ಈ ಮಹತ್ಕಾರ್ಯವು ಅಲ್ಪ ಕಾಲದಲ್ಲಿಯೇ ಸಮರ್ಥವಾಗಿ ಕೈಗೂಡುವಂತೆ ಅನುಗ್ರಹಿಸಿದ ಶ್ರೀಹರಿವಾಯುಗಳಿಗೆ ಹಾಗೂ ತತ್ವಾಭಿಮಾನಿ ದೇವತೆಗಳಿಗೆ ಭಕ್ತಿಪೂರ್ವಕ ಅನೇಕ ಪ್ರಣಾಮಗಳು. ಕಳೆದ ವರ್ಷ ಶ್ರೀಮಜ್ಜಯತೀರ್ಥರ ಆರಾಧನೆಯ ಸಂದರ್ಭದಲ್ಲಿ ಈ ಗ್ರಂಥದ ಮೊದಲನೆಯ ಅಧ್ಯಾಯವನ್ನೊಳಗೊಂಡ ಪ್ರಥಮ ಸಂಪುಟವು ಬಿಡುಗಡೆಗೆ ಸಿದ್ಧವಾಗಿ ಅನತಿ ಕಾಲ ದಲ್ಲಿಯೇ ಪ್ರಕಟಗೊಂಡು ಜಿಜ್ಞಾಸುಗಳ ಮೆಚ್ಚುಗೆ ಗಳಿಸಿತು. ಈಗ ಶ್ರೀರಾಘವೇಂದ್ರ ಸ್ವಾಮಿಗಳ ಆರಾಧನೆಯ ವೇಳೆಗೆ ಈ ಗ್ರಂಥದ ಅಂತಿಮ ಭಾಗವಾದ ನಾಲ್ಕನೆಯ ಸಂಪುಟವು ಬಿಡುಗಡೆ ಸಿದ್ಧವಾಗಿದ್ದು, ಅದನ್ನು ಜಿಜ್ಞಾಸುಗಳ ಮುಂದಿಡಲು ಬಹಳ ಸಂತೋಷವಾಗುತ್ತಿದೆ. ಒಟ್ಟು ಸುಮಾರು ೯೦೦ ಪುಟಗಳಷ್ಟು ವ್ಯಾಪ್ತಿಯುಳ್ಳ ನಾಲ್ಕು ಸಂಪುಟಗಳ ಈ ಗ್ರಂಥವು ಕೇವಲ ಒಂದು ವರ್ಷದಷ್ಟು ಅಲ್ಪಸಮಯದಲ್ಲಿ ಪೂರ್ಣವಾಗುವುದಕ್ಕೆ ಶ್ರೀಮಧ್ವ-ಮಧ್ವೇಶರ ಅನುಗ್ರಹವೇ ಮುಖ್ಯಕಾರಣವು.

ಈ ನಾಲ್ಕನೆಯ ಸಂಪುಟವು ಶ್ರೀಮದುನುವ್ಯಾಖ್ಯಾನದ ನಾಲ್ಕನೆಯ ಅಧ್ಯಾಯದ ಸಮಗ್ರ ಅನುವಾದ. ಫಲಾಧ್ಯಾಯವೆಂದು ಪ್ರಸಿದ್ಧವಾಗಿರುವ ಇದರಲ್ಲಿ ನಾಲ್ಕು ಪಾದಗಳಿವೆ. ಈ ನಾಲ್ಕು ಪಾದಗಳಲ್ಲಿ ಕ್ರಮವಾಗಿ ಕರ್ಮಕ್ಷಯ, ಮಾರ್ಗ, ಉತ್ಕ್ರಾಂತಿ ಹಾಗೂ ಭೋಗಕ್ಕೆ ಸಂಬಂಧಿಸಿದ ವಿಷಯಗಳು ನಿರೂಪಿತವಾಗಿವೆ. ಪ್ರಥಮಪಾದದಲ್ಲಿ ೧೯ ಸೂತ್ರಗಳು ಹಾಗೂ ೮ ಅಧಿಕರಣಗಳಿದ್ದರೆ, ಎರಡನೆಯ ಪಾದದಲ್ಲಿ ೨೨ ಸೂತ್ರಗಳಿಂದ ಕೂಡಿದ ೧೦ ಅಧಿಕರಣಗಳಿವೆ. ಮೂರನೆಯ ಪಾದವು ೧೬ ಸೂತ್ರಗಳು ಹಾಗೂ ೬ ಅಧಿಕರಣಗಳಿಂದ ಕೂಡಿದ್ದರೆ, ನಾಲ್ಕನೆಯ ಪಾದದಲ್ಲಿ ೨೩ ಸೂತ್ರಗಳಿಂದ ಕೂಡಿದ ಒಟ್ಟು ೧೧ ಅಧಿಕರಣಗಳಿವೆ. ಶ್ರೀಮದ ನುವ್ಯಾಖ್ಯಾನದಲ್ಲಿ ಶ್ರೀಮದಾಚಾರ್ಯರು ಎಲ್ಲ ಅಧಿಕರಣಗಳಿಗೂ ವ್ಯಾಖ್ಯಾನ ರಚಿಸಿಲ್ಲ. ಯಾವ ಯಾವ ಅಧಿಕರಣಗಳಿಗೆ ಹೆಚ್ಚಿನ ಸ್ಪಷ್ಟತೆ ಹಾಗೂ ವಿವರಣೆಗಳು ಅವಶ್ಯಕತೆಯಿದೆಯೋ ಅವುಗಳಿಗೆ ಮಾತ್ರ ವ್ಯಾಖ್ಯಾನ ಮಾಡಿದ್ದಾರೆ. ಮೋಕ್ಷದ ಸ್ವರೂಪಕ್ಕೆ ಸಂಬಂಧಿಸಿದಂತೆ ವಿವಿಧ ಮತಗಳಲ್ಲಿ ಪ್ರಸ್ತಾಪಿತವಾಗಿರುವ ವಿವರಣೆಗಳು

ಎಷ್ಟು ಅಸಂಮಜಸ ಎಂಬುದನ್ನು ಬಹಳ ವಿವರವಾಗಿ ಸ್ಮೃತಿ, ಶ್ರುತಿ ಹಾಗೂ ಯುಕ್ತಿಗಳ ಮೂಲಕ ಅತ್ಯಂತ ಸಮರ್ಥವಾಗಿ ನಿರೂಪಿಸುತ್ತ ಆಯಾ ಮತಗಳನ್ನು ನಿರಾಕರಣೆ ಮಾಡುವ ಶ್ರೀಮದಾಚಾರ್ಯರು, ನಿಜವಾದ ಮೋಕ್ಷಸ್ವರೂಪವೇನು ಎಂಬುದನ್ನು ಬಹಳ ಸುಂದರವಾಗಿ ಇಲ್ಲಿ ಚಿತ್ರಿಸಿದ್ದಾರೆ. ಪರಮಾತ್ಮನ ಪರಮಾ–ನುಗ್ರಹದಿಂದ ಜೀವರ ಸ್ವರೂಪಾನಂದವು ಅವರ ಯೋಗ್ಯತಾನುಸಾರ ಪೂರ್ಣವಾಗಿ ಅಭಿವ್ಯಕ್ತಗೊಳ್ಳುವುದೇ ಮೋಕ್ಷ. ಜೀವರ ಸಾಧನೆಯಲ್ಲಿ ತಾರತಮ್ಯವಿದೆ. ಸಾಧನಾ ತಾರತಮ್ಯಕ್ಕೆ ಅನುಗುಣವಾಗಿ ಮೋಕ್ಷದಲ್ಲಿಯೂ ತಾರತಮ್ಯವಿದೆ. ಅಲ್ಲಿಯೂ ಜೀವೇಶ್ವರರಿಗೆ ಭೇದ, ಎಲ್ಲರಿಗೂ ಶ್ರೀಹರಿಯಿಂದ ನಿಯಮನ, ಉತ್ತಮರಿಗೆ ಅಧಮರ ಮೇಲೆ ಆಧಿಪತ್ಯ ಮುಕ್ತರಲ್ಲಿ ಪರಸ್ಪರ ದ್ವೇಷಾಸೂಯೆಗಳ ಅಭಾವ, ಇತ್ಯಾದಿ ಪ್ರಮೇಯಗಳು ಇಲ್ಲಿ ಬಹಳ ಸುಂದರವಾಗಿ ನಿರೂಪಿತವಾಗಿವೆ. ಈ ಫಲಾಧ್ಯಾಯದಲ್ಲಿ ಪ್ರತಿಪಾದಿತವಾಗಿರುವ ವಿಷಯಗಳ ಸಂಗ್ರಹವನ್ನು ಈ ಗ್ರಂಥದ ಪ್ರಾರಂಭದಲ್ಲಿ ನೀಡಲಾಗಿರುವ ಅನುಕ್ರಮಣಿಕೆಯಿಂದ ತಿಳಿಯಬಹುದು.

ಈ ಗ್ರಂಥದ ಪ್ರಕಟಣೆಯ ಸಂದರ್ಭದಲ್ಲಿ ನಮ್ಮ ವಿದ್ಯಾಗುರುಗಳಾದ ಪೂಜ್ಯ ಡಾ. ವ್ಯಾಸನಕೆರೆ ಪ್ರಭಂಜನಾಚಾರ್ಯರರಿಗೆ ಗೌರವಾದರಪೂರ್ವಕ ನಮನತತಿಗಳು. ನಮ್ಮ ಎಲ್ಲ ಆಧ್ಯಾತ್ಮಿಕ ಕಾರ್ಯಗಳಿಗೂ ತುಂಬು ಹೃದಯದಿಂದ ಪ್ರೋತ್ಸಾಹ ನೀಡುತ್ತ ಪರಮಾನುಗ್ರಹ ಮಾಡುತ್ತಿರುವ ಉತ್ತರಾದಿಮಠಧೀಶರಾದ ಪರಮಪೂಜ್ಯ ಶ್ರೀ ಶ್ರೀ ಸತ್ಯಾತ್ಮತೀರ್ಥ ಶ್ರೀಪಾದಂಗಳವರಿಗೂ ಹಾಗೂ ಈಗ ಉಡುಪಿಯ ಪರ್ಯಾಯ ಪೀಠದಲ್ಲಿ ವಿರಾಜಮಾನರಾಗಿರುವ ಪಲಿಮಾರು ಮಠದ ಶ್ರೀ ಶ್ರೀ ವಿದ್ಯಾಧೀಶತೀರ್ಥ ಶ್ರೀಪಾದಂಗಳವರಿಗೂ ನನ್ನ ಭಕ್ತಿಪೂರ್ವಕ ನಮಸ್ಕಾರಗಳು.

ಈ ಗ್ರಂಥದ ಪ್ರಕಟಣೆಯಲ್ಲಿ ಎಲ್ಲ ರೀತಿಯಿಂದಲೂ ಸಹಕರಿಸಿದ ನನ್ನ ಎಲ್ಲ ಹಿತೈಷಿ ಬಂಧುಗಳಿಗೂ ಹಾಗೂ ಮುಖ್ಯವಾಗಿ ಮನೆಯವರಿಗೂ ಕೃತಜ್ಞತೆಗಳು. ಅಂದವಾಗಿ ಮುದ್ರಿಸಿಕೊಟ್ಟಿರುವ ಪರಿಮಳ ಮುದ್ರಣಾಲಯದ ಶ್ರೀಯುತ ಪ್ರಭಾಕರ್ ಅವರಿಗೆ ಕೃತಜ್ಞತೆಗಳು. ಜಿಜ್ಞಾಸುಗಳ ಅಭಿಪ್ರಾಯಗಳಿಗೆ ಹೃತ್ಪೂರ್ವಕ ಸ್ವಾಗತ.

ಬೆಂಗಳೂರು — ಇಂತಿ ಸಜ್ಜನವಿಧೇಯ

ತಾ. ೧೪–೮–೨೦೦೩ — ಎಸ್. ವೆಂಕಟೇಶಮೂರ್ತಿ

**ಸುಭಾನು ಸಂವತ್ಸರದ ಶ್ರೀರಾಘವೇಂದ್ರ ಸ್ವಾಮಿಗಳ ಆರಾಧನೆಯಂದು ಸಮರ್ಪಿತವಾದುದು**

॥ ಶ್ರೀಕೃಷ್ಣಾರ್ಪಣಮಸ್ತು ॥

# ವಿಷಯಾನುಕ್ರಮಣಿಕಾ


**ಮೊದಲನೆಯ ಪಾದ** ೧ – ೨೦

ಫಲನಿರೂಪಣೆಯಲ್ಲಿ ಸಂಗತಿಯು ೧

ಆವೃತ್ತ್ಯಧಿಕರಣ ೨

ಶ್ರವಣಾದಿಗಳಿಗೆ ಆವೃತ್ತಿಯ ಅವಶ್ಯಕತೆ ೨

ಆತ್ಮಾಧಿಕರಣ ೪

ಆತ್ಮಾ ಎನ್ನುವುದು ಮುಖ್ಯವೃತ್ತಿಯಿಂದ ವಿಷ್ಣುವಿನ ನಾಮ ೪

ವಿಷ್ಣುವನ್ನು ಆತ್ಮಾ, ಸ್ವಾಮಿ ಎಂದು ಉಪಾಸನೆ ಮಾಡಬೇಕು ೪

ನ ಪ್ರತೀಕಾಧಿಕರಣ ೬

ಪ್ರತೀಕದಲ್ಲಿರುವ ವಿಷ್ಣುವೇ ಧ್ಯೇಯನು, ಪ್ರತೀಕವೇ ವಿಷ್ಣುವಲ್ಲ ೬

ಮಿಥ್ಯೋಪಾಸನೆಯು ಅನರ್ಥಕ್ಕೆ ಕಾರಣವು ೭

ಬ್ರಹ್ಮದೃಷ್ಟ್ಯಧಿಕರಣ ೯

ವಿಷ್ಣುವನ್ನು ಬ್ರಹ್ಮತ್ವೇನ ಉಪಾಸನೆ ಮಾಡಬೇಕು ೯

ಆತ್ಮೇತಿ ಸೂತ್ರವು ಈಶನಿಗೆ ಜೀವತ್ವವನ್ನು ಪ್ರತಿಪಾದಿಸುವುದಿಲ್ಲ ೧೦

ಜೀವೇಶ್ವರ ಭೇದವು ಭ್ರಾಂತಿಕಲ್ಪಿತವಲ್ಲ ೧೨

ನ ಪ್ರತೀಕೇ ಇತ್ಯಾದಿ ಸೂತ್ರಕ್ಕೆ ಅಪವ್ಯಾಖ್ಯಾನ ನಿರಾಸೆ ೧೩

ಬ್ರಹ್ಮದೃಷ್ಟಿ ಇತ್ಯಾದಿ ಸೂತ್ರಕ್ಕೆ ಅಪವ್ಯಾಖ್ಯಾನ ನಿರಾಸೆ ೧೪

ತದಧಿಗಮಾಧಿಕರಣ ೧೮

ಕರ್ಮನಾಶಾಖ್ಯ ಜ್ಞಾನಫಲ ನಿರೂಪಣೆ ೧೮

ಇತರಸ್ಯಾಪ್ಯೇವಂ ಇತ್ಯಾದಿ ಸೂತ್ರಾರ್ಥವು ೧೮

ಯದೇವ ವಿದ್ಯಯಾ ಇತ್ಯಾದಿ ಸೂತ್ರಕ್ಕೆ ಪುನರುಕ್ತಿ ಪರಿಹಾರ ೧೯

ಪ್ರಾರಬ್ಧಕರ್ಮಭೋಗಾನಂತರವೇ ಬ್ರಹ್ಮಜ್ಞಾನಿಗಳಿಗೆ ಮೋಕ್ಷ ಹಾಗೂ ಬ್ರಹ್ಮದ್ವೇಷಿಗಳಿಗೆ ತಮಸ್ಸು ೨೦

ಪ್ರಾರಬ್ಧಕರ್ಮವು ಅನಂತವಾದ್ದರಿಂದ ಭೋಗದಿಂದ ಅದರ ನಾಶವು ಅಶಕ್ಯವೆಂಬ ಶಂಕಾ ಪರಿಹಾರ ೨೦

**ಎರಡನೆಯ ಪಾದ** ೨೧–೭೫

ಪಾದಚತುಷ್ಟಯ ವಿಷಯ ನಿರೂಪಣೆ ೨೧
ದೇವತೆಗಳ ಮಾರ್ಗಉತ್ಕ್ರಾಂತಿಗಳ ಸ್ವರೂಪ ನಿರೂಪಣೆ ೨೧
ಉಕ್ತಾರ್ಥದಲ್ಲಿ ಶ್ರುತಿ ಪುರಾಣೋಕ್ತಿಗಳು ೨೩
ಚತುರ್ಥಪಾದೋಕ್ತ ಭೋಗವು ದೇವತೆಗಳಿಗೆ ಸಾಧಾರಣವು ೨೪
ದ್ವಿತೀಯಪಾದೋಕ್ತವಾದ ದೇವತೆಗಳ ಲಯಕ್ರಮದ ಸಮರ್ಥನೆ ೨೪
ವಾದಿಗಳಿಗೆ ಮತಿಭೇದಕ್ಕೆ ಗುಣಭೇದವು ಕಾರಣ ೨೫
ಮುಕ್ತರ ಜ್ಞಾನದ ಸ್ವರೂಪ ೨೫
ಲಕ್ಷ್ಮೀಜ್ಞಾನದ ಸ್ವರೂಪ ೨೬
ಈಶಜ್ಞಾನದ ಸ್ವರೂಪ ೨೬
ಲಕ್ಷ್ಮೀಜ್ಞಾನದಲ್ಲಿ ವಿಶೇಷ ೨೭
ಬ್ರಹ್ಮಜ್ಞಾನದಲ್ಲಿ ವಿಶೇಷ ೨೭
ರಮಾಬ್ರಹ್ಮೇತರ ಮುಕ್ತರ ಜ್ಞಾನಕ್ಕೆ ವೃದ್ಧಿಹ್ರಾಸವುಂಟು ೨೭
ಮತಿಭೇದ ನಿರೂಪಣೆಯ ಉಪಸಂಹಾರ ೨೭
ಜಿನೋದಿತ ಮೋಕ್ಷಸ್ವರೂಪದ ನಿರೂಪಣೆ ೨೮
ಜಿನೋದಿತ ಮೋಕ್ಷಸ್ವರೂಪದ ನಿರಾಸೆ ೨೮
ಬೌದ್ಧೋಕ್ತ ಮೋಕ್ಷಸ್ವರೂಪದ ನಿರಾಸೆ ೩೧
ಬೌದ್ಧಮತದಲ್ಲಿ ನಾಲ್ಕು ಪ್ರಕಾರವು ೩೧
ಶೂನ್ಯವಾದಿಗಳ ಮತದ ಅನುವಾದ ೩೨
ಶೂನ್ಯರ ಏಕಾತ್ಮವಾದ ನಿರೂಪಣೆ ೩೨
ಶೂನ್ಯರ ಅನೇಕಾತ್ಮವಾದ ನಿರೂಪಣೆ ೩೪
ಶೂನ್ಯವಾದಿ ಮಾಯಾವಾದಿಗಳಿಗೆ ಸಾಮ್ಯದ ನಿರೂಪಣೆ ೩೫
ಅದ್ವೈತವು ಸೂತ್ರಕಾರರಿಗೆ ಅಭಿಮತವಲ್ಲ ೩೮
ಆತ್ಮವಿನಾಶಕ್ಕೆ ಮೋಕ್ಷತ್ವವಿಲ್ಲ, ಅಪುರುಷಾರ್ಥವಾದ್ದರಿಂದ ೩೮
ಶೂನ್ಯಭಾವ ಬ್ರಹ್ಮಭಾವಗಳಿಗೆ ಮೋಕ್ಷಸಾಧಕತ್ವವಿಲ್ಲ ೩೯
ವಿಜ್ಞಾನವಾದಿಗಳ ಮೋಕ್ಷಸ್ವರೂಪ ನಿರಾಕರಣೆ ೪೧
ವೈಶೇಷಿಕ ಸೌತ್ರಾಂತಿಕರ ಮೋಕ್ಷಸ್ವರೂಪ ನಿರಾಕರಣೆ ೪೪
ಸಾಂಖ್ಯ ನೈಯಾಯಿಕಾದಿಗಳ ಮೋಕ್ಷಸ್ವರೂಪ ನಿರಾಕರಣೆ ೪೫

| | |
|---|---|
| ಪ್ರಿಯಾಪ್ರಿಯೇ ಇತ್ಯಾದಿ ಶ್ರುತ್ಯರ್ಥ ನಿರೂಪಣೆ | ೪೫ |
| ನ ಪ್ರೇತ್ಯ ಸಂಜ್ಞಾಸ್ತಿ ಇತ್ಯಾದಿ ಶ್ರುತ್ಯರ್ಥ ನಿರೂಪಣೆ | ೪೭ |
| ಸೋಽಶ್ನುತೇ ಇತ್ಯಾದಿ ಶ್ರುತ್ಯರ್ಥ | ೫೧ |
| ಯತ್ರ ಹಿ ದ್ವೈತಮಿವ ಭವತಿ ಶ್ರುತ್ಯರ್ಥ | ೫೧ |
| ಮುಕ್ತಿಯಲ್ಲಿ ಸುಖಾಭಾವವಿಲ್ಲ | ೫೩ |
| ಮುಕ್ತಿಯಲ್ಲಿ ಸುಖವುಂಟು ಎನ್ನುವುದಕ್ಕೆ ಪ್ರಮಾಣಗಳು | ೫೬ |
| ಮುಕ್ತರಿಗೆ ಸ್ವರೂಪಭೂತ ದೇಹವತ್ವ ಪ್ರತಿಪಾದನೆ | ೫೭ |
| ಮುಕ್ತಿಯಲ್ಲಿಯೂ ಜೀವನಿಗೆ ಬ್ರಹ್ಮಸ್ವರೂಪತ್ವವು ಬರುವುದಿಲ್ಲ | ೬೦ |
| ಯಾದವಪ್ರಕಾಶಾದಿಗಳ ಮತ ನಿರಾಸೆ | ೬೩ |
| ಮೋಕ್ಷವಾದಾರ್ಥ ಉಪಸಂಹಾರ | ೬೩ |
| ತೃತೀಯಾಧ್ಯಾಯ ಚತುರ್ಥಪಾದದಲ್ಲಿನ ಪೂರ್ವಪಕ್ಷ ಹಾಗೂ ಸಿದ್ಧಾಂತ ಯುಕ್ತಿಗಳು | ೬೪ |
| ಚತುರ್ಥಾಧ್ಯಾಯ ಪ್ರಥಮಪಾದದಲ್ಲಿನ ಪೂರ್ವಪಕ್ಷ ಹಾಗೂ ಸಿದ್ಧಾಂತ ಯುಕ್ತಿಗಳು | ೬೫ |
| ಚತುರ್ಥಾಧ್ಯಾಯ ದ್ವಿತೀಯಪಾದದಲ್ಲಿನ ಪೂರ್ವಪಕ್ಷ ಹಾಗೂ ಸಿದ್ಧಾಂತ ಯುಕ್ತಿಗಳು | ೬೫ |
| ನೈಕಸ್ಮಿನ್ನಧಿಕರಣ | ೬೬ |
| ವಾಯಾವಿಂದ್ರಃ ಇತ್ಯಾದಿ ಶ್ರುತ್ಯರ್ಥ | ೬೬ |
| ಪರಾಧಿಕರಣ | ೬೮ |
| ದೇವತೆಗಳಿಗೆ ಪ್ರದಾನವಾಯುವಿನಲ್ಲಿ ಲಯ ವಾಯುವಿಗೆ ವಿಷ್ಣುವಿನಲ್ಲಿ ಲಯ | ೬೮ |
| ಲಯಕ್ರಮದ ಸಂಕ್ಷಿಪ್ತ ನಿರೂಪಣೆ | ೬೮ |
| ಶೇಷಮಾರ್ಗದ ನಿರೂಪಣೆ | ೬೯ |
| ಗರುಡಮಾರ್ಗದ ನಿರೂಪಣೆ | ೭೦ |
| ಸಾಯುಜ್ಯರ ಲಯದ ಕ್ರಮ | ೭೧ |
| ಲಯದಲ್ಲಿ ಸೃಷ್ಟಿಕ್ರಮಕ್ಕಿಂತ ವಿಪರೀತ ಕ್ರಮವು | ೭೩ |
| ಪ್ರಾಣಸ್ತೇಜಸಿ ಇತ್ಯಾದಿ ಶ್ರುತ್ಯರ್ಥ | ೭೪ |

ಪಾದಾರ್ಥ ಉಪಸಂಹಾರ ೭೫

**ಮೂರನೆಯ ಪಾದ ೭೬–೭೭**

ಪಾದಪ್ರತಿಪಾದ್ಯಾರ್ಥ ನಿರೂಪಣೆ ೭೬

ಪೂರ್ವಪಕ್ಷ ಹಾಗೂ ಸಿದ್ಧಾಂತ ಯುಕ್ತಿಗಳು ೭೬

ಕಾರ್ಯಾಧಿಕರಣ ೭೭

ಅಪ್ರತೀಕಾಲಂಬನರ ಲಯದ ಪ್ರಕಾರ ೭೭

**ನಾಲ್ಕನೆಯ ಪಾದ ೭೮–೮೭**

ಪೂರ್ವಪಕ್ಷ ಹಾಗೂ ಸಿದ್ಧಾಂತ ಯುಕ್ತಿಗಳು ೭೮

ಅನನ್ಯಾಧಿಪತ್ಯಧಿಕರಣ ೭೯

ಮುಕ್ತರಿಗೂ ಭಗವಂತನು ಅಧಿಪತಿಯು ೭೯

ಬ್ರಹ್ಮನಿಗೆ ಸರ್ವಾತ್ಮನಾ ಲೋಕಾಧಿಪತ್ಯ
ಇತರರಿಗೆ ಯಥಾಯೋಗ್ಯವಾಗಿ ಆಧಿಪತ್ಯ ೮೧

ಮುಕ್ತರಿಗೆ ತಮಗಿಂತ ಅಧಮರನ್ನು ಕುರಿತು ನಿಯಂತೃತ್ವವು ೮೨

ಲೋಕಾಭಿಮಾನಿಗಳಾದ ಮುಕ್ತರೇ ಲೋಕಶಬ್ದಾರ್ಥರು ೮೩

ನಿಯಂತೃತ್ವ ಹೇಳುವ ಶ್ರುತಿಗೆ ಪರಕೀಯರ ಅಪವ್ಯಾಖ್ಯಾನ ನಿರಾಸೆ ೮೩

ಪಾದಾರ್ಥ ಉಪಸಂಹಾರ ೮೫

ಗ್ರಂಥದ ಪರಿಸಮಾಪ್ತಿ ೮೫

ಪುರುಷೋತ್ತಮನಿಗೆ ಮತ್ತೆ ಮತ್ತೆ ನಮಸ್ಕಾರ ೮೫

ಶ್ರೀಮದಾಚಾರ್ಯರ ಸ್ವರೂಪಾವಿಷ್ಕಾರ ೮೬

ಮತ್ತೆ ಭಗವಂತನ ಸ್ತುತಿಯೊಂದಿಗೆ ಗ್ರಂಥದ ಮುಕ್ತಾಯ ೮೭

ಶ್ರೀಮನ್ನ್ಯಾಯಸುಧಾ ಹಾಗೂ ಪರಿಮಳದ ಮಂಗಲಶ್ಲೋಕಗಳು ೮೭– ೮೮

* * *

ಶ್ರೀಮದ್ಧನುಮಭೀಮಮಧ್ವಾಂತರ್ಗತ ಶ್ರೀರಾಮಕೃಷ್ಣವೇದವ್ಯಾಸಾತ್ಮಕ ಶ್ರೀಲಕ್ಷ್ಮೀಹಯಗ್ರೀವಾಯ ನಮಃ

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತಮ್

# ಶ್ರೀಮದನುವ್ಯಾಖ್ಯಾನಮ್

# ನಾಲ್ಕನೆಯ ಅಧ್ಯಾಯ (ಫಲಾಧ್ಯಾಯ)

## ಮೊದಲನೆಯ ಪಾದ

ಶ್ರೀಮನ್ನ್ಯಾಯಸುಧಾ ಮಂಗಲಶ್ಲೋಕ

**ಯದೀಯ ಚರಣಾಂಭೋಜಚ್ಛಾಯಾಮಾಶ್ರಿತ್ಯ ನಿರ್ವೃತಾಃ ।**

**ನಂದಂತಿ ಸತತಂ ಮುಕ್ತಾಃ ಸಂಶ್ರಯೇ ತಂ ಶ್ರಿಯಃಪತಿಂ ॥**

ಯಾವ ಪರಮಾತ್ಮನ ಚರಣಕಮಲಗಳ ನೆರಳನ್ನು ಆಶ್ರಯಿಸಿ ಜೀವರು ಕ್ಲೇಶಗಳನ್ನು ಕಳೆದುಕೊಂಡು ಚತುರ್ವಿಧ ಮುಕ್ತಿಯನ್ನು ಹೊಂದಿದವರಾಗಿ ಸುಖವನ್ನು ಅನುಭವಿಸುವರೋ ಅಂಥಹ ಲಕ್ಷ್ಮೀಪತಿಯನ್ನು ಅಭೀಷ್ಟಪ್ರಾಪ್ತಿಗಾಗಿ ಆಶ್ರಯಿಸುವೆನು.

ನಿರ್ವೃತಾಃ ಎಂದರೆ 'ಕ್ಷೀಣಕರ್ಮಾಣಃ' ಕರ್ಮಕ್ಷಯವನ್ನು ಹೊಂದಿದವರು ಎಂದು ಅರ್ಥ. ಇದರಿಂದ ಮೊದಲನೆಯ ಪಾದದ ಪ್ರಮೇಯವು ಸೂಚಿತವಾಗಿದೆ. ಮುಕ್ತಾಃ ಎಂದರೆ ದೇಹಬಂಧದಿಂದ ಬಿಡುಗಡೆ ಹೊಂದಿದವರು ಎಂದು ಅರ್ಥ. ಇದರಿಂದ ಉತ್ಕ್ರಾಂತಿ ಎಂಬ ಎರಡನೆಯ ಪಾದದ ಪ್ರಮೇಯವು ಸೂಚಿತವಾಗಿದೆ. ಯದೀಯಚರಣಾಂಭೋಜಚ್ಛಾಯಾಮಾಶ್ರಿತ್ಯ ಎಂದರೆ ಪರಮಾತ್ಮನ ಪಾದಕಮಲ ಗಳ ನೆರಳನ್ನು ಆಶ್ರಯಿಸಿ ಎಂದರ್ಥ. ಇದರಿಂದ ಗಮ್ಯಸ್ಥಾನವನ್ನು ತಿಳಿಸಿದ ಪ್ರಯುಕ್ತ ಮೂರನೆಯ ಪಾದದ ಪ್ರಮೇಯವು ಸೂಚಿತವಾಗಿದೆ. ನಂದಂತಿ ಎಂದರೆ ಸುಖವನ್ನು ಅನುಭವಿಸುತ್ತಾರೆ ಎಂದರ್ಥ. ಇದರಿಂದ ಭೋಗವೆಂಬ ನಾಲ್ಕನೆಯ ಪಾದದ ಪ್ರಮೇಯವು ಸೂಚಿತವಾಗಿದೆ.

ಅನುವ್ಯಾಖ್ಯಾನ

ಈ ಅಧ್ಯಾಯದಲ್ಲಿ ಫಲವು ನಿರೂಪಿಸಲ್ಪಡುವುದು ಎಂದು ಭಾಷ್ಯದಲ್ಲಿ ಹೇಳಲಾಗಿದೆ. ಪ್ರಸ್ತುತ ಫಲನಿರೂಪಣೆಯಲ್ಲಿನ ಸಂಗತಿಯನ್ನು ಹೇಳುತ್ತಾರೆ –

**ಸಮನ್ವಯಾವಿರೋಧಾಭ್ಯಾಂ ಸಿದ್ಧೇ ವಸ್ತುನಿ ಸಾಧನೇ ।**

**ವಿಚಾರಿತೇಷ್ವಶೇಷೇಷು ಸಾಧನೇಷು ವಿಶೇಷತಃ ॥ ೧ ॥**

**ನಿತ್ಯಶಃ ಕಾರ್ಯಮತ್ಯಂತಮವಶ್ಯಂಭಾವಿ ಸಾಧನಮ್**

**ಚಿಂತ್ಯತೇ ಪ್ರಥಮಂ ತತ್ರ ..................... ॥**

ಮೊದಲನೆಯ ಮತ್ತು ಎರಡನೆಯ ಅಧ್ಯಾಯಗಳಲ್ಲಿ ಪ್ರತಿಪಾದಿತವಾದ ಸಮನ್ವಯ ಅವಿರೋಧಗಳಿಂದ ಪರಬ್ರಹ್ಮಾಖ್ಯ ವಸ್ತುವು ಸಿದ್ಧವಾಗುವುದು. ಸಾಧನ ವಿಷಯಕವಾದ ಮೂರನೆಯ ಅಧ್ಯಾಯದಲ್ಲಿ ಎಲ್ಲ ಮೋಕ್ಷಸಾಧನಗಳು ವಿಚಾರ ಮಾಡಲ್ಪಟ್ಟಿವೆ. ಜಿಜ್ಞಾಸಿತ ವಿಷಯದಲ್ಲಿ ಬೇರೆ ಎಲ್ಲ ವಿಚಾರವೂ ಮಾಡಲ್ಪಟ್ಟಿರಲು ಈಗ ಫಲಪ್ರತಿಪಾದನೆಗೆ ಸಂದರ್ಭವು ಪ್ರಾಪ್ತವಾಗಿದೆ. ಆದಕಾರಣ ಮೋಕ್ಷರೂಪ ವಾದ ಫಲವು ಈ ಅಧ್ಯಾಯದಲ್ಲಿ ನಿರೂಪಿಸಲ್ಪಡುತ್ತದೆ. ನಾಲ್ಕನೆಯ ಅಧ್ಯಾಯದ ಮೊದಲನೆಯ ಪಾದದಲ್ಲಿ ಮೊದಲಿಗೆ ಕೆಲವು ಸೂತ್ರಗಳಿಂದ ಸಾಧನ ವಿಚಾರವೇ ಮಾಡಲ್ಪಡುತ್ತದೆ. ಏಕೆಂದರೆ ಪರಮಾದರದಿಂದ ನಿರಂತರದಲ್ಲಿಯೂ ಸಾಧನೆಯನ್ನು ಮಾಡುವುದು ಮೋಕ್ಷಸಿದ್ಧಿಯಲ್ಲಿ ಅತ್ಯಂತ ಅವಶ್ಯಕವು.

## ಆವೃತ್ತ್ಯಧಿಕರಣಮ್

**॥ ಓಂ ಆವೃತ್ತಿರಸಕೃದುಪದೇಶಾತ್ ಓಂ ॥**

ಈ ಅಧಿಕರಣದ ಅವಶ್ಯಕತೆಯನ್ನು ತೋರಿಸುತ್ತಾರೆ –

**..................... ಶ್ರವಣಾದಿಸಕೃತ್ಕ್ರಿಯಾ ॥ ೨ ॥**

**ಆವೃತ್ತಿರ್ವೇತಿ ಸಂದೇಹೇ ಕರ್ತವ್ಯಾವೃತ್ತಿರೇವ ಹಿ ।**

**ಉಪದೇಶೋಽತತ್ತ್ವಮಸೀತ್ಯಾದಿ ಹ್ಯಸಕೃದೇವ ಯತ್ ॥ ೩ ॥**

ಮೊದಲನೆಯ ಅಧಿಕರಣದಲ್ಲಿ ಶ್ರೋತವ್ಯೋ ಮಂತವ್ಯೋ ನಿದಿಧ್ಯಾಸಿತವ್ಯಃ ಎಂದು ದರ್ಶನಕ್ಕಾಗಿ ಶ್ರವಣಾದಿಗಳು ವಿಧಿಸಲ್ಪಡುತ್ತವೆ. ಶ್ರವಣಾದಿ ಅನುಷ್ಠಾನವು ಜ್ಯೋತಿಷ್ಟೋಮಾದಿಗಳಂತೆ ಒಂದೇ ಸಲವೋ ಅಥವಾ ಧಾನ್ಯಾದಿಗಳ ಕುಟ್ಟುವಿಕೆ ಯಂತೆ ಅನೇಕ ಸಲವೋ ಎಂದು ಸಂದೇಹ ಬಂದರೆ, ಒಂದೇ ಸಲವೆಂದು ಪೂರ್ವಪಕ್ಷ. ಜ್ಞಾನಕ್ಕಾಗಿ ಶ್ರವಣಾದಿಗಳ ಆವೃತ್ತಿಯನ್ನು ಮಾಡಬೇಕು ಎಂದು ಸಿದ್ಧಾಂತ. 'ಸ ಆತ್ಮಾಽತತ್ತ್ವಮಸಿ ಶ್ವೇತಕೇತೋ' 'ನೀನು ಪರಬ್ರಹ್ಮನಿಂದ ಭಿನ್ನನು ಆಗಿರುವೆ' ಎಂಬುದಾಗಿ ಉದ್ದಾಲಕರು ಶ್ವೇತಕೇತುವಿಗೆ ಅನೇಕಾವರ್ತಿ ಉಪದೇಶ ಮಾಡಿರುವುದು ಪ್ರಸಿದ್ಧವೇ ಆಗಿದೆ. ಇದರಿಂದ ಶ್ರವಣಾದಿಗಳ ಆವೃತ್ತಿಯು ಕರ್ತವ್ಯ ಎಂದು ತಿಳಿಯಲ್ಪಡುತ್ತದೆ.

ಶ್ರವಣ ಮನನ ನಿದಿಧ್ಯಾಸನ ಈ ಮೂರಕ್ಕೂ ಆವೃತ್ತಿಯ ಅವಶ್ಯಕತೆಯನ್ನು ಸಾಧಿಸತಕ್ಕ ಲಿಂಗಾಚ್ಚ ಎನ್ನುವ ಸೂತ್ರವನ್ನು ಪಠನ ಮಾಡಿ, ಅಲ್ಲಿ ಸೂಚಿತವಾದ ಲಿಂಗಗಳನ್ನು ಆಗಮವಾಕ್ಯದಿಂದಲೇ ತೋರಿಸುತ್ತಾರೆ –

॥ ಓಂ ಲಿಂಗಾಚ್ಚ ಓಂ ॥

**ಲಿಂಗಾಲ್ಲಾತವ್ಯತಃ ಪೂರ್ವಮೃಜೋರ್ಬ್ರಹ್ಮತ್ವತಃ ಶತಾತ್ ।**

**ಶುಶ್ರಾವೋಗ್ರತಪಾ ನಾಮ ಯೋಗ್ಯೋ ರುದ್ರಪದಸ್ಯ ಯಃ ॥ ೪ ॥**

**ಸಾರ್ಧಂ ಪರಾರ್ಧಂ ವಿಷ್ಣೋಸ್ತು ಗುಣಾನ್ ಭಕ್ತ್ಯಾ ಸದೋದ್ಯತಃ ।**

**ತತ್ರಿಭಾಗಮುಪಾಸಾಂ ಚ ಚಕ್ರೇ ಸಂಭೃತಮಾನಸಃ ॥ ೫ ॥**

'ಸ ತಪೋಽತಪ್ಯತ। ಪುನರೇವ ವರುಣಂ ಪಿತರಮುಪಸಸಾರ' ಇತ್ಯಾದಿಗಳಿಂದ ಶ್ರುತವಾದ ಶ್ರವಣಾದಿಗಳ ಆವರ್ತನ ರೂಪವಾದ ಲಿಂಗದಿಂದಲೂ ಶ್ರವಣಾದಿಗಳ ಆವೃತ್ತಿಯು ಅವಶ್ಯ ಕರ್ತವ್ಯವೆಂದು ತಿಳಿದುಬರುತ್ತದೆ. ಬ್ರಹ್ಮತ್ವದಿಂದ ನೂರು ಋಜುಗಳಷ್ಟು ಪೂರ್ವದಲ್ಲಿರತಕ್ಕ ಬ್ರಹ್ಮಪದವಿಗೆ ಯೋಗ್ಯನಾದ ಲಾತವ್ಯನಾಮಕ ಋಜುವಿನಿಂದ ರುದ್ರಪದವಿಗೆ ಯೋಗ್ಯನಾದ ಉಗ್ರತಪನಾಮಕನು ಎಪ್ಪತ್ತೈದು ಬ್ರಹ್ಮಸಂವತ್ಸರಗಳಲ್ಲಿ ಶ್ರೀಹರಿಯ ಗುಣಗಳನ್ನು ಯಾವಾಗಲೂ ಸನ್ನದ್ಧನಾಗಿಯೇ ಭಕ್ತಿಯಿಂದ ಕೇಳಿದನು. ಉಪಾಸನೆ ಮಾಡುವುದರಲ್ಲಿಯೇ ದೃಢ ಚಿತ್ತನಾಗಿದ್ದು ಇಪ್ಪತ್ತೈದು ಬ್ರಹ್ಮಸಂವತ್ಸರಗಳಲ್ಲಿ (ಶ್ರವಣಕಾಲದ ಮೂರನೇ ಒಂದು ಭಾಗದಷ್ಟು ಕಾಲದಲ್ಲಿ) ಮನನ ನಿದಿಧ್ಯಾಸನ ರೂಪವಾದ ಉಪಾಸನೆಯನ್ನು ಮಾಡಿದನು.

**ದಶಮನ್ವಂತರಂ ಶಕ್ರಪದಯೋಗ್ಯೋ ಗರುತ್ಮತಃ ।**

**ಪದಯೋಗ್ಯಾತ್ಸುಮನಸಃ ಸುನಂದೋ ನಾಮ ಚಾಶೃಣೋತ್ ॥ ೬ ॥**

**ಉಪಾಸಾಂ ಚಕ್ರ ಉದ್ಯುಕ್ತೋ ಮನ್ವಂತರಚತುಷ್ಟಯಮ್ ।**

**ಸೂರ್ಯಾಚಂದ್ರಮಸೋಶ್ಚೈವ ಪದಯೋಗ್ಯೌ ಸುತೇಜಸೌ ॥ ೭ ॥**

**ಸುರೂಪಃ ಶಾಂತರೂಪಶ್ಚ ಮನ್ವಂತರಚತುಷ್ಟಯಮ್ ।**

**ಅಶೃಣ್ವತಾಂ ಸುಮನಸೋ ಮನ್ವಂತರಮುಪಾಸತಾಮ್ ॥ ೮ ॥**

ಇಂದ್ರಪದವಿಗೆ ಯೋಗ್ಯನಾದ ಸುನಂದನೆಂಬ ಹೆಸರುಳ್ಳವನು ಗರುಡ ಪದವಿಗೆ ಯೋಗ್ಯನಾದ ಸುಮನಸ ಎನ್ನುವ ದೇವತೆಯಿಂದ ಹತ್ತು ಮನ್ವಂತರಗಳಷ್ಟು ಕಾಲ ಶ್ರವಣ ಮಾಡಿದನು. ಅನಂತರ ನಾಲ್ಕು ಮನ್ವಂತರಗಳ ಕಾಲ ಶ್ರದ್ಧೆಯಿಂದ ಉಪಾಸನೆ ಮಾಡಿದನು. ಸೂರ್ಯಚಂದ್ರರ ಪದವಿಗೆ ಯೋಗ್ಯರಾದ ಉತ್ತಮ ಪ್ರಜ್ಞೆಯುಳ್ಳ ಸುರೂಪನೂ ಹಾಗೂ ಶಾಂತರೂಪನೂ ನಾಲ್ಕು ಮನ್ವಂತರಗಳ ಕಾಲ ಸುಮನಸ ಎನ್ನುವ ದೇವತೆಯಿಂದ ಶ್ರವಣ ಮಾಡಿದರು. ಅನಂತರ ಒಂದು ಮನ್ವಂತರದಷ್ಟು ಕಾಲ ಉಪಾಸನೆ ಮಾಡಿದರು.

**ತತಃ ಪ್ರೋಕ್ತಾಸ್ತು ತೇ ಸರ್ವೇ ಭಕ್ತ್ಯೋಗ್ರತಪ ಆದಯಃ ।**
**ಅಪಶ್ಯನ್ ಪರಮಂ ವಿಷ್ಣುಂ ತತ್ಪ್ರಸಾದ್ಯೈಧಿತಾಃ ಸದಾ ॥ ೯ ॥**

ಇತ್ಯುಕ್ತಂ ವಿಷ್ಣುನಾ ಸಾಕ್ಷಾತ್ ಗ್ರಂಥೇ ಸತ್ತತ್ವಸಂಜ್ಞಿತೇ ।

ಅನಂತರ ಹಿಂದೆ ಹೇಳಲ್ಪಟ್ಟಿರುವ ಉಗ್ರತಪಸನೇ ಮೊದಲಾಗಿ ಎಲ್ಲರೂ ಭಕ್ತಿಯಿಂದ ಯಾವಾಗಲೂ ಶ್ರೀಹರಿಯ ಪ್ರಸಾದದಿಂದ ಪ್ರಗತಿ ಹೊಂದಿದವರಾಗಿ ಸರ್ವೋತ್ತಮನಾದ ಶ್ರೀಹರಿಯನ್ನು ನೋಡಿದರು. ಹೀಗೆ ಸತ್ತತ್ವವೆಂಬ ಗ್ರಂಥದಲ್ಲಿ ಮುಖ್ಯವಾಗಿ ವಿಷ್ಣುವಿನಿಂದ ಉಕ್ತವಾಗಿದೆ. ಈ ಪ್ರಕಾರವಾಗಿ ಬ್ರಹ್ಮ ಇಂದ್ರಾದಿ ಪದವಿಗಳಿಗೆ ಯೋಗ್ಯರಾದ ಎಲ್ಲರೂ ಅವರವರ ಯೋಗ್ಯತಾನುಸಾರ ಶ್ರವಣಾದಿ ಗಳನ್ನು ಅನೇಕ ಸಂವತ್ಸರಗಳ ಕಾಲ ಆವೃತ್ತಿ ಮಾಡಿದುದರಿಂದಲೇ ಶ್ರೀಹರಿಯ ಪ್ರಸಾದವನ್ನು ಹೊಂದಿ ಸಾಕ್ಷಾತ್ಕಾರ ಪಡೆದರು ಎನ್ನುವುದು ಸಿದ್ಧವಾಗುವುದು.

## ಆತ್ಮಾಧಿಕರಣಮ್

॥ ಓಂ ಆತ್ಮೇತಿ ತೂಪಗಚ್ಛಂತಿ ಗ್ರಾಹಯಂತಿ ಚ ಓಂ ॥

ಈ ಸೂತ್ರವನ್ನು ವ್ಯಾಖ್ಯಾನ ಮಾಡುವುದಕ್ಕಾಗಿ ಮೊದಲು ಆತ್ಮಶಬ್ದಾರ್ಥವನ್ನು ಹೇಳುತ್ತಾರೆ –

ಆತ್ಮೇತಿ ನಾಮಕಥಿತಂ ಸಾಕ್ಷಾನ್ನಾರಾಯಣಸ್ಯ ಹಿ ॥ ೧೦ ॥

ಆತ್ಮಾ ಬ್ರಹ್ಮ ಮಹಾಂಸ್ತಾರಃ ಪರಮೇಶಃ ಶುಚಿಶ್ರವಾಃ ।

ವಿಷ್ಣುರ್ನಾರಾಯಣೋಽನಂತ ಇತಿ ಶ್ರೀಪತಿರೀರ್ಯತೇ ॥ ೧೧ ॥

ಇತಿ ಪೈಂಗಿಶ್ರುತಿಶ್ಚೈವ ತಥೈವ ಪರಮಶ್ರುತಿಃ ।

ಆತ್ಮ ಎನ್ನುವ ನಾಮವು ಮುಖ್ಯವೃತ್ತಿಯಿಂದ ನಾರಾಯಣನಿಗೆ ಹೇಳಲ್ಪಟ್ಟಿದೆ. ಮುಖ್ಯವೃತ್ತಿಯು ಕೂಡುತ್ತಿರಲು ಅಮುಖ್ಯವೃತ್ತಿಯು ಗ್ರಾಹ್ಯವಲ್ಲ. ಆತ್ಮ (ಸ್ವಾಮಿ), ಬ್ರಹ್ಮ (ಪೂರ್ಣ), ಮಹಾನ್ (ಶ್ರೇಷ್ಠ), ತಾರ (ಓಂಕಾರ ವಾಚ್ಯನು), ಪರಮೇಶ (ಉತ್ತಮರಾದ ಬ್ರಹ್ಮಾದಿಗಳಿಗೂ ನಿಯಾಮಕನು), ಶುಚಿಶ್ರವ (ಶೋಭನವಾದ ಕೀರ್ತಿಯುಳ್ಳವನು), ವಿಷ್ಣು, ನಾರಾಯಣ, ಅನಂತ ಈ ವಿಧವಾದ ಹೆಸರುಗಳಿಂದ ಲಕ್ಷ್ಮೀಪತಿಯಾದ ಶ್ರೀಹರಿಯು ಕರೆಯಲ್ಪಡುತ್ತಾನೆ ಎಂದು ಪೈಂಗಿಶ್ರುತಿಯು ಹೇಳುತ್ತದೆ. ಹಾಗೆಯೇ ಪರಮಶ್ರುತಿಯೂ (ಓಂ, ಆತ್ಮ, ಇತ್ಯಾದಿ) ಹೇಳುತ್ತದೆ.

ಓಮಾತ್ಮಾ ಭಗವಾನ್ವಿಷ್ಣುರಾತ್ಮಾನಂದೋಽಕ್ಷರಃ ಸ್ವರಾಟ್ ॥ ೧೨ ॥

ವಿಶ್ವತ್ರಾತಾ ನೃಸಿಂಹೋಽಜೋ ನಾರಾಯಣ ಉರುಕ್ರಮಃ ।

ಅನಸೂಯಾ ತಥೈವಾತ್ರೇರ್ಜಜ್ಞೇ ಪುತ್ರಾನಕಲ್ಮಷಾನ್ ॥ ೧೩ ॥

ದತ್ತಂ ದೂರ್ವಾಸಸಂ ಸೋಮಮಾತ್ಮೇಶಬ್ರಹ್ಮಸಂಭವಾನ್ ।

ಇತಿ ಭಾಗವತೇ ಚೈವ ತಸ್ಮಾದಾತ್ಮಾ ಜನಾರ್ದನಃ ॥ ೧೪ ॥

ಓಂ, ಆತ್ಮ ಎಂದು ಕರೆಸಿಕೊಳ್ಳುವ ಷಡ್ಗುಣೈಶ್ವರ್ಯ ಸಂಪನ್ನನಾದ ವಿಷ್ಣುವು ಜೀವರಿಗೆ ಆನಂದದಾಯಕನು, ನಾಶರಹಿತನು ಹಾಗೂ ಸರ್ವತಂತ್ರ ಸ್ವತಂತ್ರನು. ಸಮಸ್ತ ಜಗತ್ತನ್ನು ರಕ್ಷಿಸುವವನು, ನೃಸಿಂಹನು, ಅಜನು ಎಂಬುದಾಗಿ ಕರೆಸಿಕೊಳ್ಳುವ ನಾರಾಯಣನು ಉತ್ಕೃಷ್ಟವಾದ ಪರಾಕ್ರಮವುಳ್ಳವನು. ಹೀಗೆ ಪರಮಶ್ರುತಿಯು ಆತ್ಮ ಶಬ್ದವನ್ನು ಭಗವಂತನ ನಾಮವನ್ನಾಗಿ ಹೇಳುತ್ತದೆ. ಹಾಗೆಯೇ ಭಾಗವತದಲ್ಲಿಯೂ ದತ್ತಾತ್ರೇಯನ ಅವತಾರವನ್ನು ಹೇಳುವಾಗ ಮೂಲರೂಪಿಯಾದ ಶ್ರೀಹರಿಗೆ ಆತ್ಮ ಶಬ್ದವನ್ನು ಹೇಳಲಾಗಿದೆ. ಅನಸೂಯಾದೇವಿಯು ಅತ್ರಿ ಋಷಿಗಳ ದೆಶೆಯಿಂದ ಪಾಪರಹಿತರಾದ ಆತ್ಮ (ಶ್ರೀಹರಿ), ರುದ್ರ ಹಾಗೂ ಚತುರ್ಮುಖ ಇವರುಗಳಿಂದ ಕ್ರಮವಾಗಿ ಜೊತೆಯಲ್ಲಿಯೇ ಅವತರಿಸಿದ ದತ್ತಾತ್ರೇಯ, ದೂರ್ವಾಸ ಋಷಿ ಹಾಗೂ ಚಂದ್ರ ಹೀಗೆ ಮೂರು ಮಕ್ಕಳನ್ನು ಹಡೆದಳು. ದತ್ತಾತ್ರೇಯನು ಆತ್ಮ ಶಬ್ದವಾಚ್ಯನಾದ ಸಾಕ್ಷಾತ್ ಶ್ರೀಹರಿಯ ಅವತಾರ. ದೂರ್ವಾಸ ಋಷಿಯು ಸಾಕ್ಷಾತ್ ಶಿವನ ಅವತಾರ. ಚತುರ್ಮುಖನಿಗೆ ಭೂಲೋಕದಲ್ಲಿ ಅವತಾರವಿಲ್ಲದ ಕಾರಣ ಚಂದ್ರನಲ್ಲಿ ಚತುರ್ಮುಖನ ವಿಶೇಷ ಆವೇಶವಷ್ಟೆ. ಹೀಗೆ ಭಾಗವತದಲ್ಲಿ ಹೇಳಿದೆ. ಆದ್ದರಿಂದ ಈ ಸೂತ್ರದಲ್ಲಿ ಆತ್ಮ ಶಬ್ದದಿಂದ ಹೇಳಲ್ಪಟ್ಟವನು ಶ್ರೀಹರಿ ಎಂದು ತಿಳಿಯಬೇಕು.

ಆತ್ಮ ಶಬ್ದವು ವಿಷ್ಣುವೆಂದಾಗಲಿ. ಹಾಗಾದರೆ ಸೂತ್ರಾರ್ಥವೇನು ಎಂದರೆ –

**ತಸ್ಮಾದುಪಾಸ್ಯೋ ವಿಷ್ಣುರಿತಿ ಜ್ಞಾತವ್ಯಃ ಸಜ್ಜನೈಃ ಸದಾ ।**

**ತಥೈವೋಪಾಸತೇ ಸಂತಸ್ತಥೈವೋಪದಿಶಂತಿ ಚ ॥ ೧೫ ॥**

ಆತ್ಮಶಬ್ದವು ವಿಷ್ಣುವನ್ನೇ ಹೇಳುವುದರಿಂದ, ವಿಷ್ಣುವು ಆತ್ಮ ಎಂಬುದಾಗಿ ಸಜ್ಜನರಿಂದ ಯಾವಾಗಲೂ ತಿಳಿಯಲ್ಪಡತಕ್ಕವನೂ, ಧ್ಯೇಯನೂ ಆಗಿರುತ್ತಾನೆ. ಹಾಗೆಯೇ ಸಜ್ಜನರು ಉಪಾಸನೆ ಮಾಡುತ್ತಾರೆ. ಮತ್ತು ಹಾಗೆಯೇ ಉಪದೇಶ ಮಾಡುತ್ತಾರೆ.

ಹಾಗಾದರೆ ವಿಷ್ಣುವನ್ನು ವಿಷ್ಣುವೆಂದು ಉಪಾಸನೆ ಮಾಡಬೇಕು ಎಂದು ಹೇಳಿದಂತಾಯಿತು. ಇಲ್ಲಿ ಅದಕ್ಕೆ ಪ್ರಸಕ್ತಿಯೇ ಇಲ್ಲವೆಂದು ಆಶಂಕಿಸಿದರೆ, ಆತ್ಮ ಶಬ್ದಾರ್ಥವನ್ನು ಹೇಳುತ್ತ ಸೂತ್ರಾರ್ಥವನ್ನು ಹೇಳುತ್ತಾರೆ –

**ಆದಾನಾರ್ಥತ್ವತಶ್ಚಾಯಮಾತ್ಮಶಬ್ದಃ ಪತಿಂ ವದೇತ್ ।**

**ಸ್ವಾಮೀ ಮೇ ವಿಷ್ಣುರಿತ್ಯೇವ ನಿತ್ಯದೋಪಾಸ್ಯಮಂಜಸಾ ॥ ೧೬ ॥**

ಆದಾನ–ಕರ್ತೃತ್ವ ರೂಪ ಅರ್ಥವಿರುವುದರಿಂದ ಈ ಸೂತ್ರದಲ್ಲಿರತಕ್ಕ ಆತ್ಮ ಶಬ್ದವು ಸ್ವಾಮಿಯನ್ನು ಹೇಳುವುದು. ಹೇಗೆಂದರೆ ಸ್ವಾಮಿಯಾದವನು ಭೃತ್ಯರನ್ನು ತನ್ನವರನ್ನಾಗಿ ತೆಗೆದುಕೊಳ್ಳುತ್ತಾನೆ. ಈ ವಿಷಯದಲ್ಲಿ 'ಯಚ್ಚಾಪ್ನೋತಿ ಯದಾದತ್ತೇ

**ಯಚ್ಚಾತ್ತಿ ವಿಷಯಾನಿಹ। ಯಚ್ಚಾಸ್ಯ ಸಂತತೋ ಭಾವಸ್ತಸ್ಮಾದಾತ್ಮೇತಿ ಭಣ್ಯತೇ'** ಎಂಬ ವಾಕ್ಯವು ಪ್ರಸಿದ್ಧವು. ಆದ್ದರಿಂದ ವಿಷ್ಣುವು ನನಗೆ ಸ್ವಾಮಿಯು ಎಂಬುದಾಗಿ ಯಾವಾಗಲೂ ಪರಮಾದರದಿಂದ ಉಪಾಸನೆ ಮಾಡತಕ್ಕದ್ದು. (ಈ ಸೂತ್ರದಲ್ಲಿ ಎರಡು ಆತ್ಮ ಶಬ್ದಗಳಿವೆ. ಮೊದಲನೇದು ಅನುವಾದಾರ್ಥಕವಾಗಿದ್ದರೆ ಎರಡನೇದು ವಿಧ್ಯರ್ಥಕವು. ಆತ್ಮಾ ಅಂದರೆ ವಿಷ್ಣುವೆಂದೂ ಆತ್ಮಾ ಅಂದರೆ ಸ್ವಾಮಿಯೆಂದೂ ಉಪಾಸನೆ ಮಾಡತಕ್ಕದ್ದು ಎಂದರ್ಥ.)

ಶ್ರೀಹರಿಯನ್ನು ಸರ್ವಥಾ ಉಪಾಸನೆ ಮಾಡಬೇಕು ಎನ್ನುವ ವಿಷಯದಲ್ಲಿ ಪ್ರಮಾಣವೇನು ಎಂದರೆ –

**ಸ್ವಾಮೀ ವಿಷ್ಣುರಿತಿ ಧ್ಯಾನಂ ವಿಶೇಷಣವಿಶೇಷ್ಯತಃ ।**

**ಕರ್ತವ್ಯಂ ಸರ್ವಥೇವ್ಯೆತನ್ನ ಕಥಂಚನ ವಿಸ್ಮರೇತ್ ॥ ೧೭ ॥।**

**ಇತಿ ಸತ್ತತ್ವವಚನಂ ಷಾಡ್ಗುಣ್ಯವಚನಂ ಪರಮ್ ।**

**ಮಮ ಸ್ವಾಮೀ ಹರಿರ್ನಿತ್ಯಂ ಸರ್ವಸ್ಯ ಪತಿರೇವ ಚ ॥ ೧೮ ॥**

**ಇತಿ ಧ್ಯೇಯಃ ಸರ್ವದೈವ ಭಗವಾನ್ವಿಷ್ಣುರವ್ಯಯಃ ।**

ವಿಷ್ಣುವು ಸ್ವಾಮಿಯೆಂದು ವಿಶೇಷಣ–ವಿಶೇಷ್ಯಭಾವದಿಂದಲೇ ಸರ್ವಥಾ ಧ್ಯಾನ ಮಾಡತಕ್ಕದ್ದು. ಇಲ್ಲಿ ಸ್ವಾಮಿತ್ವವು ವಿಶೇಷಣ, ವಿಷ್ಣುವು ವಿಶೇಷ್ಯ. ಇದನ್ನು ಏನೇ ಆದರೂ ಮರೆಯಬಾರದು. ಹೀಗೆ ಸತ್ತತ್ವವಚನವು. ಮುಂದಿನ ವಾಕ್ಯವು ಷಾಡ್ಗುಣ್ಯ ವಚನವು. ಶ್ರೀಹರಿಯು ನನಗೆ ಸರ್ವದಾ ಸ್ವಾಮಿಯು, ಎಲ್ಲರಿಗೂ ಸ್ವಾಮಿಯೇ ಎಂಬುದಾಗಿ ನಾಶರಹಿತನಾದ ಭಗವಾನ್ ವಿಷ್ಣುವು ಯಾವಾಗಲೂ ಧ್ಯೇಯನು.

## ನ ಪ್ರತೀಕಾಧಿಕರಣಮ್

**॥ ಓಂ ನ ಪ್ರತೀಕೇ ನ ಹಿ ಸಃ ಓಂ ॥**

ಮನೋ ಬ್ರಹ್ಮೇತ್ಯುಪಾಸೀತ ಇತ್ಯಾದಿ ಶ್ರುತಿಪ್ರಾಪ್ತವಾದ ಮನಸ್ಸು ಇತ್ಯಾದಿ ಪ್ರತೀಕಗಳನ್ನು ಬ್ರಹ್ಮತ್ವೇನ ಉಪಾಸನೆ ಮಾಡಕೂಡದು. ಏಕೆಂದರೆ ಪ್ರಸ್ತುತನಾದ ವಿಷ್ಣುವು ಪ್ರತೀಕರೂಪನಲ್ಲ. ಅದರಲ್ಲಿ ಪ್ರತೀಕೇ ಎನ್ನುವುದು ಅಧಿಕರಣ ಸಪ್ತಮೀ ಎಂದು ತಿಳಿಯತಕ್ಕದ್ದು. ಪ್ರತೀಕ ರೂಪ ಅಧಿಕರಣದಲ್ಲಿ ಉಪಾಸನೆಯು ಬ್ರಹ್ಮನಿಗೆ ಯುಕ್ತವೇ ಆಗಿದೆ. ನ ಪ್ರತೀಕೇ ಎಂದು ನಿಷೇಧ ಮಾಡಿದ್ದು ಹೇಗೆಂದರೆ, ಬೇರೆ ರೀತಿಯಿಂದ ಪ್ರತಿಜ್ಞೆಯನ್ನು ವ್ಯಾಖ್ಯಾನ ಮಾಡುತ್ತಾರೆ –

**ಪ್ರತೀಕವಿಷಯತ್ವೇನ ನ ಕಾರ್ಯಾ ವಿಷ್ಣುಭಾವನಾ ॥ ೧೯ ॥**

ಪ್ರತಿಮಾವಿಷಯತ್ವದಿಂದ ಅಂದರೆ ಮನಸ್ಸು ದೇಹ ಇತ್ಯಾದಿಗಳು ವಿಷ್ಣುವೆಂದು ಉಪಾಸನೆ ಮಾಡತಕ್ಕದ್ದಲ್ಲ.

ನ ಹಿ ಸಃ ಎನ್ನುವುದನ್ನು ವ್ಯಾಖ್ಯಾನ ಮಾಡುತ್ತಾರೆ –

**ಪ್ರತೀಕಂ ನೈವ ವಿಷ್ಣುರ್ಯನ್ಮಿಥ್ಯೋಪಾಸಾ ಹ್ಯನರ್ಥದಾ ।**

ಪ್ರತೀಕವು, ಅಂದರೆ ಬ್ರಹ್ಮನ ಪ್ರತಿಮಾರೂಪವಾದ ಮನಸ್ಸು ಮೊದಲಾದವು, ವಿಷ್ಣುವಿನಿಂದ ಅಭಿನ್ನವಲ್ಲವೇ ಅಲ್ಲ. ಆದಕಾರಣ ಪ್ರತೀಕವನ್ನು ವಿಷ್ಣುವೆಂದು ಉಪಾಸನೆ ಮಾಡಕೂಡದು. ವಿಷ್ಣುಪ್ರತೀಕಗಳಿಗೆ ವಿಷ್ಣುವಿನೊಂದಿಗೆ ಅಭೇದವು ಎನ್ನುವ ಭಾವನೆಯು ಮಿಥ್ಯೋಪಾಸನೆಯು. ಈ ರೀತಿಯ ಮಿಥ್ಯೋಪಾಸನೆಯು ಅನರ್ಥಕರ.

ಮಿಥ್ಯೋಪಾಸನೆಯು ಅನರ್ಥಕ್ಕೆ ಕಾರಣವೆನ್ನುವುದು ಹೇಗೆ ಎಂದರೆ ಅದನ್ನು ಉಪಪಾದಿಸುತ್ತ ಇದೇ ಸೂತ್ರಾಭಿಪ್ರಾಯವನ್ನು ಸ್ಪಷ್ಟವಾಗಿ ಹೇಳುತ್ತಾರೆ –

**ಯೋಽನ್ಯಥಾ ಸಂತಮಾತ್ಮೇಶಮನ್ಯಥಾ ಪ್ರತಿಪಾದ್ಯತೇ ॥ ೨೦ ॥**

**ಕಿಂ ತೇನ ನ ಕೃತಂ ಪಾಪಂ ಚೋರೇಣಾತ್ಮಾಪಹಾರಿಣಾ ।**

**ಯೋಽನ್ಯಥಾ ಸಂತಮಾತ್ಮಾನಮನ್ಯಥಾ ಪ್ರತಿಪಾದ್ಯತೇ ॥ ೨೧ ॥**

**ಕಿಂ ತೇನ ನ ಕೃತಂ ಪಾಪಂ ಚೋರೇಣಾತ್ಮಾಪಹಾರಿಣಾ ।**

**ಯೋಽನ್ಯಥೈವ ಸ್ಥಿತಂ ವಿಷ್ಣುಮನ್ಯಥಾ ಪ್ರತಿಪಾದ್ಯತೇ ॥ ೨೨ ॥**

**ಕಿಂ ತೇನ ಕೃತಂ ಪಾಪಂ ಚೋರೇಣ ಬ್ರಹ್ಮಹಾರಿಣಾ ।**

ಪ್ರತೀಕದಿಂದ ಭಿನ್ನತ್ವಾದಿ ಪ್ರಕಾರದಿಂದ ಇರತಕ್ಕ, ಜೀವರಿಗೆ ಸ್ವಾಮಿಯಾದ ಶ್ರೀಹರಿಯನ್ನು, ಯಾವನು ಅಭಿನ್ನತ್ವಾದಿ ಪ್ರಕಾರದಿಂದ ತಿಳಿಯುತ್ತಾನೋ ಹಾಗೂ ಧ್ಯಾನಿಸುತ್ತಾನೋ ಅವನು ಶ್ರೀಹರಿಯನ್ನೇ ಕದ್ದವನು. ಅಂಥಹ ದೊಡ್ಡ ಕಳ್ಳನಿಂದ ಯಾವ ಪಾಪವು ತಾನೇ ಮಾಡಲ್ಪಡುವುದಿಲ್ಲ? (ಮೂರು ಶ್ಲೋಕಗಳ ತಾತ್ಪರ್ಯವೂ ಒಂದೇ ಆಗಿರುವುದು.) ಈ ಮೂರು ಶ್ಲೋಕಗಳೂ ಶ್ರೀಹರಿಯು ಪ್ರತೀಕರೂಪನು ಎನ್ನುವ ಧ್ಯಾನದಲ್ಲಿ ಬಾಧಕಗಳು.

ಪ್ರತೀಕದಲ್ಲಿ ವಿಷ್ಣುತ್ವವನ್ನು ಧ್ಯಾನ ಮಾಡುವುದರಿಂದ ಬಾಧಕವಿಲ್ಲ ಎಂದರೆ –

**ಸ್ವಾತ್ಮಾನಂ ಪ್ರತಿಮಾಂ ವಾಪಿ ದೇವಾಂತರಮೇವ ವಾ ॥ ೨೩ ॥**

**ಚೇತನಾಚೇತನಂ ವಾನ್ಯತ್ ಧ್ಯಾಯೇದ್ಯಃ ಕೇಶವಸ್ತ್ವಿತಿ ।**

**ಕಿಂ ತೇನ ಕೃತಂ ಪಾಪಂ ಚೋರೇಣೇಶಾಪಹಾರಿಣಾ ॥ ೨೪ ॥**

ಯಾವನು ತನ್ನನ್ನಾಗಲೀ, ಪ್ರತಿಮೆಯನ್ನಾಗಲೀ, ಬೇರೆ ದೇವತೆಯನ್ನಾಗಲೀ, ಅಥವಾ ಇತರವಾದ ಚೇತನ ಅಚೇತನವನ್ನಾಗಲೀ ವಿಷ್ಣುವೆಂದು ಧ್ಯಾನಿಸುತ್ತಾನೋ, ಅಂಥಹ ಕಳ್ಳನಿಂದ ಯಾವ ಪಾಪವು ತಾನೆ ಮಾಡಲ್ಪಡುವುದಿಲ್ಲ?

ಯೋಽನ್ಯದ್ವಿಷ್ಣುರಿತಿ ಧ್ಯಾಯೇಜ್ಜಾನೀಯಾದ್ವಾ ಹರಿಂ ತಥಾ ।

ಅಂಧೇತಮಸಿ ಮಜ್ಜೇತ್ಸ ಯತ್ರ ನೈವೋತ್ಥಿತಿಃ ಕ್ವಚಿತ್ ॥ ೨೫ ॥

ಯೋಽನ್ಯದ್ವಿಷ್ಣುರಿತಿ ಧ್ಯಾಯೇದ್ವಿಷ್ಣುರನ್ಯದಿತಿ ಸ್ಮ ವಾ ।

ಅನ್ಯಥಾಧ್ಯಾನದೋಷೇಣ ಸೋಽಂಧೇ ತಮಸಿ ಮಜ್ಜತಿ ॥ ೨೬ ॥

ಯೋಽನ್ಯದ್ವಿಷ್ಣುರಿತಿ ಧ್ಯಾಯೇದ್ವಿಷ್ಣುರನ್ಯದಿತಿ ಸ್ಮ ವಾ ।

ಮಹಾತಮಸಿ ಮಗ್ನಸ್ಯ ತಸ್ಯ ನೈವೋತ್ಥಿತಿಃ ಕ್ವಚಿತ್ ॥ ೨೭ ॥

ಯಾವನು ವಿಷ್ಣುವಿನಿಂದ ಇತರವಾದುದನ್ನು ವಿಷ್ಣುವೆಂದು ಧ್ಯಾನಿಸುತ್ತಾನೋ ಅಥವಾ ಹಾಗೆ ತಿಳಿಯುತ್ತಾನೋ ಅವನು – ಮತ್ತೆ ಎಂದಿಗೂ ಮೇಲೇಳಲಾಗದಂಥ ಅಂಧಂತಮಸ್ಸಿನಲ್ಲಿ ಬೀಳುವನು, ಅನ್ಯಥಾ ಧ್ಯಾನ ದೋಷದಿಂದ ಅಂಧಂತಮಸ್ಸಿನಲ್ಲಿ ಬೀಳುವನು, ಮಹಾತಮಸ್ಸಿನಲ್ಲಿ ಬೀಳುವ ಅವನಿಗೆ ಮತ್ತೆ ಎಂದಿಗೂ ಉತ್ಥಾನವಿಲ್ಲ.

ಯತ್ಕಿಂಚಿದನ್ಯಥಾಸಂಸ್ಥಮನ್ಯಥಾಧ್ಯಾತಮಂಜಸಾ ।

ಧ್ಯಾತುರ್ಮಹಾದೋಷಕರಂ ಕಿಮು ಸರ್ವೇಶ್ವರೋ ಹರಿಃ ॥ ೨೮ ॥

ಯತ್ಕಿಂಚಿದನ್ಯಥಾಸಂಸ್ಥಮನ್ಯಥಾಧ್ಯಾತಮಂಜಸಾ ।

ಮಹಾದೋಷಕರಂ ವಿಷ್ಣುಃ ಕಿಮು ಸರ್ವೇಶ್ವರೇಶ್ವರಃ ॥ ೨೯ ॥

ಯತ್ಕಿಂಚಿದನ್ಯಥಾಸಂಸ್ಥಮನ್ಯಥಾಧ್ಯಾತಮಂಜಸಾ ।

ಅನರ್ಥಕಾರಣಂ ಲೋಕೇ ಕಿಮು ಸರ್ವೇಶ್ವರೇಶ್ವರಃ ॥ ೩೦ ॥

ಗಂಗಾದಿ ಪವಿತ್ರೋದಕವನ್ನು ಅಪವಿತ್ರವೆಂದು ಧ್ಯಾನಮಾಡಿದರೆ, ಹಾಗೆ ಧ್ಯಾನ ಮಾಡಿದವನಿಗೆ ಅದು ಚೆನ್ನಾಗಿ ಮಹಾದೋಷವನ್ನು ಉಂಟುಮಾಡುವುದು. ಅಂದಮೇಲೆ ಸರ್ವೇಶ್ವರನಾದ ಶ್ರೀಹರಿಯನ್ನು ಅನ್ಯಥಾ ಉಪಾಸನೆ ಮಾಡುವುದು ಮಹಾದೋಷಕ್ಕೆ ಕಾರಣವಾಗುವುದು ಎಂದು ಹೇಳಬೇಕೇನು? ಮೇಲಿನ ಮೂರು ಶ್ಲೋಕಗಳ ತಾತ್ಪರ್ಯವೂ ಒಂದೇ ಆಗಿದೆ.

ನ ಕಿಂಚಿದನ್ಯಥಾ ಜ್ಞೇಯಂ ಧ್ಯೇಯಂ ವಾ ತೇನ ಕುತ್ರಚಿತ್ ।

ಕಿಮು ಸರ್ವೋತ್ತಮೋ ವಿಷ್ಣುರ್ಜ್ಞೇಯೋ ನೀಚತಯಾ ಕ್ವಚಿತ್ ॥ ೩೧ ॥

ಆದ್ದರಿಂದ ಯಾವುದನ್ನೂ ಬೇರೆ ಪ್ರಕಾರವಾಗಿ ತಿಳಿಯಕೂಡದು. ಎಲ್ಲಿಯೂ ಹಾಗೆ ಧ್ಯಾನವನ್ನೂ ಮಾಡಕೂಡದು. ಸರ್ವೋತ್ತಮನಾದ ವಿಷ್ಣುವನ್ನು ಎಲ್ಲಿಯೂ ಯಾವಕಾಲಕ್ಕೂ ನೀಚನೆಂದು ತಿಳಿಯಕೂಡದು.

ಇತಿ ಶ್ರುತಿಪುರಾಣೋಕ್ತಿಬಲತೋ ನ ಪ್ರತೀಕತಾ ।

**ಧ್ಯೇಯಾ ವಿಷ್ಣೋಃ ಕ್ವಚಿದ್ಯಸ್ಮಾನ್ಮಿಥ್ಯಾಜ್ಞಾನಮನರ್ಥದಮ್ ॥ ೩೩ ॥**

**ಇತ್ಯಭಿಪ್ರೇತ್ಯ ನ ಹಿ ಸ ಇತ್ಯಾಹ ಭಗವಾನ್ಪ್ರಭುಃ ।**

**ಪ್ರತೀಕಸಂಸ್ಥಿತತ್ವೇನ ಧ್ಯೇಯೋ ವಿಷ್ಣುರ್ನ ಚಾನ್ಯಥಾ ॥ ೩೪ ॥**

ಮಿಥ್ಯಾಜ್ಞಾನವು ಅನರ್ಥಕರವಾದ್ದರಿಂದ, ವಿಷ್ಣುವನ್ನು ಪ್ರತೀಕತ್ವರೂಪದಿಂದ ಉಪಾಸನೆ ಮಾಡಕೂಡದು ಎಂಬುದಾಗಿ ಮೇಲೆ ಹೇಳಲ್ಪಟ್ಟ ಶ್ರುತಿ ಪುರಾಣಗಳ ವಾಕ್ಯಗಳ ಸಾಮರ್ಥ್ಯದಿಂದ ಸಿದ್ಧವಾಗುವುದು. ಈ ಅಭಿಪ್ರಾಯದಿಂದ ಭಗವಾನ್ ವೇದವ್ಯಾಸರು ನ ಹಿ ಸಃ ಎಂದು ಹೇಳಿದರು. ಆದ್ದರಿಂದ ವಿಷ್ಣುವು ದೇಹಾದಿ ಪ್ರತಿಮೆಯಲ್ಲಿ ಇರತಕ್ಕವನೆಂದೇ ಧ್ಯಾನಾರ್ಹನು. ಪ್ರತೀಕಾದಿಗಳೊಂದಿಗೆ ಅಭಿನ್ನತ್ವ ರೂಪದಿಂದ ವಿಷ್ಣುವನ್ನು ಧ್ಯಾನ ಮಾಡಕೂಡದು.

## ಬ್ರಹ್ಮದೃಷ್ಟ್ಯಧಿಕರಣಮ್

**॥ ಓಂ ಬ್ರಹ್ಮದೃಷ್ಟಿರುತ್ಕರ್ಷಾತ್ ಓಂ ॥**

ಆತ್ಮಶಬ್ದ ವಾಚ್ಯನಾದ ವಿಷ್ಣುವಿನಲ್ಲಿ ಬ್ರಹ್ಮದೃಷ್ಟಿಯು ಕರ್ತವ್ಯ ಎಂದು ಇಲ್ಲಿ ಹೇಳಲ್ಪಡುತ್ತದೆ. ವಿಷ್ಣುವನ್ನು ಸ್ವಾಮಿಯೆಂದಷ್ಟೇ ಅಲ್ಲ, ಪೂರ್ಣನೆಂದೂ ಧ್ಯಾನ ಮಾಡಬೇಕು ಎಂದು ಹೇಳುತ್ತಾರೆ–

**ಬ್ರಹ್ಮೇತಿ ಚ ಸದಾ ಧ್ಯೇಯೋ ಭಗವಾನ್ವಿಷ್ಣುರಂಜಸಾ ।**

**ಉತ್ಕೃಷ್ಟೋ ಬ್ರಹ್ಮಶಬ್ದಾರ್ಥಃ ಪೂರ್ಣತ್ವಂ ಬ್ರಹ್ಮತಾ ಯತಃ ॥ ೩೫ ॥**

ಭಗವಾನ್ ವಿಷ್ಣುವನ್ನು ಯಾವಾಗಲೂ ಬ್ರಹ್ಮನೆಂದು ಚೆನ್ನಾಗಿ ಧ್ಯಾನ ಮಾಡಬೇಕು. ಅದರಲ್ಲಿ ಉತ್ಕರ್ಷಾತ್ ಎನ್ನುವುದು ಹೇತುವು. ಉತ್ಕರ್ಷವು ಯಾರಿಗೆ ಎಂದು ತಿಳಿಯುವುದಿಲ್ಲ. ಅದನ್ನು ಉತ್ಕೃಷ್ಟೋ ಇತ್ಯಾದಿ ವಚನದಿಂದ ತಿಳಿಸುತ್ತಾರೆ. ಬ್ರಹ್ಮತ್ವ ಎಂದರೆ ಪೂರ್ಣತ್ವ ಎಂದರ್ಥ. ಪೂರ್ಣತ್ವವೇ ಉತ್ಕರ್ಷವು. ಆದ್ದರಿಂದ ಉತ್ಕರ್ಷವು ಬ್ರಹ್ಮಶಬ್ದಾರ್ಥವು.

ಬ್ರಹ್ಮತ್ವವೇ ಸರ್ವಥಾ ಧ್ಯೇಯವು ಎನ್ನುವಲ್ಲಿ ಪ್ರಮಾಣವೇನು ಎಂದರೆ –

**ಆಧಿವ್ಯಾಧಿನಿಮಿತ್ತೇನ ವಿಕ್ಷಿಪ್ತಮನಸೋಽಪಿ ತು ।**

**ಧ್ಯೇಯೈವ ಬ್ರಹ್ಮತಾ ನಿತ್ಯಂ ವಿಷ್ಣೋರ್ಭಕ್ತ್ಯಾ ನಿರಂತರಮ್ ॥ ೩೬ ॥**

**ಇತಿ ಪ್ರಕಾಶಿಕಾಯಾಂ ಚ ವಚನಂ ವಿಷ್ಣುನೇರಿತಮ್ ।**

ಆಧಿವ್ಯಾಧಿಗಳ ನಿಮಿತ್ತದಿಂದ (ಆಧಿ–ಮನೋವ್ಯಥೆ, ವ್ಯಾಧಿ–ರೋಗಾದಿಗಳು) ಚಂಚಲವಾದ ಮನಸ್ಸುಳ್ಳವನಾಗಿದ್ದರೂ ಕೂಡ ನಿರಂತರವಾದ ಭಕ್ತ್ಯಾದಿಗಳಿಂದ ವಿಷ್ಣುವಿನಲ್ಲಿ ನಿತ್ಯವೂ ಬ್ರಹ್ಮತ್ವವನ್ನು ಧ್ಯಾನ ಮಾಡಬೇಕು. ಹೀಗೆ ಪ್ರಕಾಶಿಕಾ ಎಂಬ

ಗ್ರಂಥದಲ್ಲಿ ವಿಷ್ಣುವಿನಿಂದ ಹೇಳಲ್ಪಟ್ಟ ವಚನವಿದೆ.

'ಆತ್ಮೇತಿ ತೂಪಗಚ್ಛಂತಿ ಗ್ರಾಹಯಂತಿ ಚ' 'ನ ಪ್ರತೀಕೇ ನ ಹಿ ಸಃ' 'ಬ್ರಹ್ಮ ದೃಷ್ಟಿರುತ್ಕರ್ಷಾತ್' ಎನ್ನುವ ಮೂರು ಸೂತ್ರಗಳನ್ನು ಅದ್ವೈತಿಗಳು ಅನ್ಯಥಾ ವ್ಯಾಖ್ಯಾನ ಮಾಡುತ್ತಾರೆ. ಹೇಗೆಂದರೆ –

ಮೊದಲನೆ ಸೂತ್ರದ ಪ್ರಕಾರ ಪರಮೇಶ್ವರನನ್ನು ಆತ್ಮಾ ಎಂದೇ ತಿಳಿಯಬೇಕು. ಏಕೆಂದರೆ, ಪರಮೇಶ್ವರ ಪ್ರಕ್ರಿಯೆಯಲ್ಲಿ ಜಾಬಾಲರು ಆತ್ಮಾ ಎಂದೇ ಈಶ್ವರನನ್ನು ಹೊಂದುತ್ತಾರೆ. 'ಅಹಂಬ್ರಹ್ಮಾಸ್ಮಿ' ಇತ್ಯಾದಿಗಳಲ್ಲಿ ಆತ್ಮತ್ವವನ್ನು ಅಂಗೀಕರಿಸಿರುವುದು ಕಂಡಿದೆ. 'ಏಷ ತ ಆತ್ಮಾ ಸರ್ವಾಂತರಃ' 'ತತ್ತ್ವಮಸಿ' ಇತ್ಯಾದಿ ವೇದವಾಕ್ಯಗಳು ಈಶ್ವರನನ್ನು ಆತ್ಮತ್ವರೂಪದಿಂದಲೇ ತಿಳಿಸಿಕೊಡುತ್ತವೆ. 'ಅಥಯೋಽನ್ಯಾಂ ದೇವತಾ ಮುಪಾಸ್ತೇ' ಇತ್ಯಾದಿಗಳಿಂದ ಶ್ರುತಿಯು ಭೇದದೃಷ್ಟಿಯನ್ನು ನಿರಾಕರಿಸುತ್ತದೆ. ಆದ ಕಾರಣ ಆತ್ಮಾ ಎಂದೇ(ಅಂದರೆ ಜೀವತ್ವೇನ) ಈಶ್ವರನಲ್ಲಿ ಮನಸ್ಸನ್ನು ಧರಿಸತಕ್ಕದ್ದು ಎಂದು ಮೊದಲನೆ ಸೂತ್ರಕ್ಕೆ ಅದ್ವೈತಿಗಳ ವ್ಯಾಖ್ಯಾನ. ಈ ಅಪವ್ಯಾಖ್ಯಾನವನ್ನು 'ನಾತ್ಮೇತಿ' ಇತ್ಯಾದಿ ವಚನದಿಂದ ದೂಷಿಸುತ್ತಾರೆ –

**ನಾತ್ಮೇತಿ ಸೂತ್ರಮೀಶಸ್ಯ ಜೀವತ್ವಪ್ರತಿಪಾದಕಮ್ ॥ ೩೭ ॥**

**ಆತ್ಮಶಬ್ದಂ ಯತೋ ಹೇತುಂ ಕೃತ್ವಾ ಜೀವಂ ನ್ಯವಾರಯತ್ ।**

**ಸ್ವಶಬ್ದಾತ್ಪ್ರಾಣಭೃಚ್ಚೈವ ನೋಕ್ತ ಇತ್ಯೇವ ವೇದರಾಟ್ ॥ ೩೮ ॥**

ಆತ್ಮೇತಿ ತೂಪಗಚ್ಛಂತಿ ಎನ್ನುವ ಸೂತ್ರವು ಪರಮೇಶ್ವರನಿಗೆ ಜೀವತ್ವವನ್ನು ಪ್ರತಿಪಾದಿಸುವುದಿಲ್ಲ. ಏಕೆಂದರೆ ಸ್ವಶಬ್ದದಿಂದಲೇ ಜೀವನೂ ಕೂಡ ಹೇಳಲ್ಪಟ್ಟಿಲ್ಲ ಎಂದು ವೇದವ್ಯಾಸರೇ ಆತ್ಮಶಬ್ದವನ್ನು ಹೇತುವನ್ನಾಗಿ ಮಾಡಿಕೊಂಡು ಜೀವನನ್ನು ನಿರಾಕರಿಸಿದ್ದಾರೆ. ಆದ್ದರಿಂದ ಆತ್ಮಶಬ್ದದಿಂದ ಹೇಳಲ್ಪಟ್ಟವನು ವಿಷ್ಣುವೇ ಹೊರತು ಮತ್ತೊಬ್ಬ ಜೀವನಲ್ಲ. ಆತ್ಮಶಬ್ದವು ಜೀವವಾಚಕವಲ್ಲವೆಂದು ತಾತ್ಪರ್ಯ.

ಇದನ್ನೇ ವಿವರಿಸುತ್ತಾರೆ –

**ಯದ್ಯಾತ್ಮಶಬ್ದೋ ಜೀವೇಽಪಿ ಕಥಂ ಸ ವಿನಿವಾರಯೇತ್ ।**

**ಆತ್ಮಶಬ್ದೋದಿತಸ್ತಸ್ಮಾದ್ವಿಷ್ಣುರೇವ ನ ಚಾಪರಃ ॥ ೩೯ ॥**

ಆತ್ಮಶಬ್ದವು ಜೀವನಲ್ಲಿಯೂ ಇರುವುದಾದರೆ ಆಗ ಆ ಆತ್ಮ ಶಬ್ದವು ಜೀವನನ್ನು ಹೇಗೆ ನಿವಾರಿಸುವುದು? ಅಥವಾ ಆತ್ಮಶಬ್ದವು ಜೀವನಲ್ಲಿಯೂ ಇದೆ ಎಂದು ಸೂತ್ರಕಾರರ ಅಭಿಪ್ರಾಯವಾಗಿದ್ದರೆ ಅವರು ಜೀವನನ್ನು ಆತ್ಮಶಬ್ದದಿಂದ ಹೇಗೆ ನಿವಾರಣೆ ಮಾಡಿಯಾರು? ಆದ್ದರಿಂದ ಆತ್ಮಶಬ್ದದಿಂದ ಹೇಳಲ್ಪಟ್ಟವನು ವಿಷ್ಣುವೇ ಹೊರತು ಮತ್ತೊಬ್ಬನಲ್ಲ.

ಈ ವಿಷಯದಲ್ಲಿ ಆಗಮವಾಕ್ಯವನ್ನು ಪಠಿಸುತ್ತಾರೆ –

**ಆತ್ಮಬ್ರಹ್ಮಾದಯಃ ಶಬ್ದಾಸ್ತಮೃತೇ ವಿಷ್ಣುಮವ್ಯಯಮ್ ।**

**ನ ವದಂತಿ ಯತೋ ನಾಪ್ತಾ ಕ್ವಾಪಿ ತೈರ್ಗುಣಪೂರ್ಣತಾ ।। ೪೦ ।।**

**ನಾರಾಯಣಾಧ್ಯಾತ್ಮಗತಮಿತಿ ಯದ್ವೈಷ್ಣವಂ ವಚಃ ।**

ಗುಣಪೂರ್ಣತ್ವ ವಾಚಕಗಳಾದ ಆತ್ಮ ಬ್ರಹ್ಮ ಇತ್ಯಾದಿ ಶಬ್ದಗಳು ನಾಶರಹಿತನಾದ ಆ ವಿಷ್ಣುವನ್ನು ಬಿಟ್ಟು ಇತರರನ್ನು ಹೇಳುವುದಿಲ್ಲ. ಏಕೆಂದರೆ ವಿಷ್ಣುವಿನಿಂದ ಇತರರಾದ ಬ್ರಹ್ಮಾದಿಗಳು ಎಂದಿಗೂ ಯಾವವಿಧದಿಂದಲೂ ಗುಣಪರಿಪೂರ್ಣತ್ವವನ್ನು ಹೊಂದುವುದಿಲ್ಲ. ಹೀಗೆ ನಾರಾಯಣಾಧ್ಯಾತ್ಮದಲ್ಲಿ ವಿಷ್ಣು ಸಂಬಂಧಿಯಾದ ವಚನವಿದೆ.

ಈಗ ವಾಕ್ಯಾರ್ಥವನ್ನು ದೂಷಿಸುತ್ತಾರೆ –

**ಯದಿ ಜೀವೇಶಯೋರ್ವೇದಪತಿರೈಕ್ಯಂ ಚ ಮನ್ಯತೇ ।। ೪೧ ।।**

**ಆತ್ಮಶಬ್ದಂ ಕಥಂ ತಸ್ಮಾನ್ನಿವಾರಯತಿ ಯುಕ್ತಿತಃ ।**

ವೇದವ್ಯಾಸರಿಗೆ ಜೀವಬ್ರಹ್ಮರಿಗೆ ಐಕ್ಯವನ್ನು ಹೇಳುವ ಅಭಿಪ್ರಾಯವೂ ಇದ್ದಲ್ಲಿ ಆಗ ಆ ಸೂತ್ರದಲ್ಲಿ ಜೀವನ ದೆಶೆಯಿಂದ ಆತ್ಮಶಬ್ದವನ್ನು ಜೀವನಿರಾಕರಣ ಯುಕ್ತಿಯಿಂದ ನಿವಾರಣೆ ಮಾಡುತ್ತಿರಲಿಲ್ಲ.

ಸೂತ್ರಾಂತರ ವಿರೋಧವನ್ನೂ ಹೇಳುತ್ತಾರೆ –

**ಭೇದಸ್ಯ ವ್ಯಪದೇಶಂ ಚ ಸ್ಥಿತಿಂ ಚಾದನಮೇವ ಚ ।। ೪೨ ।।**

**ಭೇದದಾರ್ಢ್ಯೇ ಹೇತುಮಾಹ ತಾತ್ಪರ್ಯಂ ಸ ಜಗತ್ಪತಿಃ ।**

ಜಗತ್ಪತಿಯಾದ ಸೂತ್ರಕಾರರು ಭೇದವ್ಯಪದೇಶಾತ್ ಎನ್ನುವುದರಿಂದ ಭೇದದ ವ್ಯಪದೇಶವನ್ನೂ, ಸ್ಥಿತ್ಯದನಾಭ್ಯಾಂ ಚ ಎನ್ನುವುದರಿಂದ ಕರ್ಮಫಲಭೋಗರಹಿತ ಸ್ಥಿತಿಯನ್ನೂ, ಕರ್ಮಫಲಭೋಗವನ್ನೂ ಕೂಡ ತಾತ್ಪರ್ಯಸಹಿತ ಜೀವೇಶ ಭೇದದ ದಾರ್ಢ್ಯಕ್ಕಾಗಿ ಹೇತುವನ್ನಾಗಿ ಹೇಳಿರುವರು. ತಾತ್ಪರ್ಯಸಹಿತ ಎಂದರೆ ಅನೇಕ ಪ್ರಮಾಣಗಳ ಉಪನ್ಯಾಸದ ಮೂಲಕ ಎಂದರ್ಥ.

ಈ ವಿಷಯದಲ್ಲಿ ಯಾವುದೇ ವಿರೋಧವಿಲ್ಲ. ಜೀವೇಶರಿಗೆ ಪರಮಾರ್ಥದಿಂದ ಏಕತ್ವವು ಇದ್ದರೂ ವ್ಯಾವಹಾರಿಕ ಭೇದವಿದೆ. ಅದನ್ನು ಅಪೇಕ್ಷಿಸಿಕೊಂಡು ಭೇದ ಪ್ರತಿಪಾದಕ ಸೂತ್ರಗಳು ಹೊರಟಿವೆ. ಈ ಸೂತ್ರವಾದರೂ ಪಾರಮಾರ್ಥಿಕ ಅಪೇಕ್ಷೆಯಿಂದ ಎನ್ನುವ ವ್ಯವಸ್ಥೆ ಕೂಡುವುದೆಂಬ ಆಶಯದಿಂದ ಶಂಕಿಸುತ್ತಾರೆ –

**ವ್ಯಾವಹಾರಿಕಭೇದಶ್ಚೇತ್ ಕ್ವಾಸಾವಾವ್ಯಾವಹಾರಿಕಃ ।। ೪೩ ।।**

ಜೀವೇಶ್ವರ ಭೇದವು ಭ್ರಾಂತಿಕಲ್ಪಿತವು ಎನ್ನುವ ಪಕ್ಷದಲ್ಲಿ ಎಲ್ಲಿಯಾದರೂ

ಸತ್ಯವಾದ ಭೇದವನ್ನು ಅಂಗೀಕರಿಸಬೇಕು. ಈ ಭೇದವು ಎಲ್ಲಿ? ಎಲ್ಲಿಯೂ ಇಲ್ಲ.

ಎಲ್ಲಿಯೂ ಭೇದಕ್ಕೆ ಸತ್ಯತ್ವವನ್ನು ಅಂಗೀಕರಿಸದದೇ ಹೋದರೆ ಜೀವೇಶ್ವರರಿಗೆ ಭೇದವನ್ನು ಆರೋಪಿಸುವುದೂ ಕೂಡುವುದಿಲ್ಲ. ಆದ್ದರಿಂದ ಭೇದವೆಲ್ಲವೂ ಭ್ರಾಂತಿಸಿದ್ಧವೆಂದು ಹೇಳುವ ಹಾಗಿಲ್ಲ. ಸತ್ಯವಾದ ಭೇದವೆಂಬುದು ಇಲ್ಲವೇ ಇಲ್ಲ. ಹಾಗಿದ್ದರೂ ಜೀವೇಶರ ಭೇದ ಭ್ರಮೆಯು ಉಪಪನ್ನವಾಗುವುದು. ಪೂರ್ವ ಸಂಸ್ಕಾರವನ್ನು ಅಪೇಕ್ಷಿಸಿ ಭ್ರಮೆಯು ಹುಟ್ಟುತ್ತದೆ. ಈ ಸಂಸ್ಕಾರವು ಜ್ಞಾನ ಮಾತ್ರವು ಹಾಗೂ ಅನಾದಿಯು. ಹಿಂದಿನ ಹಿಂದಿನ ಭ್ರಮೆಯ ಸಂಸ್ಕಾರದಿಂದ ಮೇಲುಮೇಲಿನ ಭ್ರಮೆಯು ಹುಟ್ಟುವುದು ಎಂದು ಹೇಳಕೂಡದು. ಎಲ್ಲ ಭೇದವು ಭ್ರಾಂತಿಕಲ್ಪಿತವು ಎನ್ನುವ ಪ್ರತಿಜ್ಞೆಯೇ ವ್ಯಾಹತವು ಎಂದು ಹೇಳುತ್ತಾರೆ –

**ವ್ಯಾವಹಾರಿಕಮಿತ್ಯೇವ ವಚನಂ ವ್ಯಾವಹಾರಿಕಮ್ ।**

**ಉತ ನೇತಿ ವಿಕಲ್ಪೇ ತು ಯದಿ ಸ್ಯಾದ್ವ್ಯಾವಹಾರಿಕಮ್ ॥ ೪೪ ॥**

**ತಸ್ಯಾಪಿ ಬಾಧ್ಯತಾ ಚೇತ್ಸ್ಯಾತ್ ಭೇದಃ ಸ್ಯಾತ್ ಪಾರಮಾರ್ಥಿಕಃ ।**

**ಅವ್ಯಾವಹಾರಿಕತ್ವಂ ಚೇದ್ಭೇದೋಽಯಂ ಸತ್ಯತಾಂ ಗತಃ ॥ ೪೫ ॥**

ಭೇದಮಾತ್ರವು ವ್ಯಾವಹಾರಿಕವು ಎನ್ನುವ ವಚನವೂ ಭ್ರಾಂತಿಸಿದ್ಧವೋ ಅಥವಾ ಭ್ರಾಂತಿಸಿದ್ಧವಲ್ಲವೋ ಹೀಗೆ ಎರಡು ಪಕ್ಷವು ಕೂಡುವಾಗ, ಯಾವ ಪಕ್ಷವನ್ನು ಆಶ್ರಯಿಸಬೇಕು? ವ್ಯಾವಹಾರಿಕವೆಂದು ಹೇಳುವುದಾದರೆ ಮತ್ತು ಆ ವಚನಕ್ಕೆ ಬಾಧ್ಯತ್ವವೂ ಇರುವುದಾದರೆ, ಆಗ ಭೇದವು ಪಾರಮಾರ್ಥಿಕವೆಂದೇ ಆಗುವುದು. ಆ ವಚನವು ಭ್ರಾಂತಿಕಲ್ಪಿತವಲ್ಲವೆಂದು ಹೇಳಿದರೆ ಆಗ ಈ ಭೇದವು ಸತ್ಯತ್ವವನ್ನು ಹೊಂದುವುದು.

ಎಲ್ಲ ಭೇದವೂ ಭ್ರಾಂತವು ಎನ್ನುವ ವಾಕ್ಯಾರ್ಥಕ್ಕೆ ಭ್ರಾಂತತ್ವವೂ ಬಾಧ್ಯತ್ವವೂ ಇರುವುದರಿಂದ, ಎಲ್ಲ ಭೇದಕ್ಕೂ ಸತ್ಯತ್ವವು ಬರಬೇಕಾದೀತು ಎಂದು ಹೇಳುವುದು ಹೇಗೆ ಎಂದರೆ ಅದನ್ನು ಉಪಪಾದಿಸುವುದಕ್ಕಾಗಿ ವ್ಯಾಪ್ತಿಯನ್ನು ಹೇಳುತ್ತಾರೆ –

**ಏಕಸ್ಯಾಸತ್ಯತಾಯಾಂ ಹಿ ದ್ವಯೋರೇವ ವಿರುದ್ಧಯೋಃ ।**

**ಅನ್ಯಸ್ಯ ಸತ್ಯತೈವ ಸ್ಯಾದಿತಿ ಕೇನ ನಿವಾರ್ಯತೇ ॥ ೪೬ ॥**

ಎರಡು ವಿರುದ್ಧವಾದ ಧರ್ಮಗಳ ಮಧ್ಯದಲ್ಲಿ ಒಂದಕ್ಕೆ ಅಸತ್ಯತ್ವವಿದ್ದರೆ ಮತ್ತೊಂದಕ್ಕೆ ಸತ್ಯತ್ವವು ಬಂದೇ ಬರುವುದು ಎಂದು ವ್ಯಾಪ್ತಿಯು. ಇದನ್ನು ಯಾವುದರಿಂದಲೂ ನಿವಾರಿಸಲಾಗದು. ಇದಕ್ಕೆ ನಿದರ್ಶನವನ್ನು ಹೇಳುತ್ತಾರೆ –

**ಅಸತ್ಯಂ ನೋಕ್ತಮಿತ್ಯುಕ್ತೇ ಸತ್ಯಮುಕ್ತಮಿತಿ ಪ್ರಜಾಃ ।**

**ಜಾನಂತ್ಯುಕ್ತಂ ತು ನೋ ಸತ್ಯಮಿತ್ಯುಕ್ತೇಽಸತ್ಯತಾಮಪಿ ॥ ೪೭ ॥**

ಆಪ್ತನಿಂದ ಹೇಳಲ್ಪಟ್ಟದ್ದು ಅಸತ್ಯವಲ್ಲವೆಂದು ಹೇಳಿದರೆ, ಅವನು ಹೇಳಿದ್ದು ಸತ್ಯವೆಂದು ಪ್ರಜೆಗಳು ತಿಳಿಯುತ್ತಾರೆ. ಹಾಗೆಯೇ ವಂಚಕನು ಹೇಳಿದ್ದು ಸತ್ಯವಲ್ಲ ಎಂದು ಹೇಳಿದರೆ, ಅದು ಅಸತ್ಯವೆಂದೇ ತಿಳಿಯುತ್ತಾರೆ. ಅಂದರೆ ಸತ್ಯತ್ವ–ಅಸತ್ಯತ್ವ ಇವೆರಡಕ್ಕೇ ವಿರುದ್ಧತ್ವವು. ಇದರಲ್ಲಿ ಆಪ್ತೋಕ್ತವಾದುದು ಸತ್ಯವೂ ವಂಚಕನಿಂದ ಉಕ್ತವಾದುದು ಅಸತ್ಯವೂ ಎನ್ನುವುದು ಪ್ರಸಿದ್ಧವು.

ಹಾಗಾದರೆ ಸ್ವಪ್ನದಲ್ಲಿ ಘಟವನ್ನು ನೋಡಿ, ಇಲ್ಲಿ ಘಟವಿಲ್ಲವೆಂದೂ ನೋಡುತ್ತಾನೆ. ಅಲ್ಲಿ ಘಟವೂ, ಘಟಾಭಾವವೂ ಎರಡೂ ಕೂಡ ಮಿಥ್ಯೆಯೇ. ಆದ್ದರಿಂದ ವ್ಯಾಪ್ತಿಭಂಗವು ಎಂದರೆ –

**ನ ಸ್ವಪ್ನೇಽಪಿ ದ್ವಯಂ ಮಿಥ್ಯಾ ತತ್ರೈಕಂ ಸತ್ಯಮೇವ ಹಿ ।**

**ಭಾವಾಭಾವವುಭೌ ತತ್ರ ಕಥಂ ಮಿಥ್ಯಾ ಭವಿಷ್ಯತಃ ।। ೪೮ ।।**

**ಭಾವಸ್ಯ ಹಿ ನಿಷೇಧೇ ತು ನಾಭಾವಸ್ಯ ನಿಷೇಧನಮ್ ।**

**ಸ್ವವಾಚೋಽಸತ್ಯತಾ ಚೇತ್ಸ್ಯಾತ್ ತಸ್ಮಾದ್ಭೇದಸ್ಯ ಸತ್ಯತಾ ।। ೪೯ ।।**

**ತಸ್ಮಾಜ್ಜೀವೇಶಯೋರ್ಭೇದ ಉಕ್ತನ್ಯಾಯೇನ ಗಮ್ಯತೇ ।**

ಸ್ವಪ್ನದಲ್ಲಿ ಎರಡೂ ಕೂಡ ಮಿಥ್ಯೆಯಲ್ಲ. ಘಟದ ಭಾವ ಮತ್ತು ಅಭಾವಗಳ ಮಧ್ಯದಲ್ಲಿ ಒಂದು ಸತ್ಯವೇ. ಯಾವಾಗ ಅಭಾವವು ಅಸತ್ಯವೋ ಆಗ ಘಟವು ಸತ್ಯವೇ. ಯಾವಾಗ ಘಟವು ಅಸತ್ಯವೋ ಆಗ ಅಭಾವಕ್ಕೆ ಸತ್ಯತ್ವವು. ಆದ್ದರಿಂದ ವ್ಯಾಪ್ತಿಗೆ ಭಂಗವಿಲ್ಲ. ಭಾವಾಭಾವಗಳೆರಡೂ ಅಲ್ಲಿ ಮಿಥ್ಯೆಯಾಗುವುದು ಸಾಧ್ಯವಿಲ್ಲ. ಅಲ್ಲಿ ಭಾವಕ್ಕೆ ನಿಷೇಧ ಮಾಡಲಾಗಿದೆ. ಅದು ವಿಹಿತವೇ ಆಗಿದೆ. ಆದರೆ ಅಭಾವಕ್ಕೆ ನಿಷೇಧವು ಯುಕ್ತವಲ್ಲ. ಏಕೆಂದರೆ ಅಭಾವಕ್ಕೆ ನಿಷೇಧ ಮಾಡಿದರೆ ಭಾವಕ್ಕೆ ವಿಹಿತತ್ವ ಬರುವುದು. ಇದರಿಂದ ವ್ಯಾಹತವು. ಪ್ರತಿವಾದಿಯ ವಾಕ್ಯಾರ್ಥವಾದ ಸಕಲ ಭೇದ ಮಿಥ್ಯಾತ್ವಕ್ಕೆ ಅಸತ್ಯತ್ವವು ಬರುವುದಾದರೆ, ಅದರಿಂದ ಭೇದಕ್ಕೆ ಸತ್ಯತ್ವವು ಬರುವುದು. ಹೀಗೆ ಭೇದಕ್ಕೆ ಮಿಥ್ಯಾತ್ವವು ಕೂಡದಿರುವುದರಿಂದ, ಹಿಂದೆ ಹೇಳಿದ ನ್ಯಾಯದಿಂದ ದ್ಯುಭ್ವಾದಿ ಸೂತ್ರಗಳಿಂದ ಜೀವ ಬ್ರಹ್ಮರಿಗೆ ಪಾರಮಾರ್ಥಿಕ ಭೇದವೇ ತಿಳಿಯಲ್ಪಡುತ್ತದೆ.

ಹೀಗೆ ಮೊದಲನೆ ಸೂತ್ರದ ಅಪವ್ಯಾಖ್ಯಾನವನ್ನು ನಿರಾಕರಿಸಿ ಈಗ 'ನ ಪ್ರತೀಕೇ ನ ಹಿ ಸಃ' ಎನ್ನುವ ಎರಡನೆ ಸೂತ್ರದ ಅಪವ್ಯಾಖ್ಯಾನವನ್ನು ನಿರಾಕರಿಸುತ್ತಾರೆ –

ಎರಡನೆಯ ಸೂತ್ರಕ್ಕೆ ಅದ್ವೈತಿಗಳ ವ್ಯಾಖ್ಯಾನ ಹೀಗಿದೆ – ಮನೋ ಬ್ರಹ್ಮ ಇತ್ಯುಪಾಸೀತ ಇತ್ಯಾದಿಗಳಲ್ಲಿ ಉಕ್ತವಾಗಿರುವ ಪ್ರಕಾರ ಪ್ರತೀಕಗಳನ್ನು ಆತ್ಮತ್ವೇನ ಉಪಾಸನೆ ಮಾಡಬೇಕೋ ಇಲ್ಲವೋ ಎಂದು ಸಂಶಯ. ಬ್ರಹ್ಮನಿಗೆ ಆತ್ಮತ್ವವೂ, ಪ್ರತೀಕಕ್ಕೆ ಬ್ರಹ್ಮವಿಕಾರಿತ್ವದ ನಿಮಿತ್ತದಿಂದ ಬ್ರಹ್ಮತ್ವವೂ ಕೂಡುವುದರಿಂದ

ಆತ್ಮತ್ವೇನ ಉಪಾಸನೆ ಕೂಡುವುದು ಎಂದು ಹೇಳಿದರೆ, ಅದು ಯುಕ್ತವಲ್ಲ. ಏಕೆಂದರೆ ಪ್ರತೀಕ ಮತ್ತು ಆತ್ಮನಿಗೆ ಬ್ರಹ್ಮಸ್ವರೂಪದಿಂದ ಐಕ್ಯವಿದ್ದರೆ, ಆಗ ಪ್ರತೀಕವೇ ಇಲ್ಲದಂತಾಗುವುದು. ಆದ್ದರಿಂದ ಪ್ರತೀಕಗಳಲ್ಲಿ ಆತ್ಮದೃಷ್ಟಿಯನ್ನು ಮಾಡಬಾರದು. ಹೀಗೆ ಅದ್ವೈತಿಗಳು ಮಾಡುವ ಅಪವ್ಯಾಖ್ಯಾನವನ್ನು ಏತಸ್ಮಾದ್ ಇತ್ಯಾದಿ ವಚನದಿಂದ ನಿರಾಕರಿಸುತ್ತಾರೆ –

**ಏತಸ್ಮಾದಾತ್ಮಶಬ್ದೋಽಯಂ ಪರಮಾತ್ಮಾಭಿಧಾ ಭವೇತ್ ॥ ೫೦ ॥**

**ಪ್ರತೀಕವಿಷಯತ್ವೇನ ವಿಷ್ಣುದೃಷ್ಟಿರ್ನ ತದ್ಭವೇತ್ ।**

**ಪ್ರತೀಕೇ ವಿಷ್ಣುರಿತ್ಯೇವ ತಸ್ಮಾತ್ಕಾರ್ಯಾ ಹ್ಯುಪಾಸನಾ ॥ ೫೧ ॥**

**ನ ಚ ವಿಷ್ಣುಃ ಪ್ರತೀಕಂ ಯತ್ತಸ್ಮಾತ್................ ।**

ಹಿಂದೆ ಹೇಳಿದ ನ್ಯಾಯದಿಂದ ಆತ್ಮೇತಿ ಎನ್ನುವ ಸೂತ್ರದಲ್ಲಿನ ಈ ಆತ್ಮ ಶಬ್ದವು ಪರಮೇಶ್ವರನನ್ನೇ ಹೇಳುತ್ತದೆ. ಆದ್ದರಿಂದ ನ ಪ್ರತೀಕೇ ಎನ್ನುವ ಪ್ರತಿಜ್ಞಾವಾಕ್ಯಕ್ಕೆ ಪ್ರತೀಕವಿಷಯತ್ವದಿಂದ ವಿಷ್ಣುದೃಷ್ಟಿಯನ್ನು ಮಾಡತಕ್ಕದ್ದು ಎಂದು ಆಗುವುದಿಲ್ಲ. ಆದ್ದರಿಂದ ಪ್ರತಿಕದಲ್ಲಿ ವಿಷ್ಣುವು ಎಂಬುದಾಗಿಯೇ ಉಪಾಸನೆಯನ್ನು ಮಾಡತಕ್ಕದ್ದು. ಯಾವಕಾರಣದಿಂದ ವಿಷ್ಣುವು ಪ್ರತಿಮೆಯಾಗಲೀ ಜೀವನಾಗಲೀ ಆಗುವುದಿಲ್ಲವೋ ಆದಕಾರಣ ಪ್ರತೀಕಗಳಲ್ಲಿ ಜೀವನು ಎನ್ನುವ ಉಪಾಸನೆಯೂ ಕೂಡುವುದಿಲ್ಲ.

ಈಗ ಬ್ರಹ್ಮದೃಷ್ಟಿರುತ್ಕರ್ಷಾತ್ ಎನ್ನುವ ಮೂರನೆಯ ಸೂತ್ರಕ್ಕೆ ಅಪವ್ಯಾಖ್ಯಾನ ವನ್ನು ನಿರಾಕರಿಸುತ್ತಾರೆ –

ಪ್ರತಿಮಾದಿಗಳಲ್ಲಿರುವಂತೆ ಆದಿತ್ಯಾದಿಗಳಲ್ಲಿ ಬ್ರಹ್ಮದೃಷ್ಟಿಯನ್ನು ಮಾಡತಕ್ಕದ್ದು. ಉತ್ಕರ್ಷತ್ವ ಎನ್ನುವುದೇ ಇದಕ್ಕೆ ಸಮರ್ಥನೀಯ ಯುಕ್ತಿಯು. ಈ ಕಾರಣದಿಂದ ಆದಿತ್ಯಾದಿಗಳಲ್ಲಿ ಬ್ರಹ್ಮತ್ವೇನ ಉಪಾಸನೆಯನ್ನು ಮಾಡತಕ್ಕದ್ದು ಎಂದು ಈ ಸೂತ್ರಕ್ಕೆ ಅದ್ವೈತಿಗಳು ಮಾಡುವ ಅಪವ್ಯಾಖ್ಯಾನವನ್ನು ನಾತ್ಮೇತಿ ಇತ್ಯಾದಿ ವಚನದಿಂದ ನಿರಾಕರಿಸುತ್ತಾರೆ –

**...................................... ನಾತ್ಮೇತ್ಯುಪಾಸನಾ ।**

**ಇತಿ ಪಕ್ಷೋ ಯದಾ ಬ್ರಹ್ಮದೃಷ್ಟಿಶ್ಚಾತ್ರ ವಿರುದ್ಧ್ಯತೇ ॥ ೫೨ ॥**

ನಾತ್ಮೇತ್ಯುಪಾಸನಾ ಎನ್ನುವುದರಿಂದ ಪ್ರತೀಕೇ ನ ಹಿ ಸಃ ಎನ್ನುವ ಸಮಗ್ರ ಸೂತ್ರಾರ್ಥವನ್ನು ಅನುವಾದ ಮಾಡುತ್ತಾರೆ. ಪ್ರತೀಕಗಳಲ್ಲಿ ಜೀವ ಎಂದು ಉಪಾಸನೆ ಮಾಡಕೂಡದು. ಏಕೆಂದರೆ ಆ ಉಪಾಸಕನು ಪ್ರತೀಕಗಳಲ್ಲವೆಂದು ಪ್ರಸಿದ್ಧವು. ಆದ್ದರಿಂದ ಪ್ರತೀಕಗಳಲ್ಲಿ ಜೀವನೆಂದು ವ್ಯಾಖ್ಯಾನಮಾಡಿದ ಪಕ್ಷದಲ್ಲಿ ಈ ಪ್ರತೀಕಗಳಲ್ಲಿ ಬ್ರಹ್ಮ ಎನ್ನುವ ದೃಷ್ಟಿಯು ವಿರುದ್ಧವಾಗುತ್ತದೆ.

ಇದನ್ನೇ ವಿವರಿಸುತ್ತಾರೆ –

**ಸ ನೇತಿ ಯುಕ್ತಿಸ್ತತ್ರಾಪಿ ಸಮೇತ್ಯುಕ್ತವಿರುದ್ಧತಾ ।**

ಪ್ರತೀಕಗಳಲ್ಲಿ ಆತ್ಮತ್ವೇನ ಉಪಾಸನೆ ಮಾಡಕೂಡದು ಎನ್ನುವ ವಿಷಯದಲ್ಲಿ ಸಃ ನ ಎಂಬ ಸೂತ್ರಾಂಶದಿಂದ ನಿನ್ನಿಂದ ತಾದಾತ್ಮ್ಯ ಅಭಾವರೂಪವಾದ ಯಾವ ಯುಕ್ತಿಯು ಹೇಳಲ್ಪಟ್ಟಿತೋ ಅದು ಬ್ರಹ್ಮ ಮತ್ತು ಪ್ರತೀಕಗಳಲ್ಲಿಯೂ ಸಮವೇ ಆಗಿದೆ. ಈ ಕಾರಣದಿಂದ ಪ್ರತೀಕಗಳಲ್ಲಿ ಬ್ರಹ್ಮದೃಷ್ಟಿಯನ್ನು ಮಾಡಬೇಕು ಎಂದು ಹೇಳುವುದು ಹಿಂದೆ ಹೇಳಿದ ಯುಕ್ತಿಗೆ ವಿರುದ್ಧವು.

ಇಲ್ಲಿನ ಅಭಿಪ್ರಾಯ ಹೀಗಿದೆ – ಈ ಸೂತ್ರಕ್ಕೆ ಪ್ರತೀಕಗಳಲ್ಲಿ ಬ್ರಹ್ಮದೃಷ್ಟಿಯನ್ನು ಮಾಡಬೇಕು ಎಂಬ ವ್ಯಾಖ್ಯಾನವು ಸರಿಯಲ್ಲ. ಪ್ರತೀಕದಲ್ಲಿ ಬ್ರಹ್ಮತ್ವವಿಲ್ಲದಿರುವ ಪ್ರಯುಕ್ತ ಬ್ರಹ್ಮತ್ವೇನ ಉಪಾಸನೆಯು ಅಯುಕ್ತವು. ಪ್ರತೀಕಗಳಲ್ಲಿ ಆತ್ಮತ್ವೇನ ಉಪಾಸನೆಯು ಮಾಡತಕ್ಕದ್ದಲ್ಲ ಎಂದು ಹಿಂದಿನ ಸೂತ್ರದ ವ್ಯಾಖ್ಯಾನದಲ್ಲಿ ಪ್ರತಿವಾದಿಯೇ ಹೇಳಿದ್ದಾನೆ. ಬ್ರಹ್ಮವು ಸತ್ಯವೂ ಪ್ರತೀಕವು ಕಲ್ಪಿತವೂ ಆದುದರಿಂದ ಅವುಗಳಿಗೆ ಅಭೇದವು ಕೂಡುವುದಿಲ್ಲ.

ಹಾಗಾದರೆ ನ ಹಿ ಸಃ ಎನ್ನುವ ನಿರ್ವಿಶೇಷಣವಾದ ಹೇತುವು ಸೂತ್ರಕಾರರಿಗೆ ಅಭಿಮತವಲ್ಲ. ಆದ್ದರಿಂದ ಪ್ರತೀಕಗಳಲ್ಲಿ ಬ್ರಹ್ಮದೃಷ್ಟಿಯು ಹಿಂದೆ ಹೇಳಿದ ಯುಕ್ತಿಗೆ ವಿರುದ್ಧವಲ್ಲ. ಪ್ರತೀಕವನ್ನು ಬ್ರಹ್ಮತ್ವೇನ ಉಪಾಸನೆಮಾಡುವುದರಿಂದ ಉಪಾಸಕನಿಗೆ ಉತ್ಕರ್ಷಪ್ರಾಪ್ತಿಯಿದೆ. ಆದ್ದರಿಂದ ಬ್ರಹ್ಮತ್ವವಿಲ್ಲದಿದ್ದರೂ ಉಪಾಸನೆಯು ಯುಕ್ತವೇ ಆಗುವುದು ಎಂದರೆ –

**ಯದ್ಯಪ್ಯುತ್ಕರ್ಷಮಾತ್ರೇಣ ಹ್ಯತದ್ಭಾವೇऽಪ್ಯುಪಾಸನಾ ॥ ೫೩ ॥**

**ಉತ್ಕರ್ಷ ಆತ್ಮನೋऽಪಿ ಸ್ಯಾಚ್ಚೇತನತ್ವಾದಚೇತನಾತ್ ।**

**ತಸ್ಮಾದತತ್ತ್ವಂ ನೋಪಾಸ್ಯಮಿತಿ ವೇದವಿದಾಂ ಮತಮ್ ॥ ೫೪ ॥**

ಪ್ರತೀಕಗಳಿಗೆ ಬ್ರಹ್ಮತ್ವವಿಲ್ಲದಿದ್ದರೂ ಉತ್ಕರ್ಷಪ್ರಾಪ್ತಿ ಮಾತ್ರದಿಂದ ಬ್ರಹ್ಮತ್ವೇನ ಉಪಾಸನೆಯು ಅಂಗೀಕರಿಸಲ್ಪಟ್ಟರೆ ಆಗ ಆತ್ಮತ್ವದಿಂದಲೂ ಉಪಾಸನೆಯು ಅಂಗೀಕರಿಸಲ್ಪಡಬೇಕು. ಏಕೆಂದರೆ ಬ್ರಹ್ಮನಂತೆ ಆತ್ಮನಿಗೆ ಚೇತನತ್ವವಿರುವ ಪ್ರಯುಕ್ತ ಆತ್ಮನಿಗೂ ಕೂಡ ಅಚೇತನವಾದ ಪ್ರತೀಕದ ದೆಶೆಯಿಂದ ಉತ್ಕರ್ಷವು ಬರುವುದು. ಆದ್ದರಿಂದ ಅತತ್ವವನ್ನು ಉಪಾಸನೆ ಮಾಡಕೂಡದು. (ಯಾವುದು ತತ್ವವಲ್ಲವೋ ಅದನ್ನು ತತ್ವವೆಂದು ಉಪಾಸನೆ ಮಾಡುವುದೇ ಅತತ್ವ ಉಪಾಸನೆಯು). ಹೀಗೆ ವೇದ ಬಲ್ಲವರ ಅಭಿಪ್ರಾಯ.

ಹೀಗೆ ಪ್ರತಿಜ್ಞಾವ್ಯಾಖ್ಯಾನವನ್ನು ನಿರಾಕರಿಸಿ, ಈಗ ಉತ್ಕರ್ಷಾತ್ ಎನ್ನುವ ಹೇತುವ್ಯಾಖ್ಯಾನವನ್ನು ನಿರಾಕರಿಸುತ್ತಾರೆ –

**ಉತ್ಕರ್ಷಾದ್ಬ್ರಹ್ಮತಾಧ್ಯಾನೇ ಯದಿ ಸ್ಯಾತ್ಫಲಮಂಜಸಾ ।**

**ಬ್ರಹ್ಮಣೋ ನೀಚತಾಜ್ಞಾನಾದನರ್ಥಃ ಕಿಂ ನ ಜಾಯತೇ ॥ ೫೫ ॥**

ಬ್ರಹ್ಮತ್ವ ಧ್ಯಾನದಲ್ಲಿ ಪ್ರತೀಕಗಳಿಗೆ ಉತ್ಕರ್ಷವು ದೃಷ್ಟವಾಗಿರುವುದರಿಂದ ಪುರಷಾರ್ಥರೂಪವಾದ ಫಲವು ಆಗುವುದಾದರೆ, ಆಗ ಬ್ರಹ್ಮನಿಗೆ ನೀಚತ್ವದ ಧ್ಯಾನದಿಂದ ಅನರ್ಥವು ಏಕೆ ಆಗಲಾರದು? ಆಗಿಯೇ ಆಗುವುದು ಎಂದು ಭಾವ. ಆದ್ದರಿಂದ ಇದು ಅಕಾರ್ಯವೇ ಆಗಿದೆ.

ಬ್ರಹ್ಮತ್ವ ಧ್ಯಾನಕ್ಕೆ ಪುರುಷಾರ್ಥರೂಪ ಫಲವನ್ನು ಅಂಗೀಕರಿಸಿ ಹೀಗೆ ಹೇಳಿದ್ದು. ವಸ್ತುತಃ ಪುರಷಾರ್ಥವಲ್ಲ, ಮತ್ತೆ ಅನರ್ಥವೇ ಆಗುವುದು ಎಂದು ಹೇಳುತ್ತಾರೆ –

**ಅಚೇತನಸ್ಯ ಬ್ರಹ್ಮತ್ವಧ್ಯಾನೇ ತುಷ್ಟಿರ್ನ ಹಿ ಕ್ವಚಿತ್ ।**

**ನೀಚಸ್ಯ ಸ್ವಾತ್ಮತಾಜ್ಞಾನಾತ್ ಕುಪ್ಯತಿ ಬ್ರಹ್ಮ ಲೋಕವತ್ ॥ ೫೬ ॥**

ಅಚೇತನಕ್ಕೆ ಬ್ರಹ್ಮತ್ವ ಧ್ಯಾನದಲ್ಲಿ ಎಲ್ಲಿಯೂ ತುಷ್ಟಿಯು ಆಗಲಾರದು. ಆದ್ದರಿಂದಲೇ ಅದು ಪುರಷಾರ್ಥಕ್ಕೆ ಕಾರಣವಾಗದು. ನೀಚವಾದ ಪ್ರತೀಕವನ್ನು ಸುಖಸ್ವರೂಪವಾದ ಆತ್ಮವೆಂದು ಧ್ಯಾನ ಮಾಡಿದರೆ ಬ್ರಹ್ಮನು ಕೋಪಗೊಳ್ಳುತ್ತಾನೆ. ಅಂದರೆ ಅನರ್ಥವನ್ನು ಉಂಟುಮಾಡುತ್ತಾನೆ. ಇದಕ್ಕೆ ದೃಷ್ಟಾಂತ ಲೋಕವತ್. ಲೋಕದಲ್ಲಿ ಶಿಲಾದಿಗಳನ್ನು ರಾಜನೆಂದು ಧ್ಯಾನಮಾಡಿದರೆ ಹೇಗೆ ಸಂತುಷ್ಟವೂ ಆಗುವುದಿಲ್ಲವೋ, ಪುರುಷಾರ್ಥಪ್ರದವೂ ಆಗುವುದಿಲ್ಲವೋ ಹಾಗೆ ಎಂದರ್ಥ.

ನಾವು ಬ್ರಹ್ಮನಲ್ಲಿ ಪ್ರತೀಕತ್ವೇನ ಉಪಾಸನೆಯನ್ನು ಹೇಳುವುದಿಲ್ಲ. ಹಾಗೆ ಹೇಳಿದ್ದರೆ ಬ್ರಹ್ಮನ ಕೋಪಕ್ಕೆ ಗುರಿಯಾಗಬೇಕಿತ್ತು. ಆದರೆ ನಾವು ಪ್ರತೀಕದಲ್ಲಿ ಬ್ರಹ್ಮತ್ವ ಉಪಾಸನೆಯನ್ನು ಹೇಳುತ್ತೇವೆ. ಅದರಿಂದ ಪುರುಷಾರ್ಥಪ್ರಾಪ್ತಿಯು ಎಂದರೆ –

**ಚಂಡಾಲೋ ನೃಪ ಇತ್ಯುಕ್ತೇ ನೃಪಶ್ಚಂಡಾಲ ಇತ್ಯಪಿ ।**

**ಕೋ ವಿಶೇಷಃ ಪರಿಜ್ಞಾತೇ ನೃಪೇಣ ಸ್ಯಾತ್ಕಥಂಚನ ॥ ೫೭ ॥**

ಚಂಡಾಲನನ್ನು ರಾಜ ಎಂದು ಹೇಳಿದರೂ, ರಾಜನನ್ನು ಚಂಡಾಲ ಎಂದು ಹೇಳಿದರೂ ಏನೂ ವಿಶೇಷವಿಲ್ಲ. ಎರಡು ಪ್ರಕಾರದಲ್ಲಿಯೂ ತಾತ್ಪರ್ಯವು ಒಂದೇ ಆಗಿರುವುದು. ಹೀಗೆ ಯಾವ ಪ್ರಕಾರದಿಂದ ಹೇಳಿದರೂ, ರಾಜನಿಂದ ಅನರ್ಥವು ಆಗಿಯೇ ಆಗುವುದು. ಇದೇರೀತಿ ಪ್ರತೀಕವೇ ಬ್ರಹ್ಮನೆಂದೂ ಅಥವಾ ಬ್ರಹ್ಮನು ಪ್ರತೀಕನೆಂದೂ ಯಾವಪ್ರಕಾರದಿಂದ ಉಪಾಸನೆಮಾಡಿದರೂ ಅನರ್ಥವು ಸಮವೇ.

ಹಾಗಾದರೆ ಸಾರಥಿಯನ್ನು ರಾಜನೆಂದು ಕಾಣುವುದು ಫಲವುಳ್ಳದ್ದು, ರಾಜನಲ್ಲಿ ಸಾರಥಿಯನ್ನು ಕಾಣುವುದು ಅನರ್ಥಕ್ಕೆ ಕಾರಣವೆಂದು ಕಂಡಿದೆ. ಆದ್ದರಿಂದ

ಎರಡಕ್ಕೂ ಸಾಮ್ಯವು ಹೇಗೆ ಹೇಳಲ್ಪಡುತ್ತದೆ ಎಂದರೆ, ಹಾಗೆ ಹೇಳಕೂಡದು. ಅಲ್ಲಿ ಹಾಗೆ ದೃಷ್ಟಿಯಿಲ್ಲ. ಅದು ಸಿಂಹೋ ದೇವದತ್ತಃ ಎಂಬಂತೆ ಕೇವಲ ಔಪಚಾರಿಕವಷ್ಟೆ. ದೃಷ್ಟಿಯಿದ್ದರೆ ಅಲ್ಲಿಯೂ ಅನರ್ಥವು ಸಮವೇ ಆಗಿದೆ ಎಂಬ ಅಭಿಪ್ರಾಯದಿಂದ ಪುರತಃ ಎಂದು ಹೇಳುತ್ತಾರೆ –

**ಪುರತೋ ನರದೇವಸ್ಯ ಚಂಡಾಲೋ ಯದಿ ಪೂಜ್ಯತೇ ।**

**ರಾಜವತ್ಕಿಂ ನ ಕೋಪಃ ಸ್ಯಾದ್ರಾಜ್ಞೋ ಲೋಕೇಽಭಿಪಶ್ಯತಿ ॥ ೫೮ ॥**

ಪ್ರಜೆಗಳ ಸಮಕ್ಷಮದಲ್ಲಿ ರಾಜನ ಎದುರಿನಲ್ಲಿರುವ ಚಂಡಾಲನನ್ನು ರಾಜನಂತೆ ಪೂಜಿಸಿದ ಪಕ್ಷದಲ್ಲಿ ರಾಜನಿಗೆ ಕೋಪವಾಗುವುದಿಲ್ಲವೇನು?

ಕೇವಲ ದೃಷ್ಟಿಗೆ ಕಾರಣವಾದ ಪೂಜೆಯಿಂದ ಮಾತ್ರವಲ್ಲ, ಮತ್ತೆ ಅಂಥಹ ಉಕ್ತಿಯಿಂದಲೂ ಕೂಡ ರಾಜನಿಗೆ ಕೋಪವಾಗುವುದು ಎಂದು ಹೇಳುತ್ತಾರೆ –

**ರಾಜ್ಞಸ್ತು ಪುರತಃ ಪ್ರೋಕ್ತೇ ಚಂಡಾಲೇ ನೃಪ ಇತ್ಯಪಿ ।**

**ಆತ್ಮಾನಂ ಸ ಇತಿ ಪ್ರೋಕ್ತಮಿತಿವದ್ಧ್ಯೇವ ಕುಪ್ಯತಿ ॥ ೫೯ ॥**

ರಾಜನ ಎದುರಿನಲ್ಲಿಯೇ ಚಂಡಾಲನು ರಾಜನು ಎಂದು ಹೇಳಲ್ಪಡಲು, ತನ್ನನ್ನೇ ಆ ಚಂಡಾಲನೆಂದು ಚೆನ್ನಾಗಿ ಹೇಳಿದಂತಾಯಿತೆಂದು ರಾಜನು ಕುಪಿತನು ಆಗಿಯೇ ಆಗುತ್ತಾನೆ. ಪೂಜೆಯೇ ಕೋಪಕ್ಕೆ ಕಾರಣ, ದೃಷ್ಟಿಯಲ್ಲ ಎಂಬುದನ್ನು ನಿರಾಕರಿಸಿ; ಯಾವದೇ ಪ್ರಕಾರದಿಂದಲೂ ಅಭೇದದರ್ಶನವು ಅನರ್ಥಕರ ಎಂಬ ವಿವೇಕೋದಯಕ್ಕಾಗಿ ಈ ಶ್ಲೋಕವು.

ಹೀಗೆ ಉದ್ದೇಶವಿಧಾನೋಕ್ತಿಗಳಿಂದ ದೃಷ್ಟಿ–ಉಪಾಸನೆಗಳೆಂಬ ಎರಡು ಪ್ರಕಾರ ಗಳನ್ನು ಅಂಗೀಕರಿಸಿ ಅನರ್ಥರೂಪ ಫಲಸಾಮ್ಯವು ಹೇಳಲ್ಪಟ್ಟಿತು. ಈಗ ಆ ದ್ವೈರೂಪ್ಯವೂ ಇಲ್ಲವೆಂದು ಹೇಳುತ್ತಾರೆ –

**ಅಭೇದೇನೈತಯೋರ್ಧ್ಯಾನೇ ಕೋ ವಿಶೇಷೋ ವಚಸ್ಯಪಿ ।**

**ಅಯಂ ರಾಜಾ ತ್ವಮಿತ್ಯುಕ್ತೇ ಚಂಡಾಲೇಽಥ ನೃಪೇಽಪಿ ಚ ॥ ೬೦ ॥**

**ಚಂಡಾಲ ಇತಿ ತು ಪ್ರೋಕ್ತೇ ಸಮಮೇವ ಹಿ ದೂಷಣಮ್ ।**

ಬ್ರಹ್ಮ – ಪ್ರತೀಕಗಳಿಗೆ ಅಭೇದದಿಂದ ಧ್ಯಾನವು ಅಂಗೀಕರಿಸಲ್ಪಡಲು ಕೇವಲ ಅನರ್ಥಸಾಮ್ಯವಲ್ಲ, ಮತ್ತೆ ವಚನದಲ್ಲಿಯೂ ಯಾವ ವಿಶೇಷವೂ ಇಲ್ಲ (ಅಂದರೆ ಸಾಮ್ಯವಿದೆ). ಈ ವಿಷಯದಲ್ಲಿ ದೃಷ್ಟಾಂತವನ್ನು ಹೇಳುತ್ತಾರೆ. ಚಂಡಾಲನನ್ನು ಕುರಿತು ನೀನು ಈ ರಾಜನು ಎಂದೂ, ಹಾಗೆಯೇ ರಾಜನನ್ನು ಕುರಿತು ನೀನು ಈ ಚಂಡಾಲನೆಂದೂ ಹೇಳುತ್ತಿರಲು, ನೀಚತ್ವ ರೂಪವಾದ ದೂಷಣವು ಸಮಾನವೇ ಆಗಿದೆಯಷ್ಟೆ.

ಹಾಗಾದರೆ ಬ್ರಹ್ಮ ಪ್ರತೀಕಗಳಿಗೆ ಅಭೇದದಿಂದ ಧ್ಯಾನಮಾಡಿದರೆ ದೂಷಣವು ಕೂಡುವುದು. ಆದರೆ ನಾವು ಪ್ರತೀಕಕ್ಕೆ ಬ್ರಹ್ಮತ್ವವನ್ನು ಹೇಳುತ್ತೇವೆ ಹೊರತು ಬ್ರಹ್ಮನಿಗೆ ಪ್ರತೀಕತ್ವವಲ್ಲ ಎಂದರೆ –

**ಧ್ಯಾತೇಽಪ್ಯೇಕಸ್ಯ ತದ್ಭಾವೇ ತದ್ಭಾವೋಽನ್ಯಸ್ಯ ಕಿಂ ನ ತತ್ ॥ ೬೧ ॥**

ಆ ಬ್ರಹ್ಮ-ಪ್ರತೀಕಗಳಲ್ಲಿ ಪ್ರತೀಕಕ್ಕೆ ಬ್ರಹ್ಮಭಾವವು ಧ್ಯಾನಿಸಲ್ಪಡಲು, ಬ್ರಹ್ಮನಿಗೆ ಪ್ರತೀಕಭಾವವು ಧ್ಯಾನಮಾಡಿದಂತೆ ಆಗುವುದಿಲ್ಲವೇನು?

ಹಾಗಾದರೆ ಈ ಉಪಾಸನೆಯು ಬ್ರಹ್ಮನಿಂದ ತಿಳಿಯಲ್ಪಟ್ಟರೆ ಮಾತ್ರ ಅನರ್ಥವು ಆಗುವುದು, ಬ್ರಹ್ಮನಿಗೆ ತಿಳಿಯದಿದ್ದರೆ ಅನರ್ಥವಿಲ್ಲ ಎಂದರೆ –

**ನ ಚೈವ ತದವಿಜ್ಞಾತಂ ಸರ್ವಜ್ಞಬ್ರಹ್ಮಣಾ ಕ್ವಚಿತ್ ।**

ಸರ್ವಜ್ಞನಾದ್ದರಿಂದ ಬ್ರಹ್ಮನಿಂದ ಈ ಉಪಾಸನೆಯು ಎಲ್ಲಿಯೂ ಅಜ್ಞಾತವು ಆಗುವುದೇ ಇಲ್ಲ.

**ತಸ್ಮಾದಪೇಶಲಂ ಸರ್ವಮನ್ಯಸ್ಯ ಬ್ರಹ್ಮತಾವಚಃ ॥ ೬೨ ॥**

**ತಸ್ಮಾದ್ಯಥೋಕ್ತಮಾರ್ಗೇಣ ಬ್ರಹ್ಮೋಪಾಸ್ಯಂ ಮುಮುಕ್ಷುಭಿಃ ।**

ಆದ್ದರಿಂದ ಶ್ರುತಿಸೂತ್ರ ವ್ಯಾಖ್ಯಾನರೂಪವಾದ ಬ್ರಹ್ಮತ್ವ ವಚನವು ಇತರರಿಗೆ ತಿಳಿಯುವುದಿಲ್ಲ. ಆದ್ದರಿಂದ ನಾವು ಹೇಳಿದ ಸೂತ್ರಾರ್ಥವನ್ನು ಅತಿಕ್ರಮಿಸದೆ ಇರತಕ್ಕ ಮಾರ್ಗದಿಂದ ಮುಮುಕ್ಷುಗಳಿಂದ ಪರಬ್ರಹ್ಮನು ಉಪಾಸ್ಯನು.

## ತದಧಿಗಮಾಧಿಕರಣಮ್

**॥ ಓಂ ತದಧಿಗಮ ಉತ್ತರಪೂರ್ವಾಘಯೋರಶ್ಲೇಷವಿನಾಶೌ ತದ್ವ್ಯಪದೇಶಾತ್ ಓಂ ॥**

ಸಾಧನ ವಿಚಾರವನ್ನು ಸಮಾಪ್ತಿಗೊಳಿಸಿ ಈಗ ಫಲವನ್ನು ನಿರೂಪಿಸುತ್ತಾರೆ. ಪ್ರತಿಬಂಧಕಗಳಾದ ಅನಂತಾನಂತ ಪೂರ್ವೋತ್ತರ ಕರ್ಮಗಳು ಇರುವುದರಿಂದ ಜ್ಞಾನಿಗಳಿಗೆ ಮೋಕ್ಷವಾಗದು ಎಂಬ ಆಶಂಕೆಯನ್ನು ನಿರಾಕರಿಸುವುದಕ್ಕಾಗಿ ಕರ್ಮನಾಶಾಖ್ಯ ಜ್ಞಾನಫಲವು ಇಲ್ಲಿ ಹೇಳಲ್ಪಡುತ್ತದೆ. ಅದರಲ್ಲಿ ಜ್ಞಾನಸಾಮರ್ಥ್ಯದಿಂದಲೇ ಕರ್ಮಕ್ಷಯವು ಎಂಬ ಪ್ರತೀತಿಯನ್ನು ನಿರಾಕರಿಸಲು ಸೂತ್ರತಾತ್ಪರ್ಯವನ್ನು ಹೇಳುತ್ತಾರೆ –

**ತಥೋಪಾಸ್ಯಾಂಜಸಾ ದೃಷ್ಟಂ ಬ್ರಹ್ಮ ಪಾಪಂ ಚ ಭಸ್ಮಸಾತ್ ॥ ೬೩ ॥**

**ಕರೋತಿ ನಿಖಿಲಂ ಪೂರ್ವಂ ಪಾಶ್ಚಾತ್ತ್ಯಸ್ಯಾಪ್ಯಸಂಗತಾಮ್ ।**

**ಕರೋತಿ............................................ ॥**

ಹಿಂದೆ ಹೇಳಿದ ಪ್ರಕಾರದಿಂದ ಆದರ ನೈರಂತರ್ಯಗಳಿಂದ ಉಪಾಸನೆ ಮಾಡಿ

ಕಾಣಲ್ಪಟ್ಟ ಪರಬ್ರಹ್ಮನು ಜ್ಞಾನಪೂರ್ವದಲ್ಲಿರತಕ್ಕ ಎಲ್ಲ ಪಾಪವನ್ನೂ, ಅನಿಷ್ಟಪುಣ್ಯವನ್ನೂ ಕೂಡ ಸುಟ್ಟು ಬೂಧಿ ಮಾಡುತ್ತಾನೆ. ಜ್ಞಾನೋತ್ತರ ಮಾಡಲ್ಪಟ್ಟ ಪಾಪಕ್ಕೂ ಅನಿಷ್ಟಪುಣ್ಯಕ್ಕೂ ಸಂಗವಾಗದಂತೆ (ಲೇಪವಾಗದಂತೆ) ಮಾಡುತ್ತಾನೆ. ಇದರಿಂದ 'ಅತೋಽನ್ಯದಪೀತ್ಯೇಕೇಷಾಮುಭಯೋಃ' ಸೂತ್ರದ ತಾತ್ಪರ್ಯವನ್ನು ಹೇಳಿದಂತೆ ಆಯಿತು.

**॥ ಓಂ ಇತರಸ್ಯಾಪ್ಯೇವಮಸಂಶ್ಲೇಷಃ ಪಾತೇ ತು ಓಂ ॥**

ಈ ಸೂತ್ರವನ್ನು ಕೆಲವರು ಬ್ರಹ್ಮಜ್ಞಾನಿಗೇನೆ ಶರೀರಪಾತವು ಸನ್ನಿಹಿತವಾಗಿರಲು ಪಾಪದಂತೆಯೇ ಪುಣ್ಯಕ್ಕೂ ಕೂಡ ಅಶೇಷ ವಿನಾಶವು ಆಗುವುದು ಎಂದು ವ್ಯಾಖ್ಯಾನ ಮಾಡುತ್ತಾರೆ. ಅದು ಸರಿಯಲ್ಲ. ಹಾಗಾದರೆ ಸೂತ್ರದ ತಾತ್ಪರ್ಯವೇನು ಎಂದರೆ –

**......... ತದ್ವಿಷಶ್ಚೈವಂ ಪುಣ್ಯನಾಶೋಽಪ್ಯಸಂಗತಾ ॥ ೬೪ ॥**

ಬ್ರಹ್ಮದ್ವೇಷಿಗೂ ಕೂಡ ಜ್ಞಾನಿಯಂತೆಯೇ ದ್ವೇಷಪೂರ್ತಿಯಾಗುವ ಮುಂಚಿನ ಪುಣ್ಯಕ್ಕೆ ನಾಶವೂ, ಆಮೇಲಿನ ಪುಣ್ಯಕ್ಕೆ ಅಸಂಗವೂ ಆಗುವುದು.

ಈ ಅಧಿಕರಣದಲ್ಲಿರತಕ್ಕ ಯದೇವ ವಿದ್ಯಯೇತಿ ಹಿ ಎನ್ನುವ ಸೂತ್ರಕ್ಕೆ ಪುನರುಕ್ತಿಯು. ಇದರ ಅರ್ಥವು ತಚ್ಛ್ರುತೇಃ ಎಂಬ ಸೂತ್ರದಿಂದ ಹಿಂದೆಯೇ ಉಕ್ತವಾಗಿದೆ ಎಂದರೆ –

**ಯದೇವ ವಿದ್ಯಯೇತ್ಯತ್ರ ಪೂರ್ವೋಕ್ತಾದ್ಧಿ ವಿಶಿಷ್ಯತೇ ।**

**ಪೂರ್ವಂ ಸ್ವರ್ಗಾದಿಲಬ್ಧ್ಯರ್ಥಂ ವೀರ್ಯತ್ವೇನ ಚೋದಿತಮ್ ॥ ೬೫ ॥**

**ಕರ್ಮ ವಿದ್ಯಾಯುತಂ ಪಶ್ಚಾನ್ಮೋಕ್ಷೇ ವೀರ್ಯಪ್ರದಂ ತ್ವಿತಿ ।**

ಯದೇವ ವಿದ್ಯಯಾ ಎನ್ನುವಲ್ಲಿ ಹೇಳಿದ ಪ್ರಮೇಯವು ತಚ್ಛ್ರುತೇಃ ಎಂದು ಹಿಂದೆ ಹೇಳಿದ ಪ್ರಮೇಯದ ದೆಶೆಯಿಂದ ವಿಲಕ್ಷಣವಾಗಿದೆ. ಹೇಗೆ ವಿಲಕ್ಷಣವಾಗಿದೆ ಎಂದರೆ, ಪೂರ್ವದಲ್ಲಿ ತಚ್ಛ್ರುತೇಃ ಎನ್ನುವ ಸೂತ್ರದಿಂದ ವಿದ್ಯೆಯಿಂದ ಯುಕ್ತವಾದ ಕರ್ಮವು ಮೋಕ್ಷದಿಂದ ಇತರವಾದ ಸ್ವರ್ಗಾದಿ ಫಲವನ್ನು ಕೊಡುವ ಸಾಮರ್ಥವುಳ್ಳದ್ದೆಂದು ಹೇಳಲ್ಪಟ್ಟಿದೆ. ಆಮೇಲೆ ಯದೇವ ವಿದ್ಯಯಾ ಎನ್ನುವ ಸೂತ್ರದಿಂದ ವಿದ್ಯೆಯಿಂದ ಯುಕ್ತವಾದ ಕರ್ಮವು ಮೋಕ್ಷದಲ್ಲಿ ಆನಂದಾತಿಶಯವನ್ನು ಕೊಡತಕ್ಕುದೆಂದು ಹೇಳಲ್ಪಟ್ಟಿದೆ. ಆದ್ದರಿಂದ ಪುನರುಕ್ತಿಯಿಲ್ಲ.

ಎಲ್ಲ ಕರ್ಮಗಳು ನಾಶವಾಗುತ್ತಿರುವಂತೆಯೇ ಮುಕ್ತಿಯಾಗಬೇಕಾಗುವುದು. ಜೀವನ್ಮುಕ್ತರೂ ಕಂಡುಬರುವುದರಿಂದ ಹೀಗೆ ಹೇಳಕೂಡದು ಎಂಬ ಆಶಂಕೆಯನ್ನು ಪರಿಹರಿಸಲು ಸೂತ್ರಕಾರರು ಅನಾರಬ್ಧಕಾರ್ಯೇ ಏವ ತು ಪೂರ್ವೇ ತದವಧೇಃ

ಎಂದು ಹೇಳಿದ್ದಾರೆ. ಹಾಗಾದರೆ ಪ್ರಾರಬ್ಧಕರ್ಮವಿರಲಿಕ್ಕೆ ಮೋಕ್ಷವು ಹೇಗೆ ಆಗುವುದೆಂದು ಆಶಂಕಿಸಿ, ಓಂ ಭೋಗೇನ ತ್ವಿತರೇ ಕ್ಷಪಯಿತ್ವಾಥ ಸಂಪತ್ಸ್ಯತೇ ಓಂ ಎಂಬ ಸೂತ್ರವನ್ನು ಹೇಳಿದ್ದಾರೆ. ಇದೂ ಕೂಡ ಬ್ರಹ್ಮಜ್ಞಾನಿಮಾತ್ರ ವಿಷಯಕವಲ್ಲ ಎನ್ನುವ ಅಭಿಪ್ರಾಯದಿಂದ ವ್ಯಾಖ್ಯಾನ ಮಾಡುತ್ತಾರೆ –

**ತತೋ ಭೋಗೇನ ಪುಣ್ಯಂ ಚ ಕ್ಷಪಯಿತ್ವೇತರತ್ತಥಾ ॥ ೬೬ ॥**

**ಬ್ರಹ್ಮದ್ವಿಟ್ ಬ್ರಹ್ಮದರ್ಶೀ ಚ ತಮೋಮೋಕ್ಷಾವವಾಪ್ನುತಃ ।**

ಅನಾರಬ್ಧಕರ್ಮವು ನಾಶವಾದ ನಂತರ ಬ್ರಹ್ಮದ್ವೇಷಿಯೂ ಬ್ರಹ್ಮಜ್ಞಾನಿಯೂ ಕೂಡ ಭೋಗದಿಂದ ಪುಣ್ಯವನ್ನೂ ಹಾಗೆಯೇ ಪಾಪವನ್ನೂ ಕೂಡ ನಾಶಮಾಡಿ ಕೊಂಡು ತಮಸ್ಸನ್ನೂ ಮೋಕ್ಷವನ್ನೂ ಹೊಂದುತ್ತಾರೆ.

ಪ್ರಾರಬ್ಧಕರ್ಮಗಳು ಅನಂತವಾಗಿರಲು ಭೋಗದಿಂದ ನಾಶವು ಶಕ್ಯವಲ್ಲ ಎಂಬ ಆಶಂಕೆಯನ್ನು ಆಗಮ ವಾಕ್ಯದಿಂದ ಪರಿಹರಿಸುತ್ತಾರೆ –

**ಬ್ರಹ್ಮಣಾಂ ಶತಕಾಲಾತ್ತು ಪೂರ್ವಮಾರಬ್ಧಸಂಕ್ಷಯಃ ॥ ೬೭ ॥**
**ಬ್ರಹ್ಮಣಸ್ತ್ವೇವ ತಾವತ್ತ್ವಂ ಪಂಚಾಶದ್ಬ್ರಹ್ಮಣಸ್ತಥಾ ।**
**ರುದ್ರಸ್ಯ ವಿಂಶದೇವ ಸ್ಯಾದಿಂದ್ರಸ್ಯಾರ್ಕಾದಿಕೇ ದಶ ॥ ೬೮ ॥**
**ಅನ್ಯೇಷಾಂ ಬ್ರಹ್ಮಮಾತ್ರಸ್ಯ ತ್ವಂತ ಆರಬ್ಧಸಂಕ್ಷಯಃ ।**
**ಬ್ರಹ್ಮಣೈವ ಸಹಾತಶ್ಚ ಪರಂ ನಾರಾಯಣಂ ವ್ರಜೇತ್ ॥ ೬೯ ॥**
**ಇತಿ ಸತ್ತತ್ತ್ವವಚನಂ ಸ್ವಯಂ ಭಗವತೋದಿತಮ್ ।**

ನೂರು ಬ್ರಹ್ಮರ ಕಾಲವು ಪೂರ್ತಿಯಾಗುವುದಕ್ಕಿಂತ ಮುಂಚೆಯೇ ಎಲ್ಲ ಜ್ಞಾನಿಗಳ ಪ್ರಾರಬ್ಧಕರ್ಮಕ್ಕೆ ವಿನಾಶವು. ಇದನ್ನೇ ವಿವರಿಸುತ್ತಾರೆ – ಚತುರ್ಮುಖ ಬ್ರಹ್ಮನಿಗೆ ನೂರು ಬ್ರಹ್ಮಕಲ್ಪಗಳಲ್ಲಿಯೇ ಪ್ರಾರಬ್ಧಕರ್ಮದ ಕ್ಷಯವು. ರುದ್ರನಿಗೆ ಐವತ್ತು ಬ್ರಹ್ಮಕಲ್ಪಗಳ ಅಂತ್ಯದಲ್ಲಿಯೂ, ಇಂದ್ರನಿಗೆ ಇಪ್ಪತ್ತು ಬ್ರಹ್ಮಕಲ್ಪಗಳಲ್ಲಿಯೂ ಹಾಗೂ ಸೂರ್ಯನಿಗೆ ಹತ್ತು ಬ್ರಹ್ಮಕಲ್ಪಗಳಲ್ಲಿಯೂ ಪ್ರಾರಬ್ಧ ಕರ್ಮದ ಕ್ಷಯವು ಆಗುವುದು. ಇತರರಿಗೆ ಒಂದೇ ಬ್ರಹ್ಮಕಲ್ಪದ ಅಂತ್ಯಕ್ಕೆ ಪ್ರಾರಬ್ಧಕರ್ಮದ ಕ್ಷಯವು. ಪ್ರಾರಬ್ಧಕರ್ಮವು ಸಂಪೂರ್ಣ ನಾಶವಾದ ಮೇಲೂ ಬ್ರಹ್ಮನಿಂದ ಕೂಡಿಕೊಂಡೇ ಎಲ್ಲರೂ ನಾರಾಯಣನನ್ನು ಹೊಂದತಕ್ಕುದು. ಹೀಗೆ ಸಾಕ್ಷಾತ್ತಾಗಿ ಭಗವಂತನಿಂದ ಹೇಳಲ್ಪಟ್ಟ ಸತ್ತತ್ವವಚನವಿದೆ.

॥ ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತೇ
ಶ್ರೀಮದನುವ್ಯಾಖ್ಯಾನೇ ಚತುರ್ಥಾಧ್ಯಾಯಸ್ಯ ಪ್ರಥಮಃ ಪಾದಃ ॥
॥ ಇಲ್ಲಿಗೆ ಶ್ರೀಮದನುವ್ಯಾಖ್ಯಾನದ ನಾಲ್ಕನೆಯ ಅಧ್ಯಾಯ ಮೊದಲನೆಯ ಪಾದದ
ಶ್ರೀಮನ್ನ್ಯಾಯಸುಧಾನುಸಾರಿ ಕನ್ನಡಾನುವಾದವು ಮುಕ್ತಾಯವಾಯಿತು ॥

# ನಾಲ್ಕನೆಯ ಅಧ್ಯಾಯ ಎರಡನೆಯ ಪಾದ

ಪ್ರಥಮಪಾದದಲ್ಲಿ ಕರ್ಮಕ್ಷಯವು ಹೇಳಲ್ಪಟ್ಟಿದೆ. ಈಗ ದ್ವಿತೀಯ ಪಾದದಲ್ಲಿ ಉತ್ಕ್ರಾಂತಿಯು ಹೇಳಲ್ಪಡುತ್ತದೆ. ಉತ್ಕ್ರಾಂತಿಮಾರ್ಗಗಳು ಕರ್ಮಕ್ಷಯದಂತೆ ದೇವಮನುಷ್ಯ ಸಾಧಾರಣಗಳಲ್ಲ. ಹೇಗೆಂದರೆ –

**ದೇವಾನಾಂ ಚ ಮನುಷ್ಯಾಣಾಮೇತಾವತ್ಸಮಮೇವ ಹಿ ।**

**ಉತ್ಕ್ರಾಂತಿಮಾರ್ಗೌ ದೇವಾನಾಂ ನ ಪ್ರಾಯೇಣ ಭವಿಷ್ಯತಃ ॥ ೧ ॥**

ಪ್ರಥಮಪಾದದಲ್ಲಿ ವಿಚಾರ ಮಾಡಲ್ಪಟ್ಟ ಕರ್ಮನಾಶಾಖ್ಯ ಫಲವು ದೇವತೆಗಳು ಹಾಗೂ ಮುನಷ್ಯರಿಗೂ ಕೂಡ ಸಮವೇ ಆಗಿದೆ. ಈ ಪಾದದಲ್ಲಿ ಪ್ರತಿಪಾದಿತವಾದ ದೇಹದಿಂದ ಉತ್ಕ್ರಾಂತಿಯೂ ಹಾಗೂ ಮೂರನೆಯ ಪಾದದಲ್ಲಿ ಪ್ರತಿಪಾದಿತವಾದ ಅರ್ಚಿರಾದಿ ಮಾರ್ಗವೂ ದೇವತೆಗಳಿಗೆ ಪ್ರಾಯಶಃ ಆಗುವುದಿಲ್ಲ. ಆದುದರಿಂದ ವಿಭಾಗದಿಂದ ಉಕ್ತಿಯು ಅಸಂಗತವಲ್ಲ.

ಹಾಗಾದರೆ ಮಾರ್ಗ ಉತ್ಕ್ರಾಂತಿಗಳು ಪ್ರತಿಪಾದ್ಯವಾಗಲಿ. ಇದನ್ನು ಪ್ರತಿಪಾದಿಸುವ ವಿಷಯದಲ್ಲಿ ಸಂಗತಿಯು ಯಾವುದು ಎಂದರೆ, ಪ್ರಸಂಗ ಬಂದಿರುವುದರಿಂದ ನಾಲ್ಕು ಪಾದಗಳಿಗೂ ಸಂಗತಿಯನ್ನು ಹೇಳುತ್ತಾರೆ –

**ಕರ್ಮಕ್ಷಯಸ್ತಥೋತ್ಕ್ರಾಂತಿರ್ಮಾರ್ಗೌ ಭೋಗಶ್ಚತುಷ್ಟಯಮ್ ।**

**ಫಲಂ ಮೋಕ್ಷ ಇತಿ ಪ್ರೋಕ್ತಂ ಕ್ರಮಾತ್ಪಾದೇಷು ಚೋದಿತಮ್ ॥ ೨ ॥**

ಕರ್ಮಕ್ಷಯ, ಉತ್ಕ್ರಾಂತಿ, ಮಾರ್ಗ ಹಾಗೂ ಬ್ರಹ್ಮಪ್ರಾಪ್ತಿ, ಭೋಗ ಹೀಗೆ ನಾಲ್ಕು ವಿಧವಾದ ಫಲವು ಮೋಕ್ಷವೆಂದು ಹೇಳಲ್ಪಟ್ಟಿದೆ. ಇವುಗಳು ಕ್ರಮದಿಂದ ನಾಲ್ಕು ಪಾದಗಳಲ್ಲಿ ಹೇಳಲ್ಪಟ್ಟಿವೆ.

ದೇವತೆಗಳಿಗೆ ಮಾರ್ಗವಿಲ್ಲವೆಂದು ಹಿಂದೆ ಹೇಳಿದೆ. ಹಾಗಾದರೆ ಅವರು ಎಲ್ಲಿರುತ್ತಾರೋ ಅಲ್ಲಿಯೇ ಮುಕ್ತರಾಗುತ್ತರೋ ಹೇಗೆ ಎಂದರೆ –

**ಸ್ರಷ್ಟೃಷ್ವೇವ ಚ ಸೃಜ್ಯಾನಾಂ ಪ್ರವೇಶೋ ಬ್ರಹ್ಮಣೋ ಲಯೇ ।**

**ದೇವಾನಾಂ ಮಾರ್ಗ ಉದ್ದಿಷ್ಟೋ ನಾರ್ಚಿರಾದಿರ್ನ ಚೋತ್ಕ್ರಮಃ ॥ ೩ ॥**

ಚತುರ್ಮುಖನಿಗೆ ಲಯವು ಇನ್ನೇನು ಆಗಲಿದೆ ಎನ್ನುವಾಗ, ಸೃಷ್ಟರಾದವರಿಗೆ ಸೃಷ್ಟಿ ಮಾಡಿದವರಲ್ಲಿ ಪ್ರವೇಶವೇ ದೇವತೆಗಳಿಗೆ ಮಾರ್ಗವು ಎಂದು ಹೇಳಲ್ಪಟ್ಟಿದೆ. ಲಯವು ಸಮೀಪಿಸುತ್ತಿರಲು ಬ್ರಹ್ಮನ ಪ್ರವೇಶಕ್ಕೆ ಅನುಸರಣೆಯೇ ದೇವತೆಗಳಿಗೆ

ಮಾರ್ಗಗಮನವು. ಅವರಿಗೆ ಅರ್ಚಿರಾದಿ ಮಾರ್ಗವೂ ದೇಹದಿಂದ ಉತ್ಕ್ರಮಣವೂ ಇರುವುದಿಲ್ಲ. ಅವರು ದೇಹಸಹಿತರಾಗಿಯೇ ಇರುತ್ತಾರೆ.

ಇದನ್ನೇ ವಿವರಿಸುತ್ತಾರೆ –

**ಸ್ರಷ್ಟುಸ್ತು ಗ್ರಾಸಭೂತಸ್ಯ ದೇಹಸ್ತತ್ರ ಲಯಂ ವ್ರಜೇತ್ ।**

**ಯತಃ ಸೃಜ್ಯಸ್ಯ ದೇವಸ್ಯ ನೈವೋತ್ಕ್ರಾಂತಿಸ್ತತೋ ಭವೇತ್ ॥ ೪ ॥**

ಚೇತನದಿಂದ ಅಧಿಷ್ಠಿತವೇ ಆದ ದೇವತೆಗಳ ದೇಹವಾದರೂ ಸ್ರಷ್ಟುವಿಗೆ ಗ್ರಾಸಭೂತವಾಗಿರುವ ನಿಮಿತ್ತ ಆ ಸ್ರಷ್ಟುವಿನಲ್ಲಿಯೇ ಲಯವನ್ನು ಹೊಂದುವುದು. ಅಂದರೆ ಚೇತನವು ನಿಷ್ಕ್ರಮಣವಾಗುವ ಮುಂಚೆಯೇ ದೇವತೆಗಳ ದೇಹವು ಸ್ರಷ್ಟುವಿನಲ್ಲಿ ವಿಲೀನವಾಗುವುದು. ಆದ್ದರಿಂದ ಸೃಷ್ಟಿಮಾಡಲಿಕ್ಕೆ ಯೋಗ್ಯರಾದ ದೇವತೆಗಳಿಗೆ ದೇಹದಿಂದ ಉತ್ಕ್ರಮಣವು ಆಗುವುದೇ ಇಲ್ಲ.

ದೇವತೆಗಳಿಗೆ ಅರ್ಚಿರಾದಿ ಮಾರ್ಗವಿಲ್ಲವೆಂದು ಉಕ್ತವಾಗಿದೆ. ಅದು ಯಾವ ಕಾರಣದಿಂದ ಎಂದರೆ ಯುಕ್ತ್ಯಂತರವನ್ನು ಹೇಳುತ್ತಾರೆ –

**ಲಯಾಚ್ಚೈವಾರ್ಚಿರಾದೀನಾಂ ಲೋಕಾನಾಮಪಿ ಸರ್ವಶಃ ।**

**ಕಥಂ ಮಾರ್ಗೋ ಭವೇತ್ತೇಷಾಂ ವಿಶತಾಮುತ್ತರಂ ಸ್ವತಃ ॥ ೫ ॥**

ದೇವತೆಗಳಿಗೆ ಮುಕ್ತಿಯಾಗುವದಕ್ಕಿಂತ ಮುನ್ನವೇ ಅರ್ಚಿರಾದಿ ಮಾರ್ಗಗಳಿಗೂ ಎಲ್ಲ ಲೋಕಗಳಿಗೂ ಕೂಡ ನಾಶವು ಪ್ರಾಪ್ತವಾಗಿರುವುದು. ಆದಕಾರಣ ತಮ್ಮಿಂದ ಉತ್ತಮರಲ್ಲಿ ಲಯವನ್ನು ಹೊಂದುವ ಆ ದೇವತೆಗಳಿಗೆ ಅರ್ಚಿರಾದಿ ಮಾರ್ಗವೂ ಲೋಕವೂ ಹೇಗೆ ಆಗುವುದು?

ಹಾಗಾದರೆ ಪ್ರಾಯೇಣ ಎಂದು ಹೇಳಿರುವುದರಿಂದ ಕೆಲವು ಸಲ ದೇವತೆಗಳಿಗೆ ಉತ್ಕ್ರಾಂತಿ ಮಾರ್ಗಗಳನ್ನು ಅಂಗೀಕರಿಸಬೇತು. ಅಲ್ಲಿ ಹೇಳಿದ ಯುಕ್ತಿವಿರೋಧವು ಯಾವುದೆಂದರೆ –

**ಜಾತಾನಾಂ ಮಾನುಷೇ ಲೋಕೇ ದೇವಾನಾಂ ತು ಕದಾಚನ ।**

**ಉತ್ಕ್ರಾಂತಿಮಾರ್ಗೌ ಭವತೋ ನ ತದಾ ಮುಕ್ತಿರಿಷ್ಯತೇ ॥ ೬ ॥**

ಮನಷ್ಯಲೋಕದಲ್ಲಿ ಹುಟ್ಟಿರತಕ್ಕ ದೇವತೆಗಳಿಗೆ ಯಾವಾಗಲೂ ಉತ್ಕ್ರಾಂತಿ ಮಾರ್ಗಗಳು ಆಗುತ್ತವೆಯಾದರೂ ಆಗ ಮುಕ್ತಿಯು ಅಂಗೀಕರಿಸಲ್ಪಡುವುದಿಲ್ಲ. ಮತ್ತೆ ಬ್ರಹ್ಮನಿಂದ ಕೂಡಿಕೊಂಡೇ ಮುಕ್ತಿಯು. ಆದ್ದರಿಂದ ಹಿಂದೆ ಹೇಳಿದ ಯುಕ್ತಿಯಿಂದ ವಿರೋಧವಿಲ್ಲ. ಹೇಗೆಂದರೆ– ಅಲ್ಲಿ ಸಾಮಾನ್ಯವಾದ ಉತ್ಕ್ರಾಂತಿಮಾರ್ಗಗಳ ಅಪೇಕ್ಷೆಯಿಂದ ಪ್ರಾಯೇಣ ಎಂದು ಹೇಳಲಾಗಿದೆ. ಮುಕ್ತಿಕಾಲದಲ್ಲಿನ ಉತ್ಕ್ರಾಂತಿ ಮಾರ್ಗಗಳ ಅಪೇಕ್ಷೆಯಿಂದಲ್ಲ. ಅಲ್ಲಿ ಹೇಳಿದ ಯುಕ್ತಿಯು ಮುಕ್ತಿವಿಷಯಕವು.

ಆದ್ದರಿಂದ ಯುಕ್ತಿವಿರೋಧವಿಲ್ಲವೆಂದು ತಾತ್ಪರ್ಯ.

ಹಾಗಾದರೆ ದೇವತೆಗಳಿಗೆ ಮಾತ್ರವೇ ಬ್ರಹ್ಮನಿಂದ ಕೂಡಿಕೊಂಡು ಮುಕ್ತಿಯೋ ಏನು ಎಂದರೆ, ಇತರರಿಗೂ ಬ್ರಹ್ಮನಿಂದ ಕೂಡಿಕೊಂಡೇ ಮುಕ್ತಿಯು ಎನ್ನುತ್ತೇವೆ. ಹಾಗಾದರೆ 'ಭೇಜೇ ಖಗೇಂದ್ರಧ್ವಜಪಾದಮೂಲಂ' ಇತ್ಯಾದಿಗಳಿಂದ ವಿರೋಧವು ಎಂದರೆ –

**ಅನ್ಯೇಷಾಮಪಿ ಸಾಕ್ಷಾತ್ತು ಮುಕ್ತಿಃ ಪ್ರಾಪ್ಯಾಪಿ ತಂ ಹರಿಮ್ ।**

**ಸಹೈವ ಬ್ರಹ್ಮಣಾ ಭೂಯಾದಿತಿ ಶಾಸ್ತ್ರಸ್ಯ ನಿರ್ಣಯಃ ॥ ೭ ॥**

ಇತರರಿಗೂ ಕೂಡ ಅಂದರೆ ವೈಕುಂಠಾದಿ ಸ್ಥಾನಗಳಲ್ಲಿರತಕ್ಕ ಶ್ರೀಹರಿಯನ್ನು ಹೊಂದಿ ಇರುವವರಿಗೂ ಕೂಡ ಬ್ರಹ್ಮನಿಂದ ಕೂಡಿಕೊಂಡೇ ಲಿಂಗದೇಹ ಭಂಗ ರೂಪವಾದ ಮುಕ್ತಿಯು ಆಗವುದು. ಹೀಗೆ ಶಾಸ್ತ್ರದ ನಿರ್ಣಯ.

ಇತಿ ಶಾಸ್ತ್ರಸ್ಯ ನಿರ್ಣಯಃ ಎಂದು ಹೇಳಿದ್ದನ್ನೇ ವಿವರಿಸುತ್ತಾರೆ –

**ಕ್ಷ್ಮಾಂಭೋಽನಲಾನಿಲವಿಯನ್ಮನಇಂದ್ರಿಯಾರ್ಥ–**

**ಭೂತಾದಿಭಿಃ ಪರಿವೃತಃ ಪ್ರತಿಸಂಜಿಘೃಕ್ಷುಃ ।**

**ಅವ್ಯಾಕೃತಂ ವಿಶತಿ ಯರ್ಹಿ ಗುಣತ್ರಯಾತ್ಮಾ**

**ಕಾಲಂ ಪರಂ ಸ್ವಮನುಭೂಯ ಪರಃ ಸ್ವಯಂಭೂಃ ॥ ೮ ॥**

**ಏವಂ ಪರೇತ್ಯ ಭಗವಂತಮನುಪ್ರವಿಷ್ಟಾಃ**

**ಯೇ ಯೋಗಿನೋ ಜಿತಮರುನ್ಮನಸೋ ವಿರಾಗಾಃ ।**

**ತೇನೈವ ಸಾಕಮಮೃತಂ ಪುರುಷಂ ಪುರಾಣಂ**

**ಬ್ರಹ್ಮಪ್ರಧಾನಮುಪಯಾಂತ್ಯಗತಾಭಿಮಾನಾಃ ॥ ೯ ॥**

ಗುಣತ್ರಯಾಭಿಮಾನಿಯೂ ಪೃಥಿವ್ಯಾದಿ ಅಭಿಮಾನಿಗಳಿಗಿಂತ ಉತ್ತಮನೂ ಆದ ಚತುರ್ಮುಖ ಬ್ರಹ್ಮನು ಪರಸಂಖ್ಯಾಕವಾದ ತನ್ನ ಕಾಲವನ್ನು ಅನುಭವಿಸಿ, ಸರ್ವ ಸಂಹಾರವನ್ನು ಮಾಡಲು ಇಚ್ಛಿಸಿ, ಪೃಥಿವೀ, ಜಲ, ಅಗ್ನಿ, ವಾಯು, ಆಕಾಶ, ಮನಸ್ಸು, ಇಂದ್ರಿಯಗಳು, ವಿಷಯಗಳು, ಭೂತಗಳಿಗೆ ಕಾರಣವಾದ ಅಹಂಕಾರತತ್ತ್ವ ಇವುಗಳಿಗೆ ಅಭಿಮಾನಿಗಳಾದ ದೇವತೆಗಳಿಂದ ಕೂಡಿಕೊಂಡು ನಿರ್ವಿಕಾರನಾದ ಪರಬ್ರಹ್ಮನನ್ನು ಪ್ರವೇಶ ಮಾಡುವನು. ಆಗ ಆ ಬ್ರಹ್ಮನೊಂದಿಗೆ ಭಗವಂತನ ಲೋಕವನ್ನು ಯಾವ ಯೋಗಿಗಳು ಪ್ರವೇಶ ಮಾಡಿರುವರೋ, ಅವರು ವಾಯು–ಮನೋಜಯವನ್ನು ಸಾಧಿಸಿ ರಾಗರಹಿತರಾಗುವರು. ಅವರು ಜೀವಭಾವವನ್ನು ಕಳೆದುಕೊಂಡು ಮರಣರಹಿತವಾದ ಷಡ್ಗುಣಪೂರ್ಣನಾದ ಸರ್ವೋತ್ತಮನಾದ ಪರಬ್ರಹ್ಮನನ್ನು ಹೊಂದುತ್ತಾರೆ.

**ಭಗವಂತಮನುಪ್ರಾಪ್ತಾ ಅಪಿ ತು ಬ್ರಹ್ಮಣಾ ಸಹ ।**

**ಪರಮಂ ಮೋಕ್ಷಮಾಯಾಂತಿ ಲಿಂಗಭಂಗೇನ ಯೋಗಿನಃ ॥ ೧೦ ॥**

**ಪ್ರಾಪ್ತಾ ಅಪಿ ಪರಂ ದೇವಂ ಸಹೈವ ಬ್ರಹ್ಮಣಾ ಪುನಃ ।**

**ಆನಂದವ್ಯಕ್ತಿಮಾಯಾಂತಿ ಪೂರ್ಣಾ ಲಿಂಗಸ್ಯ ಭಂಗತಃ ॥ ೧೧ ॥**

**ಇತಿ ಶ್ರುತಿಪುರಾಣೋಕ್ತಿಬಲಾದ್ವಿಜ್ಞಾಯತೇ ಚ ತತ್ ।**

ಯೋಗಿಗಳು ಭಗವಂತನನ್ನು ಹೊಂದಿದವರೇ ಆಗಿದ್ದರೂ ಕೂಡ ಮತ್ತೆ ಚತುರ್ಮುಖನಿಂದ ಕೂಡಿಕೊಂಡೇ ಲಿಂಗಭಂಗದಿಂದ ಪೂರ್ಣಾನಂದಾಭಿವ್ಯಕ್ತಿ ರೂಪವಾದ ಶ್ರೇಷ್ಠವಾದ ಮುಕ್ತಿಯನ್ನು ಹೊಂದುತ್ತಾರೆ. ಹೀಗೆ ಶ್ರುತಿ ಪುರಾಣಗಳ ಉಕ್ತಿಯ ಬಲದಿಂದ ಹಿಂದೆ ಹೇಳಿದ ಪ್ರಮೇಯವು ತಿಳಿಯಲ್ಪಡುತ್ತದೆ.

ಹಾಗಾದರೆ ದ್ವಿತೀಯ ಮತ್ತು ತೃತೀಯ ಪಾದಗಳಲ್ಲಿ ಪ್ರತಿಪಾದ್ಯವಾದ ಉತ್ಕ್ರಮಣಾದಿಗಳಂತೆಯೇ ಚತುರ್ಥಪಾದೋಕ್ತ ಭೋಗವೂ ಅಸಾಧಾರಣವೋ ಎಂದು ಕೇಳಿದರೆ –

**ಭೋಗಸ್ತು ಸರ್ವದೇವಾನಾಂ ನರಾದೀನಾಂ ಚ ವಿದ್ಯತೇ ॥ ೧೨ ॥**

ಭೋಗವಾದರೂ ಎಲ್ಲ ದೇವತೆಗಳಿಗೂ ಮನುಷ್ಯರೇ ಮೊದಲಾದವರಿಗೂ ಇರುತ್ತದೆ.

ಈ ಪಾದದ ಸೂತ್ರಭಾಷ್ಯದ ಪ್ರಥಮದಲ್ಲಿ ದೇವತೆಗಳಿಗೆ ಮೋಕ್ಷವೆಂದು ಹೇಳಲಾಗಿದೆ. ಅದರ ತಾತ್ಪರ್ಯವನ್ನು ಇಲ್ಲಿ ಹೇಳುತ್ತಾರೆ –

**ತತ್ರ ಪ್ರವೇಶೋ ದೇವಾನಾಮುತ್ತರೋತ್ತರತಃ ಕ್ರಮಾತ್ ।**

**ಉಚ್ಯತೇ .............................. ॥**

ಎರಡನೆಯ ಪಾದದಲ್ಲಿ ಪ್ರಾರಂಭದಲ್ಲಿ ದೇವತೆಗಳಿಗೆ ಉತ್ತರೋತ್ತರದಲ್ಲಿ ಕ್ರಮದಿಂದ ಪ್ರವೇಶವು ಹೇಳಲ್ಪಡುವುದು. ಆದಕಾರಣ ಭಾಷ್ಯದಲ್ಲಿ ಇದು ಪ್ರಥಮದಲ್ಲಿ ನಿರೂಪಿತವಾಗಿದೆ.

ದೇವತೆಗಳಿಗೆ ಉತ್ತರೋತ್ತರದಲ್ಲಿ ಪ್ರವೇಶವು ಹೇಳಲ್ಪಟ್ಟಿದೆ ಎನ್ನುವುದು ಯುಕ್ತವಲ್ಲ. ಏಕೆಂದರೆ ವಾಙ್ಮನಸಿ ಇತ್ಯಾದಿ ಸೂತ್ರಗಳಲ್ಲಿ ದೇವತೆಗಳು ಶ್ರುತವಾಗಿಲ್ಲ ಎಂದರೆ –

**........... ದೇಹಗಾನಾಂ ಚ ವೃತ್ತೀನಾಮೇವಮೇವ ತು ॥ ೧೩ ॥**

ದೇಹದಲ್ಲಿರತಕ್ಕ ಜಡಗಳಾದ ವಾಗಾದಿಗಳಿಗೆ (ವರ್ತತೇ ಏತಾದಿಭಿಃ ಎಂಬ ವ್ಯುತ್ಪತ್ತಿಯಿಂದ ವೃತ್ತಯಃ ಎಂದರೆ ಜಡಗಳಾದ ವಾಗಾದಿಗಳು) ಇದೇರೀತಿಯಲ್ಲಿ

ಉತ್ತರೋತ್ತರ ಕ್ರಮದಿಂದ ಲಯವು. ಇಲ್ಲಿ ಜಡಭೂತಗಳಾದ ವಾಗಾದಿಗಳು ಅಭಿಮಾನಿ ದೇವತೆಗಳ ಅಧೀನವಾದ್ದರಿಂದ ವಾಗಾದಿ ಶಬ್ದಗಳಿಂದ ಅಭಿಮಾನಿ ದೇವತೆಗಳನ್ನೂ ತೆಗೆದುಕೊಳ್ಳಬೇಕು ಎಂಬುದನ್ನು ತು ಶಬ್ದದಿಂದ ಸೂಚಿಸಿದ್ದಾರೆ.

ಕರ್ಮಕ್ಷಯಸ್ತಥೋತ್ಕ್ರಾಂತಿಃ ಇತ್ಯಾದಿಯಾಗಿ ಹಿಂದೆ ಹೇಳಲ್ಪಟ್ಟ ಮೋಕ್ಷ ಸ್ವರೂಪವು ನಿಶ್ಚಿತವಾಗಿಲ್ಲ. ಏಕೆಂದರೆ ನಾನಾ ವಾದಿಗಳು ಮೋಕ್ಷಸ್ವರೂಪವನ್ನು ನಾನಾ ರೀತಿಯಿಂದ ವರ್ಣಿಸಿರುವರು. ಆದ್ದರಿಂದ ಈ ಪಾದಾರ್ಥವೂ ಸಂಗತಿಯೂ ಕೂಡುವುದಿಲ್ಲ ಎಂದರೆ –

**ತತ್ರ ಮೋಕ್ಷಸ್ವರೂಪಂ ತು ವಾದಿನಃ ಪ್ರತಿಭಾಶ್ರಯಾತ್ ।**

**ನಾನಾ ವದಂತಿ ಪುಂಸಾಂ ಹಿ ಮತಯೋ ಗುಣಭೇದತಃ ।। ೧೪ ।।**

**ಪೃಥಕ್ ಪೃಥಕ್ ಪ್ರಜಾಯಂತೇ ತಮಸೈವಾನ್ಯಥಾಮತಿಃ ।**

**ರಜಸಾ ಮಿಶ್ರಬುದ್ಧಿತ್ವಂ ಸತ್ತ್ವೇನೈವ ಯಥಾಮತಿಃ ।। ೧೫ ।।**

ಸೂತ್ರಕಾರರಿಂದ ಹಿಂದೆ ಹೇಳಲ್ಪಟ್ಟ ಮೋಕ್ಷಸ್ವರೂಪವು ಶ್ರುತ್ಯಾದಿ ಪ್ರಮಾಣ ಗಳಿಂದ ಉಪಪಾದಿತವಾಗಿದೆ. ನಾನಾ ವಾದಿಗಳಾದರೂ ತಮ್ಮ ತಮ್ಮ ಪ್ರಜ್ಞೆಯನ್ನು ಆಶ್ರಯಿಸಿ ನಾನಾ ಪ್ರಕಾರವಾಗಿ ಮೋಕ್ಷಸ್ವರೂಪವನ್ನು ಹೇಳುತ್ತಾರೆ. ಅವುಗಳಿಗೆ ಶ್ರುತಿಗಳ ಬೆಂಬಲವಿಲ್ಲದ ಪ್ರಯುಕ್ತ ಅವು ಪ್ರಮಾಣವಲ್ಲ. ಮೋಕ್ಷ ವಿಷಯಕವಾಗಿ ನಾವು ನೀಡಿರುವ ವಿವರಣೆ ಶ್ರುತ್ಯನುಸಾರವಾದುದರಿಂದ ಪ್ರಮಾಣವು. ನಾನಾ ವಾದಿಗಳಲ್ಲಿ ಮೋಕ್ಷದ ವಿಷಯದಲ್ಲಿರತಕ್ಕ ಮತಭೇದಕ್ಕೆ ಆ ಪುರುಷರಲ್ಲಿರುವ ಮತಿಭೇದವೇ ಕಾರಣ. ಗುಣವಿಶೇಷ ನಿಮಿತ್ತಕವಾಗಿ ನಾನಾರೀತಿಯ ಮತಿಭೇದವು ಹುಟ್ಟುತ್ತದೆ ('ಜ್ಞಾನಂ ಕರ್ಮ ಚ ಕರ್ತಾ ಚ ತ್ರಿಧೈವ ಗುಣಭೇದತಃ। ಪ್ರೋಚ್ಯತೇ ಗುಣಸಂಖ್ಯಾನೇ ಯಥಾವಚ್ಛೃಣು ತಾನ್ಯಪಿ' ಹೀಗೆ ಗೀತೆಯ ಕೊನೆಯ ಅಧ್ಯಾಯ ದಲ್ಲಿ ಜ್ಞಾನಕರ್ಮಕರ್ತೃಗಳಲ್ಲಿ ಸಾತ್ವಿಕ ರಾಜಸ ತಾಮಸ ಭೇದದಿಂದ ಪ್ರತ್ಯೇಕವಾಗಿ ಮೂರು ವಿಧವೆಂದು ಹೇಳಲ್ಪಟ್ಟಿದೆ.). ಗುಣತ್ರೈವಿಧ್ಯಕ್ಕೆ ಅನುಗುಣವಾಗಿ ಜ್ಞಾನವು ಯಥಾರ್ಥಜ್ಞಾನ, ಮಿಶ್ರಜ್ಞಾನ ಹಾಗೂ ಮಿಥ್ಯಾಜ್ಞಾನ ಎಂದು ಮೂರು ವಿಧವು. ತಮೋಗುಣವು ಮಿಥ್ಯಾಜ್ಞಾನಕ್ಕೆ ಕಾರಣವಾದರೆ, ರಜೋಗುಣದಿಂದ ಮಿಶ್ರ ಅಥವಾ ಸಂಶಯಾತ್ಮಕವಾದ ಜ್ಞಾನವು ಹುಟ್ಟುತ್ತದೆ. ಸತ್ವಗುಣವು ಯಥಾರ್ಥಜ್ಞಾನಕ್ಕೆ ಕಾರಣವಾಗುತ್ತದೆ.

ಯಥಾರ್ಥಜ್ಞಾನವು ಸತ್ವಗುಣದಿಂದ ಆಗುತ್ತದೆ ಎಂದು ಹೇಳಲಾಯಿತು. ಆದಕ್ಕೆ ಮುಕ್ತರ ವಿಷಯದಲ್ಲಿ ಅಪವಾದವನ್ನು ಹೇಳುತ್ತಾರೆ –

**ಗುಣಾತೀತಾ ವಿಮುಕ್ತಾನಾಂ ಮತಿಃ ಶುದ್ಧಚಿತಿರ್ಯತಃ ।**

**ಸಮ್ಯಗೇವಾಥ ನಿತ್ಯಾ ಚ ತತ್ತನ್ಮಾಹಾತ್ಮ್ಯಯೋಗತಃ ।। ೧೬ ।।**

**ಬಹುಲಾ ಚಾತಿವಿಶದಾ ..................... ।**

ಮುಕ್ತರ ಜ್ಞಾನವು ಯಥಾರ್ಥವೇ ಆಗಿದ್ದರೂ ಸತ್ವಗುಣದಿಂದ ಹುಟ್ಟಿದ್ದು ಆಗುವುದಿಲ್ಲ. ಏಕೆಂದರೆ ಅದು ಸ್ವಾಭಾವಿಕವಾಗಿ ದೋಷರಹಿತವೂ ನಿತ್ಯವೂ ಆಗಿದೆ. ಮುಕ್ತರ ಜ್ಞಾನವು ಆವರವರ ಯೋಗ್ಯತಗೆ ಅನುಗುಣವಾದ ಮಾಹಾತ್ಮ್ಯವನ್ನು ಹೊಂದಿರುವುದು. ಅಂದರೆ ಯೋಗ್ಯತೆಗೆ ತಕ್ಕಂತೆ ಅವರ ಜ್ಞಾನವು ಬಹ್ವರ್ಥ ವಿಷಯಕವೂ ಹಾಗೂ ಅತ್ಯಂತ ಸ್ಪಷ್ಟವೂ ಆಗಿರುವುದು.

**......................... ಸ್ಪಷ್ಟಾ ಚೈವ ಶ್ರಿಯೋ ಮತಿಃ ।**

**ಮಹಾಶುದ್ಧಚಿತಿತ್ವೇನ .................. ॥**

ಲಕ್ಷ್ಮೀದೇವಿಯ ಜ್ಞಾನವು ಮಹಾಶುದ್ಧಚೈತನ್ಯಾತ್ಮಕವು. ಆದ್ದರಿಂದ ಸತ್ವಗುಣ ಜನ್ಯವಾದುದಲ್ಲ. ಲಕ್ಷ್ಮೀಜ್ಞಾನವು ಯಾವಾಗಲೂ ನಿರ್ದೋಷವೂ ಯಥಾರ್ಥವೂ ಆಗಿರುವುದು. ಅದು ಬಹುವಿಶೇಷಾರ್ಥಕವೂ, ಎಲ್ಲ ಮುಕ್ತರಿಗಿಂತ ಅತಿಶಯವಾಗಿ ಸ್ಪಷ್ಟವೂ ಆಗಿರುವುದು.

**................ ತತೋಽಪ್ಯತಿಮಾಹಾಚಿತಿಃ ॥ ೧೭ ॥**

**ಅಶೇಷೋರುವಿಶೇಷಾಣಾಮತಿಸ್ಪಷ್ಟತಯಾ ದೃಶಿಃ ।**

**ನಿತ್ಯಮೇಕಪ್ರಕಾರಾ ಚ ನಾರಾಯಣಮತಿಃ ಪರಾ ॥ ೧೮ ॥**

ಶ್ರೀನಾರಾಯಣನ ಜ್ಞಾನವು ಅತ್ಯಂತ ಯಥಾರ್ಥವು. ಆದರೂ ಸತ್ವಗುಣ ಜನ್ಯವಲ್ಲ. ಲಕ್ಷ್ಮೀಜ್ಞಾನಕ್ಕಿಂತಲೂ ಅತಿಶಯವಾದ ಚೈತನ್ಯಸ್ವರೂಪವು. ಸರ್ವದಾ ದೋಷರಹಿತವು. ಸರ್ವೋತ್ಕೃಷ್ಟವು. ಅನಂತಾನಂತ ಅಶೇಷ ವಿಶೇಷಾರ್ಥಗಳನ್ನು ವಿಷಯೀಕರಿಸುವುದು. ಲಕ್ಷ್ಮೀಜ್ಞಾನಕ್ಕಿಂತಲೂ ಅತಿಶಯವಾಗಿ ಸ್ಪಷ್ಟವು. ನಿತ್ಯವೂ ಏಕಪ್ರಕಾರವಾದುದು. ಉತ್ಪತ್ತಿ ವಿನಾಶಗಳಿಂದ ರಹಿತವು.

ಕೆಲವರು ಈಶ್ವರಜ್ಞಾನವು ಒಂದೇ ಎಂದು ಹೇಳುತ್ತಾರೆ. ಇತರರು ಅನೇಕಗಳು ಎನ್ನುತ್ತಾರೆ. ಅದನ್ನು ಸೂರ್ಯ ಇತ್ಯಾದಿ ವಚನದಿಂದ ವಿವೇಚಿಸುತ್ತಾರೆ –

**ಸೂರ್ಯಪ್ರಭಾವದಖಿಲಂ ಭಾಸಯಂತೀ ನಿರಂತರಾ ।**

**ನಿರ್ಲೇಪಾ ವೀತದೋಷಾ ಚ ನಿತ್ಯಮೇವಾವಿಕಾರಿಣೀ ॥ ೧೯ ॥**

ಈಶ್ವರಜ್ಞಾನವು ನಿರಂತರವಾದುದು ಅಂದರೆ ಸರ್ವಕಾಲದಲ್ಲಿಯೂ ವ್ಯಾಪಿಸಿ ಕೊಂಡು ಇರತಕ್ಕುದು. ಕರ್ಮಸಂಬಂಧ ರಹಿತವಾದುದು. ಯಾವುದೇ ರೀತಿಯ ದೋಷಗಳಿಂದ ರಹಿತವಾದುದು. ನಿರಂತರವಾಗಿ ಎಲ್ಲ ಪದಾರ್ಥಗಳನ್ನು ವಿಷಯೀ ಕರಿಸಿದರೂ ಅವುಗಳ ಸಂಬಂಧದಿಂದ ಸ್ವಲ್ಪವೂ ವಿಕಾರವನ್ನೂ ಹೊಂದುವುದಿಲ್ಲ. ಹೇಗೆಂದರೆ – ಸೂರ್ಯನ ಪ್ರಭೆಯು ಹೇಗೆ ಎಲ್ಲ ವಸ್ತುಗಳನ್ನೂ ಪ್ರಕಾಶಿಸಿದರೂ

ತಾನು ನಿರ್ವಿಕಾರವಾಗಿಯೇ ಇರುವುದೋ ಹಾಗೆ ಎಂದು ತಿಳಿಯಬೇಕು.

ವಿಶೇಷಾಂಸ್ತದ್ಗತಾಂಸ್ತ್ಯಕ್ತ್ವಾ ಪ್ರಾಯಸ್ತಲ್ಲಕ್ಷಣಾ ಶ್ರಿಯಃ ।

ತಥೈವ ಸ್ಪಷ್ಟತಾಭಾವಾತ್ತತ್ತಂತ್ರತ್ವಾತ್ತು ಕೇವಲಮ್ ॥ ೨೦ ॥

ನ ತಾದೃಶೀ........................................ ।

ಲಕ್ಷ್ಮೀಜ್ಞಾನವು ಭಗವದ್ಗತ ಅಶೇಷ ವಿಶೇಷ ವಿಷಯೀಕಾರಿತ್ವವನ್ನು ಬಿಟ್ಟು ಪ್ರಾಯಶಃ ಆ ಭಗವಜ್ಜ್ಞಾನ ಲಕ್ಷಣಗಳನ್ನು ಉಳ್ಳದ್ದು ಎಂದು ತಿಳಿಯತಕ್ಕದ್ದು. ಆ ಜ್ಞಾನವು ಭಗವಜ್ಜ್ಞಾನದಷ್ಟು ಸ್ಪಷ್ಟತೆಯನ್ನು ಹೊಂದಿರುವುದಿಲ್ಲ. ಮುಖ್ಯವಾಗಿ ಭಗವಜ್ಜ್ಞಾನಕ್ಕೆ ಮಾತ್ರ ಅಧೀನವಾದುದು. ಆದ್ದರಿಂದ ಭಗವಜ್ಜ್ಞಾನಕ್ಕೆ ಸದೃಶವಲ್ಲ.

.......... ಬ್ರಹ್ಮಣಸ್ತು ಪ್ರಾಯೇಣೈವಂ ಶ್ರಿಯೋ ಯಥಾ ।

ಚತುರ್ಮುಖ ಬ್ರಹ್ಮನ ಜ್ಞಾನವಾದರೂ ಪ್ರಾಯಶಃ ಲಕ್ಷ್ಮೀಜ್ಞಾನವು ಹೇಗೋ ಹಾಗೆ. ಆದರೆ ಲಕ್ಷ್ಮೀಜ್ಞಾನದಷ್ಟು ಅತಿಶಯಾರ್ಥಕವಿಷಯತ್ವ ಹಾಗೂ ಸ್ಪಷ್ಟತ್ವವನ್ನು ಹೊಂದಿಲ್ಲ.

ಮುಕ್ತಾನಾಂ ತು ತದನ್ಯೇಷಾಂ ಸಮುದ್ರತರಲೋಪಮಾ ॥ ೨೧ ॥

ಅಗ್ನಿಜ್ವಾಲಾವದೇವ ಸ್ಯಾತ್ಸೃತಿಗಾನಾಂ ದೃಶೋ ಭವಃ ।

ಬ್ರಹ್ಮನಿಂದ ಇತರರಾದ ಮುಕ್ತರ ಜ್ಞಾನವಾದರೂ ಸಮುದ್ರದ ಅಲೆಗಳಂತೆ ವೃದ್ಧಿ ಹ್ರಾಸವುಳ್ಳದ್ದು. ಹೇಗೆ ಅಗ್ನಿಜ್ವಾಲೆಗೆ ಅಗ್ನಿಯಿಂದ ಉತ್ಪತ್ತಿಯೋ ಹಾಗೆ ಸಂಸಾರಿಗಳ ಜ್ಞಾನಕ್ಕೆ ಅಂತಃಕರಣ ನಿಮಿತ್ತದಿಂದ ಉತ್ಪತ್ತಿಯು.

ಏವಂ ವಿಧೇಷು ಜ್ಞಾನೇಷು ತಮಸಾ ಮುಷ್ಟದೃಷ್ಟಯಃ ॥ ೨೨ ॥

ಖದ್ಯೋತಸದೃಶಾತ್ಯಲ್ಪಜ್ಞಾನತ್ವಾದನ್ಯಥಾದೃಶಃ ।

ವದಂತಿ ವಾದಿನೋ ಮೋಕ್ಷಂ ನಾನಾಮತಸಮಾಶ್ರಯಾತ್ ॥ ೨೩ ॥

ಜ್ಞಾನಗಳಿಗೆ ಗುಣನಿಮಿತ್ತಕವಾಗಿ ಅನೇಕ ಪ್ರಕಾರತ್ವವು ಕೂಡುತ್ತವೆ. ಹಾಗಿದ್ದರೂ ತಮೋಗುಣದಿಂದ ಯುಕ್ತರಾದ ವಾದಿಗಳು ಪ್ರಮಾಣಗಳನ್ನು ತಿರಸ್ಕರಿಸುತ್ತ ಅನೇಕ ವಿಧವಾದ ಮತಗಳ ಆಶ್ರಯದಿಂದ ಮೋಕ್ಷವನ್ನು ನಾನಾ ವಿಧವಾಗಿ ಹೇಳುತ್ತಾರೆ. ತಮೋಗುಣದಿಂದ ಯಥಾರ್ಥಜ್ಞಾನವು ಅಪಹೃತವಾಗಿರುವುದರಿಂದ ವಾದಿಗಳು ಮಿಂಚುಹುಳಕ್ಕೆ ಸದೃಶವಾದ ಅತ್ಯಲ್ಪವಾದ ಸಾಮಾನ್ಯ ಜ್ಞಾನವನ್ನು ಹೊಂದಿರುವರು. ಆದ್ದರಿಂದಲೇ ಅವರು ಅನ್ಯಥಾಜ್ಞಾನಿಗಳು.

ನಾನಾವಿಧವಾದ ಮೋಕ್ಷವಾದಗಳಲ್ಲಿ ಒಂದು ಪ್ರಮಾಣಮೂಲಕವು, ಇತರವು ಮಿಥ್ಯಾಜ್ಞಾನಮೂಲಕಗಳು ಎಂದು ತಿಳಿದುಬರುವುದು. ಸಿದ್ಧಾಂತಿಗಳು ಹೇಳಿದ

ಮೋಕ್ಷಸ್ವರೂಪವೇ ಪ್ರಮಾಣಮೂಲಕವು ಎಂಬ ವಿಶೇಷವು ತಿಳಿದು ಬರುವುದಿಲ್ಲ. ಮತ್ತೆ ಸಂಶಯವೇ ಹುಟ್ಟುತ್ತದೆ ಎಂದರೆ, ಪರಮತಗಳೆಲ್ಲವೂ ಹೇಯವು ಎಂದು ತೋರಿಸಲಿಕ್ಕಾಗಿ ಮೊದಲು ಜಿನೋದಿತವಾದ ಮೋಕ್ಷಸ್ವರೂಪವನ್ನು ಅನುವಾದ ಮಾಡುತ್ತಾರೆ –

**ಆಶ್ರಿತ್ಯ ಪ್ರತಿಭಾಮಾಹ ಜಿನಸ್ತತ್ರಾತಿತಾಮಸೀಮ್ ।**

**ಜ್ಞಾನಾತ್ಕರ್ಮಕ್ಷಯಾನ್ಮೋಕ್ಷೋ ಭವೇದ್ದೇಹಾಖ್ಯಪಂಜರಾತ್ ॥ ೨೪ ॥**

**ಪಂಜರೋನ್ಮುಕ್ತಖಗವದಲೋಕಾಕಾಶಗೋಚರಃ ।**

**ನಿತ್ಯಮೂರ್ಧ್ವಂ ವ್ರಜತ್ಯೇವ ಪುದ್ಗಲೋ ಹಸ್ತಪಾದವಾನ್ ॥ ೨೫ ॥**

**ಇತಿ ।**

ಆ ವಾದಿಗಳ ಮಧ್ಯದಲ್ಲಿ ಜಿನನು ಅತ್ಯಂತ ತಾಮಸವಾದ (ವೇದಗಳಿಗೆ ಪ್ರಾಮಾಣ್ಯವನ್ನು ಅಂಗೀಕರಿಸದೇ ಇದ್ದುದರಿಂದ) ಪ್ರಜ್ಞೆಯನ್ನು ಆಶ್ರಯಿಸಿಕೊಂಡು ಹೇಳಿದನು. ಏನೆಂದರೆ – ಕೆಲವರಿಗೆ ಜ್ಞಾನದಿಂದಲೂ, ಕೆಲವರಿಗೆ ಭೋಗದಿಂದಲೂ ಕರ್ಮಕ್ಷಯವು. ಹೇಗೆ ಪಕ್ಷಿಗೆ ಪಂಜರದಿಂದ ಬಿಡುಗಡೆಯಾಗುವುದೋ ಹಾಗೆ ಕರ್ಮಕ್ಷಯದ ನಿಮಿತ್ತದಿಂದ ಜೀವನಿಗೆ ದೇಹದಿಂದ ಮುಕ್ತಿಯು ಆಗುವುದು. ಪಂಜರದಿಂದ ಮುಕ್ತವಾದ ಪಕ್ಷಿಯು ಹೇಗೆ ಆಕಾಶದಲ್ಲಿ ಮೇಲೆ ಮೇಲಕ್ಕೆ ಹಾರಿ ಹೋಗುವುದೋ, ಹಾಗೆಯೇ ಜೀವನು ಹಸ್ತಪಾದಾದಿ ಯುಕ್ತವಾದ ಚರಮ ದೇಹದಿಂದ ಯುಕ್ತನಾಗಿ ನಿರಂತರದಲ್ಲಿಯೂ ಅಲೋಕಾಕಾಶವನ್ನೇ ನೋಡುತ್ತ ಮೇಲಕ್ಕೆ ಹೋಗಿಯೇ ಹೋಗುತ್ತಾನೆ. ಹೀಗೆ ಜಿನನು ಹೇಳುತ್ತಾನೆ.

**...... ತತ್ಕೇನ ಮಾನೇನ ಮೋಕ್ಷರೂಪಂ ಪ್ರದರ್ಶ್ಯತೇ ।**

ಜಿನೋದಿತ ಮೋಕ್ಷಸ್ವರೂಪವು ಯಾವ ಪ್ರಮಾಣದಿಂದ ತೋರಿಸಲ್ಪಡುತ್ತದೆ? ಈ ವಿಷಯದಲ್ಲಿ ಪ್ರತ್ಯಕ್ಷವಿಲ್ಲ, ಆಗಮವೂ ಇಲ್ಲ. ಅವನ ಆಗಮವನ್ನು ನಾವು ಪ್ರಮಾಣವೆಂದು ಅಂಗೀಕರಿಸಿಲ್ಲ. ವೇದಗಳನ್ನು ಪ್ರಮಾಣವೆಂದು ಅವನು ಅಂಗೀಕರಿಸಿಲ್ಲ. ಆದ್ದರಿಂದ ಅವನು ಯಾವುದಾದರೂ ಅನುಮಾನವನ್ನು ಮಾತ್ರ ಪ್ರಮಾಣವಾಗಿ ಹೇಳಬೇಕು. ಆ ವಿಷಯದಲ್ಲಿ ಹೇಳುತ್ತಾರೆ –

**ಗತಿರೂರ್ಧ್ವಾ ಚ ದುಃಖೇತಾ ಗತಿತ್ವಾಲ್ಲೌಕಿಕೀ ಯಥಾ ॥ ೨೬ ॥**

**ಇತ್ಯುಕ್ತೇ ಚಾನುಮಾನ್ಯೈಕಶರಣಸ್ಯ ಕಿಮುತ್ತರಮ್ ।**

ಊರ್ಧ್ವಗಮನವು ದುಃಖದಿಂದ ಪ್ರಾಪ್ತವಾದುದು ಹಾಗೂ ದುಃಖದಿಂದ ಕೂಡಿರುವುದು, ಚೇತನಾಶ್ರಿತವಾದ ಗತಿತ್ವವಿದ್ದುದರಿಂದ. ಲೌಕಿಕವಾದ ದೇವದತ್ತನ ಗತಿಯಂತೆ. ಹೀಗೆ ಅನುಮಾನವು ಹೇಳಲ್ಪಡುತ್ತದೆ. ಇದಕ್ಕೆ ಅನುಮಾನವನ್ನೇ

ಮುಖ್ಯವಾಗಿ ಆಶ್ರಯವಾಗಿವುಳ್ಳ ಜಿನನಿಂದ ಏನು ಉತ್ತರವಿದೆ?

ಪ್ರತ್ಯನುಮಾನಕ್ಕೆ ಉತ್ತರವನ್ನು ಶಂಕಿಸುತ್ತಾರೆ –

**ಅನೂರ್ಧ್ವಗತಿತಾ ತತ್ರ ಯದ್ಯುಪಾಧಿಃ ಖಗಸ್ಯ ಚ ।। ೨೭ ।।**

**ದೂರೋರ್ಧ್ವಗಮನೇ ದುಃಖಮಿತಿ ಸಾಧ್ಯಾನುಗೋ ನ ಸಃ ।**

ದೇವದತ್ತನ ಗತಿಯು ದುಃಖಯುಕ್ತವಾಗಿದೆ ಎನ್ನುವಲ್ಲಿ ಊರ್ಧ್ವವಲ್ಲದ ಗತಿತ್ವವು ಉಪಾಧಿಯು, ಕೇವಲ ಗತಿತ್ವವಲ್ಲ ಎಂದರೆ ಅದನ್ನು ನಿರಾಕರಿಸುತ್ತಾರೆ. ಪಾರಿವಾಳ ಮೊದಲಾದ ಪಕ್ಷಿಗಳಿಗೆ ದೂರಕ್ಕೆ ಮೇಲಕ್ಕೆ ಗಮನದಿಂದ ದುಃಖವು ಎಂಬ ಹೇತುವಿನಿಂದ ಉಪಾಧಿಗೆ ಸಾಧ್ಯವ್ಯಾಪಕತ್ವವಿಲ್ಲದಿರುವ ನಿಮಿತ್ತ ಉಪಾಧಿತ್ವ ಕೂಡುವುದಿಲ್ಲ.

ಹಾಗಾದರೆ ಇದು ಉಪಾಧಿಯಾಗುವುದು ಬೇಡ. ಶರೀರವೃತ್ತಿತ್ವವು ಉಪಾಧಿ ಯಾಗುವುದು ಎಂದರೆ – ಎಲ್ಲ ಉಪಾಧಿಗಳಿಗೆ ಸಾಧಾರಣವಾದ ದೂಷಣವನ್ನು ಹೇಳುತ್ತಾರೆ –

**ಪ್ರತಿಸಾಧನರೂಪಸ್ಯ ನಾನುಮಾನಸ್ಯ ದೂಷಣಮ್ ।। ೨೮ ।।**

**ಉಪಾಧಿಃ ಪ್ರತಿರೂಪಂ ಹಿ ಸಾಧನಂ ತನ್ನ ಚಾಪರಮ್ ।**

ಜಿನನಿಂದ ಹೇಳಲ್ಪಟ್ಟ ಅನುಮಾನಗಳಿಗೆ ಪ್ರತಿಸಾಧನವು ನಮ್ಮಿಂದ ಉಪನ್ಯಾಸ ಮಾಡಲ್ಪಟ್ಟಿದೆ. ಆ ರೀತಿಯಾದ ಅನುಮಾನಕ್ಕೆ ಉಪಾಧಿಯು ದೂಷಣವಲ್ಲ. ಏಕೆಂದರೆ ಯಾವ ಪ್ರತಿಪಕ್ಷಕ್ಕೆ ಉಪಾಧಿಯು ದೂಷಣವಾಗುವದೋ ಅದಕ್ಕೆ ಪ್ರತಿರೂಪವಾದ ಪಕ್ಷಕ್ಕೆ ಉಪಾಧಿಯು ಸಾಧನವಾಗುವದು. ಇತರವಾದ ಅನೈಕಾಂತಿಕ ಮೊದಲಾದುದು ದೂಷಣವಲ್ಲ.

ಶರೀರವೃತ್ತಿತ್ವವು ಉಪಾಧಿಯಾಗಲಿ ಎನ್ನುವ ಪಕ್ಷವನ್ನು ದೂಷಿಸುತ್ತಾರೆ –

**ಅಥಾಪಿ ಸಶರೀರತ್ವಂ ಚಾತ್ರೋಪಾಧಿರ್ನ ವೈ ಭವೇತ್ ।। ೨೯ ।।**

**ಗತಿತ್ವಂ ಯತ್ರ ದೇಹಿತ್ವಮಿತಿ ಯತ್ಸಾಧನಾನುಗಮ್ ।**

ಯಾವುದೊಂದು ವಿವಕ್ಷೆಯಿಂದ ಪ್ರತಿಪಕ್ಷಾನುಮಾನಕ್ಕೆ ಉಪಾಧಿಯನ್ನು ಹೇಳಿದರೂ, ನಾವು ಹೇಳಿದ ಅನುಮಾನದಲ್ಲಿ ಸಶರೀರತ್ವವು ಉಪಾಧಿಯು ಸರ್ವಥಾ ಆಗಲಾರದು. ಎಲ್ಲಿ ಚೇತನಾಶ್ರಿತವಾದ ಗತಿತ್ವವೋ ಅಲ್ಲಿ ದೇಹತ್ವವು. ಈ ಪ್ರಕಾರವಾಗಿ ಶರೀರವೃತ್ತಿತ್ವವು ಸಾಧನಕ್ಕೆ ವ್ಯಾಪಕವು. ಆದ್ದರಿಂದ ಉಪಾಧಿಯು.

ಅದಿರಲಿ. ಯಾ ಗತಿಃ ಸಾ ದುಃಖೇತಾ ಎಂಬ ವ್ಯಾಪ್ತಿಯಿಂದ ಮುಕ್ತರಿಗೆ ದುಃಖ ಪ್ರಾಪ್ತಿಯನ್ನು ಹೇಳುವವನು, ಈಶ್ವರನಿಗೂ ಗತಿತ್ವ ನಿಮಿತ್ತಕವಾದ ದುಃಖವನ್ನು

ಅಂಗೀಕರಿಸಬೇಕು. ನಿರ್ದೋಷನಾದ ಭಗವಂತನಲ್ಲಿ ದುಃಖತ್ವವನ್ನು ಆರೋಪಿಸಿದರೆ ಅಪಸಿದ್ಧಾಂತವು. ಶರೀರ ವೃತ್ತಿತ್ವಕ್ಕೆ ಸಾಧನವ್ಯಾಪಕತ್ವವನ್ನು ಅಂಗೀಕರಿಸಿದರೆ ಗತಿತ್ವ ನಿಮಿತ್ತಕವಾದ ಶರೀರತ್ವವನ್ನು ಈಶ್ವರನಿಗೂ ಅಂಗೀಕರಿಸಬೇಕಾಗುವುದು. ಆದ್ದರಿಂದ ಅಪಸಿದ್ಧಾಂತವು ಎಂದರೆ –

**ಆಗಮಾನನುಸಾರಿತ್ವೇ ಪ್ರಸಂಗೋಽಯಂ ಯತಸ್ತತಃ ॥ ೩೦ ॥**

**ನಾಪಸಿದ್ಧಾಂತತಾ ದೋಷಃ ಪ್ರಸಂಗೇ ಯದಿ ಸಾ ಭವೇತ್ ।**

**ತದೈವಾತಿಪ್ರಸಂಗಃ ಸ್ಯಾನ್ನ ಪ್ರಸಂಗಃ ಕ್ವಚಿದ್ಭವೇತ್ ॥ ೩೧ ॥**

ಮೋಕ್ಷಸ್ವರೂಪವನ್ನು ವೇದ ಮೊದಲಾದ ಆಗಮಗಳನ್ನು ಅನುಸರಿಸದೆ ಅನುಮೇಯಿಸಿದ ಪಕ್ಷದಲ್ಲಿ ಈ ಅತಿಪ್ರಸಂಗವು. ನಾವು ವೇದಾದಿ ಆಗಮಗಳನ್ನು ಅಪೇಕ್ಷಿಸಿಯೇ ಮೋಕ್ಷಸ್ವರೂಪವನ್ನು ಹೇಳುವುದರಿಂದ ನಮಗೆ ಅಪಸಿದ್ಧಾಂತ ದೋಷವು ಬರುವುದಿಲ್ಲ. ಯಾವಾಗ ಅತಿಪ್ರಸಂಗದಲ್ಲಿ ಅಪಸಿದ್ಧಾಂತ ದೋಷವು ಉದ್ಭವಿಸುವುದೋ ಆಗಲೇ ಅತಿಪ್ರಸಂಗವು ಆಗುವುದು. ಎಲ್ಲ ಪ್ರಸಂಗಗಳಲ್ಲಿಯೂ ಅಪಸಿದ್ಧಾಂತವನ್ನು ಹೇಗಾದರೂ ಉದ್ಭಾವಿಸುವುದು ಶಕ್ಯವಾದುದರಿಂದ, ಎಲ್ಲಿಯೂ ಅತಿಪ್ರಸಂಗವು ಆಗಲಾರದು.

ಇದರ ಅಭಿಪ್ರಾಯವಿಷ್ಟು – ವೇದಗಳನ್ನು ಅನುಸರಿಸದೆ ಇರುವ ಅನುಮಾನ ದಿಂದ ಮೋಕ್ಷವನ್ನು ಸಾಧಿಸಲಿಕ್ಕೆ ಶಕ್ಯವಾಗುವುದಿಲ್ಲ. ಅಂತಹ ಅನುಮಾನದಿಂದಲೇ ದೂಷಿಸಲಿಕ್ಕೂ ಶಕ್ಯವಾಗುವುದು ಎನ್ನುವ ಅತಿಪ್ರಸಂಗವನ್ನು ಹೇಳಿದರೆ, ಅದು ಅಪಸಿದ್ಧಾಂತವಾಗದು. ಹಾಗಿದ್ದರೂ ಅಪಸಿದ್ಧಾಂತವನ್ನು ಹೇಳುವುದಾದರೆ, ಹೀಗೆ ಎಲ್ಲ ಅತಿಪ್ರಸಂಗಗಳನ್ನು ಅಪಲಾಪ ಮಾಡುವುದು ಶಕ್ಯವಿರುವುದರಿಂದ, ಎಲ್ಲಿಯೂ ಅತಿಪ್ರಸಂಗವು ಯುಕ್ತವಾಗಲಾರದು ಎನ್ನುವ ಅತಿಪ್ರಸಂಗವು ಬರುವುದು.

ಹಾಗಾದರೆ ಲೋಕಾಕಾಶ ಸಂಬಂಧಿತ್ವವೇ ಉಪಾಧಿಯು ಎಂದರೆ ಅದನ್ನು ದೂಷಿಸುತ್ತಾರೆ –

**ಲೋಕಾಕಾಶಗತಿತ್ವಂ ಚೇದುಪಾಧಿಃ ಸಾಧನಾನುಗಃ ।**

**ಸೋಽಪೀತ್ಯುಕ್ತೇ ವದೇತ್ಕಿಂ ಸ ತಸ್ಮಾದ್ವೇದೋದಿತೋ ಭವೇತ್ ॥ ೩೨ ॥**

**ಮೋಕ್ಷಃ ।**

ಇಲ್ಲಿ ಲೋಕಾಕಾಶಸಂಬಂಧಿತ್ವವೇ ಉಪಾಧಿಯು. ಸಾಧ್ಯವ್ಯಾಪಕವಾದ್ದರಿಂದ ಗತಿತ್ವವಾದರೂ ಸ್ವರೂಪಕಥನವು ಎಂದರೆ – ಯಾವುದು ಗತಿಯೋ ಅದು ಲೋಕಾಕಾಶ ಸಂಬಂಧಿನಿಯು. ಆದ್ದರಿಂದ ಅದೂ ಉಪಾಧಿಯೇ. ಅದೂ ಕೂಡ ಸಾಧನವ್ಯಾಪಕವು. ಹೀಗೆ ಹೇಳಿದರೆ ಆ ಜಿನನು ಏನೆಂದು ಹೇಳುವನು? ಹೀಗೆ ಜಿನನು ಹೇಳಿದ ಮೋಕ್ಷಸ್ವರೂಪದಲ್ಲಿ ಪ್ರಮಾಣವಿಲ್ಲದಿರುವುದರಿಂದ, ವೇದದಲ್ಲಿ

ಹೇಳಲ್ಪಟ್ಟಂತೆ ನಾವು ಪ್ರತಿಪಾದಿಸಿದ ಪ್ರಕಾರವೇ ಮೋಕ್ಷಸ್ವರೂಪವು ಎನ್ನುವುದು ಸಿದ್ಧವಾಗುವದು.

ಹಿಂದೆ ಹೇಳಿದ ದೋಷಗಳನ್ನು ಬೌದ್ಧಮತಕ್ಕೂ ಅನ್ವಯಮಾಡಿ ಬೌದ್ಧರು ಹೇಳಿದ ಮೋಕ್ಷಸ್ವರೂಪವನ್ನು ದೂಷಿಸುತ್ತಾರೆ –

**........ ಏವಂ ಸ್ವಯಂ ವಿಷ್ಣುರ್ಯದ್ಯಪೀಶೋ ಹ್ಯಶೇಷವಿತ್ ।**

**ಚಕಾರ ಸೌಗತಮತಂ ಮೋಹಾಯೈವ ಚಕಾರ ಯತ್ ॥ ೩೩ ॥**

**ಅಸುರಾಣಾಮಯೋಗ್ಯಾನಾಂ ವೇದಮಾರ್ಗೇ ಪ್ರವರ್ತತಾಮ್ ।**

**ಅತೋಽಸುರಾಧಿಕಾರತ್ವಾನ್ನ ಗ್ರಾಹ್ಯಂ ತನ್ಮತಂ ಕ್ವಚಿತ್ ॥ ೩೪ ॥**

ಹೇಗೆ ಅಪ್ರಾಮಾಣಿಕವಾದ್ದರಿಂದ ಜೈನಮತವು ಗ್ರಾಹ್ಯವಲ್ಲವೋ ಹಾಗೆಯೇ ಸೌಗತಮತವೂ (ಬೌದ್ಧಮತವೂ) ಎಲ್ಲಿಯೂ ಗ್ರಾಹ್ಯವಾಗುವುದಿಲ್ಲ. ಈ ಬೌದ್ಧ ಮತವು ಪರಮಾಪ್ತನಾದ ಬುದ್ಧರೂಪಿಯಾದ ವಿಷ್ಣುವಿನಿಂದಲೇ ಪ್ರವರ್ತಿತವಾಗಿದೆ. ಹೀಗಿರುವಾಗ ಈ ಮತವು ಹೇಗೆ ಸ್ವೀಕಾರಕ್ಕೆ ಅರ್ಹವಲ್ಲ ಎಂದರೆ – ಹೌದು ಈ ಮತವು ಸ್ವಯಂ ವಿಷ್ಣುವಿನಿಂದಲೇ ಮಾಡಲ್ಪಟ್ಟಿದೆ ಎನ್ನುವುದು ಸುಳ್ಳಲ್ಲ. ಆ ವಿಷ್ಣುವು ಕರಣಪಾಟವವುಳ್ಳವನು ಹಾಗೂ ಸರ್ವಜ್ಞನಾದ ತತ್ವಜ್ಞಾನಿ ಎನ್ನುವುದೂ ನಿಜವೇ. ಹಾಗಿದ್ದರೂ ಆ ಮತವು ಅಗ್ರಾಹ್ಯವು ಎಂದು ಪ್ರಸಿದ್ಧವು. ಏಕೆಂದರೆ ವಿಷ್ಣುವು ಈ ಮತವನ್ನು ಅಸುರರ ಮೋಹನಕ್ಕಾಗಿಯೇ ಮಾಡಿರುವನು. ಇದಕ್ಕೆ ಅಸುರರೇ ಅಧಿಕಾರಿಗಳು. ಅಸುರರನ್ನಾದರೂ ಏಕೆ ಮೋಹನಗೊಳಿಸಬೇಕು ಎಂದರೆ, ಅವರು ವೇದಮಾರ್ಗದಲ್ಲಿ ಅಯೋಗ್ಯರಾಗಿದ್ದರೂ ವೇದಮಾರ್ಗದಲ್ಲಿ ಪ್ರವರ್ತಿಸುವರು. ಅಸುರರಿಗೆ ಯಥಾರ್ಥಜ್ಞಾನವು ಆಗಬಾರದು ಮತ್ತು ಮಿಥ್ಯಾಜ್ಞಾನವೇ ಆಗಬೇಕು ಎಂಬ ಉದ್ದೇಶದಿಂದ ವಿಷ್ಣುವು ಬೌದ್ಧಮತವನ್ನು ಮಾಡಿದನು. ಈ ಕಾರಣದಿಂದ ಸಜ್ಜನರು ಈ ಮತವನ್ನು ಸ್ವೀಕರಿಸಬಾರದು. ಇದಕ್ಕೆ ಭಾಗವತ ವಾಕ್ಯವು ಪ್ರಮಾಣ. 'ತತಃ ಕಲೌ ಸಂಪ್ರವೃತ್ತೇ ಸಂಮೋಹಾಯ ಸುರದ್ವಿಷಾಮ್। ಬುದ್ಧೋ ನಾಮ್ನಾ ಜಿನಸುತಃ ಕೀಕಟೇಷು ಭವಿಷ್ಯತಿ' ಎಂದು ಭಾಗವತದಲ್ಲಿ ತೃತೀಯ ಸ್ಕಂಧದ ತೃತೀಯ ಅಧ್ಯಾಯದಲ್ಲಿ ಉಕ್ತವಾಗಿದೆ.

ಹೀಗೆ ಸಾಮಾನ್ಯವಾಗಿ ದೂಷಿಸಲ್ಪಟ್ಟ ಬೌದ್ಧಮತವನ್ನು ವಿಶೇಷವಾಗಿ ನಿರಾಕರಿಸಲು ಈ ಮತದ ಪ್ರಭೇದಗಳನ್ನು ಹೇಳುತ್ತಾರೆ –

**ಚತುಷ್ಪ್ರಕಾರಂ ತಚ್ಚೋಕ್ತಂ ಶೂನ್ಯಂ ವಿಜ್ಞಾನಮೇಕಲಮ್ ।**

**ಅನುಮೇಯಬಹಿಸ್ತತ್ವಂ ತಥಾ ಪ್ರತ್ಯಕ್ಷಬಾಹ್ಯಗಮ್ ॥ ೩೫ ॥**

ಇತಿ ।

ವ್ಯಾಖ್ಯಾತೃವಿನ ಮತಿಭೇದದಿಂದ ಬೌದ್ಧಮತವು ನಾಲ್ಕು ಪ್ರಕಾರವುಳ್ಳದ್ದಾಗಿ ಹೇಳಲ್ಪಡುತ್ತದೆ. ಅದ್ವಿತೀಯವಾದ ಶೂನ್ಯವೇ ತತ್ವವೆಂದು ಒಂದು ಮತವು. ವಿಜ್ಞಾನವೇ ತತ್ವವೆಂದು ಇನ್ನೊಂದು ಮತವು. ಅನುಮೇಯಿಸಲಿಕ್ಕೆ ಯೋಗ್ಯವಾದ ಜ್ಞಾನವ್ಯತಿರಿಕ್ತವಾದ ತತ್ವವು ಇದ್ದೇ ಇದೆ ಎಂದು ಹೇಳುವ ಸೌತ್ರಾಂತಿಕ ಮತವು ಇನ್ನೊಂದು. ಹಾಗೆಯೇ ಮತ್ತೊಂದು ಪ್ರಕಾರವೆಂದರೆ ಪ್ರತ್ಯಕ್ಷವಾದ ಬಾಹ್ಯವಿಷಯ ವುಳ್ಳದ್ದು ಎಂದು ಹೇಳುವ ವೈಭಾಷಿಕ ಮತವು. ಹೀಗೆ ಬೌದ್ಧಮತದಲ್ಲಿ ನಾಲ್ಕು ಪ್ರಕಾರಗಳು.

ಅದರಲ್ಲಿ ಶೂನ್ಯವಾದಿಗಳು ಹೇಳಿದ ಮೋಕ್ಷವನ್ನು ಅನುವಾದ ಮಾಡುತ್ತಾರೆ –

**....... ತತ್ರ ತು ಯೇ ಶೂನ್ಯಂ ವದಂತ್ಯಜ್ಞಾನಮೋಹಿತಾಃ ।**

**ತೇ ಮೋಕ್ಷಂ ತಾದೃಶಂ ಬ್ರೂಯುರ್ನಿಃಶಂಕಂ ಮಾಯಿನೋ ಯಥಾ ॥೩೬॥**

ಆ ನಾಲ್ಕರಲ್ಲಿ ಯಾರು ತತ್ವಜ್ಞಾನಾಭಾವದ ನಿಮಿತ್ತ ಮಿಥ್ಯಾಜ್ಞಾನಯುಕ್ತರಾಗಿ ಶೂನ್ಯವೇ ತತ್ವವೆಂದು ಹೇಳುತ್ತಾರೋ ಅವರು ಮಾಯಿಗಳು. ಏಕೆಂದರೆ ಇವರೂ ಮಾಯಿಗಳು ಹೇಳುವಂತಹ ರೀತಿಯ ಮೋಕ್ಷವನ್ನೇ ನಿಸ್ಸಂದೇಹವಾಗಿ ಹೇಳುತ್ತಾರೆ. ಆದರೆ ಇಲ್ಲಿ ವಿಶೇಷವಿದೆ. ಮಾಯಿಗಳು ತಾವು ವೇದಪ್ರಾಮಾಣ್ಯವಾದಿಗಳೆಂಬ ಅಭಿಮಾನದಿಂದ 'ಪರಮಂ ಸಾಮ್ಯಮುಪೈತಿ' 'ಸೋಽಶ್ನುತೇ ಸರ್ವಾನ್ಕಾಮಾನ್' ಇತ್ಯಾದಿ ವೇದಕ್ಕೆ ಅದು ಗೌಣಮುಕ್ತಿ ಪರವು ಇತ್ಯಾದಿಯಾಗಿ ಅನ್ಯಥಾ ವ್ಯಾಖ್ಯಾನಿಸಿ ತಮಗೆ ಅಭಿಮತವಾದ ಮೋಕ್ಷವನ್ನು ಪ್ರತಿಪಾದಿಸುತ್ತಾರೆ. ವೇದಪ್ರಾಮಾಣ್ಯವನ್ನು ಒಪ್ಪದ ಶೂನ್ಯವಾದಿಗಳಾದರೂ ತಮಗೆ ತೋಚಿದ ರೀತಿಯಲ್ಲಿ ಮೋಕ್ಷವನ್ನು ಹೇಳುತ್ತಾರೆ.

ಹೀಗೆ ಸಾಮಾನ್ಯವಾಗಿ ಹೇಳಿದ್ದನ್ನೇ ಸ್ಪಷ್ಟವಾಗಿ ಹೇಳುತ್ತಾರೆ –

**ನ ಕಿಂಚಿನ್ಮುಕ್ತ್ಯವಸ್ಥಾಯಾಮಾತ್ಮಾತ್ಮೀಯಮಥಾಪಿ ವಾ ।**

ಮೋಕ್ಷಾವಸ್ಥೆಯಲ್ಲಿ ಯಾವುದೇ ಜ್ಞಾನವಾಗಲೀ ಜ್ಞೇಯವಾಗಲೀ ಇರುವುದಿಲ್ಲ.

ಶೂನ್ಯವಾದವು ಏಕಾತ್ಮವಾದ ಹಾಗೂ ಅನೇಕಾತ್ಮವಾದ ಎಂದು ಎರಡು ವಿಧ. ಅದರಲ್ಲಿ ಮೊದಲನೆಯದೇ ಮುಖ್ಯಸಿದ್ಧಾಂತ. ಮಂದರ ಬುದ್ಧಿಗೆ ಹಿಡಿಯಲಿಕ್ಕೆ ಎರಡನೆಯದನ್ನು ಹೇಳಲಾಗಿದೆ. ಎರಡಕ್ಕೂ ಸಾಧಾರಣವಾದ ವಿಷಯವನ್ನು ಹೇಳಿ ಅದರಲ್ಲಿ ವಿಶೇಷವನ್ನು ಹೇಳುವ ಇಚ್ಛೆಯಿಂದ ಆದಿಯಲ್ಲಿ ಮೊದಲನೆಯದಾದ ಏಕಾತ್ಮವಾದವನ್ನು ಹೇಳುತ್ತಾರೆ –

**ಏಕಸ್ಮಿನ್ ಸಂಸೃತೇರ್ಮುಕ್ತೇ ನ ಕಿಂಚಿದವಶಿಷ್ಯತೇ ॥ ೩೭ ॥**

**ತತ್ಸಂವೃತ್ಯೈವ ಭೇದೋಽಯಂ ಚೇತನಾಚೇತನಾತ್ಮಕಃ ।**

**ದೃಶ್ಯತೇ ಸಂಸೃತೇರ್ಧ್ವಂಸೇ ನಿರ್ವಿಶೇಷೈವ ಶೂನ್ಯತಾ ॥ ೩೮ ॥**

ಒಬ್ಬನು ಸಂಸಾರದೆಶೆಯಿಂದ ಮುಕ್ತನಾಗುತ್ತಿದ್ದಂತೆ ಯಾವೊಂದು ಚೇತನ ಅಥವಾ ಅಚೇತನವಾಗಲೀ ಉಳಿಯುವುದಿಲ್ಲ. ಏಕೆಂದರೆ ಆ ಒಬ್ಬನೇ ಆತ್ಮನ ಅಜ್ಞಾನದ ನಿಮಿತ್ತಕವಾಗಿ ಚೇತನ–ಅಚೇತನ ಎಂಬ ಭೇದಾತ್ಮಕವಾದ ಜಗತ್ತು ಆರೋಪಿತವಾಗಿ ಕಾಣಲ್ಪಡುತ್ತದೆ. ಒಬ್ಬನೇ ಆದ ಆತ್ಮನ ಅಜ್ಞಾನಕ್ಕೆ ವಿನಾಶವು ಉಂಟಾದಾಗ, ಅಜ್ಞಾನದಿಂದ ಆರೋಪಿತವಾದ ಜಗತ್ತು ಮಾಯವಾಗುತ್ತದೆ. ಆಗ ನಿರ್ವಿಶೇಷವಾದ ಶೂನ್ಯತ್ವವೇ ಉಳಿಯುತ್ತದೆ.

ನಿರ್ವಿಶೇಷತ್ವವನ್ನೇ ವಿವರಿಸುತ್ತಾರೆ –

**ನ ಸತ್ತ್ವಂ ನೈವ ಚಾಸತ್ತ್ವಂ ಶೂನ್ಯತತ್ತ್ವಸ್ಯ ವಿದ್ಯತೇ ।**

**ನ ಸುಖತ್ವಂ ನ ದುಃಖತ್ವಂ ನ ವಿಶೇಷೋಽಪಿ ಕಶ್ಚನ ॥ ೩೯ ॥**

ಶೂನ್ಯತ್ವಕ್ಕೆ ಜಾತ್ಯಾದಿರೂಪವಾದ ಸತ್ವವೂ ಇಲ್ಲ, ಅಭಾವಪ್ರತಿಯೋಗಿತ್ವ ರೂಪವಾದ ಅಸತ್ವವೂ ಇಲ್ಲ. ಸುಖತ್ವವೂ ಇಲ್ಲ, ದುಃಖತ್ವವೂ ಇಲ್ಲ. ಯಾವ ವಿಶೇಷವೂ ಇಲ್ಲವೆಂದು ತಾತ್ಪರ್ಯ.

ಹಾಗಾದರೆ ಮೋಕ್ಷವು ಇಲ್ಲವೆಂದು ಹೇಳಲಿಕ್ಕೆ ಬರುವುದಿಲ್ಲ. ಹಾಗೆ ಒಪ್ಪಿದರೆ ಯಾವಾಗಲೂ ಸಂಸಾರವು ಇರಬೇಕಾಗುವುದು. ಆದ್ದರಿಂದ ಇರತಕ್ಕ ಮೋಕ್ಷದಿಂದ ಶೂನ್ಯವು ಸವಿಶೇಷವಾದುದು ಎಂದರೆ –

**ನಿರ್ವಿಶೇಷಂ ಸ್ವಯಂಭಾತಂ ನಿರ್ಲೇಪಮಜರಾಮರಮ್ ।**

**ಶೂನ್ಯಂ ತತ್ತ್ವಮಸಂಬಾಧಂ ನಾನಾಸಂವೃತಿವರ್ಜಿತಮ್ ॥ ೪೦ ॥**

**ಅಶೇಷದೋಷರಹಿತಂ ಮನೋವಾಚಾಮಗೋಚರಮ್ ।**

**ಮೋಕ್ಷ ಇತ್ಯುಚ್ಯತೇಽಸದ್ಭಿಃ ..................... ॥**

ನಿರ್ವಿಶೇಷವೂ, ಸ್ವಪ್ರಕಾಶವೂ, ಧರ್ಮಾಧರ್ಮಗಳಿಂದ ಲೇಪವಿಲ್ಲದ್ದೂ, ಜರಾ ಮರಣರಹಿತವೂ, ಅದ್ವಿತೀಯವೂ, ನಾನಾರೀತಿಯ ಅಜ್ಞಾನಗಳಿಂದ ವರ್ಜಿತವೂ, ಎಲ್ಲ ಕಾಮಾದಿ ದೋಷಗಳಿಂದ ರಹಿತವೂ, ಮನೋವಚನಗಳಿಗೆ ಅಗೋಚರವೂ ಆದ ಶೂನ್ಯತತ್ವವೇ ಮೋಕ್ಷವೆಂದು ಅಸಜ್ಜನರಿಂದ ಹೇಳಲ್ಪಡುತ್ತದೆ.

**............................ ನಾನಾಸಂವೃತಿದೂಷಿತಮ್ ॥ ೪೧ ॥**

**ಸಂಸೃತ್ಯವಸ್ಥಾ ವಿಜ್ಞೇಯಾ ಸಂವೃತ್ಯೈವ ವಿಶಿಷ್ಯತೇ ।**

**ಸ್ಥಿತಯಾ ಧ್ವಸ್ತಯಾ ಚೈವ ಸಂಸೃತಿರ್ಮೋಕ್ಷ ಇತ್ಯಪಿ ॥ ೪೨ ॥**

ಯಾವ ಕಾರಣದಿಂದ ನಾನಾ ವಿಧವಾದ ಅಜ್ಞಾನಗಳಿಂದ ದೂಷಿತವಾದ ಶೂನ್ಯವೇ ಸಂಸಾರಾವಸ್ಥೆ ಎಂದು ತಿಳಿಯತಕ್ಕುದೋ, ಆ ಕಾರಣದಿಂದ ಅದಕ್ಕೆ

ವಿಪರೀತವಾದ ಶೂನ್ಯವೇ ಮೋಕ್ಷ ಎನ್ನುವುದು ಯುಕ್ತವು. ಹೀಗೆ ಸಂಸಾರವೂ ಮೋಕ್ಷವೂ ಶೂನ್ಯವೆಂದಾದರೆ, ಇರತಕ್ಕ ಹಾಗೂ ಧ್ವಂಸವಾದ ಅಜ್ಞಾನದಿಂದಲೇ ಸಂಸಾರ ಹಾಗೂ ಮೋಕ್ಷಗಳು ಎನ್ನುವುದು ವಿಶೇಷವೇ ಆಗುವುದು. ಸಂವೃತಿ ಧ್ವಂಸರೂಪವಾದ ಭೇದವಿರುವ ಪ್ರಯುಕ್ತ, ಸಂಸಾರ ಹಾಗೂ ಮೋಕ್ಷ ಶಬ್ದಗಳಿಗೆ ಪರ್ಯಾಯತ್ವವು ಬರುವುದಿಲ್ಲ ಎಂದು ಭಾವ.

ಹೀಗೆ ಏಕಾತ್ಮವಾದವನ್ನು ಉಪನ್ಯಾಸ ಮಾಡಿ ಈಗ ಅನೇಕಾತ್ಮವಾದವನ್ನು ತಿಳಿಸುತ್ತಾರೆ –

**ಕೇಚಿತ್ತೇಷ್ವನ್ಯಥಾ ಪ್ರಾಹುಃ ಸಂವೃತ್ಯೈವ ತ್ವನೇಕಧಾ ।**

**ಅವಚ್ಛಿನ್ನಂ ಮಹಾಶೂನ್ಯಂ ನಾನಾ ಪುದ್ಗಲಶಬ್ದಿತಮ್ ।। ೪೩ ।।**

ಶೂನ್ಯವಾದಿಗಳಲ್ಲಿ ಕೆಲವರು ಏಕಾತ್ಮವಾದದಿಂದ ಬೇರೆಯಾಗಿ ಹೇಳುತ್ತಾರೆ. ಹೇಗೆಂದರೆ ವಿಶ್ವಾರೋಪಕ್ಕೆ ಕಾರಣವಾದ ಅಜ್ಞಾನದಿಂದಲೇ ಅನೇಕ ವಿಧದಲ್ಲಿ ಅವಚ್ಛಿನ್ನವಾಗಿರುವ (ಅಂದರೆ ಸೇರಿಕೊಂಡಿರುವ) ಮಹಾಶೂನ್ಯವು ನಾನವಿಧವಾದ ಪುದ್ಗಲ ಶಬ್ದದಿಂದ ಹೇಳಲ್ಪಡುತ್ತದೆ. ಶೂನ್ಯವು ಅವಚ್ಛಿನ್ನವೇ ಆಗಿದೆ, ಹೊರತು ಸ್ವಭಾವದಿಂದ ಅಲ್ಲ. ಈ ರೀತಿಯಲ್ಲಿ ಅನೇಕಾತ್ಮವಾದವು ಏಕಾತ್ಮವಾದಕ್ಕಿಂತ ಭಿನ್ನವಾಗಿದೆ ಎಂಬುದನ್ನು ತು ಶಬ್ದದಿಂದ ತಿಳಿಸಿದ್ದಾರೆ.

ಇದರಿಂದ ಏನು ಹೇಳಿದಂತಾಯಿತು ಎಂದರೆ –

**ಯಸ್ಯ ಶೂನ್ಯೈಕರಸತಾ ಜ್ಞಾನಾತ್ಸಾ ತ್ವಪಗಚ್ಛತಿ ।**

**ಸ ಪುದ್ಗಲತ್ವನಿರ್ಮುಕ್ತೋ ಮಹಾಶೂನ್ಯತ್ವಮೇಷ್ಯತಿ ।। ೪೪ ।।**

**ಸಂವೃತ್ಯಾ ಯಸ್ತ್ವವಚ್ಛಿನ್ನೋ ದುಃಖಾನ್ಯನುಭವತ್ಯಲಮ್ ।**

**ಇತಿ ।।**

ಅನೇಕಾತ್ಮರಲ್ಲಿ ಯಾವೊಬ್ಬ ಆತ್ಮನಿಗಾದರೂ ಶೂನ್ಯವು ಅದ್ವಿತೀಯವು ಎಂಬ ಜ್ಞಾನದಿಂದ ವಿಶ್ವಾರೋಪನಿಮಿತ್ತವಾದ ಅಜ್ಞಾನವು (ಮೂಲಸಂವೃತಿಯು) ಬಿಟ್ಟು ಹೋಗುತ್ತದೆ. ದುಃಖಾದಿ ಅನುಭವಕ್ಕೆ ಕಾರಣವಾದ ಅಜ್ಞಾನವು ನಾಶವಾಗುತ್ತದೆ. ಆಗ ಕರ್ತೃತ್ವಾದಿ ರೂಪವಾದ ಪುದ್ಗಲತ್ವದಿಂದ ಬಿಡಲ್ಪಟ್ಟವನಾಗಿ ಮಹಾಶೂನ್ಯತ್ವ ವನ್ನು ಹೊಂದುತ್ತಾನೆ. ಅಜ್ಞಾನದಿಂದ ಯುಕ್ತನಾದ ಆತ್ಮನು ಪುದ್ಗಲಭಾವದಿಂದ ದುಃಖಗಳನ್ನು ಚೆನ್ನಾಗಿ ಪರಮಾರ್ಥಬುದ್ಧಿಯಿಂದಲೇ ಅನುಭವಿಸುತ್ತಾನೆ. ಹೀಗೆ ಕೆಲವರು ಹೇಳುತ್ತಾರೆ.

ಶೂನ್ಯವಾದಿಗಳಿಗೆ ಅಭಿಮತವಾದ ಮೋಕ್ಷದ ನಿರಾಕರಣೆಯಿಂದಲೇ ಮಾಯಾ ವಾದಿ ಅಭಿಮತವಾದ ಮೋಕ್ಷವೂ ನಿರಾಕೃತವಾಗುವುದು ಎಂಬ ಅಭಿಪ್ರಾಯದಿಂದ ಮಾಯಿನೋ ಯಥಾ ಎಂದು ಹೇಳಿದ ಸಿದ್ಧಾಂತಸಾಮ್ಯವನ್ನು ಉಪಪಾದಿಸುತ್ತಾರೆ–

**...... ಏವಂ ಮಾಯಿನಶ್ಚಾಹುರೇಕಜೀವತ್ವವಾದಿನಃ ॥ ೪೫ ॥**

**ಬಹುಜೀವಮತಾಶ್ಚೇತಿ ಮಾಯಾ ತೇಷಾಂ ತು ಸಂವೃತಿಃ ।**

**ನಿರ್ವಿಶೇಷತ್ವವಾಚ್ಯೈವ ಶೂನ್ಯಂ ಬ್ರಹ್ಮೇತಿ ನೋ ಭಿದಾ ॥ ೪೬ ॥**

ಏಕಜೀವವಾದಿಗಳು ಮತ್ತು ಬಹುಜೀವವಾದಿಗಳು ಎಂಬ ದ್ವಿವಿಧ ಮಾಯಾವಾದಿಗಳೂ ಕೂಡ ದ್ವಿವಿಧ ಶೂನ್ಯವಾದಿಗಳಂತೆಯೇ ಮೋಕ್ಷಸ್ವರೂಪವನ್ನು ಹೇಳುತ್ತಾರೆ. ಶೂನ್ಯವಾದಿಗಳು ಅಂಗೀಕರಿಸಿರುವ ಸಂವೃತಿಯೇ ಮಾಯಾವಾದಿಗಳ ಮಾಯೆಯು. ಶೂನ್ಯವಾದಿಗಳ ಶೂನ್ಯ ಮತ್ತು ಮಾಯಾವಾದಿಗಳ ಬ್ರಹ್ಮ ಎರಡೂ ನಿರ್ವಿಶೇಷತ್ವ ವಾಚ್ಯವೇ ಆದ್ದರಿಂದ ಅವುಗಳಿಗೆ ಭೇದವಿಲ್ಲ. ಶಬ್ದಮಾತ್ರದಿಂದ ಭೇದವು, ವಸ್ತುತ್ವದಿಂದ ಭೇದವಿಲ್ಲ ಎಂದು ಭಾವ.

ಹಾಗಾದರೆ 'ಸತ್ಯಂ ಜ್ಞಾನಮನಂತಂ ಬ್ರಹ್ಮ' 'ವಿಜ್ಞಾನಮಾನಂದಂ ಬ್ರಹ್ಮೈವ' ಇತ್ಯಾದಿ ಶ್ರುತಿಗಳಿಂದಲೇ ಬ್ರಹ್ಮನು ಸರ್ವವಸ್ತುಗಳಿಂದಲೂ ಭಿನ್ನನೆಂದು ತಿಳಿದು ಬರುತ್ತದೆ. ಆದ್ದರಿಂದ ಶೂನ್ಯ ಮತ್ತು ಬ್ರಹ್ಮಗಳಿಗೆ ಭೇದವಿಲ್ಲವೆನ್ನುವುದು ಹೇಗೆ ಎಂದರೆ – ಸತ್ಯ ಜ್ಞಾನ ಇತ್ಯಾದಿ ಲಕ್ಷಣಗಳಿಂದ ಬ್ರಹ್ಮನು ಜಗತ್ತಿಗಿಂತ ಭಿನ್ನನೆಂದು ಶ್ರುತಿ ಹೇಳುತ್ತದೆ. ಆದರೆ ಮಾಯಾವಾದಿಗಳ ಬ್ರಹ್ಮನಿಗೆ ಈ ಯಾವ ಲಕ್ಷಣವೂ ಕೂಡುವುದಿಲ್ಲ ಎಂದು ಹೇಳುತ್ತಾರೆ –

**ಸಚ್ಚಿತ್ಸುಖಾದಿಕಂ ಚೈವ ಕಿಂ ಕುತೋಽಖಂಡವಾದಿನಃ ।**

ಮಾಯಾವಾದಿಗಳ ಪ್ರಕಾರ ನಿರ್ದೋಷವಾದ (ಸತ್), ಜ್ಞಾನರೂಪವಾದ (ಚಿತ್), ಸುಖರೂಪವಾದ ಮೊದಲಾದ ಯಾವ ಧರ್ಮಗಳೂ ಇಲ್ಲ. ನಿರ್ವಿಶೇಷ ವಾದಿಗಳಾದ ಅವರು ಸತ್ವಾದಿ ಧರ್ಮಗಳನ್ನು ಹೇಗೆ ಅಂಗೀಕರಿಸುವುದು ಸಾಧ್ಯ?

ಸತ್ವಾದಿ ಪದಗಳಿಂದ ಪ್ರತಿಪಾದ್ಯವಾದ ವಸ್ತುವಿನಲ್ಲಿ ಭೇದವಿಲ್ಲದಿದ್ದರೂ ಅಸತ್ವಾದಿ ವ್ಯಾವರ್ತ್ಯ ಧರ್ಮಗಳಿಗೆ ಭೇದವಿದ್ದೇ ಇದೆ. ಆದ್ದರಿಂದ ಅಸತ್ವಾದಿ ವ್ಯಾವೃತ್ತಿಯೇ ಪ್ರಯೋಜನವಾಗಿವುಳ್ಳ ಸತ್ವಾದಿ ವಾಚಕವಾದ ಅನೇಕ ಪದಗಳು ಬ್ರಹ್ಮನಲ್ಲಿ ಇರುತ್ತವೆ. ಆದಕಾರಣ ನಮ್ಮ ಮತದಲ್ಲಿ ಶ್ರುತ್ಯರ್ಥ ನಿರ್ವಾಹವು ಹೇಗೆ ಸಾಧ್ಯವಿಲ್ಲ ಎಂದರೆ –

**ವ್ಯಾವರ್ತ್ಯಮಾತ್ರಭೇದಸ್ತು ವಿದ್ಯತೇ ಶೂನ್ಯವಾದಿನಃ ॥ ೪೭ ॥**

ವ್ಯಾವರ್ತಮಾತ್ರ ಭೇದವಾದರೂ ಶೂನ್ಯವಾದಿಗೆ ಇರುತ್ತದೆ. ಈ ಪ್ರಕ್ರಿಯೆಯು ಎಲ್ಲವೂ ಶೂನ್ಯವಾದಿಗಳ ಮತದಲ್ಲಿಯೂ ಇದ್ದೇ ಇರುವ ಪ್ರಯುಕ್ತ, ಇದರಿಂದಲೂ ಬ್ರಹ್ಮ–ಶೂನ್ಯರಿಗೆ ಭೇದವನ್ನು ಹೇಳಲಿಕ್ಕೆ ಶಕ್ಯವಾಗುವುದಿಲ್ಲ ಎಂದು ಭಾವ.

**ಅನೃತಾದೇರಪೋಹಂ ತು ಸ್ವಯಮೇವ ಹಿ ಮನ್ಯತೇ ।**

**ನಿರ್ವಿಶೇಷತ್ವತೋ ನೈವ ವಿಶೇಷೋ ಬ್ರಹ್ಮಶೂನ್ಯಯೋಃ ॥ ೪೮ ॥**

ಶೂನ್ಯವಾದಿಯು ಅನ್ಯತಾದಿಗಳಿಗೆ ಸತ್ವಾದಿ ಪದಾರ್ಥತ್ವದಿಂದಲೂ ಶೂನ್ಯ ವಿಶೇಷಣತ್ವದಿಂದಲೂ ವ್ಯಾವರ್ತಿಯನ್ನು ತಾನಾಗಿಯೇ ತಿಳಿಯುತ್ತಾನೆ. ಬೌದ್ಧರು ಅಪೋಹಪದಾರ್ಥವಾದಿಗಳೆನ್ನುವುದು ಪ್ರಸಿದ್ಧವೆಂದು ಹಿ ಶಬ್ದದಿಂದ ಸೂಚಿಸುತ್ತಾರೆ. ಬ್ರಹ್ಮ–ಶೂನ್ಯಗಳೆರಡೂ ನಿರ್ವಿಶೇಷವಾದುದರಿಂದ, ಮಾಯಾವಾದಿಗಳು ಹಾಗೂ ಶೂನ್ಯವಾದಿಗಳು ವಿಶೇಷವನ್ನು ಪ್ರತಿಜ್ಞೆ ಮಾಡಲಿಕ್ಕೆ ಶಕ್ಯವಾಗುವುದೇ ಇಲ್ಲ.

ಹಾಗಾದರೆ ಮಾಯಾವಾದಿಗಳು ವೇದಕ್ಕೆ ಪ್ರಾಮಾಣ್ಯವನ್ನೂ ನಿತ್ಯತ್ವವನ್ನೂ ಅಂಗೀಕರಿಸಿ ವೇದವಾಕ್ಯ ನಿರ್ವಾಹವನ್ನು ಮಾಡಿರುವರು. ಆದರೆ ಶೂನ್ಯವಾದಿಗಳು ವೇದಕ್ಕೆ ಪ್ರಮಾಣತ್ವವನ್ನೇ ಅಂಗೀಕರಿಸಿಲ್ಲ. ಆದ್ದರಿಂದ ವ್ಯಾವರ್ತಮಾತ್ರ ಭೇದಸ್ತು ಎನ್ನುವುದು ಹೇಗೆಂದರೆ –

**ಪ್ರಾಮಾಣ್ಯಾದಿ ಚ ವೇದಸ್ಯ ಫಲತಃ ಸಮಮೇವ ಹಿ ।**

**ಅತತ್ತ್ವಾವೇದಕಂ ಯಸ್ಮಾತ್ಪ್ರಮಾಣಂ ತೇನ ಕಥ್ಯತೇ ॥ ೪೯ ॥**

**ಅತತ್ತ್ವಾವೇದಕತ್ವಂ ಯದಪ್ರಾಮಾಣ್ಯಂ ಸತಾಂ ಮತಮ್ ।**

ವೇದಕ್ಕೆ ಪ್ರಾಮಾಣ್ಯ ಮೊದಲಾದುದಕ್ಕೆ ಶಬ್ದಮಾತ್ರದಿಂದ ಭೇದವಷ್ಟೆ. ಅರ್ಥದಿಂದ ಇಬ್ಬರಿಗೂ ಸಾಮ್ಯವೇ. ಆದ್ದರಿಂದ ವಾಕ್ಯಾರ್ಥನಿರ್ವಾಹವೂ ಸಮವೇ ಎಂದು ಹೇಳಿದ್ದು ಉಚಿತವೇ ಆಗಿದೆ. ಮಾಯಾವಾದಿಯು ವೇದವಾಕ್ಯಕ್ಕೆ ಪ್ರಾಮಾಣ್ಯವನ್ನು ಹೇಳುವುದು ಕೇವಲ ಕಪಟವೇ. ಪ್ರಮೇಯದಿಂದ ಶೂನ್ಯವಾದಿಗೆ ಸಮಾನವೇ. ಫಲತಃ ಸಾಮ್ಯವು ಹೇಗೆಂದರೆ – ವೇದವು ಅಯಥಾರ್ಥವನ್ನು ತಿಳಿಸಿ ಕೊಡತಕ್ಕ (ಅತತ್ತ್ವಾವೇದಕ) ಪ್ರಮಾಣವೆಂದು ಮಾಯಾವಾದಿಯು ಹೇಳುತ್ತಾನೆ. ಆದರೆ ಅತತ್ತ್ವಾವೇದಕತ್ವವು ಅಪ್ರಮಾಣವೆಂದು ವಿದ್ವಾಂಸರ ಮತವು.

ಹಾಗಾದರೆ ಅತತ್ತ್ವಾವೇದಕವಾಗಿದ್ದರೂ ಯಾವುದರ ವಿಷಯವು ಬ್ರಹ್ಮಜ್ಞಾನದ ದೆಶೆಯಿಂದ ಮೊದಲೇ ಬಾಧಿಸಲ್ಪಡುವುದೋ ಅದು ಅಪ್ರಮಾಣವು. ಯಾವುದರ ವಿಷಯವು ಬ್ರಹ್ಮಜ್ಞಾನದಿಂದಲೇ ಬಾಧ್ಯವಾಗುವುದೋ ಅದು ಪ್ರಮಾಣವು. ಹೀಗೆ ವ್ಯವಸ್ಥೆಯು. ವೇದವಿಷಯವಾದರೂ ಬ್ರಹ್ಮಜ್ಞಾನದಿಂದಲೇ ಬಾಧಿಸಲ್ಪಡುತ್ತದೆ. ಆದ್ದರಿಂದ ಅದಕ್ಕೆ ಪ್ರಾಮಾಣ್ಯವು ಎನ್ನುವ ಅಭಿಪ್ರಾಯದಿಂದ ಆಶಂಕಿಸುತ್ತಾರೆ –

**ದೀರ್ಘಭ್ರಾಂತಿಕರೀ ಚೇತ್ಸ್ಯಾದತತ್ತ್ವಾವೇದಕಪ್ರಮಾ ॥ ೫೦ ॥**

**ರಜ್ಜು ಸರ್ಪಾದಿವಿಜ್ಞಾನಾದಪ್ಯಾಧಿಕ್ಯಾದಮಾನತಾ ।**

**ಸ್ಯಾದಾಗಮಸ್ಯಾನಿವರ್ತ್ಯಮಹಾಮೋಹಪ್ರದತ್ವತಃ ॥ ೫೧ ॥**

**ತಲನೈಲ್ಯಾದಿವಿಜ್ಞಾನಮಾಕಾಶೇ ಮಾನತಾಂ ವ್ರಜೇತ್ ।**

**ಛತ್ರಾಕಾರತ್ವವಿಜ್ಞಾನಂ ಚಂದ್ರಪ್ರಾದೇಶತಾ ಮತಿಃ ॥ ೫೨ ॥**

ದೀರ್ಘಕಾಲ ಭ್ರಾಂತಿಗೆ ಕಾರಣವಾದುದು ಅತತ್ತ್ವಾವೇದಕ ಪ್ರಮಾಣವು ಎಂದು ಮತವಾಗಿದ್ದರೆ, ಅದು ಲೋಕಾನುಭವದಿಂದ ಹೇಳಿದ್ದೋ ಅಥವಾ ಸಂಕೇತ ಮಾತ್ರದಿಂದಲೋ ಎಂದು ವಿಕಲ್ಪ ಮಾಡಿ, ಮೊದಲನೆಯ ಕಲ್ಪದಲ್ಲಿ ದೋಷವನ್ನು ಹೇಳುತ್ತಾರೆ – ಹಗ್ಗ ಹಾವು ಇತ್ಯಾದಿ ಭ್ರಾಂತಿವಿಷಯಕ ಜ್ಞಾನಕ್ಕಿಂತಲೂ ಅಧಿಕವೂ, ಅಲ್ಪಕಾಲದಲ್ಲಿ ಹೋಗದಿರುವುದೂ ಆದ ಮಹಾ ಭ್ರಾಂತಿಯನ್ನು ನೀಡುವುದರಿಂದ ವೇದಕ್ಕೆ ಅಪ್ರಮಾಣ್ಯವು ಬರುವುದು. ಎರಡನೆಯ ಕಲ್ಪದಲ್ಲಿ ಅತಿಪ್ರಸಂಗವನ್ನು ಹೇಳುತ್ತಾರೆ – ಇಂದ್ರನೀಲಮಣಿಯ ನೈಲ್ಯದಂತೆ ಇರತಕ್ಕ ನೈಲ್ಯಾದಿ ಜ್ಞಾನವೂ, ಛತ್ರಾಕಾರತ್ವ ಜ್ಞಾನವೂ ಆಕಾಶದಲ್ಲಿ ಪ್ರಾಮಾಣ್ಯವನ್ನು ಹೊಂದುವುದು. ಚಂದ್ರನು ಪ್ರಾದೇಶಪರಿಮಿತನು ಎಂಬ ತಿಳಿವಳಿಕೆಯೂ ಮಾನ್ಯತೆಯನ್ನು ಹೊಂದುವುದು.

ಹಾಗಾದರೆ ಮಾಯಾವಾದಿಗಳು ಸಮಸ್ತವೇದವನ್ನೂ ಅತತ್ತ್ವಾವೇದಕ ಅಥವಾ ಅಪ್ರಮಾಣವೆಂದು ಹೇಳುವುದಿಲ್ಲ. ತತ್ವಮಸಿ ಇತ್ಯಾದಿ ಮಹಾವಾಕ್ಯಕ್ಕೂ ಯತ್ತದ ದ್ರೇಶ್ಯಮಗ್ರಾಹ್ಯಂ ಸತ್ಯ ಜ್ಞಾನಂ ಇತ್ಯಾದಿ ಅವಾಂತರವಾಕ್ಯಕ್ಕೂ ತತ್ತ್ವಾವೇದಕತ್ವವನ್ನು ಹೇಳುತ್ತಾರೆ. ಶೂನ್ಯವಾದಿಯು ಸಮಸ್ತ ವೇದಕ್ಕೂ ಅಪ್ರಾಮಾಣ್ಯವನ್ನು ಹೇಳುತ್ತಾನೆ. ಆದುದರಿಂದ ಸಾಮ್ಯವು ಹೇಗೆ ಎಂದರೆ –

**ನಿರ್ಭೇದತ್ವಂ ತು ಶೂನ್ಯಸ್ಯ ತೇನಾಪ್ಯಂಗೀಕೃತಂ ಸದಾ ।**

**ಸತ್ವಾಸತ್ವಾದಿಧರ್ಮಾಣಾಮಭಾವ ಉಭಯೋರ್ಮತಃ ॥ ೫೩ ॥**

ಶೂನ್ಯತತ್ವಕ್ಕೆ ಭೇದಾಭಾವವಾದರೂ ಶೂನ್ಯವಾದಿಯಿಂದಲೂ ಕೂಡ ಯಾವಾಗಲೂ ಅಂಗೀಕರಿಸಲ್ಪಟ್ಟಿದೆ. ತತ್ವಕ್ಕೆ ಸತ್ವ–ಅಸತ್ವ ಮೊದಲಾದ ಧರ್ಮಗಳ ಅಭಾವವು ಮಾಯಾವಾದಿ ಹಾಗೂ ಶೂನ್ಯವಾದಿಗಳಿಬ್ಬರಿಗೂ ಸಮ್ಮತವೇ ಆಗಿದೆ.

ಅಸತ್ವವೇ ಶೂನ್ಯವು. ಅದಕ್ಕೆ ಸತ್ವವು ಹೇಗೆಂದರೆ –

**ನ ಹಿ ಸತ್ಪ್ರತಿಯೋಗಿತ್ವಂ ಶೂನ್ಯತ್ವಂ ತೇನ ಚೇಷ್ಯತೇ ।**

**ನ ಚ ದುಃಖವಿರೋಧಿತ್ವಾದನ್ಯಾ ಹ್ಯಾನಂದತೇಷ್ಯತೇ ॥ ೫೪ ॥**

**ಮಾಯಿನಾ ಶೂನ್ಯಪಕ್ಷೇಽಪಿ ಜ್ಞಾನಂ ಜಾಡ್ಯವಿರೋಧಿ ಚ ।**

ಸತ್ತಿಗೆ ವಿರೋಧಿಯಾದ ಅಸತ್ವವು ಶೂನ್ಯತ್ವವೆಂದು ಶೂನ್ಯವಾದಿಯಿಂದಲೂ ಅಂಗೀಕರಿಸಲ್ಪಡುವುದಿಲ್ಲ. ನಿರ್ವಿಶೇಷತ್ವವೆಂಬ ಅಭಿಪ್ರಾಯದಿಂದಲೇ ಶೂನ್ಯವು ಹೇಳಲ್ಪಡುತ್ತದೆ ಹೊರತು ಅಸತ್ವವೆಂಬ ಅಭಿಪ್ರಾಯದಿಂದಲ್ಲ. ಏಕೆಂದರೆ ಅವರು ಶೂನ್ಯವನ್ನು ತತ್ವವೆಂದು ಅಂಗೀಕರಿಸಿದ್ದಾರೆ. ಮಾಯಾವಾದಿಯು ಹೇಳುವಂತಹ ಆನಂದತ್ವವನ್ನು ಶೂನ್ಯವಾದಿಯೂ ಅಂಗೀಕರಿಸುತ್ತಾನೆ. ಮಾಯಾವಾದಿಯಿಂದ ಅಂಗೀಕೃತವಾಗಿರುವ ಪ್ರಕಾರ ದುಃಖವಿರೋಧಿತ್ವವೇ ಆನಂದತ್ವವು, ಅದಕ್ಕಿಂತ ಇತರವಾದ ಧರ್ಮರೂಪವಾದ ಆನಂದತ್ವವು ಯಾವುದೂ ಇಲ್ಲ. ಶೂನ್ಯವಾದಿಯ

ಪ್ರಕಾರವೂ ಆನಂದತ್ವವು ದುಃಖವಿರೋಧಿತ್ವ ರೂಪವಾದುದು. ಹೀಗೆ ಸಾಮ್ಯವು. ಜ್ಞಾನವು ಜಾಡ್ಯಕ್ಕೆ ವಿರೋಧಿಯಾದುದು ಎಂಬುದಾಗಿಯೇ ಮಾಯಾವಾದಿಯಿಂದ ಹೇಳಲ್ಪಡುತ್ತದೆ. ಶೂನ್ಯವಾದಿಯೂ ಹೀಗೆಯೇ ಹೇಳುತ್ತಾನೆ.

ಮಾಯಾವಾದಿಯು ಬ್ರಹ್ಮನಿಗೆ ನಿರ್ವಿಶೇಷತ್ವಾದಿಗಳನ್ನು ಅಂಗೀಕರಿಸುವನು. ಶೂನ್ಯವಾದಿಯಾದರೂ ಶೂನ್ಯಕ್ಕೆ ನಿರ್ವಿಶೇಷತ್ವಾದಿಗಳನ್ನು ಅಂಗೀಕರಿಸುವನು. ಆದ್ದರಿಂದ ಸಾಮ್ಯವು ಹೇಗೆಂದರೆ –

**ಧರ್ಮಾಃ ಕೇಽಪಿ ನ ಸಂತ್ಯೇವ ಕೋ ವಿಶೇಷಸ್ತತಸ್ತಯೋಃ ।। ೫೫ ।।**

ಮಾಯಾವಾದಿಯ ಬ್ರಹ್ಮನಿಗೂ, ಶೂನ್ಯವಾದಿಯ ಶೂನ್ಯಕ್ಕೂ ಯಾವ ಧರ್ಮಗಳೂ ಇಲ್ಲವೇ ಇಲ್ಲ. ಬ್ರಹ್ಮ ಶೂನ್ಯಗಳಿಗೆ ವ್ಯಾವರ್ತಕ ಧರ್ಮಾಭಾವದ ಪ್ರಯುಕ್ತ ಅವುಗಳಿಗೆ ಯಾವ ವಿಶೇಷದಿಂದ ಭೇದವು ಹೇಳಲ್ಪಡುತ್ತದೆ? ಅಂದರೆ ಸಾಮ್ಯವೇ ಎಂದರ್ಥ.

ಹಾಗಾದರೆ ಹಿಂದೆ ಹೇಳಿದ ಅದ್ವೈತತತ್ವವು ಸೂತ್ರಕಾರರ ಸಿದ್ಧಾಂತವೇ ಆಗಿದೆ. ಆದ್ದರಿಂದ ದೂಷಣೆ ಮಾಡಲಿಕ್ಕಾಗಿ ಏಕೆ ಅದನ್ನು ಅನುವಾದಮಾಡಿದ್ದು ಎಂದರೆ –

**ಏತಾದೃಶಾನಾಂ ಪಕ್ಷಾಣಾಂ ದೂಷಣಂ ಪ್ರಭುಣಾ ಕೃತಮ್ ।**

**ಸ್ವಪಕ್ಷಸಾಧನೇನೈವ ನಾಭಾವ ಇತಿ ಚೋಕ್ತಿತಃ ।। ೫೬ ।।**

ಶೂನ್ಯಪಕ್ಷಕ್ಕೆ ಸದೃಶವಾದ ಪಕ್ಷಗಳಿಗೆ ವಿರುದ್ಧವಾದ ಸ್ವಪಕ್ಷವನ್ನು ಸಾಧನೆ ಮಾಡುವುದರಿಂದಲೇ ಆ ಪಕ್ಷಗಳಿಗೆ ದೂಷಣವು ಸಮರ್ಥರಾದ ವೇದವ್ಯಾಸರಿಂದ ಮಾಡಲ್ಪಟ್ಟಿತು. ಅಭಿಪ್ರಾಯವೇನೆಂದರೆ – ಅದ್ವೈತವು ಸೂತ್ರಕಾರರ ಸಿದ್ಧಾಂತವಲ್ಲ. ಏಕೆಂದರೆ ಪೃಥಗುಪದೇಶಾತ್ ಇತ್ಯಾದಿ ಸೂತ್ರಗಳಿಂದ ಐಕ್ಯಕ್ಕೆ ವಿರುದ್ಧವಾದ ಭೇದವನ್ನು ಸಾಧಿಸಿದ್ದಾರೆ. ಕೇವಲ ಅರ್ಥತಃ ದೂಷಣವಲ್ಲ, ಮತ್ತೆ ನಾಭಾವ ಉಪಲಬ್ಧೇಃ ಎನ್ನುವ ಉಕ್ತಿಯಿಂದಲೂ ಕೂಡ ದೂಷಣವು ಸೂತ್ರಕಾರರಿಂದ ಮಾಡಲ್ಪಟ್ಟಿದೆ.

ಹೀಗೆ ಏಕಜೀವ ಬಹುಜೀವ ಎಂಬ ಪ್ರಭೇದ ಸಹಿತವಾದ ಶೂನ್ಯವಾದಿಗಳಿಗೆ ಅಭಿಮತವಾದ ಮೋಕ್ಷವನ್ನು ಅನುವಾದ ಮಾಡಿ, ಸಾಧಾರಣವಾದ ದೋಷದಿಂದ ದೂಷಿಸಿದರು. 'ಪ್ರಸ್ತುತ ಪ್ರದೀಪಸ್ಯೈವ ನಿರ್ವಾಣಂ ವಿಮೋಕ್ಷಸ್ಯ ಭಾವಿನಃ' ಎಂದು ಆತ್ಮವಿನಾಶ ರೂಪವಾದ ಯಾವ ಮೋಕ್ಷವು ಶೂನ್ಯವಾದಿಯಿಂದ ಹೇಳಲ್ಪಟ್ಟಿದೋ ಅದನ್ನು ದೂಷಿಸುತ್ತಾರೆ –

**ಆತ್ಮಾಭಾವೇ ಪುಮರ್ಥಃ ಕ ಇಷ್ಟಸ್ಯಾತ್ಮಾವಧಿರ್ಯತಃ ।**

ಆತ್ಮನಿಗೆ ವಿನಾಶವಾದರೆ ಮೋಕ್ಷವು ಯಾವ ಪುರುಷಾರ್ಥವು? ಅಂದರೆ ಪುರುಷಾರ್ಥವೇ ಆಗಲಾರದು. ಏಕೆಂದರೆ ಎಲ್ಲ ಇಷ್ಟಪ್ರಾಪ್ತಿಗೆ ಆತ್ಮನೇ ಅವಧಿಯು ಅಂದರೆ ಆಶ್ರಯನು. ಪುರುಷನು ಆತ್ಮೇತರವಾದ ಕೇವಲ ಇಷ್ಟವಾದ ವಿತ್ತಾದಿಗಳ

ನಾಶವನ್ನೇ ಬಯಸುವುದಿಲ್ಲ. ಹೀಗಿರುವಾಗ ಇಷ್ಟತಮವಾದ ಆತ್ಮನ ನಾಶವನ್ನು ಇಚ್ಛಿಸುತ್ತಾನೆಯೇ?

**ಯದಿ ನಾತ್ಮಾವಧಿರ್ಮೋಕ್ಷೋ ಮೋಕ್ಷಃ ಸ್ಯಾದ್ಘಟಶೂನ್ಯತಾ ।। ೫೭ ।।**

ಮೋಕ್ಷವು ಆತ್ಮನಿಗೆ ಅವಧಿಯಾದುದು ಆಗದೇ ಇದ್ದ ಪಕ್ಷದಲ್ಲಿ, ಅಂದರೆ ಆತ್ಮನಿಗೂ ಶೂನ್ಯತ್ವವು ಪ್ರಾಪ್ತವಾದರೆ, ಆಗ ಘಟಶೂನ್ಯತ್ವವೂ ಕೂಡ ಮೋಕ್ಷವು ಎಂದಾಗುವುದು. ಘಟಶೂನ್ಯತ್ವ ರೂಪವಾದ ಮೋಕ್ಷಕ್ಕೆ ವೈರಾಗ್ಯಾದಿ ಸಾಧನೆಗಳ ಅವಶ್ಯಕತೆಯಿಲ್ಲ. ಹೀಗೆ ಅತಿಪ್ರಸಂಗವು.

ಹಾಗಾದರೆ ಈ ಅತಿಪ್ರಸಂಗವು ಯಾವುದರಿಂದ ಎಂದು ನಾವು ಕೇಳುತ್ತೇವೆ. ವಿಶೇಷಯಿಲ್ಲದಿರುವುದರಿಂದ ಎಂದು ಹೇಳಕೂಡದು. ಏಕೆಂದರೆ ಆತ್ಮಶೂನ್ಯತ್ವ, ಘಟಶೂನ್ಯತ್ವ ಎಂಬುದಾಗಿ ನೀವು ವಿಶೇಷವನ್ನು ಹೇಳಿದ್ದೀರಿ ಎಂದರೆ –

**ಕಲ್ಪಿತತ್ವಾದ್ವಿಶೇಷಾಣಾಂ ಮಾಯಿನೋಽಪಿ ಸಮಂ ಹಿ ತತ್ ।**

ಭಾವಾರ್ಥಪ್ರತಿಯೋಗಿತ್ವಂ ಭಾವತ್ವಂ ವಾ ನ ತತ್ವತಃ ಯಸ್ಯ ಎಂದು ಹೇಳಿರುವ ಪ್ರಯುಕ್ತ, ಶೂನ್ಯತಾ ಶಬ್ದದಿಂದ ಅಭಾವವು ಹೇಳಲ್ಪಡುವುದಿಲ್ಲ. ಮತ್ತೆ ನಷ್ಟವಾದ ಆತ್ಮವೆಂದೂ, ನಷ್ಟವಾದ ಘಟವೆಂದೂ ಹೇಳಲ್ಪಡುತ್ತದೆ. ಅವುಗಳು ಅಪ್ರಾಮಾಣಿಕವು. ಅಂತಹವುಗಳಿಗೆ ಪ್ರಾಮಾಣಿಕವಾದ ವಿಶೇಷಗಳು ಇರುವುದಿಲ್ಲ. ಆದಪ್ರಯುಕ್ತ ಆತ್ಮಶೂನ್ಯತ್ವ, ಘಟಶೂನ್ಯತ್ವ ಎನ್ನುವುದು ಕೇವಲ ವ್ಯವಹಾರಕ್ಕಾಗಿ ಕಲ್ಪಿತವಾದ ವಿಶೇಷಗಳು ಎಂದು ಅಂಗೀಕರಿಸಬೇಕು. ಆತ್ಮಾಭಾವ ಇತ್ಯಾದಿ ಉಕ್ತವಾದುದೆಲ್ಲವೂ ಮಾಯಾವಾದಿಗೂ ಸಮಾನವೇ.

ಹೀಗೆ ಆತ್ಮಶೂನ್ಯತ್ವಕ್ಕೆ ವಿಶೇಷವು ದೃಷ್ಟವಾಗಿದ್ದರೂ ಯಾವುದೋ ಒಂದು ಅಭಿಪ್ರಾಯದಿಂದ ನಿರ್ವಿಶೇಷತ್ವವು ಹೇಳಲ್ಪಡುತ್ತದೆ ಎಂದರೆ –

**ದೃಶ್ಯಮಾನೇ ವಿಶೇಷೇಽಪಿ ಯದಿ ಚೇದವಿಶೇಷತಾ ।। ೫೮ ।।**

**ಘಟಾಭಾವೇಽವಿಶೇಷಃ ಸ್ಯಾತ್ಪಾಶ್ಚಾತ್ಯಶ್ಚೇದನಾಗತಃ ।**

ಮೋಕ್ಷತ್ವರೂಪದಿಂದ ತಿಳಿಯಲ್ಪಡುವ ಶೂನ್ಯಭಾವಕ್ಕೆ ವಿಶೇಷವು ಕಂಡರೂ ವಿಶೇಷಾಭಾವವು ಇದೆ ಎಂದು ಹೇಳಿದರೆ ಘಟಾಭಾವದಲ್ಲಿಯೂ ನಿರ್ವಿಶೇಷತ್ವವು ಬರುವುದು. ಆತ್ಮಶೂನ್ಯಭಾವವು ವಿಶೇಷರಹಿತವು ಎಂದಾದರೆ ಅಪ್ರಾಪ್ತವಾದುದು ಆಗುವುದು.

ಶೂನ್ಯವಾದಿ ಹಾಗೂ ಮಾಯಾವಾದಿಗಳಿಬ್ಬರಿಂದಲೂ ಪ್ರತಿಪಾದಿಸಲ್ಪಟ್ಟ ಆತ್ಮ ವಿನಾಶ ಸ್ವರೂಪವಾದ ಮೋಕ್ಷದ ವಿಷಯದಲ್ಲಿ ಯಾವ ಪ್ರಮಾಣವೂ ಇಲ್ಲ. ಹೇಗೆಂದರೆ ಆತ್ಮವಿನಾಶವು ಪ್ರತ್ಯಕ್ಷಕ್ಕೆ ಗೋಚರವಲ್ಲ. ವೇದವನ್ನು ಪ್ರಮಾಣವೆಂದು ಶೂನ್ಯವಾದಿಗಳು ಅಂಗೀಕರಿಸಿಲ್ಲ. ಅವರು ಹೇಳುವ ಆಗಮವು ಪ್ರಮಾಣವೆಂದು

ನಾವು ಒಪ್ಪುವುದಿಲ್ಲ. ಆದ್ದರಿಂದ ಆತ್ಮಶೂನ್ಯತ್ವವು ಪುರುಷಾರ್ಥವು ದುಃಖ ನಿವೃತ್ತಿಗೆ ಉಪಯುಕ್ತವಾದ್ದರಿಂದ, ಶರೀರಾದಿಗಳ ಶೂನ್ಯತ್ವದಂತೆ ಎಂಬ ಅನುಮಾನ ವನ್ನು ಹೇಳಬೇಕು. ಸತ್ಪ್ರತಿಪಕ್ಷತ್ವ ಕಾರಣದಿಂದ ಅದು ಅನುಮಾನವೇ ಆಗುವುದಿಲ್ಲ ಎಂದು ಹೇಳುತ್ತಾರೆ –

**ನ ಮೋಕ್ಷೋ ವಿಮತೋ ಯಸ್ಮಾದದೇಹೋ ಘಟಶೂನ್ಯತಾ ॥ ೫೯ ॥**

**ಯಥೇತ್ಯುಕ್ತೇ ವದೇತ್ಕಿಂ ಸ ಯೋಽನುಮಾಮಾತ್ರಮಾನಕಃ ।**

ಶೂನ್ಯಭಾವ ಅಥವಾ ಬ್ರಹ್ಮಭಾವವು ಮೋಕ್ಷವಲ್ಲ ಎಂಬುದು ಪ್ರತಿಜ್ಞೆ. ದೇಹಾಭಾವತ್ವ ಎಂಬುದು ಹೇತು. ಘಟಾಭಾವ ಎಂಬುದು ದೃಷ್ಟಾಂತ. ಹೀಗೆ ಪ್ರತಿಪಕ್ಷಾನುಮಾನವನ್ನು ಹೇಳಿದರೆ, ಮೋಕ್ಷದ ವಿಷಯದಲ್ಲಿ ಅನುಮಾನವನ್ನು ಮಾತ್ರ ಪ್ರಮಾಣವೆಂದು ಅಂಗೀಕರಿಸುವ ಶೂನ್ಯವಾದಿಯು ಏನೆಂದು ಹೇಳುವನು?

ಈ ವಿಷಯದಲ್ಲಿ ಮಾಯಾವಾದಿಯು ಪ್ರತ್ಯನುಮಾನವು ಪ್ರಮಾಣವಲ್ಲ. ಏಕೆಂದರೆ ವಿದೇಹಾವಸ್ಥೈವ ಮೋಕ್ಷಃ ಎನ್ನುವ ಶ್ರುತಿಯಿಂದ ಇದು ಬಾಧಿತವಾಗಿದೆ ಎಂದು ಹೇಳುತ್ತಾನೆ. ಬ್ರಹ್ಮಭಾವ ಆವಿರ್ಭಾವವೇ ಮೋಕ್ಷ ಎಂದು ಶ್ರುತಿಯಿಂದ ತಿಳಿದುಬರುವುದರಿಂದ, ಬ್ರಹ್ಮಭಾವವು ಮೋಕ್ಷವಲ್ಲ ಎಂಬ ಅನುಮಾನದಿಂದ ಪ್ರಯೋಜನವಿಲ್ಲ ಎಂದರೆ –

**ನ ಚ ಮಾಯೀ ವದೇದತ್ರ ಪೂರ್ವೋಕ್ತೇನೈವ ವರ್ತ್ಮನಾ ॥ ೬೦ ॥**

**ಅಮಾನತ್ವಾತ್ ಶ್ರುತೇಸ್ತಸ್ಯ ನ ಚಾದೇಹತ್ವವಾದಿನೀ ।**

**ಶ್ರುತಿಃ ಕಾಚಿದದೇಹತ್ವಮಪ್ರಾಕೃತಶರೀರತಾ ॥ ೬೧ ॥**

ಈ ಅನುಮಾನದ ವಿಷಯದಲ್ಲಿ ಮಾಯಾವಾದಿಯು ಶ್ರುತಿಯನ್ನು ಆಶ್ರಯಿಸಿ ದೂಷಣವನ್ನು ಹೇಳಲಾರನು. ಹಾಗೂ ತನಗೆ ಅಭಿಮತವಾದ ಮೋಕ್ಷದಲ್ಲಿ ಶ್ರುತಿಯನ್ನು ಪ್ರಮಾಣವನ್ನಾಗಿ ಹೇಳಲಾರನು. ಏಕೆಂದರೆ ಹಿಂದೆ ಹೇಳಿದ ಪ್ರಕಾರದಿಂದಲೇ ಮಾಯಾವಾದಿಯ ಮತದಲ್ಲಿ ಅತತ್ತ್ವಾವೇದಕವಾದ ಶ್ರುತಿಗೆ ಪ್ರಾಮಾಣ್ಯವಿಲ್ಲ. ಮತ್ತೆ ಮುಕ್ತಿಯಲ್ಲಿ ದೇಹಾಭಾವವನ್ನು ಹೇಳತಕ್ಕ ಯಾವ ಶ್ರುತಿಯೂ ಇಲ್ಲವೇ ಇಲ್ಲ. ಶ್ರುತಿಯು ಹೇಳುವ ದೇಹರಾಹಿತ್ಯಕ್ಕೆ ಪ್ರಾಕೃತ ಶರೀರ ರಾಹಿತ್ಯವೆಂದು ಅರ್ಥ, ಹೊರತು ಸರ್ವಥಾ ದೇಹರಾಹಿತ್ಯವೆಂದಲ್ಲ.

ಅಶರೀರತ್ವವನ್ನು ಹೇಳುವ ಶ್ರುತಿಗೆ ಏಕೆ ಅರ್ಥಸಂಕೋಚವು ಮಾಡಲ್ಪಡುತ್ತದೆ ಎಂದರೆ –

**ಮೋಕ್ಷೇ ಭೋಗಂ ಯತೋ ಬ್ರೂತೇ ಜಕ್ಷನ್ ಕ್ರೀಡನ್ನಿತಿ ಶ್ರುತಿಃ ।**

'ಸ ತತ್ರ ಪರ್ಯೇತಿ ಜಕ್ಷನ್ ಕ್ರೀಡನ್ ರಮಮಾಣಃ ಸ್ತ್ರೀಭಿರ್ವಾ ಯಾನೈರ್ವಾ ಜ್ಞಾತಿಭಿರ್ವಾಽಜ್ಞಾತಿಭಿರ್ವಾ' ಎಂಬ ಶ್ರುತಿಯು ಮೋಕ್ಷದಲ್ಲಿ ಸ್ತ್ರೀ ಇತ್ಯಾದಿಗಳಿಂದ

ಭೋಗವನ್ನು ಹೇಳುತ್ತದೆ. ದೇಹವಿಲ್ಲದವನಿಗೆ ಭೋಗವು ಕೂಡುವುದಿಲ್ಲ. ಆದ್ದರಿಂದ ದೇಹವಿಲ್ಲ ಎಂದು ಹೇಳುವ ಶ್ರುತಿಗೆ ಪ್ರಾಕೃತ ದೇಹವಿಲ್ಲವೆಂದು ಅರ್ಥಸಂಕೋಚ ಮಾಡಿದ್ದು.

ಪರಕೀಯಾನುಮಾನಕ್ಕೆ ಪ್ರತಿಪಕ್ಷಾಂತರವನ್ನು ಹೇಳುತ್ತಾರೆ –

**ನಿರ್ದುಃಖತ್ವಾನ್ನ ತನ್ಮೋಕ್ಷಃ ಪ್ರತಿಪನ್ನಂ ಯಥೇತಿ ಚ ।। ೬೨ ।।**

**ಅನುಮಾ ದೂಷಣಂ ಕಿಂ ಸ್ಯಾದ್ವಾದಿನೋಃ ಶೂನ್ಯಮಾಯಿನೋಃ ।**

ಶೂನ್ಯತ್ವವಾಗಲೀ ಬ್ರಹ್ಮಭಾವವಾಗಲೀ ಮೋಕ್ಷವು ಆಗುವುದಿಲ್ಲ. ದುಃಖಾಭಾವ ನಿಮಿತ್ತದಿಂದ, ಘಟಶೂನ್ಯತ್ವದಂತೆ ಎಂಬ ಅನುಮಾನಕ್ಕೆ ಮಾಯಿಗಳು ಹಾಗೂ ಶೂನ್ಯವಾದಿಗಳ ಮತದಲ್ಲಿ ದೂಷಣವು ಏನು ಆಗುವುದು?

**ದುಃಖಂ ದುಃಖಾದಭಿನ್ನತ್ವಾನ್ಮೋಕ್ಷೋಽಪಿ ಸ್ಯಾದಸಂಶಯಮ್ ।। ೬೩ ।।**

ಶೂನ್ಯತ್ವ ಅಥವಾ ಬ್ರಹ್ಮತ್ವ ರೂಪವಾದ ಮೋಕ್ಷವೂ ಕೂಡ ದುಃಖದಿಂದ ಅಭಿನ್ನವಾದುದರಿಂದ ನಿಸ್ಸಂಶಯವಾಗಿ ದುಃಖಾತ್ಮವೇ ಆಗುವುದು.

ದುಃಖಪ್ರತಿಯೋಗಿಕ ಭೇದಾಭಾವವು ಯಾವ ಕಾರಣದಿಂದ ಎಂದರೆ –

**ಭೇದೇ ಸದ್ದ್ವೈತತತ್ವೈವ ಸ್ಯಾದಿತ್ಯಾದ್ಯಮಿತದೋಷತಃ ।**

**ಹೇಯಂ ಮಾಯಾಮತೇನೈವ ಸಹ ಶೂನ್ಯಮತಂ ಬುಧೈಃ ।। ೬೪ ।।**

ದುಃಖ ನಿಮಿತ್ತಕವಾಗಿ ಶೂನ್ಯಬ್ರಹ್ಮರಿಗೆ ಭೇದವಿದ್ದರೆ ಸತ್ಯವಾದ ದ್ವೈತತತ್ವವೇ ಅಂಗೀಕರಿಸಲ್ಪಡಬೇಕು. ಇದರಿಂದ ಅಪಸಿದ್ಧಾಂತವು. ಇದೇ ಮೊದಲಾದ ಅಪರಿಮಿತ ದೋಷಗಳ ನಿಮಿತ್ತದಿಂದ ಶೂನ್ಯವಾದವು ಮಾಯಾವಾದದೊಂದಿಗೆ ಕೂಡಿಕೊಂಡೇ ಜ್ಞಾನಿಗಳಿಂದ ತ್ಯಾಜ್ಯವು.

ವಿಜ್ಞಾನವಾದಿಗಳಿಗೆ ಅಭಿಮತವಾದ ಮೋಕ್ಷಸ್ವರೂಪವನ್ನು ಕೂಡ ಮೇಲೆ ಹೇಳಿದ ದೋಷಗಳ ಅತಿದೇಶದಿಂದ ನಿರಾಕರಿಸುತ್ತಾರೆ –

**ಏವಂ ವಿಜ್ಞಾನವಾದೋಽಪಿ ಜ್ಞಾನಮಾತ್ರವಿಶೇಷತಃ ।**

**ತಸ್ಯಾಪಿ ಭಂಗುರತ್ವಾದಿವಿಶೇಷಮಪಹಾಯ ಹಿ ।। ೬೫ ।।**

**ಅದ್ವೈತತಾಮತಂ ಸಾಕ್ಷಾದುಕ್ತದೋಷಸ್ತತೋ ಭವೇತ್ ।**

ಮಾಯಾವಾದಿ ಶೂನ್ಯವಾದಿಗಳಿಗೆ ಸಮ್ಮತವಾದ ಮೋಕ್ಷದಂತೆಯೇ ವಿಜ್ಞಾನ ವಾದಿಗಳ ಮೋಕ್ಷವೂ ತ್ಯಾಜ್ಯವು. ಹಾಗಾದರೆ ವಿಜ್ಞಾನವಾದಿಗಳು ಹೇಳುವ ವಿಜ್ಞಾನ ಎಂಬ ತತ್ವಕ್ಕೂ ಕ್ಷಣಿಕತ್ವ ಸ್ವಪ್ರಕಾಶತ್ವಗಳು ಇವೆ. ಪೂರ್ವೋಕ್ತಗಳು ಹೀಗಿಲ್ಲ. ಹೀಗೆ ವೈಷಮ್ಯವಿರುವುದರಿಂದ ಅತಿದೇಶವು ಕೂಡುವುದಿಲ್ಲ ಎಂದರೆ – ಜ್ಞಾನಮಾತ್ರ

ರೂಪವಾದ ವಿಶೇಷವನ್ನೂ ಕ್ಷಣಿಕತ್ವಾದಿ ವಿಶೇಷವನ್ನೂ ಬಿಟ್ಟರೆ ವಿಜ್ಞಾನವಾದವೂ ಕೂಡ ಅದ್ವೈತಮತವೇ ಎಂದು ತಿಳಿಯುತ್ತದೆ. ಆದ್ದರಿಂದ ಅಲ್ಲಿ ಉಕ್ತವಾದ ದೋಷಗಳು ಇಲ್ಲಿಯೂ ಅನ್ವಯವಾಗುತ್ತವೆ.

ಈ ಮತವನ್ನು ನಿರಾಕರಸಲಿಕ್ಕಾಗಿ ಅನುಮಾನಾಂತರವನ್ನೂ ಹೇಳುತ್ತಾರೆ –

**ಕಾಲೋ ನ ಕೇವಲಜ್ಞಾನೀ ಕಾಲತ್ವಾತ್ ಪ್ರತಿಪನ್ನವತ್ ।। ೬೬ ।।**

**ಏತಯಾನುಮಯಾ ರೋಧಾನ್ನ ತಾದೃಜ್ಮೋಕ್ಷರೂಪತಾ ।**

ಮೋಕ್ಷಕಾಲವು ಅದ್ವಿತೀಯಜ್ಞಾನವುಳ್ಳದ್ದು ಆಗುವುದಿಲ್ಲ, ಕಾಲವಾದ್ದರಿಂದ ವರ್ತಮಾನ ಕಾಲದಂತೆ. ಈ ಅನುಮಾನದಿಂದ ವಿರೋಧವಿದ್ದುದರಿಂದ ಅಂತಹ ಮೋಕ್ಷಸ್ವರೂಪವು, ಅಂದರೆ ಅದ್ವಿತೀಯಜ್ಞಾನತಾದಾತ್ಮ್ಯ ರೂಪವಾದ ಮೋಕ್ಷವು, ಆಗುವುದಿಲ್ಲ.

ಜ್ಞಾನಾತಿರಿಕ್ತವಾದ ಯಾವ ಪದಾರ್ಥವೂ ಇಲ್ಲವೆಂದು ಹೇಳುವ ಮತದಲ್ಲಿ ಕಾಲವೂ ಇಲ್ಲವೇ ಇಲ್ಲ. ಆದ್ದರಿಂದ ಅನುಮಾನ ಪ್ರವೃತ್ತಿಗೆ ಯಾವುದು ಆಶ್ರಯವು ಎಂದರೆ –

**ಯದಿ ಕಾಲೋಽಪಿ ನೇತ್ಯಾಹ ಕದೇತಿ ಪ್ರಶ್ನ ಉತ್ತರಮ್ ।। ೬೭ ।।**

**ಕಿಂ ವಕ್ಷ್ಯತಿ ಯದಾವಸ್ಥಾಂ ವದೇತ್ಸಾ ಪಕ್ಷತಾಂ ವ್ರಜೇತ್ ।**

ವಿಜ್ಞಾನವಾದಿಯು ಕಾಲವೂ ಕೂಡ ಇಲ್ಲವೆಂದು ಹೇಳಿದಾಗ, ಯಾವಾಗ ಕಾಲವು ಇರುವುದಿಲ್ಲ ಎಂದು ಪ್ರಶ್ನೆ ಮಾಡಿದರೆ ಅದಕ್ಕೆ ಅವನು ಉತ್ತರವನ್ನು ಏನೆಂದು ಹೇಳುವನು? ಮೋಕ್ಷಾವಸ್ಥೆಯಲ್ಲಿ ಕಾಲವು ಇರುವುದಿಲ್ಲ ಎಂದು ಅವನು ಹೇಳಿದರೆ, ಆಗ ಮೋಕ್ಷಾವಸ್ಥೆಯು ಪೂರ್ವಾನುಮಾನದಲ್ಲಿ ಪಕ್ಷತ್ವವನ್ನು ಅಂದರೆ ಪಕ್ಷದ ಏಕದೇಶವಾದ ಧರ್ಮಿತ್ವವನ್ನು ಹೊಂದುವುದು. ಮೋಕ್ಷಾವಸ್ಥೆಯು ಕೇವಲ ಜ್ಞಾನವತಿಯಲ್ಲ ಎಂದು ಪ್ರತಿಜ್ಞೆ ಮಾಡಲ್ಪಡುತ್ತದೆ ಎಂದರ್ಥ.

ಹೀಗಾದರೆ ಕಾಲತ್ವಾತ್ ಎಂಬ ಹೇತುವು ಸ್ವರೂಪಸಿದ್ಧವಾಗುವುದು ಎಂದರೆ –

**ಅವಸ್ಥಾತ್ವಾದಿತಿ ಹ್ಯೇವ ಹೇತುಃ ಸಾಪಿ ಕದೇತಿ ಚ ।। ೬೮ ।।**

**ಪೃಷ್ಟೇ ಕಾಲಶ್ಚ ವಕ್ತವ್ಯೋ ನಾಕಾಲತ್ವಂ ತತೋ ಭವೇತ್ ।**

ಅವಸ್ಥೆಯನ್ನು ಪಕ್ಷೀಕರಿಸಿದ ಪಕ್ಷದಲ್ಲಿ, ಅವಸ್ಥಾತ್ವಾತ್ ಎನ್ನುವ ಹೇತುವೇ ಹೇಳಲ್ಪಡುತ್ತದೆ, ಕಾಲತ್ವಾತ್ ಎಂಬುದಲ್ಲ. ಆದ್ದರಿಂದ ಹಿಂದೆ ಹೇಳಿದ ದೋಷವಿಲ್ಲ. ಕಾಲಾಭಾವಕ್ಕೆ ಅಧಿಕರಣವಾಗಿ ಹೇಳಲ್ಪಡುವ ಆ ಮೋಕ್ಷಾವಸ್ಥೆಯೂ ಕೂಡ ಯಾವಾಗ ಎಂದು ಯಾರಿಂದಲಾದರೂ ಕೇಳಲ್ಪಟ್ಟರೆ, ಭಾವನಾಪರಿಪಾಕವಾದ ಅನಂತರದ ಕಾಲದಲ್ಲಿ ಎಂದು ಅವಸ್ಥಾಕ್ಕೆ ಅಧಿಕರಣವಾಗಿ ಕಾಲವನ್ನೇ ಹೇಳಬೇಕು.

ಆದ್ದರಿಂದ. ಕಾಲವು ಸರ್ವಥಾ ಅಪರಿಹಾರ್ಯವಾದ ಪ್ರಯುಕ್ತ, ಕಾಲಾಭಾವವು ಉಂಟಾಗುವುದಿಲ್ಲ.

**ನ ಕಾಲ ಇತಿ ಸಾಮಾನ್ಯನಿಷೇಧೇ ಕಾಲಗಪ್ರಮಾ ॥ ೧೯ ॥**

**ನಿರುಣದ್ಧಿ ಸಮಶ್ಚಾಯಂ ತ್ರಯಾಣಾಮುಕ್ತವಾದಿನಾಮ್ ।**

ಕಾಲವಿಲ್ಲ ಎಂದು ಕಾಲಕ್ಕೆ ಸಾಮಾನ್ಯತಃ ನಿಷೇಧವನ್ನು ಹೇಳಲು ಬರುವುದಿಲ್ಲ. ಏಕೆಂದರೆ ಕಾಲವನ್ನು ಗ್ರಹಿಸತಕ್ಕ ಸಾಕ್ಷಿಯು ಆ ನಿಷೇಧವನ್ನು ತಡೆಯುತ್ತದೆ. ಈ ಸಾಕ್ಷಿವಿರೋಧವು ಕೇವಲ ವಿಜ್ಞಾನವಾದಿಗೆ ಮಾತ್ರವಲ್ಲ, ಮತ್ತೆ ಮೂವರಿಗೂ ಅಂದರೆ ವಿಜ್ಞಾನವಾದಿಗಳು, ಮಾಯಾವಾದಿಗಳು ಹಾಗೂ ಶೂನ್ಯವಾದಿಗಳಿಗೂ ಸಮಾನವೇ.

ಶೂನ್ಯವಾದಿ ಮಾಯಾವಾದಿಗಳಿಗೆ ಈ ಸಾಕ್ಷಿವಿರೋಧವು ಕೂಡುವುದಿಲ್ಲ. ಏಕೆಂದರೆ ಅವರು ಕಾಲಾಭಾವವನ್ನು ಅಂಗೀಕರಿಸಿಲ್ಲ ಎಂದರೆ –

**ಏಕಜೀವತ್ವಪಕ್ಷೇ ತು ಕಾಲಾಭಾವಾದಿಯಂ ಪ್ರಮಾ ॥ ೨೦ ॥**

**ಕುಪಿತಾ ಕಾಲಮಾಧಾಯ ದ್ವೈತಮೇವೋಪಪಾದಯೇತ್ ।**

ಮಾಯಾವಾದಿ–ಶೂನ್ಯವಾದಿಗಳಲ್ಲಿ ಬಹುಜೀವವಾದಿಗಳು ಕಾಲವನ್ನು ಒಪ್ಪುತ್ತಾರೆ ಎನ್ನುವುದು ನಿಜವೇ. ಅವರ ವಿಷಯದಲ್ಲಿ ನಾವು ಸಾಕ್ಷಿ ವಿರೋಧವನ್ನು ಹೇಳುವುದಿಲ್ಲ. ಆದರೆ ಅವರಲ್ಲಿ ಒಂದು ವರ್ಗವು ಒಬ್ಬನ ಮುಕ್ತಿಯಿಂದಲೇ ಎಲ್ಲರ ಮುಕ್ತಿಯು, ಒಬ್ಬನು ಮುಕ್ತನಾದಮೇಲೆ ಏನೂ ಉಳಿಯದು ಎಂದು ಹೇಳುತ್ತದೆ. ಏಕಜೀವವಾದಿಗಳು ಎಂದು ಹೇಳಲ್ಪಡುವ ಈ ವರ್ಗದವರು ಮುಕ್ತಿಯಲ್ಲಿ ಕಾಲದ ಅಭಾವವನ್ನು ಅಂಗೀಕರಿಸುತ್ತಾರೆ. ಈ ಮತವು ಸಾಕ್ಷಿಪ್ರಮಾಣಕ್ಕೆ ವಿರುದ್ಧವು. ಈ ಸಾಕ್ಷಿಯು ಕಾಲವನ್ನು ಗ್ರಹಿಸುವುದರಿಂದ ದ್ವೈತವನ್ನೇ ಉಪಪಾದಿಸುವುದು.

ಮೂರು ವಾದಿಗಳ ಮತದಲ್ಲಿಯೂ ಸಾಧಾರಣವಾದ ದೋಷವನ್ನು ಹೇಳತಕ್ಕ ಅನುಮಾನಾಂತರವನ್ನು ಹೇಳುತ್ತಾರೆ –

**ವಿಮತಃ ಪ್ರಪಂಚವಾನ್ ಕಾಲಃ ಕಾಲತ್ವಾತ್ಪ್ರತಿಪನ್ನವತ್ ॥ ೨೧ ॥**

**ಇತಿ ಚಾನ್ಯಾನುಮೈಕತ್ವಂ ಜೀವಸ್ಯ ವಿನಿವಾರಯೇತ್ ।**

ವಿವಾದ ವಿಷಯವಾದ ಮೋಕ್ಷಕಾಲವು ಆಕಾಶಾದಿ ಪ್ರಪಂಚವುಳ್ಳದ್ದು ಕಾಲತ್ವ ವಿರುವುದರಿಂದ, ವರ್ತಮಾನ ಕಾಲದಂತೆ. ಹೀಗೆ ಅನುಮಾನಾಂತರವೂ ಕೂಡ ಮುಕ್ತನಿಗೆ ಐಕ್ಯವನ್ನು ನಿರಾಕರಿಸುತ್ತದೆ.

ಹಿಂದೆ ಹೇಳಿದ ಅತಿದೇಶದಿಂದ ಇತರ ಅದ್ವೈತಮತಗಳನ್ನು ದೂಷಿಸುತ್ತಾರೆ –

**ಕಾಲಶಬ್ದೇಶ್ವರೈಕತ್ವಮತಾನ್ಯಪ್ಯೇವಮೇವ ಹಿ ॥ ೨೨ ॥**

**ನಿರಾಕೃತಾನಿ ತೇಷಾಂ ಚ ಸಮತ್ವಾತ್ಪಕ್ಷದೋಷಯೋಃ**

ಕಾಲ ಶಬ್ದ ಈಶ್ವರರಿಗೆ ಐಕ್ಯವನ್ನು ಹೇಳುವ ಮತಗಳೂ ಕೂಡ ಹೀಗೆಯೇ ನಿರಾಕೃತವಾಗಿವೆ. ಹೇಗೆಂದರೆ, ಶೂನ್ಯನಾದಿ ಪ್ರಭೃತಿಗಳಿಗೂ ಇವರಿಗೂ ಪಕ್ಷದಲ್ಲಿ ಸಾಮ್ಯವಿದೆ. ಪರಮೇಷ್ಟನಾದ ಆತ್ಮನ ನಾಶವನ್ನು ಇವರೂ ಒಪ್ಪಿರುವ ಪ್ರಯುಕ್ತ ಮೋಕ್ಷಕ್ಕೆ ಅಪುರುಷಾರ್ಥತ್ವ ಮೊದಲಾದ ದೋಷದಲ್ಲಿಯೂ ಕೂಡ ಸಾಮ್ಯವಿದೆ.

**ವೈಭಾಷಿಕ ಸೌತ್ರಾಂತಿಕರಿಗೆ ಅಭಿಮತವಾದ ಮೋಕ್ಷವನ್ನು ನಿರೂಪಿಸುತ್ತಾರೆ –**

**ಜ್ಞಾನಂ ಸ್ವರಸಭಂಗ್ಯೇವ ನಿತ್ಯಸಂತಾನಮಿಷ್ಯತೇ ॥ ೭೩ ॥**

**ಬೌದ್ಧಾಭ್ಯಾಮಪರಾಭ್ಯಾಂ ತು ....................... ।**

ಶೂನ್ಯವಾದಿ ವಿಜ್ಞಾನವಾದಿಗಳಿಂದ ಇತರರಾದ ವೈಭಾಷಿಕ ಸೌತ್ರಾಂತಿಕರೆಂಬ ಬೌದ್ಧರಿಂದಲಾದರೂ ಜ್ಞಾನಕ್ಕೆ ಸ್ವಭಾವದಿಂದಲೇ ನಾಶವು, ಜ್ಞಾನಸಂತಾನವಾದರೂ ನಿತ್ಯವು ಎಂದು ಅಂಗೀಕರಿಸಲ್ಪಡುತ್ತದೆ.

ಬೌದ್ಧ ಮತದ ಅಭಿಪ್ರಾಯವು ಹೀಗಿದೆ – ಜ್ಞಾನವೇ ಆತ್ಮನು. ಆ ಜ್ಞಾನವು ಸ್ವಭಾವತಃ ಭಂಗುರವಾದುದು. ಆದ್ದರಿಂದಲೇ ಕ್ಷಣಿಕವು. ಜ್ಞಾನಸಂತಾನವಾದರೂ ನಿತ್ಯವು. ಅದಕ್ಕೆ ಅನಾದಿಯಾದ ಸಂಸ್ಕಾರದಿಂದ ವಿಷಯಸಂಬಂಧ ಉಂಟಾದಾಗ ಉತ್ಪತ್ತಿಯಾಗುವುದೇ ಸಂಸಾರ. ವಿಷಯಸಂಬಂಧವು ಕಳಚಿದಾಗ ಉಂಟಾಗುವ ಶುದ್ಧವಾದ ಜ್ಞಾನವೇ ಮೋಕ್ಷ. ಎರಡು ಪ್ರಕಾರದ ಬೌದ್ಧರಿಗೂ ಇದು ಸಮಾನವು. ಸೌತ್ರಾಂತಿಕರಾದರೂ ಸಂಸಾರದಲ್ಲಿ ಸಾಕಾರತ್ವವನ್ನೂ ಮುಕ್ತಿಯಲ್ಲಿ ನಿರಾಕಾರತ್ವ ರೂಪವಾದ ವಿಶೇಷವನ್ನೂ ಹೇಳುತ್ತಾರೆ.

**ಅದನ್ನು ನಿರಾಕರಿಸುತ್ತಾರೆ –**

**.............................. ತತ್ರಾಪ್ಯುಕ್ತಾನುಮಾ ರಿಪುಃ ।**

ಅದರಲ್ಲಿಯೂ 'ವಿಮತಃ ಕಾಲಃ ಪ್ರಪಂಚವಾನ್ ಕಾಲತ್ವಾದಿದಾನೀಂತನ ಕಾಲವತ್' ಇತ್ಯಾದಿ ಪೂರ್ವೋಕ್ತ ಅನುಮಾನಕ್ಕೆ ಸದೃಶವಾದ 'ವಿಮತಃ ಕಾಲೋ ನ ನಿರ್ವಿಷಯೈತಜ್ಜ್ಞಾನಸಂತತಿಮಾನ್ ಕಾಲತ್ವಾದಿದಾನೀಂತನಕಾಲವತ್' ಎನ್ನುವ ಅನುಮಾನವು ವಿರೋಧಿಯು.

ಅನುಮಾನಾಂತರವನ್ನು ಹೇಳುತ್ತಾರೆ –
**ಮೋಕ್ಷೋ ನ ಶುದ್ಧವಿಜ್ಞಾನಸಂತಾನೀ ಕಾಲಗತ್ವತಃ ॥ ೭೪ ॥**
**ಪ್ರತಿಪನ್ನೋ ಯಥೇತ್ಯೇತದನುಮಾನಂ ತದುತ್ತರಮ್ ।**

ಮೋಕ್ಷವು ನಿರ್ವಿಷಯಕವಾದ ಚಿತ್ಸಂತಾನ ಸಂಬಂಧಿಯಲ್ಲ. ಕಾಲಸಂಬಂಧಿತ್ವವನ್ನು ಹೊಂದಿರುವ ಪ್ರಯುಕ್ತ ವರ್ತಮಾನಕಾಲೀನ ಸಂಸಾರದಂತೆ, ಎಂಬ ಅನುಮಾನವೇ ಈ ಪಕ್ಷಕ್ಕೆ ದೂಷಣವು.

ಈ ಮೋಕ್ಷವು ಅಪ್ರಾಮಾಣಿಕವೂ ಆಗಿದೆ. ಹಿಂದೆ ಹೇಳಿದಂತೆ ಇದಕ್ಕೆ ಪ್ರತ್ಯಕ್ಷ ಆಗಮಗಳ ಪ್ರಮಾಣವಿಲ್ಲ. ಕೇವಲ ಅನುಮಾನವನ್ನೇ ಹೇಳಬೇಕು. ಈ ಮೋಕ್ಷಕ್ಕೆ ಪ್ರಾಮಾಣ್ಯವನ್ನು ಹೇಳುವುದರಲ್ಲಿ ಅನುಮಾನಗಳೂ ಇಲ್ಲ ಎಂದು ಹೇಳುತ್ತಾರೆ –

**ಅನುಮಾನಾನಿ ಸರ್ವಾಣಿ ಪ್ರತಿಸಾಧನಯೋಗತಃ ।। ೭೫ ।।**

**ನಿಷಿದ್ಧಾನ್ಯುಕ್ತಭಂಗ್ಯೈವ ಶ್ರುತಯಾಶ್ಚಾಸ್ಮದುಕ್ತಿಗಾಃ ।**

ಎಲ್ಲ ಅನುಮಾನಗಳೂ ಹಿಂದೆ ಹೇಳಿದ ರೀತಿಯಿಂದಲೇ ಪ್ರತಿಪಕ್ಷದ ಸಂಬಂಧ ದಿಂದ ನಿಷೇಧಿಸಲ್ಪಟ್ಟಿವೆ. ಶ್ರುತಿಗಳೂ ಕೂಡ ನಾವು ಹೇಳಿರುವಂತಹ ಮೋಕ್ಷವನ್ನೇ ಪ್ರತಿಪಾದಿಸುತ್ತವೆ.

ಈಗ ಮೋಕ್ಷಸ್ವರೂಪದ ವಿಷಯದಲ್ಲಿ ಸಾಂಖ್ಯನೈಯಾಯಿಕಾದಿಗಳ ಮತವನ್ನು ನಿರಾಕರಿಸುತ್ತಾರೆ –

**ಸಾಂಖ್ಯನೈಯಾಯಿಕಾದ್ಯಾಶ್ಚ ಪ್ರಾಹುರ್ಮೋಕ್ಷಂ ಚ ನಿಃಸುಖಮ್ ।। ೭೬ ।।**

**ಇಚ್ಛಾದ್ವೇಷಪ್ರಯತ್ನಾದೇರಪಿ ಸರ್ವಾತ್ಮನಾ ಲಯಮ್ ।**

**ತತ್ರಾಹುರ್ನೈತದಪ್ಯತ್ರ ಶೋಭನಂ ಶ್ರುತಯೋ ಯತಃ ।। ೭೭ ।।**

**ಮಹಾನಂದಂ ಚ ಭೋಗಂ ಚ ನಿಯಮೇನ ವದಂತಿ ಹಿ ।**

ಸಾಂಖ್ಯರು, ನೈಯಾಯಿಕರು, ವೈಶೇಷಿಕರೇ ಮೊದಲಾದವರು ಮುಕ್ತಿಯನ್ನು ಸುಖರಹಿತವೆಂಬುದಾಗಿ ಹೇಳುತ್ತಾರೆ. ಹಿಂದಿನವರಂತೆಯೇ ಇವರೂ ಅನುಪಪನ್ನ ಭಾಷಿಗಳೇ ಎಂದು ಚ ಶಬ್ದದಿಂದ ಸೂಚಿಸಿದ್ದಾರೆ. ಅನುಪಪನ್ನ ಭಾಷಿಗಳು ಏಕೆಂದರೆ ಅವರು ಮುಕ್ತಿಯಲ್ಲಿ ಇಚ್ಛೆ ದ್ವೇಷ ಪ್ರಯತ್ನಾದಿಗಳಿಗೆ ಎಲ್ಲ ಪ್ರಕಾರದಿಂದಲೂ ನಾಶವನ್ನು ಹೇಳುತ್ತಾರೆ. ಮುಕ್ತಿಯಲ್ಲಿ ಸುಖರಾಹಿತ್ಯವನ್ನು ಹೇಳುವ ಮತವೂ ಕೂಡ ಶೋಭಿಸುವುದಿಲ್ಲ. ಏಕೆಂದರೆ ಶ್ರುತಿಗಳು ಮುಕ್ತಿಯಲ್ಲಿ ಮಹದಾನಂದವನ್ನೂ ಹಾಗೂ ಅದರ ಅನುಭವವನ್ನೂ ಅವಿರೋಧವಾಗಿ ಹೇಳುತ್ತವೆ. ಹಿ ಎಂಬ ಶಬ್ದದಿಂದ ಈ ಶ್ರುತಿಗಳು ಪ್ರಸಿದ್ಧವಾಗಿವೆ ಎಂದು ಹೇಳುತ್ತಾರೆ.

ಹಾಗಾದರೆ 'ಅಶರೀರಂ ವಾವ ಸಂತಂ ನ ಪ್ರಿಯಾಪ್ರಿಯೇ ಸ್ಪೃಶತಃ' ಎಂದು ಮುಕ್ತನಿಗೆ ದುಃಖದಂತೆ ಸುಖದ ನಾಶವೂ ಕೂಡ ಶ್ರುತವಾಗಿದೆ. ಹಾಗೆಯೇ ನ ಪ್ರೇತ್ಯ ಸಂಜ್ಞಾಸ್ತಿ ಎಂದು ಜ್ಞಾನಾಭಾವವೂ ಕೂಡ ಹೇಳಲ್ಪಟ್ಟಿದೆ. ಆದುದರಿಂದ ಮುಕ್ತನಿಗೆ ಆನಂದಾನುಭವವುಂಟು ಎನ್ನುವುದು ಹೇಗೆ ಕೂಡುತ್ತದೆ ಎಂದರೆ –

**ಪ್ರಾಕೃತಪ್ರಿಯಹಾನಿಸ್ತು ಪ್ರಿಯಾಸ್ಪೃಷ್ಟಿರಿತೀರ್ಯತೇ ।। ೭೮ ।।**

**ಅಪ್ರಿಯಂ ಪ್ರತಿಕೂಲಂ ತದವಿಶೇಷೇಣ ಶಬ್ದಿತಮ್ ।**

ಈ ಶ್ರುತಿಯಲ್ಲಿ ಪ್ರಿಯಾಸ್ಪೃಷ್ಟಿ ಎಂಬ ಶಬ್ದದಿಂದ ಪ್ರಾಕೃತವಾದ ಅಂದರೆ

ಅಂತಃಕರಣ ಪರಿಣಾಮರೂಪವಾದ ಸುಖದ ಹಾನಿಯೇ ಪ್ರತಿಪಾದಿಸಲ್ಪಡುತ್ತದೆ. ಸರ್ವಥಾ ಸುಖಾಭಾವವಲ್ಲ. ಹಾಗಾದರೆ ಅಪ್ರಿಯಾಸ್ಪೃಷ್ಟಿಯನ್ನೂ ಹೀಗೆಯೇ ವ್ಯಾಖ್ಯಾನ ಮಾಡಬೇಕು. ಆಗ ಮುಕ್ತಿಯಲ್ಲಿ ದುಃಖಪ್ರಾಪ್ತಿಯೂ ಪ್ರಸಕ್ತವಾಗುವುದು ಎಂದರೆ – ಅಪ್ರಿಯವೆಲ್ಲವೂ (ದುಃಖಾದಿಗಳು) ಮುಮುಕ್ಷುಗಳಿಂದ ಅಪೇಕ್ಷಿತವಲ್ಲ. ಆದಕಾರಣ ಅಪ್ರಿಯವನ್ನು ಪ್ರಾಕೃತತ್ವಾದಿ ವಿಶೇಷವಿಲ್ಲದೆಯೇ ಹೇಳಲ್ಪಟ್ಟಿದೆ. ಅಂದರೆ ಸರ್ವಪ್ರಕಾರದಿಂದಲೂ ಅನಿಷ್ಟನಿವೃತ್ತಿಯೇ ಮೋಕ್ಷವು ಎನ್ನುವುದು ಎಲ್ಲ ವಾದಿಗಳಿಂದಲೂ ಅಂಗೀಕೃತವೇ. ಈ ವಿಷಯದಲ್ಲಿ ವಿವಾದವಿಲ್ಲ. ದುಃಖವು ಯಾವ ಪ್ರಕಾರದ್ದೇ ಆಗಿದ್ದರೂ ಅನಿಷ್ಟವೇ. ಆದಕಾರಣ ದುಃಖವನ್ನು ಪ್ರಾಕೃತ ಅಪ್ರಾಕೃತ ಎಂಬ ವಿಭಾಗದಿಂದ ವ್ಯಾಖ್ಯಾನ ಮಾಡುವುದು ಕೂಡುವುದಿಲ್ಲವೆಂದು ತಾತ್ಪರ್ಯ.

ಅಪ್ರಿಯದಲ್ಲಿ ಪ್ರಾಕೃತಾದಿ ವಿಶೇಷಣವು ಕೂಡುವುದಿಲ್ಲ ಎನ್ನುವುದನ್ನು ಕಾರಣಾಂತರದಿಂದಲೂ ಉಪಪಾದಿಸುತ್ತಾರೆ –

**ನಾಸ್ತಿ ಹ್ಯಪ್ರಾಕೃತಂ ದುಃಖಂ ಸತೋ ಜೀವಸ್ಯ ಕುತ್ರಚಿತ್ ॥ ೭೯ ॥**

ಅಪ್ರಾಕೃತವಾದ ದುಃಖವು ಇದ್ದಿದ್ದರೆ, ಅದನ್ನು ವ್ಯಾವರ್ತಿಸಲು ಪ್ರಾಕೃತವೆಂಬ ವಿಶೇಷಣವು ಬೇಕಿತ್ತು. ಆದರೆ ಮುಕ್ತಿಯೋಗ್ಯನಾದ ಜೀವನಿಗೆ ಅಪ್ರಾಕೃತವಾದ ದುಃಖವು ಇಲ್ಲವೇ ಇಲ್ಲ. ಅಪ್ರಾಕೃತ ದುಃಖವೆಂಬುದು ಅಪ್ರಾಮಾಣಿಕ. ಯಾವ ಶ್ರುತಿಯಲ್ಲಿಯೂ ಸ್ಮೃತಿಯಲ್ಲಿಯೂ ಹಾಗೆ ಪ್ರತಿಪಾದಿಸಲ್ಪಟ್ಟಿಲ್ಲ.

ಹಾಗಾದರೆ ಅಪ್ರಾಕೃತವಾದ ಸುಖವೂ ಅಪ್ರಮಿತವಾದುದರಿಂದ ಅಲ್ಲಿಯೂ ಪ್ರಾಕೃತತ್ವ ವಿಶೇಷಣದಿಂದ ಕೂಡಿದ ವ್ಯಾಖ್ಯಾನವು ಅಯುಕ್ತವು ಎಂದರೆ –

**ಪ್ರಿಯಂ ಸ್ವರೂಪಮೇವಾಸ್ಯ ಬಲಾನಂದಾದಿ ವಾಕ್ಯತಃ ।**

'ಬಲಮಾನಂದ ಓಜಶ್ಚ ಸಹೋ ಜ್ಞಾನಮನಾಕುಲಂ। ಸ್ವರೂಪಾಣ್ಯೇವ ಜೀವಸ್ಯ ವ್ಯಜ್ಯಂತೇ ಪರಮಾದ್ವಿಭೋಃ' ಎಂಬ ಶ್ರುತಿವಾಕ್ಯದ ಬಲದಿಂದ ಮುಕ್ತಿಯೋಗ್ಯನಾದ ಜೀವನಿಗೆ ಸುಖವು ಸ್ವರೂಪವೇ (ಅಪ್ರಾಕೃತವೇ) ಎಂದು ತಿಳಿಯಲ್ಪಡುತ್ತದೆ.

ಹಿಂದೆ ಹೇಳಿದ ವಿಷಯವನ್ನು ಸಂಕ್ಷೇಪದಿಂದ ಹೇಳುತ್ತಾರೆ –

**ಹೇಯತ್ವಾದಪ್ರಿಯಸ್ಯೈವ ಪ್ರಿಯಹಾನೇರನಿಷ್ಟತಃ ॥ ೮೦ ॥**

**ನ ಸಮಸ್ತಪ್ರಿಯಾಭಾವೋ ಮೋಕ್ಷೇ ಪ್ರೋಕ್ತೇ ತು ಯುಜ್ಯತೇ ।**

ಎಲ್ಲ ರೀತಿಯಿಂದಲೂ ದುಃಖಕ್ಕೆ ಹೇಯತ್ವವೂ, ಸುಖದ ಹಾನಿಗೆ ಅನಿಷ್ಟತ್ವವೂ ಇದ್ದುದರಿಂದಲೇ 'ಅಶರೀರಂ ವಾವ ಸಂತಂ' ಎನ್ನುವ ಶ್ರುತಿಯಲ್ಲಿ ಹೇಳಲ್ಪಟ್ಟ ಮೋಕ್ಷದಲ್ಲಿ ಸಮಸ್ತ ಸುಖಾಭಾವವು ವ್ಯಾಖ್ಯಾನ ಮಾಡಲಿಕ್ಕೆ ಯುಕ್ತವಾಗುವುದಿಲ್ಲ.

ಹಾಗಾದರೆ ಮುಕ್ತಿಯೋಗ್ಯನಾದ ಜೀವನಿಗೂ ಸ್ವರೂಪಭೂತವಾದ ಅಪ್ರಾಕೃತ ದುಃಖವು ಶ್ರುತವಾಗಿದೆ. ಅದು ಹೇಗೆ ಕೂಡುತ್ತದೆ ಎಂದರೆ –

**ಅಪ್ರಿಯಸ್ಯ ಸ್ವರೂಪತ್ವಮಸುರೇಷ್ವೇವ ಹಿ ಶ್ರುತಮ್ ।। ೮೧ ।।**

ಸ್ವರೂಪಭೂತವಾದ ಅಪ್ರಿಯವು ಅಸುರರಲ್ಲಿಯೇ ಎಂದು ಶ್ರುತಿಸಿದ್ಧವಾಗಿದೆ. ಅಸುರರು ಮೋಕ್ಷಯೋಗ್ಯರಲ್ಲ ಎಂದು ತಾತ್ಪರ್ಯ.

ಆ ಶ್ರುತಿಯನ್ನು ಅರ್ಥತಃ ಪಠಿಸುತ್ತಾರೆ –

**ಅಸುರಾ ನೈವಮೇವಂ ಚ ನೈವಂ ಚಾಖಿಲಮಾನುಷಾಃ ।**

**ಇತ್ಯಾತ್ಮಪ್ರಿಯಹಾನಾಯ ಕೋ ಯತೇತ ಚ ಬುದ್ಧಿಮಾನ್ ।। ೮೨ ।।**

'ನಿತ್ಯಾನಂದೋ ನಿತ್ಯಜ್ಞಾನೋ ನಿತ್ಯಬಲಃ ಪರಮಾತ್ಮಾ ನೈವಮಸುರಾ ಏವಮ ನೇವಂ ಚ ಮನುಷ್ಯಾಃ' ಎನ್ನುವ ಶ್ರುತಿಯನ್ನು ಇಲ್ಲಿ ಉದಾಹರಿಸಿದ್ದಾರೆ. ಅಂದರೆ ಪರಮಾತ್ಮನು ಅಥವಾ ಸಜ್ಜೀವನು ನಿತ್ಯವಾದ ಅಂದರೆ ಸ್ವರೂಪಭೂತವಾದ ಆನಂದ, ಜ್ಞಾನ, ಬಲಗಳಿಂದ ಕೂಡಿದವನು. ಅಸುರರು ಇದಕ್ಕೆ ವಿರುದ್ಧವಾದ ಸ್ವಭಾವವುಳ್ಳವರು. ಅಂದರೆ ಕೇವಲ ದುಃಖಸ್ವರೂಪರು. ಆದರೆ ಎಲ್ಲ ಮನುಷ್ಯರೂ ಉಭಯ ಸ್ವಭಾವವುಳ್ಳವರು. ಹೀಗೆ ಶ್ರುತಿಸಿದ್ಧವಿರುವಾಗ, ತನ್ನ ಸ್ವರೂಪಭೂತವಾದ ಸುಖವನ್ನು ಕಳೆದುಕೊಳ್ಳಲು ಬುದ್ಧಿಯುಳ್ಳ ಯಾರು ತಾನೆ ಪ್ರಯತ್ನ ಮಾಡುವರು ? ಅಂದರೆ ಮುಕ್ತಿಯಲ್ಲಿ ಪ್ರಿಯದ ಹಾನಿ ಹಾಗೂ ಅಪ್ರಿಯದ ಪ್ರಾಪ್ತಿಯು ಆಗುವ ಪಕ್ಷದಲ್ಲಿ ಯಾವ ಜ್ಞಾನಿಯೂ ಮುಕ್ತಿಯನ್ನು ಇಚ್ಛಿಸುವುದಿಲ್ಲ ಹಾಗೂ ಅದಕ್ಕಾಗಿ ಪ್ರಯತ್ನವನ್ನೂ ಮಾಡುವುದಿಲ್ಲ ಎಂದು ತಾತ್ಪರ್ಯ.

ಹೀಗೆ ಸುಖಾಸ್ಪೃಷ್ಟಿ ಶ್ರುತಿಯನ್ನು ವ್ಯಾಖ್ಯಾನ ಮಾಡಿ ಜ್ಞಾನಾಭಾವ ಶ್ರುತಿಯನ್ನೂ ವ್ಯಾಖ್ಯಾನ ಮಾಡುತ್ತಾರೆ –

**ಸಂಜ್ಞಾ ನಾಸ್ತೀತ್ಯಪಿ ಹ್ಯಸ್ಯ ನಾಮುಕ್ತಜ್ಞೇಯತೇತಿ ಹಿ ।**

**ಧರ್ಮಾನುಚ್ಛಿತ್ತಿಮೇವಾಸ್ಯ ಯತೋ ವಕ್ತ್ಯುತ್ತರಶ್ರುತಿಃ ।। ೮೩ ।।**

'ನ ಪ್ರೇತ್ಯ ಸಂಜ್ಞಾಸ್ತಿ' ಮರಣಾನಂತರದಲ್ಲಿ ಜ್ಞಾನವು ಇಲ್ಲ ಎನ್ನುವ ಶ್ರುತಿಯೂ ಕೂಡ ಮುಕ್ತನಿಗೆ ಅಮುಕ್ತರಿಂದ ಜ್ಞೇಯತ್ವವು ಇಲ್ಲ ಎಂಬುದಾಗಿಯೇ ಹೇಳುತ್ತದೆ. 'ಅಯಮಾತ್ಮಾನುಚ್ಛಿತ್ತಿಧರ್ಮಾ' ಎನ್ನುವ ಮುಂದಿನ ಶ್ರುತಿಯೂ ಮುಕ್ತಾತ್ಮನಿಗೆ ಜ್ಞಾನಾದಿ ಧರ್ಮಗಳಿಗೆ ನಾಶವಿಲ್ಲವೆಂದೇ ಹೇಳುತ್ತದೆ. ಆದ್ದರಿಂದಲೇ ಮುಕ್ತನಿಗೆ ಜ್ಞಾನಾದಿ ಧರ್ಮಗಳಿಗೆ ವಿನಾಶವನ್ನು ನಿರಾಕರಿಸಲಾಗಿದೆ.

ಹಾಗಾದರೆ ಅನುಚ್ಛಿತ್ತಿಧರ್ಮಾ ಎನ್ನುವುದು ಸಂಖ್ಯಾದಿ ಧರ್ಮಗಳಿಗೆ ನಾಶವು ಇಲ್ಲವೆಂದು ಹೇಳುತ್ತದೆ. ಅಥವಾ ಯಾವುದಕ್ಕೆ ನಾಶವಿಲ್ಲವೋ ಅದು ಅನುಚ್ಛಿತ್ತಿ

ಧರ್ಮ ಎಂದೂ ಹೇಳಲಿಕ್ಕೆ ಬರುತ್ತದೆ. ಆದ್ದರಿಂದ ಜ್ಞಾನಾದಿ ಧರ್ಮಗಳಿಗೆ ನಾಶವು ಇಲ್ಲವೆನ್ನುವುದಕ್ಕೆ ಈ ಶ್ರುತಿಯು ಹೇಗೆ ನಿಯಾಮಕವು ಎಂಬ ಆಶಂಕೆಯನ್ನು ನಿರಾಕರಿಸಲಿಕ್ಕಾಗಿ ಈ ವಾಕ್ಯವನ್ನು ಮೊದಲಿನಿಂದಲೇ ವ್ಯಾಖ್ಯಾನ ಮಾಡುತ್ತಾರೆ –

**ಆಶಂಕ್ಯಾಸ್ಯ ಜ್ಞಾನಹಾನಿಂ ಮೈತ್ರೇಯ್ಯಾ ಮೋಹಮಾಹ ಮಾಮ್ ।**

**ಭವಾನಿತ್ಯುಕ್ತವತ್ಯಾ ಹಿ ನಾಹಂ ಮೋಹಂ ವದಾಮಿ ತೇ ।। ೮೪ ।।**

**ಇತ್ಯುಕ್ತ್ವಾ ಯಾಜ್ಞವಲ್ಕ್ಯೋ ಹಿ ಸ್ವರೂಪಾನಾಶಮೂಚಿವಾನ್ ।**

ಸಂಜ್ಞಾ ನಾಸ್ತಿ ಎಂಬ ವಾಕ್ಯದಿಂದ ಮುಕ್ತನಿಗೆ ಜ್ಞಾನಹಾನಿಯು ಹೇಳಲ್ಪಡುತ್ತದೆ ಎಂದು ಆಶಂಕಿಸಿಕೊಂಡು ಮೈತ್ರೇಯಿಯು ಯಾಜ್ಞ್ಯವಲ್ಕ್ಯರನ್ನು 'ಸ್ವಾಮಿ ನೀವು ನನ್ನನ್ನು ಕುರಿತು ಮುಕ್ತನು ತಿಳಿಯುವುದಿಲ್ಲವೆಂದು ಏನು ಹೇಳಿರುವಿರೋ ಅದು ಮೋಹಕವಲ್ಲವೇ' ಎಂದು ಕೇಳಿದಾಗ, 'ನ ವಾ ಅರೇ ಅಹಂ ಮೋಹಂ ಬ್ರವೀಮಿ' (ನನಗೆ ಪರಮಪ್ರಿಯಳಾದ ನಿನಗೆ ಮೋಹಕವಾದುದನ್ನು ಹೇಳುವುದಿಲ್ಲ) ಎಂದು ಪ್ರತಿಜ್ಞೆ ಮಾಡಿ, 'ಅವಿನಾಶೀ ವಾ ಅರೇ ಅಯಮಾತ್ಮಾ' ಎಂಬ ವಾಕ್ಯದಿಂದ ಆತ್ಮಸ್ವರೂಪಕ್ಕೆ ನಾಶವಿಲ್ಲವೆಂದು ಯಾಜ್ಞವಲ್ಕ್ಯರು ಹೇಳಿರುತ್ತಾರೆ. ಈ ಅರ್ಥವು ಶ್ರುತಿಯಲ್ಲಿ ಸ್ಪಷ್ಟವಾಗಿಯೇ ಇದೆ ಎಂಬುದನ್ನು ಹಿ ಶಬ್ದದಿಂದ ಸೂಚಿಸಿದ್ದಾರೆ.

ಜ್ಞಾನವಿನಾಶವನ್ನು ಹೇಳುವ ವಾಕ್ಯವು ಮೋಹಕವೆಂದು ಆಕ್ಷೇಪಿಸಿದರೆ, ಅದಕ್ಕೆ ಉತ್ತರವಾಗಿ ಸ್ವರೂಪಕ್ಕೆ ನಾಶವಿಲ್ಲವೆಂಬ ವಚನವು ಅಸಂಗತವಲ್ಲವೇ ಎಂದರೆ –

**ಜ್ಞಾನರೂಪಸ್ಯ ವಿಜ್ಞಾನನಾಶಸ್ತನ್ನಾಶ ಏವ ಯತ್ ।। ೮೫ ।।**

**ಇತಿ ಶೂನ್ಯಮತೋಚ್ಛಿತ್ತ್ಯೈ ಪುನರಾನಂದಪೂರ್ವಕಾನ್ ।**

**ಧರ್ಮಾನಾಹಾಪ್ಯನುಚ್ಛಿನ್ನಾಂಸ್ತಾರ್ಕಿಕೈರ್ವಿನಿವಾರಿತಾನ್ ।। ೮೬ ।।**

ಆತ್ಮನು ಜ್ಞಾನರೂಪನಾದ್ದರಿಂದ ಜ್ಞಾನವಿನಾಶವೆಂದರೆ ಆತ್ಮನ ನಾಶವೇ ಎಂದು ತಿಳಿಯಲ್ಪಡುತ್ತದೆ. ಆತ್ಮನಿಗೆ ನಾಶವನ್ನು ಹೇಳುವ ಹಾಗಿಲ್ಲ. ಹಾಗೆ ಅಂಗೀಕರಿಸಿದರೆ ಮುಕ್ತಿಗೆ ಅಪುರುಷಾರ್ಥತ್ವವು ಬರುವುದರಿಂದ ನನ್ನ ಮಾತಿಗೆ ಹಾಗೆ ಅರ್ಥವಲ್ಲ. ಮತ್ತೆ ಅಮುಕ್ತರಿಗೆ ಮುಕ್ತರ ವಿಷಯದಲ್ಲಿ ಜ್ಞಾನವಿಲ್ಲ ಅಥವಾ ಮುಕ್ತರಿಗೆಯೇ ವೃತ್ತಿ ರೂಪವಾದ ಜ್ಞಾನವಿಲ್ಲವೆಂದು ನನ್ನ ಮಾತಿಗೆ ಅರ್ಥ ಎಂಬ ಅಭಿಪ್ರಾಯದಿಂದ ಸ್ವರೂಪಕ್ಕೆ ನಾಶವಿಲ್ಲವೆಂದು ಹೇಳಿದರು. ಹಾಗೆಯೇ ಆಗಲಿ. ಆದರೆ ನೇರವಾಗಿ ಜ್ಞಾನಕ್ಕೆ ನಾಶವಿಲ್ಲವೆಂದು ಏಕೆ ಹೇಳಲಿಲ್ಲ ಎಂದರೆ – ಇಲ್ಲಿ ಯಾಜ್ಞ್ಯವಲ್ಕ್ಯರು ಕೇವಲ ಪ್ರಮೇಯವನ್ನು ಹೇಳಲು ಪ್ರವೃತ್ತರಾಗಿಲ್ಲ, ಮತ್ತೆ ಪರೀಕ್ಷೆಯ ನಿಮಿತ್ತದಿಂದ ಈ ವಚನವನ್ನು ಹೇಳಿರುವರು. ಪರೀಕ್ಷೆಯೆಂದರೆ ತನಗೆ ಅಭಿಮತವಲ್ಲದ ಮತದ ನಿರಾಸಾ ರೂಪವಾದುದು. ಈ ರೀತಿಯ ಉತ್ತರದಿಂದ ಆತ್ಮನಾಶವನ್ನು ಹೇಳುವ ಶೂನ್ಯಮತದ ನಿರಾಕರಣೆಯು ಆಗುವುದು. ಈ ಅಭಿಪ್ರಾಯದಿಂದ ಸ್ವರೂಪಕ್ಕೆ

ನಾಶವಿಲ್ಲವೆಂದು ಹೇಳಿದರು. ತಾರ್ಕಿಕರು ಮುಕ್ತರಿಗೆ ಸ್ವರೂಪತಃ ನಾಶವಿಲ್ಲವೆಂದು ಒಪ್ಪಿದರೂ, ಆನಂದಾದಿ ಧರ್ಮಗಳಿಗೆ ನಾಶವನ್ನು ಹೇಳುತ್ತಾರೆ. ಈ ಮತವನ್ನು ನಿರಾಕರಿಸಲಿಕ್ಕಾಗಿ ಮುಕ್ತರ ಸುಖ ಜ್ಞಾನ ಇತ್ಯಾದಿ ಧರ್ಮಗಳಿಗೂ ನಾಶವಿಲ್ಲವೆಂದು ಯಾಜ್ಞ್ಯವಲ್ಕ್ಯರು ಹೇಳಿದರು.

'ನ ಪ್ರೇತ್ಯ ಸಂಜ್ಞಾಸ್ತಿ' ಎನ್ನುವ ವಾಕ್ಯಕ್ಕೆ ಮುಕ್ತನಿಗೆ ಜ್ಞಾನವಿಲ್ಲವೆಂದು ಅರ್ಥ ಮಾಡಬಾರದು ಎಂದು ವಾಕ್ಯಾಂತರದಿಂದಲೂ ಹೇಳುತ್ತಾರೆ –

**ಮಾತ್ರಾಸಂಸರ್ಗಮಪ್ಯಾಹ ತಥಾ ಮಾಧ್ಯಂದಿನಶ್ರುತಿಃ ।**

**ಆಚಿಕ್ಷೇಪ ಮತಂ ತಚ್ಚ ಯಸ್ಮಿನ್ನ ವಿಷಯಾದನಮ್ ॥ ೮೭ ॥**

ಮಾಧ್ಯಂದಿನ ಶ್ರುತಿಯು 'ಮಾತ್ರಾಸಂಸರ್ಗಸ್ತ್ವಸ್ಯ ಭವತಿ' ಎನ್ನುವ ವಾಕ್ಯದಿಂದ ಧರ್ಮಗಳಿಗೆ ನಾಶಾಭಾವವನ್ನೂ, ಹಾಗೆಯೇ ರೂಪಾದಿ ವಿಷಯಗಳ ಉಪಭೋಗ ರೂಪವಾದ ಸಂಸರ್ಗವನ್ನು ಕೂಡ ಹೇಳುತ್ತದೆ (ಮೀಯಂತೇ ಇತಿ ಮಾತ್ರಾಃ ಎಂಬ ವ್ಯುತ್ಪತ್ತಿಯಿಂದ ಮಾತ್ರಾಃ ಎಂದರೆ ರೂಪಾದಿ ವಿಷಯಗಳು). ಸಂಜ್ಞಾ ನಾಸ್ತಿ ಎನ್ನುವ ವಾಕ್ಯಕ್ಕೆ ಮುಕ್ತನು ಅಮುಕ್ತರಿಂದ ತಿಳಿಯಲ್ಪಡುವುದಿಲ್ಲ ಎನ್ನುವುದೇ ಅರ್ಥವು. ಏಕೆಂದರೆ 'ಯತ್ರ ಹಿ ದ್ವೈತಮಿವ ಭವತಿ ತದಿತರಃ ಇತರಂ ಪಶ್ಯತಿ' ಇತ್ಯಾದಿ ಉತ್ತರ ಶ್ರುತಿಯು ಮುಕ್ತನಿಗೆ ವಿಷಯಭೋಗವು ಇಲ್ಲವೆಂದು ಹೇಳುವ ಮತವನ್ನು ಆಕ್ಷೇಪಿಸಿದೆ. ಹೇಗೆ ಆಕ್ಷೇಪಿಸಿದೆ ಎಂದರೆ – ಯಾವ ಪಕ್ಷದಲ್ಲಿ ದ್ವೈತ ಅಂದರೆ ಭೇದವು ಬರುತ್ತದೋ ಆಗ ಒಬ್ಬನು ಮತ್ತೊಬ್ಬನನ್ನು ನೋಡುತ್ತಾನೆ ಎಂದು ವ್ಯಾಪ್ತಿಯನ್ನು ಹೇಳುವ ಶ್ರುತಿಯು, ಹಿ ಶಬ್ದದಿಂದ ಅದು ಪ್ರಮಾಣ ಪ್ರಮಿತವಾಗಿದೆ ಎಂದು ಹೇಳುತ್ತದೆ. 'ಯತ್ರತ್ವಸ್ಯ ಸರ್ವಮಾತ್ಮೈವಾಭೂತ್ತತ್ಕೇನ ಕಂ ಪಶ್ಯತಿ' ಎಂಬ ಶ್ರುತಿಯೇ ಅದಕ್ಕೆ ಪೂರಕವಾದ ಪ್ರಮಾಣವು. ಮುಕ್ತಿಯಲ್ಲಿ ಎಲ್ಲವೂ ಆತ್ಮ ಸ್ವರೂಪವೇ ಆಗುವುದಾದರೆ ಮುಕ್ತನು ಯಾವ ಸಾಧನದಿಂದ ಯಾವ ಅರ್ಥವನ್ನು ನೋಡಿಯಾನು. ಅಂದರೆ ಯಾವುದನ್ನೂ ನೋಡಲಾರನು. ಹೀಗೆ ಅನಿಷ್ಟಪ್ರಸಂಗವು ಹೇಳಲ್ಪಡುತ್ತದೆ.

ಹಾಗಾದರೆ ಮುಕ್ತಿಯಲ್ಲಿ ದ್ವೈತವು ಇಲ್ಲವೆಂದಾದರೆ, ಆಗ ರೂಪದರ್ಶನ ಇತ್ಯಾದಿಗಳು ಆಗಲಾರವು ಎಂಬ ತರ್ಕವು ಮಾಡಲ್ಪಡುತ್ತದೆ. ಆದರೆ ಈ ಶ್ರುತಿಯು ದ್ವೈತಾಭಾವ ಮತವನ್ನು ಆಕ್ಷೇಪಿಸಿದರೂ ವಿಷಯಭೋಗಾಭಾವವನ್ನು ಹೇಳುವ ಮತವನ್ನು ಆಕ್ಷೇಪಿಸುವುದಿಲ್ಲ ಎಂದರೆ –

**ಘ್ರಾಣಾದಿಭೋಗಾಭಾವಸ್ಯ ತ್ವನಿಷ್ಟತ್ವಹೃದಾ ಶ್ರುತಿಃ ।**

ದ್ವೈತಾಭಾವವಿದ್ದರೆ ಆಗ ಘ್ರಾಣಾದಿಗಳಿಂದ ಗಂಧಾದಿ ಭೋಗಾಭಾವಕ್ಕಾದರೂ ಅನಿಷ್ಟತ್ವವು ಬರುವುದು. ಅಪ್ರಾಮಾಣಿಕವೂ ಪ್ರಮಾಣವಿರುದ್ಧವೂ ಆದುದೇ ಅನಿಷ್ಟವು. ಈ ಅಭಿಪ್ರಾಯದಿಂದ 'ಯತ್ರ ತ್ವಸ್ಯ' ಎಂಬ ಶ್ರುತಿಯು 'ಕೇನ ಕಂ

ಜಘ್ರೇತ್ ಎಂದು ಹೇಳುತ್ತ ದ್ವೈತಾಭಾವವಿದ್ದರೂ ವಿಷಯಭೋಗಾಭಾವವಿಲ್ಲ ಎಂಬ ಮತವನ್ನು ಆಕ್ಷೇಪಿಸಿದೆ.

ಅದ್ವೈತಮತದಲ್ಲಿ ವಿಷಯಭೋಗಾಭಾವವು ಆಪಾದನೀಯವಾಗಿದ್ದರೆ ಈ ಅರ್ಥಾಪತ್ತಿಯಿಂದ ವಿಷಯಭೋಗಾಭಾವ ನಿಂದೆಯು ಕೂಡುತ್ತಿತ್ತು. ಆದರೆ ಅದ್ವೈತಮತದಲ್ಲಿ ಹೀಗಿಲ್ಲ. ಇದು ಆಪಾದನವಲ್ಲ, ವಸ್ತುಸ್ಥಿತಿಯನ್ನೇ ಹೇಳಿದ್ದು. ಹೇಗೆಂದರೆ ಈ ಆತ್ಮನು ಅವಿನಾಶಿ. ನಾಶಾಭಾವವು ಆತ್ಮನ ಧರ್ಮ. ಮುಕ್ತಿಯಲ್ಲಿ ಆತ್ಮನಿಗೆ ವಿಷಯಾದಿಗಳ ಸಂಸರ್ಗವು ಇರುವುದಿಲ್ಲ. ಏಕೆಂದರೆ ಸಂಸಾರದಲ್ಲಿ ಭೇದ ವಿರುವಂತೆ ಆಗುವುದರಿಂದ ಅಲ್ಲಿ ಒಬ್ಬನು ಮತ್ತೊಬ್ಬನನ್ನು ನೋಡುತ್ತಾನೆ ಇತ್ಯಾದಿ ಗಳು ಕೂಡುತ್ತವೆ. ಆದರೆ ಮುಕ್ತಿಯಲ್ಲಿ ಆತ್ಮನಿಗೆ ಸರ್ವವೂ ಆತ್ಮಸ್ವರೂಪವೇ ಆಗುವುದರಿಂದ ಆತ್ಮನಿಂದ ಬೇರೆಯಾದುದು ಯಾವುದೂ ಇರುವುದಿಲ್ಲ. ಹೀಗಿರಲು ಆತ್ಮನು ಯಾವುದನ್ನು ಯಾವುದರಿಂದ ನೋಡಿಯಾನು? ಯಾವುದರಿಂದಲೂ ಯಾವುದನ್ನೂ ನೋಡಲಾರನು. ಹೀಗೆ ಅದ್ವೈತಿಗಳ ವಾದ. ಈ ವಿಷಯದಲ್ಲಿ ಶ್ರುತಿಯ ಅಭಿಪ್ರಾಯವನ್ನು ತಿಳಿಸುತ್ತಾರೆ –

**ಯೇನೇದಮಖಿಲಂ ವೇದ ವಿಜ್ಞಾತಾರಂ ಖಮೇವ ಚ ।। ೮೮ ।।**

**ಕೇನ ತಂ ಚ ವಿಜಾನೀಯಾದ್ಯಿತ್ಯನಿಷ್ಟಂ ಚ ಸರ್ವಥಾ ।**

ಯಾವ ಶ್ರೀಹರಿಯಿಂದ ಇವೆಲ್ಲವನ್ನೂ ತಿಳಿಯುತ್ತಾನೋ, ಆ ಶ್ರೀಹರಿಯನ್ನು ಯಾವುದರಿಂದ ತಿಳಿದಾನು? ತಿಳಿಯತಕ್ಕ ತನ್ನನ್ನೇ ಯಾವುದರಿಂದ ತಿಳಿದಾನು? ಈ ಎರಡು ವಾಕ್ಯಗಳಲ್ಲಿ ಹೇಳಲ್ಪಟ್ಟ ವಿಷ್ಣುಜ್ಞಾನರಾಹಿತ್ಯವೂ, ಸ್ವಜ್ಞಾನರಾಹಿತ್ಯವೂ ಕೂಡ ಸರ್ವಥಾ ಅನಿಷ್ಟವೇ.

ಇಲ್ಲಿ 'ಯೇನೇದಂ ಸರ್ವಂ ವಿಜಾನಾತಿ ತಂ ಚ ಕೇನ ವಿಜಾನೀಯಾತ್ ವಿಜ್ಞಾತಾರಮರೇ ಕೇನ ವಿಜಾನೀಯಾತ್' ಎಂಬ ಎರಡು ವಾಕ್ಯಗಳು ಶ್ರುತವಾಗಿವೆ. ಪರಮೇಶ್ವರನ ಜ್ಞಾನಾಭಾವವು ಹಾಗೂ ತನ್ನ ಜ್ಞಾನಾಭಾವವು ಅನಿಷ್ಟವು, ವಾಸ್ತವವಲ್ಲವೆಂದು ಈ ವಾಕ್ಯಗಳ ಅರ್ಥ. ಅದು ಅನಿಷ್ಟಾಪಾದನವೆಂದು ಆ ಪ್ರಸಂಗ ಕಥನದಿಂದಲೇ ತಿಳಿಯುತ್ತದೆ. ಅದರ ಸಾಹಚರ್ಯದಿಂದ 'ಕೇನ ಕಂ ಪಶ್ಯೇತ್' ಇತ್ಯಾದಿಗಳೂ ಕೂಡ ಅನಿಷ್ಟಾಪಾದನವೇ ಹೊರತು ವಸ್ತುಸ್ಥಿತಿ ಕಥನವಲ್ಲ ಎಂದು ತಿಳಿಯುತ್ತದೆ.

ಹಾಗಾದರೆ 'ಯತೋ ವಾಚೋ ನಿವರ್ತಂತೇ' ಇತ್ಯಾದಿ ಶ್ರುತಿಯಿಂದ ಈಶ್ವರನು ಸರ್ವಥಾ ಅವಿಜ್ಞೇಯನೇ ಆಗಿರುವನು. ಜೀವಾತ್ಮನೂ ತನಗೆ ತಾನು ಅಜ್ಞೇಯನೇ. ಒಂದೇ ಕ್ರಿಯೆಯಲ್ಲಿ ಒಬ್ಬನಿಗೇ ಕರ್ತೃ–ಕರ್ಮಭಾವವು ವಿರುದ್ಧವು. ಆದ್ದರಿಂದ ಪರಮೇಶ್ವರ ಜ್ಞಾನಾಭಾವವೂ ಸ್ವಜ್ಞಾನಾಭಾವವೂ ಅನಿಷ್ಟವು ಹೇಗೆ ಎಂದರೆ –

**ನಾಖಿಲಜ್ಞಾಪಕೋ ವಿಷ್ಣುರಜ್ಞೇಯೋ ನಿಯಮೇನ ಹಿ ॥ ೮೯ ॥**

**ತಜ್ಞಾನಾರ್ಥಂ ಹಿ ವೇದಾನಾಮಖಿಲಾನಾಂ ಪ್ರವರ್ತನಮ್ ।**

ಎಲ್ಲವನ್ನೂ ತಿಳಿಸಿಕೊಡುವ ವಿಷ್ಣುವು ಸರ್ವಥಾ ಅವಿಜ್ಞೇಯನೆನ್ನುವುದು ಕೂಡುವುದಿಲ್ಲ. ಏಕೆಂದರೆ ಅವನನ್ನು ತಿಳಿಸಿಕೊಡುವುದಕ್ಕಾಗಿಯೇ ಸಕಲ ವೇದಗಳು ಪ್ರವರ್ತಿತವಾಗಿವೆ. ವಿಷ್ಣುವು ಸರ್ವಥಾ ಅಜ್ಞೇಯನೆಂದಾದರೆ ಎಲ್ಲ ವೇದಗಳಿಗೂ ವೈಯರ್ಥ್ಯವು ಬರುವುದು. ಆದ್ದರಿಂದ ಯತೋ ವಾಚಾ ಇತ್ಯಾದಿ ಶ್ರುತಿಗಳಿಗೆ ಸಾಕಲ್ಯೇನ ಅವಾಚ್ಯತ್ವ ಮುಂತಾದ ರೀತಿಯಲ್ಲಿ ಇತರ ಶ್ರುತಿಗಳಿಗೆ ಅವಿರುದ್ಧವಾಗಿ ವ್ಯಾಖ್ಯಾನ ಮಾಡಬೇಕು.

ಹೀಗೆ ಪರಮಾತ್ಮನಿಗೆ ಜ್ಞೇಯತ್ವವನ್ನು ಉಪಪಾದಿಸಿ ಈಗ ಜೀವಾತ್ಮನಿಗೆ ತನ್ನ ಜ್ಞಾನವಿದೆ ಎಂಬುದನ್ನು ಉಪಪಾದಿಸುತ್ತಾರೆ –

**ಪ್ರತ್ಯಕ್ಷಮಾತ್ಮವಿಜ್ಞಾನಾವಿರೋಧಾನುಭವಾದಪಿ ॥ ೯೦ ॥**

**ನ ಸ್ವವಿಜ್ಞಾನಿತಾಯಾಂ ಚ ವಿರೋಧಃ ಕಶ್ಚನೇಯತೇ ।**

ಪ್ರತ್ಯಕ್ಷದಂತೆಯೇ ಆತ್ಮವಿಷಯಕ ಜ್ಞಾನವೂ ಜೀವನಿಗೆ ಅನುಭವಸಿದ್ಧವು. ಆತ್ಮನಿಗೆ ತನ್ನ ಜ್ಞಾನವಿದೆ ಎಂಬ ಸಾಕ್ಷಿಸಿದ್ಧವಾದ ವಿಷಯದಲ್ಲಿ ಶ್ರುತಿಗಳಿಂದಲೂ ಕೂಡ ಯಾವುದೇ ವಿರೋಧವೂ ಪ್ರಾಪ್ತವಾಗುವುದಿಲ್ಲ. 'ಅಹಮಿತ್ಯೇವ ಯೋ ವೇದ್ಯಃ ಸ ಜೀವ ಇತಿ ಕೀರ್ತಿತಃ' ಇತ್ಯಾದಿ ಶ್ರುತಿಗಳೂ ಈ ವಿಷಯದಲ್ಲಿ ಪ್ರಮಾಣವಾಗಿವೆ.

ಆತ್ಮನು ತನ್ನನ್ನು ತಾನು ತಿಳಿದುಕೊಳ್ಳದಿದ್ದರೆ ಆಗ ನನಗೆ ಇದು ಇಷ್ಟಸಾಧನ ಇತ್ಯಾದಿ ಜ್ಞಾನವಿಲ್ಲದಿರುವುದರಿಂದ ಅದಕ್ಕಾಗಿ ಇಚ್ಛಾಪ್ರಯತ್ನಗಳೂ ಇರುವುದಿಲ್ಲ. ಇದರಿಂದ ಎಲ್ಲ ಪ್ರವೃತ್ತಿ ನಿವೃತ್ತಿಗಳಿಗೂ ವಿಲೋಪ ಬರುವುದು. ಆತ್ಮಜ್ಞಾನವನ್ನೇ ಆಶ್ರಯಿಸಿರುವ ಜೀವನ ಸ್ವಪ್ರಕಾಶತ್ವವೂ ಕೂಡುವುದಿಲ್ಲ.

ಭೇದನಾದಿಗಳಲ್ಲಿ ಕರ್ತೃ–ಕರ್ಮಗಳಿಗೆ ಭೇದವು ಕಂಡಿರುವುದರಿಂದ ಅವುಗಳಿಗೆ ಏಕತ್ವವನ್ನು ಹೇಳುವುದು ವಿರುದ್ಧವು ಎಂದು ಹೇಳಿದ್ದನ್ನು ನಿರಾಕರಿಸುತ್ತಾರೆ –

**ಕರ್ತೃಕರ್ಮವಿರೋಧಶ್ಚ ನಿತ್ಯಾನುಭವರೋಧತಃ ॥ ೯೧ ॥**

**ಕಥಮೇವ ಪದಂ ಗಚ್ಛೇದ್ವಿರೋಧೋಽದೃಷ್ಟಬಾಧನಮ್ ।**

ಒಂದೇ ಕ್ರಿಯೆಯಲ್ಲಿ ಕರ್ತೃ–ಕರ್ಮಗಳಿಗೆ ವಿರೋಧವೆನ್ನುವುದು ನಿತ್ಯವಾದ ಸಾಕ್ಷಿ ಅನುಭವಕ್ಕೆ ವಿರುದ್ಧವಾದುದರಿಂದ ಹೇಗೆ ತಾನೆ ಯುಕ್ತವಾಗುವುದು? ಯಾವ ಕರ್ತೃ–ಕರ್ಮಗಳಲ್ಲಿ ಏಕತ್ವವನ್ನು ಒಪ್ಪಿದರೆ ಅದೃಷ್ಟಬಾಧವೋ ಅಂದರೆ ಪ್ರಮಾಣದಿಂದ ವಿರೋಧವೋ ಅಲ್ಲಿ ಮಾತ್ರ ಏಕತ್ವ ಕೂಡುವುದಿಲ್ಲ. ಉದಾಹರಣೆಗೆ ಒಂದು ಬೆರಳಿನ ತುದಿಯನ್ನು ಅದೇ ಬೆರಳಿನಿಂದ ಮುಟ್ಟುವುದು, ಒಂದು ಕತ್ತಿಯ

ಅಲುಗಿನಿಂದ ಅದೇ ಕತ್ತಿಯ ಅಲುಗನ್ನು ತುಂಡರಿಸುವುದು ಇತ್ಯಾದಿ ಕ್ರಿಯೆಗಳಲ್ಲಿ ಕರ್ತೃ– ಕರ್ಮಗಳಿಗೆ ಏಕತ್ವವು ಕೂಡುವುದಿಲ್ಲ.

ಹಾಗಾದರೆ ಪರಮೇಶ್ವರನಿಗೆ ಜ್ಞೇಯತ್ವವೂ ಜೀವನಿಗೆ ತನ್ನ ಜ್ಞಾನವೂ ಇರಲಿ. ಹಾಗಿದ್ದರೂ ಮುಕ್ತಿಯಲ್ಲಿ ಜ್ಞಾನಾಭಾವವು ಹೇಗೆ ಅನಿಷ್ಟವು ಎಂದರೆ – 'ನಾತ್ಮಾನಂ ನ ಪರಾಂಶ್ಚೈವ ನ ಸತ್ಯಂ ನಾಪಿ ಚಾನೃತಮ್। ಪ್ರಾಜ್ಞಃ ಕಿಂಚನ ಸಂವೇತ್ತಿ ತುರ್ಯಂ ತತ್ಸರ್ವದೃಕ್ ಸದಾ' ಎಂಬ ಶ್ರುತಿಯಲ್ಲಿ ಸುಪ್ತನಿಗೆ ತನ್ನ ಜ್ಞಾನವೂ ಈಶ್ವರಜ್ಞಾನವೂ ಕೂಡ ಇಲ್ಲವೆಂದು ಹೇಳಿ, ಮುಕ್ತನಿಗೆ ಆ ಜ್ಞಾನವು ಇದೆ ಎಂದು ಹೇಳಲ್ಪಡುತ್ತದೆ. ಹೀಗೆ ಜ್ಞಾನಾಭಾವವು ಪ್ರಮಾಣವಿರುದ್ಧವಾದ್ದರಿಂದ ಅದು ಹೇಗೆ ಅನಿಷ್ಟವಲ್ಲ? ಎಂದು ಕೇಳುತ್ತಾರೆ. ಹೀಗೆ ಜ್ಞಾನಾಭಾವವು ಪ್ರಮಾಣವಿರುದ್ಧವಾದ ಕಾರಣ ವಿಷಯಭೋಗಾಭಾವವು ಕೂಡುವುದಿಲ್ಲ. ಇಷ್ಟೇ ಅಲ್ಲದೆ ವಿಷಯಭೋಗವು ಶ್ರುತಿಸಿದ್ಧವೂ ಆಗಿದೆ ಎಂದು ಹೇಳುತ್ತಾರೆ –

**ಸೋಽಶ್ನುತೇ ಸರ್ವಕಾಮಾಂಶ್ಚ ಕಾಮನ್ನೀ ಕಾಮರೂಪ್ಯಥ ॥ ೯೨ ॥**

**ಇತ್ಯಾದಿಶ್ರುತಯಶ್ಲೋಕ್ತಮರ್ಥಮೇವ ವದಂತಿ ಹಿ ।**

ಮುಕ್ತಿಯಲ್ಲಿ ಮುಕ್ತನು ಎಲ್ಲ ಅಭೀಷ್ಟಗಳನ್ನೂ ಭೋಗಿಸುತ್ತಾನೆ. ತನ್ನ ಇಚ್ಛೆಗೆ ತಕ್ಕಂತೆ ಭೋಗ್ಯ ವಸ್ತುಗಳನ್ನು, ರೂಪಗಳನ್ನು ಪಡೆಯುತ್ತಾನೆ. ಇತ್ಯಾದಿ ಶ್ರುತಿಗಳು ಮುಕ್ತನಿಗೆ ವಿಷಯಭೋಗವಿದೆ ಎಂಬ ಅರ್ಥವನ್ನೇ ಹೇಳುತ್ತವೆ. ಆದ್ದರಿಂದ ಮಾತ್ರಾ ಸಂಸರ್ಗಸ್ತ್ವಸ್ಯ ಭವತಿ ಎನ್ನುವಲ್ಲಿ ಅಸಂಸರ್ಗಃ (ಅಂದರೆ ವಿಷಯಗಳ ಸಂಸರ್ಗವು ಇಲ್ಲ) ಎನ್ನುವ ಪರಕೀಯ ವ್ಯಾಖ್ಯಾನವು ಅಯುಕ್ತವು.

ಹಾಗಾದರೆ ಯತ್ರ ಹಿ ದ್ವೈತಮಿವ ಭವತಿ ಎಂಬ ಶ್ರುತಿಯಲ್ಲಿ ಇವ ಶಬ್ದದಿಂದ ದ್ವೈತಾಭಾವವು ಪ್ರತಿಪಾದಿಸಲ್ಪಡುತ್ತದೆ. ಆದ್ದರಿಂದ ದ್ವೈತಾಭಾವವನ್ನು ಒಪ್ಪಿದರೆ ಅನಿಷ್ಟ ಪ್ರಸಂಗವು ಎಂದು ಹೇಳಿದ್ದು ಹೇಗೆ ಎಂದರೆ –

**ಅಸ್ವಾತಂತ್ರ್ಯಾದಿವೇತ್ಯುಕ್ತಂ ನ ದ್ವೈತಾಭಾವತಃ ಕ್ವಚಿತ್ ॥ ೯೩ ॥**

ದ್ವೈತಕ್ಕೆ ಅಸ್ವಾತಂತ್ರ್ಯವೆಂಬ ಅರ್ಥವನ್ನು ಇಟ್ಟುಕೊಂಡು ಇವ ಎಬುದಾಗಿ ಹೇಳಿದ್ದು. ದ್ವೈತಾಭಾವವೆಂಬ ಅಭಿಪ್ರಾಯದಿಂದ ಹೇಳಿಲ್ಲ. ಏಕೆಂದರೆ ಇವ ಎಂಬ ಶಬ್ದಕ್ಕೆ ಅಭಾವ ಎಂಬ ಅರ್ಥವನ್ನು ಎಲ್ಲಿಯೂ ಯಾವ ಕೋಶದಲ್ಲಿಯೂ ಹೇಳಿಲ್ಲ.

ಇವ ಶಬ್ದಕ್ಕೆ ಅಭಾವ ಎಂಬ ಅರ್ಥವನ್ನು ಹೇಳಿದರೆ ಬಾಧಕವಿದೆ ಎಂದು ಹೇಳುತ್ತಾರೆ –

**ಆತ್ಮೈವಾಭೂದಿತಿ ಹ್ಯಸ್ಮಾದವಿಶೇಷಪ್ರಸಂಗತಃ ।**

ಇವ ಶಬ್ದಕ್ಕೆ ಅಭಾವ ಎಂಬ ಅರ್ಥವಿದ್ದರೆ ದ್ವೈತಮಿವ ಭವತಿ ಎಂಬುದಕ್ಕೆ ದ್ವೈತವು ಇಲ್ಲವೆಂದು ಅರ್ಥವಾಗುತ್ತದೆ. ಯತ್ರ ತ್ವಸ್ಯ ಸರ್ವಮಾತ್ಮೈವಾಭೂತ್

ಎಂಬ ವಾಕ್ಯದಿಂದ ದ್ವೈತಾಭಾವವು ಸ್ಪಷ್ಟವಾಗಿಯೇ ಹೇಳಲ್ಪಟ್ಟದೆ. ಆದ್ದರಿಂದ ಆತ್ಮೈವಾಭೂತ್ ಎಂಬ ಈ ವಾಕ್ಯಕ್ಕೆ ದ್ವೈತಮಿವ ಭವತಿ ಎನ್ನುವ ವಾಕ್ಯದಿಂದ ವಿಶೇಷವು ಇಲ್ಲದೇ ಹೋಗುವುದು. ಹಾಗೂ 'ದ್ವೈತವು ಇಲ್ಲವಾದರೆ ಒಬ್ಬನು ಮತ್ತೊಬ್ಬನನ್ನು ಹೇಗೆ ನೋಡಿಯಾನು?' 'ದ್ವೈತವು ಇಲ್ಲವಾದರೆ ಯಾವುದರಿಂದ ಯಾವುದನ್ನು ನೋಡಿಯಾನು?' ಹೀಗೆ ಹೇಳುವ ಶ್ರುತಿಗೆ ಉನ್ಮತ್ತವಾಕ್ಯತ್ವವು ಪ್ರಸಕ್ತವಾಗುವುದು.

ಹಾಗಾದರೆ ಇವ ಶಬ್ದಕ್ಕೆ ಅಸ್ವಾತಂತ್ರ್ಯವಾಚಿತ್ವವು ಹೇಗೆ ಎಂದರೆ –

**ಅಸ್ವಾತಂತ್ರ್ಯೋಪಮಾಭೇದಭೇದೇಷ್ವಿವ ಉದೀರಿತಃ ।। ೯೪ ।।**

**ಶಬ್ದತತ್ವ ಇತಿ ಪ್ರೋಕ್ತಂ ............. ।**

ಇವ ಶಬ್ದವು ಅಸ್ವಾತಂತ್ರ್ಯ, ಉಪಮಾನ, ಅಭೇದ–ಭೇದಗಳಲ್ಲಿ (ಹಾಗೂ ಪರಸ್ಪರ ವಿರುದ್ಧಗಳಾದ ಎರಡು ವಸ್ತುಗಳಲ್ಲಿ) ಹೇಳಲ್ಪಟ್ಟಿದೆ. ಹೀಗೆ ಶಬ್ದತತ್ವವೆಂಬ ಗ್ರಂಥದಲ್ಲಿ ಉಕ್ತವಾಗಿದೆ.

ನ ಪ್ರೇತ್ಯ ಸಂಜ್ಞಾಸ್ತಿ ಎಂಬ ವಾಕ್ಯಕ್ಕೆ ಮುಕ್ತನು ತಿಳಿಯುವುದಿಲ್ಲ ಎಂಬ ಅರ್ಥವನ್ನೇ ಇಟ್ಟುಕೊಂಡು ಅವಿನಾಶೀ ಇತ್ಯಾದಿ ವಾಕ್ಯಗಳನ್ನು ಅನ್ಯಥಾ ವಾಖ್ಯಾನ ಮಾಡುವವನಿಗೆ ಬಾಧಕವನ್ನು ಹೇಳುತ್ತಾರೆ –

**......................... ಮೈತ್ರೇಯ್ಯುಕ್ತೋತ್ತರಂ ಚ ಕಿಮ್ ।**

'ನ ಪ್ರೇತ್ಯ ಸಂಜ್ಞಾಽಸ್ತಿ' ಎಂಬ ವಾಕ್ಯವನ್ನು ಕೇಳಿದ ಮೈತ್ರೇಯಿಯು 'ಸಂಜ್ಞಾ ನಾಶೋ ಯದಿ ಭವೇತ್ಕಿಂ ಮುಕ್ತ್ಯಾ ನಃ ಪ್ರಯೋಜನಮ್ । ಮೋಹಂ ಮಾಂ ಪ್ರಾಪಯಾಮಾಸ ಭವಾನತ್ರೇತಿ ಚೋದಿತಃ' ಇತ್ಯಾದಿಯಾಗಿ ಹೇಳಿದನು. ಇದಕ್ಕೆ ಉತ್ತರವಾದರೂ ಏನು? ಅಂದರೆ 'ನ ಪ್ರೇತ್ಯ ಸಂಜ್ಞಾನಾಸ್ತಿ' ಎನ್ನುವ ವಾಕ್ಯಕ್ಕೆ ಮುಕ್ತನಿಗೆ ಜ್ಞಾನವಿಲ್ಲವೆಂದೇ ವ್ಯಾಖ್ಯಾನ ಮಾಡಿದರೆ ಮೈತ್ರೇಯಿಯು ಹೇಳಿದ ಆಕ್ಷೇಪಕ್ಕೆ ಉತ್ತರವಿಲ್ಲವೆಂದಾಗುವುದು.

ಈ ಪ್ರಕಾರವಾಗಿ ಸಾಂಖ್ಯ ನೈಯಾಯಿಕಾದಿಗಳಿಗೆ ಅಭಿಮತವಾದ ಮೋಕ್ಷಕ್ಕೆ ಅಪ್ರಾಮಾಣಿಕತ್ವವನ್ನು ಪ್ರತಿಪಾದಿಸಿ, ಈಗ ಮೋಕ್ಷಕ್ಕೆ ಅಪುರುಷಾರ್ಥತ್ವ ಪ್ರಸಂಗ ಬರುವುದು ಎಂದು ಏನು ಹೇಳಲ್ಪಟ್ಟಿತೋ ಅದನ್ನು ವಿಸ್ತರಿಸುತ್ತಾರೆ –

**ಸುಖಾದಿಧರ್ಮಹಾನೌ ತು ಮುಕ್ತೇಃ ಕಿಂ ಚ ಪ್ರಯೋಜನಮ್ ।। ೯೫ ।।**

ಸುಖಾದಿ ಧರ್ಮಗಳ ವಿನಾಶವೇ ಮುಕ್ತಿಯೆಂದು ಅಂಗೀಕರಿಸಿದರೆ ಅಂತಹ ಮುಕ್ತಿಯಿಂದ ಪ್ರಯೋಜನವೇನು? 'ಪ್ರಯುಜ್ಯತೇ ಪ್ರವರ್ತ್ಯತೇ ಪುರುಷೋಽನೇನ ಇತಿ ಪ್ರಯೋಜನಮ್' ಎನ್ನುವ ವ್ಯುತ್ಪತ್ತಿಯಿಂದ ಮುಕ್ತಿಗಾಗಿ ಪುರುಷನನ್ನು ಯಾವುದು ಪ್ರವರ್ತಿಸುವುದೋ ಅದು ಪ್ರಯೋಜನ. ಹಾಗೆ ಪ್ರವರ್ತಿಸುವಂತಹ

ಪ್ರಯೋಜನವು ಯಾವುದೂ ಇಲ್ಲ ಎಂದು ತಾತ್ಪರ್ಯ. ಪರರಿಗೆ ನಮ್ಮ ಮತದಲ್ಲಿ ಆಪಾದಿಸತಕ್ಕ ದೋಷವು ಇಲ್ಲವೆಂದು ತು ಶಬ್ದದಿಂದಲೂ, ಮುಕ್ತಿಯಲ್ಲಿ ಸುಖಾಭಾವವು ಅಪ್ರಾಮಾಣಿಕವೇ ಎಂದು ಚ ಶಬ್ದದಿಂದಲೂ ಸೂಚಿಸಿದ್ದಾರೆ.

ಇಷ್ಟಪ್ರಾಪ್ತಿ ಮತ್ತು ಅನಿಷ್ಟನಿವೃತ್ತಿ ಎಂದು ಪ್ರಯೋಜನವು ಎರಡು ವಿಧ. ಅದರಲ್ಲಿ ಮುಕ್ತಿಯು ಇಷ್ಟಪ್ರಾಪ್ತಿ ರೂಪವು ಆಗದೇ ಇದ್ದರೂ, ಅನಿಷ್ಟನಿವೃತ್ತಿರೂಪವು ಆಗಿಯೇ ಆಗುವುದು. ಆದ್ದರಿಂದ ಪುರುಷನಿಂದ ಅರ್ಥಿಸಲ್ಪಡುತ್ತದೆ ಎಂದು ಆಶಂಕಿಸುತ್ತಾರೆ –

**ಯದ್ಯರ್ಥೋ ದುಃಖಹಾನಿಃ ಸ್ಯಾದನರ್ಥಃ ಸುಖನಾಶನಮ್ ।**

**ತಯೋಶ್ಚ ದುಃಖಹಾನಾದ್ಧಿ ಸುಖನಾಶೋಽಧಿಕೋ ಭವೇತ್ ॥ ೯೬ ॥**

ದುಃಖಹಾನಿ ರೂಪವಾದ ಮುಕ್ತಿಯು ಪುರುಷನಿಂದ ಅರ್ಥಿಸಲ್ಪಡುತ್ತದೆ ಎಂದು ನೀನು ಹೇಳುವ ಪಕ್ಷದಲ್ಲಿ, ಈ ವಿಷಯದಲ್ಲಿ ನಾವು ಹೇಳುವುದೇನೆಂದರೆ – ಅನಿಷ್ಟ ನಿವೃತ್ತಿಯು ಪುರುಷಾರ್ಥವಾಗಲಿ. ಹೀಗಿದ್ದರೂ ಸಮಸ್ತ ದುಃಖಹಾನಿರೂಪವಾದ ಮುಕ್ತಿಯು ಪುರುಷಾರ್ಥವಲ್ಲ. ಏಕೆಂದರೆ ಮುಕ್ತಿಯಲ್ಲಿ ಸುಖನಾಶರೂಪವಾದ ಅನರ್ಥವೂ ಇರುವುದು. ಮುಕ್ತಿಯು ಸುಖದುಃಖಗಳೆರಡರ ನಿವೃತ್ತಿರೂಪವಾದುದು ಎಂದು ಅಂಗೀಕರಿಸಿದರೆ ಅದು ಹೇಗೆ ಪುರುಷಾರ್ಥವೆನಿಸುವುದು? ಅದರಲ್ಲಿಯೂ ಸುಖನಾಶವು ದುಃಖನಾಶಕ್ಕಿಂತ ಹೆಚ್ಚು ಅನಿಷ್ಟ. ಆದ್ದರಿಂದ ಅಂತಹ ಮೋಕ್ಷಕ್ಕಾಗಿ ಯಾರೂ ಪ್ರಯತ್ನ ಮಾಡುವುದಿಲ್ಲ.

ಹಾಗಾದರೆ ಎಲ್ಲಿ ಸ್ವಲ್ಪವೇ ದುಃಖದ ನಿವೃತ್ತಿಯೋ ಹೆಚ್ಚಿನ ಸುಖದ ನಾಶವೋ ಅಲ್ಲಿ ಸುಖನಾಶವು ಅನಿಷ್ಟವು. ಆದರೆ ಮುಕ್ತಿಯಲ್ಲಿ ಅತಿ ಹೆಚ್ಚಿನ ದುಃಖ ನಿವೃತ್ತಿಯು. ಸುಖನಾಶವಾದರೂ ಅತ್ಯಲ್ಪವೇ. ಆದಕಾರಣ ಮುಕ್ತಿಗೆ ಹೇಗೆ ಪುರುಷಾರ್ಥತ್ವವಿಲ್ಲ? ಎಂದರೆ –

**ಪ್ರಾಪ್ಯಾಪಿ ದುಃಖಂ ಸುಮಹತ್ಸುಖಲೇಶಾಪ್ತಯೇ ಜನಃ ।**
**ಯತತೇ ಸುಖಹಾನೌ ಹಿ ಕೋ ಮೋಕ್ಷಾಯ ಯತೇತ್ಸುಮಾನ್ ॥ ೯೭ ॥**

ಮೊಳಕಾಲುಗಳಿಂದಲೇ ಅಡ್ಡಾಡುತ್ತ ಜೀವಿಸುವ ಜನರು ಅತ್ಯಂತ ಹೆಚ್ಚಿನ ದುಃಖವನ್ನು ಹೊಂದಿಯೂ ಕೂಡ ಸುಖಲೇಶವನ್ನು ಹೊಂದುವುದಕ್ಕಾಗಿ ಪ್ರಯತ್ನ ಪಡುತ್ತಾರೆ. ಹೀಗಿರುವಾಗ ಅತ್ಯಲ್ಪ ಸುಖವೂ ನಾಶವಾಗುವುದಾದರೆ, ಮಹತ್ತಾದ ದುಃಖವನ್ನು ಬಿಡುವುದಕ್ಕಾಗಿ ಯಾವ ಪುರುಷನು ತಾನೆ ಪ್ರಯತ್ನ ಮಾಡುವನು? ಅಂತೂ ಸುಖವು ಅತ್ಯಲ್ಪವಾದರೂ ಅದನ್ನು ಕಳೆದುಕೊಳ್ಳಲು ಯಾವನೂ ಪ್ರಯತ್ನ ಮಾಡುವುದಿಲ್ಲ ಎಂದು ತಾತ್ಪರ್ಯ.

ಮಹತ್ತಾದ ದುಃಖನಾಶದಿಂದ ಪ್ರಾಪ್ತವಾಗುವ ಸುಖವು ಅಲ್ಪವೇ ಆಗಿದ್ದರೂ ಶ್ರೇಷ್ಠವೇ ಎನ್ನುವುದನ್ನು ಪ್ರಕಾರಾಂತರದಿಂದ ಉಪಪಾದಿಸುತ್ತಾರೆ –

**ಅಲ್ಪಾಚ್ಚ ಸುಖನಾಶಾದ್ಧಿ ಬಿಭೇತ್ಯತಿತರಾಂ ಜನಃ ।**

**ಮಹಚ್ಚ ದುಃಖಮಾಪ್ನೋತಿ ಸುಖನಾಶನಿವೃತ್ತಯೇ ॥ ೯೮ ॥**

ಸುಖವು ಅಲ್ಪವೇ ಇದ್ದರೂ ಅದರ ನಾಶದಿಂದ ಜನರು ಅತಿಶಯವಾಗಿ ಭಯಪಡುತ್ತಾರೆ. ಇದು ಲೋಕದಲ್ಲಿ ಪ್ರಸಿದ್ಧ. ಸುಖನಾಶಹೇತುವಿನ ನಿವೃತ್ತಿಗಾಗಿ ಜನರು ಮಹತ್ತಾದ ದುಃಖವನ್ನೂ ಹೊಂದುತ್ತಾರೆ.

ಹಾಗಾದರೆ ಹೆಚ್ಚಿನ ಪ್ರಮಾಣದಲ್ಲಿ ಮಧುಮಿಶ್ರಿತವಾದ ಸಿಹಿಯಾದ ಅನ್ನವನ್ನು ಅತ್ಯಲ್ಪವಾದ ವಿಷದಿಂದ ಮಿಶ್ರವಾಗಿದೆ ಎಂಬ ಕಾರಣದಿಂದ ಪರಿತ್ಯಾಗಮಾಡಲು ಕಾರಣವೇನು ಎಂದರೆ, ಬಹುತರವಾದ ಸುಖದ ಹಾನಿಯಿಂದಲೇ ಎನ್ನುತ್ತೇವೆ. ಹೀಗೆಯೇ ಆಗಲಿ. ಆದರೆ ಪುರುಷರಲ್ಲಿ ರಾಗಿಗಳು ವೀತರಾಗಿಗಳು (ರಾಗರಹಿತರು) ಎಂದು ಎರಡು ವಿಧವಿದ್ದಾರೆ. ಇವರಲ್ಲಿ ರಾಗಿಗಳು ಸುಖಕ್ಕಾಗಿ ದುಃಖವನ್ನೂ ಅನುಭವಿಸುತ್ತಾರೆ. ವಿಷಮಿಶ್ರಿತವಾಗಿದ್ದರೂ ಅತ್ಯಂತ ಮಧುರವಾದ ಅನ್ನವನ್ನು ಅದರ ಭಕ್ಷಣದಿಂದ ಲಭಿಸುವ ತಾತ್ಕಾಲಿಕವಾದ ಸುಖಕ್ಕಾಗಿ ಭೋಗಿಸುತ್ತಾರೆ. ವಿಷದಿಂದ ಹಾನಿ ಸಂಭವಿಸುವುದು ನಿಶ್ಚಿತವಾಗಿದ್ದರೂ ತಕ್ಷಣಕ್ಕೆ ಪ್ರಾಪ್ತವಾಗುವ ಸುಖವನ್ನು ಕಳೆದುಕೊಳ್ಳಲು ಅವರು ಇಚ್ಛಿಸುವುದಿಲ್ಲ. ವೀತರಾಗಿಗಳಾದರೂ ಅಂತಹ ಅನ್ನಾದಿಗಳ ಸೇವನೆಯಿಂದ ಉಂಟಾಗುವ ಮಹಾವಿಪತ್ತನ್ನು ತಿಳಿದು, ಸ್ವರ್ಗದಂತಹ ಸುಖವನ್ನೂ ಕೂಡ, ಕೋಪಗೊಂಡ ಹಾವಿನ ಹೆಡೆಯ ನೆರಳಿಗೆ ಸದೃಶವೆಂದು ಪರಿತ್ಯಾಗ ಮಾಡುತ್ತಾರೆ, ಎಂದರೆ –

**ನ ಚ ರಾಗನಿಮಿತ್ತಂ ತದ್ವೀತರಾಗಾ ಅಪಿ ಸ್ಫುಟಮ್ ।**

**ನಾರದಾದ್ಯಾಃ ಸುಖಾರ್ಥಾಯ ಸಹಂತೇ ದುಃಖಮಂಜಸಾ ॥ ೯೯ ॥**

ರಾಗನಿಮಿತ್ತದಿಂದಲೇ ಪ್ರಾಪ್ಯಾಪಿ ಇತ್ಯಾದಿ ಹೇಳಿದ್ದು. ಮುಮುಕ್ಷುಗಳಾದರೂ ರಾಗರಹಿತರು. ಆದ್ದರಿಂದ ಸುಖವನ್ನು ಆದರಿಸದೆ ದುಃಖನಾಶಕ್ಕಾಗಿಯೇ ಪ್ರಯತ್ನ ಮಾಡುತ್ತಾರೆ ಎನ್ನುವುದೂ ಕೂಡುವುದಿಲ್ಲ. ಏಕಂದರೆ ವೀತರಾಗಿಗಳಾದ ನಾರದರೇ ಮುಂತಾದವರು ಅಲ್ಪವಾದ ಸುಖವನ್ನು ಹೊಂದಲಿಕ್ಕಾಗಿ ಬಹಳವಾದ ದುಃಖವನ್ನು ಸಹಿಸುತ್ತಾರೆ. ಇದು ಶ್ರುತ್ಯಾದಿಗಳಿಂದ ಸ್ಪಷ್ಟವಾಗಿದೆ.

ಇದು ಯಾವುದರಿಂದ ತಿಳಿದುಬರುತ್ತದೆ ಎಂದರೆ –

**ಯುದ್ಧಾದಿದರ್ಶನಂ ಯಸ್ಮಾತ್ಸುದುಃಖೇನಾಪಿ ಕುರ್ವತೇ ।**

**ಯದೇಂದ್ರವೈರೋಚನಯೋರ್ಬ್ರಹ್ಮಾಸ್ತ್ರಾಭ್ಯಾಂ ಸುತಾಪಿತಾಃ ॥ ೧೦೦ ॥**

**ಅಪಿ ನೈವಾಜಯುರ್ಯುದ್ಧರಸಾತ್ತೇ ನಾರದಾದಯಃ ।**

**ಇತಿ ಸ್ಕಾಂದವಚಸ್ತಸ್ಮಾತ್ಸುಖಾಭಾವಾಯ ಕೋ ಯತೇತ್ ॥ ೧೦೧ ॥**

ನಾರದರೇ ಮೊದಲಾದವರು ಸುಖವನ್ನು ಹೊಂದಲಿಕ್ಕಾಗಿ ಯುದ್ಧದರ್ಶನ, ಸ್ವಯಂವರ ದರ್ಶನಕ್ಕಾಗಿ ದೂರದೇಶಗಳಿಗೆ ಗಮನ ಇತ್ಯಾದಿಗಳನ್ನು ಅತ್ಯಂತ ದುಃಖದಿಂದಲೂ ಕೂಡ ಮಾಡುತ್ತಾರೆ. ಇದೂ ಕೂಡ ಯಾವುದರಿಂದ ಎಂದರೆ, ಇಂದ್ರವೈರೋಚನರ ಬ್ರಹ್ಮಾಸ್ತ್ರಗಳಿಂದ ಅತ್ಯಂತ ಸಂತಾಪಕ್ಕೊಳಗಾದರೂ ನಾರದರೇ ಮುಂತಾದವರು ಯುದ್ಧದರ್ಶನದಿಂದ ಲಭಿಸುವ ಸುಖದ ನಿಮಿತ್ತದಿಂದಾಗಿ ಆ ದರ್ಶನವನ್ನು ಬಿಡಲೇ ಇಲ್ಲ. ಹೀಗೆ ಸ್ಕಾಂದವಚನವಿದೆ. ಆದ್ದರಿಂದ ವೀತರಾಗಿಗಳೂ ಕೂಡ ಸುಖಾಭಾವಕ್ಕಾಗಿ ಪ್ರಯತ್ನ ಮಾಡುವುದಿಲ್ಲ.

ಹೀಗೆ ಪರಕೀಯರು ಹೇಳುವ ಮೋಕ್ಷದಲ್ಲಿ ಸುಖಾಭಾವವನ್ನು ಅಂಗೀಕರಿಸಿ, ಅಂತಹ ಮೋಕ್ಷಕ್ಕಾಗಿ ಯಾರೂ ಪ್ರವೃತ್ತಿ ಮಾಡುವುದಿಲ್ಲವೆಂದು ಹೇಳಿದರು. ಈಗ ದುಃಖಾಭಾವವೂ ಕೂಡುವುದಿಲ್ಲ ಎನ್ನುತ್ತಾರೆ –

**ವಿಮತೋ ದುಃಖಯುಗ್ಯಸ್ಮಾಚ್ಚೇತನಃ ಸನ್ಸುಖೋಜ್ಝಿತಃ ।**

**ಪ್ರತಿಪನ್ನೋ ಯಥೇತ್ಯೇವ ಚಾನುಮಾ ಕೇನ ವಾರ್ಯತೇ ॥ ೧೦೨ ॥**

ಪರಕೀಯರು ಹೆಳುವಂತಹ ಮುಕ್ತನು ದುಃಖದಿಂದ ಕೂಡಿರುವನು. ಅವನು ಚೇತನನಾಗಿದ್ದು ಸುಖರಹಿತನಾದುದರಿಂದ, ನರಕದಲ್ಲಿರುವ ಚೇತನನಂತೆ. ಇಂತಹ ಅನುಮಾನವು ಯಾರಿಂದ ನಿವಾರಿಸಲ್ಪಡುತ್ತದೆ?

ಶ್ರುತಯೋ ಯತಃ ಎಂದು ಈ ಮೊದಲು ಹೇಳಿದ್ದನ್ನು ಈಗ ವಿಸ್ತರಿಸುತ್ತಾರೆ –

**ಸರ್ವಶ್ರುತಿಪುರಾಣೇಷು ಸುಖಭಾವೋಕ್ತಿತಸ್ತಥಾ ।**

**ಮುಕ್ತೌ ನ ಗ್ರಾಹ್ಯಮೇವೈತತ್ಸುಖಾಭಾವಮತಂ ಬುಧೈಃ ॥ ೧೦೩ ॥**

ಮುಕ್ತಿಯಲ್ಲಿ ಸುಖವಿದೆಯೆಂದು ಎಲ್ಲ ಶ್ರುತಿಪುರಾಣಗಳಲ್ಲಿ ಹೇಳಿದೆ. ಆದ್ದರಿಂದ ಮುಕ್ತಿಯಲ್ಲಿ ಸುಖವಿಲ್ಲವೆನ್ನುವ ಮತವು ಜ್ಞಾನಿಗಳಿಂದ ಅಗ್ರಾಹ್ಯವೇ ಆಗಿದೆ.

ಆ ಶ್ರುತ್ಯಾದಿಗಳನ್ನು ಉದಾಹರಿಸುತ್ತಾರೆ –

**ಸೋಽನಾನಂದಾದ್ವಿಮುಕ್ತಃ ಸನ್ನಾನಂದೀ ಭವತಿ ಸ್ಫುಟಮ್ ।**

**ನಿರ್ಗುಣೇ ಬ್ರಹ್ಮಣಿ ಮಯಿ ಧಾರಯನ್ವಿಶದಂ ಮನಃ ॥ ೧೦೪ ॥**

**ಪರಮಾನಂದಮಾಪ್ನೋತಿ ಯತ್ರ ಕಾಮೋಽವಸೀಯತೇ ।**

'ಸೋಽನಾನಂದಾದ್ವಿಮುಕ್ತಃ ಆನಂದೀಭವತಿ' ಎಂಬ ಶ್ರುತಿವಾಕ್ಯವನ್ನು ಇಲ್ಲಿ ತೆಗೆದುಕೊಳ್ಳಬೇಕು. ಮುಕ್ತನು ದುಃಖದಿಂದ ಬಿಡಲ್ಪಟ್ಟವನಾಗಿ ನಿಚ್ಚಳವಾದ ಆನಂದವುಳ್ಳವನು ಆಗುತ್ತಾನೆ ಎಂದು ಇದರ ಅರ್ಥ. ನಿರ್ಗುಣೇ ಎನ್ನುವುದು ಭಾಗವತದಲ್ಲಿನ ಭಗವಂತನ ವಾಕ್ಯ. ಪ್ರಾಕೃತ ಗುಣಗಳಿಂದ ರಹಿತನಾದ ಹಾಗೂ ಗುಣಪೂರ್ಣನಾದ್ದರಿಂದ ಬ್ರಹ್ಮಶಬ್ದವಾಚ್ಯನಾದ ನನ್ನಲ್ಲಿ ನಿರ್ಮಲವಾದ ಮನಸ್ಸನ್ನು ಧರಿಸುವವನು ಉತ್ಕೃಷ್ಟವಾದ ಆನಂದವನ್ನು ಹೊಂದುತ್ತಾನೆ. ಎಲ್ಲಿ ಪರಮಾನಂದವು

ಪ್ರಾಪ್ತವಾಗುವುದೋ ಅಲ್ಲಿ ಸ್ಪೃಹೆಯು ಅವಸಾನವನ್ನು ಹೊಂದುತ್ತದೆ.

**ನ ವಿಷ್ಣುಸದೃಶಂ ದೈವಂ ನ ಮೋಕ್ಷಸದೃಶಂ ಸುಖಮ್ ।। ೧೦೫ ।।**

**ನ ವೇದಸದೃಶಂ ವಾಕ್ಯಂ ನ ವರ್ಣೋ(ಽ)ಂಕಾರಸಂಮಿತಃ ।**

**ಯತ್ರಾನಂದಾಶ್ಚ ಮೋದಾಶ್ಚ ಮುದಃ ಪ್ರಮುದ ಆಸತೇ ।। ೧೦೬ ।।**

**ಕಾಮಸ್ಯ ಯತ್ರಾಪ್ತಾಃ ಕಾಮಾಸ್ತತ್ರ ಮಾಮ್ಮೃತಂ ಕೃಧಿ ।**

ಇದು ಪುರಾಣವಾಕ್ಯ. ವಿಷ್ಣುವಿಗೆ ಸದೃಶವಾದ ದೈವವಿಲ್ಲ. ಮೋಕ್ಷಕ್ಕೆ ಸದೃಶವಾದ ಸುಖವಿಲ್ಲ. ವೇದಕ್ಕೆ ಸದೃಶವಾದ ವಾಕ್ಯವಿಲ್ಲ. ಓಂಕಾರಕ್ಕೆ ಸದೃಶವಾದ ಅಕ್ಷರವಿಲ್ಲ. ಯಾವ ಲೋಕದಲ್ಲಿ ಸ್ವರೂಪಸುಖಗಳೂ (ಆನಂದಾಃ), ಸಂತೋಷ ವಿಶೇಷಗಳೂ (ಮೋದಾಃ), ವಿಷಯಜನ್ಯ ಸುಖವೂ (ಮುದಃ), ಪ್ರಕೃಷ್ಟವಾದ ವಿಷಯಜನ್ಯ ಸುಖವೂ (ಪ್ರಮುದಃ) ಇರುತ್ತವೋ, ಎಲ್ಲಿ ಇಚ್ಛೆಯ ವಿಷಯಗಳೂ ಪರ್ಯಾಪ್ತವಾಗಿವೆಯೋ, ಅಲ್ಲಿ ನನ್ನನ್ನು ಮುಕ್ತನನ್ನಾಗಿ ಮಾಡು. ಹೀಗೆ ವಾಯು ದೇವರನ್ನು ಕುರಿತು ಪ್ರಾರ್ಥನೆ.

**ಇತಿ ಶ್ರುತಿಪುರಾಣಾನಿ ತತ್ರ ತತ್ರ ವದಂತಿ ಹಿ ।। ೧೦೭ ।।**

**ಅತೋ ಮೋಕ್ಷೇ ಸುಖಾಭಾವ ಇತಿ ಯತ್ಕಿಂಚಿದೇವ ಹಿ ।**

ಹೀಗೆ ಶ್ರುತಿ ಪುರಾಣಗಳು ಆಯಾ ಪ್ರದೇಶಗಳಲ್ಲಿ ಮುಕ್ತನಿಗೆ ಸುಖವನ್ನು ಹೇಳುತ್ತವೆ. ಆದಕಾರಣ ಮುಕ್ತಿಯಲ್ಲಿ ಸುಖವಿಲ್ಲವೆನ್ನುವುದು ಅತ್ಯಲ್ಪವಷ್ಟೇ ಎಂದು ಸಿದ್ಧವಾಗುವುದು.

ಸುಖಾಭಾವವನ್ನು ಪ್ರತಿಪಾದಿಸುವುದಕ್ಕಾಗಿ ಸಾಂಖ್ಯರು ಮುಕ್ತನಿಗೆ ಶರೀರ ರಾಹಿತ್ಯವನ್ನು ಹೇಳುವರು. ಅದು ಅಸಿದ್ಧವೆಂದು ಹೇಳುತ್ತಾರೆ –

**ಶಿರಃ ಕರಾದ್ಯಭಾವಶ್ಚ ನ ಮುಕ್ತಸ್ಯ ಭವೇತ್ಕ್ವಚಿತ್ ।**

**ಶ್ರುತಯಶ್ಚ ಪುರಾಣಾನಿ ಮಾನಮತ್ರ ಬಹೂನಿ ಚ ।। ೧೦೮ ।।**

ಮುಕ್ತನಿಗೆ ಯಾವತ್ತೂ ಕೂಡ ಶಿರಸ್ಸು, ಹಸ್ತ ಮುಂತಾದ ಅವಯವಗಳ ಅಭಾವವು ಉಂಟಾಗುವುದಿಲ್ಲ. ಹೀಗಿರುವಾಗ ಸುಖಾಭಾವವಾದರೂ ಹೇಗೆ? ಈ ವಿಷಯದಲ್ಲಿ ಶ್ರುತಿಗಳೂ ಹಾಗೂ ಅನೇಕ ಪುರಾಣಗಳೂ ಕೂಡ ಪ್ರಮಾಣವಾಗಿವೆ.

ಈ ವಿಷಯದಲ್ಲಿ ಪುರಾಣ ವಾಕ್ಯಗಳು ಸ್ಪಷ್ಟವಾದ ಅರ್ಥವನ್ನು ಹೊಂದಿರುವ ಪ್ರಯುಕ್ತ ಮೊದಲು ಪುರಾಣ ವಾಕ್ಯಗಳನ್ನು ಉದಾಹರಿಸುತ್ತಾರೆ –

**ನ ವರ್ತತೇ ಯತ್ರ ರಜಸ್ತಮಸ್ತಯೋಃ**

ಸತ್ತ್ವಂ ಚ ಮಿಶ್ರಂ ನ ಚ ಕಾಲವಿಕ್ರಮಃ ।

ನ ಯತ್ರ ಮಾಯಾ ಕಿಮುತಾಪರೇ ಹರೇ-

ರನುವ್ರತಾ ಯತ್ರ ಸುರಾಸುರಾರ್ಚಿತಾಃ ॥ ೧೦೯ ॥

ಶ್ಯಾಮವಾದತಾಃ ಶತಪತ್ರಲೋಚನಾಃ

ಪಿಶಂಗವಸ್ತ್ರಾಃ ಸುರುಚಃ ಸುಪೇಶಸಃ ।

ಸರ್ವೇ ಚತುರ್ಬಾಹವ ಉನ್ಮಿಷನ್ಮಣಿ-

ಪ್ರವೇಕನಿಷ್ಕಾಭರಣಾಃ ಸುವರ್ಚಸಃ ॥ ೧೧೦ ॥

ಯಾವ ಲೋಕದಲ್ಲಿ ರಜೋಗುಣವೂ, ತಮೋಗುಣವೂ ಹಾಗೂ ಅವುಗಳಿಂದ ಮಿಶ್ರಿತವಾದ ಸತ್ವಗುಣವೂ ಇರುವುದಿಲ್ಲವೋ (ಅಂದರೆ ಈ ಪ್ರಾಕೃತಗುಣಗಳ ಬಂಧದಿಂದ ಕೂಡಿದ ವ್ಯಾಪಾರವು ಇಲ್ಲವೋ), ಕಾಲಸಾಮರ್ಥ್ಯದಿಂದ ಆಗಲ್ಪಟ್ಟ ಭಾವವಿಕಾರವೂ ಇಲ್ಲವೋ, ಎಲ್ಲಿ ಪ್ರಕೃತಿಯು ಬಂಧಕವಾಗಿ ಇಲ್ಲವೋ ಅಂತಹ ಲೋಕದಲ್ಲಿ ಮಹದಾದಿಗಳು ಇರುವುದಿಲ್ಲವೆಂದು ಮತ್ತೆ ಹೇಳಬೇಕೇನು?

ಆ ಲೋಕದಲ್ಲಿರುವ ಎಲ್ಲರೂ ಶ್ಯಾಮವರ್ಣವುಳ್ಳವರೂ, ನಿರ್ಮಲರಾದವರೂ, ಕಮಲದಂತೆ ಕಣ್ಣುಳ್ಳವರೂ, ಪಿಂಗಲವಸ್ತ್ರವುಳ್ಳವರೂ, ಶೋಭನವಾದ ಕಾಂತಿ, ರೂಪ ಹಾಗೂ ಬಲಗಳಿಂದ ಯುಕ್ತರೂ, ಪ್ರಭಾಕಿರಣಗಳಂತಿರುವ ಶ್ರೇಷ್ಠವಾದ ರತ್ನಗಳೂ, ಮುತ್ತಿನ ಸರಗಳೂ ಇವುಗಳನ್ನೇ ಆಭರಣವಾಗಿವುಳ್ಳವರೂ, ನಾಲ್ಕು ಭುಜಗಳಿಂದ ಕೂಡಿದವರೂ ಆಗಿದ್ದು ದೇವತೆಗಳಿಂದಲೂ ಸಾಧುಗಳಿಂದಲೂ ಪೂಜಿಸಿಕೊಳ್ಳಲ್ಪಟ್ಟವರಾಗಿ ಶ್ರೀಹರಿಗೆ ಸೇವಕರಾಗಿ ಇರುತ್ತಾರೆ.

ಪ್ರವಾಲವೈಢೂರ್ಯಮೃಣಾಸವರ್ಚಸಾಂ

ಪರಿಸ್ಫುರತ್ಕುಂಡಲಮೌಲಿಮಾಲಿನಾಮ್ ।

ಭ್ರಾಜಿಷ್ಣುಭಿರ್ಯಃ ಪರಿತೋ ವಿರಾಜತೇ

ಲಸದ್ವಿಮಾನಾವಲಿಭಿರ್ಮಹಾತ್ಮನಾಮ್ ॥ ೧೧೧ ॥

ವಿದ್ಯೋತಮಾನಪ್ರಮದೋತ್ತಮಾಭಿಃ

ಸವಿದ್ಯುದಭ್ರಾವಲಿಭಿರ್ಯಥಾ ನಭಃ ।

ಶ್ರೀರ್ಯತ್ರ ರೂಪಿಣ್ಯುರುಗಾಯಪಾದಯೋಃ

ಕರೋತಿ ಮಾನಂ ಬಹುಧಾ ವಿಭೂತಿಭಿಃ ॥ ೧೧೨ ॥

ಹವಳ, ವೈಢೂರ್ಯ, ಕಮಲದ ದಂಡುಗಳ ವರ್ಚಸ್ಸಿನಿಂದ ಶೋಭಿಸುತ್ತ

ಕುಂಡಲ, ಕಿರೀಟ, ಮಾಲಿಕೆಗಳಿಂದ ಕಂಗೊಳಿಸುತ್ತಿರುವ ದೇವತೆಗಳಿಂದಲೂ ಹಾಗೂ ಉತ್ತಮರಾದ ಶೋಭನವಾದ ಸ್ತ್ರೀಯರಿಂದ ಪ್ರಕಾಶಿಸುತ್ತಿರುವ ವಿಮಾನಗಳ ಪಂಕ್ತಿಗಳಿಂದ ಆ ಲೋಕವು ಶೋಭಿಸುತ್ತಿರುವುದು. ಮಿಂಚುಗಳಿಂದ ಶೋಭಿಸುವ ಮೇಘಗಳ ಪಂಕ್ತಿಗಳಿಂದ ಸಹಿತವಾದ ಆಕಾಶದಂತೆ ಯಾವ ಲೋಕವು ಸುತ್ತ ಮುತ್ತಲೂ ಪ್ರಕಾಶಿಸುತ್ತಿರುವುದೋ ಅಲ್ಲಿ ಪ್ರತ್ಯಕ್ಷಳಾದ ಮಹಾಲಕ್ಷ್ಮಿಯು ಬಹು ರೂಪಗಳಿಂದ ಸಾಕ್ಷಾತ್ತಾಗಿ ಶ್ರೀಹರಿಯ ಚರಣಕಮಲಗಳಲ್ಲಿ ಬಹುಪ್ರಕಾರದಿಂದ ಪೂಜೆಯನ್ನು ಮಾಡುತ್ತಿರುವಳು. ಇಂತಹ ತನ್ನ ಶ್ರೇಷ್ಠವಾದ ಲೋಕವನ್ನು ಅವರಿಗಾಗಿ ಶ್ರೀಹರಿಯು ತೋರಿಸಿದನು ಎಂಬುದಾಗಿ ಭಾಗವತದ ದ್ವಿತೀಯ ಸ್ಕಂಧ ನವಮಾಧ್ಯಾಯದಲ್ಲಿ ಉಕ್ತವಾಗಿದೆ. (ತಸ್ಮೈ ಸ್ವಲೋಕಂ ಭಗವಾನ್ಸಭಾಜಿತಃ ಸಂದರ್ಶಯಾಮಾಸ ಪರಂ ನ ಯತ್ಪದಂ).

**ಋಚಾಂ ತ್ವಃ ಪೋಷಮಾಸ್ತೇ ಪುಪುಷ್ವಾನ್**

**ಗಾಯತ್ರಂ ತ್ವೋ ಗಾಯತಿ ಶಕ್ವರೀಷು ।**

**ಬ್ರಹ್ಮಾ ತ್ವೋ ವದತಿ ಜಾತವಿದ್ಯಾಂ**

**ಯಜ್ಞಸ್ಯ ಮಾತ್ರಾಂ ವಿಮಿಮೀತ ಉ ತ್ವಃ ।। ೧೧೩ ।।**

ಒಬ್ಬ ಬ್ರಹ್ಮನು ಋಚೆಗಳನ್ನು ಪಠಿಸುತ್ತ ಅವುಗಳ ಪೋಷಕನಾಗಿರುತ್ತಾನೆ. ಒಬ್ಬ ಬ್ರಹ್ಮನು ಶಕ್ವರೀ ಛಂದಸ್ಸಿನ ಋಚೆಗಳಲ್ಲಿ ಗಾಯತ್ರವನ್ನು ಗಾಯನಮಾಡುತ್ತಾನೆ. ಒಬ್ಬ ಬ್ರಹ್ಮನು ಪೌರುಷೇಯ ವಿದ್ಯೆಯನ್ನು ಉಪದೇಶಿಸುತ್ತಾನೆ. ಮತ್ತೊಬ್ಬನು ಶ್ರೀಹರಿಯ ಮತ್ಸ್ಯಾದಿ ಅವತಾರಗಳನ್ನು ವಿಶೇಷವಾಗಿ ತಿಳಿಯುತ್ತಾನೆ.

**ಕಾಮಾನ್ನರೂಪೀ ಚರತೀತಿಪೂರ್ವ–**

**ಶ್ರುತ್ಯಾ ಪುರಾಣೋಕ್ತಿಭಿರಪ್ಯದೋಷಃ ।**

**ದೇಹಃ ಸ್ವರೂಪಾತ್ಮಕ ಏವ ತೇಷಾಂ**

**ಮುಕ್ತಿಂ ಗತಾನಾಮಪಿ ಚೇಯತೇ ಹಿ ।। ೧೧೪ ।।**

ಸ್ವೇಚ್ಛಾನುಸಾರವಾದ ಅನ್ನ ಹಾಗೂ ರೂಪವುಳ್ಳವನಾಗಿ ಸಂಚರಿಸುತ್ತಾನೆ. (ಇಲ್ಲಿ ಕಾಮರೂಪ್ಯನುಸಂಚರನ್ ಎಂಬ ಶ್ರುತಿಯನ್ನು ಉದಾಹರಿಸಿದ್ದಾರೆ). ಇವೇ ಮೊದಲಾದ ಶ್ರುತಿಯಿಂದಲೂ, ಪುರಾಣಗಳ ವಚನಗಳಿಂದಲೂ ನಿರ್ದೋಷವಾದ ಸ್ವರೂಪಾತ್ಮಕವೇ ಆದ ಶರೀರವು ಮುಕ್ತರಾದವರಿಂದಲೂ ಹೊಂದಲ್ಪಡುವುದು ಎಂದು ತಿಳಿದುಬರುವುದು. ಆದ್ದರಿಂದ ಇದು ಪ್ರಮಾಣಪ್ರಮಿತವೇ ಆಗಿದೆ.

ಪುರಾಣವಾಕ್ಯದಲ್ಲಿ ಶ್ಯಾಮವದಾತಾಃ ಇತ್ಯಾದಿಗಳಿಂದ ಮುಕ್ತರಿಗೆ ದೇಹವಿದೆ ಎಂದು ತಿಳಿದುಬರುವುದು. ನ ವರ್ತತೇ ಎನ್ನುವಲ್ಲಿ ಪ್ರಕೃತ್ಯಾದಿ ಅಭಾವೋಕ್ತಿಯಿಂದ

ಪರಮಮುಕ್ತಿತ್ವವೂ, ದೇಹಕ್ಕೆ ಸ್ವರೂಪತ್ವವೂ, ಆದ್ದರಿಂದಲೇ ಅದೋಷತ್ವವೂ ಹೇಳಲ್ಪಟ್ಟಿದೆ. ಶ್ರುತಿಯಲ್ಲಿ ಋಚೆಗಳ ಉಚ್ಚಾರಣಾದಿಗಳಿಂದ ದೇಹಿತ್ವವು ಪ್ರಮಿತವು.

ಈ ವಿಷಯದಲ್ಲಿ ಅನುಮಾನವನ್ನು ಹೇಳುತ್ತಾರೆ –

**ಶಿರಃಕರಾದ್ಯೈರಪಿ ಮುಕ್ತಿಭಾಜೋ**

**ಯುಕ್ತಾ ಯತಸ್ತೇ ಪುರುಷಾ ಇದಾನೀಮ್ ।**

**ಯಥೇತಿ ಪೂರ್ವಾ ಅನುಮಾಶ್ಚ ಜೀವ–**

**ಸ್ವರೂಪಮಂಗಾದಿಕಮಾಪಯಂತಿ ।। ೧೧೫ ।।**

ಮುಕ್ತಿಯನ್ನು ಹೊಂದಿದವರು ಶಿರಸ್ಸು , ಹಸ್ತ ಮುಂತಾದವುಗಳಿಂದ ಯುಕ್ತರು, ಪುರುಷರಾದ್ದರಿಂದ ಆತ್ಮತ್ವವಿದ್ದ ಪ್ರಯುಕ್ತ. ಆತ್ಮತ್ವವಿರುವ ನಮಗೆ ಶಿರಕರಾದಿಗಳು ಇರುವಂತೆ. ಇವೇ ಮುಂತಾದ ಅನುಮಾನಗಳು ಮುಕ್ತ ಜೀವರ ಸ್ವರೂಪವನ್ನು ಶರೀರ ಅವಯವಾದಿಗಳಿಂದ ಕೂಡಿರುವುದಾಗಿ ತಿಳಿಸಿಕೊಡುತ್ತವೆ.

ಹೀಗೆ ಸಾಂಖ್ಯಾದಿ ಮತವನ್ನು ನಿರಾಕರಿಸಿದರು. ಮುಕ್ತನಾಗುವ ಮೊದಲು ಭಿನ್ನ ಅಥವಾ ಭಿನ್ನಾಭಿನ್ನನಾಗಿದ್ದ ಜೀವನಿಗೆ ಮುಕ್ತಿಯಲ್ಲಿ ಪರಬ್ರಹ್ಮನೊಂದಿಗೆ ಅತ್ಯಂತ ಐಕ್ಯವು ಉಂಟಾಗುವುದು ಎಂದು ಕೆಲವರು ತಿಳಿಯುತ್ತಾರೆ. ಈ ಮತವನ್ನು ಈಗ ನಿರಾಕರಿಸುತ್ತಾರೆ –

**ನ ಬ್ರಹ್ಮರೂಪತ್ವಮಮುಷ್ಯ ದೇಹಿನೋ ।**

**ಮುಕ್ತಾವಪಿ ಸ್ಯಾತ್ಪ್ರಮಯಾ ಕಥಂಚಿತ್ ।। ೧೧೬ ।।**

ಮುಕ್ತಿಯಲ್ಲಿಯೂ ಭೇದ ಎಂಬ ವಿಷಯದಲ್ಲಿ ಪ್ರಮಾಣವಿರುವುದರಿಂದ ಈ ಜೀವನಿಗೆ ಮುಕ್ತಿಯಲ್ಲಿಯೂ ಕೂಡ ಯಾವ ರೀತಿಯಿಂದಲೂ ಬ್ರಹ್ಮಸ್ವರೂಪತ್ವವು ಆಗಲಾರದು.

ಆ ಪ್ರಮಾಣವನ್ನು ಪಠಿಸುತ್ತಾರೆ –

**ಸ ಬ್ರಹ್ಮಣಾ ಸಹಿತೋಽಶೇಷಭೋಗಾನ್**

**ಭುಂಕ್ತೇ ತಥೋಪೇತ್ಯ ಸುಖಾರ್ಣವಂ ತಮ್ ।**

**ಯತ್ತತ್ಪರಂ ಜ್ಯೋತಿರುಪೇತ್ಯ ಜೀವೋ**

**ನಿಜಸ್ವರೂಪತ್ವಮವಾಪ್ಯ ಕಾಮಾನ್ ।। ೧೧೭ ।।**

**ಭುಂಕ್ತೇ ಸ ದೇವಃ ಪುರುಷೋತ್ತಮೋಽಜ**

**ಆತ್ಮೇತಿ ಚೋಕ್ತೋ ಗುಣಪೂರ್ತಿಹೇತೋಃ ।**

**ಸೇತುಃ ಸ ದೇವೋಽಖಿಲಮುಕ್ತಿಭಾಜಾ-**

**ಮುತಾಮೃತಸ್ಯೈಷ್ಟ ಇಹೇಶಿತಾ ಯತಮ್ ।। ೧೧೮ ।।**

ಮುಕ್ತನು ಬ್ರಹ್ಮನಿಂದ ಸಹಿತನಾಗಿ ಎಲ್ಲ ಭೋಗಗಳನ್ನು ಭೋಗಿಸುತ್ತಾನೆ. ಹಾಗೆ ಸುಖಪೂರ್ಣನಾದ ಪರಬ್ರಹ್ಮನನ್ನು ಹೊಂದಿ ಎಲ್ಲ ಭೋಗಗಳನ್ನು ಭೋಗಿಸುತ್ತಾನೆ. ಜೀವನು ಉತ್ಕೃಷ್ಟ ಜ್ಯೋತಿರೂಪನಾದ ಯಾವ ಶ್ರೀಹರಿಯನ್ನು ಹೊಂದಿ, ತನ್ನ ಸ್ವರೂಪತ್ವವನ್ನು ಹೊಂದಿ, ಎಲ್ಲ ಅಭೀಷ್ಟಗಳನ್ನೂ ಅನುಭವಿಸುವನೋ, ಆ ದೇವನು ಕ್ರೀಡಾದಿ ಗುಣವಿಶಿಷ್ಟನೂ ಉತ್ಪತ್ತಿರಹಿತನೂ ಗುಣಪೂರ್ಣನೂ ಆದ ಪ್ರಯುಕ್ತ ಪುರುಷೋತ್ತಮನೆಂದೂ ಆತ್ಮನೆಂದೂ ಹೇಳಲ್ಪಟ್ಟಿದ್ದಾನೆ. ಮುಕ್ತಿಯನ್ನು ಹೊಂದಿದ ಎಲ್ಲರಿಗೂ ಅವನೇ ಆಶ್ರಯನು. ಇಲ್ಲಿ ಯಾವ ಕಾರಣದಿಂದ ನಿಯಾಮಕನೋ ಅದೇ ರೀತಿ ಮುಕ್ತವರ್ಗಕ್ಕೂ ಕೂಡ ಅವನೇ ನಿಯಾಮಕನು.

ಸ ಬ್ರಹ್ಮಣಾ ಎನ್ನುವುದರಿಂದ 'ಸೋಽಶ್ನುತೇ ಸರ್ವಾನ್ಕಾಮಾನ್ಸಹ ಬ್ರಹ್ಮಣಾ ವಿಪಶ್ಚಿತಾ' ಎನ್ನುವ ಶ್ರುತಿಯನ್ನೂ, ಉಪೇತ್ಯ ಎನ್ನುವುದರಿಂದ 'ನೈತಮಾನಂದ ಮಯಮಾತ್ಮಾನಮುಪಸಂಕ್ರಮ್ಯ' ಎಂಬ ಶ್ರುತಿಯನ್ನೂ, ಯತ್ತತ್ ಎನ್ನುವುದರಿಂದ 'ಪರಂ ಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ ಸ ಉತ್ತಮಃ ಪುರುಷಃ ಸ ತತ್ರ ಪರ್ಯೇತಿ ಜಕ್ಷನ್ಕ್ರೀಡನ್ರಮಮಾಣಃ' ಹಾಗೂ 'ಪರಂ ಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ ಏಷ ಆತ್ಮಾ' ಎಂಬ ಎರಡು ಶ್ರುತಿಗಳನ್ನೂ, ಸೇತುಃ ಎಂದು 'ಅಮೃತಸ್ಯೈಷ ಸೇತುಃ' ಎಂಬ ಶ್ರುತಿಯನ್ನೂ, ಉತಾ ಎಂದು 'ಉತಾಮೃತ ತ್ವಸ್ಯೇಶಾನೋ ಯದನ್ನೇನಾತಿರೋಹತಿ' ಎಂಬ ಶ್ರುತಿಯನ್ನೂ ಇಲ್ಲಿ ಸ್ಮರಿಸಲಾಗಿದೆ.

ಮೇಲೆ ಉದಾಹರಿಸಲ್ಪಟ್ಟ ವಾಕ್ಯಗಳ ಫಲವನ್ನು ತೋರಿಸುತ್ತಾರೆ –

**ಇತ್ಯಾದಿವಾಕ್ಯೈರ್ಭಗವದ್ವಶಃ ಸನ್**

**ಭುಂಕ್ತೇಽಖಿಲಾನ್ಮುಕ್ತಿಗತೋಽಪಿ ಭೋಗಾನ್ ।**

ಇವೇ ಮೊದಲಾದ ವಾಕ್ಯಗಳಿಂದ ಮುಕ್ತಿಯನ್ನು ಹೊಂದಿದವನೂ ಕೂಡ ಶ್ರೀಹರಿಯ ಅಧೀನನಾಗಿಯೇ ಸಕಲ ಭೋಗಗಳನ್ನೂ ಭೋಗಿಸುತ್ತಾನೆ ಎಂದು ತಿಳಿದುಬರುತ್ತದೆ.

ಈ ವಿಷಯದಲ್ಲಿ ಅನುಮಾನವನ್ನೂ ಹೇಳುತ್ತಾರೆ –

**ಕಾಲೋಽಪ್ಯಸೌ ನೈಕ್ಯಯುತಃ ಪರೇಣ**

**ಜೀವಸ್ಯ ಕಾಲೋ ಯತ ಏಷ ಯದ್ವತ್ ।। ೧೧೯ ।।**

**ಇತ್ಯಾದಿಕಾ ಅಪ್ಯನುಮಾಃ ಪ್ರಮಾಣಂ**

**ಮುಕ್ತೌ ಚ ಜೀವಸ್ಯ ಪರತ್ವರೋಧೇ ।**

ಮೋಕ್ಷಸಂಬಂಧಿಯಾದ ಈ ಕಾಲವೂ ಕೂಡ ಜೀವನಿಗೆ ಪರಮಾತ್ಮನಿಂದ ಯಾವ ಐಕ್ಯವು ಹೇಳಲ್ಪಡುವುದೋ ಅದರಿಂದ ಯುಕ್ತವಾದುದು ಆಗುವುದಿಲ್ಲ. ಕಾಲತ್ವವಿದ್ದ ಪ್ರಯುಕ್ತ, ಈ ಸಂಸಾರದಲ್ಲಿನ ಕಾಲದಂತೆ. ಇತ್ಯಾದಿ ಅನುಮಾನಗಳೂ ಕೂಡ ಮುಕ್ತಿಯಲ್ಲಿಯೂ ಜೀವನಿಗೆ ಪರಬ್ರಹ್ಮತ್ವ ನಿರಾಕರಣೆಯಲ್ಲಿ ಪ್ರಮಾಣವು.

ಮೇಲಿನ ವಾಕ್ಯದಲ್ಲಿನ ಆದಿಪದವನ್ನು ವ್ಯಾಖ್ಯಾನಮಾಡುತ್ತ ಅನುಮಾನಾಂತರ ವನ್ನು ಹೇಳುತ್ತಾರೆ –

**ಕಥಂ ಚ ಯಃ ಪೂರ್ವಮಸೌ ನ ಪಶ್ಚಾದ್**

**ಭವೇತ್ಸ ಏವೇತ್ಯಪಿ ಯುಕ್ತಿಮೇತಿ ।। ೧೨೦ ।।**

ಸಂಸಾರದಲ್ಲಿ ಪರಮಾತ್ಮನಾಗದಿದ್ದ ಜೀವನು ಮುಕ್ತಿಯಲ್ಲಿ ಆ ಪರಮಾತ್ಮನೇ ಆಗುವನು ಎನ್ನಗವುದೂ ಕೂಡ ಹೇಗೆ ಯುಕ್ತವಾಗುತ್ತದೆ? ಅಯುಕ್ತವೇ ಆಗುವುದು ಎಂದು ತಾತ್ಪರ್ಯ.

ಇದಕ್ಕೆ ವ್ಯಾಪ್ತಿಯನ್ನು ಉಪಪಾದಿಸುತ್ತಾರೆ –

**ಯತೋ ನ ದೃಷ್ಟಂ ಯದಭೂನ್ನ ಪೂರ್ವಂ**

**ಪಶ್ಚಾತ್ತದಾಸೇತಿ ಕುತಶ್ಚ ಕಿಂಚಿತ್ ।। ೧೨೧ ।।**

ಮೊದಲು ಘಟ ಇತ್ಯಾದಿ ವಸ್ತುಸ್ವರೂಪವನ್ನು ಹೊಂದಿರದ ಯಾವುದೋ ಒಂದು ವಸ್ತುವು ಆಮೇಲೆ ಯಾವದೋ ಒಂದು ಕಾರಣದಿಂದ ಘಟಾದಿ ಭಾವವನ್ನು ಹೊಂದಿತು ಎನ್ನುವುದು ಎಲ್ಲಿಯೂ ಕಾಣಲ್ಪಡಲಿಲ್ಲ. ಈಗ ಕಂಡಿರದ ಘಟಾದಿ ಐಕ್ಯವು ಮುಂದಕ್ಕೆ ಕಂಡುಬರಲಾರದು. ಆದ್ದರಿಂದ ಮೊದಲು ಪರಮಾತ್ಮನಿಂದ ಭಿನ್ನನಾಗಿದ್ದ ಜೀವನು ಮುಕ್ತನಾದ ಮೇಲೆ ಆ ಪರಮಾತ್ಮನಿಂದ ಐಕ್ಯವನ್ನು ಹೊಂದುವನು ಎನ್ನುವುದು ಅಯಕ್ತವು. ಹಾಲು ಹೇಗೆ ಮೊಸರಾಗಿ ಬದಲಾವಣೆ ಹೊಂದುವುದೋ ಹಾಗೆ ಎಂಬ ದೃಷ್ಟಾಂತವು ಐಕ್ಯದ ವಿಷಯದಲ್ಲಿ ಅಸಂಗತವಾಗುವುದು. ಏಕೆಂದರೆ ಕ್ಷೀರತ್ವವಿದ್ದಾಗ ಅಲ್ಲಿ ಮೊಸರಿನ ಭಾವವು ಇರುವುದಿಲ್ಲ. ಅಂತೆಯೇ ಹಾಲು ಮೊಸರಾಗಿ ಪರಿವರ್ತನೆಯಾದ ಮೇಲೆ ಅಲ್ಲಿ ಕ್ಷೀರತ್ವವಿರುವದಿಲ್ಲ. ಹೀಗೆ ಭಾಸ್ಕರಾದಿ ಮತವು ನಿರಾಕರಿಸಲ್ಪಟ್ಟಿತು.

ಹಾಗಾದರೆ ಸ್ವಭಾವದಿಂದಲೇ ಪರಮಾತ್ಮನಿಂದ ಭಿನ್ನಾಭಿನ್ನನಾದ ಜೀವನಿಗೆ ಸಂಸಾರದಲ್ಲಿ ಪರಮಾತ್ಮನಿಂದ ಭೇದವೇ ವ್ಯಕ್ತವಾಗಿದೆ. ಅಭೇದವಾದರೂ ಅವಿದ್ಯಾದಿಗಳಿಂದ ಆವರಿಸಲ್ಪಟ್ಟಿರುತ್ತದೆ. ಮುಕ್ತಿಯಲ್ಲಿ ಅವಿದ್ಯಾದಿಗಳು ನಿವೃತ್ತಿ ಹೊಂದಿರುವ ಪ್ರಯುಕ್ತ ಭೇಬಾಭೇದಗಳೆರಡೂ ವ್ಯಕ್ತವಾಗುತ್ತವೆ. ಹೀಗೆ ಹೇಳುವ ಯಾದವಪ್ರಕಾಶಾದಿಗಳ ಮತವನ್ನು ಈಗ ನಿರಾಕರಿಸುತ್ತಾರೆ –

**ನ ಚೈವ ಮುಕ್ತೇನ ಹರೇಃ ಪೃಥಕ್ತ್ವ-**

**ಮೈಕ್ಯಂ ತಥಾ ಸ್ಯಾದಿತಿ ಯುಕ್ತಿಮೇತಿ ।**

**ಯತೋ ನ ಕುತ್ರಾಪಿ ಭಿದಾಭಿದಾ ಚ**

**ದೃಷ್ಟಾ ಚಿತಶ್ಚೇತನಯಾ ಕುತಶ್ಚಿತ್ ॥ ೧೨೨ ॥**

ಶ್ರೀಹರಿಗೆ ಮುಕ್ತನಿಂದ ಭೇದವೂ ಹಾಗೆಯೇ ಐಕ್ಯವೂ ಆಗುವುದು ಎನ್ನುವ ಮತವು ಯುಕ್ತವೇ ಆಗುವುದಿಲ್ಲ. ಏಕೆಂದರೆ ಚೇತನಕ್ಕೆ ಚೇತನದಿಂದ ಭೇದಾಭೇದವು ಯಾವ ದೇಶದಲ್ಲಿಯೂ ಯಾವುದೇ ಪ್ರಮಾಣದಿಂದಲೂ ಕಂಡುಬಂದಿಲ್ಲ. ಇದರಿಂದ 'ಜೀವೇಶ್ವರೌ ನ ಭಿನ್ನಾಭಿನ್ನೌ ಚೇತನತ್ವಾತ್ ದೇವದತ್ತ ಯಜ್ಞದತ್ತವತ್' 'ಈಶ್ವರೋ ಜೀವೇನ ಭಿನ್ನಾಭಿನ್ನೋ ನ ಭವತಿ ಚೇತನತ್ವಾದ್ಯಜ್ಞದತ್ತವತ್' ಇತ್ಯಾದಿ ಅನುಮಾನವು ಸೂಚಿತವಾಯಿತು.

**ಇತ್ಥಂ ಮತಾನಿ ಭ್ರಮಜಾನಿ ಯಸ್ಮಾ-**

**ನ್ಮೋಕ್ಷಂ ಸಮುದ್ದೇಶ್ಯಮಪಿ ಭ್ರಮೇಣ ।**

**ವಿದುರ್ನ ಸಮ್ಯಗ್ಯದಪೀಹ ಲೌಕಿಕಾಃ**

**ಸುಖಂ ಮಮ ಸ್ಯಾದ್ಧಿ ಸದೇತಿ ಜಾನತೇ ॥ ೧೨೩ ॥**

ಹಿಂದೆ ಹೇಳಿದ ಪ್ರಕಾರದಿಂದ ಜೈನಾದಿ ಮತಗಳು ಭ್ರಾಂತಿಜನ್ಯವು. (ಕೆಲವು ವಂಚಕವು.) ಆದ್ದರಿಂದ ಹೇಯವು ಎಂದು ತಾತ್ಪರ್ಯ. ಈ ಮತ ಪ್ರವರ್ತಕರು ಮುಖ್ಯೋದ್ದೇಶ್ಯವಾದ ಮೋಕ್ಷವನ್ನೂ ಕೂಡ ಸರಿಯಾಗಿ ತಿಳಿಯಲಿಲ್ಲ. ಮತ್ತೆ ವಿಪರೀತವಾಗಿಯೇ ತಿಳಿಯುವರು. ಆದ್ದರಿಂದ ಅವರಿಂದ ಪ್ರಣೀತವಾದ ಮತಗಳು ಭ್ರಮಜನ್ಯಗಳು. ಮತ್ತೆ ಸಾಮಾನ್ಯರಿಂದಲೂ ಚೆನ್ನಾಗಿ ತಿಳಿಯಲ್ಪಟ್ಟ ಪ್ರಮೇಯಗಳ ವಿಷಯದಲ್ಲಿಯೂ ಇವರಿಗೆ ಅಜ್ಞಾನವಿದೆ ಎಂಬ ಅಭಿಪ್ರಾಯದಿಂದ ಹೇಳುತ್ತಾರೆ – ಏಕೆಂದರೆ ಪ್ರಾಣಿಗಳಲ್ಲಿ ಲೌಕಿಕ ಬುದ್ಧಿಯಿಲ್ಲದವರೂ ಕೂಡ ನನಗೆ ಯಾವಾಗಲೂ ಸುಖವು ಆಗಲಿ ಎಂಬುದಾಗಿ ತಮ್ಮ ಉದ್ದೇಶವನ್ನು ತಿಳಿಯುತ್ತಾರೆ. ಇದು ಪ್ರಸಿದ್ಧವು. 'ನ ವಯಮೇವ ಭೂಯಾಸ್ಮ' ಎಂಬುದಾಗಿ ತಮ್ಮ ಅಭಾವವನ್ನೇ ಉದ್ದೇಶವನ್ನಾಗಿ ತಿಳಿಯುವುದಿಲ್ಲ. ಮತ್ತೆ ನನಗೆ ಕ್ಲೇಶನಿವೃತ್ತಿಯಷ್ಟೇ ಆಗಲಿ, ಸುಖವಾಗುವುದು ಬೇಡ ಎಂದು ತಿಳಿಯುವುದಿಲ್ಲ. ಆದ್ದರಿಂದ ಲೌಕಿಕ ಜ್ಞಾನವಿಲ್ಲದ ಸಾಮಾನ್ಯರಿಗಿಂತಲೂ ಇವರು ಅತಿಮೂಢರು ಎಂದು ತಾತ್ಪರ್ಯ. ಈ ಪ್ರಕಾರವಾಗಿ ತತ್ರ ಮೋಕ್ಷ ಸ್ವರೂಪಂ ತು ಇತ್ಯಾದಿಯಾಗಿ ಇಲ್ಲಿಯವರೆಗೆ ಪಾದಪ್ರತಿಪಾದ್ಯ ವಿಷಯವನ್ನೂ ಪಾದಗಳಿಗೆ ಸಂಗತಿಯನ್ನೂ ಹೇಳಿದರು.

ಈಗ ಈ ಪಾದದ ಅಧಿಕರಣಗಳಲ್ಲಿನ ಪೂರ್ವಪಕ್ಷ ಸಿದ್ಧಾಂತಯುಕ್ತಿಗಳನ್ನು ವಿವರಿಸುವ ಉದ್ದೇಶದಿಂದ ಪ್ರಾಸಂಗಿಕವಾಗಿ ಸಿಂಹಾವಲೋಕನದಿಂದ ಹಿಂದಿನ

ಎರಡು ಪಾದಗಳ, ಅಂದರೆ ಜ್ಞಾನಪಾದ (ಅಧ್ಯಾಯ ೩, ಪಾದ ೪) ಹಾಗೂ ಕರ್ಮಕ್ಷಯಪಾದಗಳ (ಅಧ್ಯಾಯ ೪, ಪಾದ ೧) ಯುಕ್ತಿಗಳನ್ನು ಹೇಳುತ್ತ, ಈ ಪಾದದಲ್ಲಿಯೂ ಪೂರ್ವಪಕ್ಷ ಸಿದ್ಧಾಂತಯುಕ್ತಿಗಳನ್ನು ಹೇಳುವರು –

ಮೊದಲಿಗೆ ತೃತೀಯಾಧ್ಯಾಯ ಚತುರ್ಥಪಾದದಲ್ಲಿನ ಪೂರ್ವಪಕ್ಷ ಹಾಗೂ ಸಿದ್ಧಾಂತ ಯುಕ್ತಿಗಳನ್ನು ಹೇಳುತ್ತಾರೆ –

**ಔದಾರ್ಯಮುಚ್ಚಾವಚಶಕ್ತಿರಾತ್ಮ-**

**ಸ್ವರೂಪದಾರ್ಢ್ಯಂ ಚ ನಿಜಸ್ವಭಾವಃ ।**

**ಸ್ವಾತಂತ್ರ್ಯಮಾಪೂರ್ಣವಿಶೇಷಯೋಗ್ಯತಾ**

**ವಿರೋಧಹಾನಿಶ್ಚ ಚತುರ್ಥಪಾದೇ ॥ ೧೨೪ ॥**

**ವ್ಯವಸ್ಥಿತಿಸ್ಸ್ವವಿಶೇಷಸ್ಥಿತಿಶ್ಚ ನಿಷೇಧಸಾಮಾನ್ಯವಿಧಿಕ್ರಿಯಾಣಾಮ್ ।**

**ವಿಭಕ್ತತಾ ಚಾತ್ವರಯೈವ ಸಿದ್ಧಿರ್ವಿಪಕ್ಷಸಂಪ್ರಾಪ್ತಿನಿರೋಧಹೇತವಃ ॥೧೨೫॥**

**'ವಿಪಕ್ಷಸಂಪ್ರಾಪ್ತಿವಿರೋಧಹೇತವಃ'** ಎಂದರೆ ಪೂರ್ವಪಕ್ಷ ಸಂಪ್ರಾಪ್ತಿಯನ್ನು ಮಾಡತಕ್ಕ ಯುಕ್ತಿಗಳಿಗೆ ನಿವಾರಕವಾದ ಹೇತುಗಳು. ಅಂದರೆ ಸಿದ್ಧಾಂತಯುಕ್ತಿಗಳು.

| ಅಧಿಕರಣ | ಪೂರ್ವಪಕ್ಷಯುಕ್ತಿ | ಸಿದ್ಧಾಂತಯುಕ್ತಿ |
|---|---|---|
| ಪುರುಷಾರ್ಥಾಧಿಕರಣ | ಔದಾರ್ಯಂ | ವ್ಯವಸ್ಥಿತಿಃ |
| ಅಸಾರ್ವತ್ರಿಕ್ಯಧಿಕರಣ | ಔದಾರ್ಯಂ | ವ್ಯವಸ್ಥಿತಿಃ |
| ನಾವಿಶೇಷಾಧಿಕರಣ | ಉಚ್ಚಾವಚಶಕ್ತಿಃ | ಅವಿಶೇಷಃ |
| ಸ್ತುತ್ಯಧಿಕರಣ | ಆತ್ಮಸ್ವರೂಪದಾರ್ಢ್ಯಂ | ಸ್ಥಿತಿಃ |
| ಉಭಯಲಿಂಗಾಧಿಕರಣ | ಆತ್ಮಸ್ವರೂಪದಾರ್ಢ್ಯಂ | ಸ್ಥಿತಿಃ |
| ನ ಚಾಧಿಕಾರಿಕಾಧಿಕರಣ | ನಿಜಸ್ವಬಾವಃ | ನಿಷೇಧಸಾಮಾನ್ಯವಿಧಿ–ಕ್ರಿಯಾಣಾಂ ವಿಭಕ್ತತಾ |
| ಫಲಶ್ರುತ್ಯಧಿಕರಣ | ಸ್ವಾತಂತ್ರ್ಯಂ | ಅತ್ವರಯೈವ ಸಿದ್ಧಿಃ |
| ಕೃತ್ಸ್ನಭಾವಾಧಿಕರಣ | ಅಪೂರ್ಣವಿಶೇಷಯೋಗ್ಯತಾ | ಅತ್ವರಯೈವ ಸಿದ್ಧಿಃ |
| ಅನಾವಿಷ್ಕಾರಾಧಿಕರಣ | ಅಪೂರ್ಣವಿಶೇಷಯೋಗ್ಯತಾ | ಅತ್ವರಯೈವ ಸಿದ್ಧಿಃ |
| ವಿಹಿತಾಧಿಕರಣ | ವಿರೋಧಹಾನಿಃ | ಅತ್ವರಯೈವ ಸಿದ್ಧಿಃ |
| ಮುಕ್ತಿಫಲಾಧಿಕರಣ | ವಿರೋಧಹಾನಿಃ | ಅತ್ವರಯೈವ ಸಿದ್ಧಿಃ |

ಈಗ ಚತುರ್ಥಾಧ್ಯಾಯ ಪ್ರಥಮಪಾದದಲ್ಲಿನ ಪೂರ್ವಪಕ್ಷ ಹಾಗೂ ಸಿದ್ಧಾಂತ ಯುಕ್ತಿಗಳನ್ನು ಹೇಳುತ್ತಾರೆ –

**ಸುಶಕ್ಯತಾ ಶಶ್ವದತಿಪ್ರಸಿದ್ಧಿರ್ವಿವೇಕವಿನ್ಯಾಸವಿಚಾರಸಂಜ್ಞಾಃ ।**

**ನಾನಾಪ್ರವೃತ್ತಿಃ ಕೃತಕೃತ್ಯತಾ ಚ ವಿಪಕ್ಷತರ್ಕಾಃ ಸಮತೀತಪಾದೇ ॥೧೨೬॥**

**ಮಹಾಫಲತ್ವಂ ಪ್ರವಿವಿಕ್ತತಾ ಚ**

**ಸಂಧಿಗ್ರಹಃ ಸಾಧನಮಾಪ್ತಕೃತ್ಯಮ್ ।**

**ವಿಶೇಷಕಾರ್ಯಂ ಕೃತಿಸಂಸ್ಥಿತಿಶ್ಚ**

**ಸುಯುಕ್ತಯೋ ನಿರ್ಣಯಗಾಃ ಸ್ವಪಕ್ಷೇ ॥೧೨೭॥**

'ಸ್ವಪಕ್ಷೇ ನಿರ್ಣಯಗಾಃ ಸುಯುಕ್ತಯಃ' ಎಂದರೆ ತಮ್ಮ ಪಕ್ಷದಲ್ಲಿ ನಿಶ್ಚಯವನ್ನು ಮಾಡಿಕೊಡತಕ್ಕ ಶೋಭನವಾದ ಯುಕ್ತಿಗಳು. ಅಂದರೆ ಸಿದ್ಧಾಂತಯುಕ್ತಿಗಳು.

| ಅಧಿಕರಣ | ಪೂರ್ವಪಕ್ಷಯುಕ್ತಿ | ಸಿದ್ಧಾಂತಯುಕ್ತಿ |
|---|---|---|
| ಆವೃತ್ತ್ಯಧಿಕರಣ | ಸುಶಕ್ಯತಾ | ಮಹಾಫಲತ್ವಂ |
| ಆತ್ಮಾಧಿಕರಣ | ಶಶ್ವದತಿಪ್ರಸಿದ್ಧಿಃ | ಪ್ರವಿವಿಕ್ತತಾ |
| ನ ಪ್ರತೀಕಾಧಿಕರಣ | ವಿವೇಕಃ | ಸಂಧಿಗ್ರಹಃ |
| ಬ್ರಹ್ಮದೃಷ್ಟ್ಯಧಿಕರಣ | ವಿನ್ಯಾಸಃ | ಸಾಧನಂ |
| ಆದಿತ್ಯಾಧಿಕರಣ | ವಿಚಾರಃ | ಆಪ್ತಕೃತ್ಯಂ |
| ಆಸೀನಾಧಿಕರಣ | ಸಂಜ್ಞಾ | ವಿಶೇಷಕಾರ್ಯಂ |
| ಆಪ್ರಾಯಣಾಧಿಕರಣ | ನಾನಾಪ್ರವೃತ್ತಿಃ | ವಿಶೇಷಕಾರ್ಯಂ |
| ತದಧಿಗಮಾಧಿಕರಣ | ಕೃತಕೃತ್ಯತಾ | ಸಂಸ್ಥಿತಿಃ |

ಈಗ ಚತುರ್ಥಾಧ್ಯಾಯ ದ್ವಿತೀಯಪಾದದಲ್ಲಿನ ಪೂರ್ವಪಕ್ಷ ಹಾಗೂ ಸಿದ್ಧಾಂತ ಯುಕ್ತಿಗಳನ್ನು ಹೇಳುತ್ತಾರೆ –

**ವ್ಯಾಮಿಶ್ರತಾ ಕಾರ್ಯಕರತ್ವಮರ್ಥ–**

**ಕ್ಲೃಪ್ತಿಃ ಸುದಾರ್ಢ್ಯಂ ಪರತಂತ್ರತಾ ಚ ।**

**ಸಮಾನಧರ್ಮಃ ಕೃತಶೇಷತಾಚ**

**ಲೋಕೋಪಮಾ ಪೂರ್ವಮತಾನುಸಾರಾಃ ॥ ೧೨೮ ॥**

**ವಿಶೇಷಸಾಮ್ಯಶ್ರುತಿರಾಧ್ಯತಾ ಚ ಸಮಾನಲೋಪೋ ಮಹಿಮಾವಿಶೇಷಃ ।**

**ಕೃತಾರ್ಥತಾ ಶಶ್ವದನುಪ್ರವೃತ್ತಿಃ ಸಿದ್ಧಾಂತನಿರ್ಣೇತಿವಿಶಿಷ್ಟಹೇತವಃ ॥ ೧೨೯ ॥**

**'ಪೂರ್ವಮತಾನುಸಾರಾಃ'** ಎಂದರೆ ಪೂರ್ವಪಕ್ಷಯುಕ್ತಿಗಳು. **'ಸಿದ್ಧಾಂತ ನಿರ್ಣೇತಿ ವಿಶಿಷ್ಟಹೇತವಃ'** ಎಂದರೆ ಸಿದ್ಧಾಂತನಿರ್ಣಯಕ್ಕೆ ಉಪಯುಕ್ತವಾದ ಹೇತುಗಳು. ಅಂದರೆ ಸಿದ್ಧಾಂತಯುಕ್ತಿಗಳು.

| **ಅಧಿಕರಣ** | **ಪೂರ್ವಪಕ್ಷಯುಕ್ತಿ** | **ಸಿದ್ಧಾಂತಯುಕ್ತಿ** |
|---|---|---|
| ವಾಗಧಿಕರಣ | ವ್ಯಾಮಿಶ್ರತಾ | ವಿಶೇಷಸಾಮ್ಯಶ್ರುತಿಃ |
| ಮನಃಪ್ರಾಣಾಧಿಕರಣ | ಕಾರ್ಯಕರತ್ವಂ | ಆಧ್ಯತಾ |
| ಅಧ್ಯಕ್ಷಾಧಿಕರಣ | ಕಾರ್ಯಕರತ್ವಂ | ಆಧ್ಯತಾ |
| ಭೂತಾಧಿಕರಣ | ಅರ್ಥಕ್ಲೃಪ್ತಿಃ | ಸಮಾನಲೋಪಃ |
| ನೈಕಸ್ಮಿನ್ನಧಿಕರಣ | ಅರ್ಥಕ್ಲೃಪ್ತಿಃ | ಸಮಾನಲೋಪಃ |
| ಸಮನಾಧಿಕರಣ | ಸುದಾರ್ಢ್ಯಂ | ಮಹಿಮಾ |
| ತದಪೀತಾಧಿಕರಣ | ಸುದಾರ್ಢ್ಯಂ | ಮಹಿಮಾ |
| ತಾನಿಪರಾಧಿಕರಣ | ಪರತಂತ್ರತಾ | ವಿಶೇಷಃ |
| ಅವಿಭಾಗಾಧಿಕರಣ | ಸಮಾನಧರ್ಮಃ | ಕೃತಾರ್ಥತಾ |
| ತದೋಕೋಧಿಕರಣ | ಕೃತಶೇಷತಾ | ಶಶ್ವದನುಪ್ರವೃತ್ತಿಃ |
| ಯೋಗ್ಯಧಿಕರಣ | ಲೋಕೋಪಮಾ | ಶಶ್ವದನುಪ್ರವೃತ್ತಿಃ |

## ನೈಕಸ್ಮಿನ್ನಧಿಕರಣಮ್

**॥ ಓಂ ನೈಕಸ್ಮಿನ್ ದರ್ಶಯತೋ ಹಿ ಓಂ ॥**

'ಅಗ್ನೌ ಸರ್ವೇ ದೇವಾ ವಿಲೀಯಂತೇ' ಎಂದು ಒಂದು ಶ್ರುತಿ ಹೇಳಿದರೆ, 'ಭೂತೇಷು ದೇವಾ ವಿಲೀಯಂತೇ' ಎಂದು ಮತ್ತೊಂದು ಶ್ರುತಿಯು ಹೇಳುತ್ತದೆ. ಹಾಗಾದರೆ ಎಲ್ಲ ದೇವತೆಗಳೂ ಒಬ್ಬ ಅಗ್ನಿಯಲ್ಲಿಯೇ ಲಯ ಹೊಂದುವರೋ ಅಥವಾ ಐದೂ ಭೂತಗಳಲ್ಲಿ ಲಯ ಹೊಂದುವರೋ ಎಂದು ಸಂಶಯ. ಅಗ್ನಿ ಶ್ರುತಿಯು ನಿರವಕಾಶವೂ, ಭೂತಶ್ರುತಿಯು ಸಾವಕಾಶವೂ ಆದುದರಿಂದ ಒಬ್ಬ ಅಗ್ನಿಯಲ್ಲಿಯೇ ಎಲ್ಲ ದೇವತೆಗಳಿಗೆ ಲಯವೆಂದು ಪೂರ್ವಪಕ್ಷ. ಅದು ಸರಿಯಲ್ಲ, ಐದೂ ಭೂತಗಳಲ್ಲಿ ಲಯವೆಂದು ಸಿದ್ಧಾಂತ. ಏಕೆಂದರೆ – 'ಪೃಥಿವ್ಯಾಮೃಭವೋ ವಿಲೀಯಂತೇ, ವರುಣೇಽಶ್ವಿನೌ, ಅಗ್ನಾವಗ್ನಯೋ, ವಾಯಾವಿಂದ್ರಃ, ಸೋಮ

ಆದಿತ್ಯೋ ಬೃಹಸ್ಪತಿ ರಿತ್ಯಾಕಾಶ ಏವ ಸಾಧ್ಯಾ ವಿಲೀಯಂತೇ' 'ಋಭವಃ ಪೃಥಿವ್ಯಾಂ, ವರುಣ ಆಪಃ, ಅಗ್ನಯಸ್ತೇಜಸಿ, ಮರುತೋ ಮಾರುತೇ, ಆಕಾಶೇ ವಿನಾಯಕಾ ವಿಲೀಯಂತೇ' ಎನ್ನುವ ಶ್ರುತಿಗಳು ಯಥಾಯೋಗ್ಯವಾಗಿ ಐದು ಭೂತಗಳಲ್ಲಿಯೂ ದೇವತೆಗಳಿಗೆ ಲಯವೆಂದು ತೋರಿಸುತ್ತವೆ. ವಾಯಾವಿಂದ್ರಃ ಎನ್ನುವಲ್ಲಿರುವ ವಾಯು ಶಬ್ದವು ಅಮುಖ್ಯವಾದ ಭೂತವಾಯುವನ್ನು ಹೇಳುತ್ತದೆ ಎಂದು ತೋರುತ್ತದೆ. ಏಕೆಂದರೆ ಇಲ್ಲಿ ಪೃಥಿವ್ಯಾದಿ ಪ್ರಕರಣದಲ್ಲಿ ವಾಯುವು ಹೇಳಲ್ಪಟ್ಟಿದೆ. ಸೂತ್ರಕಾರರು ಎಲ್ಲ ಭೂತಗಳಲ್ಲಿ ದೇವತೆಗಳಿಗೆ ಲಯವು ಎಂಬ ಅರ್ಥದಲ್ಲಿ 'ಭೂತೇಷು ತಚ್ಛ್ರುತೇಃ' ಎಂಬ ಸೂತ್ರವನ್ನು ಹೇಳಿದ್ದಾರೆ. ಈ ಕಾರಣದಿಂದಲೂ ಅಮುಖ್ಯ ವಾಯುವೇ ಇಲ್ಲಿ ವಿವಕ್ಷಿತ ಎಂಬ ಪ್ರತೀತಿಯನ್ನು 'ಪ್ರಧಾನ' ಇತ್ಯಾದಿ ವಚನದಿಂದ ನಿವಾರಣೆ ಮಾಡುತ್ತಾರೆ –

**ಪ್ರಧಾನವಾಯುಸ್ತ್ವಿಹ ವಾಯುನಾಮಾ**

**ಭೂತೇಷ್ವಿತಿ ಪ್ರೋಕ್ತಗತೋಽಪಿ ಯುಕ್ತ್ಯಾ ।**

**ಯಸ್ಮಾತ್ ಶ್ರುತೌ ಪವತೇ ಚೇತಿ ಭೂರಿ–**

**ಪ್ರೋಕ್ತೋ ಯತೋ ಭೂತಮಾನೀ ಚ ಸೋಽಪಿ ।**

**ಮಹಾಮಾನೀ ತ್ವಲ್ಪಮಾನೀ ಚ ಯಸ್ಮಾತ್**

**ತಚ್ಛಬ್ದೇನಾಪ್ಯುಚ್ಯತೇ ತೇನ ಸೋಽಪಿ ॥ ೧೩೦ ॥**

ಈ ಶ್ರುತಿಯಲ್ಲಿ ವಾಯು ಎಂಬ ಶಬ್ದದಿಂದ ಪ್ರಧಾನವಾಯುವೇ ವಿವಕ್ಷಿತ. (ನಿಶ್ಚಯಾರ್ಥದಲ್ಲಿ ತು ಶಬ್ದವು). ಭೂತೇಷು ಎಂದು ಭೂತಗಳಲ್ಲಿ ಲಯವನ್ನು ಹೇಳುವ ಸಂದರ್ಭದಲ್ಲಿ ಪೃಥಿವ್ಯಾದಿಗಳಲ್ಲಿ ವಾಯುವು ಸೇರಿದ್ದರೂ, ಉತ್ತಮರಾದ ಇಂದ್ರಾದಿಗಳಿಗೆ ಅಧಮವಾದ ಭೂತವಾಯುವಿನಲ್ಲಿ ಲಯವು ಕೂಡುವುದಿಲ್ಲವೆಂಬ ಯುಕ್ತಿಯಿಂದ ಇಲ್ಲಿ ಪ್ರಧಾನವಾಯುವನ್ನೇ ಗ್ರಹಿಸಬೇಕು. ಇಂದ್ರಾದಿಗಳಿಗೆ ಪ್ರಧಾನ ವಾಯುವಿನಲ್ಲಾದರೂ ಲಯವು ಹೇಗೆ ಕೂಡುತ್ತದೆ ಎಂದರೆ ಯಸ್ಮಾತ್ ಇತ್ಯಾದಿ ವಚನವನ್ನು ಹೇಳುತ್ತಾರೆ– ಪವತೇ (ಸಾ ವಾ ಏಷಾ ದೇವತಾ ಅನಾದಿರ್ಯೋಽಯಂ ಪವತೇ) ಎನ್ನುವ ಶ್ರುತಿಯಲ್ಲಿಯೂ, ಬೇರೆ ಶ್ರುತಿಗಳಲ್ಲಿಯೂ, ಪ್ರಧಾನ ವಾಯುವು ಭೂರಿ ಎಂಬ ಶಬ್ದದಿಂದ ಸಕಲ ಜೀವೋತ್ತಮನೆಂದು ಹೇಳಲ್ಪಟ್ಟಿದ್ದಾನೆ. ಆದಕಾರಣ ಆ ವಾಯುವಿನಲ್ಲಿ ಇಂದ್ರಾದಿಗಳಿಗೆ ಲಯವು ಕೂಡುತ್ತದೆ. ಆದ್ದರಿಂದ ಪ್ರಧಾನವಾಯುವೇ ಇಲ್ಲಿ ವಾಯುವೆಂಬ ಹೆಸರಿನಿಂದ ಹೇಳಲ್ಪಟ್ಟಿದ್ದಾನೆ. ಅಲ್ಲದೆ ಪ್ರಧಾನವಾಯುವೂ ಕೂಡ ಭೂತಗಳಿಗೆ ಅಭಿಮಾನಿಯಾಗಿರುವ ಕಾರಣ ಭೂತ ನಾಮಕನೂ ಆಗಿರುತ್ತಾನೆ. ಇದನ್ನೇ ವಿವರಿಸುತ್ತಾರೆ. ಹೇಗೆ ಸಮಗ್ರ ರಾಷ್ಟ್ರದ ಅಧಿಪತಿಯಾದ ರಾಜನು ಆ ರಾಷ್ಟ್ರದಲ್ಲಿಯೇ ಸೇರಿರುವ ಗ್ರಾಮಕ್ಕೂ ಅಧಿಪತಿಯೇ ಆಗುವನೋ ಹಾಗೆಯೇ, ಸರ್ವಾಭಿಮಾನಿಯಾದ ಪ್ರಧಾನವಾಯುವು ಅಲ್ಪವಾದ

ಭೂತವಾಯುವಿಗೂ ಅಭಿಮಾನಿಯೇ ಆಗುವನು. ಆದ್ದರಿಂದ ವಾಯು ಶಬ್ದದಿಂದ ಮಾತ್ರವಲ್ಲ, ಭೂತಶಬ್ದದಿಂದಲೂ ಕೂಡ ಮುಖ್ಯವಾಯುವು ಹೇಳಲ್ಪಡುತ್ತಾನೆ.

## ಪರಾಧಿಕರಣಮ್

**॥ ಓಂ ತಾನಿ ಪರೇ ತಥಾ ಹ್ಯಾಹ ಓಂ ॥**

ಇಲ್ಲಿ ಭೂತಾಭಿಮಾನಿಗಳೇ ಮೊದಲಾಗಿ ಎಲ್ಲ ದೇವತೆಗಳಿಗೂ ಪರಮಾತ್ಮನಲ್ಲಿ ಸಾಕ್ಷಾತ್ತಾಗಿ ಲಯವು ಎಂದು ತೋರುತ್ತದೆ. ಅದರ ಪರಿಹಾರಕ್ಕಾಗಿ ಭಾಷ್ಯದಲ್ಲಿ ಪ್ರಾಣದ್ವಾರೇಣ ಎಂದು ಹೇಳಲಾಗಿದೆ. ಅಲ್ಲಿಯೂ ಪ್ರಾಣನಲ್ಲಿ ಎಲ್ಲ ದೇವತೆಗಳಿಗೆ ಸಾಕ್ಷಾತ್ತಾಗಿ ಲಯವು ಎಂದು ಭಾಸವಾಗುತ್ತದೆ. ಆದಕಾರಣ ಈ ವಿಷಯವನ್ನು ಸ್ಪಷ್ಟ ಪಡಿಸಲು ಇಲ್ಲಿ ವ್ಯಾಖ್ಯಾನ ಮಾಡುತ್ತಾರೆ –

**ತಸ್ಮಿಲ್ಲಯಂ ಯಾಂತಿ ಭೂತಾನ್ಯಶೇಷ–**
**ಕ್ರಮಾವಿರೋಧೇನ ಸ ಏವ ವಿಷ್ಣೌ ।**
**ಇಂದ್ರಾದೀನಾಂ ತತ್ರ ಲಯಃ ಕ್ರಮಂ ತು**
**ಪ್ರೋಕ್ತಂ ವಿಶೇಷಾದನುಸೃತ್ಯ ನಾನ್ಯತ್ ॥ ೧೩೧ ॥**

ಶ್ರುತ್ಯಾದಿಗಳಲ್ಲಿ ಉಕ್ತವಾದ ಎಲ್ಲ ಕ್ರಮಗಳಿಗೆ ಅನುಸಾರವಾಗಿ ಭೂತಾಭಿಮಾನಿ ದೇವತೆಗಳು ಪ್ರಧಾನವಾಯುವಿನಲ್ಲಿ ಲಯ ಹೊಂದುತ್ತಾರೆ. ಆ ಪ್ರಧಾನವಾಯುವೇ ವಿಷ್ಣುವಿನಲ್ಲಿ ಲಯ ಹೊಂದುತ್ತಾನೆ. ವಾಯಾವಿಂದ್ರಃ ಎನ್ನುವ ಶ್ರುತಿಯಲ್ಲಿಯೂ ಕೂಡ ಇಂದ್ರಾದಿಗಳಿಗೆ ಪ್ರಧಾನವಾಯುವಿನಲ್ಲಿ ಹೇಳಲ್ಪಟ್ಟ ಲಯವು ಸಾಕ್ಷಾತ್ತಲ್ಲ. ವಿಶೇಷವಾಕ್ಯದಿಂದ ಹೇಳಲ್ಪಟ್ಟ ಕ್ರಮವನ್ನು ಅನುಸರಿಸಿ ಲಯವನ್ನು ಹೇಳಬೇಕು. ಅದಕ್ಕೆ ವಿರುದ್ಧವಾದ ರೀತಿಯಲ್ಲಿ ವ್ಯಾಖ್ಯಾನವನ್ನು ಮಾಡತಕ್ಕದ್ದಲ್ಲ.

ಅದೇ ಕ್ರಮವನ್ನು ಸಂಕ್ಷಿಪ್ತವಾಗಿ ಹೇಳುತ್ತಾರೆ –

**ತಸ್ಮಾದಶೇಷಾ ಗಿರಿಜಾಂ ಪ್ರವಿಶ್ಯ**
**ತಯೈವ ರುದ್ರಂ ಸಹ ತೇನ ವಾಣೇಮ್ ।**
**ತಯಾ ಪತಿಂ ಪ್ರಾಪ್ಯ ಸಹೈವ ತೇನ**
**ಲಯಂ ಹರೌ ಯಾಂತಿ ಸಮಸ್ತಜೀವಾಃ ॥ ೧೩೨ ॥**

ಆದ್ದರಿಂದ (ಯಾವಾಗಲೂ ವಿಶೇಷಪ್ರಮಾಣವನ್ನು ಅನುಸರಿಸಿಯೇ ವ್ಯಾಖ್ಯಾನ ಮಾಡಬೇಕಾದ್ದರಿಂದ) ಎಲ್ಲ ದೇವತೆಗಳೂ ವಾರುಣೀಸೌಪರ್ಣಿಯರನ್ನು ಪ್ರವೇಶಿಸಿ, ಅವರೊಂದಿಗೆ ಶೇಷಗರುಡರನ್ನೂ, ಆ ಶೇಷಗರುಡರಿಂದ ಸರಸ್ವತಿಯನ್ನೂ ಹೊಂದಿ, ಸರಸ್ವತಿಯಿಂದ ಕೂಡಿಕೊಂಡೇ ವಾಣೀಪತಿ ಬ್ರಹ್ಮನನ್ನು ಹೊಂದಿ, ಆ ಬ್ರಹ್ಮನಿಂದ ಎಲ್ಲ ಜೀವರು ಶ್ರೀಹರಿಯಲ್ಲಿ ಲಯವನ್ನು ಹೊಂದುತ್ತಾರೆ.

ವಾಯಾವಿಂದ್ರಃ ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ ಇಂದ್ರಾದಿಗಳಿಗೂ ಪೃಥಿವ್ಯಾದಿ ಭೂತಗಳಿಗೂ ಕ್ರಮದಿಂದಲೇ ವಾಯುವಿನಲ್ಲಿ ಪ್ರವೇಶವೆಂದು ಹಿಂದೆ ಹೇಳಿದ್ದನ್ನು ಇಲ್ಲಿ ವಿವರಿಸುತ್ತಾರೆ. ಅದರಲ್ಲಿ ಶೇಷಮಾರ್ಗ ಹಾಗೂ ಗರುಡಮಾರ್ಗ ಎಂದು ಎರಡು ಮಾರ್ಗಗಳು. ಅದರಲ್ಲಿ ಮೊದಲಿಗೆ ಶೇಷಮಾರ್ಗವನ್ನು ಹೇಳುತ್ತಾರೆ –

**ಸೋಮಸ್ತು ವಾರೀಶಯುತೋಽನಿರುದ್ಧಂ**

**ವಿಶತ್ಯಸೌ ಕಾಮಮಸೌ ತು ವಾರುಣೀಮ್ ।**

**ಸಾ ಶೇಷದೇವಂ ಸ ಗಿರಂ ಚ ಸೈವ**

**ವಾಯುಂ ವಿಶತ್ಯಂಜ ಇತೀಹ ನಿರ್ಣಯಃ ॥ ೧೩೩ ॥**

ಸೋಮನು ವರುಣನಿಂದ ಸಹಿತನಾಗಿ ಅನಿರುದ್ಧನನ್ನು ಪ್ರವೇಶಿಸುತ್ತಾನೆ. ಈ ಅನಿರುದ್ಧನು ಕಾಮನನ್ನು, ಕಾಮನು ವಾರುಣಿಯನ್ನು, ವಾರುಣಿಯು ಶೇಷನನ್ನು, ಶೇಷನು ಭಾರತಿ(ಸರಸ್ವತಿ)ಯನ್ನು, ಭಾರತಿಯು (ಸರಸ್ವತಿಯು) ವಾಯುವನ್ನು (ಬ್ರಹ್ಮನನ್ನು) ಚೆನ್ನಾಗಿ ಪ್ರವೇಶ ಮಾಡುತ್ತಾರೆ. ಹೀಗೆ ಇಂದ್ರಾದಿ ನಾಲ್ವರ ಮಧ್ಯದಲ್ಲಿ ಸೋಮನಿಗೆ ಭೂತಗಳಲ್ಲಿಯೂ, ಜಲಗಳಿಗೆ ವಾಯುವಿನಲ್ಲಿಯೂ ಪ್ರವೇಶದಲ್ಲಿ ನಿರ್ಣಯವು.

ಹಿಂದೆ 'ಗಿರಿಜಾಂ ರುದ್ರಂ' ಎಂದು ಹೇಳಿದೆ. ಈಗ 'ಗಿರಂ ವಾಯುಂ' ಎಂದಿದೆ. ಈ ನಾಲ್ಕು ಶಬ್ದಗಳು ಪಾರ್ವತಿ, ರುದ್ರ, ಭಾರತೀ, ವಾಯುದೇವರು ಎಂಬ ಪ್ರಸಿದ್ಧವಾದ ಅರ್ಥವುಳ್ಳವು ಎಂಬ ಪ್ರತೀತಿಯನ್ನು ನಿವಾರಿಸಲು ಹೇಳುತ್ತಾರೆ –

**ಉಮಾಗಿರೀಶಾವಿತಿ ಭಾರತೀರಾವಿತಿ ಸ್ಮ ವಾಗ್ವೇದಗತಾ ಬ್ರವೀತಿ ।**

**ಅಹೀಂದ್ರಪತ್ನೀಮಹಿಪಂ ವಿರಿಂಚಪತ್ನೀಂ ವಿರಿಂಚ ಚ ವಿಮುಕ್ತಿಕಾಲೇ ॥೧೩೪॥**

ವೇದದಲ್ಲಿರತಕ್ಕ ಉಮಾ, ಗಿರೀಶ, ಭಾರತೀ, ಈರ (ವಾಯು) ಎಂಬ ನಾಲ್ಕು ಶಬ್ದಗಳು ವಿಮುಕ್ತಿಯನ್ನು ಪ್ರತಿಪಾದಿಸುವ ಸಂದರ್ಭದಲ್ಲಿ ಶೇಷಪತ್ನಿಯಾದ ಸೌಪರ್ಣಿಯನ್ನೂ, ಶೇಷನನ್ನೂ, ಸರಸ್ವತಿಯನ್ನೂ, ಬ್ರಹ್ಮನನ್ನೂ ಕೂಡ ಹೇಳುತ್ತವೆ.

**ತ ಏವ ಯತ್ತತ್ಪದಮಾಪ್ನುವಂತಿ ತತ್ಕಾಲ ಏತಾನ್ ಸಮುಪಾಸ್ಯ ಜೀವಾಃ ।**

**ಬ್ರಹ್ಮತ್ವಕಾಲೇ ಪ್ರವಿಶಂತಿ ಚೈತಾನಿತಿ ಸ್ಮ ವಾಕ್ ತಾದೃಶತಾಮುಪೈತಿ ॥೧೩೫॥**

ಆ ಉಮಾದಿಗಳೇ ವಾರುಣ್ಯಾದಿ ಪದಗಳನ್ನು ಉತ್ತರ ಕಲ್ಪದಲ್ಲಿ ಹೊಂದುವ ನಿಮಿತ್ತದಿಂದ ಉಮಾದಿ ಶಬ್ದಗಳು ವಾರುಣ್ಯಾದಿ ವಾಚಕಗಳು. ಪ್ರಸಿದ್ಧ ಪದವನ್ನು ಬಿಟ್ಟು ಅಪ್ರಸಿದ್ಧವಾದುದನ್ನು ಪ್ರಯೋಗಿಸುವುದರಿಂದ ಪ್ರಯೋಜನವೇನು ಎಂದರೆ, ತತ್ಕಾಲ ಎಂಬ ವಚನದಿಂದ ಹೇಳುತ್ತಾರೆ – ಜೀವರು ಉಮಾತ್ವಾದಿ ಕಾಲದಲ್ಲಿ ಈ ಉಮಾದಿ ದೇವತೆಗಳನ್ನು ಉಪಾಸನೆ ಮಾಡಿ, ವಾಯ್ವಾದಿ ದೇವತೆಗಳಿಗೇನೆ

ಬ್ರಹ್ಮತ್ವಾದಿಗಳು ಬರುವ ಕಾಲದಲ್ಲಿ, ವಾರುಣ್ಯಾದಿಗಳನ್ನು ಪ್ರವೇಶಿಸುತ್ತಾರೆ. ಈ ಕಾರಣದಿಂದ ವೇದವಾಣಿಯು ಉಮಾದಿ ಶಬ್ದವತ್ವವನ್ನು ಹೊಂದುತ್ತದೆ.

ಈಗ ಗರುಡಮಾರ್ಗವನ್ನು ಹೇಳುತ್ತಾರೆ –

**ಸೂರ್ಯೋಽಗ್ನಿಯುಕ್ತೋ ಗುರುಮಾಪ್ಯ ತೇನ**

**ಶಕ್ರಂ ಸಹೈತೇನ ಸುಪರ್ಣಪತ್ನೀಮ್ ।**

**ತಯಾ ಸುಪರ್ಣಂ ಸಹ ತೇನ ವಾಣೀಂ**

**ಬ್ರಹ್ಮಾಣಮೇತದ್ಗತ ಏವ ಯಾತಿ ।। ೧೩೬ ।।**

ಅಗ್ನಿಯಿಂದ ಕೂಡಿರುವ ಸೂರ್ಯನು (ಅಗ್ನಿಗೆ ಸೂರ್ಯನಲ್ಲಿ ಲಯವೆಂದು ಹೇಳಿದಂತಾಯಿತು) ಬೃಹಸ್ಪತ್ಯಾಚಾರ್ಯರನ್ನು ಹೊಂದಿ, ಬೃಹಸ್ಪತಿಸಹಿತನಾಗಿ ದೇವೇಂದ್ರನನ್ನು ಹೊಂದಿ, ದೇವೇಂದ್ರಸಹಿತನಾಗಿ ಗರುಡ ಪತ್ನಿ ಸೌಪರ್ಣಿಯನ್ನು ಹೊಂದಿ, ಸೌಪರ್ಣಿಯೊಂದಿಗೆ ಗರುಡನನ್ನು, ಗರುಡನೊಂದಿಗೆ ವಾಣಿ ಅಂದರೆ ಸರಸ್ವತಿಯನ್ನು, ವಾಣೀಗತನಾಗಿಯೇ ಬ್ರಹ್ಮನನ್ನು ಹೊಂದುತ್ತಾನೆ.

ಹೀಗೆ ಇಂದ್ರ ಆದಿತ್ಯ ಬೃಹಸ್ಪತಿಯರಿಗೆ ಕ್ರಮದಿಂದ ಲಯವನ್ನು ಹೇಳಿದ್ದರಿಂದ ಇಂದ್ರನಿಗೆ ಸೌಪರ್ಣಿಯಲ್ಲಿ, ಆದಿತ್ಯನಿಗೆ ಬೃಹಸ್ಪತಿಯಲ್ಲಿ, ಬೃಹಸ್ಪತಿಗೆ ಇಂದ್ರನಲ್ಲಿ, ಲಯವನ್ನು ಹೇಳಿದಂತಾಯಿತು. ಅದೇ ರೀತಿ ಸೂರ್ಯೋಽಗ್ನಿಯುಕ್ತೋ ಎಂಬ ವಚನದಿಂದ ಭೂತಗಳಲ್ಲಿ ತೇಜಸ್ಸಿಗೆ ಸೂರ್ಯದ್ವಾರಾ ವಾಯುವಿನಲ್ಲಿ ಲಯವು ಎಂದು ಹೇಳಿದಂತೆ ಆಯಿತು.

ಹಾಗಾದರೆ ಇದು 'ಇಂದ್ರ ಉಮಾಯಾಮುಮಾ ರುದ್ರೇ ವಿಲೀಯತೇ' ಎಂಬ ಶ್ರುತಿಗೆ ವಿರುದ್ಧವಾಗಿದೆ ಎಂದರೆ –

**ಇಂದ್ರಪ್ರವೇಶಸ್ತು ಯದೋಚ್ಯತೇಽತ್ರ**

**ತದಾ ಹ್ಯುಮೇತ್ಯೇವ ಸುಪರ್ಣಪತ್ನೀ ।**

**ಉಕ್ತಾ ಸುಪರ್ಣಶ್ಚ ಗಿರೀಶನಾಮ್ನಾ**

**ತತೋ ವಿರೋಧಶ್ಚ ನ ಕಶ್ಚನಾತ್ರ ।। ೧೩೭ ।।**

ಉಮೆಯಲ್ಲಿ ಇಂದ್ರಪ್ರವೇಶವನ್ನು ಹೇಳುವ ಶ್ರುತಿಯಲ್ಲಿ ಉಮಾ ಎನ್ನುವ ಪದದಿಂದ ಗರುಡನ ಪತ್ನಿಯಾದ ಸೌಪರ್ಣಿಯೇ ಹೇಳಲ್ಪಡುತ್ತಾಳೆ. ಗಿರೀಶ ಅಥವಾ ರುದ್ರ ಎಂಬ ಶಬ್ದದಿಂದ ಗರುಡನು ಹೇಳಲ್ಪಡುತ್ತಾನೆ. ಇಂದ್ರನಿಗೆ ಸೌಪರ್ಣಿಯಲ್ಲಿ ಲಯವು ಎನ್ನುವುದು ಪ್ರಬಲಶ್ರುತಿಸಿದ್ಧವು. ಆದ್ದರಿಂದ ಈ ವಿಷಯದಲ್ಲಿ ಯಾವ ವಿರೋಧವೂ ಇಲ್ಲವೇ ಇಲ್ಲ. ಇಲ್ಲಿ ಉಮಾದಿ ಪದವು ನ್ಯೂನಾಧಿಕ್ಯರಹಿತವಾಗಿ ಸೌಪರ್ಣ್ಯಾದಿ ಪದಸಾದೃಶವನ್ನು ಹೊಂದಿರುವುದರಿಂದ ಹೀಗೆ ಅರ್ಥಮಾಡಬೇಕು.

ಹಿಂದೆ 'ತಾನಿ ಪರೇ' ಎಂದು ಭೂತಾಭಿಮಾನಿ ದೇವತೆಗಳಿಗೆ ಮುಖ್ಯಪ್ರಾಣ ದ್ವಾರಾ ಪರಮಾತ್ಮನಲ್ಲಿ ಲಯವೆಂದು ಹೇಳಿದೆ. ಈಗ ಹಿರಣ್ಯಗರ್ಭನಲ್ಲಿ ಲಯ ಪ್ರಕಾರವನ್ನು ಹೇಳುತ್ತಾರೆ –

**ಭೃಗ್ವಾದಯೋ ದಕ್ಷಮವಾಪ್ಯ ತೇನ**

**ಪ್ರಾಪ್ಯೇಂದ್ರಮೇತೇನ ಸುಪರ್ಣಪತ್ನೀಮ್ ।**

**ವಿಶಂತಿ ಯೇ ಮನವೋ ರಾಜಮುಖ್ಯಾ**

**ಮನುಂ ಪ್ರವಿಶ್ಯಾತ್ರ ಗತಾ ಮಹೇಂದ್ರಮ್ ।। ೧೩೮ ।।**

ಭೃಗು ವಸಿಷ್ಠ ಮರೀಚ್ಯಾದಿ ಋಷಿಗಳು ದಕ್ಷಪ್ರಜಾಪತಿಯನ್ನು ಹೊಂದುತ್ತಾರೆ. ಆ ದಕ್ಷಪ್ರಜಾಪತಿಯು ಇಂದ್ರನನ್ನು, ಇಂದ್ರನು ಸೌಪರ್ಣಿಯನ್ನು ಪ್ರವೇಶಿಸುತ್ತಾರೆ. ವೈವಸ್ವತಾದಿ ಮನುಗಳು, ಪ್ರಿಯವ್ರತಾದಿ ರಾಜಶ್ರೇಷ್ಠರು ಸ್ವಾಯಂಭುವ ಮನುವನ್ನು ಪ್ರವೇಶಿಸಿ, ಅವನಲ್ಲಿಯೇ ಇರುತ್ತ ದೇವೇಂದ್ರನನ್ನು ಪ್ರವೇಶಿಸುತ್ತಾರೆ.

ಭೂತಗಳಲ್ಲಿ ಪೃಥಿವೀ ಆಕಾಶಗಳಿಗೆ ಲಯಪ್ರಕಾರವನ್ನು ಹೇಳುತ್ತಾರೆ –

**ಆಕಾಶ ಉರ್ವೀ ಚ ಗುರುಂ ಪ್ರವಿಶ್ಯ**

**ತೇನೈವ ಯಾತಃ ಪುರುಹೂತದೇವಮ್ ।**

**ಸನಾದಯೋ ಯತಯಃ ಕಾಮಮೇವ**

**ವಿಶಂತಿ ಶಿಷ್ಟಾ ಅಪಿ ಹವ್ಯವಾಹಮ್ ।। ೧೩೯ ।।**

ಆಕಾಶ ಹಾಗೂ ಭೂಮಿಯ ಅಭಿಮಾನಿಗಳು ಬೃಹಸ್ಪತಿಯನ್ನು ಪ್ರವೇಶಮಾಡಿ ಆ ಬೃಹಸ್ಪತಿಯೊಂದಿಗೇ ಇಂದ್ರನನ್ನು ಹೊಂದುತ್ತಾರೆ. ಸನತ್ಕುಮಾರನಿಂದ ವ್ಯತಿರಿಕ್ತರಾದ ಸನಂದ ಸುಜಾತ ಮುಂತಾದ ಯತಿಗಳು (ಸನತ್ಕುಮಾರ ಕಾಮನ ಅವತಾರನಾದ್ದರಿಂದ ಅವನನ್ನು ಇಲ್ಲಿ ಸೇರಿಸಿಲ್ಲ) ಕಾಮನನ್ನೇ ಪ್ರವೇಶಿಸುತ್ತಾರೆ. ಕಾಮನಿಗೆ ವಾರುಣಿಯಲ್ಲಿ ಲಯವೆಂದು ಈಗಾಗಲೇ ಹೇಳಿಯಾಗಿದೆ. ಹಿಂದೆ ಹೇಳಿದವರಿಂದ ಅವಶಿಷ್ಟರಾದವರೂ ಕೂಡ ಅಗ್ನಿದ್ವಾರಾ ಸೂರ್ಯನನ್ನು ಪ್ರವೇಶ ಮಾಡುತ್ತಾರೆ. ಇದರಿಂದ 'ಅಗ್ನೌ ಸರ್ವೇ ದೇವಾ ವಿಲೀಯಂತೆ' ಎನ್ನುವುದಕ್ಕೆ ವಿಷಯವು ತೋರಿಸಲ್ಪಟ್ಟಿತು.

ಇದಕ್ಕೆ ಅಪವಾದವನ್ನು ಹೇಳುತ್ತಾರೆ –

**ವರ್ಣಾಶ್ರಮಾಚಾರರತಾ ಮನುಷ್ಯಾ**

**ಧರ್ಮಂ ಮನುಂ ಸೋಽಪಿ ಸಮೇತಿ ಕಾಲೇ ।**

**ತಮೇವ ಸರ್ವೇ ಪಿತರಃ ಸುರಾನುಗಾಃ**

**ಸರ್ವೇ ಕುಬೇರಂ ಸ ಚ ಸೋಮಮೇವ ॥ ೧೪೦ ॥**

ತಮ್ಮ ತಮ್ಮ ವರ್ಣ ಮತ್ತು ಆಶ್ರಮಗಳ ಆಚಾರಗಳಲ್ಲಿ ಆಸಕ್ತರಾದ ಮನುಷ್ಯರು ಯಮನನ್ನು ಹೊಂದುತ್ತಾರೆ. ಯಮಧರ್ಮನು ಮೋಕ್ಷಕಾಲದಲ್ಲಿ ಸ್ವಾಯಂಭುವ ಮನುವನ್ನು ಹೊಂದುತ್ತಾನೆ. ಎಲ್ಲ ಪಿತೃಗಳೂ ಆ ಯಮನನ್ನೇ ಹೊಂದುತ್ತಾರೆ. ಎಲ್ಲ ಗಂಧರ್ವಾದಿಗಳು ಕುಬೇರನನ್ನು ಹೊಂದುತ್ತಾರೆ. ಆ ಕುಬೇರನು ಚಂದ್ರನನ್ನೇ ಹೊಂದುತ್ತಾನೆ. ಈ ಪ್ರಸಂಗದಿಂದ ಮುಕ್ತಿಯಲ್ಲಿ ಪ್ರವೇಶಮಾತ್ರವನ್ನು ಹೇಳಿದೆ, ದೇಹಲಯವನ್ನಲ್ಲ. ಏಕೆಂದರೆ ಅವರಿಗೆ ಉತ್ಕ್ರಮಣವಿದೆ. ವರ್ಣಾಶ್ರಮಾಚಾರರತಾ ಎನ್ನುವುದರಿಂದ ಮನುಷ್ಯರಿಗೆ ಮುಕ್ತಿಯಲ್ಲಿಯೂ ವರ್ಣಾಶ್ರಮವತ್ವವುಂಟು ಎಂದು ಸೂಚಿತವಾಗಿದೆ.

**ವಿಮುಕ್ತಿಕಾಲೇ ಪ್ರವಿಶಂತಿ ಅಭೀಕ್ಷ್ಣಂ**

**ಭೋಗಾಂಶ್ಚ ತದ್ದೇಹಗತಾಃ ಪ್ರಭುಂಜತೇ ।**

**ಆನಂದಸುವ್ಯಕ್ತಿರಮುತ್ರ ತೇಷಾಂ**

**ಭವತಿ ............**

ಈ ರೀತಿಯಾಗಿ ಎಲ್ಲರೂ ಹಿಂದೆ ಹೇಳಿದ ಪ್ರಕಾರ ಮೋಕ್ಷಕಾಲದಲ್ಲಿ ತಮಗಿಂತ ಉತ್ತಮರನ್ನು ಪ್ರವೇಶಿಸುತ್ತಾರೆ. ಆವಿಷ್ಟವಾದ ಪಿಶಾಚಿಯು ಹೇಗೋ ಹಾಗೆ ಅವರು ತಾವು ಪ್ರವೇಶಿಸಿದ ದೇಹದಲ್ಲಿದ್ದವರಾಗಿ ಭೋಗಗಳನ್ನೂ ಕೂಡ ಭೋಗಿಸುತ್ತಾರೆ. ಉತ್ತಮರಲ್ಲಿ ಪ್ರವೇಶದಿಂದ ಅವರಿಗೆ ಆನಂದದ ಅಭಿವ್ಯಕ್ತಿಯು ಆಗುವುದು.

ಪ್ರವಿಷ್ಟರಾದವರಿಗೆ ಪುನಃ ನಿರ್ಗಮನವು ಇದೆಯೋ ಇಲ್ಲವೋ ಎಂದರೆ –

**......... ಅತಶ್ಚೇಷ್ಟತ ಏವ ನಿರ್ಗತಾಃ ॥ ೧೪೧ ॥**

**ಕ್ರೀಡಂತಿ ಭೂಯಶ್ಚ ಸಮಾವಿಶಂತಿ**

**ತಾನೇವ ಸಾಯುಜ್ಯಮಿದಂ ವದಂತಿ ।**

ಉತ್ತಮರ ಶರೀರವನ್ನು ಪ್ರವೇಶಿಸಿ ಆನಂದಾದಿ ಭೋಗವನ್ನು ಅನುಭವಿಸುವ ಅವರು ತಮಗೆ ಬೇಕೆನಿಸಿದಾಗ ಆ ಶರೀರದಿಂದ ಹೊರಬಂದು ಕ್ರೀಡಿಸಿ, ಮತ್ತೆ ಆ ಶರೀರವನ್ನೇ ಪ್ರವೇಶಿಸುತ್ತಾರೆ. ಇದನ್ನೇ ಸಾಯುಜ್ಯ ಮುಕ್ತಿಯೆಂದು ಪುರಾಣಗಳು ಹೇಳುತ್ತವೆ. (ಸಯುಜಾಂ ಭಾವಃ ಸಾಯುಜ್ಯಂ ಎಂಬ ವ್ಯುತ್ಪತ್ತಿಯಿಂದ ಒಂದೇ ದೇಹದಲ್ಲಿ ಜೊತೆಯಲ್ಲಿದ್ದು ಅನುಭವಿಸುವುದಕ್ಕೆ ಸಾಯುಜ್ಯವೆಂದು ಹೆಸರು).

ಹಾಗಾದರೆ ಸಾಯುಜ್ಯಹೀನರ ಪ್ರವೃತ್ತಿ ಯಾವರೀತಿಯದು ಎಂದರೆ –

**ಸಾಯುಜ್ಯಹೀನಾಸ್ತು ಲಯೇ ತು ಸರ್ವೇ**

**ಪ್ರೋಕ್ತೇನ ಮಾರ್ಗೇಣ ವಿಶಂತಿ ಸೃಷ್ಟೌ ॥ ೧೪೨ ॥**

**ಬಹಿಶ್ಚ ನಿರ್ಯಾಂತಿ ತತೋಽನ್ಯದಾಪಿ**

**ಸಾಯುಜ್ಯಭಾಜಾಂ ಭವತಿ ಪ್ರವೇಶಃ ।**

ಸಾಯುಜ್ಯರಹಿತರಾದವರೂ ಹಾಗೂ ಎಲ್ಲರೂ ಪ್ರಲಯಕಾಲದಲ್ಲಿ ಹಿಂದೆ ಹೇಳಿದ ಮಾರ್ಗದಿಂದ ಸ್ವೋತ್ತಮರನ್ನು ಪ್ರವೇಶಿಸುತ್ತಾರೆ. ಸೃಷ್ಟಿಕಾಲದಲ್ಲಿ ಅವರಿಂದ ಹೊರಗೆ ಬರುತ್ತಾರೆ. ಆದರೆ ಸಾಯುಜ್ಯವನ್ನು ಹೊಂದಿದವರಿಗೆ ಪ್ರಲಯಕಾಲ ಮಾತ್ರವಲ್ಲದೆ ಬೇರೆ ಕಾಲದಲ್ಲಿಯೂ ಸ್ವೋತ್ತಮರಲ್ಲಿ ಪ್ರವೇಶವುಂಟು.

**ಉಕ್ತಂ ಸಮಸ್ತಂ ಪರಮಶ್ರುತೌ ಹಿ**

**ಪ್ರೋಕ್ತಂ ಚ ಸರ್ಗಕ್ರಮತೋ ವಿಪರ್ಯಯಃ ॥ ೧೪೩ ॥**

**ಮುಕ್ತೌ ಲಯೇ ಯದ್ವದಥೋ ಲಯಶ್ಚ**

**ವಿಪರ್ಯಯೇಣತ್ಯವದ್ಗಿರಾಂ ಪ್ರಭುಃ ।**

ಇಲ್ಲಿ ಹೇಳಲ್ಪಟ್ಟ ಲಯಪ್ರಕಾರವೆಲ್ಲವೂ ಪರಮಶ್ರುತಿಯಲ್ಲಿಯೂ ಹೇಳಿದೆ. ಮುಕ್ತಿಯಲ್ಲಿ ಸೃಷ್ಟಿಕ್ರಮಕ್ಕಿಂತ ವಿಪರೀತ ಕ್ರಮವು, ಪ್ರಲಯದಲ್ಲಿ ಹೇಗೋ ಹಾಗೆ. ಅಂದರೆ ಯಾರು ಯಾರಿಂದ ಹುಟ್ಟಿರುತ್ತಾರೋ ಅವರಿಗೆ ಅವರಲ್ಲಿ ಮುಕ್ತಿಯು (ಅಪವಾದವಿಲ್ಲದಿದ್ದರೆ) ಎಂದು ತಿಳಿಯಬೇಕು. ಹೀಗೆಂದು (ಲಯದಲ್ಲಿ ಸೃಷ್ಟಿ ಕ್ರಮಕ್ಕಿಂತ ವಿಪರೀತಕ್ರಮವೆಂದು) ವೇದವಚನಗಳಿಗೆ ಪ್ರಭುವಾದ ಸೂತ್ರಕಾರರು 'ವಿಪರ್ಯಯೇಣ ತು ಕ್ರಮೋಽತ ಉಪಪದ್ಯತೇ ಚ' ಎನ್ನುವ ಸೂತ್ರದಿಂದ ಉಪಪಾದಿಸಿದ್ದಾರೆ.

ಲಯದಲ್ಲಿ ಸೃಷ್ಟಿಕ್ರಮಕ್ಕಿಂತ ವಿಪರೀತಕ್ರಮವಿರಲಿ. ಆದರೆ ಮುಕ್ತಿಯಲ್ಲಿಯೂ ಹಾಗೆಯೇ ತಿಳಿಯಬೇಕು ಎನ್ನುವುದಕ್ಕೆ ನಿಯಾಮಕವು ಯಾವುದು ಎಂದರೆ –

**ಲಯೋ ಯತೋ ಮುಕ್ತಿರಿಯಂ ಸುರಾಣಾಂ**

**ಭೋಗೋ ವಿಶೇಷೇಣ ಚ ಯಂ ವದಿಷ್ಯತಿ ॥ ೧೪೪ ॥**

ಏಕೆಂದರೆ ದೇವತೆಗಳಿಗೆ ಲಯವೇ ಮುಕ್ತಿಯು. ಮನುಷ್ಯರಂತೆ ಮೊದಲೇ ದೇಹದಿಂದ ಉತ್ಕ್ರಾಂತಿಯಲ್ಲ. ಆದ್ದರಿಂದ ಹಿಂದೆ ಹೇಳಿದ್ದು ಯುಕ್ತವು.

ಹಾಗಾದರೆ ಈ ಮೊದಲು ಮುಕ್ತರಿಗೆ ಭೋಗಾದಿಗಳನ್ನು ಸಮರ್ಥಿಸಲಾಗಿದೆ. ಈಗಲಾದರೂ ಲಯವೇ ಮುಕ್ತಿಯೆಂದು ಹೇಳಿದೆ. ಆದ್ದರಿಂದ ಪೂರ್ವಾಪರ ವಿರೋಧ ಬರುವುದಿಲ್ಲವೇ ಎಂದರೆ –

ದೇವಪದಕ್ಕಿಂತಲೂ ಅತಿಶಯವಾಗಿ ಆನಂದಾನುಭವವೇ ಮುಕ್ತಿಯು. ದೇಹ ಹಾನಿರೂಪವಾದ ಮುಕ್ತಿಯು ಲಯಕ್ಕಿಂತ ವಿಲಕ್ಷಣವಲ್ಲವೆಂಬ ಅಭಿಪ್ರಾಯದಿಂದ ದೇಹಲಯವು ಮುಕ್ತಿಯೆಂದು ಹೇಳಿದ್ದು, ಹೊರತು ಭೋಗಾದಿಗಳು ಇಲ್ಲವೆನ್ನುವ

ಅಭಿಪ್ರಾಯದಿಂದ ಅಲ್ಲ. ಹಾಗಾದರೆ ಭೋಗವು ಮುಕ್ತಿಯೆಂದು ಸೂತ್ರಕಾರರು ಹೇಳಿಲ್ಲವೆಂದರೆ, ಅದು ಸರಿಯಲ್ಲ. ಏಕೆಂದರೆ ಭೋಗವು ಮುಕ್ತಿಯೆಂದು ಸೂತ್ರಕಾರರು ನಾಲ್ಕನೆಯ ಪಾದದಲ್ಲಿ ಹೇಳುವರು.

ಪ್ರಮಾಣಾಂತರವನ್ನೂ ಹೇಳುತ್ತಾರೆ –

**ಉಕ್ತಶ್ಚ ಬಿಂಬಪ್ರತಿಬಿಂಬಭಾವಃ**

**ಪೈಂಗಿಶ್ರುತಾವುಕ್ತಲಯಾನುಸಾರತಃ ।**

**ಬಿಂಬೇ ಲಯೋ ಯನ್ನಿಯತಶ್ಚ ಮುಕ್ತೌ**

**ಚಿದಾತ್ಮನಾಂ ತದ್ವಶತಾ ಚ ಸರ್ವದಾ ।। ೧೪೫ ।।**

ಹಿಂದೆ ಹೇಳಿದಂತೆ ದೇವತೆಗಳ ಲಯಕ್ರಮವನ್ನು ಅನುಸರಿಸಿ ಪೈಂಗಿಶ್ರುತಿಯಲ್ಲಿ ಬಿಂಬ–ಪ್ರತಿಬಿಂಬ ಭಾವವು ಹೇಳಿದೆ. ಯಾವುದರಲ್ಲಿ ಲಯವೋ ಅದು ಬಿಂಬ, ಲಯವಾಗುವುದು ಪ್ರತಿಬಿಂಬ. ಮುಕ್ತಿಯಲ್ಲಿ ಬಿಂಬದಲ್ಲಿ ಲಯವೆನ್ನುವುದು ಯಾವಾಗಲೂ ಅಂದರೆ ಮುಕ್ತ್ಯನಂತರದಲ್ಲಿಯೂ ನಿಯತವೆಂದೂ, ಚೇತನರಿಗೆ ಯಾವಾಗಲೂ ಬಿಂಬದ ಅಧೀನತ್ವವಿರುವುದೆಂದೂ ಪ್ರಮಾಣಗಳಿಂದ ಸಿದ್ಧವಾಗಿದೆ.

ಎಲ್ಲ ಭೂತಗಳಿಗೂ ಪ್ರಾಣನಲ್ಲಿ ಲಯ, ಪ್ರಾಣನಿಗೆ ವಿಷ್ಣುವಿನಲ್ಲಿ ಲಯ ಎಂದು ಹೇಳಿದ್ದು ಸರಿಯಲ್ಲ. ಏಕೆಂದರೆ 'ಪ್ರಾಣಸ್ತೇಜಸಿ ತೇಜಃ ಪರಸ್ಯಾಂ ದೇವತಾಯಾಂ' ಎಂಬ ಶ್ರುತಿಯ ವಿರೋಧವಿದೆ. ಬಿಂಬದಲ್ಲಿ ಪ್ರತಿಬಿಂಬದ ಲಯ ಎನ್ನುವುದೂ ಅಯುಕ್ತ. ಏಕೆಂದರೆ ಪ್ರಾಣನು ಭೂತವಾದ ತೇಜಸ್ಸಿಗೆ ಪ್ರತಿಬಿಂಬನಲ್ಲ ಎಂದರೆ –

**ತೇಜೋಽಭಿಧಾಂ ತು ಶ್ರಿಯಮಾಪ್ಯ ವಿಷ್ಣು–**

**ಮಗ್ರೇ ತತಃ ಪುತ್ರತಯೈವ ವಾಯುಃ ।**

**ಆಪ್ತಃ ಪ್ರಸೂತಃ ಪುನರೇವ ವಿಷ್ಣುಂ**

**ಪ್ರವಿಶ್ಯ ಮುಕ್ತಃ ಪ್ರಲಯೇಽತ್ರ ತಿಷ್ಠತಿ ।। ೧೪೬ ।।**

ವಾಯುವು ಪ್ರಲಯಕಾಲದಲ್ಲಿ ತೇಜೋನಾಮಕಳಾದ ಮಹಾಲಕ್ಷ್ಮಿಯಲ್ಲಿ ಲೀನನಾಗಿ ವಿಷ್ಣುವನ್ನು ಹೊಂದುವನು. ಸೃಷ್ಟಿಕಾಲವು ಸಂಭವಿಸಿದಾಗ ಎಲ್ಲರಿಗಿಂತ ಮೊದಲು ವಿಷ್ಣುವಿನ ಪುತ್ರತ್ವದಿಂದ (ಅಂದರೆ ಹಿರಣ್ಯಗರ್ಭತ್ವದಿಂದ) ಹುಟ್ಟುವನು. ಮತ್ತೆ ಪ್ರಲಯದಲ್ಲಿ ಆ ವಿಷ್ಣುವನ್ನು ಪ್ರವೇಶಿಸಿ ಮುಕ್ತನಾಗಿ ಆ ವಿಷ್ಣುವಿನಲ್ಲಿಯೇ ಇರುತ್ತಾನೆ. ತೇಜಃ ಶಬ್ದವು ಲಕ್ಷ್ಮೀವಾಚಕವಾದ್ದರಿಂದ ಹಿಂದೆ ಹೇಳಿದ ಶ್ರುತಿ ವಿರೋಧವಿಲ್ಲ.

ಮುಕ್ತರಿಗೆ ಸ್ವೋತ್ತಮರಾದ ದೇವತೆಗಳಲ್ಲಿ ಪ್ರವೇಶವು ಹೇಳಲ್ಪಟ್ಟಿತು. ಇಷ್ಟೇ

ಅಲ್ಲ, ಮತ್ತೆ ಭಗವಂತನಲ್ಲಿಯೂ ಪ್ರವೇಶವಿದೆ. ಮುಕ್ತರಿಗೆ ಹೇಳಲ್ಪಟ್ಟ ಭೋಗವು ಆನಂದಕ್ಕೆ ಜನಕವಲ್ಲ, ಮತ್ತೆ ವ್ಯಂಜಕವೇ. ಮುಕ್ತರ ಆನಂದವಾದರೂ ಸ್ವರೂಪ ಭೂತವಾದುದು ಎಂದು ಹೇಳುತ್ತಾರೆ –

**ಸರ್ವೇಽಪಿ ತೇ ಮುಕ್ತಗಣಾ ಅಮಂದ-**

**ಸಾಂದ್ರಂ ನಿಜಾನಂದಮಶೇಷತೋಽಪಿ ।**

**ಭುಂಜಂತ ಏವಾಸತ ಈಶದೇಹೇ**

**ಲಯೇಽಥ ಸರ್ಗೇ ಬಹಿರೇವ ಯಾಂತಿ ॥ ೧೪೭ ॥**

ಸಮಸ್ತವಾದ ಮುಕ್ತವರ್ಗದವರೂ ಅತ್ಯಂತ ಪೂರ್ಣವಾದ ನಿಬಿಡವಾದ ಸ್ವರೂಪಾನಂದವನ್ನು ಪೂರ್ಣವಾಗಿ ಅನುಭವಿಸುತ್ತಲೇ ಪ್ರಲಯದಲ್ಲಿ ಶ್ರೀಹರಿಯ ಶರೀರದಲ್ಲಿ ಇರುತ್ತಾರೆ. ಅನಂತರ ಸೃಷ್ಟಿಕಾಲದಲ್ಲಿ ಹೊರಕ್ಕೆ ಬರುತ್ತಾರೆ.

ಶಿಷ್ಟ ಹವ್ಯವಾಹಂ ಎಂದು ಹಿಂದೆ ಹೇಳಿದ್ದಕ್ಕೆ ಅಪವಾದವನ್ನು ಹೇಳುತ್ತಾರೆ –

**ಪ್ರಯಾತಿ ಧರ್ಮಂ ನಿರ್ಋತಿಸ್ತು ಶಕ್ರಂ**

**ಮರುದ್ಗಣಾಃ ಪಾರಿಷದಾಸ್ತಥೈವ ।**

**ಸರ್ವೇಽನಿರುದ್ಧಂ ಪೃತನಾಧಿಪಾದ್ಯಾಃ**

**ತುರಶ್ರುತಿರ್ಹೀರ್ತ್ಥಮಿಯಂ ವಿಮುಕ್ತಿಃ ॥ ೧೪೮ ॥**

ನಿಋತಿಯು ಯಮಧರ್ಮನನ್ನು ಹೊಂದುತ್ತಾನೆ. ಮರುತ್ತುಗಳು ಇಂದ್ರನನ್ನು, ಹಾಗೆಯೇ ವಿಷ್ವಕ್ಸೇನ ಮೊದಲಾದ ಎಲ್ಲ ಪಾರ್ಷದರೂ (ಶ್ರೀಹರಿಯ ಪರಿಚಾರಕ ದೇವತೆಗಳೂ) ಅನಿರುದ್ಧನನ್ನು ಹೊಂದುತ್ತಾರೆ. (ಅನಿರುದ್ಧನಿಗೆ ಕಾಮನಲ್ಲಿ ಲಯವು ಎಂದು ಹಿಂದೆಯೇ ಹೇಳಿದೆ). ಈ ವಿಷಯದಲ್ಲಿ ತುರಶ್ರುತಿಯು ಪ್ರಮಾಣವು. ಈ ವಿಷಯವು ಪರಮಶ್ರುತಿಯಲ್ಲಿ ಅನುಕ್ತವಾದ್ದರಿಂದ ಹಿಂದಿನ ಸಂದರ್ಭದಲ್ಲಿ ಇದನ್ನು ಪ್ರಸ್ತಾಪಿಸಲಿಲ್ಲ. ಈ ಪ್ರಕಾರವಾಗಿ ಈ ಪಾದದಲ್ಲಿ ದೇವಾದಿಗಳಿಗೆ ದೇಹಲಯ ರೂಪವಾದ ವಿಮುಕ್ತಿಯು ಹೇಳಲ್ಪಟ್ಟಿತು. ಇಲ್ಲಿ ಹೇಳಿದ ಪ್ರಕಾರವೇ ಮುಕ್ತಿಯು, ಜಿನಾದಿಗಳು ಹೇಳಿದಂತೆ ಅಲ್ಲ ಎಂದು ತಿಳಿಯತಕ್ಕದ್ದು.

**॥ ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತೇ ಶ್ರೀಮದನುವ್ಯಾಖ್ಯಾನೇ ಚತುರ್ಥಾಧ್ಯಾಯಸ್ಯ ದ್ವಿತೀಯಃ ಪಾದಃ ॥**

**॥ ಇಲ್ಲಿಗೆ ಶ್ರೀಮದನುವ್ಯಾಖ್ಯಾನದ ನಾಲ್ಕನೆಯ ಅಧ್ಯಾಯ ಎರಡನೆಯ ಪಾದದ ಶ್ರೀಮನ್ನ್ಯಾಯಸುಧಾನುಸಾರಿ ಕನ್ನಡಾನುವಾದವು ಮುಕ್ತಾಯವಾಯಿತು ॥**

* * *

# ನಾಲ್ಕನೆಯ ಅಧ್ಯಾಯ ಮೂರನೆಯ ಪಾದ

ಈ ಪಾದದಲ್ಲಿ ಮಾರ್ಗವೂ ಗಮ್ಯವೂ ಹೇಳಲ್ಪಡುತ್ತದೆ ಎಂದು ಭಾಷ್ಯದಲ್ಲಿ ಹೇಳಲಾಗಿದೆ. ಅದನ್ನು ಹಿಂದೆಯೇ (ದ್ವಿತೀಯಪಾದೀಯ ಭಾಷ್ಯದ ವಿವರಣೆಯ ಪ್ರಸಂಗದಲ್ಲಿ 'ಉತ್ಕ್ರಾಂತಿಮಾರ್ಗೌ ದೇವಾನಾಂ ನ ಪ್ರಾಯೇಣ ಭವಿಷ್ಯತಿ' ಎಂದು) ವಿವರಣೆ ಮಾಡಿದ್ದರೂ ಇಲ್ಲಿ ಸಂದರ್ಭವು ಪ್ರಾಪ್ತವಾದುದರಿಂದ ವಿಶೇಷವಾಗಿ ವಿವರಿಸುತ್ತಾರೆ –

**ಉತ್ಕ್ರಾಂತಮಾರ್ಗಶ್ಚ ವಿಮುಕ್ತಗಮ್ಯಂ ।**

**ಪಾದೋದಿತಂ ............**

ದೇಹದಿಂದ ಉತ್ಕ್ರಾಂತರಾದ ಮನುಷ್ಯರಿಗೆ ಭಗವಂತನ ಲೋಕಗಮನಕ್ಕಾಗಿ ಮಾರ್ಗವೂ ಹಾಗೂ ಕರ್ಮದಿಂದಲೂ ದೇಹದಿಂದಲೂ ವಿಮುಕ್ತರಾದವರಿಗೆ ಗಮ್ಯವಾದುದೂ – ಇವೆರಡು ಸಂಗತಿಗಳೂ ಈ ಪಾದದಲ್ಲಿ ಹೇಳಲ್ಪಟ್ಟಿದೆ.

ಸುಕ್ರಮ ಇತ್ಯಾದಿ ವಚನದಿಂದ ಈ ಪಾದದ ಅಧಿಕರಣಗಳ ಪೂರ್ವಪಕ್ಷ ಯುಕ್ತಿ ಹಾಗೂ ಸಿದ್ಧಾಂತಯುಕ್ತಿಗಳನ್ನು ಹೇಳುತ್ತಾರೆ.

**................ ಸುಕ್ರಮವಿಕ್ರಮೌ ಚ ॥ ೧ ॥**

**ಸಾಂತಾನಿಕಪ್ರಾಪ್ತಿರಭೀಷ್ಟತಾ ಚ ಸೌಕರ್ಯಮಿತ್ಯನ್ಯಮತಸ್ಯ ತರ್ಕಾಃ ।**

**ವಿಶೇಷಸಂಪ್ರಾಪ್ತಿರುರುತ್ವಮಾಪ್ತಿಃ ಕ್ರಮಾನುರಾಗಃ ಕಥಿತಾನುವೃತ್ತಿಃ ॥ ೨ ॥**

**ಸಿದ್ಧಾಂತನಿರ್ಣೀತಿಕರಾಃ ................. ।**

ಅನ್ಯಮತಸ್ಯ ತರ್ಕಾಃ ಎಂದರೆ ಪೂರ್ವಪಕ್ಷದ ಯುಕ್ತಿಗಳು. ಸಿದ್ಧಾಂತನಿರ್ಣೀತಿ ಕರಾಃ ಎಂದರೆ ಸಿದ್ಧಾಂತಯುಕ್ತಿಗಳು.

| **ಅಧಿಕರಣ** | **ಪೂರ್ವಪಕ್ಷಯುಕ್ತಿ** | **ಸಿದ್ಧಾಂತಯುಕ್ತಿ** |
|---|---|---|
| ಅರ್ಚಿರಧಿಕರಣ | ಸುಕ್ರಮಃ | ವಿಶೇಷಸಂಪ್ರಾಪ್ತಿಃ |
| ವಾಯುಶಬ್ದಾಧಿಕರಣ | ಸುಕ್ರಮಃ | ವಿಶೇಷಸಂಪ್ರಾಪ್ತಿಃ |
| ತಟಿದಧಿಕರಣ | ಸುಕ್ರಮಃ | ವಿಶೇಷಸಂಪ್ರಾಪ್ತಿಃ |
| ಆತಿವಾಹಿಕಾಧಿಕರಣ | ಸುಕ್ರಮಃ | ವಿಶೇಷಸಂಪ್ರಾಪ್ತಿಃ |
| ವೈದ್ಯುತಾಧಿಕರಣ | ವಿಕ್ರಮಃ | ಉರುತ್ವಂ |

| ಕಾರ್ಯಾಧಿಕರಣ | ಸಾಂತಾನಿಕಪ್ರಾಪ್ತಿಃ, | ಆಪ್ತಿಃ, |
|---|---|---|
| | ಅಭೀಷ್ಟತಾ, | ಕರ್ಮಾನುರಾಗಃ, |
| | ಸೌಕರ್ಯಂ | ಕಥಿತಾನುವೃತ್ತಿಃ |

## ಕಾರ್ಯಾಧಿಕರಣಮ್

**।। ಓಂ ಅಪ್ರತೀಕಾಲಂಬನಾನ್ನಯತೀತಿ ಬಾದಾರಾಯಣ ಉಭಯಥಾ ಚ ದೋಷಾತ್ತತ್ಕ್ರತುಶ್ಚ ಓಂ ।।**

ವಿಮುಕ್ತರಿಂದ ಗಮ್ಯವಾದುದನ್ನು ಪ್ರತಿಪಾದಿಸಲು ಈ ಸೂತ್ರವು ಹೊರಟಿದೆ. ಭಾಷ್ಯದಲ್ಲಿ ಇದು ಅಷ್ಟು ಸ್ಪಷ್ಟವಾಗಿಲ್ಲ. ಆದ್ದರಿಂದ ಇದನ್ನು ಸ್ಪಷ್ಟೀಕರಿಸುತ್ತ ಪ್ರತೀಕ ಶಬ್ದಾರ್ಥವನ್ನು ಹೇಳುತ್ತಾರೆ –

**ಪ್ರತೀಕಂ ದೇಹಾದಿಕಂ ತದ್ಗತಮೇವ ಯೇ ನರಾಃ ।**

**ಉಪಾಸತೇ ತೇ ಪುರತಃ ಸಮಾಪ್ನುಯುಃ ।। ೩ ।।**

**ಬ್ರಹ್ಮಾಣಮಸ್ಮಾನ್ಮತಿಮಾಪ್ಯ ವಿಷ್ಣುಂ ಪ್ರಾಪ್ಸ್ಯಂತಿ ।**

ದೇಹ ಮನಸ್ಸು ಮೊದಲಾದುವನ್ನು ಭಗವಂತನ ಪ್ರತಿಮೆಗಳೆಂದು ಗ್ರಹಿಸಬೇಕು. ಪ್ರತೀಕದಲ್ಲಿಯೇ ಇರತಕ್ಕ ವಿಷ್ಣುವನ್ನು ಯಾವ ಮನುಷ್ಯರು ಉಪಾಸನೆ ಮಾಡುತ್ತಾರೋ ಅವರು ಪ್ರತೀಕಾಲಂಬನರು. ಅವರು ಪ್ರಲಯಕಾಲಕ್ಕಿಂತ ಮುಂಚೆ ಚತುರ್ಮುಖ ಬ್ರಹ್ಮನನ್ನು ಹೊಂದುವರು. ಈ ಬ್ರಹ್ಮನಿಂದ ಭಗವಜ್ಜ್ಞಾನ ವಿಶೇಷವನ್ನು ಹೊಂದಿ ಪ್ರಲಯದಲ್ಲಿ ವಿಷ್ಣುವನ್ನು ಹೊಂದುವರು.

ಈಗ ಸೂತ್ರಿತವಾದ ಅಪ್ರತೀಕಾಲಂಬನರ ಗತಿಯನ್ನು ವಿವರಿಸುತ್ತಾರೆ –

**ಅತೋಽನ್ಯೇಽಪಿ ತಮಾಪ್ಯ ತಸ್ಮಾತ್**

**ಹರಿಂ ಗತಾ ಮುಕ್ತಿಭಾಜಃ ಪರಾಂತೇ ।। ೪ ।।**

ಪ್ರತೀಕಾಲಂಬನರಿಂದ ಅನ್ಯರಾದ ವ್ಯಾಪ್ತ್ಯೋಪಾಸಕರಾದ ಅಪ್ರತೀಕಾಲಂಬನರು ಪ್ರಥಮದಲ್ಲಿ ವೈಕುಂಠದಲ್ಲಿ ಅಮುಕ್ತಸ್ಥಾನದಲ್ಲಿರತಕ್ಕ ವಿಷ್ಣುವನ್ನು ಹೊಂದಿದರೂ, ಮಹಾಪ್ರಲಯ ಕಾಲದಲ್ಲಿ ಆ ವಿಷ್ಣುವಿನಿಂದ ಬ್ರಹ್ಮನನ್ನು ಹೊಂದಿ, ಆಮೇಲೆ ಪುನಃ ವಿಷ್ಣುವನ್ನು ಹೊಂದುತ್ತಾರೆ, ಅಂದರೆ ಮುಕ್ತರಾಗುತ್ತಾರೆ ಎಂದರ್ಥ.

**।। ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯ ವಿರಚಿತೇ ಶ್ರೀಮದನುವ್ಯಾಖ್ಯಾನೇ ಚತುರ್ಥಾಧ್ಯಾಯಸ್ಯ ತೃತೀಯಃ ಪಾದಃ ।।**

**।। ಇಲ್ಲಿಗೆ ಶ್ರೀಮದನುವ್ಯಾಖ್ಯಾನದ ನಾಲ್ಕನೆಯ ಅಧ್ಯಾಯ ಮೂರನೆಯ ಪಾದದ ಶ್ರೀಮನ್ನ್ಯಾಯಸುಧಾನುಸಾರಿ ಕನ್ನಡಾನುವಾದವು ಮುಕ್ತಾಯವಾಯಿತು ।।**

* * *

# ನಾಲ್ಕನೆಯ ಅಧ್ಯಾಯ ನಾಲ್ಕನೆಯ ಪಾದ

ಈ ಪಾದದಲ್ಲಿ ಪ್ರತಿಪಾದ್ಯವಾದ ವಿಷಯವೂ ಪಾದಸಂಗತಿಯೂ ಪ್ರಸಿದ್ಧವೇ ಆಗಿದೆ. ಆದುದರಿಂದ ಅವುಗಳನ್ನು ಇಲ್ಲಿ ಹೇಳಿಲ್ಲ. ಈ ಪಾದದಲ್ಲಿನ ಪೂರ್ವಪಕ್ಷ ಹಾಗೂ ಸಿದ್ಧಾಂತಯುಕ್ತಿಗಳನ್ನೇ ಹೇಳುತ್ತ ವ್ಯಾಖ್ಯಾನವನ್ನು ಪ್ರಾರಂಭಿಸುತ್ತಾರೆ –

**ಅತಿಕ್ರಮೋಕ್ತಿಃ ಪುರುಷಾರ್ಥಲಾಭಃ**

**ಪರಾಗತಿಃ ಪಾರಗತಿಸ್ತದೋಕಃ ।**

**ಸಮಸ್ತಕಾರ್ಯಂ ವಶಿತಾ ಚ ವಿಶ್ವ–**

**ಸಂಭಾವನಾ ಯುಕ್ತಯಸ್ತ್ವನ್ಯಪಕ್ಷೇ ॥ ೧ ॥**

**ಸಾಮಾನ್ಯರೂಪಂ ಪ್ರತಿಭಾನಮುಕ್ತಿ–**

**ರಾಶ್ಚರ್ಯತಾ ಕೃತ್ರಿಮತಾಸ್ತದೋಷಃ ।**

**ವಿಶೇಷಕ್ಲೃಪ್ತಿಃ ಕೃತನಿಶ್ಚಯಶ್ಚ**

**ಮಾಹಾತ್ಮ್ಯಮಿತ್ಯೇವ ಸುನಿರ್ಣಯಾರ್ಥಾಃ ॥ ೨ ॥**

ಯುಕ್ತಯಃ ಅನ್ಯಪಕ್ಷೇ – ಪೂರ್ವಪಕ್ಷದಲ್ಲಿನ ಯುಕ್ತಿಗಳು. ಸುನಿರ್ಣಯಃ ಸಿದ್ಧಾಂತನಿರ್ಣಯಃ ಅರ್ಥಃ ಪ್ರಯೋಜನಃ ಯಾಸಾಂ ತಾಃ ಎಂಬ ವ್ಯುತ್ಪತ್ತಿಯಿಂದ ಸುನಿರ್ಣಯಾರ್ಥಾಃ ಎಂದರೆ ಸಿದ್ಧಾಂತಯುಕ್ತಿಗಳು ಎಂದರ್ಥ.

| ಅಧಿಕರಣ | ಪೂರ್ವಪಕ್ಷಯುಕ್ತಿ | ಸಿದ್ಧಾಂತಯುಕ್ತಿ |
|---|---|---|
| ಸಂಪದ್ಯಾಧಿಕರಣ | ಅತಿಕ್ರಮೋಕ್ತಿಃ | ಸಾಮಾನ್ಯರೂಪಂ |
| ಮುಕ್ತಾಧಿಕರಣ | ಕೃತಿಃ | ಪ್ರತಿಭಾನಂ |
| ಆತ್ಮಾಧಿಕರಣ | ಅರ್ಥಲಾಭಃ | ಉಕ್ತಿಃ |
| ಅವಿಭಾಗಾಧಿಕರಣ | ಪರಾಗತಿಃ | ಆಶ್ಚರ್ಯತಾ |
| ಬ್ರಾಹ್ಮಾಧಿಕರಣ | ಪರಾಗತಿಃ | ಅಕೃತ್ರಿಮತಾ |
| ಸಂಕಲ್ಪಾಧಿಕರಣ | ತದೋಕಃ | ಅಸ್ತದೋಷಃ |
| ಅನನ್ಯಾಧಿಪತ್ಯಧಿಕರಣ | ತದೋಕಃ | ಅಸ್ತದೋಷಃ |
| ಅಭಾವಾಧಿಕರಣ | ಸಮಸ್ತಕಾರ್ಯಂ | ವಿಶೇಷಕ್ಲೃಪ್ತಿಃ |

| | | |
|---|---|---|
| ಜಗದ್ವ್ಯಾಪಾರಾಧಿಕರಣ | ಸಮಸ್ತಕಾರ್ಯಂ | ವಿಶೇಷಕ್ಲೃಪ್ತಿಃ |
| ಸ್ಥಿತ್ಯಧಿಕರಣ | ವಶಿತಾ | ಕೃತನಿಶ್ಚಯಃ |
| ಅನಾವೃತ್ತ್ಯಧಿಕರಣ | ವಿಶ್ವಸಂಭಾವನಾ | ಮಾಹಾತ್ಮ್ಯಂ |

## ಅನನ್ಯಾಧಿಪತ್ಯಧಿಕರಣಮ್

**।। ಓಂ ಅತ ಏವ ಚಾನನ್ಯಾಧಿಪತಿಃ ಓಂ ।।**

ಸತ್ಯಸಂಕಲ್ಪತ್ವವಿರುವ ಕಾರಣದಿಂದಲೇ ಬ್ರಹ್ಮಜ್ಞಾನಿಗೆ ಮತ್ತೊಬ್ಬ ಅಧಿಪತಿಯು ಇರುವುದಿಲ್ಲ, ಅಂದರೆ ಮುಕ್ತನು ಯಾರಿಂದಲೂ ನಿಯಮನ ಮಾಡಲ್ಪಡುವುದಿಲ್ಲ, ಎಂಬುದಾಗಿ ಅದ್ವೈತಿಗಳು ವ್ಯಾಖ್ಯಾನ ಮಾಡುತ್ತಾರೆ. ಈ ವ್ಯಾಖ್ಯಾನವು ಅಯುಕ್ತ ಎನ್ನುವ ಅಭಿಪ್ರಾಯದಿಂದ ಹೇಳುತ್ತಾರೆ –

**ಅನನ್ಯಭೃತ್ಯತ್ವಮಿಹೋದಿತೇಭ್ಯ–**

**ಸ್ತ್ವನ್ಯಸ್ಯ ಭೃತ್ಯತ್ವನಿವಾರಣಾಯ ।**

ಮುಕ್ತನಿಗೆ ಅನ್ಯಾಧಿಪತಿಯು ಇಲ್ಲ ಎಂದು ಯಾವ ಅನನ್ಯಭೃತ್ಯತ್ವವು ಈ ಸೂತ್ರದಲ್ಲಿ ಹೇಳಿದೆಯೋ, ಅದಾದರೂ ಯಾರು ಯಾವ ಮುಕ್ತನಿಗೆ ಅಧಿಪತಿಯೆಂದು ಶಾಸ್ತ್ರದಲ್ಲಿ ಹೇಳಲಾಗಿದೆಯೋ, ಅವರಿಂದ ಇತರರಿಗೆ ಮುಕ್ತನು ಭತ್ಯನಾಗುವುದಿಲ್ಲ ಎಂದು ಪ್ರತಿಪಾದಿಸುವುದಕ್ಕಾಗಿ. ಸರ್ವಥಾ ಅಧಿಪತಿಯನ್ನು ನಿವಾರಣೆ ಮಾಡುವುದಕ್ಕಾಗಿ ಅಲ್ಲ. ಏಕೆಂದರೆ ಅನನ್ಯ ಎಂಬ ಪದ ಪ್ರಯೋಗವಿದೆ. ಅಧಿಪತಿಯೇ ಇಲ್ಲವೆಂದು ಹೇಳುವ ಅಭಿಪ್ರಾಯವಿದ್ದಿದ್ದರೆ ಅನಧಿಪತಿಃ ಎಂದಷ್ಟೇ ಹೇಳಬೇಕಿತ್ತು. ಆಗ ಅನ್ಯಶಬ್ದಕ್ಕೆ ವೈಯರ್ಥ್ಯವು ಬರುತ್ತಿತ್ತು.

ಹೀಗೆಯೇ ಅರ್ಥಮಾಡಬೇಕೆಂದು ಕಾರಣಾಂತರದಿಂದಲೂ ಹೇಳುತ್ತಾರೆ –

**ಪತಿಂ ಯದೇಷಾಮಪಿ ವಿಷ್ಣುಮಾಹ**

**ಹ್ಯುತಾಮೃತತ್ವಸ್ಯ ಪತಿತ್ವವಾಗ್ಗಿರೇಃ ।। ೩ ।।**

ಶ್ರೀಹರಿಗೆ ಮುಕ್ತವರ್ಗಕ್ಕೆ ನಿಯಾಮಕತ್ವವನ್ನು ಪ್ರತಿಪಾದಿಸುವ ವಚನವು (ಉತಾಮೃತತ್ವಸ್ಯೇಶಾನಃ) ಶ್ರೀಹರಿಯು ಮುಕ್ತರಿಗೆ ಅಧಿಪತಿಯೆಂದು ಹೇಳುತ್ತದೆ. ಈ ಕಾರಣದಿಂದಲೂ ಹಿಂದೆ ಹೇಳಿದ್ದೇ ಸೂತ್ರಾರ್ಥವು, ಬೇರೆಯಲ್ಲ.

ಅನುಮಾನದಿಂದಲೂ ಈ ಅರ್ಥವನ್ನು ಸಮರ್ಥಿಸುತ್ತಾರೆ –

**ಏತೇಽಪಿ ಚಾನ್ಯಾಧಿಪತಿತ್ವಯುಕ್ತಾ**

**ವಿಷ್ಣ್ವನ್ಯಚಿತ್ತ್ಯೇನ ಯಥಾ ಪುಮಾಂಸಃ ।**

**ಪ್ರಸಿದ್ಧಿಭಾಜಸ್ತ್ವಿತಿ ಚಾನುಮೈವ**

**ಹ್ಯಭೀಷ್ಟಸಿದ್ಧ್ಯೈ ಭವತೀಹ ನಿಶ್ಚಯಾತ್ ॥ ೪ ॥**

ಈ ಮುಕ್ತರು ಅನ್ಯಾಧಿಪತಿತ್ವದಿಂದ ಯುಕ್ತರು (ಅನ್ಯೋಽಧಿಪತಿರ್ಯೇಷಾಂ ತೇಽನ್ಯಾಧಿಪತಯಃ, ತೇಷಾಂ ಭಾವೋಽನ್ಯಾಧಿಪತಿತ್ವಂ) ಅಂದರೆ ಮುಕ್ತರು ಅನ್ಯ ಅಧಿಪತಿಯನ್ನು ಹೊಂದಿದವರು ಅಥವಾ ಅನ್ಯರಿಂದ ನಿಯಮ್ಯರು. ವಿಷ್ಣು ಅನ್ಯತ್ವದಿಂದಲೂ ಜೀವತ್ವದಿಂದಲೂ ಅನ್ಯನಿಯಮ್ಯರಾಗಿ ಪ್ರಸಿದ್ಧರಾದ ಸಂಸಾರಿ ಪುರುಷರಂತೆ. ಈ ಅನುಮಾನವೇ ಮುಕ್ತರಲ್ಲಿ ನಿಶ್ಚಯವಾಗಿಯೂ ಸ್ವೋತ್ತಮ ನಿಯಮ್ಯತ್ವ ರೂಪವಾದ ಅಭೀಷ್ಟ ಸಿದ್ಧಿಗಾಗಿ ಆಗುವುದು. ಹಿ ಎಂಬ ಶಬ್ದದಿಂದ ವ್ಯಾಪ್ತಿ ಪಕ್ಷಧರ್ಮತ್ವಗಳು ಪ್ರಮಿತವಾಗಿವೆ ಎಂದು ಸೂಚಿಸುತ್ತಾರೆ.

ಮುಕ್ತರಿಗೆ ಕೇವಲ ಶ್ರೀಹರಿಯೊಬ್ಬನೇ ಅಧಿಪತಿಯಲ್ಲ, ಮತ್ತೆ ಅವರಿಗಿಂತ ಉತ್ತಮರಾದ ಮುಕ್ತಬ್ರಹ್ಮಾದಿಗಳೂ ಯಥಾಯೋಗ್ಯವಾಗಿ ಅಧಿಪತಿಗಳಾಗಿರುತ್ತಾರೆ ಎಂಬ ಅಭಿಪ್ರಾಯದಿಂದ ಹೇಳುತ್ತಾರೆ –

**ಮುಕ್ತಸ್ವಕೀಯಾವರಯಂತೃತಾಸ್ತಿ**

**ಮುಕ್ತಾವಪಿ ಬ್ರಹ್ಮಪುರಸ್ಸರಾಣಾಮ್ ।**

ಮುಕ್ತರಾದ ಬ್ರಹ್ಮ ಮೊದಲಾದವರಿಗೂ ತಮ್ಮೊಂದಿಗೇ ಮುಕ್ತರಾದ ತಮ್ಮಿಂದ ಅವರರಾದ ಮುಕ್ತರನ್ನು ಕುರಿತು ನಿಯಾಮಕತ್ವವು ಇದೆ. ಅಮುಕ್ತರನ್ನು ಕುರಿತು ನಿಯಾಮಕತ್ವವು ಸರ್ವಥಾ ಇರುವುದಿಲ್ಲ. ಮುಕ್ತರಲ್ಲಿಯೂ ಕೂಡ ಕಲ್ಪಾಂತರದಲ್ಲಿ ಮುಕ್ತರಾದವರನ್ನೂ ಹಾಗೂ ತಮ್ಮ ಕಲ್ಪದಲ್ಲಿಯೇ ತಮಗಿಂತ ಉತ್ತಮರೂ ಅಥವಾ ಸಮರಾದವರನ್ನೂ ಕುರಿತು ನಿಯಾಮಕತ್ವವು ಇಲ್ಲ. ಇದನ್ನು ತಿಳಿಸಲಿಕ್ಕಾಗಿಯೇ ಇಲ್ಲಿ ಮುಕ್ತಸ್ವಕೀಯಾವರಯಂತೃತಾ ಎಂದು ಹೇಳಿದ್ದು.

ಇದರಿಂದ 'ಆಪ್ನೋತಿ ಸ್ವಾರಾಜ್ಯಂ' 'ಸರ್ವೇಽಸ್ಮೈ ದೇವಾ ಬಲಿಮಾವಹಂತಿ' 'ತೇಷಾಂ ಸರ್ವೇಷು ಲೋಕೇಷು ಕಾಮಚಾರೋ ಭವತಿ' ಇತ್ಯಾದಿ ಶ್ರುತಿಗಳಿಗೂ, ಜಗದ್ವ್ಯಾಪಾರವರ್ಜ್ಯಂ ಎಂಬ ಸೂತ್ರದ ವ್ಯಾಖ್ಯಾನದಲ್ಲಿ ಮುಕ್ತನಿಯಾಮಕತ್ವವನ್ನು ಕುರಿತು ಇತರ ಭಾಷ್ಯಕಾರರು ಉದಾಹರಿಸಿದ ಶ್ರುತಿಗಳಿಗೂ ಪ್ರಾಮಾಣಿಕವಾದ ಅರ್ಥವನ್ನು ಹೇಳಿದಂತಾಯಿತು.

ಮುಕ್ತರಿಗೆ ತಮಗಿಂತ ಅವರರನ್ನು ಕುರಿತು ನಿಯಂತೃತ್ವವು ಪ್ರಮಾಣವೆಂದು ಯಾವುದರಿಂದ ತಿಳಿಯಬೇಕು ಎಂದರೆ –

**ಅನೇನ ದೇವೇನ ತಥಾಮುನಾ ಚ**

**ಹೀಷ್ಟೇ ಪರಾವಾರ್ಕತನಲೋಕಿನಾಮಿತಿ ॥ ೫ ॥**

**ಫಲಂ ಶ್ರುತಿರ್ಜ್ಞಾನತ ಆಹ ಮುಕ್ತಾ-**

**ವೇತಚ್ಚ ಸರ್ವಾಶುಭನಾಶಲಿಂಗಾತ್ ।**

ಮುಕ್ತನು ಚಕ್ಷುರಂತಸ್ಥನಾದ ಪ್ರಸನ್ನನಾದ ಶ್ರೀಹರಿಯಿಂದ ಹಾಗೆಯೇ ಸೂರ್ಯಾಂತರ್ಗತನಾದ ಶ್ರೀಹರಿಯಿಂದ ಮೇಲಿನ ಸ್ವರ್ಗಾದಿ ಲೋಕಗಳೂ ಹಾಗೂ ಕೆಳಗಿನ ಪಾತಾಳಾದಿ ಲೋಕಗಳಲ್ಲಿಯೂ ಇರತಕ್ಕ ತನಗಿಂತ ಅವರರಾದ ಮುಕ್ತರಿಗೆ ನಿಯಾಮಕನಾಗಿರುವನೆಂದು ಶ್ರುತಿಯಲ್ಲಿ ಹೇಳಿದೆ. 'ಅಥ ಯ ಏವಂ ವಿದ್ವಾನ್' 'ಸೋಽಮುನೈವ ಯೇ ಚಾಮುಷ್ಮಾತ್ಪರಾಂಚೋ ಲೋಕಾಂಸ್ತಾಂಶ್ಚಾಪ್ನೋತಿ ದೇವಕಾಮಾಂಶ್ಚ, ಅಥಾನೇನೈವ ಯೇ ಚೈತಸ್ಮಾದರ್ವಾಂಚೋ ಲೋಕಾಂಸ್ತಾಂಶ್ಚಾಪ್ನೋತಿ ಮನುಷ್ಯ ಕಾಮಾಂಶ್ಚ' ಎನ್ನುವ ಶ್ರುತಿಯನ್ನು ಇಲ್ಲಿ ಗ್ರಹಿಸಬೇಕು. ಈ ಶ್ರುತಿಯು ಜ್ಞಾನದಿಂದ ಮುಕ್ತನಿಯಂತೃತ್ವ ರೂಪವಾದ ಫಲವನ್ನು ಹೇಳುತ್ತದೆ. ಈ ಸರ್ವಲೋಕಾಪ್ತಿ ರೂಪವಾದ ಫಲವು ಮುಕ್ತಿಯಲ್ಲಿಯೇ. ಏಕೆಂದರೆ 'ಉದೇತಿ ಹ ವೈ ಸರ್ವೇಭ್ಯಃ ಪಾಪ್ಮಭ್ಯೋ ಯ ಏವಂ ವೇದ' ಎಂಬುದಾಗಿ ಸರ್ವಪಾಪಕ್ಷಯ ರೂಪವಾದ ಮುಕ್ತತ್ವಜ್ಞಾಪಕಲಿಂಗವಿದೆ. ಮುಕ್ತಿಯಿಂದ ಬೇರೆ ಕಡೆಯಲ್ಲಿ ಸರ್ವ ಪಾಪರಾಹಿತ್ಯವು ಕೂಡುವುದಿಲ್ಲ. ಏಕೆಂದರೆ ಮೋಕ್ಷವನ್ನು ಹೊಂದುವವರೆಗೂ ಪ್ರಾರಬ್ಧಪಾಪವು ಇರುವುದು.

ಮುಕ್ತಿಯಲ್ಲಿ ಜ್ಞಾನಫಲವೆಂದು ಹೇಳಲ್ಪಟ್ಟ ಸರ್ವಲೋಕಾಧಿಪತ್ಯವು ಎಲ್ಲ ಮುಕ್ತರಿಗೂ ಇದೆಯೆಂಬ ಪ್ರತೀತಿಯನ್ನು ನಿರಾಕರಿಸುವುದಕ್ಕಾಗಿ ಹೇಳುತ್ತಾರೆ –

**ಲೋಕಾಧಿಪತ್ಯಂ ಚ ವಿಧಾತುರೇವ**

**ಸರ್ವಾತ್ಮನೇತ್ಯಾಹ ತುರಶ್ರುತಿಶ್ಚ ।। ೬ ।।**

ಸರ್ವಾತ್ಮನಾ ಲೋಕಾಧಿಪತ್ಯವು ಮುಕ್ತನಾದ ಬ್ರಹ್ಮನಿಗೇ. ಇತರರಿಗೆ ಯಥಾ ಯೋಗ್ಯವೆಂದು ತಿಳಿಯತಕ್ಕದ್ದು. 'ಮುಕ್ತಾನಾಂ ನ ಜಗದ್ಯತ್ನಸ್ತಥಾಪಿ ವಿಬುಧಾಃ ಸದಾ । ಮುಕ್ತಾನಾಂ ತು ನಿಯಂತಾರಃ ತೇಷಾಂ ಬ್ರಹ್ಮಾಽಸ್ಯ ವೈ ಹರಿಃ' ಎಂದು ತುರಶ್ರುತಿಯೂ ಇದನ್ನೇ ಹೇಳಿದೆ.

ಶ್ರುತ್ಯಂತರವನ್ನೂ ಹೀಗೆಯೇ ವ್ಯಾಖ್ಯಾನ ಮಾಡಬೇಕು ಎಂದು ಹೇಳುತ್ತಾರೆ –

**ಸರ್ವೇ ಬಲಿಂ ದೇವಗಣಾ ವಹಂತೀ-**

**ತ್ಯೇತಚ್ಚ ನಾನ್ಯಸ್ಯ ತು ಯುಕ್ತಿಮೇತಿ ।**

'ಸ ವೇದ ಬ್ರಹ್ಮ, ಸರ್ವೇಽಸ್ಮೈ ದೇವಾ ಬಲಿಮಾವಹಂತಿ' (ಎಲ್ಲ ದೇವತಾ ಸಮೂಹಗಳೂ ಬ್ರಹ್ಮನಿಗೇ ಪೂಜೆಯನ್ನು ಮಾಡುತ್ತಾರೆ.) ಎಂಬುದಾಗಿ ಶ್ರುತಿಯಲ್ಲಿ ಹೇಳಲ್ಪಟ್ಟ ಸರ್ವದೇವಪೂಜ್ಯತ್ವವು ಬ್ರಹ್ಮನಿಂದ ಇತರರಿಗೆ ಕೂಡುವುದಿಲ್ಲ. ಇಲ್ಲಿ ಪೂಜಕರಾದ ದೇವತೆಗಳೂ ಮುಕ್ತರೇ ಆಗಿರುತ್ತಾರೆ. ಏಕೆಂದರೆ ಅಮುಕ್ತರಿಗೆ ಮುಕ್ತರೊಂದಿಗೆ ಸಂಬಂಧವೇ ಇರುವುದಿಲ್ಲ.

ಹಾಗಾದರೆ ತಾಂಶ್ಚಾಪ್ನೋತಿ ಎಂದು ಶ್ರುತ್ಯುಕ್ತನಾದ ಲೋಕಾಪ್ತಿಯುಳ್ಳವನು

ಸರ್ವ ಅಶುಭನಾಶತ್ವರೂಪವಾದ ಹೇತುವಿನಿಂದ ಮುಕ್ತನಾಗಲಿ. ಅವನಿಗೆ ಇಲ್ಲಿ ಲೋಕಾಪ್ತಿಯೇ ಹೇಳಲ್ಪಡುತ್ತದೆ. ಮುಕ್ತರಾದ ಅವರರನ್ನು ಕುರಿತು ನಿಯಂತೃತ್ವವು ಹೇಳಲ್ಪಡುವುದಿಲ್ಲ ಎಂದರೆ –

**ಲೋಕಾ ಇತೀಹಾಪಿ ತು ಲೋಕಿನಾಂ ವಚೋ**

**ಲೋಕಾ ಇತಿ ಹ್ಯೇವ ರವಃ ಪ್ರಜಾಸು ॥ ೭ ॥**

**ಪ್ರಯುಜ್ಯತೇ ಸರ್ವಜನ್ಯೈಃ ಸದೈವ**

**ತನ್ಮಾನಿನೋ ಲೋಕಪದೇನ ಚೋಕ್ತಾಃ ।**

ಈ ಶ್ರುತಿಯಲ್ಲಿ ಲೋಕ ಎನ್ನುವ ಶಬ್ದವು ಲೋಕಾಧಿಪತ್ಯವುಳ್ಳ ಮುಕ್ತರನ್ನು ಮಾತ್ರವಲ್ಲದೆ, ಆ ಲೋಕದಲ್ಲಿರುವರನ್ನೂ ಪ್ರತಿಪಾದಿಸುತ್ತದೆ. ಅಂದರೆ ಹೇಗೆ ಮಂಚ ಶಬ್ದವು ಮಂಚಸ್ಥ ಪುರುಷನಲ್ಲಿದೆಯೋ ಹಾಗೆಯೇ ಲೋಕಶಬ್ದವೂ ಕೂಡ ಲೋಕಸ್ಥ ಪುರುಷನಲ್ಲಿದೆ. ಶಬ್ದಶಕ್ತಿಯನ್ನು ತಿಳಿದ ಎಲ್ಲ ಜನರಿಂದಲೂ ಲೋಕಾಃ ಎನ್ನುವ ಶಬ್ದವು ಲೋಕಸ್ಥ ಪ್ರಜೆಗಳ ವಿಷಯದಲ್ಲಿ ಯಾವಾಗಲೂ ಪ್ರಯೋಗಿಸಲ್ಪಡುತ್ತದೆ. ಅಭಿಮಾನ್ಯಧಿಕರಣದ ನ್ಯಾಯದಿಂದ ಲೋಕಪದದಿಂದ ಲೋಕಾಭಿಮಾನಿಗಳು ಹೇಳಲ್ಪಡುತ್ತಾರೆ.

ಲೋಕಶಬ್ದಕ್ಕೆ ಲೋಕಸ್ಥ ಪುರುಷರಲ್ಲಿ ವಾಚಕತ್ವವಿದೆ ಎಂದಾಗಲಿ. ಹಾಗಿದ್ದರೂ ಈ ಶ್ರುತಿಗೆ ಮುಕ್ತವಿಷಯತ್ವವಿದೆ ಎನ್ನುವಲ್ಲಿ ಪ್ರಮಾಣವಿಲ್ಲ. ಆಪ್ನೋತಿ ಎಂದು ಆಪ್ತಿಯೇ ಹೇಳಲ್ಪಡುತ್ತದೆ, ನಿಯಾಮಕತ್ವವಲ್ಲ ಎಂದು ಆಕ್ಷೇಪಿಸಿದರೆ –

**ತದ್ಗಾಸ್ತು ಮುಕ್ತಾ ಇಹ ಲೋಕಶಬ್ದಾ**

**ಅನ್ಯೋನ್ಯನಾಥಾ ಇತಿ ಪೈಂಗಿನಾಂ ಶ್ರುತಿಃ ॥ ೮ ॥**

ಯೇ ಚಾಮುಷ್ಮಾತ್ ಎನ್ನುವ ಶ್ರುತಿಯಲ್ಲಿ ಪರಾವರ ಲೋಕಗಳಲ್ಲಿರತಕ್ಕ ಮುಕ್ತರೇ ಲೋಕಶಬ್ದವಾಚ್ಯರು. ಉತ್ತಮರಾದ ಮುಕ್ತರು ಅಧಮರಾದ ಮುಕ್ತರಿಗೆ ನಿಯಾಮಕರು. ಹೀಗೆ ಈ ಶ್ರುತಿಗೆ ವ್ಯಾಖ್ಯಾನರೂಪವಾದ ಪೈಂಗಿಶ್ರುತಿಯು ಹೇಳಿದೆ.

ಈ ಶ್ರುತಿಯಲ್ಲಿ ಮುಕ್ತನಿಗೆ ಮುಕ್ತನಿಯಾಮಕತ್ವವು ಹೇಳಲ್ಪಟ್ಟಿದೆ ಎನ್ನುವುದನ್ನು ಪ್ರಕಾರಾಂತರದಿಂದ ಪ್ರತಿಪಾದಿಸುತ್ತಾರೆ –

**ಅಲೋಕಶಬ್ದೇನ ವಿಮುಕ್ತಿಭಾಜೋ**

**ವಾಚ್ಯಾಃ ಪದಂ ತಾದೃಗಪೀಹ ಯುಕ್ತಮ್ ।**

ಲೋಕದೋಷಾತೀತತ್ವ ಹಾಗೂ ವಿದೇಹತ್ವ ನಿಮಿತ್ತದಿಂದ ಮುಕ್ತರು ಅಲೋಕ ಶಬ್ದದಿಂದ ವಾಚ್ಯರಾಗುತ್ತಾರೆ. ಲೋಕಾಲೋಕ ಶಬ್ದಗಳು ಸಂಹಿತೆಯಲ್ಲಿ ಸಮಾನ

ರೂಪಗಳಾಗಿವೆ. ಪರಾಂಚೋ ಲೋಕಾ ಅರ್ವಾಂಚೋ ಲೋಕಾ ಎಂಬ ವಾಕ್ಯದಲ್ಲಿ ಅಲೋಕಾ ಎಂದೂ ಪದಚ್ಛೇದ ಮಾಡಲಿಕ್ಕೆ ಬರುತ್ತದೆ. ಆಗ ಅಲೋಕಾಃ ಎಂದರೆ ಪ್ರಾಕೃತ ದೇಹ ರಹಿತರಾದ ಮುಕ್ತರು ಹೇಳಲ್ಪಡುತ್ತಾರೆ.

ಯೋಗವೃತ್ತಿಯಿಂದಲೂ ಲೋಕಶಬ್ದಕ್ಕೆ ಮುಕ್ತರಲ್ಲಿ ವೃತ್ತಿಯು ಕೂಡುತ್ತದೆ ಎಂದು ಹೇಳುತ್ತಾರೆ. ಹೇಗೆಂದರೆ –

**ಲೋಕಾಭಿಧಾಶ್ಚಾಪಿ ಯತೋ ಹಿ ಮುಕ್ತಾಃ**

**ಪ್ರಕಾಶರೂಪಾಃ ಸತತಂ ಚ ಸರ್ವೇ ॥ ೯ ॥**

ಎಲ್ಲ ಮುಕ್ತರೂ ನಿರಂತರದಲ್ಲಿಯೂ ಪ್ರಕಾಶರೂಪರಾಗಿ ಪ್ರಸಿದ್ಧರಾಗಿರುತ್ತಾರೆ. ಈ ಕಾರಣದಿಂದಲೂ ಮುಕ್ತರು ಲೋಕವೆಂಬ ಹೆಸರಿನಿಂದ ಕರೆಯಲ್ಪಡುತ್ತಾರೆ. ಲೋಕೃ ಧಾತುವಿಗೆ ದರ್ಶನ ಎಂದರ್ಥ. ದರ್ಶನ ಎಂದರೆ ಪ್ರಕಾಶ. ಆದ್ದರಿಂದ ಲೋಕ ಎಂದರೆ ಪ್ರಕಾಶ.

ಇಲ್ಲಿ ಲೋಕಾಭಿಮಾನಿಗಳಾದ ಮುಕ್ತರೇ ಲೋಕಶಬ್ದಾರ್ಥರು ಎಂದು ಹಿಂದೆ ಹೇಳಿದ್ದು ಸರಿಯಲ್ಲ. ಅವರು ಉತ್ತಮರು. ಆದ್ದರಿಂದ ಮುಕ್ತರಿಗೆ ಅವರನ್ನು ಕುರಿತು ನಿಯಮನವು ಕೂಡುವುದಿಲ್ಲ ಎಂದರೆ – ಲೋಕಾಧಿಪತ್ಯಂ ಚ ವಿಧಾತುರೇವ ಇತ್ಯಾದಿಯಾಗಿ ಹೇಳಿದ್ದು ವಿಸ್ಮರಣೆಯಾಗದಿರಲಿ ಎಂದು ಹೇಳುತ್ತಾರೆ –

**ಬ್ರಹ್ಮೈವ ಲೋಕಾಧಿಪತಿರ್ವಿಮುಕ್ತೋ**

**ಭವೇದಿತಿ ಪ್ರಾಹ ತುರಶ್ರುತಿಶ್ಚ ।**

ವಿಮುಕ್ತನಾದ ಬ್ರಹ್ಮನೇ ಲೋಕಗಳಿಗೆ (ಮುಕ್ತರಿಗೆ) ಅಧಿಪತಿಯು ಆಗುವನು ಎಂದು ತುರಶ್ರುತಿಯೂ ಹೇಳುತ್ತದೆ. ಆದ್ದರಿಂದ ಎಲ್ಲ ಮುಕ್ತರಿಗಿಂತ ಉತ್ತಮನಾದ ಬ್ರಹ್ಮನಿಗೆ ಉತ್ತಮರಾದ ಲೋಕಾಭಿಮಾನಿಗಳಾದ ಮುಕ್ತರಾದ ದೇವತೆಗಳನ್ನು ಕುರಿತು ನಿಯಾಮಕತ್ವವು ಯುಕ್ತವೇ ಆಗಿದೆ.

ಹೀಗೆ ತಮ್ಮ ಮತದಿಂದ ಶ್ರುತಿಯನ್ನು ವ್ಯಾಖ್ಯಾನಮಾಡಿ, 'ಆದಿತ್ಯಮಂಡಲದಲ್ಲಿ ಪರಮೇಶ್ವರನನ್ನು ಉಪಾಸನೆ ಮಾಡಿದ ಜ್ಞಾನಿಗೆ ಪರಲೋಕಾಧಿಪತ್ಯವು ಬರುತ್ತದೆ, ಕಣ್ಣಿನಲ್ಲಿ ಉಪಾಸನೆ ಮಾಡಿದ ಜ್ಞಾನಿಗೆ ಅರ್ವಾಕ್ತನ ಲೋಕಾಧಿಪತ್ಯವು ಬರುತ್ತದೆ' ಎಂದು ಪರರು ಮಾಡಿದ ವ್ಯಾಖ್ಯಾನವನ್ನು ನಿರಾಕರಿಸುತ್ತಾರೆ –

**ನ ಚೇಹ ವಿಜ್ಞಾನಫಲಂ ಸಮುಕ್ತಂ**

**ಲೋಕಾಧಿಪತ್ಯಂ ರವಿಬಿಂಬಗೇ ಹರೌ ॥ ೧೦ ॥**

**ಉಕ್ತಂ ಪೃಥಕ್ ತಚ್ಚ ಪುರೈವ ಯಸ್ಮಾತ್**

**ಭೇದೋಽಮುನೇತ್ಯಾದಿ ಚ ಸಮ್ಯಗುಕ್ತಃ ।**

ಈ ಶ್ರುತಿಯಲ್ಲಿ ಲೋಕಾಧಿಪತ್ಯವು ಜ್ಞಾನದ ಫಲವೆಂದು ಚೆನ್ನಾಗಿ ಹೇಳಲ್ಪಟ್ಟಿದೆ ಎಂಬ ವ್ಯಾಖ್ಯಾನ ಸರಿಯಲ್ಲ. ಏಕೆಂದರೆ ಲೋಕಾಧಿಪತ್ಯವು ಪೂರ್ವವಾಕ್ಯದಲ್ಲಿಯೇ ಸೂರ್ಯಬಿಂಬದಲ್ಲಿರತಕ್ಕ ಹರಿಯಲ್ಲಿಯೂ ಕಣ್ಣಿನಲ್ಲಿರತಕ್ಕ ಹರಿಯಲ್ಲಿಯೂ ಕೂಡ ಪ್ರತ್ಯೇಕವಾಗಿ ಹೇಳಲ್ಪಟ್ಟಿದೆ. ಸಮಸ್ತಲೋಕಾಧಿಪತ್ಯವು ಭಗವದ್ಧರ್ಮವೆಂದು ಅಲ್ಲಿಯೇ ಹೇಳಿರುವುದರಿಂದ ಅದು ಜ್ಞಾನಿಗೆ ಕೂಡುವುದಿಲ್ಲ. ಭಗವದ್ಧರ್ಮವೂ ಜ್ಞಾನಿಗೆ ಬರುತ್ತದೆ ಎಂದು ಅಂಗೀಕರಿಸಿದರೆ ದೋಷ ಬರುತ್ತದೆ. ಏಕೆಂದರೆ ಜ್ಞಾನಿಗೆ ಪರಮೇಶ್ವರನ ದೆಶೆಯಿಂದ ಭೇದವಾದರೂ ಅಮುನೇತ್ಯಾದಿ ವಾಕ್ಯದಿಂದ ಸ್ಪಷ್ಟವಾಗಿ ಹೇಳಲ್ಪಟ್ಟಿದೆ. ಪರಮಾತ್ಮನ ಸ್ವರೂಪನೇ ಆದವನಿಗೆ ಅವನ ಪ್ರಸಾದದಿಂದ ಅವನ ಧರ್ಮತ್ವವು ಬರುವುದಿಲ್ಲವಷ್ಟೆ.

ಅಮುನಾ ಎನ್ನುವುದಕ್ಕೆ ಪ್ರಸನ್ನನಾದ ಹರಿಯ ನಿಮಿತ್ತದಿಂದ ಎಂದು ವ್ಯಾಖ್ಯಾನ ಮಾಡುವುದಾದರೆ ಅದು ಜೀವೇಶ್ವರ ಭೇದಪರವಾಗುತ್ತಿತ್ತು. ನಾವು ಹಾಗೆ ವ್ಯಾಖ್ಯಾನಮಾಡುವುದಿಲ್ಲ. ಈ ರೂಪದಿಂದ ಈ ಶ್ರೀಹರಿಯ ತಾದಾತ್ಮ್ಯ ಹೊಂದಿ, ಹಾಗೆಯೇ ಈ ರೂಪದಿಂದ ಈ ಶ್ರೀಹರಿಯ ತಾದಾತ್ಮ್ಯ ಹೊಂದಿ ಎಂದು ವ್ಯಾಖ್ಯಾನ ಮಾಡುತ್ತೇವೆ. ಹೀಗೆ ಮಾಡುವುದರಿಂದ ಈ ವಾಕ್ಯವು ಭೇದಪರವೆಂದು ಆಗುವುದಿಲ್ಲ ಎಂದರೆ –

**ತ್ವಪ್ರತ್ಯಯಂ ಚಾಪ್ಯತಿಹಾಯ ನೈವ**

**ರೂಪೇಣ ತೇನೇತಿ ಭವೇದಿಹಾರ್ಥಃ ॥ ೧೧ ॥**

ತ್ವಪ್ರತ್ಯಯವನ್ನೂ, ಅದಕ್ಕೆ ಸಮಾನಾರ್ಥಕ ತಲ್ ಪ್ರತ್ಯಯವನ್ನೂ ಬಿಟ್ಟು, ಈ ಶ್ರುತಿಯಲ್ಲಿ ತೇನ ರೂಪೇಣ ಎನ್ನುವುದಕ್ಕೆ ಅಮುನಾ ರೂಪೇಣ ಅನೇನ ರೂಪೇಣ ಎಂಬುದಾಗಿ ಅಭೇದಪರವಾದ ಅರ್ಥವು ಸರ್ವಥಾ ಆಗಲಾರದು. ಹಿಂದೆ ಹೇಳಿದ ಶ್ರುತಿಯಲ್ಲಿ ಐಕ್ಯಜ್ಞಾಪಕವಾದ ತ್ವಪ್ರತ್ಯಯವಾಗಲೀ ರೂಪಶಬ್ದವಾಗಲೀ ಇಲ್ಲ.

ಹಾಗಾದರೆ ಭಾವಪ್ರಧಾನ ನಿರ್ದೇಶಗಳು ಬಹಳ ಕಡೆಗಳಲ್ಲಿ ಕಂಡುಬರುತ್ತವೆ. ಆದಕಾರಣ ಭಾವಾರ್ಥಕ ಪ್ರತ್ಯಯವಿಲ್ಲದಿದ್ದರೂ ಅಭೇದ ಪ್ರತಿಪಾದಕ ಅರ್ಥವು ಆಗುವುದು. ಅಧ್ಯಾಹಾರವುಳ್ಳ (ಸೂಕ್ತ ಶಬ್ದಗಳನ್ನು ಕೂಡಿಸಿಕೊಂಡು ಪಠಿಸಬೇಕಾದ) ವಾಕ್ಯಗಳೂ ಇರುತ್ತವೆ. ಆದ್ದರಿಂದ ರೂಪೇಣ ಇತ್ಯಾದಿ ಪದಗಳ ಅಧ್ಯಾಹಾರವನ್ನು ಮಾಡಲಿಕ್ಕೆ ಬರುತ್ತದೆ. ಆದ್ದರಿಂದ ನಮ್ಮ ವ್ಯಾಖ್ಯಾನದಲ್ಲಿ ದೋಷವಿಲ್ಲ ಎಂದರೆ – ವಾಕ್ಯಾರ್ಥವು ನಿಶ್ಚಿತವಾಗಿದ್ದರೆ ಅಧ್ಯಾಹಾರಾದಿಗಳು ಕೂಡುತ್ತದೆ. ಐಕ್ಯನಿಶ್ಚಾಯಕ ಪದಗಳು ಇಲ್ಲಿ ಯಾವುದೂ ಇಲ್ಲ ಎಂಬ ಅಭಿಪ್ರಾಯದಿಂದ ದೋಷಾಂತರವನ್ನು ಹೇಳುತ್ತಾರೆ –

**ಭವತ್ಯಸಾವಿತ್ಯಣುಶಬ್ದಮತ್ರ**

**ವಿಹಾಯ ವಾಕ್ಯಾನಿ ಬಹೂನಿ ದೋಷಃ ।**

ಈ ಶ್ರುತಿಯಲ್ಲಿ ಜ್ಞಾನಿಗೆ ಪರಮೇಶ್ವರನ ತಾದಾತ್ಮ್ಯಪ್ರಾಪ್ತಿಯಾಗುವುದರಿಂದ ಸರ್ವಲೋಕಾಧಿಪತ್ಯವು ಆಗುವುದು ಎಂಬ ಅರ್ಥವು ವಿವಕ್ಷಿತವಿದ್ದರೆ, ಆಗ ಈ ಅರ್ಥವನ್ನು ಪ್ರತಿಪಾದಿಸುವ ವಿಷಯದಲ್ಲಿ ಈ ಜ್ಞಾನಿಯು ಈ ಪರಮಾತ್ಮನು ಆಗುತ್ತಾನೆ ಎಂದೇ ಹೇಳಬೇಕಿತ್ತು. ಸೋಽಮುನ್ವೈವ ಇತ್ಯಾದಿ ಹೇಳಬೇಕಿರಲಿಲ್ಲ. ಅಯಮಸೌ ಭವತಿ ಎನ್ನುವ ಅಲ್ಪ ಶಬ್ದವನ್ನು ಬಿಟ್ಟು ಅನೇಕ ವಾಕ್ಯಗಳನ್ನು ಪ್ರಯೋಗ ಮಾಡುವ ಶ್ರುತಿಗೆ ಅಕುಶಲತ್ವ ರೂಪವಾದ ದೋಷವು ಬರುವುದು. ಅಲ್ಪವಾದ ಪ್ರಯತ್ನದಿಂದಲೇ ಸಿದ್ಧಿಸತಕ್ಕ ಅರ್ಥದಲ್ಲಿ ಮಹಾಪ್ರಯತ್ನವನ್ನು ಯಾವ ಬುದ್ಧಿವಂತನೂ ಮಾಡುವುದಿಲ್ಲ. ಅಂತಹ ಪುರುಷನು ಯಾರಿಂದಲೂ ಗೌರವಕ್ಕೆ ಅರ್ಹನಾಗುವುದಿಲ್ಲ.

ಅಪವ್ಯಾಖ್ಯಾನ ನಿರಾಕರಣೆಯನ್ನು ಉಪಸಂಹರಿಸುತ್ತ ಪಾದಾರ್ಥವನ್ನು ಸಂಕ್ಷಿಪ್ತವಾಗಿ ಹೇಳುತ್ತಾರೆ –

**ಅತೋ ಜಗದ್ವ್ಯಾಪೃತಿಮಂತ ಏವ**

**ಬ್ರಹ್ಮಾದಯಃ ಪೂರ್ಣಗುಣಾಃ ಕ್ರಮೇಣ ॥ ೧೨ ॥**

**ಅಮಂದಮಾನಂದಮಜಸ್ರಮೇವ ।**

**ಭುಂಜಂತ ಆತ್ಮೀಯಮಜಾತ್ಸಮಾಸತೇ ॥ ೧೩ ॥**

ಆದ್ದರಿಂದ ಮುಕ್ತರಾದ ಬ್ರಹ್ಮಾದಿಗಳು ಜಗತ್ತಿನ ವ್ಯಾಪಾರವುಳ್ಳವರೇ. ಅಂದರೆ ತಮ್ಮೊಂದಿಗೆ ಮುಕ್ತಿಯನ್ನು ಹೊಂದಿದ ತಮಗಿಂತ ಅವರರಿಗೆ ನಿಯಾಮಕರು. ಕ್ರಮದಿಂದ ಪೂರ್ಣಗುಣವುಳ್ಳವರು. ಪೂರ್ಣವಾದ ತಮ್ಮದೇ ಆದ ಆನಂದವನ್ನು (ಪರಮಾತ್ಮನ ಆನಂದವನ್ನಲ್ಲ) ನಿರಂತರದಲ್ಲಿಯೂ ಶ್ರೀಹರಿಯ ಪ್ರಸಾದದಿಂದ ಅನುಭವಿಸುತ್ತ ಆ ಪರಮೇಶ್ವರನೊಂದಿಗೇ ವೈಕುಂಠಾದಿ ಲೋಕಗಳಲ್ಲಿ ಇರುತ್ತಾರೆ.

ಈ ರೀತಿಯಾಗಿ ಗ್ರಂಥವನ್ನು ಪರಿಸಮಾಪ್ತಿಗೊಳಿಸಿದ ಶ್ರೀಮದಾಚಾರ್ಯರು ತಾವು ಪ್ರತಿಪಾದಿಸಿದ ಶುಭಧರ್ಮಗಳುಳ್ಳ, ತನಗೆ ಅತಿಶುದ್ಧವೂ ಅನಾದಿಯೂ ಆದ ಸಾರ್ವಜ್ಞಪ್ರದನಾದ, ನಿರುಪಾಧಿಕನಾದ ಅಂದರೆ ಮೋಕ್ಷಾದಿಫಲಾಂತರ ಉಪಾಧಿ ರಹಿತನಾದ, ಪರಮಪ್ರೇಮಾಸ್ಪದವಾದ ಗುಣಗಣಯುಕ್ತನೂ ಪುರುಷೋತ್ತಮನೂ ಆದ ಶ್ರೀನಾರಾಯಣನನ್ನು ಮತ್ತೆ ಮತ್ತೆ ನಮಸ್ಕರಿಸುತ್ತಾರೆ –

**ನಮೋ ನಮೋಽಶೇಷವಿಶೇಷಪೂರ್ಣ-**

**ಗುಣೈಕಧಾಮ್ನೇ ಪುರುಷೋತ್ತಮಾಯ ।**

**ಭಕ್ತಾನುಕಂಪಾದತಿಶುದ್ಧಸಂವಿ-**

**ದ್ದಾತ್ರೇಽನುಪಾಧಿಪ್ರಿಯಸದ್ಗುಣಾತ್ಮನೇ ॥ ೧೪ ॥**

ಅಶೇಷವಿಶೇಷಗಳಿಂದ ಪೂರ್ಣಗಳಾದ ಗುಣಗಳಿಗೆ ಮುಖ್ಯ ಆಶ್ರಯನಾದ, ಭಕ್ತನಾದ ನನ್ನಲ್ಲಿ ದಯೆಯಿಂದ ಅತಿಶುದ್ಧವಾದ ಜ್ಞಾನವನ್ನು ಕೊಡತಕ್ಕ, ಉಪಾಧಿ ರಹಿತವಾದ ಪ್ರಿಯವಾದ ಸದ್ಗುಣಸ್ವರೂಪನಾದ ಕ್ಷರಾಕ್ಷರಪುರುಷೋತ್ತಮನಾದ ಶ್ರೀನಾರಾಯಣನಿಗೆ ಮತ್ತೆ ಮತ್ತೆ ನಮಸ್ಕಾರವು.

ಭಗವಂತನ ಸ್ವರೂಪಜ್ಞಾನವು ಹೇಗೆ ಸಮಸ್ತ ಪರುಷಾರ್ಥಗಳಿಗೆ ಸಾಧನವೋ, ಹಾಗೆಯೇ ತನ್ನ ಸ್ವರೂಪಜ್ಞಾನವೂ ಕೂಡ ಶಿಷ್ಯರಿಗೆ ಮೋಕ್ಷಾದಿ ಪುರಷಾರ್ಥ ಸಾಧನ ಎಂಬ ಅಭಿಪ್ರಾಯದಿಂದ ಶ್ರೀಮದಾಚಾರ್ಯರು ತಮ್ಮ ಸ್ವರೂಪವನ್ನು ಆವಿಷ್ಕರಿಸಿ ಹೇಳುತ್ತಾರೆ –

**ಯಸ್ಯ ತ್ರೀಣ್ಯುದಿತಾನಿ ವೇದವಚನೇ ರೂಪಾಣಿ ದಿವ್ಯಾನ್ಯಲಂ**

**ಬಟ್ ತದ್ದರ್ಶತಮಿತ್ಥಮೇವ ನಿಹಿತಂ ದೇವಸ್ಯ ಭರ್ಗೋ ಮಹತ್ ।**

**ವಾಯೋ ರಾಮವಚೋನಯಂ ಪ್ರಥಮಕಂ ಪೃಕ್ಷೋ ದ್ವಿತೀಯಂ ವಪುಃ**

**ಮಧ್ವೋ ಯತ್ತು ತೃತೀಯಮೇತದಮುನಾ ಗ್ರಂಥಃ ಕೃತಃ ಕೇಶವೇ ॥ ೧೫ ॥**

ಬಳಿತ್ಥಾ ಇತ್ಯಾದಿ ವೇದವಚನದಲ್ಲಿ ಯಾವ ವಾಯುದೇವರ ಅತ್ಯದ್ಭುತವಾದ ಮಂಗಲಕರವಾದ ಮೂರು ರೂಪಗಳು ಹೇಳಲ್ಪಟ್ಟಿವೆಯೋ ಅದೇ ವಾಯುವಿನ ಅವತಾರವಾದ ನಮ್ಮಿಂದ ಕೇಶವನನ್ನು ಕುರಿತು ಈ ಗ್ರಂಥವು ರಚಿಸಲ್ಪಟ್ಟಿದೆ.

ಆ ವಾಯುದೇವರ ಮೂಲರೂಪ ಹಾಗೂ ಮೂರು ಅವತಾರ ರೂಪಗಳು ಯಾವ ಪ್ರಕಾರವಾಗಿವೆ ಎಂಬುದನ್ನು ಬಟ್ ಇತ್ಯಾದಿಯಾಗಿ ಹೇಳುತ್ತಾರೆ –

ಆ ವಾಯುದೇವರ ಮೂಲರೂಪವೂ ಅವತಾರರೂಪಗಳೂ ಬಲಾತ್ಮಕವೂ ಜ್ಞಾನರೂಪವೂ ಆಗಿವೆ. (ಇದರಿಂದ ವಾಯು ಶಬ್ದದ ನಿರ್ವಚನವಾಯಿತು. ವ ಶಬ್ದ ಬಲವಾಚಕ, ಅಯ ಶಬ್ದ ಗತ್ಯರ್ಥಕ. ಗತಿ ಎಂದರೆ ಅವಗತಿ ಅಥವಾ ಜ್ಞಾನ. ಆದ್ದರಿಂದ ಗತ್ಯರ್ಥಕವೆಂದರೆ ಜ್ಞಾನಾರ್ಥಕವು ಎಂದರ್ಥ. ವಶ್ಚಾಸೌ ಆಯುಶ್ಚೇತಿ ವಾಯುಃ). ಭರಣಗಮನಗಳ ಯೋಗದಿಂದ ಯಾವುದು ಭರ್ಗಶಬ್ದವಾಚ್ಯವೋ ಅದೇ ವಾಯು ಶಬ್ದವಾಚ್ಯವು. ಧಾತುಗಳಿಗೆ ಅನೇಕಾರ್ಥವಿರುವುದರಿಂದ ವಾ ಧಾತುವು ಭರಣಾರ್ಥದಲ್ಲಿಯೂ ಇದೆ. ಆದ್ದರಿಂದ ಭರ್ಗ ಶಬ್ದವೂ ವಾಯುಶಬ್ದಕ್ಕೆ ವ್ಯಾಖ್ಯಾನವು. ಈ ರೂಪವು ಮಹನೀಯವು ಅಂದರೆ ಶ್ರೇಷ್ಠವಾದುದು. (ವಯಃ ಶ್ರೇಷ್ಠತ್ವೇ ಎನ್ನುವುದರಿಂದ ಮಹತ್ ಶಬ್ದವು ವಾಯು ಶಬ್ದಕ್ಕೆ ವ್ಯಾಖ್ಯಾನವು). ವಿಷ್ಣುವಿನಿಂದ ಪ್ರೇರಿತವಾದ ವಾಯುದೇವರ ಮೂರು ಅವತಾರ ರೂಪಗಳೂ ಹೀಗೆಯೇ ಗುಣಭರಿತವಾಗಿವೆ. ಯಾವ ವಾಯುದೇವರ ಮೊದಲನೆಯದಾದ ಹನುಮದ್ರೂಪವು ರಾಮದೇವರ ವಚನವನ್ನು ಸೀತೆಗೆ ಮುಟ್ಟಿಸಿತೋ (ಅಥವಾ ರಾಮವಿಷಯಕವಾದ ಮೂಲರಾಮಾಯಣಾದಿ ವಚನಗಳನ್ನು ಶಿಷ್ಯರಲ್ಲಿ

ಪ್ರವರ್ತಿಸಿತೋ), ಎರಡನೆಯದಾದ ಭೀಮಾಖ್ಯ ರೂಪವು ದುರ್ಯೋಧನಾದಿ ಶತ್ರುಗಳ ಸೈನ್ಯವನ್ನು ನಾಶಮಾಡಿದ್ದರಿಂದ ಪೃಕ್ಷ ಶಬ್ದವಾಚ್ಯವೋ (ಪೃತನಾ ಎಂದರೆ ಸೈನ್ಯ, ಪೃತನಾಕ್ಷಯಕಾರೀತಿ ಪೃಕ್ಷಃ), ಮೂರನೆಯ ಅವತಾರವು ದೇಶಕಾಲಗಳಿಂದ ಸನ್ನಿಕೃಷ್ಟವಾದ ವೇದೋಕ್ತ ಮಧ್ವಾಭಿಧೇಯವಾದ ರೂಪವು ಸುಖಸಾಧನವಾದ ಶಾಸ್ತ್ರವನ್ನು ನಿರ್ಮಾಣ ಮಾಡಿದ್ದರಿಂದ ಆನಂದತೀರ್ಥವೆಂದೂ ಪ್ರಸಿದ್ಧವೋ ಅಂತಹ ಮೂರನೆಯ ಅವತಾರರಾದ ನಮ್ಮಿಂದ ಬ್ರಹ್ಮಸೂತ್ರಾನುವ್ಯಾಖ್ಯಾನವೆಂಬ ಈ ಗ್ರಂಥವು ಕೇಶವನ ಪ್ರೀತಿಗಾಗಿ ಮಾಡಲ್ಪಟ್ಟಿತು.

ಭಗವತ್ಸ್ವರೂಪ ಪ್ರತಿಪಾದನೆಯಿಂದಲೇ ಗ್ರಂಥೋಪಸಂಹಾರವು ಅತ್ಯಂತ ಉಚಿತವು ಎಂಬ ಅಭಿಪ್ರಾಯದಿಂದ ತಮಗೆ ನಿತ್ಯದಲ್ಲಿಯೂ ಅಪರೋಕ್ಷನಾದ ಭಗವಂತನನ್ನು ಸಂಭೋದಿಸಿ ಸುತ್ತಿಸುತ್ತಾರೆ –

**ನಿಃಶೇಷದೋಷರಹಿತ ಕಲ್ಯಾಣಾಖಿಲಸದ್ಗುಣ ।**

**ಭೂತಿಸ್ವಯಂಭುಶರ್ವಾದಿವಂದ್ಯಂ ತ್ವಾಂ ನೌಮಿ ಮೇ ಪ್ರಿಯಮ್ ॥ ೧೬ ॥**

ಅಶೇಷಗಳಾದ ದೋಷಗಳಿಂದ ರಹಿತನೂ, ಮಂಗಲಕರವಾದ ಸಕಲ ಸದ್ಗುಣ ಸ್ವರೂಪನೂ, ಮಹಾಲಕ್ಷ್ಮಿ, ಬ್ರಹ್ಮ, ರುದ್ರ ಮೊದಲಾದವರಿಂದ ವಂದ್ಯನೂ, ನನಗೆ ಪ್ರಿಯನೂ ಆದ ಹೇ ನಾರಾಯಣನೇ ನಿನ್ನನ್ನು ಯಾವಾಗಲೂ ನಮಸ್ಕರಿಸುತ್ತೇನೆ.

**॥ ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತೇ**

**ಶ್ರೀಮದನುವ್ಯಾಖ್ಯಾನೇ ಚತುರ್ಥಾಧ್ಯಾಯಸ್ಯ ಚತುರ್ಥಃ ಪಾದಃ ॥**

॥ ಇಲ್ಲಿಗೆ ಶ್ರೀಮದನುವ್ಯಾಖ್ಯಾನದ ನಾಲ್ಕನೆಯ ಅಧ್ಯಾಯದ ನಾಲ್ಕನೆಯ ಪಾದದ

ಕನ್ನಡಾನುವಾದವು ಮುಕ್ತಾಯವಾಯಿತು ॥

**॥ ನಾಲ್ಕು ಅಧ್ಯಾಯಗಳ ಶ್ರೀಮದುನುವ್ಯಾಖ್ಯಾನ ಗ್ರಂಥದ ಎಲ್ಲ ಮೂಲ ಶ್ಲೋಕಗಳ ಸಹಿತ ಕನ್ನಡಾನುವಾದವು ಇಲ್ಲಿಗೆ ಮುಕ್ತಾಯವಾಯಿತು ॥**

## ಶ್ರೀಮನ್ನ್ಯಾಯಸುಧಾದ ಅಂತಿಮ ಮಂಗಲಶ್ಲೋಕಗಳು

**ವಚನಪ್ರಸೂನಮಾಲಾ ಜಯತೀರ್ಥಾಖ್ಯೇನ ಭಿಕ್ಷುಣಾ ರಚಿತಾ ।**

**ಧ್ರಿಯತಾಂ ಹೃದಯೇ ಸದಯೇ ಕಮಲಾಮಹಿಲೇನ ಪೂರುಷೇಣ ॥೧॥**

**ನ ವೈದುಷ್ಯಭ್ರಾಂತ್ಯಾ ನ ಚ ವಚನ ಚಾತುರ್ಯಕೃಧಿಯಾ**

**ನ ಮಾತ್ಸರ್ಯಾವೇಶಾನ್ನ ಚ ಚಪಲತಾದೋಷವಶತಃ ।**

**ಪರಂ ಶ್ರದ್ಧಾಜಾಡ್ಯಾದಕೃಷಿ ಕೃತಿಮಾಚಾರ್ಯವಚಸಿ**

**ಸ್ಖಲನ್ನಪ್ಯೇತಸ್ಮಾಜ್ಜಗತಿ ನ ಹಿ ನಿಂದ್ಯೋಽಸ್ಮಿ ವಿದುಷಾಮ್ ॥೨॥**

ಅನುವ್ಯಾಖ್ಯಾಽಮೃತಾಂಭೋಧೇಃ ಸಮುತ್ಪನ್ನಾಽತಿನಿರ್ಮಲಾ ।
ಇಯಂ ನ್ಯಾಯಸುಧಾ ಭೌಮೈರ್ವಿಬುಧೈಃ ಸೇವ್ಯತಾಂ ಸದಾ ॥೩॥
ಇತಿ ಶ್ರೀಮತ್ಪೂರ್ಣಪ್ರಮತಿಭಗವತ್ಪಾದಸುಕೃತೇ-
ರನುವ್ಯಾಖ್ಯಾನಸ್ಯ ಪ್ರಗುಣಜಯತೀರ್ಥಾಖ್ಯಯತಿನಾ ।
ಕೃತಾಯಾಂ ಟೀಕಾಯಾಂ ವಿಷಮಪದವಾಕ್ಯಾರ್ಥವಿವೃತೌ
ಚತುರ್ಥೇಽಧ್ಯಾಯೇಽಸ್ಮಿಂಶ್ಚರಮಚರಣಃ ಪರ್ಯವಸಿತಃ ॥೪॥

ಶ್ರೀಮನ್ನ್ಯಾಯಸುಧಾಪರಿಮಳದ ಅಂತಿಮ ಮಂಗಲಶ್ಲೋಕಗಳು

ಸರ್ವೇಂದ್ರಿಯಪ್ರೇರಕೇಣ ಶ್ರೀಪ್ರಾಣಪತಿನೇರಿತಃ ।
ಯದವೋಚಮಹಂ ತೇನ ಪ್ರೀಯತಾಂ ಕಮಲಾಲಯಃ ॥೧॥
ಯೇ ತು ನ್ಯಾಯಸುಧಾಪಾನಕಾಮುಕಾ ರಸಿಕಾ ಬುಧಾಃ ।
ಆಘ್ರಾಯೇಮಂ ಪರಿಮಲಂ ಸೇವತಾಂ ತೇ ಸುಧಾಮಿಮಾಮ್ ॥೨॥
ಜ್ಞಾನಾಬ್ಧಿರಪ್ಯವಾದೀದ್ಯತ್ಸ್ಖಲತ್ವಂ ಸ್ವಾತ್ಮನಸ್ತದಾ ।
ಮಾದೃಶಾನಾಂ ಸ್ಖಲತ್ವಂ ಕಿಂ ವಾಚ್ಯಂ ಕ್ಷಾಮ್ಯಂತು ತದ್ಬುಧಾಃ ॥೩॥

॥ ಶ್ರೀಕೃಷ್ಣಾರ್ಪಣಮಸ್ತು ॥

ಅಂಗಾರಕುಲೋತ್ಪನ್ನ ಶ್ರೀನಿವಾಸಮೂರ್ತಿಯವರ ಸುಪುತ್ರ ವೆಂಕಟೇಶಮೂರ್ತಿಯು ಶ್ರೀಮನ್ನ್ಯಾಯಸುಧಾಪರಿಮಳಾನುಸಾರಿ ಕನ್ನಡದಲ್ಲಿ ಅರ್ಥ ಹಾಗೂ ವಿವರಣೆ ಸಹಿತ ರಚಿಸಿ ಪ್ರಕಟಿಸಿದ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತ ಶ್ರೀಮದನುವ್ಯಾಖ್ಯಾನ ಗ್ರಂಥವು ಶ್ರೀಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀಲಕ್ಷ್ಮೀ ವೆಂಕಟೇಶನ ಪಾದಾರವಿಂದಗಳಲ್ಲಿ ಭಕ್ತಿಪೂರ್ವಕವಾಗಿ ಸಮರ್ಪಿತವಾದುದು

॥ ಶ್ರೀಮಧ್ವೇಶನು ಪ್ರೀತನಾಗಲಿ ॥

* * *

ಮಿಥ್ಯಾಸಿದ್ಧಾಂತದುರ್ಧ್ವಾಂತ ವಿಧ್ವಂಸನ ವಿಚಕ್ಷಣಃ ।
ಜಯತೀರ್ಥಾಖ್ಯ ತರಣಿರ್ಭಾಸತಾಂ ನೋ ಹೃದಂಬರೇ ॥



ಶ್ರೀ ಜಯತೀರ್ಥರು

ಪ್ರಕಾಶಕರು :

**ಪವನಜ ಪ್ರಕಾಶನ**

ನಂ. 1625, 5ನೇ 'ಬಿ' ಕ್ರಾಸ್, ಎರಡನೆಯ ಬ್ಲಾಕ್
ಬನಶಂಕರಿ 1ನೇ ಸ್ಟೇಜ್, ಬೆಂಗಳೂರು-560 050
ದೂರವಾಣಿ : 6600932